# ಇತಿಹಾಸ ದರ್ಶನ

## ೨೦೧೮

ಸಂಪಾದಕರು

ದೇವರಕೊಂಡಾರೆಡ್ಡಿ

ಜಿ.ಕೆ. ದೇವರಾಜಸ್ವಾಮಿ



ಕರ್ನಾಟಕ ಇತಿಹಾಸ ಅಕಾದೆಮಿ (ರಿ.), ಬೆಂಗಳೂರು

ಸಂಪುಟ ೩೩

## ಪರಮಪೂಜ್ಯ ಡಾ. ಸಂಗನಬಸವ ಮಹಾಸ್ವಾಮಿಗಳಿಂದ ಕರ್ನಾಟಕ ಇತಿಹಾಸ ಅಕಾದೆಮಿಯ ೩೨ನೆಯ ವಾರ್ಷಿಕ ಸಮ್ಮೇಳನದ ಉದ್ಘಾಟನೆ ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ, ಬಾದಾಮಿ



ಎಡದಿಂದ ಬಲಕ್ಕೆ : ಡಾ.ಎಸ್.ಕೆ.ಅರುಣಿ, ಡಾ. ದೇವರಕೊಂಡಾರೆಡ್ಡಿ, ಶ್ರೀ ಎ.ಸಿ. ಪಟ್ಟಣದ್, ಪೂಜ್ಯ ಶ್ರೀ ಸಂಗನ ಬಸವಸ್ವಾಮಿಗಳು, ಡಾ. ಬಿ.ರಾಜಶೇಖರಪ್ಪ, ಶ್ರೀ ಸಿದ್ಧಗಿರಿ ಓ.ಎಲ್. ಚಂದ್ರೇಗೌಡ, ಡಾ. ವಾಸುದೇವ, ಡಾ. ವಿ.ಎಸ್. ಕಟಗಿಹಳ್ಳಿಮಠ

# ಇತಿಹಾಸ ದರ್ಶನ

## ITIHASA DARSANA - *Volume 34* / 2019

**ಸಂಪುಟ ೩೪ / ೨೦೧೯**

**೨೦೧೮ರ ಅಕ್ಟೋಬರ್ ೨೬ರಿಂದ ೨೮ರವರೆಗೆ ಕರ್ನಾಟಕ ಇತಿಹಾಸ ಅಕಾದೆಮಿ(ರಿ) ಹಾಗೂ ಕರ್ನಾಟಕ ರಾಜ್ಯಪುರಾತತ್ವ, ವಸ್ತುಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ, ಶಿವಯೋಗಮಂದಿರ ಬಾದಾಮಿ, ಇವರ ಆಶ್ರಯದಲ್ಲಿ ಸಮಾವೇಶಗೊಂಡಿದ್ದ ಕರ್ನಾಟಕ ಇತಿಹಾಸ ಅಕಾದೆಮಿಯ ೩೨ನೆಯ ವಾರ್ಷಿಕ ಸಮ್ಮೇಳನದಲ್ಲಿ ಅಕಾದೆಮಿಯ ಸದಸ್ಯರು ಮಂಡಿಸಿದ ವಿದ್ವತ್ ಪ್ರಬಂಧಗಳ ಸಂಪುಟ.**

ಸಂಪಾದಕರು

**ದೇವರಕೊಂಡಾರೆಡ್ಡಿ**

**ಜಿ.ಕೆ. ದೇವರಾಜಸ್ವಾಮಿ**




**ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು**

**ITIHĀSA DARŚANA** - ***Volume 34* / 2019**

The volume of the scholarly papers presented and
Proceedings of the 32nd Annual Conference

**The Karnataka Ithihasa Academy** (Regd.,)
Srimadvirashiva Shivayoga Mandira Samsthe,
Shivayoga Mandira, Badhami

on 26th, 27th & 28th October 2018

**Published by** : Secretary
Karnataka Itihasa Academy (Regd.)
B.M. Sri Pratistana, 3rd Main Road,
Narasimharaja Colony, Bengaluru - 560 019.

 **karnatakaitihasaacademy25@gmail.com**

 **www.karnatakaitihasaacademy.org**

Edited by : **Devarakondareddy**
**G.K. Devarajaswamy**



ಪುಟಗಳು : ೫೨೮ + xxxvi + Col. Photos XX

Pages : 528 + xxxvi + Col. Photos XX

Price : ₹ **750**

ಬೆಲೆ : **₹ ೭೫೦**

**ISBN No. 978-81-921255-9-6**

ಆರ್ಥಿಕ ನೆರವು: ಶ್ರೀ ಜಗದ್ಗುರು ರಂಭಾಪುರಿ ವೀರಸಿಂಹಾಸನ ಮಹಾಸಂಸ್ಥಾನ ಪೀಠ, ಬಾಳೇಹೊನ್ನೂರು.
ಶ್ರೀ ಪರಮಪೂಜ್ಯ ಸಂಗನಬಸವ ಮಹಾಸ್ವಾಮಿಗಳು, ಶ್ರೀ ಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ, ಬಾದಾಮಿ.
ದಿ ಮಿಥಿಕ್ ಸೊಸೈಟಿ, ನೃಪತುಂಗ ರಸ್ತೆ, ಬೆಂಗಳೂರು.

Printed at


ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA Bangalore
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨



॥ಶ್ರೀ ಜಗದ್ಗುರು ರೇಣುಕಾಚಾರ್ಯ: ಪ್ರಸೀದತು॥

ಮಾನವ ಧರ್ಮಕ್ಕೆ ಜಯವಾಗಲಿ। ಧರ್ಮದಿಂದಲೇ ವಿಶ್ವಕ್ಕೆ ಶಾಂತಿ॥



ಸಾಹಿತ್ಯ-ಸಂಸ್ಕೃತಿ ಸಂವರ್ಧಿಸಲಿ। ಶಾಂತಿ-ಸಮೃದ್ಧಿ ಸರ್ವರಿಗಾಗಲಿ॥

ಶ್ರೀಮದ್ರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀಶ್ರೀಶ್ರೀ 1008 ಜಗದ್ಗುರು
ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು

ಬಾಳೆಹೊನ್ನೂರು 577112 ಚಿಕ್ಕಮಗಳೂರು ಜಿಲ್ಲೆ ಕರ್ನಾಟಕ ರಾಜ್ಯ

ದಿನಾಂಕ : 27-09-2019 ವಾಸ್ತವ್ಯ : ಮಲಯಾಚಲ ತಪೋಭೂಮಿ

# ಶುಭಾಶೀರ್ವಾದ ಸಂದೇಶ

ಮನುಷ್ಯ ಸುಂದರ ಸಾರ್ಥಕ ಬದುಕು ಕಟ್ಟಿಕೊಳ್ಳಬೇಕಾಗಿದೆ. ಭೌತಿಕ ಬದುಕಿಗೆ ಸಂಪತ್ತು ಬೇಕು. ಶಾಂತಿಯ ಬದುಕಿಗೆ ಸಂಸ್ಕಾರ ಬೇಕು. ಮನುಷ್ಯ ಗಳಿಸುವುದನ್ನು ಕಲಿತ. ಆದರೆ ಹೇಗೆ ಬಾಳಬೇಕೆಂಬುದನ್ನು ಮರೆತ. ಮನಸ್ಸು ಇದ್ದರೆ ಮಾರ್ಗ ಮತ್ತು ಮಾರ್ಗದರ್ಶಕರು ಇದ್ದೇ ಇರುತ್ತಾರೆ. ಮನದೊಳಗೆ ನೆಲೆಸಿರುವ ಮಹಾದೇವನಿಗೆ ಮೆಚ್ಚುಗೆ ಆಗುವ ರೀತಿ ಬದುಕಬೇಕು. ಭವ್ಯ ಕಟ್ಟಡದ ಭದ್ರತೆಗೆ ಅಡಿಪಾಯ ಮುಖ್ಯ. ಅಮೂಲ್ಯ ಜೀವನ ವಿಕಸನಕ್ಕೆ ಧರ್ಮಾಚರಣೆ ಸಂಸ್ಕೃತಿ ಮುಖ್ಯವಾಗಿದೆ.

ಆದರ್ಶಗಳು ಎಂದಿಗೂ ನಾಶಗೊಳ್ಳುವುದಿಲ್ಲ. ನದಿ ಎಷ್ಟೇ ದೂರ ಹರಿದು ಹೋದರೂ ತನ್ನ ಮೂಲವನ್ನು ಮರೆಯುವುದಿಲ್ಲ. ಅದರಂತೆ ಮನುಷ್ಯ ಎಷ್ಟೇ ಎತ್ತರಕ್ಕೆ ಬೆಳೆದರೂ ಮೂಲ ಸಂಸ್ಕೃತಿಯನ್ನು ಮರೆಯಬಾರದು. ಕಲಿತ ಪಾಠ ಮನುಷ್ಯ ಮರೆಯಬಹುದು. ಅನುಭವದಿಂದ ಕಲಿತ ಪಾಠ ಎಂದಿಗೂ ಮರೆಯಲು ಸಾಧ್ಯವಿಲ್ಲ. ಗತಕಾಲದ ಇತಿಹಾಸದ ಅರಿವು ಎಲ್ಲರಿಗೂ ಇರಬೇಕಾಗುತ್ತದೆ. ವೈಚಾರಿಕತೆ ಮತ್ತು ಆಧುನಿಕತೆ ಹೆಸರಿನಲ್ಲಿ ಉತ್ಕೃಷ್ಟ ಸಂಸ್ಕೃತಿ ಇತಿಹಾಸವನ್ನು ಕಲುಷಿತಗೊಳಿಸಬಾರದು. ಸುಳ್ಳು ಹೇಳಲು ಹಲವು ದಾರಿಗಳಿವೆ. ಆದರೆ ಸತ್ಯ ಹೇಳಲು ಇರುವುದೊಂದೇ ಇತಿಹಾಸ.

ಕಷ್ಟವಿಲ್ಲದೇ ಗೆದ್ದರೆ ವಿಜಯ. ಕಷ್ಟಪಟ್ಟು ಗೆದ್ದರೆ ಇದು ಇತಿಹಾಸ. ಗೆಲ್ಲುವುದಷ್ಟೇ ಮುಖ್ಯವಲ್ಲ. ಗೆಲುವಿನಲ್ಲಿ ಇತಿಹಾಸ ನಿರ್ಮಿಸುವುದು ಮುಖ್ಯ. ಭೂಮಿಯಲ್ಲಿ ಬಿತ್ತಿದ ಬೀಜಕ್ಕೆ ನೀರು ಎಷ್ಟು ಅವಶ್ಯಕವೋ ಭವಿಷ್ಯತ್ತಿನ ಜನಾಂಗಕ್ಕೆ ಇತಿಹಾಸದ ಅರಿವು ಅವಶ್ಯಕವಾಗಿರುತ್ತದೆ. ಮುಳ್ಳಿನ ಮಧ್ಯ ಗುಲಾಬಿ ಇದ್ದರೂ ಗಾಯಗೊಳ್ಳದೇ ಅರಳಿ ಪರಿಮಳ ಬೀರುತ್ತದೆ. ಮುಳ್ಳಿನ ಗುಲಾಬಿಯಂತೆ ವರ್ತಮಾನದ ಸಂಕಷ್ಟಗಳನ್ನು ಎದುರಿಸಿ ಸಂಸ್ಕೃತಿ ಇತಿಹಾಸ ಮತ್ತು ಆದರ್ಶಗಳನ್ನು ಉಳಿಸಿಕೊಂಡು ಬರಬೇಕಾಗುತ್ತದೆ.

ಕರ್ನಾಟಕ ಇತಿಹಾಸ ಅಕಾದೆಮಿ(ರಿ) 34 ವರುಷಗಳಿಂದ ಇತಿಹಾಸ ಅಧ್ಯಯನ ಮತ್ತು ಸಂಶೋಧನೆಗಳಿಂದ ಹೊಸ ಬೆಳಕು ಮೂಡಿಸುತ್ತಾ ಬಂದಿರುವುದು ಸ್ತುತ್ಯ ಕಾರ್ಯ. ಕಳೆದ 15 ವರುಷಗಳಿಂದ ಶ್ರೀ ಪೀಠದಿಂದ ಪ್ರತಿ ವರ್ಷ 25000/- (ಇಪ್ಪತ್ತೈದು ಸಾವಿರ) ರೂಪಾಯಿಗಳನ್ನು ಆಶೀರ್ವದಿಸುತ್ತಾ ಬಂದಿರುವುದು ಗೊತ್ತಿರುವ ಸಂಗತಿ. ಈ ವರ್ಷವೂ ಸಹ ಶ್ರೀ ಪೀಠದ ಆಶೀರ್ವಾದವನ್ನು ಕಳಿಸಿಕೊಡಲಾಗಿದೆ.

ಇತಿಹಾಸ ಸಂಶೋಧನೆಗಾಗಿ ಸದಾ ಶ್ರಮಿಸುತ್ತಿರುವ ಅಕಾದೆಮಿ ಅಧ್ಯಕ್ಷರಾದ ಡಾ॥ ದೇವರ ಕೊಂಡಾರೆಡ್ಡಿ ಉಪಾಧ್ಯಕ್ಷರಾದ ಡಾ॥ ಎಂ.ಜಿ. ನಾಗರಾಜ್ ಹಾಗೂ ಸಂಪಾದಕ ಮಂಡಳಿಯವರ ಶ್ರಮ ಸಾಧನೆ ಶ್ಲಾಘನೀಯ. ಶಿವಮೊಗ್ಗ ಜಿಲ್ಲೆ ಹೊಂಬುಜ ಜೈನ ಮಠದಲ್ಲಿ 2019 ಅಕ್ಟೋಬರ್ 18, 19 ಹಾಗೂ 20 ರಂದು 33ನೇ ವಾರ್ಷಿಕ ಸಮ್ಮೇಳನದಲ್ಲಿ ಇತಿಹಾಸ ದರ್ಶನ-34 ಸಂಪುಟ ಪ್ರಕಟಗೊಳ್ಳಲಿರುವುದು ಸಂತೋಷದ ಸಂಗತಿ. ಸಮ್ಮೇಳನ ಅತ್ಯಂತ ಯಶಸ್ವಿಯಾಗಿ ಜರುಗಲೆಂದು ಹೃದಯ ತುಂಬಿ ಹಾರೈಸುತ್ತೇವೆ.

ಶ್ರೀ ಜಗದ್ಗುರು ರೇಣುಕಾಚಾರ್ಯರು ಹಾಗೂ ಕ್ಷೇತ್ರನಾಥ ಶ್ರೀ ವೀರಭದ್ರಸ್ವಾಮಿ ಸರ್ವರಿಗೂ ಮಂಗಲ ಪರಂಪರೆಯನ್ನು ಅನುಗ್ರಹಿಸಲಿ.

ಶುಭಾಶೀರ್ವಾದಗಳೊಂದಿಗೆ

ಶ್ರೀ ರಂಭಾಪುರಿ ಜಗದ್ಗುರುಗಳು
ಬಾಳೆಹೊನ್ನೂರು

ಕರ್ನಾಟಕ ಇತಿಹಾಸ ಅಕಾದೆಮಿಗೆ ಶ್ರೀಗಳಿಂದ ವಾರ್ಷಿಕ ರೂ. ಇಪ್ಪತ್ತೈದು ಸಾವಿರ ಕೊಡುಗೆ, ಆರಂಭಿಸಿದ ವರ್ಷ - 2005




**ಶ್ರೀ ಎ.ಸಿ. ಪಟ್ಟಣದ್ ಇವರಿಂದ ಇತಿಹಾಸ ದರ್ಶನ ಸಂಪುಟ ೩೩ ಬಿಡುಗಡೆ ಸಮಾರಂಭ**

**ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ, ಬಾದಾಮಿ**

ಎಡದಿಂದ ಬಲಕ್ಕೆ : ಡಾ.ಎಸ್.ಕೆ.ಅರುಣಿ, ಶ್ರೀಎ.ಸಿ. ಪಟ್ಟಣದ್, ಡಾ. ದೇವರಕೊಂಡಾರೆಡ್ಡಿ, ಪೂಜ್ಯ ಶ್ರೀ ಸಂಗನ ಬಸವಸ್ವಾಮಿಗಳು,
ಡಾ. ಬಿ.ರಾಜಶೇಖರಪ್ಪ, ಶ್ರೀ ಸಿದ್ಧಗಿರಿ ಓ.ಎಲ್. ಚಂದ್ರೇಗೌಡ, ಡಾ. ವಾಸುದೇವ, ಡಾ. ವಿ.ಎಸ್. ಕಟಗಿಹಳ್ಳಿಮಠ

## ೩೨ನೇ ವಾರ್ಷಿಕ ಸಮ್ಮೇಳನದ ಪೋಷಕರು

### ಪರಮಪೂಜ್ಯ ಡಾ. ಸಂಗನಬಸವ ಮಹಾಸ್ವಾಮಿಗಳು

ಅಧ್ಯಕ್ಷರು, ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ, ಬಾದಾಮಿ

 ಕರ್ನಾಟಕ ಇತಿಹಾಸ ಅಕಾದೆಮಿಗೆ ಶ್ರೀಗಳಿಂದ ಒಂದು ಲಕ್ಷ ರೂಪಾಯಿ ಕೊಡುಗೆ - 2018 

# ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ, ಬಾದಾಮಿ ತಾ॥







## ಡಾ. ಬಿ. ರಾಜಶೇಖರಪ್ಪ

ಕರ್ನಾಟಕ ಇತಿಹಾಸ ಅಕಾದೆಮಿಯ
ಮೂವತ್ತೆರಡನೇ ವಾರ್ಷಿಕ ಸಮ್ಮೇಳನದ ಸರ್ವಾಧ್ಯಕ್ಷರು
೨೦೧೮

ಬೈಸಾನಿ ರುಕ್ಮಣಮ್ಮ ರತ್ನಂ ಶೆಟ್ಟಿ ಫ್ಯಾಮಿಲಿ ಚಾರಿಟಬಲ್ ಟ್ರಸ್ಟ್ ವತಿಯಿಂದ 'ಇತಿಹಾಸ ಸಂಸ್ಕೃತಿ ಶ್ರೀ' ಪ್ರಶಸ್ತಿ ಪುರಸ್ಕೃತರಾದ ಡಾ. ಕೆಳದಿ ಗುಂಡಾಜೋಯಿಸ್ ಅವರಿಗೆ ನಗದು ಗೌರವಾರ್ಪಣೆ

ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ಪುರಸ್ಕೃತ ಶ್ರೀ ಆನಂದ ಎನ್. ಕುಂಬಾರ, ಸೊಲ್ಲಾಪುರ ಅವರಿಗೆ ಸನ್ಮಾನ

ಶ್ರೀಮತಿ ವಿ. ಗೌರಮ್ಮ ಗಂಗಾಧರಯ್ಯ ಇವರ ಹೆಸರಿನಲ್ಲಿ ಅವರ ಮಕ್ಕಳಾದ ಡಾ. ಎಂ.ಜಿ. ನಾಗರಾಜ್ ಶ್ರೀಮತಿ ಪದ್ಮಾ ವಿರೂಪಾಕ್ಷಯ್ಯ ಮತ್ತು ಡಾ. ಎಂ.ಜಿ. ಚಂದ್ರಕಾಂತ್ ಇವರು ಸ್ಥಾಪಿಸಿರುವ ದತ್ತಿಯಿಂದ 'ಸಂಶೋಧನ ಶ್ರೀ' ಪ್ರಶಸ್ತಿ ಪುರಸ್ಕೃತರಾದ ಡಾ. ಕೆ.ಬಿ. ಶಿವತಾರಕ್ ಅವರಿಗೆ ಸನ್ಮಾನ

ಪ್ರೊ. ಲಕ್ಷ್ಮಣ ತೆಲಗಾವಿ ಅವರ ಹೆಸರಿನಲ್ಲಿ ಸ್ಥಾಪಿಸಿರುವ ನಾಯಕಶ್ರೀ ಪ್ರಶಸ್ತಿ ಪುರಸ್ಕೃತರಾದ ಡಾ. ಡಿ.ಎನ್. ಯೋಗೀಶ್ವರಪ್ಪ ಅವರಿಗೆ ಸನ್ಮಾನ

ಅರಸೀಕೆರೆಯ ಮೇಲಣ ಮಠದ ಲಿಂ॥ ಶ್ರೀ ಎಸ್. ಸಿದ್ಧಣಯ್ಯ ಮತ್ತು ಶ್ರೀಮತಿ ಗಂಗಮ್ಮ ಸ್ಮಾರಕ ಟ್ರಸ್ಟ್ ನೀಡುವ
"ನೊಳಂಬಶ್ರೀ" ಪ್ರಶಸ್ತಿ ಪುರಸ್ಕೃತರಾದ ಡಾ. ಬಿ. ನಂಜುಂಡಸ್ವಾಮಿ ಅವರಿಗೆ ಸನ್ಮಾನ

ಬಿ.ಸಿ. ಪಾಟೀಲ್ ಟ್ರಸ್ಟ್ ಕೊಪ್ಪಳ, ಇವರು ಮಹಿಳೆಯರಿಗಾಗಿ ನೀಡುವ "ಶ್ರೀಮತಿ ಸುಮಂಗಲ ಪಾಟೀಲ ಮಹಿಳಾ ಪ್ರಶಸ್ತಿ"
ಪುರಸ್ಕೃತರಾದ ಶ್ರೀಮತಿ ಡಾ. ಸ್ಮಿತಾ ಸುರೇಬಾನಕರ್ ಅವರಿಗೆ ಸನ್ಮಾನ

ಡಾ. ಸಿ.ಆರ್. ಶ್ಯಾಮಲ ಅವರು ಸ್ಥಾಪಿಸಿರುವ 'ಡಾ ಶ್ರೀನಿವಾಸ್ ಹಾವನೂರ ಸ್ಮರಣಾರ್ಥ ಪ್ರಶಸ್ತಿ' ಪುರಸ್ಕೃತರಾದ
ಡಾ. ಬೆಂ.ಶಾ.ಶ್ಯಾಮಲಾ ರತ್ನಕುಮಾರಿ ಅವರಿಗೆ ಸನ್ಮಾನ

ಡಾ. ಸೂರ್ಯನಾಥ ಯು. ಕಾಮತ್ ಅವರ ಹೆಸರಿನಲ್ಲಿ ಸ್ಥಾಪಿಸಿರುವ 'ಸೂರ್ಯಕೀರ್ತಿ ಪ್ರಶಸ್ತಿ' ಪುರಸ್ಕೃತರಾದ
ಡಾ. ಎಚ್. ಚಂದ್ರಶೇಖರ್ ಅವರಿಗೆ ಸನ್ಮಾನ

ಮುಖ್ಯ ಅಥಿತಿಗಳಾಗಿ ಆಗಮಿಸಿದ್ದ ಡಾ. ಎಸ್.ಕೆ. ಅರುಣಿ ಉಪನಿರ್ದೇಶಕರು ಐ.ಸಿ.ಎಚ್.ಆರ್. ಬೆಂಗಳೂರು ಅವರಿಗೆ ಸನ್ಮಾನ

ಸಮ್ಮೇಳನದಲ್ಲಿ ವಿಶೇಷ ಉಪಸ್ಥಿತರಾಗಿದ್ದ ಶ್ರೀ ಸಿದ್ಧಗಿರಿ ಓ.ಎಲ್. ಚಂದ್ರೇಗೌಡ ಅವರಿಗೆ ಸನ್ಮಾನ

ಡಾ. ವಿ.ಎಸ್. ಕಟಗಿಹಳ್ಳಿಮಠ ಅವರಿಗೆ ಅಕಾದೆಮಿ ಅಧ್ಯಕ್ಷರಾದ ಡಾ. ದೇವರಕೊಂಡಾ ರೆಡ್ಡಿ ಅವರಿಂದ ಸನ್ಮಾನ

ಶ್ರೀ ಎ.ಸಿ. ಪಟ್ಟಣದ್, ಧರ್ಮದರ್ಶಿಗಳು ಶ್ರೀಮದ್ವೀರಶೈವ ಶಿವಯೋಗ ಮಂದಿರ, ಸಂಸ್ಥೆ ಅವರಿಗೆ ಸನ್ಮಾನ

ಡಾ. ವಾಸುದೇವ, ರಾಜ್ಯಪುರಾತತ್ವ, ವಸ್ತುಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಧಾರವಾಡ ಅವರಿಗೆ ಸನ್ಮಾನ

ಇತಿಹಾಸ ಸಂಶೋಧಕ ಡಾ. ಪಿ.ವಿ. ಕೃಷ್ಣಮೂರ್ತಿಯವರ 'ಆನೆ ನಾಡು' ಪುಸ್ತಕ ಸ್ವಾಮಿಜೀಯವರಿಂದ ಬಿಡುಗಡೆ

ಸಮ್ಮೇಳನಾಧ್ಯಕ್ಷರಾದ ಡಾ. ಬಿ. ರಾಜಶೇಖರಪ್ಪ ಅವರಿಂದ, ಡಾ. ಮೋಹನ ಆರ್. ಅವರ
ಪ್ರಾಗೈತಿಹಾಸಿಕ ಬಂಡೆಚಿತ್ರಗಳ ಛಾಯಾ ಚಿತ್ರಪ್ರದರ್ಶನ ಉದ್ಘಾಟನೆ

೩೨ನೇ ವಾರ್ಷಿಕ ಸಮ್ಮೇಳನದಲ್ಲಿ ಸರ್ವಸದಸ್ಯರ ಸಭೆ – ಶ್ರೀ ಗುರುಪ್ರಸಾದ್ ಬಿ.ಎಸ್. ಅವರಿಂದ
ಲೆಕ್ಕಪತ್ರ ಮಂಡನೆ



ಆಹ್ವಾನಿತರು ಹಾಗೂ ಪ್ರತಿನಿಧಿಗಳು




ಡಾ. ಸ್ಮಿತಾ ಅವರಿಂದ ಪ್ರಬಂಧ ಮಂಡನೆ




ಡಾ. ಟಿ.ಎಲ್. ಜಗದೀಶ್ ಅವರಿಂದ ಪ್ರಬಂಧ ಮಂಡನೆ




ಡಾ. ನಳಿನಿಯವರಿಂದ ಗೋಷ್ಠಿ ಅಧ್ಯಕ್ಷೀಯ ಭಾಷಣ




ಡಾ. ಕೆ. ರವೀಂದ್ರನಾಥ್ ಅವರಿಂದ ಪ್ರಬಂಧ ಮಂಡನೆ




ಡಾ. ಅಮರೇಶ ಯತಗಲ್ ಅವರಿಂದ ಪ್ರಬಂಧ ಮಂಡನೆ



ಐತಿಹಾಸಿಕ ಪರಂಪರೆ ಉಳಿಸಿ
ಕಾರ್ಯಕ್ರಮ ಉದ್ಘಾಟನೆ
ಗಬ್ಬೂರು - ದೇವದುರ್ಗ ತಾ॥
ರಾಯಚೂರು ಜಿಲ್ಲೆ



ಐತಿಹಾಸಿಕ ಪರಂಪರೆ ಉಳಿಸಿ
ಭಿತ್ತಿ ಪತ್ರ ಬಿಡುಗಡೆ
ಗಬ್ಬೂರು - ದೇವದುರ್ಗ ತಾ॥
ರಾಯಚೂರು ಜಿಲ್ಲೆ



ಶ್ರೀ ಆ.ದ. ಕಟ್ಟಿಮನಿ ಗದಗ
ಅವರಿಗೆ ಸನ್ಮಾನ
ಗಬ್ಬೂರು - ದೇವದುರ್ಗ ತಾ॥
ರಾಯಚೂರು ಜಿಲ್ಲೆ

ಶ್ರೀ ಜಿ.ಬಿ. ಹಿರೇಮಠ್, ಪ್ರಾಂಶುಪಾಲರು, ಗೋವರ್ಧನ್ ಮತ್ತು ಕವಿತಾಜಂಗಮವಾಡ ಉಪನ್ಯಾಸಕರು ಮತ್ತು ವಿದ್ಯಾರ್ಥಿ ವಿದ್ಯಾರ್ಥಿನಿಯರು (ಸ್ವಯಂಸೇವಕರು) ಕಲಾವಿಭಾಗ, ಸರ್ಕಾರಿ ಪದವಿ ಕಾಲೇಜು, ಬಾದಾಮಿ

ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನದಲ್ಲಿ ಸದಸ್ಯರ ನೋಂದಣಿ

# ಅಧ್ಯಕ್ಷರ ನುಡಿ

ಕರ್ನಾಟಕ ಇತಿಹಾಸ ಅಕಾದೆಮಿಯು ೩೨ ಸಂವತ್ಸರಗಳನ್ನು ಪೂರೈಸಿ ೩೩ನೆಯ ವರ್ಷಕ್ಕೆ ಕಾಲಿಡುತ್ತಿದೆ. ಕಳೆದ ೩೨ ವರ್ಷಗಳಿಂದ ಅಕಾದೆಮಿಯ ಕರ್ನಾಟಕ ಇತಿಹಾಸ ಹಾಗೂ ಸಂಸ್ಕೃತಿಗೆ ಸಂಬಂಧಿಸಿದಂತೆ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡು ಕರ್ನಾಟಕ ಸಂಸ್ಕೃತಿ ಪ್ರಸರಣದಲ್ಲಿ ತೊಡಗಿದೆ. ಇಂತಹ ಕಾರ್ಯದಲ್ಲಿ ಕೈ ಜೋಡಿಸಿದ ಸದಸ್ಯರಿಗೆ, ಮಠಮಾನ್ಯಗಳಿಗೆ, ಸಂಘಸಂಸ್ಥೆಗಳಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಕರ್ನಾಟಕ ಇತಿಹಾಸ ಅಕಾದೆಮಿಯ ಕಾರ್ಯಕ್ರಮಗಳಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮವೂ ಒಂದು ಕಳೆದ ವರ್ಷ ದೇವದುರ್ಗ ತಾಲ್ಲೂಕಿನ ಗಬ್ಬೂರಿನಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮವನ್ನು ಸ್ಥಳೀಯರ ನೆರವಿನೊಂದಿಗೆ ಆಚರಿಸಿದೆವು ಕರ್ನಾಟಕದಲ್ಲಿ ಐತಿಹಾಸಿಕ ಅವಶೇಷಗಳ ಉಳಿಕೆಗಾಗಿ ಸ್ಥಳೀಯ ಅರಿವು ಮೂಡಿಸಲು ಹಾಗೂ ರಕ್ಷಣೆಯಲ್ಲಿ ಪಾಲ್ಗೊಂಡ ಯಾರಾದರೊಬ್ಬರನ್ನು ಸನ್ಮಾನ ಮಾಡುವ ಯೋಜನೆಯೊಂದನ್ನು ಹಮ್ಮಿಕೊಂಡು ಅದರಂತೆ ಕಳೆದ ಬಾರಿ ೨೦೧೮ರಲ್ಲಿ ಗದಗಿನ ಅ.ದ.ಕಟ್ಟಿಮನಿ ಅವರನ್ನು ಸನ್ಮಾನಿಸಿದೆ. ಈ ವರ್ಷ ೨೦೧೯ ರಲ್ಲಿ ಶ್ರೀ ಕೆಂಗೇರಿ ಚಕ್ರಪಾಣಿ, ದೇವಾಲಯ-ಶಿಲ್ಪಗಳ ಛಾಯಾಚಿತ್ರಗ್ರಾರರು ಇವರನ್ನು ಸನ್ಮಾನಿಸಿದೆ. ಪರಂಪರೆ ಉಳಿಸಿ ಕಾರ್ಯಕ್ರಮ ಉದ್ಘಾಣೆಯಾದ ನಂತರ ರಾಜ್ಯದ ಅನೇಕ ಕಡೆಯ ಶಾಲೆ-ಕಾಲೇಜುಗಳಲ್ಲಿ ಹಾಗೂ ಬೇರೆ ಬೇರೆ ಕಡೆಗಳಲ್ಲಿ ನಡೆದಿದೆ. ನಮ್ಮ ಸದಸ್ಯರು ಹಾಗೂ ಇತರರು ಈ ಕಾರ್ಯಕ್ರಮವನ್ನು ಮಾಡಿ ಸ್ಥಳೀಯರಲ್ಲಿ ತಮ್ಮ ಸ್ಥಳದ ವಾಸ್ತು, ಮೂರ್ತಿಶಿಲ್ಪ, ವೀರಗಲ್ಲು, ಕೆರೆಕಟ್ಟೆ, ಹಸ್ತಪ್ರತಿ, ನಾಣ್ಯ ಶಾಸನ ಮುಂತಾದವುಗಳ ಬಗ್ಗೆ ಜಾಗೃತಿ ಮೂಡಿಸಿದ್ದಾರೆ.

ಕಳೆದ ವರ್ಷದ ಅಂದರೆ ಕರ್ನಾಟಕ ಇತಿಹಾಸ ಅಕಾದೆಮಿಯ ೩೨ನೇಯ ವಾರ್ಷಿಕ ಸಮ್ಮೇಳನವು ಬಾದಾಮಿ ತಾಲ್ಲೂಕಿನ ಶಿವಯೋಗಮಂದಿರದ ಆಶ್ರಯದಲ್ಲಿ ನಡೆಯಿತು. ಇದರ ನೇತೃತ್ವ ವಹಿಸಿದ್ದವರು ಶಿವಯೋಗ ಮಂದಿರದ ಅಧ್ಯಕ್ಷರಾದ ಜಗದ್ಗುರು ಶ್ರೀ ಸಂಗನ ಬಸವ ಸ್ವಾಮಿಗಳು, ಅಧ್ಯಕ್ಷರು ಶಿವಯೋಗಮಂದಿರ, ಬಾದಾಮಿ, ಈ ಸಮ್ಮೇಳನದ ಯಶಸ್ವಿಗೆ ದುಡಿದ ಪೂಜ್ಯ ಸ್ವಾಮಿಗಳಿಗೆ, ಕಾರ್ಯಕರ್ತರಿಗೆ, ಸ್ಥಳೀಯ ವಿದ್ಯಾರ್ಥಿಗಳಿಗೆ ವಿಶೇಷವಾಗಿ ಶ್ರೀ ಇಷ್ಟಲಿಂಗ ಸಿರಸಿ, ಡಾ. ಶೀಲಾಕಾಂತ ಪತ್ತಾರ ಇವರಿಗೆ ಅಕಾದೆಮಿಯು ಆಭಾರಿಯಾಗಿದೆ.

ಅಕಾದೆಮಿಯ ವತಿಯಿಂದ ಜಾಲತಾಣವು (website) ನಿರ್ವಹಿಸುತ್ತಿದ್ದು ಇತಿಹಾಸ ದರ್ಶನದ ಎಲ್ಲಾ ಸಂಪುಟಗಳ ಲೇಖನಗಳು ಇಲ್ಲಿ ಜಿಲ್ಲಾವಾರಾಗಿ ಲಭ್ಯವಿದೆ. ಇದನ್ನು ಇನ್ನೂ ಹೆಚ್ಚಿನ ಪರಿಣಾಮ ಕಾರಿಯಾಗಿ ರೂಪಿಸಬೇಕೆಂದು ಅಕಾದೆಮಿ ಪ್ರಯತ್ನಿಸುತ್ತಿದೆ. ಮುಂದಿನ ವರ್ಷಗಳಲ್ಲಿ ವೆಬ್‌ಸೆಮಿನಾರ್ ನಡೆಸಬೇಕೆಂಬ ಉತ್ಕಟ ಆಸೆಯನ್ನು ಹೊಂದಿದೆ. ಇದಕ್ಕಾಗಿ ಪ್ರಯತ್ನಗಳನ್ನೂ ನಡೆಸಿದೆ ಇತಿಹಾಸ ಸಂಸ್ಕೃತಿಗೆ ಸಂಬಂಧಿಸಿದ ಹೆಚ್ಚಿನ ಮಾಹಿತಿ ನೀಡುವ ಪ್ರಯತ್ನ ನಡೆಯುತ್ತಿದೆ. ಎಂದು ತಿಳಿಸಲು ಸಂತೋಷವೆನ್ನಿಸುತ್ತಿದೆ.

ಅಕಾದೆಮಿಯ ಫೇಸ್‌ಬುಕ್ Ask Historian ತಾಣವು ಎರಡು ಸಾವಿರಕ್ಕೂ ಹೆಚ್ಚು ಸದಸ್ಯರನ್ನು ಹೊಂದಿದೆ. ಇದರಲ್ಲಿ ಅಕಾದೆಮಿಯ ಸದಸ್ಯರು ಹಾಗೂ ಆಸಕ್ತ ಇತರ ಸದಸ್ಯರು ಪಾಲ್ಗೊಂಡಿದ್ದಾರೆ. ಇತಿಹಾಸ ಸಂಸ್ಕೃತಿಯ

ವಿಮರ್ಶೆ, ಚರ್ಚೆ, ಸಂಶೋಧನಾ ವಿಷಯಗಳು ಬಹಳ ಮಹತ್ವದ್ದಾಗಿ ಚರ್ಚೆಗೆ ಒಳಪಡುತ್ತಿರುವುದು ಸಂತೋಷದ ಸಂಗತಿ. ಇದರಲ್ಲಿ ಭಾಗಿಯಾದ ಎಲ್ಲರಿಗೂ ಧನ್ಯವಾದಗಳು.

ಕಳೆದ ಬಾರಿ ಶಿವಯೋಗಮಂದಿರದಲ್ಲಿ ನಡೆದ ೩೨ನೇಯ ವಾರ್ಷಿಕ ಸಮ್ಮೇಳನದಲ್ಲಿ ಸದಸ್ಯರು ಮಂಡಿಸಿದ ಪ್ರಬಂಧಗಳನ್ನು ಒಟ್ಟು ಗೂಡಿಸಿ ಅಕಾದೆಮಿಯ ಪ್ರಮುಖ ಇತಿಹಾಸ ದರ್ಶನ ಸಂಪುಟ ೩೪ನ್ನು ಪ್ರಕಟಗೊಂಡು ಬಿಡುಗಡೆಗೆ ಸಿದ್ಧವಾಗಿದೆ.

ಇತಿಹಾಸ ದರ್ಶನ ಸಂಪುಟದ ಪ್ರಕಟಣೆಗಾಗಿ ಬಾಳೆಹೊನ್ನೂರಿನ ರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು ಈ ವರ್ಷವೂ ರೂ ೨೫೦೦೦/–ಗಳನ್ನು ಸತತ ೧೫ ವರ್ಷಗಳಿಂದ ಆಶೀರ್ವಾದ ಪೂರ್ವಕವಾಗಿ ನೀಡುತ್ತಾ ಬಂದಿದ್ದಾರೆ. ಇವರಿಗೆ ನನ್ನ ಕೃತಜ್ಞತೆಗಳು.

ಶಿವಯೋಗ ಮಂದಿರದ ಅಧ್ಯಕ್ಷರೂ ಹೊಸಪೇಟೆಯ ಕೊಟ್ಟೂರು ಮಠದ ಪಟ್ಟಾಧ್ಯಕ್ಷರೂ ಆದ ಜಗದ್ಗುರು ಶ್ರೀ ಸಂಗನ ಬಸವಸ್ವಾಮಿಗಳು ಕರ್ನಾಟಕ ಇತಿಹಾಸ ಅಕಾದೆಮಿಗೆ ವಾರ್ಷಿಕ ರೂ. ೧,೦೦,೦೦೦/– ಒಂದು ಲಕ್ಷರೂಪಾಯಿಗಳ ನೆರವು ನೀಡಲು ವಾಗ್ದಾನ ಮಾಡಿದ್ದು ಕಳೆದ ವರ್ಷವೇ ರೂ. ಒಂದು ಲಕ್ಷ ರೂಪಾಯಿಗಳನ್ನು ನೀಡಿ ಆಶೀರ್ವದಿಸಿ ನಮ್ಮನ್ನು ಪ್ರೋತ್ಸಾಯಿಸಿದ್ದಾರೆ. ಜಗದ್ಗುರು ಸಂಗನಬಸವ ಸ್ವಾಮಿಗಳನ್ನು ಅಕಾದದೆಮಿಯು ಕೃತಜ್ಞತೆಯಿಂದ ಸ್ಮರಿಸುತ್ತದೆ.

ಅಕಾಡೆಮಿ ಮೇಲಿನ ಅಭಿಮಾನದಿಂದ ತಮ್ಮ ಕೈಲಾದಷ್ಟು ಸಹಾಯ ನೀಡಿ ಪ್ರೋತ್ಸಾಹಿಸಿದ ಎಲ್ಲರಿಗೂ ನನ್ನ ಕೃತಜ್ಞತೆಗಳು. ಪ್ರಸ್ತುತ ತಂತ್ರಜ್ಞಾನವನ್ನು ಬಳಿಸಿಕೊಂಡು ಅಕಾದೆಮಿಯ ಚಟುವಟಿಕೆಗಳು ವೆಬ್‌ಸೈಟ್ ಇತ್ಯಾದಿಗಳ ಮೂಲಕ ಹೊಸ ರೂಪುರೇಷೆಗಳನ್ನು ಹಮ್ಮಿಕೊಳ್ಳಬೇಕಾದ ಅವಶ್ಯಕತೆ ಇದೆ. ಇದರ ಮೂಲಕ ಸಂಶೋಧಕರಿಗೆ, ಆಸಕ್ತ ಸಹೃದಯರಿಗೆ ಜ್ಞಾನ ಪ್ರಸರಣ ಕಾರ್ಯದಲ್ಲಿ ನಾವೆಲ್ಲಾ ತೊಡಗಬೇಕಾಗಿದೆ. ಇದಕ್ಕೆ ಸದಸ್ಯರ ಎಲ್ಲಾ ರೀತಿಯ ಹಿಂದಿನಂತೆಯೇ ಸಹಕಾರವನ್ನು ಕೋರಿದೆ. ಹಾಗೆಯೇ ಅಕಾಡೆಮಿಯ ಬೆಳವಣಿಗೆಯಲ್ಲಿ ದುಡಿದವರನ್ನು ದುಡಿಯುತ್ತಿರುವವರನ್ನು ಸ್ಮರಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

೦೧, ಅಕ್ಟೋಬರ್, ೨೦೧೯
ಬೆಂಗಳೂರು.

**ದೇವರಕೊಂಡಾರೆಡ್ಡಿ**
ಅಧ್ಯಕ್ಷರು

# ಸಂಪಾದಕೀಯ

ಕರ್ನಾಟಕ ಇತಿಹಾಸ ಅಕಾದೆಮಿಯು ೩೨ ವಾರ್ಷಿಕ ಸಮ್ಮೇಳನಗಳನ್ನು ಮುಗಿಸಿ ೩೩ನೆಯ ವರ್ಷಕ್ಕೆ ಕಾಲಿಡುತ್ತಿದೆ. ಇದರೊಂದಿಗೆ ಅಕಾದೆಮಿಯ ಪ್ರತಿಷ್ಠಿತ ಪ್ರಕಟಣೆಯಾದ ‘ಇತಿಹಾಸ ದರ್ಶನ’ ೩೪ನೆಯ ಸಂಪುಟವನ್ನು ಹುಂಚದ ಹೊಂಬುಜ ಜೈನಮಠದಲ್ಲಿ ಬಿಡುಗಡೆಗೊಳಿಸುತ್ತಿದ್ದೇವೆ.

ಈ ೩೪ನೇಯ ಸಂಪುಟವು ಬಾದಾಮಿಯ ಶ್ರೀ ಮದ್ವೀರಶೈವ ಶಿವಯೋಗ ಮಂದಿರದ ಆಶ್ರಯದಲ್ಲಿ ೨೬, ೨೭, ೨೮ ಅಕ್ಟೋಬರ್ ೨೦೧೮ ರಂದು ನಡೆಸಿದ ೩೨ನೇಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧಗಳ ಸಂಪಾದಿತ ಸಂಪುಟವಾಗಿದೆ. ಈ ಸಮ್ಮೇಳನದಲ್ಲಿ ೧೬೯ ಪ್ರಬಂಧಗಳು ಮಂಡನೆಯಾಗಿದ್ದವು. ಅವುಗಳಲ್ಲಿ ೧೧೮ ಪ್ರಬಂಧಗಳು ಮಾತ್ರ ಸ್ವೀಕೃತವಾಗಿ ಪ್ರಕಟವಾಗಿವೆ. ಇತಿಹಾಸ ದರ್ಶನದ ಸಂಪುಟಗಳು ಕಳೆದ ೩೩ ವರ್ಷಗಳಿಂದ ನಿರಂತರವಾಗಿ ಪ್ರಕಟವಾಗುತ್ತಿದೆ.

ಈ ವರ್ಷ ಕರ್ನಾಟಕ ಸರ್ಕಾರದಿಂದ ಯಾವುದೇ ಅನುದಾನ ಬಾರದಿದ್ದಾಗ ಬಹುಕಷ್ಟದ ಪರಿಸ್ಥಿತಿಯಲ್ಲಿದ್ದೆವು ಇಂತಹ ಸಂದರ್ಭದಲ್ಲಿ ಆರ್ಥಿಕವಾಗಿ ಸಹಾಯ ನೀಡಬೇಕೆಂದು ಮಿಥಿಕ್ ಸೊಸೈಟಿಯ ಪದಾಧಿಕಾರಿಗಳಲ್ಲಿ ವಿನಂತಿಸಿದಾಗ ನಮ್ಮ ವಿನಂತಿಯನ್ನು ಮನ್ನಿಸಿ ಮಿಥಿಕ್ ಸೊಸೈಟಿಯವರು ರೂ. ೨,೧೫,೦೦೦/–ಗಳನ್ನು ಸಹಾಯ ಧನವಾಗಿ ನೀಡಿದ್ದಾರೆ. ಆ ಹಣದಲ್ಲಿ ಈ ಸಂಪುಟವನ್ನು ಮುದ್ರಿಸಲಾಗಿದೆ. ಈ ಧನಸಹಾಯ ನೀಡಲು ಸಹಕರಿಸಿದ ಮಿಥಿಕ್ ಸೊಸೈಟಿಯ ಅಧ್ಯಕ್ಷರಾದ ಶ್ರೀ ನರಹರಿಯವರಿಗೂ, ಉಪಾಧ್ಯಕ್ಷರಾದ ಡಾ. ಎಂ. ಕೊಟ್ರೇಶ್ ಅವರಿಗೂ, ಕಾರ್ಯದರ್ಶಿಗಳಾದ ಶ್ರೀ ವಿ. ನಾಗರಾಜ್ ಅವರಿಗೂ ಡಾ. ಎಂ.ಜಿ. ನಾಗರಾಜ್ ಮತ್ತು ಡಾ. ಕೆ. ವಂಸತಲಕ್ಷ್ಮೀ ಮೊದಲಾದ ಪದಾಧಿಕಾರಿಗಳಿಗೆ ಇತಿಹಾಸ ಅಕಾದೆಮಿಯು ಆಭಾರಿಯಾಗಿದೆ.

ಈ ಸಂಪುಟದ ಪ್ರಕಟಣೆಗಾಗಿ ೨೦೦೫ರಿಂದ ಪ್ರತಿವರ್ಷವೂ ಬಾಳೆಹೊನ್ನೂರಿನ ಶ್ರೀಮದ್ರಂಭಾಪುರಿ ವೀರಸಿಂಹಾನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗತ್ಪಾದರು ರೂ. ೨೫,೦೦೦/– ನೀಡಿ ಆಶೀರ್ವದಿಸಿದ್ದಾರೆ.

ಇದುವರೆವಿಗೆ ಇತಿಹಾಸ ದರ್ಶನದಲ್ಲಿ ಪ್ರಕಟವಾಗಿರುವ ಎಲ್ಲಾ ಪ್ರಬಂಧಗಳನ್ನು ಕರ್ನಾಟಕ ಇತಿಹಾಸ ಅಕಾದೆಮಿಯ ವೆಬ್‌ಸೈಟ್‌ನಲ್ಲಿಯೂ ಪಡೆಯಬಹುದಾಗಿದೆ. ಈ ಸಂಪುಟ ಹೊರಬರಲು ನೆರವಾದ ಇತಿಹಾಸ ಅಕಾದೆಮಿಯ ಕಾರ್ಯಕಾರಿಸಮಿತಿ, ೩೨ನೆಯ ವಾರ್ಷಿಕ ಸಮ್ಮೇಳನಕ್ಕೆ ಆಶ್ರಯ ನೀಡಿದ ಬಾದಾಮಿಯ ಶ್ರೀ ಮದ್ವೀರಶೈವ ಶಿವಯೋಗ ಮಂದಿರ ಟ್ರಸ್ಟ್ ಅವರಿಗೆ ಅಕಾದೆಮಿಯು ಅಭಾರಿಯಾಗಿದೆ.

ಮೇಲ್‌ನಲ್ಲಿ ಬಂದಿದ್ದ ಲೇಖನಗಳನ್ನು ಸಂಗ್ರಹಿಸಿ ನೀಡಿದ ಡಾ. ಸಂಧ್ಯಾ ಶ್ರೀಮತಿ ಎಸ್.ವೈ. ನಿರ್ಮಲಾ, ಕರಡಚ್ಚು ತಿದ್ದುವಲ್ಲಿ ನೆರವಾದ, ಡಾ. ನಳಿನಿ ವೆಂಕಟೇಶ್, ಡಾ. ಸಿ.ಬಿ. ಪಾಟೀಲ್, ಶ್ರೀ ಗುರುಪ್ರಸಾದ್ ಬಿ.ಎಸ್. ಅವರಿಗೆ, ಮುದ್ರಣ ಕಾರ್ಯದಲ್ಲಿ ತೊಡಗಿಸಿಕೊಂಡ ಶ್ರೀ ರೇಣುಕಾಸ್ವಾಮಿ ಒಡೆಯರ್ ಬಿ.ಈ., ಶ್ರೀ ಕೆ.ಎಲ್. ರಾಜಶೇಖರ್ ಅವರಿಗೆ, ಮುಖಪುಟ ಅಂದವಾಗಿ ರಚಿಸಿದ ಟಿ. ಶ್ರೀನಿವಾಸ್ ಅವರಿಗೆ, ೩೪ನೇ ಸಂಪುಟವನ್ನು ಅಂದವಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದ ಶ್ರೀ ಕೆ.ಎಸ್. ಮಂಜು ಅವರಿಗೂ, ಡಿ.ಟಿ.ಪಿ. ಮಾಡಿಚಿತ್ರಗಳನ್ನು ಸಂಯೋಜಿಸಿದ ಶ್ರೀ ಪಿ.ಎಸ್. ಸುಬ್ರಮಣಿಬಾಬು, ಶ್ರೀಮತಿ ಮಾಲಾ ಎಂ. ಹಾಗೂ ಸಿಬ್ಬಂದಿ ವರ್ಗಕ್ಕೂ, ಇತಿಹಾಸ ದರ್ಶನದ ಸಂಪಾದಕ ಮಂಡಳಿಗೂ ನಮ್ಮ ಕೃತಜ್ಞತೆಗಳು.

೦೧ ಅಕ್ಟೋಬರ್ ೨೦೧೯, ಮಂಗಳವಾರ
ಶಾಲಿವಾಹನ ಶಕ: ೧೯೪೧
ವಿಕಾರಿನಾಮ ಸಂವತ್ಸರ
ಆಶ್ವಯುಜ, ಶುಕ್ಲ ತೃತೀಯ.

**ದೇವರಕೊಂಡಾರೆಡ್ಡಿ**
**ಜಿ.ಕೆ. ದೇವರಾಜಸ್ವಾಮಿ**

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು

**ಕಾರ್ಯಕಾರಿ ಸಮಿತಿ**

(೨೩.೧೦.೨೦೧೮ರಲ್ಲಿ ಆಯ್ಕೆಯಾದವರು)

**ಅಧ್ಯಕ್ಷರು**

ಡಾ|| ದೇವರಕೊಂಡಾರೆಡ್ಡಿ

**ಉಪಾಧ್ಯಕ್ಷರು**

ಡಾ|| ಎಂ.ಜಿ. ನಾಗರಾಜ್

ಡಾ|| ಎಚ್.ಎಸ್. ಗೋಪಾಲರಾವ್

**ಪ್ರಧಾನ ಕಾರ್ಯದರ್ಶಿ**

ಪ್ರೊ. ಜಿ.ಕೆ. ದೇವರಾಜಸ್ವಾಮಿ

**ಕಾರ್ಯದರ್ಶಿಗಳು**

ಶ್ರೀ ಕೆ.ಎಲ್. ರಾಜಶೇಖರ್

ಡಾ. ಸಂಧ್ಯಾ ವಿ.

**ಕೋಶಾಧ್ಯಕ್ಷರು**

ಶ್ರೀ ಎಂ.ಬಿ. ಪಾಟೀಲ್

**ಸದಸ್ಯರು**

*ಡಾ|| ಎ.ಕೆ. ಶಾಸ್ತ್ರಿ, ಶಿರಸಿ*

*ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಸಿಂಧನೂರು*

*ಶ್ರೀ ಪ್ರಭಾಕರ್ ಎಂ.ಎನ್., ಮೈಸೂರು*

*ಡಾ|| ಅಮರೇಶ್ ಯತಗಲ್, ಬಿಜಾಪುರ*

*ಪ್ರೊ. ಮುರುಗೇಶಿ ಟಿ., ಉಡುಪಿ*

*ಡಾ|| ಹನುಮಾಕ್ಷಿ ಗೋಗಿ, ಧಾರವಾಡ*

*ಶ್ರೀ ಬಸವರಾಜ್ ಟಿ.ಎಚ್.ಎಂ. ಬಳ್ಳಾರಿ*

*ಶ್ರೀ ಕಲ್ಲಪ್ಪ ಮಹದೇವಪ್ಪ ಗರಗ, ಗದಗ*

*ಶ್ರೀ ಸಿ.ಬಿ. ಪಾಟೀಲ, ಕೊಪ್ಪಳ*

*ಶ್ರೀ ಸಿದ್ದಗಿರಿ ಓ.ಎಲ್. ಚಂದ್ರೇಗೌಡ, ಚಿಕ್ಕಮಗಳೂರು*

*ಪ್ರೊ. ಲಕ್ಷ್ಮಣ್ ತೆಲಗಾವಿ, ಧಾರವಾಡ*

*ಡಾ|| ಎಫ್.ಟಿ. ಹಳ್ಳಿಕೇರಿ, ಯಾದಗಿರಿ*

*ಡಾ|| ಲಿಂಗರಾಜು, ಮಂಡ್ಯ*

*ಡಾ|| ಚಂದ್ರಶೇಖರ್ ಎಚ್. ಬೆಂಗಳೂರು*

*ಶ್ರೀ ಸುಮತೀಂದ್ರ ನಾಡಿಗ್, ದಾವಣಗೆರೆ*

*ಶ್ರೀ ಗುರುಪ್ರಸಾದ್ ಬಿ.ಎಸ್., ಬೆಂಗಳೂರು*

*ಶ್ರೀ ಗುರುಶಾಂತಪ್ಪ ವಿ.ಪಿ., ಬೆಂಗಳೂರು*

*ಡಾ. ಎಸ್.ಕೆ. ಮೇಲಾಕಾರ, ಧಾರವಾಡ*

*ಶ್ರೀ ಇಷ್ಟಲಿಂಗ ಶಿರಸಿ, ಬಾದಾಮಿ*

# ಪರಿವಿಡಿ

# ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನಗಳ ಸರ್ವಾಧ್ಯಕ್ಷರು

| ಸಂಖ್ಯೆ | ಸರ್ವಾಧ್ಯಕ್ಷರು<br>ದಿನಾಂಕ-ವರ್ಷ/ಸ್ಥಳ<br>ಆಶ್ರಯ/ಸಹಯೋಗ |
|---|---|
| ೧. | **ಡಾ|| ಎಂ. ಚಿದಾನಂದಮೂರ್ತಿ**<br>೧೫-೧೭ ಮೇ ೧೯೮೭<br>*ಕರ್ನಾಟಕ ಇತಿಹಾಸ ಅಕಾದೆಮಿ*<br>*ಬೆಂಗಳೂರು* |
| ೨. | **ಡಾ|| ಜಿ. ಎಸ್. ಗಾಯಿ**<br>೨೩-೨೪ ಅಕ್ಟೋಬರ್ ೧೯೮೮<br>*ಸಿದ್ಧಗಂಗಾಕ್ಷೇತ್ರ : ಡಾ| ಶಿವಕುಮಾರ ಸ್ವಾಮಿಗಳು ಮತ್ತು ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತು, ತುಮಕೂರು* |
| ೩. | **ಡಾ|| ಶ್ರೀನಿವಾಸ ರಿತ್ತಿ**<br>೧೦-೧೧ ಜೂನ್ ೧೯೮೯<br>*ಶ್ರೀ ಮ. ನಿ. ಪ್ರ. ಜ|| ಡಾ|| ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ, ಗದಗ* |
| ೪. | **ಡಾ|| ಎಸ್. ಆರ್. ರಾವ್**<br>೨೧-೨೨ ಜುಲೈ ೧೯೯೦<br>*ಡಾ|| ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ, ಹಿರೇಮಠ, ದಾವಣಗೆರೆ* |
| ೫. | **ಡಾ|| ಬಾ. ರಾ. ಗೋಪಾಲ್**<br>೧೨-೧೪ ಜುಲೈ ೧೯೯೧<br>*ಚಿನ್ಮೂಲಾದ್ರಿ ಶ್ರೀ ಮುರುಘ ರಾಜೇಂದ್ರ ಬೃಹನ್ಮಠ, ಚಿತ್ರದುರ್ಗ* |
| ೬. | **ಡಾ|| ಕೆ. ವಿ. ರಮೇಶ್**<br>೧೧-೧೩ ಜುಲೈ ೧೯೯೨<br>*ಪಂಡಿತ್ ತಾರಾನಾಥ ಶಿಕ್ಷಣ ಸಂಸ್ಥೆ*<br>*ರಾಯಚೂರು* |
| ೭. | **ಡಾ|| ಅ. ಸುಂದರ**<br>೨೩-೨೫ ಜುಲೈ ೧೯೯೩<br>*ಸುತ್ತೂರು ಮಠದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಜೆ. ಎಸ್. ಎಸ್. ಸಂಸ್ಥೆ, ಮೈಸೂರು* |
| ೮. | **ಡಾ|| ಎಂ. ಎಂ. ಕಲಬುರ್ಗಿ**<br>೯-೧೦ ಜುಲೈ ೧೯೯೪<br>*ಶ್ರೀ ಎಂ. ವೈ. ಘೋರ್ಪಡೆ*<br>*ಕರ್ನಾಟಕ ಸೇವಾ ಸಂಘ*<br>*ಸೊಂಡೂರು* |
| ೯. | **ಡಾ|| ಎ.ವಿ. ನರಸಿಂಹಮೂರ್ತಿ**<br>೯-೧೧ ಸೆಪ್ಟೆಂಬರ್ ೧೯೯೫<br>*ಶ್ರೀ ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳು - ಶ್ರೀ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾದೆಮಿ ಬೆಳಗಾವಿ* |
| ೧೦. | **ಡಾ|| ಜಿ. ಎಸ್. ದೀಕ್ಷಿತ್**<br>೭-೯ ಜೂನ್ ೧೯೯೬<br>*ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಶ್ರೀ ಮ. ನಿ. ಪ್ರ. ಶಿವಯೋಗಿ ಮಹಾಸ್ವಾಮಿಗಳು ಶ್ರೀ ಮುರುಘಾಮಠ ಧಾರವಾಡ* |
| ೧೧. | **ಪ್ರೊ|| ಕೆ. ಅಭಿಶಂಕರ್**<br>೨೫-೨೭ ಅಕ್ಟೋಬರ್ ೧೯೯೭<br>*ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನ ಮಠ ಹಾಗೂ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ ಶಿರಸಿ* |
| ೧೨. | **ಡಾ|| ಎಸ್. ನಾಗರಾಜು**<br>೧೪-೧೬ ನವೆಂಬರ್ ೧೯೯೮<br>*ಕರ್ನಾಟಕ ಇತಿಹಾಸ ಅಕಾದೆಮಿ*<br>*ದಿ ಮಿಥಿಕ್ ಸೊಸೈಟಿ, ಬೆಂಗಳೂರು* |
| ೧೩. | **ಡಾ|| ಶ್ರೀನಿವಾಸ ಹಾವನೂರ**<br>೧೧-೧೩ ಜೂನ್ ೧೯೯೯<br>*ಮಾನ್ಯ ಸಚಿವ ಶ್ರೀ ಡಿ. ನಾರಾಯಣದಾಸ್ ಮತ್ತು ಆಯೋಜಕರಾದ ಶ್ರೀ ಕುಂ.ಬಾ.ಸದಾಶಿವಪ್ಪ ಸ್ವಾಗತ ಸಮಿತಿ, ಹರಪನಹಳ್ಳಿ* |
| ೧೪. | **ಶ್ರೀ ಸಿ. ಟಿ. ಎಂ. ಕೊಟ್ರಯ್ಯ**<br>೮-೧೦ ಜುಲೈ ೨೦೦೦<br>*ಕನ್ನಡ ವಿಶ್ವವಿದ್ಯಾಲಯ*<br>*ವಿದ್ಯಾರಣ್ಯ*<br>ಹಂಪಿ |

| ಸಂಖ್ಯೆ | ಸರ್ವಾಧ್ಯಕ್ಷರು<br>ದಿನಾಂಕ-ವರ್ಷ/ಸ್ಥಳ<br>ಆಶ್ರಯ/ಸಹಯೋಗ | ಸಂಖ್ಯೆ | ಸರ್ವಾಧ್ಯಕ್ಷರು<br>ದಿನಾಂಕ-ವರ್ಷ/ಸ್ಥಳ<br>ಆಶ್ರಯ/ಸಹಯೋಗ |
|---|---|---|---|

೧೫. **ಡಾ|| ಜ್ಯೋತ್ಸ್ನಾ ಕಾಮತ್**
೧೩-೧೫ ಅಕ್ಟೋಬರ್ ೨೦೦೧
ಪೂಜ್ಯ ಶ್ರೀ ವಿಶ್ವೇಶ್ವರ ತೀರ್ಥ ಪಾದಂಗಳು
ಪೇಜಾವರ ಮಠಾಧೀಶರು, ಉಡುಪಿ



೧೬. **ಡಾ. ಎ.ಕೆ. ಶಾಸ್ತ್ರಿ**
೨೨-೨೪ ಸೆಪ್ಟೆಂಬರ್ ೨೦೦೨
ಪೂಜ್ಯಶ್ರೀ ರಾಘವೇಶ್ವರ ಭಾರತೀ ಸ್ವಾಮಿಗಳು
ಶ್ರೀ ರಾಮಚಂದ್ರಾಪುರ ಮಠ
ಹೊಸನಗರ



೧೭. **ಡಾ. ಎಸ್. ರಾಜಶೇಖರ್**
೧೩-೧೫ ಸೆಪ್ಟೆಂಬರ್ ೨೦೦೩
ವಿಶ್ವಚೇತನ ಸಂಸ್ಥೆ
ಬಾದಾಮಿ



೧೮. **ಶ್ರೀ ಕೆಳದಿ ಗುಂಡಾ ಜೋಯಿಸ್**
೨೪-೨೬ ಸೆಪ್ಟೆಂಬರ್ ೨೦೦೪
ಶ್ರೀ ಚನ್ನಪ್ಪಸ್ವಾಮಿ ವಿದ್ಯಾಪೀಠ
ಚನ್ನ-ಚೇತನ ಪ್ರಕಾಶನ ಮತ್ತು ಹಿರೇಕಲ್ಮಠ
ಹೊನ್ನಾಳಿ



೧೯. **ಡಾ. ಬಿ.ವ್ಹಿ. ಶಿರೂರ**
೧೧-೧೩ ಸೆಪ್ಟೆಂಬರ್ ೨೦೦೫
ಶ್ರೀ ಕೊತ್ತಲ ಬಸವೇಶ್ವರ
ಭಾರತೀಯ ಶಿಕ್ಷಣ ಸಂಸ್ಥೆ, ಸೇಡಂ



೨೦. **ಡಾ. ಸೂರ್ಯನಾಥ ಕಾಮತ್**
೯-೧೧ ಸೆಪ್ಟೆಂಬರ್ ೨೦೦೬
ಶ್ರೀ ರಾಘವೇಂದ್ರ ಸ್ವಾಮಿಗಳ ಮಠ
ನಂಜನಗೂಡು



೨೧. **ಪ್ರೊ. ಲಕ್ಷ್ಮಣ್ ತೆಲಗಾವಿ**
೮-೧೦ ಸೆಪ್ಟೆಂಬರ್ ೨೦೦೭
ಹಗರಿಬೊಮ್ಮನಹಳ್ಳಿಯ
ರಾಮನಗರ, ಹಗರಿಬೊಮ್ಮನಹಳ್ಳಿ
ಶ್ರೀರಾಮ ಯುವಕ ಸಂಘ



೨೨. **ಡಾ. ವಸುಂಧರಾ ಫಿಲಿಯೋಜಾ**
೧೮-೨೧ ಸೆಪ್ಟೆಂಬರ್ ೨೦೦೮
ಧರ್ಮಸ್ಥಳ ಮಂಜುನಾಥೇಶ್ವರ
ದೇವಾಲಯ ಸಂಸ್ಥೆ, ಧರ್ಮಸ್ಥಳ



೨೩. **ಡಾ. ಎಂ.ಜಿ. ನಾಗರಾಜ್**
೧೦-೧೨ ಅಕ್ಟೋಬರ್ ೨೦೦೯
ಶ್ರೀ ಜಗದ್ಗುರು ರಂಭಾಪುರಿ
ವೀರ ಸಿಂಹಾಸನ ಮಹಾಸಂಸ್ಥಾನ ಪೀಠ
ಬಾಳೆಹೊನ್ನೂರು



೨೪. **ಡಾ. ಎಂ.ಎಸ್. ಕೃಷ್ಣಮೂರ್ತಿ**
೧೩-೧೫ ನವೆಂಬರ್ ೨೦೧೦
ಶ್ರೀ ಆದಿಚುಂಚನಗಿರಿ
ಆದಿಚುಂಚನಗಿರಿ ಮಹಾ ಸಂಸ್ಥಾನ ಮಠ



೨೫. **ಡಾ. ಎಚ್.ಎಸ್.ಗೋಪಾಲರಾವ್**
೯-೧೧ ಸೆಪ್ಟೆಂಬರ್ ೨೦೧೧
ದಿ ಮಿಥಿಕ್ ಸೊಸೈಟಿ
ಬೆಂಗಳೂರು



೨೬. **ಡಾ. ಎಸ್.ವಿ. ವೆಂಕಟೇಶಯ್ಯ**
೨೨-೨೪ ಸೆಪ್ಟೆಂಬರ್ ೨೦೧೨
ದಕ್ಷಿಣಾಮ್ನಾಯ ಶ್ರೀ ಶಾರದಾ ಪೀಠಮ್
ಶೃಂಗೇರಿ



೨೭. **ಡಾ. ಎಸ್.ಕೆ. ಜೋಷಿ**
೨೧-೨೩ ಸೆಪ್ಟೆಂಬರ್ ೨೦೧೩
ದಿ ಮಿಥಿಕ್ ಸೊಸೈಟಿ
ಬೆಂಗಳೂರು



೨೮. **ಡಾ. ಕೆ.ಜಿ. ವಸಂತ ಮಾಧವ**
೨೬-೨೮ ಸೆಪ್ಟೆಂಬರ್ ೨೦೧೪
ಮೂಲ್ಕಿ ಸುಂದರರಾಮಶೆಟ್ಟಿ ಕಾಲೇಜು
ಶಿರ್ವ, ಉಡುಪಿ ಜಿಲ್ಲೆ
ಉಡುಪಿ



೨೯. **ನಾಡೋಜ ಪ್ರೊ. ಹಂಪ ನಾಗರಾಜಯ್ಯ**
೨೯-೩೧ ಅಕ್ಟೋಬರ್ ೨೦೧೫
ಕರ್ನಾಟಕ ಸಂಘ (ರಿ.) ಮಂಡ್ಯ
ಮಂಡ್ಯ ಜಿಲ್ಲೆ



೩೦. **ಪ್ರೊ. ಕೆ. ಪದ್ದಯ್ಯ**
೨೨-೨೪ ಅಕ್ಟೋಬರ್ ೨೦೧೬
ಕನ್ನಡ ಸಂಶೋಧನಾ ಸಂಸ್ಥೆ
ಕರ್ನಾಟಕ ವಿ.ವಿ, ಧಾರವಾಡ



| ಸಂಖ್ಯೆ | ಸರ್ವಾಧ್ಯಕ್ಷರು<br>ದಿನಾಂಕ-ವರ್ಷ/ಸ್ಥಳ<br>ಆಶ್ರಯ/ಸಹಯೋಗ |
| --- | --- |
| ೩೧. | **ಡಾ. ಪಿ.ಎನ್. ನರಸಿಂಹಮೂರ್ತಿ**<br>೨೮-೩೦ ಅಕ್ಟೋಬರ್ ೨೦೧೭<br>ಎಸ್.ಜಿ.ವ್ಹಿ.ವ್ಹಿ. ಟ್ರಸ್ಟ್‌ನ<br>ಶ್ರೀ ಗವಿಸಿದ್ದೇಶ್ವರ ಪದವಿ ಮಹಾವಿದ್ಯಾಲಯ<br>ಮತ್ತು ಶ್ರೀ ಬಿ.ಸಿ. ಪಾಟೀಲ ಟ್ರಸ್ಟ್<br>ಕೊಪ್ಪಳ  |
| ೩೨. | **ಡಾ. ಬಿ. ರಾಜಶೇಖರಪ್ಪ**<br>೨೬-೨೮ ಅಕ್ಟೋಬರ್ ೨೦೧೮<br>ಶ್ರೀಮದ್ವೀರಶೈವ ಶಿವಯೋಗಮಂದಿರ<br>ಸಂಸ್ಥೆ, ಶಿವಯೋಗಮಂದಿರ, ಬಾದಾಮಿ<br>ತಾಲ್ಲೂಕು, ಬಾಗಲಕೋಟೆ ಜಿಲ್ಲೆ  |
| ೩೩. | **ಡಾ. ಟಿ.ವಿ. ವೆಂಕಟಚಾಲಶಾಸ್ತ್ರೀ**<br>೧೮-೨೦ ಅಕ್ಟೋಬರ್ ೨೦೧೯<br>ಶ್ರೀ ಹೊಂಬುಜ ಜೈನಮಠ, ಹುಂಚ,<br>ಹೊಸನಗರ ತಾ॥ ಶಿವಮೊಗ್ಗ ಜಿಲ್ಲೆ.  |

# ಡಾ. ಬಾ.ರಾ. ಗೋಪಾಲ್ ಶಾಸನ ದತ್ತಿ ಪ್ರಶಸ್ತಿ ಸನ್ಮಾನಿತರು

[ಪ್ರಾರಂಭ : ೨೦೦೧ ರಿಂದ ನಗದು ಹತ್ತು ಸಾವಿರ ರೂಪಾಯಿಗಳು]

೧ ***ಡಾ. ಕೆ.ವಿ. ರಮೇಶ***
೧೫ನೇ ವಾರ್ಷಿಕ ಸಮ್ಮೇಳನ
ಅಕ್ಟೋಬರ್ ೨೦೦೧
ಉಡುಪಿ



೨ ***ಡಾ. ಶ್ರೀನಿವಾಸ ರಿತ್ತಿ***
೧೬ನೇ ವಾರ್ಷಿಕ ಸಮ್ಮೇಳನ
ಸೆಪ್ಟಂಬರ್ ೨೦೦೨
ಹೊಸನಗರ



೩ ***ಡಾ. ದೇವರಕೊಂಡಾರೆಡ್ಡಿ***
೧೭ನೇ ವಾರ್ಷಿಕ ಸಮ್ಮೇಳನ
ಸೆಪ್ಟಂಬರ್ ೨೦೦೩
ಬಾದಾಮಿ



೪ ***ಡಾ. ಬಿ. ರಾಜಶೇಖರಪ್ಪ***
೧೮ನೇ ಸಮ್ಮೇಳನ
ಸೆಪ್ಟಂಬರ್ ೨೦೦೪
ಹೊನ್ನಾಳಿ



೫ ***ಡಾ. ಕೆ.ಆರ್. ಗಣೇಶ್***
೧೯ನೇ ಸಮ್ಮೇಳನ
ಸೆಪ್ಟಂಬರ್ ೨೦೦೫
ಸೇಡಂ



೬ ***ಡಾ. ಎಂ.ಜಿ. ನಾಗರಾಜ್***
೨೦ನೇ ಸಮ್ಮೇಳನ
ಸೆಪ್ಟೆಂಬರ್ ೨೦೦೬
ನಂಜನಗೂಡು



೭ ***ಡಾ. ಎಚ್.ಎಸ್. ಗೋಪಾಲರಾವ್***
೨೧ನೇ ಸಮ್ಮೇಳನ
ಸೆಪ್ಟೆಂಬರ್ ೨೦೦೭
ಹಗರಿಬೊಮ್ಮನಹಳ್ಳಿ



೮ ***ಡಾ. ಪಿ.ಎನ್. ನರಸಿಂಹಮೂರ್ತಿ***
೨೨ನೇ ಸಮ್ಮೇಳನ
ಸೆಪ್ಟೆಂಬರ್ ೨೦೦೮
ಧರ್ಮಸ್ಥಳ



೯ ***ಶ್ರೀಮತಿ ಹನುಮಾಕ್ಷಿ ಗೋಗಿ***
೨೩ನೇ ಸಮ್ಮೇಳನ
ಅಕ್ಟೋಬರ್ ೨೦೦೯
ಬಾಳೇಹೊನ್ನೂರು



೧೦ ***ಡಾ. ಪಿ.ವಿ. ಕೃಷ್ಣಮೂರ್ತಿ***
೨೪ನೇ ಸಮ್ಮೇಳನ
ನವೆಂಬರ್ ೨೦೧೦
ಆದಿಚುಂಚನಗಿರಿ



೧೧ ***ಶ್ರೀ ಕೆ. ಮೊಹಮ್ಮದ್ ಶರೀಫ್***
೨೫ನೇ ಸಮ್ಮೇಳನ
ಸೆಪ್ಟೆಂಬರ್ ೨೦೧೧
ಬೆಂಗಳೂರು



೧೨ ***ಶ್ರೀ ಸೀತಾರಾಮ್ ಜಾಗೀರ್‌ದಾರ್***
೨೬ನೇ ಸಮ್ಮೇಳನ
ಸೆಪ್ಟೆಂಬರ್ ೨೦೧೨
ಶೃಂಗೇರಿ



| ಸಂಖ್ಯೆ | ದಿನಾಂಕ–ವರ್ಷ/ಸ್ಥಳ | ಸ್ಥಳ |
|---|---|---|

೧೩ ***ಡಾ. ಆರ್. ಶೇಷಶಾಸ್ತ್ರಿ***
೨೭ನೇ ಸಮ್ಮೇಳನ
ಸೆಪ್ಟೆಂಬರ್ ೨೦೧೩
ಬೆಂಗಳೂರು



೧೪ ***ಶ್ರೀ ಎಚ್.ಎಂ. ನಾಗರಾಜರಾವ್***
೨೮ನೇ ಸಮ್ಮೇಳನ
ಸೆಪ್ಟೆಂಬರ್ ೨೦೧೪
ಶಿರ್ವ, ಉಡುಪಿ ಜಿಲ್ಲೆ.



೧೫ ***ಡಾ. ಡಿ.ವಿ. ಪರಮಶಿವಮೂರ್ತಿ***
೨೯ನೇ ಸಮ್ಮೇಳನ
ಅಕ್ಟೋಬರ್ ೨೦೧೫
ಮಂಡ್ಯ



೧೬ ***ಡಾ. ಎಸ್.ವಿ. ಪಾಡಿಗರ್***
೩೦ನೇ ಸಮ್ಮೇಳನ
ಅಕ್ಟೋಬರ್ ೨೦೧೬
ಕ.ವಿ.ವಿ., ಧಾರವಾಡ



೧೭ ***ಡಾ. ಎಂ.ಜಿ. ಮಂಜುನಾಥ್***
೩೧ನೇ ಸಮ್ಮೇಳನ
ಅಕ್ಟೋಬರ್ ೨೦೧೭
ಗವಿಮಠ, ಕೊಪ್ಪಳ



೧೮ ***ಶ್ರೀ ಆನಂದ ಎಸ್. ಕುಂಬಾರ***
೩೨ನೇ ಸಮ್ಮೇಳನ
ಅಕ್ಟೋಬರ್ ೨೦೧೮
ಶಿವಯೋಗಮಂದಿರ, ಬಾದಾಮಿ



೧೯ ***ಡಾ. ಜೆ.ಎಂ. ನಾಗಯ್ಯ***
೩೩ನೇ ಸಮ್ಮೇಳನ
ಅಕ್ಟೋಬರ್ ೨೦೧೯
ಶ್ರೀ ಹೊಂಬುಜ ಶಿವಮೊಗ್ಗ ಜಿಲ್ಲೆ.



ಶ್ರೇಷ್ಠ ಇತಿಹಾಸತಜ್ಞರಿಗಾಗಿ ಬೈಸಾನಿ ರುಕ್ಮಣಮ್ಮ ರತ್ನಂಶೆಟ್ಟಿ ಕುಟುಂಬದ ಸೇವಾ ಟ್ರಸ್ಟ್‌ನ ಸನ್ಮಾನ್ಯ
ಶ್ರೀಮತಿ ವರಲಕ್ಷ್ಮೀ ಮತ್ತು ಶ್ರೀ ಅಶೋಕ್‌ಕುಮಾರ್ ಅವರು ಸ್ಥಾಪಿಸಿರುವ

# "ಇತಿಹಾಸ ಸಂಸ್ಕೃತಿಶ್ರೀ" ಪ್ರಶಸ್ತಿ

[ಪ್ರಾರಂಭ : ೨೦೧೨ ರಿಂದ ನಗದು ಒಂದು ಲಕ್ಷ ರೂಪಾಯಿಗಳು]

| | | | |
|---|---|---|---|
| ೧. ೨೬ನೆಯ ಸಮ್ಮೇಳನ<br>೨೨.೦೯.೨೦೧೨<br>ಶೃಂಗೇರಿ | ಶ್ರೀಮದ್ ಜಗದ್ಗುರು ಆದಿ ಶಂಕರಾಚಾರ್ಯ<br>ಮಹಾಸಂಸ್ಥಾನಮ್, ದಕ್ಷಿಣಾಮ್ನಾಯ<br>ಶ್ರೀ ಶಾರದಾ ಪೀಠಮ್, ಶೃಂಗೇರಿ | ಪ್ರೊ. ಲಕ್ಷ್ಮಣ್ ತೆಲಗಾವಿ |  |
| ೨. ೨೭ನೆಯ ಸಮ್ಮೇಳನ<br>೨೧.೦೯.೨೦೧೩<br>ಬೆಂಗಳೂರು | ದಿ ಮಿಥಿಕ್ ಸೊಸೈಟಿ, ಬೆಂಗಳೂರು | ಡಾ. ಸೂರ್ಯನಾಥ ಕಾಮತ್ |  |
| ೩. ೨೮ನೆಯ ಸಮ್ಮೇಳನ<br>೨೬.೦೯.೨೦೧೪<br>ಶಿರ್ವ | ಮೂಲ್ಕಿ ಸುಂದರರಾಮ್‌ಶೆಟ್ಟಿ<br>ಕಾಲೇಜು, ಉಡುಪಿ ಜಿಲ್ಲೆ | ಡಾ. ಅ. ಸುಂದರ |  |
| ೪. ೨೯ನೆಯ ಸಮ್ಮೇಳನ<br>೨೯.೧೦.೨೦೧೫<br>ಮಂಡ್ಯ | ಕರ್ನಾಟಕ ಸಂಘ (ರಿ).<br>ಮಂಡ್ಯ ಜಿಲ್ಲೆ | ಡಾ. ಎಂ.ಜಿ. ನಾಗರಾಜ್ |  |
| ೫. ೩೦ನೆಯ ಸಮ್ಮೇಳನ<br>೨೨.೧೦.೨೦೧೬<br>ಧಾರವಾಡ | ಕನ್ನಡ ಸಂಶೋಧನಾ ಸಂಸ್ಥೆ<br>ಕರ್ನಾಟಕ ವಿ.ವಿ., ಧಾರವಾಡ | ಡಾ. ಎಸ್. ರಾಜಶೇಖರ್ |  |
| ೬. ೩೧ನೆಯ ಸಮ್ಮೇಳನ<br>೨೮.೧೦.೨೦೧೭<br>ಕೊಪ್ಪಳ | ಗವಿಮಠ, ಕೊಪ್ಪಳ | ಡಾ. ಶ್ರೀನಿವಾಸ ರಿತ್ತಿ |  |
| ೭. ೩೨ನೆಯ ಸಮ್ಮೇಳನ<br>೨೬.೧೦.೨೦೧೮<br>ಶಿವಯೋಗಮಂದಿರ | ಶಿವಯೋಗಮಂದಿರ ಬಾದಾಮಿ | ಡಾ. ಕೆಳದಿ ಗುಂಡಾಜೋಯಿಸ್ |  |
| ೮. ೩೩ನೆಯ ಸಮ್ಮೇಳನ<br>೧೮.೧೦.೨೦೧೯<br>ಹೊಂಬುಜ | ಹೊಂಬುಜ, ಜೈನಮಠ, ಶಿವಮೊಗ್ಗ ಜಿಲ್ಲೆ | ಡಾ. ವಸುಂಧರಾ ಫಿಲಿಯೋಜ |  |

## ಮೇಲಣ ಮಠದ ಲಿಂ. ಶ್ರೀ ವೇ.ಎಸ್. ಸಿದ್ದಣ್ಣಯ್ಯ ಮತ್ತು ಲಿಂ. ಶ್ರೀಮತಿ ಗಂಗಮ್ಮ ಸ್ಮಾರಕ ಟ್ರಸ್ಟ್ (ರಿ). ಅರಸೀಕೆರೆ, ಇವರು ಸ್ಥಾಪಿಸಿರುವ

# "ನೊಳಂಬಶ್ರೀ" ಪ್ರಶಸ್ತಿ

[ಪ್ರಾರಂಭ : ೨೦೧೫ ರಿಂದ, ನಗದು ಹತ್ತು ಸಾವಿರ ರೂಪಾಯಿಗಳು]

---

| | | | |
|---|---|---|---|
| ೧. ೨೯ನೆಯ ಸಮ್ಮೇಳನ<br>೨೯.೧೧.೨೦೧೫ ಮಂಡ್ಯ<br>ಮಂಡ್ಯ | ಕರ್ನಾಟಕ ಸಂಘ (ರಿ). | ಡಾ. ಎಂ.ಎಸ್. ಕೃಷ್ಣಮೂರ್ತಿ |  |
| ೨. ೩೦ನೆಯ ಸಮ್ಮೇಳನ<br>೨೨.೧೦.೨೦೧೬<br>ಧಾರವಾಡ | ಕನ್ನಡ ಸಂಶೋಧನಾ ಸಂಸ್ಥೆ<br>ಕರ್ನಾಟಕ ವಿ.ವಿ., ಧಾರವಾಡ | ಡಾ. ಎಚ್. ಜಯಮ್ಮ ಕರಿಯಣ್ಣ |  |
| ೩. ೩೧ನೆಯ ಸಮ್ಮೇಳನ<br>೨೮.೧೦.೨೦೧೭<br>ಕೊಪ್ಪಳ | ಗವಿಮಠ, ಕೊಪ್ಪಳ | ಪ್ರೊ. ಕೆ.ಆರ್. ಬಸವರಾಜು |  |
| ೪. ೩೨ನೆಯ ಸಮ್ಮೇಳನ<br>೨೬.೧೦.೨೦೧೮<br>ಶಿವಯೋಗಮಂದಿರ | ಶಿವಯೋಗಮಂದಿರ, ಬಾದಾಮಿ | ಡಾ. ಬಿ. ನಂಜುಂಡ ಸ್ವಾಮಿ |  |
| ೫. ೩೩ನೆಯ ಸಮ್ಮೇಳನ<br>೧೮.೧೦.೨೦೧೯<br>ಹೊಂಬುಜ | ಹೊಂಬುಜ ಜೈನಮಠ, ಶಿವಮೊಗ್ಗ ಜಿಲ್ಲೆ | ಡಾ. ಪರಮಶಿವಮೂರ್ತಿ ಡಿ.ವಿ. |  |

ಶ್ರೀಮತಿ ವಿ. ಗೌರಮ್ಮ, ಗಂಗಾಧರಯ್ಯ ಇವರ ಹೆಸರಿನಲ್ಲಿ ಅವರ ಮಕ್ಕಳಾದ
ಡಾ. ಎಂ.ಜಿ. ನಾಗರಾಜ್, ಶ್ರೀಮತಿ ಪದ್ಮ ವಿರೂಪಾಕ್ಷಯ್ಯ ಮತ್ತು ಡಾ. ಎಂ.ಜಿ. ಚಂದ್ರಕಾಂತ್ ಇವರುಗಳು
ಸ್ಥಾಪಿಸಿರುವ

# "ಸಂಶೋಧನಶ್ರೀ" ಪ್ರಶಸ್ತಿ

[ಪ್ರಾರಂಭ : ೨೦೧೬ ರಿಂದ, ನಗದು ಇಪ್ಪತ್ತೈದು ಸಾವಿರ ರೂಪಾಯಿಗಳು]

---

| | | | |
|---|---|---|---|
| ೧. ೩೧ನೆಯ ಸಮ್ಮೇಳನ<br>೨೨.೧೦.೨೦೧೬<br>ಧಾರವಾಡ | ಕನ್ನಡ ಸಂಶೋಧನಾ ಸಂಸ್ಥೆ<br>ಕರ್ನಾಟಕ ವಿ.ವಿ., ಧಾರವಾಡ | ಡಾ. ಬಿ. ರಾಜಶೇಖರಪ್ಪ |  |
| ೨. ೩೧ನೆಯ ಸಮ್ಮೇಳನ<br>೨೮.೧೦.೨೦೧೭<br>ಕೊಪ್ಪಳ | ಗವಿಮಠ, ಕೊಪ್ಪಳ | ಪ್ರೊ. ಲಕ್ಷ್ಮಣ್ ತೆಲಗಾವಿ |  |
| ೩. ೩೨ನೆಯ ಸಮ್ಮೇಳನ<br>೨೬.೧೦.೨೦೧೮<br>ಶಿವಯೋಗಮಂದಿರ | ಶಿವಯೋಗಮಂದಿರ, ಬಾದಾಮಿ | ಡಾ. ಕೆ. ಬಿ. ಶಿವತಾರಕ್ |  |
| ೪. ೩೩ನೆಯ ಸಮ್ಮೇಳನ<br>೧೮.೧೦.೨೦೧೯<br>ಹೊಂಬುಜ | ಹೊಂಬುಜ ಜೈನಮಠ, ಶಿವಮೊಗ್ಗ ಜಿಲ್ಲೆ | ಡಾ. ಶೀಲಾಕಾಂಯ ಪತ್ತಾರ್ |  |

ಪ್ರೊ. ಲಕ್ಷ್ಮಣ್ ತೆಲಗಾವಿ ಅವರ ಹೆಸರಿನಲ್ಲಿ ಸ್ಥಾಪಿತವಾಗಿರುವ

## "ನಾಯಕ ಶ್ರೀ" ಪ್ರಶಸ್ತಿ

[ಪ್ರಾರಂಭ : ೨೦೧೭ ರಿಂದ, ನಗದು ಹದಿನೈದು ಸಾವಿರ ರೂಪಾಯಿಗಳು]

---



೧. ೩೧ನೆಯ ಸಮ್ಮೇಳನ
೨೮.೧೦.೨೦೧೭
ಕೊಪ್ಪಳ
ಗವಿಮಠ, ಕೊಪ್ಪಳ
ಡಾ. ಸಿ.ಆರ್. ಶಾಮಲ, ಮುಂಬೈ



೨. ೩೨ನೆಯ ಸಮ್ಮೇಳನ
೨೬.೧೦.೨೦೧೮
ಶಿವಯೋಗಮಂದಿರ
ಶಿವಯೋಗಮಂದಿರ, ಬಾದಾಮಿ
ಡಾ. ಡಿ.ಎನ್. ಯೋಗೀಶ್ವರಪ್ಪ



೩. ೩೩ನೆಯ ಸಮ್ಮೇಳನ
೧೮.೧೦.೨೦೧೯
ಹೊಂಬುಜ
ಹೊಂಬುಜ ಜೈನಮಠ, ಶಿವಮೊಗ್ಗ ಜಿಲ್ಲೆ
ಡಾ. ವಿರೂಪಾಕ್ಷಿ ಪೂಜಾರಹಳ್ಳಿ

---

ಡಾ. ಸಿ.ಆರ್. ಶ್ಯಾಮಲ ಅವರು ಸ್ಥಾಪಿಸಿರುವ

## ಡಾ ಶ್ರೀನಿವಾಸ್ ಹಾವನೂರ ಸ್ಮರಣಾರ್ಥ ಪ್ರಶಸ್ತಿ

[ಪ್ರಾರಂಭ : ೨೦೧೮ರಿಂದ, ನಗದು ಹತ್ತು ಸಾವಿರ ರೂಪಾಯಿಗಳು – ಸ್ಮಾರಕಗಳ ಸಂಶೋಧನೆ / ಆ ವರ್ಷ ಪ್ರಕಟವಾದ ಸಂಶೋಧನಾ ಕೃತಿಗೆ]

---



೧. ೩೨ನೆಯ ಸಮ್ಮೇಳನ
೨೬.೧೦.೨೦೧೮
ಶಿವಯೋಗಮಂದಿರ
ಶಿವಯೋಗಮಂದಿರ, ಬಾದಾಮಿ
ಡಾ. ಬೆಂ. ಶಾ. ಶ್ಯಾಮಲಾ ರತ್ನಕುಮಾರಿ



೨. ೩೩ನೆಯ ಸಮ್ಮೇಳನ
೧೮.೧೦.೨೦೧೯
ಹೊಂಬುಜ
ಹೊಂಬುಜ ಜೈನಮಠ, ಶಿವಮೊಗ್ಗ ಜಿಲ್ಲೆ
ಡಾ. ಕೆ. ವಸಂತಲಕ್ಷ್ಮಿ

ಬಿ.ಸಿ. ಪಾಟೀಲ ಟ್ರಸ್ಟ್, ಕೊಪ್ಪಳ, ಇವರು ಸಂಶೋಧಕಿಯರಿಗೆ ನೀಡುವ

## ಸುಮಂಗಲಾ ಪಾಟೀಲ ಪ್ರಶಸ್ತಿ

[ಪ್ರಾರಂಭ : ೨೦೧೮ರಿಂದ, ನಗದು ಹತ್ತು ಸಾವಿರ ರೂಪಾಯಿಗಳು]

೧. ೩೧ನೆಯ ಸಮ್ಮೇಳನ ೨೮.೧೦.೨೦೧೭ ಕೊಪ್ಪಳ — ಗವಿಮಠ, ಕೊಪ್ಪಳ — ಶ್ರೀಮತಿ ಸೀತಾಲಕ್ಷ್ಮೀರಾವ್



೨. ೩೨ನೆಯ ಸಮ್ಮೇಳನ ೨೬.೧೦.೨೦೧೮ — ಶಿವಯೋಗ ಮಂದಿರ ಬಾದಾಮಿ — ಡಾ. ಸ್ಮಿತಾ ಸುರೇಬಾನಕರ್



೩. ೩೩ನೆಯ ಸಮ್ಮೇಳನ ೧೮.೧೦.೨೦೧೯ ಹೊಂಬುಜ — ಹೊಂಬುಜ ಜೈನಮಠ, ಶಿವಮೊಗ್ಗ ಜಿಲ್ಲೆ — ಡಾ. ಸಿದ್ಧಲಿಂಗಮ್ಮ



ಡಾ. ಸೂರ್ಯನಾಥ ಯು. ಕಾಮತ್ ಅವರ ಹೆಸರಿನಲ್ಲಿ ಸ್ಥಾಪಿಸಿರುವ

## ಸೂರ್ಯಕೀರ್ತಿ ಪ್ರಶಸ್ತಿ

[ಪ್ರಾರಂಭ : ೨೦೧೮ರಿಂದ, ನಗದು ಹತ್ತು ಸಾವಿರ ರೂಪಾಯಿಗಳು – ಇತಿಹಾಸ ಸಂಶೋಧಕರಿಗೆ]



೧. ೩೨ನೆಯ ಸಮ್ಮೇಳನ ೨೬.೧೦.೨೦೧೮ ಶಿವಯೋಗಮಂದಿರ — ಶಿವಯೋಗಮಂದಿರ ಬಾದಾಮಿ — ಡಾ. ಎಚ್. ಚಂದ್ರಶೇಖರ್ ಎಚ್.



೨. ೩೩ನೆಯ ಸಮ್ಮೇಳನ ೧೮.೧೦.೨೦೧೯ ಹೊಂಬುಜ — ಹೊಂಬುಜ ಜೈನಮಠ, ಶಿವಮೊಗ್ಗ ಜಿಲ್ಲೆ — ಶ್ರೀ ಎಂ.ಬಿ. ಪಾಟೀಲ

ಪ್ರೊ. ಕೆ. ಪದ್ದಯ್ಯ : ಡೆಕ್ಕನ್ ಕಾಲೇಜು, ಪುಣೆ ಇವರು ಸ್ಥಾಪಿಸಿರುವ

## ಡಾ. ಎಂ.ಎಚ್. ಕೃಷ್ಣ ಮೆರಿಟ್ ಅವಾರ್ಡ್

[ಪ್ರಾರಂಭ: ೨೦೧೭ರಿಂದ, ನಗದು ಎರಡು ಸಾವಿರ ರೂಪಾಯಿಗಳು – ಪ್ರಾಗೈತಿಹಾಸಿಕ ಸಂಶೋಧನ ಲೇಖನಕ್ಕೆ]

| | | | |
|---|---|---|---|
| ೧. ೩೧ನೆಯ ಸಮ್ಮೇಳನ ೨೮.೧೦.೨೦೧೭ ಕೊಪ್ಪಳ | ಗವಿಮಠ, ಕೊಪ್ಪಳ | **ಡಾ. ಎಸ್.ವೈ. ಸೋಮಶೇಖರ್** |  |
| ೨. ೩೨ನೆಯ ಸಮ್ಮೇಳನ ೨೬.೧೦.೨೦೧೮ ಶಿವಯೋಗಮಂದಿರ | ಶಿವಯೋಗಮಂದಿರ, ಬಾದಾಮಿ | **ಶ್ರೀ ಕೆ. ರೇವಣಸಿದ್ಧಯ್ಯ** |  |
| ೩. ೩೩ನೆಯ ಸಮ್ಮೇಳನ ೧೮.೧೦.೨೦೧೯ ಹೊಂಬುಜ | ಹೊಂಬುಜ ಜೈನಮಠ, ಶಿವಮೊಗ್ಗ ಜಿಲ್ಲೆ | **ಡಾ. ಮೋಹನ ಆರ್.** |  |

ಡಾ. ದೇವರಕೊಂಡಾರೆಡ್ಡಿ ಅವರ ಅಭಿನಂದನಾ ಸಮಿತಿಯು ಸ್ಥಾಪಿಸಿರುವ ದತ್ತಿಯಿಂದ ಬರುವ ಬಡ್ಡಿಯಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ

## ಅಂತರ್ಜಾಲ ನಿರ್ವಹಣೆ

[ಪ್ರಾರಂಭ : ೨೦೧೬ರಿಂದ, ಒಂದು ಲಕ್ಷ ಹತ್ತು ಸಾವಿರ ರೂಪಾಯಿಗಳು]

# ಕರ್ನಾಟಕ ಇತಿಹಾಸ ಅಕಾದೆಮಿ ೩೨ನೆಯ ವಾರ್ಷಿಕ ಸಮ್ಮೇಳನ

**ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ, ಶಿವಯೋಗಮಂದಿರ ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ**

**ದಿನಾಂಕ ೨೬, ೨೭ ಮತ್ತು ೨೮ ಅಕ್ಟೋಬರ್ ೨೦೧೮**

ಸಮ್ಮೇಳನಾಧ್ಯಕ್ಷರು : **ಡಾ. ಬಿ. ರಾಜಶೇಖರಪ್ಪ**

## ಅಧ್ಯಕ್ಷೀಯ ಭಾಷಣ

ವೇದಿಕೆಯ ಮೇಲಿರುವ ಪರಮಪೂಜ್ಯ ಸ್ವಾಮೀಜಿಯವರ ಪಾದಗಳಿಗೆ ನನ್ನ ಭಕ್ತಿ ಪ್ರಣಾಮಗಳನ್ನು ಸಲ್ಲಿಸಿ, ವೇದಿಕೆಯ ಮೇಲಿರುವ ಎಲ್ಲ ಗಣ್ಯರೇ, ವೇದಿಕೆಯ ಮುಂಭಾಗದಲ್ಲಿ ಆಸೀನರಾಗಿರುವ ಅಕಾದೆಮಿಯ ಸದಸ್ಯರೇ, ಎಲ್ಲಾ ಇತಿಹಾಸಾಭಿಮಾನಿಗಳೇ, ಮಾಧ್ಯಮ ಬಳಗದವರೇ – ಎಲ್ಲರಿಗೂ ನನ್ನ ಹಾರ್ದಿಕ ವಂದನೆಗಳು.

ನಮ್ಮ ನಾಡಿನ ಇತಿಹಾಸ ಸಂಶೋಧನೆಯ ಚರಿತ್ರೆಯಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ಕೊಡುಗೆ ಸ್ಮರಣೀಯ. ಇದು ಪ್ರಾರಂಭವಾದಾಗಿನಿಂದ ಹಿಂತಿರುಗಿ ನೋಡದೆ ದಾಪುಗಾಲಿಡುತ್ತಾ ಇಂದು ೩೨ ವರ್ಷಗಳನ್ನು ಕ್ರಮಿಸಿದೆ ಎಂದರೆ ಅದು ಸಾಮಾನ್ಯ ಸಂಗತಿಯಲ್ಲ. ಇಂಥ ವಿದ್ವತ್ ಸಂಸ್ಥೆಯ ಈ ೩೨ನೆಯ ವಾರ್ಷಿಕ ಸಮ್ಮೇಳನದ ಸರ್ವಾಧ್ಯಕ್ಷತೆಯ ಗೌರವಕ್ಕೆ ನಾನು ಪಾತ್ರನಾಗಿರುವುದು ನನಗೆ ಅತೀವ ಹರ್ಷವನ್ನು ತಂದಿದೆ. ಈ ಸ್ಥಾನಗೌರವ ನನ್ನ ಜವಾಬ್ದಾರಿಯನ್ನು ಅಕ್ಷರಶಃ ಮತ್ತಷ್ಟು ಹೆಚ್ಚಿಸಿದೆ. ನನ್ನ ಈ ಆಯ್ಕೆಗಾಗಿ ಅಕಾಡೆಮಿಯ ಅಧ್ಯಕ್ಷರು, ಪ್ರಧಾನ ಕಾರ್ಯದರ್ಶಿಗಳು ಮತ್ತು ಇತರ ಪದಾಧಿಕಾರಿಗಳು ಹಾಗೂ ಕಾರ್ಯಕಾರಿ ಸಮಿತಿಯ ಎಲ್ಲ ಸದಸ್ಯರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಡಾ. ಎಂ. ಚಿದಾನಂದಮೂರ್ತಿ, ಡಾ. ಕೆ.ವಿ. ರಮೇಶ್, ಡಾ. ಎಂ.ಎಂ. ಕಲಬುರ್ಗಿ, ಡಾ. ಜಿ.ಎಸ್. ದೀಕ್ಷಿತ್, ಡಾ. ಶ್ರೀನಿವಾಸ ಹಾವನೂರ, ಡಾ. ಅ. ಸುಂದರ ಮುಂತಾದ ಖ್ಯಾತ ವಿದ್ವಾಂಸರು ಅಲಂಕರಿಸಿದ್ದ ಈ ಸರ್ವಾಧ್ಯಕ್ಷ ಸ್ಥಾನಕ್ಕೆ ನಾನು ಎಷ್ಟು ಮಾತ್ರಕ್ಕೆ ಅರ್ಹನೋ ನನಗೆ ತಿಳಿಯದು. ಆ ಎಲ್ಲ ಹಿರಿಯರ ಗೌರವ ಸ್ಮರಣೆಯೊಂದಿಗೆ ನಾನು ಈ ಸ್ಥಾನದಿಂದ ಕೆಲವು ಮಾತುಗಳನ್ನು ನಿಮ್ಮಲ್ಲಿ ನಿವೇದಿಸಬಯಸುತ್ತೇನೆ. ನನಗೆ ಈ ಗೌರವ ದೊರೆಯುವಲ್ಲಿ ನನ್ನನ್ನು ರೂಪಿಸಿದ ಗುರುಗಳು, ಬೆಳೆಸಿದ ಹಿರಿಯರು, ಪ್ರೋತ್ಸಾಹಿಸಿದ ಮಿತ್ರರು, ನನ್ನ ಸಂಶೋಧನೆಗೆ ನೆರವಾದ ಶ್ರೀಸಾಮಾನ್ಯರು, ದನಗಾಹಿಗಳು, ವಿದ್ಯಾರ್ಥಿಗಳು ಮತ್ತು ನನಗೆ ಎಲ್ಲಾ ರೀತಿಯಲ್ಲಿ ಸಹಕರಿಸಿದ ನನ್ನ ಕುಟುಂಬದವರು, ಹಾಗೆಯೇ ನನ್ನೆಲ್ಲ ಬಂಧುವರ್ಗದವರು, ನನ್ನೆಲ್ಲ ಹಿತೈಷಿಗಳು, ಇವರೆಲ್ಲರನ್ನು ಅವರ ಸಹಕಾರಕ್ಕಾಗಿ ನಾನು ಹೃತ್ಪೂರ್ವಕವಾಗಿ ನೆನೆಯುತ್ತೇನೆ. ನನ್ನ ಸಾಹಿತ್ಯ ಮತ್ತು ಸಂಶೋಧನೆಗೆ ಪ್ರೋತ್ಸಾಹಿಸಿದ ಚಿತ್ರದುರ್ಗದ ಶ್ರೀ ಮುರುಘರಾಜೇಂದ್ರ ಬೃಹನ್ಮಠದ ಹಿಂದಿನ ಶ್ರೀಗಳಾದ ಪರಮಪೂಜ್ಯ ಮಲ್ಲಿಕಾರ್ಜುನ ಸ್ವಾಮಿಗಳನ್ನೂ ಹಾಗೆಯೇ ಇಂದಿನ ಶ್ರೀಗಳಾದ ಪರಮಪೂಜ್ಯ ಡಾ. ಶಿವಮೂರ್ತಿ ಮುರುಘಾ ಶರಣರನ್ನೂ ಕೃತಜ್ಞತೆಯಿಂದ ನೆನೆಯುತ್ತೇನೆ. ನನ್ನ ಸಂಶೋಧನೆ ಬರಹಗಳು ಪ್ರಕಟವಾಗಲು ಒತ್ತಾಸೆಯಾಗಿ ನಿಂತ ನನ್ನ ಪ್ರಿಯಮಿತ್ರ ಜಾನಪದ ವಿದ್ವಾಂಸ ಡಾ. ಮೀರಾಸಾಬಿಹಳ್ಳಿ ಶಿವಣ್ಣ ಮುಂತಾದವರು ಮತ್ತು ಶ್ರೀ ಸಿವಿಜಿ ಚಂದ್ರು ಮುಂತಾದ ಪ್ರಕಾಶಕರು ಇವರಿಗೆ ನಾನು ತುಂಬ ಋಣಿಯಾಗಿದ್ದೇನೆ.

ಆರಂಭದಿಂದ ಕ.ಇ.ಅ. ನನ್ನ ಬೌದ್ಧಿಕ ಬೆಳವಣಿಗೆಗೆ ಸಹಕಾರಿಯಾಗಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳುತ್ತೇನೆ. ಹಿರಿಯ ವಿದ್ವಾಂಸರಾದ ಡಾ. ಜಿ.ಎಸ್. ದೀಕ್ಷಿತ್, ಡಾ. ಸೂರ್ಯನಾಥ ಕಾಮತ್, ಡಾ. ಶ್ರೀನಿವಾಸ ಹಾವನೂರ, ಡಾ. ಅ. ಸುಂದರ, ಡಾ. ಎಂ.ಜಿ. ನಾಗರಾಜ್, ಡಾ. ಎಂ.ಎಂ. ಕಲಬುರ್ಗಿ, ಡಾ. ಕೆ.ವಿ. ರಮೇಶ್, ಡಾ. ಎಂ. ಚಿದಾನಂದಮೂರ್ತಿ, ಡಾ. ಎಚ್. ಚಂದ್ರಶೇಖರ, ಶ್ರೀ ಎಂ.ಬಿ. ಪಾಟೀಲ, ಡಾ. ಎಸ್.ಕೆ. ಜೋಶಿ, ಡಾ. ಎ.ಕೆ. ಶಾಸ್ತ್ರೀ ಮುಂತಾದ ಹಿರಿಯ ವಿದ್ವಾಂಸರು ಈ ಸಂಸ್ಥೆಯ ಸಮ್ಮೇಳನಗಳಲ್ಲಿ ನೀಡಿದ ಪ್ರೇರಣೆ ಪ್ರೋತ್ಸಾಹ ಮತ್ತು ಮಾರ್ಗದರ್ಶನಕ್ಕಾಗಿ ನಾನು ಎದೆದುಂಬಿ ನೆನೆಯುತ್ತೇನೆ. ಅವರೆಲ್ಲರ ಸಂಪರ್ಕ ನನಗೆ ದೊರೆಯಲು ಪರೋಕ್ಷವಾಗಿ ಅಕಾದೆಮಿ ಕಾರಣವಾದುದಕ್ಕಾಗಿ ನಾನು ಈ ಸಂಸ್ಥೆಗೆ

ಕೃತಜ್ಞನಾಗಿದ್ದೇನೆ. ಈ ಸಂಸ್ಥೆ ನನ್ನ ಸಾಧನೆಯ ಹಾದಿಯನ್ನು ಗುರುತಿಸಿ ೨೦೦೪ರಲ್ಲಿ 'ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ'ಯನ್ನು ೨೦೧೬ರಲ್ಲಿ 'ಸಂಶೋಧನಶ್ರೀ' ಪ್ರಶಸ್ತಿಯನ್ನು ನೀಡಿತ್ತು. ಇದೀಗ ಈ ಸಂಸ್ಥೆಯ ಅತ್ಯುನ್ನತ ಗೌರವವಾದ ಸಮ್ಮೇಳನದ ಸರ್ವಾಧ್ಯಕ್ಷ ಸ್ಥಾನವನ್ನು ನೀಡಿ ಪುರಸ್ಕರಿಸಿದೆ. ಇದಕ್ಕಾಗಿ ಅಕಾದೆಮಿಯು ನನ್ನ ಮೇಲಿರಿಸಿರುವ (ಅಪಾರ) ಮಮತೆಗೆ ನಾನು ಅತ್ಯಂತ ಆಭಾರಿಯಾಗಿದ್ದೇನೆ.

ಈ ಸಮ್ಮೇಳನ ನಡೆಯುತ್ತಿರುವ ಶಿವಯೋಗಮಂದಿರ ಒಂದು ಶರಣಕ್ಷೇತ್ರ. ಧಾರ್ಮಿಕ ಇತಿಹಾಸ ಸೃಷ್ಟಿಸಿದ ಪರಮಪೂಜ್ಯ ಹಾನಗಲ್ ಕುಮಾರಸ್ವಾಮಿಗಳ ಕಾರ್ಯಕ್ಷೇತ್ರ. ಪ್ರಸ್ತುತದಲ್ಲಿ ಪರಮಪೂಜ್ಯ ಸಂಗನಬಸವ ಸ್ವಾಮಿಗಳ ಕಾಯಕಕ್ಷೇತ್ರ. ಈ ಸ್ಥಳದ ಬಗ್ಗೆ ನನಗೆ ವಿಶೇಷ ಗೌರವವಿದೆ. ಇತಿಹಾಸ ಪ್ರಸಿದ್ಧವಾದ ಬಾದಾಮಿ, ಐಹೊಳೆ, ಪಟ್ಟದಕಲ್ಲು, ಬನಶಂಕರಿ, ಮಹಾಕೂಟ ಇವುಗಳಿಂದ ಸುತ್ತುವರಿಯಲ್ಪಟ್ಟ ಕೇಂದ್ರಸ್ಥಾನದಲ್ಲಿ ಈ ಶಿವಯೋಗಮಂದಿರ ನೆಲೆಗೊಂಡಿದೆ. ಇದೊಂದು ತಪೋನಂದನ. ಈಗಿನ ಕಾಲದ ನಿಜವಾದ ಗುರುಕುಲ; ಹಿಂದಿನ ಋಷ್ಯಾಶ್ರಮಗಳನ್ನು ನೆನಪಿಸುವ ತಾಣ. ಹಸ್ತಪ್ರತಿ ಕ್ಷೇತ್ರದಲ್ಲಿ ನಾನು ಮಾಡಿರುವ ಸಂಪಾದನೆಯ ಕಿಂಚಿತ್ ಸಾಧನೆಗೆ 'ಕುಮಾರಶ್ರೀ' ಪ್ರಶಸ್ತಿಯನ್ನು ಈಗಿನ ಪರಮಪೂಜ್ಯರೇ ಇಲ್ಲಿ ೪–೫ ವರ್ಷಗಳ ಹಿಂದೆ ನೀಡಿದ್ದರೆಂಬುದನ್ನು ಈ ಸಮಯದಲ್ಲಿ ಹೃತ್ಪೂರ್ವಕವಾಗಿ ಸ್ಮರಿಸಿಕೊಳ್ಳುತ್ತೇನೆ. ಇದೀಗ ಕ.ಇ.ಅ.ಯ ಸಮ್ಮೇಳನಕ್ಕೆ ಈ ತಾಣ ಆಶ್ರಯ ನೀಡಿದೆ. ಇದರ ಸತ್‌ಪ್ರಭಾವ ಇಲ್ಲಿ ಸೇರಿರುವ ನಮ್ಮೆಲ್ಲರ ಮೇಲೂ ಇರುತ್ತದೆ ಎಂದು ನಾನು ಆಶಿಸುತ್ತೇನೆ. ಇದೀಗ ಈ ಸಮ್ಮೇಳನಕ್ಕೆ ಅಕಾದೆಮಿಯ ಜೊತೆಗೆ ನಮ್ಮ ರಾಜ್ಯ ಸರ್ಕಾರದ ಪ್ರಾಚ್ಯವಸ್ತು ವಸ್ತುಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಹಾಗೂ ನವದೆಹಲಿಯ ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ತು ಇವು ಜೊತೆಗೂಡಿರುವುದು ಕೂಡಾ ಒಂದು ಸಂತಸದ ಸಂಗತಿಯೆಂದು ಭಾವಿಸುತ್ತೇನೆ.

ಇಲ್ಲಿ ನಾನು ಇತಿಹಾಸ ಕುರಿತ ಯಾವುದೇ ವ್ಯಾಖ್ಯೆ ಅಥವಾ ಸಿದ್ಧಾಂತ ಇವುಗಳ ಪ್ರಸ್ತಾಪಕ್ಕೆ ಹೋಗದೆ ಇತಿಹಾಸ ಮತ್ತು ಸಂಶೋಧನೆಯ ವಿಷಯವಾಗಿ ನನ್ನ ಕೆಲವು ವಿಚಾರಗಳನ್ನು ಈ ಸಭೆಯಲ್ಲಿ ನಿವೇದಿಸಲು ಬಯಸುತ್ತೇನೆ.

ನಾನು ಸಾಹಿತ್ಯ ಮತ್ತು ಭಾಷೆಯ ವಿದ್ಯಾರ್ಥಿ. ನನ್ನ ಪದವಿ ವಿಜ್ಞಾನ ವಿಷಯಗಳ ಪದವಿ. ನಾನು ಕನ್ನಡ ಎಂ.ಎ. ದ್ವಿತೀಯ ವರ್ಷದಲ್ಲಿ ವ್ಯಾಸಂಗ ಮಾಡುವಾಗ 'ತರಂಗ' ಎಂಬ ನನ್ನ ಕವನಸಂಕಲನವೊಂದು ಪ್ರಕಟವಾಗಿತ್ತು. ಹೀಗೆ ಸಾಹಿತ್ಯ ಮತ್ತು ಭಾಷೆಯ ವಿಷಯದಲ್ಲಿ ಮುಳುಗಿದ್ದ ನಾನು ಇತಿಹಾಸ ಮತ್ತು ಸಂಶೋಧನೆಯ ದಾರಿ ಹಿಡಿದದ್ದು ಒಂದು ಆಕಸ್ಮಿಕವೇ. ನನ್ನ ಹುಟ್ಟೂರಿನ ಒಂದು ಹೊಲದ ಬದುವಿನಲ್ಲಿ ಬಿದ್ದಿದ್ದ ವೀರಗಲ್ಲು ಮತ್ತು ಅದರಲ್ಲಿದ್ದ ಲಿಪಿ ಹಾಗೂ ಊರ ಜನರು ಅದರ ಬಗ್ಗೆ ಹೇಳುತ್ತಿದ್ದ ಕಥೆ ಇವು ನನ್ನಲ್ಲಿ ಆಗಲೇ ಕೌತುಕ ಮೂಡಿಸಿದ್ದವು. ಮುಂದೆ ನಾನು ಚಿತ್ರದುರ್ಗದಲ್ಲಿ ಕನ್ನಡ ಅಧ್ಯಾಪಕನಾಗಿದ್ದಾಗ ಚಿತ್ರದುರ್ಗ ಕೋಟೆಯ ಪರಿಸರ ಮತ್ತು ಪಾಳೆಯಗಾರರ ಬಗ್ಗೆ ಕೇಳಿದ ಮತ್ತು ಓದಿದ ಸಂಗತಿಗಳು ಇತಿಹಾಸ ವಿಷಯವಾಗಿ ಇನ್ನಷ್ಟು ಕುತೂಹಲವನ್ನು ಹೆಚ್ಚಿಸಿದ್ದವು. ಒಮ್ಮೆ ಚಿತ್ರದುರ್ಗದಲ್ಲಿ ನಡೆದ ಪುಸ್ತಕದ ಪ್ರದರ್ಶನವೊಂದರಲ್ಲಿ ನನ್ನ ಶ್ರೀಮತಿಯ ಕೈಗೆ ಸಿಕ್ಕ "ಕನ್ನಡ ಲಿಪಿಯ ಹುಟ್ಟು ಮತ್ತು ಬೆಳವಣಿಗೆ" ಎಂಬ ಒಂದು ಚಿಕ್ಕ ಪುಸ್ತಕ, ನನ್ನ ಕನ್ನಡ ಲಿಪಿಯ ಸ್ವಯಂಕಲಿಕೆಗೆ ಸ್ಫೂರ್ತಿ ನೀಡಿತು. ಜೊತೆಗೆ ಇತಿಹಾಸ ವಿದ್ವಾಂಸರು ಮತ್ತು ನನ್ನ ಹಿರಿಯ ಸಹೋದ್ಯೋಗಿಗಳು ಆಗಿದ್ದ ಡಾ. ಎಂ.ವಿ. ಶ್ರೀನಿವಾಸ್ ಅವರ ಒಡನಾಟ ಮತ್ತು ಪ್ರೋತ್ಸಾಹ ಶಾಸನಗಳ ಓದುವಿಕೆಗೆ ನಾಂದಿಯಾಯಿತು. ಶಾಸನ ಕ್ಷೇತ್ರದ ಪ್ರಾತಃಸ್ಮರಣೀಯರಾದ ಶ್ರೀ ಬಿ.ಎಲ್. ರೈಸ್ ಮತ್ತು ಡಾ. ಎಂ.ಎಚ್. ಕೃಷ್ಣ ಮುಂತಾದವರು ಪ್ರಕಟಿಸಿದ್ದ ಶಾಸನಗಳ ಓದುವಿಕೆಯಲ್ಲಿ ಕೆಲವು ವ್ಯತ್ಯಾಸಗಳು ಪ್ರಕಟಿತ ಶಾಸನಗಳ ಮರುಪರಿಶೀಲನೆ ಕೂಡಾ ಅಗತ್ಯವೆಂದು ಕಂಡುಬಂದು ಆ ದಿಸೆಯಲ್ಲೂ ನಾನು ಕಾರ್ಯಪ್ರವೃತ್ತನಾಗಬೇಕಾಯಿತು. ಇದರ ಫಲವಾಗಿ ನಾನು ಕೈಕೊಂಡ ಒಂದು ಪ್ರಮುಖ ಮರುಪರಿಶೀಲನೆ ಎಂದರೆ ಚಂದ್ರವಳ್ಳಿಯ ಕದಂಬ ಮಯೂರವರ್ಮನ ಶಾಸನದ ಮರುಪರಿಶೀಲನೆ. ಇದು ಕದಂಬ ಮಯೂರವರ್ಮನ ಇತಿಹಾಸ ಬದಲಾಗಲು ಕಾರಣವಾಯಿತು. ಹೀಗೆ ಪುನರ್ ಪರಿಶೀಲನೆ ಮತ್ತು ಶಾಸನಗಳ ಶೋಧನೆ ಜೊತೆ ಜೊತೆಯಲ್ಲಿಯೇ ಸಾಗಿತು. ಮುಂದೆ ನನ್ನ ಅಪ್ರಕಟಿತ ಶಾಸನಗಳ ಶೋಧನೆ ಸುಮಾರು ೬೫೦ರ ಗಡಿಯನ್ನು ಮುಟ್ಟುವಂತಾಯಿತು. ಆ ಶಾಸನಗಳಲ್ಲಿ ರಾಜಮಹಾರಾಜರ ಚರಿತ್ರೆಗೆ ಸಂಬಂಧಿಸಿವುಗಳಲ್ಲದೆ, ಜನಸಾಮಾನ್ಯರ ಅದರಲ್ಲೂ ತಳವರ್ಗದ ಜನರ ಮತ್ತು ಸ್ತ್ರೀಯರ ಚರಿತ್ರೆಗೆ ಪೂರಕವಾದ ಹಲವು ಶಾಸನಗಳೂ ಸೇರಿವೆ ಎಂಬುದನ್ನು ಹೇಳಲು ಸಂತೋಷಿಸುತ್ತೇನೆ.

ಹೀಗೆ ನಾನು ನನ್ನನ್ನು ಇತಿಹಾಸ ಮತ್ತು ಸಂಶೋಧನೆಯ ವಿಷಯಕ್ಕೆ ಸಮರ್ಪಿಸಿಕೊಂಡು ಇಂದು ನಿಮ್ಮ ಇತಿಹಾಸದವನಾಗಿ ನಿಲ್ಲುವ ಸುಯೋಗ ನನ್ನದಾಗಿದೆ. ಮುಂದುವರಿದ ನನ್ನ ಆಸಕ್ತಿ ಕನ್ನಡ ಮೋಡಿ ಲಿಪಿಯ ಸ್ವಯಂಕಲಿಕೆಗೂ ಕಾರಣವಾಯಿತಲ್ಲದೆ, ಕನ್ನಡ ಹಸ್ತಪ್ರತಿಗಳ ಅಭ್ಯಾಸಕ್ಕೂ ಪ್ರೇರಣೆಯಾಯಿತು. ಹೀಗಾಗಿ ಹಸ್ತಪ್ರತಿಗಳು ಮತ್ತು ಕನ್ನಡ ಮೋಡಿ ಲಿಪಿಯಲ್ಲಿದ್ದ ಚಿತ್ರದುರ್ಗ ಪಾಳೆಯಗಾರರ ವಂಶಸ್ಥರಲ್ಲಿ ಮತ್ತು ಚಿತ್ರದುರ್ಗದ ಶ್ರೀ ಮುರುಘರಾಜೇಂದ್ರ ಬೃಹನ್ಮಠದಲ್ಲಿ ಇದ್ದ ದಾಖಲೆಗಳನ್ನು ಅಭ್ಯಸಿಸಲು ಮತ್ತು ಸಂಪಾದನೆ ಮಾಡಲು ಸದವಕಾಶ ಒದಗಿತು. ಈ ದಿಶೆಯಲ್ಲಿ ಬಂದ ಕೃತಿಗಳೆಂದರೆ 'ಚಿತ್ರದುರ್ಗ ಪಾಳೆಯಗಾರರ ದಾಖಲೆಗಳು' ಮತ್ತು 'ಕೂಡಲ ಸಂಗಮೇಶ್ವರನ ವಚನಗಳು'.

ಪ್ರಾಚೀನ ಲಿಪಿ ಮತ್ತು ಭಾಷಾಜ್ಞಾನ, ಶಾಸನಗಳ ಅಧ್ಯಯನ ಮತ್ತು ಮರುಪರಿಶೀಲನೆ ಇವು ಇತಿಹಾಸ ಸಂಶೋಧಕರಿಗೆ ಅತ್ಯುಪಯುಕ್ತವಾದವು ಮತ್ತು ಅತ್ಯವಶ್ಯಕವಾದವು. ಇವುಗಳ ಅಗತ್ಯ ಹಿಂದೆಂದಿಗಿಂತಲೂ ಇಂದು ಬಹುಮುಖ್ಯ ಎಂದು ನನ್ನ ಅಭಿಪ್ರಾಯ. ಇದಕ್ಕೆ ನನ್ನವೇ ಉದಾಹರಣೆಗಳನ್ನು ಕೊಡಲು ಇಚ್ಛಿಸುತ್ತೇನೆ. ಮೇಲೆ ಚಂದ್ರವಳ್ಳಿ ಶಾಸನವನ್ನು ಪ್ರಸ್ತಾಪಿಸಿದೆನಷ್ಟೆ. ೪ನೇ ಶತಮಾನದ ಆ ಶಾಸನದ ಲಿಪಿಯಲ್ಲಿ ಅಕ್ಷರಗಳ ಕೆತ್ತನೆಯ ಗುಳಿಗಳ ಜೊತೆಗೆ ಬಂಡೆಯ ನೈಸರ್ಗಿಕ ಗುಳಿಗಳು ಸೇರಿ, ಡಾ. ಎಂ.ಎಚ್. ಕೃಷ್ಣ ಅವರು ಅದು ಪ್ರಾಕೃತ ಭಾಷೆಯ ಶಾಸನ; ಆದರೆ ಅದರ ಭಾಷೆ ಸಂಸ್ಕೃತದತ್ತ ವಾಲುತ್ತಿರುವ ರೀತಿಯಲ್ಲಿದೆಯೆಂದು, ಇದಲ್ಲದೆ ಮಯೂರವರ್ಮನ ದಿಗ್ವಿಜಯಗಳನ್ನು ಮತ್ತು ಅವನು ಇಲ್ಲಿ ಕೆರೆ ನಿರ್ಮಾಣ ಮಾಡಿದ್ದನ್ನು ಹೇಳುವ ಶಾಸನವೆಂದೂ ಅಭಿಪ್ರಾಯಿಸಿದ್ದರು. ಆದರೆ ಈ ಶಾಸನದ ಮರುಪರಿಶೀಲನೆಯಿಂದ ಇದು ಸಂಪೂರ್ಣವಾಗಿ ಸಂಸ್ಕೃತ ಶಾಸನವೆಂದೂ ಮಯೂರವರ್ಮನು ಇಲ್ಲಿ ಕೆರೆ ಕಟ್ಟಲಿಲ್ಲ; ಆದರೆ ಅದನ್ನು ಜೀರ್ಣೋದ್ಧಾರ ಮಾಡಿ ಇಲ್ಲಿಯ ಕಾಡಿನಲ್ಲಿ ವಾಸವಾಗಿದ್ದ ಎಂದೂ ತಿಳಿಯಲು ಸಾಧ್ಯವಾಯಿತು.

ಹೀಗೆಯೇ, ಮಹಿಳೆಯರು ರಚಿಸಿದ ಶಾಸನಗಳು ದೊರೆತಿಲ್ಲ ಎಂಬ ಹೇಳಿಕೆಗೆ ಪ್ರತಿಯಾಗಿ ನಾನು ಕೈಕೊಂಡ ಶಾಸನಗಳ ಮರುಪರಿಶೀಲನೆಯಲ್ಲಿ, ೭ನೇ ಶತಮಾನದಲ್ಲಿ ಶ್ರೀಬಿಜಾಬೆ ಎಂಬ ಮಹಿಳೆಯೊಬ್ಬಳು ಚಿತ್ರದುರ್ಗದ ಸಮೀಪದ ಪಂಡರಹಳ್ಳಿ ಬೆಟ್ಟದಲ್ಲಿಯ ಶಾಸನ ರಚಿಸಿದ್ದಳೆಂಬ ಮಾಹಿತಿ ದೊರೆಯಲು ಸಾಧ್ಯವಾಯಿತು. ಈ 'ಶ್ರೀಬಿಜಾಬೆ' ಎಂಬುದು 'ಶ್ರೀವಿಜಯಬ್ಬೆ' ಎಂಬ ಮಹಿಳೆಯ ಹೆಸರಿನ ಆಡುಮಾತಿನ ರೂಪ ಎಂಬುದನ್ನು ಇಲ್ಲಿ ಗಮನಿಸಬೇಕು. ರೈಸ್ ಪ್ರಕಟಿತ ತಮಟಕಲ್ಲಿನ ಶಾಸನದ ಪುನರಧ್ಯಯನಕ್ಕೆ ಹೋದಾಗ, ಅದೇ ಕಲ್ಲಿನಮೇಲೆ ಸುಮಾರು ೬ನೇ ಶತಮಾನದ ವಟ್ಟೆಳುತ್ತು ಲಿಪಿಯ ತಮಿಳು ಶಾಸನ ಕಂಡುಬಂದು ಈಗ ಅದೇ ಕರ್ನಾಟಕದಲ್ಲಿ ದೊರೆತಿರುವ ಅತಿ ಪ್ರಾಚೀನ ತಮಿಳು ಶಾಸನ ಎಂಬ ಖ್ಯಾತಿಗೆ ಪಾತ್ರವಾಗಿದೆ. ಮೇಲೆ ಹೇಳಿದ ಈ ಮೂರು ನಿದರ್ಶನಗಳು ಪ್ರಾಚೀನ ಲಿಪಿ ಹಾಗೂ ಭಾಷಾಜ್ಞಾನ, ಶಾಸನಗಳ ಪುನರಧ್ಯಯನ ಎಷ್ಟು ಮುಖ್ಯವಾದವು ಎಂದು ಶ್ರುತಪಡಿಸುತ್ತವೆ. ಇಂಥವೇ ಇನ್ನೂ ಕೆಲವು ಉದಾಹರಣೆಗಳನ್ನು ಕೊಡಬಹುದು.

ಹಲ್ಮಿಡಿ ಶಾಸನಕ್ಕಿಂತ ಹಳೆಯದು ಎಂದು ಭಾವಿಸಲಾದ ಗುಣಭೂಷಿತ ಎಂಬ ಜೈನಮುನಿಯದೆನ್ನುವ ನಿಸದಿ ಶಾಸನದ ಪುನರಧ್ಯಯನ ಆಶ್ಚರ್ಯಕರ ಸಂಗತಿಗಳನ್ನು ತೆರೆದಿಟ್ಟಿದೆ. ಮೊದಲಿಗೆ ದೊಡ್ಡ ಆಶ್ಚರ್ಯವೆಂದರೆ, ಅದರಲ್ಲಿ ಗುಣಭೂಷಿತ ಎನ್ನುವ ಹೆಸರೇ ಕಾಣದೆಹೋದದ್ದು. ಇನ್ನೊಂದು ಸಂಗತಿಯೆಂದರೆ, ಲಿಪಿ ಹಾಗೂ ಭಾಷೆಯ ದೃಷ್ಟಿಯಿಂದ ಅದು ಹಲ್ಮಿಡಿ ಶಾಸನಕ್ಕಿಂತ ಈಚಿನದು ಎಂಬುದು ಕಂಡುಬಂದದ್ದು. ಹೀಗೇ ಚಿತ್ರದುರ್ಗ ಪಾಳೆಯಗಾರರ ವಂಶಾವಳಿಯಲ್ಲಿ ಲಿಂಗಣ್ಣನಾಯಕ ಅಥವಾ ಮುಮ್ಮಡಿ ಮದಕೇರಿನಾಯಕ ಎಂಬ ದೊರೆಯೊಬ್ಬನ ದುರಂತದ ಪ್ರಸ್ತಾಪವಿದೆ. ಅವನು ದಳವಾಯಿ ಮುದ್ದಣ್ಣನ ದುರಾಗ್ರಹಕ್ಕೆ ಪಾತ್ರನಾಗಿ ಮೂಗು ಕತ್ತರಿಸಲ್ಪಟ್ಟ ಹಿಂಸೆಗೆ ಒಳಗಾಗಿ ಯಾವುದೋ ಮನೆಯ ಗೃಹಬಂಧನದಲ್ಲಿ ಸಾವನ್ನಪ್ಪುತ್ತಾನೆ. ಈ ಹಿಂದೆ ಅವನ ಯಾವ ಶಾಸನವು ಗುರುತಿಸಲ್ಪಟ್ಟಿರಲಿಲ್ಲ. ಇದೀಗ ಪುನರಧ್ಯಯನದಿಂದ ಅವನ ಒಂದು ಶಾಸನವಿರುವುದು ಬೆಳಕಿಗೆ ಬಂದು ಪಾಳೆಯಗಾರರ ವಂಶಾವಳಿಯಲ್ಲಿ ಉಲ್ಲೇಖಿತನಾಗಿರುವ ಈ ನಾಯಕ ಇದ್ದ ಎಂಬ ಸಂಗತಿಯನ್ನು ದೃಢಪಡಿಸಿದೆ.

ಹೀಗೆಯೇ ಇಮ್ಮಡಿ ಮದಕೇರಿನಾಯಕನ ಹೆಸರು ಬರುವ ಒಂದು ಶಾಸನ ಕ್ರಿ.ಶ. ೧೬೦೯ರ ಸೌಮ್ಯ ಸಂವತ್ಸರದ್ದಾಗಿ ಬಿ.ಎಲ್. ರೈಸ್ ಅವರು ಪ್ರಕಟಿಸಿರುತ್ತಾರೆ. ಇಲ್ಲಿ ಶಾಸನ ಹೇಳುವ ಕಾಲದಲ್ಲಿ ಇಮ್ಮಡಿ ಮದಕೇರಿನಾಯಕ ಇರಲಿಲ್ಲ ಆಗ

ಇದ್ದವನು ೧ನೇ ಕಸ್ತೂರಿರಂಗಪ್ಪ ನಾಯಕ ಎಂಬ ಅಭಿಪ್ರಾಯ ಬಂದಿತ್ತು. ಆದರೆ ನನ್ನ ಪುನರಧ್ಯಯನ ಮತ್ತು ಸಂಶೋಧನೆಯಲ್ಲಿ ಶಾಸನದಲ್ಲಿ ಹೇಳಿರುವ ಶಕವರ್ಷ, ಸಂವತ್ಸರ ಮತ್ತು ನಾಯಕನ ಹೆಸರು ಸಮಂಜಸವಾಗಿರುವುದು ಕಂಡುಬಂದಿತಲ್ಲದೆ ಚಿತ್ರದುರ್ಗ ಪಾಳೆಯಗಾರರಲ್ಲಿ ಇಮ್ಮಡಿ ಮದಕೇರಿನಾಯಕರ ಹೆಸರಿನವರು ಇಬ್ಬರಿರುವ ಕೌತುಕದ ಸಂಗತಿ ಸಹ ಬೆಳಕಿಗೆ ಬರಲು ಕಾರಣವಾಯಿತು. ಅಲ್ಲದೆ ಈ ಶಾಸನ ೧ನೇ ಇಮ್ಮಡಿ ಮದಕೇರಿನಾಯಕನ ಕಾಲದ್ದು ಎನ್ನುವುದೂ ತಿಳಿದುಬಂತು. ಇದರಿಂದ ಮದಕೇರಿನಾಯಕ ಹೆಸರಿನವರು ಚಿತ್ರದುರ್ಗ ಪಾಳೆಯಗಾರರಲ್ಲಿ ೫ ಜನರಿದ್ದರು ಎಂಬುದಕ್ಕೆ ಬದಲಾಗಿ ಆ ಹೆಸರಿನವರು ೬ ಜನರಿದ್ದರು ಎಂಬ ಸಂಗತಿಯನ್ನು ಈ ಪುನರಧ್ಯಯನ ಮನಗಾಣಿಸಿತು. ಇಂಥ ಇನ್ನೂ ಹಲವು ನಿದರ್ಶನಗಳು ಶಾಸನ ಕ್ಷೇತ್ರದಲ್ಲಿ ಕಾಣುವುದು ಸಾಧ್ಯ. ಹಾಗಾಗಿ ಪ್ರಾಚೀನ ಲಿಪಿ ಮತ್ತು ಭಾಷಾ ಜ್ಞಾನ ಮತ್ತು ಪುನರ್ಪರಿಶೀಲನೆಯ ಅಗತ್ಯವನ್ನು ಇತಿಹಾಸದ ಪುನಾರಚನೆಯ ದೃಷ್ಟಿಯಿಂದ ಅತಿ ಮುಖ್ಯವೆಂದು ಹೇಳಬೇಕಾಗಿದೆ.

ನನ್ನ ಸಂಶೋಧನೆಯ ಸಂದರ್ಭದಲ್ಲಿ ನನಗೆ ದೊರೆತ ಕೆಲವು ತಳಸಮುದಾಯದ– ಗೊಲ್ಲರು, ಕುರುಬರು, ಬೇಡರು, ಉಪ್ಪಾರರು, ನಾಯಿಂದರು, ಪಾಂಚಾಳರು– ಮುಂತಾದವರ ಶಾಸನಗಳು ದಾಖಲೆಗಳು ಆಯಾ ಜನಾಂಗಗಳ ಚರಿತ್ರೆಯ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತವೆ. ತಳಸಮುದಾಯದ ಈ ಸಾಧಕರ ಉದಾತ್ತ ಚಿಂತನೆ ವಿಸ್ಮಯವನ್ನುಂಟುಮಾಡುತ್ತದೆ. ಅಂಥ ತಳವರ್ಗದವರ ಶಾಸನಗಳಲ್ಲಿ, ತಾಳೇಗರಿಯಲ್ಲಿ ಪ್ರತಿಮಾಡಿಕೊಳ್ಳಲಾದ ಒಂದು ತಾಮ್ರಶಾಸನವನ್ನು ಇಲ್ಲಿ ಉದಾಹರಿಸಬೇಕು ಎನಿಸುತ್ತಿದೆ:

ವಿಜಯನಗರದಲ್ಲಿ ಕೃಷ್ಣದೇವರಾಯನು ಆಳುತ್ತಿರುವಾಗ್ಗೆ, ನವರಾತ್ರಿ ಉತ್ಸವದ ಕಾಲದಲ್ಲಿ, ೧೨೦೦೦ ರಾವುತರಿಗೆ ಡಂಗುರದ ಮೂಲಕ ಒಂದು ಘೋಷಣೆಯಾಯಿತು. ಒಂದು ಗುಂಡಿಯಲ್ಲಿರುವ ಒಂದು ಹುಲಿ, ಒಂದು ಹಾವು ಎರಡನ್ನೂ ಯಾರು ಕೊಂದುಬರುತ್ತಾರೋ ಅವರಿಗೆ ದೊರೆ ಅವರ ಇಷ್ಟಾರ್ಥ ಸಲ್ಲಿಸುತ್ತಾರೆ ಎಂಬುದು. ಆ ಸಾಹಸವನ್ನು ಕುರುಬ ಜನಾಂಗದ ತಿಮ್ಮರಾವುತನೆಂಬುವನು ಮಾಡಿದಾಗ ದೊರೆಯಲ್ಲಿ ಅವನು ತನಗಾಗಿ ಏನನ್ನೂ ಕೇಳಲಿಲ್ಲ. "ಹೆಣ್ಣಿನ ಮನೆಯವರಿಗೆ ೧೦೧ ವರಹ ತೆರ, ಸರ್ಕಾರಕ್ಕೆ ಮದುವೆಯ ಸುಂಕ ೭ ವರಹ ಇಷ್ಟನ್ನು ಕೊಡಲು ಸಾಧ್ಯವಾಗದೆ ಎಷ್ಟೋ ಹುಡುಗ–ಹುಡುಗಿಯರು ಮದುವೆಯಾಗದೆ ಇದ್ದಾರೆ. ತಾವು ೬ ವರಹ ತೆರ ನಿಗದಿ ಮಾಡಿ, ಮದುವೆಯ ಸುಂಕವನ್ನು ಪೂರ್ತಿಯಾಗಿ ಮಾಫಿ ಮಾಡಬೇಕು" ಎಂದು ಅವನು ಕೇಳಿದ. ತನಗಾಗಿ ಏನೂ ಬೇಡದೆ ಸಮುದಾಯದ ಒಳಿತಿಗಾಗಿ ಕೇಳುವ ಇಂಥವರೇ ಆಯಾ ಜನಾಂಗದ ವೀರಪುರುಷರಾಗುತ್ತಾರೆ. ಅಂಥವರ ಸಮಾಜಮುಖಿ ಚಿಂತನೆ ಎಷ್ಟು ದೊಡ್ಡದು ಎಂದು ಆಶ್ಚರ್ಯವಾಗುತ್ತದೆ. ಈ ಸಂದರ್ಭದಲ್ಲಿ ಚಿಂತಕರೊಬ್ಬರು ಒಂದೆಡೆ ಹೇಳಿದ ಮಾತು ನೆನಪಾಗುತ್ತಿದೆ: "ಒಂದು ದೇಶದ ನಿಜವಾದ ಸಂಪತ್ತು ಎಂದರೆ ಧನಕನಕ ವಜ್ರವೈಢೂರ್ಯಗಳಲ್ಲ, ವಜ್ರಸದೃಶ ವ್ಯಕ್ತಿತ್ವ ಇರುವ ಜನರು". ಇಲ್ಲಿಯ ತಿಮ್ಮರಾವುತ ಅಂತಹ ವ್ಯಕ್ತಿತ್ವದವನಾಗುತ್ತಾನೆ.

ಈಗ ಇನ್ನೊಂದು ಗಂಭೀರ ವಿಷಯವನ್ನು ನಾನು ಇಲ್ಲಿ ಪ್ರಸ್ತಾಪಿಸಬೇಕಾಗಿದೆ. ಈ ಹಿಂದೆ ನನಗೆ 'ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ' ಬಂದಾಗಲೂ ನನ್ನ ಭಾಷಣದಲ್ಲಿ ಇದನ್ನು ಪ್ರಸ್ತಾಪಿಸಿದ್ದೆ. ಅದೆಂದರೆ ನಮ್ಮ ರಾಜಕೀಯ ಇತಿಹಾಸ ಮತ್ತು ಸಾಹಿತ್ಯ ಚರಿತ್ರೆಯ ಪಠ್ಯಗಳಲ್ಲಿ ನಮ್ಮೆಲ್ಲರ ಹೊಸ ಮತ್ತು ಪ್ರಮುಖ ಸಂಶೋಧನೆಗಳಾವುವೂ ಎಡೆ ಪಡೆಯುತ್ತಿಲ್ಲ ಎಂಬುದು. ಇದು ತುಂಬ ನೋವಿನ ಸಂಗತಿ. ನಾವೆಲ್ಲ ಇತಿಹಾಸ ಸಂಶೋಧನೆಯನ್ನು ಒಂದು ಬದ್ಧತೆಯಾಗಿ ಅಂಗೀಕರಿಸಿ ಕೆಲಸ ಮಾಡುತ್ತಾ ಬಂದಿದ್ದೇವೆ ಎಂಬುದರಲ್ಲಿ ಎರಡು ಮಾತಿಲ್ಲ. ನಾವು ನಮ್ಮ ಸಂಶೋಧನೆಗಾಗಿ ವ್ಯಯಿಸಿದ ಶ್ರಮ, ಕಾಲ, ಹಣಕ್ಕೆ ಬೆಲೆಯಿಲ್ಲವೆ ಎಂಬ ಪ್ರಶ್ನೆ ಸದಾ ನನ್ನನ್ನು ಕಾಡುತ್ತದೆ. ಈವರೆಗೆ ಹಲವರು ಕಷ್ಟಪಟ್ಟು ಸಂಶೋಧನೆ ಮಾಡಿ ಅನೇಕ ಸತ್ಯಗಳನ್ನು ಬೆಳಕಿಗೆ ತಂದಿದ್ದಾರೆ. ಹಲವು ಅಪಗ್ರಹಿಕೆಗಳನ್ನು ತಿದ್ದಿದ್ದಾರೆ. ಆದರೆ ಅವಕ್ಕೆ ಪಠ್ಯಪುಸ್ತಕಗಳಲ್ಲಿ ಎಡೆ ಮಾಡುವ ಕೆಲಸವನ್ನು ಯಾರೂ ಏಕೆ ಮಾಡುತ್ತಿಲ್ಲ? ಇತಿಹಾಸದ ಜ್ಞಾನವನ್ನು ಅದ್ಯಗೊಳಿಸಿಕೊಳ್ಳುವುದು ನಮಗೆ ಬೇಡವೆ? ತಾತ ಮುತ್ತಾತರ ಕಾಲದಿಂದ ಬಂದಿರುವ ಪಠ್ಯಗಳ ಇತಿಹಾಸವನ್ನೇ ಕಲಸುಮೇಲೋಗರ ಮಾಡಿ ಅಷ್ಟನ್ನೇ ಕಲಿತರೆ ಸಾಕೆ? ಕಲಿಸಿದರೆ ಸಾಕೆ? ಹೀಗೆಯೇ ದಿನಗಳು ವರ್ಷಗಳು ಸಾಗುತ್ತಾ ಹೋದರೆ ನಾವೆಲ್ಲಾ ತೆಗೆದುಕೊಳ್ಳುತ್ತಿರುವ ಸಂಶೋಧನೆಯ ಶ್ರಮಕ್ಕೆ ಏನು ಬೆಲೆ ಸಿಕ್ಕಂತಾಗುತ್ತದೆ? ಈ ಚಿಂತೆ ನನ್ನನ್ನು ಕಾಡುತ್ತದೆ. ಹೊಸದಾಗಿ ತಿಳಿದುಬಂದ ಅಂಶಗಳಲ್ಲಿ ಎಲ್ಲವನ್ನು

ಅಲ್ಲದಿದ್ದರೂ ತೀರ ಪ್ರಮುಖವಾದವುಗಳಿಗಾದರೂ ಪಠ್ಯಗಳಲ್ಲಿ ಜಾಗ ಕೊಡಬೇಕಲ್ಲವೆ ? ಇದನ್ನು ನಾವೆಲ್ಲರೂ ಗಂಭೀರವಾಗಿ ಯೋಚಿಸಬೇಕಾಗಿದೆ. ಇದಕ್ಕೆ ಕೆಲವು ನಿದರ್ಶನಗಳನ್ನು ನೀಡಬೇಕೆಂದು ಇಲ್ಲಿ ಮನಸ್ಸಾಗುತ್ತದೆ. ಮೂಲತಃ ಭಾಷೆ ಮತ್ತು ಸಾಹಿತ್ಯದವನಾದ ನಾನು ಅವುಗಳ ಜೊತೆಗೆ ಇತಿಹಾಸವೂ ಸೇರಿದಂತೆ ಕೆಲವು ಅಂಶಗಳನ್ನು ಇಲ್ಲಿ ನಿದರ್ಶನಕ್ಕೆ ತೆಗೆದುಕೊಳ್ಳುತ್ತಿದ್ದೇನೆ.

ಮೊದಲಿಗೆ 'ಇಸಿಲ' ಎಂಬುದರ ಪ್ರಸ್ತಾಪ ಮಾಡಬೇಕಾಗಿದೆ. ಇದು ಕನ್ನಡ ಪದವಲ್ಲ ಎಂಬ ಹೇಳಿಕೆಯಿಂದ ಗೊಂದಲ ಉಂಟಾಗಿದೆ. ಈ ಪದವನ್ನು ಮೊತ್ತಮೊದಲಿಗೆ ಪ್ರಸ್ತಾಪಿಸಿದವರು ಕನ್ನಡದ ಪ್ರಖ್ಯಾತ ವಿದ್ವಾಂಸರಾಗಿದ್ದ ಪ್ರೊ. ಡಿ.ಎಲ್.ಎನ್. ಅವರು. ಅದು ಕನ್ನಡ ಪದ ಎಂದು ಅವರು ಹೇಳಿರದಿದ್ದರೂ ಅವರು ಹಾಗೆ ಹೇಳಿದ್ದಾರೆ ಎಂದು ಈಚೆಗಿನ ಕೆಲವು ವಿದ್ವಾಂಸರು ಹೇಳತೊಡಗಿದ್ದಾರೆ. ಇಸಿಲ ಎಂಬುದು ಎಸಿಲ್ ಎಂಬ ಕನ್ನಡ ಪದದ ಪ್ರಾಕೃತೀಕರಣಗೊಂಡ ರೂಪ ಎಂಬುದು ಡಿ.ಎಲ್.ಎನ್. ಅವರ ಇಂಗಿತ. ಕನ್ನಡದ ಇನ್ನೊಬ್ಬ ಶ್ರೇಷ್ಠ ವಿದ್ವಾಂಸರಾದ ತೀ.ನಂ.ಶ್ರೀ. ಅವರು ಹೇಳಿರುವಂತೆ ಡಿ.ಎಲ್.ಎನ್. ಅವರ ಈ ವಿದ್ವತ್ಪೂರ್ಣ ಊಹೆಗೆ ಪ್ರತಿಯಾಗಿ ಪುರಾವೆ ಸಹಿತವಾದ ಯಾವ ನಿಲುವೂ ತಮಗೆ ಕಂಡುಬಂದಿಲ್ಲವಾಗಿ ಅದನ್ನು ಅಂಗೀಕರಿಸಬಹುದೆಂದು ಸೂಚಿಸಿರುವುದನ್ನು ಗಂಭೀರವಾಗಿ ತೆಗೆದುಕೊಳ್ಳಬೇಕಾಗಿದೆ.

ಕವಿರಾಜಮಾರ್ಗದ ಕರ್ತೃ ಶ್ರೀವಿಜಯ ಎಂದು ಇತ್ತೀಚೆಗೆ ಸಾಧಿತವಾಗಿದ್ದರೂ ಇನ್ನೂ ಕೂಡಾ ಕೆಲವು ಪಠ್ಯಗಳಲ್ಲಿ ಅವನ ಹೆಸರಿನ ಬದಲಿಗೆ ನೃಪತುಂಗನ ಹೆಸರೇ ಕಾಣುತ್ತಿರುವುದು ಒಂದು ವಿಪರ್ಯಾಸ. ಕ್ರಿ.ಶ. ೨ನೆಯ ಶತಮಾನದ ಪ್ರಾಚೀನ ಗ್ರೀಕ್ ನಾಟಕದಲ್ಲಿ ಉಲ್ಲೇಖವಾದ ಗ್ರೀಕೇತರ ಪದಗಳು ಕನ್ನಡ ಪದಗಳೆಂದೂ ಕನ್ನಡ ಭಾಷೆಯ ಪ್ರಾಚೀನತೆಗೆ ಇವು ಕೂಡಾ ಆಧಾರಗಳೆಂದೂ ಹೇಳಲಾಗುತ್ತಿದ್ದುದು ಈಗಲೂ ಪಠ್ಯಗಳಲ್ಲಿದೆ. ಆದರೆ ಇದೇ ಅಕಾದೆಮಿಯ ಸಮ್ಮೇಳನವೊಂದರಲ್ಲಿ ವಿದ್ವಾಂಸರಾದ ಡಾ. ಪಿ. ಗಣಪಯ್ಯ ಭಟ್ ಅವರು ಆ ನಾಟಕದಲ್ಲಿರುವ ಗ್ರೀಕೇತರ ಪದಗಳು ಕನ್ನಡವೂ ಅಲ್ಲ ತುಳುವೂ ಅಲ್ಲ; ಗ್ರೀಕೇತರ ದೇಶದ ಭಾಷೆಯೆಂಬಂತೆ ಸೃಷ್ಟಿಸಿದ ಕಾಲ್ಪನಿಕ ಭಾಷೆ ಎಂದು ತೋರಿಸಿಕೊಟ್ಟಿದ್ದಾರೆ. ಈ ಮಹತ್ತ್ವದ ವಿಚಾರ ಪಠ್ಯದಲ್ಲಿ ಏಕೆ ಈವರೆಗೆ ಸೇರ್ಪಡೆಯಾಗಿಲ್ಲ? ಕನ್ನಡದ ಪ್ರಾಚೀನತೆಗೆ ಈ ನಾಟಕದ ಪದಗಳನ್ನು ಒಂದು ಆಧಾರವೆಂಬಂತೆ ಸಾಹಿತ್ಯ ಚರಿತ್ರೆಯಲ್ಲಿ ಹೇಳುತ್ತಾ ಬಂದಿರುವುದು ಅಪೇಕ್ಷಣೀಯ ಎನ್ನಿಸುವುದಿಲ್ಲ.

ಹೊಯ್ಸಳರ ವಂಶದಲ್ಲಿ ಮುಂಡ ಪೊಯ್ಸಳ ಎಂಬುವವನು ಒಬ್ಬನಿದ್ದನೆಂದು ಸಂಶೋಧಕ ಶ್ರೀ ಎಂ.ಎನ್. ಪ್ರಭಾಕರ್ ಇದೇ ಅಕಾದೆಮಿಯ ಸಮ್ಮೇಳನವೊಂದರಲ್ಲಿ ತೋರಿಸಿಕೊಟ್ಟಿದ್ದಾರೆ. ಆದರೆ ಅವನ ಹೆಸರನ್ನು ಪಠ್ಯಗಳಲ್ಲಿ ಹೊಯ್ಸಳ ವಂಶವೃಕ್ಷ ಕೊಡುವಲ್ಲಿ ಇದುವರೆಗೂ ಸೇರಿಸದಿರುವುದು ನಿರಾಸೆಯ ಸಂಗತಿಯೆನಿಸುತ್ತದೆ. ಅಷ್ಟೇ ಅಲ್ಲ, ಹೊಯ್ಸಳ ಕಾಲದ ದೇವಾಲಯಗಳ ಮೇಲೆ ಕಂಡುಬರುವ ಶಿಲ್ಪವನ್ನು ಹುಲಿಯನ್ನು ಇರಿಯುತ್ತಿರುವ ಸಳ ಎಂದು ಹೇಳುತ್ತಾ ಬರಲಾಗುತ್ತಿದೆ. ಆದರೆ ಅದು ಹುಲಿಯಲ್ಲ ಸಿಂಹ ಎಂದು, ಇರಿಯುತ್ತಿರುವವನು ಮಾನವ ಮಾತ್ರವಾಗಿರದೆ ಒಬ್ಬ ರಾಕ್ಷಸ ಎಂದು, ಸಂಶೋಧಕರಾದ ಡಾ. ಎಂ.ಜಿ. ಮಂಜುನಾಥ್ ತೋರಿಸಿಕೊಟ್ಟಿದ್ದಾರೆ. ಆದರೆ ಇದುವರೆಗೂ ಪಠ್ಯಗಳಲ್ಲಾಗಲಿ, ಮಾರ್ಗದರ್ಶಿಕೆಯ ಪುಸ್ತಕದಲ್ಲಾಗಲಿ ಆ ಹೊಸ ಅಂಶ ಕಾಣಿಸದೆ ಈ ಶಿಲ್ಪ ಸಳನದೇ ಎಂಬ ಹಳೆಯ ವಿಷಯವೇ ಕಾಣುತ್ತದೆ.

ವಿಜಯನಗರ ಕಾಲದಲ್ಲಿ ಬಂದ ಪ್ರಖ್ಯಾತ ಹರಿದಾಸರಾದ ಪುರಂದರದಾಸರು ಸಹ ಒಂದು ಚಿಕ್ಕ ಸಂಸ್ಥಾನದ ಪ್ರಭುಗಳಾಗಿದ್ದರು ಎನ್ನುವ ಸಂಗತಿಯನ್ನು ಶ್ರೀ ಸೀತಾರಾಮ ಜಾಗೀರ್‌ದಾರ್ ಅವರು ಬಹು ಹಿಂದೆ ತೋರಿಸಿಕೊಟ್ಟಿದ್ದಾರೆ. ಹಾಗೆಯೇ ಕವಿರಾಜಮಾರ್ಗದ ಕರ್ತೃ ಶ್ರೀವಿಜಯನು ಬಾದಾಮಿ ಚಲುಕ್ಯ ವಂಶದ ನಿರವದ್ಯನ ಮನೆತನಕ್ಕೆ ಸೇರಿದವನು ಎನ್ನುವ ಸಂಗತಿಯನ್ನೂ ಸಹ ಅವರು ತೋರಿಸಿಕೊಟ್ಟಿದ್ದಾರೆ. ಮುಂದುವರೆದು 'ಛಂದೋನುಶಾಸನ' ಎಂಬ ಶಾಸ್ತ್ರಗ್ರಂಥದ ಕರ್ತೃವಾದ ಜಯಕೀರ್ತಿ ಒಬ್ಬ ಜೈನ ಮುನಿಯಾಗಿದ್ದು, ಅವನು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ಜೈನಕೇಂದ್ರವಾದ ಹೆಗ್ಗೆರೆಯೊಂದಿಗೆ ಸಂಬಂಧ ಹೊಂದಿದ್ದುದನ್ನೂ ಅವರು ತೋರಿಸಿಕೊಟ್ಟಿದ್ದಾರೆ. ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಈ ಮೇಲಿನ ಅಂಶಗಳನ್ನು ಸೇರಿಸಿ ಎಂದೋ ಪರಿಷ್ಕರಣೆ ಮಾಡಬೇಕಿತ್ತು. ಆದರೆ ಈವರೆಗೆ ಆ ಕೆಲಸವನ್ನು ಇದುವರೆಗೂ ಯಾವ ವಿಶ್ವವಿದ್ಯಾಲಯಗಳೂ ಮಾಡದೆ ಹಳೆಯ ಸಂಗತಿಗಳನ್ನೆ ಮತ್ತೆ ಮತ್ತೆ ಮುದ್ರಣ ಮಾಡುತ್ತಾ ಹೋಗಿವೆ. ಇದು ಮತ್ತೊಂದು ಖೇದದ ಸಂಗತಿ.

ಹೈದರಾಲಿ, ಟಿಪ್ಪು, ಮೈಸೂರು ಒಡೆಯರು, ಸಮಕಾಲೀನ ಪಾಳೆಯಗಾರರ ಚರಿತ್ರೆಗೆ ಒಂದು ಮುಖ್ಯ ಆಕರವಾಗಿರುವ 'ಹೈದರ್‌ನಾಮಾ'ದ ಕರ್ತೃ ನಲ್ಲಪ್ಪ ಎಂದೇ ಇದುವರೆಗೆ ಹೇಳುತ್ತ ಬರಲಾಗಿದೆ. (ಖ್ಯಾತ ಐತಿಹಾಸಿಕ ಕಾದಂಬರಿಕಾರರಾದ ತರಾಸು ಅವರು 'ಹೈದರ್‌ನಾಮಾ'ದ ಕರ್ತೃವಿನ ಹೆಸರನ್ನು ಪ್ರಾಯಶಃ ಮರೆವಿನಿಂದಲೂ ಏನೋ ನೇಮಣ್ಣ ಎಂದು ಅವರ 'ದುರ್ಗಾಸ್ತಮಾನ' ಕಾದಂಬರಿಯಲ್ಲಿ ಹೆಸರಿಸಿದ್ದಾರೆ). ಆದರೆ ಅದರ ಕರ್ತೃ ನಲ್ಲಪ್ಪನಾಗಿರದೆ ಅವನ ತಂದೆಯಾದ ಹೈದರಾಲಿಯ ಒಂದು ಕಛೇರಿಯನ್ನು ನೋಡಿಕೊಳ್ಳುತ್ತಿದ್ದ ಕಛೇರಿ ಕೃಷ್ಣಪ್ಪ ಎಂದು ಸಂಶೋಧಕರಾದ ಡಾ. ಬಿ. ನಂಜುಂಡಸ್ವಾಮಿ ಅವರು ಇದೇ ಅಕಾದೆಮಿಯ ಸಮ್ಮೇಳನವೊಂದರಲ್ಲಿ ತೋರಿಸಿಕೊಟ್ಟಿದ್ದಾರೆ. ಆದರೂ ಈಗಲೂ ನಲ್ಲಪ್ಪನ ಹೆಸರನ್ನೇ ಹೇಳುತ್ತ ಬರಲಾಗುತ್ತಿದೆ.

ಮೈಸೂರು ಒಡೆಯರಿಗೂ, ಕಳಲೆ ಮನೆತನದವರಿಗೂ ಸಂಬಂಧ ಇದ್ದದ್ದು ಪ್ರಸಿದ್ಧವಾದ ಸಂಗತಿ. ಕಳಲೆ ಮನೆತನದವರಲ್ಲಿ ಅನೇಕರು ಒಡೆಯರಲ್ಲಿ ದಳವಾಯಿಗಳಾಗಿ ಕರ್ತವ್ಯ ನಿರ್ವಹಿಸಿದ್ದಾರೆ. ಹಾಗೆಯೇ ಕೆಲವರು ಸರ್ವಾಧಿಕಾರಿಗಳಾಗಿ ಕಾರ್ಯನಿರ್ವಹಿಸಿದ್ದಾರೆ. ಸಂಗತಿ ಹೀಗಿದ್ದರೂ ಕಳಲೆ ಮನೆತನದವರ ಬಗ್ಗೆ ಬರೆಯುವಾಗ ಮತ್ತು ಮಾತನಾಡುವಾಗ ಕಳಲೆ ಮನತನದವರೆಲ್ಲರೂ ದಳವಾಯಿಗಳಾಗಿದ್ದರೇನೋ ಎನ್ನುವಂತೆ ಕೆಲವರು ಉಲ್ಲೇಖ ಮಾಡುವುದುಂಟು. ಹಾಗೇ ಮೈಸೂರು ಇತಿಹಾಸದಲ್ಲಿ ಬರುವ ಪೂರ್ಣಯ್ಯ ದಿವಾನನಾದದ್ದು ಟಿಪ್ಪುವಿನ ಅನಂತರದ ಕಾಲದಲ್ಲಿ. ಆದರೆ, ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿಯೇ ಪೂರ್ಣಯ್ಯ ದಿವಾನನಾಗಿದ್ದ ಎನ್ನುವ ಹಾಗೆ ಕೆಲವು ಪಠ್ಯಗಳ ಲೇಖಕರು ಬರೆದಿರುವುದುಂಟು. ಅಷ್ಟೇ ಅಲ್ಲ, ಚಿತ್ರದುರ್ಗದ ಕೊನೆಯ ಮದಕೇರಿ ನಾಯಕನ ಕಾಲದಲ್ಲಿ ೧೮ನೆಯ ಶತಮಾನದ ಮಧ್ಯಭಾಗದಲ್ಲಿ ಭೀಮಾಜಿಪಂತ್ ರಚಿಸಿದ 'ಚಿತ್ರದುರ್ಗ ಬಖೈರು' ಎಂಬ ಆಕರದ ೧೯ನೆಯ ಶತಮಾನದ ಪ್ರತಿಗಳಲ್ಲಿ ಪ್ರತಿಕಾರರು ಪ್ರತಿಮಾಡುವಾಗ ಪೂರ್ಣಯ್ಯನಿಗೆ ದಿವಾನ್ ಎಂಬ ವಿಶೇಷಣವನ್ನು ಸೇರಿಸಿರುವುದುಂಟು. ಇಂಥ ಸೇರ್ಪಡೆ ಆಮೇಲಿನ ಕಾಲದ್ದು ಎಂಬುದನ್ನು ಆಕರಗಳನ್ನು ಸಂಪಾದಿಸುವಾಗ ಮತ್ತು ಲೇಖನಗಳನ್ನು ಬರೆಯುವಾಗ– ಇದು ಎಷ್ಟೇ ಚಿಕ್ಕ ವಿಷಯವಾದರೂ– ಜಾಗರೂಕತೆಯಿಂದ ಗಮನಿಸಿ ಅಂಥ ತಪ್ಪು ಸೇರ್ಪಡೆಯನ್ನು ಕೈಬಿಡಬೇಕಾಗುತ್ತದೆ. ಪಠ್ಯಗಳಲ್ಲೂ ಇದೇ ಕೆಲಸ ಆಗಬೇಕಾಗಿದೆ.

ಹೈದರಾಲಿಯ ನೆಚ್ಚಿನ ದಂಡನಾಯಕನಾಗಿ, ಸಲಹೆಗಾರನಾಗಿ ಅವನಿಗೆ ಬಲಗೈಯಂತಿದ್ದವನು ಬರ್ಕಿ ಶ್ರೀನಿವಾಸರಾವ್. ಹೈದರನ ಎಲ್ಲ ಜಯಗಳಿಗೂ ಮುಖ್ಯ ಕಾರಣನಾದವನು ಇವನು. ಇವನಿಗೆ ಮಾಸಿಕ ವೇತನ ೨೦೦೦ ವರಹ ಇದ್ದರೆ, ಪೂರ್ಣಯ್ಯನಿಗೆ ೧೦೦೦ ವರಹ ಮಾತ್ರ ಇತ್ತು. ಅಂದರೆ ಪೂರ್ಣಯ್ಯನ ವೇತನ ಶ್ರೀನಿವಾಸರಾವ್‌ನ ವೇತನದ ಅರ್ಧದಷ್ಟು ಮಾತ್ರ. ಹೈದರಾಲಿ ಊರಲ್ಲಿ ಇಲ್ಲದಿದ್ದಾಗ, ಪೂರ್ಣಯ್ಯನಿಗೆ ಆಗದವರು ಅವನ ಮೇಲೆ ದೋಷಾರೋಪಗಳನ್ನು ಹೊರಿಸಿ ಅವನನ್ನು ಬಂಧನದಲ್ಲಿ ಇಟ್ಟಿದ್ದಾಗ, ಸುದ್ದಿ ತಿಳಿದ ಶ್ರೀನಿವಾಸರಾವ್ ದೂರದಲ್ಲಿದ್ದರೂ ಅಲ್ಲಿಂದಲೇ ಪೂರ್ಣಯ್ಯನನ್ನು ಬಂಧನದಿಂದ ಮುಕ್ತಗೊಳಿಸುವ ದಕ್ಷತೆ ತೋರಿದ. ಶ್ರೀನಿವಾಸರಾವ್ ಅಷ್ಟು ಪ್ರಭಾವಶಾಲಿಯಾಗಿದ್ದ. ಆದರೂ ಚರಿತ್ರ ಲೇಖಕರು ಪೂರ್ಣಯ್ಯನಿಗೆ ಮಹತ್ತ್ವ ಕೊಟ್ಟಷ್ಟು ಅವನಿಗಿಂತ ಹೆಚ್ಚಿನ ಮಹತ್ತ್ವದ ವ್ಯಕ್ತಿಯಾಗಿದ್ದ ಬರ್ಕಿ ಶ್ರೀನಿವಾಸರಾವ್‌ನ ಬಗ್ಗೆ ಗಮನ ಹರಿಸುವುದೇ ಇಲ್ಲ. ಹೀಗಾಗಿ ಬರ್ಕಿ ಶ್ರೀನಿವಾಸರಾವ್‌ಗೆ ಇತಿಹಾಸದಲ್ಲಿ ನ್ಯಾಯವಾಗಿ ಸಿಗಬೇಕಾದ ಸ್ಥಾನ ಸಿಕ್ಕದೆ ಹೋಗಿದೆ. ಇದೂ ಕೂಡ ನಮ್ಮ ಲೇಖಕರು ಸಂಶೋಧಕರು ಗಂಭೀರವಾಗಿ ಗಮನಿಸಬೇಕಾಗಿದೆ.

ಇಲ್ಲಿ ಹೇಳಬೇಕಾದ ಇನ್ನೊಂದು ಮುಖ್ಯ ಸಂಗತಿ ಎಂದರೆ, ಮಾಧ್ಯಮಿಕ ಹಾಗೂ ಪ್ರೌಢಶಾಲಾ ಶಿಕ್ಷಣದ ಹಂತದಲ್ಲೇ ಪಠ್ಯಪುಸ್ತಕಗಳಲ್ಲಿ ನಮ್ಮ ನಾಡಿನ ಇತಿಹಾಸ, ಸಾಹಿತ್ಯ, ಸಂಸ್ಕೃತಿಗಳಿಗಾಗಿ ಶ್ರಮಿಸಿದ ಮಹನೀಯರ ಪರಿಚಯ ಮಾಡಿಸುವಂಥ ಪಾಠಗಳನ್ನು ಇಡುವ ಅಗತ್ಯವಿದೆ. ಏಕೆಂದರೆ, ಈಚಿನ ದಿನಗಳಲ್ಲಿ ಕೆಲವು ಸಂದರ್ಶನಗಳಲ್ಲಿ ಅಭ್ಯರ್ಥಿಗೆ "ರೈಸ್ ಬಗ್ಗೆ ನಿಮಗೆ ಗೊತ್ತಾ?" ಎಂದು ಕೇಳಲಾದ ಪ್ರಶ್ನೆಗೆ ಬಂದ ಉತ್ತರ "ರೈಸ್ ಬಗ್ಗೆ ಯಾರಿಗೆ ಗೊತ್ತಿಲ್ಲ? ಇಂಗ್ಲಿಷಿನಲ್ಲಿ ರೈಸ್ ಎನ್ನುವುದನ್ನೇ ಕನ್ನಡದಲ್ಲಿ ಅಕ್ಕಿ ಎಂದು ಹೇಳುತ್ತೇವೆ; ಅನ್ನ ಎಂದು ಹೇಳುತ್ತೇವೆ." ಇದು ನಮ್ಮನ್ನು ದಂಗುಬಡಿಸುವ, ನಿರಾಶೆಗೆ ಗುರಿಮಾಡುವ ಉತ್ತರ. ಇಂಥ ಉತ್ತರ ಏಕೆ ಎಂದರೆ ಅವರಿಗೆ ಯಾವ ಹಂತದಲ್ಲೂ ಬಿ.ಎಲ್. ರೈಸ್ ಹೆಸರು ಮತ್ತು ಅವರು ಮಾಡಿರುವ ಕೆಲಸ ಪರಿಚಯ ಆಗಿರುವುದಿಲ್ಲ. ಆದ್ದರಿಂದ ಶಾಲಾಶಿಕ್ಷಣ ಹಂತದಲ್ಲೇ ಬಿ.ಎಲ್. ರೈಸ್, ಎಂ.ಎಚ್. ಕೃಷ್ಣ, ಆರ್. ನರಸಿಂಹಾಚಾರ್, ಫ.ಗು. ಹಳಕಟ್ಟಿ, ಹುಲ್ಲೂರು ಶ್ರೀನಿವಾಸ್ ಜೋಯಿಸ್ ಮುಂತಾದವರನ್ನು

ಮತ್ತು ಅವರು ನಮ್ಮ ನಾಡಿಗೆ ಭಾಷೆ ಇತ್ಯಾದಿಗಳಿಗೆ ಮಾಡಿದ ಸೇವೆಯನ್ನು ಪರಿಚಯಿಸುವ ಪಾಠಗಳನ್ನು ಸೇರಿಸುವುದು ಸೂಕ್ತ ಎನ್ನಿಸುತ್ತದೆ.

ಈ ಮೇಲಿನ ವಿಷಯಕ್ಕೆ ಇನ್ನೊಂದು ಅಂಶದ ಸೇರ್ಪಡೆಯೂ ಆವಶ್ಯಕ ಎನ್ನಿಸುತ್ತದೆ. ಪೂರಕ ಪಠ್ಯಪುಸ್ತಕಗಳಲ್ಲಿ ಸ್ಥಳೀಯ ದೊರೆಗಳು, ಕವಿಗಳು, ಸಾಹಿತ್ಯ ಕೃತಿಗಳು, ಸಾಂಸ್ಕೃತಿಕ ನಾಯಕರು, ಜಾನಪದ ಹಾಡುಗಾರರು, ಬಹುಮುಖ್ಯ ಕಲಾವಿದರು– ಇವೇ ಮುಂತಾದ ವಿಷಯಗಳನ್ನು ಸೇರಿಸಬೇಕಾದ್ದು ವಿಹಿತ. ಹಾಗೆ ಮಾಡುವುದರಿಂದ ಸ್ಥಳೀಯ ಸಾಂಸ್ಕೃತಿಕ ಜಗತ್ತಿನ ಪರಿಚಯ ವಿದ್ಯಾರ್ಥಿಗಳಿಗೆ ಚಿಕ್ಕ ವಯಸ್ಸಿನಲ್ಲೇ ಆಗಲು ಅದು ಸಹಕಾರಿಯಾಗುತ್ತದೆ. ಇಂಥ ಪಾಠಗಳು ಸೇರ್ಪಡೆಯಾಗದಿದ್ದರೆ, ವಿದ್ಯಾರ್ಥಿಗಳಿಗೆ ಸ್ಥಳೀಯ ಸಾಂಸ್ಕೃತಿಕ ಜಗತ್ತಿನ ಜ್ಞಾನದಿಂದ ವಂಚಿತರಾಗುತ್ತಾರೆ ಅಥವಾ ಅವರಿಗೆ ಅಂಥ ಒಂದು ಜಗತ್ತು ಇರುವುದೇ ಅವರ ಗಮನಕ್ಕೆ ಬರದೆ ಅಜ್ಞಾತವಾಗುತ್ತದೆ. ಈಗ ಹೇಳಿದ ವಿಷಯಗಳ ಜೊತೆಗೆ ಆಯಾ ಪ್ರದೇಶದ ಅಥವಾ ಒಟ್ಟಾರೆ ರಾಜ್ಯದ ಕೆಲವೇ ಕೆಲವು ಮುಖ್ಯ ಶಾಸನಗಳನ್ನು ಕುರಿತ ಪಾಠಗಳೂ ಸಹ ಅವರ ಓದಿನಲ್ಲಿರುವುದು ಸೂಕ್ತ ಎನಿಸುತ್ತದೆ. ಉದಾಹರಣೆಗೆ, ಹಲ್ಮಿಡಿ ಶಾಸನ, ಬಾದಾಮಿಯ ಕಪ್ಪೆಅರಭಟ್ಟನ ಶಾಸನ, ಶ್ರವಣಬೆಳಗೊಳದ ನಂದಿಸೇನ ಮುನಿಯ ನಿಸದಿ ಶಾಸನ, ತಮಟಕಲ್ಲಿನ ಗುಣಮಧುರನ ಶಾಸನ – ಇಂಥ ಶಾಸನಗಳ ಪರಿಚಯವಾಗುವುದು ಅವಶ್ಯಕ. ಈಗಾಗಲೇ ಬುಕ್ಕರಾಯನ ಶ್ರವಣಬೆಳಗೊಳದ ಶಾಸನ, ಬಾದಾಮಿಯ ಕಪ್ಪೆಅರಭಟ್ಟನ ಶಾಸನ– ಇಂಥವು ಪಠ್ಯಪುಸ್ತಕದಲ್ಲಿ ಸೇರಿವೆಯಾದರೂ ಅವುಗಳ ಬಗ್ಗೆ ಅಸಮರ್ಪಕ ಮಾಹಿತಿಯ ಟಿಪ್ಪಣಿಗಳಿಂದ ವಿದ್ಯಾರ್ಥಿಗಳ ತಲೆಗೆ ತಪ್ಪುಗಳನ್ನು ತುಂಬುವಂತಾಗಿದೆ. ಇದು ತುಂಬ ವಿಷಾದನೀಯ ಸಂಗತಿ. ಏಕೆಂದರೆ "ಕಪ್ಪೆ ಅರಭಟ್ಟ ಎಂಬ ಹೆಸರಿನ ಕವಿಯೊಬ್ಬ ಬಾದಾಮಿಯಲ್ಲಿದ್ದ" ಎಂಬ ರೀತಿಯ ಟಿಪ್ಪಣಿ, ಜೈನರಿಗೆ ನಿಜವಾಗಿ ಆದ ಅನ್ಯಾಯವಾದ ಸಂಗತಿಯನ್ನೇ ಸೂಚಿಸದೆ, ಅಂದರೆ ನಿಜವಾದ ಸಂಗತಿಯನ್ನೇ ಸೂಚಿಸದೆ, ಕೇವಲ ಅದು ಬುಕ್ಕರಾಯನ ಸರ್ವಧರ್ಮ ಸಮಭಾವನೆಯ ಶಾಸನ ಎಂದು ರಾಜನ ಘನತೆಗೆ ಪ್ರಮಾಣಪತ್ರ ಕೊಡುವಂತೆ ಅದಕ್ಕೆ ಟಿಪ್ಪಣಿ ಕೊಡುವುದು ಸಮರ್ಪಕ ಎನ್ನಿಸುವುದಿಲ್ಲ. ಹೀಗೆ ಶಾಸನಗಳನ್ನು ಸೂಕ್ತವಾಗಿ ಆಯ್ಕೆ ಮಾಡಿ ಸೂಕ್ತ ಟಿಪ್ಪಣಿಯೊಂದಿಗೆ ಪರಿಚಯಿಸುವುದರಿಂದ ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲೇ ಪೂರ್ವಕಾಲದ ನಮ್ಮ ಜನರು ಬದುಕು ನಡೆದು ಬಂದ ರೀತಿ ಮತ್ತು ಪರಂಪರೆಯ ಅರಿವು, ಯಾವುದೇ ಬಣ್ಣದ ಲೇಪನವಿಲ್ಲದೆ ಪರಿಚಯವಾಗಲು ಆ ಮೂಲಕ ಅವರಲ್ಲಿ ವೈಚಾರಿಕತೆ ಬೆಳೆಯಲು ಸಹಾಯಕವಾಗುತ್ತದೆ.

ನಾನು ಹಿಂದಿನಿಂದ ಆಶಿಸುತ್ತಾ ಬಂದಿರುವ ಇನ್ನೊಂದು ಸಂಗತಿಯೂ ಇದೆ. ಅದು ಪ್ರವಾಸೋದ್ಯಮ ಇಲಾಖೆಯವರಿಗೆ ಕೊಡುವ ಒಂದು ಸಲಹೆ. ನಮ್ಮ ಸಾಹಿತ್ಯ ಸಂಸ್ಕೃತಿಗಳ ದೃಷ್ಟಿಯಿಂದ ಪ್ರಮುಖವಾಗಿರುವ ಕೆಲವು ಶಿಲಾಶಾಸನಗಳನ್ನು ಪ್ರವಾಸಿಗರು, ಸಂದರ್ಶಕರು ಬಂದು ನೋಡಿ ಆನಂದಿಸುವ ಹಾಗೆ, ಆ ಇಲಾಖೆಯವರು ಸೂಕ್ತ ಪ್ರಚಾರ, ಪ್ರದರ್ಶನ ಫಲಕ, ಸಾರಿಗೆ ವ್ಯವಸ್ಥೆ (ಎಲ್ಲ ದಿನಗಳಲ್ಲಿ ಅಲ್ಲದಿದ್ದರೂ ನಿರ್ದಿಷ್ಟ ದಿನಗಳಲ್ಲಿ) ಇವನ್ನು ಮಾಡಬೇಕಾದ ಅವಶ್ಯಕತೆ ಇದೆ. ವಸ್ತುಸಂಗ್ರಹಾಲಯಗಳಲ್ಲಿ ಕೆಲವು ಶಿಲಾ ಹಾಗೂ ತಾಮ್ರಶಾಸನಗಳನ್ನು ಇರಿಸಿ, ಅವುಗಳ ಕೆಳಗೆ ಅಥವಾ ಬದಿಯಲ್ಲಿ ಒಂದೊಂದು ಸಾಲಿನ ಅತಿಚಿಕ್ಕ ಪರಿಚಯ ಕೊಟ್ಟಿರುತ್ತಾರೆ. ಆದರೆ ಹಾಗೆ ವಸ್ತುಸಂಗ್ರಹಾಲಯಗಳಲ್ಲಿ ತಂದು ಇಡಲು ಸಾಧ್ಯವಾಗದ ಕೆಲವು ಮಹತ್ತ್ವದ ಶಾಸನಗಳು ಕೂಡಾ ಪ್ರೇಕ್ಷಣೀಯ ಮೌಲ್ಯ ಉಳ್ಳವಾಗಿರುವುದನ್ನು ಗಮನಿಸಬೇಕು. ಬ್ರಹ್ಮಗಿರಿ, ಜಟಿಂಗರಾಮೇಶ್ವರ, ಅಶೋಕಸಿದ್ದಾಪುರ ಈ ಸ್ಥಳಗಳಲ್ಲಿರುವ ಅಶೋಕನ ಶಾಸನಗಳಿಗೆ ಬ್ರಿಟಿಷರ ಕಾಲದಲ್ಲೇ ವ್ಯವಸ್ಥಿತವಾಗಿ ಕಟಾಂಜನ ಹಾಕಿ ಅವುಗಳನ್ನು ರಕ್ಷಿಸಲಾಗಿದೆ. ಬ್ರಹ್ಮಗಿರಿಯಲ್ಲಿ ಮಾತ್ರ ಅದರೊಳಗಿನ ವಿಷಯ ಏನು ಎಂಬುದನ್ನು ತಿಳಿಸುವ ಪ್ರದರ್ಶನ ಫಲಕಗಳನ್ನು ಹಾಕಿರುವುದರಿಂದ ಅವುಗಳನ್ನು ಹೋಗಿ ನೋಡುವ ಸಂದರ್ಶಕರಿಗೆ ಅದರ ಮಹತ್ತ್ವದ ಕಿರುಪರಿಚಯವಾದರೂ ಆಗಲು ಸಾಧ್ಯವಾಗಿದೆ. ಅದೇ ರೀತಿ ಪ್ರಾಚೀನ ತ್ರಿಪದಿ ಬರುವ ಕಪ್ಪೆಅರಭಟ್ಟನ ಶಾಸನ; ಕನ್ನಡದ ಅತಿ ಪ್ರಾಚೀನ ಪದ್ಯ ಇರುವ, ಕರ್ನಾಟಕದ ಅತಿಪ್ರಾಚೀನ ವೀರಗಲ್ಲಾಗಿರುವ ಮತ್ತು ಜೊತೆಗೆ ಕರ್ನಾಟಕದಲ್ಲೇ ಅತಿಪ್ರಾಚೀನವಾದ ವಟ್ಟೆಳುತ್ತು ಲಿಪಿಯ ತಮಿಳು ಶಾಸನ ಕೂಡಾ ಇರುವ, ತಮಟಕಲ್ಲಿನ ಶಾಸನ; ಕದಂಬ ಮಯೂರವರ್ಮನ ಚಂದ್ರವಳ್ಳಿ ಶಾಸನ; ಬೊಪ್ಪಣ ಪಂಡಿತನ ಗೊಮ್ಮಟ ಜಿನಸ್ತುತಿಯ ಶ್ರವಣಬೆಳಗೊಳದ ಶಾಸನ; ದೇಕಬ್ಬೆಯ ಶಾಸನ; ಅಬಲೂರಿನ ಏಕಾಂತರಾಮಯ್ಯನ ಶಾಸನ; ಹಂಪಿಯ ಲಕ್ಷ್ಮೀಧರ ಅಮಾತ್ಯನ ಶಾಸನ – ಇಂಥವಕ್ಕೆ ಸೂಕ್ತ ಪ್ರಚಾರ, ಪರಿಚಯ, ಫಲಕಗಳಿದ್ದರೆ ಅವು ಇದ್ದಲ್ಲಿಗೆ ಹೋಗಿ ನೋಡಲು, ಆನಂದಿಸಲು, ಅವುಗಳ ಬಗ್ಗೆ ತಿಳಿವಳಿಕೆ

ಪಡೆಯಲು ಸಾಧ್ಯವಾಗುತ್ತದೆ. ಇತರ ಸ್ಮಾರಕಗಳಿಗಿಂತ ಶಾಸನಗಳೇನೂ ಕಡಿಮೆ ಪ್ರೇಕ್ಷಣೀಯ ಮೌಲ್ಯದವಲ್ಲ ಎಂಬುದನ್ನು ಪ್ರವಾಸೋದ್ಯಮ ಇಲಾಖೆ ಮನಗಾಣಬೇಕಾಗಿದೆ.

ಒಂದು ದುರ್ದೈವದ ಸಂಗತಿ ಎಂದರೆ ಕೆಲವು ಅಪರೂಪದ ಚಿತ್ರಗಳು ಶಾಸನಗಳು ಇರುವ ಬಂಡೆಗಳು ಕಣ್ಮರೆಯಾಗುತ್ತಿವೆ. ಚಿತ್ರದುರ್ಗದ ಬಳಿ ಒಂದೆಡೆ, ಪುರಾತನ ಮಾನವ ಬಿಡಿಸಿದ ಚಿತ್ರಗಳಿದ್ದ ಬಂಡೆಗಳು ಇಂದು ಕಾಣೆಯಾಗಿವೆ. ಇನ್ನೊಂದೆಡೆ, ವಿಜಯನಗರದ ದೊರೆ ದೇವರಾಯನ ಬಹುಶಃ ಮರಣವನ್ನು ಸೂಚಿಸುವ ಶಾಸನ ಇದ್ದ ಬಂಡೆ ಗಣಿಗಾರಿಕೆಗೆ ತುತ್ತಾಗಿ ಕಣ್ಮರೆಯಾಗಿದೆ. ಮಯೂರವರ್ಮ ವನವಾಸ ಮಾಡಿದ ಕಾಡಿನ ಮಧ್ಯೆ ಇದ್ದ ಶ್ರೀಪರ್ವತ ಎಂದು ನಾನು ತಿಳಿದಿರುವ ಧವಳಪ್ಪನಗುಡ್ಡದ ಮೇಲಿನ ಲಿಂಗಗಳನ್ನು ಯಾರೋ ದುಷ್ಕರ್ಮಿಗಳು ಒಡೆದುಹಾಕಿದ್ದಾರೆ. ಹಂಪಿ ಪರಿಸರದಲ್ಲಿ ಕೆಲವೆಡೆ ಬಂಡೆಗಳ ಮೇಲಿನ ಶಾಸನಗಳನ್ನು ದುರುದ್ದೇಶದಿಂದ ಸಿಮೆಂಟಿನಿಂದ ಮುಚ್ಚಿಹಾಕಿದ್ದಾರೆ. ಇಂಥ ಅನುಚಿತ ಘಟನೆಗಳು ಇತರ ಕಡೆಗಳಲ್ಲೂ ಸಾಕಷ್ಟು ಆಗಿರಬಹುದು. ಇಂಥವು ನಮ್ಮ ಇತಿಹಾಸ ಸಂಸ್ಕೃತಿಯ ಅಮೂಲ್ಯ ವಸ್ತುಗಳು; ಇವು ನಾಶವಾದರೆ ಮತ್ತೆ ಅವುಗಳನ್ನು ಪಡೆಯಲು ಸಾಧ್ಯವಿಲ್ಲ. ಇವು ನಾಶವಾಗಬಾರದು, ಅವಕ್ಕೆ ಕಿಂಚಿತ್ತೂ ಧಕ್ಕೆ ಆಗಬಾರದು ಎಂಬ ದೃಷ್ಟಿಯಿಲ್ಲದೆ, ಕಟ್ಟುನಿಟ್ಟಿನ ಷರತ್ತುಗಳನ್ನು ಹಾಕದೆ, ಗಣಿಗಾರಿಕೆಗೆ ಪರವಾನಗಿ ಕೊಡುವುದು, ದುಷ್ಕರ್ಮಿಗಳನ್ನು ಪತ್ತೆಮಾಡಿ ಅವರನ್ನು ಶಿಕ್ಷಿಸದಿರುವುದು, ಇಂಥ ಸಂಗತಿಗಳು ಶಾಸನ ಸದನದಲ್ಲಿ ಚರ್ಚೆಗೂ ಬರದಿರುವುದು– ಇದೆಲ್ಲ ಕಳವಳವುಂಟುಮಾಡುತ್ತದೆ. ಪ್ರತಿವರ್ಷ ನಾವು ಮಾಡುವ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮಕ್ಕೆ ಬೆಲೆಯೇನಿದೆ ಎಂದೂ ಚಿಂತೆಯಾಗುತ್ತದೆ. ನಮ್ಮ ಸರ್ಕಾರ, ಅಧಿಕಾರಿಗಳು, ಪ್ರಾಚ್ಯಸ್ಮಾರಕಗಳ ರಕ್ಷಣೆಯ ಬಗ್ಗೆ ತೀವ್ರ ಗಮನಹರಿಸಬೇಕಾಗಿದೆ; ಆ ವಿಷಯದಲ್ಲಿ ಕಾನೂನು ಮತ್ತು ಸುವ್ಯವಸ್ಥೆಯ ಪಾಲನೆಗೆ ಕಟ್ಟುನಿಟ್ಟಿನ ಕ್ರಮ ಕೈಕೊಳ್ಳುವುದು ತುರ್ತಾಗಿ ಆಗಬೇಕಾಗಿದೆ. ಇಂಥ ವಿಷಯಗಳ ಬಗ್ಗೆ ಸರ್ಕಾರದ ಮೇಲೆ ಒತ್ತಡ ತರಲು ನಮ್ಮ ಅಕಾದೆಮಿ ಏನು ಮಾಡಬಹುದು ಎಂಬ ಬಗ್ಗೆ ಈಗ ಗಂಭೀರವಾಗಿ ಯೋಚಿಸಬೇಕಾಗಿದೆ.

ಸಂಶೋಧನ ಕ್ಷೇತ್ರದಲ್ಲಿ ಅತಿ ಮುಖ್ಯ ಆಕರಗಳೆಂಬ ಪ್ರಾಶಸ್ತ್ಯಕ್ಕೆ ಪಾತ್ರವಾಗಿರುವುದು ಶಾಸನಗಳು ಎಂಬುದು ನಮ್ಮೆಲ್ಲರಿಗೂ ತಿಳಿದ ಸಂಗತಿ. ಈವರೆಗೆ ಬೆಳಕಿಗೆ ಬಂದಿರುವ ಶಾಸನಗಳು ಸುಮಾರು ೨೫,೦೦೦ ದಿಂದ ೩೦,೦೦೦ ಎಂಬ ಅಂದಾಜಿದೆ. ಆದರೆ, ನಮ್ಮ ರಾಜ್ಯದಲ್ಲಿ ಅದಕ್ಕಿಂತಲೂ ಅಂದರೆ ೪೦,೦೦೦ಕ್ಕೂ ಹೆಚ್ಚು ಸಂಖ್ಯೆಯಲ್ಲಿ ಶಾಸನಗಳಿವೆ ಎಂದು ಕಂಡುಬರುತ್ತದೆ. ಅವೆಲ್ಲ ಬೆಳಕಿಗೆ ಬರಲು ಇನ್ನೂ ಎಷ್ಟು ಕಾಲ ಬೇಕಾಗುತ್ತದೋ! ಈಗಾಗಲೇ ಪ್ರಕಟವಾಗಿರುವವುಗಳಲ್ಲಿ ಎಷ್ಟೋ ಶಾಸನಗಳು ಈಗಾಗಲೇ ಕಣ್ಮರೆಯಾಗಿವೆ; ಇನ್ನೆಷ್ಟೋ ದುರುಪಯೋಗವಾಗಿವೆ. ಸಾವಿರಾರು ಶಾಸನಗಳು ಕೆಲವು ಸಂಪುಟ ಮಾಲಿಕೆಗಳಲ್ಲಿ ಬಂದಿದ್ದರೆ, ಮತ್ತಷ್ಟು ಶಾಸನಗಳು ಇತರ ಅನೇಕ ಸಂಚಿಕೆಗಳಲ್ಲಿ ಮತ್ತು ಬಿಡಿಲೇಖನಗಳಲ್ಲಿ ಬಂದಿವೆ. ಹೀಗೆ ಚದುರಿಹೋಗಿರುವ ಶಾಸನಗಳನ್ನೆಲ್ಲಾ ನಿರ್ದಿಷ್ಟ ಸಂಪುಟ ಮಾಲಿಕೆಗೆ ತರುವುದು ಅತಿಮುಖ್ಯವಾಗಿ ಆಗಬೇಕಾಗಿದೆ. ಬೇರೆ ಬೇರೆ ವಿಶ್ವವಿದ್ಯಾಲಯಗಳು ಈ ದಿಶೆಯಲ್ಲಿ ಈಗಾಗಲೇ ಕಾರ್ಯಪ್ರವೃತ್ತವಾಗಿವೆ ಎನ್ನುವುದು ಸಮಾಧಾನದ ಸಂಗತಿಯಾಗಿದೆ.

ಶಾಸನಗಳಲ್ಲಿ ಬರುವ ಪದಗಳ ಕೋಶವನ್ನು ಕೂಡ ಪ್ರತ್ಯೇಕ ಸಂಪುಟ ಮಾಲಿಕೆಯಲ್ಲಿ ತರುವ ತೀವ್ರ ಅಗತ್ಯವಿದೆ. ಈಗಾಗಲೇ ಕೆಲವು ಪದಕೋಶಗಳು ಬಂದಿವೆಯಾದರೂ ಅವು ಸಮಗ್ರ ಶಾಸನ ಪದಕೋಶಗಳಾಗಿ ಬಂದಿಲ್ಲ. ಆದ್ದರಿಂದ ಸಂಶೋಧನ ಅಭ್ಯರ್ಥಿಗಳ ಸಂಶೋಧನ ಅಧ್ಯಯನ ಮತ್ತು ಚಟುವಟಿಕೆಗಳು ವೇಗ ಪಡೆಯಲು ಸಾಧ್ಯವಾಗದಂತಾಗಿದೆ. ಈ ಪದಕೋಶ ನಿರ್ಮಾಣ ಯೋಜನೆಯನ್ನು ಯಾವುದಾದರೂ ವಿಶ್ವವಿದ್ಯಾಲಯ ಅಥವಾ ಸಂಶೋಧನ ಸಂಸ್ಥೆ ಕೈಗೆತ್ತಿಕೊಂಡು ಪೂರೈಸಬೇಕಾಗಿದೆ. ಇದರ ಜೊತೆಗೆ ಕನ್ನಡ ಮೋಡಿ ಲಿಪಿಯ ಕಾಗದ ಪತ್ರ ದಾಖಲೆಗಳಲ್ಲಿ ಮತ್ತು ಕಡತಗಳಲ್ಲಿ ಬರುವ ವಿಶಿಷ್ಟ ಪದಗಳ ಕೋಶ ರಚನೆಯೂ ಕೂಡಾ ಜೊತೆಯಲ್ಲಿಯೆ ಆಗಬೇಕಿದೆ.

ರಾಜ್ಯ ಪುರಾತತ್ವ ಇಲಾಖೆ, ಶಾಸನಲಿಪಿ ಮತ್ತು ಹಸ್ತಪ್ರತಿ ಲಿಪಿಗಳ ಕಾರ್ಯಾಗಾರವನ್ನು ಏರ್ಪಡಿಸುತ್ತದೆ. ರಾಜ್ಯ ಪತ್ರಾಗಾರ ಇಲಾಖೆ, ಕನ್ನಡ ಮೋಡಿ ಲಿಪಿಯ ಕಾರ್ಯಾಗಾರವನ್ನು ಏರ್ಪಡಿಸುತ್ತದೆ. ಇಂಥ ಕಾರ್ಯಾಗಾರಗಳ ಅವಧಿ ಕೇವಲ ಮೂರು ದಿನಗಳಷ್ಟೇ. ಇಷ್ಟು ಅಲ್ಪ ಕಾಲಾವಧಿಯಲ್ಲಿ ಯಾವ ವಿಶದವಾದ ಜ್ಞಾನವೂ ಅಭ್ಯರ್ಥಿಗಳಿಗೆ ಲಭ್ಯವಾಗಲು ಸಾಧ್ಯವಿಲ್ಲ. ಇಂಥ ಕಾರ್ಯಾಗಾರಗಳಿಗೆ ಸಂಪನ್ಮೂಲವ್ಯಕ್ತಿಯಾಗಿ ಹೋಗುವವರಲ್ಲಿ ಒಬ್ಬನಾದ ನನಗೆ ಅನ್ನಿಸುವುದೇನೆಂದರೆ,

ಸಾಕಷ್ಟು ಆಸಕ್ತರು ಬರುವ ಇಂಥ ಕಾರ್ಯಾಗಾರಗಳ ಅವಧಿ ಕನಿಷ್ಠ ಒಂದು ವಾರ ಅಥವಾ ಹತ್ತು ದಿನಗಳವರೆಗೆ ವಿಸ್ತರಣೆಯಾಗಬೇಕು. ಇದರ ಜೊತೆಗೆ ಮತ್ತೊಂದು ವಿಷಯವನ್ನೂ ಹೇಳಬೇಕಾಗಿದೆ. ಮೂರು ದಿನಗಳ ಕಾರ್ಯಾಗಾರದಲ್ಲಿ ಶಾಸನಲಿಪಿಯ ಜೊತೆಗೆ ಇತರ ಲಿಪಿಗಳನ್ನು ಅಂದರೆ ಹಸ್ತಪ್ರತಿಲಿಪಿ ಕನ್ನಡ ಮೋಡಿಲಿಪಿ ಇವನ್ನು ಮಿಶ್ರಮಾಡಿದಾಗ ಯಾವುದರ ಬಗ್ಗೆಯೂ ಸರಿಯಾದ ತಿಳುವಳಿಕೆ ಸಿಗದಿರುವುದೂ ಉಂಟು. ಮೂರು ದಿನಗಳ ಇಂಥ ಕಾರ್ಯಾಗಾರಕ್ಕೆ ಈ ರೀತಿ ಬೇರೆ ಬೇರೆ ಲಿಪಿಗಳನ್ನು ಮಿಶ್ರಗೊಳಿಸಬಾರದು ಎಂಬ ಸೂಚನೆಯನ್ನು ನಾನು ಅವರಿಗೆ ಕೊಟ್ಟಾಗ ಅವರು ತಮ್ಮ ಆರ್ಥಿಕ ಸ್ಥಿತಿಯ ಅಸಹಾಯಕತೆಯನ್ನು, ಅವರಿಗೆ ಮೇಲಿನವರು ಮಾಡುವ ಆದೇಶ–ನಿಬಂಧನೆಗಳನ್ನು ತಿಳಿಸಿರುವುದುಂಟು. ಇಂಥ ಆಭಾಸಗಳು ಮುಂದೆ ಆಗಬಾರದು. ಶಾಸ್ತ್ರೀಯ ಕನ್ನಡ ಭಾಷೆಯ ಕೆಲಸಗಳಿಗಾಗಿ ಬಂದ ಕೋಟಿಗಟ್ಟಲೆ ಅನುದಾನದ ಹಣ ಬಳಕೆಯಾಗದೆ ವಾಪಸು ಹೋಗಿರುವ ಸುದ್ದಿಯನ್ನು ನಾವೆಲ್ಲ ಪತ್ರಿಕೆಗಳಲ್ಲಿ ಓದಿದ್ದೇವೆ. ಇಂಥ ಕಾರ್ಯಾಗಾರಗಳಿಗೆ, ಶಾಸನ ಪದಕೋಶ ಮತ್ತು ಕನ್ನಡ ಮೋಡಿಲಿಪಿಯ ಪದಕೋಶ ಮುಂತಾದವುಗಳಿಗೆ, ಅಂಥ ಅನುದಾನದ ಹಣವನ್ನು ಏಕೆ ನೀಡಬಾರದು? ಈ ಬಗ್ಗೆ ಅಕಾದೆಮಿ ಸರ್ಕಾರಕ್ಕೆ ಸಲಹೆ ಕೊಡಬಹುದಲ್ಲವೆ?

ಐತಿಹಾಸಿಕ ಹೆಸರಿನ ಕತೆ ಕಾದಂಬರಿ ನಾಟಕ ಬರೆಯುವ ಲೇಖಕರು ಮತ್ತು ಚಲನಚಿತ್ರ ನಿರ್ದೇಶಕರು ಇತಿಹಾಸದ ವಿಷಯವನ್ನು ಕಚ್ಚಾ ಸಾಮಗ್ರಿಯಂತೆ ಬಳಸಿಕೊಳ್ಳುತ್ತಿರುವುದು ಎಲ್ಲರಿಗೂ ತಿಳಿದ ಸಂಗತಿ. ಜನಸಾಮಾನ್ಯರಿಗೆ ಬಹುಬೇಗ ತಲುಪುವ ಈ ಕಲಾಮಾಧ್ಯಮಗಳು ಇತಿಹಾಸವೆಂದರೆ ಇದೇ ಮತ್ತು ಇಷ್ಟೇ ಎಂದು ಸಾಮಾನ್ಯ ಜನ ನಂಬುವಂತೆ ಮಾಡುತ್ತವೆ. 'ಐತಿಹಾಸಿಕ' ಎನ್ನುವ ಕಾದಂಬರಿಗಳಲ್ಲಿ ಚಲನಚಿತ್ರಗಳಲ್ಲಿ ಇತಿಹಾಸದ ವ್ಯಕ್ತಿಗಳ ಹೆಸರಿನ ಪಾತ್ರಗಳಿರುತ್ತವೆ; ಎಷ್ಟೋ ಸಾರಿ ಮನರಂಜನೆಗಾಗಿ ಕಲ್ಪನೆಯ ರಂಜಕ ಘಟನೆಗಳು ತುಂಬಿ ಅಲ್ಲಿ ಇತಿಹಾಸವೇ ಕ್ಷೀಣವಾಗಿರುತ್ತದೆ. ಇತಿಹಾಸದ ಸ್ಪಷ್ಟಸಂಗತಿಗಳು ಸಿಗದ ಕಡೆ ಲೇಖಕ ಅಥವಾ ನಿರ್ದೇಶಕ ಹಿಂದು ಮುಂದಿನ ಘಟನೆಗಳಿಗೆ ಹೊಂದಿಕೊಳ್ಳುವಂತೆ ಒಂದಷ್ಟು ಕಲ್ಪನೆ ಮಾಡಿಕೊಳ್ಳುವ ಮಟ್ಟಿಗೆ ಅಭಿವ್ಯಕ್ತಿ ಸ್ವಾತಂತ್ರ್ಯದ ಬಳಕೆಯಾಗುವುದು ಸಮಂಜಸ. ಆದ್ದರಿಂದ ಅತಿರೇಕದ ಕಲ್ಪನೆಗೆ ಕಡಿವಾಣ ಬೇಕಲ್ಲವೆ? ಇಂಥ ಕಡಿವಾಣ ಹಾಕುವವರಾರು? ಈ ಪ್ರಶ್ನೆ ಸದಾ ನನ್ನನ್ನು ಕಾಡುತ್ತದೆ. ಇಂಥ ಲೇಖಕರು ಮತ್ತು ನಿರ್ದೇಶಕರು ಈ ಅಂಶವನ್ನು ಗಂಭೀರವಾಗಿ ತೆಗೆದುಕೊಂಡು, ತಾವೇ ಒಂದು ಕಡಿವಾಣ ಹಾಕಿಕೊಂಡು ನಡೆಯುವ ಬದ್ಧತೆಯನ್ನು ತೋರಬೇಕಾಗಿದೆ. ಅವರು ಜವಾಬ್ದಾರಿಯಿಂದ ಹೀಗೆ ಬದ್ಧತೆ ತೋರಬೇಕು; ಹಾಗಾದಾಗ ಚರಿತ್ರೆಯ ಸತ್ಯಾಂಶಗಳಿಗೆ ನೆಲೆ ಸಿಗುತ್ತದೆ, ನ್ಯಾಯ ಸಿಗುತ್ತದೆ ಎಂಬುದು ನನ್ನ ಆಶಯ.

ಸಂಶೋಧಕರು ಇಂದು ಸತ್ಯವನ್ನು ಹೇಳಲು ಭಯಪಡಬೇಕಾದ ಪರಿಸ್ಥಿತಿಯಿದೆ. ಸತ್ಯವನ್ನು ಹೇಳುವವರನ್ನು ಬೆಂಬಲಿಸುವವರೂ ಇದ್ದಾರೆ; ಹಾಗೇ ಬೆಂಬಲಿಸದವರೂ, ಪಲಾಯನ ಮಾಡುವವರೂ ಇದ್ದಾರೆ. ಬೆಂಬಲ ಕೊಡುವವರ ಸಂಖ್ಯೆ ಹೆಚ್ಚಾಗಬೇಕಾಗಿದೆ. ಹಾಗೆ ಸತ್ಯ ಹೇಳುವವರನ್ನು ಅಕಾದೆಮಿಯೂ ಬೆಂಬಲಿಸುವುದು ಅದರ ಬದ್ಧತೆಯಾಗಬೇಕು ಎಂಬುದು ನನ್ನ ಆಶಯ. ಈ ಮೊದಲಿಗೆ ನಾನು ವ್ಯಕ್ತಪಡಿಸಿರುವ ಅಂಶಗಳನ್ನು ತಾವೆಲ್ಲರೂ ಸಾವಧಾನದಿಂದ ಆಲಿಸಿದ್ದೀರಿ ಸೌಹಾರ್ದಯುತವಾದ ಮನಸ್ಸಿನಿಂದ ಸ್ವೀಕರಿಸುತ್ತೀರಿ ಎಂದು ನನ್ನ ನಂಬಿಕೆ. ಅದಕ್ಕಾಗಿ ನಿಮಗೆ ನಾನು ಹಾರ್ದಿಕವಾಗಿ ವಂದಿಸುತ್ತೇನೆ. ನನ್ನ ಈ ಮಾತುಗಳು ನಿಮ್ಮಲ್ಲಿ ವಾಸ್ತವಿಕ ಸ್ಥಿತಿಯನ್ನು ಗ್ರಹಿಸುವಲ್ಲಿ ನಿಮ್ಮನ್ನು ಚಿಂತನೆಗೆ ಹಚ್ಚುವಲ್ಲಿ ಯಶಸ್ವಿಯಾದರೆ ಅವು ಸಾರ್ಥಕವಾದಂತೆ ಎಂದು ಭಾವಿಸುತ್ತೇನೆ.

ನಾನು ಆರಂಭದಲ್ಲೆ ಹೇಳಿರುವಂತೆ ವಿಜ್ಞಾನ ವಿಷಯಗಳ ಪದವಿಧರ, ಸಾಹಿತ್ಯ, ಭಾಷೆಗಳ ಅಧ್ಯಾಪಕ. ನಾನು ಇತಿಹಾಸ ಮತ್ತು ಸಂಶೋಧನೆಯತ್ತ ಹೊರಳಿದ್ದೆ ನನ್ನ ಬದುಕಿನ ಮಹತ್ತ್ವದ ತಿರುವು ಎಂದು ಭಾವಿಸಿದ್ದೇನೆ. ನನಗೆ ನಾನಾ ವಿಧದಲ್ಲಿ ಸ್ಫೂರ್ತಿ ನೀಡಿ ಬೆಳಸಿದ ಹಿರಿಯರ. ದೊಡ್ಡ ಸಂಖ್ಯೆಯೆ ಇದೆ. ಮಹಾಕವಿ ಕುವೆಂಪು, ಪ್ರೊ. ಎಸ್.ವಿ. ಪರಮೇಶ್ವರ ಭಟ್ಟರು, ಡಾ. ಎಚ್.ಜೆ. ಲಕ್ಕಪ್ಪಗೌಡ, ಡಾ. ಬಿ.ಎ. ವಿವೇಕ ರೈ ಇವರೇ ಮೊದಲಾದ ನನ್ನ ಗುರುಗಳು; ಡಾ. ಎಂ. ಚಿದಾನಂದಮೂರ್ತಿ, ಡಾ. ಎಂ.ಎಂ. ಕಲಬುರ್ಗಿ, ಡಾ. ಕೆ.ವಿ. ರಮೇಶ್, ಡಾ. ಶ್ರೀನಿವಾಸ ಹಾವನೂರ, ಡಾ. ಎಂ.ಡಿ. ಸಂಪತ್, ಡಾ. ಎಂ.ವಿ. ಶ್ರೀನಿವಾಸ್, ಶ್ರೀ ಮಾಧವ ಎನ್. ಕಟ್ಟಿ ಇವರೆ ಮೊದಲಾದ ಹಿರಿಯರು ನೀಡಿದ ಪ್ರೀತಿಪೂರ್ವಕ ಪ್ರೋತ್ಸಾಹ ನನ್ನನ್ನು ಬೆಳೆಸಿದೆ. ನನ್ನ ಸಾಹಿತ್ಯ ಮತ್ತು ಸಂಶೋಧನಾ ಚಟುವಟಿಕೆಗಳಿಗೆ ನೀರೆರೆದ ನನ್ನ ಮಿತ್ರರು ಹಲವರು. ದಾವಣಗೆರೆಯ ಸರ್ವಶ್ರೀ ಎಸ್.ಸಿ. ಮಹಾರುದ್ರಪ್ಪ, ಜೆ. ಬಸವರಾಜಪ್ಪ, ಕೆ.ನೇಮಿನಾಥ್, ಎ. ರುದ್ರಪ್ಪ, ಮೈಸೂರಿನ ಡಾ.

ಸಿ.ಪಿ. ನಾಗರಾಜ, ಡಾ. ಆರ್. ಲಕ್ಷ್ಮೀನಾರಾಯಣ, ಡಾ. ಆರ್. ರಾಮಚಂದ್ರ, ಚಿತ್ರದುರ್ಗದ ಪ್ರೊ. ಆರ್.ಎಸ್. ಕಾಂತರಾಜು, ಶ್ರೀ ಟಿ.ಆರ್. ರಾಧಾಕೃಷ್ಣ ಶ್ರೀ ಟಿ.ಎನ್. ಮಂಜಣ್ಣ, ಮುಂತಾದವರನ್ನು ಎದೆ ತುಂಬಿ ನೆನೆಯುತ್ತೇನೆ.

ಇವರುಗಳ ಜೊತೆಗೆ ನಾನು ನೆನೆಯಬೇಕಾದ ಸಂಸ್ಥೆಗಳೂ ಇವೆ. ಕರ್ನಾಟಕ ಇತಿಹಾಸ ಪರಿಷತ್ತು, ಭಾರತೀಯ ಪುರಾಭಿಲೇಖ ಪರಿಷತ್ತು, ಭಾರತ ಸ್ಥಳನಾಮ ಪರಿಷತ್ತು, ಭಾರತ ಪುರಾತನ ವಿಜ್ಞಾನ ಮತ್ತು ಪುರಾತತ್ವ ಪರಿಷತ್ತು, ಇವುಗಳ ಜೊತೆಗೆ ನಮ್ಮ ಕರ್ನಾಟಕ ಇತಿಹಾಸ ಅಕಾದೆಮಿ – ಇವುಗಳೊಂದಿಗಿನ ನನ್ನ ಒಡನಾಟ ಸ್ಮರಣೀಯವಾದದ್ದು. ಈ ಸಂಸ್ಥೆಗಳಲ್ಲಿ ಭಾರತಮಟ್ಟದ ಬೇರೆ ಬೇರೆ ರಾಜ್ಯಗಳ ವಿದ್ವಾಂಸರ ಸಂಪರ್ಕ, ಪರಿಚಯ, ಒಡನಾಟ ನನ್ನನ್ನು ನಾನಾ ರೀತಿಯಲ್ಲಿ ಬೆಳೆಸಿವೆ. ಇವುಗಳಲ್ಲಿ ನಾನು ಕಾರ್ಯಕಾರಿ ಸಮಿತಿಯ ಸದಸ್ಯನಾಗಿದ್ದುದಲ್ಲದೆ, ಕೆಲವು ದತ್ತಿ ಉಪನ್ಯಾಸ ಮತ್ತು ಅಖಿಲ ಭಾರತ ಮಟ್ಟದ ಸರ್ವಾಧ್ಯಕ್ಷತೆ ಇಂತಹ ಗೌರವಗಳು ನನಗೆ ಲಭಿಸಿದ್ದುದನ್ನು ಹಾರ್ದಿಕವಾಗಿ ಇಲ್ಲಿ ನೆನೆಯುತ್ತೇನೆ.

ಇತಿಹಾಸವೆಂಬುದು ಕೇವಲ ಗತಕಥನವಲ್ಲ, ಅದು ನಮ್ಮ ಜೀವನದ ಗತಿಕಥನ ಎಂಬುದನ್ನು ನಾವು ನೆನಪಿನಲ್ಲಿರಿಸಿಕೊಳ್ಳೋಣ; ಸೌಹಾರ್ದದಿಂದ ಹೆಜ್ಜೆ ಹಾಕುತ್ತಾ ಸಾಗೋಣ. ಈ ಸಮ್ಮೇಳನ ಎಲ್ಲ ರೀತಿಯಲ್ಲೂ ಯಶಸ್ವಿಯಾಗಲಿ ಎಂದು ಹಾರೈಸುತ್ತ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಎಲ್ಲರಿಗೂ ಮತ್ತೊಮ್ಮೆ ನಮಸ್ಕಾರ.

## ಡಾ. ಬಿ. ರಾಜಶೇಖರಪ್ಪ – ಒಂದು ಪರಿಚಯಿಕೆ

ಪ್ರಸ್ತುತ ವಿಳಾಸ : ಕನ್ನಡ ಪ್ರಾಧ್ಯಾಪಕರು ಮತ್ತು ಪ್ರಾಂಶುಪಾಲರು (ನಿ) ೨ನೇ ಕ್ರಾಸ್ (ಪಶ್ಚಿಮ), ಜೆ.ಸಿ.ಆರ್. ಬಡಾವಣೆ ಚಿತ್ರದುರ್ಗ – ೫೭೭ ೫೦೧

ಹುಟ್ಟಿದ ದಿನಾಂಕ : ೧೫–೦೬–೧೯೪೭

ಹುಟ್ಟಿದ ಸ್ಥಳ : ಕೊಕ್ಕನೂರು, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ

ತಂದೆ–ತಾಯಿ : ಗುರುಬಸಪ್ಪ, ರುದ್ರವ್ವ

ವಿವಾಹ : ೧೪–೦೫–೧೯೭೫

ಪತ್ನಿ : ಪಿ. ಯಶೋದಾ, ಎಂ.ಎ., ಸಹಪ್ರಾಧ್ಯಾಪಕರು

ಸೇವೆ : ವಿವಿಧ ಸರ್ಕಾರಿ ಪದವಿ ಕಾಲೇಜುಗಳಲ್ಲಿ ೧೯೭೧ ರಿಂದ ೨೦೦೫ರವರೆಗೆ ೩೪ ವರ್ಷ ಕನ್ನಡ ಉಪನ್ಯಾಸಕ, ಪ್ರವಾಚಕ, ಪ್ರಾಧ್ಯಾಪಕ ಮತ್ತು ಪ್ರಾಂಶುಪಾಲರು ಆಗಿ ಸೇವೆ.

ಸೇವೆಯಿಂದ ನಿವೃತ್ತಿ: ೩೦–೦೬–೨೦೦೫

ಪ್ರಕಟಣೆಗಳು :

- ತರಂಗ (ಕವನಸಂಕಲನ)
- ದುರ್ಗಶೋಧನ (ಸಂಶೋಧನ ಪ್ರಬಂಧಗಳ ಸಂಕಲನ)
- ಇತಿಹಾಸ ಕಥನ (ಸಂಶೋಧನ ಪ್ರಬಂಧಗಳ ಸಂಕಲನ)
- ನಿರಂತರ (ಸಂಶೋಧನ ಪ್ರಬಂಧಗಳ ಸಂಕಲನ)
- ಮಹಾಕವಿಯತ್ತ ಎರಡು ಹೆಜ್ಜೆ (ವಿಮರ್ಶನ ಲೇಖನಗಳು)
- ಕರಿಯು ಕನ್ನಡಿಯೊಳಗೆ (ವಿಮರ್ಶನ ಲೇಖನಗಳು)
- ರಗಳೆ ಷಟ್ಪದಿ ಕಾವ್ಯ (ಸಂಪಾದಿತ ಪದವಿ ಪಠ್ಯ ಪುಸ್ತಕ)
- ಕೊಪ್ಪಳದ ಹೆಚ್ಚಿನ ಶಾಸನಗಳು (ಇತರರೊಂದಿಗೆ ಸಂಪಾದಿತ)
- ರಾಷ್ಟ್ರ ನೇತಾರ (ಎಸ್ಸೆನ್ ಕುರಿತ ಸಂಪುಟ, ಇತರರೊಂದಿಗೆ ಸಂಪಾದಿತ)
- ಚಿತ್ರದುರ್ಗ ಪಾಳೆಯಗಾರರ ದಾಖಲೆಗಳು (ಸಂಪಾದಿತ)
- ಹುಲ್ಲೂರು ಶ್ರೀನಿವಾಸ ಜೋಯಿಸರು (ಜೀವನ ಚರಿತ್ರೆ)
- ಶ್ರೀ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠ (ಪರಿಚಯ)
- ಚಿತ್ರದುರ್ಗ ಪ್ರಾಂತ್ಯದ ಐತಿಹಾಸಿಕ ವಿಶ್ವಕರ್ಮ ಪರಂಪರೆ (ಸಂಶೋಧನೆ)
- ದುರ್ಗಸಿರಿ ೧೯೯೮ (ಚಿತ್ರದುರ್ಗ ಜಿಲ್ಲಾ ಉತ್ಸವ ಸ್ಮರಣ ಸಂಚಿಕೆ)
- ದುರ್ಗಸಿರಿ ೨೦೦೬ (ಚಿತ್ರದುರ್ಗ ಜಿಲ್ಲಾ ಉತ್ಸವ ಸ್ಮರಣ ಸಂಚಿಕೆ)

- ಚಿನ್ಮೂಲಾದ್ರಿ (೭೫ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣಸಂಚಿಕೆ, ಸಂಪಾದಿತ)
- ಕೂಡಲಸಂಗಮೇಶ್ವರನ ವಚನಗಳು (ಸಂಕಲನ)
- ಅನ್ವೇಷಣೆ (ಸಂಶೋಧನ ಪ್ರಬಂಧಗಳ ಸಂಕಲನ)
- ಮನದೊಳಗಣ ಬೆಳಗು (ವಿಮರ್ಶೆ ಮತ್ತು ಸಾಹಿತ್ಯ ಚರಿತ್ರೆಯ ಲೇಖನಗಳು)
- ಪ್ರಾಚೀನ ಚಿತ್ರದುರ್ಗ (ಪಿಎಚ್.ಡಿ ಸಂಶೋಧನ ಮಹಾಪ್ರಬಂಧ)
- ಹೊಸಶೋಧ (ಸಂಶೋಧನ ಪ್ರಬಂಧಗಳ ಸಂಕಲನ)
- ಹುಲ್ಲೂರು ಶ್ರೀನಿವಾಸ ಜೋಯಿಸರ 'ಕರಿಭಂಟ' (ಸಂಪಾದಿತ)

ಸಂಪ್ರಬಂಧ ಮಂಡನೆ : ತಿರುಪತಿ, ನಾಗರ್ಜುನ ನಗರ, ತಂಜಾವೂರು, ಸೇಲಂ, ಪಣಜಿ, ಬರೋಡ, ಅಲಹಾಬಾದ್, ಕಟಕ್, ರಾಯ್‌ಪುರ್, ಕಲ್ಯಾಣ್, ಕುಟ್ರಾಳಂ – ವಿವಿಧ ಸಮ್ಮೇಳನಗಳಲ್ಲಿ ವಿಚಾರಸಂಕಿರಣಗಳಲ್ಲಿ ಸುಮಾರು ೨೦೦ಕ್ಕೂ ಹೆಚ್ಚು ಸಂಪ್ರಬಂಧ ಮಂಡನೆ, ವಿಶೇಷ ಉಪನ್ಯಾಸಗಳು.

ಪಿಎಚ್.ಡಿ ಮಹಾಪ್ರಬಂಧ: ಪ್ರಾಚೀನ ಚಿತ್ರದುರ್ಗ (ಮಾರ್ಗದರ್ಶಕರು : ಡಾ. ಎಂ.ಎಂ. ಕಲಬುರ್ಗಿ)

ಸಂಪಾದಕತ್ವ : ಸತ್ಯಶುದ್ಧ ಕಾಯಕ (ತ್ರೈಮಾಸಿಕ) ೧೯೯೦ ರಿಂದ ೧೯೯೮ ರವರೆಗೆ

ಪ್ರಸ್ತುತದಲ್ಲಿ : ಹಳೆಯ ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಯಲ್ಲಿ ಸುಮಾರು ೬೦೦ ಅಪ್ರಕಟಿತ ಶಾಸನಗಳ ಪತ್ತೆ

- ಚಿತ್ರದುರ್ಗ ಜಿಲ್ಲೆಯ ಶಾಸನ ಸಂಪುಟದ ಸಿದ್ಧತೆ (ಮೈಸೂರು ವಿ.ವಿ.)
- ಚಿತ್ರದುರ್ಗ ಜಿಲ್ಲೆಯ ಐತಿಹಾಸಿಕ ಸಂಪುಟದ ಸಿದ್ಧತೆ
- ಹಳ್ಳಿ ಹಾಡ ಹೊನಲು – ಹರಿಹರ ತಾಲ್ಲೂಕಿನ ಜನಪದಗೀತೆಗಳ ಸಂಪುಟದ ಸಿದ್ಧತೆ
- ಚಿತ್ರದುರ್ಗ ಬೃಹನ್ಮಠದ ಐತಿಹಾಸಿಕ ಕಾಗದ ಪತ್ರಗಳು–ಸಂಪುಟ ೧ರ ಸಿದ್ಧತೆ
- ಸಿಂಧುರಾಜ (ಷೇಕ್ಸ್‌ಪಿಯರ್ ಮಹಾಕವಿಯ 'ಕಿಂಗ್ ಲಿಯರ್' ನಾಟಕದ ರೂಪಾಂತರ – ಸರಳ ರಗಳೆಯಲ್ಲಿ)

ಪ್ರಶಸ್ತಿ / ಪುರಸ್ಕಾರಗಳು :

- ೧೯೭೯ರಲ್ಲಿ ರಾಷ್ಟ್ರಕವಿ ಎಂ. ಗೋವಿಂದ ಪೈ ಸ್ಮಾರಕ ಅಖಿಲ ಕರ್ನಾಟಕ ಕನ್ನಡ ಕವಿತಾ ಸ್ಪರ್ಧೆಯಲ್ಲಿ ದ್ವಿತೀಯ ಬಹುಮಾನ – ಬೆಳ್ಳಿಪದಕ
- ೨೦೦೧ರ ಅತ್ಯುತ್ತಮ ಸಂಶೋಧನ ಕೃತಿ ಎಂದು 'ಇತಿಹಾಸ ಕಥನ'ಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ
- ೨೦೦೪ರಲ್ಲಿ ನಡೆದ ಹರಿಹರ ತಾಲ್ಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ
- ೨೦೦೪ರಲ್ಲಿ ಶಾಸನ ಸಂಶೋಧನೆಯ ಸಾಧನೆ ಮತ್ತು ಕೊಡುಗೆಗಾಗಿ ಕರ್ನಾಟಕ ಇತಿಹಾಸ ಅಕಾಡೆಮಿಯ 'ಡಾ.ಬಾ.ರಾ. ಗೋಪಾಲ್ ಪ್ರಶಸ್ತಿ'
- ೨೦೦೫ರಲ್ಲಿ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಗಳ ಇಲಾಖೆ ನಡೆಸಿದ 'ವಿಜಯನಗರ ಇತಿಹಾಸ ಸಮ್ಮೇಳನ'ದ ಸರ್ವಾಧ್ಯಕ್ಷತೆ
- ೨೦೦೬ರಲ್ಲಿ ಚನ್ನಗಿರಿಯ ಶ್ರೀ ಪಾರ್ಶ್ವನಾಥ ಶಿಕ್ಷಣ ಸಂಸ್ಥೆಯ 'ವೈ.ವಿ. ಪಾರ್ಶ್ವನಾಥ ಪ್ರಶಸ್ತಿ'
- ೨೦೦೬ರಲ್ಲಿ ಚಿತ್ರದುರ್ಗದ ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದಿಂದ 'ತಾಮ್ರಪತ್ರ ಪ್ರಶಸ್ತಿ'

- ೨೦೧೦ರಲ್ಲಿ ದಾವಣಗೆರೆ ಜಿಲ್ಲಾ ಕಸಾಪದಿಂದ 'ಮಹಲಿಂಗರಂಗ ಪ್ರಶಸ್ತಿ'
- ೨೦೧೧ರಲ್ಲಿ ಬೆಂಗಳೂರಿನಲ್ಲಿ ನಡೆದ ೭೭ನೆಯ ಅಖಿಲ ಭಾರತದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ
- ೨೦೧೩ರಲ್ಲಿ ಶಿವಯೋಗ ಮಂದಿರದಿಂದ ಹಸ್ತಪ್ರತಿ ಗ್ರಂಥಸಂಪಾದನೆ ಇತ್ಯಾದಿಗೆ 'ಕುಮಾರಶ್ರೀ' ಪ್ರಶಸ್ತಿ
- ೨೦೧೩ರಲ್ಲಿ, ಒರಿಸ್ಸಾ ರಾಜ್ಯದ ಕಟಕ್ ನಗರದಲ್ಲಿ ನಡೆದ PLACE NAMES SOCIETY OF INDIAದ ೩೩ನೇ ವಾರ್ಷಿಕ ಸಮ್ಮೇಳನದ ಸರ್ವಾಧ್ಯಕ್ಷತೆ
- ೨೦೧೪ರಲ್ಲಿ ಚಿತ್ರದುರ್ಗದ ಸಾಟಿ ಚನ್ನಮ್ಮ ಹಾಲಪ್ಪ ಸಾಂಸ್ಕೃತಿಕ ಪ್ರತಿಷ್ಠಾನದಿಂದ ಅಭಿನಂದನೆ – ಪ್ರಶಸ್ತಿ ಫಲಕ
- ೨೦೧೪ರಲ್ಲಿ ಬಿಜಾಪುರದಲ್ಲಿ ಶರಣ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ
- ೨೦೧೪ರಲ್ಲಿ ಶಹಾಪುರದಲ್ಲಿ ನಡೆದ ಹಂಡವಜೀರ ಲಿಂಗಾಯತ ಮಹಾ ಸಮ್ಮೇಳನದಲ್ಲಿ 'ರಾಷ್ಟ್ರೀಯ ಹಂಡೆಶ್ರೀ' ಪ್ರಶಸ್ತಿ
- ೨೦೧೪ರಲ್ಲಿ ಬಿಜಾಪುರದಲ್ಲಿ ಶರಣ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ
- ೨೦೧೫ರ ಜನವರಿಯಲ್ಲಿ ಹಿರಿಯೂರಿನಲ್ಲಿ ನಡೆದ ಚಿತ್ರದುರ್ಗ ಜಿಲ್ಲಾ ೧೨ನೆಯ ದಾವಣಗೆರೆ ತಾಲೂಕು ಶ್ಯಾಗಲಿಯಲ್ಲಿ "ಕುವೆಂಪು ನುಡಿಜಾತ್ರೆ"ಯ ಸರ್ವಾಧ್ಯಕ್ಷತೆ
- ೨೦೧೬ರಲ್ಲಿ ಚಿತ್ರದುರ್ಗದ ಶ್ರೀ ಜಗದ್ಗುರುಮುರುಘರಾಜೇಂದ್ರ ಬೃಹನ್ಮಠದಿಂದ 'ಮುರುಘಾಶ್ರೀ' ಪ್ರಶಸ್ತಿ

ಪ್ರಮುಖ ಸಂಶೋಧನೆಗಳು:

- ೧೯೭೯ರಿಂದ ಪ್ರಾಕೃತ ಭಾಷೆಯದೆಂದು ತಿಳಿಯಲಾಗಿದ್ದ ಚಂದ್ರವಳ್ಳಿಯ ಕದಂಬ ಮಯೂರವರ್ಮನ ಶಾಸನ ಸಂಸ್ಕೃತ ಭಾಷೆಯುದೆಂದು ೧೯೮೪ರಲ್ಲಿ ಮರುಪರಿಶೀಲನೆಯಿಂದ ತೋರಿಸಿಕೊಟ್ಟದ್ದು– ಅದರಿಂದ ಕದಂಬರ ಇತಿಹಾಸ ಬದಲಾದದ್ದು
- ಕರ್ನಾಟಕ ರಾಜ್ಯದಲ್ಲೇ ಅತ್ಯಂತ ಪುರಾತನವಾದ ವಟ್ಟೆಳುತ್ತೆ ಲಿಪಿಯ ತಮಿಳು ಶಾಸನದ ಶೋಧನೆ (ಕ್ರಿ.ಶ. ೬ನೇ ಶತಮಾನ)
- ಕರ್ನಾಟಕದಲ್ಲೇ ಅತ್ಯಂತ ಪುರಾತನವಾದ ವರ್ಣಶಾಸನದ ಶೋಧನೆ (ಕ್ರಿ.ಶ. ೫ನೇ ಶತಮಾನ)
- ಕೂಡಲಸಂಗಮೇಶ್ವರ ಎಂಬ ಹೊಸ ವಚನಕಾರನ ವಚನಗಳ ಪತ್ತೆ

ಸದಸ್ಯತ್ವ / ಪದಾಧಿಕಾರ

- ಮಾಜಿ ಕಾರ್ಯದರ್ಶಿ, ಚಿತ್ರದುರ್ಗ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು
- ಉಪಾಧ್ಯಕ್ಷ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು
- ಕಾರ್ಯಕಾರಿ ಸಮಿತಿ ಮಾಜಿ ಸದಸ್ಯ, ಕರ್ನಾಟಕ ಹಿಸ್ಟರಿ ಕಾಂಗ್ರೆಸ್, ಮೈಸೂರು
- ಕಾರ್ಯಕಾರಿ ಸಮಿತಿ ಮಾಜಿ ಸದಸ್ಯ, ಪ್ಲೇಸ್‌ನೇಮ್ಸ್ ಸೊಸೈಟಿ ಆಫ್ ಇಂಡಿಯ, ಮೈಸೂರು
- ಸದಸ್ಯ. ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯ, ಮೈಸೂರು
- ಸದಸ್ಯ, ಏನ್ಷಿಯಂಟ್ ಸೈನ್ಸಸ್ ಅಂಡ್ ಆರ್ಕಿಯಲಾಜಿಕಲ್ ಸೊಸೈಟಿ ಆಫ್ ಇಂಡಿಯಾ,

ಮೈಸೂರು

- ಸದಸ್ಯ, ದಿ ಮಿಥಿಕ್ ಸೊಸೈಟಿ
- ಸದಸ್ಯ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು
- ಅಧ್ಯಕ್ಷ, ಸಾಟಿ ಚನ್ನಮ್ಮ ಹಾಲಪ್ಪ ಸಾಂಸ್ಕೃತಿಕ ಪ್ರತಿಷ್ಠಾನ, ಚಿತ್ರದುರ್ಗ
- ಜಿಲ್ಲಾ ಹಸ್ತಪ್ರತಿ ಸಂಯೋಜಕ (ಕೇಂದ್ರ ಸರ್ಕಾರದ ಯೋಜನೆ)
- ವಿಷಯ-ಪರಿಶೀಲಕ, ಕರ್ನಾಟಕ ಜಾನಪದ ವಿಶ್ವವಿದ್ಯಾಲಯದ 'ಗ್ರಾಮಚರಿತ್ರ ಕೋಶ' ಯೋಜನೆ

ಸಂಪನ್ಮೂಲ ವ್ಯಕ್ತಿ:

- ಕನ್ನಡ ಶಾಸನಲಿಪಿ ತರಬೇತಿ
- ಹಸ್ತಪ್ರತಿಶಾಸ್ತ್ರ ತರಬೇತಿ
- ಕನ್ನಡ ಭಾಷೆ, ವ್ಯಾಕರಣ, ಕಾವ್ಯ-ಕಮ್ಮಟಗಳು

ಇತರ ಚಟುವಟಿಕೆಗಳು:

- ಗಮಕ ವಾಚನಕ್ಕೆ ವ್ಯಾಖ್ಯಾನಕಾರ ಅಷ್ಟಾವಧಾನ ಕಾರ್ಯಕ್ರಮದಲ್ಲಿ ಒಬ್ಬ ಪೃಚ್ಛಕ
- ದೇವಾಲಯಗಳ ಜೀರ್ಣೋದ್ಧಾರ ವಿಷಯದಲ್ಲಿ ಸಲಹೆಗಾರ

* * *



# ಚಾಲುಕ್ಯ ಪೂರ್ವ ಬಾದಾಮಿ: ಪುರಾತತ್ವ ಹಿನ್ನೋಟ

ಆರ್. ಮೋಹನ*

**ಬಾ**ದಾಮಿ ಎಂದ ತಕ್ಷಣ ನಮ್ಮ ಸ್ಮೃತಿಪಟದಲ್ಲಿ ಹಾದು ಹೋಗುವುದು ಮಲಪ್ರಭಾ ಎಡ ದಂಡೆಯ ಮೇಲಿರುವ ಗುಹಾಂತರ ದೇವಾಲಯಗಳು,ಪುರಾತತ್ವ ವಸ್ತು ಸಂಗ್ರಹಾಲಯ ಹಾಗೂ ಇದರ ಸುತ್ತಮುತ್ತಲಿರುವ ಬನಶಂಕರಿ ದೇವಾಲಯ, ಶಿವಯೋಗ ಮಂದಿರ, ಮಹಾಕೂಟ, ವಿಶ್ವ ಪಾರಂಪರಿಕ ತಾಣವಾದ ಪಟ್ಟದಕಲ್ಲು, ಮಲಪ್ರಭಾ ಬಲ ದಂಡೆಯ ಮೇಲಿರುವ ದೇವಾಲಯಗಳ ತೊಟ್ಟಿಲೆಂದು ಖ್ಯಾತಿ ಪಡೆದಿರುವ ಐಹೊಳೆ. ಆದರೆ ಬಾದಾಮಿ ಮತ್ತು ಅದರ ಪರಿಸರದ ಇತಿಹಾಸ ಶಿಲಾಯುಗದಿಂದಲೇ ಆರಂಭವಾಗುತ್ತದೆ.

ಸಾಮಾನ್ಯವಾಗಿ ಒಂದು ಜಿಲ್ಲೆ ಅಥವಾ ತಾಲ್ಲೂಕಿನಲ್ಲಿ ಕಂಡುಬರುವ ಪ್ರಾಕ್ತನ ಮತ್ತು ಕೆಲವು ಇತಿಹಾಸ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಇತ್ತೀಚೆಗೆ ಬಹುತೇಕ ಸಂಶೋಧಕರು ಅಧ್ಯಯನ ನಡೆಸುತ್ತಾರೆ. ಈ ಎಲ್ಲ ಮೇರೆಗಳು ಆಡಳಿತ ದೃಷ್ಟಿಯಿಂದ ನಿರ್ಮಿಸಿಕೊಂಡ ಬೇಲಿಗಳು. ಇಂತಹ ಅಧ್ಯಯನದಪ್ರದೇಶದಾಚೆಯ ಸಮಕಾಲೀನ ಪುರಾತತ್ವ ಮತ್ತು ಇತಿಹಾಸದ ಆಧಾರಗಳು ದೊರೆತರೂಅವುಗಳನ್ನು ಪರಿಗಣಿಸುವುದಿಲ್ಲ. ಈ ಸಂಪ್ರದಾಯಗಳು ಇತಿಹಾಸ ಪುನರ್ ರಚನೆಯಲ್ಲಿ ಮುಖ್ಯವಾಗಿ ಕಂಡುಬರುತ್ತಿರುವ ಸಮಸ್ಯೆಯಾಗಿವೆ. ಇದರ ಬದಲಾಗಿ ಪುರಾತತ್ವ ಅಧ್ಯಯನದಲ್ಲಿ ನದಿ ತೀರ, ಪರಿಸರ ಮತ್ತು ಭೌಗೋಳಿಕ ಅಂಶಗಳನ್ನು ಗಮನದಲ್ಲಿರಿಸಿ ನಮ್ಮ ಪೂರ್ವ ಸಂಸ್ಕೃತಿಯನ್ನು ಅರ್ಥೈಸಿಕೊಳ್ಳುವುದು ಹೆಚ್ಚು ಸೂಕ್ತ. ಇತಿಹಾಸ ಕಾಲಘಟ್ಟದಲ್ಲಿ ಪ್ರಮುಖವಾಗಿ ಒಂದು ಪ್ರಾಂತ್ಯ ಅಥವಾ ಆ ವಸ್ತು ವಿಷಯದ ಆಡಳಿತ ಮೇರೆಯನ್ನು ಗಮನಿಸಬೇಕೆ ಹೊರತು ಇಂದಿನ ಆಡಳಿತ ಮೇರೆಯನ್ನಲ್ಲವೆಂಬುದನ್ನು ವಿಷಯ ವಸ್ತುವಾಗಿಸಿಕೊಂಡು ಲೇಖಕರು ಪ್ರಸ್ತುತ ಲೇಖನದಲ್ಲಿ ಪ್ರಸ್ತುತಪಡಿಸುತಿದ್ದಾರೆ. ಈ ಲೇಖನದ ಶೀರ್ಷಿಕೆಯು ಬಾದಾಮಿ ಪರಿಸರಕ್ಕೆ ಸೀಮಿತವಾದರೂ ಮಹಾಕೂಟ, ಪಟ್ಟದಕಲ್ಲು ಮತ್ತು ಐಹೊಳೆಗಳ ಸಂಶೋಧನೆಗಳನ್ನೊಳಗೊಂಡು ಹೆಚ್ಚು ವಿಶಾಲತೆಯನ್ನು ಪಡೆದುಕೊಂಡಿದೆ.

**ಪೂರ್ವ ಸಂಶೋಧನೆಗಳು:** ಬಾದಾಮಿ ಮತ್ತು ಅದರ ಪರಿಸರದ ಪ್ರದೇಶವು ಶಿಲಾಯುಗದಿಂದ ಚಾಲುಕ್ಯರ ಕಾಲದವರೆಗಿನ ಮನುಕುಲ ಸಂಸ್ಕೃತಿಯ ತಾಣವಾಗಿದೆ. ಇಲ್ಲಿಯ ಗುಡ್ಡಗಾಡು ಪ್ರದೇಶದಲ್ಲಿನ ಸಮತಟ್ಟಿನ ಸ್ಥಳಗಳು ಪ್ರಾಗಿತಿಹಾಸ ಜನಸಮುದಾಯಗಳ ವಸತಿ, ಪ್ರಕೃತಿದತ್ತವಾದ ಆಹಾರ ಸಂಪಾದನೆಗೆ, ಕೃಷಿ ಹಾಗೂ ಪಶುಸಂಗೋಪನೆ, ಲೋಹ ತಂತ್ರಗಾರಿಕೆ ಮೊದಲಾದ ಕಸುಬುಗಳಿಗೆ ತುಂಬ ಅನುಕೂಲಕರವಾಗಿತ್ತು. ಕ್ವಾರ್ಟ್‌ಜೈಟ್ ಮಲಪ್ರಭಾ ಮತ್ತು ಘಟ್ಟಪ್ರಭಾ ನದಿ ತೀರಗಳಲ್ಲಿ ವಿಸ್ತಾರವಾಗಿ ಹಬ್ಬಿಕೊಂಡಿದ್ದು, ಅವು ಕಲಾದಗಿ ಶಿಲಾವರ್ಗಕ್ಕೆ ಸೇರಿವೆ.

'ಭಾರತೀಯ ಪ್ರಾಗಿತಿಹಾಸ ಪಿತಾಮಹಾ' ಎಂದೇ ಚಿರಪರಿತರಾಗಿರುವ ರಾಬರ್ಟ್ ಬ್ರೂಸ್ ಫೂಟ್[೧] ೧೮೬೩ರಲ್ಲಿ ಬಾದಮಿ ಸಮೀಪ ಮಲಪ್ರಭಾ ನದಿ ತೀರದಲ್ಲಿರುವ ಥಾಣಕ ಶಿರೂರ, ಖ್ಯಾದ ಹಾಗೂ ಮೆಣಸಗಿ (ಮೆಗೂರ-ಅಸೊಟಿ)ಗಳಲ್ಲಿ ಆದಿ ಹಳೆಶಿಲಾಯಗದ ಶಿಲೋಪಕರಣಗಳನ್ನು ಶೋಧಿಸಿ ಈ ಪ್ರದೇಶದ ಪ್ರಾಗಿತಿಹಾಸ ಅಧ್ಯಯನಕ್ಕೆ ನಾಂದಿಯನ್ನು ಹಾಡಿದರು.

ನಂತರ ಪುಣೆಯಡೆಕ್ಕನ್ ಕಾಲೇಜಿನ ಅನೇಕ ಸಂಶೋಧನೆಗಳು ಈ ಭೂಪ್ರದೇಶದಲ್ಲಿ ನಡೆದಿದ್ದು, ಪ್ರಮುಖವಾಗಿ ಕೃಷ್ಣಾ ಮತ್ತು ಅದರ ಉಪನದಿಗಳಾದ ಮಲಪ್ರಭಾ ಮತ್ತು ಘಟಪ್ರಭಾ ತೀರದ ಅಧ್ಯಯನದ ಪಿಎಚ್.ಡಿ ಮಹಾಪ್ರಬಂಧಗಳು ಭಾರತೀಯ ಉಪಖಂಡದ ಮೇಲೆ ತಮ್ಮದೇ ಛಾಪನ್ನು ಮೂಡಿಸಿವೆ. ಜೋಶಿ[೨] ಮಲಪ್ರಭಾ ನದಿಪಾತ್ರ ಮತ್ತು ಪಪ್ಪು[೩] ಕೃಷ್ಣಾ ನದಿಪಾತ್ರದ ಪ್ರದೇಶಗಳಲ್ಲಿ ಅನೇಕ ಪ್ರಾಗೈತಿಹಾಸಿಕ. ನೆಲೆಗಳನ್ನು ಶೋಧಿಸಿ ಅವುಗಳ ಭೂರಚನಾಶಾಸ್ತ್ರ (Geomorphology) ಚರ್ಚಿಸಿದ್ದಾರೆ. ಈ ಸಂಶೋಧನೆಗಳು ಕರ್ನಾಟಕ ಪುರಾತಾತ್ವಿಕ ಅಧ್ಯಯನಕ್ಕೆ ಒಂದು ಹೊಸ ಆಯಾಮವನ್ನು ಒದಗಿಸಿಕೊಟ್ಟಿವೆ. ಹಾಗೆಯೇ ಪಪ್ಪು ಮತ್ತು ಸುಷ್ಮಾ ದೇವ್[೪] ಕಲಾದಗಿ ಜಲಾನಯನ ಪ್ರದೇಶದ ಮಲಪ್ರಭಾ ಮತ್ತು ಘಟಪ್ರಭಾ ನದಿ ತೀರಗಳಲ್ಲಿ ಕ್ರಮವಾಗಿ ೮೦ ಮತ್ತು ೧೧೯ ಪ್ರಾಗಿತಿಹಾಸ ನೆಲೆಗಳ ಚಿತ್ರಣವನ್ನು ನೀಡಿದ್ದಾರೆ. ಸುಂದರರವರು ಬೃಹತ್‌ಶಿಲಾ

* ಡಾ. ಸರ್ವೇಪಲ್ಲಿ ರಾಧಾಕೃಷ್ಣನ್ ಪೋಸ್ಟ್ ಡಾಕ್ಟರಲ್ ಫೆಲೋ, ಡೆಕ್ಕನ್ ಕಾಲೇಜ್, ಸ್ವಾಯತ್ತ ವಿಶ್ವವಿದ್ಯಾನಿಲಯ, ಪುಣೆ, ಮೊ. ೯೯೮೦೭೭೪೭೧೭

ಸಂಸ್ಕೃತಿಯ ನೆಲೆಗಳನ್ನು ಉತ್ತರ ಕರ್ನಾಟಕ ಅದರಲ್ಲೂ ಮಲಪ್ರಭಾ ನದಿ ತೀರದ ಪ್ರದೇಶವನ್ನು ಮುಖ್ಯ ಭೂಮಿಕೆಯಾಗಿಟ್ಟುಕೊಂಡು ನಡೆಸಿದ ಸಂಶೋಧನೆಗಳು ನಿಜಕ್ಕೂ ಗಮನಾರ್ಹ.[೫] ಇವರು ಬೃಹತಶಿಲಾ ಸಂಸ್ಕೃತಿಯ ಅನೇಕ ನೆಲೆಗಳನ್ನು ಹಾಗೂ ವಿವಿಧ ಮಾದರಿಯ ಸಮಾಧಿಗಳನ್ನು ಬೆಳಕಿಗೆ ತಂದಿದ್ದಲ್ಲದೇ ಈ ಸಂಸ್ಕೃತಿಯ ಅಧ್ಯಯನಕ್ಕೆ ಹೊಸ ರೂಪು-ರೇಷೆಯನ್ನು ಕೊಟ್ಟಿದ್ದಾರೆ. ೧೯೮೦ರ ದಶಕದಲ್ಲಿ ನ್ಯುಮೇಯರ[೬]ಮಲಪ್ರಭಾ ನದಿ ತೀರದಲ್ಲಿಯ ಪ್ರಾಗಿತಿಹಾಸ ಕಲೆಯನ್ನು ವಿಮರ್ಶಿಸಿದ್ದಾರೆ. ಇವಲ್ಲದೇ, ವಿವಿಧ ಸಂಶೋಧನೆಯ ಅನೇಕ ಗ್ರಂಥಮತ್ತು ಲೇಖನಗಳನ್ನು ಅನೇಕ ವಿದ್ವಾಂಸರು ಪ್ರಕಟಿಸಿದ್ದಾರೆ.[೭]

ಕರ್ನಾಟಕದಲ್ಲಿಯೇ ಅತ್ಯಂತ ವಿಶೇಷ ಕಲ್ಲಾಸರೆಯೆಂದೆ ಪ್ರಸಿದ್ಧವಾಗಿರುವ ಸಿಡ್ಲ ಫಡಿಯನ್ನು ೧೯೫೫ರಲ್ಲಿ ಶೋಧಿಸಿದ ಮಾಳ್ವಾಡ ಮತ್ತು ಸಂಕಾಲಿಯಾ[೮] ಈ ಕಲ್ಲಾಸರೆಯಲ್ಲಿ ಶಿಲಾಯುಗದಿಂದ ಹಿಡಿದು ಚಾಲುಕ್ಯ ಕಾಲದವರೆಗಿನ ಪ್ರಾಚ್ಯಾವಶೇಷಗಳನ್ನು ಬೆಳಕಿಗೆ ತಂದರು. ಈ ಕಲ್ಲಾಸರೆಯು ಕಾಮಾನಿನ ರೀತಿ ನೈಸರ್ಗಿಕವಾಗಿ ನಿರ್ಮಾಣಗೊಂಡಿದ್ದು, ಕಲ್ಲಾಸರೆಗೆ ಸಿಡಿಲು ಬಡಿದಿದ್ದುದರ ಪರಿಣಾಮ ಇದರ ಛಾವಣಿಯು ಸ್ವಲ್ಪ ಕುಸಿದಿದೆ. ಆದ್ದರಿಂದ ಸ್ಥಳೀಯವಾಗಿ ಈ ಕಲ್ಲಾಸರೆಯನ್ನು ಸಿಡ್ಲ ಫಡಿಯೆಂದೇ ಕರೆಯುವರು. ಈ ಕಲ್ಲಾಸರೆಯ ಎರಡು ಬದಿಯಲ್ಲಿ ವರ್ಣಚಿತ್ರಗಳಿದ್ದು, ಅದರಲ್ಲಿ ಬಿಳಿವರ್ಣದಲ್ಲಿನ ಗೂಳಿಯ ಚಿತ್ರ ವಿಶೇಷವಾಗಿದೆ, ಕಲ್ಲಾಸರೆಯೊಳಗಿರುವ ಕಲ್ಲುಗುಂಡುಗಳ ಮೇಲೆ ಕಲ್ಲುಳಿಗಳನ್ನು ಕಾಣಬಹುದು. ಅದರಂತೆಯೇ ಬಾದಾಮಿಯ ಕಪ್ಪೆ ಆರ್ಯಭಟ್ಟ ಶಾಸನದ ಒಂದು ತುಣುಕು ಇಲ್ಲಿದೆ.



ಸಿಡ್ಲ ಫಡಿ: ಗೂಳಿಯ ವರ್ಣಚಿತ್ರ

ಪ್ರಸ್ತುತ ಲೇಖಕರು ೨೦೧೨-೧೫ರ ಅವಧಿಯಲ್ಲಿ ಮಲಪ್ರಭಾ ತೀರದಕುಟಕನಕೇರಿ-ಬಾದಾಮಿ-ಐಹೊಳೆ ಮುಖ್ಯ ವಾಹಿನಿಯಾಗಿಟ್ಟುಕೊಂಡು ನಡೆಸಿದ ಸಂಶೋಧನೆಯಲ್ಲಿ ಪ್ರಾಗಿತಿಹಾಸ ಕಾಲಕ್ಕೆ ಸೇರಿದ ೩೨ ನೆಲೆಗಳನ್ನು ಗುರುತಿಸುವ ಜೊತೆಗೆ ಅವುಗಳ ರಚನೆ ಮತ್ತು ವಿಶ್ಲೇಷಣೆಯ ಸಂಪೂರ್ಣ ಚಿತ್ರಣವನ್ನು ನೀಡಿದ್ದಾರೆ.[೯] ಈ ಪ್ರದೇಶ ದಕ್ಷಿಣ ಭಾರತದಲ್ಲಿ ವಿಶೇಷವಾಗಿ ಪ್ರಾಗಿತಿಹಾಸ ಕಾಲದ ಬಂಡೆಚಿತ್ರಗಳ ಮಹಾ ಆಗರ. ಈ ನದಿ ತೀರದ ವರ್ಣಕಲೆಯು ಭೀಂಬೇಟ್ಕ (ವಿಶ್ವಪಾರಂಪರಿಕ ಬಂಡೆಚಿತ್ರ ತಾಣ, ಮಧ್ಯ ಪ್ರದೇಶ) ಪ್ರದೇಶಕ್ಕಿಂತ ಪಾಚೀನವಾದ ಬಂಡೆಚಿತ್ರಗಳನ್ನೊಳಗೊಂಡಿದೆ ಎಂಬುದನ್ನುಲೇಖಕರು ಧೃಡಪಡಿಸಿದ್ದಾರೆ. ಅಲ್ಲದೇ ಈ ನದಿ ತೀರದುದ್ದಕ್ಕೂ ಆದಿ ಮಾನವನ ಕೆಲವೊಂದು ಕುರುಹುಗಳ ಗಮನಿಸಿ ಅವುಗಳ ಮಹತ್ವವನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

**ಬಾದಾಮಿ ಮತ್ತು ಸಂಸ್ಕೃತಿ**: ಬಾದಾಮಿ ಪ್ರದೇಶದಲ್ಲಿ ಬ್ರೂಸ್ ಫುಟ್ (೧೮೭೬) ಅವರಿಂದ ಹಿಡಿದು ಇತ್ತೀಚಿನವರೆಗಿನ ಅಧ್ಯಯನಗಳ ಆಧಾರಗಳ ಮೇಲೆ ವಿವಿಧ ಸಾಂಸ್ಕೃತಿಕ ಕಾಲಘಟ್ಟಗಳನ್ನು ಗುರುತಿಸಿ ಈ ಕೆಳಗಿನಂತೆ ವಿಂಗಡಿಸಲಾಗಿದೆ.

**ಆದಿ ಹಳೇಶಿಲಾಯುಗ (Lower Palaeolithic)**: ಹಳೇ ಆದಿ ಶಿಲಾಯುಗ ಸಂಸ್ಕೃತಿಯ ಬಾದಾಮಿ-ಪಟ್ಟದಕಲ್ಲ-ಐಹೊಳೆ ಪರಿಸರದ ಮಲಪ್ರಭಾ ತಿರದಲ್ಲಿಯ ಬಾದಾಮಿ, ಥಾಣಕ ಶಿರೂರ, ಖ್ಯಾದ, ಕೆಂಡೂರ, ನಂದಿಕೇಶ್ವರ, ಪಟ್ಟದಕಲ್ಲ, ಬಾಚನಗುಡ್ಡ, ಐಹೊಳೆ ಹಾಗೂ ಹೀರೆಮೂಲಂಗಿ, ಆಲೂರ, ಮೆಣಸಗಿ (ಮೆಗೂರ-ಅಸೊಟಿ), ತಮ್ಮಿನಹಾಳಮನೇರಿ, ಇತ್ಯಾದಿ ನೆಲೆಗಳು ಅತ್ಯಂತ ಪ್ರಮುಖವಾಗಿವೆ.[೧೦]ಕಲ್ಲಿನ ಆಯುಧ-ಉಪಕರಣಗಳಲ್ಲಿ ಮಚ್ಚುಗತಿ (Chopper/Chopping), ಕೈಗೊಡಲಿಗಳು (Handaxe) ಮತ್ತು ಸೀಳುಗತ್ತಿ (Cleavers) ಪ್ರಮುಖವಾಗಿವೆ.

**ಮಧ್ಯ ಹಳೇಶಿಲಾಯುಗ (Middle Palaeolithic)**: ಹಳೇ ಮಧ್ಯ ಶಿಲಾಯುಗ ಸಂಸ್ಕೃತಿಯ ಸಾಕಷ್ಟು ನೆಲೆಗಳನ್ನುಜೋಶಿ[೧೧] ಮತ್ತು ಪಪ್ಪು[೧೨] ರವರು ಕ್ರಮವಾಗಿ ಮಲಪ್ರಭಾ (ತಮ್ಮಿನಹಾಳ ಮತ್ತು ಬಾದಾಮಿ) ಮತ್ತು ಘಟಪ್ರಭಾ (ಬಾಗಲಕೋಟೆ, ಹೆರಕಲ್, ಕದಮಪುರ, ಮತ್ತು ಅನಗವಾಡಿ) ನದಿ ತೀರಗಳಲ್ಲಿ ಕಂಡುಹಿಡಿದರು. ಪಪ್ಪು ಮತ್ತು ಸುಷ್ಮಾ ದೇವ್[೧೩] ಸಹ ಕೆಂಡೂರ, ನಂದಿಕೇಶ್ವರ, ಪಟ್ಟದಕಲ್ಲ, ಬಾಚನಗುಡ್ಡ, ಐಹೊಳೆ ಮುಂತಾದ ಹಳೇ ಮಧ್ಯ ಶಿಲಾಯುಗ ಸಂಸ್ಕೃತಿಯನೆಲೆಗಳನ್ನು ಶೋಧಿಸಿದ್ದಾರೆ. ಹೆರೆಯುವ ಉಪಕರಣಗಳು (scrapers), ಮೊನಚುಗಳು (points), ರಂಧ್ರಕಾರಕಗಳು (borer), ಚೂಪದ ಚಕ್ಕೆಗಳು (flakes), ಬೈರಿಗೆಗಳು (burin), ಮತ್ತು ಕೈಗೊಡಲಿ-ಕಡಿಗತ್ತಿಗಳು (handaxe/choppers) ಶಿಲೋಪಕರಣಗಳು

ಪ್ರಧಾನವಾಗಿವೆ. ಪ್ರಸ್ತುತ ಲೇಖಕರು ೨೦೧೨ರಲ್ಲಿ ಮಲಪ್ರಭಾ ನದಿ ತೀರದ ಮುಳ್ಳೂರು ಗ್ರಾಮದ ಸರಹದ್ದಿನಲ್ಲಿ ಬರುವ ಯಲ್ಲಮ್ಮ ಕೊಳ್ಳದಲ್ಲಿ ಮಧ್ಯ ಹಳೇ ಶಿಲಾಯುಗ ಸಂಸ್ಕೃತಿಗೆ ಸೇರಿದ ಶಿಲೋಪಕರಣಗಳನ್ನು ಶೋಧಿಸಿದ್ದಾರೆ. ಅದರಲ್ಲಿ ಪ್ರಮುಖವಾಗಿ ತಿರುಳು ಚಕ್ರ (discoid core) ಆಕರ್ಷಿತವಾಗಿದ್ದು, ಅಧ್ಯಯನ ದೃಷ್ಟಿಯಿಂದ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿದೆ.



ಮುಳ್ಳೂರು: ತಿರುಳು ಚಕ್ರ (discoid core)

**ಅಂತ್ಯಹಳೇಶಿಲಾಯುಗ (Upper Palaeolithic):** ಅಂತ್ಯ ಹಳೇಶಿಲಾಯುಗದ ಸಂಸ್ಕೃತಿಯನೆಲೆಗಳನ್ನು ಪಪ್ಪು ಮತ್ತು ಸುಷ್ಮಾ ದೇವ್[೧೪] ಮಲಪ್ರಭಾ ತಿರದ ಬಾದಾಮಿ–ಪಟ್ಟದಕಲ್ಲ ಪರಿಸರದ ಶಿಡ್ಲಫಡಿ, ಬಾಚನಗುಡ್ಡ, ನಾಗರಹಾಳ ಇತ್ಯಾದಿಗಳಲ್ಲಿ ಗುರುತಿಸಿದ್ದಾರೆ. ಮೊನಚುಗಳು (points), ರಂಧ್ರಕಾರಕಗಳು (borer), ಚೂಪದ ಚಕ್ಕೆಗಳು (flake), ಅಲಗು (blades), ಸಿಕ್ಕಿಸುವ ಸೂಕ್ಷ್ಮ ಅಲಗುಗಳು (Hafting-Composite tool) ಉಪಕರಣಗಳಾಗಿದ್ದು, ತಯಾರಿಸಲು ಘಟಪ್ರಭಾ ನದಿ ಬಯಲಿನ ಯಾದವಾಡ–ಕೋವಳ್ಳಿ, ಕಲಾದಗಿ ಶ್ರೇಣಿಯ ಚರ್ಟ್ ಕಲ್ಲನ್ನು ಬಳಸಲಾಗುತಿತ್ತು. ಕರ್ನಾಟಕದಲ್ಲಿ ದೊರೆತಿರುವ ಉಪಕರಣಗಳ ಆಕಾರ–ವಿನ್ಯಾಸ ಹೋಲಿಕೆಯಲ್ಲಿ ಮಹಾರಾಷ್ಟ್ರದ ಪಾಟ್ನೆ, ಆಂಧ್ರಪ್ರದೇಶದ ಕರ್ನೂಲ್ ನೆಲೆಗಳಲ್ಲಿ ದೊರೆತಿರುವ ಉಪಕರಣಯೊಂದಿಗೆ ಹೆಚ್ಚು ಸಾಮ್ಯತೆ ಇರುವುದರಿಂದ ಇವು ಸಹ ಆ ಸಂಸ್ಕೃತಿಯ ಕಾಲಘಟ್ಟಕ್ಕೆ ಸೇರುತ್ತವೆ.

**ಸೂಕ್ಷ್ಮ ಶಿಲಾಯುಗ (Mesolithic):** ಸೂಕ್ಷ್ಮ ಶಿಲಾಯುಗಪ್ಲೀಸ್ಟೋಸಿನ್ ಯುಗದಿಂದ ಇಂದಿನ ಹೋಲೋಸಿನ್ ಯುಗಕ್ಕೆ ಸ್ಥಿತ್ಯಂತರ ಹೊಂದುತ್ತದೆ. ಸುಮಾರು ೧೨ ಸಾವಿರ ವರ್ಷಗಳ ಹಿಂದೆ ಜಗತ್ತಿನ ಪರಿಸರದಲ್ಲಿ ಬದಲಾವಣೆಯಾಗಿ ಭೂಮಂಡಲದ ತಾಪಮಾನವು ಕ್ರಮೇಣವಾಗಿ ಹೆಚ್ಚುತ್ತ ಹಿಮಯುಗ ಅಂತ್ಯವಾಗುತ್ತ ಹುಲ್ಲುಗಾವಲಿನ ಬೆಳವಣಿಗೆಗೆ ಕಾರಣವಾಯಿತು. ಪ್ರಾಣಿ–ಪಕ್ಷಿಗಳ ಸಂತತಿಯು ಹೆಚ್ಚಾಗತೊಡಗಿದವು. ಪರಿಸರಕ್ಕೆ ಅನುಗುಣವಾಗಿ ಬೇಟೆಯಾಡುತ್ತಿದ್ದ ವಿಧಾನದಲ್ಲೂ ಬದಲಾಗುತ್ತ ಹೋದಹಾಗೇ ದೊಡ್ಡ ಗಾತ್ರದ ಉಪಕರಣಗಳ ಬದಲಾಗಿ ಸೂಕ್ಷ್ಮ ಶಿಲೋಪಕರಣಗಳ ಬಳಕೆಗೆ ನಾಂದಿಯಾಯಿತು. ಈ ಹಂತದಲ್ಲಿ ಮುಖ್ಯವಾದ ಬೆಳವಣಿಗೆಯೆಂದರೆ ಬೇಟೆಯಾಡುವ, ಮೀನು ಹಿಡಿಯುವ, ಆಹಾರ ಸಂಗ್ರಹಿಸುವ ಜೀವನ ವ್ಯವಸ್ಥೆಯ ಜೊತೆಗೆ ವ್ಯವಸಾಯ ಪ್ರವೃತ್ತಿಯನ್ನು ಪ್ರಾರಂಭಿಸಿದ್ದು. ಇದರ ಜೊತೆಗೆ ದವಸ–ಧಾನ್ಯಗಳನ್ನು ಬೆಳೆಯುವ ಗರಿಕೆಗಳೂ ಸ್ವಾಭಾವಿಕವಾಗಿಯೇ ಹುಟ್ಟಿಕೊಂಡವು. ಇವುಗಳಿಂದ ದೊರೆತ ಅಕ್ಕಿ, ಗೋಧಿ ಹಾಗೂ ಬಾರ್ಲಿಯಂತಹ ದವಸ–ಧಾನ್ಯಗಳನ್ನು ಇವನು ಆಹಾರಕ್ಕಾಗಿ ಬಳಸುವುದನ್ನು ತಿಳಿದುಕೊಂಡನು. ಕ್ರಮೇಣವಾಗಿ ಅವುಗಳನ್ನು ಬೆಳೆಯುವ ಕ್ರಮವನ್ನು ಕಂಡುಕೊಂಡು ಬೆಳೆಯಲು ಪ್ರಾರಂಭಿಸಿದನು. ಈ ಸಂಸ್ಕೃತಿಯ ಪ್ರಮುಖ ನೆಲೆಗಳೆಂದರೆ ಮಲಪ್ರಭಾ ತೀರದ ಅರೆಗುಡ್ಡ (ಚಿತ್ರ ೫), ತಮ್ಮಿನಹಾಳ ಮತ್ತು ಮರಳಬಾವಿ.

**ಈ ಸಾಂಸ್ಕೃತಿಕ ಹಂತದಲ್ಲಿ ಎರಡು ಬಗೆಯ ಉದ್ಯಮಗಳಿದ್ದು ಅವುಗಳಲ್ಲಿ:** (೧) ರೇಖಾಕೃತಿ ಉಪಕರಣಗಳು (geometric tools)– ತ್ರಿಕೋನ (triangle), ಸಮಾನಾಂತರ ದ್ವಿಬಾಹುಗಳುಳ್ಳ ಚತುರ್ಭುಜ (parallel blades), ಅರ್ಧ ಚಂದ್ರಾಕೃತಿ ಉಪಕರಣಗಳು (crescents) ಮತ್ತು (೨) ಅರೇಖಾಕೃತಿ ಉಪಕರಣಗಳು (non-geomertic tools) –ಅಲಗು, ಬಾಗಿದ ಅಲಗು, ಚಕ್ಕೆಗಳು, ಬೈರಿಗೆಗಳು, ಚಿಕ್ಕ ಆಕಾರದ ಮಚ್ಚುಗಳು, ಚೂಪಾದ ಚಕ್ಕೆ ಇತ್ಯಾದಿ ಪ್ರಮುಖವಾಗಿವೆ.



ಅರೆಗುಡ್ಡ: ಸೂಕ್ಷ್ಮ ಶಿಲೋಪಕರಣಗಳು

**ವರ್ಣ/ರೇಖಾ ಚಿತ್ರಕಲೆ (Rock Art):** ಪ್ರಾಗಿತಿಹಾಸಿಕ ಹಾಗೂ ಆದಿ ಇತಿಹಾಸ ಕಾಲದ ವರ್ಣಚಿತ್ರ ಕಲ್ಲಾಸರೆ

ಮತ್ತು ಬಯಲುಬಂಡೆ ಚಿತ್ರಗಳು ಅಸಂಖ್ಯಾತವಾಗಿ ಬೆಟ್ಟಗುಡ್ಡಗಳಲ್ಲಿವೆ. ಅವು ಮಾನವನ ಭಾವನೆಗಳನ್ನು ವ್ಯಕ್ತಪಡಿಸುವ ಸಂಕೇತಗಳಾಗಿದ್ದು, ಅಂದಿನ ಜನರ ಜೀವನ ಶೈಲಿಯನ್ನು ತಿಳಿಯುವಲ್ಲಿ ಹೆಚ್ಚು ಸಹಕಾರಿಯಾಗಿವೆ. ಮಲಪ್ರಭಾ ನದಿ ತೀರದಲ್ಲಿ ೩೬ಕ್ಕೂ ಹೆಚ್ಚು ನೆಲೆಗಳು ಬೆಳಕಿಗೆ ಬಂದಿವೆ

ಬಾದಾಮಿ ಸುತ್ತಮುತ್ತಲಿನ ಪರಿಸರದಲ್ಲಿ ಅನೇಕ ಶಿಲಾಯುಗ ನೆಲೆಗಳ ಜೊತೆಗೆ ಒಟ್ಟು ೮೨೩ ಬಂಡೆ ಚಿತ್ರಗಳಿದ್ದು,ಅದರಲ್ಲಿ ೨೯೪ ಮನುಷ್ಯ (human), ೨೯೫ ಪ್ರಾಣಿ (fauna), ೭ ಸಸ್ಯಸಂಪತ್ತು (flora), ೧೫೬ ವಸ್ತು (objects), ೬೩ ವಿನ್ಯಾಸ (design), ಮತ್ತು ೭ ಧಾರ್ಮಿಕತೆ ಸಂಬಂಧಿಸಿದ ಚಿತ್ರಗಳು (deities) ಬಂಡೆಚಿತ್ರಗಳು ದೊರಕಿವೆ. ಮನುಷ್ಯ ಮತ್ತು ಪ್ರಾಣಿ ಚಿತ್ರಗಳು ಸಂಖ್ಯೆಯಲ್ಲಿ ಸಮವಾಗಿದ್ದು, ಹಾಗೆಯೇ ಇವೆಲ್ಲವೂ ಬಾದಾಮಿ ಚಾಲುಕ್ಯರ ಪೂರ್ವ ಘಟ್ಟಕ್ಕೆ ಸೇರಿವೆ. ಆದಿ ಮಾನವನು ಉಪಯೋಗಿಸಿ ಬಿಟ್ಟು ಹೋದ ಶಿಲೋಪಕರಣಗಳು, ಮಡಿಕೆ ಚೂರು, ಇಟ್ಟಿಗೆ ಅವಶೇಷಗಳು ಅಧಿಕ ಸಂಖ್ಯೆಯಲ್ಲಿ ದೊರೆತಿವೆ. ಬಂಡೆಚಿತ್ರಗಳಲ್ಲಿಯೂ ಸಹ ಅವನು ದಿನನಿತ್ಯ ಜೀವನದಲ್ಲಿ ಉಪಯೋಗಿಸುತ್ತಿದ್ದ ಕೆಲ ವಸ್ತುಗಳ ಚಿತ್ರಣವನ್ನು ಕಾಣಬಹುದು. ಈ ಶ್ರೇಣಿಯಲ್ಲಿ ಒಟ್ಟು ೧೫೬ ವಸ್ತುಗಳಿರುವುದನ್ನು ಲೇಖಕರು ಗಮನಿಸಿದ್ದು ಅದರಲ್ಲಿ ಪ್ರಮುಖವಾಗಿ ತಿಮ್ಮಪ್ಪ ಗುಡ್ಡದಲ್ಲಿನ ಒಂದು ವರ್ಣಚಿತ್ರದಲ್ಲಿ ಚಿಗರೆಯನ್ನು ಬೇಟೆಯಾಡುತ್ತಿರುವ ಚಿತ್ರವಿದ್ದು, ಬೇಟೆಯಾಡಲು ಕೃಷ್ಣಮೃಗದ ಕೋಡನ್ನು ಆಯುಧವನ್ನಾಗಿ ಬಳಸಿರುವುದು ಗಮನಾರ್ಹ. ಹಾಗೆಯೇ ಬಿಲ್ಲು-ಬಾಣ, ಈಟಿ, ಕತ್ತಿ-ಗುರಾಣಿ, ಆಭರಣ, ದೊಡ್ಡ ಜೋಗೆರ ಫಡಿಯಲ್ಲಿನ ಸಂಗೀತ ವಾದ್ಯ ವರ್ಣಚಿತ್ರಗಳಿದ್ದು ಕ್ರಮವಾಗಿ ಆದಿಘಟ್ಟದಿಂದ ಹಿಡಿದು ಇತಿಹಾಸ ಕಾಲದವರೆಗೂ ಕಂಡುಬರುತ್ತವೆ.



**ತಿಮ್ಮಪ್ಪ ಗುಡ್ಡ: 'S' ಮಾದರಿಯ ಮನುಷ್ಯ ಹಾಗೂ ಜಿಂಕೆ**



**ದೊಡ್ಡ ಜೋಗೆರ ಫಡಿ**

ಬಾದಾಮಿ ಶೈಲಿಯ ಮಾನವ ವರ್ಣಚಿತ್ರಗಳು-ಮನುಷ್ಯ ಚಿತ್ರಗಳಲ್ಲಿ ಕೆಲವು ಪ್ರಕಾರಗಳಿದ್ದು, ಅದರಲ್ಲಿ ಪ್ರಮುಖವಾಗಿ ಸಣ್ಣ ಬಿಡಿ ರೇಖಾಕೃತಿಗಳಿಂದ ಅಲಂಕೃತವಾಗಿದ್ದು ಅತಿ ನೀಳವಾದ ಕಡ್ಡಿಯಂತಹ ಮುಂಡ, ಉಬ್ಬಿದ ಕೋಲಿನಂತಹ ಕೈ, ತೊಡೆ, ಕಾಲುಗಳುಳ್ಳ ಜೊತೆಗೆ ನೀಳ ದೇಹವಿರುವ ಮನುಷ್ಯಾಕೃತಿಯು ವಿಶೇಷ ವೈಶಿಷ್ಟ್ಯಗಳಿಂದ ಕೂಡಿದೆ. ವಿಶೇಷವಾಗಿ ಮುಖದಲ್ಲಿ ಗಡ್ಡ, ಬಟ್ಟಲುಗಣ್ಣು, ತಲೆಯ ಮೇಲೆ ಕೂದಲನ್ನು ತೋರಿಸಲಾಗಿರುತ್ತದೆ. ಈ ಪ್ರಕಾರದ ವರ್ಣಚಿತ್ರಗಳಲ್ಲಿ ಸಾಮಾನ್ಯವಾಗಿ ಮಾನವಾಕೃತಿಗಳು ಹೆಚ್ಚು ಅಲಂಕಾರದಿಂದ ಕೂಡಿದ್ದು, ಗಂಡು-ಹೆಣ್ಣಿನ ಜೋಡಿಗಳನ್ನು ಕಾಣಬಹುದು. ಬಾದಾಮಿ ಪರಿಸರದ ರಂಗನಾಥ ಗುಡ್ಡದಲ್ಲಿಯ ಈ ಶೈಲಿಯ ವರ್ಣಚಿತ್ರ ದಕ್ಷಿಣ ಭಾರತದಲ್ಲಿಯೇವಿಶೇಷವಾಗಿದ್ದು, ಅಂತ್ಯ ಹಳೆಶಿಲಾಯುಗ-ಸೂಕ್ಷ್ಮ ಶಿಲಾಯುಗ ಕಾಲಘಟ್ಟಕ್ಕೆ ಸೇರಿದೆ. ಇದರಲ್ಲಿ ಬಹುತೇಕ 'ಬಾದಾಮಿ ಶೈಲಿ'ಯ ಮನುಷ್ಯ ಚಿತ್ರಗಳಿವೆ.ಬಾದಾಮಿ, ರಂಗನಾಥ ಗುಡ್ಡ, ಹಿರೇ ಗುಡ್ಡ, ಹಂಸನೂರು, ತಿಮ್ಮಪ್ಪ ಗುಡ್ಡ ನೆಲೆಗಳನ್ನು ಹೊರತುಪಡಿಸಿ ಪ್ರಪಂಚದ ಬೇರೆಡೆ ಈ ಚಿತ್ರಗಳು ಕಂಡುಬಂದಿಲ್ಲವಾದ್ದರಿಂದ, ಲೇಖಕರು ಇವುಗಳನ್ನು 'ಪ್ರಾಗಿತಿಹಾಸಬಾದಾಮಿ ಶೈಲಿಯ ಮನುಷ್ಯ ವರ್ಣಚಿತ್ರಗಳು' ಎಂದು ಹೆಸರಿಸಿದ್ದಾರೆ. ದೈಹಿಕ ನೀಳತೆಯ ಶೈಲಿಯಲ್ಲಿ ಅಂತ್ಯ ಹಳೆಶಿಲಾಯುಗ-ಸೂಕ್ಷ್ಮ ಶಿಲಾಯುಗ ಹಂತಕ್ಕೆ ಸೇರಿವೆ. ಕಾಡುಹಂದಿ ಮತ್ತು 'ಬಾದಾಮಿ ಶೈಲಿಯ ಮಾನವ ವರ್ಣಚಿತ್ರ'ಗಳಿದ್ದು ಅದರಲ್ಲಿ ಮನುಷ್ಯರ ಚಿತ್ರಗಳು ದೇಹದ ತಲೆ, ಕಣ್ಣು, ತೊಡೆ ಹಾಗೂ ಕೂದಲನ್ನು ಬಿಂಬಿಸಿರುವುದರಲ್ಲಿ ತಮ್ಮದೇ ವಿಶಿಷ್ಟತೆಯನ್ನು ಹೊಂದಿವೆ. ಕಾಡುಹಂದಿಯನ್ನು ಕ್ಷ-ಕಿರಣ ಮಾದರಿಯಲ್ಲಿ ಬಿಂಬಿಸಿದ್ದು, ಅದರ ದೇಹದ ಒಳಗಿನ ಅಂಗಾಗಗಳನ್ನು ತೋರಿಸಲಾಗಿದೆ.



ಹಂಸನೂರು: "ಪ್ರಾಗಿತಿಹಾಸ ಬಾದಾಮಿ ಶೈಲಿಯ ಮಾನವ ವರ್ಣಚಿತ್ರ"

**ನೂತನ ಶಿಲಾಯುಗ – ತಾಮ್ರಯುಗ ಸಂಸ್ಕೃತಿ (Neolithic-Chalcolithic):** ಈ ಸಂಸ್ಕೃತಿಯ ವಿಶಿಷ್ಟ ಲಕ್ಷಣಗಳೆಂದರೆ ಹೆಚ್ಚು ನಯ ಮಾಡಿದ ಉಪಕರಣಗಳು ಹಾಗೂ ಬೂದುಬಣ್ಣದ ಮಣ್ಣಿನ ಮಡಿಕೆಗಳು. ಹಾಗೆಯೇ ಬೂದಿದಿಬ್ಬಗಳು ಹೇರಳವಾಗಿ ಕಂಡುಬರುತ್ತವೆ. ಆದರೆ ಮಲಪ್ರಭಾ ನದಿ ತೀರ ಪ್ರದೇಶದಲ್ಲಿ ಇದುವರೆಗೂ ಬೂದಿದಿಬ್ಬಗಳು ದಾಖಲಾಗಿರುವ ಪುರಾವೆಗಳಿಲ್ಲ. ಈ ಹಂತದಲ್ಲಿ ವ್ಯವಸಾಯದ ಜೊತೆಗೆ ಪಶುಸಂಗೋಪನೆಯು ಕಾಕತಾಳೀಯುವೆಂಬತೆ ಬೆಳವಣಿಗೆಯು ಪಥವನ್ನು ಕಂಡುಕೊಂಡಿತು. ಈ ಕಾಲಘಟ್ಟದಲ್ಲಿಯೇ ತಾಮ್ರದ ಅದಿರಿನ ಮತ್ತು ಲೋಹದ ತಯಾರಿಕಾ ಚಟುವಟಿಕೆಗಳನ್ನು ನೋಡಬಹುದು. ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ತೇರದಾಳ ನವಶಿಲಾ/ತಾಮ್ರಯುಗ ನೆಲೆಯಾಗಿದ್ದು, ಸುಂದರ ಅವರು ಉತ್ಖನನ ಮಾಡಿದ್ದಾರೆ. ಕರ್ನಾಟಕದಲ್ಲಿ ದೊರೆತಿರುವ ಇತರೆ ಮುಖ್ಯ ನೆಲೆಗಳೆಂದರೆ ಇಂಗಳುದಾಳು, ಸಂಗನಕಲ್ಲು, ತೆಕ್ಕಲಕೋಟೆ, ಕೊಡೇಕಲ್, ಬೂದಿಹಾಳ್, ವಟಗಲ್, ತಿ. ನರಸೀಪುರ, ಹಳ್ಳೂರು, ಬನಹಳ್ಳಿ, ಚಂದ್ರವಳ್ಳಿ, ಬ್ರಹ್ಮಗಿರಿ, ಮಸ್ಕಿ, ಪಿಕ್ಲಹಾಳ್ ಇತ್ಯಾದಿ.

**ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿ (Megalithic):** ಮಲಪ್ರಭಾ ನದಿ ಉದ್ದಕ್ಕೂ ಈ ಸಂಸ್ಕೃತಿಯ ನೆಲೆಗಳನ್ನು ಕಾಣಬಹುದಾಗಿದೆ. ಅದರಲ್ಲಿ ಪ್ರಮುಖವಾಗಿ ಐಹೊಳೆಯ ಮೇಗುತಿ ಗುಡ್ಡದ ಮೇಲಿನ ಸಮತಟ್ಟದ ಪ್ರದೇಶದಲ್ಲಿ ನೂರಾರು ಬೃಹತ್ ಶಿಲಾ ಸಂಸ್ಕೃತಿಯ ಕಂಡಿ ಕೋಣೆ ಹಾಗೂ ಹಾದಿ



ಹಿರೇ ಗುಡ್ಡ: ಕ್ಷ–ಕಿರಣ ಮಾದರಿಯ ಕಾಡುಹಂದಿ ಮತ್ತು ಬಾದಾಮಿ ಶೈಲಿಯ ಮನುಷ್ಯ ಚಿತ್ರಗಳು

ಕೋಣೆ ಗೋರಿ, ಕಲ್ಲುಗುಪ್ಪೆವೃತ್ತಗಳನ್ನು ಹಾಗೆಯೇ ಪಟ್ಟದಕಲ್ಲು ಬಳಿ ಇರುವ ಕಂಡಿಕೋಣೆ ಗೋರಿಯಿದ್ದು ವಿಶೇಷವಾಗಿ ಅದರ ಸುತ್ತ ಕಲ್ಲುಗುಳಿಗಳನ್ನು ವೃತ್ತಕಾರದಲ್ಲಿ ಕಾಣಬಹುದು ಮತ್ತು ಅರೆಗುಡ್ಡದಲ್ಲಿ ಬೃಹತ್ ಶಿಲಾಸಮಾಧಿಗಳನ್ನು ಕಾಣಬಹುದು.



ಐಹೊಳೆ: ಮೇಗುತಿ ದೇವಾಲಯದ ಹಿಂಬದಿಯಲ್ಲಿರುವ ಬೃಹತ್ ಶಿಲಾ ಸಮಾಧಿಗಳು



ಕಂಡಿಕೋಣೆ ಸಮಾಧಿ



ಕಂಡಿಕೋಣೆ ಸಮಾಧಿಸುತ್ತ ಕಲ್ಲುಳಿಗಳು



ಅರೆ ಗುಡ್ಡ: ಬೃಹತ್ ಶಿಲಾ ಸಮಾಧಿ

**ವೀರಗಲ್ಲು:** ಹುಲಿಗೆಮ್ಮ ಕೊಳ್ಳದಲ್ಲಿ ಕಂಡುಬಂದಿರುವ ಗುಹಾಂತರ ವೀರಗಲ್ಲು ಗಮನಾರ್ಹವಾಗಿದೆ. ಇಂತಹ ವೀರಗಲ್ಲುಗಳು ಕರ್ನಾಟಕದಲ್ಲಿ ಕಂಡುಬಂದಿರುವುದು ಬಹಳ ವಿರಳ. ಹಾಗೆಯೇ ದೊಡ್ಡ ಜೋಗೆರ ಫಡಿ ಮತ್ತು ದೊಡ್ಡ ದಮಳಿ ಬಳಿ ವೀರಗಲ್ಲುಗಳು ಕಂಡುಬಂದಿವೆ.







ವೀರಗಲ್ಲುಗಳು

[ನನಗೆ ಎಲ್ಲ ರೀತಿಯ ಮಾರ್ಗದರ್ಶನ ಮತ್ತು ಪ್ರೋತ್ಸಾಹ ನೀಡಿದ ನನ್ನ ಪೂಜ್ಯ ಗುರುಗಳಾದ ಪ್ರೊ. ಅ. ಸುಂದರ ಮತ್ತು ಪ್ರೊ. ಸುಷ್ಮಾ ದೇವ್‌ರವರಿಗೆ ಹೃದಯ ಪೂರ್ವಕ ನಮನಗಳು. ಬಾದಾಮಿ ನೆಡೆದ ೩೨ನೇಯ ವಾರ್ಷಿಕ ಸಮ್ಮೇಳನದಲ್ಲಿ ಬಂಡೆಚಿತ್ರ ಪ್ರದರ್ಶನ ಏರ್ಪಡಿಸಲು ಅನುವು ಮಾಡಿಕೊಟ್ಟ ಸಮ್ಮೇಳನದ ರೂವಾರಿಗಳಾದ ಡಾ. ಶೀಲಾಕಾಂತ ಪತ್ತಾರ ಮತ್ತು ಶ್ರೀ ಇಷ್ಟಲಿಂಗ ಸಿರಿಸಿ ಹಾಗೂ ಡಾ. ದೇವರಾಜಸ್ವಾಮಿ ಮತ್ತು ಉಳಿದ ಎಲ್ಲ ಸಂಯೋಜಕರಿಗೂ ಹಾಗೇಯೆ ಕಾರ್ಯಕೇತ್ರ ಅನ್ವೇಷಣೆ ಹಾಗೂ ತಾಂತ್ರಿಕತೆಯಲ್ಲಿ ಸಹಕರಿಸಿದ ಹೇಮಂತ ದಳವಿ, ಚಂದ್ರಕಾಂತ ಕಲ್‌ವಾಂಕರ್, ಡಿ. ವಿನಯಕುಮಾರ, ಅಶೋಕ ಪೂಜಾರ, ನವೀನಕುಮಾರ ಕಲ್ಮನೆ, ಮೋಹನ್ ಪಾರ್ಥಿ, ಸಿದ್ದರಾಜು ಕಪ್ಪಸೋಗೆ ಮತ್ತು ಈ ವೇಳೆ ತಂಗಲು ವ್ಯವಸ್ಥ ಮಾಡಿಕೊಟ್ಟ ಶ್ರೀ ಇಷ್ಟಲಿಂಗ ಸಿರಿಸಿ ಮತ್ತು ಬಳಗ (ವಿಶ್ವ ಚೇತನ ಶ್ರದ್ಧಾ, ಬಾದಾಮಿ) ಹಾಗೂ ಸಂಶೋಧನೆಗೆ ಧನಸಹಾಯ ನೀಡಿದ ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ತು, ನವದೆಹಲಿರವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.]



## ಅಡಿಟಿಪ್ಪಣಿಗಳು

೧. Foote, R.B. 1914. The Foote Collection of Indian Prehistoruic and Protohistoric Antiqueties, Cateloque Raisonne. Madras: Govt. of Madras Presidency; Foote, R.B. 1916. The Foote Collection of Indian Prehistoruic and Protohistoric Antiqueties, Notes on their Ages and Distributions. Madras: Govt. of Madras Presidency.

೨. Joshi, R.V. 1953. Pleistocene Studies in the Malaprabha Basin: Prehistory and Geochronology. Ph.D. Dissertation. Pune: Deccan College, Post Graduate and Research Institute; Joshi, R.V. 1955. Prehistoric Studies in the Malaprabha basin. Pune & Dharwar: Deccan College and Karnatak University.

೩. Pappu, R.S. 1966. Pleistocene Studies in the Upper Krishna Basin, Ph.D. Dissertation. Pune: Deccan College, Post Graduate and Research Institute.

೪. Pappu, R.S and Sushama.G. Deo. 1994. Manland Relationships during Palaeolithic Times in the Kaladge Basin, Karnataka. Pune: Deccan College, Post Graduate and Research Institute.

೫. Sundara, A. 1969. Megalithic Tombs in North Karnataka, Ph.D Desertation, Pune: Deccan College, Post Graduate and Research Istitute;

೬ Neumayer, E. 1993. Lines on Stone: The Prehistoric Rock Art of India. New Delhi: Manohar Publishers and Distributors.

೭. Joshi, R.V. 1955 Op. Cit.; Sundara, A. 1975. The Early Chamber Tombs of South India. New Delhi: Concept Publishing Company; ಸುಂದರ, ಅ. 1978. ವಿಶಿಷ್ಟ ವರ್ಣ ಚಿತ್ರಕಲೆಯ ಆಗರ: ಬಾದಾಮಿ, ಚಾಲುಕ್ಯ ಶ್ರೀ, ಬಾದಾಮಿ; Sundara, A. 1984. Some Selected Rock Paintings from North Karnataka, in Chakravarty, K.K. (ed.), Rock Art of India New Delhi: 137-48; ಸುಂದರ, ಅ. 1994. ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ, ಬೆಂಗಳೂರು; ಕರ್ನಾಟಕ ಲಲಿತ ಕಲಾ ಅಕಾಡೆಮಿ; Neumayer, E. 1993 Op. Cit.; Mohana, R. 2013. Newly Discovered Rock Art Sites in North Karnataka, India, in Asian Art, Culture and Heritage (Anura Manatunga and Chamindi Dilkushi Senaratne Wettewe eds.): 191-198. International Association for Asian Heritage, Centre for Asian Studies, University of Kelaniya, Sri Lanka; Mohana, R. 2014. An Attempt to Interpret the Rock Art at Tatakoti, Bagalkot District, Karnataka, Arnava III (2): 100-112; Mohana, R. 2014a. Further Discovery of Rock Art at Tatakoti (Badami), North Karnataka, in Rock Art: Recent Researches and New Perspectives (Ajit Kumar Ed.). Delhi: New Bharatiya Book Corporation; ಮೋಹನ, ಆರ್. ೨೦೧೪ಭ. ಮುಲ್ಲೂರು, ಚಿಂಚಖಂಡಿ ಮತ್ತು ಈಶ್ವರಪ್ಪನ ಕೊಳ್ಳದ ಶಿಲಾಯುಗ ಸಂಸ್ಕೃತಿಯ ಒಂದು ಪುರಾತಾತ್ವಿಕ ಅಧ್ಯಯನ. ಇತಿಹಾಸ ದರ್ಶನ ೨೯: ೧೦–೧೨.ಮೋಹನ, ಆರ್. ೨೦೧೫. ಹಂಸನೂರು: ಪ್ರಾಗೈತಿಹಾಸಿಕ ವರ್ಣಚಿತ್ರಕಲೆನೆಲೆಯ ಅನ್ವೇಷಣೆ. ಇತಿಹಾಸ ದರ್ಪಣ೨೪: 11-16.Mohana, R. 2015a. Reading Rock Art: Interpreting Temporal and Geographic Variability in the Lower Malaprabha Basin, Karnataka. Ph.D. Thesis submitted to the Deccan College, Post Graduate and Research Institute, Pune; ಮೋಹನ, ಆರ್. ೨೦೧೬. ಕನ್ನೇರ್‌ಗವಿ ಗುಡ್ಡ: ಶಿಲಾಯುಗ ಚಿತ್ರಕಲೆಯ ನೆಲೆ. ಇತಿಹಾಸ ದರ್ಪಣ ೨೮: ೯–೨೧; Mohana, R.2017. A Multidisciplinary Approach to the Study of Rock Art: A Case Study of Karnataka, In: B.L. Malla and Dwipen Benzbaruah (Eds.) Cultural Ecology: Prehistory and Ethno-archaeological context of Indian Rock Art Pp. 143-158, Published by Indira Gandhi National Centre for the Arts, New Delhi andAryan Books International; Mohana, R.2018. Rock Art in the Aihole-Badami-Kutakanakeri Series of the Malaprabha River Basin: Some Distinctive Features. AncientAsia, 9: 1–7. https://www.ancient-asia-journal.com/articles/10.5334/aa.151/.

೮. Indian Archaeology: A Review 1955-56: 5.

೯. Mohana, R. 2015a Op. Cit.

೧೦. Foote, R.B. 1914 Op. Cit.; Foote, R.B. 1916 Op. Cit.; Joshi, R.V. 1955 Op. Cit.; Pappu, R.S. and Sushma G. Deo 1994 Op. Cit.;

೧೧. Joshi, R.V. 1955 Op. Cit.;

೧೨. Pappu, R.S. 1966 Op. Cit.

೧೩. Pappu, R.S. and Sushma G. Deo 1994 Op. Cit.

# ಮಡಲಕಟ್ಟೆಯಲ್ಲಿ ದೊರೆತ ನವಶಿಲಾಯುಗದ ಕೊಡಲಿ ಮತ್ತು ಬೃಹತ್ ಶಿಲಾಯುಗದ ಸಮಾಧಿಗಳು

ಆರ್. ಮಂಜನಾಯ್ಕ*

ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲೂಕಿನ ಮಡಕಲಕಟ್ಟೆ ಗ್ರಾಮವು ತಾಲೂಕು ಕೇಂದ್ರದಿಂದ ಸು. ೩೫ ಕಿ.ಮೀ. ದೂರದಲ್ಲಿ ಚಿಕ್ಕಜೋಗಿಹಳ್ಳಿ ಸಮೀಪದಲ್ಲಿದೆ. ಈ ನೆಲೆಯು ಗ್ರಾನೈಟ್ ಶಿಲೆಯ ಬೆಟ್ಟ-ಗುಡ್ಡಗಳಿಂದ ಕೂಡಿರುವ ಪ್ರದೇಶವಾಗಿದ್ದು ನೈಸರ್ಗಿಕವಾಗಿ ಇಲ್ಲಿಯ ನೆಲ ಕೆಂಪು ಮತ್ತು ಮರಳು ಮಿಶ್ರಮಣ್ಣಾಗಿದ್ದು ಮರಳಿನ ರೂಪದಲ್ಲಿದೆ. ತಾಲೂಕಿನಲ್ಲಿ ಹೆಸರಾಂತ ನದಿಗಳಿಲ್ಲವಾದರೂ ತುಂಗಭದ್ರ ಉಪನದಿಗಳಾದ ಚಿಕ್ಕಹಗರಿ ಮತ್ತು ಚಿನ್ನಹಗರಿ (ಜನಿಗಿಹಳ್ಳಗಳು) ಹರಿಯುತ್ತಿದ್ದು ಅಲ್ಪ ಸ್ವಲ್ಪ ನೀರಾವರಿಗೆ ನೆರವಾಗಿದೆ. ಇವೆಲ್ಲವೂ ಶಿಲಾಯುಗದ ಮಾನವರು ನೆಲೆಗೊಳ್ಳಲು ಬೇಕಾದ ಪೂರಕ ವಾತಾವರಣವನ್ನು ಒದಗಿಸಿವೆ. ಈ ಗ್ರಾಮದ ಸುತ್ತಮುತ್ತಲಲ್ಲಿರುವ ಓಬಳಶೆಟ್ಟಿಹಳ್ಳಿ ಮತ್ತು ಹುರುಳಿಹಾಳ್ ನೆಲೆಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಶಿಲಾಸಮಾಧಿಗಳನ್ನು ಮತ್ತು ಬೃಹತ್ ಕುಲುಮೆ ಘಟಕಗಳನ್ನು ಈ ಹಿಂದೆ ಪತ್ತೆಹಚ್ಚಲಾಗಿದೆ.

ಈ ಗ್ರಾಮದಿಂದ ಹುರುಳಿಹಾಳ್‌ಗೆ ಹೋಗುವ ದಾರಿಯ ಪಕ್ಕದಲ್ಲಿ ಬೃಹತ್ ಶಿಲಾಯುಗದ ಎರಡು ಶಿಲಾಗೋರಿಗಳನ್ನು ತಿಪ್ಪೇಶ್ ತಮ್ಮ ಎಂ.ಫಿಲ್ ಸಂಪ್ರಬಂಧದಲ್ಲಿ ದಾಖಲಿಸಿದ್ದಾರೆ. ಅಲ್ಲಿ ಇನ್ನೂ ಹೆಚ್ಚಿನ ಕ್ಷೇತ್ರ ಕಾರ್ಯವನ್ನು ಕೈಗೊಂಡಾಗ ಹೊಸದಾಗಿ ನವಶಿಲಾಯುಗದ ಕೊಡಲಿ ಮತ್ತು ಕಲ್ಲುವೃತ್ತ ಸಮಾಧಿಯಗಳು ದೊರೆತಿವೆ. ಅವುಗಳನ್ನು ಇಲ್ಲಿ ವಿಶ್ಲೇಷಿಸಿ ದಾಖಲಿಸುವುದು ಈ ಲೇಖನದ ಮುಖ್ಯ ಉದ್ದೇಶವಾಗಿದೆ.

**ಕೊಡಲಿ:** ಗ್ರಾಮದ ನೈರುತ್ಯಕ್ಕೆ ಇರುವ ದಿಬ್ಬದಲ್ಲಿ ಡೈಕ್ ಶಿಲೆಯಲ್ಲಿ ತಯಾರಿಸಲಾದ ಒಂದು ಕೊಡಲಿಯು ದೊರೆತ್ತಿದ್ದು, ಈ ಕೊಡಲಿಯ ಮುಂಭಾಗವನ್ನು ಹರಿತಗೊಳಿಸಿಲ್ಲ. ಮತ್ತು ಸುತ್ತಲೂ ಅದನ್ನು ಹೆಚ್ಚಿನ ಮಟ್ಟದಲ್ಲಿ ಉಜ್ಜಿ ನುಣುಪುಗೊಳಿಸಲಾಗಿದೆ. ಇದರ ಉದ್ದ ೩೮ ಸೆಂ.ಮೀ. ಹಾಗೂ ಅಗಲ ೨೦ ಸೆಂ.ಮೀ. ಇದ್ದು, ಮುಂಭಾಗ ೬ ಸೆಂ.ಮೀ. ಮತ್ತು ದಪ್ಪ ೧೦ ಸೆಂ.ಮೀ. ಅನ್ನು ಹೊಂದಿದೆ.

**ಕಲ್ಲುವೃತ್ತ ಸಮಾಧಿ:** ಗ್ರಾಮದ ನೈರುತ್ಯಕ್ಕೆ ಸುಮಾರು ೬೦೦ ಮೀ. ದೂರದಲ್ಲಿರುವ ಸಣ್ಣ ಕುರುಚಲು ಗಿಡಗಳುಳ್ಳ ದಿಬ್ಬದಲ್ಲಿರುವ ಈ ಸಮಾಧಿಯನ್ನು ಸರಿಸುಮಾರು ೨೫ರಿಂದ ೩೦ ದೊಡ್ಡ ದೊಡ್ಡದಾದ ಕಲ್ಲುಗಳಿಂದ ವೃತ್ತಾಕಾರದಲ್ಲಿ ಜೋಡಿಸಿ ನಿರ್ಮಿಸಲಾಗಿದೆ. ಇದರ ಸುತ್ತಳತೆಯು ೨.೦೦ ಮೀ. ಇದರ ಮಧ್ಯದಲ್ಲಿ ಎರಡು ಕಲ್ಲುಗಳನ್ನು ಜೋಡಿಸಿ ೧.೦೦ ಮೀಟರ್ ಉದ್ದದ ಚಪ್ಪಡಿ ಕಲ್ಲನ್ನು ಹೊಂದಿಸಿದೆ. ಈ ಗೂಡಿನಲ್ಲಿ ಎರಡು ನವಶಿಲಾಯುಗದ ಶಿಲಾಯುಧಗಳಿವೆ. ಇವುಗಳನ್ನು ಸ್ಥಳೀಯರು ಭರಮಪ್ಪ ಮತ್ತು ಭರಮಮ್ಮ ದೇವರೆಂದು ಕರೆಯುತ್ತಾರೆ.

## ಚಕ್ಕೆ ಕಲ್ಲುಗಳ ಕಲ್ಲುವೃತ್ತ ಸಮಾಧಿಗಳು

**ಸಮಾಧಿ-೧:** ಗ್ರಾಮದ ದಕ್ಷಿಣ ದಿಕ್ಕಿಗೆ ಸುಮಾರು ೨೦೦ ಮೀಟರ್ ದೂರದಲ್ಲಿ ಗುಂಡುಮುಣುಗುಗೆ ಹೋಗುವ ರಸ್ತೆಯ ಬಲ ಭಾಗದಲ್ಲಿ ಬೃಹತ್ ಶಿಲಾಯುಗದ ಕಲ್ಗೋರಿ ಇದೆ. ಇದು ಸಂಪೂರ್ಣವಾಗಿ ಹಾಳಾಗಿದ್ದು ಆಯಾತಾಕಾರವಾಗಿದ್ದು, ಸ್ವಸ್ತಿಕ್ ರೂಪದಲ್ಲಿದೆ. ಇದು ೨.೦೦ ಮೀ. ಉದ್ದ ಮತ್ತು ೧.೫೦ ಮೀ. ಅಗಲವನ್ನು ಹೊಂದಿದೆ. ಇದರ ಪೂರ್ವ, ಪಶ್ಚಿಮ ಮತ್ತು ದಕ್ಷಿಣದಲ್ಲಿ ಮೂರು ನೆಟ್ಟಿರುವ ಚಪ್ಪಡಿ ಕಲ್ಲುಗಳಿದ್ದು ಉತ್ತರದ ಕಲ್ಲು ಪ್ರಸ್ತುತದಲ್ಲಿ ಸ್ಥಳದಲ್ಲಿ ಇರುವುದಿಲ್ಲ. ಬಹುಶಃ ಸ್ಥಾನಪಲ್ಲಟ ವಾಗಿರುವಂತೆ ಕಾಣುತ್ತದೆ. ಇವುಗಳಲ್ಲಿ ಪೂರ್ವ ಭಾಗದಲ್ಲಿ ನೆಟ್ಟಿರುವ ಚಪ್ಪಡಿಕಲ್ಲು ನೆಲಮಟ್ಟದಿಂದ ೧.೦೦ ಮೀಟರ್ ಉದ್ದ, ೧.೩೦ ಮೀ. ಎತ್ತರ ಮತ್ತು ೦.೧೫ ಮೀ. ದಪ್ಪವಿರುತ್ತದೆ. ಪಶ್ಚಿಮ ಮತ್ತು ದಕ್ಷಿಣ ಭಾಗದ ಚಪ್ಪಡಿ ಕಲ್ಲುಗಳು ಸಹ ಸರಿಸುಮಾರು ಇದೇ ರೀತಿಯ ಅಳತೆಗಳನ್ನು ಹೊಂದಿವೆ. ಇವುಗಳ ಮಧ್ಯದಲ್ಲಿ ೦.೬೦ ಮೀ. ಉದ್ದ,

* ಪುರಾತತ್ವ ಸಹಾಯಕರು, ಉಪ ನಿರ್ದೇಶಕರ ಕಛೇರಿ, ಹೊಸಪೇಟೆ ತಾಲ್ಲುಕು, ಬಳ್ಳಾರಿ ಜಿಲ್ಲೆ-೫೮೩೨೨೧. ಮೊ. ೯೯೪೫೪೧೫೫೧೮



ಮಡಕಲಕಟ್ಟೆ – ನವಶಿಲಾಯುಗದ ಕೂಡಲಿಗಳು



ಮಡಕಲಕಟ್ಟೆ – ಕಲ್ಲುವೃತ್ತ ಸಮಾಧಿ ಮತ್ತು ನವಶಿಲಾಯುಗದ ಕೂಡಲಿಗಳು

೦.೬೦ ಮೀ. ಅಗಲ ಮತ್ತು ೦.೨೦ ಮೀ. ದಪ್ಪವಿರುವ ಮೊಟ್ಟೆಯಾಕಾರದ ಕಲ್ಲುಗುಂಡುಯಿದ್ದು ಇದರ ಸುತ್ತಲೂ ಸಣ್ಣ ಸಣ್ಣ ಕಲ್ಲುಗಳು ಹರಡಿವೆ. ಅವುಗಳಲ್ಲಿ ಒಂದರಲ್ಲಿ ನಾಗರ ಕಲ್ಲು ಇದೆ. ಈ ಬೃಹತ್ ಶಿಲಾಯುಗದ ಸಮಾಧಿಯು ಹಾಳಾಗಿರುವುದರಿಂದ ಇದರ ಲಕ್ಷಣಗಳನ್ನು ಗುರುತಿಸುವುದು ಕಷ್ಟದಾಯಕವಾಗಿದೆ.

**ಸಮಾಧಿ–೨:** ಗ್ರಾಮದ ಆಗ್ನೇಯ ದಿಕ್ಕಿಗೆ ಸುಮಾರು ೪೫೦ ಮೀ. ದೂರದಲ್ಲಿ ಗುಂಡುಮುಣುಗುಗೆ ಹೋಗುವ ರಸ್ತೆಯ ಎಡಭಾಗದಲ್ಲಿ ಬೃಹತ್ ಶಿಲಾಯುಗದ ಕಲ್ಗೋರಿ ಇದೆ. ಇದು ಸಂಪೂರ್ಣವಾಗಿ ಹಾಳಾಗಿದ್ದು, ಆಯಾತಾಕಾರವಾಗಿದ್ದು, ಸ್ವಸ್ತಿಕ್ ರೂಪದಲ್ಲಿದೆ. ಇದು ೫.೦೦ ಮೀ. ಉದ್ದ ಮತ್ತು ೪.೦೦ ಮೀ. ಅಗಲವನ್ನು ಹೊಂದಿದೆ. ಇದರ ಉತ್ತರ ಮತ್ತು ದಕ್ಷಿಣದಲ್ಲಿ ಮೂರು ನೆಟ್ಟಿರುವ ಚಪ್ಪಡಿ ಕಲ್ಲುಗಳಿದ್ದು ಪೂರ್ವ ಮತ್ತು ಪಶ್ಚಿಮದ ಕಲ್ಲುಗಳು ಪ್ರಸ್ತುತದಲ್ಲಿ ಸ್ಥಳದಲ್ಲಿ ಇರುವುದಿಲ್ಲ. ಬಹುಶಃ ಸ್ಥಾನಪಲ್ಲಟವಾಗಿರುವಂತೆ ಕಾಣುತ್ತದೆ. ಇವುಗಳಲ್ಲಿ ಉತ್ತರ ಭಾಗದಲ್ಲಿ ನೆಟ್ಟಿರುವ ಚಪ್ಪಡಿಕಲ್ಲು ನೆಲಮಟ್ಟದಿಂದ ೦.೮೦ ಮೀ. ಉದ್ದ, ೦.೫೦ ಮೀ. ಎತ್ತರ ಮತ್ತು ೦.೧೫ ಮೀ. ದಪ್ಪ ಹಾಗೂ ದಕ್ಷಿಣದಲ್ಲಿನ ಚಪ್ಪಡಿಕಲ್ಲು ೦.೭೫ ಮೀ. ಉದ್ದ, ೦.೫೦ ಮೀ. ಎತ್ತರ ಮತ್ತು ೦.೧೫ ಮೀ. ದಪ್ಪವನ್ನು ಹೊಂದಿದ್ದು ಇದರ ಪಕ್ಕದಲ್ಲಿ ಮತ್ತೊಂದು ಕಲ್ಲು ಇದ್ದು ಇದು ೧.೧೫ ಮೀ. ಉದ್ದ, ನೆಲಮಟ್ಟದಿಂದ ೦.೫೦ ಮೀ. ಎತ್ತರವಿದ್ದು ೦.೧೫ ಮೀ. ದಪ್ಪವನ್ನು ಹೊಂದಿದೆ. ಇದರ ಸುತ್ತಲೂ ಸಣ್ಣ ಸಣ್ಣ ಕಲ್ಲುಗಳು ಹರಡಿವೆ. ಈ ಬೃಹತ್ ಶಿಲಾಯುಗದ ಸಮಾಧಿಯು ಹಾಳಾಗಿರುವುದರಿಂದ ಇದರ ಲಕ್ಷಣಗಳನ್ನು ಗುರುತಿಸುವುದು ಕಷ್ಟದಾಯಕವಾಗಿದೆ. ಈ ಸಮಾಧಿಯು ನಿಧಿಗಳ್ಳರ ಮತ್ತು ಕೃಷಿ ಚಟುವಟಿಕೆಯಿಂದಾಗಿ ಹಾಳಾಗಿದೆ.

ಬೃಹತ್ ಶಿಲಾಯುಗದ ಸಮಾಧಿಗಳು ಕಬ್ಬಿಣಯುಗಕ್ಕೆ ಸೇರಿದವಾಗಿದ್ದು, ಕರ್ನಾಟಕದಲ್ಲಿ ಇವುಗಳ ಕಾಲವನ್ನು ಕ್ರಿ.ಪೂ. ೧೨೦೦ ರಿಂದ ಕ್ರಿ.ಪೂ. ೨೫೦ ಎಂದು ಪುರಾತತ್ವ ತಜ್ಞರು ಗುರುತಿಸಿದ್ದಾರೆ. ಬೃಹತ್ ಶಿಲಾಯುಗದ ಗೋರಿಗಳು





ಮಡಕಲಕಟ್ಟೆ – ಚಕ್ಕೆಕಲ್ಲುಗಳಿಂದ ತುಂಬಿದ ಕಲ್ಲುವೃತ್ತ ಸಮಾಧಿ



ಮಡಕಲಕಟ್ಟೆ – ಚಕ್ಕೆಕಲ್ಲುಗಳಿಂದ ತುಂಬಿದ ಕಲ್ಲುವೃತ್ತ ಸಮಾಧಿ



ಮಡಕಲಕಟ್ಟೆ – ನಾಶವಾಗಿರುವ ಕಲ್ಲುವೃತ್ತ ಸಮಾಧಿಯ ಜಾಗ

ಕೂಡ್ಲಿಗಿ ತಾಲೂಕಿನ ಹಲವು ಕಡೆ ಕಂಡುಬಂದಿವೆ. ನಮ್ಮ ದುರಾದೃಷ್ಟಕ್ಕೆ ಹಳ್ಳಿಯ ಜನರು ಈ ಜಾಗವನ್ನು ಆಕ್ರಮಿಸಿಕೊಂಡು ಸಮಾಧಿಗಳನ್ನು ಕೆಡವಿ ಬೇಸಾಯ ಮಾಡುತ್ತಿದ್ದಾರೆ. ಈ ಜನರಿಗೆ ಇವುಗಳ ಮಹತ್ವವನ್ನು ತಿಳಿಸಿದರೂ ಏನು ಪ್ರಯೋಜನವಾಗುತ್ತಿಲ್ಲ. ಜೊತೆಗೆ ನಿಧಿ ಆಸೆಗಾಗಿ ಕೆಲವು ಗೋರಿಗಳು ನಿಧಿಗಳ್ಳರಿಂದ ನಾಶವಾಗಿರುವುದನ್ನು ಸಹ ನಾವು ಕಾಣಬಹುದು. ಹಾಗಾಗಿ ಇವುಗಳಿಗೆ ರಕ್ಷಣೆ ಒದಗಿಸಬೇಕಾಗಿದೆ.

[ಈ ಲೇಖನ ಸಿದ್ಧಪಡಿಸಲು ನನಗೆ ಸಲಹೆ ಸೂಚನೆಗಳನ್ನು ನೀಡಿದ ನನ್ನ ಮಾರ್ಗದರ್ಶಕರು ಹಾಗೂ ವಿದ್ಯಾಗುರುಗಳಾದ ಡಾ. ಜಿ. ಸರ್ವಮಂಗಳ ಅವರಿಗೆ ಹಾಗೆಯೇ ಕ್ಷೇತ್ರ ಕಾರ್ಯದಲ್ಲಿ ಸಹಕರಿಸಿದ ನಮ್ಮ ಕಛೇರಿಯ ಹನುಮಂತಪ್ಪ ದುರ್ಗಪ್ಪ ಮತ್ತು ಪತ್ರಕರ್ತ ಭೀಮಸಮುದ್ರ ರಂಗನಾಥ, ಅವರಿಗೂ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.]



## ಅಡಿಟಿಪ್ಪಣಿಗಳು

೧. ಷೇಕ್‌ಅಲಿ ಬಿ. ಮತ್ತು ಅ. ಸುಂದರ, ೧೯೯೭, ಕರ್ನಾಟಕ ಚರಿತ್ರೆ ಸಂ. ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೨. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೩. ವಿರೂಪಾಕ್ಷಿ, ಪೂಜಾರಹಳ್ಳಿ, ೨೦೦೬, ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ.

೪. ಇತಿಹಾಸ ದರ್ಶನ ಸಂಪುಟಗಳು.

೫. Gururaja Rao B.K., 1972, The Megalithic Culture in south India, Prasaranga, Mysore University, Mysore.

೩

# ನವಶಿಲಾಯುಗದ ವಿಶಿಷ್ಟ ನೆಲೆ: ಸಂಗಾಪುರದ ಕಡರಿವಟ್ಲ ಬೆಟ್ಟ

**ಶರಣಬಸಪ್ಪ ಕೋಲ್ಕಾರ***

**ಕೃಷ್ಣಾ**–ತುಂಗಭದ್ರಾ ನದಿಗಳ ನಡುವಣ ರಾಯಚೂರು ದೋಆಬ್ ಪ್ರಾಕ್ಚಾರಿತ್ರಿಕವಾಗಿ ಗಮನಾರ್ಹ ಪ್ರದೇಶವಾಗಿದೆ. ಇಲ್ಲಿ ಹಳೆಯ ಶಿಲಾಯುಗ, ಮಧ್ಯ ಅಥವಾ ಸೂಕ್ಷ ಶಿಲಾಯುಗ, ನವಶಿಲಾಯುಗ ಮತ್ತು ಆದಿ ಚಾರಿತ್ರಿಕ ಕಾಲ ಘಟ್ಟಗಳ ಸಂಸ್ಕೃತಿಗಳು ಅಸ್ತಿತ್ವದಲ್ಲಿದ್ದವು. ಆಯಾಕಾಲದ ನೆಲೆಗಳಲ್ಲಿ ಸಾಂಸ್ಕೃತಿಕ ಅವಶೇಷಗಳು ವಿಪುಲವಾಗಿ ಕಂಡು ಬಂದಿವೆ. ಇಲ್ಲಿ ನಡೆದ ಪಿಕ್ಲಿಹಾಳ (ಲಿಂಗಸೂಗೂರು ತಾ॥) ಮಸ್ಕಿ ಮತ್ತು ವಟಗಲ್ (ಮಾನ್ವಿ ತಾ॥) ಹಾಗೂ ಆನೆಗೊಂದಿಯ (ಗಂಗಾವತಿ ತಾ॥) ಉತ್ಖನನಗಳು ಈ ಪ್ರದೇಶದ ಪೂರ್ವಭಾವಿ ಇತಿಹಾಸ ಕಾಲದ ಜನ ಸಂಸ್ಕೃತಿಯ ಮೇಲೆ ಸಾಕಷ್ಟು ಬೆಳಕನ್ನು ಚೆಲ್ಲಿವೆ. ಇದಕ್ಕೆ ಪೂರಕವಾಗಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ತುಂಗಭದ್ರಾ ನದಿಯ ಎಡತೀರದ ಪ್ರದೇಶವೂ ಕೂಡಾ ಪ್ರಾಕ್ಚಾರಿತ್ರಿಕವಾಗಿ ಮಹತ್ವದ ಪ್ರದೇಶವಾಗಿದೆ. ನದಿಯ ತೀರದಿಂದ ವಿಸ್ತರಿಸುವ ಏಳುಗುಡ್ಡಗಳ ಬೆಟ್ಟ ಸಾಲುಗಳು ಕೂಡ ಪೂರ್ವಭಾವಿ ಇತಿಹಾಸ ಕಾಲದ (ನವಶಿಲಾ–ಶಿಲಾ ತಾಮ್ರಯುಗ ಹಾಗೂ ಕಬ್ಬಿಣ ಯುಗದ ಬೃಹತ್ ಶಿಲಾಯುಗ) ಮಾನವ ಸಂಸ್ಕೃತಿಗಳ ಸಾಂದ್ರ ಪ್ರದೇಶವಾಗಿದೆ. ಇಲ್ಲಿಯ ಹಲವಾರು ಪ್ರಾಚೀನ ನೆಲೆಗಳಲ್ಲಿ ಈಚೆಗೆ ಬೆಳಕಿಗೆ ಬಂದಿರುವ ಮತ್ತೊಂದು ನವಶಿಲಾಯುಗ ಕಾಲದ ವಿಶಿಷ್ಟ ನೆಲೆ ಎಂದರೆ ಸಂಗಾಪುರ ಗ್ರಾಮದ ಕರಡಿವಟ್ಲು ಬೆಟ್ಟದ ನೆಲೆ. ಈ ನೆಲೆಯ ಸಾಂಸ್ಕೃತಿಕ ಮಹತ್ವವನ್ನು ಬಿಂಬಿಸುವುದು ಈ ಪ್ರಬಂಧದ ಉದ್ದೇಶವಾಗಿದೆ.

ಸಂಗಾಪುರ ಗ್ರಾಮವು ಗಂಗಾವತಿ ಆನೆಗೊಂದಿ ರಸ್ತೆಯಲ್ಲಿ ಗಂಗಾವತಿ ನಗರದಿಂದ ಏಳು ಕಿ.ಮಿ ಅಂತರದಲ್ಲಿದೆ. ಈ ಗ್ರಾಮದ ಉತ್ತರ ಗಡಿಯುದ್ದಕ್ಕೂ ಬೆಟ್ಟಸಾಲಿದೆ. ಅದರಲ್ಲಿ ಕರಡಿವಟ್ಲು (ಕರಡಿಗಳು ಇರುವ ಬೆಟ್ಟ) ಬೆಟ್ಟವು ಒಂದು. ಸಂಗಾಪುರ ಗ್ರಾಮದಿಂದ ಮಲ್ಲಾಪುರಕ್ಕೆ ತೆರಳುವ ರಸ್ತೆಯಲ್ಲಿ ಸಂಗಾಪುರದಿಂದ ಎರಡು ಕಿ.ಮೀ. ಅಂತರದಲ್ಲಿ ಸಾಗಿದರೆ ಬಲಬದಿಗೆ ಚಿಕ್ಕ ಕಣಿವೆ ಆಂಜನೇಯ ದೇವಸ್ಥಾನಕ್ಕೆ ತೆರಳುವ ದಾರಿ ಇದೆ. ಆ ಹಾದಿಯಲ್ಲಿ ಸಾಗಿದರೆ ಅಲ್ಲಿ ದೇವಸ್ಥಾನದ ಮುಂಬದಿಯಲ್ಲಿ ವಿಜಯನಗರದ ಉತ್ತರ ದಿಕ್ಕಿನ ಪ್ರವೇಶದ್ವಾರವಾದ ಬಸವಾಪಟ್ಟಣ ದರವಾಜ (ಶಿಥಿಲವಾಗಿದೆ) ಇದೆ. ಈ ದ್ವಾರದಿಂದ ಪೂರ್ವ ಬದಿಗೆ ಕರಡಿ ವಟ್ಲು ಬೆಟ್ಟ ಇದೆ.

ಕರಡಿವಟ್ಲ ಬೆಟ್ಟವು ದಕ್ಷಿಣ–ಉತ್ತರ ಹಾಗೂ ಪೂರ್ವ–ಪಶ್ಚಿಮವಾಗಿ 'ಎಲ್' ಆಕಾರದಲ್ಲಿ ವಿಸ್ತರಿಸಿದೆ. ಈ ಬೆಟ್ಟವನ್ನು ಪೂರ್ವಾಭಿಮುಖವಾಗಿ ಪ್ರವೇಶಿಸಬಹುದು. ಸುಮಾರು ೩೦೦ ಅಡಿಗಳಷ್ಟು ಎತ್ತರವಾಗಿರುವ ಬೆಟ್ಟವನ್ನು ಹತ್ತಲು ಎರಡು ಶಿಖರಗಳ ಮಧ್ಯದ ಕಣಿವೆಯಲ್ಲಿ ದಾರಿ ಇದೆ. ಬೆಟ್ಟದ ಮೇಲ್ಭಾಗದಲ್ಲಿ ಸುಮಾರು ಹತ್ತಾರು ಎಕರೆಯಷ್ಟು ವಿಶಾಲವಾದ ಬಯಲಿದೆ. ಈ ಬಯಲಿನ ದಕ್ಷಿಣ ಪಶ್ಚಿಮ ಬದಿಯಲ್ಲಿ ಮಾತ್ರ ಬೆಟ್ಟದ ಅಂಚಿನಲ್ಲಿ ದೊಡ್ಡ ದೊಡ್ಡ ಬಂಡೆ ಗುಂಡುಗಳಿವೆ ಅವುಗಳ ಕೆಳಭಾಗದಲ್ಲಿ ಆಳವಾದ ಗವಿಗಳಿವೆ. ಬಯಲಿನಲ್ಲಿ ಅಲ್ಲಲ್ಲಿ ಕಲ್ಲಾಸರೆಗಳು, ಬೃಹತ್ ಬಿಡಿ ಬಂಡೆಗಳು, ವಿಶಾಲವಾದ ಹುಲ್ಲುಗಾವಲು ಮತ್ತು ನೈಸರ್ಗಿಕ ನೀರಿನ ದೊಣೆಗಳಿವೆ. ಹಾಗಾಗಿ ಇದು ಪ್ರಾಗಿತಿಹಾಸ ಕಾಲದಲ್ಲಿ ಮಾನವನ ವಾಸ್ತವ್ಯಕ್ಕೆ ಅತ್ಯಂತ ಪ್ರಶಸ್ತವಾದ ನೆಲೆಯಾಗಿರುವುದನ್ನು ಗ್ರಹಿಸಬಹುದು. ನೆಲೆಯಲ್ಲಿ ಒಂದೆಡೆ ಜನವಸತಿಯ ಚಟುವಟಿಕೆಯನ್ನು ಬಿಂಬಿಸುವ ಮಡಕೆ, ಅಸ್ಥಿಗಳನ್ನೊಳಗೊಂಡ ಬೂದು ಮಣ್ಣಿನ ಪ್ರದೇಶವಿದೆ. ಜೊತೆಗೆ ಗುಹಾ ನಿವಾಸಗಳು ಕಲ್ಲಾಸರೆಗಳಲ್ಲಿ ವರ್ಣಚಿತ್ರಗಳು, ಆಯುಧಗಳು, ಶಿಲೋಪಕರಣಗಳು, ಸುಡಾವೆ ಮಣ್ಣಿನ ಆಕೃತಿಗಳು ಮತ್ತು ಮಣಿಗಳು ಕಂಡು ಬಂದಿವೆ. ಹೀಗಾಗಿ ಈ ನೆಲೆಯು ನವಶಿಲಾಯುಗ ಸಂಸ್ಕೃತಿಯ ಒಂದು ವಿಶಿಷ್ಠ ವಾಸ್ತವ್ಯದ ನೆಲೆಯಾವಾಗಿತ್ತೆಂಬುದನ್ನು ಗುರುತಿಸಬಹುದು. ನೆಲೆಯ ಸಾಂಸ್ಕೃತಿಕ ಅವಶೇಷಗಳನ್ನು ಕೆಳಕಂಡಂತೆ ಗುರುತಿಸಬಹುದು.

**ವಸತಿ ಪ್ರದೇಶ:** ಇಡೀ ಬೆಟ್ಟ ಪರಿಸರ ಅಲ್ಲಿಯ ಮಾನವನ ಚಟುವಟಿಕೆಯ ತಾಣವಾಗಿದ್ದರೂ ಒಂದು ನಿರ್ದಿಷ್ಟ ಸ್ಥಳದಲ್ಲಿ ಮಾತ್ರ ವಾಸ್ತವ್ಯ ಮಾಡಿದ್ದನೆಂಬುದಕ್ಕೆ ಬೆಟ್ಟದ ದಕ್ಷಿಣ ಬದಿಯಲ್ಲಿರುವ ಹಾಳು ಮಣ್ಣಿನ ಪ್ರದೇಶ ಸೂಚಿಸುತ್ತದೆ. ದಕ್ಷಿಣ ಪಶ್ಚಿಮ ಬದಿಯಲ್ಲಿ ಗಿರಿಶ್ರೇಣಿಯ ಕಲ್ಲುಬಂಡೆಗಗಳ ಆಶ್ರಯದ ಬಯಲಿನಲ್ಲಿ ಹಾಳು ಮಣ್ಣಿನ ಪ್ರದೇಶವಿದೆ. ಇದು

* ಪ್ರಾಚಾರ್ಯರು, ಕೆ.ಎಸ್.ಸಿ. ಮಹಿಳಾ ಮಹಾವಿದ್ಯಾಲಯ, ಕೊಪ್ಪಳ ಜಿಲ್ಲೆ, ಗಂಗಾವತಿ–೫೮೩೨೨೭, ಮೊ. ೯೮೪೫೨೩೭೧೫೫

ವಸತಿ ನೆಲೆಯಾಗಿತ್ತು. ನೆಲೆಯನ್ನು ಗುಂಡು ಕಲ್ಲುಗಳಿಂದ ಸುತ್ತಲೂ ಕಟ್ಟಿ ಆ ಭಾಗವನ್ನು ಸ್ವಲ್ಪ ಎತ್ತರಿಸಲಾಗಿದೆ. ಇಲ್ಲಿ ಪ್ರಾಯಶಃ ಗುಡಿಸಲುಗಳನ್ನು ಹಾಕಿಕೊಂಡು ನವಶಿಲಾಯುಗದ ಮನುಷ್ಯರು ವಾಸಿಸುತ್ತಿದ್ದರು. ಅವರ ಸುದೀರ್ಘ ವಾಸ್ತವ್ಯದ ಫಲವಾಗಿ ಆ ನೆಲೆಯ ಸಾಂಸ್ಕೃತಿಕ ಸ್ತರ ಸುಮಾರು ಮೂರು ಅಡಿ ದಪ್ಪವಾಗಿದೆ. ಬೂದು ಮಣ್ಣಿನ ಸ್ತರದಲ್ಲಿ ಮಡಕೆಯ ಚೂರುಗಳು ಹಾಗೂ ಅಸ್ಥಿ ಅವಶೇಷಗಳು ಕಂಡು ಬರುತ್ತವೆ. ಪ್ರಾಯಶಃ ಇವು ಶವ ಸಂಸ್ಕಾರದ ಅವಶೇಷಗಳಾಗಿರಬೇಕು. ನವಶಿಲಾಯುಗ ಸಂಸ್ಕೃತಿಯ ಇನಾಂಗಾಂವ್, ವಟಗಲ್ ಮುಂತಾದ ನೆಲೆಗಳ ವಸತಿಯಡೆಗಳಲ್ಲೇ ಸಮಾಧಿಗಳು ಕಂಡು ಬಂದಿರುವುದನ್ನು ಇಲ್ಲಿ ಸ್ಮರಿಸಬಹುದು. ಆದರೆ ಉತ್ಖನನದಿಂದ ಮಾತ್ರ ಇದನ್ನು ಸ್ಪಷ್ಟವಾಗಿ ಅರಿಯಬಹುದಾಗಿದೆ.

**ಗುಹಾಮನೆಗಳು:** ಕರಡಿವಟ್ಲ ನೆಲೆಯ ವಿಶೇಷ ಸಂಗತಿಯೆಂದರೆ ಇಲ್ಲಿಯ ಗುಹಾ ಮನೆಗಳು. ಇಲ್ಲಿ ನೈಸರ್ಗಿಕ ಗುಹೆಗಳನ್ನು ಹಾಗೂ ಕಲ್ಲಾಸರೆಗಳನ್ನು ವಾಸಕ್ಕೆ ಬಳಸಲಾಗಿದೆ. ಇಂತಹ ಹಲವಾರು ಗುಹಾಮನೆಗಳು ಇಲ್ಲಿವೆ. ಮೊದಲನೆಯದು ಬೃಹತ್ ಬಂಡೆಯೊಂದರ ಕೆಳಭಾಗದಲ್ಲಿ ಉಂಟಾದ ಗವಿ. ಇದು ಉತ್ತರ ದಕ್ಷಿಣಾಭಿಮುಖವಾಗಿದ್ದು, ಎರಡು ಬದಿಗೆ ತೆರೆದುಕೊಂಡಿದೆ. ಹಾಗಾಗಿ ಎರಡು ಬದಿಯಲ್ಲಿ ಚಿಕ್ಕ ಕಲ್ಲುಗಳಿಂದ ಗೋಡೆಯನ್ನು ನಿರ್ಮಿಸಿ ಗವಿಯನ್ನು ಮನೆಯನ್ನಾಗಿ ಪರಿವರ್ತಿಸಲಾಗಿದೆ. ೬ ಅಡಿ ಅಗಲ ೧೨ ಅಡಿ ಉದ್ದವಾಗಿರುವ ಈ ಗುಹೆಯ ಛಾವಣಿ ೬ ಅಡಿ ಎತ್ತರವಿದೆ ಹಾಗಾಗಿ ಈ ಮನೆಯಲ್ಲಿ ಏಳೆಂಟು ಜನ ಸಹಜವಾಗಿ ವಾಸಿಸಬಹುದಾಗಿದೆ. ಗುಹೆಯ ನೆಲವು ಬೂದು ಮಣ್ಣಿನಿಂದ ಕೂಡಿದ್ದು, ಅಲ್ಲಿ ಮಡಕೆ ಚೂರುಗಳು ಮತ್ತು ಶಿಲೋಪಕರಣಗಳು ದೊರೆತಿವೆ.

ಎರಡನೇ ಗುಹೆಯು ಕೂಡಾ ದೊಡ್ಡ ಗುಂಡೊಂದರ ಕೆಳ ಭಾಗದ ನೈಸರ್ಗಿಕ ರಚನೆ. ಈ ಗುಹೆಯ ಮುಂಬದಿ ಮಾತ್ರ ತೆರೆದಿರುವುದರಿಂದ ಅಲ್ಲಿ ಮಾತ್ರ ಗೋಡೆಯನ್ನು ನಿರ್ಮಿಸಲಾಗಿದೆ. ಈ ಗುಹೆಯ ಬಾಗಿಲ ಬದಿಯ ಗೋಡೆಯಲ್ಲಿ ಪಶುಪಾಲಕನ ವರ್ಣಚಿತ್ರವಿದೆ. ಉಳಿದವು ನೈಸರ್ಗಿಕವಾದ ವಿಶಾಲ ಗುಹೆಗಳು. ಇವುಗಳು ತುಂಬಾ ಆಳವಾಗಿರುವುದರಿಂದ ಮತ್ತು ಪ್ರವೇಶವು ಇಕ್ಕಟ್ಟಾಗಿರುವುದರಿಂದ ಗೋಡೆಯನ್ನು ನಿರ್ಮಿಸದೇ ಮೂಲರೂಪದಲ್ಲೇ ಬಳಸಲಾಗಿದೆ. ಈ ಗವಿಗಳಲ್ಲಿ ಮಡಕೆ ಚೂರುಗಳು, ಶಿಲೋಪಕರಣಗಳು, ಹರೆಯುವ ಕಲ್ಲುಗಳು, ಟೆರಾಕೋಟಾಗಳು ಮುಂತಾದವುಗಳು ದೊರೆತಿವೆ. ಹೀಗಾಗಿ ಈ ಗವಿಗಳನ್ನು ಕೂಡಾ ವಸತಿಗಾಗಿ ಬಳಸಿರುವುದನ್ನು ತರ್ಕಿಸಬಹುದು.

**ಮಡಕೆ ಚೂರುಗಳು:** ವಸತಿ ನೆಲೆ ಹಾಗೂ ಗುಹೆಗಳಲ್ಲಿ ಮಡಕೆಯ ಚೂರುಗಳು ಅಧಿಕ ಪ್ರಮಾಣದಲ್ಲಿ ಕಂಡು ಬರುತ್ತವೆ. ಇವು ಕಂದು ಬೂದುಗೆಂಪಿನಲ್ಲಿವೆ. ಕೆಲವು ಅಭ್ರಕಯುಕ್ತ ಮಡಕೆಗಳು ಕಂಡು ಬಂದಿವೆ. ಈ ಮಡಕೆಗಳ ಕಂಠಗಳ ಚೂರುಗಳ ಆಧಾರದ ಮೇಲೆ ಅವು ಅಗಲಬಾಯಿಯ ಬಾನಿ, (ತೆಳುವಾದ) ಎತ್ತರ ಕಂಠದ ೩ ಸುತ್ತಿನ ಮಡಿಕೆಯುಳ್ಳ ಕಂಠದ ಕೊಡ, ಸಾಮಾನ್ಯ ಕೊಡ,ಅರ್ಧಗೋಲಾಕೃತಿಯ ಬಟ್ಟಲು, ತಟ್ಟೆ, ಮುಚ್ಚಳಗಳು, ಸಣ್ಣ ಬಟ್ಟಲು ಎಂದು ಮುಂತಾಗಿ ಗುರುತಿಸಬಹುದು.

ಮಡಕೆಗಳನ್ನು ರೇಖಾಕೃತಿಗಳಿಂದ ಅಲಂಕರಿಸಲಾಗಿದೆ. ಅವುಗಳಲ್ಲಿ ಕೆಲವು ಮಡಕೆಗಳ ಕಂಠದ ಭಾಗಗಳಲ್ಲಿ ಬೆನ್ನೆಲಿಬಿನ ಆಕಾರದ ರೇಖೆಗಳು (ಒಂದು ಸರಳ ರೇಖೆಗೆ ಎರಡು ಬದಿಯಲ್ಲಿ ವಕ್ರವಾಗಿ ಒಂದರ ಕೆಳಗೆ ಒಂದರಂತೆ ಕೆಳಮುಖವಾಗಿ ಹಾಕಿರುವ ರೇಖೆಗಳು) ಅಡ್ಡ–ಉದ್ದ ರೇಖೆಗಳಿಂದ ಚೌಕಾಕೃತಿಗಳನ್ನು ತ್ರಿಕೋನಾಕೃತಿಗಳನ್ನು ಮೂಡಿಸಲಾಗಿದೆ. ಈ ಮಡಕೆಗಳನ್ನು ಸುಡುವ ಮೊದಲೇ ಇನ್ನು ಹಸಿಯಿದ್ದಾಗ ಕಡ್ಡಿಯ ಚೂಪಾದ ತುದಿಯಿಂದ ಅವುಗಳ ಮೇಲೆ ಇಂಥ ರೇಖೆಕೃತಿಗಳನ್ನು ಮೂಡಿಸಲಾಗಿದೆ. ಇಲ್ಲಿಯ ಬಹಳಷ್ಟು ಮಡಕೆಗಳು ತಿಗರಿಯಲ್ಲಿ ತಯಾರಿಸಲಾಗಿದೆ. ಅವುಗಳನ್ನು ಪ್ರಧಾನವಾಗಿ ಗೃಹ ಬಳಕೆಗಾಗಿ ಸಿದ್ಧಪಡಿಸಲಾಗಿದೆ.

**ಆಯುಧಗಳು:** ಉಜ್ಜಿ ನಯಗೊಳಿಸಿದ ಆಯುಧಗಳಲ್ಲಿ ಡೊಲರೈಟ್ ಶಿಲೆಯ ಕೊಡಲಿಗಳು ಅವುಗಳಲ್ಲಿ ಒಂದು ೧೩ ಸೆಂ.ಮೀ. ಉದ್ದ ೮ ಸೆಂ.ಮೀ. ಅಗಲವಿದೆ. ಇನ್ನೊಂದು ತುಂಡಾಗಿದೆ (ಅಪೂರ್ಣ) ಮತ್ತೊಂದು ೭.೫ ಸೆಂ.ಮೀ. ಉದ್ದ, ೬ ಸೆಂ.ಮೀ. ಅಗಲವಿದ್ದು, ಇದರ ತುದಿ ಅತ್ಯಂತ ಹರಿತವಾಗಿದ್ದು, ಒಂದು ಬದಿ ಒಡೆದಿದೆ. ೯.೫ ಸೆಂ.ಮಿ ಉದ್ದದ ಕೊಡಲಿ ಎರಡು ಬದಿಗೆ ಬಹಳಷ್ಟು ಮೊಂಡಾಗಿದ್ದು ಹೆಚ್ಚಿಗೆ ಉಪಯೋಗಿಸಲ್ಪಟ್ಟಿದೆ ಎಂಬುದನ್ನು ಸೂಚಿಸುತ್ತದೆ. ೧೦ ಸೆಂ.ಮೀ ಉದ್ದದ ಮೊತ್ತೊಂದು ಚಿಕ್ಕ ಕೊಡಲಿ ಪರಿಪೂರ್ಣವಾಗಿ ನಿರ್ಮಾಣವಾಗಿದೆ. ಆಯುಧಗಳು ಈ ನೆಲೆಯಲ್ಲಿ ತಯಾರಾದ ಲಕ್ಷಣಗಳಿಲ್ಲ.

**ಮಣಿಗಳು:** ಮಣಿಗಳಲ್ಲಿ, ಸುಡಾವೆ ಮಣ್ಣಿನ ಉದ್ದಮಣಿ, (೨ ಸೆ.ಮೀ. ಉದ್ದ) ತಿಳಿ ನೀಲಿ ವರ್ಣದ ಮದ್ದಳೆ ವಿನ್ಯಾಸದ ಶಿಲಾಮಣಿ, (೧.೪ ಸೆಂ.ಮೀ. ಉದ್ದ) ಉದ್ದ ಮಣಿ (೧.೨ ಸೆಂ.ಮೀ.) ಅರ್ಧ ತುಂಡಾದ ಅಗಲ ಬಿಲ್ಲೆಯ

ರೀತಿಯ ಶಂಖದ ಮಣಿ, (೧.೨ ಸೆಂ.ಮೀ. ವ್ಯಾಸ) ತುಂಡಾದ ಬಿಳಿವರ್ಣದ ಅಲಂಕೃತ ರೇಖೆಗಳಿರುವ ಕಾರ್ನೇಲಿಯನ್ ಮಣಿಗಳು ಪ್ರಮುಖವಾಗಿವೆ. ಇನ್ನೊಂದು ಪದಕ ರೀತಿಯ ಕಾರ್ನೇಲಿಯನ್ ಮಣಿ. ಅದರ ಸುತ್ತಲು ಹೊರ ಮೈ ಮೇಲೆ ಸಾಲಾಗಿ ರೇಖೆಗಳನ್ನು ಕೊರೆದು ಅವುಗಳೊಳಗೆ ಬಿಳಿ ಬಣ್ಣವನ್ನು ತುಂಬಿ (ಎಚಿಂಗ್) ಮಣಿಯನ್ನು ಆಕರ್ಷಕವಾಗಿ ಮಾಡಿದೆ. ಇತರೆ ಶಿಲೆಯ ಸಣ್ಣ ಮಣಿಗಳು ಹಾಗೂ ದುಂಡು ಮತ್ತು ಕೊಳವೆ ಆಕಾರದ ಹವಳಗಳು ಇಲ್ಲಿ ಕಂಡು ಬಂದಿವೆ. ಇವೆಲ್ಲ ಇಲ್ಲಿಯ ಜನರ ಆಭರಣಗಳಾಗಿದ್ದು, ಅವರ ಅಲಂಕಾರ ಪ್ರಿಯತೆಗೆ ಸಾಕ್ಷಿಯಾಗಿವೆ. ವಿಶೇಷವೆಂದರೆ ಇಲ್ಲಿ ಮಣಿ ತಯಾರಿಕಾ ಕಾರ್ಯಾಗಾರವಿದ್ದಿತೆಂದೆ ಹೇಳಬಹುದು. ವಿವಿಧ ರೀತಿಯ ತುಂಡಾದ ಮಣಿಗಳು ಮತ್ತು ಬೆಟ್ಟದ ಒಂದು ಭಾಗದಲ್ಲಿ ಗುಲಾಬಿ ವರ್ಣದ ಬೆಣಚು ಕಲ್ಲುಗಳು ಮತ್ತು ಅರೆ ಪ್ರಶಸ್ತ ಕಲ್ಲುಗಳು ಮತ್ತು ಮಣಿಯನ್ನು ಉಜ್ಜಿ ಹೊಳಪು ಮಾಡಲು ಬಳಸಿದ ಮಸಗಲ್ಲುಗಳು ದೊರೆತಿರುವುದು ಇದಕ್ಕೆ ಸಾಕ್ಷಿಯಾಗಿವೆ. ಅರೆ ಪ್ರಶಸ್ತ್ಯ ಕಲ್ಲಿನ ಹೊರ ಮೈಯಿಂದ ಚೆಕ್ಕೆಯನ್ನು ಎಬ್ಬಿಸಿ, ಕೊರೆದು ಅನಂತರ ಬಟ್ಟಿಯಲ್ಲಿ ಸುಡಲಾಗುತ್ತಿತ್ತು, ಕಲ್ಲುಗಳನ್ನು ಸುಡಲಾಗುವುದರಿಂದ ಅದರಲ್ಲಿಯ ಖನಿಜಗಳು ರೂಪಾಂತರ ಹೊಂದಿ ವಿವಿಧ ಬಣ್ಣವನ್ನು ಪಡೆಯುತ್ತವೆ. ಮೊನಚುಳ್ಳ ಬೈರಿಗೆಗಳಿಂದ ಮಣಿಗಳಲ್ಲಿ ತೂತನ್ನು ಕೊರೆಯಲಾಗುತ್ತಿತ್ತು.

**ಸುಡಾವೆ ಮಣ್ಣಿನ ಗೊಂಬೆಗಳು:** ನೆಲೆಯಲ್ಲಿ ಹಲವು ಸುಡಾವೆ ಮಣ್ಣಿನ ಗೊಂಬೆಗಳು ದೊರೆತಿವೆ. ಗವಿಯೊಂದರಲ್ಲಿ ದೊರೆತಿರುವ ನಗ್ನ ಸ್ತ್ರೀ ವಿಗ್ರಹ (ಗೊಂಬೆ) ೫.೭ ಸೆಂ.ಮಿ. ಎತ್ತರ ಹಾಗೂ ೪ ಸೆಂ.ಮಿ ಅಗಲವಾಗಿದೆ ಸಮಭಂಗಿಯಲ್ಲಿರುವ ಈ ಸ್ತ್ರೀ ವಿಗ್ರಹದಲ್ಲಿ ಸ್ತನಗಳನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ರುಂಡ ಒಡೆದು ಹೋಗಿದೆ ಅದೇ ರೀತಿ ಭುಜದಿಂದ ಕೆಳಗಿನ ಕೈಗಳು, ತೊಡೆಯಿಂದ ಕೆಳಗಿನ ಕಾಲುಗಳು ಭಗ್ನಗೊಂಡಿವೆ. ವ್ಯಕ್ತಿ ರೂಪಣದ ಪರಿಕಲ್ಪನೆಯನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಇನ್ನೂ ನಾಲ್ಕು ಆಕೃತಿಯ ಭಾಗಗಳು ದೊರೆತಿದ್ದು ಅವು ಯಾವ ಆಕೃತಿಯವೆಂದು ನಿರ್ಧರಿಸಲು ಸಾಧ್ಯವಾಗುವುದಿಲ್ಲ.

ನೆಲೆಯಲ್ಲಿ ವೃತ್ತಾಕಾರದ ಮಡಕೆಯ ಬಿಲ್ಲೆಗಳು ಕಂಡು ಬಂದಿವೆ. ೫ ರಿಂದ ೬ ಸೆಂ.ಮೀ ವ್ಯಾಸದ ಬಿಲ್ಲೆ ೧.೩ ಸೆಂ.ಮೀ ದಪ್ಪವಾಗಿದೆ. ಉಳಿದವು ೩.೩, ೩.೫,೩.೦ ಸೆಂ.ಮೀ ವ್ಯಾಸದಲ್ಲಿವೆ. ಎರಡು ಬಿಲ್ಲೆಗಳಿಗೆ ಮಧ್ಯದಲ್ಲಿ ರಂಧ್ರವನ್ನು ಹಾಕಲಾಗಿದೆ. ಒಡೆದ ಮಡಕೆಯ ಚೂರುಗಳನ್ನು ಉಜ್ಜಿ ಉಜ್ಜಿ ವೃತ್ತಾಕಾರದ ಬಿಲ್ಲೆಗಳನ್ನಾಗಿ ಮಾಡಲಾಗಿದೆ. ಪ್ರಾಯಶಃ ಇವು ಮಕ್ಕಳ ಆಟಿಕೆಗಳಾಗಿರಬಹುದು.

**ವರ್ಣಚಿತ್ರಗಳು:** ನೆಲೆಯ ಸಾಂಸ್ಕೃತಿಕ ವೈಶಿಷ್ಟವೆಂದರೆ ಗವಿವರ್ಣ ಚಿತ್ರಗಳು. ಇಲ್ಲಿ ವಾಸಿಸಿದ್ದ ಮಾನವರು ಗವಿ ಕಲ್ಲಾಸರೆಗಳಲ್ಲಿ ತಮ್ಮ ಅಭಿವ್ಯಕ್ತಿಯ ಮಾಧ್ಯಮವಾಗಿ ವರ್ಣಚಿತ್ರಗಳನ್ನು ರಚಿಸಿದ್ದಾರೆ. ಅಂಥ ಚಿತ್ರಗಳು ಹತ್ತು ಎಡೆಗಳಲ್ಲಿ ಕಂಡು ಬಂದಿವೆ. ಒಂದನೆ ಕಲ್ಲಾಸರೆಯಲ್ಲಿ ಎಮ್ಮೆ, ನಕ್ಷತ್ರ ಹಾಗೂ ಮನುಷ್ಯಾಕೃತಿಗಳಿವೆ. ಎರಡರಲ್ಲಿ ಜಿಂಕೆ, ದನ ಎರಡು ಮನುಷ್ಯಾಕೃತಿಯ ಚಿತ್ರಗಳಿವೆ, ಮೂರರಲ್ಲಿ ಪಶುವನ್ನು ತೆಗೆದುಕೊಂಡು ತೆರಳುತ್ತಿರುವ ದನಗಾಯಿಯ ಚಿತ್ರವಿದೆ. ನಾಲ್ಕರಲ್ಲಿ ಎರಡು ಗೂಳಿ, ಆಕಳು, ಮನುಷ್ಯಾಕೃತಿ ಇದೆ. ಐದರಲ್ಲಿ ಮನುಷ್ಯ, ಗೂಳಿ, ಜಿಂಕೆ, ನಾಯಿಗಳು, ಆರರಲ್ಲಿ ಪರಸ್ಪರ ಎದುರಾಗಿ ನಿಂತ ೨ ಜೋಡಿ ಎತ್ತುಗಳು, ಎರಡು ಜಿಂಕೆಗಳು, ಏಳರಲ್ಲಿ ಕುದುರೆ ರೀತಿಯ ಪ್ರಾಣಿಗಳು, ಸೂರ್ಯಕಾಂತಿ ಹೂ, ಗಿಡ, ಆನೆ ಚಿತ್ರಗಳಿವೆ. ಎಂಟರಲ್ಲಿ ಪರಸ್ಪರ ಎದುರಾಗಿ ನಿಂತ ಎತ್ತುಗಳು (ಮುಖ ಸೇರಿವೆ), ಆನೆಸವಾರ, ಜಿಂಕೆ ಚಿತ್ರಗಳಿವೆ. ಒಂಭತ್ತರಲ್ಲಿ ಮನುಷ್ಯ ರೂಪದ ಮೂರು ರೇಖಾಕೃತಿಗಳು ಹಾಗೂ ಹತ್ತರಲ್ಲಿ ಆನೆ ಚಿತ್ರವಿದೆ. ಈ ಚಿತ್ರಗಳಿಂದ ಇಲ್ಲಿಯ ಜನರ ಸಾಮಾಜಿಕ ಬದುಕನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಹೆಚ್ಚಾಗಿ ದನದ ಚಿತ್ರಗಳಿರುವುದರಿಂದ ಈ ನೆಲೆಯ ಜನ ಸಮುದಾಯದಲ್ಲಿ ಪಶುಪಾಲನೆಯ ವೃತ್ತಿ-ಪ್ರಧಾನವಾಗಿರುವುದನ್ನು ಗುರುತಿಸಬಹುದು.

**ಕಾಲಮಾನ:** ಕರ್ನಾಟಕದ ನವ ಶಿಲಾಯುಗದ ಸಂಸ್ಕೃತಿಯ ಕಾಲವನ್ನು ಉತ್ಖನನಗಳ ಆಧಾರದ ಮೂರು ಘಟ್ಟಗಳನ್ನಾಗಿ ವಿಂಗಡಿಸಲಾಗಿದೆ. ತುಂಗಭದ್ರಾ ನದಿ ಪ್ರದೇಶದ ನವಶಿಲಾಯುಗ ಸಂಸ್ಕೃತಿ ಕಾಲವು ಮೂರನೇಯ ಕಾಲಘಟ್ಟಕ್ಕೆ ಸೇರುತ್ತದೆ ಎಂಬುದನ್ನು ಇಲ್ಲಿ ದೊರೆತ ಪ್ರಾಚ್ಯಾವಶೇಷಗಳನ್ನು ಅನುಲಕ್ಷಿಸಿ ಹೇಳಬಹುದು. ಹಾಗಾಗಿ ಪ್ರಸ್ತುತ ಸಂಗಾಪುರ ಕರಡಿ ವಟ್ಲು ಬೆಟ್ಟದ ನವಶಿಲಾಯುಗ ನೆಲೆಯ ಕಾಲಮಾನವು ಕಬ್ಬಿಣ ಯುಗಕ್ಕೆ ಪರಿವರ್ತಿತವಾಗುವ ಮೂರನೇ ಘಟ್ಟದ ಅವಧಿ ಕ್ರಿ.ಪೂ. ೧೪೦೦ ರಿಂದ ೮೦೦ ರ ಅವಧಿಗೆ ಸೇರುತ್ತದೆಂದು ನಿರ್ಧರಿಸಬಹುದು.

**ಸಮಾರೋಪ:** ಕರಡಿವಟ್ಲು ನೆಲೆಯಲ್ಲಿ ಪ್ರಾಚ್ಯಾವಶೇಷಗಳ ಲಭ್ಯತೆ ಹಾಗೂ ಅವುಗಳ ಅನುಲಕ್ಷತೆಯಿಂದ ನೆಲೆಯು ನವಶಿಲಾಯುಗ ಕಾಲದ ತುಂಬಾ ಮಹತ್ವದ ವಸತಿ ನೆಲೆಯಾಗಿತ್ತೆಂಬುದು ವ್ಯಕ್ತವಾಗುತ್ತದೆ. ಇದು ತೆಕ್ಕಲಕೋಟ, ತಾವರಗೇರಿ,



ಸಂಗಾಪುರ : ಕರಡಿವಟ್ಲು ಬೆಟ್ಟ



ನವಶಿಲಾಯುಗ ನೆಲೆಗೆ ಪ್ರಾಚೀನ ದಾರಿ



ಗುಹಾ ನಿವಾಸ



ಗುಹಾ ನಿವಾಸದ ಒಳಭಾಗ



ಗುಹಾ ನಿವಾಸ ೨



ಗುಹಾ ನಿವಾಸ ೩



ವಸತಿ ನಿವೇಶನ



ಹೆರೆಕಲ್ಲು



ಗವಿ ವರ್ಣಚಿತ್ರ – ಪಶುಪಾಲಕ



ಗವಿ ವರ್ಣಚಿತ್ರ – ಎತ್ತು, ನಕ್ಷತ್ರ ಮತ್ತು ಮನುಷ್ಯ ಚಿತ್ರಗಳು

ಆನೆಗೊಂದಿ (ಕಡೇಬಾಗಿಲು) ವಾನಭದ್ರೇಶ್ವರದಂತೆ ಬೆಟ್ಟದ ಮೇಲಿನ ವಸತಿ ನೆಲೆಯಾಗಿದೆ. ಇಲ್ಲಿ ವಿಶಾಲವಾದ ಫಲವತ್ತಾದ ಭೂಮಿ (ಬಯಲು) ಇರುವುದರಿಂದ ಇಲ್ಲಿಯ ಜನ ಕೃಷಿಕರಾಗಿದ್ದರು. ಅದಕ್ಕೆ ಪೂರಕವಾಗಿ ಇಲ್ಲಿಯ ವರ್ಣಚಿತ್ರಗಳಲ್ಲಿ ಪಶುಪಾಲಕ ಹಾಗೂ ದನಗಳ ಚಿತ್ರಗಳೇ ಅಧಿಕವಾಗಿರುವದನ್ನು ಗುರುತಿಸಬಹುದು. ಇಲ್ಲಿಯ ಜನ ಕಂದು ವರ್ಣದ ವಿವಿಧ ರೀತಿಯ ತಿಗರಿ ಸಹಾಯದಿಂದ ಮಾಡಿದ ಸುಟ್ಟ ಮಡಕೆಗಳನ್ನು ಬಳಸಿದ್ದಾರೆ. ಬೇಟೆ ಮತ್ತು ಕೃಷಿಗಾಗಿ ಕಲ್ಲಿನ ಆಯುಧೋಪಕರಣಗಳನ್ನು ಬಳಸುತ್ತಿದ್ದರು. ಪಶುಪಾಲನೆ, ಕೃಷಿ, ಬೇಟೆ, ಆಹಾರ ಸಂಗ್ರಹ ಈ ಜನರ ಆಹಾರ ಸಂಪಾದನೆಯ ಮಾರ್ಗಗಳಾಗಿದ್ದವು. ಅಲಂಕಾರ ಪ್ರಿಯರಾಗಿದ್ದ ಇವರು ಕೊರಳಿಗೆ ಮಣಿಗಳ ಸರ ಧರಿಸುತ್ತಿದ್ದರು. ವಿಶೇಷವಾಗಿ ಅಂಥ


ಮಣಿಗಳು ಮತ್ತು ಮಣಿ ತಯಾರಕ ಸಾಧನಗಳು


ಸುಡಾವೆ ಮಣ್ಣಿನ ಗೊಂಬೆಗಳು ಮತ್ತು ಮಡಕೆಯ ಆಟಿಕೆ ಬಿಲ್ಲೆಗಳು

ಮಣಿಗಳನ್ನು ಇಲ್ಲಿಯೇ ತಯಾರಿಸಲಾಗುತ್ತಿತ್ತು. ತಮ್ಮ ಭಾವನೆಗಳ ಅಭಿವ್ಯಕ್ತಿಗಾಗಿ ಗವಿ, ಕಲ್ಲಾಸರೆಗಳಲ್ಲಿ ವರ್ಣ ಚಿತ್ರಗಳನ್ನು ಬಿಡಿಸುತ್ತಿದ್ದರು. ಮಕ್ಕಳ ಮನೋರಂಜನೆಗಾಗಿ ವಿವಿಧ ರೀತಿಯ ಮಣ್ಣಿನ ಗೊಂಬೆಗಳನ್ನು ತಯಾರಿಸುತ್ತಿದ್ದರು. ಮಡಿಕೆ ಬಿಲ್ಲೆಗಳಿಗೆ ರಂಧ್ರ ಹಾಕಿ ಆಟಿಕೆ ವಸ್ತುಗಳಾಗಿ ಬಳಸಲಾಗುತ್ತಿತ್ತು. ವಸತಿಗಾಗಿ ಗುಡಿಸಲುಗಳ ಜೊತೆಗೆ ಗವಿಗಳನ್ನು ಮನೆಗಳನ್ನಾಗಿ ಪರಿವರ್ತಿಸಿಕೊಂಡು ವಾಸಿಸುತ್ತಿದ್ದರು. ಒಟ್ಟಾರೆ ಈ ಅಧ್ಯಯನದಿಂದ ಕರಡಿವಟ್ಲು ಬೆಟ್ಟದಲ್ಲಿ ಒಂದು ಸಾಧಾರಣ ಗ್ರಾಮ ಜೀವನ ಪದ್ಧತಿ ಸುಮಾರು ೩೦೦೦ ಸಾವಿರ ವರ್ಷಗಳ ಹಿಂದೆಯೇ ಚೆನ್ನಾಗಿ ಬೆಳೆದಿತ್ತು ಎಂಬುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಇದು ಕೃಷ್ಣಾ–ತುಂಗಭದ್ರಾ ನದಿಗಳ ನಡುವಣ ಪ್ರದೇಶದ ಒಂದು ಮಹತ್ವದ ನವಶಿಲಾಯುಗದ ನೆಲೆಯಾಗಿದೆ ಎಂದು ಗುರುತಿಸಬಹುದು. ಈ ನೆಲೆಯ ಅಧ್ಯಯನದಿಂದ ಈ ಪ್ರದೇಶದ ನವಶಿಲಾಯುಗ ಕಾಲದ ಜೀವನ ಸಂಸ್ಕೃತಿಯನ್ನು ಇನ್ನಷ್ಟು ತಿಳಿದುಕೊಳ್ಳಲು ಸಾಧ್ಯವಾಗಿದೆ.



## ಆಕರ ಗ್ರಂಥಗಳು


೧. Allchin F.R, 1960, Piklihal Excavations (APGAS-1). The Govt of Andhra Pradesh , Hyderabad.

೨. Thapar B.K., 1957, 'Maski A Chalcolithic site of Southern Deccan' Ancient India, No. 13, New Delhi.

೩. Andrew.M, Bavar, Pitar G. Johanson & Radhika.L, Barvar, 2007, `Towards a political ecology in early South India: Preliminary Considerations of the Socia Political of land and Animal use in the Southern Deccan Neolithic through Historic periods' Asian perspectives No.46 (1) spring P.3-35.

೪. Sankdia H.D. ANSARI. D & M.K. Dhavalikar, 1971 'Inamgaon' A chalcolithic settlement in Western India, Asian perspectives. XIV: 140.

೫. ಸುಂದರ ಅ., ೧೯೯೭, ಕರ್ನಾಟಕ ಚರಿತ್ರೆ ಸಂಪುಟ–೧ ಕನ್ನಡ ವಿ.ವಿ. ಹಂಪಿ.

೬ ಸುಂದರ ಅ., (ಸಂ) ೨೦೦೯, ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ , ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೭. ಶರಣಬಸಪ್ಪ ಕೋಲ್ಕಾರ್, ೨೦೧೦, ಶಿಲಾಯುಗದ ಗವಿಚಿತ್ರಗಳು, ಬಸವ ಪ್ರಕಾಶನ, ಗುಲ್ಬರ್ಗಾ.

# ಕಡೂರು ತಾಲೂಕಿನ ನವಶೋಧಿತ ಶಿಲಾಯುಗದ ನೆಲೆಗಳು

ಬಿ.ಈ. ರೇಣುಕಸ್ವಾಮಿ ಒಡೆಯರ್*

ಪಶ್ಚಿಮ ಘಟ್ಟದ ಪರಿಸರದಲ್ಲಿರುವ ಚಿಕ್ಕಮಗಳೂರು ಜಿಲ್ಲೆಯು ವಿವಿಧ ರೀತಿಯ ಸಸ್ಯ, ಪ್ರಾಣಿ, ಖನಿಜ ಸಂಪತ್ತುಗಳನ್ನು ಹೊಂದಿದೆ. ಇಲ್ಲಿರುವ ಶಿಖರ ಶ್ರೇಣಿಗಳಲ್ಲಿ ಭದ್ರ, ತುಂಗಾ, ನೇತ್ರಾವತಿ, ಹೇಮಾವತಿ, ವೇದಾವತಿ ನದಿಗಳು ಹುಟ್ಟಿ ಕೃಷ್ಣ ಮತ್ತು ಕಾವೇರಿ ಕೊಳ್ಳದಲ್ಲಿ ಹರಿಯುತ್ತವೆ. ಈ ಪ್ರಾಕೃತಿಕ ಸಂಪತ್ತುಗಳು ಮನುಷ್ಯನ ವಾಸಕ್ಕೆ ಯೋಗ್ಯ ವಾತಾವರಣವನ್ನು ಸೃಷ್ಟಿಸಿವೆ. ಈ ಪರಿಸರದ ಹಲವಾರು ಆದಿಮ ಕಾಲದ ಮನುಷ್ಯನ ನೆಲೆಗಳನ್ನು ಅನೇಕ ವಿದ್ವಾಂಸರು ಶೋಧಿಸಿ ಆ ಕಾಲದ ಸಂಸ್ಕೃತಿಯ ಮೇಲೆ ಬೆಳಕನ್ನು ಚೆಲ್ಲಿದ್ದಾರೆ.

ಕಡೂರು ತಾಲೂಕಿನ ಅಗ್ರಹಾರ, ನಿಡಘಟ್ಟ, ಲಿಂಗದಹಳ್ಳಿ, ತುರುವನಹಳ್ಳಿ, ಗೆದ್ಲಹಳ್ಳಿ, ಕಡೂರು, ಮಲ್ಲೇಶ್ವರ ನೆಲೆಗಳನ್ನು ರಾಬರ್ಟ್ ಬ್ರೂಸ್‌ಫೂಟ್[೧] ಶೇಷಾದ್ರಿ[೨] ಪೂಣಚ್ಚ[೩] ತಿಪ್ಪೇಸ್ವಾಮಿ[೪] ಮೊದಲಾದವರು ಶೋಧಿಸಿ ಪ್ರಕಟಿಸಿದ್ದಾರೆ.

ಪ್ರಸ್ತುತ ಅಧ್ಯಯನದಲ್ಲಿ ವೇದಾವತಿ ನದಿ ಪಾತ್ರದ ತಂಗಲಿ, ಕಾನಗೊಂಡನಹಳ್ಳಿ, ಚಿಕ್ಕತಂಗಲಿ, ಮಾಡಾಳು, ಅಂಚೆ ಚೋಮನಹಳ್ಳಿ ನೆಲೆಗಳಲ್ಲಿ ನವಶಿಲಾಯುಗದಿಂದ ಆದಿ ಇತಿಹಾಸ ಕಾಲದವರೆಗಿನ ಶಿಲೋಪಕರಣಗಳು, ಮಡಕೆ ಚೂರುಗಳು, ಕಲ್ಲುಳಿಗಳು, ಹಾಪ್‌ಸ್ಕಾಚ್ ಬಿಲ್ಲೆಗಳು, ವರ್ಣಚಿತ್ರಗಳನ್ನು ಶೋಧಿಸಲಾಗಿದೆ. ಈ ನೆಲೆಗಳನ್ನು ದಾಖಲಿಸುವುದು ಪ್ರಸ್ತುತ ಪ್ರಬಂಧದ ಉದ್ದೇಶವಾಗಿದೆ.

**ತಂಗಲಿ:** ಕಡೂರಿನಿಂದ ಸುಮಾರು ೬ ಕಿ.ಮೀ. ಅಂತರದಲ್ಲಿರುವ ತಂಗಲಿ ಗ್ರಾಮವು ತಂಗಲಿಹಳ್ಳದ ದಡದಲ್ಲಿದೆ. ತಂಗಲಿ–ಕಾನಗೊಂಡನಹಳ್ಳಿ ರಸ್ತೆಯಲ್ಲಿ ತಂಗಲಿ ಗ್ರಾಮಕ್ಕೆ ಸೇರಿದ ಹುಲಿಕಲ್ಲು ಎಂದು ಕರೆಯುವ ಪ್ರದೇಶವಿದೆ. ಇಲ್ಲಿ ಏಳೆಂಟು ಎಕರೆ ಜಾಗದಲ್ಲಿ ನವಶಿಲಾಯುಗ, ಬೃಹತ್ ಶಿಲಾಯುಗ, ಆದಿ ಇತಿಹಾಸ ಕಾಲದ ಅನೇಕ ಕುರುಹುಗಳು ಪತ್ತೆಯಾಗಿರುವುದರಿಂದ ಇದು ಮಹತ್ವದ ನೆಲೆಯಾಗಿದೆ.



ಕಾನಗೊಂಡನಹಳ್ಳಿಯ ವರ್ಣಚಿತ್ರ



ಅಂಚೆ ಚೋಮನಹಳ್ಳಿಯ ಶಿಲಾವೃತ್ತ ಸಮಾಧಿ

**ನವಶಿಲಾಯುಗದ ಆಯುಧಗಳು:** ದುಡ್ಡಿನ ಕಲ್ಲು ಎಂದು ಕರೆಯುವ ಬಂಡೆಯ ಸುತ್ತಮುತ್ತ ಡೊಲೆರೈಟ್ ಶಿಲೆಯಲ್ಲಿ ಮಾಡಿದ ೬ ಸೆಂ.ಮೀ. ಅಗಲ, ೧೨ ಸೆಂ.ಮೀ. ಉದ್ದವಿರುವ ಕೊಡಲಿ, ಮುರಿದುಹೋಗಿರುವ ನಯಗೊಳಿಸಿದ ಎರಡು ಉಪಕರಣಗಳು ಪತ್ತೆಯಾಗಿವೆ. ಡೊಲೆರೈಟ್ ಶಿಲೆಯ ಅರ್ಧ ಚಂದ್ರಾಕೃತಿ ಕಲ್ಲು, ಆಯುಧ ತಯಾರಿಸುವ ಸಂದರ್ಭದಲ್ಲಿ ಹಾಳಾದವುಗಳು, ಅನೇಕ ಚಿಕ್ಕಪುಟ್ಟ ಕಲ್ಲುಗಳು ಕಾಣಸಿಗುತ್ತವೆ. ಇಲ್ಲಿಂದ ಕಾಲುದಾರಿಯಲ್ಲಿ ಸುಮಾರು ೨ ಕಿ.ಮೀ. ಅಂತರದಲ್ಲಿ ಕುಂತಿಹೊಳೆ ಸ್ಥಳವಿದೆ. ಇಲ್ಲಿ ಹುಟ್ಟು ಬಂಡೆಗಳ ಮೇಲೆ ಕಲ್ಲುಗಳನ್ನು ಉಜ್ಜಿರುವ ಗುರುತುಗಳಿವೆ. ಇಲ್ಲಿಯೇ ಬೇರೆ ಕಡೆಯಿಂದ ಸಾಗಿಸಿದ ಉಂಡೆ ಗಾತ್ರದ ಡೊಲೆರೈಟ್ ಕಲ್ಲುಗಳಿವೆ. ಬಹುಷಃ ಇಲ್ಲಿ ಕೊಡಲಿಗಳನ್ನು ಉಜ್ಜಿ ನಯಗೊಳಿಸಿರಬಹುದು. ಈ ಕೊಡಲಿಗಳನ್ನು ಬೇಟೆಯಾಡಲು, ಕತ್ತರಿಸಲು, ಸೀಳಲು, ಕೃಷಿ ಉಪಯೋಗಕ್ಕಾಗಿ ಬಳಸುತ್ತಿದ್ದರು. ಹುಲಿಕಲ್ಲು ನೆಲೆಯ ದುಡ್ಡಿನ ಕಲ್ಲಿನ ಸುತ್ತ ವಿವಿಧ ಗಾತ್ರದ ಕುಟ್ಟುವ ಕಲ್ಲುಗಳು, ವೃತ್ತಾಕಾರದ ೭, ೬, ೫ ಸೆಂ.ಮೀ. ವ್ಯಾಸವಿರುವ ಎಸೆಗಲ್ಲುಗಳು ಸಿಕ್ಕಿವೆ.

* ಪಿಎಚ್‌ಡಿ ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿವಿ. ಹಂಪಿ, ಮೊ. ೯೭೪೦೦೦೮೩೦೭



ತಂಗಲಿಯಲ್ಲಿ ಪತ್ತೆಯಾಗಿರುವ ಶಿಲಾಯುಧಗಳು ಮತ್ತು ಮಡಿಕೆ ಚೂರುಗಳು



ತಂಗಲಿಯ ಡೆಪಾಸಿಟೆಡ್ ಸ್ಥಳ

**ಬೃಹತ್ ಶಿಲಾಯುಗ:** ಈ ನೆಲೆಯಲ್ಲಿ ಹೇರಳವಾಗಿ ಕೆಂಪು, ಕಪ್ಪು–ಕೆಂಪು ದ್ವಿವರ್ಣದ ಮಡಕೆಯ ರಿಮ್, ಬಾಡಿ ಮತ್ತು ಬೇಸ್ ಭಾಗಗಳು ಹೇರಳವಾಗಿ ದೊರಕಿವೆ. ಟೆರ್ರಾಕೋಟಾದ ರಂಧ್ರವಿರುವ ೨.೫ ಸೆಂ.ಮೀ. ವ್ಯಾಸದ ವೃತ್ತಾಕಾರದ ೨ ಬಿಲ್ಲೆಗಳು ದೊರಕಿವೆ. ಇವುಗಳನ್ನು ಆಭರಣಗಳನ್ನಾಗಿ ಬಳಸಿರುವ ಸಾಧ್ಯತೆ ಇದೆ. ಇವುಗಳು ಬ್ರಹ್ಮಗಿರಿಯಲ್ಲಿ ಸಿಕ್ಕಿರುವ ಮಣಿಗಳಿಗೆ ಹೋಲಿಕೆಯಾಗುತ್ತವೆ.[೫] ಸಮೀಪದ ತಿಮ್ಮನಾಯಕನವರ ಹೊಲದಲ್ಲಿ ಪಾಂಡವರಗುತ್ತಿ ಎಂದು ಹೇಳುವ ಶಿಲಾವೃತ್ತ ಸಮಾಧಿ ಕೃಷಿ ಚಟುವಟಿಕೆಯಿಂದಾಗಿ ನಾಶವಾಗಿದೆ.

**ಆದಿ ಇತಿಹಾಸ ಕಾಲ:** ಈ ನೆಲೆಯಲ್ಲಿ ಕೆಂಪು, ಕಪ್ಪು ವರ್ಣದ ಮಡಕೆಗಳು ಪತ್ತೆಯಾಗಿವೆ. ಸುಟ್ಟ ಮಣ್ಣಿನಿಂದ ಮಾಡಿದ ಮಾಡಿದ ರಂಧ್ರವಿರುವ ೩.೬ ಸೆಂ.ಮೀ. ಮತ್ತು ೨.೬ ಸೆಂ.ಮೀ. ವ್ಯಾಸವಿರುವ ವೃತ್ತಾಕಾರದ ಬಿಲ್ಲೆಗಳು, ತುಂಡಾದ ಮಡಕೆಯಿಂದ ಮಾಡಿದ ವೃತ್ತಾಕಾರದ ಬಿಲ್ಲೆಗಳು ಪತ್ತೆಯಾಗಿವೆ. ಇವುಗಳು ಮಕ್ಕಳ ಆಟಿಕೆ ವಸ್ತುಗಳಾಗಿರಬಹುದು. ಇಂದಿನ ಕುಂಟೆಬಿಲ್ಲೆ ಆಟದಲ್ಲಿ ಈ ರೀತಿಯ ಬಿಲ್ಲೆ ಬಳಸುತ್ತಾರೆ. ಈ ರೀತಿಯ ಬಿಲ್ಲೆಗಳು ಹೆಮ್ಮಿಗೆ ನೆಲೆಯಲ್ಲಿ ಪತ್ತೆಯಾಗಿದೆ.[೬]

ದುಡ್ಡಿನ ಕಲ್ಲು ಎಂದು ಕರೆಯುವ ಬಂಡೆಗೆ ಹೊಂದಿಕೊಂಡಂತೆ ಡೆಪಾಸಿಟೆಡ್ ಸ್ಥಳವಿದೆ. ಇಲ್ಲಿ ಉಪಯೋಗಕ್ಕೆ ಬಾರದ ವಸ್ತುಗಳನ್ನು ಹಾಕಿರುವುದನ್ನು ಗಮನಿಸಬಹುದು. ಕಲ್ಲು ಹೊಡೆಯುವವರಿಂದ ಇದು ಸೆಕ್ಷನ್‌ನಂತೆ ನಿರ್ಮಿತವಾಗಿದೆ. ೪೮,೧೦೮ ಸೆಂ.ಮೀ. ಕೆಳಭಾಗದಲ್ಲಿ ಮೂಳೆಗಳ ಅವಶೇಷಗಳಿವೆ. ಕಪ್ಪು, ಕೆಂಪು ಮಡಕೆಯ ಚೂರುಗಳು, ಶಂಖುವಿನ ತುಂಡುಗಳು, ಕಬ್ಬಿಣದ ಕಿಟ್ಟಗಳು ಕಾಣಿಸುತ್ತವೆ. ಈ ಮಣ್ಣು ಬೂದಿ ಮಣ್ಣಿನಂತೆ ಗೋಚರಿಸುತ್ತದೆ.

ಹುಲಿಕಲ್ಲು ನೆಲೆಯಿಂದ ೧೦೦–೧೫೦ ಮೀ. ಅಂತರದಲ್ಲಿ ಭೀಮನ ಅರೆಕಲ್ಲು ಎಂದು ಹೇಳುವ ಕಲ್ಲಾಸರೆ ಇದೆ. ಈ ಕಲ್ಲಾಸರೆಯಲ್ಲಿ ಮಾನವರು ನಿಲ್ಲಲು ಸಾಧ್ಯವಿಲ್ಲ. ಕುಳಿತುಕೊಂಡು, ಮಲಗಿ ವಿಶ್ರಮಿಸಬಹುದಾಗಿದೆ. ಇದರಲ್ಲಿ ಬಿಳಿ ವರ್ಣದ ವರ್ಣಚಿತ್ರವಿದೆ. ಇಂದಿನ ಬರವಣಿಗೆಯು ಇರುವುದರಿಂದ ವರ್ಣಚಿತ್ರವು ಹಾಳಾಗಿದ್ದರೂ ಕೆಲವೊಂದನ್ನು ಗುರ್ತಿಸಬಹುದಾಗಿದೆ. ಈ ಕಲ್ಲಾಸರೆಯ ಮೇಲ್ಭಾವಣಿಯ ಕೆಳಗೆ ಗುಂಡು ಕಲ್ಲಿದೆ. ಇದರ ಸುತ್ತಲೂ ವಿವಿಧ ಅಳತೆಯ ೧೮ ಕಲ್ಗುಳಿಗಳು ಇವೆ. ರಾಬರ್ಟ್ ಕೆ. ಬೆಡ್ನರಿಕ್ ಅವರು ವೈಜ್ಞಾನಿಕ ಅಧ್ಯಯನ ನಡೆಸಿ ಕಲ್ಗುಳಿಗಳ ಇತಿಹಾಸವನ್ನು ಆದಿ ಹಳೇ ಶಿಲಾಯುಗಕ್ಕೆ ಕೊಂಡೊಯ್ದಿದ್ದಾರೆ.[೭] ಶಿಲೋಪಕರಣಗಳನ್ನು ಅಥವಾ ಕಲ್ಲು ಕೊಡಲಿಗಳ ಮೊನೆಗಳನ್ನು ಮಸೆದು ಹರಿತಗೊಳಿಸುವ ಕಾರಣವಾಗಿಯೂ ಬಂಡೆಗಳ ಮೇಲೆ ಕುಳಿಗಳು ಉಂಟಾದ್ದನ್ನು ಸಂಗನಕಲ್ಲು ಪರಿಸರದಲ್ಲಿ ಗುರ್ತಿಸಲಾಗಿದೆ.[೮]

ಈ ಕಲ್ಗುಳಿಗೆ ಸಂಬಂಧಿಸಿದಂತೆ ಸ್ಥಳೀಯರಲ್ಲಿ ಐತಿಹ್ಯವಿದೆ. ಭೀಮನು ದೊಡ್ಡ ಕಲ್ಲನ್ನು ಇಡುವ ಸಂದರ್ಭದಲ್ಲಿ ಬುಡದಲ್ಲಿದ್ದ ಕಲ್ಲಿನ ಮೇಲೆ ಮಂಡಿಯೂರಿದ್ದರಿಂದ ಈ ಕಲ್ಗುಳಿಗಳು ಉಂಟಾಗಿವೆ ಎಂದು ಹೇಳುತ್ತಾರೆ. ಇದೇ ರೀತಿಯ ಐತಿಹ್ಯ ಚಿತ್ರದುರ್ಗದ ಭೀಮನಗುಂಡಿಗೂ ಇದೆ.[೯]

ತಂಗಲಿಯ ಹುಲಿಕಲ್ಲು ಪ್ರದೇಶವು ನವಶಿಲಾಯುಗದಿಂದ ಇತಿಹಸ ಕಾಲದವರೆಗೆ ವಸತಿ ನೆಲೆಯಾಗಿತ್ತೆಂದು ಊಹಿಸಬಹುದಾಗಿದೆ. ಉತ್ಖನನದ ಮೂಲಕ ನಿಖರವಾಗಿ ಕಾಲಮಾನ, ವಸತಿ ನೆಲೆ, ಆ ಕಾಲದ ಸಂಸ್ಕೃತಿಯನ್ನು ತಿಳಿಯಬಹುದಾಗಿದೆ.

**ಕಾನಗೊಂಡನಹಳ್ಳಿ:** ಕಡೂರು ತಾಲ್ಲೂಕು ಕೇಂದ್ರದಿಂದ ಸುಮಾರು ೮ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮಕ್ಕೆ ಸೇರಿದ 'ಪುಣ್ಯಕಲ್ಲು ಬೆಟ್ಟ' ಎಂದು ಕರೆಯುವ ಬೆಟ್ಟದ ತಪ್ಪಲಿನಲ್ಲಿ 'ದೇವರ ಕಲ್ಲು' ಎಂದು ಹೇಳುವ ಬೃಹದಾಕಾರದ ಬಂಡೆಯಿದೆ.

ಬಂಡೆಯಲ್ಲಿ ಉರುಮಂಜಿನಲ್ಲಿ ಸುಮಾರು ೧x೧ ಮೀ. ವಿಸ್ತಾರದಲ್ಲಿ ವರ್ಣಚಿತ್ರಗಳನ್ನು ಬಿಡಿಸಲಾಗಿದೆ. ಜಿಂಕೆ, ಸ್ವಲ್ಪ ಉದ್ದ ಕತ್ತಿನ ಪ್ರಾಣಿ ಚಿತ್ರವನ್ನು ಗುರ್ತಿಸಬಹುದಾಗಿದೆ. ಉಳಿದಂತೆ ರೇಖೆಗಳು, ಬಾಣದ ಗುರುತು ಗೋಚರಿಸುತ್ತದೆ. ಇದು ಸಂಪೂರ್ಣವಾಗಿ ಬಿಸಿಲು, ಮಳೆಗೆ ತುತ್ತಾಗುತಿದೆ. ಬಂಡೆಯ ಮುಂದೆ ಚಿಕ್ಕ ಬಂಡೆಕಲ್ಲಿದ್ದು ಇದರ ಮೇಲೆ ನಿಂತು ಚಿತ್ರವನ್ನು ಬಿಡಿಸಲಾಗಿದೆ. ಪ್ರಸ್ತುತ ಈ ಬೆಟ್ಟದಲ್ಲಿ ಗಣಿಗಾರಿಕೆ ನಡೆಯುತ್ತಿದ್ದು ಈ ವರ್ಣಚಿತ್ರ ನಾಶವಾಗುವ ಹಂತದಲ್ಲಿದೆ.

**ಚಿಕ್ಕತಂಗಲಿ:** ಚಿಕ್ಕತಂಗಲಿ ಗ್ರಾಮವು ತಂಗಲಿ, ಕಾನಗೊಂಡನಹಳ್ಳಿ ಪಕ್ಕದಲ್ಲಿದೆ. ಗ್ರಾಮದ ಮಲ್ಲಿಕಾರ್ಜುನ, ಸೋಮಣ್ಣನವರ ಹೊಲದಲ್ಲಿ ವಿವಿಧ ಅಳತೆಯ ಬೃಹತ್ ಶಿಲಾಯುಗದ ೪ ಶಿಲಾವೃತ್ತ ಸಮಾಧಿಗಳಿವೆ. ಇವುಗಳನ್ನು ಸ್ಥಳೀಯರು ಪಾಂಡವರಗುತ್ತಿ ಎಂದು ಕರೆಯುವರು.

**ಮಾಡಾಳು:** ಮಾಡಾಳು ಕಡೂರಿನಿಂದ ೧೩ ಕಿ.ಮೀ. ಅಂತರದಲ್ಲಿದೆ. ದಂಡಿ ತಿಮ್ಮಪ್ಪನವರ ಹೊಲದಲ್ಲಿ ಮುದ್ರೆಕಲ್ಲು ಎಂದು ಕರೆಯುವ ಸುಮಾರು ೩ ಅಡಿ ಎತ್ತರದ ನಿಲುವುಗಲ್ಲಿನಲ್ಲಿ ಕಲ್ಗುಳಿಗಳಿವೆ.

**ಅಂಚೆ ಚೋಮನಹಳ್ಳಿ:** ಅಂಚೆ ಚೋಮನಹಳ್ಳಿ ಕಡೂರಿನಿಂದ ೧೮ ಕಿ.ಮೀ. ಅಂತರದಲ್ಲಿದೆ. ದೊಡ್ಡಹಳ್ಳದಿಂದ ೧ ಕಿ.ಮೀ. ಅಂತರದಲ್ಲಿರುವ ಧರಣಿ ಬಿನ್ ಸಣ್ಣೇಗೌಡರವರ ಹೊಲದಲ್ಲಿ ವಿವಿಧ ಅಳತೆಯ ಸುಮಾರು ೩೦ ಶಿಲಾವೃತ್ತಗಳಿವೆ. ಒಂದೇ ಸ್ಥಳದಲ್ಲಿರುವುದರಿಂದ ಕೃಷಿ ಚಟುವಟಿಕೆಗೆ ಈ ಜಾಗ ಬಳಕೆಯಾಗಿಲ್ಲವಾದ್ದರಿಂದ ಸುಸ್ಥಿತಿಯಲ್ಲಿವೆ. ಇವುಗಳನ್ನು ಸ್ಥಳೀಯರು ಪಾಂಡವರಗುತ್ತಿ ಎಂದು ಕರೆಯುವರು. ಇಷ್ಟೊಂದು ಸಮಾಧಿಗಳಿರುವುದರಿಂದ ಸನಿಹದಲ್ಲೇ ವಸತಿ ನೆಲೆ ಇರುವ ಸಾಧ್ಯತೆಯಿದೆ. ಪ್ರಸ್ತುತ ಯಾವುದೇ ರೀತಿಯ ಕುರುಹುಗಳು ಪತ್ತೆಯಾಗಿಲ್ಲ. ಸೂಕ್ಷ್ಮವಾಗಿ ಕ್ಷೇತ್ರಕಾರ್ಯ ಕೈಗೊಂಡಲ್ಲಿ ವಸತಿ ನೆಲೆಯನ್ನು ಶೋಧಿಸಬಹುದಾಗಿದೆ.

ಪ್ರಸ್ತುತ ಪ್ರಬಂಧದ ಎಲ್ಲಾ ನೆಲೆಗಳು ವೇದಾವತಿ ನದಿ ಪಾತ್ರದಲ್ಲಿದ್ದು ಮನುಷ್ಯನಿಗೆ ನೀರಿನ ಸೌಕರ್ಯವನ್ನು ಒದಗಿಸಿವೆ. ಇಲ್ಲಿರುವ ಬೆಟ್ಟ ಗುಡ್ಡಗಳು ರಕ್ಷಣೆಯನ್ನು ನೀಡಿ, ಅವನಿಗೆ ಮತ್ತು ಅವನ ಪ್ರಾಣಿಗಳಿಗೆ ಆಹಾರವನ್ನು ಒದಗಿಸಿವೆ. ಹಾಗೂ ಕಲ್ಲಿನ ಆಯುಧ ತಯಾರಿಸಲು, ಗೋರಿಗಳನ್ನು ನಿರ್ಮಿಸಲು ಕಲ್ಲುಗಳನ್ನು ಪೂರೈಸಿವೆ. ಈ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡಲ್ಲಿ ಇನ್ನು ಅನೇಕ ನೆಲೆಗಳನ್ನು ಶೋಧಿಸಬಹುದಾಗಿದೆ. ತಂಗಲಿಯ ಹುಲಿಕಲ್ಲು ನೆಲೆಯು ಹೆಚ್ಚು ಮಹತ್ವದ್ದಾಗಿದ್ದು ಹೆಚ್ಚಿನ ಅಧ್ಯಯನ ಯೋಗ್ಯವಾಗಿದೆ.

[ಪಿಎಚ್.ಡಿ ಅಧ್ಯಯನಕ್ಕೆ ಮಾರ್ಗದರ್ಶಿಸಿ ಪ್ರೋತ್ಸಾಹಿಸುತ್ತಿರುವ ಮಾರ್ಗದರ್ಶಕರಾದ ಡಾ. ಶಕುಂತಲ ಎನ್., ಹಂಪಿ ವಿವಿ ಪುರಾತತ್ವ ವಿಭಾಗದ ಎಲ್ಲಾ ಪ್ರಾಧ್ಯಾಪಕರುಗಳಿಗೆ, ಎಸ್‌ಜೆಆರ್ ಶಿಕ್ಷಣ ಸಂಸ್ಥೆಗೂ, ಅಧ್ಯಯನ ಕ್ಷೇತ್ರದ ಸ್ಥಳೀಯರೆಲ್ಲರಿಗೂ ಕೃತಜ್ಞತೆಗಳು.]



## ಅಡಿಟಿಪ್ಪಣಿಗಳು

೧. Abhishankar K., 1981, Karnataka State Gazetteer, Chikmagalur District, Govt. of Karnataka, Bangalore. p. 35.
೨. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೪೭–೨೪೯.
೩. ಶಿವತಾರಕ್ ಕೆ.ಬಿ., ೨೦೦೧, ಅದೇ., ಪು. ೨೪೭–೨೪೯.
೪. ತಿಪ್ಪೇಸ್ವಾಮಿ ಎಚ್., ೨೦೦೯, 'ಕಡೂರಿನ ಪುರಾತತ್ವ ಅವಶೇಷಗಳು', ಗೋಪಾಲ್ ಆರ್. (ಸಂ) 'ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ' ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪು. ೧೮.
೫. Wheeler, R.E.M., 1948. Brahmagiri and Chandravalli 1947: Megalithic and other Cultures in the Chitradurga District, Mysore State, Ancient India, IV, p. 266-267.
೬. Hanumantha Rao M., Nagaraju S. 1974, Excavation at Hemmige, Directorate of Archaeology & Museums in Karnataka, Mysore. P. 45-46.
೭. ಮೋಹನ ಆರ್., ೨೦೧೯, ಕರ್ನಾಟಕದ ಆದಿಮ ಚಿತ್ರಕಲೆ, ಇತಿಹಾಸ ದರ್ಪಣ ಪ್ರಕಾಶನ, ಬೆಂಗಳೂರು, ಪು. ೧೩೦.
೮. ಲಕ್ಷ್ಮಣ್ ತೆಲಗಾವಿ, ೨೦೦೬, 'ಚಿತ್ರದುರ್ಗ ಪರಿಸರದ ಕುಳಿಭರಿತ ಭೀಮನಗುಂಡು–ಪುರಾತಾತ್ವಿಕ ಅಧ್ಯಯನ', ಇತಿಹಾಸ ದರ್ಶನ, ಸಂ. ೨೧, ಪು. ೩.
೯. ಲಕ್ಷ್ಮಣ್ ತೆಲಗಾವಿ, ೨೦೦೬, ಅದೇ., ಪು. ೪.

## ಆಕರ ಗ್ರಂಥಗಳು

೧. Gururaja Rao B.K., 1972; Megarothic Culture in South India, Prasaranga, University of Mysore.
೨. ಸುಂದರ ಅ., ೧೯೯೭, ಕರ್ನಾಟಕ ಚರಿತ್ರೆ ಸಂ. ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೩. ರಾಮದಾಸರೆಡ್ಡಿ ಎಸ್.ಜಿ., ೨೦೦೯. ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

# ಕಳಸ ಪರಿಸರದ ನವಶೋಧಿತ ಬೃಹತ್ ಶಿಲಾಯುಗದ ಸಮಾಧಿ ಮತ್ತು ಕಲ್ಗುಳಿಗಳು

**ಕೆ.ಎನ್. ಸುಪ್ರೀತ***

**ಚಿ**ಕ್ಕಮಗಳೂರು ಜಿಲ್ಲೆ ಕರ್ನಾಟಕದ ಮಲೆನಾಡು ಮತ್ತು ಅರೆಮಲೆನಾಡು ಭೌಗೋಳಿಕ ಪರಿಸರವನ್ನು ಹೊಂದಿರುವ ಪ್ರದೇಶ. ಈ ಜಿಲ್ಲೆಯ ಕಡೂರು ಸಮೀಪ ಲಿಂಗದಹಳ್ಳಿಯಲ್ಲಿ ರಾಬರ್ಟ ಬ್ರೂಸ್ ಫೂಟ್ ನೂತನ ಶಿಲಾಯುಗದ ಕೊಡಲಿಗಳನ್ನು ಸಂಶೋಧಿಸುವ ಮೂಲಕ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನಕ್ಕೆ ನಾಂದಿ ಹಾಡಿದರು. ಗುರುರಾಜ್‌ರಾವ್ ಜಿಲ್ಲೆಯ ಅನೇಕ ಬೃಹತ್ ಶಿಲಾಯುಗ ಸಂಸ್ಕೃತಿಯ ನಿವೇಶನಗಳನ್ನು ಚಿಕ್ಕಮಗಳೂರು, ಕಡೂರು ಮತ್ತು ಮೂಡಿಗೆರೆ ತಾಲೂಕಿನಲ್ಲಿ ಸಂಶೋಧಿಸಿ ಪ್ರಕಟಿಸಿದ್ದಾರೆ. ನರಸಿಂಹಯ್ಯ ಹಾಗೂ ಪೂಣಚ್ಚ ಅವರು ಮಲೆನಾಡು ಪ್ರದೇಶದಲ್ಲಿ ಪ್ರಾಕ್ಚಾರಿತ್ರಿಕ ನಿವೇಶನಗಳನ್ನು ಸಂಶೋಧಿಸಿದ್ದಾರೆ. ಅದರಲ್ಲೂ ಪ್ರಮುಖವಾಗಿ ಪೂಣಚ್ಚ ಮೂಡಿಗೆರೆ ತಾಲೂಕಿನ ಕಗ್ಗನಳ್ಳದಲ್ಲಿ ಆದಿಹಳೆಶಿಲಾಯುಗಕ್ಕೆ ಸಂಬಂಧಿಸಿದ ಆಯುಧವನ್ನು ಸಂಶೋಧಿಸಿದ್ದಾರೆ. ಮುರಗೇಶಿ ಬಿರೂರು ಸಮೀಪ ಕೂಗೆಮಲ್ಲಪ್ಪನ ಬೆಟ್ಟದಲ್ಲಿ ನೂತನ ಶಿಲಾಯುಗ ಹಾಗೂ ಬೃಹತ್‌ಶಿಲಾಯುಗದ ಕಲ್ಲಿನ ಆಯುಧ ಉಪಕರಣಗಳು ಹಾಗೂ ಮಡಕೆ ಅವಶೇಷಗಳನ್ನು ಸಂಶೋಧಿಸಿದ್ದಾರೆ. ಅದೇ ಬೆಟ್ಟದಲ್ಲಿ ಮನುಷ್ಯನ ಒಂದು ರೇಖಾಚಿತ್ರವನ್ನು ಸಹ ಸಂಶೋಧಿಸಲಾಗಿದೆ. ಶ್ರೀನಿವಾಸ್ ರೆಡ್ಡಿ ವೇದಾವತಿನದಿ ಕೊಳ್ಳದಲ್ಲಿ ಅನೇಕ ಪ್ರಾಕ್ಚಾರಿತ್ರಿಕ ನಿವೇಶನಗಳನ್ನು ಸಂಶೋಧಿಸಿ ಪ್ರಕಟಿಸಿದ್ದಾರೆ.

ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲೂಕಿನ ಕಳಸ ಚಾರಿತ್ರಿಕವಾಗಿ ಪ್ರಸಿದ್ಧವಾದ ಮಲೆನಾಡಿನ ಪ್ರಮುಖ ಸ್ಥಳ. ಇಲ್ಲಿನ ಕಲಶೇಶ್ವರ ದೇವಾಲಯವೊಂದು ಪ್ರಮುಖ ಚಾರಿತ್ರಿಕ ದೇವಾಲಯವಾಗಿದೆ. ಕಳಸ ಪರಿಸರದಲ್ಲಿ ಇತಿಹಾಸ ಕಾಲಕ್ಕೆ ಸಂಬಂಧಿಸಿದಂತೆ ಸಾಂತರಸರು, ಕಳಸ-ಕಾರ್ಕಳ ಭೈರರಸರು, ವಿಜಯನಗರ ಅರಸರು, ಕೆಳದಿ ನಾಯಕರು, ಮೈಸೂರು ಒಡೆಯರ ಕಾಲಕ್ಕೆ ಸೇರಿದ ಶಾಸನಗಳು, ಸ್ಮಾರಕಗಳು ದೊರೆತಿವೆ. ಇತಿಹಾಸ ಕಾಲಕ್ಕೆ ಸಂಬಂಧಿಸಿದಂತೆ ಕೆಲವು ಅಧ್ಯಯನಗಳಾಗಿದ್ದು, ಪ್ರಾಗಿತಿಹಾಸ ಕಾಲಕ್ಕೆ ಸಂಬಂದಿಸಿದ ಅಧ್ಯಯನ ನಡೆದಿಲ್ಲ. ಕಳಸ ಪರಿಸರದಲ್ಲಿ ಇತ್ತೀಚಿಗೆ ನಡೆಸಿದ ಪುರಾತತ್ವ ಅನ್ವೇಶಣೆಯ ಸಮಯದಲ್ಲಿ ಕಂಡು ಬಂದ ಪ್ರಾಚ್ಯಾವಶೇಷಗಳ ಒಂದು ಅವಲೋಕನವನ್ನು ಪ್ರಸ್ತುತ ಪಡಿಸುವುದು ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ಸುಂದರ ಅವರ ವಿಶೇಷ ಉಪನ್ಯಾಸದಲ್ಲಿ, ಮೌರ್ಯರ ಮನೆ, ಪಾಂಡವರ ಮನೆ ಎಂಬ ಸ್ಥಳನಾಮಗಳನ್ನು ಹೊಂದಿರುವ ಸ್ಥಳಗಳಲ್ಲಿ ಬೃಹತ್‌ಶಿಲಾ ಸಮಾಧಿಗಳು ಕಂಡುಬರುವ ಕುರಿತು ಉಲ್ಲೇಖಿಸಿದ್ದರು. ಕಳಸ ಪರಿಸರದಲ್ಲಿರುವ ಪಾಂಡವರ ಉಪ್ಪರಿಗೆಗೆ ಸಂಬಂಧಿಸಿದಂತೆ ಸ್ಥಳೀಯರು ಈ ಸ್ಥಳದ ಕುರಿತು ಮೊದಲಿನಿಂದಲೂ ಕುತೂಹಲಕಾರಿ ವಿಷಯಗಳನ್ನು ಹೇಳುತಿದ್ದರು. ಇಲ್ಲಿ ಪಾಂಡವರುವಾಸವಾಗಿದ್ದರು, ಇಲ್ಲಿ ಐದು ದೊಡ್ಡ ಗುಹೆಗಳಿವೆ ಎಂದು. ಈ ಒಂದು ಕುತೂಹಲದೊಂದಿಗೆ ಪಾಂಡವರ ಉಪ್ಪರಿಗೆ ಸ್ಥಳದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಬೃಹತ್‌ಶಿಲಾಯುಗಕ್ಕೆ ಸಂಬಂಧಿಸಿದ ಕೆಲವು ಮಾದರಿಯ ಸಮಾಧಿಗಳು ದೊರೆತಿವೆ. ಇದಲ್ಲದೆ, ಸಮಾಧಿ ದೊರೆತ ಆಸುಪಾಸಿನಲ್ಲಿ ಕಲ್ಗುಳಿಗಳು ಸಹ ಕಂಡುಬಂದಿವೆ.

**ಪಾಂಡವರ ಉಪ್ಪರಿಗೆ:** ಕಳಸದಿಂದ ಸುಮಾರು ೧೨ ಕಿ.ಮೀ. ಪಶ್ಚಿಮಕ್ಕೆ ಪಾಂಡವರ ಉಪ್ಪರಿಗೆ ಎಂದು ಸ್ಥಳೀಯವಾಗಿ ಕರೆಯಲ್ಪಡುವ ಪ್ರದೇಶವಿದೆ. ಪಶ್ಚಿಮಘಟ್ಟ ಶ್ರೇಣಿಯ ಒಂದು ಕವಲಿನಲ್ಲಿ ಇರುವ ಈ ಉಪ್ಪರಿಗೆ ಸಮುದ್ರಮಟ್ಟದಿಂದ ಸುಮಾರು ೧೪೦೦ ಅಡಿ ಎತ್ತರದಲ್ಲಿದೆ. ಇಲ್ಲಿ ನೈಸರ್ಗಿಕವಾದ ೫ ಗುಹೆಗಳಿವೆ. ಈ ಗುಹೆಗಳಿಗೆ ಸಮೀಪದಲ್ಲಿ ಬೆಟ್ಟದ ಇಳಿಜಾರಿನಲ್ಲಿ ಕೆಲವು ಬೃಹತ್ ಶಿಲಾಯುಗದ ಸಮಾಧಿಗಳು ಕಂಡುಬಂದಿವೆ.

**ಕೊಡೆಕಲ್ ಸಮಾಧಿ?:** ದಕ್ಷಿಣ ಭಾರತದ ಎಲ್ಲಡೆ ವೈವಿಧ್ಯಮಯವಾದ ಬೃಹತ್ ಶಿಲಾಯುಗದ ಸಮಾಧಿಗಳು ಕಂಡುಬರುತ್ತವೆ. ಕರ್ನಾಟಕದಲ್ಲಿಯೂ ಸಹ ಅಸಂಖ್ಯಾತ ಮಾದರಿಯ ಬೃಹತ್ ಶಿಲಾಯುಗ ಸಮಾಧಿಗಳು ಕಂಡುಬಂದಿವೆ.

---

* ಪಿಎಚ್.ಡಿ ಸಂಶೋಧನಾ ವಿದ್ಯಾರ್ಥಿನಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಕನ್ನಡ ವಿವಿ, ಹಂಪಿ, ಮೊ. ೯೪೮೩೫೮೯೫೭೪

ಆದರೆ, ಕೇರಳ ರಾಜ್ಯಕ್ಕೆ ಸೀಮಿತವಾದ ವಿಶಿಷ್ಟ ಮಾದರಿಯ ಟೋಪಿಕಲ್ ಹಾಗೂ ಕೊಡೆಕಲ್ ಮಾದರಿಯ ಸಮಾಧಿಗಳು ಕರ್ನಾಟಕದಲ್ಲಿ ಇದುವರೆಗೆ ಪತ್ತೆ ಆಗಿರಲಿಲ್ಲ. ಕಳಸದ ಪಾಂಡವರ ಉಪ್ಪರಿಗೆಯಲ್ಲಿ ದೊಡ್ಡ ಶಿಲಾವೃತ್ತದ ನಡುವೆ ಕೊಡೆ ಆಕಾರದ ಬೃಹತ್‌ಶಿಲೆಯನ್ನು ಇರಿಸಲಾಗಿದೆ. ಈ ಸಮಾಧಿಯ ಕುರಿತು ಶಿವತಾರಕ್ ಮತ್ತು ಮುರಗೇಶಿಯವರೊಂದಿಗೆ ಚರ್ಚಿಸಿದಾಗ ಕೊಡೆಕಲ್ ಸಮಾಧಿಯೆಂದು ಗುರುತಿಸಿದ್ದಾರೆ. ಕಳಸದಲ್ಲಿ ಕಂಡು ಬಂದ ಕೊಡೆಕಲ್ ಸಮಾಧಿಯು ಕರ್ನಾಟಕದಲ್ಲಿ ಕಂಡು ಬಂದ ಮೊಟ್ಟಮೊದಲ ಹೊಸ ಮಾದರಿಯ ಸಮಾಧಿಯಾಗಿದೆ. ಕೇವಲ ಕೇರಳಕ್ಕೆ ಸೀಮಿತವಾದ ಮಾದರಿಯೆಂದು ಭಾವಿಸಲಾಗಿದ್ದ ಕೊಡೆಕಲ್ ಮಾದರಿ ಸಮಾಧಿ ಕಳಸದಲ್ಲಿ ಪತ್ತೆಯಾಗಿದೆ. ಈ ಮಾದರಿಯ ಎರಡು ಸಮಾಧಿಗಳು ಸುಮಾರು ಅರ್ಧ ಕಿ.ಮೀ. ಅಂತರದಲ್ಲಿ ಕಂಡು ಬಂದಿವೆ.

**ನಿಲ್ಸ್‌ಗಲ್ ಸಮಾಧಿ:** ಕರ್ನಾಟಕದಾದ್ಯಂತ ಬಹಳ ಜನಪ್ರಿಯವಾಗಿ ಕಂಡುಬರುವ ಬೃಹತ್ ಶಿಲಾಯುಗದ ಸಮಾಧಿಗಳಲ್ಲಿ ನಿಲ್ಸ್‌ಗಲ್ ಸಮಾಧಿ ಮಾದರಿಯು ಒಂದು. ಸುಂದರ ಅವರು ಶಿವಮೊಗ್ಗ ಜಿಲ್ಲೆಯ ಹೊಸ ನಗರ ತಾಲೂಕಿನ ನಗರದ ಸಮೀಪ ನಿಲ್ಸ್‌ಗಲ್ ಮತ್ತು ಬೈಸೆಗಳಲ್ಲಿ ಅನೇಕ ನಿಲ್ಸ್‌ಗಲ್ ಸಮಾಧಿಗಳನ್ನು ಸಂಶೋಧಿಸಿದ್ದಾರೆ. ಉಡುಪಿ ಜಿಲ್ಲೆಯ ಕುರ್ಕಾಲು, ಬುದ್ದನ ಜಿಡ್ಡು ಹಾಗೂ ನಿಟ್ಟೂರುಗಳಲ್ಲಿ, ಹಾಸನ ಜಿಲ್ಲೆಯ ಅರಸಿಕೆರೆಯಲ್ಲಿ, ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲೂಕಿನ ಅರಶಿನಗುಪ್ಪೆಯಲ್ಲಿ ಮುರಗೇಶಿಯವರು ನಿಲ್ಸ್‌ಗಲ್ ಸಮಾಧಿಗಳನ್ನು ಸಂಶೋಧಿಸಿದ್ದಾರೆ. ಪಾಂಡವರ ಉಪ್ಪರಿಗೆಯಲ್ಲಿ ಇದೇ ಮೊದಲ ಬಾರಿಗೆ ಎರಡು ನಿಲ್ಸ್ಗಲ್ ಮಾದರಿಯ ಸಮಾಧಿಗಳು ಪತ್ತೆಯಾಗಿವೆ. ಇಲ್ಲಿನ ಎರಡು ಸಮಾಧಿಗಳಲ್ಲಿ ಭೂಮಿಗೆ ಲಂಭವಾಗಿ ಪಶ್ಚಿಮಕ್ಕೆವಾಲಿದಂತೆ ನಿಲ್ಲಿಸಲಾಗಿದೆ. ಈ ಕಲ್ಲುಗಳು ತ್ರಿಕೋನಾಕಾರದಲ್ಲಿ ಕಂಡು ಬರುತ್ತವೆ. ಇವುಗಳ ಎತ್ತರ ಸುಮಾರು ೯ ಅಡಿ ಉದ್ದ ಮತ್ತು ತಳ ಭಾಗದಲ್ಲಿ ಸುಮಾರು ೬ ಅಡಿ ಅಗಲವಾಗಿದೆ.

**ಕಲ್ಮನೆ ಸಮಾಧಿಗಳು:** ಕಲ್ಮನೆ ಅಥವಾ ಡಾಲ್ಮನ್ ಎಂದು ಕರೆಯಲಾಗುವ ಸಮಾಧಿಯ ಕಲ್ಲು ಚಪ್ಪಡಿಗಳು ಚದುರಿದಂತೆ ಬಿದ್ದು ಹೋಗಿದ್ದು, ಒಂದು ಚಪ್ಪಡಿಯ ಅಂಚಿನಲ್ಲಿ ಚೌಕಕಾರದ ರಂಧ್ರವನ್ನು ಮಾಡಲಾಗಿದೆ. ಆದ್ದರಿಂದ ಈ ಚಪ್ಪಡಿಗಳು ಬಹುಶಃ ಕಲ್ಮನೆ ಮಾದರಿ ಸಮಾಧಿಯ ಅವಶೇಷಗಳಿರಬೇಕು.

**ಕಲ್ಗುಳಿಗಳು:** ಪಾಂಡವರ ಉಪ್ಪರಿಗೆಯ ಬೃಹತ್‌ಶಿಲಾಯುಗ ಸಮಾಧಿಗಳ ಆಸುಪಾಸಿನಲ್ಲಿ ಇರುವ ನೈಸರ್ಗಿಕ ಬಂಡೆಗಳ ಮೇಲೆ ಸುಮಾರು ಏಳುಕಡೆ ಕಲ್ಗುಳಿಗಳು ಕಂಡುಬರುತ್ತವೆ. ಇಲ್ಲಿ ಕಂಡುಬರುವ ಕಲ್ಗುಳಿಗಳಲ್ಲಿ ಐದು ಕಲ್ಗುಳಿಗಳು ಜಾನಪದೀಯ ಅಳಿಗುಳಿಮಣೆ ಅಥವಾ ಚೆನ್ನಮಣೆಯನ್ನು ಹೋಲುತ್ತವೆ. ಎರಡು ಸಮಾನಾಂತರ ಸಾಲುಗಳಲ್ಲಿ ಒಟ್ಟು ೧೪ ಗುಳಿಗಳು ಕಂಡುಬರುತ್ತವೆ. ಕೆಲವು ೧೮ ಗುಳಿಗಳನ್ನು ಒಳಗೊಂಡಿವೆ. ಕರಾವಳಿಯ ಜಾನಪದ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಚೆನ್ನೆಮಣೆ ಇಂದಿಗೂ ಬಹುಮುಖ್ಯವಾದ ಕಲಾಪವಾಗಿದೆ. ತುಳು ಜಾನಪದದಲ್ಲಿ ಚೆನ್ನಮಣೆ ಸಾವಿನ ಸಂಕೇತವಾಗಿದೆ. ಉಡುಪಿ ಜಿಲ್ಲೆಯ ಕಾರ್ಕಳ ತಾಲೂಕಿನ ಪಳ್ಳಿಯ ಬೃಹತ್ ಶಿಲಾಯುಗ ಕಾಲದ ಕಲ್ಮನೆ ಸಮಾಧಿಯ ಒಂದು ಕಲ್ಲು ಚಪ್ಪಡಿಯ ಮೇಲೆ ಕಲ್ಗುಳಿಗಳು ಕಂಡು ಬಂದಿವೆ ಎಂದು ಮುರಗೇಶಿಯವರು ವರದಿ ಮಾಡಿದ್ದಾರೆ. ಬೃಹತ್ ಶಿಲಾಯುಗದ ಕಾಲದಲ್ಲಿಯೂ ಸಹ ಕಲ್ಗುಳಿಗಳು ಸಾವಿನ ಸಂಕೇತವಾಗಿವೆ. ಪಾಂಡವರ ಉಪ್ಪರಿಗೆಯಲ್ಲಿ ಐದು ಗುಹೆಗಳು ಹಾಗೂ ಐದು ಸಮಾಧಿಗಳು ಕಂಡುಬರುತ್ತವೆ. ಆದ್ದರಿಂದ ಐದು ಕಲ್ಗುಳಿಗಳು ಐದು ಸಮಾಧಿಗಳ ಅಥವಾ ಐದು ಸಾವಿನ ಸಂಕೇತವಾಗಿರಬಹುದು.

ಮಲೆನಾಡು ಪ್ರದೇಶದಲ್ಲಿ ಪ್ರಾಗಿತಿಹಾಸಕಾಲಕ್ಕೆ ಸಂಬಂಧಿಸಿದ ಶೋಧ ಬೇರೆ ಭಾಗಗಳಿಗೆ ಹೋಲಿಸಿದರೆ ಅತ್ಯಲ್ಪ. ಪ್ರಾಕೃತಿಕವಾಗಿ ಹೆಚ್ಚು ಮಳೆ ಬೀಳುವ ಕಾರಣದಿಂದಾಗಿ ಸರಿಯಾದ ಕ್ಷೇತ್ರಕಾರ್ಯದ ಕೊರತೆಯು ಇರಬಹುದು. ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲೂಕಿನ ಕಗ್ಗನಳ್ಳ ಮತ್ತು ಕೊಟ್ಟಿಗೆಹಾರಗಳಲ್ಲಿ ದೊರೆತಿರುವ ಅವಶೇಷಗಳನ್ನು ಹೊರತು ಪಡಿಸಿ ಈಗ ಕ್ಷೇತ್ರಕಾರ್ಯದ ಮೂಲಕ ದೊರೆತಿರುವ ಪಾಂಡವರ ಉಪ್ಪರಿಗೆಯ ನೆಲೆ ನವಶೋಧಿತವಾಗಿದೆ. ಈ ನೆಲೆಯ ಶೋಧದಿಂದಾಗಿ ಕಳಸ ಪರಿಸರದ ಕಾಲಮಾನವನ್ನು ಹಿಂದಕ್ಕೆ ಕರೆದೊಯ್ಯಲು ಆಧಾರವಾಗಿದೆ.




ಕಲ್ಗುಳಿಗಳು




## ಆಕರ ಗ್ರಂಥಗಳು


1. Foote R. B., 1914. The foote collections of Indian prehistoric and protohistoric antiquities catalogue, rainonne.
2. Murgeshi T. Unpublished research paper presented at fisrt dist level kannada literature conference in chikkamagaluru, 1992.
3. Mohana R., 2014. cupules in Karnataka : their significance, Bulletin of the deccan college Research Institute vol.74.
4. Narasimhayya b., 1992. Archaeological exploration in malnad religion.
5. Poonacha K. P., 2011. Archaeology of Karnataka (pre and proto history of south western region), Agamkala prakashana, New Delhi.
6. Rao Gururaj B. K., 1972. Meghalithic culture of south india, Mysore.
7. Reddy shrinivas., vedavathi theerada prachyavasheshagalu ondu adyayana. Ithihaasa darshana. Samputa -28.
8. sundara A., 1975. Erly chamber tombs of south India, concept publishing company, new delhi.
9. Sundara A., 2004. Menhir in mid western Karnataka : further notices, proceeding of R.B. Foote memorial national seminar(1995) on Indian Prehistory and Protohistory (recent studies) directorate of archaeology and museums govt. of Karnataka, hospet.
10. Sundara A., 2010-11. The rock Art in coastal Karnataka and their Special Features, purakala 20-21 sundara, A.2014. some insights into rock Art research in Karnataka, Purakala24.
11. Sundara A. 1973. Chronological Order of Megalithic Tomb-types in Karnataka, Radiocarbon and Indian Archaeology(Ed. Agarwal D.P., Ghosh A.) Tata Institute of Fundamental Research, Bombay.

೩

# ಪ್ರಾಗಿತಿಹಾಸ ಕಾಲದ ಪ್ರಮುಖ ಪ್ರಾಚೀನ ನೆಲೆ ಚಿಪ್ಪಿನಕೆರೆ

ಎಸ್.ವೈ. ಸೋಮಶೇಖರ್*

**ಭೌಗೋಳಿಕ ಲಕ್ಷಣ:** ಚಿತ್ರದುರ್ಗ ಜಿಲ್ಲೆಯ ಹಾಗೂ ಅದೇ ತಾಲೂಕಿಗೆ ಸೇರಿದ ಚಿಪ್ಪಿನಕೆರೆಯು ತುರುವನೂರು ಹೋಬಳಿಯ ಪ್ರಾಚೀನ ನೆಲೆಗಳಲ್ಲಿ ಒಂದಾಗಿದೆ. ಈ ಗ್ರಾಮದ ಪೂರ್ವಕ್ಕೆ ಒಂದೂವರೆ ಕಿ.ಮೀ ದೂರದಲ್ಲಿ ಪ್ರಾಗೈತಿಹಾಸಿಕ ನೆಲೆಯಿದೆ. ಚಿತ್ರದುರ್ಗದಿಂದ ಉತ್ತರಕ್ಕೆ ೨೦ ಕಿ.ಮೀ. ದೂರದಲ್ಲಿರುವ ಈ ನೆಲೆಯು ಉತ್ತರ ಅಕ್ಷಾಶ ೧೪೦೨೨.೦೮", ಹಾಗೂ ಪೂರ್ವ ರೇಖಾಂಶ ೭೬೦೨೦.೪೫" ರಲ್ಲಿದ್ದು, ಸಮುದ್ರಮಟ್ಟದಿಂದ ೬೬೩ ಮೀ (೨೧೭೪ ಅಡಿ) ಎತ್ತರದಲ್ಲಿದೆ. ಇದು ನೆಲೆಗೊಂಡಿರುವುದು ಚಿತ್ರದುರ್ಗದ ಚಿನ್ಮೂಲಾದ್ರಿ ಬೆಟ್ಟ ಶ್ರೇಣಿಯಲ್ಲಿ ಹುಟ್ಟಿ ಹರಿದುಬರುವ ಜನಗಿಹಳ್ಳ ಮತ್ತು ಗುಹೇಶ್ವರ ಬೆಟ್ಟದಲ್ಲಿ ಹುಟ್ಟಿ ಹರಿದು ಬರುತ್ತಿರುವ ಕೋಡಿಹಳ್ಳಗಳ ಸಂಗಮಸ್ಥಾನದಲ್ಲಿದೆ. ಈ ಪರಿಸರವು ಫಲವತ್ತಾದ ಮಣ್ಣು, ಎರಡು ಹಳ್ಳಗಳಿಂದ ಹರಿಯುತ್ತಿರುವ ನೀರು, ಪಶುಪಾಲನೆಗೆ ಅಗತ್ಯವಾದ ಹುಲ್ಲುಗಾವಲು ಪ್ರದೇಶ ಹಾಗೂ ಮರಡಿ, ಬೆಟ್ಟಗಳಿದ್ದು, ಪ್ರಾಚೀನ ಕಾಲದಿಂದ ಹಿಡಿದು ಇಂದಿನವರೆಗೂ ಮಾನವ ತನ್ನ ಜೀವನವನ್ನು ಸಾಗಿಸಲು ಅತ್ಯಂತ ಯೋಗ್ಯವಾದ ನೆಲೆಯಾಗಿದೆ. ಈ ನೆಲೆಯು ಈಗಾಗಲೆ ಪ್ರಕಟವಾದ ಪ್ರಾಚೀನ ನೆಲೆಗಳಾದ ತಮಟಕಲ್ಲು, ತುರುವನೂರು, ಸಂಗೇನಹಳ್ಳಿ, ಕೂನಬೇವು, ಬೆಳಗಟ್ಟ, ಚಿಕ್ಕಕಬ್ಬಿಗೆರೆ ಹಾಗೂ ಇತ್ತೀಚೆಗೆ ಬೆಳಕಿಗೆ ಬಂದ ಚಿಕ್ಕಗೊಂಡನಹಳ್ಳಿ, ಸುಲ್ತಾನಿಪುರ ನೆಲೆಗಳಿಂದ ಐದರಿಂದ ಹತ್ತು ಕಿ.ಮೀ. ಅಂತರದಲ್ಲಿರುವುದು ಗಮನಾರ್ಹ.

**ಜನಿಗಿಹಳ್ಳ:** ಜನಿಗಿಹಳ್ಳವು ಚಿತ್ರದುರ್ಗ ಜಿಲ್ಲೆಯ ಪ್ರಮುಖ ನೀರಿನ ಸೆಲೆಯಾಗಿದ್ದು, ೧೯ಕಿ.ಮೀ ಉದ್ದ ಹರಿಯುತ್ತದೆ. ಚಿತ್ರದುರ್ಗ ತಾಲೂಕಿನ ಚಿನ್ಮೂಲಾದ್ರಿ ಶ್ರೇಣಿಯಲ್ಲಿರುವ ಓಬಳದೇವರ ಗುಡ್ಡದಲ್ಲಿ ಹುಟ್ಟಿ ಜನಗಿಹಳ್ಳವೆಂಬ ಹೆಸರಿನಿಂದ ಹರಿಯುತ್ತದೆ. ಜನಗಿಹಳ್ಳವು ಮುಂದೆ ಜಗಲೂರು, ಚಳ್ಳಕೆರೆ, ಕೂಡ್ಲಿಗಿ, ಮೊಳಕಾಲ್ಮೂರು ತಾಲೂಕುಗಳಲ್ಲಿ ಚಿನ್ನಹಗರಿಯಾಗಿ ಹರಿದು ಆಂಧ್ರಪ್ರದೇಶದ ರಾಯದುರ್ಗ ತಾಲೂಕಿನಲ್ಲಿ ಹಗರಿ ಅಥವಾ ವೇದಾವತಿ ನದಿಯನ್ನು ಸೇರುತ್ತದೆ. ಈ ನದಿಯನ್ನು ಪ್ರಾಚೀನ ಕಾಲದಲ್ಲಿ ಹನೆಯ ತೊರೆಯೆಂದೂ ಶಾಸನಗಳಲ್ಲಿ ಕರೆಯಲಾಗಿದೆ. ಈ ನದಿಯು ಅನೇಕ ಪ್ರಸಿದ್ಧ ಪ್ರಾಚೀನ ನೆಲೆಗಳಿಗೆ ಆವಾಸಸ್ಥಾನವಾಗಿದೆ. ಜಿಲ್ಲೆಯ ಪ್ರಸಿದ್ಧ ಪ್ರಾಗೈತಿಹಾಸಿಕ ನೆಲೆಗಳಾದ ಬ್ರಹ್ಮಗಿರಿ, ಸಿದ್ದಾಪುರ ಮತ್ತು ಜಟಂಗಿರಾಮೇಶ್ವರಗಳು ಇರುವುದು ಈ ಹಳ್ಳದ ದಂಡೆಯ ಮೇಲೆಯೇ. ಈ ಹಳ್ಳದ ದಂಡೆಯಲ್ಲಿ ತಮಟಕಲ್ಲು, ಲಕ್ಷೀಸಾಗರ, ಕಾತ್ರಾಳು, ರುಮ್ಮಾಘಟ್ಟ, ಸುಲ್ತಾನಿಪುರ, ಚಿಪ್ಪಿನಕೆರೆ, ಚಿಕ್ಕಗೊಂಡನಹಳ್ಳಿ, ಸಂಗೇನಹಳ್ಳಿ, ಕಲ್ಲೇದೇವರಪುರ, ಆಕನೂರು, ದೊಣೆಹಳ್ಳಿ, ಚಿಕ್ಕಮಲ್ಲನಹೊಳೆ, ಹಿರೇಮಲ್ಲನಹೊಳೆ, ಕೋಲಮ್ಮನಹಳ್ಳಿ ಮೊದಲಾದ ಅನೇಕ ಪ್ರಾಚೀನ ಮಾನವನ ನೆಲೆಗಳು ಇತ್ತೀಚೆಗೆ ಬೆಳಕಿಗೆ ಬಂದಿದ್ದು ಇಂದಿಗೂ ಮಾನವನ ಜೀವನಾಡಿಯಾಗಿರುವುದು ಗಮನಾರ್ಹ.

**ಚಿಪ್ಪಿನಕೆರೆ:** ಚಿಪ್ಪಿನಕೆರೆ ಸುಮಾರು ೨೫೦ ಮನೆಗಳಿರುವ ಪುಟ್ಟ ಗ್ರಾಮ. ಈ ಗ್ರಾಮದಲ್ಲಿ ಎರಡು ಶಿಲಾಶಾಸನಗಳು ಪತ್ತೆಯಾಗಿವೆ. ಅವುಗಳಲ್ಲಿ ಒಂದು ಶಾಸನ ಗ್ರಾಮದ ಆಂಜನೇಯನ ಗುಡಿಯ ಮುಂಬದಿಯ ಬೇವಿನ ಕಟ್ಟೆಯ ಮೇಲಿದೆ. ಇನ್ನೊಂದು ಶಾಸನವು ಉಪ್ಪಾರ ತಿಪ್ಪಣ್ಣ ಅವರ ತೋಟದ ಮನೆಯ ಬನ್ನಿಮರದ ಕೆಳಗಿದೆ. ಊರಿನಲ್ಲಿರುವ ೧೬-೧೭ನೆಯ ಶತಮಾನದ ಶಾಸನವು "ಚಿಪ್ಪಿನಕೆರೆ ರುದ್ರಪ್ಪ ಗಿರಿಯಣಗೆ ಕೊಟ್ಟ ಹೊಲ" ಎಂದು ಹೇಳಿದೆ. ಗ್ರಾಮದ ಹೆಸರಾದ ಚಿಪ್ಪಿನಕೆರೆಯನ್ನು ಉಲ್ಲೇಖಿಸುವ ಮೊದಲ ಶಾಸನವಿದು. ಅಂತೆಯೇ ಇನ್ನೊಂದು ಶಾಸನದ ಅಕ್ಷರಗಳು ಸವೆದುಹೋಗಿದ್ದು ಚಿಪ್ಪಿನಕೆರೆ ಎಂಬ ಹೆಸರನ್ನು ಗುರುತಿಸಲಷ್ಟೇ ಸಾಧ್ಯವಾಗಿದೆ. ಇವುಗಳಿಂದ ಚಿಪ್ಪಿನಕೆರೆಯು ಶಾಸನೋಕ್ತ ಪ್ರಾಚೀನ ಗ್ರಾಮವಾಗಿರುವುದು ಸ್ಪಷ್ಟವಾಗುತ್ತದೆ.

**ಇದುವರೆಗಿನ ಸಂಶೋಧನೆ:** ೧೯೯೪ರ ಈ ನೆಲೆಯ ಕ್ಷೇತ್ರಕಾರ್ಯದಲ್ಲಿ ಅನೇಕ ಪ್ರಾಚೀನ ಅವಶೇಷಗಳಾದ ಮಡಕೆ ಕುಡಿಕೆಗಳಾದ ಕೆಂಪು, ಕಪ್ಪು, ಕಪ್ಪು ಮತ್ತು ಕೆಂಪು ಮಡಕೆಗಳ ಮೇಲೆ ಬಿಳಿ ಬಣ್ಣದ ರೇಖಾಚಿತ್ರಗಳು, ಎಲೆಬಳ್ಳಿ, ಸೂರ್ಯ,

* ಸಹ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಮೊ. ೯೪೮೦೩೭೬೫೦೦

ಮತ್ತಿತರ ಅಲಂಕರಣಗಳುಳ್ಳ ಮಡಕೆಗಳು, ದವಸಧಾನ್ಯಗಳ ಸಂಗ್ರಹಣೆಯ ಜಾಡಿಗಳು, ಕಾರ್ನೇಲಿಯನ್, ಅಗೇಟ್‌ಗಳಿಂದ ಮಾಡಿದ ಮಣಿಗಳು, ಸುಟ್ಟ ಮಣ್ಣಿನ ಮಣಿಗಳು, ದಂತ ಮತ್ತು ಕಪ್ಪೆಚಿಪ್ಪಿನ ಆಭರಣಗಳು, ಕಬ್ಬಿಣದ ಬಳೆಗಳು, ಇಟ್ಟಿಗೆ ಕಂಡುಬಂದಿದ್ದವು. ಅವುಗಳ ಹಿನ್ನೆಲೆಯಲ್ಲಿ ಈ ನೆಲೆಯನ್ನು ಬೃಹತ್ ಶಿಲಾಯುಗ ಮತ್ತು ಆದಿ ಇತಿಹಾಸ ಕಾಲದ ಪ್ರಮುಖ ನೆಲೆಯೆಂಬುದನ್ನು ಗುರುತಿಸಲಾಗಿತ್ತು.[೧]

೧೯೫೫ರಲ್ಲಿ ಶಾತವಾಹನರ ಸಾಮಂತರಾದ ಚುಟು ಮನೆತನದ ಸಡಕಣಕಲಲಾಯ ಮಹಾರಥಿಯ ಒಂದು ಸೀಸದ ನಾಣ್ಯ ಪತ್ತೆಯಾಗಿತ್ತು.[೨] ೨೦೦೫ರಲ್ಲಿ ಪುನಃ ಇದೇ ನೆಲೆಯಲ್ಲಿ ಮಹಾರಥಿಗಳಾದ ಚುಟುಕುಲಾನಂದ ಮತ್ತು ಸಡಕಣಕಲಲಾಯ ಮಹಾರಥಿಗಳ ಎರಡು ಸೀಸದ ನಾಣ್ಯಗಳು ಕಂಡುಬಂದವು. ಇವುಗಳಿಂದ ಈ ನೆಲೆಯು ಶಾತವಾಹನ ಅಥವಾ ಮಹಾರಥಿಗಳ ಕಾಲದ ಪ್ರಸಿದ್ಧ ವಸತಿ ತಾಣ ಹಾಗೂ ವ್ಯಾಪಾರ ಕೇಂದ್ರವಾಗಿತ್ತೆಂಬುದು ದೃಢವಾಗುತ್ತಿದೆ.

**ಪ್ರಸ್ತುತ ಸಂಶೋಧನೆ:** ಇತ್ತೀಚೆಗೆ ಕೈಗೊಂಡ ಕ್ಷೇತ್ರಕಾರ್ಯ ಮತ್ತು ಮರುಶೋಧನೆಯಲ್ಲಿ ಈವರೆಗೆ ಗುರುತಿಸಲಾಗಿದ್ದ ಬೃಹತ್ ಶಿಲಾಯುಗ ಕಾಲಕ್ಕೂ ಪೂರ್ವದ ಕುರುಹುಗಳು ಬೆಳಕಿಗೆ ಬಂದಿವೆ. ಅದು ಮಾನವ ತಾನು ಕೃಷಿ ಚಟುವಟಿಕೆ ಆರಂಭಿಸುವುದಕ್ಕೂ ಪೂರ್ವದಲ್ಲಿ ತನ್ನ ಜೀವನೋಪಾಯಕ್ಕೆ ಅವಲಂಬಿಸಿದ್ದ ಪಶುಪಾಲನೆಯ ಸಂಕೇತವಾಗಿ ರೂಪುಗೊಂಡಿದ್ದ ಬೂದಿದಿಬ್ಬದ ಅವಶೇಷಗಳು ಕಂಡುಬಂದಿವೆ.

**ನೆಲೆಯ ಸ್ಥಿತಿ ಮತ್ತು ಸ್ಥಳನಾಮ:** ಹತ್ತಾರು ತಲೆಮಾರುಗಳಿಂದ ಕೃಷಿ ಚಟುವಟಿಕೆಗೆ ಒಳಗಾಗಿರುವ ಈ ನೆಲೆಯು ಹೊಲವಾಗಿ ಮಾರ್ಪಟ್ಟಿದ್ದು, ಅನೇಕ ಅವಶೇಷಗಳು ಸವೆದು ನಾಶವಾಗಿ ಬೂದಿಬಣ್ಣದ ಮಣ್ಣಿನಿಂದ ಮಾತ್ರ ಇಂದು ಆವೃತವಾಗಿದೆ. ಈ ಬೂದಿ ಮಣ್ಣಿನ ಹಿನ್ನೆಲೆಯಲ್ಲಿ ಸ್ಥಳೀಯರು ಬೂದಿನಹೊಲ ಎಂದೂ, ಈ ಬೂದಿನಹೊಲವು ದಿಬ್ಬವಾಗಿರುವುದರಿಂದ ಬೂದುಗಡ್ಡೆಯೆಂದೂ ಕರೆಯುತ್ತಿರುವರು. ಅಂತೆಯೇ ಸ್ಥಳನಾಮಗಳು ಪ್ರಾಚೀನ ನೆಲೆಗಳನ್ನು ಗುರುತಿಸುವಲ್ಲಿ ವಹಿಸುವ ಪಾತ್ರವೇನೆಂಬುದನ್ನು ಇಲ್ಲಿ ಬಳಕೆಯಲ್ಲಿರುವ ಸ್ಥಳನಾಮವು ದೃಢಪಡಿಸಿದಂತಾಗಿದೆ. ಇಲ್ಲಿನ ಬೂದಿ ಮಣ್ಣನ್ನು ಮನೆಗಳ ಮಾಳಿಗೆಗೆ, ತಡಿಕೆ ಮನೆಗಳಿಗೆ ಮೆತ್ತಲು ಸಿಮೆಂಟ್ ರೀತಿ ಬಳಸುತ್ತಿರುವುದೂ ಉಂಟು. ಹಿಂದೆ ಕೃಷಿಗೆ ಮರದ ಮಡಕೆಗಳನ್ನು ಬಳಸುತ್ತಿದ್ದುದರಿಂದ ಉಳುಮೆ ಆಳವಾಗಿರುತ್ತಿರಲಿಲ್ಲ. ಆದರೆ ಇತ್ತೀಚೆಗೆ ಟ್ರ್ಯಾಕ್ಟರ್ ನೇಗಿಲನ್ನು ಬಳಸಿ ಉಳುಮೆ ಮಾಡಿದ್ದುದರಿಂದ ಒಂದೂವರೆ ಎರಡು ಅಡಿಗಳಷ್ಟು ಆಳವಾಗಿ ಮಡಕೆಯು ಇಳಿಯುವುದರಿಂದ ಆಳದಲ್ಲಿದ್ದ ಅನೇಕ ಬಗೆಯ ಪ್ರಾಚೀನ ಅವಶೇಷಗಳು ಅನಾವರಣಗೊಳ್ಳುವುದು ಸಹಜ.

**ನವ ಶಿಲಾಯುಗ ಅವಶೇಷಗಳು:** ಟ್ರಾಕ್ಟರ್ ನೇಗಿಲಿನ ಉಳುಮೆಯಿಂದ ಈ ನೆಲೆಯಲ್ಲಿ ಪ್ರಾಗಿತಿಹಾಸ ಕಾಲದ ಸುಟ್ಟ ಬೂದಿದಿಬ್ಬದ ಕಿಟ್ಟಗಳು, ಕವಣೆಕಲ್ಲು, ಮಡಕೆ ಕುಡಿಕೆ ಹಾಗೂ ಪ್ರಾಣಿಗಳ ಮೂಳೆಯ ಅವಶೇಷಗಳು ಬೆಳಕಿಗೆ ಬಂದಿವೆ. ಇವುಗಳಿಂದ ಸ್ಥಳೀಯರು ಹಿಂದಿನಿಂದಲೂ ಕರೆಯುತ್ತಿರುವ ಬೂದಿನಹೊಲ ಅಥವಾ ಬೂದುಗಡ್ಡೆಯು ನವಶಿಲಾಯುಗದ ಬೂದಿದಿಬ್ಬವಾಗಿ ಕ್ರಿ.ಪೂ. ೩೦೦೦ ವರ್ಷಗಳಷ್ಟು ಹಿಂದೆ ಮಾನವನ ಚಟುವಟಿಕೆಗಳ ತಾಣವಾಗಿ ಪ್ರಕಟವಾಗುತ್ತಿರುವುದು ಗಮನಾರ್ಹ. ಈ ನೆಲೆಯಲ್ಲಿ ಬೂದಿದಿಬ್ಬದ ಕಿಟ್ಟಗಳಲ್ಲದೆ ಬೂದು ಬಣ್ಣದ ಮಡಕೆ ಮತ್ತು ಮೂಳೆಯ ಅವಶೇಷಗಳೂ ಕಂಡುಬಂದಿವೆ. ಆದರೆ ನವಶಿಲಾಯುಗದಲ್ಲಿ ಬಳಕೆಯಾದ ಕಲ್ಲಿನ ಕೊಡಲಿಗಳು ಇದುವರೆಗೆ ಕಂಡುಬಂದಿಲ್ಲ.

**ನೂತನ ಅಥವಾ ನವ ಶಿಲಾಯುಗ:** ನೂತನ ಶಿಲಾಯುಗವು ಮಾನವ ತನ್ನ ಜೀವನಮಟ್ಟವನ್ನು ಸುಧಾರಿಸಿಕೊಂಡ ಅತ್ಯಂತ ಪ್ರಮುಖ ಕಾಲಘಟ್ಟವಿದು. ಈ ಅವಧಿಯಲ್ಲಿ ಪಶುಪಾಲನೆ, ಕೃಷಿಯ ಆರಂಭ, ಆಯುಧಗಳ ಭಿನ್ನತೆ ಮತ್ತು ನಯಗಾರಿಕೆ, ಅಲೆಮಾರಿ ಜೀವನದಿಂದ ಗ್ರಾಮಜೀವನಕ್ಕೆ, ಮಡಕೆಗಳ ತಯಾರಿಕೆ ಮುಂತಾದ ಹೊಸ ಆವಿಷ್ಕಾರಗಳನ್ನು ಕಂಡುಕೊಂಡ ಕಾಲವಿದು.

**ಬೂದಿದಿಬ್ಬ:** ಈ ಬೂದಿದಿಬ್ಬಗಳು ರಚನೆಗೊಂಡುದು ದನ ಮೊದಲಾದ ಸಾಕು ಪ್ರಾಣಿಗಳ ಸಗಣಿಯಿಂದ ಎಂಬುದನ್ನು ವೈಜ್ಞಾನಿಕವಾಗಿ ದೃಢಪಡಿಸಿರುವರು. ಈ ದಿಬ್ಬಗಳು ಇಂದು ಸಣ್ಣಪುಟ್ಟ ದಿಬ್ಬ ಹಾಗೂ ಮರಡಿಗಳಂತೆ ಗೋಚರಿಸುತ್ತವೆ. ಅಲ್ಲದೆ ಇಲ್ಲಿ ದೊರೆಯುವ ಸಗಣಿಯು ಕಿಟ್ಟದ ರೂಪದಲ್ಲಿ ಕಂಡುಬರುತ್ತದೆ. ಸಗಣಿಯನ್ನು ೮೦೦ ರಿಂದ ೧೦೦೦ ಡಿಗ್ರಿ ಸೆಲ್ಸಿಯಸ್ ಶಾಖನೀಡಿ ಸುಟ್ಟಾಗ ಅದು ಕಿಟ್ಟವಾಗಿ ಪರಿಣಮಿಸುತ್ತದೆ ಎಂಬುದನ್ನು ಪ್ರಾಯೋಗಿಕವಾಗಿ ದೃಢಪಡಿಸಿದ್ದಾರೆ.

ಇದುವರೆಗಿನ ಸಂಶೋಧನೆಗಳ ಹಿನ್ನೆಲೆಯಲ್ಲಿ ಈ ನೆಲೆಯ ಕಾಲವನ್ನು ಆದಿಇತಿಹಾಸ ಮತ್ತು ಬೃಹತ್ ಶಿಲಾಯುಗಕ್ಕೆ ಮಾತ್ರ ಕೊಂಡೊಯ್ಯಲಾಗಿತ್ತು. ಆದರೆ ಪ್ರಸ್ತುತ ಸಂಶೋಧನೆಯಿಂದ ಚಿಪ್ಪಿನಕೆರೆಯ ಬೂದುಗಡ್ಡೆ ಅಥವಾ ಬೂದಿನ ಹೊಲವು ನವಶಿಲಾಯುಗದ ಬೂದಿದಿಬ್ಬವಾಗಿದ್ದು ಕ್ರಿ.ಪೂ. ೩೦೦೦ ವರ್ಷಗಳಿಂದಲೂ ಮಾನವನ ಪ್ರಸಿದ್ಧ



ಶಾತವಾಹನ ಕಾಲದ ಮಡಕೆ ಕುಡಿಕೆ ಮತ್ತು ಮಣಿಗಳು, ಚಿಪ್ಪಿನಕೆರೆ



ಶಾತವಾಹನ ಕಾಲದ ಪೂರ್ಣ ಮಡಕೆ ಕುಡಿಕೆ, ಚಿಪ್ಪಿನಕೆರೆ



ಮಡಕೆ ಕುಡಿಕೆ ಮತ್ತಿತರ ಅವಶೇಷಗಳು, ಚಿಪ್ಪಿನಕೆರೆ



ಬೂದಿ ದಿಬ್ಬದ ಕಿಟ್ಟ ಮತ್ತು ಮೂಳೆಯ ಅವೇಶಗಳು, ಚಿಪ್ಪಿನಕೆರೆ

ಎಡೆಯಾಗಿತ್ತೆಂಬುದು ದೃಢಪಟ್ಟಂತಾಗಿದೆ. ಚಿಪ್ಪಿನಕೆರೆ ನೆಲೆಯು ನವಶಿಲಾಯುಗ ಕಾಲದಿಂದ ಆದಿ ಇತಿಹಾಸ ಕಾಲದವರೆಗಿನ ಮಾನವನ ಆವಾಸಸ್ಥಾನವಾಗಿ ನಿರಂತರವಾದ ಪ್ರಾಚೀನ ಸಂಸ್ಕೃತಿಯನ್ನು ತನ್ನ ಒಡಲಲ್ಲಿ ಅಡಗಿಸಿಕೊಂಡಿದ್ದುದು ಗಮನಾರ್ಹ. ಇದರಿಂದ ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬಂದಿರುವ ಬ್ರಹ್ಮಗಿರಿ, ಚಂದ್ರವಳ್ಳಿ, ತಮಟಕಲ್ಲುಗಳಂತೆ ಪ್ರಸಿದ್ಧ ಪ್ರಾಚೀನ ನೆಲೆಯಾಗಿ ಹೊರಹೊಮ್ಮಿರುವುದು ಅಧ್ಯಯನಾರ್ಹ ಸಂಗತಿ.



## ಆಕರ ಗ್ರಂಥಗಳು

೧. ಎಸ್.ವೈ. ಸೋಮಶೇಖರ್, ಚಿತ್ರದುರ್ಗ ತಾಲೂಕು ಚಿಪ್ಪಿನಕೆರೆಯಲ್ಲಿ ಕಂಡುಬಂದಿರುವ ಪ್ರಾಕ್ಚಾರಿತ್ರಿಕ ಕುರುಹುಗಳು, ಇತಿಹಾಸ ದರ್ಶನ, ಸಂಪುಟ ೧೧, ಪು.೩೨–೩೩; ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೯೬.

೨. ಲಕ್ಷ್ಮಣ್ ತೆಲಗಾವಿ, ಮೌರ್ಯ ಮತ್ತು ಶಾತವಾಹನ ಯುಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

# ಹಾಲಸಾಗರ ಬೆಟ್ಟದ ಪ್ರಾಗಿತಿಹಾಸ ಕಾಲದ ವರ್ಣಚಿತ್ರಗಳು

ಓ. ಓಬಯ್ಯ ಹಾಲಸಾಗರ*

**ಹಾ**ಲಸಾಗರ ಬಳ್ಳಾರಿ ಜಿಲ್ಲೆಯ ಗ್ರಾಮವು ಕೂಡ್ಲಿಗಿ ತಾಲ್ಲೂಕು ಕೇಂದ್ರದಿಂದ ೩೫ ಕಿ.ಮೀ ದೂರದಲ್ಲಿದೆ. ಈ ಬೆಟ್ಟದ ಪರಿಸರ ನವಶಿಲಾಯುಗ ಮತ್ತು ಬೃಹತ್‌ಶಿಲಾ ಯುಗ ಕಾಲದಿಂದಲು ಜನದಟ್ಟಣೆಯಿಂದ ಕೂಡಿದ ಪ್ರದೇಶವಾಗಿತ್ತು[೧] ಪ್ರಮುಖವಾಗಿ ಪಶುಪಾಲನೆ ಮತ್ತು ಕೃಷಿಯನ್ನು ಅವಲಂಬಿಸಿದ್ದರು. ಹಾಲಸಾಗರ ಬೆಟ್ಟ ಪರಿಸರದಲ್ಲಿ ಕ್ಷೇತ್ರಕಾರ್ಯ ನಡೆಸಿದ ಸಂದರ್ಭದಲ್ಲಿ ಪ್ರಾಗೈತಿಹಾಸಿಕ ಕಾಲದ ವರ್ಣಚಿತ್ರಗಳು ಕಂಡು ಬಂದಿವೆ. ಅವುಗಳನ್ನು ವಿಶ್ಲೇಷಿಸುವುದು ಈ ಲೇಖನ ಉದ್ದೇಶವಾಗಿದೆ. ಇದಲ್ಲದೆ, ಬಿಳಿಬಣ್ಣದ ಐತಿಹಾಸಿಕ ಚಿತ್ರಗಳನ್ನು ಸಹ ಪರಿಚಯಿಸಲಾಗಿದೆ.

ಹಾಲಸಾಗರ ಗ್ರಾಮದ ಬೆಟ್ಟಗಳ ಪೂರ್ವಕ್ಕೆ: ಸಿದ್ದಾಪುರ ಬ್ರಹ್ಮಗಿರಿ ಹಾಗೂ ಜಟಂಗಿರಾಮೇಶ್ವರ ಬೆಟ್ಟಗಳಲ್ಲಿ ಶಿಲಾಯುಗದ ಅವಶೇಷಗಳು ಮತ್ತು ಮೌರ್ಯರ ಕಾಲದ ಅಶೋಕನ ಶಿಲಾಶಾಸನಗಳಿವೆ. ಗ್ರಾಮದ ಪಶ್ಚಿಮಕ್ಕೆ: ಗುಡೇಕೋಟೆಯ ಸುತ್ತಮುತ್ತಲಿನ ಪರಿಸರದಲ್ಲಿ ಬೃಹತ್ ಶಿಲಾಗೋರಿಗಳು ಹಾಗೂ ಗವಿವರ್ಣಚಿತ್ರಗಳು ಶೋಧಗೊಂಡಿವೆ. ಉತ್ತರಕ್ಕೆ: ಕೋಟೆಗುಡ್ಡ ಮತ್ತು ದೇವರಹಟ್ಟಿ ಪರಿಸರದಲ್ಲಿ ಸಹ ಶಿಲಾಸಮಾಧಿಗಳು, ಗವಿಚಿತ್ರಗಳು ಹಾಗೂ ಗೀರು ಬಂಡೆಚಿತ್ರಗಳು ಪತ್ತೆಯಾಗಿವೆ. ದಕ್ಷಿಣಕ್ಕೆ: ಹಾಲಸಾಗರ ಗ್ರಾಮದ ಬೆಟ್ಟಗಳು, ಬಯಲುಬಂಡೆಗಳು, ಕಲ್ಲಾಸರೆಗಳು, ಸದಾ ಮಳೆ ನೀರಿನಿಂದ ತುಂಬಿಹರಿಯುವ ಹಳ್ಳ ಕೊಳ್ಳಗಳಿವೆ. ಈ ಅರಣ್ಯದಲ್ಲಿರುವ ವಿವಿಧ ಪ್ರಾಣಿ ಸಂಕುಲ, ಸಸ್ಯವರ್ಗವನ್ನು ಕಂಡು ಬ್ರಿಟೀಷ್‌ರು ಹಾಲಸಾಗರ ಕಾಯ್ದಿಟ್ಟ ಅರಣ್ಯವೆಂದು ನಾಮಕರಣ ಮಾಡಿದ್ದಾರೆ. ಆದರೆ ಈಗ ಈ ಪರಿಸರದ ಪ್ರಾಣಿ ಸಂಕುಲವನ್ನು ಉಳಿಸಲು ಕರ್ನಾಟಕ ಸರ್ಕಾರ ೨೦೧೪ರಲ್ಲಿ ಗುಡೇಕೋಟೆ ಕರಡಿಧಾಮ ಎಂದು ಘೋಷಿಸಿದೆ[೨].

ಐತಿಹ್ಯದ ಪ್ರಕಾರ ಪ್ರಾಚೀನ ಕಾಲದಿಂದಲೂ ಇಲ್ಲಿನ ಜನರ ಪ್ರಮುಖ ಕಸುಬು ಪಶುಪಾಲನೆ ಮತ್ತು ಕೃಷಿಯಾಗಿತ್ತು. ಇಲ್ಲಿನ ಜನರು ಪಶುಪಾಲನೆಯಿಂದ ಯತ್ತೇಚ್ಚವಾಗಿ ಹಾಲು ಉತ್ಪಾದಿಸುತ್ತಿರುವುದ ರಿಂದ ಈ ಗ್ರಾಮಕ್ಕೆ ಹಾಲಸಾಗರ ಎಂದು ಹೆಸರು ಬಂದಿದೆ. ಸ್ಥಳಿಯರ ಪ್ರಕಾರ. ಹಿಂದಿನ ಕಾಲದಲ್ಲಿ ಹಾಲೂರು ಮತ್ತು ಮಾಲೂರು ಎಂಬ ಎರಡು ಊರಗಳಿದ್ದು. ಇಲ್ಲಿನ ಜನರು ಹಾಲನ್ನು ಮಾರಾಟ ಮಾಡಿ ಕೆರೆಯನ್ನು ನಿರ್ಮಿಸಿರುವುದರಿಂದ ಹಾಲಸಾಗರ ಎಂಬ ಸ್ಥಳ ನಾಮ ಬಂದಿದೆ. ಎಂಬ ಅಭಿಪ್ರಾಯವಿದೆ.[೩] ಆದರೆ ಆ ಕೆರೆ ಈಗಲು ಇದ್ದು, ಒಂದು ಮೂಲೆಯಲ್ಲಿ ಒಡೆದುಹೋಗಿದೆ.

ಹಾಲಸಾಗರದ ಸುತ್ತಮುತ್ತಲಿನ ಪರಿಸರ ಪ್ರಾಗೈತಿಹಾಸಿಕ, ಅವಶೇಷಗಳ ಆಗರವಾಗಿದೆ. ಇತ್ತೀಚಿನ ದಿನಗಳಲ್ಲಿ ಹಾಲಸಾಗರ ಸುತ್ತಮುತ್ತಲಿನ ಪರಿಸರದಲ್ಲಿ ವಿವಿಧ ರೀತಿಯ ಬೃಹತ್ ಶಿಲಾಗೋರಿಗಳು, ಶಿಲಾಯುಧ ಮತ್ತು ಮಸೆಯುವ ಕಲ್ಲುಬಂಡೆಗಳು ಕಂಡುಬಂದಿವೆ. ಹಾಲಸಾಗರದ ಬೆಟ್ಟದ ಪರಿಸರದ ಕಲ್ಲಾಸರೆಗಳಲ್ಲಿ ಬೇಟೆಯಾಡಿದ ಪ್ರಾಣಿ ಪಕ್ಷಿಗಳ ಮತ್ತು ಸ್ತ್ರೀ ಪುರುಷರ ಚಿತ್ರಗಳನ್ನು ಕೆಮ್ಮಣ್ಣು (ಜಾಜು) ಹಾಗೂ ಬಿಳಿ (ಸುಣ್ಣ) ಬಣ್ಣದಿಂದ ಚಿತ್ರಿಸಿದ್ದಾರೆ. ಇಂಥ ಸುಮಾರು ೧೪ ಕಲ್ಲಾಸರೆಗಳಲ್ಲಿ ಗವಿ ವರ್ಣಚಿತ್ರಗಳು ಕಂಡುಬಂದಿವೆ.

ಈ ವರ್ಣಚಿತ್ರಗಳು ರೇಖಾಚಿತ್ರಗಳು ಪ್ರಾಗೈತಿಹಾಸಿಕ ಕಾಲದ ಜನರ ಕಸುಬು, ಬೇಟೆಗಾರಿಕೆ, ಕಲೆ, ಅಲಂಕಾರ, ಮನೋರಂಜನೆ, ಅಭಿವ್ಯಕ್ತಿ ಹಾಗೂ ಅವರ ಸಾಮಾಜಿಕ ಜೀವನ ಮೇಲೆ ಬೆಳಕು ಚೆಲ್ಲುತ್ತವೆ.[೪] ಈ ಗವಿಚಿತ್ರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಪ್ರಾಗೈತಿಹಾಸಿಕ (ಜಾಜುಬಣ್ಣ) ಮತ್ತು (ಬಿಳಿ) ಐತಿಹಾಸಿಕ ಕಾಲದ ಗವಿವರ್ಣ ಚಿತ್ರಗಳೆಂದು ವಿಂಗಡಿಸಲಾಗಿದೆ.[೫]

ಹಾಲಸಾಗರ ಬೆಟ್ಟ ಪರಿಸರದಲ್ಲಿ ಶೋಧಗೊಂಡಿರುವ ಬೃಹತ್ ಶಿಲಾ ಗೋರಿಗಳು ಶಿಲಾ ಆಯುಧಗಳು, ಮಸೆಯುವ ಕಲ್ಲುಗಳು, ಗವಿ ಚಿತ್ರಗಳನ್ನು ಆದರಿಸಿ ಇವರ ಕಾಲಾವಧಿಯನ್ನು ಪ್ರಾಯಶಃ ಬೃಹತ್ ಶಿಲಾಯುಗದ ಆದಿ ಮಧ್ಯಭಾಗಕ್ಕೆ

* ಇತಿಹಾಸ ಉಪನ್ಯಾಸಕರು, ಎಸ್‌ಜಿಎಂ ಪ್ರಥಮ ದರ್ಜೆ ಕಾಲೇಜು, ರಾಂಪುರ, ಮೊ. ೯೯೦೨೪೦೭೬೦೨

ಸೇರುತ್ತವೆ. ಉದಾಹರಣೆ: ಸುಮಾರು ಕ್ರಿ.ಪೂ.೧೦೦೦ದಿಂದ ೫೦೦, ಸುಮಾರು ಕ್ರಿ.ಪೂ. ೮೦೦ ರಿಂದ ೨೦೦ ಅಥವಾ ಸುಮಾರು ಕ್ರಿ.ಪೂ. ೧೬೦೦ರಿಂದ ೮೦೦ರ ಕಾಲಮಾನದಲ್ಲಿ ಅಸ್ತಿತ್ವದಲ್ಲಿತ್ತು, ಎಂದು ಸುಂದರ್ ಮೊದಲಾದ ಪುರಾತತ್ವತಜ್ಞರು ಅಭಿಪ್ರಾಯಿಸಿದ್ದಾರೆ[೬].

## ನವಶೋಧಿತವಾಗಿರುವ ಪ್ರಾಗೈತಿಹಾಸಿಕ ಗವಿವರ್ಣ ಚಿತ್ರಗಳು

**ಕಳ್ಳರ ಬಂಡೆಯ ಕಲ್ಲಾಸರೆ:** ಈ ಗ್ರಾಮದ ಪೂರ್ವಕ್ಕಿರುವ ಕೆರೆಯ ಹಿಂಭಾಗದ ಪಾಳು ಬಿದ್ದಿರುವ ಊರಿನ ಹತ್ತಿರ ಇರುವ ಕಳ್ಳರಬಂಡೆಯ ಮೇಲಿರುವ ಒಂದು ಕಲ್ಲಾಸರೆಯಲ್ಲಿ ಸುಮಾರು ೫೦ವರ್ಣ ಚಿತ್ರಗಳನ್ನು ಚಿತ್ರಿಸಿದ್ದಾರೆ. ಈ ಎಲ್ಲಾ ಚಿತ್ರಗಳು ವಿವಿಧ ಪ್ರಾಣಿಗಳು, ಮಾನವಾಕೃತಿಗಳು ಹಾಗೂ ಸ್ತ್ರೀ ಪುರುಷರ ಚಿತ್ರಗಳಿವೆ.ಅವುಗಳಲ್ಲಿ ಪ್ರಮುಖವಾದವು (೧). ಒಬ್ಬ ಮನುಷ್ಯ ದಪ್ಪ ತಲೆಗೂದಲು ಹೊಂದಿದ್ದು ಎರಡು ಕೈಗಳನ್ನು ಮೇಲಕ್ಕೆತ್ತಿ ಒಂದು ಕೈಯಲ್ಲಿ ಡಮರುಗ ಇನ್ನೊಂದು ಕೈಯಲ್ಲಿ ಅಸ್ಪಷ್ಟ ಆಯುಧ ಹಿಡಿದಿದ್ದಾನೆ. ಈ ಚಿತ್ರದ ಹತ್ತಿರದಲ್ಲಿ ಮರದ ವಿನ್ಯಾಸ ಚಿತ್ರ, ಕೆಳಭಾಗದಲ್ಲಿ ಓಡುತ್ತಿರುವ ಮಾನವಾಕೃತಿಗಳಿವೆ. (೨). ಸ್ತ್ರೀ ಚಿತ್ರಗಳು ದಪ್ಪವಾದ ತಲೆಗೂದಲು ಹೊಂದಿದ್ದು ಎರಡು ಕೈಗಳನ್ನು ಕೆಳಗೆ ಇಳೆಬಿಟ್ಟು ನಡೆಯುತ್ತಿರುವಂತೆ ಬಿಡಿಸಲಾಗಿದೆ. ಬಲಭಾಗದಲ್ಲಿ ಗೂಳಿಯ ಚಿತ್ರವಿದೆ. (೩). ಮನುಷ್ಯನ ತಲೆಮೇಲೆ ಬುಟ್ಟಿ ಹೊತ್ತು ನಿಂತಿರುವ ಚಿತ್ರ ವಿಶೇಷವಾಗಿದೆ. ಬುಟ್ಟಿಯಲ್ಲಿ ವೃತ್ತ ಅಥವಾ ಮಂಡಲದಂತೆ ಕಾಣುವ ಚಿತ್ರವಿದೆ. ಬಹುಶಃ ಈ ಚಿತ್ರ ಮಾಂತ್ರಿಕರಕಟ್ಟಳೆಗಳಿಗೆ ಸಂಬಂಧಿಸಿದೆ. (೪). ಉಯ್ಯಾಲೆ ಆಡುತ್ತಿರುವ ಮನುಷ್ಯರ ಚಿತ್ರಗಳನ್ನು ಚಿತ್ರಿಸಿದ್ದಾರೆ. ಇವು ಅಪರೂಪದ ಚಿತ್ರಗಳಾಗಿವೆ. (೫). ಮೂರು ಉಡದ ಚಿತ್ರಗಳ ಹತ್ತಿರದಲ್ಲಿ ಬೇಟೆ ನಾಯಿಯನ್ನು ಚಿತ್ರಿಸಿದ್ದಾರೆ. (೬). ಕುದುರೆಯನ್ನು ಓಡಿಸುತ್ತಿರುವ ಮನುಷ್ಯನ ಚಿತ್ರ. ಎದುರುಗಡೆ ಯಾವುದೋ ಪ್ರಾಣಿಯನ್ನು ಒಂದು ಕೈಯಲ್ಲಿ ಹಿಡಿದಿರುವ ಮಾನವಾಕೃತಿ. ಮಾನವಾಕೃತಿಗಳ ಹಾಗೂ ಪ್ರಾಣಿಗಳ ಚಿತ್ರಗಳನ್ನು ಬಹುತೇಕವಾಗಿ ಕೆಮ್ಮಣ್ಣು (ಜಾಜು) ಬಣ್ಣದಲ್ಲಿ ಚಿತ್ರಿಸಿದ್ದಾರೆ. ಈ ಕಲ್ಲಾಸರೆ ಸಮೀಪದಲ್ಲಿ (ಪೂರ್ವಕ್ಕೆ) ಕಿಂಡಿಕೋಣೆ ಸಮಾಧಿಗಳಿರುವುದರಿಂದ ಈ ವರ್ಣಚಿತ್ರಗಳು ಬೃಹತ್ ಶಿಲಾಯುಗ ಅಥವಾ ಪ್ರಾಗೈತಿಹಾಸಿಕ ಕಾಲದ ವರ್ಣಚಿತ್ರಗಳೆಂದು ಅಂದಾಜಿಸಲಾಗಿದೆ.

ಈ ಕಲ್ಲಾಸರೆಯಲ್ಲಿ ಬಿಳಿ (ಸುಣ್ಣ) ಬಣ್ಣದ ಮನುಷ್ಯರ ರೇಖಾ ಚಿತ್ರಗಳನ್ನು ಕಾಣಬಹುದು. ಇವು ಐತಿಹಾಸಿಕ ಚಿತ್ರಗಳಾಗಿವೆ.

**ಪಾಂಡವರ ಗವಿ:** ಗ್ರಾಮದ ಪೂರ್ವಕ್ಕೆ ಪಾಂಡವರ ಬೆಟ್ಟದ ಮೇಲಿರುವ ಬಂಡೆಯ ಮೇಲೆ ಬೃಹದಾಕಾರದ ಗುಂಡಿನ ಒಳಗಡೆ ಗವಿಯಂತಿದ್ದು ಅದು ಶಿಲಾಯುಗದ ಮಾನವನು ವಾಸಿಸಲು ಯೋಗ್ಯವಾಗಿರುವ ಸ್ಥಳ. ಈ ಗವಿಯಲ್ಲಿ ಜಾಜು ಬಣ್ಣದಿಂದ ಚಿತ್ರಿಸಿದ ನಾಲ್ಕು ಮಾನವಾಕೃತಿಗಳಿವೆ. ಅವು ಇಬ್ಬರು ಸ್ತ್ರೀಯರ ಮಧ್ಯದಲ್ಲಿ ನಡೆಯುತ್ತಿರುವ ಪುರುಷರ ಮಾನವಾಕೃತಿ ಚಿತ್ರಗಳಿವೆ. ಈ ಚಿತ್ರಗಳ ಸುತ್ತಲು ಸಮಾನಾಂತರವಾಗಿ ಗೆರೆ ಎಳೆಯಲಾಗಿದೆ. ಈ ಚಿತ್ರಗಳ ಎದುರುಗಡೆ ಚಲಿಸುತ್ತಿರುವ ಎರಡು ಮಾನವಾಕೃತಿಚಿತ್ರಗಳಿವೆ. ಈ ಕಲ್ಲಾಸರೆಯಲ್ಲಿರುವ ಆರು ಚಿತ್ರಗಳು ಪ್ರಾಗೈತಿಹಾಸಿಕ ಚಿತ್ರಗಳಾಗಿವೆ.

**ಶೀಗಲು ಗುಂಡು:** ಹಾಲಸಾಗರದ ಅರಣ್ಯದ ಮಧ್ಯದಲ್ಲಿರುವ ಗೆದ್ಲಾಡಿನ ಶೀಗಲು ಗುಂಡು ನೆಲದಿಂದ ೫ ಅಡಿ ಎತ್ತರದ ವೃತ್ತಾಕಾರದ ಬಂಡೆಯ ಮೇಲಿರುವ ಗುಂಡಿನೊಳಗಡೆ ಜಾಜು ಬಣ್ಣದ ಜಿಂಕೆಯ ಚಿತ್ರ ಮತ್ತು ಬಾಣದ ಚಿತ್ರಗಳು ಪ್ರಾಗೈತಿಹಾಸಿಕ ಕಾಲದ ಚಿತ್ರಗಳಾಗಿವೆ. ಈ ಚಿತ್ರಗಳ ಸಮೀಪದಲ್ಲಿ ಕುದುರೆ, ಬಿಲ್ಲುಬಾಣ ಹಿಡಿದಿರುವ ಮಹಿಳೆಯ ಚಿತ್ರ, ಗೂಳಿ ಮತ್ತು ನಾಯಿಗಳ ಚಿತ್ರಗಳನ್ನು ನಂತರ ಕಾಲದಲ್ಲಿ ಚಿತ್ರಿಸಲಾಗಿದೆ. ಈ ಕಲ್ಲಾಸರೆಯಲ್ಲಿ ಸುಮಾರು ೧೦ ಮಾನವಾಕೃತಿಗಳು ಕೈಗಳನ್ನು ಮೇಲಕ್ಕೆತ್ತಿ ನಿಂತಿರುವ ಬಿಳಿಬಣ್ಣದ ಚಿತ್ರಗಳಿವೆ. ಇವು ಐತಿಹಾಸಿಕ ಚಿತ್ರಗಳೆಂದು ಪರಿಗಣಿಸಬಹುದು.

**ಕತ್ತಿನೆತ್ತಿ ಗುಂಡು:** ಅರಣ್ಯದ ಮಧ್ಯದಲ್ಲಿರುವ ವಿಶಾಲವಾದ ನೆಲ ಬಂಡೆಯ ಮೇಲೆ ಮುಂಚಾಚಿರುವ ಬೃಹತ್ ಕಲ್ಲಾಸರೆಯಲ್ಲಿ ಜಾಜು ಬಣ್ಣದಿಂದ ಚಿತ್ರಿಸಿರುವ ರೇಖೆಗಳು ಹಾಗೂ ಅನೇಕ ಗುರುತಿಸಲಾಗದ ಚಿತ್ರಗಳು ಕಾಲನ ಹೊಡತಕ್ಕೆ ಸಿಲುಕಿ ನಸಿಸಿವೆ. ಈ ಕಲ್ಲಾಸರೆಯ ಅನತಿದೂರದಲ್ಲಿ (ಪಶ್ಚಿಮಕ್ಕೆ) ಬೃಹತ್‌ಶಿಲಾಯುಗ ಸಮಾಧಿಗಳು ಕಂಡುಬಂದಿರುವುದರಿಂದ ಈ ವರ್ಣಚಿತ್ರಗಳು ಬೃಹತ್‌ಶಿಲಾಯುಗ ಸಂಸ್ಕೃತಿಯ ಕಾಲಮಾನದ ಚಿತ್ರಗಳೆಂದು ಪರಿಗಣಿಸಬಹುದು. ಈ ಕಲ್ಲಾಸರೆಯಲ್ಲಿ ಬಿಳಿ ಬಣ್ಣದಲ್ಲಿ ಕಾಡು ಬೆಕ್ಕಿನ ಚಿತ್ರವನ್ನು ಮುದ್ರೆ ಒತ್ತಿದಂತೆ ಚಿತ್ರಿಸಿದ್ದಾರೆ. ಜೊತೆಗೆ ಬಿಳಿಬಣ್ಣದಲ್ಲಿ ಗೆರೆ ಎಳೆದಂತಿರುವ ಮಾನವಾಕೃತಿಗಳನ್ನು ಚಿತ್ರಿಸಲಾಗಿದೆ. ಈ ಚಿತ್ರಗಳು ಮಧ್ಯಯುಗೀನ ಅಥವಾ ಐತಿಹಾಸಿಕ ಕಾಲದ ಚಿತ್ರಗಳಾಗಿವೆ.

**ರಾಗಿ (ರಾಗುಲು) ಗುಡ್ಡ:** ಗ್ರಾಮದ ದಕ್ಷಿಣಕ್ಕಿರುವ ರಾಗಿ (ರಾಗುಲು) ಗುಡ್ಡದ ಸಣ್ಣ ಸಂದುವಿನ ನೆಲದ ಮೇಲೆ ಬಾಗಿರುವ ಈ ಕಲ್ಲಾಸರೆಯಲ್ಲಿ ಮನುಷ್ಯ ಬಿಲ್ಲು ಬಾಣವನ್ನು ಹಿಡಿದು ನಾಯಿಗಳ ಜೊತೆಗೂಡಿ ಜಿಂಕೆಗಳನ್ನು ಬೇಟೆ ಆಡುತ್ತಿರುವ ಸಾಲು ಚಿತ್ರಗಳನ್ನು ಜಾಜು ಬಣ್ಣದಿಂದ ಚಿತ್ರಿಸಿದ್ದಾರೆ. ಈ ವರ್ಣಚಿತ್ರಗಳು ಶಿಲಾಯುಗದ ಮಾನವನ ಬೇಟೆಗಾರಿಕೆಯನ್ನು ಪರಿಚಯಿಸುತ್ತವೆ. ಈ ಕಲ್ಲಾಸರೆ ಸಮೀಪದಲ್ಲಿ ಬೃಹತ್ ಶಿಲಾ ಗೋರಿಗಳಿವೆ. ಆದ್ದರಿಂದ ಬೃಹತ್ ಶಿಲಾ ಸಂಸ್ಕೃತಿಯ ಕಾಲಮಾನದ ಅಥವಾ ಪ್ರಾಗೈತಿಹಾಸಿಕ ಚಿತ್ರಗಳಾಗಿವೆ. ಇದೇ ಕಲ್ಲಾಸರೆಯಲ್ಲಿ ಬಿಳಿ ಬಣ್ಣದ ೧೦ಕ್ಕೂ ಹೆಚ್ಚು ಮಾನವ ರೇಖಾ ಚಿತ್ರಗಳು ನಶಿಸುವ ಹಂತದಲ್ಲಿವೆ. ಇವು ಮಧ್ಯಕಾಲಿನ ಅಥವಾ ಐತಿಹಾಸಿಕ ಚಿತ್ರಗಳಾಗಿವೆ.

ರಾಗಿ ಬೆಟ್ಟದ ಹಿಂಭಾಗದ ಕಲ್ಲಾಸರೆಯಲ್ಲಿ ಜಾಜು ಬಣ್ಣದ ಪ್ರಾಗೈತಿಹಾಸಿಕ ಮಾನವ ರೇಖಾ ಚಿತ್ರಗಳು ಕಾಲನ ಹೊಡತಕ್ಕೆ ಸಿಲುಕಿ ನಶಿಸಿವೆ. ಜೊತೆಗೆ ಚಿಕ್ಕವಾಗಿರುವ ಆರು ಮಾನವಕೃತಿಗಳನ್ನು ಬಿಳಿಬಣ್ಣದಲ್ಲಿ ಚಿತ್ರಿಸಲಾಗಿದೆ. ಈ ಬಿಳಿಬಣ್ಣ ಚಿತ್ರಗಳು ಮದ್ಯಕಾಲೀನ ಅಥವಾ ಐತಿಹಾಸಿಕ ಚಿತ್ರಗಳಾಗಿವೆ.

ರಾಗಿ ಗುಡ್ಡದ ಎರ್ರಗುಂಡಿನ ಕೆಳಗಡೆ ಕಪ್ಪುಕಾಡಿಗೆಯಿಂದ ಚಿತ್ರಿಸಿದ ಎರಡು ಮಾನವ ರೇಖಾ ಚಿತ್ರಗಳಿವೆ. ಈ ಕಪ್ಪು ಬಣ್ಣ ಚಿತ್ರಗಳು ಈ ಭಾಗದಲ್ಲಿ ಅಪರೂಪಕ್ಕೆ ಶೋಧವಾಗಿರುವ ಚಿತ್ರಗಳಾಗಿವೆ. ಈ ಚಿತ್ರಗಳು ಸೂಕ್ಷ್ಮಶಿಲಾಯುಗದ ಚಿತ್ರಗಳಾಗಿರಬಹುದು ಎಂದು ಅಂದಾಜಿಸಲಾಗಿದೆ. ಈ ಕಲ್ಲಾಸರೆಯಲ್ಲಿ ಬಿಳಿ ಬಣ್ಣದಿಂದ ಚಿತ್ರಿಸಿದ ಮಾನವರೇಖಾ ಚಿತ್ರಗಳಿವೆ ಆದರೆ ಅವು ನಸಿಸುವ ಹಂತದಲ್ಲಿವೆ. ಇವು ಐತಿಹಾಸಿಕ ಚಿತ್ರಗಳಾಗಿವೆ.

**ಗೋಡೆಗಳ ಗುಡ್ಡದ ತುಮ್ಮೆಮರ:** ಬೃಹದಾಕಾರವಾಗಿ ಮುಂಚಾಚಿರುವ ಕಲ್ಲಾಸರೆ ನೈರ್ಸಗಿಕ ಗವಿಯಾಗಿದೆ. ಇಲ್ಲಿ ಕೆಂಬಣ್ಣದಲ್ಲಿ ಸೂರ್ಯ ಚಂದ್ರ, ಜಿಂಕೆ, ಚಿರತೆ, ಗೂಳಿ ಚಿತ್ರಗಳನ್ನು ಹಾಗೂ ಗೆರೆ ಎಳೆದಂತಿರುವ ಮಾನವಾಕೃತಿಗಳು, ದೊಡ್ಡದಾದ ಅಸ್ಪಷ್ಟವಾದ ಪ್ರಾಣಿ ಚಿತ್ರ ಮುಂತಾದ ಗುರುತಿಸಲಾಗದ ಚಿತ್ರಗಳಿವೆ. ಈ ಕಲ್ಲಾಸರೆಯ ಹೊರಭಾಗದಲ್ಲಿ ಮೊಗ್ಗು ಅರಳುತ್ತಿರುವಂತೆ ಕಾಣುವ ಹೂವಿನ ಚಿತ್ರ ವಿಶೇಷವಾಗಿದೆ. ಜಾಜು ಬಣ್ಣದ ಚಿತ್ರಗಳು ಪ್ರಾಗೈತಿಹಾಸಿಕ ಚಿತ್ರಗಳಾಗಿವೆ. ಇವುಗಳ ಜೊತೆಗೆ ಬಿಳಿ ಬಣ್ಣದಲ್ಲಿ ಐದು ಮಾನವ ರೇಖಾ ಚಿತ್ರಗಳು, ಮನುಷ್ಯ ಕುದುರೆ ಮೇಲೆ ಕುಳಿತಿರುವ ಚಿತ್ರ, ಸೂರ್ಯ-ಚಂದ್ರ, ಹಾವಿನ ಚಿತ್ರ, ಆಯುಧಗಳನ್ನು ಹಿಡಿದಿರುವ, ನಡೆಯುತ್ತಿರುವ ಮನುಷ್ಯನ ಚಿತ್ರಗಳು, ಪಾರಿವಾಳ, ಹದ್ದಿನಂತಿರುವ ಪಕ್ಷಿಗಳ ಚಿತ್ರವನ್ನು ಚಿತ್ರಿಸಿದ್ದಾರೆ. ಈ ಕಲ್ಲಾಸರೆ ಕೆಳಗಡೆ ಬಿಳಿ ಬಣ್ಣದ ಇನ್ನು ಅನೇಕ ಚಿತ್ರಗಳಿಂದ ತುಂಬಿದೆ. ಈ ಬಿಳಿಬಣ್ಣದ ಚಿತ್ರಗಳು ಮಧ್ಯಕಾಲಿನ ಹಾಗೂ ಐತಿಹಾಸಿಕ ಚಿತ್ರಗಳಾಗಿವೆ.

ಈ ಕಲ್ಲಾಸರೆಯಲ್ಲಿ ಕೆಂಬಣ್ಣದಲ್ಲಿ ಚಿತ್ರಿಸಿರುವ ಮಾನವಾಕೃತಿಗಳು ಹಾಗೂ ಕಮಲದ ಹೂವಿನ ದಳಗಳಂತೆ ಬರೆದಿರುವ ಅರೆಬರೆ ನಾಶವಾಗಿರುವ ಕೆಂಬಣ್ಣದ ಚಿತ್ರಗಳು ಪ್ರಾಗೈತಿಹಾಸಿಕ ಚಿತ್ರಗಳಾಗಿವೆ. ಆದರೆ ಇವು ಸ್ಪಷ್ಟವಾಗಿ ಕಾಣುತ್ತಿಲ್ಲ.

ಈ ಕಲ್ಲಾಸರೆಯಲ್ಲಿ ಗೂಳಿಯ ಚಿತ್ರ, ಮೇಲ್ಭಾಗದಲ್ಲಿ ಮಹಿಳೆ ಖಡ್ಗದಂತೆ ಆಯುಧ ಹಿಡಿದಿರುವ ಚಿತ್ರ, ಆಯುಧಗಳನ್ನು ಹಿಡಿದು ನಡೆಯುತ್ತಿರುವ ಇತರೆ ಸ್ತ್ರೀ ಪುರುಷರ ಚಿತ್ರಗಳು ಮತ್ತು ಏಣಿ(ನಿಚ್ಚಣಿಕೆ)ಯಂತಿರುವ ಚಿತ್ರವನ್ನು ಕೆಂಬಣ್ಣದಲ್ಲಿ (ಜಾಜು) ಚಿತ್ರಿಸಲಾಗಿದೆ. ಇವು ಪ್ರಾಗೈತಿಹಾಸಿಕ ಕಾಲಮಾನದ ಚಿತ್ರಗಳಾಗಿವೆ. ಈ ಕಲ್ಲಾಸರೆಯ ಕೆಳಭಾಗದಲ್ಲಿ ಕಣಶಿಲೆಯನ್ನು ಒರಳುಕಲ್ಲು ಮಾಡಿಕೊಂಡಿರುವುದು ಕಂಡುಬಂದಿರುತ್ತದೆ. ಹತ್ತಿರದಲ್ಲಿ ಮಸೆಯುವಕಲ್ಲು ದೊರೆತ್ತಿರುವುದರಿಂದ ಈ ಕಲ್ಲಾಸರೆ ಚಿತ್ರಗಳನ್ನು ನೂತನ ಶಿಲಾಯುಗದ ಅಥವಾ ಬೃಹತ್ ಶಿಲಾಯುಗದ ವರ್ಣಚಿತ್ರಗಳೆಂದು ಪರಿಗಣಿಸಬಹುದು. ಇದೇ ಕಲ್ಲಾಸರೆಯಲ್ಲಿ ಬಿಳಿಬಣ್ಣದಲ್ಲಿ ಗೆರೆ ಎಳೆದಂತಿರುವ ಸುಮಾರು ೧೫ ಮಾನವಾಕೃತಿಗಳು, ಐತಿಹಾಸಿಕ ಚಿತ್ರಗಳಾಗಿವೆ. ಜೊತೆಗೆ 'ಗ' ಆಕಾರದ ಚಿಹ್ನೆಗಳನ್ನು ಚಿತ್ರಿಸಲಾಗಿದೆ.

ಈ ಕಲ್ಲಾಸರೆಯಲ್ಲಿ ಕುದುರೆ ಮೇಲಿರುವ ಮನುಷ್ಯನ ಚಿತ್ರ, ಮಾನವಾಕೃತಿಗಳು, ಆಂಜನೇಯ (ಕೋತಿ) ಚಿತ್ರಗಳನ್ನು ಬಿಳಿಬಣ್ಣದಲ್ಲಿ ಚಿತ್ರಿಸಲಾಗಿದೆ. ಇವು ಐತಿಹಾಸಿಕ ಅಥವಾ ಇತ್ತೀಚಿನ ಚಿತ್ರಗಳಾಗಿವೆ.

ಗೋಡೆಗಳ ಗುಡ್ಡದ ಹನುಮಪ್ಪನ ಗುಂಡಿನಲ್ಲಿ ಈ ಗುಂಡಿನ ಒಳಗಡೆ ಹನುಮಂತನ ಚಿತ್ರವನ್ನು ಕೊರೆದಿದ್ದು, ಅದು ಪೂಜಿಸಲ್ಪಟ್ಟಿದೆ. ಇದೇ ಕಲ್ಲಾಸರೆಯ ಎಡಭಾಗದಲ್ಲಿ ಗೂಳಿಯ ಚಿತ್ರ ಮತ್ತು ಗುದ್ದಲಿಯಂತಿರುವ ಆಯುಧವನ್ನು ಕೆಂಬಣ್ಣದಲ್ಲಿ ಚಿತ್ರಿಸಿದ್ದಾರೆ. ಇನ್ನು ಅನೇಕ ಕೆಂಬಣ್ಣ ಚಿತ್ರಗಳು ನಶಿಸಿವೆ. ಈ ಚಿತ್ರಗಳನ್ನು ಬಿಡಿಸಲು ಕೆಂಬಣ್ಣವನ್ನು ಬಂಡೆಯ ಮೇಲೆ ಸುರಿದುಕೊಂಡು ಚಿತ್ರಗಳನ್ನು ಚಿತ್ರಿಸಿದ್ದಾರೆ. ಈ ಕಲ್ಲಾಸರೆಯ ಹತ್ತಿರದಲ್ಲಿ ಬೃಹತ್ ಶಿಲಾ ಸಮಾಧಿಗಳಿರುವುದರಿಂದ ಈ ವರ್ಣಚಿತ್ರಗಳು ಪ್ರಾಗೈತಿಹಾಸಿಕ ಅಥವಾ ಬೃಹತ್ ಶಿಲಾ ಸಂಸ್ಕೃತಿಯ ಕಾಲಮಾನದ ಚಿತ್ರಗಳೆಂದು ಪರಿಗಣಿಸಬಹುದು.





ಇದೇ ಕಲ್ಲಾಸರೆಯಲ್ಲಿ ಮಲಗಿರುವಂತಿರುವ ಬಸವನಚಿತ್ರ, ಕೆಳಭಾಗದಲ್ಲಿ ಪ್ರಾಣಿಯ ಮುಖದ ಚಿತ್ರವನ್ನು ಚಿತ್ರಿಸಿದ್ದಾರೆ. ಇನ್ನೊಂದು ಅದ್ಭುತವಾದ ಚಿತ್ರವೆಂದರೆ ಮಾನವನ ತಲೆ. ಅದರ ಕೆಳಭಾಗದಲ್ಲಿ ಕುದರೆಮುಖದ ಚಿತ್ರವಿದೆ. ಇದನ್ನು ತಲೆ ಕೆಳಗಾಗಿ ನೋಡಿದಾಗ ಗಣೇಶನ ಮೂರ್ತಿಯಂತೆ ಕಾಣುತ್ತದೆ. ಈ ಚಿತ್ರಗಳನ್ನು ಕಪ್ಪುಬಣ್ಣ ಅಥವಾ ಕಲ್ಲಿನಲ್ಲಿಯೇ ಕೊರೆದಿರುವಂತೆ ಕಾಣುತ್ತವೆ. ನೆಲದ ಮೇಲಿರುವ ಕಣಶಿಲೆಯಲ್ಲಿ ಬಿಳಿಬಣ್ಣದಲ್ಲಿ ಮೊಲದ ಚಿತ್ರವನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ. ಈ ಕಲ್ಲಾಸರೆ ಕೆಳಗಡೆ ಒರಳುಕಲ್ಲು, ಮಸೆದಿರುವ ಕಲ್ಲುಗಳು ಬಂಡೆಗಳು ಕಂಡು ಬಂದಿವೆ. ಜೊತೆಗೆ ಇದೇ ಕಲ್ಲಾಸರೆಯಲ್ಲಿ 'ಊ' ಆಕಾರದ ೩ ಚಿಹ್ನೆಗಳಿವೆ. ಈ ಕಲ್ಲಾಸರೆಯಲ್ಲಿ ನಿಂತಿರುವ (ಬಿಳಿಬಣ್ಣದ) ಕುಳಿತಿರುವ (ಬೂದು ಬಣ್ಣ) ಗಣೇಶನ ಚಿತ್ರಗಳು ವಿಶೇಷವಾಗಿವೆ. ಇದೇ ಕಲ್ಲಾಸರೆ ಹತ್ತಿರ ಸ್ಥಳೀಯರಿಗೆ ಚಿಕ್ಕದಾಗಿರುವ ಬಂಗಾರದ ಗಣೇಶನ ಮೂರ್ತಿ ದೊರೆತಿದೆ. ಆದ್ದರಿಂದ ಈ ವರ್ಣಚಿತ್ರಗಳನ್ನು ಮಧ್ಯಕಾಲಿನ ಅಥವಾ ಐತಿಹಾಸಿಕ ಚಿತ್ರಗಳೆಂದು ಪರಿಗಣಿಸಬಹುದು.

**ಕಾರಾಡ್ಲು ಶೀಗಲು ಗುಂಡು:** ಈ ಕಲ್ಲಾಸರೆಯಲ್ಲಿ ಕೆಂಬಣ್ಣದಲ್ಲಿ ಬರೆದಿರುವ ಮಾನವ ರೇಖಾಚಿತ್ರಗಳಿವೆ. ಇವು ಪ್ರಾಗೈತಿಹಾಸಿಕ ಚಿತ್ರಗಳಾಗಿವೆ. ಆದರೆ ಈ ಚಿತ್ರಗಳು ನಶಿಸುವ ಹಂತದಲ್ಲಿವೆ.





**ತೂತುಗಳ (ತಿರುಗುಳಿ) ಗುಂಡು:** ಹಾಲಸಾಗರ ಪರಿಸರದ ವ್ಯಾಪ್ತಿಯಲ್ಲಿ ಬರುವ ದೇವರಹಟ್ಟಿಯ ಹಿಂಭಾಗದಲ್ಲಿರುವ ತೂತುಗಳ ಗುಂಡು ಕಲ್ಲಾಸರೆಯಲ್ಲಿ ಬಿಳಿ ಬಣ್ಣದ ಸುಮಾರು ೧೫ ಮಾನವ ರೇಖಾಚಿತ್ರಗಳು, ನಡೆಯುತ್ತಿರುವ ಹಾಗೂ ಓಡುತ್ತಿರುವ ಚಿತ್ರಗಳಾಗಿವೆ. ಈ ಕಲ್ಲಾಸರೆಯ ಹೊರಭಾಗದಲ್ಲಿ ನಡೆಯುತ್ತಿರುವಂತೆ ಕಾಣುವ ಮಾನವಾಕೃತಿಯನ್ನು












ಈಗಲೂ ಕಾಣಬಹದು, ಈ ಚಿತ್ರ ಮಳೆ ಬಿಸಿಲು, ಕಾಲನ ಹೊಡತಕ್ಕೆ ಸಿಲಿಕಿದರು ಬಣ್ಣ ನಸಿಸಿರುವುದಿಲ್ಲ. ಈ ಗುಣಮಟ್ಟದ ಬಿಳಿ ಬಣ್ಣ ಚಿತ್ರಗಳು ಮಧ್ಯಯುಗಿನ ಅಥವಾ ಐತಿಹಾಸಿಕ ಚಿತ್ರಗಳಾಗಿವೆ.

**ಉಪಸಂಹಾರ:** ಹಾಲಸಾಗರ ಬೆಟ್ಟಗಳ ಪರಿಸರದಲ್ಲಿ ೧೪ ಕಲ್ಲಾಸರೆಗಳಲ್ಲಿ ಗವಿವರ್ಣಚಿತ್ರಗಳ ನವಶೋಧನೆಯಿಂದ ಈ ಪರಿಸರ ನೂತನ ಶಿಲಾಯುಗ, ಬೃಹತ್ ಶಿಲಾಯುಗ ಮತ್ತು ಮಧ್ಯಕಾಲಿನ ಯುಗದಲ್ಲಿ ಜನಸಂದಣಿಯಿಂದ ಕೂಡಿತ್ತು ಎಂದು ಅರಿಯಬಹುದು. ಈ ಗವಿಚಿತ್ರಗಳಿಂದ ಅಂದಿನ ಶಿಲಾಯುಗದ ಜನರ ಕಸಬು, ಬೇಟೆಗಾರಿಕೆ, ಆಹಾರ ಪದ್ಧತಿ, ವಿಶ್ರಾಂತಿ ಸಮಯದಲ್ಲಿ ಮನೋರಂಜನೆ, ಕಲೆ, ಚಿತ್ರಕಲೆ ವರ್ಣಗಳ ಪರಿಚಯ, ಸಾಕು ಪ್ರಾಣಿಗಳು ಮತ್ತು ಕಾಣುಪ್ರಾಣಿಗಳ ಪರಿಚಯವನ್ನು ಅರಿಯಬಹುದು.

ಜೊತೆಗೆ ಅಂದಿನ ಕಾಲದಲ್ಲಿ ಬಳುಸುತ್ತಿರುವ ಆಯುಧಗಳು, ಶಿಲಾಯುಗದ ಮಾನವನ ಸಂಸ್ಕೃತಿ, ಕಾಲಮಾನ ಇನ್ನು ಮುಂತಾದ ಮಾಹಿತಿಯನ್ನು ಅರಿಯಬಹುದು. ಜೊತೆಗೆ ಈ ಗವಿಚಿತ್ರಗಳು ಪ್ರಾಗ್ಯೆತಿಹಾಸಿಕ ಇತಿಹಾಸ ರಚನೆಗೆ ಮಹತ್ವದ ಆಧಾರಗಳಾಗಿವೆ. ಆದ್ದರಿಂದ ಇಂತಹ ಗವಿವರ್ಣ ಚಿತ್ರಗಳ ಮಹತ್ವದ ಬಗ್ಗೆ ಜನರಲ್ಲಿ ಅರಿವು ಮೂಡಿಸಿ, ನಶಿಸದಂತೆ ಅವುಗಳನ್ನು ಸಂರಕ್ಷಿಸುವ ಜವಾಬ್ದಾರಿ ನಮ್ಮ ಮೇಲಿದೆ.

[ಹಾಲಸಾಗರ ಗ್ರಾಮದ ಹಿರಿಯರು, ಕುರಿ, ಆಡು ಮತ್ತು ದನಗಾಯಿಗಳು, ಬೇಟೆಗಾರರು; ಸ್ನೇಹಿತರಾದ ಎಂ.ವಿ. ವಿನೋದ, ಬೊಮ್ಮಲಿಂಗಯ್ಯ, ಸಂಜೀವಪ್ಪ, ಪಾಪಣ್ಣ ಮಹದೇವು, ಜಯಣ್ಣ, ಟಿ. ಬೊಮ್ಮಯ್ಯ, ಗೋವಿಂದ, ಸಣ್ಣ ಮಾರಯ್ಯ, ತಿಪ್ಪೇಶನಾಯಕ, ಸಣ್ಣ ಸೂರಯ್ಯ, ತಿಪ್ಪಾರೆಡ್ಡಿ,

ಎಸ್.ಆರ್. ಬೊಮ್ಮಯ್ಯ ಸಿದ್ದಣ್ಣ, ಆವುಲಯ್ಯ, ಕೆ.ಎಂ. ಮಾರೇಶ, ಚನ್ನಪ್ಪ, ಸಿದ್ದಪ್ಪ, ನಿತಿನ್, ಬಿ. ಮಲ್ಲಯ್ಯ, ಓಬಯ್ಯ ಇನ್ನು ಮುಂತಾದವರು ನನ್ನ ಕ್ಷೇತ್ರ ಕಾರ್ಯಕ್ಕೆ ಸಹಕರಿಸಿದ್ದಾರೆ. ಈ ಲೇಖನ ಬರೆಯಲು ಮಾರ್ಗದರ್ಶನ ನೀಡಿದವರು ಹೆಚ್.ಎಂ. ತಿಪ್ಪೇಶ, ಡಾ. ಶರಣಬಸಪ್ಪ ಕೋಲ್ಕರ್, ಡಾ. ಮೋಹನ್, ಪ್ರೊ. ಜಿ.ಕೆ. ದೇವರಾಜಸ್ವಾಮಿ ಅವರುಗಳಿಗೆ ನಾನು ಚಿರಋಣಿಯಾಗಿದ್ದೇನೆ.]



## ಅಡಿಟಿಪ್ಪಣಿಗಳು

೧. ತಿಪ್ಪೇಶ ಹೆಚ್.ಎಂ., ೨೦೧೭, ಹಾಲಸಾಗರ ಪರಿಸರದ ಪ್ರಾಚ್ಯಾವಶೇಷಗಳು, ಇತಿಹಾಸ ದರ್ಶನ, ಸಂ ೩೨, ೫೯೧-೫೯೫.

೨. ಕರ್ನಾಟಕ ಸರ್ಕಾರ, ೨೦೧೪ರ ಗೆಜೆಟಿಯರ್.

೩. ಸ್ಥಳೀಯರ ಅಭಿಪ್ರಾಯ (ಕ್ಷೇತ್ರ ಕಾರ್ಯ ಸಂದರ್ಭದಲ್ಲಿ).

೪. ಕೋಲ್ಕಾರ್ ಶರಣಬಸಪ್ಪ, ೨೦೧೦, ಶಿಲಾಯುಗದ ಗವಿಚಿತ್ರಗಳು; ೧೯೬-೧೯೯.

೫. ಕೋಲ್ಕಾರ್ ಶರಣಬಸಪ್ಪ, ಅದೇ: ಪುಟ ೧೮೧-೨೦೮.

೬ ಬಿ. ಶೇಕ್ ಅಲಿ ಮತ್ತು ಅ. ಸುಂದರ, ೨೦೧೮, ಕರ್ನಾಟಕ ಚರಿತ್ರೆ ಸಂ. ೧, ಪು. ೩೪೭-೫೧.

## ಆಕರ ಗ್ರಂಥಗಳು


೧. ಜಯಣ್ಣ ಉಲ್ಲಾನಹಳ್ಳಿ, ಕೂಡ್ಲಿಗಿ ತಾಲ್ಲೂಕಿನ ಗುಡೇಕೋಟೆ ಪರಿಸರದ ಪುರಾತತ್ವ ಸಮೀಕ್ಷೆ, ಇತಿಹಾಸ ದರ್ಶನ, ಬೆಂಗಳೂರು.

೨. ಮಂಜನಾಯ್ಕ ಆರ್. ಗುಡೇಕೋಟೆ ಪರಿಸರದ ನವಶೋಧಿತ ಪ್ರಾಗೈತಿಹಾಸ ಕಾಲದ ವರ್ಣ ಚಿತ್ರಗಳು, ಇತಿಹಾಸ ದರ್ಪಣ, ಬೆಂಗಳೂರು.

೩. ಸುಂದರ ಅ. ೧೯೯೪, ಕರ್ನಾಟಕ ಪ್ರಾಗೈತಿಹಾಸ ಕಲೆ, ಕರ್ನಾಟಕ ಲಲಿತಕಲ ಅಕಾಡಮಿ, ಬೆಂಗಳೂರು.

೪. ಆರಾಧ್ಯ ಶ್ರೀಶೈಲ, ೧೯೮೩, ಸಂಶೋಧನ ಆದಿಯಲ್ಲಿ, ಚಿತ್ರದುರ್ಗ.

೫. ಇತಿಹಾಸ ದರ್ಶನ, ಸಂ. ೩೩, ೨೦೧೮.

# ಹಲಕುಂದಿ ಪರಿಸರದ ಬಯಲುಬಂಡೆ ಚಿತ್ರಗಳು : ಮುಂದುವರೆದ ಶೋಧನೆ

ಕೆ. ಲಿಂಗಣ್ಣಸ್ವಾಮಿ*

ಅನಾದಿ ಕಾಲದಿಂದಲೂ ಮಾನವನು ಪ್ರಕೃತಿಯೊಂದಿಗೆ ನಿಕಟ ಸಂಪರ್ಕವನ್ನು ಹೊಂದಿದ್ದು, ಅವನ ಜೀವನೋಪಾಯಕ್ಕೆ ಬಳಸಿದ ಕುರುಹುಗಳು ಹೇರಳವಾಗಿದ್ದು, ಇತಿಹಾಸ ಪುನರ್ ರಚನೆಯಲ್ಲಿ ಹೆಚ್ಚು ಬೆಳಕನ್ನು ಚೆಲ್ಲುತ್ತವೆ. ಕುರುಹುಗಳ ಮಹತ್ವವನ್ನು ಅರಿಯಲು ಸಂಶೋಧನೆಗಳು ಅವಶ್ಯ. ಪ್ರಸ್ತುತ ಲೇಖನವು ಈಚೆಗೆ ಹಲಕುಂದಿ ನೆಲೆಯಲ್ಲಿ ಕೈಗೊಂಡ ಅನ್ವೇಷಣೆಯನ್ನು ಕುರಿತದ್ದುದಾಗಿದೆ.

ಹಲಕುಂದಿ ಗ್ರಾಮವು ಬಳ್ಳಾರಿ ಜಿಲ್ಲಾ ಕೇಂದ್ರದಿಂದ ದಕ್ಷಿಣ ದಿಕ್ಕಿಗೆ ೭ ಕಿ.ಮೀ. ಅಂತರದಲ್ಲಿದೆ. ಇದು ಬಳ್ಳಾರಿ–ಬೆಂಗಳೂರಿಗೆ ಹಾದು ಹೋಗುವ ಮುಖ್ಯರಸ್ತೆಯ ಬಲ ಮತ್ತು ಎಡಭಾಗದಲ್ಲಿದ್ದು, ಮೂರು ಗುಡ್ಡಗಳಾದ ಊರುಗುಡ್ಡ, ಕರೆಕಲ್ಲು ಗುಡ್ಡ ಮತ್ತು ಗವಿಬಂಡೆ ಅಂಜಿನೇಯ ಗುಡ್ಡ (ಸಣ್ಣ ಕರೆಕಲ್ಲು ಗುಡ್ಡ) ಗಳಿವೆ. ಇಲ್ಲಿಯ ಪ್ರಾಗೈತಿಹಾಸಿಕ ನೆಲೆಯನ್ನು ರಾಬರ್ಟ್ ಬ್ರೂಸ್‌ಫೂಟ್ ಅವರು ೧೮೭೦ರ ಸುಮಾರಿಗೆ ಮೊದಲಿಗೆ ಪತ್ತೆ ಹಚ್ಚಿದರು. ಈ ನೆಲೆಯಲ್ಲಿನ ಕುಟ್ಟುಚಿತ್ರ ಮತ್ತು ನವ ಶಿಲಾಯುಗದ ಬೂದಿ ದಿಬ್ಬಗಳನ್ನು ಸುಂದರ ೧೯೭೪ರಲ್ಲಿ ಶೋಧಿಸಿದರು. ಪ್ರಸ್ತುತ ಲೇಖಕರ ಮುಂದುವರೆದ ಸಂಶೋಧನೆಯ ಫಲವಾಗಿ ಇನ್ನೂ ಹಲವಾರು ಮಹತ್ವದ ಬಂಡೆಚಿತ್ರಗಳು ಬೆಳಕಿಗೆ ಬಂದಿರುವುದು ಗಮನಾರ್ಹ.

ಬೂದಿದಿಬ್ಬವು ಕರೆಕಲ್ಲು ಗುಡ್ಡದ ಅಂಚಿನಲ್ಲಿದೆ. ಜಾನುವಾರುಗಳ ಸಗಣಿಯನ್ನು ಸುಡುವಿಕೆಯಿಂದ ನಿರ್ಮಾಣವಾದ ಬೃಹದಾಕಾರದ ಬೂದಿದಿಬ್ಬವು ಅಂದಿನ ಪಶುಸಂಗೋಪನೆಯ ಸಂಕೇತವಾಗಿದೆ. ಪ್ರಸ್ತುತ ಇದು ಶಿಥಿಲಾವಸ್ಥೆಯಲ್ಲಿದೆ. ಕರೆಕಲ್ಲು ಗುಡ್ಡದಲ್ಲಿ ಬಂಡೆಚಿತ್ರಗಳು ಕಂಡುಬಂದಿದ್ದು, ಇವು ಪೂರ್ವ–ಪಶ್ಚಿಮವಾಗಿ ಸುಮಾರು ೨ ಕಿ.ಮೀ. ಹಬ್ಬಿವೆ. ದೊಡ್ಡ ದೊಡ್ಡ ಬಂಡೆಗಳ ರಾಶಿಯ ಮಧ್ಯ ಮತ್ತು ಮೇಲಿನ ಹಂತದಲ್ಲಿ ಬಯಲು ಬಂಡೆ ಚಿತ್ರಗಳನ್ನು ಕಾಣಬಹುದು. ಪ್ರಾಗೈತಿಹಾಸಿಕ ಚಿತ್ರಕಲೆಯನ್ನು ಎರಡು ವಿಧಗಳಾಗಿ ವಿಂಗಡಿಸಬಹುದು.

೧. **ವರ್ಣಚಿತ್ರ (Pictograph):** ಸಾಮಾನ್ಯವಾಗಿ ಇದಕ್ಕೆ ಬೇಕಾದ ಪದಾರ್ಥಗಳನ್ನು ನೈಸರ್ಗಿಕವಾಗಿ ದೊರಕುವ ಗಿಡಮೂಲಿಕೆ ಮತ್ತು ಖನಿಜಾಂಶಗಳಿಂದ ತಯಾರಿಸಿಕೊಳ್ಳುತ್ತಿದ್ದರು ಎನ್ನಲಾಗಿದೆ. ಕೆಮ್ಮಣ್ಣಿನಂತಹ ವರ್ಣಚಿತ್ರಗಳು ಪ್ರಮುಖವಾಗಿದ್ದು, ಬಿಳಿ, ಹಳದಿ, ಹಸಿರು ಮತ್ತು ಕಪ್ಪು ಬಣ್ಣದಿಂದ ಬಿಡಿಸಿರುವುದಕ್ಕೆ ಸಾಕಷ್ಟು ಉದಾಹರಣೆಗಳಿವೆ.

೨. **ಪೆಟ್ರೋಗ್ಲಿಪ್ಸ್ (Petroglyphs):** ವರ್ಣಚಿತ್ರಗಳಿಗೆ ಹೊರತಾದ ಚಿತ್ರ, ಆಕೃತಿ. ಇದರಲ್ಲಿ ಮೂರು ಬಗೆಗಳಿವೆ. ೧. ಕುಟ್ಟುಚಿತ್ರಗಳು (Bruising), ೨. ಗೀರು ಚಿತ್ರಗಳು (Engraving), ೩. (Cupule / Cup-Marks)

ಸಾಮಾನ್ಯವಾಗಿ ವರ್ಣ ಮತ್ತು ಬಯಲುಬಂಡೆ ಚಿತ್ರಗಳು ಒಂದೆಡೆ ಕಂಡುಬಂದಿರುವುದು ಬಹಳ ವಿರಳ. ಪಿಕ್ಲಿಹಾಳ್, ಕುರುಗೋಡು, ತೆಕ್ಕಲಕೋಟೆ, ಸಂಗನಕಲ್ಲು, ಕಪ್ಪಗಲ್ಲು ಮತ್ತು ಬ್ರಹ್ಮಗಿರಿ, ಮುಂತಾದ ನೆಲೆಗಳಲ್ಲಿ ಎರಡು ಬಂಡೆ ಚಿತ್ರಗಳನ್ನು ಕಾಣಬಹುದಾಗಿದೆ. ಅದೇ ರೀತಿಯಾಗಿ ಬಯಲುಬಂಡೆಗಳ ಮೇಲೆ ಕುಟ್ಟು ಅಥವಾ ಚೂಪಾದ ಸಾಧನದಿಂದ ಸ್ಪಷ್ಟ ಗೆರೆಗಳನ್ನು ಮೂಡಿಸಿ ಬಿಡಿಸಿದ ಚಿತ್ರಗಳು ಕರ್ನಾಟಕದ ರಾಯಚೂರು ಮತ್ತು ಬಳ್ಳಾರಿ ಪರಿಸರದ ಅನೇಕ ನೆಲೆಗಳಲ್ಲಿ ಅಸಂಖ್ಯಾತವಾಗಿ ದೊರೆಯುತ್ತವೆ. ಉದಾಹರಣೆ ಸಂಗನಕಲ್ಲು, ಬಿ. ಬೆಳಗಲ್ಲು, ಕರಡಕಲ್ಲು (ಭಿಲ್ಲಮರಾಯನ ಗುಡ್ಡ), ಬ್ರಹ್ಮಗಿರಿ, ತಾವರಗೇರ, ಕಲ್ಲೂರು, ನೀರುಮಾನ್ವಿ, ಅಪ್ಪಯ್ಯನಹಳ್ಳಿ, ಸಂಜೀವರಾಯನ ಕೋಟೆ, ಮಿಂಚೇರಿ ಮತ್ತು ನೇಮಕಲ್ಲು (ಲೇಖಕರು ಕೊನೆಯ ಮೂರು ನೆಲೆಗಳನ್ನು ಹೊಸದಾಗಿ ಶೋಧಿಸಿದ್ದಾರೆ) ಇನ್ನು ಮುಂತಾದವು.

* ಸಂಗನಕಲ್ಲು, ಬಳ್ಳಾರಿ, ಮೊ. ೯೪೮೨೦೦೬೬೭೯

ಹಲಕುಂದಿ ನೆಲೆಯ ಬಯಲುಬಂಡೆ ಚಿತ್ರಗಳು ಐತಿಹಾಸಿಕ ದೃಷ್ಟಿಯಿಂದ ಹೆಚ್ಚಿನ ಮಹತ್ವವನ್ನು ಹೊಂದಿವೆ. ಈ ನೆಲೆಯಲ್ಲಿ ಹೆಚ್ಚಾಗಿ ಕುಟ್ಟುಚಿತ್ರಗಳಿವೆ. ಇಲ್ಲಿನ ಚಿತ್ರಗಳಲ್ಲಿ ಜಿಂಕೆಗಳ ಚಿತ್ರಗಳು ಅಸಂಖ್ಯಾತವಾಗಿವೆ. ಸಾಮಾನ್ಯವಾಗಿ ಬಯಲುಬಂಡೆ ಚಿತ್ರಗಳಲ್ಲಿ ಗೂಳಿಗಳ ಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಆದರೆ ಈ ನೆಲೆಯಲ್ಲಿ ಜಿಂಕೆಯ ಕುಟ್ಟುಚಿತ್ರಗಳು ಕಂಡುಬಂದಿರುವುದು ವಿಶೇಷ. ಇದರ ಜೊತೆಗೆ ಕಾಡುಕೋಣ, ಮನುಷ್ಯ, ಪಕ್ಷಿಗಳು, ಬೇಟೆಯಾಡುತ್ತಿರುವ ಚಿತ್ರಗಳು, ಜ್ಯಾಮಿತಿ ಚಿತ್ರಗಳು, ಆನೆ, ಕುದುರೆ, ಮುಸ್ಲಮಾನ್ ಪಂಥದ ಪಂಜ, ಹನುಮಾನ್ ಮೊದಲಾದ ಚಿತ್ರಗಳಿವೆ. ಈ ನೆಲೆಯಲ್ಲಿ ನವಶಿಲಾಯುಗದಿಂದ ಹಿಡಿದು ಈಚಿನ ಕಾಲಘಟ್ಟದವರೆಗಿನ ಚಿತ್ರಗಳು ಕಂಡುಬಂದಿರುವುದು ಗಮನಾರ್ಹ.

ಈ ನೆಲೆಯಲ್ಲಿ ಕಲ್ಗುಳಿಗಳು ಸಹ ಅಸಂಖ್ಯಾತವಾಗಿ ಕಂಡುಬರುತ್ತವೆ. ಇವುಗಳನ್ನು ಸ್ಥಳೀಯರು ಗಂಟೆಕಲ್ಲು ಎಂದು ಕರೆಯುತ್ತಾರೆ. ಇವುಗಳನ್ನು ಕಲ್ಲಿನಿಂದ ಕುಟ್ಟಿದರೆ ಗಂಟೆಯಂತಹ ಶಬ್ದ ಬರುತ್ತದೆ. ಆದ್ದರಿಂದ ಸ್ಥಳೀಯವಾಗಿ ಇದೇ ಹೆಸರಿನಿಂದ ನಾಮಾಂಕಿತವಾಗಿದೆ.

**೧. ಜಿಂಕೆಯ ಚಿತ್ರ:** ಚುಕ್ಕೆಗಳಿಂದ ಕೂಡಿದ ಕೃಷ್ಣಮೃಗವಾಗಿದ್ದು, ಕೋಡುಗಳು ತುಂಬಾ ದೊಡ್ಡದಾಗಿದ್ದು, ಇಂಗ್ಲೀಷ್ ಮೂಲಾಕ್ಷರದ 'V' ಆಕಾರದಲ್ಲಿ ಇವೆ. ಜಿಂಕೆಯ ಬಾಲದ ಮೇಲ್ಭಾಗದಲ್ಲಿ ಮನುಷ್ಯ ಚಿತ್ರವಿದೆ. ಜಿಂಕೆಯ ಚಿತ್ರವು ಪೂರ್ವಾಭಿಮುಖವಾಗಿದೆ.

**೨. ಜಿಂಕೆಗಳ ಸಮೂಹ ಚಿತ್ರ:** ಜಿಂಕೆಗಳ ಒಂದು ಸಮೂಹವಿದೆ. ಒಟ್ಟು ಆರು ಜಿಂಕೆಗಳನ್ನು ಚಿತ್ರಿಸಲಾಗಿದ್ದು, ಅವೆಲ್ಲವುಗಳು ಎದುರು-ಬದುರು ನಿಂತ ಜೋಡಿ ಜಿಂಕೆಗಳಾಗಿವೆ. ಈ ಚಿತ್ರಗಳಲ್ಲಿರುವ ವೈಶಿಷ್ಟ್ಯ ಬೆನ್ನಿನ ಮೇಲೆ ಒಂದು ಪ್ರತ್ಯೇಕ ರೇಖೆಯಿದ್ದು, ಅದೇ ರೇಖೆಯೇ ಬಾಲವಾಗಿ ಕೊನೆಗೊಳ್ಳುವುದು ಈ ಚಿತ್ರವು ದಕ್ಷಿಣಾಮುಖವಾಗಿದೆ. ನೈಸರ್ಗಿಕವಾಗಿ ದಕ್ಷಿಣ ಭಾಗದಲ್ಲಿ ಬಹುದೊಡ್ಡ ಬಯಲು ಪ್ರದೇಶವಿದ್ದು, ಪೂರ್ವದಲ್ಲಿ ಜಿಂಕೆಗಳ ವಾಸಸ್ಥಾನವಿದ್ದಂತೆ ತೋರುತ್ತದೆ.

**೩. ಜಿಂಕೆಯನ್ನು ಬೇಟೆಯ ನಂತರ ಹೊತ್ತು ಕೊಂಡೊಯ್ಯುವ ಚಿತ್ರ:** ಜಿಂಕೆಯನ್ನು ಬೇಟೆಯ ನಂತರ ಹೊತ್ತು ಕೊಂಡೊಯ್ಯುವ ಚಿತ್ರ ಕುತೂಹಲಕಾರಿಯಾಗಿದೆ. ಈ ಮಾದರಿಯ ಚಿತ್ರಗಳು ಸಾಮಾನ್ಯವಾಗಿ ಕುಟ್ಟು ಮತ್ತು ಗೀರು ಚಿತ್ರಗಳಲ್ಲಿ ಕಂಡು ಬಂದಿರುವುದು ಬಹಳ ವಿರಳವಾಗಿದೆ. ಇಬ್ಬರು ಮನುಷ್ಯರು ತಮ್ಮ ಹೆಗಲ ಮೇಲೆ ಒಂದು ಉದ್ದವಾದ ಕೋಲಿಗೆ ಬೇಟೆಯಾಡಿದ ಜಿಂಕೆಯನ್ನು ತಲೆ ಕೆಳಗಾಗಿ ಕಟ್ಟಿ ಹೊತ್ತು ಕೊಂಡೊಯ್ಯುವ ಚಿತ್ರ ಗಮನ ಸೆಳೆಯುತ್ತದೆ. ಚಿತ್ರದ ಅನುಕರಣೆ ಇಂದಿಗೂ ಗ್ರಾಮೀಣ ಭಾಗದಲ್ಲಿ ಗ್ರಾಮದೇವತೆ ಆರಾಧನೆ ಮತ್ತು ಕುಲದೇವತೆ ಆರಾಧನೆಯಲ್ಲಿ ಇಂತಹ ಸನ್ನಿವೇಶಗಳು ಕಂಡುಬರುತ್ತವೆ.

**೪. ಜನ ಸಮೂಹ ಹಾಗೂ ಹಸುಗಳ ಸಮೂಹ ಚಿತ್ರ:** ಜನಸಮೂಹ ಹಾಗೂ ಹಸುಗಳ ಸಮೂಹ ಚಿತ್ರಗಳು ಬಯಲುಬಂಡೆ ಚಿತ್ರಗಳಲ್ಲಿ ಬಹಳ ವಿರಳವಾಗಿ ಕಂಡುಬಾರದಿದ್ದರು, ಇದರ ವಿರುದ್ಧವಾಗಿವೆ ಎಂಬಂತೆ ಹಲಕುಂದಿ ನೆಲೆಯಲ್ಲಿ ಜನ ಸಮೂಹ ಹಾಗೂ ಪ್ರಾಣಿಗಳ ಸಮೂಹ ಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಈ ಚಿತ್ರದ ಎರಡು ಸಾಲಿನಲ್ಲಿ ಜನರು, ಮೂರು ಸಾಲಿನಲ್ಲಿ ಹಸುಗಳು ಸಮೂಹ, ಒಂದನೆಯ ಸಾಲಿನಲ್ಲಿ ಹನ್ನೊಂದು ಜನರು ಒಬ್ಬರ ಪಕ್ಕದಲ್ಲಿ ಒಬ್ಬರು ಕೈ ಕೈ ಹಿಡಿದುಕೊಂಡು ನಿಂತಿರುವಂತೆ ಚಿತ್ರಿಸಿದ್ದಾರೆ. ಈ ಸಾಲಿನ ಮೇಲೆ ಭಾಗದಲ್ಲಿ ಈಟಿ ಆಯುಧವನ್ನು ಮೂರನೇ ವ್ಯಕ್ತಿ ಮೇಲಕ್ಕೆ ಎತ್ತಿದ್ದಾನೆ. ಎರಡನೆಯ ಸಾಲಿನಲ್ಲಿ ಸಹ ಹನ್ನೊಂದು ಜನರು ಒಬ್ಬರ ಪಕ್ಕದಲ್ಲಿ ಒಬ್ಬರು ಕೈ ಕೈ ಹಿಡಿದುಕೊಂಡು ಮಧ್ಯ ಇಬ್ಬರು ವ್ಯಕ್ತಿಗಳು ಒಬ್ಬರ ಕೈಯನ್ನು ಮತ್ತೊಬ್ಬ ವ್ಯಕ್ತಿ ಹೆಗಲ ಮೇಲೆ ಪರಸ್ಪರ ಒಂದಾಗುವಂತೆ ಚಿತ್ರದಲ್ಲಿ ತೋರಿಸಿದ್ದಾರೆ. ಮೂರು ಮತ್ತು ನಾಲ್ಕನೆಯ ಸಾಲಿನಲ್ಲಿ ಹಸು ಅಥವಾ ಗೂಳಿಗಳ ಸಮೂಹಗಳಿವೆ. ಮೂರನೆಯ ಸಾಲಿನಲ್ಲಿ ಐದು ಗೂಳಿಗಳು ಪೂರ್ವಾಭಿಮುಖವಾಗಿ ಒಂದರ ಪಕ್ಕದಲ್ಲಿ ಒಂದು ಇವೆ. ಅದೇ ರೀತಿಯಾಗಿ ನಾಲ್ಕನೆಯ ಸಾಲಿನಲ್ಲೂ ಸಹ ಗೂಳಿಗಳು ಮೇಲಿನ ರೀತಿ ಅನುಕ್ರಮವಾಗಿವೆ. ಇವುಗಳ ಪಕ್ಕದಲ್ಲಿ ಇಬ್ಬರು ವ್ಯಕ್ತಿಗಳು ಸಹ ಇದ್ದಾರೆ. ಇವುಗಳ ಮುಂದೆ ಹಿಂದೆ ನಿಂತಿರುವಂತೆ ಚಿತ್ರದಲ್ಲಿ ತೋರಿಸಿದ್ದಾರೆ. ಈ ಚಿತ್ರದಲ್ಲಿ ಎರಡು ಗುಂಪುಗಳು ಪರಸ್ಪರ ಒಂದಾಗುವಂತೆ ತೋರಿಸಿದ್ದಾರೆ. ಇಂದಿಗೂ ಹಬ್ಬ ಹರಿ ದಿನಗಳಲ್ಲಿ ಸಾಲು ಕುಣಿತವನ್ನು ಕಾಣಬಹುದು.

ಪ್ರಾಗೈತಿಹಾಸಿಕ ಕಾಲದಲ್ಲಿ ಮಾನವರು ತಮ್ಮ ಕಲ್ಪನೆ ಮತ್ತು ಮನೋಭಾವನೆಗಳನ್ನು ವ್ಯಕ್ತಪಡಿಸಲು ಅಂದಿನ ಕಾಲದ ಸಾಮಾಜಿಕ ಮಾಧ್ಯಮವಾಗಿ ಹುಟ್ಟಿ ಬಂದ ಕಲೆ ಈ ಚಿತ್ರಕಲೆಗೆ ಮೂಲ. ಬಯಲು ಬಂಡೆ ಮತ್ತು ಗವಿವರ್ಣ ಚಿತ್ರಗಳ ರಚನಾ ಉದ್ದೇಶ ಚಿತ್ರಗಳು ಆಕಾರ ಪಡೆಯಲು ಸೌಂದರ್ಯ ಪ್ರಕಟಣೆಗಾಗಿ, ಸ್ವಪ್ರಯೋಜನಕ್ಕಾಗಿ ಮಾಡಿದ ತಾಂತ್ರಿಕ ಹಿನ್ನೆಲೆಗಳೇ ಪ್ರಮುಖ ಕಾರಣಗಳೆನಿಸಿವೆ. ಒಟ್ಟಿನಲ್ಲಿ ಇವು ಸಮುದಾಯದ ಅನುಭವ, ನಂಬಿಕೆಗಳನ್ನು ಸಂಕೇತಗಳ



ಜಿಂಕೆಗಳ ಸಮೂಹ ಚಿತ್ರ



ಜಿಂಕೆಯ ಚಿತ್ರ

ಮೂಲಕ ಹಂಚಿಕೊಳ್ಳುವ ಕಲಾಕೃತಿಗಳಾಗಿರುತ್ತವೆ. ಆದಿಮಾನವ, ಶೈಲಿಯ ಪ್ರಭಾವವಿದ್ದರೂ ಅಲ್ಲಿ ಭಾವನೆಗಳ ಸಂಕೇತ ವಿಜೃಂಭಿಸಿದೆ. ಹೀಗಾಗಿ ಇವು ಚಿತ್ರಕಲಾವಿದರ ಸೃಜನ ಶೀಲತೆಯ ಬೆಳವಣಿಗೆಯ ಮೊದಲ ಹೆಜ್ಜೆಗಳಾಗಿವೆಯೆಂದರೆ ತಪ್ಪಲ್ಲ.

ಅಂದಿನ ಮಾನವನು ಈ ವಿಧಾನವನ್ನು ಅನುಸರಿಸಿದನು. ಇದರಿಂದ ಅವನ ಜೀವನಕ್ರಮ. ಧಾರ್ಮಿಕ ವಿಧಿ–ವಿಧಾನ, ಸಂಪ್ರದಾಯ, ಬೇಟೆಗಾರಿಕೆ ಮತ್ತು ನೈಪುಣ್ಯತೆ, ಮನೋರಂಜನೆ ಹೀಗೆ ಹಲವಾರು ವಿಷಯಗಳ ಮೇಲೆ ಬೆಳಕನ್ನು ಚೆಲ್ಲುತ್ತದೆ. ಈ ನೆಲೆಯಲ್ಲಿ ಕೆಲವು ಅಪರೂಪದ ಚಿತ್ರಗಳು ಕಂಡುಬಂದಿರುವುದು ವಿಶೇಷ. ಸಾಮಾನ್ಯವಾಗಿ ವರ್ಣಚಿತ್ರಗಳಲ್ಲಿ ಮಾತ್ರ ಸಾಮೂಹಿಕ ಚಿತ್ರಗಳು ಕಂಡುಬರುತ್ತವೆ. ಆದರೆ ಇದಕ್ಕೆ ವಿರುದ್ಧವಾಗಿ ಈ ಹಿಂದೆ ತಿಳಿಸಿದ ಮೂರು ಗುಡ್ಡಗಳಲ್ಲಿ ಸಾಮೂಹಿಕ ಚಿತ್ರಗಳು ಕುಟ್ಟಿದ ಮತ್ತು ಗೀರು ಚಿತ್ರಗಳನ್ನು ನೋಡಬಹುದಾಗಿದೆ.



ಜಿಂಕೆಯನ್ನು ಬೇಟೆಯ ನಂತರ ಹೊತ್ತು ಕೊಂಡೊಯ್ಯುವ ಚಿತ್ರ



ಹಲಕುಂದಿಯ ಕರೆಕಲ್ಲು ಗುಡ್ಡ



ಜನಸಮೂಹ ಹಾಗೂ ಹಸುಗಳ ಸಮೂಹ ಚಿತ್ರ

ಅದೇ ರೀತಿಯಾಗಿ ಹಲಕುಂದಿಯ ಪರಿಸರದ ಸುತ್ತಮುತ್ತಲಿನ ಪ್ರಾಗೈತಿಹಾಸಿಕ ನೆಲೆಗಳಾದ ಬಿ. ಬೆಳಗಲ್ಲು, ಮಿಂಚೇರಿ, ಸಂಜೀವರಾಯನಕೋಟೆ ಮತ್ತು ನೇಮಕಲ್ಲುಗಳಲ್ಲಿ ಆದಿಮಾನವನ ಜೀವನೋಪಾಯಕ್ಕೆ ಬಳಸಿದ ಕುರುಹುಗಳು ಹೇರಳವಾಗಿದ್ದು, ಇನ್ನೂ ಇವುಗಳ ಬಗ್ಗೆ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ. ಆದಿಮಾನವನ ನೆಲೆಗಳು ಸಾಮಾನ್ಯವಾಗಿ ಎಲ್ಲಾ ಭಾಗಗಳಲ್ಲಿ ಕಂಡುಬರುವುದಿಲ್ಲ. ನಮಗೆ ಲಭ್ಯವಾದ ನೆಲೆಗಳನ್ನು ಸಂರಕ್ಷಿಸಿ ಮುಂದಿನ ಪೀಳಿಗೆಗೆ ಇತಿಹಾಸದ ಕುರುಹುಗಳನ್ನು ಕಾಪಾಡುವುದೇ ನಮ್ಮೆಲ್ಲರ ಮುಖ್ಯ ಕರ್ತವ್ಯವಾಗಿದೆ.

[ಈ ಪ್ರಬಂಧವನ್ನು ರಚನೆ ಮಾಡುವಲ್ಲಿ ಸಲಹೆ ಹಾಗೂ ಮಾರ್ಗದರ್ಶನ ನೀಡಿರುವ ನನ್ನ ಗುರುಗಳು ಹಾಗೂ ಸಂಶೋಧನಾ ಮಾರ್ಗದರ್ಶಕರಾಗಿರುವ ಡಾ. ಆರ್. ಮೋಹನರವರಿಗೆ ನಾನು ಅಭಾರಿಯಾಗಿದ್ದೇನೆ.]



## ಆಕರ ಗ್ರಂಥಗಳು


೧. ಕೋಲ್ಕಾರ, ಶರಣಬಸಪ್ಪ ೨೦೦೨, ಕೊಪ್ಪಳ-ಹಂಪಿ ಪ್ರದೇಶದ ಪ್ರಾಗೈತಿಹಾಸ ಕಾಲದ ಕಲೆ. ಪಿಎಚ್.ಡಿ. ಮಹಾ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಕೋಲ್ಕಾರ, ಶರಣಬಸಪ್ಪ ೨೦೦೪, ಪ್ರಾಕ್ಚಾರಿತ್ರಿಕ ಚಿತ್ರಕಲೆ, ಕುರುಗೋಡು (ಸಮ್ಮೇಳನ ಪ್ರತಿ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಕೋಲ್ಕಾರ, ಶರಣಬಸಪ್ಪ ೨೦೧೦, ಶಿಲಾಯುಗದ ಗವಿಚಿತ್ರಗಳು, ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು, ಗುಲ್ಬರ್ಗಾ.

೪. ಮೋಹನ ಆರ್. ೨೦೧೫, ಹಂಸನೂರು : ಪ್ರಾಗೈತಿಹಾಸಿಕ ವರ್ಣಚಿತ್ರಕಲೆ ನೆಲೆಯ ಅನ್ವೇಷಣೆ, ಇತಿಹಾಸ ದರ್ಪಣ ಸಂ. ೨೪ (ಜನವರಿ-ಮಾರ್ಚ್): ೧೧-೧೬.

೫. ಮೋಹನ್.ಆರ್., ೨೦೧೭, ಗವಿ/ಕಲ್ಲಾಸರೆಯಲ್ಲಿ ಪ್ರಾಚೀನ ಕರ್ನಾಟಕ ಸಂಸ್ಕೃತಿ, ಇತಿಹಾಸ ದರ್ಪಣ ೩೧-೩೨ (ಅಕ್ಟೋಬರ್ ೨೦೧೬-ಮಾರ್ಚ್ ೨೦೧೭): ೨೫-೪೦.

೬ ಸುಂದರ ಅ., ೧೯೭೪, ಕರ್ನಾಟಕ ಪ್ರಾತೈತಿಹಾಸ ಕಾಲದ ಕಲೆ, ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು.

೭. ಸುಂದರ ಅ., ೧೯೭೪, ಕರ್ನಾಕಟದಲ್ಲಿಯ ಪ್ರಾಗೈತಿಹಾಸಿಕ ವರ್ಣಚಿತ್ರಗಳು, ಸವಿಚಂಚಯ (ಶ್ರೀ ಸದಾಶಿವ ಒಡೆಯರ ೫೦ನೇ ಹುಟ್ಟುಹಬ್ಬ ಉತ್ಸವ ಸಮಿತಿ, ಚೌಡಯ್ಯದಾನಪುರ), ಮನೋಹರ ಪ್ರಿಂಟಿಂಗ್ ಪ್ರೆಸ್, ದಾನಾಪುರ.

೮. ಸುಂದರ ಅ., ೧೯೭೫, ಇತ್ತೀಚಿನ ಕೆಲವು ಮುಖ್ಯ ಪುರಾತತ್ವ ಶೋಧನೆಗಳು, ಕರ್ನಾಟಕ ಭಾರತಿ ೮ (೨): ೧೦-೨೨.

೯. ಸುಂದರ ಅ., ೧೯೭೭, ಇತ್ತೀಚಿನ ಕೆಲವು ಮುಖ್ಯ ಪುರಾತತ್ವ ಶೋಧನೆಗಳು, ಕರ್ನಾಟಕ ಭಾರತಿ ೯ (೪): ೪೯-೯೫.

೧೦. ಸುಂದರ ಅ., ೧೯೮೧. ಉತ್ತರ ಕರ್ನಾಟಕದಲ್ಲಿ ಬಂಡೆಗಲ್ಲಿನ ವರ್ಣಚಿತ್ರಗಳು, ಬೆಳ್ಗೂಲ (ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೧. ಸುಂದರ ಅ., ೧೯೮೭, ಪ್ರಾಗೈತಿಹಾಸಿಕ ಗವಿವರ್ಣ ಮತ್ತು ಬಯಲು ಬಂಡೆ ಚಿತ್ರಗಳು, ಕರ್ನಾಟಕ, ಹರತಿಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೧೨. ಸುಂದರ ಅ., ೧೯೯೧, ಜಟಂಗ ರಾಮೇಶ್ವರದಲ್ಲಿಯ ಪ್ರಾಗೈತಿಹಾಸಿಕ ಪುರಾತತ್ವ ಅವಶೇಷಗಳು ಮತ್ತು ಐತಿಹ್ಯ : ಒಂದು ವಿವೇಚನೆ, ಇತಿಹಾಸ ದರ್ಶನ ೬: ೧-೬.

೧೩. ಡಾ. ಎಲ್. ಶ್ರೀನಿವಾಸ್ : ಹಂಪಿ ಪರಿಸರದ ಆದಿಮಾನವನ ನೆಲೆಗಳು.

೯

# ಜರಿಮಲೆ ಬೆಟ್ಟದ ತಪ್ಪಲಿನಲ್ಲಿರುವ ಬೃಹತ್ ಶಿಲಾಯುಗದ ಸಮಾಧಿಗಳ ಶೋಧ

**ಹೆಚ್.ಎಂ. ತಿಪ್ಪೇಶ***

**ಕೂ**ಡ್ಲಿಗಿ ತಾಲೂಕು ಕೇಂದ್ರದಿಂದ ೧೪ ಕಿ. ಮೀ ದೂರದಲ್ಲಿರುವ ಜರಿಮಲೆ ಪರಿಸರದಲ್ಲಿ ಇತ್ತೀಚೆಗೆ ಕೈಗೊಂಡ ಕ್ಷೇತ್ರಕಾರ್ಯದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಹಲವು ಶಿಲಾಸಮಾಧಿಗಳು ಹಾಗೂ ಆದಿ ಇತಿಹಾಸಕಾಲದ ವರ್ಣಚಿತ್ರಗಳನ್ನು ಶೋಧಿಸಲಾಗಿದೆ. ಜರಿಮಲೆಯು ಗಿರಿದುರ್ಗವಾಗಿದ್ದು, ಸುತ್ತಲೂ ಬೆಟ್ಟಗಳಿಂದ ನೈಸರ್ಗಿಕ ಗುಹೆಗಳಿಂದ ಆವೃತವಾಗಿದೆ. ಇಲ್ಲಿನ ಬೆಟ್ಟವು ಸಮುದ್ರಮಟ್ಟದಿಂದ ಸು. ೨೭೫೦ ಅಡಿ ಎತ್ತರದಲ್ಲಿಯೂ ಹಾಗೂ ಸುತ್ತಲಿನ ಪ್ರದೇಶವು ೮೦೦ ಅಡಿ ಎತ್ತರದಿಂದ ಕೂಡಿದೆ. ಈಗಾಗಲೇ ನಡೆದಿರುವ ಸಂಶೋಧನೆಗಳಲ್ಲಿ ಜರಿಮಲೆಯಲ್ಲಿ ನವಶಿಲಾಯುಗದ ಕಾಲದ ಉಪಕರಣಗಳನ್ನು ಶೋಧಿಸಲಾಗಿದೆ.[೧] ಆದರೂ ಇಲ್ಲಿನ ಬೆಟ್ಟದ ತಪ್ಪಲಿನಲ್ಲಿರುವ ವಿವಿಧ ಬೃಹತ್ ಶಿಲಾಸಮಾಧಿಗಳು, ಕಪ್ಪು ಕೆಂಪು ವರ್ಣದ ಮಡಿಕೆ ಭಾಗಗಳು ಹಾಗೂ ಬಿಳಿ ವರ್ಣದ ಚಿತ್ರಗಳನ್ನು ಕುರಿತಾಗಿ ಇದುವರೆಗೂ ಅಧ್ಯಯನ ನಡೆದಿರುವುದಿಲ್ಲ ಆದ್ದರಿಂದ ಪ್ರಸ್ತುತ ಪ್ರಬಂಧದಲ್ಲಿ ಜರಿಮಲೆ ಬೆಟ್ಟದ ತಪ್ಪಲಿನಲ್ಲಿರುವ ಬೃಹತ್ ಶಿಲಾಯುಗದ ಸಮಾಧಿಗಳ ವಿನ್ಯಾಸ, ವೈಶಿಷ್ಟತೆ ಹಾಗೂ ಅವುಗಳ ಕಾಲಮಾನ ಕುರಿತು ಚರ್ಚಿಸುವ ಉದ್ದೇಶವನ್ನು ಒಳಗೊಂಡಿದೆ.

ಜರಿಮಲೆ ಬೆಟ್ಟದ ಇಳಿಜಾರಿನಲ್ಲಿ ಹಾಗೂ ಬೆಟ್ಟದತಪ್ಪಲಿನ ಬಿದರಂಬಯಲು ಎಂದು ಕರೆಯುವ ಸ್ಥಳದಲ್ಲಿ ಕೆಲವು ಪ್ರಕಾರದ ಸಮಾಧಿಗಳು ಕಂಡುಬಂದಿವೆ. ಅವುಗಳಲ್ಲಿ ಕಲ್ಮನೆ ಸಮಾಧಿಗಳು (Dolmens),[೨] ನೆಲಕೋಣೆ ಸಮಾಧಿಗಳು (Cists),[೩] ಕಂಡಿಕೋಣೆ ಸಮಾಧಿಗಳು (Port-holed cists),[೪] ಹಾಗೂ ಕಲ್ಗುಪ್ಪೆ (Cairns),[೫] ಸಮಾಧಿಗಳೆಂಬ ನಾಲ್ಕು ಪ್ರಕಾರದ ಶಿಲಾ ಸಮಾಧಿಗಳು ಶೋಧವಾಗಿವೆ.

**೧. ಕಲ್ಮನೆ ಸಮಾಧಿಗಳು (Dolmens):** ಜರಿಮಲೆ ದುರ್ಗಮ್ಮ ಬೆಟ್ಟದ ದಕ್ಷಿಣದ ಇಳಿಜಾರಿನಲ್ಲಿ ಇಪ್ಪತ್ತಕ್ಕೂ ಹೆಚ್ಚು ಕಲ್ಮನೆ ಸಮಾಧಿಗಳು ಕಂಡುಬಂದಿದ್ದು, ಅವುಗಳಲ್ಲಿ ಕೆಲವು ಮಾತ್ರ ಸುಸ್ಥಿಯಲ್ಲಿವೆ. ಇನ್ನೂ ಕೆಲವು ಸಂಪೂರ್ಣವಾಗಿ ನೆಲಕ್ಕೆ ಬಿದ್ದು ಹಾಳಾಗಿವೆ. ಈ ಸಮಾಧಿಗಳನ್ನು ಸ್ಥಳೀಯವಾಗಿ ದೊರಕುವ ಗ್ರಾನೈಟ್ ಶಿಲೆಗಳಿಂದ ನಿರ್ಮಿಸಲಾಗಿದೆ. ಇವುಗಳನ್ನು ಸ್ಥಳೀಯರು ಮೋರೆಯರ ಮನೆಗಳೆಂದು ಕರೆಯುವರು.

**೨. ನೆಲಕೋಣೆ ಸಮಾಧಿಗಳು (Cists):** ಜರಿಮಲೆಯ ಬೆಟ್ಟದ ತಪ್ಪಲಿನಲ್ಲಿ ಸ್ಥಳೀಯವಾಗಿ 'ಬಿದರಂಬಯಲು' ಎಂದು ಕರೆಯುವ ಸ್ಥಳದಲ್ಲಿ ನೂರಕ್ಕೂ ಹೆಚ್ಚು ಬೃಹತ್ ಶಿಲಾಯುಗದ ಸಮಾಧಿಗಳು ಹಾಗೂ ಕಪ್ಪು ಕೆಂಪು ವರ್ಣದ ಮಡಿಕೆಗಳನ್ನು ಶೋಧಿಸಲಾಯಿತು. ಈ ಸಮಾಧಿಗಳನ್ನು ಸಹ ಸ್ಥಳೀಯರು ಮೋರೆಯರ ಮನೆಗಳು ಎಂದು ಕರೆಯುತ್ತಾರೆ. ಇಂಥ ಶಿಲಾಸಮಾಧಿಗಳು ತಾಲೂಕಿನ ವಿವಿಧ ನೆಲೆಗಳಾದ ಹಾಲಸಾಗರ, ಗುಡೇಕೋಟೆ, ಮಡಕಲಕಟ್ಟೆ, ಹುರುಳಿಹಾಳು, ಮಾಳೆಹಳ್ಳಿ, ಮಹದೇವಪುರ, ಕುಮತಿ, ಹುಲಿಕುಂಟೆ ನೆಲೆಗಳಲ್ಲಿ ಶೋಧನೆಗೊಂಡಿರುವುದು ಗಮನಾರ್ಹ.[೬] ಜರಿಮಲೆಯ ಬೆಟ್ಟದ ತಪ್ಪಲಿನಲ್ಲಿರುವ ಶಿಲಾಸಮಾಧಿಗಳು ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿ ನಿರ್ಮಿಸಲಾಗಿವೆ. ಕೆಲವು ಸಮಾಧಿಗಳು ಆಯತಾಕಾರದಲ್ಲಿ ಇನ್ನೂ ಕೆಲವು ಸ್ವಸ್ತಿಕ್ ಆಕಾರದಲ್ಲಿವೆ. ಈ ಸಮಾಧಿಗಳ ಅಳತೆ ೫.೧/೨ ಅಡಿ ಉದ್ದ, ೩.೧/೨ ಅಡಿ ಅಗಲ ವಿಸ್ತೀರ್ಣ ಹೊಂದಿವೆ.

**೩. ಕಂಡಿಕೋಣೆ ಸಮಾಧಿಗಳು (Port-holed cists):** ಜರಿಮಲೆಯ ಬೆಟ್ಟದ ತಪ್ಪಲಿನಲ್ಲಿ ಕೆಲವು ಕಂಡಿಕೋಣೆ ಶಿಲಾಸಮಾಧಿಗಳು ಸಹ ಕಂಡುಬಂದಿದ್ದು, ಅವುಗಳನ್ನು ಸಹ ಸ್ಥಳೀಯವಾಗಿ ದೊರಕುವ ಗ್ರಾನೈಟ್ ಶಿಲೆಗಳಿಂದ ನಿರ್ಮಿಸಲಾಗಿದೆ. ಈ ಶಿಲಾಸಮಾಧಿಗಳನ್ನು ನಾಲ್ಕು ಕಲ್ಲುಚಪ್ಪಡಿಗಳಿಂದ ಪರಸ್ಪರ ಜೋಡಿಸಲಾಗಿದ್ದು, ಮೇಲ್ಭಾಗದಲ್ಲಿ ಮತ್ತೊಂದು ಚಪ್ಪಡಿಕಲ್ಲಿನಿಂದ

* ಪಿಎಚ್.ಡಿ ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿವಿ, ಹಂಪಿ, ಮೊ. ೯೪೮೩೧೩೯೫೪೬



ಜರಿಮಲೆ ಬೆಟ್ಟ ಪರಿಸರ



ಜರಿಮಲೆ ಬೆಟ್ಟದ ಮೇಲಿರುವ ನೀರಿನ ದೋಣಿ



ಜರಿಮಲೆ ಬೆಟ್ಟದ ತಪ್ಪಲಿನ (ಬಿದಿರಂಬಯಲಿನ) ಕಂಡಿಕೋಣೆ ಸಮಾಧಿಯ ಅವಶೇಷ



ಜರಿಮಲೆ ಬೆಟ್ಟದ ತಪ್ಪಲಿನ (ಬಿದಿರಂಬಯಲಿನ) ನೆಲಕೋಣೆ ಸಮಾಧಿ

ಜೋಡಿಸಲಾಗಿದೆ. ಬಹುತೇಕ ಕಡೆ ಪೂರ್ವ ದಿಕ್ಕಿಗೆ ಜೋಡಿಸಿರುವ ಚಪ್ಪಡಿಕಲ್ಲಿನ ಮಧ್ಯದಲ್ಲಿ ರಂಧ್ರವನ್ನು ಬಿಡಲಾಗಿರುತ್ತದೆ. ಆದರೆ ಜರಿಮಲೆಯ ಬೆಟ್ಟದ ತಪ್ಪಲಿನ ಕಂಡಿಕೋಣೆ ಸಮಾಧಿಗೆ ಉತ್ತರದಿಕ್ಕಿಗೆ ಹೊಂದಿಸಿರುವ ಕಲ್ಲುಚಪ್ಪಡಿಗೆ ಕಂಡಿ ಇರುವುದು ವಿಶೇಷ. ಈ ಸಮಾಧಿಗಳ ರಚನೆಗೆ ಬೆಟ್ಟದಲ್ಲಿ ದೊರಕುವ ಗ್ರಾನೈಟ್ ಶಿಲೆಗಳನ್ನು ಗಟ್ಟಿಯಾದ ಕಬ್ಬಿಣದ ಆಯುಧಗಳಿಂದ ಸೀಳಿ, ಮರದ ಕೊರಡುಗಳ ಸಹಾಯದಿಂದ ಸಾಗಿಸಿಕೊಂಡು ಬಂದು ಸಮಾಧಿಗಳ ರಚನೆ ಮಾಡಲಾಗಿದೆ. ಇದು ಬೃಹತ್ ಶಿಲಾಯುಗದ ಜನರ ತಾಂತ್ರಿಕತೆಯನ್ನು ಸೂಚಿಸುತ್ತದೆ.

**೪. ಕಲ್ಲುಗುಪ್ಪೆ ಸಮಾಧಿಗಳು (Cairns):** ಜರಿಮಲೆ ಬೆಟ್ಟದ ಮೇಲಿನ 'ವಡಕಟ್ಟೆಸರ'ದಲ್ಲಿ (ವಡಕಟ್ಟೆ ಹಳ್ಳದ ದಂಡೆಯಲ್ಲಿ) ಸುಮಾರು ಮೂವತ್ತಕ್ಕೂ ಹೆಚ್ಚು ಕಲ್ಲುಗುಪ್ಪೆ ಸಮಾಧಿಗಳನ್ನು ಶೋಧಿಸಲಾಗಿದೆ. ಸಮಾಧಿಯ ಮೇಲೆ ಗುರುತಿಗಾಗಿ ಒತ್ತಾಗಿ ಗುಪ್ಪೆ ಹಾಕಿದ ಸಣ್ಣಕಲ್ಲುಗಳೇ ಕಲ್ಲುಗುಪ್ಪೆಗಳು.[೭] ಇವುಗಳು ನಿರ್ದಿಷ್ಟ ಅಳತೆಯಲ್ಲಿರದೆ ಕಲ್ಲುಗುಪ್ಪೆಗಳಾಗಿ ಗೋಚರಿಸುತ್ತವೆ. ಇಂತಹ ಕಲ್ಲುಗುಪ್ಪೆ ಸಮಾಧಿಗಳನ್ನು ನಿರ್ಮಿಸುವ ಸಂಪ್ರದಾಯ ಇಂದಿಗೂ ಚಾಲ್ತಿಯಲ್ಲಿದೆ. ಜರಿಮಲೆ ಗ್ರಾಮದ ಮ್ಯಾಸನಾಯಕ ಬುಡಕಟ್ಟು ಸಮುದಾಯಕ್ಕೆ ಸೇರಿದ ದುರುಗಮ್ಮ ದೇವಿಯ ಪೂಜಾರಿ ವಂಶಸ್ಥರಲ್ಲಿ ಯಾರಾದರೂ ಸಾವನಪ್ಪಿದರೆ ಅವರ ಶವವನ್ನು ಬೆಟ್ಟದ ಮೇಲಿನ 'ವಡಕಟ್ಟೆಸರ' ಎನ್ನುವ ಸ್ಥಳದಲ್ಲಿ ಅಂತ್ಯಸಂಸ್ಕಾರ ಮಾಡುವರು. ಇಲ್ಲಿ ಮೊದಲು ಶವವನ್ನು ಸುಟ್ಟ ನಂತರ ಅಳಿದುಳಿದ ಬೂದಿ ಅವಶೇಷಗಳನ್ನು ಸಂಗ್ರಹಿಸಿ ಅದರ ಗುರುತಿಗಾಗಿ ಸುತ್ತಲೂ ಒತ್ತಾಗಿ ಹಾಕಿದ ಸಣ್ಣಕಲ್ಲುಗಳಿಂದ ಮುಚ್ಚಿ ಕಲ್ಲುಗುಪ್ಪೆ ನಿರ್ಮಾಣ ಮಾಡುವ ಸಂಪ್ರದಾಯ ಇಂದಿಗೂ ಜೀವಂತವಾಗಿದೆ. ಈ ಕಲ್ಲುಗುಪ್ಪೆ ಸಮಾಧಿಗಳಿಗೆ ಪ್ರತಿವರ್ಷ ಮಾರ್ಚ್ ತಿಂಗಳಲ್ಲಿ ನಡೆಯುವ ದುರುಗಮ್ಮ ಜಾತ್ರೆಯ ಸಂದರ್ಭದಲ್ಲಿ ಹೂ, ಬಳೆ, ವಸ್ತ್ರಗಳಿಂದ ಅಲಂಕರಿಸಿ, ಎಡೆ ಇಟ್ಟು ನೈವೇದ್ಯ ಮಾಡುತ್ತಾರೆ ಎಂದು ಸ್ಥಳೀಯ ವಕ್ತೃ ಚೌಡಪ್ಪ ಅವರು ವಿವರಿಸುತ್ತಾರೆ. ಆದರೆ ಇಲ್ಲಿನ ಬಹುತೇಕ ಸಮಾಧಿಗಳು ಗಿಡಗಂಟೆಗಳು ಬೆಳೆದು ಮುಚ್ಚಿ ಹೋಗಿವೆ. ಇನ್ನೂ ಕೆಲವು ಸಮಾಧಿಗಳನ್ನು ನಿಧಿ ಆಸೆಗಾಗಿ, ಮನೆಗಳ ನಿರ್ಮಾಣಕ್ಕಾಗಿ, ಕೃಷಿ ಚಟುವಟಿಕೆಗಾಗಿ ಸಂಪೂರ್ಣವಾಗಿ ಹಾಳು ಮಾಡಲಾಗಿದೆ. ಒಟ್ಟಾರೆಯಾಗಿ ಹೇಳುವುದಾದರೆ, ತಾಲೂಕಿನಲ್ಲಿರುವ ವಿವಿಧ ಬೃಹತ್ ಶಿಲಾಯುಗದ ನೆಲೆಗಳ ಜನರಿಗೂ ಮತ್ತು ಜರಿಮಲೆಯ ಬೃಹತ್ ಶಿಲಾಯುಗದ ನೆಲೆಯ ಜನರಿಗೂ ಪರಸ್ಪರ ಒಡನಾಟ ಇದ್ದಿರಬೇಕು. ಇದೇ ಮೊದಲ ಭಾರಿಗೆ ಕಲ್ಲುಗುಪ್ಪೆ ಸಮಾಧಿಗಳು ಕೂಡ್ಲಿಗಿ ಪರಿಸರದಲ್ಲಿ ಕಂಡುಬಂದಿರುವುದು ವಿಶೇಷ ಸಂಗತಿಯಾಗಿದೆ.

**ಕಾಲಮಾನ:** ಬೃಹತ್ ಶಿಲಾಯುಗ ಸಂಸ್ಕೃತಿಯು ಕ್ರಿ.ಪೂ. ೧೨೦೦ರಿಂದ ೧೦೦೦ ಸುಮಾರಿನಲ್ಲಿ ಪ್ರಾರಂಭಗೊಂಡು ಕ್ರಿ.ಪೂ ೩–೧ನೆಯ ಶತಮಾನದಲ್ಲಿ ರೂಢಿಯಲ್ಲಿತ್ತೆಂದು ಪುರಾತತ್ವಜ್ಞರಾದ ಸುಂದರ ಅವರು ಅಭಿಪ್ರಾಯಿಸಿದ್ದಾರೆ.

ಬಿಳಿವರ್ಣದ ಚಿತ್ರಗಳು: ಜರಿಮಲೆಯ ಬಿದಿರಂಬಯಲಿನ ಸಮಾಧಿಗಳ ಪಕ್ಕದಲ್ಲಿನ ಸೀಳುಬಂಡೆ ಆಸರೆಯಲ್ಲಿ ಎರಡು ಬಿಳಿವರ್ಣದ ಮನುಷ್ಯನ ಕಡ್ಡಿಚಿತ್ರಗಳಿವೆ. ದಕ್ಷಿಣಾಭಿಮುಖವಾಗಿರುವ ಕಲ್ಲಾಸರೆಯ ಮಧ್ಯಭಾಗದಲ್ಲಿರುವ ಚಿತ್ರವು ಪ್ರಾಣಿಯ(?) ಚಿತ್ರವಾಗಿದೆ. ಈ ಚಿತ್ರವು ೧೫ ಸೆಂ.ಮೀ ಉದ್ದವಿದ್ದು, ಕೈ–ಕಾಲುಗಳು ೫ ಸೆಂ.ಮೀ. ಉದ್ದಳತೆ ಹೊಂದಿವೆ. ಮತ್ತೊಂದು ಚಿತ್ರವು ಪುರುಷನದಾಗಿದ್ದು ಕೈಯಲ್ಲಿ ಆಯುಧವನ್ನು ಹಿಡಿದು ಬೇಟೆಗಾಗಿ ಸಿದ್ಧನಾಗಿರುವಂತೆ ಗೋಚರಿಸುತ್ತದೆ. ಇದು ೧೫ ಸೆಂ.ಮೀ. ಉದ್ದವಾಗಿದ್ದು, ಕೈ–ಕಾಲುಗಳು ೫ ಸೆಂ.ಮೀ ಉದ್ದಳತೆಯನ್ನು ಹೊಂದಿವೆ. ಈ ಚಿತ್ರಗಳ ಶೈಲಿ ಮತ್ತು ರಚನೆಯು ಕನಿಷ್ಠ ಮಟ್ಟದಲ್ಲಿದ್ದು, ಅಷ್ಟಾಗಿ ವೈವಿಧ್ಯಮಯವಾಗಿಲ್ಲ. ಇವುಗಳು ಬೆರಳಿನಿಂದ ಮೂಡಿಸಿದ ಕಡ್ಡಿರೂಪದ ಬಿಳಿ ವರ್ಣಚಿತ್ರಗಳಾಗಿರುವುದರಿಂದ ಇತಿಹಾಸ ಆರಂಭಕಾಲದವೆಂದು ಹೇಳಬಹುದು.[೮]

**ಉಪಸಂಹಾರ:** ಬೃಹತ್ ಶಿಲಾಯುಗದ ನೆಲೆಗಳು ಸಾಮಾನ್ಯವಾಗಿ ಬೆಟ್ಟ–ಗುಡ್ಡಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಸುಲಭವಾಗಿ ದೊರಕುವ ಕಲ್ಲುಚಪ್ಪಡಿಗಳ ಗುಂಡುಗಳು ದೊರೆಯಬಹುದಾದ ಪ್ರದೇಶದಲ್ಲಿವೆ. ಇಂತಹ ಬೆಟ್ಟ–ಗುಡ್ಡಗಳ ತಪ್ಪಲಿನಲ್ಲಿ ಬೃಹತ್ ಶಿಲಾಸಮಾಧಿಗಳು ಕಂಡುಬರುವುದರಿಂದ ಇವುಗಳ ಸಮೀಪದಲ್ಲಿ ಜನರು ವಾಸ್ತವ್ಯ ಹೂಡಿದ್ದರು ಎಂಬುದನ್ನು ಅರಿಯಬಹುದಾಗಿದೆ. ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ಮಣ್ಣಿನ ಗೋಡೆಗಳಿಂದ ರಚಿಸಿದ ಗುಡಿಸಲುಗಳಲ್ಲಿ ವಾಸಿಸುತ್ತಿದ್ದಿರಬೇಕು. ಪ್ರಾಯಶಃ ಅವುಗಳು ಪ್ರಾಕೃತಿಕ ವಿಕೋಪಗಳಿಗೆ ತುತ್ತಾಗಿ ನಾಶವಾಗಿದ್ದು ಗುರುತುಸಿಗದಂತಾಗಿವೆ. ಹಾಗಾಗಿ ಬೃಹತ್ ಶಿಲಾಯುಗದ ಸಮಾಧಿ ನೆಲೆಗಳು ಕಂಡುಬಂದಷ್ಟು ಆ ಕಾಲದ ವಸತಿನೆಲೆಗಳು ಈವರೆಗೂ ಕಂಡುಬಂದಿಲ್ಲವೆಂದು ಹೇಳಬಹುದು. ಬೃಹತ್ ಶಿಲಾಯುಗದ ಜನರು ಬೆಟ್ಟ–ಗುಡ್ಡಗಳ ಸಮತಟ್ಟಾದ ತಪ್ಪಲುಗಳನ್ನು, ಶಿಲಾಮಯ ಬರಡು ಭೂಮಿಗಳನ್ನು ಸಮಾಧಿಗಳ ನಿರ್ಮಾಣಕ್ಕೆ ಮೀಸಲಿಡುತ್ತಿದ್ದರು. ಕೃಷಿಗೆ ಯೋಗ್ಯವಾದ ಭೂಮಿಯಲ್ಲಿ ಇಂತಹ ನಿರ್ಮಿತಿಗಳು ಕಂಡುಬಂದಿರುವುದು ವಿರಳವೆನಿಸಿವೆ. ಬಹುಮುಖ್ಯವಾಗಿ ಈ ಹಿಂದಿನ ಸಂಶೋಧನೆಗಳಲ್ಲಿ ಜರಿಮಲೆ ಬೆಟ್ಟಪರಿಸರದಲ್ಲಿ ನವಶಿಲಾಯುಗದ ಆಯುಧಗಳು ದೊರೆತಿರುವುದರಿಂದ, ಈ ಪ್ರದೇಶದಲ್ಲಿ ನವಶಿಲಾಯುಗ ಕಾಲದಿಂದ ಬೃಹತ್ ಶಿಲಾಯುಗದ ಅಂತ್ಯದ ಕಾಲದವರೆಗಿನ ಪ್ರಮುಖ ನೆಲೆಯಾಗಿತ್ತೆಂದು ಪ್ರಸ್ತುತ ಅಧ್ಯಯನದಿಂದ ದೃಢಪಡಿಸಿಕೊಳ್ಳಬಹುದಾಗಿದೆ. ಇಲ್ಲಿನ ವಿವಿಧ ಪ್ರಕಾರದ ಶಿಲಾ ಸಮಾಧಿಗಳನ್ನು ಉತ್ಖನನ ಕೈಗೊಂಡು ವೈಜ್ಞಾನಿಕವಾಗಿ ಅಧ್ಯಯನಕ್ಕೆ ಒಳಪಡಿಸಿದಾಗ ಈ ಸಂಸ್ಕೃತಿಯ ಮತ್ತಷ್ಟು ಪ್ರಮುಖ ಅಂಶಗಳು ಬೆಳಕಿಗೆ ಬರುವ ಸಾಧ್ಯತೆಗಳಿವೆ.

[ನನ್ನ ನೆಚ್ಚಿನ ಗುರುಗಳಾದ ಡಾ. ರಮೇಶ ನಾಯಕ ಸರ್ ಅವರಿಗೆ ಹಾಗೂ ಕ್ಷೇತ್ರಕಾರ್ಯದಲ್ಲಿ ಪಾಲ್ಗೊಂಡು ಸಹಕರಿಸಿದ ಸಹೋದರ ಕೆ.ಎಂ. ಮಂಜಣ್ಣ ಅವರಿಗೆ ಧನ್ಯವಾದಗಳು]



## ಅಡಿಟಿಪ್ಪಣಿಗಳು


೧. ತಿಪ್ಪೇಸ್ವಾಮಿ ಹೆಚ್., ೨೦೦೦, ಕೂಡ್ಲಿಗಿ ತಾಲೂಕಿನ ಪ್ರಾಗೈತಿಹಾಸಿಕ ನೆಲೆಗಳು, ಇತಿಹಾಸ ದರ್ಶನ ಸಂಪುಟ, ೧೪, ಪು. ಸಂ. ೨.

೨. ಸುಂದರ ಅ., ೧೯೭೫, ದಿ ಅರ್ಲಿ ಛೇಂಬರ್ ಟೂಂಬ್ಸ್ ಆಫ್ ಸೌತ್ ಇಂಡಿಯಾ, ಪು. ಸಂ. ೪೮.

೩. ಗುರುರಾಜರಾವ್ ಬಿ.ಕೆ., ದಿ ಮೆಗಲೆಥಿಕ್ ಕಲ್ಚರ್ ಇನ್ ಸೌತ್ ಇಂಡಿಯಾ, ಪು. ಸಂ. ೨೩೭.

೪. ಸುಂದರ ಅ., ೧೯೭೫, ಪೂರ್ವೋಕ್ತ, ಪು. ಸಂ. ೯೦.

೫. ಮೆಡೋಸ್ ಟೇಲರ್, ದಿ ಮೆಗಲೆಥಿಕ್ ಟೂಂಬ್ಸ್ ಅಂಡ್ ಅದರ್ ರಿಮೈನ್ಸ್ ಇನ್ ದಿ ಡೆಕ್ಕನ್, ಪು.ಸಂ. ೨೦.

೬ ತಿಪ್ಪೇಶ ಹೆಚ್. ಎಂ., ೨೦೧೫, ಕೂಡ್ಲಿಗಿ ತಾಲೂಕಿನ ಬೃಹತ್ ಶಿಲಾಯುಗದ ನೆಲೆಗಳು, (ಕನ್ನಡ ವಿಶ್ವವಿದ್ಯಾಯಲಕ್ಕೆ ಸಾದರಪಡಿಸಿದ ಅಪ್ರಕಟಿತ ಎಂ.ಫಿಲ್. ಪ್ರೌಢ ಪ್ರಬಂಧ) ಪು. ಸಂ. ೪೬.

೭. ಅಂಬಳಿಕೆ ಹಿರಿಯಣ್ಣ., ೨೦೦೯. ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ಪು. ಸಂ. ೬೭೦.

೮. ಶರಣಬಸಪ್ಪ ಕೋಲ್ಕಾರ, ೨೦೧೦, ಶಿಲಾಯುಗದ ಗವಿವರ್ಣಚಿತ್ರಗಳು, ಪು. ಸಂ. ೧೮೭.

# ಬಿಡಗಲು ಗ್ರಾಮದ ಶಿಲಾಗೋರಿಗಳ ಶೋಧನೆ

**ಬಿ. ಬಸವರಾಜು ತಗರಪುರ***

**ಸ**ರಗೂರು ಪ್ರಾಚೀನ ಕಾಲದಿಂದಲೂ ಹೆಸರುವಾಸಿಯಾದ ನೆಲೆ. ಇಲ್ಲಿ ವಾರದ ಸಂತೆ ನಡೆಯುತ್ತಿದುದರಿಂದ ಈ ಊರಿಗೆ ಸಂತೆ ಸರಗೂರು ಎಂದು ಕರೆಯುತ್ತಾರೆ. ನರಸೀಪುರದ ೧೧೩೭ರ ಶಾಸನದಲ್ಲಿ ಸರಬಿಗೂರು ಎಂದು ಉಲ್ಲೇಖಿತಗೊಂಡಿದ್ದರೂ ಸರಗೂರು ರೂಪವೇ ಶಾಸನಗಳಲ್ಲಿ ಹೆಚ್ಚಾಗಿ ಕಾಣಬರುತ್ತವೆ.

ಸರಗೂರಿಗೆ ಹೊಂದಿಕೊಂಡಂತೆ ಬಿಡಗಲು ಗ್ರಾಮ ಇದೆ. ಬಿಡಗಲಿನಲ್ಲಿ ಶಿಲಾಗೋರಿಗಳನ್ನು ಪತ್ತೆ ಮಾಡಲಾಗಿದೆ. ಸ್ಥಳೀಯವಾಗಿ ಇವುಗಳನ್ನು ದೇವರ ಗುಡಿಗಳೆಂದು ಕರೆಯುತ್ತಾರೆ. ಇದಲ್ಲದೆ ಬಿಡಗಲು ಗ್ರಾಮದ ಹಾಗೂ ಸರಗೂರಿನ ಕಪಿಲಾ ನದಿ ತೀರದ ಪರಿಸರದಲ್ಲಿ ವಿವಿಧ ಬಿಡಿಶಿಲ್ಪಗಳನ್ನು ಹಾಗೂ ಅವಶೇಷಗಳನ್ನು ಗುರುತಿಸಲಾಗಿದೆ.

ಬಿಡಾಗಲು ಗ್ರಾಮದಲ್ಲಿ ದೊರೆತಿರುವ ಎರಡು ದೇವರ ಗುಡಿಗಳು ಬೃಹತ್ ಶಿಲಾ ಸಂಸ್ಕೃತಿಗೆ ಸೇರಿದ ಸಮಾಧಿಗಳೆ ಆಗಿವೆ. ಈ ಸಮಾಧಿಗಳಿಗೆ ಬಳಸಲಾಗಿರುವ ಚಪ್ಪಡಿಗಳಿಂದ ಇವುಗಳು ಬೃಹತ್ ಶಿಲಾಯುಗದ ಸಂಸ್ಕೃತಿಯ ಸಮಾಧಿಗಳೆಂದು ಪರಿಗಣಿಸಬಹುದಾಗಿದೆ. ೩೨ನೆಯ ವಾರ್ಷಿಕ ಸಮ್ಮೇಳನದಲ್ಲಿ ಸೋಮಶೇಖರ್‌ರವರು ಇವುಗಳನ್ನು ದೇವರಗುಡಿಗಳು ಎಂದು ತಿಳಿಸಿದ್ದಾರೆ. ಆದರೆ ಇವುಗಳು ಬೃಹತ್ ಶಿಲಾಯುಗದ ಶಿಲಾಗೋರಿಗಳೇ ಪ್ರಸ್ತುತ ದೇವರ ಗುಡಿಗಳಾಗಿರಬಹುದು.





ಬಿಡಗಲು ಗ್ರಾಮದ ಜನರು ಈ ದೇವರ ಗುಡಿಗಳನ್ನು ಹಬ್ಬ ಹರಿದಿನಗಳಲ್ಲಿ ಪೂಜೆ ಪುನಸ್ಕಾರವನ್ನು ಮಾಡುತ್ತಿದ್ದು, ಆಹಾರವನ್ನು ಈ ಗುಡಿ ಅಥವಾ ಸಮಾಧಿಯಲ್ಲಿ ಇಡುವ ಪದ್ಧತಿಯು ಈಗಲೂ ಪ್ರಸ್ತುತವಿದೆ. ಈ ರೀತಿಯ ಪೂಜೆ ಪುನಸ್ಕಾರಗಳಿಂದ ಮಡಿದ ಜನರ ಆತ್ಮ ಇಲ್ಲಿಂದಲೇ ಪರಲೋಕಕ್ಕೆ ಹಾಗೂ ಪರಲೋಕದಿಂದ ಈ ಲೋಕಕ್ಕೂ ಚಲಿಸಲಿ ಎಂಬ ನಂಬಿಕೆಯಿಂದ ಮಾಡುತ್ತಾರೆ ಎಂಬ ಹೇಳಿಕೆಗಳಿವೆ.

**ಸಮಾಧಿ ಸಂಖ್ಯೆ–೧**

ಇದೊಂದು ಮೂರು ಚಪ್ಪಡಿಗಳನ್ನು ನಿಲ್ಲಿಸಿ ಅದರ ಮೇಲೆ ಒಂದು ಚಪ್ಪಡಿಯನ್ನು ಮುಚ್ಚಿದ ಸಮಾಧಿ ದೇವರಗುಡಿ. ಸ್ಥಳೀಯರ ಪ್ರಕಾರ ಇದು ನೂರಾರು ವರ್ಷಗಳಿಂದ ಇದೆ ಎಂಬ ಹೇಳಿಕೆಗಳಿವೆ.

**ಸಮಾಧಿ ಸಂಖ್ಯೆ–೨**

ಸಮಾಧಿ ಸಂಖ್ಯೆ ಎರಡರಲ್ಲಿಯೂ ಕೂಡ ಮೂರು ಚಪ್ಪಡಿಗಳನ್ನು ನಿಲ್ಲಿಸಿ ಅದರ ಮೇಲೆ ಒಂದು ಚಪ್ಪಡಿಯನ್ನು ಹಾಕಲಾಗಿದೆ. ದೇವರ ಗುಡಿಯ ಒಳಗೆ ಒಂದು ವೀರಗಲ್ಲು ಇದೆ. ಮತ್ತೊಂದು ಸ್ತ್ರೀ ದೇವತೆ ಶಿಲ್ಪ ಇದೆ. ದೇವರ

* ತರಗಪುರ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ, ಮೊ. ೯೯೪೫೦೫೮೯೫೦

ಗುಡಿಯಲ್ಲಿ ದಕ್ಷಿಣಾಭಿಮುಖವಾಗಿರುವ ವೀರಗಲ್ಲು ದಕ್ಷಿಣಾಭಿಮುಖವಾಗಿದ್ದು ಭೂಮಿಯಲ್ಲಿ ಅರ್ಧಭಾಗ ಮುಳುಗಿ ಹೋಗಿದೆ. ದುಃಸ್ಥಿತಿಯಲ್ಲಿರುವ ಕಲ್ಲು ಪೀಠದ ಮೇಲೆ ಕುಳ್ಳಿರಿಸಲಾಗಿದೆ. ಇತ್ತೀಚಿನ ವರ್ಷಗಳಲ್ಲಿ ಬಿಡಗಲು ಗ್ರಾಮವು ನಗರೀಕರಣವಾಗಿರುವುದರಿಂದ ಅನೇಕ ಪ್ರಾಚೀನ ಅವಶೇಷಗಳು ನಾಶ ಹೊಂದಿವೆ.

ಸರಗೂರಿನ ಸೋಮೇಶ್ವರ ದೇವಾಲಯದ ಪರಿಸರದಲ್ಲಿ ಹಲವಾರು ಅವಶೇಷಗಳಿವೆ. ಕಬಿನಿ ನದಿಯ ದಡದಲ್ಲಿ ಸಾಕಷ್ಟು ವೀರಗಲ್ಲುಗಳು ಹಾಗೂ ಮಾಸ್ತಿಕಲ್ಲು ಅಲ್ಲದೆ ಸಪ್ತಮಾತೃಕೆಯರ ಶಿಲ್ಪಗಳಿವೆ. ಇವುಗಳನ್ನು ತಲಕಾಡಿನ ಗಂಗರ ಕಾಲಕ್ಕೆ ಸೇರಿಸಬಹುದಾಗಿದೆ.೨ ಏಕೆಂದರೆ ಸೋಮೇಶ್ವರ ದೇವಾಲಯದ ಪರಿಸರದಲ್ಲಿ ತಲಕಾಡಿನ ಗಂಗರ ಕಾಲಕ್ಕೆ ಸೇರಿಸಬಹುದಾದ ದುಃಸ್ಥಿತಿಯಲ್ಲಿರುವ ಕಂಬ ಇದೆ. ಇಲ್ಲಿಯ ಸೋಮೇಶ್ವರ ದೇವಾಲಯದಲ್ಲಿ ಸೂರ್ಯನಾರಾಯಣ, ಗಣೇಶ, ಸಪ್ತಮಾತೃಕೆಯರು, ದುರ್ಗಾ ಹಾಗೂ ನಂದಿ ಶಿಲ್ಪಗಳಿವೆ. ಈ ಶಿಲ್ಪಗಳನ್ನು ವಾಸ್ತುಶೈಲಿ ದೃಷ್ಟಿಯಿಂದ ಗಮನಿಸಿದರೆ ಇವುಗಳ ಕಾಲವನ್ನು ಕ್ರಿ.ಶ. ೧೧-೧೨ನೇ ಶತಮಾನಕ್ಕೆ ಸೇರಿಸಬಹುದಾಗಿದೆ. ಆದರೆ ಈಗ ದೇವಾಲಯ ಸಂಪೂರ್ಣವಾಗಿ ಜೀರ್ಣೋದ್ಧಾರವಾಗಿದೆ.

ಬಿಡಗಲು ಅತ್ಯಂತ ಪ್ರಾಚೀನ ಕಾಲದ ನೆಲೆಯಾಗಿದ್ದು, ಇಲ್ಲಿನ ಸಮಾಧಿ (ದೇವರ ಗುಡಿಗಳ) ಹಿನ್ನೆಲೆಯಲ್ಲಿ ಈ ನೆಲೆಯನ್ನು ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿಸಬಹುದಾಗಿದೆ. ಅಲ್ಲದೆ ಸರಗೂರು ಕಬಿನಿ ನದಿಯ ದಂಡೆಯಲ್ಲಿ ಕ್ರಿ.ಶ. ೧೦ರಿಂದ ೧೫ನೇ ಶತಮಾನಕ್ಕೆ ಸೇರಿಸಬಹುದಾದ ವೀರಗಲ್ಲು, ಮಾಸ್ತಿಕಲ್ಲು, ಕ್ರಿ.ಶ.೧೦ನೇ ಶತಮಾನಕ್ಕೆ ಸೇರಿಸಬಹುದಾದ ಸಪ್ತಮಾತೃಕೆಯರ ಶಿಲ್ಪಗಳಿವೆ. ಅಲ್ಲದೆ ಗಂಗರ ಕಾಲದ ಕಂಬವಿದೆ ಹಾಗೂ ಚೋಳರ ಶಿಲ್ಪಗಳಿವೆ.



## ಆಕರ ಗ್ರಂಥಗಳು


೧. ಡಾ. ದೇವರಕೊಂಡಾರೆಡ್ಡಿ, ತಲಕಾಡಿನ ಗಂಗರ ಕಾಲದ ದೇವಾಲಯಗಳು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨. ಡಾ. ಬಿ. ಬಸವರಾಜು ತಗರಪುರ, ಚೋಳರ ವಾಸ್ತು ಮತ್ತು ಶಿಲ್ಪ, ನಂದಿ ಬುಕ್‌ಹೌಸ್, ಎಫ್.-೩, ೧೮ನೇ ಕ್ರಾಸ್, ರಾಮಾನುಜ ರಸ್ತೆ, ಕೆ.ಆರ್. ಮೊಹಲ್ಲಾ, ಮೈಸೂರು, ೨೦೦೮, ಪು.ಸಂ. ೨೦೬, ೨೦೭.

## ೧೧

# ಚನ್ನಗಿರಿ ತಾಲ್ಲೂಕಿನ ಬೃಹತ್ ಶಿಲಾಯುಗದ ನೆಲೆಗಳ ಶೋಧ

**ಸಿ. ರಮೇಶ್***

**ಭೂ**ಮಿಯ ಮೇಲೆ ಮಾನವನು ಉಗಮವಾದಂದಿನಿಂದ ಆತನ ಇತಿಹಾಸ ಪ್ರಾರಂಭವಾಗುತ್ತದೆ. ಲಿಖಿತವಾದ ದಾಖಲೆಗಳಿಲ್ಲದ ಕಾಲವೇ ಪ್ರಾಗಿತಿಹಾಸ ಕಾಲ. ಆದರೂ ಆ ಕಾಲದಲ್ಲಿ ವಿವಿಧ ಸಂಸ್ಕೃತಿ ಮತ್ತು ಆಚರಣೆಗಳಿದ್ದವು. ಈ ಪುರಾವಶೇಷಗಳ ಆಧಾರದ ಮೇಲೆ ಶಿಲಾಯುಗ ಮತ್ತು ಲೋಹಯುಗ ಎಂದು ವರ್ಗೀಕರಿಸಿ ಶಿಲಾಯುಗವನ್ನು ಹಳೆಶಿಲಾಯುಗ, ಮಧ್ಯಶಿಲಾಯುಗ, ನವಶಿಲಾಯುಗವೆಂದು ಮತ್ತು ಲೋಹಯುಗವನ್ನು ಚಾಲ್ಕೋಲಿಥಿಕ್ (ತಾಮ್ರಶಿಲಾಯುಗ), ಮೆಗಾಲಿಥಿಕ್ (ಕಬ್ಬಿಣದಶಿಲಾಯುಗ) ಎಂದು ವರ್ಗೀಕರಿಸಿದ್ದಾರೆ.

ಅನೇಕ ವಿದ್ವಾಂಸರುಈಗಾಗಲೇ ಅನ್ವೇಷಣೆ ಮತ್ತು ಉತ್ಖನನಗಳಿಂದ ಕರ್ನಾಟಕದಲ್ಲಿಆಯಾತಕಾರದಲ್ಲಿಕೊರೆದು ತಯಾರಿಸಿದ ಶವಕುಣಿಗಳು, ಮಡಕೆಯ ಶವಪಟ್ಟಿಗೆಗಳುಳ್ಳದುಂಡುವೃತ್ತಗಳು, ನಿಲ್ಲಿಸುಗಲ್ಲುಗಳು, ಶಿಲಾವೃತ್ತ, ಶವಕುಳಿ, ಅಸ್ಥಿಪಾತ್ರೆ ಕಲ್ಲುಗುಂಪುಗಳು ಮೊದಲಾದ ಪ್ರಕಾರದ ಗೋರಿಗಳನ್ನು ಪತ್ತೆಹಚ್ಚಿದ್ದಾರೆ.[೧]

ದಾವಣಗೆರೆ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನಲ್ಲಿ ಯಾವುದೇ ಶಿಲಾಯುಗದ ಮತ್ತು ಲೋಹಯುಗದ ನೆಲೆಗಳು ಇದುವರೆಗೂ ಕಂಡು ಬಂದಿರಲಿಲ್ಲ. ಆದರೆ ಇತ್ತೀಚಿನ ಕ್ಷೇತ್ರ ಕಾರ್ಯದಲ್ಲಿ ಮತ್ತು ಬೃಹತ್ ಶಿಲಾಯುಗದ ನೆಲೆಗಳನ್ನು ೧) ಗುಡ್ಡದ ಬೆನಕನಹಳ್ಳಿ ೨) ಬೆಟ್ಟದ ಕಡೂರುಗಳಲ್ಲಿ ಶೋಧಿಸಿದ್ದೇನೆ.



**ಗುಡ್ಡದ ಬೆನಕನಹಳ್ಳಿ ಬೃಹತ್ ಶಿಲಾಯುಗದ ಸಮಾಧಿಯ ಪಾರ್ಶ್ವ ನೋಟ**



**ಬೆಟ್ಟದಕಡೂರಿನಲ್ಲಿ ಲಭ್ಯವಾದ ಕಿಟ್ಟ್ (ಕಬ್ಬಿಣದ ಅದಿರು) ಪಾರ್ಶ್ವನೋಟ**

**ಗುಡ್ಡದ ಬೆನಕನಹಳ್ಳಿ:** ಬೆನಕನಹಳ್ಳಿಯು ಚನ್ನಗಿರಿ ಪಟ್ಟಣದಿಂದ ೧೮ ಕಿ.ಮೀ. ದೂರದಲ್ಲಿ ಉತ್ತರ ದಿಕ್ಕಿನಲ್ಲಿರುವ ಗ್ರಾಮವಾಗಿದೆ. ಗ್ರಾಮದ ಪೂರ್ವದಿಕ್ಕಿನಲ್ಲಿರುವ ಬೆಟ್ಟದ ಸಾಲುಗಳಲ್ಲಿ ಕೃಷ್ಣನಾಯಕ ಎಂಬುವವರ ಹೊಲದಲ್ಲಿ ಒಂದು ಬೃಹತ್ ಶಿಲಾಗೋರಿಯು ಕಂಡ್ತಿ ಕೋಣ ಸಮಾಧಿ? ಪತ್ತೆಯಾಗಿದೆ. ಕಲ್ಲುಬಂಡೆಗಳ ರಾಶಿಯ ಮೇಲ್ಭಾಗದಲ್ಲಿ ಆಯಾತಾಕಾರದ ಸುಮಾರು ನಾಲ್ಕು ಅಡಿ ಚಪ್ಪಡಿಗಳನ್ನು ನಿಲ್ಲಿಸಿ ಮೇಲ್ಭಾಗದಲ್ಲಿಕಂಡಿಯನ್ನು ಬಿಟ್ಟಿದ್ದಾರೆ. ಅದರ ಪಕ್ಕದಲ್ಲಿಯೇ ಕಿಟ್ಟ (ಕಬ್ಬಿಣದ ಅದಿರು) ಮಾನವನು ಬಳಸಿದ ಬಗ್ಗೆ ಉಲ್ಲೇಖಗಳಿವೆ. ಮಧ್ಯಯುಗೀನ ಕಾಲದಲ್ಲಿ ಇಲ್ಲಿ ದೊರೆತ ಕಬ್ಬಿಣದ ಅದಿರಿನಿಂದ ಗ್ರಾಮದ ದೇವಾಲಯದ ರಥದ ಚಕ್ರವನ್ನು ತಯಾರಿಸಿದ್ದರೆಂದು ಸ್ಥಳೀಯರ ಮೌಖಿಕ ಅಭಿಪ್ರಾಯವಾಗಿದೆ.

* ಸಂಶೋಧನಾ ವಿದ್ಯಾರ್ಥಿ, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬ ಮೊ. ೭೩೫೩೮೮೮೦೮೩

ಬೃಹತ್‌ಗೋರಿಯ ಪಕ್ಕದಲ್ಲಿ ಮಡಕೆಯಚೂರುದೊರೆತಿಲ್ಲ. ಕಾರಣವೇನೆಂದರೆ ಹೊಲದಲ್ಲಿ ಮೆಕ್ಕೆಜೋಳದ ಬೆಳೆ ಇರುವುದರಿಂದ ಹೆಚ್ಚಿನಸಂಶೋಧನೆಗೆ ಸಾಧ್ಯವಾಗಲಿಲ್ಲ. ಬಹುಶಃ ಸರಿಯಾಗಿ ಸಂಶೋಧನೆ ಮಾಡಿದರೆ ಮಡಕೆಯ ಅವಶೇಷ ಲಭ್ಯವಾಗಬಹುದು.

**ಬೆಟ್ಟದಕಡೂರು:** ಬೆಟ್ಟದ ಕಡೂರು ಗ್ರಾಮವುಚನ್ನಗಿರಿ ಪಟ್ಟಣದಿಂದ ೧೮ ಕಿ.ಮೀ. ದೂರದಲ್ಲಿ ಆಗ್ನೇಯ ದಿಕ್ಕಿನಲ್ಲಿರುವ ಗ್ರಾಮವಾಗಿದೆ. ಪಶ್ಚಿಮ ಭಾಗದಿಂದ ೧೦೦ ಮೀಟರ್ ಚಲಿಸಿದರೆ ಬೃಹತ್ ಶಿಲಾಯುಗದಲ್ಲಿ ಮಾನವನು ಬಳಸಿದ ಆಯುಧಗಳು, ಕಬ್ಬಿಣದ ಅದಿರು (ಕಿಡ್ಸ್) ಗೋಚರಿಸುತ್ತವೆ.ಅಲ್ಲಿ ಲಭ್ಯವಾದ ಶಿಲಾಗೋರಿಗಳನ್ನು ಸ್ಥಳೀಯರು ನಾಶ ಮಾಡಿರಬಹುದು. ಅಲ್ಲಿ ಯಾವುದೇ ಗೋರಿಗಳ ಕುರುಹುಗಳು, ಮಡಕೆ ಚೂರುಗಳು ಲಭ್ಯವಾಗಿಲ್ಲ. ಕಾರಣ ಹೊಲದಲ್ಲಿ ಬೆಳೆ ಇರುವುದರಿಂದಾಗಿ ಸಂಪೂರ್ಣ ಶೋಧನೆಗೆ ಸಾಧ್ಯವಾಗಲಿಲ್ಲ. ಆದರೂ ಸಹ ಈ ಪ್ರದೇಶವು ಬೃಹತ್ ಶಿಲಾಯುಗದ ನೆಲೆಯಾಗಿತ್ತೆಂದು ತಿಳಿದುಬರುತ್ತದೆ.

ದಾವಣಗೆರೆಜಿಲ್ಲೆಯಎಲ್ಲಾ ತಾಲ್ಲೂಕುಗಳು ಪ್ರಾಗಿತಿಹಾಸದ ನೆಲೆಗಳನ್ನು ಹೊಂದಿದ್ದವು. ಆದರೆ ಚನ್ನಗಿರಿ ತಾಲ್ಲೂಕಿನಲ್ಲಿ ಯಾವುದೇ ಕುರುಹುಗಳು ಲಭ್ಯವಾಗಿರಲಿಲ್ಲ. ನನ್ನ ಈ ಸಂಶೋಧನೆ ಹೊಸ ನೆಲೆಗಳನ್ನು ಹುಡುಕಲು ಸಾಧ್ಯವಾಯಿತು. ಆದರೂ ಸಹ ನನ್ನ ಸಂಶೋಧನೆ ಈ ನೆಲೆಗಳಲ್ಲಿ ಪೂರ್ಣವಾಗಿಲ್ಲ. ಕಾರಣವೇನೆಂದರೆಹೊಲದಲ್ಲಿ ಬೆಳೆ ಇರುವುದರಿಂದ ಹೊಲದ ಮಾಲಿಕರು ಹೆಚ್ಚು ಸಹಕಾರವನ್ನು ನೀಡಲಿಲ್ಲ. ಹೀಗೆ ಏನೇ ಕಾರಣಗಳಿದ್ದರೂ ಎರಡೂ ಬೃಹತ್ ಶಿಲಾಯುಗದ ನೆಲೆಗಳು ಪತ್ತೆಯಾಗಿವೆ. ಮುಂದಿನ ದಿನಗಳಲ್ಲಿ ಈ ಪ್ರದೇಶದಲ್ಲಿ ಹೆಚ್ಚಿನ ಸಂಶೋಧನೆ ಕೈಗೊಳ್ಳುತ್ತೇನೆ.



## ಅಡಿಟಿಪ್ಪಣಿಗಳು

೧. ಶ್ರೀನಿವಾಸ ಎಲ್., ಹಂಪಿ ಪರಿಸರದ ಆದಿಮಾನವನ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು. ೩೦.

# ೧೨

# ಅಗಸರ ಕುಂಟೆಯ ಬೃಹತ್ ಶಿಲಾಯುಗದ ಸಮಾಧಿಗಳು

ವೇಮಗಲ್ ಮೂರ್ತಿ*

ಅಗಸರ ಕುಂಟೆ ಪ್ರದೇಶವು ಕೋಲಾರ ತಾಲ್ಲೂಕು ವೇಮಗಲ್ ಗ್ರಾಮದ ಪರಿಸರದಲ್ಲಿ ಬರುತ್ತದೆ. ಇಲ್ಲಿ ಬೃಹತ್ ಶಿಲಾಯುಗದ ಕುರುಹುಗಳಾದ ೧. ಶಿಲಾವೃತ್ತ ಸಮಾಧಿಗಳು, ೨. ಕಲ್ಲಾಸರೆಗಳು, ೩. ಸಮಾಧಿಗಳನ್ನು ನಿರ್ಮಾಣ ಮಾಡಲು ಬೇಕಾಗುವಂತಹ ಕಲ್ಲು ಬಂಡೆಗಳಿಂದ ಸುತ್ತುವರೆದಿರುವ ವಿಶಾಲವಾದ ಬಂಡೆ ಇರುವ ಪ್ರದೇಶವಾಗಿದೆ.

ಈ ಪ್ರದೇಶದಲ್ಲಿ ಸುಮಾರು ೩ರಿಂದ ೪ ಶಿಲಾವೃತ್ತಿ ಸಮಾಧಿಗಳನ್ನು ನನ್ನ ಕ್ಷೇತ್ರ ಕಾರ್ಯದಲ್ಲಿ ಗಮನಿಸಿದ್ದೇನೆ. ಇವು ಸು. ೪' ಯಿಂದ ೫ ವ್ಯಾಸವುಳ್ಳದ್ದಾಗಿದೆ. ಕೆಲವು ಚಿಕ್ಕದಾಗಿಯೂ ಇದೆ. ಈ ಶಿಲಾವೃತ್ತ ಸಮಾಧಿಗಳಿಗೆ ದೊಡ್ಡ ಹಾಗೂ ಸಣ್ಣ ಕಲ್ಲು ಗುಂಡುಗಳನ್ನು ವೃತ್ತಾಕಾರವಾಗಿ ಇಡಲಾಗಿದೆ.

ಕಲ್ಲಾಸರೆಗಳು ಬಗ್ಗೆ ಹೇಳುವುದಾದರೆ ೨ ರಿಂದ ೩ ಕಲ್ಲಾಸರೆಗಳು ನನ್ನ ಗಮನಕ್ಕೆ ಬಂದಿದ್ದವು. ಆದರೆ ಇಂದು ಕೇವಲ ಒಂದು ಮಾತ್ರ ಉಳಿದುಕೊಂಡಿದೆ. ಕಾರಣ ಇಲ್ಲಿರುವ ಕುಂಟೆಯ ಅಭಿವೃದ್ಧಿ ನೆಪದಲ್ಲಿ ಉಳಿದ ೩ ಕಲ್ಲಾಸರೆಗಳನ್ನು ನಾಶ ಮಾಡಿದ್ದಾರೆ. ಉಳಿದಿರುವ ಒಂದು ಕಲ್ಲಾಸರೆಯ ೩ ದೊಡ್ಡ ಗುಂಡುಗಳಿಂದ ಕೂಡಿದ್ದು ಇದರ ಮೇಲೆ ಒಂದು ಸಮತಟ್ಟಾದ ಕಲ್ಲು ಚಪ್ಪಡಿಯನ್ನು ಇಟ್ಟಿದ್ದಾರೆ.





ಇನ್ನು ಈ ಪರಿಸರದಲ್ಲಿ ಜನವಸತಿ ನೆಲೆ ಇತ್ತು ಎನ್ನುವುದಕ್ಕೆ ವಿದ್ವಾಂಸರ ಅಭಿಪ್ರಾಯದಂತೆ ಹೇಳುವುದಾದರೆ ಬೃಹತ್ ಶಿಲಾಯುಗದ ನೆಲೆಗಳು ಕಂಡುಬರುವುದು. ಬೆಟ್ಟಗಳು ಸಮತಟ್ಟು ಮತ್ತು ತಪ್ಪಲು ಪ್ರದೇಶದಲ್ಲಿ, ಇದರ ಜೊತೆಗೆ ನೀರಿನ ಆಸರೆ ಇರುವಲ್ಲಿ ಹಾಗೂ ಸತ್ತವರಿಗೆ ಸಮಾಧಿಗಳ ನಿರ್ಮಾಣಕ್ಕೆ ಬೇಕಾಗುವಂತಹ ಕಲ್ಲು/ಕಲ್ಲುಗುಂಡುಗಳು ದೊರಕುವಂತಹ ಕಲ್ಲು ಬಂಡೆಯ ಪ್ರದೇಶ. ಇಂತಹ ಕಡೆ ಜನವಸತಿ ನೆಲೆ ಇರಲು ಸಾಧ್ಯ ಎನ್ನುವುದು.

ಈ ಮೇಲಿನ ಅಂಶಗಳನ್ನು ಗಮನಿಸಿದರೆ ಅಗಸರ ಕುಂಟೆ ಪ್ರದೇಶದಲ್ಲಿ ಜನರು ವಾಸಿಸುವುದಕ್ಕೆ ಅಗತ್ಯವಾಗಿ ಬೇಕಾಗುವಂತಹ ನೀರಿನ ಆಸರೆಗಾಗಿ ಒಂದು ವಿಶಾಲವಾದ ಕುಂಟೆ ಇದೆ. (ಅಗಸರ ಕುಂಟೆ). ಸು. ೩' ಯಿಂದ ೪'ಯಷ್ಟು ನೀರು ನಿಲ್ಲುತ್ತದೆ. ಹಾಗೂ ಈ ಪ್ರದೇಶವು ಮೇಲೆ ಹೇಳಿರುವಂತೆ ವಿಶಾಲವಾದ ಬಂಡೆ ಹಾಗೂ ಸಣ್ಣ ಮತ್ತು ದೊಡ್ಡ ಕಲ್ಲುಗುಂಡುಗಳಿಂದ ಕೂಡಿದ ಪ್ರದೇಶವಾಗಿದೆ.

* # ೧೦೭, ಶ್ರೀ ಸಾಯಿ ವರ್ಷ ಪ್ಯಾರಡೈಸ್, ೩ನೇ ಮುಖ್ಯರಸ್ತೆ, ೭ನೇ ಹಂತ, ಪೂರ್ಣಪ್ರಜ್ಞನಗರ, ಬೆಂಗಳೂರು-೫೬೦೦೭೧, ಮೊ. ೯೭೪೦೦೧೦೧೮೭





ಇಷ್ಟೇ ಅಲ್ಲದೆ ಈ ಪ್ರದೇಶವು ಜನವಸತಿ ನೆಲೆಯಾಗಿತ್ತು ಎನ್ನುವುದಕ್ಕೆ ಮತ್ತೊಂದು ಕುರುಹಾಗಿ ಸಣ್ಣ ಸಣ್ಣ ಮನೆಗಳು ಇದ್ದಿರಬಹುದಾದಂತಹ ತಳಪಾಯಗಳನ್ನು ಕಾಣಬಹುದು.

ಅಗಸರ ಕುಂಟೆ ಪ್ರದೇಶಕ್ಕೆ ಸು. ೧ ಕಿ.ಮೀ. ದೂರದಲ್ಲಿ ಪೆರ್ಜೇನಹಳ್ಳಿ ಎಂಬ ಗ್ರಾಮವಿದ್ದು ಇಲ್ಲಿಯೂ ಸಹ ೩ ಶಿಲಾವೃತ್ತ ಸಮಾಧಿಗಳನ್ನು ಕಾಣಬಹುದು. ಇದನ್ನು ಕೋಲಾರ ಜಿಲ್ಲಾ ಗೆಜೆಟಿಯರ್‌ನಲ್ಲಿ ಪ್ರಕಟಿಸಿದ್ದಾರೆ. ಇದರಂತೆ ಸಮೀಪದ ಗ್ರಾಮಗಳಿಂದ, ಪುರಹಳ್ಳಿ, ಮಠಪುರ ಗ್ರಾಮಗಳಲ್ಲಿ ಶಿಲಾವೃತ್ತ ಸಮಾಧಿ ಹಾಗೂ ಜನವಸತಿ ನೆಲೆಗಳನ್ನು ಕಾಣಬಹುದು.

ಹಾಗೆಯೇ ನೀರು ನಿಲ್ಲುವ ಬಂಡೆಯ ಮೇಲೆ ಶಿವಲಿಂಗದ ಪಾಣಿಪೀಠದ ರೇಖಾಚಿತ್ರವಿದ್ದು, ಕಾಲಾಂತರದಲ್ಲಿ ಇಲ್ಲಿ ಶಿವಲಿಂಗವನ್ನು ಸ್ಥಾಪಿಸಿ ಮಂಟಪ ಕಟ್ಟುವ ಉದ್ದೇಶ ಇರಬಹುದು ಎಂಬುದಕ್ಕೆ ಕುರುಹಾಗಿ ರೇಖಾಚಿತ್ರದ ೪ ಮೂಲೆಗಳಲ್ಲಿ ೪ ಗುಣಿಗಳು ಇರುವುದನ್ನು ಕಾಣಬಹುದು.

ಈ ಮೇಲಿನ ಎಲ್ಲಾ ಅಂಶಗಳಿಂದ ತಿಳಿದು ಬರುವುದೇನೆಂದರೆ ಅಗಸರ ಕುಂಟೆ ಪ್ರದೇಶವು ಬೃಹತ್ ಶಿಲಾಯುಗಕ್ಕೆ ಸೇರಿದ್ದು, ಹಾಗೂ ಒಂದು ಜನವಸತಿ ನೆಲೆಯಾಗಿದ್ದರಬಹುದು ಎಂದು ತಿಳಿಯಬಹುದಾಗಿದೆ.







# ೧೩

# ‘ಮೆಣಸಿನಹಳ್ಳಿ ಗವಿಗುಡ್ಡೆಯ ಬೃಹತ್ ಶಿಲಾ ಸಮಾಧಿ ನೆಲೆ

**ಡಿ.ಸಿ. ರಾಮಕೃಷ್ಣಯ್ಯ***

**ಮ**ನುಕುಲದ ಇತಿಹಾಸವನ್ನು ಅಧ್ಯಯನದ ಹಿತದೃಷ್ಟಿಯಿಂದ ದಾಖಲೆಗಳ ಆಧಾರದ ಮೇಲೆ ಪ್ರಾಗಿತಿಕಾಸ ಕಾಲ, ಇತಿಹಾಸ ಪೂರ್ವಕಾಲ ಮತ್ತು ಇತಿಹಾಸ ಕಾಲ ಎಂದು ಮೂರು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳಲ್ಲಿ ಪ್ರಾಗಿತಿಹಾಸ ಕಾಲವನ್ನು ಪ್ರಾಚ್ಯಾವಶೇಷಗಳ ಆಧಾರದ ಮೇಲೆ ಶಿಲಾಯುಗ ಮತ್ತು ಲೋಹಯುಗ ಎಂದು ವಿಭಾಗಿಸಿಕೊಂಡಿರುವುದರಿಂದ ಬೃಹತ್ ಶಿಲಾಯುಗ ಸಂಸ್ಕೃತಿ ಹಂತ ಪ್ರಾಗಿತಿಹಾಸ ಕಾಲಘಟ್ಟದಲ್ಲಿ ಕಂಡುಬರುತ್ತದೆ. ಅದು ನವಶಿಲಾಯುಗದ ಅಂತ್ಯದಿಂದ ಐತಿಹಾಸಿಕ ಕಾಲದ ಆರಂಭದವರೆಗೆ ಅಸ್ತಿತ್ವದಲ್ಲಿತ್ತು ಎನ್ನಲಾಗುತ್ತಿದೆ. ಈ ಹಂತದ ಜನರು ಶಿಲೆಯ ಜೊತೆಗೆ ಕಬ್ಬಿಣವನ್ನು ಆವಿಷ್ಕರಿಸಿ ಅದರಿಂದ ಉಪಕರಣಗಳನ್ನು ತಯಾರಿಸಿಕೊಂಡು ತಮ್ಮ ಜೀವನದ ಚಟುವಟಿಕೆಗಳಲ್ಲಿ ಉಪಯೋಗಿಸಿದರು. ಆದ್ದರಿಂದ ಈ ಕಾಲಘಟ್ಟವನ್ನು ಕಬ್ಬಿಣದಯುಗ ಮತ್ತು ಬೃಹತ್ ಶಿಲಾಯುಗ ಎಂದು ಕರೆಯಲಾಗಿದೆ. ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ವಿವಿಧ ಮಾದರಿಯ ಶಿಲಾಸಮಾಧಿಗಳನ್ನು ನಿರ್ಮಿಸಿರುವುದು ಕುತೂಹಲಕರವಾದ ಸಂಗತಿಯಾಗಿದೆ. ಇವುಗಳು ಅಂದಿನ ಜನರ ನಂಬಿಕೆ, ಸಂಪ್ರದಾಯ, ಆಚರಣೆಗಳ ಹಿನ್ನೆಲೆಯಲ್ಲಿ ನಿರ್ಮಾಣಗೊಂಡಿವೆ ಎನ್ನಬಹುದು. ಈ ಸಂಸ್ಕೃತಿಯ ಜನರು ವಾಸಮಾಡುವ ಪ್ರದೇಶವನ್ನು ವಾಸ್ತವ್ಯದ ನೆಲೆಯೆಂದು, ಶವಸಂಸ್ಕಾರದ ಪ್ರದೇಶವನ್ನು ಸಮಾಧಿ ನೆಲೆ ಎಂದು ಗುರುತಿಸಿಕೊಳ್ಳಲಾಗಿದೆ. ಇವು ಬೃಹತ್ ಶಿಲಾಸಮಾಧಿ ನಿರ್ಮಾತೃಗಳ ಕಾಲಮಾನ ಹಾಗೂ ಅವರ ಸಾಮಾಜಿಕ, ಧಾರ್ಮಿಕ, ಆರ್ಥಿಕ ವ್ಯವಸ್ಥೆಯನ್ನು ತಿಳಿಯಲು ಇರುವ ಆಕರಗಳಾಗಿವೆ.

ಭಾರತದಲ್ಲಿ ಆದಿಮಾನವನ ಇತರೆ ಸಂಸ್ಕೃತಿಗಳಂತೆ ಬೃಹತ್ ಶಿಲಾಯುಗ ಸಂಸ್ಕೃತಿ ಕೂಡ ಸವಿಸ್ತಾರವಾಗಿ ಹರಡಿದೆ. ಹೀಗಾಗಿ ಕರ್ನಾಟಕದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು ಕಂಡುಬಂದಿವೆ. ಮೆಡೋಸ್ ಟೇಲರ್, ರಾಬರ್ಟ್ ಬ್ರೂಸ್‌ಫೂಟ್, ಎಂ.ಎಚ್.ಕೃಷ್ಣ ಹಾಗೂ ಮಾರ್ಟಿಮ ವ್ಹೀಲಹರ್ ಮುಂತಾದ ವಿದ್ವಾಂಸರುಗಳು ಕರ್ನಾಟಕದ ಮಸ್ಕಿ, ಹಳ್ಳೂರು, ಟಿ.ನರಸೀಪುರ, ಚಿತ್ರದುರ್ಗ ಮೊದಲಾದ ಪ್ರದೇಶಗಳಲ್ಲಿ ಬೃಹತ್ ಶಿಲಾಸಮಾಧಿಗಳನ್ನು ಪತ್ತೆಹಚ್ಚಿ ಉತ್ಖನನ ನಡೆಸಿ ಕರ್ನಾಟಕದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿ ಅಸ್ತಿತ್ವದಲ್ಲಿತ್ತು ಎಂಬುದನ್ನು ಖಚಿತಪಡಿಸಿದ್ದಾರೆ. ಬೃಹತ್ ಶಿಲಾಸಮಾಧಿಗಳ ನಿರ್ಮಾಣದ ವಿನ್ಯಾಸ ಲಕ್ಷಣಗಳನ್ನು ಆಧರಿಸಿ ಅವುಗಳನ್ನು ಹಾದಿಕೋಣೆ ಗೋರಿ, ಕಂಡಿಕೋಣೆ ಗೋರಿ, ಆಯತಕೋಣೆ ಗೋರಿ, ಕೊರೆದಕೋಣೆ ಗೋರಿ, ತುಂಡುಕಲ್ಲು ದಿಣ್ಣೆಗಳು, ಅಸ್ಥಿ ಮತ್ಪಾತ್ರಿಗಳು, ಶವಕುಣಿ ಎಂದು ಹತ್ತು ವಿಧಾನಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

ಬಹುತೇಕವಾಗಿ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು ಕಂಡುಬಂದಿವೆ. ಕರ್ನಾಟಕದ ರೇಷ್ಮೆ ನಗರ ಎಂದು ಪ್ರಸಿದ್ಧಿಯಾಗಿರುವ ರಾಮನಗರ ಜಿಲ್ಲೆ ಸಹ ಇದರಿಂದ ಹೊರತಾಗಿಲ್ಲ. ಹೀಗಾಗಿ ರಾಮನಗರ ಜಿಲ್ಲೆ ವ್ಯಾಪ್ತಿಯ ಚನ್ನಪಟ್ಟಣ ತಾಲ್ಲೂಕಿನಲ್ಲಿ ಕೂಡ ಬೃಹತ್ ಶಿಲಾಯುಗದ ಸಂಸ್ಕೃತಿಯ ನೆಲೆಗಳು ಕಂಡಬಂದಿವೆ. ಚನ್ನಪಟ್ಟಣ ತಾಲ್ಲೂಕು ಪರಿಸರ ಅರೆಮಲೆನಾಡಾಗಿದ್ದು, ಬೆಟ್ಟ-ಗುಡ್ಡಗಳಿರುವ ಅರಣ್ಯ ಪ್ರದೇಶ ಹಾಗೂ ಮೈದಾನ ಪ್ರದೇಶದಿಂದ ಕೂಡಿದೆ. ಇಲ್ಲಿನ ಬೆಟ್ಟ-ಗುಡ್ಡಗಳಲ್ಲಿ ಕುರುಚಲು ಅರಣ್ಯ ಪ್ರದೇಶವಿದ್ದರೆ, ಮೈದಾನ ಪ್ರದೇಶದಲ್ಲಿ ನದಿ, ಹಳ್ಳ, ಕೊಳ್ಳ ಮೊದಲಾದ ನೀರಿನ ಮೂಲಗಳಿವೆ. ಹೀಗೆ ನೈಸರ್ಗಿಕ ಸಂಪನ್ಮೂಲಗಳಿರುವ ಚನ್ನಪಟ್ಟಣ ತಾಲೂಕು ಪರಿಸರ ಮಾನವ ನೆಲೆಸಲು ಆರೋಗ್ಯಕರವಾದ ವಾತಾವರಣ ಹೊಂದಿರುವುದರಿಂದ ಪ್ರಾಗಿತಿಹಾಸ ಕಾಲಕ್ಕೆ ಸೇರಿದ ಶಿಲಾಯುಗದ ನೆಲೆಗಳು ಕಂಡುಬರುತ್ತವೆ. ಈ ತಾಲ್ಲೂಕಿನ ಸಿದ್ಧಾಪುರ ಗ್ರಾಮದಲ್ಲಿ ಸೂಕ್ಷ್ಮ ಶಿಲಾಯುಗಕ್ಕೆ ಸೇರಿದ ಬೆಣಚುಕಲ್ಲಿನ ಆಯುಧ ದೊರೆತಿದೆ. ಚನ್ನಪಟ್ಟಣ ತಾಲೂಕಿನ ಮಂಕುಂದ ಬೆಟ್ಟದಲ್ಲಿರುವ ಕಲ್ಲಾಸರೆಗಳಲ್ಲಿ ಜಿ.ಕೆ.ದೇವರಾಜಸ್ವಾಮಿ ಎಂಬುವರು ನವಶಿಲಾಯುಗಕ್ಕೆ ಸೇರಿದ ವರ್ಣಚಿತ್ರಗಳನ್ನು ಶೋಧಿಸಿ ಅವುಗಳ ಕಾಲವನ್ನು ಶಿಲಾ ತಾಮ್ರಯುಗದ ಕ್ರಿ.ಪೂ. ೨೦೦೦

* ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿವಿ, ಹಂಪಿ, ಮೊ. ೯೫೩೯೦೨೪೪೩





ದಿಂದ ಕ್ರಿ.ಪೂ. ೨೦೦ರವರೆಗಿನ ನಡುವಿನ ಕಾಲಘಟ್ಟ ಎಂದು ಅಂದಾಜಿಸಿದ್ದಾರೆ. ಬೃಹತ್ ಶಿಲಾಯುಗಕ್ಕೆ ಸೇರಿದ ನೆಲೆಗಳು ಈ ತಾಲೂಕಿನ ಸಿಂಗರಾಜಪುರ, ಭೂಹಳ್ಳಿ, ಭೈರಬೆಟ್ಟಹಳ್ಳಿ, ಉಜ್ಜನಹಳ್ಳಿ, ಬಾಣಹಳ್ಳಿ, ಹುಣಸನಹಳ್ಳಿ, ವಿಠಲೇನಹಳ್ಳಿ, ಇಗ್ಗಲೂರು, ದಶಾವರ, ಮಾಕಳಿ ಮುಂತಾದ ಪ್ರದೇಶಗಳಲ್ಲಿ ಕಂಡುಬಂದಿವೆ. ಇವುಗಳ ಹಿನ್ನೆಲೆಯಲ್ಲಿ ವಿರುಪಾಕ್ಷಿಪುರ ಹೋಬಳಿಯ ಮೆಣಸಿಗನಹಳ್ಳಿ ಬಳಿ ಬೃಹತ್ ಶಿಲಾಯುಗದ ಸಮಾಧಿ ನೆಲೆಯನ್ನು ಬೆಳಕಿಗೆ ತರಲಾಗಿದೆ.

ಮೆಣಸಿಗನಹಳ್ಳಿ ಗ್ರಾಮ ಚನ್ನಪಟ್ಟಣ ತಾಲೂಕಿನ ವಿರುಪಾಕ್ಷಿಪುರ ಹೋಬಳಿ ವ್ಯಾಪ್ತಿಯಲ್ಲಿದೆ. ಈ ವಿರುಪಾಕ್ಷಿಪುರ ಹೋಬಳಿ ಪರಿಸರದಲ್ಲಿ ಮೈದಾನ ಪ್ರದೇಶಕ್ಕಿಂತ ಬೆಟ್ಟ–ಗುಡ್ಡಗಳ ಅರಣ್ಯ ಪ್ರದೇಶವೇ ಹೆಚ್ಚಾಗಿ ಕಂಡುಬರುತ್ತದೆ. ಪಿಎಚ್.ಡಿ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ವಿರುಪಾಕ್ಷಿಪುರ ಹೋಬಳಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಮೆಣಸಿಗನಹಳ್ಳಿ ಬೆಟ್ಟದ ಗವಿಗುಡ್ಡೆ ಬಳಿ ಬೃಹತ್ ಶಿಲಾಯುಗಕ್ಕೆ ಸೇರಿದ ಸಮಾಧಿ ನೆಲೆಯನ್ನು ಬೆಳಕಿಗೆ ತರಲಾಗಿದೆ. ಈ ಗವಿಗುಡ್ಡ ಪ್ರದೇಶದಲ್ಲಿ ಸುಮಾರು ೩೦ಕ್ಕೂ ಹೆಚ್ಚು ಶಿಲಾಸಮಾಧಿಗಳು ಕಂಡುಬಂದಿವೆ. ಅವುಗಳಲ್ಲಿ ಸಾಕಷ್ಟು ಶಿಲಾಸಮಾಧಿಗಳು ಹಾಳಾಗಿದ್ದು ಕೆಲವು ಸಮಾಧಿಗಳು ಮಾತ್ರ ಉಳಿದಿವೆ. ಸ್ಥಳೀಯರ ಮಾಹಿತಿಯಿಂದ ಇಲ್ಲಿ ಸುಮಾರು ನೂರಕ್ಕೂ ಹೆಚ್ಚು ಶಿಲಾ ಸಮಾಧಿಗಳಿದ್ದವು ಎಂಬುದು ಗಮನಕ್ಕೆ ಬರುತ್ತದೆ. ಇಲ್ಲಿ ಕಂಡುಬಂದಿರು ಸಮಾಧಿಗಳನ್ನು ಆಯತಾಕಾರದ ಶಿಲಾತೊಟ್ಟಿಯಂತೆ ಮಾಡಿ, ಅದರ ಮೇಲೆ ಒಂದು ಚಪ್ಪಡಿ ಕಲ್ಲನ್ನು ಮುಚ್ಚಿ ಸುತ್ತಲೂ ವೃತ್ತಾಕಾರದ ಎರಡು ಹಂತಗಳ ಶಿಲಾ ಆವರಣವಣ ನಿರ್ಮಾಣ ಮಾಡಲಾಗಿದೆ. ಈ ಸಮಾಧಿಗಳ ಪೂರ್ವಭಾಗದ ಕಲ್ಲಿನಲ್ಲಿ ವೃತ್ತಾಕಾರದ ಒಂದು ರಂದ್ರವನ್ನು ಬಿಟ್ಟಿರುವುದರಿಂದ ಇವುಗಳನ್ನು ಕಿಂಡಿಕೋಣೆ ಸಮಾಧಿಗಳು ಎನ್ನಬಹುದಾಗಿದೆ. ಗ್ರಾನೈಟ್ ಶಿಲೆಯನ್ನು ಬಳಸಿ ಸುಮಾರು ಏಳು ಅಡಿ ಉದ್ದ, ನಾಲ್ಕು ಅಡಿ ಅಗಲ ಹಾಗೂ ಐದು ಅಡಿ ಎತ್ತರವಾಗಿ ಇಲ್ಲಿನ ಶಿಲಾಸಮಾಧಿಗಳನ್ನು ನಿರ್ಮಿಸಲಾಗಿದೆ. ಕೆಲವು ಸಮಾಧಿಗಳು ಮಣ್ಣಿನಿಂದ ಮುಚ್ಚಿಹೋಗಿದ್ದು ಮೇಲಿನ ಮುಚ್ಚಳದ ಮಾತ್ರ ಕಾಣುತ್ತವೆ. ಭೂಮಿಯ ಮೇಲ್ಮಟ್ಟದಲ್ಲಿರುವ ಹನ್ನೆರಡು ಶಿಲಾಸಮಾಧಿಗಳಲ್ಲಿ ಆರು ಸಮಾಧಿಗಳನ್ನು ನಿಧಿಯ ಆಸೆಯಿಂದ ನಿಧಿಶೋಧಕರು ಅಗೆದು ನಾಶಮಾಡಿದ್ದಾರೆ. ರಾಮನಗರ ಜಿಲ್ಲೆಯ ಸಾಕಷ್ಟು ಕಡೆಗಳಲ್ಲಿ ಇಂತಹ ಲಕ್ಷಣಗಳಿರುವ ಸಮಾಧಿಗಳು ಕಂಡುಬಂದಿವೆ. ಮಾಗಡಿ ತಾಲೂಕಿನ ಸಾವನದುರ್ಗದ ಇಟ್ಟಿಗೆ ಬಯಲಿನಲ್ಲಿ ಬಿ.ಆರ್ ಬ್ರಾನ್‌ಫಿಲ್‌ರಲ್ಲಿ ಉತ್ಖನನ ಮಾಡಿ ಅಲ್ಲಿನ ಬೃಹತ್ ಶಿಲಾಸಮಾಧಿಗಳು ಕ್ರಿ.ಪೂ. ೧೨೦೦ರಿಂದ ಕ್ರಿ.ಪೂ. ೧೦೦ರ ಕಾಲಘಟ್ಟದವು ಎಂದು ಕ್ರಿ.ಶ. ೧೮೮೧ರಲ್ಲಿ ವರದಿ ನೀಡಿದ್ದಾರೆ. ಇದರ ಹಿನ್ನೆಲೆಯಲ್ಲಿ ಮೆಣಸಿಗನಹಳ್ಳಿ ಗವಿಗುಡ್ಡದಲ್ಲಿ ಕಂಡುಬರುವ ಶಿಲಾಸಮಾಧಿಗಳು ಕ್ರಿ.ಪೂ. ೧೨೦೦ ದಿಂದ ಕ್ರಿ.ಪೂ. ೧೦೦ರ ವರೆಗಿನವು ಎಂದು ಅಂದಾಜಿಸಬಹುದಾಗಿದೆ. ಸ್ಥಳೀಯರು ಇವುಗಳನ್ನು ಪಾಂಡವರ ಮನೆಗಳು ಎಂದು ಕರೆಯುತ್ತಾರೆ. ಇಲ್ಲಿ ಸುಮಾರು ಅರವತ್ತಕ್ಕೂ ಹೆಚ್ಚು ಶಿಲಾ ಸಮಾಧಿಗಳಿದ್ದವು ಎಂಬ ಮಾಹಿತಿಯನ್ನು ಸ್ಥಳೀಯರು ನೀಡುತ್ತಾರೆ. ಮೆಣಸಿಗನಹಳ್ಳಿ ಗ್ರಾಮದ ಪಕ್ಕದಲ್ಲಿರುವ ಭೂಹಳ್ಳ, ಉಜ್ಜನಹಳ್ಳಿ, ನಿಂಗರಾಜಪುರ ಪ್ರದೇಶಗಳಲ್ಲಿ ಕೆಲವು ಸಂಶೋಧಕರು ಬೃಹತ್ ಶಿಲಾಯುಗದ ಕುರುಹುಗಳನ್ನು ಗುರುತಿಸಿದ್ದಾರೆ.

ಮೆಣಸಿಗನಹಳ್ಳಿ ಪರಿಸರದಲ್ಲಿ ಗ್ರಾಮ ಸಂಸ್ಕೃತಿ ಆರಂಭವಾಗಿದೆ ಐತಿಹಾಸಿಕ ಸಂಗತಿಯನ್ನು ಕಾಣಬಹುದು. ಮೆಣಸಿಗನಹಳ್ಳಿ ಪಕ್ಕದ ಗ್ರಾಮವಾದ ವಿಠಲನಹಳ್ಳಿ ಚನ್ನಪಟ್ಟಣ ತಾಲೂಕಿನಲ್ಲಿ ಅತೀ ಪ್ರಾಚೀನ ಗ್ರಾಮವೆಂಬ ಸಾರ್ವತ್ರಿಕ ಅಭಿಮತವಿದೆ. ಇದಕ್ಕೆ ಪೂರಕವಾದ ವಿಠಲೇನಹಳ್ಳಿ ಗ್ರಾಮದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಅಲ್ಲಿ ಕೆಲವು ಪ್ರಾಚೀನ ವಸ್ತು ಅವಶೇಷಗಳ

ದೊರೆತಿರುವ ಸಂಗತಿ ತಿಳಿದುಬಂದಿದೆ. ಇಲ್ಲಿ ಮನೆಗಳನ್ನು ನಿರ್ಮಾಣ ಮಾಡುವ ಸಂದರ್ಭದಲ್ಲಿ ಭೂಮಿಯಲ್ಲಿ ಹುದುಗಿದ್ದ ರಾಗಿ ಮತ್ತು ಭತ್ತ ಜಳ್ಳು, ಕಪ್ಪುಕಲ್ಲಿನ ಮಣಿಗಳು, ನುಣುಪಾದ ಕಲ್ಲು, ಕೆಂಪು ಮತ್ತು ಬಣ್ಣದ ಮಡಿಕೆ ಚೂರುಗಳು ದೊರೆತಿವೆ ಎಂಬ ಮಾಹಿತಿಯನ್ನು ಸ್ಥಳೀಯರು ನೀಡಿದ್ದಾರೆ. ಅಲ್ಲದೆ ಬೃಹತ್ ಶಿಲಾಯುಗದ ಕುರುಹುಗಳು ಕೂಡ ವಿಠಲೇನಹಳ್ಳಿ ಗ್ರಾಮದಲ್ಲೂ ಕೂಡ ಮೆಣಸಿಗನಹಳ್ಳಿ ಬಳಿ ಕಂಡುಬಂದಿರುವ ಬೃಹತ್ ಶಿಲಾಯುಗ ಸಂಸ್ಕೃತಿ ಕುರುಹುಗಳು ಕಂಡುಬಂದಿವೆ. ಈ ಎರಡು ಗ್ರಾಮಗಳು ಸಮೀಪದಲ್ಲಿದ್ದು ಇಲ್ಲಿ ನೆಲೆಸಿದ್ದ ಬೃಹತ್ ಶಿಲಾಯುಗ ಸಂಸ್ಕೃತಿಯ ಜನರೇ ನಂತರದ ಕಾಲಘಟ್ಟದಲ್ಲಿ ವಿಠಲೇನಹಳ್ಳಿ ಗ್ರಾಮವಿರುವ ಪ್ರದೇಶದಲ್ಲಿ ಗ್ರಾಮ ಸಂಸ್ಕೃತಿಯ ಆರಂಭಕ್ಕೆ ನಾಂದಿ ಹಾಡಿದ್ದಾರೆ ಎಂದು ಊಹಿಸಬಹುದು.

ಮೆಣಸಿಗನಹಳ್ಳಿ ಬೆಟ್ಟದಗವಿಗುಡ್ಡದಲ್ಲಿ ವೀರಶೈವ ಪಂಥಕ್ಕೆಸೇರಿದ ಮಠವಿದೆ. ಇದು ಸುಮಾರು ಎಂಟು ತಲೆಮಾರುಗಳಿಗೂ ಹೆಚ್ಚಿನ ಗುರು ಪರಂಪರೆ ಹೊಂದಿದೆ ಎಂಬುದನ್ನು ಮಠದ ಪ್ರಸ್ತುತ ಮಠಾಧಿಪತಿಗಳಾದ ಅನ್ನದಾನಿ ಸ್ವಾಮಿಯವರು ಮಾಹಿತಿ ನೀಡಿರುತ್ತಾರೆ. ಈ ಮಠಕ್ಕೆ ರಾಮನಗರ ಜಿಲ್ಲೆಯ ನಾಲ್ಕು ತಾಲೂಕುಗಳಿಂದಲೂ ಬರುವ ನಿಷ್ಠಾವಂತ ಭಕ್ತರ ಕುಳಗಳು ಇರುವುದು ಕಾಣಬಹುದು. ಈ ಮಠದ ಗುರುಗಳ ಕುರಿತ ಐತಿಹ್ಯವೊಂದು ಪ್ರಸ್ತುತ ಸಂದರ್ಭದಲ್ಲಿ ಕೂಡ ಪ್ರಚಲಿತದಲ್ಲಿದೆ. ಅದನ್ನು ಸೂಕ್ಷ್ಮವಾಗಿ ಗಮನಿಸಿದರೆ ಗವಿಗುಡ್ಡದಲ್ಲಿ ನಾಥಪಂಥದ ಮುನಿಗಳು ನೆಲೆಸಿದ್ದರು ಎಂದು ಗ್ರಹಿಸಬಹುದಾಗಿದೆ. ಚನ್ನಪಟ್ಟಣ ತಾಲೂಕಿನ ಪ್ರಾಚೀನ ಕೆಲವು ಶೈವ ದೇವಾಲಯಗಳು ನಾಥಪಂಥದ ನೆಲೆಗಳಾಗಿದ್ದವು ಎಂಬುದು ಕೆಲವು ಸಂಶೋಧಕರು ಗುರುತಿಸಿದ್ದಾರೆ. ಆ ಹಿನ್ನೆಲೆಯಲ್ಲಿ ಪ್ರಾಗಿಹಾಸದ ನೆಲೆಯಾಗಿದ್ದ ಗವಿಗುಡ್ಡದಲ್ಲಿ ಗ್ರಾಮ ಸಂಸ್ಕೃತಿ ಕಾಲಕ್ಕೆ ಪ್ರಾಯಶಃ ಶೈವ ಪರಂಪರೆ ಪ್ರಭಾವ ಪಡೆದುಕೊಂಡಿದೆ ಎಂದು ಪರಿಭಾವಿಸಬಹುದು. ಹೀಗೆ ಪ್ರಾಗಿತಿಹಾಸ ಕಾಲದಿಂದಲೂ ಜನರ ವಾಸದ ನೆಲೆಯಾಗಿರಬಹುದಾದ ಮೆಣಸಿಗನಹಳ್ಳಿ ಗವಿಗುಡ್ಡೆಯ ಗುಹೆಗಳು ವಾಸದ ನೆಲೆಯಾಗಿದಂತೆ ಕಾಣುತ್ತದೆ. ಹೀಗಾಗಿ ಈ ಗುಡ್ಡದ ತಳ ಭಾಗದಲ್ಲಿ ನೂರಕ್ಕೂ ಹೆಚ್ಚು ಶಿಲಾಸಮಾಧಿಗಳು ನಿರ್ಮಾಣಗೊಂಡಿವೆ ಎನ್ನಬಹುದು. ದಟ್ಟವಾದ ಅರಣ್ಯ ಪ್ರದೇಶದಿಂದ ಕೂಡಿರುವ ಈ ಪರಿಸರದ ಬೆಟ್ಟ-ಗುಡ್ಡಗಳಲ್ಲಿ ಗುಹೆಗಳು, ಕಲ್ಲಾಸರೆಗಳು ನೀರಿನ ದೋಣೆಗಳು ಕಂಡುಬಂದಿರುವುದರಿಂದ ಪ್ರಾಹಿತಿಹಾಸದ ನೆಲೆಯಾಗಿತ್ತು ಎಂಬುದು ಗಮನಕ್ಕೆ ಬರುತ್ತದೆ. ಈ ಪರಿಸರದಲ್ಲಿ ಹೆಚ್ಚಿನ ಸಂಶೋಧನೆ ಕೈಗೊಂಡರೆ ಶಿಲಾಯುಗ ಸಂಸ್ಕೃತಿಯ ಮತ್ತಷ್ಟು ಕುರುಹುಗಳನ್ನು ಬೆಳಕಿಗೆ ತರಲು ಸಾಧ್ಯತೆಗಳಿವೆ.



## ಆಕರ ಗ್ರಂಥಗಳು


೧. ಅಂಬಳಿಕೆ ಹಿರಿಯಣ್ಣ, (ಸಂ.), ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೨೦೦೯.

೨) ಜಗದೀಶ.ಆರ್., ಮಾಗಡಿ ತಾಲೂಕಿನ ಹೊಸಪಾಳ್ಯದ ಬೃಹತ್ ಶಿಲಾಯುಗದ ನಿವೇಶನ, ಇತಿಹಾಸದರ್ಶನ ಸಂಪುಟ-೧೧, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ೧೯೯೬.

೩) ದೇವರಕೊಂಡಾರೆಡ್ಡಿ, ಬನ್ನೇರುಘಟ್ಟ, ಪ್ರಾಗೀತಿಹಾಸ ಕಾಲದಿಂದ ಇಂದಿನವರೆಗೆ, ಇತಿಹಾಸ ದರ್ಶನ ಸಂಪುಟ ೦೮, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ೧೯೯೩.

೪) ದೇವರಾಜಸ್ವಾಮಿ.ಜಿ.ಕೆ., ಮಂಕುಂದದ ತಿಮ್ಮಪ್ಪನ ಬೆಟ್ಟದ ಆದಿಮಾನವ ಕಾಲದ ಕಲ್ಲಾಸೆರೆಗಳು ಹಾಗೂ ಬಣ್ಣದ ಚಿತ್ರಗಳು, ಇತಿಹಾಸ ದರ್ಶನ ಸಂಪುಟ ೦೯, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ೨೦೧೧.

೫) ಮುತ್ತುರಾಜು, ಸೂಳೆಕಲ್ ಮಠದ ಗುಹಾ ಚಿತ್ರಗಳು, ಇತಿಹಾಸ ದರ್ಶನ ಸಂಪುಟ-೧೦, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ೧೯೯೫.

೬) ಮುನಿರಾಜಪ್ಪ, ಮಾಗಡಿ ಸೀಮೆ ಇತಿಹಾಸ ಮತ್ತು ಸಂಸ್ಕೃತಿ, ಸ್ಫೂರ್ತಿ ಪ್ರಕಾಶನ, ಮಾಗಡಿ, ೨೦೦೫.

೭) ರಾಮೇಗೌಡ.ಸು.ತ. (ಸಂ.), ಗಂಗಸಿರಿ (ಸ್ಮರಣ ಸಂಚಿಕೆ), ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್, ರಾಮನಗರ, ೨೦೧೩.

೮) ಶಿವತಾರಕ್.ಕೆ.ಬಿ., ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೯) ಸಾಸಲು. ಜೆ. ವಿಶ್ವನಾಥ್, ಬೃಹತ್ ಶಿಲಾಯುಗದ ಸಂಸ್ಕೃತಿಯ ಕೆಲವು ಹೊಸ ನೆಲೆಗಳು, ಇತಿಹಾಸದರ್ಶನ ಸಂಪುಟ ೧೮, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ೨೦೦೩.

# ೧೪

# ಕಲ್ಲೂರಿನ ಪ್ರಾಗೈತಿಹಾಸಿಕ ನೆಲೆಯ ಅನ್ವೇಷಣೆಯ ಪುನರಾವಲೋಕನ ಮತ್ತು ಹೊಸ ಶೋಧಗಳು

**ಹೆಚ್. ಚಂದ್ರಶೇಖರ***

**ಪೀಠಿಕೆ ಮತ್ತು ಪರಿಚಯ:** ರಾಯಚೂರು ಜಿಲ್ಲೆಯಲ್ಲಿ ಹಲವು ಪ್ರಾಗೈತಿಹಾಸಿಕ ನೆಲೆಗಳ ಶೋಧಗಳು ನಡೆದಿವೆ. ನೈಜಾಂ ಸರ್ಕಾರದ ಗಣಿ ಇಲಾಖೆಯ ನಿರ್ದೇಶಕ ಕ್ಯಾಪ್ಟನ್ ಮನ್‌ರಿಂದ ಆರಂಭಗೊಂಡ ಶೋಧ ಇಂದಿಗೂ ಮುಂದುವರೆದಿದೆ. ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಕಲ್ಲೂರ ಗ್ರಾಮವು ಜಿಲ್ಲಾ ಕೇಂದ್ರದಿಂದ ವಾಯುವ್ಯ ದಿಕ್ಕಿನಲ್ಲಿ ಸುಮಾರು ೨೦ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಪೂರ್ವ ದಿಕ್ಕಿನಲ್ಲಿ ಎಮ್ಮಿಗುಡ್ಡ ಇದೆ. ಈ ಗುಡ್ಡ ಮತ್ತು ಪರಿಸರ ಈ ಸಂಪ್ರಬಂಧದ ವಸ್ತು. ಈ ಗ್ರಮವು ೫೬ ಅಡಿ ಎತ್ತರ ಟೋಪೋಶೀಟ್‌ನಲ್ಲಿದ್ದು ರೇಖಾಂಶ ೭೭° ೧೪" ಅಕ್ಷಾಂಶ ೧೬° ೭'೩೦" ಹೊಂದಿದೆ.

ಭೂವಿಜ್ಞಾನ: ಈ ಪ್ರದೇಶವು ಆರ್ಕಿಯನ್ ಕಾಲದ ಕಣಶಿಲೆಯ ಗುಂಪಿಗೆ ಸೇರಿದೆ. ಎಮ್ಮಿಗುಡ್ಡವು ನೆಲಮಟ್ಟದಿಂದ ಸುಮಾರು ೧೫೦ ಮೀ. ಎತ್ತರವನ್ನು ಹೊಂದಿದೆ. ಈ ಗುಡ್ಡದ ಶಿಲೆಯು ರಾಪಿನೋ ಡೈಯೋರೈಟ ಶಿಲೆ (granodiroto). ಈ ಶಿಲೆಯು ಮೂಲತಃ ಕಪ್ಪು ಮತ್ತು ಬಿಳಿ ಖನಿಜಗಳುಳ್ಳ ಶಿಲೆ, ಆದರೆ ಕೋಟಿಗಟ್ಟಲೆ ವರ್ಷಗಳ ಕಾಲ ಮಳೆ–ಗಾಳಿ ಸುರಿದಿರುವುದರಿಂದ ಹೊರಮೈ ಕೊಂಚ ಕೆಂಪು ಬಣ್ಣದ (Pinkish) ಪೊರೆಯನ್ನು ಪಡೆದಿದೆ. ಒಂದು ಸಣ್ಣ ಕಲ್ಲನ್ನು ಹೊಡೆದರೆ ನಿಜವಾದ ಬಣ್ಣ ಕಾಣುತ್ತದೆ. ಆದರೆ ಈ ಗುಡ್ಡದ ಕಲ್ಲು ಬಂಡೆಗಳ ಮೇಲೆ ಕುಟ್ಟಿ ಗೀರು ಮಾಡಿದ ಚಿತ್ರಗಳು ಕೆಂಪು ಪೊರೆಯಿಂದಾಗಿ ಎದ್ದು ಕಾಣುತ್ತದೆ (Brliings).

**ಅನ್ವೇಷಣೆಯ ಪುನರಾವಲೋಕನ:** ಕ್ರಿ.ಶ. ೧೯೩೮–೪೯ರಲ್ಲಿ ಅಂದಿನ ನೈಜಾಂ ಸರ್ಕಾರದ ಪುರಾತತ್ವ ಇಲಾಖೆಯು ಇಲ್ಲಿ ಅನ್ವೇಷಣೆಯನ್ನು ಮಾಡಿ ವರದಿಯನ್ನು ಪ್ರಕಟಿಸಿದೆ. ಈ ವರದಿಯಲ್ಲಿ ಹೆಚ್ಚು ವಿವರವಾದ ವಿವರಣೆಗಳಾಗಲೀ, ಚರ್ಚೆಗಳಾಗಲೀ ಇಲ್ಲ. ಆದರೆ ತುಂಬಾ ಸ್ಫುಟವಾದ ಫೋಟಗೋಗಳಿವೆ. ಸಂಕ್ಷಿಪ್ತ ವರದಿ ಮತ್ತು ಫೋಟೋಗಳನ್ನಾಧರಿಸಿದ ವಿವರಣೆ ಪ್ರಮುಖವಾಗಿ ಇಲ್ಲಿ ನಡೆಸಲಾಗಿದೆ. ಉತ್ಖನನದ ವಿವರಗಳನ್ನು ಚರ್ಚಿಸಿರುತ್ತೇನೆ. ಉತ್ಖನನದಲ್ಲಿ ಸಿಕ್ಕ ಶಿಲಾ ಕೊಡಲಿಗಳಾಗಲೀ ಹಾಗೂ ಮಡಿಕೆ ಚೂರುಗಳಾಗಲೀ ಸದ್ಯ ಹ್ರೈದ್ರಾಬಾದಿನ ಪುರಾತತ್ವ ಸಂಗ್ರಹಾಲಯದಲ್ಲಿವೆ. ಇವುಗಳ ವಿವರಣೆ, ಇಂದಿನ ಕನ್ನಡ ವಿದ್ವಾಂಸರಿಗೆ ದೊರೆಯಲಿ ಎಂಬ ಉದ್ದೇಶವೇ, ಈ ಪುನರಾವಲೋಕನ.

**೧. ತಾಮ್ರದ ಖಡ್ಗಗಳು:** ಈ ಕಲ್ಲೂರಿನ ಗುಡ್ಡಗಳಲ್ಲಿ ತಾಮ್ರದ ಅಸ್ತಿತ್ವ ಬಹಳ ಹಿಂದಿನಿಂದಲೂ ಗೊತ್ತಿತ್ತು. ೧೯೮೦ರ ದಶಕದಲ್ಲಿ ರಾಜ್ಯದ ಗಣಿ ಮತ್ತು ಭೂವಿಜ್ಞಾನ ಇಲಾಖೆಯು ವಜ್ರ ಬೈರಿಗೆ ಯಂತ್ರದಿಂದ ಸುಮಾರು ೧೮೦ ಅಡಿಗಳಷ್ಟು ರಂಧ್ರಗಳನ್ನು ಕೊರೆದು ತಿರಳನ್ನು (core) ತೆಗೆದು ರಾಸಾಯನಿಕ ವಿಶ್ಲೇಷಣೆ ಮಾಡಿತು. ಆದರೆ ಇದು ಲಾಭದಾಯಕ ನಿಕ್ಷೇಪವಾಗಿಲ್ಲವೆಂದು ಅನ್ವೇಷಣೆಯನ್ನು ನಿಲ್ಲಿಸಿತು. ನೈಜಾಂ ಸರ್ಕಾರದ ಈ ಸಂಕ್ಷಿಪ್ತ ವರದಿಯಲ್ಲಿ ಮೂರು ಖಡ್ಗಗಳ ಚಿತ್ರವನ್ನು ಕೊಡಲಾಗಿದೆ. ಅದೂ ಅಲ್ಲದೆ ತಾಮ್ರದ ಉಪಕರಣಗಳು ಮತ್ತು ತಾಮ್ರದ ಅದುರಿನ (Copper Pyritas) ಚಿತ್ರಗಳನ್ನು ಕೊಡಲಾಗಿದೆ. ಇದರರ್ಥವೆಂದರೆ ಈ ಪ್ರದೇಶದಲ್ಲಿ ತಾಮ್ರ ಶಿಲಾಯುಗದ (Chaleolithi Period) ಮಾನವನು ತಾಮ್ರದ ಲೋಹವನ್ನು ಉತ್ಪಾದಿಸುತ್ತಿದ್ದನು. ಈ ಖಡ್ಗಗಳು ಉತ್ತರ ಪ್ರದೇಶದ ಓತ್ತಿಗಡದಲ್ಲಿ ಸಿಕ್ಕ ತಾಮ್ರದ ಖಡ್ಗವನ್ನು ಹೋಲುತ್ತಿರುವುದು ಗಮನಾರ್ಹ ಅಂಶ.

**೨. ಮಣ್ಣಿನ ಮಡಿಕೆಯ ಚೂರುಗಳು:** ಈ ಉತ್ಖನನದಲ್ಲಿ ಬೇರೆ ಬೇರೆ ಆಕಾರದ ಮಣ್ಣಿನ ಮಡಿಕೆಗಳು ಸಿಕ್ಕಿವೆ.

**೩. ಶಿಲಾಯುಧಗಳು:** ಸುಮಾರು ೧ ಇಂಚು ಉದ್ದ ಅರ್ದ ಇಂಚು ಅಗಲವಿರುವ ಶಿಲೆಯ ತಿರುಗಳುಗಳು (cores) ಮತ್ತು ಅಲಗಗಳು (Flakes) ಸಿಕ್ಕಿವೆ.

* 'ಸಂಗಮ', ಎಮ್‌ಐಜಿ–೭೭, ೩ನೇ ಕ್ರಾಸ್, ಕೆಹೆಚ್‌ಬಿ ಕಾಲೋನಿ, ಬಸವೇಶ್ವರ ನಗರ, ಬೆಂಗಳೂರು–೫೬೦೦೭೯ ಮೊ. ೯೪೪೮೪೮೦೩೭೮೬

**೪. ಶಿಲಾ ಕೊಡ್ಲಿಗಳು:** ಈ ಉತ್ಖನನದಲ್ಲಿ ಬೇರೆ ಬೇರೆ ಅಳತೆಯ ಶಿಲಾ ಕೊಡ್ಲಿಗಳು ಮತ್ತು ಇತರ ಶಿಲಾಯುಧಗಳು ಸಿಕ್ಕಿವೆ. ಇದರರ್ಥವೆಂದರೆ ಸೂಕ್ಷ್ಮ ಶಿಲಾಯುಗ (Mesolithic) ಕಾಲದ ಮಾನವನು ಬೇಟೆಯಾಡಲು ಈ ಆಯುಧಗಳನ್ನು ಉಪಯೋಗಿಸಿ ಪ್ರಾಣಿಗಳನ್ನು ಕೊಂದು ತಿನ್ನುತ್ತಿದ್ದನು (ಕಾಲ ಸುಮಾರು ಕ್ರಿ.ಪೂ. ೧೦೦೦೦–೫೦೦೦ ವರ್ಷಗಳು).

**೫. ಎಲುವಿನ ಮಣಿಗಳು ಮತ್ತು ಬಳೆಗಳು:** ಸದರಿ ಉತ್ಖನನದಲ್ಲಿ ಪ್ರಾಣಿಗಳ ಎಲುವಿನಿಂದ ತಯಾರಾದ ಮಣಿಗಳು ಮತ್ತು ಬಳೆಗಳು ಸಿಕ್ಕಿವೆ. ಈ ಎಲವುಗಳು ಯಾವ ಪ್ರಾಣಿಗಳ ಎಲವುಗಳೆಂದು ವರದಿಯಲ್ಲಿ ಬರೆದಿಲ್ಲ, ಆದರೆ ಮುಂದೆ ನನ್ನ ಅನ್ವೇಷಣೆಯ ಆಧಾರದ ಮೇಲೆ ವಿವರಿಸುತ್ತೇನೆ.

## ನನ್ನ ಅಧ್ಯಯನ ಮತ್ತು ಅನ್ವೇಷಣೆ

ಮೇಲ್ಕಾಣಿಸಿದ ವರದಿಯನ್ನು ಓದುವುದಕ್ಕಿಂತ ಪೂರ್ವದಲ್ಲಿ ಎಮ್ಮಿಗುಡ್ಡಕ್ಕೆ ಅನ್ವೇಷಣೇ ಮತ್ತು ಅಧ್ಯಯನಕ್ಕಾಗಿ ಕ್ಷೇತ್ರ ಕಾರ್ಯವನ್ನು (ಜನವರಿ ೧೫–೧೪, ೧೭ ಮತ್ತು ೧೮) ಕೈಗೊಂಡಿದ್ದೆ. ಆ ಊರಿನ ದೇವಾಲಯ, ಹಳೆಯ ಕೋಟೆಗಳನ್ನು ಸಂದರ್ಶಿಸಿದೆ. ಆದರೆ ಈ ಸಂಪ್ರಬಂಧದಲ್ಲಿ ಕೇವಲ ಎಮ್ಮಿಗುಡ್ಡಕ್ಕೆ ಸೀಮಿತಗೊಳಿಸುತ್ತದೆ.

ಇಲ್ಲಿಯ ಜನರು ಬಹಳ ದಶಕಗಳ ಕಾಲದಿಂದಲೂ ಈ ಗುಡ್ಡವನ್ನು ಎಮ್ಮಿಗುಡ್ಡವೆಂದು ಕರೆಯುತ್ತಾ ಬಂದಿದ್ದಾರೆ. ಇದಕ್ಕೆ ಕಾರಣವೆಂದರೆ ಈ ಗುಡ್ಡದ ಗುಂಡುಗಳ ಮೇಲೆ (Bounders) ಕುಟ್ಟಿ ಕೆತ್ತಲಾಗಿರುವ ಎಮ್ಮಿಯ ಚಿತ್ರಗಳು ಈ ಗೀರು ಚಿತ್ರಗಳನ್ನೆಲ್ಲಾ (Bruisings) ಅಧ್ಯಯನ ಮಾಡಿದರೂ ಇವುಗಳಲ್ಲಿ ಯಾವುದು ಕೋಣ ಮತ್ತು ಯಾವುದು ಎಮ್ಮಿ ಎಂದು ತಿಳಿದು ಬರುವುದಿಲ್ಲ. ಆದ್ದರಿಂದ ಈ ಸಂಪ್ರಬಂಧದಲ್ಲಿ ಎಮ್ಮಿ ಎಂಬ ಶಬ್ದವನ್ನು ಎರಡೂ ಬಗೆಯ ಪ್ರಾಣಿಗಳು ಎಂದು ಭಾವಿಸಬೇಕು. ಇಂಗ್ಲೀಷಿನ Bison ಎಂಬ ಶಬ್ದ ಎರಡೂ ಲಿಂಗಗಳನ್ನು ಸೂಚಿಸುತ್ತದೆ. ಆದರೆ ಬಬೈಸನ್ ಎಂಬ ಶಬ್ದವನ್ನು ಬಳಸುವುದಿಲ್ಲ. ಇದನ್ನು ಓದುಗರು ಗಮನಿಸಬೇಕು. ಇದುವರೆಗೆ ಪ್ರಕಟವಾದ ಕೃತಿಗಳಲ್ಲಿ (ಸುಂದರ ೧೯೯೪, ಹೈದ್ರಾಬಧಿನ ವರದಿ ೧೯೫೮–೧೯೫೯) ಕೇವಲ ಒಂದು ಬಂಡೆಯ ಮೇಲೆ ಕೆತ್ತಲಾಗಿರುವ ಗೀರು ಚಿತ್ರಗಳನ್ನು ತೋರಿಸಲಾಗಿದೆ. ಆದರೆ ನನ್ನ ಕ್ಷೇತ್ರ ಕಾರ್ಯದಲ್ಲಿ ಬೃಹದಾಕಾರದ ಗುಂಡುಗಳ ಮೇಲೆ ಹನ್ನೆರಡು ಎಮ್ಮಿಗಳನ್ನು, ಒಂದು ಮಾನವಾಕೃತಿಯನ್ನೂ ಬಾರೆನ್ನು ಎಂಬ ಪ್ರಾಣಿಯನ್ನು ಗುರ್ತಿಸಿದ್ದೇನೆ. ಟಾಕಿನ್ ಪ್ರಾಣಿ ಮತ್ತು ಮಾನವಾಕೃತಿಗಳು ಗಮನಾರ್ಹವಾದ ಹೊಸ ಶೋಧಗಳು.

**ಸಾಮಾನ್ಯ ವಿವರಣೆಗಳು:** ಈ ಗೀರು ಚಿತ್ರಗಳಲ್ಲಿ ಕಂಡು ಬರುವ ಎಮ್ಮಿಗಳ ಸಾಮಾನ್ಯ ಲಕ್ಷಣಗಳನ್ನು ವಿವರಿಸಿದರೆ ಸ್ಥಳಾವಕಾಶ ಉಳಿಯುತ್ತದೆ. ಇಲ್ಲಿಯ ಎಮ್ಮಿಗಳ ಪ್ರಮುಖ ಲಕ್ಷಣವೆಂದರೆ ಬಿಲ್ಲಿನಕಾರದ ದೊಡ್ಡ ಕೋಡುಗಳು. ನಾಲ್ಕು ಕಾಲುಗಳು ಮತ್ತು ಒಂದು ಬಾಲ. ಯಾವ ಎಮ್ಮಿಯು ಚಲಿಸುವಂತೆ ಕಾಣುವುದಿಲ್ಲ. ಆದರೆ, ಬೇರೆ ನೆಲೆಗಳಲ್ಲಿ ಎಮ್ಮಿಗಳನ್ನು ಚಲಿಸುವಂತೆ ಗೀರಲಾಗಿದೆ (ಚಂದ್ರಶೇಖರ ೨೦೧೫ ಪುಟ ೧೬, Chandrashekhar 210, pp 66-69, Chandrashekhar 2012, pp. 87-90). ಒಂದೆರಡು ಬಂಡೆಗಳ ಮೇಲೆ ಜೋಡು ಎಮ್ಮಿಗಳನ್ನು ಕೆತ್ತಲಾಗಿದೆ. ಒಂದು ಬಂಡೆಯ ಮೇಲೆ ಒಂದು ದೊಡ್ಡ ಎಮ್ಮಿಯ ಚಿತ್ರ ಇದೆ. ಅದಕ್ಕೆ ಹೊಂದಿಕೊಂಡಂತೆ ಒಂದು ಚಿಕ್ಕ ಎಮ್ಮಿ ಇದೆ. ಈ ಚಿತ್ರವು ತಾಯಿ ಎಮ್ಮೆ ಮತ್ತು ಅದರ ಮರಿ ಅನ್ನಿಸುತ್ತದೆ. ನಾನು ಬಂಡೀಪುರ ಅರಣ್ಯದಲ್ಲಿ ಇಂಥ ಕಾಡುಕೋಣಗಳ ಚಿತ್ರಗಳನ್ನು ತೆಗೆಯುವಾಗ, ತಾಯಿಯನ್ನು ಹೊಂದಿಕೊಂಡೇ ಅದರ ಮರಿ ಇರುವುದನ್ನು ನೋಡಿದ್ದೇನೆ. ಆದ್ದರಿಂದ ಈ ಊಹೆ ಸರಿ ಅನ್ನಿಸುತ್ತದೆ.

ನಾನು ಹೆಬ್ಬಂಡೆಯ ಮೇಲೆ ಕೆತ್ತಲಾಗಿರುವ ಜೋಡು ಎಮ್ಮೆಗಳ ಫೋಟೋವನ್ನು ಮತ್ತು ಅದರ ರೇಖಾಚಿತ್ರವನ್ನು ತೋರಿಸಿದ್ದೇನೆ. ಈ ಫೋಟೋಗಳು ಎಷ್ಟೇ ಸ್ಪಷ್ಟ ಛಾಯಾಚಿತ್ರವಾಗಿದ್ದರೂ ಮುದ್ರಣದಲ್ಲಿ ಸ್ಪಷ್ಟವಾಗಿರುವುದಿಲ್ಲ, ಕೊಂಚ ಮಸಕಾಗಿರುತ್ತದೆ. ಆದ್ದರಿಂದ ಮುಂದಿನ ರೇಖಾ ಚಿತ್ರಗಳನ್ನು ಪ್ರಸ್ತುತ ಮಾಡುತ್ತೇನೆ. ಇತ್ತೀಚೆಗೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಪತ್ರಿಕೆಗಳಲ್ಲಿ ಈ ವಿಧಾನವನನ್ನು ಅನುಸರಿಸಿಸಲಾಗುತ್ತದೆ. ಆಯಾ ಚಿತ್ರದ ಅಡಿಯಲ್ಲಿ ವಿವರಣೆಯನ್ನು ಕೊಟ್ಟಿರುವುದರಿಂದ ಲೇಖನದಲ್ಲಿ ವಿವರಿಸಬೇಕಾಗಿಲ್ಲ. ಮಾನವನೊಬ್ಬನು ಒಂದು ಎತ್ತರದ ಬಡಿಗೆಯನ್ನು ಎಡಗೈಯಲ್ಲಿ ಹಿಡಿದುಕೊಂಡು ಕಾಡೆಮ್ಮೆಯ ಮುಂದೆ ನಿಂತಿದ್ದಾನೆ. ಬಹುಶಃ ಈ ಅವಧಿಯಲ್ಲಿ ಎಮ್ಮೆಗಳನ್ನು ಪಳಗಿಸಲು ಮಾನವನು ಆರಂಭಿಸಿರಬಹುದು. ಚಿತ್ರಿಸಲಾಗಿರುವ ಪ್ರಾಣಿಯ ಗೀರು ಚಿತ್ರ ತುಂಬಾ ವಿಶೇಷ. ಬಹುಶಃ ಬೇರೆ ಎಲ್ಲಿಯೂ ವರದಿಯಾಗಿಲ್ಲ. ಹೈದ್ರಾಬಾದಿನ ವರದಿಯಲ್ಲಿಯೂ ಈ ಚಿತ್ರವಿಲ್ಲ ಮತ್ತು ವಿವರಣೆ ಇಲ್ಲ. ಇದೊಂದು ಹೊಸ ಶೋಧ. ಈ ಪ್ರಾಣಿಯು ಭೂತಾನದಲ್ಲಿ ಮಾತ್ರ ನೋಡಲು ಸಾಧ್ಯ. ಇದರ ಹೆಸರು ಟಾಕಿನ್ ಸುಧಾ ಪತ್ರಿಕೆಯಲ್ಲಿ ಇಂಥ ಛಾಯಾಚಿತ್ರ ನೋಡಿದ ನಂತರ ನಾನು ಈ ಗೀರು ಚಿತ್ರಕ್ಕೆ ಟಾಕಿನ್ ಪ್ರಾಣಿ ಎಂದು ಕರೆದಿದ್ದೇನೆ.



ಗ್ಯಾನೋಡೈಯರೈಟ ಶಿಲೆಯ ಹೊಸದಾಗಿ ತುಂಡರಿಸಿದ ನೋಟ.



ಕೆಂಪು ಪೊರೆಯನ್ನು ಹೊಂದಿರುವ ಗ್ಯಾನೋಡೈಯೋರೈಟ ಗುಂಡಿನ ಮೇಲೆ ಕೊರೆಯಲಾದ ಗೀರು ಚಿತ್ರಗಳು. ಜೋಡು ಕಾಡೆಮ್ಮೆಗಳು/ ಕಾಡು ಕೋಣಗಳು.

**ತಾಮ್ರದ ಲೋಹಗಾರಿಕೆ:** ತಾಮ್ರವು ಮಾನವನಿಗೆ ಅತ್ಯಂತ ಹಳೆಯ ಕಾಲದಿಂದಲೂ ಪರಿಚಯವಾದ ಲೋಹ, ಬಂಗಾರವೂ ಅಲ್ಲ, ಕಬ್ಬಿಣವೂ ಕಲ್ಲೂರಿನ ಎಮ್ಮೆಗುಡ್ಡದಲ್ಲಿ ತಾಮ್ರ ಅದಿರು ಇತ್ತು. ಆ ಅದಿರನ್ನು ಕ್ಯುಪ್ರೈಟ್ (Cuprite) ಎಂದು ಕರೆಯಲಾಗುತ್ತದೆ. ಇದರ ರಾಸಾಯನಿಕ ವಸ್ತು $cu_2O$. ಇಂಥ ಅದುರಿನ ಒಂದು ಉಂಡೆಯನ್ನು ಹೈದ್ರಾಬಾದಿನ




ಹಳೆಯ ಕಾಲದ (ತಾಮ್ರ ಶಿಲಾಯುಗದ) ತಾಮ್ರದ ಖಡ್ಗಗಳು ಹೈದ್ರಾಬಾದಿನ ಸಂಗ್ರಹಾಲಯದಲ್ಲಿಡಲಾಗಿದೆ. ದೊಡ್ಡ ಖಡ್ಗದ ಉದ್ದ ೩' ೨' ಇದೆ.







ತಾಮ್ರದ ಉಪಕರಣಗಳು ಮೇಲಿನ ಹಂತದಲ್ಲಿ, ತಾಮ್ರದ ಅದುರಿನ ಉಂಡೆ ಮಧ್ಯದ ಹಂತದಲ್ಲಿ, ಕೆಳಗಿನ ಹಂತದಲ್ಲಿ ಶಿಲಾ ಮತ್ತು ಟೆರ್ರಾಕೋಟ ವಸ್ತುಗಳು.





ಶಿಲೆಯ ತಿರಳು (Cores) ಮತ್ತು ಅಲಗಗಳು (Flakes).





ಶಿಲಾ ಕೊಡ್ಲಿಗಳು ಮತ್ತು ಶಿಲಾ ಉಪಕರಣಗಳು.





ರಂಧ್ರಯುತ ಮಡಿಕೆಯ ಚೂರುಗಳು ಕೆಳಹಂತದಲ್ಲಿ ಎಲುವಿನ ಬಳಿಗಳು ಮತ್ತು ಮಣಿಗಳು.



ಒಂದೇ ಹೆಬ್ಬಂಡೆಯ ಮೇಲೆ ಜೋಡು ಕಾಡೆಮ್ಮೆಗಳ ಗೀರು ಚಿತ್ರ.



ಒಂದೇ ಹೆಬ್ಬಂಡೆಯ ಮೇಲೆ ಇರುವ ಒಂಟಿ ಕಾಡೆಮ್ಮೆಯ ಗೀರು ಚಿತ್ರ.



ಒಂದು ಹೆಬ್ಬಂಡೆಯ ಮೇಲೆ ಒಂಟಿ ಕಾಡೆಮ್ಮೆಯ ಇನ್ನೊಂದು ಗೀರು ಚಿತ್ರ



ಇನ್ನೊಂದು ಒಂಟಿ ಕಾಡೆಮ್ಮೆಯ ಗೀರು ಚಿತ್ರ





ಇನ್ನೊಂದು ಹೆಬ್ಬಂಡೆಯ ಮೇಲೆ ಒಂದರ ಮೇಲೊಂದು ಕೊರೆಯಲಾದ ಎರಡು ಕಾಡೆಮ್ಮೆಯ ಗೀರು ಚಿತ್ರಗಳು.



ಎರಡು ಕಾಡೆಮ್ಮೆಯ ಚಿತ್ರಗಳು. ಬಹುಶಃ ಚಿಕ್ಕ ಚಿತ್ರ ಮರಿಕಾಡೆಮ್ಮೆಯು ತಾಯಿ ಕಾಡೆಮ್ಮೆಯ ಜೊತೆಯಲ್ಲಿ.



ಕಾಡೆಮ್ಮೆಯ ಎದುರಿನಲ್ಲಿ ಮಾನವನೊಬ್ಬನು ಬಡಿಗೆಯನ್ನು ಹಿಡಿದುಕೊಂಡು ನಿಂತಿದ್ದನೆ. ಕಾಡೆಮ್ಮೆಯನ್ನು ಪಳಗಿಸಲು ಆರಂಭಿಸಿರಬಹುದು.



ಎರಡು ಕಾಡೆಮ್ಮೆಯ ಚಿತ್ರಗಳು. ಬಹುಶಃ ದೊಡ್ಡ ಚಿತ್ರ ಕಾಡುಕೋಣದ ಚಿತ್ರ



ಇದೊಂದು ಹೊಸ ಶೋಧ. ಈ ಗೀರು ಚಿತ್ರದಲ್ಲಿ ಎರಡು ಟಾಕಿನ್ ಪ್ರಾಣಿಗಳ ಚಿತ್ರ, ಸಧ್ಯ ಭೂತಾನದಲ್ಲಿ ಮಾತ್ರ ಇದೆ.



ಸಧ್ಯ ಭೂತಾನದಲ್ಲಿರುವ ಟಾಕಿನ್ ಪ್ರಾಣಿ. ಈ ಪ್ರಾಣಿಯನ್ನು ಅಪಾಯದ ಅಂಚಿನಲ್ಲಿರುವ ಪ್ರಾಣಿ ಎಂದು ಘೋಷಿಸಲಾಗಿದೆ.

ಪುರಾತತ್ವ ಶಾಸ್ತ್ರಜ್ಞರು ಕಂಡು ಹಿಡಿದಿದ್ದರು. ಈ ಉಂಡೆಯನ್ನು ಹೈದ್ರಾಬಾದಿನ ಸಂಗ್ರಹಾಲಯದಲ್ಲಿಡಲಾಗಿದೆ. ಇಂಥ ಅದಿರನ್ನು ತಾಮ್ರ ಶಿಲಾಯುಗದಲ್ಲಿ (Chalco-litthic period) ಕಲ್ಲೂರು ಕಲ್ಲೂರು ಪ್ರದೇಶದಲ್ಲಿ ದಟ್ಟವಾದ ಕಾಡು ಇತ್ತು.ಅಲ್ಲಿಯ ಮರಗಳನ್ನು ಕಡಿದು ಚರಮರೆ ಕಲ್ಲಿನಿಂದ ಬೆಂಕಿಯನ್ನು ಉತ್ಪಾದಿಸಿ, ಶಾಖದಲ್ಲಿ ತಾಮ್ರದ ಅದಿರನ್ನು ಕರಗಿಸಿ ತಾಮ್ರದ ಧಾತುವನ್ನು ಮಾನವನು ಪಡೆದನು. ನಂತರ, ಮಾನವನು ತನಗೆ ಬೇಕಾದ ಖಡ್ಗಗಳನ್ನು ಇತರ ತಾಮ್ರದ ಉಪಕರಣಗಳನ್ನು ಎರಡಕ ಹೊಯ್ದು ಸಿದ್ಧಪಡಿಸಿದನು.

**ಶಿಲಾ ಕೊಡ್ಲಿಗಳು ಅಲಗಗಳು:** ಮಾನವನು ಆದಿ ಕಾಲದಿಂದಲೂ ಬೇಟೆಯಾಡಲು ಮತ್ತು ಮರಗಳನ್ನು ಕಡಿಯಲು ಕೊಡಲಿಗಳನ್ನು ಶಿಲೆಗಳಿಂದಲೇ ಉತ್ಪಾದಿಸಿದನು. ಕಲ್ಲೂರಿನಲ್ಲಿ ಶಿಲಾ ಕೊಡಲಿಗಾಗಿ ಸರಿಹೊಂದುವಂಥ ಶಿಲೆ ಇಲ್ಲ. ಆದರೆ ಆದಿಮಾನವನು ಸಮೀಪದ ಪ್ರದೇಶದಿಂದ ಒಡ್ಡು ಶಿಲೆ (Dykrrook) ಯನ್ನು ಹುಡುಕಿ ಅಂಥ ಶಿಲೆಯಿಂದ ಕೊಡಲಿಗಳನ್ನು ತಯಾರಿಸಿದನು. ಈ ಶಿಲಾಕೊಡಲಿಗಳು ಮತ್ತು ತತ್ಸಂಬಂಧಿತ ಉಪಕರಣಗಳನ್ನು ಹೈದ್ರಾಬಾದಿನ ಸಂಗ್ರಹಾಲಯದಲ್ಲಿಡಲಾಗಿದೆ ಇಂಥ ಕೊಡಲಿಗಳ್ನು ತಯಾರಿಸುವಾಗ ಸಿಗುವ ತಿರಳನ್ನು ಮತ್ತು ಅಲಗನ್ನು (Corss and flrkes) ಉತ್ಪಾದಿಸಲಾಗಿತ್ತು. ಈ ಉಪಕರಣಗಳನ್ನು ಮರ ಕಡಿಯಲು ಕಾಡೆಮ್ಮೆಗಳ ಬೇಟೆಯಾಡಲು ಉಪಯೋಗಿಸಲಾಗುತ್ತಿತ್ತು.

**ಎಲುವಿನ ಬಳಿಗಳು ಮತ್ತು ಮಣಿಗಳು:** ಕೆಳ ಹಂತದಲ್ಲಿ ಎಲುವಿನ (Bones) ಬಳಿಗಳನ್ನು ಮತ್ತು ಮಣಿಗಳನ್ನು ತೋರಿಸಲಾಗಿದೆ. ಸಾಮಾನ್ಯವಾಗಿ ಆನೆಯ ದಂತಗಳಿಂದ ಇತ್ತೀಚಿನವರೆಗೂ ತಯಾರಿಸಲಾಗುತ್ತಿತ್ತು. ಆದರೆ ಕಲ್ಲೂರಿನ ಎಮ್ಮಿಗುಡ್ಡದಲ್ಲಿ ಕೇವಲ ಕಾಡೆಮ್ಮಿಗಳ/ಕಾಡು ಕೋಣಗಳ ಗೀರು ಚಿತ್ರಗಳನ್ನು ನೋಡುವುದರಿಂದ ತಾಮ್ರ ಶಿಲಾಯುಗದ ಮಾನವನು ತಾನು ಬೇಟೆಯಾಡಿದ ಕಾಡೆಮ್ಮಿಗಳ ಎಲುವುಗಳಿಂದ ಇಂಥ ಬಳಿಗಳನ್ನು ಮತ್ತು ಮಣಿಗಳನ್ನು ತಯಾರಿಸಿ ಅವುಗಳನ್ನು ಧರಿಸುತ್ತಿದ್ದನು ಎಂಬುದು ಖಚಿತ. ಯಾಕೆಂದರೆ ಇಲ್ಲಿ ಒಂದಾದರೂ ಆನೆಯ ಗೀರು ಚಿತ್ರವಿಲ್ಲ.

ಮಣ್ಣಿನ ಮಡಿಕೆಗಳನ್ನು ಸ್ಥಳೀಯವಾಗಿ ಸಿಗುತ್ತಿದ್ದ (ಈಗಲೂ ಸಿಗುತ್ತದೆ) ಜೇಡುಮಣ್ಣಿನಿಂದ (ಬ್ಲ್ಯಾಕ್ ಕಾಟನ್ ಮಣ್ಣು) ತಯಾರಿಸಿ ಮರದಿಂದ ಉತ್ಪಾದಿಸಿ ಬೆಂಕಿಯಲ್ಲಿ ಸುಟ್ಟು ಗಟ್ಟಿಗೊಳಿಸಿದ ಉಪಯೋಗಿಸುತ್ತಿದ್ದನು ಎಂಬುದು ಖಚಿತ.

**ಚರ್ಚೆಗಳು ಮತ್ತು ತೀರ್ಮಾನಗಳು:** ಮೇಲೆ ವಿವರಿಸಲಾದ ಗೀರು ಚಿತ್ರಗಳಲ್ಲಿ ಎಲ್ಲವೂ ಕಾಡೆಮ್ಮೆಗಳಿರುವುದರಿಂದ ಕಲ್ಲೂರಿನ ಪ್ರದೇಶದಲ್ಲಿ ಆಗ (ತಾಮ್ರ ಶಿಲಾಯುಗದಲ್ಲಿ) ಇಲ್ಲಿ ಸಮೃದ್ಧವಾದ ಕಾಡು ಇತ್ತು. ದೊಡ್ಡ ದೊಡ್ಡ ಮರಗಳು ಇದ್ದವು ಎಂಬುದು ಖಚಿತ. ಇಂಥ ಅರಣ್ಯ, ಇಂದಿನ ಬಂಡೀಪುರ ಸಂರಕ್ಷಿತ ಅರಣ್ಯದಂತೆ ಇತ್ತು. ಅಂದರೆ ಆಗ ಸುಮಾರು ವಾರ್ಷಿಕ ೩೦೦೦ ಮಿ.ಮೀ. ಮಳೆ ಬರುತ್ತಿತ್ತು ಎಂಬುದು ಖಚಿತ. ಈಗ ಕಲ್ಲೂರು ಪ್ರದೇಶದಲ್ಲಿ ವಾರ್ಷಿಕ ೫೦೦-೫೫೦ ಮಿ.ಮೀ. ಮಳೆ ಬೀಳುತ್ತದೆ. ಇದು ವಾತಾವರಣದ ಬದಲಾವಣೆಯ (Change of Climate) ಗುರ್ತು. ಆಗ ಅಂತರ್ಜಲವೂ ಸಮೃದ್ಧಿಯಾಗಿತ್ತು. ಈಗ ಅಂತರ್ಜಲ ತೀರ ಆಳಕ್ಕೆ ಇಳಿದು ಹೋಗಿದೆ. ಆದರೆ ಕಳೆದ ಸುಮಾರು ೧೦-೧೫ ವರ್ಷಗಳ ಅವಧಿಯಲ್ಲಿ ತುಂಗಾಭದ್ರ ಎಡದಂಡೆಯ ಕಾಲುವೆಯಿಂದ ನೀರಾವರಿಯಾಗುತ್ತಲಿದೆ. ಆದರೆ ಭತ್ತ ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಿರುವುದರಿಂದ ಜೌಗು ಹರಡುತ್ತಲಿದೆ (Ealiminty).

ಆ ಕಾಲದ ಮಾನವನು ತೀರ ಎತ್ತರದ ಬಂಡೆಯ ಮೇಲೆ ಗೀರು ಚಿತ್ರಗಳನ್ನು ಕೊರೆಯಲು ಮರದ ದಿಮ್ಮಿಗಳನ್ನು ಒಂದರ ಮೇಲೊಂದು ಜೋಡಿಸಿ ಚಿತ್ರಗಳನ್ನು ಗೀರಿದನು ಅಥವಾ ಕುಟ್ಟಿದನು ಎಂಬುದನ್ನು ಊಹಿಸಬೇಕಾಗುತ್ತದೆ.

ತಾಮ್ರದ ಅದಿರನ್ನು ಕುಲುಮೆಗಳಲ್ಲಿಟ್ಟು ಮರಗಳ ಇದ್ದಿಲನ್ನು ತಯಾರಿಸಿ ಅಥವಾ ನೇರವಾಗಿ ಒಣಗಿದ ಮರಗಳನ್ನು ಉಪಯೋಗಿಸಿ ತಾಮ್ರದ ಅದಿರನ್ನು ಕರಗಿಸುತ್ತಿದ್ದನು. ಹಾಗೆ ಲಭ್ಯವಾದ ತಾಮ್ರದಿಂದ ತನಗೆ ಬೇಕಾದ ಕತ್ತಿಗಳನ್ನು ಅಥವಾ ಇತರ ಉಪಕರಣಗಳನ್ನು ತಾಮ್ರ ಶಿಲಾಯುಗದ ಮಾನವನೂ ಸಿದ್ಧಪಡಿಸಿಕೊಳ್ಳುತ್ತಿದ್ದನು. ಈ ದೃಷ್ಟಿಯಲ್ಲಿ ಅವನಿಗೆ ಲೋಹಶಾಸ್ತ್ರದ ಅರಿವು ಇತ್ತು ಎಂಬುದು ಖಚಿತ.

[ನನ್ನ ಆತ್ಮೀಯ ಸ್ನೇಹಿತರಾದ ಶ್ರೀ ವಿರೂಪಾಕ್ಷರೆಡ್ಡಿ ಪಟೇಲರು (ಐಎಎಸ್ ನಿವೃತ್ತಿ) ನನಗೆ ಕ್ಷೇತ್ರ ಕಾರ್ಯದಲ್ಲಿ ಬಹು ರೀತಿಯಲ್ಲಿ ನೆರವಾಗಿದ್ದಾರೆ. ಇವರು ಕಲ್ಲೂರಿನವರೇ ಆಗಿರುವುದರಿಂದ ಅಧ್ಯಯನದ ಬಗ್ಗೆ ತುಂಬಾ ಕಾಳಜಿ ವಹಿಸಿದ್ದಾರೆ. ಅವರಿಗೆ ನಾನು ಹೃತ್ಪೂರ್ವಕ ಅಭಿನಂದನೆಗಳನ್ನು ಅರ್ಪಿಸುತ್ತೇನೆ. ಎಮ್ಮಿಗುಡ್ಡವನ್ನು ಹತ್ತಿ ಇಳಿಯಲು ನನಗೆ ನೆರವಾದ ವಿಕ್ರಮ ಪಟೇಲರು (ವಿರೂಪಾಕ್ಷ ರೆಡ್ಡಿಯವರ ತಮ್ಮನ ಮಗ) ಕೇವಲ ೪೦ರ ವಯಸ್ಸಿನಲ್ಲಿ ದಿವಂಗತರಾದರು. ಈ ಸಂಪ್ರಬಂಧವನ್ನು ಅವರ ಸ್ಮೃತಿಗೆ ಅರ್ಪಿಸುತ್ತೇನೆ. ನನ್ನ ಚಿತ್ರಗಳನ್ನು ಪಿಪಿಟಿಯಾಗಿಸಿದ ಡಾ. ಪ್ರಭುರಾಜ ಅವರಿಗೆ ನಾನು ಕೃತಜ್ಞ, ಹೈದ್ರಾಬಾದಿನಲ್ಲಿ ಕರ್ನಾಟಕ ಸಾಬೂನು ಕಾರ್ಖಾನೆಯ ಮಾರಾಟ ವಿಭಾಗದ ಮ್ಯಾನೇಜರ್ ಶ್ರೀ ಶಿವಕುಮಾರ ಶೆಟ್ಟಿಯವರಿಗೆ ಕೃತಜ್ಞತೆಗಳು.]



## ಆಕರ ಗ್ರಂಥಗಳು


೧. Directorate of Dept. of Archaeologys Musuems Report to the year 1938-39.

೨. ಸುಂದರ ಅ., (೧೯೯೪), ಕರ್ನಾಟಕದ ಪ್ರಾಗೈತಿಹಾಸ ಕಾಲದ ಕಲೆ. ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩. ಚಂದ್ರಶೇಖರ ಹೆಚ್., (೨೦೧೫), ಭೂವಿಜ್ಞಾನಿಯ ಕಣ್ಣಲ್ಲಿ ಇತಿಹಾಸ, ಪು. ೧–೯. ದೇವದುರ್ಗ ತಾಲ್ಲೂಕಿನ ಎರಡು ಪ್ರಾಗೈತಿಹಾಸ ನೆಲೆಗಳು, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೪. Chandrashekhr H., (2010) A note on tow protolintoric sites of Devedurga Taluk, District Raichur, Man and Environment, I.S.P.Q.S. Pune.

೫. Chandrashekhar H., (2012), Observations on Rock Brubings of Watgad in Karnataka, Purakala Agra.

೬ ಸುಧಾ (೨೦೧೭), ಭೂತಾನದ ಕಾಡು ಮತ್ತು ಪ್ರಾಣಿಗಳು, ಸುಧಾ, ಜುಲೈ ೨೭, ಬೆಂಗಳೂರು.

೭. ರಾಯಚೂರು ಜಿಲ್ಲೆಯ ಕಲ್ಲೂರಿನ ಪ್ರಾಗೈತಿಹಾಸಿಕ ನೆಲೆಯ ಅನ್ವೇಷಣೆಯ ಪುನರಾವಲೋಕನ ಮತ್ತು ಹೊಸ ಶೋಧಗಳು.

# ಮಲಿಯಾಬಾದ್ ಪರಿಸರದ ಹೊಸ ಶಾಸನಗಳು

**ಚನ್ನಬಸಪ್ಪ ಮಲ್ಕಂದಿನ್ನಿ***

ರಾಯಚೂರು ಜಿಲ್ಲೆ ಹಾಗೂ ರಾಯಚೂರು ತಾಲೂಕಿನ ಮಲಿಯಾಬಾದ್, ಯರಗೇರ, ಗುಂಜಳ್ಳಿ ರಾಯಚೂರು, ಎಲೆಬಿಚ್ಚಾಲಿ ಎಂಬ ಐದು ಸ್ಥಳಗಳಲ್ಲಿ ಒಟ್ಟು ಹದಿನಾರು ಶಾಸನಗಳು ಪತ್ತೆಯಾಗಿವೆ. ಈ ಶಾಸನಗಳು ಕ್ರಿ.ಶ. ೯ನೇ ಶತಮಾನದಿಂದ ಕ್ರಿ.ಶ. ೨೦ನೇ ಶತಮಾನದ ಕಾಲಾವಧಿಯವಾಗಿವೆ. ಇವು ದತ್ತಿ ನೀಡಿದ ಶಾಸನಗಳಾಗಿದ್ದು, ಇವುಗಳಲ್ಲಿ ಹನ್ನೆರಡು ಶೈವಧರ್ಮದ ಶಾಸನಗಳು, ಒಂದು ವೀರಗಲ್ಲು ಶಾಸನ, ಮೂರು ಜೈನ ಧರ್ಮಕ್ಕೆ ಸಂಬಂಧಿಸಿದ ಶಾಸನಗಳಾಗಿವೆ. ಈ ಶಾಸನಗಳಲ್ಲಿ ಒಂದು ಶಾಸನವು ನಾಗರಲಿಪಿ, ಸಂಸ್ಕೃತ ಭಾಷೆಯಲ್ಲಿದ್ದರೆ, ಇನ್ನೊಂದು ಶಾಸನವು ಕನ್ನಡ ಲಿಪಿ, ತೆಲುಗು ಕನ್ನಡ ಭಾಷೆಯಲ್ಲಿದೆ. ಉಳಿದ ಹದಿನಾಲ್ಕು ಶಾಸನಗಳು ಕನ್ನಡ ಭಾಷೆ, ಕನ್ನಡ ಲಿಪಿಯಲ್ಲಿರುವ ಶಾಸನಗಳಾಗಿವೆ. ಈ ಶಾಸನಗಳ ಮುಖಾಂತರ ಮಲಿಯಾಬಾದ್ ಪ್ರದೇಶವು ಪ್ರಾಚೀನ ಮತ್ತು ಮಧ್ಯಯುಗೀನ ಕಾಲಗಳಲ್ಲಿ ಎಡೆದೊರೆ-೨೦೦೦ ನಾಡಿನ ಮುದುಗುಂದೂರು-೩೦೦ರ ವಿಭಾಗಕ್ಕೆ ಸೇರ್ಪಡೆಯಾಗಿತ್ತು. ಇದು ನಂತರದ ದಿನಗಳಲ್ಲಿ ರಾಯಚೂರು ಸೀಮೆಗೆ ಸೇರಿತ್ತೆಂದು ಈ ಶಾಸನಗಳಿಂದ ತಿಳಿದುಬರುತ್ತದೆ.

### ಎಡೆದೊರೆ ಇರ್ಚಾಸಿರ

ಮಲಿಯಾಬಾದ್ ಗ್ರಾಮದ ಚೌಡಮ್ಮ ದೇವಾಲಯದ ಹತ್ತಿರ ದೊಡ್ಡ ಗುಂಡಿಗೆ (ಪೂರ್ವ) ಇರುವ ಕ್ರಿ.ಶ. ೯-೧೦ನೇ ಶತಮಾನದ ಶಾಸನದಲ್ಲಿ ರಾಷ್ಟ್ರಕೂಟ ಅರಸ ಅಕಾಲವರ್ಷ (ಎರಡನೇ ಕೃಷ್ಣ ಕ್ರಿ.ಶ. ೮೭೮-೯೧೪)ನ ಶಾಸನದಲ್ಲಿ ಎಡೆದೊರೆ ನಾಡಿನ ಉಲ್ಲೇಖವಿದೆ. ಹಾಗೆಯೇ ಇದೇ ಗ್ರಾಮದ ಚೌಡಮ್ಮ ದೇವಾಲಯದ ಗುಂಡಿನ ಇನ್ನೊಂದುಬದಿ (ಉತ್ತರ)ಯಲ್ಲಿರುವ ಕ್ರಿ.ಶ. ೧೦ನೇ ಶತಮಾನದ ಶಾಸನದಲ್ಲಿ ರಾಷ್ಟ್ರಕೂಟ ಅರಸ ೩ನೇ ಅಮೋಘವರ್ಷ (ಕ್ರಿ.ಶ. ೯೩೫-೯೩೯)ನ ಶಾಸನದಲ್ಲಿ ಎಡೆದೊರೆ ಇರ್ಚಾಸಿರದ ಉಲ್ಲೇಖಗಳಿವೆ.

### ಮುದುಗುಂದೂರು-೩೦೦

ಮಲಿಯಾಬಾದ್ ಗ್ರಾಮದ ಕ್ರಿ.ಶ. ೯-೧೦ನೇ ಶತಮಾನದ ಶಾಸನದಲ್ಲಿ ರಾಷ್ಟ್ರಕೂಟ ಅರಸ ಅಕಾಲವರ್ಷನೊಂದಿಗೆ, ಎಡೆದೊರೆ ನಾಡು ಮತ್ತು ಮುದುಗುಂದೂರು ಕಂಮಟದ ಉಲ್ಲೇಖಗಳಿವೆ. ಹಾಗೆಯೇ ಯರಗೇರ ಗ್ರಾಮದ ಕ್ರಿ.ಶ. ೧೧೩೦ರ ಶಾಸನದಲ್ಲಿ ಮುದ್ಗ-೩೦೦ರ ಪ್ರಸ್ತಾಪವಿದೆ. ಈ ಮೇಲಿನ ಉಲ್ಲೇಖಗಳಲ್ಲದೆ ಈಗಾಗಲೇ ಪ್ರಕಟವಾದ ಅತ್ತನೂರು, ಗಬ್ಬೂರು, ಇಡಪನೂರು, ಹಿರೇರಾಯಕುಂಪಿ, ಕಲ್ಲೂರು, ಕಾಡ್ಲೂರುಗಳಲ್ಲಿನ ಶಾಸನಗಳಲ್ಲಿ ಮುದುಗುಂದೂರು-೩೦೦ರ ಬಗ್ಗೆ ಪ್ರಸ್ತಾಪಗಳಿವೆ. ಆದುದರಿಂದ ಈ ಗ್ರಾಮವು ಗುಂದ (ಬೆಟ್ಟ-ಗುಡ್ಡ) ಪ್ರದೇಶದಲ್ಲಿರುವ ಸ್ಥಳವಾಗಿದೆ. ಮುದಗುಂದ > ಮುದಗುದೂರು > ಮುದಗುಂದೂರು ಆಗಿದೆ. ಇದು ನಂತರದ ದಿನಗಳಲ್ಲಿ ಮಲಯಾಬಾದ್ > ಮಲಿಯಾಬಾದ್ ಬದಲಾಗಿದೆ. ಇಲ್ಲಿಯವರೆಗೆ ಮುದಗುಂದೂರು (ಮುದ್ಗ-೩೦೦) ಯಾವುದೆಂದು ಗುರುತಿಸುವುದಕ್ಕೆ ಸಾಧ್ಯವಾಗಿದಿಲ್ಲ. ಈ ಲೇಖನದ ಮೂಲಕ ಮುದುಗುಂದೂರು ಪ್ರಸ್ತುತ



ಮಲಿಯಾಬಾದ್ ಶಾಸನ ೨

* ಇತಿಹಾಸ ಸಹಾಯಕ ಪ್ರಾಧ್ಯಾಪಕರು, ದೇವನಾಂಪ್ರಿಯ ಅಶೋಕ ಸ.ಪ್ರ.ದರ್ಜೆ ಕಾಲೇಜು, ರಾಯಚೂರು ಜಿಲ್ಲೆ-೫೮೪೧೦೨, ಮೊ. ೯೫೯೧೯೮೭೯೧೮



ಗುಂಜಳ್ಳಿ ಶಾಸನ ೨



ಗುಂಜಳ್ಳಿ ಶಾಸನ ೩



ಯರಗೇರ ಶಾಸನ ೧



ರಾಯಚೂರು ಶಾಸನ ೩



ರಾಯಚೂರು ಶಾಸನ ೪

ಮಲಿಯಾಬಾದ್ ಎಂದು ಹೇಳುವುದರೊಂದಿಗೆ ಪುರಾತನ ಕಾಲದಲ್ಲಿ ಮುದುಗುಂದೂರು ಎಂಬ ಹೆಸರಿನಿಂದ ಕರೆಸಿಕೊಂಡಿತ್ತು.

## ೧. ಮಲಿಯಾಬಾದ್ ಗ್ರಾಮದ ಚಿಕ್ಕ ನಾರಗಿದ್ದ ಕೆರೆಯ ತೂಬಿನ ಹತ್ತಿರ ಗುಂಡಿಗೆ ಇರುವ ಶಾಸನ

೧. ಸ್ವಸ್ತಿ ಶ್ರೀ ಚಟ್ಟೆರಸರ ಬಿಟ್ಟಗಳೆ ಬಿಟ್ಟಸಿದ ನಿದ್ರಮ್ಮವ

೨. ಕಿದಿಶ . . ದೊಳ . . . ಶದ್ರಮ್ಮ . . ಕೊಟ್ಟ . ಕೆವಾಪರ

**ಸಾರಾಂಶ:** ಲಿಪಿಯ ದೃಷ್ಟಿಯಿಂದ ಇದು ಕ್ರಿ.ಶ. ೯ನೇ ಶತಮಾನದ ಲಕ್ಷಣದಲ್ಲಿದೆ. ಇದರಲ್ಲಿ ಚಟ್ಟಿ ಯರಸನು ದತ್ತಿ ನೀಡಿದ ಉಲ್ಲೇಖವಿದೆ.

## ೨. ಅದೇ ಗ್ರಾಮದ ಬೋಡೆಯ್ಯನ ಹೊಲದ ಹಾಸುಬಂಡೆಗಲ್ಲಿಗೆ ಇರುವ ಶಾಸನ

೧. ಶ್ರೀ ಅಯ್ಯಣದೇವನ ಶ್ರೀಮನ್ಮಹಾಮಂಡಳೇಶ್ವರ . ವರ್ಗ್ಗ ಕೊಟ್ಟ

೨. . ೦ ಬೂ ಚಟ್ಟಪ್ಪದೇವರಿಗೆ . . . ಮೂಡ ಹೊಲ ನಾಯಕರ ಶ್ರೀನೊಳಂಬೇಶ್ವರಗೆ ಕೆಯ್

ಮತ್ತರು ೩

**ಸಾರಾಂಶ:** ಇದು ಅಯ್ಯಣದೇವ ಎಂಬುವವನಿಗೆ ಸೇರಿದ ಶಾಸನವಾಗಿದೆ. ಇದರಲ್ಲಿ ಚಟ್ಟಪ್ಪದೇವರೆಂಬಾತ ಗ್ರಾಮದ ಪೂರ್ವದಿಕ್ಕಿನಲ್ಲಿ ಹೊಲವನ್ನು ನೊಳಂಬೇಶ್ವರ ದೇವರಿಗೆ ದತ್ತಿ ನೀಡಿದ ವಿಷಯವಿದೆ.

**೩. ಅದೇ ಗ್ರಾಮದ ಬೆಟ್ಟದ ರಾಮಲಿಂಗೇಶ್ವರ ದೇವಾಲಯದ ಗವಿಯ ಬಂಡೆಗಲ್ಲಿಗೆ ಇರುವ ಶಾಸನ**

೧. ಸಿದ್ದಂ ಸ್ವಸ್ತಿ ಶ್ರೀ ಕೃತಿಯಭ

೨. ಕಲಗುಣಗೃಹಿ . . . . .

**ಸಾರಾಂಶ:** ತೃಟಿತ, ಕಣಶಿಲೆ ಬಂಡೆಯಲ್ಲಿ ರಚಿತಗೊಂಡಿದ್ದು, ಸಂಸ್ಕೃತ ಭಾಷೆ ನಾಗರಿ ಲಿಪಿಯಲ್ಲಿರುವ ಶಾಸನವಾಗಿದೆ. ಇದು ಕ್ರಿ.ಶ. ೯ನೇ ಶತಮಾನಕ್ಕೆ ಸೇರುತ್ತದೆ. ಇದರಲ್ಲಿ ಕೆಲವೇ ಅಕ್ಷರಗಳು ಉಳಿದುಕೊಂಡಿರುವುದರಿಂದ ಹೆಚ್ಚಿನ ಮಾಹಿತಿ ದೊರಕುವುದಿಲ್ಲ.

**೪. ಅದೇ ಗ್ರಾಮದ ಚೌಡಮ್ಮ ದೇವಾಲಯದ ಹತ್ತಿರದ ದೊಡ್ಡ ಗುಂಡಿಗೆ (ಪೂರ್ವ) ಇರುವ ಶಾಸನ**

೧. ಸ್ವಸ್ತಿ ನಮಸ್ಯದ ಪಞ್ಚಮಹಾಶಬ್ದ ಮಹಾಸಾಮನ್ತ ಪೃಥಿವಿವಲ್ಲಭ ಮಹಾ

೨. ರಾಜಾಧಿರಾಜ ಪರಮೇಶ್ವರ ಭಟ್ಟಾರಕ ಶ್ರೀ . . . . . . . . ನವನ್ದ್ಯಕೋಪಪ್ರಿಥು

೩. ವೀರಾಜ್ಯಂಗೆ . . ಲ್ಲ . ಯ್ಯ ಎಡೆದೊರೆ ನಾಡಾಳುತ್ತಮಿರೆ ಮುದುಗುನ್ದೂರಾ ಕಂಮ್ಮಟ . ದು
ವಿದಾನ .

೪. . ವಿದ . ರವ . ಚಳ . ಅಕಾಳವರಿಷಕಾ . ಒ ರಪದ . ಳ .

೫. . . ಕ . . ಟ . . . . ತಿ . . . . . . ರ . . . . . ವರತ್ರ . . . . .

೬. ಅ . . . . ಲಗಿರಿವುದು . . . . . . ಅ . . . . . . . . . .

೭. ಅವಗ್ಗೆ . . ಟ್ಟಣ . ಪೊರಗು ಇಸ್ತಿತಿಯಾನ ಮನದೊಬರ . . . .

೮. ಸಿಯನಮಿಕದೊಕ . ಭಟ್ಟಾರ ಕಮದರಿ . . . ರವನಮಿ . .

೯. . ದ್ರಮ್ಯತಪಾ . . . . . . .

೧೦. ಇತ . ಕಾ . . . . . .

೧೧. . ಕಾನೂ . ಡ ಚ . . . . . . .

**ಸಾರಾಂಶ:** ಈ ಶಾಸನವು ರಾಷ್ಟ್ರಕೂಟ ಅರಸ ಅಕಾಲವರ್ಷನಿಗೆ (೨ನೇ ಕೃಷ್ಣ ಕ್ರಿ.ಶ. ೮೭೮–೯೧೪) ಸೇರುತ್ತದೆ. ಇದರಲ್ಲಿ ಎಡೆದೊರೆ ನಾಡು, ಮುದುಗುಂದೂರು–೩೦೦ರ ಕಂಮಟದ ಪ್ರಸ್ತಾಪಗಳಿವೆ.

**೫. ಅದೇ ಗ್ರಾಮದ ದೇವಾಲಯದ ಹತ್ತಿರದ ದೊಡ್ಡ ಗುಂಡಿಗೆ ಉತ್ತರಕೆ ಇರುವ ಶಾಸನ**

೧. ಸ್ವಸ್ತಿ ನಕನೃಪ ಕಾಳಾತೀತ ಸಂವತ್ಸರ ಶತಗಳೆಣ್ಬುನೂರಯ್ಪತ್ತನೆಯ ಸರ್ವ್ವ

೨. ದಾರಿಯೆಮ್ಬ ಸಬ್ಬತ್ಸರ ಪ್ರವೃತ್ತಿಸೆ ತದ್ವರಿಷಾಭ್ಯನ್ತರ . . . . . . . ಸುದ್ಧಪಞ್ಚ

೩. ಮೆಯು ಆದಿತ್ಯವಾರದನ್ದು ಪುನರ್ವ್ವಸು ನಕ್ಷತ್ರ . . . . . . . ಮುಂತಾಗಿಸ್ವಸ್ತಿ

೪. ಪ್ರಿಥಿವಿವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕ ಶ್ರೀ ಅಮೋಘ

೫. ವರಿಷ ಪೃಥಿವಿ ರಾಜ್ಯಂಗೆಯು . . . . ಹ . . . . . . . . ಶ್ರಮಹ .

೬. ಸ . ರಜನತ ವಿಚಿತ್ರ . . . . ತಯರಗಟ . . . . ಧ . . ರಳಿಮನಿ . .

೭. ಅಯ್ಯನಯ್ಯ ನೆಡೆದೊರೆ ಇರ್ಚಾಸಿರ ಮನಾಳುತ್ತಮಿರೆ . . . . . .

೮. . . ರರಪುರದ ಸಾಸಿರ್ಬ್ಬರು ಅಂನು . . ಪದಾನ . . . ಲಚ್ಚೆಯ

೯. . . . ಚಾಮುಯ್ಯ . . . . ಸ್ಬೆ . ದಯಟ . . . . ಯ

೧೦. . ತಿಮಯ್ಯರ . ಗೆಮಿ . . . ವ . . . ದಸಿಮಯ್ಯ . ಮ . . . .

೧೧. . . . ನಪರಿಕೆ . . . . . ದೇಗುಲ ಗೌಡನಸ . . . .

೧೨. . . ತೆಚ್ಕಣ . ನ್ದು . ಳು . ರದ . ವ . . ಮ . . . . . .

೧೩. ಳ . ವು ವಿಪರರಿ ಯಾವಗ್ರಣ್ಡುಗ ಬದಮಡ . . . ದವನಾರರ

೧೪. ಕಮಹಾಜನ ವಟಮ . . ಕ . . . . ರ . . . . ಮಿಕ

೧೫. . . . ಬಿಟ್ಟ . ಪ . . . ದಗೇಗು . . . ಕವಿ . . . ಅ . . .

೧೬ . . . . . ಕ . . . . . . . . .

೧೭. . . . . . ಕಲುಒಕ ಆಚ . . . . . . . .

೧೮. . . . . ಜಾ. . . . ಪೊರಗು . . . ಮ . . ಯದುದ . . . . .

೧೯. . . . . . . . . . . . ಮ . . . . . . . . .

**ಸಾರಾಂಶ:** ಈ ಶಾಸನವು ರಾಷ್ಟ್ರಕೂಟರ ಅರಸ ೩ನೇ ಅಮೋಘವರ್ಷ (ಕ್ರಿ.ಶ. ೯೩೫–೯೩೯)ನಿಗೆ ಸೇರಿದ ಶಾಸನವಾಗಿದೆ. ಇದರಲ್ಲಿ ಸಾಸಿರ್ಬ್ಬರು, ಮಹಾಜನರು, ಚಾಮಯ್ಯ, ಪಂನುಗಳೊಂದಿಗೆ ಎಡೆದೊರೆ ಇರ್ಚಾಸಿರದ ಉಲ್ಲೇಖಗಳಿವೆ.

## ೬. ಎಲೆಬಿಚ್ಚಾಲಿ ಗ್ರಾಮದ ರಾಮಲಿಂಗೇಶ್ವರ ದೇವಾಲಯದ ಅಂತರಾಳ ಹೊರಗೋಡೆ(ದಕ್ಷಿಣ)ಯಲ್ಲಿ ಜೋಡಿಸಿರುವ ಶಾಸನ

೧. ಸ್ವಸ್ತಿ ನಿತ್ಯ ವರ್ಷ ಷಷ್ಠಿ

೨. . ರಗಣಿಯ ಬಟ್ಟ

೩. . ಕರಿಯ ಕಮ್ಮಟ

೪. ಳ ಗ ಗಿ ಪೃಥ್ವೀವಲ್ಲಭ .

೫. . ರಡನೆಯ . ರೋತ್ತರಾ

೬. ಭಿವೃದ್ದಿ ಮ . ನರಕ .

೭. . ಟ . . . . . .

೮. . ಲ . ದೊ . . . . .

೯. ಏದಟದ . . ದ ಣ .

೧೦. ವಿಸ್ಸ . ಳ . . . . .

೧೧. . ಟ ನಾಯ . ಯಸ್ಸ . ನ .

೧೨. ಮಿತ ಸೃತ . . . .

೧೩. ಸತ್ರ ಪರದತ್ತ . ಶಯ .

೧೪. . ವ . ೦ ನ್ಮರದ . .

೧೫. ಸ ಸಹಸ್ರಸಾವಿರಂ

**ಸಾರಾಂಶ:** ರಾಷ್ಟ್ರಕೂಟ ಅರಸ ೩ನೇ ಇಂದ್ರನ (ಕ್ರಿ.ಶ. ೯೧೪–೯೨೯) ಶಾಸನದಲ್ಲಿ ನಿತ್ಯ ವರ್ಷ ಪೃಥ್ವೀವಲ್ಲಭ ಎಂಬ ಉಲ್ಲೇಖದೊಂದಿಗೆ ದತ್ತಿ ನೀಡಿದ ವಿಷಯವಿದೆ.

## ೭. ಎಲೆಬಿಚ್ಚಾಲಿ ಗ್ರಾಮದ ಅಗಸೆಯಲ್ಲಿ ನಿಲ್ಲಿಸಿರುವ ವೀರಗಲ್ಲು ಶಾಸನ

೧. ರ॥ ಬಿ೦॥ ರ . .

೨. ್ಯ ನಿನ ಕನಪುಸಂಕಿಯ

೩. ಮಗ . .

**ಸಾರಾಂಶ:** ಈ ವೀರಗಲ್ಲು ಶಾಸನವು ಕಪ್ಪು ಶಿಲೆಯಲ್ಲಿದ್ದು, ಸ್ಥಳೀಯರು ಇದನ್ನು ದ್ವಾರಪಾಲಕನೆಂದು ಕರೆಯುತ್ತಾರೆ. ಇದು ಕ್ರಿ.ಶ. ೧೭–೧೮ನೇ ಶತಮಾನಕ್ಕೆ ಸೇರುತ್ತಿದ್ದು, ಇದರಲ್ಲಿ ವೀರನನ್ನು ಕನಪುಸಂಕಿಯ ಮಗನೆಂದು ಉಲ್ಲೇಖಿಸುತ್ತದೆ. ನಾನು ವೀರಗಲ್ಲು ಶಾಸನ ಪ್ರತಿ ತೆಗೆಯುವಾಗ ಅಗಸೆಯ ಕಟ್ಟೆಯಲ್ಲಿ ಜೋಡಿಸಲ್ಪಟ್ಟಿತ್ತು. ಆ ನಂತರ ಗ್ರಾಮದ ರಸ್ತೆ ವಿಸ್ತರಿಸಿ ಕಟ್ಟೆ ತೆಗೆಯಲ್ಪಟ್ಟ ಕಾರಣವಾಗಿ ಪ್ರಸ್ತುತದಲ್ಲಿ ಹೊಸ ನೀರಿನ ಶುದ್ಧೀಕರಣ ಘಟಕದ ಹತ್ತಿರದಲ್ಲಿ ಅನಾಥವಾಗಿಬಿದ್ದಿದೆ.

**೮. ಗುಂಜಳ್ಳಿ ಗ್ರಾಮದ ವಡಗೇರಿ ಬಸವಣ್ಣ ದೇವಾಲಯದ ಅಂತರಾಳದಲ್ಲಿರುವ ಶಾಸನ**

೧. ವಿರೋಧಿಕೃತ ನಂ॥ ಶ್ರಾವಣಶುದ್ಧ

೨. ವೀರೈಯ । ಕರಕವೇರು॥

೩. ಶೆಟೇ ಬಸಪ॥ ವೀರಂಣ್ಣ

೪. ವುಬಯರು ಗ್ರಾಮಗಳ

೫. ಏತವಾವಿ ಮಾಡಿಗುಡಿ ಕಟ್ಟಿ

೬. ಶಿದ್ದು ಪೂಜಾರಿ ಚನಬಸೈ

೭ ಯ್ಯ ಪಸಲಿ ೧೩೨೧

**ಸಾರಾಂಶ:** ಈ ಶಾಸನವು ತೆಲುಗು ಭಾಷೆ, ಕನ್ನಡ ಲಿಪಿಯಲ್ಲಿದ್ದು, ಕ್ರಿ.ಶ. ೧೬ನೇ ಶತಮಾನಕ್ಕೆ ಸೇರುತ್ತದೆ. ಶಾಸನದಲ್ಲಿ ವೀರಯ್ಯ, ಕರಕವೇರು, ಶೆಟ್ಟಿ ಬಸಪ್ಪ, ವೀರಣ್ಣ ಎಂಬುವವರುಗಳು ಬಾವಿ ತೋಡಿಸಿದರು. ಹಾಗೆಯೇ ಶಾಸನ ಮುಂದುವರಿದು ಗುಡಿಯನ್ನು ಪೂಜಾರಿ ಚನ್ನ ಬಸಯ್ಯ ಎಂಬಾತ ಕಟ್ಟಿಸಿದ ಬಗ್ಗೆ ಉಲ್ಲೇಖವಿದೆ.

**೯. ಅದೇ ದೇವಾಲಯದ ಮುಖಮಂಟಪದ ಎಡ (ಉತ್ತರ) ಬದಿಯ ಸ್ತಂಭಕ್ಕೆ ಇರುವ ಶಾಸನ**

೧. ಮಾ। ನಂ॥

೨. ಅ॥ ಬ॥ ^

೩. ಚ॥ ಗಿರ್ರೆ

೪. ಪ್ಪ ಭಕ್ತ

**ಸಾರಾಂಶ:** ಈ ಶಾಸನವು ಲಿಪಿಯ ಆಧಾರದಿಂದ ಕ್ರಿ.ಶ. ೧೭ನೇ ಶತಮಾನಕ್ಕೆ ಸೇರುತ್ತದೆ. ಇದರಲ್ಲಿ ಗಿರೆಪ್ಪ ಎಂಬ ಭಕ್ತನ ಉಲ್ಲೇಖದೊಂದಿಗೆ ಆತನ ಶಿಲ್ಪವಿದೆ.

**೧೦. ಅದೇ ದೇವಾಲಯದ ಮುಖಮಂಟಪದ ಬಲ (ದಕ್ಷಿಣ) ಬದಿಯ ಸ್ತಂಭಕ್ಕಿರುವ ಶಾಸನ**

೧. ವ॥ ನಂ॥

೨. ಅ॥ ಬ॥ ೧

೩. ಚ॥ ತಾ

೪. ಯಂಮ್ಮ

೫. ಭಕ್ತಳು

**ಸಾರಾಂಶ:** ಈ ಶಾಸನವು ಕೂಡ ಲಿಪಿಯ ಆಧಾರದಿಂದ ಕ್ರಿ.ಶ. ೧೭ನೇ ಶತಮಾನಕ್ಕೆ ಸೇರುತ್ತದೆ. ಇದರಲ್ಲಿ ತಾಯಮ್ಮ ಎಂಬ ಹೆಸರಿನ ಭಕ್ತಳೊಂದಿಗೆ, ಆಕೆಯ ಉಬ್ಬುಶಿಲ್ಪವಿದೆ.

**೧೧. ಯರಗೇರಾ ಗ್ರಾಮದ ಹನುಮಂತಪ್ಪ ವಾಲೀಕಾರ ಮನೆಯ ಹತ್ತಿರದ ತಿಪ್ಪೆಯಲ್ಲಿರುವ ಶಾಸನ**

೧. ಸ್ವಸ್ತಿಜಿನ ಶಾಸನಾಯ॥ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀಪೃಥ್ವೀವಲ್ಲಭ

೨. ಮಹಾರಾಜಾಧಿರಾಜ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ

೩. ಚಾಳುಕ್ಯಾಭರಣಂ ಭೂಲೋಕಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನ

೪. ಮಾಚನ್ದ್ರಾರ್ಕತಾರಬರಂ ಸಲ್ಲುತ್ತಮಿರೆ ಜಯಂತಿಪುರದ ನೆಲೆವೀಡಿನೊಳು ಸುಖಸಂಕಥಾ ವಿನೋದದಿಂದಂ
೫. ರಾಜ್ಯಂಗೈಯ್ಯುತ್ತಮಿರೆ ತತ್ಪಾದ ಪದ್ಮೋಪ ಜೀವಿಗಳಪ್ಪ॥ ಸಮಧಿಗತ ಪಂಚ ಮಹಾಶಬ್ದ ಮಹಾಮನ್ಡಳೇಶ್ವರ. . . .
೬. . . . . . ವಳಯ ಲವಣಾಬ್ಧಿ ವಳಯಿತ ವೇಳಾವನ ಗಂಗಾತೀರ ಪಾರಿಯಾತ್ರ ತನ್ಮಧ್ಯ ದೇಶಾಧೀಶ್ವರ ಮಾಹಿಷ್ಮತಿಪುರವರಾ
೭. ಧೀಶ್ವರ ಸಹಸ್ರಬಾಹು ಪ್ರತಾಪ ಭೂಪದಿಳೀಪನ ಹೆಹಯ ವಂಶೋದ್ಭವ ವಿವೇಕವನ ಜೋದ್ಭವನತ್ಯುಗ್ರನರ ಶಿರೋದರ್ಪ್ಪಣ
೮. ದ್ವಜವಿರಾಜಮಾನ ದಾನಕಾನೀನ ಮಾಲೆಪರೆ ಘೋಷಣಂ ನೃಪರತ್ನ ಭೂಷಣಂ ಸತ್ಯವಿಖ್ಯಾತ ನೀತಿ ಮಾಂಧಾತ
೯. ಬುಧಜನಸ್ತುತ್ಯ ನಾಮಾಧಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ಮನ್ಮಹಾಮಂಡಳೇಶ್ವರಂ ಪೆರ್ಮ್ಮಾಡಿದೇವಂ . . .
೧೦. . . . . . . ಕಥಾ ವಿನೋದದಿಂ ರಾಜ್ಯಂಗೈಯ್ಯುತ್ತ ಮಿರ್दುರಾಜಾದಿತ್ಯ . ನಡಳಗಿ . . . .
೧೧. . . . . . . ನಿನ ಪ್ರ . ರಾದಿ ವಳಯ ಸಕಳನಾ . . . . . . . . . . . ಯರ ಗೊತ್ತು ಗವಿ ಬಿರತಿ . . . . .
೧೨. . . . . . . . . . ಸು ರತ್ನಜಿ ಶೂಭೂಪ ದೀಪ
೧೩. . . . . . . . . . . . . . ನುಳು ಮಧು ದಿನನ
೧೪. . . . . . . . . . . ಬಿಕೆಯ್. ದ್ರಿ . ಕ
೧೫. . . . . . . . . . ಡು॥ ಆವರ್ಗ್ಗೆ ಗೌಸುತ
೧೬. . . . . . . . ತರಿಪು ರಾಜನುಜತವಾ .
೧೭. . . . . . ರಾಜವಳೆಯ ಕಳಿಕುರಿಕೆಯ
೧೮. . . . . . . . ನೊಕಲಿಬೂಬ . ಮತ್ತರು
೧೯. . . . . . . ಯಕರಮಾತ . ಸ . . ತು
೨೦. . . . . . . . ನಾದನ ರೆನಿಸಿದರೆ . ದೆಯ
೨೧. . . . . . . . ಸಿಯಗುನ್ವಾತನಗುಣ . . . . . . . . . . . . . ಯಿಬ . ನಾಯಕ . . . . .
೨೨. . . . . . . . ಯ . ಚಮನಿ . ದೌಪ್ರಸಿತವನೌಕ . ಗಳ ಪನಮರಯಕ್ಷ . . ಯ . . ನ್ಡು . . . . . . . . .
೨೩. . . . . . ದೇವರನೆಗಳು . ಮಲಿಯನುತನಿಗಿತ ಪೂ . ವಿ . . . . ಮತ್ತರು ಮೂರು ತಾಪ . . . .
೨೪. . . . . . ಯಂ ನ ಏ ಬಸದಿ ಸತಿತು ಕಿತ್ತಿ ನೂರ್ಮಡಿಸಿದಂ . . ನವಿನು ಮಾರೆಯ ನಾಯಕ ಮನಲಿ ಲೌಕ . ಪ . . . . . . . .
೨೫. . . . . . . . ಪಡೆದನೆ ಮಾರೆಯ ನಾಯಕ ನಡು ಪಳದ . . . . . . . . . .
೨೬. . . . . . . . . ಮುಮ್ಮ . ಡಿ ಯಾ . ನಾಸುತದು . ದಗ್ಗು . . . . . . . ಗೆ . . . . . ದಿಕು ಬನಾಯಕ . . . . . . . . .
೨೭. . . . . . . ಮಾನ ಗುಣತಾನೆ ಪತಿಬ್ರತಿ ಪಾ . ನೆ ಲೋಕ . . . . . . . . ಚಪರಿದಾನ ಮಹಾಬ್ರತಿ . . . . . . . . . . .
೨೮. . . . . . ಸಬ್ಬ ಭವಸ ಭರಿತಾನಿದೆ . ಶ್ವದಾ . ಯೊಳವನಿ ಪಾನಿಯ ಮಾನಿಯ . . . . . . . .
೨೯. . . . . . . ನಿಕುಮಿತನೊಳ್‌ಲಸಿ ಭೂಪಣ . ಪ . ಶೂ . . . ರ . . ಲಳಿ . . . ಚರಿತ . ಣ ಯಾರೆ . . . . .
೩೦. . . . ನಾಯಕಂ ಸಕಳಸ . ಣ ಕಾಯಕ ನಿ ತ . ನ . . ದ . . ಗನಿ ಜಕಿತ್ತಿ ಮನೋಭ . ಮೂತಿ ದೌತ್ರಿ . . . .
೩೧. . . . . ಯರು ಚರಿತ್ರ ನಿರನೆ . ವಸ್ತು ದಿಚಾರಕ . . . . ನಿಗಿಸುತ ಕನುಗ್ರ . ಲಯ ಕಾರಕನೂ . . ಸಮಸ್ತ . . . .
೩೨. . . . . . ರಿಹರಕ್ತನು ಜಲಕ್ರಿ . ಲ . . . . ರಕನು . . . ನೆಗಳ್ದೆ . ಮಾರೆಯ ನಾಯಕ ನಿದರಿ . ಯೊಳು . . ಸ . . . . . .
೩೩. . . . . . ಅ ಜನ ಪ್ರಸನ್ನ ಬ್ರತು .ಡು .ನ ಮುತ್ತರಣ ಸತ್ಯ ಶ್ರೀಭೂಬರಣ ನುಡಿದಂತೆ ಗಂಡಂ ಏಟದ್ರಬಂಡಂ .

. . . . .

೩೪. . . . . . ರಂ ಕವಿಗಮಕವಾದಿ ವಾಸಿಜನಕಲ್ಪ ಅಕ್ಷನೆ ಕಪಡಿ ಬ್ರತಲವಾಸಂ ರಕ್ಷನಾದ ಕ್ಷಣಿ . . . . . .

೩೫. . . . . . . ಖರಾಣಯಿ ಬೆಷಜ್ಯಶಾಸ್ತ್ರದಾನ ಶಿರಗತಂ ಪರಬಾತ ಪತಿತಂ ಸಕಳದಿಗಂತ ಕಿತ್ಯಂ . ನುವಲ್ಲಭಂ . . . .

೩೬. . . . . . . . . . . . . ಪವಿತ್ರ ಪರಾಂಗನಾ ಪುತ್ರಂಬ . . ಬಾವಂಮ ಅಚಗೆ ಕಾವನುತುಂಗದೇವ . . ಚಂ . ನಗುಣಮದಿಪಕೆಯಿ . . . . . . .

೩೭. . . . . ಅನೇಕ . . ಯ . ಮಾ . . ಣಗಣ . ಣಂದಿಶಿ . ಜನಸಂಗ . ತ್ಯ ಮನ್ನಕುಲಾದಿತ್ಯ . . . . . .

೩೮. . . . . . ಬಾತಶ್ರೀಮತು . . . . ಯ ನಾಯಕರು॥ ಆವ . ಗುರುಗಳ॥ ಮಿ॥ ಮದವತ್ತು ಮನಿ . . . . . . .

೩೯. . . . . . . . . . . ನಾದಿ ಬುದಬಷ್ಯ ನಿಕಸಂ ತಪ್ಪಣಸ್ತುದಸಿದ್ವಾಗ ಕೆಯ್ . . . . . . . . . . .

೪೦. . . . . . . ತ್ತರನಿ . . ನಿಮಿಚಂ . ತ್ತಮರು॥ ಬಸಿದಾರ ಬ್ರತಿಮಾದ . ಪು . ನಿ . . . . . . . .

೪೧. . . . . . . . ಬಸದಿಯ . ಸಿಸಡರತ . . . . ನ್ನ . ಭ . ತ್ತಮರ್ಗ್ಗಿಮಂ . ಮಾರಯ  ನಾಯಕ ಮುದ್ಗಮುನ್ನೂರರ . . . .

೪೨. . . . . . . ಕಾದ . . . ಪಾದ . . . ಹದ ಕಾದೆನವಾ . ರಗಪ್ಪ ಕಾರಮೆ ಬಗೆದು ಕಾಮನ: ಕಟ್ಟಿದ ಸಿತ . . . . . . .

೪೩. . . . . . . . . . . . . ರಿದ . ದನಿಗಳ ಮತ್ತ . . . . . . . . . ಯನಿ ಸಿತ್ತ ಬಳಿ ಮನೆ . ಮಾರೆಯ ನಾಯಕ ನಾಲ್ಕುನೂರ ಐವತ್ತು ಕಮ್ಮಭೂಮಿ

೪೪. . . . . . . . ಕಟ್ಟಿಸಿದ . . . . ಕಮ್ಮಟದಲು ಮಾರೆಯ ನಾಯಕಂ ಮದ್ಗ ಮೂನೂರರ ಬಳಿಯ ಎರಂಗೆರೆಯಲು . . . . . .

೪೫. . . . . . . . ಳೇಶ್ವರ . ಮಾಡಿದ . ತ್ತಲ . . . ಕ್ರಮದ ರೂಪದ ಮೂ . ನೆಯ ಸೌಮ್ಯ ಸಂವತ್ಸರದ . . . . . . . .

೪೬. . . . . . . ಕ್ರಮ . . . . ತ್ತಿ . ಯಾ . ದೆದರ . ಬಾದಕಂ ವಿದ್ಯಾತ್ಥಿ ಶಿಷಷ್ಟಿ ನಾಲ್ಕುನೂರ . . . . . . . . . .

೪೭. . . . . ಪಲ . ರ ಜನೊದಾರಕ ಬಿಟ್ಟ . . . . . . . ಮುಸಿ . ಲ ಮಾಕಳನ ಕಾಲಲು ನಿಗರಮತ್ತರು . . . . . . . .

೪೮. . . . . . . . . . . ನಿವೇಧ್ಯಕಂ ಬಾರಿಯ ಕೆರಿಯ ದೊಳಗೆ ಕಮ್ಮ ನಾಲ್ಕುನೂರಯ್ವತ್ತು ಕೆರೆಯಂದೇ . . . . . . .

೪೯. . . . . ಬಸದಿಯ ಪಡುವಲು ನಿವೇಶನಾಎರಡು॥ ದೇವರ್ಗ್ಗೆದಾವಿನಗೆ ಗೌಣವಾಡು ಷಷ್ಟಿನಕಾವಲಿ . . . . . . . . . . .

೫೦. . . . . . . . . . . . . ನಿಗರ ಕಮ್ಮ ನಾಲ್ಕು ನೂರಯ್ವತ್ತುಗದ್ದೆ ಕಮ್ಮ ನೂರು ಇತಿ ಶ್ರೀ ಮೂಲಶಂಗಳಿಕೆ . . . . . . . . . .

೫೧. . . . . . ಪನ್ನಾಯದ ಬಸದಿಯ ದ್ರಮ್ಮವನಾದವನು . ಪ್ರತಿ ಪಾದಿಸಿದಂ ಗಂಗಾ ಕುರುಕ್ಷೇತ್ರ ವಾರಾಣಾಸಿಯೊಳು ನ್ತಿರೆಮಾಳ್ವಕವಿಲೆಯನು ಕೊಂದೊಂದು ಮಹಾಪಾತಕ॥

**ಸಾರಾಂಶ:** ಇದು ಜೈನ ಶಾಸನವಾಗಿದ್ದು, ಚಾಲುಕ್ಯ ವಿಕ್ರಮ ವರ್ಷ ಪುಷ್ಯ ಅಮವಾಸ್ಯೆ ಬಾನುವಾರ ದಕ್ಷಿಣಾಯನ ಸಂಕ್ರಮಣವೆಂದಿದ್ದು, ಕ್ರಿ.ಶ. ೧೧೩೦ ಜನೇವರಿ ೧೨ನೇ ತಾರೀಖಿಗೆ ಸರಿ ಹೊಂದುತ್ತದೆ. ಈ ಸಮಯದಲ್ಲಿ ಕಲ್ಯಾಣ ಚಾಳುಕ್ಯ ಅರಸ ಭೂಲೋಕಮಲ್ಲನು [೩ನೇ ಸೋಮೇಶ್ವರ] ರಾಜ್ಯಭಾರ ಮಾಡುವ ಕಾಲದಲ್ಲಿ ಆತನ ಮಹಾಮಂಡಳೇಶ್ವರನಾಗಿ ಹೈಹಯ ವಂಶದ ಪೆರ್ಮಾಡಿದೇವನು ಮುದ್ಗನೂರು ೩೦೦ನ್ನು ಆಳುತ್ತಿದ್ದನು. ಈತನ ಸಾಮಂತನಾಗಿ ಮಾರಯ್ಯ ನಾಯಕನಿದ್ದನು. ಈತನು ದೇವರ ಸೇವೆಗಾಗಿ ೪೫೦ ಕಮ್ಮ ಭೂಮಿ, ಎರಡು ಮನೆಯ ನಿವೇಶನ, ಹೂವಿನತೋಟ,

ದೇವರ ಅಂಗಭೋಗ, ರಂಗಭೋಗ ಖಂಡಸ್ಪುಟಿತ ಜೀರ್ಣೋದ್ಧಾರ ಮೊದಲಾದವುಗಳಿಗೆ ದತ್ತಿ ನೀಡಿದನು. ಹಾಗೆಯೇ ದೇವರ ಸೇವೆಗಾಗಿ ಕೂಲಿಕಾರ್ಮಿಕರಿಗಾಗಿ ದೀಪಗಳನ್ನು ನೀಡಿದನು. ಶಾಸನ ಮುಂದುವರಿದು ಬಸದಿ, ಮೂಲಸಂಘ, ಕಾಣೂರುಗಣ, ಮೇಘ ಪಾಶಣಗಚ್ಚ ಮತ್ತು ಕೊಂಡ ಕೊಂಡನ್ವಯರ ಉಲ್ಲೇಖದೊಂದಿಗೆ ಎರಂಗರೆಯು ಮುದ್ಗ-೩೦೦ರ ಬಳಿಯಿತ್ತೆಂಬ ವಿಷಯವಿದೆ.

**೧೨. ಅದೇ ಗ್ರಾಮದ ಚವಡಿಕಟ್ಟೆಯ ಮುಂಬದಿಯಲ್ಲಿ ನೆಟ್ಟಿರುವ ಶಾಸನ**

೧.

೨. . . . . . . . . . . . . . . ಮತ್ತರು

೩. ರು . . . .

೪. . . . . . . . . . . ಮೆಲೆನಾಡು ಗಂಡ

೫. ಎರಗೆರೆ ದ . . ಪ

೬. ಪರಮ . .

೭ ಮಧ್ಯದಲ್ಲಿಯ

**ಸಾರಾಂಶ:** ಈ ಶಾಸನವು ಕನ್ನಡ ಭಾಷೆ, ಕನ್ನಡಲಿಪಿಯಲ್ಲಿದ್ದು, ಕ್ರಿ.ಶ. ೧೭ನೇ ಶತಮಾನಕ್ಕೆ ಸೇರುತ್ತಿದ್ದು, ಮಲೆನಾಡು ಗಂಡ ಯರಗೆರೆ ಎಂದು ತಿಳಿದು ಬರುತ್ತದೆ.

**೧೩. ರಾಯಚೂರು ನವರಂಗ ದರವಾಜದ ಷಣ್ಮುಖ ವಿಗ್ರಹಕ್ಕಿರುವ ಕಪ್ಪು ಶಿಲೆಯ ಶಾಸನ**

೧. ಶ್ರೀ ಸ್ವಸ್ತಿ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂಬಾಯ ಶಂಭವೇ

೨. ಸ್ವಸ್ತಿ ಸಮಸ್ತ ಭುವನಾಶ್ರಯ ಮಂಜರಿ . ರಾಜತ . ರುಭರಣ

೩. . . . . ಜಾಡದ . ಮುಖನಿಖಳಯ ರಾಮನಃ ಸಣಜನಿ ರಾಜಹಂಸನನಂತ ಭುವನಾದೀಶ್ವರಂ ಶ್ರೀ

೪. ವಲ್ಲಭಂ ಸುರಪ್ರತಾಪ ಚಕ್ರವರ್ತಿ ಶ್ರೀರಾಯನಾರಾಯಣ ಗಂಭೀರಕ್ಷೀರ ದಾರಾಶ್ರೀಯೊಳು ಸುಖಸಂಕಥಾ ವಿನೋದದಿಂ

೫. ಕ್ರಮಂ ಪರಿದಾಳಿಸುತ್ತ . . ತತ್ಪಾದ ಪದ್ಮೋಪ ಜೀವಿಗಳಪ್ಪ ಕಂದ॥ ಶ್ರೀರಮಣಪ್ಪ ತಿದಿರ ಶ್ರೀರಮಣಂ ಬೇಟಿ

೬. ಬರವಿ ಪ್ರವೊಳಿತರು ನಿರಕರ ತಿಕ್ಷಕು . ರ ಶ್ರೀಲೋಕಭೂದಾನಂ ಬಂ . ಗ ॥ ಆತನೂಭವಂ॥

೭ ದೂದ್ವಾಬರಿದ ಭರತಕ್ಷಿತಿದಾಳ ನಾಕರಂ ನಿರಂತರಂ ತಗವ್ವಿಮಹಾತ್ವದೆಂ ಸುರಪನಂಪಳಕೆಯ್ ಮಹಾದಿಭೂರಿ

೮. ದರನ . ಳಂ ಭಲೇವ ಶೌರ್ಯ್ಯದಿನಂಬೂನಿ ದಾನಮಂಕರಂನಗುವ . ಬಿರದಂದೆಸೆವ . ಮ್ ಗೀತಾಯ್ಪುನೆದಿಂದ ಭೂಬುಜಂ॥ .

೯. . . . . ಭವಂಮತ್ತ॥ ಸಿಡಿಲ ಮಾರ್ಕ್ಕೊಳ . ದನಪನೆಸಕಮಂ ಮಿಕ್ಕ ತಜಂ ಜಯಶ್ರೀ ಗೆಡಿಯಾಗಿದ ನಾಬೆಂ ತಾಮಣ

೧೦. ಪ್ಯದ್ವ . ರಾಮಂಗೆಸ . . ಡಿಯಾಗಿ . . ಕಾಮಂಗೆಣೆಯಾನೆಫಲಿಸನೂತ್ತಿ ಹೇಮಾದ್ರಿಗೊಂಡುಂ ಪದಾಯಾಗಿದೆಳೆತಂ

೧೧. ಏ . . ನ . ಸಿಡಿಂದಾತ್ರಿಯರಿದು ಬಂಡಭೂ . . . . ದ ಆವಿಂಬುವಿನನುಜ ನಂನೊ ಆಟೆವ ಮರವೊಕ್ಚದರ ದಾಡಾಂತದೆಡಿಏಡಂ ಕಾದಿವ ಕಾಳ್ವೆಗು

೧೨. ಬಾದಿದಿಚಂ ಬತವಂ ದಿವುರಿ ಬ್ರಜಮಂ॥ ಛತ್ರ ಐದು ದಿನವಾ . ಬೆಣಿಸುಮಾದಿಯ ಜಗದ್ಬಳಯಂ ಸರಾದಿಂ ಘನತರಣಯ್ಯನಂದರ

೧೩. . . ನನೂಜ್‌ತಬಾಹ . ವಿಯ್ಯನ ಮನುಸುವರಿತ್ತನಂ ಮಹಾಗಾತ್ತಾನ . . . . ಯ . . ತನಂ ಮನಸಿಜ ರೂಪನು ತಿದಿಳಿಪನನಂ

೧೪. . . ಮಾಜ ಘನ॥ ಕಂಡು ಆತನನುಜರನತಿ ವಿಖ್ಯಾತಂ ಮಹಾರಸನಕೃಪಾ . . . ಳಂ ಲಾಜತದ ವಾನಾಳನ ಬಳಗುಣ . . . . .

೧೫. . . ರ . ಮಂ ॥ ನತ್ತ ಮದವಳಿಳ್ಪಿದ್ದು ಭೂಪ ಪಾವಳಜಳಹನ . ತವಾತ ಬಾಯಾ ಶ್ರೀ . ಳಂ . . . . . . ಲಸದಿರದಸಗ್ರಾತೆಬಿ .

೧೬. ಪದ . . ಕೆದಗೆಳ್ವಾಪಗೆಳಸುಗಿದುಗಿಪ ಗ್ರಾ . ದುತಾನ ಕಾಂತಹ ದೆಯ ಕಾಗೆಶಕಾ . ದ . ಏ . . ಮಾಳನುಂ ಭಯ ಬಾಂಡಿಯಂ ಡಂ॥

೧೭. ನಾಗಣತ್ತಗೆ ನಾಯಣಕರಡು . . ವದಣಳಾಪದಾದಮಿಯಾಂವಡಂ . . . ಮನೊಜವದು ನಿವತ್ತೂದಿಂಬಾದಿಸಿಣಸಿ . .

೧೮. ಗೋರೆಗೆ ದಾರೆಗೆದಂಬಂದಪರೆ॥ ಲಾಂತವವತ್ತನೂಭ . ರಿ ಕಾತಾನು ತಾನಕ ನಾಪರಭ್ಯರತಮಿ ಕಾತಹಂಡಿ . ಗೆ

೧೯. ಣಗನ್ತಿಯಂ॥ ವೃತ್ರದಿನಪನತ ಜದಿಂ ಪ್ರಸುತನ . . . . ನನಾಪ್ಪರವಾಯೋ

೨೦. . ಡಹಂಡಿಗಾವನಿಪನೂ . ಪ್ಪಲೊಬಾದ ನಶ್ಯದ . . . .

೨೧. ಸವಿದ ಸರೂಪ ಸಲ್ಲಕ್ಸನಾದಿಂಪತಿ ಹಳತಪ . . . .

೨೨. ದಂಸ . ಮರಮುಬಾಹೊಳಂದು ನ್ರಿ . ಬಳದಿಬ್ಬೆದಿ . . . .

೨೩. ತಿಪನಿ ವೆದುಗಲ್ಪಡುತ ಕ್ಷೋಬಬೂತಾನದಿನಾನಾರಾ .

೨೪. ತಕಂ . ಸಿದನೂರ ಕಸಕ್ಕಾಕ್ಸರಿ ಸಿದರಗಿಡತ್ತು ಗ್ರಬೃತಾಳಜ .

೨೫. ದಂಸ ಬಾತ್ಯದಿಂಸತ್ಯದಿಂಸಗೆಯಪ್ಪ . ೦ ನರಿಯಂಡುದಾರರು .

೨೬. . ರಾನುಬಾವಾಸರಿಯಗುಣಪ್ರಬಾವವೆಂತನೆ॥ಕಂಡ॥ .

೨೭. . ವಿಯನಹಣಿಶಬಣ್ಣಿಸುಗುಂ॥ ವೃತ್ತಂ॥ ಬೋಗದಮಾ . ದಿ

೨೮. . ತಾನಕೆ ನಿಷಶಿಷ್ಟವರ್ಗ್ಗಿಮಂ ರಾಗಳಿನಾವಗಂತಣ

೨೯. ದೇವಕಿಯಾಗಿ . . ಸುದೇವ ನಾಗಬಿಜ್ಜನ ಪಾಳಂ ಶ್ರೀಗಡ

೩೦. ಣತಜಂ ಕಲ್ಪ ಮಾಜಕ್ಕೆಮಾರ್ಪಡಿದಾನಜಲಂಪವನಾತಜಂಗೆ

೩೧. ನದಿಂ ತುಬಂ ನಾಸುವನಿ ಶ್ರೀಹಂಡ ಭುದಾಂಳನಂ

೩೨. . . ನಾತುಸಂಮ . . . . .

**ಸಾರಾಂಶ:** ಈ ಶಾಸನವು ಕ್ರಿ.ಶ. ೧೨ನೇ ಶತಮಾನದ್ದಾಗಿದೆ. ಇದರಲ್ಲಿ ಕಳಚೂರಿ ಅರಸ ಶ್ರೀ ರಾಯನಾರಾಯಣ ( )ನನ್ನು ಉಲ್ಲೇಖಿಸುತ್ತಿದ್ದು, ಈತನು ದಾರಾಶ್ರೀ (ಮಾಳವ ಮಧ್ಯ ಪ್ರದೇಶ)ಯ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದನೆಂದು ತಿಳಿದು ಬರುತ್ತದೆ. ಈತನ ಸಾಮಂತ ಅರಸನಾಗಿ ಕರಡಿಕಲ್ಲು ಕದಂಬ ವಂಶದ ಬಿಜ್ಜರಸನ ಉಲ್ಲೇಖವಿದೆ. ಶಾಸನ ಮುಂದುವರಿದು ಭೂದಾನ, ಸಿಡಿಲ ಮಾರ್ಕ್ಕೋಳ ಭೂಮಾಪನ ಮೊದಲಾದ ವಿಷಯಗಳಿವೆ.

### ೧೪ ಅದೇ ನವರಂಗ ದರವಾಜದ ಮೆಟ್ಟಿಲುಗಳ ಬಳಿಯಿರುವ ಕಣ ಶಿಲೆಯ ಶಾಸನ

೧. ಸ್ವಸ್ತಿ ಸಕವರ್ಷದ ೯೮೨ನೆಯ ಷಷ್ಟಿ ಸಿದ್ಧಾರ್ಥಿ
೨. ಸಂವತ್ಸರದ ಕ್ಷಾತ್ರ ಸುಳಪಡಿ ಆದಿವಾರದಂದು ಏ
೩. ತಗಿರಿಯ ನೆಲೆವೀಡಿನಲು ಸುಖ ಸಂಕಥಾವಿನೋ
೪. ದದಿಂದಂ ಶ್ರೀಜಯಸಿಂಹ ವಲ್ಲಭ ವಿಜಯ ರಾಜ್ಯ ಮುತ್ತ
೫. ರೋತ್ತರಾಭಿವೃದ್ಧಿ ತಾರಬರಂ ಸಲ್ಲುತ್ತಮಿರಲು ದ . .
೬. ರಪ್ಪ ಸಿರವನಾದಲಿಕೆ ದಾಸಮರಸಿ . . ದೇಕಡ .
೭ ಯ್ಯನು ಜಗದೇಕಮಲ್ಲಹೊಲ್ಲಪ್ಪಯ್ಯಣ ದೆರಕರು .
೮. ಮನ್ನೆಯ ಹಯ ಲೋಕರಸನು ಮಿದ್ದಲು ಸಂಕಿಯ
೯. ಅಮರೇಶ್ವರ ದೇವರ್ಗ್ಗೆ ಬಿಟ್ಟ ಕರಿಯ ನೆಲ ಮೊ
೧೦. ಸಗಿಯ ಕಾಳಪ್ರಿಯ ದೇವರಿಗೆ ಬಿಟ್ಟ ನಾಲ್ವ

೧೧. ತ್ತನಾಲೆಣ ಕಾಲಳಡಿ ಮತ್ತರಿಪ್ಪತ್ತ
೧೨. ನಾಲ್ಕೂ ಆಕಡಿಯ ಮತ್ತ ೨೪ಗಳೆಯ ಕಮ್ಮಟದ
೧೩. ತೋಟದಕಂಮ್ಮ ೩೫೦ ಮನೆ ೧೨ಯೊನ್ತಿವಬಿಟ್ಟಕಮ್ಮ .
೧೪. ಡಕಿದ್ರಮ್ಮನ ಕೋಲೊಳು ದ ಅಳೆದು ರಪ್ಪ . . . ಬ . ವಾ
೧೫. ರಾಣಾಸಿಯಲು ಕವಿಲೆಯಕೊಂದ ಪಂಚಮಹಾಪಾತಕ್ಕ ಮಕ್ಕುಂ
೧೬. ಸ್ವದತ್ತಂ ಪರದತ್ತಂ ವಾಯೋಹರೇತಿ ವಸುಂದರಾಂ ಷಷ್ಟಿ
೧೭. ರ್ವರಿಷ ಸಹಸ್ರಾಣಿ ವಿಷ್ಟಾಯಾಂ ಜಾಯತೇಕ್ರಿಮಿ
೧೮. ಶ್ರೀ ಸಹಣಕ . ಗ . ಸ ತಾಯಮ ಹೊಲ . . . .
೧೯. . . . ದಮ್ಮಯ್ಯಗೆ ಬಿಟ್ಟ॥

**ಸಾರಾಂಶ:** ಈ ಶಾಸನದಲ್ಲಿ ಶಕವರ್ಷ ೯೪೨ನೇ ಷಷ್ಠಿ ಸಿದ್ಧಾರ್ಥಿ ಸಂವತ್ಸರವೆಂದಿದ್ದು, ಕ್ರಿ.ಶ. ೧೦೨೦ಕ್ಕೆ ಸಮನಾಗುತ್ತದೆ. ಈ ಸಮಯದಲ್ಲಿ ಕಲ್ಯಾಣ ಚಾಳುಕ್ಯ ಅರಸ ಇಮ್ಮಡಿ ಜಯಸಿಂಹನು (ಕ್ರಿ.ಶ. ೧೦೧೫–೧೦೪೪) ಏತಗಿರಿ ನೆಲೆವೀಡಿನಿಂದ [ಪ್ರಸ್ತುತ ಯಾದಗೀರ ಜಿಲ್ಲಾ ಕೇಂದ್ರ] ರಾಜ್ಯಭಾರ ಮಾಡುತ್ತಿರುವಾಗ ಆತನ ಮಹಾಸಾಮಂತನಾಗಿ ಹೈಹಯ ವಂಶದ ಲೋಕರಸನಿದ್ದನು. ಈತನು ಮಿದ್ದಲು ಸಂಕಿಯ ಅಮರೇಶ್ವರ ದೇವರಿಗೆ ಕರಿಯನೆಲ, ಮೊಸಗಿಯ [ಪ್ರಸ್ತುತ ಮಸ್ಕಿ] ಕಾಳಪ್ರಿಯ ದೇವರಿಗೆ ೪೪ ಆಕಡಿಮತ್ತರು, ೨೪ ಗಳೆ ಭೂಮಿ, ನಾಲ್ಕುಕಮ್ಮ ತೋಟ, ೩೫೦ ಮನೆಯ ನಿವೇಶನಗಳನ್ನು ಕಮ್ಮದ (ಕಂಬ) ಕೋಲುಗಳಲ್ಲಿ ಅಳೆದು ಭೂಮಿಯನ್ನು ದತ್ತಿಯಾಗಿ ಬಿಟ್ಟನು. ಶಾಪಾಶಯದ ನಂತರ ಶಾಸನ ಮುಂದುವರಿದು ತಾಯಮ್ಮನ ಹೊಲವನ್ನು ದಮ್ಮಯ್ಯ ಎಂಬ ವ್ಯಕ್ತಿಗೆ ದತ್ತಿಯಾಗಿ ಬಿಟ್ಟ ಉಲ್ಲೇಖವಿದೆ.

### ೧೫. ಅದೇ ನವರಂಗ ದರವಾಜದ ಪಾರ್ಶ್ವನಾಥ ವಿಗ್ರಹದ ಕಾಲಿನ ಪಾದದ ಬಳಿ ಇರುವ ಶಾಸನ

೧. ಸ್ವಸ್ತಿ ಶ್ರೀಮೂಲ ಪುದೆಗಿಯಡಣದ ದಸ್ತಕಚ್ಛಂದ್ರ ದೇವ ಬ
೨. ದ್ರಭಟ್ಟಾರಕದೇವರಗುಡ್ಡ ಸೇನಭೋವ ರತ್ನಯ ಮಾಡ್ಸಿದದು
೩. ದಿಸಳ ದೇವರುಪ್ಪ ಪ್ರತಿಮೆ $$ ಚಟ್ಟೋಜರೂವಾರಿ

**ಸಾರಾಂಶ:** ಇದು ಜೈನ ಶಾಸನವಾಗಿದ್ದು ಕ್ರಿ.ಶ. ೧೨ನೇ ಶತಮಾನಕ್ಕೆ ಸೇರುತ್ತದೆ. ಇದರಲ್ಲಿ ಚಂದ್ರದೇವ ಭಟ್ಟಾರಕ ಗುರುಗಳ ಹೆಸರಿನಲ್ಲಿ ದೇವರಗುಡ್ಡ ಸೇನಭೋವರತ್ನ ಎಂಬ ಹೆಸರಿನ ವ್ಯಕ್ತಿ ಪಾರ್ಶ್ವನಾಥ ಪ್ರತಿಮೆಯನ್ನು ಮಾಡಿಸಿದ್ದಾನೆ. ಇದರರೂವಾರಿ ಚಟ್ಟೋಜನೆಂದು ತಿಳಿದು ಬರುತ್ತದೆ.

### ೧೬. ರಾಯಚೂರು ನಗರದ ಆದಿನಾಥ ತೀರ್ಥಂಕರ ಬಸದಿಯ ಅಂತರಾಳದ ಬಲಬದಿಯ [ದಕ್ಷಿಣ] ಬಿತ್ತಿಯಲ್ಲಿರುವ ಶಾಸನ

೧. ಯಂಕಂ
೨. ೨೪೩೬
೩. ಶಕ ೧೮೩೨
೪. ಹರದರ
೫. ನಾಗಪ್ಪ
೬. ಧರಣಪ್ಪ
೭ ರಾಯಿಚೂರ

**ಸಾರಾಂಶ:** ಇದು ಜೈನ ಧರ್ಮಕ್ಕೆ ಸೇರಿದ ಶಾಸನವಾಗಿದೆ. ಇದರಲ್ಲಿ ಹರದರ ವಂಶದ ನಾಗಪ್ಪ ಧರಣಪ್ಪ ರಾಯಚೂರ ಸಹೋದರ ಉಲ್ಲೇಖವಿದ್ದು ಇದು ಕ್ರಿ.ಶ. ೧೯೧೦ ಕಾಲಕ್ಕೆ ಸೇರುತ್ತದೆ.

[ಶಾಸನಗಳ ಕ್ಷೇತ್ರ ಕಾರ್ಯದಲ್ಲಿ ರವಿಚಂದ್ರ ಮಲಿಯಾಬಾದ್, ಪರಪ್ಪ ಬಂಡಾರಿ ಹಂಚಿನಾಳ, ದುರ್ಗಜಗದೀಶ, ಸಣ್ಣ ಚನ್ನಬಸವ ಪಟಕನದೊಡ್ಡಿ, ರಾಮನಗೌಡ ಎಲೆಬಿಚ್ಚಾಲಿ, ಡಾ. ಕೃಷ್ಣಪ್ಪ ದಿನ್ನಿ, ಗೋಪಾಲ, ಕೋಸಗಿಲಕ್ಷ್ಮಣ, ಭೀಮಣ್ಣ ನಾಯಕ, ವೀರೇಶ ತಮ್ಮಾಪುರ, ಹನುಮಂತ ಗುಂಜಳ್ಳಿ, ಲಿಂಗರಾಜು ಏಳು ಮೈಲಿ ಹಾಗೂ ಕೆಲವು ಶಾಸನಗಳ ಮೂಲ ಪಾಠವನ್ನು ಸಿದ್ದಪಡಿಸಿ ಕೊಟ್ಟ ಡಾ. ದೇವರಕೊಂಡಾರೆಡ್ಡಿ ಸರ್ ಮತ್ತು ಡಾ. ನಾಗರಾಜಪ್ಪ.ಎಸ್. ಮೊದಲಾದವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ]



೧೬

# ಬೆಂಗಳೂರು ಪರಿಸರದ ಹೊಸ ಶಾಸನಗಳು

**ಆದಪ್ಪ ಪಾಸೋಡಿ***

**ದೊಡ್ಡಸಣ್ಣೆಯ ವೀರಗಲ್ಲು ಶಾಸನ:**ಬೆಂಗಳೂರು–ದೇವನಹಳ್ಳಿ ರಾಷ್ಟ್ರೀಯ ಹೆದ್ದಾರಿಯಲ್ಲಿ ಬೆಂಗಳೂರಿನಿಂದ ೩೫ ಕಿ.ಮೀ. ದೂರದ ಅಣ್ಣೇಶ್ವರ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ದೊಡ್ಡಸಣ್ಣೆ ಗ್ರಾಮವಿದೆ. ಹೆದ್ದಾರಿಯಿಂದ ಪೂರ್ವಕ್ಕೆ ದೊಡ್ಡಸಣ್ಣೆ ಕೆರೆಗಂಗಮ್ಮ ದೇವಸ್ಥಾನದಿಂದ ಈಶಾನ್ಯ ದಿಕ್ಕಿಗೆ ಕಾಲುದಾರಿಯಲ್ಲಿ ೨೦ ಮೀಟರು ದೂರದಲ್ಲಿ ವೆಂಕಟೇಶಪ್ಪನ ಮಗ ಮುನಿರಾಜನ ಹೊಲದಲ್ಲಿ ಬೇವಿನಮರದ ಕೆಳಗೆ ಪೂರ್ವಾಭಿಮುಖವಾಗಿ ಗಂಗರ ಕಾಲದ ಎರಡು ವೀರಗಲ್ಲುಗಳಿವೆ. ಒಂದನೆಯ ವೀರಗಲ್ಲಿನ ಮೇಲೆ ಮೂರು ಸಾಲುಗಳ ಶಾಸನ ಮತ್ತು ರಾಜಪ್ರಮುಖನ ಯುದ್ಧದ ಉಬ್ಬುಶಿಲ್ಪವಿದೆ. ಈ ವೀರಗಲ್ಲು ನೆಲಮಟ್ಟದಿಂದ ೧.೧೬ ಮೀ. ಎತ್ತರ, ೧.೧೪ ಮೀ ಅಗಲ ಹಾಗೂ ೧೭ ಸೆಂ.ಮೀ.ದಪ್ಪವಿದ್ದು, ಇದರ ಮೇಲೆ ಮೂರು ಸಾಲುಗಳ ಅಪ್ರಕಟಿತ ಶಾಸನವಿದೆ.

**ಶಾಸನಪಾಠ**

೧ ಸ್ವ ಸ್ತಿ ಶ್ರೀ ಪೆಮ್ಮನಡಿಗಳ್ ಸಟ್ಣೆ

೨ ಳ್ಗೆ ಱಿ ಎದಿಯ. ಸ ಟಿಾದಿನಯವ್ರೂಲ್ಕಾದಿ ಟಿ [ದು]

೩ . . ಪ ರ ಟ ಎಱುನುಳು ಎಥಿರ ಸಗ್ಗಂ . .

ಮೊದಲ ಸಾಲಿನ ಎಲ್ಲ ಶಬ್ದಗಳೂ ಸ್ಪಷ್ಟವಾಗಿವೆ. ಸಣ್ಣೆಯನ್ನು 'ಪೆಮ್ಮನಡಿಗಳ್ ಸಟ್ಣೆ ಎನ್ನಲಾಗಿದ್ದು, ಸಣ್ಣೆಯ ಪ್ರಾಚೀನ ಶಾ.ಶ.೯೧೪ರ 'ಸಟ್ಣೆ ಮುನೂಱುಂ' ಉಲ್ಲೇಖಕ್ಕಿಂತಲೂ 'ಪೆಮ್ಮನಡಿಗಳ್ ಸಟ್ಣೆ'ಯ ಶಿಲಾಶಾಸನ ಹಿಂದಿನ ಕಾಲದ್ದಾಗಿದೆ.ಏಕೆಂದರೆ ಸಟ್ಣೆ, ಮುನ್ನೂರು ನೆಲೆಗಳ ಒಂದು ಆಡಳಿತ ಕೇಂದ್ರಸ್ಥಾನವಾಗುವುದಕ್ಕೂ ಮೊದಲು ಅದು ಗಂಗರಸರು ನೆಲೆಸಿದ ಊರಾಗಿತ್ತು. ಪೆಮ್ಮನಡಿ, ಪೆಮ್ಮಾಡಿ, ಪೆಮ್ಮಾನಡಿ, ಪೆರ್ಮಡಿ, ಪೆರ್ಮನಡಿ, ಪೆರ್ಮಾಡಿ, ಪೆರ್ವಡಿ ಎಂಬ ಬಿರುದುಗಳು ಗಂಗರಸರ ವ್ಯಕ್ತಿನಾಮಗಳ ಹಿಂದೆ ಬಳಸಲ್ಪಟ್ಟಿರುವುದನ್ನು ಶಾಸನಗಳಿಂದ ತಿಳಿದಿದ್ದೇವೆ. ಇದರರ್ಥ ದೊರೆ, ರಾಜ ಎಂದಾಗುತ್ತದೆ. ಎರಡನೆಯ ಸಾಲಿನ 'ಕಾದಳಿದು' ಹಾಗೂ ಮೂರನೆಯ ಸಾಲಿನ 'ಸಗ್ಗಂ' ಪದಗಳಿಂದ ತಿಳಿದುಬರುವ ಸಂಗತಿಯೆಂದರೆ–ಒಬ್ಬ ವೀರನು ಕಾದಿಳಿದು ಸ್ವರ್ಗಸ್ತನಾದದ್ದು. ಘಟನೆಗೆ ಪೂರಕವಾದ ಈ ವೀರಗಲ್ಲುಶಿಲ್ಪದಲ್ಲಿ ಅಶ್ವಾರೋಹಿ ವೀರನು ಬಲಗೈಯಲ್ಲಿ ಕತ್ತಿ ಹಿಡಿದು ಮೇಲೆತ್ತಿದ್ದಾನೆ. ಎದುರಿನಿಂದ ತೂರಿ ಬಂದ ಬಾಣ ವೀರನ ಕಿವಿಗೆ ನೆಟ್ಟಿದೆ.ಕುದುರೆಯು ಹಿಂಗಾಲು ನೆಲಕ್ಕೂರಿ, ಮುಂಗಾಲುಗಳನ್ನು ಮೇಲಕ್ಕೆತ್ತಿದೆ. ಕುದುರೆಯ ಕೆಳಗೆ ರುಂಡರಹಿತ ಮನುಷ್ಯನ ದೇಹ ಬಿದ್ದಿದೆ.ಅವನ ಬಲಗಾಲು ತುಂಡಾಗಿದೆ. ಕುದುರೆಯ ಮುಂದೆ ಇಬ್ಬರು ವೀರಸೇವಕರಿದ್ದು, ಒಬ್ಬನು ಎಡಗೈಯಲ್ಲಿ ಗುರಾಣಿ, ಬಲಗೈಯಲ್ಲಿ ಕತ್ತಿ ಹಿಡಿದು ಮೇಲೆ ಎತ್ತಿದ್ದಾನೆ.

ಇನ್ನೊಬ್ಬ ವೀರಸೇವಕ ಬಲಗೈ ಟೊಂಕದ ಮೇಲಿಟ್ಟುಕೊಂಡು, ಎಡಗೈಚಾಚಿದ್ದಾನೆ. ಅಶ್ವಾರೋಹಿ ವೀರನನ್ನು ಹಿಂಬಾಲಿಸುತ್ತಿರುವ ವೀರಸೇವಕನು ರಾಜಛತ್ರಿ ಹಿಡಿದಿದ್ದು, ಅವನ ಹಿಂದಿನ ಇನ್ನೊಬ್ಬ ಸೇವಕ ಚಾಮರ ಬೀಸುತ್ತಿದ್ದಾನೆ. ಉಬ್ಬುಶಿಲ್ಪದಲ್ಲಿ ರಾಜಛತ್ರಿ ಹಾಗೂ ಚಾಮರಗಳಿರುವುದರಿಂದ, ವೀರನು ರಾಜಪ್ರಮುಖನಾಗಿ ಕಾದಿಳಿದು ಸ್ವರ್ಗಸ್ತನಾಗಿದ್ದಾನೆ. ವೀರ ಹಾಗೂ ಸೇವಕರೆಲ್ಲರಿಗೂ ತಲೆಮೇಲೆ ಮುಡಿ ತೋರಿಸಲಾಗಿದೆ.

ಶಾಸನರಹಿತ ಎರಡನೆಯ ವೀರಗಲ್ಲು ನೆಲಮಟ್ಟದಿಂದ ೯೦ ಸೆಂ.ಮೀ. ಎತ್ತರ ೧.೧೭ ಮೀ ಅಗಲ ಹಾಗೂ ೧೯ ಸೆಂ.ಮೀ. ದಪ್ಪನೆಯ ಚಪ್ಪಡಿಯಿಂದ ಮಾಡಲ್ಪಟ್ಟಿದೆ. ಇದರ ಮೇಲೆಯೂ ಅಶ್ವಾರೋಹಿ ವೀರನು ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಗುರಾಣಿ ಹಿಡಿದಿರುತ್ತಾನೆ. ಹಿಂಗಾಲು ನೆಲಕ್ಕೂರಿ, ಮುಂಗಾಲುಗಳನ್ನು ಮೇಲೆತ್ತಿದ ಕುದುರೆಯ ಕೆಳಗೆ ಶತ್ರು ಬಿದ್ದಿರುವುದನ್ನು ಕಂಡರಿಸಲಾಗಿದೆ. ರಾಜಸೇವಕರು ಕುದುರೆಯನ್ನು ಹಿಂಬಾಲಿಸುತ್ತಿದ್ದಾರೆ.

* ಆಂಗ್ಲಭಾಷಾ ಶಿಕ್ಷಕ, ಕರ್ನಾಟಕ ಪಬ್ಲಿಕ್ ಶಾಲೆ, ಅಗರ, ಸರ್ಜಾಪುರ ರಸ್ತೆ, ಹೆಚ್.ಎಸ್.ಆರ್. ಬಡಾವಣೆ, ಬೆಂಗಳೂರು, ಮೊ. ೯೮೮೦೮೭೦೧೩೫

ಹೆದ್ದಾರಿಯ ಎಡ-ಬಲದ ಚಿಕ್ಕಸಣ್ಣೆ, ದೊಡ್ಡಸಣ್ಣೆ ಗ್ರಾಮಗಳ ಪ್ರದೇಶವು ಶಾ.ಶ.೯೧೪ ರಿಂದ ೧೪೦೧ ರವರೆಗಿನ ಶಾಸನಗಳಲ್ಲಿ ನಾಡು, ರಾಜ್ಯವಾಗಿ ಉಲ್ಲೇಖಿಸಲ್ಪಟ್ಟಿದೆ. ಸಾ.ಶ.೯೧೪ರ ಅರದೇಶಹಳ್ಳಿ ಶಾಸನವು ಗಂಗವಾಸನ ಮಗ ಗೋವಿಂದನ ಆಡಳಿತಾವಧಿಯದಾಗಿದ್ದು, ಇದರಲ್ಲಿ 'ಸಟ್ನಿ ಮುನೂಋಂ' ಎನ್ನಲಾಗಿದೆ.[೧] ಸೋಲದೇವನಹಳ್ಳಿಯ ಸಾ.ಶ.೧೦೨೯ರ ಶಾಸನದಲ್ಲಿ ಈ ಪ್ರದೇಶಕ್ಕೆ 'ಸಣ್ಣೆನಾಡು' ಎಂದಿದ್ದು, ಕುಮಾರಂಕುಶಗಾವುಂಡನು ಆಳುತ್ತಿದ್ದನು.[೨] ಸಾ.ಶ.೧೦೪೩ರ ಕಾಡುಗೋಡಿ ಶಾಸನದ ಪ್ರಕಾರ 'ಸಣ್ಣೈನಾಡು' ಪೆರ್ಮಾಡಿಗಾಮುಂಡನ ಮಗ ರಾಜರಾಜವೇಳಾನನ ಅಧೀನದಲ್ಲಿತ್ತು.[೩] ಇವನ ನಂತರ ಜಯಗೊಂಡಚೋಳವೇಳಾನ್ ಇಲ್ಲಿ ರಾಜ್ಯಭಾರ ಮಾಡಿರುವುದನ್ನು ಸಾ.ಶ.೧೦೪೬ರ ದೇವನಹಳ್ಳಿ ಶಾಸನವು ತಿಳಿಸುತ್ತದೆ.[೪] ಸಾ.ಶ.೧೦೬೭ರ ಬ್ಯಾಡರಹಳ್ಳಿ, ೧೧೫೦(?)ರ ಕಾಡುಗೋಡಿ ಶಾಸನಗಳಲ್ಲಿ ಈ ನಾಡಿನ ಉಲ್ಲೇಖಗಳಿದ್ದು, ಆಳಿದವರ ಮಾಹಿತಿ ಇರುವುದಿಲ್ಲ.[೫] ಸಾ.ಶ.೧೦೮೦ರ ಅಲ್ಲಾಳಸಂದ್ರ ಶಾಸನದಲ್ಲಿ 'ಸಂಣ್ಣನಾಡು' ಎಂದು ಉಲ್ಲೇಖಿಸಲ್ಪಟ್ಟಿದ್ದು, ಕುಲಥುಂಗ ಚೋಳ/ಕಾಡೆಯನಾಯಕರ ಆಡಳಿತ ಪ್ರಸ್ತಾಪವಾಗಿದೆ.[೬] ಗಂಗರಸರ ಉಯ.. ಗಾಮುಂಡನ ಮಗ ಪೊಲ್ಲಗಾಮುಂಡ, ಪೊಲ್ಲಗಾಮುಂಡನ ಮಗ ಕಾವಗಾಮುಂಡ, ಕಾವಗಾಮುಂಡನ ಮಗನೂ, ಆವತಿಯೂರಿನ ಒಡೆಯನೂ ಆಗಿರುವ ಗಂಗ ಪೆರ್ಗಡೆ ಮಚ್ಚಗಾಮುಂಡನನ್ನು ಹೆಸರಿಸುವ ಆವತಿಯ ಸಾ.ಶ.೧೧೩೩(?) ರ ಶಾಸನದಲ್ಲಿ 'ಸಣ್ಣೈನಾಡು' ಬಂದಿದೆ.[೭] ಸಾ.ಶ.೧೧೭೪ರ ಕಂಬದಹಳ್ಳಿ ಶಾಸನವು 'ವೀರರಾಜೇಂದ್ರ ಹೊಯ್ಸಳ ಸಣ್ಣೆನಾಡು'ಹಾಗೂ ಭರತೇಯನಾಯಕನನ್ನು ಉಲ್ಲೇಖಿಸುತ್ತದೆ.[೮] ಶಾ.ಶ.೧೨೮೩ರ ಕಾರಹಳ್ಳಿ ಶಾಸನದಲ್ಲಿ ಸಣ್ಣೈನಾಡ'ನ್ನು ವೆಂಬಿದೇವ (ನಂದಿದೇವ)ನೂ;[೯] ಸಾ.ಶ.೧೩೪೩ರ ಪಟ್ಟಂದೂರು ಶಾಸನದಲ್ಲಿ 'ಮಹಾಸಣ್ಣೆನಾಡು' ಹಾಗೂ 'ಸಣ್ಣೆರಾಜ್ಯ' ವೆನಿಸಿದ ಈ ಪ್ರದೇಶವನ್ನು ಚಿಕ್ಕಕಳೆಯನಾಯಕರೂ[೧೦] ಆಳಿರುವ ವಿಷಯ ಪ್ರಸ್ತಾಪವಾಗಿದೆ. ಸಾ.ಶ.೧೩೮೧ರ ಹರಿಯಪ್ಪ ಒಡೆಯರ ಆಡಳಿತಾವಧಿಯಲ್ಲಿ 'ಸಣ್ಣೈ ಮುಳವಾಯಿಲ್' ಎಂಬ ಉಲ್ಲೇಖದ ಬೇಚರಾಕ್ ಬೇಲೂರಿನ ಶಾಸನ ವಿಶಿಷ್ಟವೆನಿಸುತ್ತದೆ.[೧೧] ಏಕೆಂದರೆ ಸಣ್ಣೆಯು ಮುಳವಾಯಿಲಿನ ಪೂರ್ವಪದವಾಗಿ ಹೇಳಲ್ಪಟ್ಟಿದೆ.ಬಹುಶಃ ವಿಜಯನಗರದ ಸಂಗಮ ವಂಶದ ಅರಸು ಇಮ್ಮಡಿ ಹರಿಹರನು ಸಣ್ಣೆಯನ್ನು ಉಪರಾಜಧಾನಿಯನ್ನಾಗಿ ಮಾಡಿಕೊಂಡಿರಬೇಕೇ?ಎಂಬ ಜಿಜ್ಞಾಸೆ ಮೂಡಿಸುತ್ತದೆ. ಕರಕಿರೈನ ದಾಮೋದರ ಶೆಟ್ಟಿಯು ಈ 'ಶಣ್ಣೈನಾಡು' ಆಳಿರುವ ಪ್ರಸ್ತಾಪ ಸಾ.ಶ.೧೩೯೯ರ ಬಿಳಿಶಿವಾಲೆ ಶಾಸನದಲ್ಲಿದೆ.[೧೨] ಕಿತಗನೂರಿನ ಸಾ.ಶ.೧೪೦೧ರ ಶಾಸನದಲ್ಲಿ ಪುನಃ 'ಸಣ್ಣೈನಾಡು' ಪ್ರಸ್ತಾಪಗೊಂಡಿದೆ.[೧೩]

ಮುನ್ನೂರು ಹಳ್ಳಿಗಳ ವ್ಯಾಪ್ತಿಗೆ ಆಡಳಿತ ಕೇಂದ್ರವಾಗಿದ್ದ ಸಟ್ನಿ/ಸಣ್ಣೆಯು ಬಹುಶ: ದೇವನಹಳ್ಳಿ ಪಾಳೆಪಟ್ಟು ಸ್ಥಾಪಿತವಾದಂದಿನಿಂದ ಒಂದು ಗ್ರಾಮಮಟ್ಟಕ್ಕೆ ಕುಸಿದಿರಬೇಕು ಅಥವಾ ಸಣ್ಣೆಗೆ ೧೩ ಕಿ.ಮೀ. ದೂರದ ನಲ್ಲೂರನಾಡಿನ ಪಾಳೆಪಟ್ಟು, ೧೬ ಕಿ.ಮೀ. ದೂರದ ಯಲಹಂಕನಾಡಿನ ಪಾಳೆಪಟ್ಟುಗಳು ಸಣ್ಣೆನಾಡನ್ನು ತನ್ನೊಳಗು ಮಾಡಿಕೊಂಡಿರಬೇಕು. ವಿಸ್ತಾರವಾದ ಸಣ್ಣೆನಾಡಿನ ಕೇಂದ್ರಸ್ಥಾನ ದೊಡ್ಡಸಣ್ಣೆಯೊ ಅಥವಾ ಚಿಕ್ಕಸಣ್ಣೆಯೋ ಎಂಬ ಪ್ರಶ್ನೆ ಮೂಡುತ್ತದೆ.ನಮ್ಮ ಕ್ಷೇತ್ರಕಾರ್ಯದಲ್ಲಿ ದೊಡ್ಡಸಣ್ಣೆಯ ಆಸುಪಾಸಿನಲ್ಲಿ ಪ್ರಾಚೀನ ಕೋಟೆ, ದೇವಾಲಯ, ಸ್ಮಾರಕಗಳು ದೊರಕಿಲ್ಲ; ಆದರೆ ಚಿಕ್ಕಸಣ್ಣೆಯ ಪಕ್ಕದಲ್ಲಿ ಸುಮಾರು ನೂರು ಮೀ.ಎತ್ತರದ ಶಿಲಾಬೆಟ್ಟವು ಗಣಿಗಾರಿಕೆಯಿಂದ ಬಹಳ ಹಿಂದೆಯೇ ಹಾಳಾಗಿದೆಯಾದರೂ ಅಲ್ಲಲ್ಲಿ ಹಳೆ ಮನೆಗಳ ಗೋಡೆಗಳು, ಒರಳುಕಲ್ಲು, ಮತ್ತಿತರ ಅವಶೇಷಗಳು ಕಂಡಿವೆ. ಹಾಗಾಗಿ ಶಾಸನೋಕ್ತ 'ಸಟ್ನಿ' ಊರು ಇಂದಿನ ಚಿಕ್ಕಸಣ್ಣೆಯ ಹತ್ತಿರದಲ್ಲಿತ್ತೆಂದು ಲಭ್ಯ ಪ್ರಾಚ್ಯಾವಶೇಷಗಳಿಂದ ಹೇಳಬಹುದಾಗಿದೆ. ಇದಕ್ಕೆ ಪೂರಕವಾಗಿ ಚಿಕ್ಕಸಣ್ಣೆಗೆ ಸುಮಾರು ಆರೇಳು ಕಿ.ಮೀ. ದೂರದಲ್ಲಿ ಅರಸನಹಳ್ಳಿ, ಅರಿಸಿನಕುಂಟೆ, ದೊರೆಕಾವಲು ಎಂಬ ಗ್ರಾಮಗಳಿವೆ. ಈ ಭಾಗವನ್ನಾಳಿದ ಗಂಗ, ರಾಷ್ಟ್ರಕೂಟ, ಚೋಳ, ಹೊಯ್ಸಳ ಮತ್ತು ವಿಜಯನಗರದ ಅರಸರು ಈ ಗ್ರಾಮಗಳನ್ನು ಸ್ಥಾಪಿಸಿರಬೇಕು. ಅದರಂತೆ ಚಿಕ್ಕಸಣ್ಣೆಯಿಂದ ಏಳು ಕಿ.ಮೀ. ದೂರದಲ್ಲಿ ಹೊಯ್ಸಳ ರಾಮನಾಥನ ರಾಜಧಾನಿಯಾಗಿದ್ದ ಕುಂದಾಣಕ್ಕೆ ಚಿಕ್ಕಸಣ್ಣೆ ಅಮಾನಿಕೆರೆಯ ನೀರು ಪುರೈಕೆಯಾಗುತ್ತಿತ್ತೆಂದು ತಿಳಿದುಬರುತ್ತದೆ.

ಸೂಲಿಕುಂಟೆ ವೀರಗಲ್ಲು ಶಾಸನ: ಬೆಂಗಳೂರು ಪೂರ್ವ ತಾಲ್ಲೂಕು, ಕೊಡತಿ ಗ್ರಾಮ ಪಂಚಾಯಿತಿಗೊಳಪಡುವ ಸೂಲಿಕುಂಟೆ ಗ್ರಾಮವು ಬೆಂಗಳೂರು-ದೊಮ್ಮಸಂದ್ರ ರಾಷ್ಟ್ರೀಯ ಹೆದ್ದಾರಿ ೨೦೭ರ ಬಲಭಾಗದಲ್ಲಿದ್ದು, ಬೆಂಗಳೂರಿನಿಂದ ೨೨ ಕಿ.ಮೀ. ದೂರದಲ್ಲಿದೆ. ಸಾ.ಶ.೧೩೦೧ರ ಗುಂಜೂರು ಶಾಸನದಲ್ಲಿ ಉಕ್ತವಾಗಿರುವ 'ಸೂರಿಕ್ಕುಟ್ಟೈ'[೧೪]>'ಸೂಲಿಕುಂಟೆ' ಯಾಗಿದ್ದು,'ಸೂಲಿ' ಸಸ್ಯಸಂಬಂಧಿ ಶಬ್ದವಾಗಿದೆ. ಜಲಮೂಲದ ಕುಂಟೆ/ಕಟ್ಟೆ/ಕೆರೆಯ ಪಕ್ಕದಲ್ಲಿ 'ಸೂಲಿ' ಸಸ್ಯಗಳು ಬೆಳೆದಿರುವ ಸ್ಥಳದಲ್ಲಿ ಜನವಸತಿ ನಿರ್ಮಿಸಿಕೊಂಡಿದ್ದರಿಂದ ಸೂಲಿಕುಂಟೆ ಗ್ರಾಮನಾಮ ಬಂದಿರಬೇಕು.ಇಂಥ ಗ್ರಾಮನಾಮಗಳು ಬೆಂಗಳೂರು, ಚಿಕ್ಕಬಳ್ಳಾಪುರ ಮತ್ತು ಕೋಲಾರ ಜಿಲ್ಲೆಗಳಲ್ಲಿ ಕಂಡು ಬರುತ್ತವೆ.

ಬೆಂಗಳೂರು ಪೂರ್ವ ತಾಲ್ಲೂಕಿನ ಸೂಲಿಕುಂಟೆ ಗ್ರಾಮದಲ್ಲಿ ಜೇಬಿಕುಂಟೆ ದಂಡೆಯ ಮೇಲೆ ಪೂರ್ವಾಭಿಮುಖವಾಗಿ ನೆಡಲಾದ ಮೂರು ಸಾಲುಗಳ ಅಪ್ರಕಟಿತ ವೀರಗಲ್ಲು ಶಾಸನವಿದೆ. ಈ ಶಾಸನಕಲ್ಲು ನೆಲಮಟ್ಟದಿಂದ ೯೨ ಸೆಂ.ಮೀ. ಎತ್ತರ, ೬೪ ಸೆಂ.ಮೀ. ಅಗಲ ಹಾಗೂ ೧೫ ಸೆಂ.ಮೀ.ದಪ್ಪನೆಯ ಸ್ಥಳೀಯ ಗಟ್ಟಿಕೆಂಪುಕಲ್ಲಿನಲ್ಲಿ ಮಾಡಲ್ಪಟ್ಟಿದೆ.

ಶಾಸನಪಾಠ

೧ ಸ್ವ [ಸ್ತಿ] ಶ್ರೀ ಧು ಗು ತ್ತು ಕೊ ಡೆ ಹ ಪ್ಪೆ [ಜೀಯ]

೨ ಮೂ ನ್ಮ ಪುಸ್ಸುಗುರ ತೂಱುಗೊಲೆ ಸ

೩ ತ್ತಂ

ತುರುಗಾಳಗದಲ್ಲಿ ಮಡಿದ ವೀರನ ಸ್ಮಾರಕಶಿಲೆ ಇದಾಗಿದೆಯೆಂದು ಎರಡು ಮತ್ತು ಮೂರನೆಯ ಸಾಲುಗಳಿಂದ ತಿಳಿಯುತ್ತದೆ. ವೀರಗಲ್ಲು ಶಾಸನಶಿಲ್ಪದಲ್ಲಿ ವೀರನು ಬಲಗೈಯಲ್ಲಿ ಕತ್ತಿ ಹಿಡಿದು ಮೇಲೆತ್ತಿದ್ದಾನೆ. ವೀರನಿಗೆ ಮುಡಿ, ಕಂಠಹಾರ, ತೋಳ್ಬಂದಿಗಳಿದ್ದು, ಎಡಭಾಗದಲ್ಲಿ ಚಾಮರಧಾರಿ ಅಪ್ಸರೆಯನ್ನು ಕಂಡರಿಸಲಾಗಿದೆ. ವೀರಗಲ್ಲು ಶಾಸನದ ಮುಂದೆ ಎರಡು ಯಂತ್ರದ ಕಲ್ಲುಗಳಿರುತ್ತವೆ. ಬಲಭಾಗದ ಯಂತ್ರಗಲ್ಲಿನ ಮೇಲೆ ತ್ರಿಕೋನ ರೇಖೆಗಳಿವೆ.

ಸಾ.ಶ. ೧೪೩೩ರ ಚಿಂತಲ ಮಡಿವಾಳ ಗ್ರಾಮದ ಪೂರ್ವ ಸಿದ್ದಾರೆಡ್ಡಿ ಹೊಲದ ಶಾಸನದಲ್ಲಿ 'ಮುಳವಾಗಿಲ ರಾಜ್ಯದ ಸಾಱಿಕ್ಕಿಯ ಪೆಂಮೆಯನಾಯ್ಕರು ತಮ್ಮ ನಾಯ್ಕತನಕ್ಕೆ ಸಲುವ ಬೇಹೂರನಾಡ ಹುಸುಕೂರಲಿ ಕೊಟ್ಟ ಮಾನ್ಯ' ಎನ್ನಲಾಗಿದೆ.[೧೫] ಸಾ.ಶ.ಸು.೯, ೧೦ನೆಯ ಶತಮಾನ ಅಂದರೆ ಗಂಗರ ಆಡಳಿತಾವಧಿಯಲ್ಲಿ 'ಪುಸ್ಸುಗುರ' ಆಗಿದ್ದ ಗ್ರಾಮನಾಮವು ೧೫ನೆಯ ಶತಮಾನದ ಹೊತ್ತಿಗೆ 'ಹುಸುಕೂರ'ವಾಗಿ, ಪ್ರಸ್ತುತ 'ಹುಸ್ಕೂರು' ಎಂದು ಕರೆಯಲ್ಪಡುತ್ತಿದೆ.

ಕೃಷ್ಣರಾಜಪುರದಲ್ಲಿರುವ ಸಾ.ಶ.೭೫೦ರ ಗಂಗ ಶ್ರೀಪುರುಷನ ಶಾಸನದಲ್ಲಿ 'ವೊಸಊರರಲ್ಲೊಯನು ಮಾರೆಯನು ಉರಳಿಶಿ'[೧೬] ಎಂಬ ವಾಕ್ಯಾಂಗದಲ್ಲಿರುವ ವೊಸಊರನ್ನು ಪ್ರಸ್ತುತ ಸೂಲಿಕುಂಟೆ ಶಾಸನೋಕ್ತ ಪುಸ್ಸುಗುರ ಸಂದರ್ಭದಲ್ಲಿ ಗಮನಿಸಬೇಕಾಗುತ್ತದೆ. ಬೆಂಗಳೂರು ಜಿಲ್ಲೆ ಆನೇಕಲ್ ತಾಲ್ಲೂಕಿನ ಹುಸ್ಕೂರು ಪ್ರಸ್ತುತ ಅಪ್ರಕಟಿತ ಸೂಲಿಕುಂಟೆ ಶಾಸನದಲ್ಲಿ ಉಕ್ತವಾಗಿದ್ದರೆ; ಹೊಸಕೋಟೆ ತಾಲ್ಲೂಕಿನ ಹುಸ್ಕೂರು ಶಿವನಾಪುರದ ಮಗ್ಗದ ಕರಿಯಪ್ಪನ ಹೊಲದಲ್ಲಿರುವ ಸಾ.ಶ.೧೭೪೫ರ ಶಾಸನದಲ್ಲಿ ಹುಸುಕೂರು ನವಾಬರು ಎಂದು ಉಲ್ಲೇಖಿಸಲ್ಪಟ್ಟಿದೆ.[೧೭]

**ದೊಡ್ಡಗುಬ್ಬಿಯ ನೋಂಪಿ ಶಾಸನ:** ಬೆಂಗಳೂರು ಪೂರ್ವ ತಾಲ್ಲೂಕಿನ ದೊಡ್ಡಗುಬ್ಬಿಯು ಬೆಂಗಳೂರಿನಿಂದ ಈಶಾನ್ಯಕ್ಕೆ ಸುಮಾರು ೨೦ ಕಿ.ಮೀ. ದೂರದಲ್ಲಿದೆ. ಗ್ರಾಮ ಪಂಚಾಯಿತಿಯ ಕೇಂದ್ರಸ್ಥಳವಾಗಿರುವ ಈ ಊರಿನಲ್ಲಿ ಹೊಯ್ಸಳರಸರ ಉತ್ತರಾರ್ಧ ಕಾಲಮಾನದ ನಿರ್ಮಿತಿಯಾದ ಸೋಮೇಶ್ವರ ದೇವಾಲಯವಿದೆ. ಪುನರ್ ನಿರ್ಮಾಣಕ್ಕಾಗಿ ಹಳೆಯ ಸ್ಮಾರಕವನ್ನು ಬೀಳಿಸುತ್ತಿದ್ದಾಗ, ಗೋಡೆಯಲ್ಲಿ ಸೇರಿಸಿ ಕಟ್ಟಲಾದ ೧೧ ಸಾಲುಗಳ ಶಿಲಾಶಾಸನದ ಕಲ್ಲು ದೊರಕಿದ್ದು, ಇದು ೭೦ ಸೆಂ.ಮೀ. ಎತ್ತರ, ೫೬ ಸೆಂ.ಮೀ. ಅಗಲ ಹಾಗೂ ೧೪ ಸೆಂ.ಮೀ. ದಪ್ಪವಾಗಿದೆ.

**ಶಾಸನಪಾಠ**

೧ ಸ್ವ ಸ್ತಿ ಶ್ರೀ ಶಕಾಬ್ದ ೧೨೯೩

೨ ಎನೆಯ ಸಾದಾರಣ ಸಂವತ್ಸ

೩ ರ ಪುಷ್ಯ ಸು ೧ ಗುರುವಾರದ

೪ ಲು ಗುಬೆಯ ಸ್ತಾನವಳಿ ಬಂ

೫ ಗಾಚಾರಿ ಬಯಿರೋಜನ ಮ

೬ ಗ ಚೊಕ್ಕ ಭಕ್ತನು ದೇವಲೋಕ

೭ ಕೆ ಸಂದನ್ದು ಆ ಚೊಕ

೮ ಭಕ್ತನ ಮಗ ಬಯಿರೊ

೯ ಜನು ಯೀ ನೋ[ಂ]ಪಿಯ ನಿ

೧೦ ಲಿಸಿದನು ಇ ಸಸಾನವ

೧೧ ಬರದವ ಕಾಳಾಚಾರಿ

ಶಕವರ್ಷ ೧೫ನೆಯ ಶತಮಾನದ ಉತ್ತರಾರ್ಧ ಕಾಲಮಾನದ ಶಾಸನ ಇದಾಗಿದೆ.ಗುಬೆಯ ಸ್ತಾನದ ಬಂಗಾಚಾರಿ ಬಯಿರೋಜನ ಮಗನಾದ ಚೊಕ್ಕಭಕ್ತನು ದೇವಲೋಕಕ್ಕೆ ಸಂದ ದಿನದಂದು ಚೊಕ್ಕಭಕ್ತನ ಮಗ ಬಯಿರೋಜನು ನೋಂಪಿಯ ನಿಲ್ಲಿಸಿದನೆಂದೂ, ಈ ಶಾಸನವನ್ನು ಕಾಳಾಚಾರಿ ಎಂಬವನು ಬರೆದದ್ದೆಂದೂ ಹೇಳಲಾಗಿದೆ. ಬಯಿರೋಜನು ತನ್ನ ತಂದೆ ಚೊಕ್ಕಭಕ್ತನು ದೇವಲೋಕಕ್ಕೆ ಸಂದ ದಿನದಂದೇ ವ್ರತದ ನೆನಪಿಗಾಗಿ ನೋಂಪಿಕಲ್ಲನ್ನು ನಿಲ್ಲಿಸಿ, ಕೃತಾರ್ಥಭಾವ ಮೆರೆದಿದ್ದಾನೆ. ಚೊಕ್ಕಭಕ್ತನು ತನ್ನ ತಂದೆಯ ಹೆಸರನ್ನೇ ಮಗನಿಗೆ ನಾಮಕರಣ ಮಾಡಿರುವುದನ್ನು ಇಲ್ಲಿ ಕಾಣುತ್ತೇವೆ. ಕೊನೆಗೆ ಶಿಲಾಶಾಸನವನ್ನು ಬರೆದ ಕಾಳಾಚಾರಿಯೂ ಕೂಡ ಬಂಗಾಚಾರಿ ಬಯಿರೋಜನ ವೃತ್ತಿ ಸಂಬಂಧಿಯಾಗಿರುತ್ತಾನೆ. ಪ್ರಸ್ತುತ ಶಾಸನದ ಆಧಾರದಿಂದ ಕೆಳಕಂಡಂತೆ ವಂಶಾವಳಿಯೊಂದನ್ನು ನಿರೂಪಿಸಬಹುದಾಗಿದೆ.

ಶಾ.ಶ.ಸು. ೭೦೦ ರಿಂದ ನೋಂಪಿ (ವ್ರತ)ಯು ಆಚರಣೆಯಲ್ಲಿರುವುದನ್ನು ಶಾಸನಗಳಲ್ಲಿ ಕಾಣುತ್ತೇವೆ. ಅಚಾಮ್ಲವರ್ಧನ ನೋಂಪಿಯನ್ನಾಚರಿಸಿ ಸಮಾಧಿಮರಣದಿಂದ ಮುಡಿಪಿದ ಪ್ರಸಂಗ 'ವಡ್ಡಾರಾಧನೆ' ಯಲ್ಲಿ ಹಾಗೂ ಮನೋವಲ್ಲಭೆಯನ್ನು ನೆನೆದು ಮಾಡಿದ ನೋಂಪಿಯ ವಿವರ ಆದಿಪುರಾಣದಲ್ಲಿ ಬರುತ್ತದೆ. ಪಾಂಡವರಿಗೆ ಸಾವು ಸೇರದಿರಲು ತನಗೆ ತಾನು ಮುನ್ನಾವ ನೋಂಪಿಯನಳಿದೆನೋ ಎಂದು ಧೃತರಾಷ್ಟ್ರ ಮರುಗುತ್ತಾನೆ.[೧೮] ಅಂದರೆ ಈ ಬಗೆಯ ನೋಂಪಿಯ ಆಚರಣೆಯಿಂದ ಸಾಧಿಸುವುದು ಒಂದು ವಿಧವಾದರೆ, ನೋಂಪಿಯನ್ನಳಿಯುವುದರಿಂದಲೂ ನಿರೀಕ್ಷಿತ ಸಾಧನೆಗಳು ಹುಸಿಯಾಗುತ್ತವೆಂಬ ಭಾವನೆಗಳಿದ್ದವು.ದೊಡ್ಡಗುಬ್ಬಿಯಲ್ಲಿ ಯಾವ ಬಗೆಯ ನೋಂಪಿಯನ್ನು ಚೊಕ್ಕಭಕ್ತನು ಕೈಗೊಂಡು ದೇವಲೋಕಕ್ಕೆ ಸಂದನೆಂಬುದು ಈ ಶಾಸನದಲ್ಲಿ ಸ್ಪಷ್ಟವಾಗಿರುವುದಿಲ್ಲ.

ದೊಡ್ಡಗುಬ್ಬಿ ನೋಂಪಿ ಶಾಸನದಲ್ಲಿ ಬಂದಿರುವ 'ಗುಬೆಯಸ್ತಾನ' ವು ಸ್ಥಳನಾಮವಾಗಿದೆ. ಆದಿಯಲ್ಲಿ ಅಲ್ಲೊಬ್ಬ ಗುಬೆಯ, ಗುಬ್ಬಯ್ಯ ಎಂಬ ವ್ಯಕ್ತಿ ಆಗಿಹೋಗಿರುವುದರಿಂದ 'ಗುಬೆಯಸ್ತಾನ'>'ಗುಬ್ಬಿ'ಯಾಗಿದೆ.ಈಗಲೂ ದೊಡ್ಡಗುಬ್ಬಿಯಲ್ಲಿ ಗುಬ್ಬಯ್ಯನವರ ಮನೆತನದವರೆಂಬ ಹೆಗ್ಗಳಿಗೆ ಕುರುಬ ಜನಾಂಗದವರಲ್ಲಿದೆ.

**ಸೋಲೂರಿನ ಕಂಬ ಶಾಸನಗಳು:** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೂಕು ಕೇಂದ್ರದಿಂದ ೧೭ ಕಿ.ಮೀ. ಹಾಗೂ ನೆಲಮಂಗಲದಿಂದ ೨೧ ಕಿ.ಮೀ. ದೂರದಲ್ಲಿ ಸೋಲೂರು ಗ್ರಾಮವಿದೆ. ಶಾಸನಗಳಲ್ಲಿ ಸೋಲೂರ,[೧೯] ಸೋಲೂರ ಸೀಮೆ,[೨೦] ಶ್ರೀ ಶ್ರೀ ಶ್ರೀ ಸೋಲೂರ,[೨೧] ಶ್ರೀಮತು ಸೋಲೂರ[೨೨] ಹಾಗೂ ಸೋಲೂರು[೨೩] ಎಂದು ಉಲ್ಲೇಖಿಸಲ್ಪಟ್ಟಿರುವ ಈ ಊರು ವಿಜಯನಗರಾವಧಿಯಲ್ಲಿ ಸೀಮೆಯ ಕೇಂದ್ರಸ್ಥಳವಾಗಿತ್ತು. ಊರಿನ ಪಶ್ಚಿಮ ಬೆಂಚಿಮಠದ ಹಿಂದೆ ಇರುವ ಪ್ರದೇಶವನ್ನು ಈಗಲೂ ಕೋಟೆ ಎಂದು ಹೇಳಲಾಗುತ್ತದೆ.

ಸೋಲೂರಿನ ಕೋಟೆ ಪ್ರದೇಶದಿಂದ ಪೂರ್ವಕ್ಕೆ ಮುಖ್ಯ ರಸ್ತೆಯಲ್ಲಿ ತ್ರಿಕೂಟದ ಈಶ್ವರ ದೇವಾಲಯವಿದ್ದು, ಗರ್ಭಗೃಹ, ಅಂತರಾಳ, ಸಭಾಮಂಟಪ ಭಾಗಗಳಿವೆ. ದೇವಾಲಯದ ಮುಂಭಾಗದ ಆವರಣದಲ್ಲಿರುವ ಶಿಲಾಮಂಟಪದ ಆಗ್ನೇಯ ಕಂಬದ ಮೇಲೆ ನಾಲ್ಕು ಸಾಲುಗಳ ಅಪ್ರಕಟಿತ ಶಿಲಾಶಾಸನವಿದೆ.

**ಶಾಸನಪಾಠ**

೧ ಸುರಿಸೆಟ್ಟಿ ಮಗ

೨ ಬಾಗವಂತ ಚಿಗ

೩ ತಿಪ್ಪ ಮಾಡಿಸಿ

೪ ದ ಕಂಬ

ಸೋಲೂರಿನಲ್ಲಿ ಕುದೂರು-ತಟ್ಟೆಕೆರೆ ರಸ್ತೆಗಳೆರಡೂ ಬೇರ್ಪಡುವ ಸ್ಥಳದಲ್ಲಿ ಬಸವಣ್ಣನ ಗುಡಿಯಿದೆ.ಈ ಗುಡಿಯು ಪಶ್ಚಿಮಾಭಿಮುಖವಾಗಿದ್ದು, ನೈಋತ್ಯ ದಿಕ್ಕಿನ ಕಂಬದ ಮೇಲೆ ಮೂರು ಸಾಲುಗಳ ಅಪ್ರಕಟಿತ ಶಾಸನವಿದೆ.

**ಶಾಸನಪಾಠ**

೧ ಆದಿಮು ಸೆಟ್ಟಿ

೨ ಮಗ ಆದಿಸೆಟ್ಟಿ

೩ ಕಂಬ

ಶಾಸನೋಕ್ತ ಸುರಿಸೆಟ್ಟಿ, ಆದಿಮುಸೆಟ್ಟಿ, ಆದಿಸೆಟ್ಟಿ – ಇವರೆಲ್ಲರೂ ವ್ಯಾಪಾರಸ್ಥರಾಗಿದ್ದರು.ಸೋಲೂರಿನ ವ್ಯಾಪಾರಿಗಳು ತುಮಕೂರು, ಕಡಪ, ಹುಲಿಕಲ್ಲು, ಮಾಗಡಿ, ಬೆಂಗಳೂರು, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಗುಡಿಬಂಡೆ, ಮದನಪಲ್ಲಿ, ಕೋಳಾಲ, ಪುಂಗನೂರು ಮತ್ತು ಪೆನುಗೊಂಡೆ ಮುಂತಾದ ವಾಣಿಜ್ಯ ಕೇಂದ್ರಗಳಲ್ಲಿರುವ ವ್ಯಾಪಾರಸ್ಥರೊಂದಿಗೆ ಸಂಪರ್ಕ ಹೊಂದಿದ್ದರು.ಈ ಎಲ್ಲ ಸ್ಥಳಗಳ ವ್ಯಾಪಾರಿಗಳು ಕೋಲಾರ ದೇಶದ ವೀರಪ್ಪನಿಗೆ ಕೋಲಾರ ಹೆದ್ದಾರಿ ಮೂಲಕ ಸರಕು ಸಾಗಾಣಿಕೆ ಮಾಡಿದ್ದಕ್ಕಾಗಿ ಸುಂಕ ಭರಿಸಬೇಕಾಗಿತ್ತು. ಸೋಲೂರಿನಲ್ಲಿದ್ದ ವ್ಯಾಪಾರಿಗಳು ಇಲ್ಲಿಯ ಶೈವ ದೇವಾಲಯಗಳ ಕಂಬಗಳನ್ನು ಮಾಡಿಸಿದ್ದಾರೆ. ಸುಮಾರು ೧೫ನೆಯ ಶತಮಾನದ ಶಾಸನೋಕ್ತ ಕಂಬಗಳು ಸೋಲೂರಿನ ಈಶ್ವರ ಮತ್ತು ಬಸವಣ್ಣನ ದೇವಾಲಯಗಳಲ್ಲಿರುತ್ತವೆ.

**ಚನ್ನಹಳ್ಳಿ ಚನ್ನಕೇಶವ ದೇವಾಲಯದ ಶಾಸನ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಉತ್ತರ ತಾಲ್ಲೂಕಿನ ಹೊಯ್ಸಳರಸರ ಶಾಸನಗಳಲ್ಲಿ ಉಕ್ತಗೊಂಡ 'ಜಾಲ'ದಿಂದ ವಾಯವ್ಯಕ್ಕೆ ಒಂದು ಕಿ.ಮೀ. ದೂರದಲ್ಲಿ ಚನ್ನಹಳ್ಳಿ ಗ್ರಾಮವಿದೆ. ಬೆಂಗಳೂರು–ಚಿಕ್ಕಬಳ್ಳಾಪುರ ರೈಲುಹಳಿಯ ಬಲಪಕ್ಕಚನ್ನಕೇಶವ ದೇವಾಲಯದ ಎದುರಿಗೆ ೪೫ ಸೆಂ.ಮೀ. ಎತ್ತರ, ೬೫ ಸೆಂ.ಮೀ. ಅಗಲ ಹಾಗೂ ೧೪ ಸೆಂ.ಮೀ.ದಪ್ಪನೆಯ ಕಲ್ಲಿನ ಮೇಲೆ ಸುಮಾರು ೧೯ನೆಯ ಶತಮಾನದ ಆರು ಸಾಲುಗಳ ಶಾಸನವಿದೆ. ಶಾಸನಕಲ್ಲಿನ ಮೇಲೆ ಸೂರ್ಯ–ಚಂದ್ರರ ರೇಖಾಚಿತ್ರಗಳಿದ್ದು, ಸ್ಥಳೀಯ ಗಟ್ಟಿಕಲ್ಲನ್ನು ಬಳಸಲಾಗಿದೆ.

**ಶಾಸನಪಾಠ**

೧ ವಿಕ್ರಮ ಸವಚರದ

೨ ಲಿ ಕಮೆನಾಯಕನ ಮಗ

೩ ಸಗುಲ ತಿಮ್ಮಯನ ಕ

೪ ಂಬದ ಸೇವೆ ಯಿದ ವಮ

೫ ಪೊಕ ತಪದೆ ನಡಸಿಕೊಂ

೬ ಡ ಅವರಿಗೆ ಪುಣಿಯ

ಶಾಸನೋಕ್ತ ಕಮೆನಾಯಕನ ಮಗ ಸಗುಲ ತಿಮ್ಮಯ್ಯನು ನಿಲ್ಲಿಸಿದ ಕಂಬ ಹಾಗೂ ಹಳೆಯ ಚನ್ನಕೇಶವ ದೇವಾಲಯಗಳನ್ನು ಬೀಳಿಸಿ, ಹೊಸ ಆರ್.ಸಿ.ಸಿ.ದೇವಾಲಯವನ್ನು ನಿರ್ಮಿಸಲಾಗಿದೆ.ದೇವಾಲಯದ ಕಂಬ ನಿಲ್ಲಿಸುವ ಸೇವೆಯನ್ನು ತಪ್ಪದೇ ಮುನ್ನಡೆಸಿಕೊಂಡು ಹೋಗುವ ಭಕ್ತರಿಗೆ ಪುಣ್ಯ ಲಭಿಸುತ್ತದೆಂಬ ಮಾತು ಗಮನೀಯವಾಗಿದೆ.

**ಹಾಲನಾಯಕನಹಳ್ಳಿ ಕೋದಂಡರಾಮಸ್ವಾಮಿ ದೇವಾಲಯದ ಶಾಸನಗಳು:** ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಪೂರ್ವ ತಾಲ್ಲೂಕಿನ ಗ್ರಾಮ ಪಂಚಾಯಿತಿ ಕೇಂದ್ರವಾದ ಹಾಲನಾಯಕನಹಳ್ಳಿಯು ಬೆಂಗಳೂರು–ದೊಮ್ಮಸಂದ್ರ ರಸ್ತೆಯಲ್ಲಿ ಕನ್ನೆಲ್ಲಿಯಿಂದ ದಕ್ಷಿಣಕ್ಕೆ ಎರಡು ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಕೋದಂಡರಾಮಸ್ವಾಮಿ ದೇವಾಲಯದಲ್ಲಿ ಮೂರು ಗರ್ಭಗೃಹಗಳು ಹಾಗೂ ಸಭಾಮಂಟಪವಿದೆ.ಸಭಾಮಂಟಪದ ಪ್ರವೇಶದ್ವಾರದ ಬಲಗೋಡೆ ಮೇಲೆ ನಾಲ್ಕು ಸಾಲುಗಳ ಶಾಸನವಿದೆ.

**ಶಾಸನಪಾಠ**

೧ ಬೆಂಗಳೂರುಗೆ ಸೆರಿದ ಅನಪಲ್ಲಿ ವೆಂಗಟಪ್ಪ

೨ ನವರ ಧರ್ಮಪತ್ನಿಯಾದಂತಾ ಸಾಕಂಮನವರ

೩ ಕುಮಾರ ವೆಂಕಟಶ್ಯಾಮಪ್ಪನವರುಗಳು ಕಟಿಶಿದ

೪ ಶ್ರಿ ಶಿತಾರಾಮಜಿನೆಯರ ಪುತಿಪ ೧೯೦೮ನೆ ಯಿಶಿವಿ ಜಯ

ಬೆಂಗಳೂರು ಮಹಾನಗರಪಾಲಿಕೆಯ ಕೋರಮಂಗಲ ಕೆರೆದಂಡೆಯ ಮೇಲಿರುವ ಈಗಿನ ನೀಲಸಂದ್ರವು



ಆನೆಪಾಳ್ಯವೆಂದು ಕರೆಯಲ್ಪಡುತ್ತಿತ್ತು. ಆನೆಪಾಳ್ಯವನ್ನು ಶಾಸನದಲ್ಲಿ ಅನಪಲ್ಲಿ ಎಂದು ಸಂಬೋಧಿಸಿರಬಹುದು. ಅನಪಲ್ಲಿ (ಆನೆಪಾಳ್ಯ) ಯ ವೆಂಕಟಪ್ಪ–ಸಾಕಮ್ಮನವರ ಮಗ ವೆಂಕಟಶಾಮಪ್ಪನವರು ಸೀತೆ–ರಾಮ–ಆಂಜನೇಯರ ವಿಗ್ರಹವನ್ನು ಮಾಡಿಸಿಕೊಟ್ಟ ಮಾಹಿತಿಯನ್ನು ಶಾಸನವು ದಾಖಲಿಸುತ್ತದೆ.

ಇದೇ ದೇವಾಲಯದ ಗರ್ಭಗೃಹ ಪ್ರವೇಶದ್ವಾರದ ಹೊಸ್ತಿಲಕ್ಕಿರುವ ಹಿತ್ತಾಳೆಯ ಹೊದಿಕೆಯ ಮೇಲೆ ಆರು ಸಾಲುಗಳ ಶಾಸನವಿದೆ.

**ಶಾಸನಪಾಠ**

೧ ಸನ್ ೧೯೧೩ನೇ ಯಿಸ್ವಿ ಪ್ರಮಾದಿ
೨ ನಾಮಾ ಸಂವತ್ಸರ ಮಾರ್ಗಶಿರ ಶುದ
೩ ೧೫ ಪೌ. ದಿನದಲ್ಲಿ ।ಆ। ಲನಕ
೪ ಹಳಿ ಪಟೆಲ್ ನಂಜುಂಡಪ್ಪನವರ ಧರ್ಮ
೫ ಪತ್ನಿ ಮುನಿಯಮ [ಸ]ರು ಬಾಗಲ ವಾ
೬ ಡ ಭಕ್ತಿ

ಶಾಸನೋಕ್ತ, ।ಆ।ಲನಕಹಳ್ಳಿ > ಹಾಲನಾಯಕನಹಳ್ಳಿ ಆಗಿದ್ದು, ಸ್ಥಳೀಯ ಪಟೇಲರ ಧರ್ಮಪತ್ನಿ ಮುನಿಯಮ್ಮನವರು ಕೋದಂಡರಾಮಸ್ವಾಮಿ ಗರ್ಭಗೃಹದ ಪ್ರವೇಶದ್ವಾರ ಶಾಖೆಗಳಿಗೆ ಹಿತ್ತಾಳೆ ಹೊದಿಕೆಯನ್ನು ಮಾಡಿಸಿ ತಮ್ಮ ಭಕ್ತಿ ಸಮರ್ಪಿಸಿದ್ದಾರೆ. ಹಾಲನಾಯಕನು ಆಳುತ್ತಿದ್ದ ಊರು

**ಪಣತ್ತೂರಿನ ಹೊಯ್ಸಳ ಮುಮ್ಮಡಿ ಬಲ್ಲಾಳನ ಶಾಸನ :** ಬೆಂಗಳೂರು ನಗರದ ವರ್ತುಲ ರಸ್ತೆಯ ಕಾಡುಬಿಸನಹಳ್ಳಿಯಿಂದ ಪೂರ್ವಕ್ಕೆ ಎರಡು ಕಿ.ಮೀ. ದೂರದಲ್ಲಿ ಪಣತ್ತೂರು ಗ್ರಾಮವಿದೆ. ಗ್ರಾಮದ ಗಣಪತಿ ದೇವಾಲಯದ ಎಡಗೋಡೆಗೆ ಉತ್ತರಾಭಿಮುಖವಾಗಿ ೨೦ ಸಾಲುಗಳ ತಮಿಳು ಶಾಸನದ ಕಲ್ಲನ್ನು ನಿಲ್ಲಿಸಲಾಗಿದೆ.ಪಕ್ಷಿಯ ಮುಖ, ಮನುಷ್ಯನ ದೇಹವುಳ್ಳ ಗಂಡಬೇರುಂಡದ ಮುಂದೆ ಬಾಯಿತೆರೆದ ಹುಲಿಯ ರೇಖಾಚಿತ್ರವಿದೆ.ಇಂತಹ ಚಿತ್ರಗಳು ಬೆಂಗಳೂರಿನ ಗಾಣಿಗರಹಳ್ಳಿ, ಬ್ಯಾಡರಹಳ್ಳಿ, ಬನ್ನೇರುಘಟ್ಟ ಶಾಸನಗಳಲ್ಲಿ ಕಂಡುಬಂದಿವೆ.

ಸ್ವಸ್ತಿಶ್ರೀ ಶ್ರೀಮತ್ ಪ್ರತಾಪ ಚಕ್ರವರ್ತಿ ಭುಜಬಲ ಹೊಯಿಸಳ ವೀರ ವಲ್ಲಾಳದೇವರ್; ಪಣಚೂರಾನಾ; ಕಾಮೆಯನಾಯಕ ಸತುರ್ವೇದಿ ಮಂಗಲತ್ತ; ಪ್ರಮಾಣಂ ಪಣ್ಣಿಕು; ವಲ್ಲಾಳರ್ – ಎಂಬ ಪದಗಳನ್ನು ಮಾತ್ರ ಪಣತ್ತೂರು ಶಾಸನದಲ್ಲಿ ಓದಲು ಸಾಧ್ಯವಾಯಿತು.ಸಾ.ಶ.ಸು.೧೩೩೮ ರಲ್ಲಿ ಹೊಯ್ಸಳ ದೊರೆ ಮುಮ್ಮಡಿ ಬಲ್ಲಾಳನು ರಾಜ್ಯಭಾರ ಮಾಡುತ್ತಿದ್ದಾಗ ಪಣತ್ತೂರು ಗ್ರಾಮವು ಕಾಮೆಯನಾಯಕ ಸತುರ್ವೇದಿ ಮಂಗಲವೆಂದು ಕರೆಯಲ್ಪಟ್ಟಿತ್ತೆಂದು ಹೇಳಬಹುದಾಗಿದೆ.

[ಶಾಸನಗಳನ್ನು ಓದಲು ಮಾರ್ಗದರ್ಶನ ಮಾಡಿದ ಡಾ. ಪಿ.ವಿ. ಕೃಷ್ಣಮೂರ್ತಿ, ಹಿರಿಯರಾದ ಕೆ.ಆರ್. ನರಸಿಂಹನ್ ಅವರು ಹಾಗೂ ಕ್ಷೇತ್ರಕಾರ್ಯದಲ್ಲಿ ನನ್ನೊಂದಿಗಿದ್ದ ಹಲಸೂರು ಜೋಗುಪಾಳ್ಯದ ಬಿ.ತಾಯಪ್ಪನವರಿಗೆ ಕೃತಜ್ಞತೆಗಳು.]

## ಆಕರ ಗ್ರಂಥಗಳು


೧. ಎಪಿಗ್ರಾಫಿಯಾ ಕರ್ನಾಟಿಕಾ–೯, ಬೆಂಗಳೂರು ಜಿಲ್ಲೆ, ರೈಸ್ ಬಿ.ಎಲ್, ದೇವನಹಳ್ಳಿ–೪೨, ಅರದೇಶಹಳ್ಳಿ, ಸಾ.ಶ. ೯೧೪.

೨. ಅದೇ., ನೆಲಮಂಗಲ–೧, ಸೋಲದೇವನಹಳ್ಳಿ, ಸಾ.ಶ. ೧೦೨೯.

೩. ಅದೇ., ಹೊಸಕೋಟೆ–೧೪೨, ಕಾಡುಗೋಡಿ, ಸಾ.ಶ. ೧೦೪೩.

೪. ಅದೇ., ದೇವನಹಳ್ಳಿ–೭೫, ಗಂಗವಾರ, ಸಾ.ಶ. ೧೦೪೬.

೫. ಅದೇ., ದೇವನಹಳ್ಳಿ–೧೪, ಬ್ಯಾಡರಹಳ್ಳಿ, ಸಾ.ಶ. ೧೦೬೭ ಹಾಗೂ ಹೊಸಕೋಟೆ–೧೪೩, ಕಾಡುಗೋಡಿ ಸಾ.ಶ. ೧೧೫೦(?)

೬ ಅದೇ., ಬೆಂಗಳೂರು–೩೨, ಅಲ್ಲಾಳಸಂದ್ರ, ಸಾ.ಶ. ೧೦೮೦.

೭. ಅದೇ., ದೇವನಹಳ್ಳಿ–೨೦, ಆವತಿ, ಸಾ.ಶ. ೧೧೩೩(?).

೮. ಎಪಿಗ್ರಾಫಿಯಾ ಕರ್ನಾಟಿಕ–೭, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ನಾಗಮಂಗಲ–೨೯, ಕಂಬದಹಳ್ಳಿ, ಸಾ.ಶ. ೧೧೭೪.

೯. ಎಪಿಗ್ರಾಫಿಯಾ ಕರ್ನಾಟಿಕಾ–೯, ಬೆಂಗಳೂರು ಜಿಲ್ಲೆ, ರೈಸ್ ಬಿ.ಎಲ್., ದೇವನಹಳ್ಳಿ–೨೮, ಕಾರಹಳ್ಳಿ, ಸಾ.ಶ. ೧೨೮೩.

೧೦. ಅದೇ., ಬೆಂಗಳೂರು–೪೧, ಪಟ್ಟಂದೂರು, ಸಾ.ಶ. ೧೩೪೩.

೧೧. ಅದೇ., ಬೆಂಗಳೂರು–೭೩, ಬೇಲೂರು (ಬೇಚರಾಕ್) ಸಾ.ಶ.೧೩೮೧.

೧೨. ಮೈಸೂರು ಪ್ರದೇಶದ ಅಪ್ರಕಟಿತ ಶಾಸನಗಳ ಸೂಚಿ, ಸಂ. ಶೆಟ್ಟರ್ ಎಸ್. ರಾಜಶೇಖರ್ ಎಸ್, ಹೊಸಕೋಟೆ ತಾಲ್ಲೂಕು, ಬಿಳಿಶಿವಾಲೆ, ಸಾ.ಶ ೧೪೯೯, ಪುಟ ೧೩೭.

೧೩. ಎಪಿಗ್ರಾಫಿಯಾ ಕರ್ನಾಟಿಕಾ–೯, ಬೆಂಗಳೂರು ಜಿಲ್ಲೆ, ರೈಸ್ ಬಿ.ಎಲ್., ಹೊಸಕೋಟೆ–೧೧೮, ಕಿತಗನೂರು, ಸಾ.ಶ. ೧೪೦೧.

೧೪. ಅದೇ., ಬೆಂಗಳೂರು–೫೧, ಗುಂಜೂರು, ಸಾ.ಶ. ೧೩೦೧.

೧೫. ಅದೇ., ಆನೇಕಲ್–೩೫, ಚಿಂತಲ ಮಡಿವಾಳ, ಸಾ.ಶ. ೧೪೩೩.

೧೬. ಎಪಿಗ್ರಾಫಿಯಾ ಕರ್ನಾಟಿಕಾ–೯, ಬೆಂಗಳೂರು ಜಿಲ್ಲೆ, ರೈಸ್ ಬಿ.ಎಲ್., ಬೆಂಗಳೂರು–೫೫, ಕೃಷ್ಣರಾಜಪುರ, ಸಾ.ಶ. ೭೫೦.

೧೭. ಅದೇ., ಹೊಸಕೋಟೆ–೨೪, ಶಿವನಾಪುರ, ಸಾ.ಶ.೧೭೪೫.

೧೮. ಕನ್ನಡ ನಿಘಂಟು, ಸಂ.೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೮, ಪುಟ ೫೦೦೩.

೧೯. ಎಪಿಗ್ರಾಫಿಯಾ ಕರ್ನಾಟಿಕಾ–೯, ಬೆಂಗಳೂರು ಜಿಲ್ಲೆ, ರೈಸ್. ಬಿ.ಎಲ್. ಮಾಗಡಿ–೬೨, ಸೋಲೂರು, ಸಾ.ಶ. ೧೫೩೭.

೨೦. ಅದೇ., ಮಾಗಡಿ–೬೮, ಅರಿಶಿನಕುಂಟೆ, ಸಾ.ಶ. ೧೫೧೬.

೨೧ ಅದೇ., ಮಾಗಡಿ–೧೧, ನಾಗಶೆಟ್ಟಿಹಳ್ಳಿ, ಸಾ.ಶ. ೧೫೨೦.

೨೨. ಅದೇ., ಮಾಗಡಿ–೭೦, ರಾಮನಹಳ್ಳಿ.

೨೩. ರೈಸ್ ಬಿ.ಎಲ್. ಮೈಸೂರು ಗ್ಯಾಸೆಟಿಯರ್ ಸಂಪುಟ–೨, ವೆಸ್ಟ್ ಮಿನಿಸ್ಟರ್ ಆರ್ಚಿಬಾಲ್ಡ್ ಕಾನ್‌ಸ್ಟೇಬಲ್ ಆಂಡ್ ಕಂಪನಿ, ವೈಟ್‌ಹಾಲ್ ಗಾರ್ಡನ್ಸ್, ೧೮೯೭, ಪುಟ ೩೬, ೮೦.

೨೪. ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್ಸ್–೧೯೧೨, ಸಂ.೦೪, ಕರ್ನಾಟಕ ವಿ.ವಿ. ಧಾರವಾಡ, ೧೯೭೭, ಪುಟ ೯೭.

# ಗದಗ ಜಿಲ್ಲೆಯ ಹೊಸ ಶಾಸನಗಳು

**ಹನುಮಾಕ್ಷಿ ಗೋಗಿ***

ಕರ್ನಾಟಕದ ಪ್ರಾಚೀನ ಇತಿಹಾಸದಲ್ಲಿ ಗದಗ ಜಿಲ್ಲೆಯ ಇತಿಹಾಸ, ಶಾಸನಗಳು ಮತ್ತು ಪ್ರಾಗೈತಿಹಾಸಿಕ ಕುರುಹುಗಳು ಅತ್ಯಂತ ಪ್ರಮುಖ ಸ್ಥಾನವನ್ನು ವಹಿಸುತ್ತವೆ. ಲಕ್ಕುಂಡಿ, ಡಂಬಳ, ಮುಳಗುಂದ, ಕಣವಿ, ಸೂಡಿ ಗ್ರಾಮಗಳಲ್ಲಿ ದೊರೆಯುವ ನೂರಾರು ಶಾಸನಗಳು ಕರ್ನಾಟಕವನ್ನಾಳಿದ ಎಲ್ಲ ಅರಸು ಮನೆತನಗಳ ಆಡಳಿತ ವೈಖರಿ, ಕಟ್ಟಿಸಿದ ದೇವಾಲಯಗಳು, ಬಿಟ್ಟ ಭೂದಾನ–ಹಣದಾನ–ವಸ್ತುದಾನಗಳನ್ನು ತಿಳಿಸುತ್ತಲೇ ಗದಗ ಪರಿಸರದ ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಆಯಾಮಗಳನ್ನು ಕಟ್ಟಿಕೊಡುತ್ತವೆ. ಇದುವರೆಗೆ ಅವಿಭಜಿತ ಧಾರವಾಡ ಜಿಲ್ಲೆಯಲ್ಲಿದ್ದ ಗದಗ, ರೋಣ, ನರಗುಂದ, ಮುಂಡರಗಿ ಮತ್ತು ಶಿರಹಟ್ಟಿ ತಾಲೂಕುಗಳನ್ನು ಸೇರಿಸಿ ೧೯೯೭ರಲ್ಲಿ ಗದಗ ಜಿಲ್ಲೆಯನ್ನು ಹೊಸದಾಗಿ ರಚಿಸಲಾಯಿತು. ಸಾಂಸ್ಕೃತಿಕವಾಗಿ ಅತ್ಯಂತ ಸಮೃದ್ಧವಾದ ಈ ಜಿಲ್ಲೆಯು ಕರ್ನಾಟಕದ ಸಮಗ್ರ ಇತಿಹಾಸಕ್ಕೆ ನೀಡಿದ ಕೊಡುಗೆ ಅಪಾರವಾದುದು. ಚಿತ್ರಕಲೆ, ಶಿಲ್ಪಕಲೆ, ವಾಸ್ತುಶಿಲ್ಪ, ಶಾಸನ, ಸಾಹಿತ್ಯ, ರಂಗಭೂಮಿ, ಸಂಗೀತ, ಧರ್ಮ, ವಾಣಿಜ್ಯ–ವ್ಯವಹಾರ ಯಾವುದನ್ನು ತೆಗೆದುಕೊಂಡರೂ ಗದಗ ಜಿಲ್ಲೆಯನ್ನು ಹೊರತುಪಡಿಸಿ ನಡೆಯುವ ಯಾವುದೇ ಪ್ರಕಾರದ ಅಧ್ಯಯನಗಳು ಅಪೂರ್ಣವೆಂದೇ ಹೇಳಬೇಕಾಗುತ್ತದೆ.

ಗದಗ ಜಿಲ್ಲೆಯಲ್ಲಿ ಇದುವರೆಗೆ ವಾರ್ಷಿಕ ಶಾಸನ ವರದಿಗಳಲ್ಲಿ ಗುರುತಿಸಿದ ಮತ್ತು ಪ್ರಕಟಿತ ಶಾಸನಗಳ ಪಟ್ಟಿಯನ್ನು ಧಾರವಾಡ ಜಿಲ್ಲೆಯ ಶಾಸನಸೂಚಿಯ ಅನ್ವಯ ಹೀಗೆ ನೀಡಬಹುದು.

| ತಾಲೂಕು | ಒಟ್ಟು ಹಳ್ಳಿಗಳು | ಶಾಸನವಿದ್ದ ಹಳ್ಳಿಗಳು | ಪ್ರಕಟಿತಶಾಸನಗಳು | ಅಪ್ರಕಟಿತ ಶಾಸನಗಳು | ಒಟ್ಟು ಶಾಸನಗಳು |
|---|---|---|---|---|---|
| ೧ ಗದಗ | ೬೧ | ೩೨ | ೨೧೩ | ೭ | ೨೨೦ |
| ೨ ನರಗುಂದ | ೩೯ | ೮ | ೧೮ | – | ೧೮ |
| ೩ ರೋಣ | ೯೪ | ೩೦ | ೧೦೫ | ೪ | ೧೦೯ |
| ೪ ಶಿರಹಟ್ಟಿ | ೯೨ | ೧೬ | ೫೫ | ೩೭ | ೯೨ |
| ೫ ಮುಂಡರಗಿ | ೫೩ | ೨೦ | ೫೫ | ೪ | ೫೯ |

ಶಾಸನಸೂಚಿಯು ಪ್ರಕಟಗೊಂಡ ನಂತರ ಮತ್ತೆ ಹೊಸತಾಗಿ ಜಿಲ್ಲೆಯಾದ್ಯಂತ ೨೦೦ಕ್ಕೂ ಹೆಚ್ಚು ಹೊಸ ಶಾಸನಗಳನ್ನು ಗುರುತಿಸಲಾಗಿದೆ ಮತ್ತು ಪ್ರಕಟಿಸಲಾಗಿದೆ. ತದನಂತರ ಹೊಸದಾಗಿ ಗುರುತಿಸಿದ ಇನ್ನೂ ಕೆಲವು ಶಾಸನಗಳ ವಿವರಗಳು ಮತ್ತು ಪಠ್ಯಗಳನ್ನು ಈ ಪ್ರಬಂಧದ ಮೂಲಕ ಮೊದಲ ಬಾರಿಗೆ ಪ್ರಕಟಿಸುತ್ತಿದ್ದೇನೆ.

### ೧ ಗದಗ: ತ್ರಿಕೂಟೇಶ್ವರ ದೇಗುಲದ ಪಕ್ಕದ ಹಸಿರು ಕೆರೆಯಲ್ಲಿ ಸಿಕ್ಕ ತೊಲೆಯ ಭಾಗದಲ್ಲಿ ಸು. ೧೨ನೆಯ ಶ.

ಈ ತ್ರುಟಿತ ಶಾಸನವನ್ನು ೨೫" ಅಗಲ ೮" ಎತ್ತರದ ತೊಲೆಯ ಎಡಭಾಗದಲ್ಲಿ ಬರೆಯಲಾಗಿದ್ದು, ಮೇಲೆ ಯಾವುದೇ ಚಿತ್ರಗಳಿಲ್ಲ. ೨೫" ೬" ಭಾಗದಲ್ಲಿ ಶಾಸನದ ೬ ಸಾಲುಗಳಿವೆ. ಮಧ್ಯೆ ಜೆಸಿಬಿಯ ಕೊರೆತದಿಂದಾಗಿ ಕೆಲವು ಅಕ್ಷರಗಳು ಕಾಣುವುದಿಲ್ಲ. ಈ ಶಾಸನದ ಕಲ್ಲನ್ನು ಬಹುಶಃ ಲಕ್ಕುಂಡಿಯಿಂದ ಯಾವುದೋ ಕಾಲದಲ್ಲಿ ಗದಗಿಗೆ ತರಲಾಗಿದೆಯೆಂದು ತೋರುತ್ತದೆ.

ಈಗ ಉಳಿದಿರುವ ಭಾಗದಲ್ಲಿ, ಶ್ರೀರಾಮರ ದತ್ತಿ ಮಹಾಗ್ರಹಾರ ಲೊಕ್ಕಿಗುಂಡಿಯ ಮಹಾಜನರ ವರ್ಣನೆಯು ಸಕಲ ವಿಶೇಷಣೆಗಳೊಂದಿಗೆ ಇದೆ. ಆ ಊರಿನ ಊರೊಡೆಯರು, ಮಹಾಜನ ಸಾಸಿರ್ವರು, ಬಾಲಕರಾದಿ ವೃದ್ಧರವರೆಗಿನ ಎಲ್ಲ ವಯಸ್ಸಿನ ಸಾರ್ವಜನಿಕರು ಸೇರಿ ಧರ್ಮಕಾರ್ಯಗಳನ್ನು ರಕ್ಷಿಸುತ್ತಿದ್ದಾಗ, ಮಾಕೆಯ ಕೇತೇಶ್ವರದೇವನು ತನ್ನ

* 'ಕಾರ್ತಿಕಶ್ರೀ', ಎಚ್.ಐ.ಜಿ. ೨೭, ನವನಗರ, ಹುಬ್ಬಳ್ಳಿ–೫೮೦೦೨೫, ಮೊ. ೭೭೯೫೮೧೫೯೭೫

ಅಕ್ಕಸಾಲದ ಕೇಣಿಯಲ್ಲಿಯ ಶ್ರೀ ಕಪಿಲೇಶ್ವರದೇವರ ಪಾಲ್ಮಂಡಗೆಯ ನಿವೇದ್ಯಕ್ಕೆ ಭತ್ತ ದಾನ ನೀಡಿದುದನ್ನು ತಿಳಿಸುತ್ತದೆ.

೧ [ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ*] ಧ್ಯಾನ ಧಾರಣ ಮೋನಾನುಷ್ಠಾನ ಪರಾಯಣ ಜಪ ಸಮಾಧಿ ಶೀಳ ಸಂಪಂನರು ಸಮಸ್ತ ಗುಣಗಣಾಳಂ–

೨ [ಕೃತರ್ವ್ವಿದಿತವೇದಾರ್ತ್ಥವಿದ್ಯಾಪಾರಗರ್ಷಟ್ಕರ್ಮ್ಮನಿರತರ್ಸ್ಸಪ್ತಸೋಮಸಂಸ್ಥಾವಭೃಥಾವಗಾಹನಪವಿತ್ರೀಕೃತ ಶರೀರರ್ಚ್ಚತುರ್ವ್ವೇದ

ಪಾರಗರಷ್ಟಾದಶ ಧರ್ಮ್ಮಶಾಸ್ತ್ರಕುಶಲರೇಕವಾಕ್ಯ*]ರಚಳಿತಧೈರ್ಯ್ಯರ್ಧ್ಧೈರ್ಯ್ಯ ಪರಾಕ್ರಮರಾಶ್ರಿತಜನ ಕಲ್ಪವೃಕ್ಷರಹಿತ ಪಕ್ಷಕ್ಷಯಕರರ್ಕ್ಕಲಿಯುಗ ಗಾಂಗೇಯ–

೩ [ರ್ಪ್ಪರಮಪರೋಪಕಾರಿಗಳಾಹವ ಧುರನ್ಧರರ್ಶಾಪಾನುಗ್ರಹ ಸಮರ್ತ್ಥರ್ಕ್ಕಾರ್ಯ್ಯ ಬೃಹಸ್ಪತಿಗಳೇಕೈಕ ಪಣ್ಡಿತಗ್ರಾಮ ನಾಮೋತ್ತಮರ್ವ್ವೈಷ್ಣವಗೀತಿ ಮನೋಹರರ್ಪ್ಪಾಪಭೀರುಗಳ್ಪರನಾರೀ*]ದೂರರ್ದ್ದುಷ್ಟವಿದ್ಧಂಸಕರ್ಶಿಷ್ಟ ಜನಾಶ್ರಯರ್ಕ್ಕಾಮ ಕ್ರೋಧ ಲೋಭಮೋಹ ವಿವರ್ಜ್ಜಿತರ್ದ್ದಾತ್ರಿಂಶತ್ಸಹಸ್ರ

೪ [ಸಮಯಾರ್ಗ್ಘ್ಯಾರ್ಹರ್ದ್ವಿಜಕುಳತಿಳಕರ್ಶ್ಶರಣಾಗತವಜ್ರಪಂಜರರುಮಪ್ಪ ಶ್ರೀರಾಮರದತ್ತಿ ಮಹಾಗ್ರಾಮಂ ಶ್ರೀಮಲ್ಲೊಕ್ಕಿಗುಣ್ಡಿಯೂರೊಡೆಯ ಪ್ರಮುಖ ಮಹಾ*]ಜನಂ ಸಾಸಿರ್ವ್ವರುಂ ಸಬಾಲವೃದ್ಧರ್ನೆರೆದು ಧರ್ಮ್ಮಂಗಳಂ ಸ್ವಧರ್ಮ್ಮದಿಂ ರಕ್ಷಿಸುತ್ತಮಿರೆ ॥ ಸುರರಾಜಂಗೆ ಜಯಂತನಂ ಪು . . .

೫ . . . . . . . . . . . . . . . . . . . . . . . . . . . . . . . . . . . . . . . . . . . . . . . . .
. ವೆನ್ತೆನಿಸಿದ ಮಾಕೆಯ ಕೇತೇಶ್ವರದೇವಂ ತನ್ನಕ್ಕಸಾಲದ ಕೇಣಿಯ ಈಶ್ವರ ಸಂವತ್ಸರದಲು ಶ್ರೀ ಕಪಿಲೇಶ್ವರದೇವರ ಪಾಲ್ಮಂಡಗೆಯ

೬ . . . . . . . . . . . . . . . . . . . . . . . . . . . . . . . . . . . . . . . . . . . . . . . . .
ಕಪಿಲೇಶ್ವರದೇವರ ನಿವೇದ್ಯಕ್ಕೆ ಕೊಳಲಾಚಳದಲು ಪರಾಜನದ ಭತ್ತಮಾ ಕೊಳಗೆಲ್ಲಿಯಳವಡಂ ದೇವರ್ಗ್ಗೆ ಕೊಟ್ಟ ಲಾಭದ ಭತ್ತಮಂ ದೇ*

--------------

* ಶಾಸನದ ಮುಂದಿನ ಭಾಗ ಲಭ್ಯವಿಲ್ಲ.

**೨. ಡೋಣಿ: ಡೋಣಿಕಮ್ಮನ ಗುಡಿ ಎದುರಿನ ದಿಬ್ಬದ ಮೇಲಿರುವ ನಿಷಧಿ ಶಾಸನ ಸು. ೧೨ನೆಯ ಶ.**

೧' ಅಗಲ ೪' ಎತ್ತರದ ಪೂರ್ವಾಭಿಮುಖವಾಗಿ ನಿಲ್ಲಿಸಿದ ನಿಷಧಿಕಲ್ಲಿದು. ಮೇಲೆ ಕುಳಿತ ತೀರ್ಥಂಕರನ ಶಿಲ್ಪವಿದೆ. ಕೆಳಗೆ ಈ ಶಾಸನವನ್ನು ಕೆತ್ತಲಾಗಿದೆ.

ಕಮಳಸೇನ ಮುನೀಶ್ವರರ ಶಿಷ್ಯನಾದ, ಮಹಾಖ್ಯಾತಿವಂತನಾದ, ವ್ಯಾಪಾರಿಯೂ ಧಾರ್ಮಿಕನೂ ಆದ, ಮಲ್ಲಿಸೆಟ್ಟಿಯು ವ್ರತಧಾರಿಯಾಗಿ ನಿಶ್ಚಿಂತ ನಿವಾಸವೆನಿಸಿದ ಶಾಶ್ವತ ಮನೆಗೆ (ಮೋಕ್ಷ) ಬಂದನೆಂದು ಶಾಸನವು ಧ್ವನಿಪೂರ್ಣವಾಗಿ ತಿಳಿಸುತ್ತದೆ. ಕಮಳಸೇನ ಮುನೀಶ್ವರನ ಹೆಸರು ಇಲ್ಲಿ ಪ್ರಥಮ ಬಾರಿಗೆ ಬಂದಿದ್ದು, ಸೇನಗಣದ ಈ ಆಚಾರ್ಯರ ಹೆಸರನ್ನು ಉಲ್ಲೇಖಿಸುವ ಮೊದಲ ಶಾಸನವಿದಾಗಿದೆ. ಚಿಕ್ಕಹಂದಿಗೋಳ ಶಾಸನವು ಶಂಖಬಸದಿಯ ಸ್ಥಾನಾಚಾರ್ಯನಾಗಿ ಕಮಳದೇವಾಚಾರ್ಯ ಇದ್ದನೆಂದು, ಈತನು ಮೂಲಸಂಘ ದೇವಗಣಕ್ಕೆ ಸೇರಿದ್ದನೆಂದು ತಿಳಿಸುತ್ತದೆ. ಲಕ್ಷ್ಮೇಶ್ವರದ ಆದಿನಾಥ ತೀರ್ಥಂಕರನ ವಿಗ್ರಹವೊಂದು ಗದಗ ವಸ್ತು ಸಂಗ್ರಹಾಲಯದಲ್ಲಿದ್ದು, ಅದರ ಪಾದಪೀಠದಲ್ಲಿ ಮೂಲಸಂಘ ದೇವಗಣ ಎಂದು ಹೆಸರಿರುವುದನ್ನು ಇಲ್ಲಿ ನೆನೆಯಬಹುದು.

೧ @ ಧಾತೃ ಸುವರ್ಷ ಮಾರ್ಗ್ಗಶಿರ ಶುದ್ಧ ಸುಷಷ್ಠಿಯೊಳೆ

೨ ಳಹಾರಂಘ್ರಿ ಕಂಜಾತ ಅರಶುಗಂಗಳಂ ಕ

೩ ಮಳಸೇನ ಮುನೀಶ್ವರ ಪಾದಪದ್ಮಮ ಪ್ರೀತಿಯನಿಟ್ಟು

೪ ಚಿತ್ತದೊಳೆ ನಿಶ್ಚಿಂತ್ಯ ನಿವಾಸಮನೆಯ್ತಂದಂ ಮ–

೫ ಹಾಖ್ಯಾತಿಯ ಮಲ್ಲಿಸೆಟ್ಟಿ ವಣಿಯಜ್ಞಾಂ ಯತಿ–

೬ ಪರನುದ್ದಾಮ ಧಾರ್ಮ್ಮಿಕಂ ॥

**೩. ಡೋಣಿ: ಡೋಣಿಕಮ್ಮನ ಗುಡಿ ಎದುರಿನ ದಿಬ್ಬದ ಮೇಲಿರುವ ನಿಷಧಿ ಶಾಸನ ಸು. ೧೨ನೆಯ ಶ.**

೧' ಅಗಲ ೪' ಎತ್ತರದ ಪೂರ್ವಾಭಿಮುಖವಾಗಿ ನಿಲ್ಲಿಸಿದ ನಿಷಧಿಕಲ್ಲಿದು. ಮೇಲೆ ಕುಳಿತ ತೀರ್ಥಂಕರನ ಶಿಲ್ಪವಿದೆ. ಕೆಳಗೆ ಈ ಶಾಸನವನ್ನು ಕೆತ್ತಲಾಗಿದೆ.

ಮೂಲಸಂಘಕ್ಕೆ ಸೇರಿದ ಜಯಕೀರ್ತಿದೇವರ ನಿಷಧಿ ಶಾಸನವಿದಾಗಿರಬಹುದು. ತ್ರುಟಿತಗೊಂಡಿರುವುದರಿಂದ ಮತ್ತು ಚಕ್ಕಳೆ ಹಾರಿ ಅಕ್ಷರಗಳು ಅಸ್ಪಷ್ಟವಾಗಿರುವುದರಿಂದ ವಿಷಯ ಸ್ಪಷ್ಟತೆಯಿಲ್ಲ.

ಮುನಿಗಳಾದ ಈ ಜಯಕೀರ್ತಿದೇವರು ತಮ್ಮ ಜೀವಿತ ಕಾಲದಲ್ಲಿ ಸಂಚಾರ ಗೈಯ್ಯುತ್ತ, ಧರ್ಮ ಪ್ರಭಾವನೆಯನ್ನು ಮಾಡುತ್ತ, ಮುನಿಶಿಷ್ಯರನ್ನು-ಶ್ರಾವಕ ಶಿಷ್ಯ ಬಳಗವನ್ನು ಹೊಂದಿ ಅಪಾರ ಜನಪ್ರಿಯತೆಯನ್ನು ಹೊಂದಿದ್ದರೆಂದು ಇಲ್ಲಿಯ ಜಾವೂರಿನ (ಸು. ೧೨ನೆಯ ಶ. ಎಸ್.ಐ.ಐ.೧೫ ಸಂ. ೬೩೭, ನವಲಗುಂದ) ಶಾಸನವೂ ಹೆಸರಿಸುತ್ತದೆ. ನವಲಗುಂದದ ಜ್ವಾಲಾಮಾಲಿನೀದೇವಿಯ ಬಸದಿಯ ಸ್ಥಾನಾಚಾರ್ಯರು ಶ್ರೀ ಜಯಕೀರ್ತಿದೇವರಾಗಿದ್ದರೆಂದು ಈ ಶಾಸನವು ತಿಳಿಸುತ್ತದೆ. ಲಕ್ಷ್ಮೇಶ್ವರ ಶಾಸನದಲ್ಲಿ (ಕ್ರಿ.ಶ. ೧೯೫೫. ಎಸ್.ಐ.ಐ. ೨೦. ಸಂ. ೨೨೪, ಶಿರಹಟ್ಟಿ ತಾ.) ಕುಂದಕುಂದರ ಆಚಾರ್ಯ ಪರಂಪರೆಯಲ್ಲಿಯ ಸಿರಿಣಂದಿಬ್ರತಿಗೆ ಜಯಕೀರ್ತಿ ಯತೀಸ್ವರರು ಶಿಷ್ಯರಾಗಿದ್ದರೆಂಬ ಸೂಚನೆಯಿದೆ. ಈ ಆಚಾರ್ಯರು ಆಲದಗೇರಿ (ಹಿರೇಕೆರೂರು ತಾ.) ಶಾಸನದಲ್ಲಿ 'ಶ್ರೀಮನು ಮಂಡಳಾಚಾರ್ಯ್ಯರುಮಪ್ಪ ಜಯಕೀರ್ತ್ತಿ ಭಟ್ಟಾರಕರ ಶಿಷ್ಯರಾದ ಮಾಣಿಕದೇವರು' ಸನ್ಯಸನ ವಿಧಿಯಿಂದ ಮಡಿದರೆಂದು ಹೇಳುವಲ್ಲಿಯೂ ಉಕ್ತರಾಗಿದ್ದಾರೆ.

೧ ಶ್ರೀ ಮೂಲಸಂಘದ ತನಪಾಗ ಉರ್ವ್ವಿಯೊಳಸ್ಥಾ

೨ ಸದ್ಗುಣ ವರ ಜಯಕೀರ್ತ್ತಿದೇವರುವೆನಿಸಿ . . . ಶ್ರಿತಜನ

೩ . . . . ತಿ ಚರುಲಕಿ . . . . . .

೪ ಚಿತ್ತಂ ಸನಯನಾದಿ ರಾಜೀವತ್ಸಿ ಆಳೆ

೫ ರಬ್ದಂ ನೂಜೀಳು . . . . . . . .*

---

* ಮುಂದಿನ ಅಕ್ಷರಗಳು ಸವೆದು, ಅಸ್ಪಷ್ಟವಾಗಿವೆ.

**೪. ಡೋಣಿ: ಸಿದ್ಧಲಿಂಗೇಶ್ವರ ದೇವಸ್ಥಾನದ ಹೊರಗೋಡೆಗೆ ಆನಿಸಿ ನಿಲ್ಲಿಸಿದ ತ್ರುಟಿತ ಶಾಸನ ಕ್ರಿಶ. ಸು. ೧೦೭೬-೧೧೨೫**

೪೫" ಉದ್ದ ೧೦" ಅಗಲ ಗಾತ್ರದ ಕರಿಕಲ್ಲಿನ ಮೇಲ್ಭಾಗದ ೧೨"ನಲ್ಲಿ ಕುಳಿತ ನಂದಿ ಹಾಗೂ ಮಂಟಪದ ಭಾಗದ ಉಬ್ಬುಶಿಲ್ಪ ಮಾತ್ರ ಕಾಣಿಸುತ್ತದೆ.

ಕಲ್ಯಾಣ ಚಾಲುಕ್ಯ ತ್ರಿಭುವನಮಲ್ಲದೇವರ ಪಿರಿಯರಸಿ ಲಕ್ಷ್ಮೀಮಹಾದೇವಿ ಮತ್ತು ಬಹುಶಃ ದೋಣಿ ಊರಿನ ವರ್ಣನೆಯ ಭಾಗ ಮಾತ್ರ ಕಾಣಿಸುತ್ತಿದೆ. ಉಳಿದ ಭಾಗ ಒಡೆದುಹೋಗಿದೆ. ಕಾರಣ ವಿವರಗಳು ತಿಳಿಯುವುದಿಲ್ಲ.

೧ @ ನಮಸ್ತುಂಗ ಶಿ@ರಶ್ಚುಂಬಿ ಚಂ[ದ್ರಚಾಮರಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥*]

೨ @ ಗಿರೀಷಂ ದೇವರ ಮ@@ಕ್ರಮ . . . . . . . . . . . . . . . . . . . . . . . . .

೩ ಕರದು ಗೋಪುರವೆಂತುಂ ಪುರಚಕ್ರ . . . . . . . . . . . . . . . . . . . . . . .

೪ ಪಾಳ ಕಾಳಾನಳನಖಿಳ ಕಳಿಂಗಾವನಿ ನಾ . . . . . . . . . . . . . . . . . . . . . . . .

೫ ಳೆನೆ ತ್ರೋನಳ ಮಾರ್ಧೋರ್ವ್ವೀಧವಗೆ . . . . . . . . . . . . . . . . . . . . . . . .

೬ ಯ ಶ್ರೀ ಪ್ರಿಥ್ವೀವಲ್ಲಭ ಮಹಾರಾ[ಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕ ಸತ್ಯಾಶ್ರಯ ಕುಳತಿಳಕ ಚಾಳುಕ್ಯಾಭರಣ ಶ್ರೀಮತ್ತ್ರಿಭು*]-

೭ ವನಮಲ್ಲದೇವರ ವಿಜಯರಾಜ್ಯ . . . . . . . . . . . . . . . . . . . .

೮ @ ಣನರ್ದ್ಧಾಂಗಲಕ್ಷ್ಮಿ ॥ ಕನ್ದ ॥ ಘನಜಘನದಿಂ . . . . . . . . . . . . . . . . .

೯ ಟ್ಟೆನಿಸಿ ನೆಗರ್ದ್ದ ಪಿರಿಯರಸಿ ಲಕ್ಷ್ಮೀಮಹಾದೇವಿ . . . . . . . . . . . . . . . .

೧೦ . ಕರಿಕರಿಂ ಬುಧರಿಂ ಸುಕವೀಂದ್ರರಿನೆಸೆದಂಬುಜಾನನೆ . . . . . . . . . . . . . . . . .

೧೧ . ದ ಗಂಧಶಾಳಿಯಿಂ ಸೊಗಯಿಪ ಪೂಗೊಳದಿಂ ತದಿ . . . . . . . . . . . . . . . .

೧೨ . . ಯನಾನಂದ ಸುಂದರಮುಮೆನಿಸಿದುದಂತು ಮಲ . . . . . . . . . . . . . . . .

೧೩ . . ದಲು . ಗಲೆರುಣ ಪಿಕಮಾರಮ ಮದಾಳಿ . . . . . . . . . . . . . . . . . . .

೧೪ . . . ಬೀಗಿ ಬಿರಿದುಳ್ಳೆಸಳಿಂ ಸಾರಪಾನೇಕ ಪ . . . . . . . . . . . . . . . . . . .

೧೫ . . . ದು ನವಾಶೋಕ ವನಜ ತಳಿರ್ತ್ತುದು ಪಾ . . . . . . . . . . . . . . . . . .

೧೬ . . . ನ ಲಕ್ಷ್ಮಿಗೆ ಹೋದಲೊಪ್ಪುಗು ॥ ಆ ದು . . . . . . . . . . . . . . . . . . .

೧೭ . . . . ಣಾನೆಯಿಂ ತಾನೆ ದೊಯ್ಯನೊಯ . . . . . . . . . . . . . . . . . . . . . .

೧೮ . . . ಗುಣಜಾದೋಪ . . ಯ್ಯ . . . . . . . . . . . . . . . . . . . . . . . . .

೧೯ . . . ಪು ಮಡಕಿಯರದ ನಯಕರಂ ಕೂರ್ಪ್ಪಿ . . . . . . . . . . . . . . . . . . .

೨೦ . . . ದಿಜೆದಂಗೆ . . ಕಾಲಮನಾ ಶ್ರೀ ಧನಾ . . . . . . . . . . . . . . . . . . . .

೨೧ . . . ಕಾಪುರದ ಮದ . . . . ಜಗಜನ . . . . . . . . . . . . . . . . . . . . . .

೨೨ . . . ತಿಯೆ . . . . . . . . . . . . . . . . . . . . . . . . . . . . . . . . . . . . .

೨೩ . . . ಶಿಕಾರೆ . . . . . ಧರಣಿ ದೇವರ ಶೇ . . . . . . . . . . . . . . . . . . . . .

೨೪ . . . . . . . . . . . . . . . . . . . ಣಿಯ . . . . . . . . . . . . . . . . . . . .

೨೫ . . . . . . . . . . . . . . . . . . ಕಾರಯಾ . . . . . . . . . . . . . . . . . . . .

೨೬ . . . . . . . . . . . . . . . . . . ಉದಯ . . . . . . . . . . . . . . . . . . . .

೨೭ . . . . . . . . . . . . . . . . . . . . . ಯ . . . . . . . . . . . . . . . . . . . . .

೨೮ . . . . . . . . . . . . . . . . . . . ಪನ್ನರುಂ . . . . . . . . . . . . . . . . . . .

೨೯ . . . . . . . . . . . . . . . . . . . ಕರಿತ ಸಾ . . . . . . . . . . . . . . . . . . . *

---------------

* ಇನ್ನೂ ನಾಲ್ಕು ಸಾಲುಗಳಿದ್ದು, ಅಕ್ಷರಗಳು ಸಂಪೂರ್ಣ ಸವೆದಿವೆ.

**೫. ಡೋಣಿ: ಪರಸಪ್ಪ ಕುಂಕುಮಗಾರ ಅವರ ಹೊಲದಲ್ಲಿರುವ ಶಾಸನ ಕಾಲ ಕ್ರಿಶ. ಸು. ೧೨ನೇ ಶ.**

ಮೇಲ್ಭಾಗದಲ್ಲಿ ಶಿವಲಿಂಗವಿದ್ದು, ಕೆಳಗೆ ಆಕಳಿನ ಚಿತ್ರವಿದೆ. ಇವುಗಳ ಕೆಲಭಾಗದಲ್ಲಿ ೫ ಶಾಲುಗಳ ಶಾಸನವಿದ್ದು, ಚಕ್ಕಳೆ ಹಾರಿರುವುದರಿಂದ ಕೆಲವು ಅಕ್ಷರಗಳು ಮಾತ್ರ ಕಾಣಿಸುತ್ತವೆ.

ಕಾಳಾಮುಖ ಯತಿಯಾದ (ವಾ) ಮಶಕ್ತಿ ಎಂಬ ಸ್ಥಾನಾಚಾರ್ಯನ ಉಲ್ಲೇಖವಿದ್ದು, ನಾಯಕನೊಬ್ಬನು ಬಹುಶಃ ಅವರ ಕಾಲ್ತೊಳೆದು ಭೂದಾನ ನೀಡಿದುದನ್ನು ತಿಳಿಸುತ್ತಿದ್ದು, ಶಾಸನವು ಸವೆದಿರುವುದರಿಂದ ವಿವರಗಳು ಲಭ್ಯವಿಲ್ಲ.

೧ . . . . ಮಶಕ್ತಿ . . . .

೨ ನು ನಾಯಕ . . . . .

೩ . . . ವಿಲೆಯ . . . .

೪ . . . . ದುವದಂ . . . .

೫ . . ವೃತ್ತಿ ೧ ಕೊಟ್ಟ . . . *

---------

* ಶಾಸನ ಅಪೂರ್ಣವಾಗಿದೆ.

**೬. ಡೋಣಿ : ಈಶ್ವರ ಗುಡಿ ಪಕ್ಕದಲ್ಲಿರುವ ತ್ರುಟಿತ ಶಾಸನ**

೧' ಎತ್ತರ ೨' ಅಗಲದ ಶಾಸನದ ಭಾಗ ಮಾತ್ರ ಉಳಿದಿದ್ದು, ಮೇಲೆ ಕುಳಿತ ನಂದಿಯ ಉಬ್ಬುಶಿಲ್ಪ ಮಾತ್ರ ಕಾಣುತ್ತದೆ. ಕೆಳಗಿರುವ ೪ ಸಾಲುಗಳಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ೬ನೆಯ ವಿಕ್ರಮಾದಿತ್ಯನ ವಿಶೇಷಣಗಳಿವೆ. ಮುಂದಿನ ಭಾಗ ಒಡೆದಿದೆ. ಕೆಳಗಿನ ತುಣುಕು ಲಭ್ಯವಿಲ್ಲ.

೧ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ

೨ ಪರಮೇಶ್ವರ ಪರಮ ಭಟ್ಟಾರಕ ಸತ್ಯಾಶ್ರಯ ಕುಳತಿಳಕ ಚಾಳುಕ್ಯಾಭರಣಂ

೩ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುಮುತ್ತರೋತ್ತರಾಭಿವ್ರಿದ್ಧಿ

೪ ಪ್ರವರ್ದ್ಧಮಾನಮಾಚಂದ್ರಾರ್ಕ್ಕ ತಾರಂಬರಂ ಸಲುತ್ತಮಿರೆ ||*

-------------

* ಕೆಳಭಾಗವು ಒಡೆದು ಕಳೆದಿದೆ.

**೭. ನಾಗಾವಿ: ಮಹಾಬಳೇಶ್ವರ ದೇವಸ್ಥಾನದ ತೊಲೆಯಲ್ಲಿ ಸು. ೧೩-೧೪ ಶ.**

ಮಹಾಬಳೇಶ್ವರ ದೇವಸ್ಥಾನದ ಜೀರ್ಣೋದ್ಧಾರ ಕಾಲದಲ್ಲಿ ದೊರೆತ ಅಪೂರ್ಣ ಶಾಸನವಿದಾಗಿದೆ. ೫೦" ಅಗಲ ೧೦" ಎತ್ತರದ ತೊಲೆಯ ಭಾಗದಲ್ಲಿ ಈ ಶಾಸನವ್ನು ಕೆತ್ತಲಾಗಿದೆ. ಸಾಲುಗಳ ಪ್ರಾರಂಭದಲ್ಲಿ ಅರ್ಧ ಭಾಗದಷ್ಟು ಶಾಸನದ ಅಕ್ಷರಗಳು ಸವೆದಿವೆ. ಈ ಸವೆದ ಶಾಸನದಲ್ಲಿ ಅಪೂರ್ಣ ಮಿತಿ, ಹಡಪ ನಾರಾಯಣ ನಾಯಕರ ಉಲ್ಲೇಖಗಳನ್ನು ಮಾತ್ರ ಗುರುತಿಸಬಹುದು.

೧ . . . . . . . . ವಿರೋಧಿ ಸಂವಛರದ ಭಾದ್ರಪದ ಸು ೫ ಸೋ

೨ . . . . . . . . . . . . . . . . ಲಿಯ ಹಡಪ ನಾರಾ

೩ . . . . . . . . . . . . . . ಣ ನಾಯಕರು ಮಾಡಿದ ಧರ್ಮ್ಮ[||*]

**೮. ನಿಡಗುಂದಿ: ದಾಸಿಮೇಶ್ವರ ದೇವಾಲಯದ ನವರಂಗದ ಗೋಡೆಯಲ್ಲಿರುವ ಶಾಸನ ಕ್ರಿಶ. ಸು. ೧೧೬೦**

ಈ ಶಾಸನವು ಶಿವ ಮತ್ತು ವಿಷ್ಣುದೇವರ ಸ್ತುತಿಗಳೊಂದಿಗೆ ಪ್ರಾರಂಭವಾಗುತ್ತದೆ. ಸಮುದ್ರ, ಜಂಬೂದ್ವೀಪ, ಮೇರುಗಿರಿ, ಭರತಕ್ಷೇತ್ರ, ಕುಂತಳದೇಶಗಳನ್ನು ವರ್ಣಿಸುತ್ತ, ಇಂತಹ ಭೂಕಾಂತೆಗೆ ವಲ್ಲಭನೆನಿಸಿದ ಬಿಜ್ಜಣ ಎಂದು ಬಣ್ಣಿಸುತ್ತದೆ. ಅನಂತರ ಆತನ ವಂಶಾವಳಿಯನ್ನು ಜೋಗಭೂಪಾಳ, ಪೆರ್ಮಾಡಿನೃಪರಿಂದ ಬಿಜ್ಜಳನವರೆಗೆ ವಿವರಿಸುತ್ತದೆ. ಈತ ಕಲ್ಯಾಣದ ನೆಲೆವೀಡಿನಿಂದ ಆಳುತ್ತಿರುವಾಗ, ಸಿಂದ ಗೋವಿಂದನ ಭಾವ ಚವುಂಡ ಭೂಪಾಳನ ವಂಶಾವಳಿಯನ್ನು ನೀಡುತ್ತದೆ. ದಾಸ ಭೂಪಾಳ, ಸಿಂಗರಸ, ಚಾವುಂಡ, ಚಾಮರೆಂಬ ಸೋದರರನ್ನು ಹೆಸರಿಸುತ್ತದೆ. ಆಚುಗಿ ಮಂಡಳಿಕನ ಮಗ ಬಮ್ಮ ಭೂಭುಜ, ಸಿಂದ ಪೆರ್ಮಾಡಿನೃಪ, ಈತನ ಮಗನಾದ ಸಿಂದ ಚಾವುಂಡನು ಸಿಂದಕುಳ ಕುಮುದಿನೀ ಶರಚ್ಚಂದ್ರನೆನಿಸಿ ಕಿಸುಕಾಡೆಪ್ಪತ್ತು, ಬಾಗಡಗೆಯೆಪ್ಪತ್ತು, ಕೆಳವಾಡಿ ಮೂನೂಱು, ನರೆಯಂಗಲ್ಲು ಹನ್ನೆರಡು, ಕರಿವಿಡಿ ಮೂವತ್ತು ಪ್ರಾಂತಗಳನ್ನು ಎರಂಬರಗೆಯ ನೆಲೆವೀಡಿನಲ್ಲಿ ತ್ರಿಭೋಗಾಭ್ಯಂತರ ಸಿದ್ಧಿಯಿಂದ ಆಳುತ್ತಿದ್ದಾಗ, ಆತನ ಅಧೀನನಾಗಿ ದಾಸಿರಾಜ ಆಳುತ್ತಿದ್ದನಂತೆ. ಈ ಮಹಾಪ್ರಧಾನ ಶ್ರೀಕರಣಾಧಿಷ್ಠಾಯಕ ಕಡಿತವರ್ಗಡೆಯ ಹೆಂಡತಿ ಮಾದಿಯಕ್ಕ. ದಾಸಿರಾಜನು ಮಹಾಗ್ರಹಾರ ನಿಡುಗುಂಡಿಯಲ್ಲಿ ವಿಷ್ಣು, ವಾಗ್ದೇವತೆ, ಮತ್ತು ದಾಸೇಶ್ವರ ದೇವರ ತ್ರಿಕೂಟ ದೇವಾಯತನವನ್ನು ಕಟ್ಟಿಸಿದನಂತೆ. ಆ ದಾಸೇಶ್ವರದೇವರ ಅಂಗಭೋಗ ರಂಗಭೋಗ ನೈವೇದ್ಯ ನಂದಾದೀವಿಗೆಗಳಿಗಾಗಿ ಚೈತ್ರ ಪವಿತ್ರ ಖಣ್ಡಸ್ಫುಟಿತ ಜೀರ್ಣೋದ್ಧಾರಗಳಿಗಾಗಿ ಮಹಾಮಂಡಳೇಶ್ವರ ಚವುಂಡರಸದೇವನು ಬಿಟ್ಟ ೨೪ ಮತ್ತರು ಭೂದಾನವನ್ನು ದಾಖಲಿಸುತ್ತದೆ.

ಶ್ರೀ ಕಲಿದೇವರು, ಯೋಗೇಶ್ವರದೇವರು, ಭೋಗೇಶ್ವರದೇವರು, ಮೊಸಳೇಶ್ವರದೇವರು, ವೊಡೆಯರು ರುದ್ರಭಟ್ಟರು,

ಮೊಸಳೇಶ್ವರದೇವರಸರು, ವಾಮಶಕ್ತಿದೇವರು, ಮಹಾಮಂಡಳೇಶ್ವರ ಬಿಜ್ಜಲದೇವರಸ, ವಿಕ್ರಮಾದಿತ್ಯದೇವರಸ, ಮಹಾ ಮಂಡಳೇಶ್ವರ ಹೆಮ್ಮಾಡಿದೇವರಸ, ಮಹಾಪ್ರಧಾನ ಆಚಣಯ್ಯ ದಂಡನಾಯಕ, ಚವುಡಿಮೂರೊಡೆಯ, ಹೊಲ್ಲಿಮೂರೊಡೆಯ, ಜಕ್ಕರಸ, ಜಕ್ಕಗವುಂಡ, ಊರೊಡೆಯ ಎಂಬ ಅಧಿಕಾರಿ ವರ್ಗದವರ ವ್ಯಕ್ತಿನಾಮಗಳು; ಅರಹುಣಿಸೆಗೇರಿಯ ನೂರ್ಬ್ಬರು, ಮಹಾಗ್ರಹಾರ ಕರಿಮಿಡಿಯ ಅಱು[ವ*]ತ್ತೆಂಬರ ಎಂಬ ಮಹಾಜನರ ಉಲ್ಲೇಖ; ಅಯ್ವತ್ತೊಕ್ಕಲು ಎಂಬ ತೆಲ್ಲಿಗರ ಸಂಘ; ಬೆಟಗೆಱೆಯ ದಾರಿ, ಮುದುವೊಳಲ ಹೊಲ, ಕೊಡಗನೂರ, ಸಿರಿಗುಪ್ಪಿ / ಸಿರಿಗುಪ್ಪೆ, ದೇವೂರ ಎಂಬ ಸ್ಥಳನಾಮಗಳು; ಹೂದೋಂಟ, ಬೆಳುದೇವಯ್ಯನ ಶತದ ತೋಂಟ, ಯೋಗೇಶ್ವರದೇವರ ತೋಂಟ, ಭೋಗೇಶ್ವರದೇವರ ಕೆಯಿ, ಸವಣ್ಣಸುಗೆ, ದೇವೂರದ ಗದ್ದೆ, ಹಜೆಕಾಱಿಂಗೆಯಿ, ನಾಲ್ಕು ಲಿಂಗದ ಕಲ್ಲು ಎಂಬ ದೇವರು ಮತ್ತು ಕೃಷಿ ಪ್ರಕಾರದ ಭೂಮಿಗಳ ಸೀಮೆಗಳು; ಜಕ್ಕಿಲಿಗೇರಿ, ಸೂಂಡಿಗೇರಿ, ಜೀರಗೆವಾವಿ, ಮರುಳಿಮೈಯ್ಯನ ಕೆಱೆ, ಮಾಗೆಱೆ ಎಂಬ ಕೆರೆ–ಭಾವಿಗಳು; ಮಾನ, ಸೊಳಸ ಎಂಬ ದ್ರವ ಅಳತೆಗಳು; ಬಾಲಸಿಕ್ಷೆ, ಯಜುರ್ವ್ವೇದದ ಖಂಡಿಕ ಎಂಬ ಶಿಕ್ಷಣದ ಪ್ರಕಾರಗಳು; ಹಣ, ಅರುವಣ ಎಂಬ ನಾಣ್ಯದ ಪ್ರಕಾರಗಳು; ದಶವಂದ ಎಂಬ ಸುಂಕ; ಗೋಂಟಿನ ಹೊಲ, ಕರಭೂಮಿ, ಕಾರೆಗೆಯ್ಯಿ, ಮಾರಡಿಗೆಯ್ಯಿ, ಗದ್ದೆ ಎಂಬ ಭೂಮಿಯ ಪ್ರಕಾರಗಳು; ಗಾಣ, ಮಾನೆಂಣ್ಣೆ ಎಂಬ ಉಲ್ಲೇಖಗಳು ಆರ್ಥಿಕ, ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ವ್ಯವಸ್ಥೆಗಳ ಮಾಹಿತಿಗಳನ್ನು ಒದಗಿಸುತ್ತದೆ.

೧ @ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥ ಜಯತಿ ಸ್ಥಾಯಿ ಸಂಚಾರೀ ಭಾವಾಭಿನಯ ಭಾವಕಾಃ ನೀಲಲೋಹಿತ ಶೈಲೂ–

೨ ಷ . . ಭ್ರಂ ಲತಾಲಾಸ್ಯ ವಿಭ್ರಮಾಃ ॥ ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ಣವಂ ದಕ್ಷಿಣೋನ್ನತ ದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ ॥

೩ @ ನಮಸ್ತಸ್ಮೈ ವರಾಹಾಯ ಲೀಲಯಾಚರತೇ ಮಹೀಂ ಖುರಾಂತರಗತೋ ಯಸ್ಯ ಮೇರುಃ ಖಣಖಣಾಯತೇ ॥ ಶ್ರೀಮತ್ಸಿದ್ಧನಿಧಿಂ ಪದಪತಿ ತಿರೀಟನನರ್ಘ್ಯ ರತ್ನ ಪ್ರವಾಸ್ತಾ ಮಾಳರ್ವಶ . .

೪ ದ ಪದ್ಮಯುಗಳಂ ಗೌರಿ ಕುಚಾಲಿಂಗನೋದ್ದಾಮ ಪ್ರಸ್ಫುರಿತ ಪ್ರಸನ್ನ ಹ್ರಿದಯಂ ದಾಸೇಶ್ವರಂ ಸಂತತ ಪ್ರೇಮಂ ಕೈಮಿಗೆ ದಾಸಿರಾಜ ನಿನಗೀಗಿಷ್ಟಾರ್ತ್ಥ ಸಂಸಿದ್ಧಿಯಂ ॥

೫ ಜಯತ್ಯಾ ನಮಿತಾಶೇಷ ಸುರಾಸುರ ನರೋರಗಂ । ಸ್ವರ್ಗ್ಗಾಪವರ್ಗ್ಗ ಮಾರ್ಗ್ಗಾನುಶಾಸನಂ ಶಿವಶಾಸನಂ ॥ @ ಸ್ವಸ್ತಿ ಸಮಸ್ತ ಭೂವಳಯ ವೇಷ್ಟಿತಮುಜ್ವ–

೬ ಳ ಮೌಕ್ತಿಕಾದಿ ಸದ್ವಸ್ತು ವಿಕೀರ್ಣ್ಣಮುಚ್ಚಳಿತ ತುಂಗ ತರಂಗ ಸಹಸ್ರ ಮಾಳಿಕಾನ್ಯಸ್ತ ವಿಯತ್ತಳಂ ಸೊಗಯಿಸಿರ್ಪ್ಪುದು ಭಾವಿಸಿ ನೋಡೆ ನಾಡೆ ಲೋ–

೭ ಕಸ್ತುತಮಾಗಿ ಮತ್ಸ್ಯ ಮಕರೋತ್ಕರ ಸಂಸ್ಥಿತ ಘೂರ್ಣ್ಣಿತಾರ್ಣ್ಣವಂ ॥ ತೊಳಗುವ ತೋರ ಮುತ್ತುಗಳ ಕೆಣ್ಬವಳಂಗಳ ತೆರ್ಕ್ಕೆಯಂ ಕವಿಲುವೆಳಗನದೆತ್ತಲುಂ

೮ ತಳೆದು ತುಂಗ ತರಂಗ ಸಹಸ್ರಮಿಂದಮ್ಮಚ್ಚಳಿಸಿ ಪೊದಳ್ದನುಂಣ್ಬ ನಿಗಳಂಬರದೊಳು ಭಗಣಂಗಳಂತೆ ಕಂಣ್ಗೊಳಿಸಿ ವಸುಧಾತಳಮನೇಂ ಬಳಸಿರ್ದ್ದುದೋ ಘೂರ್ಣ್ಣಿತಾ–

೯ ರ್ಣ್ಣವಂ ॥ ವಚನ ॥ ಅನ್ತೆನಿಸಿ ಲೀಲೆವೆತ್ತು ಸೊಗಯಿಸುವ ಶಿಂಶುಮಾರ ಕುಳಿರರುಳೂಕ ಜಳಚರ ಮತ್ಸ್ಯ ಮಕರ ಪ್ರಕರ ಪ್ರಷು(ಕ್ಷು)ಭಿತ ಕಲ್ಲೋಳ ಮಾಳಾ ವಿಳಾಸದಿಂ ಜಂಬೂದ್ವೀಪ–

೧೦ ಮನೆಯ್ದಿ ಸುತ್ತಿ ತದ್ಧಾತ್ರಿ ಯುವತಿಗೆ ಮೇಖಳಾಳಂಕಾರಮಿದೆನಿಸಿ ರಂಜಿಸುವ ಧಾತ್ರೀತಳ ಮಧ್ಯದೊಳು ॥ ಕುಳಿರ್ವ್ವಿದೂಪದ ಪಟ್ಟಕ ಪ್ರಕರದಿಂ ಮಾಣಿಕ್ಯಶೈಳಂಗಳಿಂ ವಿಳಸಚ್ಚಂದನ ವೀಧಿ–

೧೧ ಯಿಂ ಫಳಿತ ಕಳ್ಪಾರಾಮದಿಂ ಕಿನ್ನರಿ ಕಳವಿರ್ಣರವದಿಂ ಸುರೇಂದ್ರ ವನಿತಾ ನಾನಾರತ ಕ್ರೀಡೆಯಿಂದೆಳೆಯೊಳು ಕಣ್ಗೊಳಿಸಿತಿಪ್ಪುದು ತಟಹಟರತ್ನೂಕಟಂ ಸುರೇಂ–

೧೨ ದ್ರಾಚಳಂ ॥ ವಚನ ॥ ಅನ್ತೆನಿಸಿದ ಮೇರು ಮಹೀಧರದ ದಕ್ಷಿಣ ದಿಗ್ಭಾಗದೊಳು ಭಾರತವರ್ಷವೆಂಬುದಿಪ್ಪುದಾ ಭರತಕ್ಷೇತ್ರ ಮಧ್ಯದೊಳು ಭೂಕಾಂತೆಗೆ ಕುನ್ತಳದನ್ತೆ

೧೩ ಕುನ್ತಳದೇಶದೇಶವಿರ್ಪ್ಪುದದೆಂತೆಂದೊಡೆ ॥ ತರಳ ತೇಹಾರದೊಳು ಮಣಿಣ ವ್ರಿತ್ತಿ ಮದಾಳಿಯೊಳುರ್ಕ್ಕು ಪಾಲೊಳಾತುರತೆ

ವಿಯೋಗಿಯೊಳು ಮದಮುಖಂ ಗಜದೊಳು ಕ–
೧೪ ಠಿಣತ್ವವಂಗನಾ ಗುರುಕುಚದೊಳು ಗುಣಚ್ಯುತಿ ಪುರಂಧರ ಚಾಪದೊಳಿಲ್ಲದಿಲ್ಲೆನಲು ಕರಮೆಸೆದೊಪ್ಪಿ ತೋಱುವ್ವದು ಭಾವಿಸೆ ಕುನ್ತಳ ಭೂರಿಭೂತಳಂ ॥ ಅನ್ತೆನಿಸಿದೆಳೆಯನಾಳ್ವ–
೧೫ ರನನ್ತ ಕ್ಷತ್ರಿಯಕವಂದಿರಂ ರಣಮುಖದೊಳು ವಿಕ್ರಾಂತದೊಳೆ ಗೆಲ್ದು ತದ್ಭೂಕಾನ್ತೆಗೆ ಪತಿಯಾದನಲ್ತೆ ಬಿಜ್ಜಣದೇವಂ ॥ ವಚನ ॥ ಅನ್ತೆನಿಸಿದಾ ಚಕ್ರವರ್ತ್ತಿ ಮೌಳಿ ಮಾ–
೧೬ ಣಿಕ್ಯನರ್ಘ್ಯರತ್ನವೆನಿಸಿದ ಬಿಜ್ಜಣದೇವನನ್ವಯಾವತಾರವೆನ್ತೆಂದೊಡೆ ॥ ಮತಿ ವಾಚಸ್ಪತಿಯೊಳು ವಿಶುದ್ಧ ಚರಿತಂ ಮನ್ವಾದಿ ಶಾಸ್ತ್ರಾರ್ತ್ಥ ಸಂತತಿಯೊಳು
೧೭ ದಾನಗುಣಂ ಸುರೇಂದ್ರಕುಜದೊಳು ಶೌಚಬ್ರತಂ ಜಾಹ್ನವಿ ಸುತನೊಳು ಕಾಬ್ಯಕಳಾ ಪ್ರಗರ್ಬ್ಭತೆ ಗುಣಾಢ್ಯ ಪೌಢ ಕಾಬ್ಯಜ್ಞರೊಳು ಸಂತತಂ ಪಾಸಟಿಯೆಂ–
೧೮ ದೊಡಾಪ್ರ್ಪೊಗಳದರು ಶ್ರೀ ಜೋಗಭೂಪಾಳನಂ ॥ ಅನ್ತೆನಿಸಿದ ಜೋಗ ಮಹೀಕಾನ್ತಂಗೊಗೆದಂ ಸಮಸ್ತ ಯಾಚಕ ಜನತಾ ಚಿನ್ತಾರತ್ನಂ ವಸುಧಾಕ್ರಾನ್ತಂ ಭುಜಂ ನೆಗಳ್ದನೆಳೆ–
೧೯ ಗೆ ಪೆರ್ಮ್ಮಾಡಿ ನ್ರಿಪಂ ॥ ತರದಿಂ ಮಾಣದೆ ವೇಳೆಗೊಂಡು ಪಲವುಂ ಭಂಗಂಗಳಂ ಪೊರ್ತ್ತು ಭೀಕರ ರಾಮೋಗ್ರ ಶರಕ್ಕೆ ಮೆಯ್ದೆಗೆದು ನಿರಾಗುರ್ಕ್ಕಿಲಜ್ಜಳು ಬಂಧುರ ಸಹ್ಯಾದ್ರಿ–
೨೦ ಯನೊತ್ತುಗೊಂಡುದೆನುತುಂ ಱೋಡಾಡುವಂ ತನ್ನ ನಿರ್ಬ್ಭರ ಗಂಭೀರ ಗುಣಪ್ರಭಾವದೊದವಿಂ ಪೆಂರ್ಮ್ಮಾಡಿ ಭೂಪಾಳಕಂ ॥ ಆ ವಿಭುಗೆ ಪುಟ್ಟಿದಂ ವಾಗ್ದೇವಿ ಮುಖಮುಕುರನರಿ ಕುಚೋ–
೨೧ ಗ್ರ ಕುಠಾರಂ ದೇವೇಂದ್ರ ವೈಭವಂ ಭೂದೇವಿ ಪ್ರಿಯಕಾನ್ತನೆನಿಸಿ ಬಿಜ್ಜಲದೇವಂ ॥ ಗರಳೋಗ್ರಾನಳನುಗ್ರಕಣ್ಠ ತಟದಿಂ ದಾವಾನಳಂ ಕಾನನಾಂತರದಿಂ ವಜ್ರಕ್ರಿತಾನಳ
೨೨ ಗಗನದಿಂ ದೋರ್ವ್ವಾನಳಂ ಸಾಗರಾನ್ತರದಿಂದೊಂದಿ ಪೊದಳ್ದು ನಿಂದುವೆನಿಕುಂ ಸಂಗ್ರಾಮದೊಳು ತನ್ನ ಭೀಕರ ಕೋಪಾನಳನೆಂದೊಡಾಂಪದಟರಾರು ಶ್ರೀ ಬಿಜ್ಜಲೋರ್ಬ್ಬೀಶನಂ ॥ ಕಡುಪಿಂಗಂ
೨೩ ಪಿಡಿದೊತ್ತಿನಿಂ ಜಡಿದೊಡಂ ಸಂಗ್ರಾಮದೊಳು ಮೀಱಿ ತಳ್ತೊಡಲಂ ಪೊಕ್ಕಮರ್ದ್ದಪ್ಪುವಳು ಸುಭಟರಂ ತಕ್ಕೂರ್ಮ್ಮೆಯಿಂ ನಿನ್ನ ಕೈವಿಡಿದಿರ್ದ್ದುಗ್ರ ಕರಾಳ ಖಡ್ಗವದು ತಾನೆಂದಂದಣಂ
೨೪ ದೂಱುವಳು ಬಿಡದೋರನ್ತಿರೆ ಬಿಜ್ಜಲ ಕ್ಷಿತಿಪನುದ್ಯತ್ಕೀರ್ತ್ತಿ ದಿಕುಚಕ್ರದೊಳು ॥ ಜರಿದಂ ಗೂರ್ಜ್ಜರನರ್ಗ್ಗಿದಂ ಮಗಧನೆರ್ದ್ದ ಮಾಳವಂ ಚೋಳಿಕಂ ಸರಿದಂ ಕೊಂಕಣದಂಕ ಚೇರನ–
೨೫ ದಟಂ ಬಿಟ್ಟೋಡಿದರ್ಪ್ಪಲ್ಲವಂ ಕೊರಗುತ್ತಿರ್ದ್ದನೆನಲುಕೆ ಮಾರ್ಮ್ಮಲೆವರಾಬ್ರ್ಭೂಪಾಳಕರ್ಸ್ಸಗರೋರ್ಬ್ಬರೆಯೊಳು ಬಿಜ್ಜಲ ಭೂಭುಜಂಗೆ ಭುಜಗರ್ಬ್ಬಾಟೋಪದಿಂದೀಕ್ಷಿಸಲು ॥
೨೬ @ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕಂ ಕಾಳಾಂಜನ ಪುರವರಾಧೀಶ್ವರಂ ಸುವರ್ಣ್ನ ವ್ರಿ–
೨೭ ಷಭಧ್ವಜಂ ಡಮರುಗ ತೂರ್ಯ್ಯ ನಿರ್ಗ್ಘೋಷಣಂ ಕದನ ಪ್ರಚಣ್ಡಂ ಕಲಿಗಳಂಕುಶಂ ಸುಭಟರಾದಿತ್ಯ ಶ್ರೀಮತ್ಕಳಚೂರ್ಯ್ಯ ಭುಜಬಳ ಚಕ್ರವರ್ತ್ತಿ ಬಿಜ್ಜಣದೇವ ವಿಜಯರಾಜ್ಯಮು–
೨೮ ತ್ತರೋತ್ತರಾಭಿವ್ರಿದ್ಧಿ ಪ್ರವರ್ದ್ಧಮಾನಮಾಚಂದ್ರಾರ್ಕ್ಕ ತಾರಂಬರಂ ಸಲುತ್ತಮಿರೆ ಕಲ್ಯಾಣದ ನೆಲೆವೀಡಿನಲು ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ತತ್ಪಾ–
೨೯ ದ ಪದ್ಮೋಪಜೀವಿ ॥ ರವಿಬಿಂಬಂ ರಾಹು ದಷ್ಟಸಹಿತಮತುಳ ದಾವಾನಳಂ ವರುಷ ಕಾಲ ಬ್ಯವಧಾನಂ ವಜ್ರಮುಜ್ಜ್ರುಂಭಿತ ಗರುಡ ಭಯಭ್ರಾಂತವೊರ್ಬ್ಬಾಗ್ನಿದು
೩೦ ದುಗ್ಧಾರ್ಣ್ನವ ಗರ್ಬ್ಭಾವಾಸ ಮೂಡಂ ಗರಳಮಭವ ಭೀತಾವಶೇಷಂ ಕರಂ ದೂಷ್ಯವೆನುತ್ತಂ ಱೋಡಿಪ ತೇಜದಿನಧಿಕ ಬಳಸಿಂದ ಚಾವುಂಡಭೂಪಂ ॥ ಅನ್ತೆನಿಸಿದ ಸಿಂದ ಗೋವಿಂದನ ಭಾವ ಚವು–
೩೧ ಡ ಭೂಪಾಳನನ್ವಯಾವತಾರವೆಂತೆಂದೊಡೆ ॥ ಜನನಾಥಂ ವಿ ಭುವಾಚಭೂಪನನಘಂ ಶ್ರೀ ದಾಸಭೂಪಾಳಕಂ

ಘನದೋರ್ವ್ವಿಕ್ರಮಶಾಳಿ ಸಿಂಗರಸನುರ್ಬ್ಬೀ ಮಂಡನನನ–

೩೨ ಕಿ ಸಜ್ಜನ ಸಂಸ್ತುತ್ಯನುದಾರಿ ದಾಮನದಟಂ ಚಾವುಂಡ ಭೂಪಾಳಕಂ ವಿನಯಾಂಬೋನಿಧಿ ಚಾಮನೆಂಬರೆಸೆದತ್ತತ್ಸೋದರ ದ್ಧಾತ್ರಿಯೊಳು ॥ ವ ॥ ಅನ್ತೆನಿಸಿ ನೆಗರ್ತ್ತೆಗಂ ಪೊ–

೩೩ ಗರ್ತ್ತೆ ಜಗವೆಕ್ಕಲಾವಣವಾದ ಸಿಂದ ವಂಶಾನ್ವಯದೊಳು ॥ ಚಲದಿಂ ಬಂಧುಜಿದೋಡಿ ನಿಂದೊಡಹಿತರ್ಸ್ಸಂಗ್ರಾಮದೊಳು ತನ್ನ ದೋರ್ಬ್ಬಲದಿಂ ಸುಲಿಗೆಗೊಂಡಡುತ್ತಿಜೆಯಲಾದಂ ಕೂಡಿ

೩೪ ಬಿರ್ದ್ದಿರ್ದ್ದ ಹಂದಲೆಯಿಂದೊಕ್ಕ ಕರುಳ್ಗಳಿಂ ಮುಜಿದ ಪಾರ್ಕ್ಕಿಂದೀಕ್ಷಿಸಲು ಭೀತಿಯಂ ಕಲಿಗಂ ಪುಟ್ಟಿಸಿದತ್ತು ತರ್ಜ್ಜಿತರಣಂ ಚಾವುಂಡಭೂಪಾಳನಂ ॥ ಆ ನೃಪರೊಳು ನೆಗರ್ತ್ತೆವಡೆದಾ–

೩೫ ಚುಗಿ ಮಣ್ಡಳಿಕಂಗೆ ವುಟ್ಟಿದಂ ಭೂನುತ ಭೂರಿವಿಕ್ರಮ ಗುಣೋಪಚಿತಂ ಕಲಿಕಾಲ ಮರುಲಕ್ಷ್ಮಿನಿಳಯಂ ವಿವೇಕನಿಧಿ ಸಜ್ಜನ ಕಳ್ಪಿತ ಕಳ್ಪಭೂರುಹಂ ಮಾನನಿ–

೩೬ ಧಾನನುಜ್ವಳ ಯಶೋನಿಳಯಂ ವಿಭು ಬಮ್ಮಭೂಭುಜಂ ॥ ವಿದಿತ ವಿಶುದ್ಧ ಕೀರ್ತ್ತಿ ವಿಭವಂಗೆ ನೆಗರ್ತ್ತೆಯ ಸಿಂಹಭೂಭುಜಂಗುದಿಯಿಸಿದಂ ವಿರೋಧಿ ನೃಪ ದುರ್ದ್ಧರ ಖಾಂಡವ

೩೭ ಪಾಂಡು ಸೂನು ದುರ್ಮ್ಮದ ಸಕಳಾವನಿ ಶಬಳ ವಾರಿಧಿ ಶೋಷಣ ಬಾಡವಾನಳ ಕದನ ಜಯಾವಹ ಭುವನ ಭುಂಭುಕನಾಚುಗಿ ಮಣ್ಡಳೇಶ್ವರಂ ॥ ಕಾಳನಂ ಕೂಡೆ ಕಲಂಕಿ ಸುಟ್ಟು ಹೆ–

೩೮ ದಱುತಂ ತಚ್ಚೋಳನಂ ತೂಳ್ದಿದೊರ್ಬ್ಬಿಳದಿಂ ಕೊನ್ದು ಕಡಾರ ಗಂಡನಗುರ್ಬ್ಬುರ್ಬ್ಬೆಳ್ವಿನಂ ದಿಗ್ಗಜಾವಳಿಯೊಳು ಕೀರ್ತ್ತಿಯನಾವಗಂ ನಿಲಿಸಿದಂ ವಿದ್ವಿಷ್ಟ ಭೂಪಾಳ ಸಂಕುಳ ನೀರಾಕರ ಬಾಡವಾ–

೩೯ ನಳ ಸಮಂ ಶ್ರೀಯಾಚಭೂಪಾಳಕಂ ॥ ಕಡು ಬಂದುಪ್ಪಿನ ಕಟ್ಟಿಯಂಡ ಹಿಳೆಯಂ ಸುಟ್ಟತಿ ಸಹ್ಯಾದ್ರಿಯಂ ಮುಡಿಗುಟ್ಟುತಮೆ ದಾಂಟಿ ಪೊಕ್ಕು ಬಳ–

೪೦ ವದ್ಭಾರಾಸಿಯಂ ಗೋವೆಯಂ ಬಿಡದೋರಂದದಿನೊಕ್ಕಿಲಿಕ್ಕಿ ವಿಳಸದ್ವೇಳಾವನಾನೀಕಮಂ ಕಡಿದದಾರ್ಬ್ಬೆಳದಿಂದವಾಚುಗಿ ನೃಪಂ ಭೂಪಾಳ ವಿದ್ಯಾಧರಂ ॥ ಆ ವಿಭುಗೆ ಪುಟ್ಟಿದ

೪೧ ಧಾತ್ರಿ ವಿನುತ ಖ್ಯಾತನಮಳ ಕೀರ್ತ್ತಿಪತಾಕಂ ದೇವೇಂದ್ರ ವೈಭವಂ ಸದ್ಭಾವಂಬೆತ್ತೆಳೆಗೆ ಸಿಂದ ಪೆರ್ಮ್ಮಾಡಿ ನೃಪಂ ॥ ಬೆಸನಂ ಪೇಳೆ ಚಳುಕ್ಯ ಚಕ್ರಿ ನಡೆದಂ ತಾ ಹೊಯ್ಸಣಾಧೀಶನಂ ದೆ–

೪೨ ಸೆಯಂತಂ ಪುಗುವನ್ನೆಗಂ ಬಿಡದೆ ಬೆಂಕೊಣ್ಡುನ್ಮದೇಭಂಗಳಂ ನಿಸದಂ ಸಾಧಿಸಿ ತಂದು ಕೊಟ್ಟು ಜಸಮಂ ಕೈಕೊಣ್ಡನೆಂದಂದು ಸಂತೋಸದಿಂ ಬಣ್ಣಿಪುದಲ್ತೆ ಧಾತ್ರಿ ಪದೆಪಿಂ ಪೆರ್ಮ್ಮಾಡಿ ಭೂ–

೪೩ ಪಾಳನಂ ॥ ಬಳ ಬಕ ಬಾಣ ಕಂಸ ತಳ ತಾಳುಕರಂ ಗೆಲೆವಂದು ವಿಶ್ವಮಣ್ಡಳವನದೊಂದೆ ಕೊಳ್ಳಿಯೊಳೆ ಸುಟ್ಟು ನೆಗರ್ತ್ತೆಯನಾನ್ತ ಚಟ್ಟಮಣ್ಡಳಿಕನನಟ್ಟಿ ಮುಟ್ಟಿ ಪಿಡಿದು ಗ–

೪೪ ಡೆ ಕೋಡಗಗಟ್ಟುಗಟ್ಟಿ ದೋರ್ಬ್ಬಳದೊಳೆ ಚಕ್ರಿಗಟ್ಟಿದನೆನಲ್ಕೆ ಕೆಯಾರ್ಗ್ಗಳ ಪೆರ್ಮ್ಮ ಭೂಪನೊಳು ॥ ಭೋರೆನೆ ನೆಗಳ್ದ ಪೆರ್ಮ್ಮ ಭೂಭುಜನನುಜೆ ರೇಹಾಚಂಡವನ ಜವನ ವೇದಂಡಂ ವನಿತಾ ಲೋ–

೪೫ ಚನ ದರ್ಪ್ಪಣ ತನು ವಿಭವಂ ನೆಗಳ್ದನೆಳೆಗೆ ಚಾವುಂಡನೃಪಂ ॥ ಬಳವದ್ಭೂರಿ ಭುಜಪ್ರತಾಪ ಭಯದಿಂ ನೀರ್ವ್ವಕ್ಕಿವೊಲು ಪೊಕ್ಕು ಸಂಚಳ ಮೈನಾಕ ಪಯೋಧಿಯೊಳು ನೆಲಸಿಪೆಳೆಕಿರ್ದ್ದ

೪೬ ಪೈಕಾಗುವ ಸಳಿತಂ ಬಂದು ಶರಣ್ಬುಗೆನ್ನ ಪತಿಯಂ ನೀನೆಂದು ಪೇಳ್ವಂತೆ ನಿರ್ಮ್ಮಳ ಕೀರ್ತ್ತ್ಯಂಗನೆ ಪೊರ್ದ್ದಿದಳು ಜಳಧಿಯಂ ಚಾವುಂಡ ಭೂಪಾಳನಂ ॥ ನೆಣನಂ ನುಂಗುವ ನೆತ್ತರಂ ಕುಡಿವ ಕರ್ಗ್ಗಡಂಗ–

೪೭ ಳಂ ಮೆಲ್ವ ಪೆರ್ಬ್ಬೆಣನಂ ಪೊತ್ತ್ನ ತೊಳಲ್ವ ಮೂಳೆಯನಲಂಪಿಂ ಕಾರ್ವ್ವ ಬಂಬಲುಗರುಳ್ವಿಣಿಲಂ ಸೂಡುವ ಕಾಳ ರಕ್ಕಸಿಯ ತಿಂದನೊಡೆ ಚೈತ್ರಾರ್ಬ್ಬರಾಂಗಣಮತ್ಯದ್ಭುತಮಾದುದಲ್ತೆ

೪೮ ಪಿರಿದುಂ ಚಾವುಂಡ ಭೂಪಾಳನಂ ॥ ಬಳವದ್ವೀರ ವಿರೋಧಿ ಶೈವಳ ಲತಾ ಸನ್ತಾನಮಂ ನುಂಗಿ ತತ್ಕುಳಕಾನ್ತಾ ನಯನ ಪ್ರವಾಹ ಜಳಮಂ ಪೊಕ್ಕಾಡವೋಲಾಡಿ ನಿರ್ಮ್ಮಳ ಹಾರಾಂ–

೪೯ ಬುಜ ನಾಳವಂ ಕಬಳಿಕುಂ ಯುದ್ಧಾಬ್ಧಿನಿ ಮಧ್ಯಮಂಡಳದೊಳು ಖಡ್ಗವಿಳಾಸ ಬಾಳಕಳಹಂಸಂ ಸಿಂದ ಚಾವುಂಡನಂ

॥ ವಚನ ॥ ಅನ್ತೆನಿಸಿದ ಸಿಂದಕುಳ ಕುಮುದಿನೀ ಶರಶ್ಚಂದ್ರಂ ಕಿಸುಕಾಡೆಪ್ಪತ್ತುಮಂ ಬಾಗಡ–
೫೦ ಗೆಯೆಪ್ಪತ್ತುಮಂ ಕೆಳವಾಡಿ ಮೂನೂಱುಮಂ ನರೆಯಂಗಲ್ಲು ಹನ್ನೆರಡುಮಂ ಕರಿವಿಡಿ ಮೂವತ್ತುಮಂ ತ್ರಿಭೋಗಾಭ್ಯಂತರ ಸಿದ್ಧಿಯಿಂದಾಳ್ದೆರಂಬರಗೆಯ ನೆಲೆವೀಡಿನಲು ಸುಖ–
೫೧ ಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ತತ್ಪಾದ ಪದ್ಮೋಪಜೀವಿ ॥ ವೃ ॥ ವದನಂ ವಾಗ್ವನಿತಾ ವಿನೋದ ಸದನಂ ಶ್ರೋತ್ರ ವರ ಸಸ್ಯಂದಿ ಸನ್ನೃದ್ಧ ಕಾಬ್ಯಾಮೃತ ಪೂರ್ಣ್ನಪಾತ್ರ
೫೨ ವಲಗ್ರ್ಗಣ್ಣಾಕ್ಷಿಣ್ಯಲಕ್ಷ್ಮಿ ಸಮಾಸ್ಪದಮೌದಾರ್ಯ್ಯಮಶೇಷ ಶಿಷ್ಟ ಜನತಾ ತುಷ್ಟಿಪ್ರದಂ ತಾನೆನಲು ಪುಟ್ಟಿದಂ ನಿರ್ಮ್ಮಳ ಕೀರ್ತ್ತಿಯಂ ವಸುಧೆಯಂ
೫೩ ಶ್ರೀ ದಾಸಿರಾಜೋತ್ತಮಂ ॥ ಅನ್ತೆನಿಸಿದಾ ಮಹಾನುಭಾವನನ್ವಯಾವತಾರವೆಂತೆಂದಡೆ ॥ ಸರಸಿಜ ಗರ್ಬ್ಭನನ್ತೆ ಸಕಳಜ್ಞತೆಯಂ ತಳೆದಿರ್ದ್ದ ವಿಷ್ಣುಭಟ್ಟರ ಸುತನಾ–
೫೪ ಶ್ರಿತ ಪ್ರಕರ ನೂತನ ಕಳ್ಪಿತ ಕಳ್ಪಭೂರುಹಂ ಪರಹಿತ ಖೇಚರಾಧಿಪತಿ ಕೇಶವದೇವನೆನುತ್ತವೆಯ್ದೆ ಬಿತ್ತರಿಪುದಿಳಾ ತಳಂ ಪದಪಿನಿಂದಮೆ ವಾರಿಣಿಧಿ ಮೇರೆಯಾ–
೫೫ ಗಿರಲು ॥ ಆ ವಿಭುವಿಂಗೆ ಪುಟ್ಟಿದನುದಾತ್ತ ಯಶೋನಿಧಿ ನಾಕಿರಾಜನುರ್ಬ್ಬೀ ವಿನುತಂ ತದಾನುಜನಶೇಷ ಗುಣಾಂಬುಧಿ ನಾರಣಾಂಕನೆಂಬೀ ವಸುಧಾಮರರ್ಸ್ಸಕಳ ಶಾಸ್ತ್ರ ಕ–
೫೬ ಳಾವಿದರುದುಘಕೀರ್ತ್ತಿಲಕ್ಷ್ಮಿ ವರರಾತ್ಮವಂಶ ಮಣಿಮಂದಿರ ರಾಜಿತ ರತ್ನದೀಪಕರು ॥ ಎನೆ ನೆಗಳ್ದಾತನಿಂ ಕಿಱಿಯನಗ್ಗದ ವಿಷ್ಣು ನೆಗರ್ತ್ತೆವೆತ್ತನಾತನ ಕಿಱುದಂಮ ನಾಚರಸನಾ ವಿಭುವಿಂಗೊ–
೫೭ ಡವುಟ್ಟಿದಂ ಜಗಜ್ಜನ ನುತನುದ್ಧಕೀರ್ತ್ತಿ ವಿಭವಂ ನೆಗಳ್ದಗ್ಗದ ದಾಸಿರಾಜನೆಂಬನುಪಮ ಪುಂಣ್ಯ ಪುಂಜರಖಿಳಾಮರ ನೂತನ ರತ್ನದರ್ಪ್ಪಣರು ॥ ಆ ನೆಗಳ್ದಯ್ವರೊಳೆಸೆದಂ ಮಾನ
೫೮ ಧನಂ ಸುಜನ ವನಜವನ ಕಳಹಂಸ ಶ್ರೀನಿಳಯಂ ಸಕಳ ಕಳಾದಾನಂ ಗುಣರತ್ನನೆಳೆಯೊಳಾಚರಸ ಬುಧಂ ॥ ಆ ವಿಭುವಿನ ಸತಿ ನುತೆ ವಾಗ್ದೇವತೆಗಂ ಶ್ರೈ–
೫೯ ಳಪುತ್ರಿಗಂ ವಾರ್ದ್ಧಿಜೆಗಂ ಭೂವಧುಗಂ ಮಿಗಿಲೆಂದಡದೇವೊಗಳ್ವುದೋ ಮುದ್ದಿಯಕ್ಕನೊಳು ಗುಣದೊಳ್ಪಂ ॥ ವೊದವಿದ ರೋಹಣಾದ್ರಿಶಿಖರ ಸ್ಥಳಿಯೊಳು ನವಶೋಣರತ್ನವಂತುದಿಯಿ–
೬೦ ಸುವದಟಂ ನಯದಿನಾ ಮಿಥುನಂಗಳಪೂರ್ಬ್ಬ ಪುಣ್ಯದಿಂತುದಿಯಿಸಿದಂ ವಿವೇಕನಿಳಯಂ ಸುಜನಾಗ್ರಣಿ ದಾಸಿರಾಜನಭ್ಯುದಯ ಸಹಸ್ರಮಂ ತಳೆದು ಮಂತ್ರ
೬೧ ಗುಣಾರ್ಣ್ನವ ಪೂರ್ಣ್ನಚಂದ್ರಮ ॥ ವ ॥ ಆ ವಿವೇಕವಿದ್ಯಾಧರನೆನಿಸಿ ನೆಗರ್ತ್ತೆವೆತ್ತ ಮಹಾಪ್ರಧಾನಂ ಶ್ರೀಕರಣಾಧಿಷ್ಠಾಯಕಂ ಕಡಿತವೆರ್ಗ್ಗಡೆ ದಾಸಿರಾಜ ವಿಭುವಿಗೆ ॥ ಪಲವುಂ ನೋ–
೬೨ ಪಿಗಳಂ ಮುನ್ನಲಸದೆ ನೆಱೆ ನೋಂತು ದಾಸಿರಾಜನ ಕೈಯ ಕುಲವಧು ಪಿಡಿದೇನೆಸೆದಳೋ ಜಳಜಾನನೆ ಮಾದಿಯಕ್ಕನವನೀ ತಳದೊಳು ॥ ನುತ ಭಾರದ್ವಾಜ ಗೋತ್ರ
೬೩ ಪ್ರಥಿತನಮಳ ಚಾರಿತ್ರ ಸದ್ಭೂಷಣಂ ಶ್ರೀಪತಿಭಟ್ಟಂ ತಂದೆ ಸೀತೋಪಮ ವಿಮಳ ನಿಜಾಚಾರ ವಿಖ್ಯಾತೆ ಚಂದವ್ವೆ ತಾಯಿ ವಿಶ್ರುತ ನಾನಾ ಸಂಪದಂ ಶ್ರೀಕರಣ ವರ ನಿಯೋಗಾಧಿಪ ದಾ–
೬೪ ಸಿರಾಜಂ ಪತಿ ತಾನೆಂದಂದು ಮಾದೇವಿಗೆ ಪಡಿ ಪೆಱರೊಳರೇ ಧಾತ್ರಿಯೊಳು ನಾರಿಯರ್ಕ್ಕಳು ॥ ಸುರಭಿಗೆ ದಾನವಿಂದ್ರಗಿರಿಗುಂನತಿ ಸಿನ್ಧುಸುತಂಗೆ ಶೌಚವುರ್ಬ್ಬರೆಗೆ ಮಹತ್ವವಂಬುಧಿಗೆ ಗುಂಣ್ಪಾ ಹಿಮಾಂ–
೬೫ ಶುಗೆ ಶೈತ್ಯವ್ರಿತ್ತಿ ಪಂಕರುಹಭವಂಗೆ ವಿಶ್ರುತ ಕಳಾವಿಭವಂ ಸಮ ಸದುದಿತನಿಂ ಪಿರಿದುವೆನುತ ಭಣ್ಪಿಪುದ್ಧ ಧಾರಿಣಿ ಹೆರ್ಗ್ಗಡೆ ದಾಸಿರಾಜನಂ ॥ ಅನ್ತು ವಿಶುದ್ಧ ಕೀರ್ತ್ತಿಯಂ ತಳೆದ ದಾಸಿ–
೬೬ ಮಯ್ಯನಾಯಕರುಂ ॥ ತದನುಜನಂಗಜ ಪ್ರತಿಮನನೇಕ ಕಲಾವಿಶಾರದಂ ಸದಮಳ ಕೀರ್ತ್ತಿವರ್ತ್ತಿತ ಜಗದ್ವಿವರಂ ಹರಪಾದಪದ್ಮ ಸಮುದಿತ ಪದಂಘ್ರಿ ರಾಯರಸನಾತ್ಮ
೬೭ ಕುಳಾಂಬರ ಭಾನು ಸಂನಿಭಂ ಮದವದರಾತಿ ಶೈಳಕುಳಿಶಂ ನೆಗಳ್ದಂ ಧರಣೀ ತಳಾಗ್ರದೊಳು ॥ ತತ್ತನೆಯಂ

ದಾನಾಂಬುಜ ಭೃತ್ತನಯಂ ಸಕಳ ಶಾಸ್ತ್ರ ಕೌಶಳ ಗೌರಿ ಭೃತ್ತನೆಯಂ ರೂಪರಮಾ ಭೃತ್ತನೆಯಂ

೬೮ ನೆಗಳ್ದನಾತನುತ್ತಮ ನಾಚಂ ॥ ನಿರುತಂ ಧಾತ್ರಿಗೆ ಸಂದ ಸಿಂಧಕುಳ ಸಂಭೂತಂ ಮಹಾಮಂಡಳೇಶ್ವರ ಚೂಡಾಮಣಿ ವೀರ ಬಿಜ್ಜಲನ ಶುಂಭದ್ವಿಕ್ರಮಾದಿತ್ಯ ಭೂವರನೀ ಕರಣಾಗ್ರಗಣ್ಯನವನೀ ಸಂಸ್ತುತ್ಯ ಪುಣ್ಯ

೬೯ ಗುಣೋತ್ಕರ ಲೋಕೈಕವರೇಂಣ್ಯನುರ್ಬ್ಬರೆಯೊಳೀ ಶ್ರೀಯಾಭಿದೇವೋತ್ತಮಂ ॥ ಸುರರಾಜಂ ಖಚರಾಧಿಪಂ ಶದೃಶ ವಾದ್ಯದ್ಯೋಗದಿಂ ಭಾಗದಿಂ ವರ ವಾಣೀಪತಿ ಚಟ್ಟಿಯುಂ ದೊರೆ ಕಳಾ ಸಂಸಿದ್ಧಿಯಿಂ ಬುದ್ಧಿಯಿಂ

೭೦ ಹರಿಪುತ್ರಂ ಭವಭೂತಿಯುಂ ವಿತತ ದಾನಾಸಕ್ತಿಯಿಂ ಯುಕ್ತಿಯಿಂ ಸರಿಯೆಂದೀ ಧರೆ ಕೀರ್ತ್ತಿಸಲ್ಕೆ ನೆಗಳ್ದಂ ಶ್ರೀಯಾಭಿದೇವೋತ್ತಮಂ ॥ ಪೊಸತಲ್ಲರ್ದ್ದಿಪುವೆತ್ತ ಪೊಸಮಲ್ಲಿಗೆ ಪೂತು

೭೧ ಮಡಲ್ತು ಕೂಡೆ ಮಿಳ್ಳಿಸಲೆಳೆಮಾವು ಕಂದಳಿರ ಗೊಂದಳವಂ ತಳೆದಿರ್ದ್ದಶೋಕೆ ಪಣ್ತಸದಳವೊಪ್ಪುವಂತೆಳೆವೆ ಬಾಳೆಗಳಿಂ ಕಿಸುಕಾಡು ನಾಡು ಕಣ್ಗೆಸೆವುದದೆಂತೆಂದೊಡೆ ॥ ಕುಳಿರ್ವ್ವ ಕೊಳಂಗಳಿಂ

೭೨ ಮಿಳಿರ್ವ್ವ ಮಾಮರದಿಂ ಲತಿಕಾಗ್ರಿಹಂಗಳಿಂ ಬೆಳೆದೆಳೆವಾಳೆಯಿಂ ಜಡಿವ ಕೋಗಿಲೆಯಿಂ ನಡೆವಂಚೆವಿಂಡಿನಿಂ ಗಳಹುವ ಕೀರ ಚಾರು ನಿಕುರುಂಬಕದಿಂ ನಿಡುಗುಂಡಿ ನಾಡೆ ಕಣ್ಗೊಳಿಪುದು ದೇ–

೭೩ ವತಾಭವನದಿಂ ದ್ವಿಜರಾಜಿತ ವೇದನಾದದಿಂ ॥ ಪರಮ ಗುಣಾನ್ವಿತರ್ಸ್ಸಕಳಶಾಸ್ತ್ರ ಕಳಾಗಮ ಕೋವಿದರ್ಮ್ಮಹೇಶ್ವರ ಪದ ಪಂಕಜ ಭ್ರಮರಾಶ್ರಿತ ನೂತನ ಕಾಮಧೇನುಗಳು ಶರದಮ್ಳ–

೭೪ ತಾಂಶು ಬಿಂಬನಿಭಕೀರ್ತ್ತಿಗಳೆಂದು ಧರಿತ್ರಿ ಕೂಡೆ ಬಿತ್ತರಿಪ್ಪುದನಾರತಂ ಪದಪಿನಿಂ ನಿಡುಗುಂಡಿಯ ವಿಪ್ರರತ್ನರಂ ॥ ಒದವಿದ ವೇದಶಾಸ್ತ್ರ ಮಹಿಮೋಂನತಿಯಿಂ ವ–

೭೫ ಜಾತಗರ್ಬ್ಬನಂ ವಿದಿತ ವಿಶುದ್ಧ ಚಾರು ಚರಿತೋನ್ನತಿಯಿಂ ಮನು ನೀತಿಮಾರ್ಗ್ಗ ಸಂಪದಮನಾರತಂ ಗೆಲ್ದು ಪೆರ್ಮ್ಮೆಗೆನೆರ್ಮ್ಮವದಾದರೆಂದೊಡಾರ್ಸ್ಸದಮಳ ಕೀರ್ತ್ತಿಯಂ ಪೊಗಳದ–

೭೬ ನ್ನಿಡುಗುಂಡಿಯ ವಿಪ್ರಮಾಳೆಯಂ ॥ ಅನ್ತೆನಿಸಿದ ಮಹಾಗ್ರಹಾರಂ ನಿಡುಗುಂಡಿಯೊಳು ॥ ಪರಮೋತ್ಸಾಹದೆ ದಿಬ್ಯಲಿಂಗ ವಿಳಸತ್ಸನ್ಮೂರ್ತ್ತಿಯಂ ವಿಷ್ಣು–

೭೭ ವಂ ವರ ವಾಗ್ದೇವತೆಯಂ ತ್ರಿಕೂಟವೆಳೆಯೊಳು ತಾಂ ರಾಜಿಸಲು ಸಜ್ಜನಾಭರಣಂ ನಿರ್ಮ್ಮಿಸಿದಂ ವಿವೇಕನಿಳಯಂ ದಾಸೇಶ್ವರೋತ್ತುಂಗ ಬನ್ಧುರ ದೇವಾಯತನಂ ಜಗಕ್ಕೆ–

೭೮ ಸೆವಿನಂ ಶ್ರೀ ದಾಸಿರಾಜೋತ್ತಮಂ ॥ ಅನ್ತವರು ಮಾಡಿಸಿದ ದಾಸೇಶ್ವರದೇವರ ಅಂಗಭೋಗ ರಂಗಭೋಗ ನೈವೇದ್ಯಕ್ಕಂ ನಂದಾದೀವಿಗೆಗಂ ಚೈತ್ರ ಪವಿತ್ರಕ್ಕಂ ಖಣ್ಡಸ್ಫುಟಿತ ಜೀರ್ಣ್ನೋರ್ದ್ಧಾರಕ್ಕಂ ಶ್ರೀ–

೭೯ ಮನ್ಮಹಾಮಂಡಳೇಶ್ವರಂ ಚವುಂಡರಸದೇವನು ಆ ವೂರದ ವೊಡೆಯರು ರುದ್ರಭಟ್ಟರುವೆರಸು ಆ ಮಾನ್ಯದ ಹೊಲದೊಳಗೆ ಶ್ರೀ ದಾಸೇಶ್ವರದೇವರ್ಗ್ಗೆ ಧಾರಾ–

೮೦ ಪೂರ್ವ್ವಕಂ ಮಾಡಿ ಬಿಟ್ಟ ಭೂಮಿ ಶ್ರೀ ಕಲಿದೇವರ ಕೆಯಿಂ ಬಾಲಸಿಕ್ಷೆಯಿಂ ಬಡಗಲು ಮರುಳಿಮೈಯ್ಯನ ಕೆಱೆಯೊಳಗಾಗಿ ದಾರಿಯಿಂ ಪಡು–

೮೧ ವಲು ಕೆಯಿ ಮತ್ತರು ೨೪ ಅರಹುಣಿಸೆಗೇರಿಯ ನೂರ್ಬ್ಬರು ಪಾದಪೂಜೆಯಂ ಕೊಣ್ಡು ಶ್ರೀ ದಾಸೇಶ್ವರದೇವರ್ಗ್ಗೆ ಬಿಟ್ಟ ಹೂದೋಂಟದ ಸೀಮೆ ಬೆಳುದೇವಯ್ಯನ ಶತ–

೮೨ ದ ತೋಂಟ ವಸುಗೆ ಸೂಂಡಿಗೇರಿಯ ಮಧ್ಯವರ್ತ್ತಿಯಿಂ ಪಡುವಲು ಜೀರಗೆವಾವಿಯಿಂ ಬಡಗಲು ಯೋಗೇಶ್ವರದೇವರ ತೋಂಟದಿಂ ಮೂಡಲು ಜಕ್ಕಿಲಿಗೇ–

೮೩ ರಿಯ ಸವಣ್ಣಬಸುಗೆಯಿಂ ತೆಂಕಲು ಕಮ್ಮ ೧೨೦ ಆ ದೇವರ್ಗ್ಗೆ ನನ್ದಾದೀವಿಗೆಗೆ ಅಯ್ವತ್ತೊಕ್ಕಲು ಗಾಣಕ್ಕೆ ಸೊಳಸ ೧೫ ಲೆಕ್ಕದಿಂ ಬಿಟ್ಟ ಧರ್ಮ್ಮ ॥ ಆ ದೇವರ್ಗ್ಗೆ ಬಾಡಗೆದಿಱುವರ್ಗ್ಗಾಣ ೧

೮೪ ಸಿರಿಗುಪ್ಪಿಯ ಸ್ಥಳದಲಿ ಶ್ರೀಮನ್ಮಹಾಮಂಡಳೇಶ್ವರಂ ಚವುಡರಸದೇವನು ಸಿರಿಗುಪ್ಪೆಯ ಊರೊಡೆಯ ಜಕ್ಕರಸ ಚವುಡಿಮೂರೊಡೆಯ ಹೊ–

೮೫ ಲ್ಲಿಮೂರೊಡೆಯನು ಸಮಸ್ತ ಪ್ರಜೆಗಳುವೆರಸು ಸಿರಿಗುಪ್ಪೆಯ ತೆಂಕಣ ಪಡುವಣ ಗೋಂಟಿನ ಹೊಲದಲ್ಲಿ ಶ್ರೀ

ದಾಸೇಶ್ವರದೇವರ್ಗ್ಗೆ ಧಾರಾಪೂರ್ವ್ವಕಂ ಮಾಡಿ ಬಿಟ್ಟ ಭೂಮಿ
೮೬ ನಿಡುಗುಂಡಿಯ ಹೊಲವೇರೆಯಿಂ ಮೂಡಲು ಮಾಗೆಱೆಯ ದಾರಿಯಿಂ ತೆಂಕಲು ಭೋಗೇಶ್ವರದೇವರ ಕೆಯಿಂ ಬಡಗಲು ನಾಲ್ಕು ಲಿಂಗದ ಕಲ್ಲಿಂದೊಳಗೆ ಕೆಯಿ ಮತ್ತರು ೨೪ಱೊ–
೮೭ ಳಗೆ ಹಱೆಕಾಱಂಗೆಯಿ ಮತ್ತ ೨ ಯಜುರ್ವ್ವೇದದ ಖಂಡಿಕ ಮತ್ತರು ೫ ಅನ್ತು ಮತ್ತರು ೭ನುಳಿಯೆ ದೇವರ್ಗ್ಗೆ ಕೆಯಿ ಮತ್ತರು ೧೭ ಅಂನ್ತು ಮತ್ತರು ೨೪ಕ್ಕಂ ಮತ್ತರಿಗೆ ಹಣವೊಂದಱ ಲೆ–
೮೮ ಕ್ಕದಿಂ ತಿಱುವ ಅರುವಣವಂ ಶ್ರೀಮನ್ಮಹಾಮಂಡಳೇಶ್ವರಂ ಬಿಜ್ಜಲದೇವರಸರುಂ ವಿಕ್ರಮಾದಿತ್ಯದೇವರಸರುಂ ಅಲ್ಲಿಯ ಯೂರೊಡೆಯರುಂ ಜಕ್ಕಗವುಂಡನುಂ ಸಮಸ್ತ ಪ್ರಜೆ–
೮೯ ಗಳುಂ ಬ್ಯತೀಪಾತ ಸೋಮವಾರದಂದು ಆ ಅರುವಣವಣವಂ ಆ ದೇವರ್ಗ್ಗೆ ಸರ್ವ್ವನಮಶ್ಯವಾಗಿ ಬಿಟ್ಟರು ॥ ಶ್ರೀಮನ್ಮಹಾಗ್ರಹಾರ ಕರಿಮಿಡಿಯ
೯೦ ಅಱು[ವ*]ತ್ತೆಂಬರ ಸನ್ನಿಧಿಯಲ್ಲಿ ಆ ವೂರ ದಶವಂದ ಮೂನೂಱು ಮತ್ತರೊಳಗೆ ಶ್ರೀಮನ್ಮಹಾಮಂಡಳೇಶ್ವರಂ ಹೆರ್ಮ್ಮಾಡಿದೇವರಸನು ಶ್ರೀಮನ್ಮಹಾ
೯೧ ಪ್ರಧಾನ ಆಚಣಯ್ಯ ದಂಡನಾಯಕನುವೆರಸು ಶ್ರೀಮದ್ದಾಸೇಶ್ವರದೇವರ್ಗ್ಗೆ ತಂಮ ದಶವಂದದ ಭೂಮಿಯೊಳ–
೯೨ ಗೆ ಧಾರಾಪೂರ್ವ್ವಕಂ ಮಾಡಿ ಕೊಟ್ಟ ಭೂಮಿ ಆ ದಶವಂದದ ಭೂಮಿಯೊಳಗೆ ತೆಂಕಣ ಕಡೆ ಆ ವೂರ ಕರಭೂಮಿಯಿಂ ಬಡಗಲು ಪಡುವಲು ಆ ವೂರ ಕರಭೂಮಿ
೯೩ ಯ ಬೆಟಗೆಱೆಯ ದಾರಿಯಿಂ ಮೂಡಲಾ ಮೂಡಣ ಸೀಮೆ ಮುದುವೊಳಲ ಹೊಲವೇರೆಯಿಂ ಪಡುವಲು ನಾಲ್ಕು ಲಿಂಗದ ಕಲ್ಲಿಂದೊಳಗೆ ಕೆಯಿ ಮತ್ತರು ೨೪ ಕೊಡಗನೂರ
೯೪ ಶ್ರೀಮನ್ಮಹಾಮಂಡಳೇಶ್ವರಂ ವಿಕ್ರಮಾದಿತ್ಯದೇವರಸರು ಆಚಣಯ್ಯ ದಂಡನಾಯಕರುಂ ಮೊಸಳೇಶ್ವರದೇವರಸರುಂ ವಾಮಶಕ್ತಿದೇವರುಂ ಸಮಸ್ತ ಪ್ರಜೆಗಳು ಸಹಿತ ಕೊಡಗನೂರ ಪಡುವಣ ಹೊಲದಲ್ಲಿ ಶ್ರೀಮದ್ದಾಸೇಶ್ವರದೇವರ್ಗ್ಗೆ ಧಾರಾಪೂರ್ಬ್ಬಕಂ
೯೫ ಭೂಮಿ ಖಂಡಿಕಗೆಯ್ಯೆ ಪಡುವಲು ಕಾರೆಗೆಯ್ಯಿಂ ಬಡಗಲು ಸಿರಿಗುಪ್ಪೆ ಹೊಲವೇರೆಯಿಂ ಮೂಡಲು ಮಾರಡಿಗೆಯ್ಯಿಂ ತೆಂಕಲು ನಾಲ್ಕುಂ ಲಿಂಗದ ಕಲ್ಲಿಂದೊಳಗೆ ಕೆಯಿ ಮತ್ತರು ೧೨ ಆ ವೂರಿಂ ಬಡಗಲು ಕರಭೂಮಿಯ–
೯೬ ದೆ ವೂರದ ಗದೆಯಿಂ ತೆಂಕಲು ಕೆಱೆಯಿಂ ಪಡುವಲು ನಾಲುಕುಂ ಲಿಂಗದ ಕಲ್ಲಿಂದೊಳಗೆ ಗದೆ ಕಮ್ಮ ೪೫೦ ಶ್ರೀಮದಗ್ರಹಾರಂ ನಿಡುಗುಂಡಿಯಲ್ಲಿ ದಾಸೇಶ್ವರದೇವರ್ಗ್ಗೆ ನಂದಾದೀವಿಗೆಗೆ ಮಾನೆಂಣ್ನೆದಿಱುವ ಗಾಣ
೯೭ ಪ್ರಿಯದಿಂದಿಂತನೆಯ್ದೆ ಕಾಯ್ವ ಪುರ್ಷಂಗಾಯುಂ ಮಹಾಶ್ರೀಯುವಕ್ಕೆ ಯಿದ ಕಾಯದೆ ಕಾಯ್ವ ಪಾಪಿಗೆ ಕುರುಕ್ಷೇತ್ರೋರ್ಬ್ಬಿಯೊಳು ವಾರಣಾಸಿಯೋಳೆಕ್ಕೋಟಿ ಮುನೀಂದ್ರರಂ ಕವಿಲೆಯಂ–
೯೮ ದದೊಳವಂ ಕೊಂದುದೊಂದಯಶಂ ಸಾಗ್ಗುವಿದೆಂದು ಸಾಱೆದಪುದೀ ಶೈಲಾಕ್ಷರಂ ಧಾತ್ರಿಯೊಳು ॥ ಶ್ರೀ ಸರಸ್ವತಿ ಕಂಠಾಭರಣ ಶದ್ರಿಸೆಲೆಪಾಂಕಂ ಶ್ರೀಕರಣ ನಾಗದೇವಯ್ಯ ನಾಯಕರ ಮಗ . .
೯೯ . . ನ ಬರೆದ ಮಂಗಳ ಮಹಾ ಶ್ರೀ @

**೯. ನಿಡಗುಂದಿ: ದಾಸಿಮೇಶ್ವರ ದೇವಾಲಯದ ನವರಂಗದ ಗೋಡೆಯಲ್ಲಿರುವ ಶಾಸನ ಕ್ರಿ.ಶ. ೧೨೨೨**

ಯಾದವ ಚಕ್ರವರ್ತಿ ಸಿಂಘಣದೇವರಸರ ಕಾಲದಲ್ಲಿ ಅನಾದಿಯ ಅಗ್ರಹಾರ ನಿಡುಗುಂಡಿಯ ನಾನೂರ್ವರು ಮಹಾಜನರ ಕೈಯ್ಯಲ್ಲಿ ದಾಸಿಮರಸರ ದಾಸೇಶ್ವರ ದೇವಸ್ಥಾನವನ್ನು ಕೊಡಗನೂರ ಸ್ವಯಂಭೂ ಅಮೃತ ಸೋಮನಾಥದೇವರ ಆಚಾರ್ಯರಾದ ಹಿರಿಯ ಸೋಮೇಶ್ವರದೇವರು ಪಡೆದು ದೇವರ ಅಂಗಭೋಗ, ರಂಗಭೋಗಗಳಿಗಾಗಿ ೧೧ ಕೆಯ್ಯ ಭೂಮಿಯನ್ನು ದಾನವಾಗಿ ನೀಡಿದುದನ್ನು ಹಾಗೂ ಅದನ್ನು ಮಹಾಜನರು ಪ್ರತಿಪಾಲಿಸುವರೆಂದು ತಿಳಿಸುತ್ತದೆ.

೯೯ ಸ್ವಸ್ತಿ ಶ್ರೀಮತು ಯಾದವ ನಾರಾಯಣಂ ಭುಜಬಳ ಪ್ರತಾಪ ಚಕ್ರವರ್ತ್ತಿ ಶ್ರೀ ಸಿಂಘಣದೇವ ಸಕವರ್ಶ ೧೧೪೪
೧೦೦ ಚಿತ್ರಭಾನು ಸಂವತ್ಸರದ ಮಾರ್ಗ್ಗಸಿರ ಸುದ್ಧ ಪಂಚಮಿ ಸೋಮವಾರದಂದು ಶ್ರೀಮದನಾದಿಯ ಅಗ್ರಹಾರಂ ನಿಡುಗುಂಡಿಯ ನಾನೂರ್ಬ್ಬರ ಕೈಯ್ಯಲು ದಾಸಿಮ–

೧೧೧ ರಸರ ದಾಸೇಶ್ವರದೇವರ ಸ್ತಾನವನು ಕೊಡಗನೂರ ಶ್ರೀ ಶ್ವಯಂಭೂ ಅಮ್ರಿತ ಸೋಮನಾಥದೇವರ ಆಚಾರ್ಯ್ಯ ಹಿರಿಯ ಸೋಮೇಶ್ವರದೇವರು ಪಡೆದು ದೇವರ ಅಂಗಭೋಗ

೧೧೨ ರಂಗಭೋಗಕೆ ಬಿಟ್ಟ ಕೆಇ ೧೧ ವೂರಿಂ ಪಡುವಲು ಸೂಡಿಗೆಱೆಯ ಮಧ್ಯವರ್ತ್ತಿ ಬೆಳುದೇವರಸರ ಸತದೊಳಗೆ ಜೀರಗೆಯ ಭಾವಿಇಂ ಪಡುವಲು ಜಕಿಲೆಯ . . . . ಮತ್ತರು ೫ಕ್ಕೆ ಅಱುವಣವ

೧೧೩ . . . . . . . . . ವಂ ತಿಱುವರು ಮತ್ತಂ ಕವೊಗೇರಿಯ ಮಧ್ಯವರ್ತ್ತಿ ನಾಲ್ಕು ಹತಿಯ ಮನೆಗೆ ವೋದ ಕಲ ನಟ್ಟ ಕವಿಲೆಯ ಕರುಗಿಯ ಧರ್ಮ್ಮವಂ ನಾನೂರ್ಬ್ಬರು ಪ್ರತಿಪಾ-

೧೧೪ ಳಿಸುವರು ಮಂಗಳ ಮಹಾ ಶ್ರೀ ಶ್ರೀ ಶ್ರೀ [॥*]

**೧೦. ರೋಣ: ಬಸದಿಯ ತೀರ್ಥಂಕರ ಪೀಠದಲ್ಲಿಯ ಶಾಸನ**

ಶ್ರೀ ಮೂಲಸಂಘ ದೇವಗಣಕ್ಕೆ ಸೇರಿದ ಶ್ರೀ ಶಂಖದೇವರ (ನೇಮಿನಾಥ) ಪ್ರತಿಮೆ ಇದು ಎಂದು ತಿಳಿಸುತ್ತದೆ.

೧ @ ಶ್ರೀ ಮೂಲಸಂಘ ದೇವಗಣ ಶ್ರೀ ಸಂಖ

೨ ದೇವರ ಪ್ರತಿಪತು ॥

**೧೧. ರೋಣ: ಬಸದಿಯ ಹಿತ್ತಾಳೆ ವಿಗ್ರಹದಲ್ಲಿಯ ಶಾಸನ**

ಶಾಸನದ ಅರ್ಥ ಸ್ಪಷ್ಟವಾಗುವುದಿಲ್ಲ.

೧ ಕದೆರತನಾದೆ ಪ್ರಲಮತಿ

**೧೨. ಲಕ್ಕುಂಡಿ: ವಸ್ತು ಸಂಗ್ರಹಾಲಯದಲ್ಲಿರುವ ಹೊಸ ತ್ರುಟಿತ ಶಾಸನ ಕ್ರಿ.ಶ. ೧೦೭೬-೧೧೨೬**

೧' ಅಗಲ ೧.೫' ಎತ್ತರವಿರುವ ತ್ರುಟಿತ ಶಾಸನವಿದು. ಶಾಸನದ ಮೇಲಿನ ೧೨" ಭಾಗದಲ್ಲಿ ಚಂದ್ರ- ಸೂರ್ಯರ ಉಬ್ಬುಶಿಲ್ಪಗಳು ಮಾತ್ರ ಇದ್ದು, ಉಳಿದಂತೆ ಯಾವುದೇ ಚಿತ್ರಗಳಿಲ್ಲ.

ಶಿವ ಮತ್ತು ವಿಷ್ಣು ಸ್ತುತಿಪರ ಮಂಗಲ ಪದ್ಯಗಳೊಂದಿಗೆ ಪ್ರಾರಂಭವಾಗುವ ಶಾಸನವು, ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲನನ್ನು ಹೆಸರಿಸುತ್ತದೆ. ನಂತರ ನಾಡುಗಳ ಅರಸನೆನಿಸಿದ ಕುಂತಳ ದೇಶವನ್ನು ವರ್ಣಿಸುತ್ತದೆ. ತದನಂತರ ಲೊಕ್ಕಿಗುಂಡಿಯ ವಿವರಗಳನ್ನು ನೀಡುತ್ತ, ಮಹಾಜನರ ವಿಶೇಷತೆಗಳನ್ನು ದಾಖಲಿಸುವಲ್ಲಿಗೆ ನಿಂತುಹೋಗುತ್ತದೆ. ವಿವರಗಳು ಶಾಸನ ಒಡೆದಿರುವುದರಿಂದ ಲಭ್ಯವಿಲ್ಲ. ಆದರೆ ಶಾಸನದ ಮುಂದಿನ ಭಾಗದಲ್ಲಿರುವ ದತ್ತಿಯು ಲೊಕ್ಕಿಗುಂಡಿಯ ಶಂಕರನಾರಾಯಣದೇವರಿಗೆ ಬಿಟ್ಟಿರುವ ದತ್ತಿಯನ್ನು ಹೇಳುತ್ತಿರಬಹುದು. ಬೆಳ್ವಲ, ಲೊಕ್ಕಿಗುಂಡಿ ಮತ್ತು ಅಲ್ಲಿಯ ಸಾಸಿರ ಮಹಾಜನರನ್ನು ವರ್ಣಿಸುವ ಸುಂದರವಾದ ಕಂದ ಪದ್ಯಗಳನ್ನು ಇದು ಒಳಗೊಂಡಿದೆ.

ಭೂದೇವಿಯ ಕೂದಲಿನಂತಿರುವ ಕುಂತಳ ದೇಶದ ಹಣೆಯ ಮೇಲಿರುವ ಕುಂಕುಮದಂತೆ ನಾಡುಗಳ ಅರಸನೆನಿಸಿದ ಬೆಳ್ವಲು ಶೋಭಿಸುತ್ತದೆ. ಆ ನಾಡಿನಲ್ಲಿ ವಿವಿಧ ವಸ್ತುಗಳನ್ನು ಒಳಗೊಂಡ ಸಾಗರದಂತೆ ಲೊಕ್ಕಿಗುಂಡಿಯು ಲಕ್ಷ್ಮಿಗೆ ನಿಳಯವೆನಿಸಿ ಕಣ್ಣಿಗೆ ಆನಂದವನ್ನು ಉಂಟುಮಾಡುತ್ತದೆ. ಹೀಗೆ ಸುಪ್ರಸಿದ್ಧವಾದ ಲೊಕ್ಕಿಗುಂಡಿಯಲ್ಲಿ ಆಚಾರವಂತರೂ ಮಹಿಮಾಪುರುಷರೂ ಸೂರ್ಯ ತೇಜಸ್ಸನ್ನುಳ್ಳವರೂ ವಿದ್ವಜ್ಜನರಿಗೆ ಕಲ್ಪವೃಕ್ಷದಂತಿರುವವರೂ ಎನಿಸಿದ ಸಾಸಿರ ಮಹಾಜನರಿದ್ದರು ಎಂದು ಬಾಯ್ತುಂಬ ಹೀಗೆ ಹೊಗಳುತ್ತದೆ-

**॥ ಕನ್ದ ॥ ಸುಲಲಿತಮೆನಿಸುವ ಧಾತ್ರೀ**
**ಲಲನೆಗೆ ಕುನ್ತಳವಿದೆನಿಸಿ ಕುನ್ತಳ ದೇಶಂ**
**ತಿಲಕವಿದೆನಿಸಿ ಕರಂ ಬೆ**
**ಳ್ವಲವೆಸೆಗುಂ ಭಾವಿಸಲ್ಕೆ ನಾಡುಗಳರಸ ॥**

**ಆ ನಾಡೊಳ್ಸೊಗಯಿಸುಗು**
**ನ್ನಾರ್ನಾವಿಧದಿಂ ಸಮಸ್ತ ವಸ್ತುಗಳಿನ್ವಂಭೋ**
**ನಿಧಿಯನ್ತನ್ತಿರೆ ನಯನಾ**
**ನನ್ದ ಲೊಕ್ಕಿಗುಣ್ಡೆ ಲಕ್ಷ್ಮೀನಿಳಯಂ ॥**

ಎನೆ ನೆಗಟ್ದ ಲೊಕ್ಕಿಗುಣ್ಡಿಯೊ
ಳನವದ್ಯಾಚಾರರಮಳ ಮಹಿಮಾಧಾರ
ರ್ದ್ದಿನಕರ ತೇಜರ್ವ್ವಿದ್ವ
ಜ್ಜನ ಕಲ್ಪಮಹೀಜರೆನಿಸಿದರ್ಸ್ಸಾಸಿರ್ವ್ವರ್ ॥
ಲಭ್ಯವಿರುವ ಶಾಸನದ ಪಠ್ಯವಿಂತಿದೆ-

೦೧ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂ-
೦೨ ಭಾಯ ಶಂಭವೇ ॥ ನಮಸ್ತಸ್ಮೈ ವರಾಹಾಯ ಲೀಲಯಾಚರತೆ ಮಹೀಂ ಖುರಾ-
೦೩ ನ್ತರಗತೋ ಯಸ್ಯ ಮೇರುಃ ಕಣಕಣಾಯತೇ ॥ [ಗಣಪತ್ಯಾ*]ಯ ನಮಃ ॥
೦೪ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿ-
೦೫ ಜ ಪರಮೇಶ್ವರ ಪರಮ ಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾ-
೦೬ ಭರಣಂ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾ-
೦೭ ಭಿವೃದ್ಧಿ ಪ್ರವರ್ದ್ಧಮಾನಮಾ ಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ ॥ ಕನ್ದ ॥ ಸುಲ-
೦೮ ಲಿತಮೆನಿಸುವ ಧಾತ್ರಿ ಲಲನೆಗೆ ಕುನ್ತಳವಿದೆನಿಸಿ ಕುನ್ತಳ ದೇಶಂ ತಿಲಕವಿದೆ-
೦೯ ನಿಸಿ ಕರಂ ಬೆಳ್ವಲವೆಸೆಗುಂ ಭಾವಿಸಲ್ಕೆ ನಾಡುಗಳರಸ ॥ ಆ ನಾಡೊಳ್ಸೊಗಯಿಸು-
೧೦ ಗುರ್ನ್ನಾನಾವಿಧದಿಂ ಸಮಸ್ತ ವಸ್ತುಗಳಿನ್ವಂಭೋನಿಧಿಯನ್ತನ್ತಿರೆ ನಯನಾನನ್ದ ಲೊ-
೧೧ ಕ್ಕಿಗುಣ್ಡಿ ಲಕ್ಷ್ಮೀನಿಳಯಂ ॥ ಎನೆ ನೆಗಟ್ದ ಲೊಕ್ಕಿಗುಣ್ಡಿಯೊಳನವದ್ಯಾಚಾರರಮ-
೧೨ ಳ ಮಹಿಮಾಧಾರರ್ದ್ದಿನಕರ ತೇಜರ್ವ್ವಿದ್ವಜ್ಜನ ಕಲ್ಪಮಹೀಜರೆನಿಸಿದರ್ಸ್ಸಾಸಿರ್ವ್ವರ್ ॥
೧೩ ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾನ ಪರಾ-
೧೪ ಯಣ ಜಪ ಸಮಾಧಿ ಶೀಲಸಂಪನ್ನರ್ಸ್ಸಮಸ್ತ ಗುಣಗಣಾಳಂಕ್ರಿತ . . . . . *

-----------------

* ಶಾಸನದ ಮುಂದಿನ ಭಾಗ ಒಡೆದಿದೆ.

## ೧೩. ಲಕ್ಕುಂಡಿ: ಕವಲೂರ ಅವರ ಮನೆಯ ಮುಂದಿನ ಶಾಸನ ಕ್ರಿ.ಶ. ಸು. ೧೨೦೦

ಕವಲೂರ ಅವರ ಮನೆಯ ಕಂಪೌಂಡ್ ಗೋಡೆಯನ್ನು ಕಟ್ಟಲು ತಂದ ಕಲ್ಲುಗಳ ರಾಶಿಯೊಂದರಲ್ಲಿ ತ್ರುಟಿತ ಶಾಸನವಿರುವ ಕಲ್ಲು ಪತ್ತೆಯಾಗಿದೆ. ೨೦" ಅಗಲ ೨೮" ಎತ್ತರದ ಕರಿಕಲ್ಲು ಇದಾಗಿದ್ದು, ಮೇಲೆ ಅರ್ಧವೃತ್ತಾಕಾರವಾಗಿದ್ದು, ಅದಕ್ಕೆ ೧"ನ ಚೌಕಟ್ಟನ್ನು ಕೆತ್ತಿದೆ. ಅರ್ಧವೃತ್ತಾಕಾರದ ೯" ಭಾಗದಲ್ಲಿ ಸೂರ್ಯ, ಪೂಜಾರಿ, ಕುಳಿತ ಲಕ್ಷ್ಮಿ, ಖಡ್ಗ, ಕರುವಿಗೆ ಹಾಲು ಕುಡಿಸುತ್ತಿರುವ ಆಕಳು, ಚಂದ್ರರ ಉಬ್ಬುಶಿಲ್ಪಗಳಿವೆ. ಇದರ ಕೆಳಗಿನ ೩" ಪಟ್ಟಿಕೆಯಲ್ಲಿ ಬುದ್ಧ, ಧರ್ಮ, ಸಂಘ ಮತ್ತು ತಾರಾ ಭಗವತಿಯರ ಸ್ತುತಿಯಿದೆ. ಇದರ ಕೆಳಗಿನ ೧೯" ಭಾಗದಲ್ಲಿ ಶಾಸನವಿದ್ದು, ಕೆಳಭಾಗ ಒಡೆದಿದೆ.

ಲಕ್ಕುಂಡಿಯಲ್ಲಿ ಮೊದಲ ಬಾರಿಗೆ ಬೌದ್ಧ ಧರ್ಮದ ಉಲ್ಲೇಖವಿರುವ ಈ ಶಾಸನವು ಪತ್ತೆಯಾಗಿದೆ. ಶಾಸನವು ಮೊದಲಿಗೆ ಬುದ್ಧ, ಧರ್ಮ ಮತ್ತು ಸಂಘಗಳಿಗೆ ನಮನಗಳನ್ನು ಸಲ್ಲಿಸುತ್ತದೆ. ನಂತರ ತಾರಾ ಭಗವತಿಯನ್ನು ಸ್ತುತಿಸುತ್ತದೆ. ತದನಂತರ ಹೊಯ್ಸಳ ಚಕ್ರವರ್ತಿ ಇಮ್ಮಡಿ ವೀರಬಲ್ಲಾಳನ ಆಡಳಿತವನ್ನು ಸೂಚಿಸುತ್ತ, ವೀರಬಲ್ಲಾಳನನ್ನು ಸಕಲ ಬಿರುದಾವಳಿಗಳೊಂದಿಗೆ, ಸಾಸಿರ್ವರು ಮಹಾಜನರನ್ನು ಸಕಲ ಗುಣವಿಶೇಷತೆಗಳೊಂದಿಗೆ ವಿವರಿಸುತ್ತ, ಮಹಾ ವಡ್ಡ ವ್ಯವಹಾರಿಯೊಬ್ಬನನ್ನು ಪ್ರಸ್ತಾಪಿಸುವುದರೊಂದಿಗೆ ಶಾಸನವು ಒಡೆದಿದೆ.

ಶಾಸನವು ಹೊಯ್ಸಳ ಚಕ್ರವರ್ತಿ ವೀರಬಲ್ಲಾಳನ ಆಳ್ವಿಕೆಯ ಕಾಲವನ್ನು ಉಲ್ಲೇಖಿಸುವುದರಿಂದ ಮತ್ತು ಈಗಾಗಲೇ ಇಮ್ಮಡಿ ವೀರಬಲ್ಲಾಳನ ಮೂರು ಶಾಸನಗಳು (ಕ್ರಿ.ಶ. ೧೧೯೫, ೧೨೦೦, ೧೨೧೨) ಲಕ್ಕುಂಡಿಯಲ್ಲಿ ದೊರೆತಿರುವುದರಿಂದ ಈ ಶಾಸನವು ಕೂಡ ಇದೇ ಅವಧಿಯದ್ದಾಗಿದೆ ಎಂದು ಗುರುತಿಸಬಹುದಾಗಿದೆ.

ಕರ್ನಾಟಕದ ಶಾಸನಗಳಲ್ಲಿ ಹೀಗೆ ಬುದ್ಧ, ಧರ್ಮ ಹಾಗೂ ಸಂಘಗಳಿಗೆ ನಮಸ್ಕಾರಗಳನ್ನು ತಿಳಿಸಿದ ಮೊತ್ತಮೊದಲ ಶಾಸನ ಇದಾಗಿದೆ. ಅಂತೆಯೇ ತಾರಾ ಭಗವತಿಯ ಆರಾಧನಾ ಪರಂಪರೆ ಈ ಭಾಗದಲ್ಲಿತ್ತೆಂದು ಈ ಶಾಸನ ಮತ್ತು ಡಂಬಳ, ಕೋಳಿವಾಡ ಶಾಸನಗಳು ಸಾಕ್ಷಿಯನ್ನು ನುಡಿಯುತ್ತವೆ. ವಿಜಯಪುರ ಜಿಲ್ಲೆಯ ಬಾದೊಡಗಿಯು (ಬೌದ್ಧ + ವಾಟಿಕಾ > ಬೌದ್ಧವಾಡಿಗೆ > ಬಾದೊಡಗಿ) ಬೌದ್ಧರ ನೆಲೆಯಾಗಿತ್ತೆಂದು ಇಲ್ಲಿ ನೆನೆಯಬಹುದು.

ಲೊಕ್ಕಿಗುಂಡಿಯ ಮಹಾ ವಡ್ಡಬ್ಯವಹಾರಿ ಸಂಗಮಶೆಟ್ಟಿಯರು ಕಟ್ಟಿಸಿದ ಚೈತ್ಯಾಲಯಕ್ಕೆ ತೆಲ್ಲಿಗರಯ್ವತ್ತೊಕ್ಕಲು ಎಣ್ಣೆದಾನವನ್ನು ನೀಡಿದುದನ್ನು ಡಂಬಳ ಶಾಸನವು ತಿಳಿಸುತ್ತದೆ. ಆ ಕಾರಣದಿಂದಾಗಿ ಬಹುಶಃ ಸಂಗಮಸೆಟ್ಟಿಯು ಲಕ್ಕುಂಡಿಯಲ್ಲಿಯೂ ಒಂದು ಚೈತ್ಯಾಲಯವನ್ನು ಕಟ್ಟಿಸಿ ದಾನ ನೀಡಿರಬಹುದು ಇಲ್ಲವೇ ಆತ ಕಟ್ಟಿಸಿದ ಚೈತ್ಯಾಲಯಕ್ಕೆ ಮಹಾಜನರು ದಾನ ನೀಡಿರಬಹುದೆಂಬ ಸಂಭಾವ್ಯ ಊಹೆಯನ್ನು ಈಗ ಲಕ್ಕುಂಡಿಯಲ್ಲಿ ದೊರೆತ ಪಠ್ಯದಿಂದ ಮಾಡಬಹುದಾಗಿದೆ.

೧ @ ಓಂ ನಮೋ ಬೌದ್ಧಾಯ । ನಮೋ ಧರ್ಮ್ಮಾಯ । ನಮಃ ಸಂಘಾಯ ॥ ಹರಿಕರಿ ಶಿಖಿ ಫಣಿ ತಸ್ಕರ
೨ ನಿಗಳ ಜಳಾಂರ್ಣ್ನವ ಪಿಶಾಚ ಭಯಮನೀ ಶಸಿ ಕಿರಣಕಾಂತಿ ಧಾರಿಣಿ ಭಗವತಿ ತಾರೇ ನಮಃಸ್ತುಭ್ಯಂ ॥ @
೩ @ ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ ಭ-
೪ ಟ್ಟಾರಕಂ ದ್ವಾರಾವತೀ ಪುರವರಾಧೀಶ್ವರಂ ಯಾದವ ಕುಳಾಂಬರ ದ್ಯುಮಣಿ ಸಂಮ್ಯಕ್ತ್ವ ಚೂಡಾಮ-
೫ ಣಿ ಮಲೆರಾಜರಾಜ ಮಲಪರೊಳು ಗಂಡ ಗಂಡಭೇರುಂಡ ಕದನ ಪ್ರಚಂಡ-
೬ ನಸಹಾಯ ಶೂರನೇಕಾಂಗ ವೀರ ಗಿರಿದುರ್ಗ್ಗಮಲ್ಲ ಚಲದಂಕರಾಮಂ ನಿಶ್ಶಂಕ ಪ್ರತಾಪ ಹೊಯ್ಸಳ ಚ-
೭ ಕ್ರವರ್ತ್ತಿ ಶ್ರೀ ವೀರಬಲ್ಲಾಳದೇವ ವರ್ಷದ ೧೫ನೆಯ . . . ಸಂವತ್ಸರದ ಪೌಶ್ಯ ಶುದ್ಧ ೧೩
೮ ಬ್ರಿಹಸ್ಪತಿವಾರದಂದು ॥ @ ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ
೯ ಮೋನಾನುಷ್ಠಾಣ ಪರಾಯಣ ಜಪ ಸಮಾಧಿ ಶೀಳಗುಣ ಸಂಪನ್ನರ್ಸ್ಸಮಸ್ತ ಗುಣಗಣಾಲಂ-
೧೦ ಕ್ರುತರ್ವ್ವಿದ್ವಿಷ್ಟ ವೇದಾರ್ತ್ಥವಿದ್ಯಾಪಾರಗರ್ಷಟ್ಕರ್ಮ್ಮ ನಿರತರ್ಸ್ಸಪ್ತ ಸೋಮಸಂಸ್ಥಾವಭ್ರಿತಾವಗಾ-
೧೧ ಹನ ಪವಿತ್ರೀಕ್ರಿತ ಶರೀರರ್ಚ್ಚತುರ್ವ್ವೇದ ಪಾರಗಷ್ಟಾದಶ ಧರ್ಮ್ಮಶಾಸ್ತ್ರ ಕು-
೧೨ ಶಲರೇಕವಾಕ್ಯರಚಳಿತ ಧೈರ್ಯ್ಯಧೈರ್ಯ್ಯಪರಾಕ್ರಮರಾಶ್ರಿತಜನ ಕಲ್ಪ-
೧೩ ವ್ರಿಕ್ಷರಹಿತ ಪಕ್ಷಕ್ಷಯಕರರ್ ಕಲಿಯುಗ ಗಾಂಗೇಯರ್ ಪರಮ ಪ-
೧೪ ರೋಪಕಾರಿಗಳಾಹವ ಧುರನ್ಧರರುಂ ಶಾಪಾನುಗ್ರಹ ಸಮರ್ತ್ಥರುಂ ಕಾರ್ಯ್ಯಬ್ರಿಹಸ್ಪತಿ-
೧೫ ಗಟೀಕೈಕ ಪಂಡಿತಗ್ಗ್ರಾಮನಾಮೋತ್ತಮ ವೈಷ್ಣವಗೀತಿ ಮನೋಹರರುಂ ಪಾಪಭೀರುಗ-
೧೬ ಳುಂ ಪರನಾರೀದೂರರುಂ ದುಷ್ಟ ನಿಗ್ರಹರುಂ ಶಿಷ್ಟಜನಾಶ್ರಯರ್ಕ್ಕಾಮಕ್ರೋಧ
೧೭ ಲೋಭ ಮೋಹ ವಿವರ್ಜ್ಜಿತರುಂ ದ್ವಾತ್ರಿಂಶತ್ಸಹಸ್ರ ಸಮಯಾರ್ಘ್ಯಾರ್ಹರುಂ ದ್ವಿಜಕುಳತಿಳಕರುಂ
೧೮ ಶರಣಾಗತ ವಜ್ರಪಂಜರರುಂ ಸಮಸ್ತ ಗುಣವಿಶೇಷೋನ್ನತರಪ್ಪ ಶ್ರೀ ರಾಮರ
೧೯ ದತ್ತಿ ಶ್ರೀಮನ್ಮಹಾಗ್ರಹಾರಂ ಗ್ರಾಮ ಚೂಡಾಮಣಿ ಶ್ರೀಮಲ್ಲೊಕ್ಕಿ-
೨೦ ಗುಂಡಿಯೂರೊಡೆಯ ಪ್ರಮುಖ ಮ*]ಹಾಜನಂ ಶ್ರೀ ಸಾಸಿರ್ವ್ವರುಂ ಸಮಸ್ತ ಗೋಲೆ ಗೋಬ್ರಾಹ್ಮಣರ್ಮ್ಮೊದಲಾಗಿ
೨೧ . . . . . [ಮ*]ಹಾ ವಡ್ಡ ಬ್ಯವಹಾರಿ . . . . .
೨೨ . . . . . [ಸಂ*]ಗಮಯ್ಯ . . . . . . . . . . .
೨೩ . . . . . . . . . . . ಯ . . . . . . . . . . *

---

* ಮುಂದಿನ ಶಾಸನ ಒಡೆದು ಕಳೆದಿದೆ.

## ೧೪. ಗದಗ: ಮ್ಯೂಸಿಯಂನಲ್ಲಿರುವ ಲಕ್ಕುಂಡಿಯ ತ್ರುಟಿತ ಶಾಸನ ಸು. ೧೨ನೆಯ ಶತಮಾನ

೩' ಅಗಲ ೫' ಎತ್ತರದ ಕಲ್ಲಿನ ಮೇಲೆ ಈ ಶಾಸನವನ್ನು ಕೆತ್ತಲಾಗಿದೆ. ಉಬ್ಬುಶಿಲ್ಪಗಳು ಮತ್ತು ಶಾಸನದ ಬಹುಮುಖ್ಯ ಭಾಗವನ್ನು ಒಳಗೊಂಡಿರುವ ಮೇಲ್ಭಾಗವು ಒಡೆದು ಕಳೆದಿದೆ. ಸದ್ಯ ಉಳಿದಿರುವ ಭಾಗದಲ್ಲಿ ಕೇವಲ ಫಲಶ್ರುತಿ ಭಾಗ ಮಾತ್ರ ಉಳಿದಿದೆ. ಈ ಶಾಸನವನ್ನು ಲಕ್ಕುಂಡಿಯಿಂದ ಅತ್ತಿಮಬ್ಬೆಯ ತ್ರುಟಿತ ಶಾಸನದ ತುಣುಕುಗಳೊಂದಿಗೆ ತಂದು ಇಡಲಾಗಿದೆ ಎಂದು ಅ.ದ.ಕಟ್ಟೀಮನಿಯವರು ತಿಳಿಸಿರುತ್ತಾರೆ. ಸುಮಾರು ೧೫ ವರ್ಷಗಳ ಹಿಂದೆ ನಾನು ಈ ಶಾಸನಗಳ ತುಣುಕುಗಳು ಮುನಸಿಪಲ್ ಹೈಸ್ಕೂಲಿನ ಬಯಲಿನಲ್ಲಿ ಬಿದ್ದಿರುವಾಗಲೇ ಪಡಿಯಚ್ಚನ್ನು ತೆಗೆದು ಓದಿರುತ್ತೇನೆ. ಲಭ್ಯವಿರುವ ಶಾಸನದ ಪಾಠ ಇಂತಿದೆ.

೧ . . . . . . . . . . [ಸಾಮಾನ್ಯೋಯಂ*] ಧರ್ಮ್ಮಸೇತು ನ್ರಿಪಾಣಾಂ ಕಾ-

೨ ಳೇ ಕಾಳೇ ಪಾಳನಿಯೋ ಭವದ್ಭಿಃ ಸರ್ವ್ವಾನೇತಾನ್ಭಾವಿನಃ ಭೂಯೋ ಭೂಯೋ ಯಾಚ

೩ ತೇ ರಾಮಭದ್ರಃ ॥ ಸ್ವದತ್ತಂ ಪರದತ್ತಂ ವಾಯೋ ಹರೇತು ವಸುನ್ಧರಾ ಷಷ್ಠಿರ್ವ್ವರ್ಷ ಸಹಶ್ರಾಣಿ ವಿಷ್ಟಾಯಾಂ

೫ ಜಾಯತೇ ಕೃಮಿ ॥ ಈ ಸಾಸನದ ಮರೆಯೊದೆಯೊಳ್ ಬಿಟ್ಟ ಧರ್ಮ್ಮಮಂ ರಕ್ಷಿಸಿದಾತಂ ವಾರಣಾಸಿ

೬ ಕುರುಕ್ಷೇತ್ರಾರ್ಘ್ಯತೀರ್ತ್ಥ ಪ್ರಯಾಗೆ ಇನ್ತಿವಜಿಸೊಳ್ಸೂರ್ಯ್ಯಗ್ರಹಣದನ್ದು ಮಿಂದು ಮಹಾದಾನಂಗೆಯ್ದು

೭ ಕ್ರತು ಸತಮಂ ಯಜಿಯಿಸಿದ ಫಳಮನೆಯ್ದುಗು ಮತ್ತಿದನಳಿದಾತಂ ವಾರಣಾಸಿಯೊಳ್ಕವಿಲೆಯುಮಂ

೮ ಕುರುಕ್ಷೇತ್ರದೊಳೆ ವೇದಪಾರಗರಪ್ಪ ಬ್ರಾಹ್ಮಣರಂ ಸೋಮೇಸ್ವರದೊಳೆಳ್ಕೋಟಿಯುಮನಳಿದ ಮಹಾಪಾತ-

೯ ಕನಕ್ಕು ॥

## ೧೫. ಲಕ್ಕುಂಡಿ: ಗರಡಿ ಮನೆಯ ಬಾಗಿಲ ಮೇಲೆ ಸೇರಿಸಿದ್ದು ಕ್ರಿಶ. ೧೦೭೬–೧೧೨೫

ಶಾಸನದ ಮೇಲಿನ ೧೨" ಭಾಗದಲ್ಲಿ ಮೊದಲು ಗಣಪತಿ, ಕೈಮುಗಿದು ಕುಳಿತ ಗರುಡ, ಶಂಖ-ಚಕ್ರ-ಗದಾ-ಪದ್ಮಗಳನ್ನು ಹಿಡಿದು ನಿಂತ ವಿಷ್ಣುವಿಗೆ ಹಾಲೂಡುತ್ತಿರುವ ಆಕಳು, ಅಂಕುಶ-ಚಕ್ರ-ಪದ್ಮ-ಪುಸ್ತಕಗಳನ್ನು ಹಿಡಿದ ಸರಸ್ವತಿಯ ಉಬ್ಬುಶಿಲ್ಪಗಳಿವೆ. ನಂತರದ ಚಿಕ್ಕಪಟ್ಟಿಕೆಯಲ್ಲಿ ೨ ಸಾಲುಗಳ ಶಾಸನದಲ್ಲಿ ಶಿವ ಮತ್ತು ವಿಷ್ಣುವಿನ ಸ್ತುತಿಗಳಿವೆ.

ಕೆಳಗಿನ ದೊಡ್ಡ ಪಟ್ಟಿಕೆಯಲ್ಲಿ ಸುದೀರ್ಘ ಶಾಸನವಿದ್ದು, ಬಲಭಾಗದಲ್ಲಿ ಭಾಗದಲ್ಲಿರುವ ಅಕ್ಷರಗಳು ಮತ್ತು ಮಧ್ಯಭಾಗದ ಅಕ್ಷರಗಳುಳ್ಳ ಶಾಸನವು ಸವೆದಿದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಪ್ಪ ೬ನೆಯ ವಿಕ್ರಮಾದಿತ್ಯನು ಆಳುತ್ತಿರುವಾಗ, ಎಂದು ಹೇಳಿ, ಅಲ್ಲಿಯ ಸಾವಿರ ಮಹಾಜನರ ಪ್ರಶಸ್ತಿಗಳನ್ನು ತಿಳಿಸುವಲ್ಲಿಗೆ ಶಾಸನ ಒಡೆದಿದೆ. ಲಭ್ಯವಿರುವ ಶಾಸನದ ಪಠ್ಯವಿಂತಿದೆ–

### ಮೇಲಿನ ಚಿಕ್ಕ ಪಟ್ಟಿಕೆ

೧ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಳೋಕ್ಯ ನಗರಾರಂಭ ಮೂಲ ಸ್ತಂಭಾಯ ಶಂಭವೇ ॥ ಗಣಪತಯೇ ನಮಃ ॥

೨ ನಮಸ್ತಸ್ಮೈ ವರಾಹಾಯ ಲೀಲಯಾಚರತೇ ಮಹೀಂ ಖುರಾನ್ತರಗತೋ ಯಸ್ಯ ಮೇರುಃ ಖಣಖಣಾಯತೇ ॥ ಸರಸ್ವತ್ಯೈ ನಮಃ ॥

### ಕೆಳಗಿನ ದೊಡ್ಡ ಪಟ್ಟಿಕೆ

೩ @ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕ ಸತ್ಯಾಶ್ರಯ ಕುಳತಿಳಕ ಚಾಳುಕ್ಯಾ-

೪ ಭರಣ ಶ್ರೀಮತ್ತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವ್ರಿದ್ಧಿ ಪ್ರವರ್ದ್ಧಮಾನಮಾಚಂದ್ರಾರ್ಕ್ಕ ತಾರಂಬರಂ ಸಲುತ್ತಮಿರೆ ॥

೫ ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾಣ ಪರಾಯಣ . . . . ಸಂಪನ್ನರು ಗೋಣದನಾ . . . . . . .

೬ . . . . . . . . . . . . . . . . . . . . . . . . . . . . . ವ್ರಿತಾವಗಾಹನ ಪವಿತ್ರೀಕ್ರಿತೋತ್ತಮಾಂಗರುಮಪ್ಪ

೭ . . . . . . . . . . . . . . . . . . . . . . . . . . . . ಪರಾಕ್ರಮರಾಶ್ರಿತಜನ . . . . ಗನ್ವರ ಸಾಪಾನುಗ್ರಹ ಸಮರ್ತ್ಥ ಕಾರ್ಯ್ಯ

೮ . . . . . . . . . . . . . . . . . . . . . . . . . . . . . ಳು ಪರನಾರೀ ದೂರ*

-----------------

* ತ್ರುಟಿತ ಮತ್ತು ಸವೆದುಹೋದ ಶಾಸನದ

**೧೬. ಲಕ್ಕುಂಡಿ: ವಿದ್ಯುತ್ ಗ್ರಿಡ್ಡಿನ ಹತ್ತಿರದ ನಾಗಾವಿಮಠ ಅವರ ಹೊಲದಲ್ಲಿ ಸು. ೧೨ನೆಯ ಶ.**

೨' ಅಗಲ ೨'ಎತ್ತರದ ಕಲ್ಲಿನಲ್ಲಿ ಈ ಶಾಸನವನ್ನು ಬರೆಯಲಾಗಿದೆ. ಮೇಲ್ಭಾಗದಲ್ಲಿ ಸೂರ್ಯ-ಚಂದ್ರ, ಅವುಗಳ ಕೆಳಗೆ ನಂದಿ, ಶಿವಲಿಂಗಗಳ ಉಬ್ಬುಶಿಲ್ಪಗಳಿವೆ. ಶಾಸನದ ಬಲಭಾಗ ಮತ್ತು ಎಡಭಾಗಗಳು ಒಡೆದಿರುವುದರಿಂದ ಮತ್ತು ೫-೭ನೆಯ ಸಾಲುಗಳಲ್ಲಿಯ ಅಕ್ಷರಗಳು ಸವೆದಿರುವುದರಿಂದ ಪಠ್ಯವು ಅಪೂರ್ಣಗೊಂಡಿದೆ.

ಶಿವಸ್ತುತಿಯೊಂದಿಗೆ ಪ್ರಾರಂಭವಾಗುವ ಶಾಸನವು, ಲೊಕ್ಕಿಗುಡಿಯ ಮಹಾಜನರ ಆದಿಯಾಗಿ ಪ್ರಮುಖರು ರಾಮನಾಥದೇವರ ಸೋಮವಾರದ ಪೂಜೆಗೆಂದು ಎರಡು ಮನೆಗಳನ್ನು ದಾನವಾಗಿ ಬಿಟ್ಟರು. ಅಂತೆಯೇ ಶ್ರೀ ಮಹಾನಿಧಿ ಕೇಶವದೇವರು ಸಾಸಿರ್ವರ ಸಮ್ಮುಖದಲ್ಲಿ ರಾಮನಾಥದೇವರ ಸೋಮವಾರದ ಪೂಜೆಗೆ ಸರ್ವ ಭೋಗದಲ್ಲಿ ಮನೆಯನ್ನು ಬಿಟ್ಟರೆಂದು ದಾಖಲಿಸುತ್ತದೆ. ಕೊನೆಯಲ್ಲಿ ಸೇನಭೋಗರ ಉಲ್ಲೇಖವಿದೆ.

**ಮೇಲಿನ ಪಟ್ಟಿಕೆ**

೧ @ ನಮಸ್ತುಂಗ ಶಿರಶ್ಚುಂಬಿ ಚಂದ್ರ

೨ ಚಾಮರ ಚಾರವೇ ತ್ರೈಲೋಕ್ಯ ನ-

೩ ಗರಾರಂಭ ಮೂಲಸ್ತಂಭಾಯ

೪ ಸಂಭವೇ ॥ ಗಣಪತಯೇ ನಮಃ [॥*]

**ಕೆಳಗಿನ ಪಟ್ಟಿಕೆ**

೫ ಶ್ರೀ ರಾಮನಾಥದೇವರಿಗೆ ಊರ [ಲೊಕ್ಕಿಗುಂಡಿಯ*]

೬ ಪ್ರಮುಖ ಸಾಸಿರ್ಬ್ಬರ ಕಯ್ಯಲು

೭ ಕಾಗಡು ಪುಲ್ಲವಡುಗ ಜೇಮಯ

೮ ಭೋಗಬ್ಬೆಗೆಯ ತೆಂಕಣ ತಟದ ಬಡ

೯ ಗಿಲ ಧರ್ಮ್ಮ ಮನೆಯೆರಡು । ಹತಿ ತಿ

೧೦ ಸೋಮವಾರದ ಪೂಜೆಗೆ ಬಿಟ್ಟರು ।

೧೧ ಶ್ರೀ ಮಹಾನಿಧಿ ಕೇಶವದೇವ ಬಿಟ್ಟ ಧರ್ಮ್ಮವೆನ್ತೆದಡೆ . . . (ಷ್ಪರೋಹೆ)

೧೨ ಪ್ರಮುಖ ಸಾಸಿರ್ವ್ವರ್ಮ್ಮುಖ್ಯವಾಗಿ ಸೂರ್ಯ್ಯಗ್ರ-

೧೩ ಹಣದಮಾವಾಸೆ ಸೋಮವಾರದಂದು ರಾಮನಾಥ[ದೇವರಿಗೆ*]

೧೪ ಸೋಮವಾರದ ಪೂಜೆಗೆ ಸರ್ವ್ವ ಭೋಗದಲಿ

೧೫ ಮನೆಯ ಬಿಟ್ಟರು । ಹೆರ್ಯ್ಯ ಸೇನ-

೧೬ . . ರೆಯಂ ಕೊಂಡರು ಕುಡುವರು

೧೭ . . ಕುದ ಸೇನಭೋಗಂಗಳು ಕುಡುವರು ।

## ೧೭. ಲಕ್ಕುಂಡಿ : ಹಾಲಗುಂಡಿ ಬಸವಣ್ಣನ ಗುಡಿಯಲ್ಲಿಟ್ಟಿರುವ ಶಾಸನ ಸು. ೧೨ನೆಯ ಶ.

ಇಲ್ಲಿಯ ಶಾಸನ ಮತ್ತು ಮೂರ್ತಿಗಳು ತಿಪ್ಪೆಯನ್ನು ಸ್ವಚ್ಛಗೊಳಿಸುವಾಗ ದೊರೆತಿವೆಯೆಂದು ಸ್ಥಳೀಯರು ತಿಳಿಸಿದರು. ಈ ತ್ರುಟಿತ ಶಾಸನದ ನಾಲ್ಕೂ ಮೂಖಿಗಳೂ ಒಡೆದು ಕಳೆದಿವೆ. ಶಾಸನದ ನಾಲ್ಕೂ ಭಾಗಗಳು ಒಡೆದಿರುವ ಈ ಶಾಸನದಲ್ಲಿ ನಂದಿಯ ಉಬ್ಬುಶಿಲ್ಪದ ಭಾಗ ಉಳಿದಿದ್ದು, ಅದರ ಮೇಲ್ಭಾಗದಲ್ಲಿ ಮತ್ತು ಕೆಳಗೆ ಶಾಸನಾಕ್ಷರಗಳಿವೆ.

ಪ್ರಾರಂಭದಲ್ಲಿ ಮಿತಿಯನ್ನು ತಿಳಿಸುತ್ತ, ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳ ವಿಶೇಷಣಗಳನ್ನು ತಿಳಿಸುತ್ತದೆ. ಕಲ್ಯಾಣ ಚಾಲುಕ್ಯರ ಕಾಲದ ಶಾಸನವೆಂದು ಮಾತ್ರ ಇದರಿಂದ ಗ್ರಹಿಸಬಹುದಾಗಿದೆ. ಆದರೆ ಕೊನೆಯಲ್ಲಿ ಬರುವ 'ಈ ರೂಪು ವಿದ್ಯಾಭರಣಪಂಡಿತ' ಎಂಬ ಉಲ್ಲೇಖ ಗಮನ ಸೆಳೆಯುತ್ತದೆ. ಇದುವರೆಗೆ ಇಲ್ಲಿ ದೊರೆತ ಶಾಸನಗಳಲ್ಲಿ ಈತನ ಹೆಸರು ಬಂದಿರಲಿಲ್ಲ.

೧ @ ಸ್ವಸ್ತಿ ಶ್ರೀ ಸಕವರ್ಷ . . . . . . . . . . . . . . . .

೨ ದನ್ದು ಸ್ವಸ್ತಿ ಯಮ ನಿಯ . . . . . . . . . . . . . .

೩ ಪದವಿ ಸಹಿತ ಚತು . . . . . . . . . . . . . .

೪ ವರ್ತ್ತಿಯಪ್ಪ ಶ್ರೀ . . . . . . . . . . . . . .

೫ ಭುವನಾಶ್ರಯ . . . . . . . . . . . . . .

೬ ರಕಂ ಸತ್ಯಾಶ್ರ . . . . . . . . . . . . . .

ನಂದಿಯ ಮೇಲೆ ಅರ್ಧವೃತ್ತಾಕಾರದಲ್ಲಿ ಬರೆದ ಅಕ್ಷರಗಳು

೭ ಈ ರೂಪು ವಿದ್ಯಾಭರಣಪಂಡಿತ

## ೧೮. ಹುಯಿಲಗೋಳ: ಮುತ್ತವ್ವ ಪೂಜಾರ ಅವರ ಮನೆಯ ಕಟ್ಟೆಯಲ್ಲಿಯ ಶಾಸನ ಕ್ರಿ.ಶ. ೧೧೬೫

ಶಾಸನದ ಮೇಲಿನ ೮" ಭಾಗದಲ್ಲಿ ಸೂರ್ಯ-ಚಂದ್ರರು, ಕೆಳಗೆ ಖಡ್ಗ, ಕರುವಿಗೆ ಹಾಲೂಡುತ್ತಿರುವ ಆಕಳು, ಗೋಪುರದ ಕೆಳಗೆ, ಗರ್ಭಗೃಹದಲ್ಲಿರುವ ಶಿವಲಿಂಗ, ಎದುರಿಗೆ ಕುಳಿತ ನಂದಿಯ ಉಬ್ಬುಶಿಲ್ಪಗಳಿವೆ. ಕೆಳಗಿನ ೨" ಭಾಗದ ಚಿಕ್ಕ ಪಟ್ಟಿಕೆಯಲ್ಲಿ ೨ ಸಾಲುಗಳಲ್ಲಿ ಶಿವಸ್ತುತಿ ಇದೆ. ಕೆಳಗಿನ ದೊಡ್ಡ ಪಟ್ಟಿಕೆಯಲ್ಲಿ ೨೦ ಸಾಲುಗಳ ಶಾಸನವು ಕಾಣುತ್ತಿದ್ದು, ಅದರ ಕೆಳಭಾಗ ಕಟ್ಟೆಯಲ್ಲಿ ಹುಗಿದಿದೆ. ಈ ಶಾಸನವು ಮೊದಲು ಪೂಜಾರ ಮನೆತನದ ಹಿರಿಯರ ಹೊಲದಲ್ಲಿತ್ತೆಂದು ತಿಳಿದುಬರುತ್ತದೆ. ಈಗ ಮನೆಯ ಮುಂದಿನ ಕಟ್ಟೆಯಲ್ಲಿ ತಂದು ಕೂಡಿಸಿದ್ದಾರೆ.

ಶಿವ ಸ್ತುತಿಯೊಂದಿಗೆ ಪ್ರಾರಂಭವಾಗುವ ಶಾಸನವಿದಾಗಿದ್ದು, ಪ್ರಾರಂಭದಲ್ಲಿಂ 'ಸಮಸ್ತ ಭುವನ ವಿಖ್ಯಾತರು, ಪಂಚಸತ ವೀರ ಸಾಸನ ಲಬ್ಧಾನೇಕ ಗುಣಗಣಾಳಂಕ್ರಿತರು, ಸತ್ಯ ಶೌಚಾಚಾರ ಚಾರಿತ್ರ ನಯ ವಿನಯ ವಿಜ್ಞಾನವಂತರು, ವೀರ ಬಣಂಜುಧರ್ಮ ಪ್ರತಿಪಾಳಕರಾದ ವಿಸುದ್ಧ ಗುಡ್ಡಧ್ವಜರು, ಸಾಹಸವಂತರು, ಪರಬಳವನ್ನು ಸೋಲಿಸಿದ ವೀರಲಕ್ಷ್ಮೀ ಲಿಖಿತ ವಿಶಾಳ ವಕ್ಷಸ್ಥಳರು, ಭುವನ ಪರಾಕ್ರಮೋನ್ನತರು, ವಾಸುದೇವ ಖಂಡಳೀ ಮೂಳಭದ್ರ ವಂಶೋದ್ಭವರು, ಭಗವತೀದೇವೀ ಲಬ್ಧ ವರಪ್ರಸಾದರು ಎಂದು ಪ್ರಸಿದ್ಧರಾದವರು ಅಯ್ಯಾವಳೆಯ ಐನೂರ್ವರು. ಈ ವರ್ತಕ ಸಂಘದವರ ವರ್ಣನೆಯನ್ನು ಅವರ ಪ್ರಶಸ್ತಿಗಳೊಂದಿಗೆ ನೀಡುತ್ತದೆ.

ಅಯ್ಯಾವಳೆಯ ಪುರವರಾಧೀಶ್ವರರಾದ ಎಂಟುನಾಡ ಹದಿನಾರು ಜನರು, ಬೆಳ್ವಲ ಮೂನೂರರ ಕಿಸುಕಾಡು ಎಪ್ಪತ್ತರ ಬಾಗಡಗೆ ಎಪ್ಪತ್ತರ ವಿಭಾಗಗಳಲ್ಲಿಯ ಪಟ್ಟಣಗಳ ಪ್ರಭುಗಳು, ಈ ವಿಭಾಗಗಳ ಗ್ರಾಮಾನುಗ್ರಾಮಗಳಲ್ಲಿದ್ದ ತಳ ಸಮಸ್ತ ಮುಮ್ಮುರಿದಂಡರು, ನಾನಾದೇಸಿ ವರ್ತಕರು, ಅಗ್ರಹಾರವಾದ ಚಿಕ್ಕ ಐಹೊಳೆಯಲ್ಲಿ ಮಹಾನಾಡಾಗಿ ನೆರೆದು, ಆ ಅಗ್ರಹಾರದ ದಕ್ಷಿಣದಲ್ಲಿರುವ ವರ್ತಕರ ಆದಿಪಟ್ಟಣವೆನಿಸಿದ ಹುಲಿಗೊಳದ ಗವರೇಶ್ವರದೇವರಿಗೆ ಬಿಟ್ಟ ದತ್ತಿಯನ್ನು ವರ್ಣಿಸುತ್ತದೆ.

ಅಂತೆಯೇ ಕಲಚುರ್ಯ ಚಕ್ರವರ್ತಿ ಬಿಜ್ಜಣದೇವನ ಕಾಲದಲ್ಲಿ ಊರೊಡೆಯರು ಮತ್ತು ಅಶೇಷ ಮಹಾಜನರಾದ ೧೨೦ ಜನರ ಸಮ್ಮುಖದಲ್ಲಿ, ವರ್ತಕರು ಮಹಾನಾಡಾಗಿ ನೆರೆದು, ಗವರೇಶ್ವರದೇವರಿಗೆ ಬಿಟ್ಟ ವೀಸ ಎಂಬ ಹಣದಾನವನ್ನು ವಿವರಿಸುತ್ತದೆ. ಜೊತೆಗೆ ಮಹಾಜನರ ವಿಶೇಷಣಗಳನ್ನು 'ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ

ಪರಾಯಣರು, ಜಪ ಸಮಾಧಿ ಶೀಲಗುಣ ಸಂಪನ್ನರು, ಶ್ರೀ ಮೂಲಸ್ಥಾನದೇವ ಲಬ್ಧ ವರಪ್ರಸಾದರು, ಏಕವಾಕ್ಯರು, ಶರಣಾಗತ ವಜ್ರಪಂಜರರು' ಎಂದು ಬಣ್ಣಿಸುತ್ತದೆ.

ಒಂದು ವಿಶೇಷ. ಗದಗ ಜಿಲ್ಲೆಯಲ್ಲಿ ಹುಲಿಕುಂಟೆ (ಹುಲಕೋಟಿ), ಹುಲಿಗೊಳ (ಹುಯಿಲಗೊಳ), ಹುಲಿಗೆರೆ (ಪುಲಿಗೆರೆ) ಎಂಬ ಹುಲಿ ಪೂರ್ವಪದವಾಗಿ ಉಳ್ಳ ಹಲವಾರು ಊರುಗಳಿದ್ದು, ಉತ್ತರ ಪದವಾಗಿ ಕುಂಟೆ, ಕೊಳ, ಕೆರೆಗಳಿರುವುದನ್ನು ಗಮನಿಸಬಹುದು.

ಶಾಸನದ ಕಾಲವು ೧೦೮೭ನೆಯ ತಾರಣಸಂವತ್ಸರದ ಪುಶ್ಯದಮಾವಾಸೆ ಸೋಮವಾರ ಉತ್ತರಾಯಣ ಸಂಕ್ರಾಂನ್ತಿ ಬ್ಯತಿಪಾತದಂದು" ಎನ್ನುವ ಶಾಸನೋಕ್ತ ಮಿತಿಯು ಕ್ರಿ.ಶ. ೧೧೬೫ರ ಡಿಸೆಂಬರ್ ೧೦ಕ್ಕೆ ಹೊಂದುತ್ತದೆ.

೧ @ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈ-
೨ ಳೋಕ್ಯ ನಗರಾರಂಭ ಮೂಲ ಸ್ತಂಭಾಯ ಸಂಭವೇ ॥
೩ ಸ್ವಸ್ತಿ ಸಮಸ್ತ ಭುವನ ವಿಖ್ಯಾತ ಪಂಚಸತ ವೀರ ಸಾಸನ ಲಬ್ಧಾನೇಕ
೪ ಗುಣಗಣಾಳಂಕ್ರಿತ ಸತ್ಯ ಸೌಚಾಚಾರ ಚಾರಿತ್ರ ನಯ ವಿನ-
೫ ಯ ವಿಜ್ಞಾನ ವೀರ ಬಣಂಜುಧರ್ಮ್ಮ ಪ್ರತಿಪಾಳನ ವಿಸುದ್ಧ ಗುಡ್ಡಧ್ವಜ ವಿರಾಜಿ-
೬ ತಾನೂನ ಸಾಹಸ ಪರಬಳಂ ವೀರಲಕ್ಷ್ಮೀ ಲಿಕಿತ ವಿಶಾಳ ವಕ್ಷಸ್ಥಳ ಭು-
೭ ವನ ಪರಾಕ್ರಮೋನ್ನತರುಂ ವಾಸುದೇವ ಖಂಡಳೀ ಮೂಳಭದ್ರ ವಂ-
೮ ಶೋದ್ಭವರುಂ ಭಗವತೀದೇವೀ ಲಬ್ಧ ವರಪ್ರಸಾದರುಂ ಅಯ್ಯಾವಳೆಯ ಪು-
೯ ರವರಾಧೀಶ್ವರರಪ್ಪ ಶ್ರೀಮದೆಂಟುನಾಡ ಪದಿನಱುವರುಂ ಬೆಳ್ವಲ ಮೂ-
೧೦ ನೂಱಱ ಕಿಸ್ಕಾಡೆಳ್ಪತ್ತಱ ಬಾಗಡಗೆಯೆಳ್ಪತ್ತಱ ಪಟ್ಟಣ-
೧೧ ದ ಪ್ರಭುಗಳುಮಂತನಿತಱ ಗ್ರಾಮಾನುಗ್ರಾಮಂಗಳ ತಳ ಸ-
೧೨ ಮಸ್ತ ಮುಂಮುರಿದಂಡ ನಾನಾ ದೇಸಿಯುಂ ಶ್ರೀಮದಗ್ರಹಾರಂ ಚಿಕ್ಕೈಯ್ವ-
೧೩ ವಳೆಯಲ್ಕರ್ಹ ನಾಡಾಗಿ ನೆರೆದಿರ್ದ್ದು ಶ್ರೀಮದಗ್ರಹಾರಂ ತೆಂಕಣ ಬಳಂಜ-
೧೪ ದಾದಿವಟ್ಟಣಂ ಶ್ರೀ ಹುಲಿಗೊಳದ ಗವಱೇಸ್ವರದೇವರ್ಗ್ಗೆ ನಾಡಾಗಿ ಬಿಟ್ಟಾಯದ ಧ-
೧೫ ರ್ಮ್ಮ ಕ್ರಮಮೆಂತೆಂದಡೆ । ಭುಜಬಳಮಲ್ಲ ವೀರ ಬಿಜ್ಜಣದೇಬ ಕಾಲದ ೧೦೮೭ನೆ-
೧೬ ಯ ತಾರಣ ಸಂವತ್ಸರದ ಪುಶ್ಯದಮಾವಾಸೆ ಸೋಮವಾರ ಉತ್ತರಾ-
೧೭ ಯಣ ಸಂಕ್ರಾಂನ್ತಿ ಬ್ಯತಿಪಾತದಂದು । ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾ-
೧೮ ನ ಧಾರಣ ಮೋನಾನುಷ್ಠಾಣ ಪರಾಯಣ ಜಪ ಸಮಾಧಿ ಸೀಲಗುಣ ಸಂ-
೧೯ ಪಂನ್ನರು ಶ್ರೀ ಮೂಲಸ್ಥಾನದೇವ ಲಬ್ಧ ವರಪ್ರಸಾದರೇಕ ವಾಕ್ಯರು ಸರಣಾಗತ
೨೦ ವಜ್ರ ಪಂಜರರಪ್ಪ ಊರೊಡೆಯ ಪ್ರಮುಖವಶೇಶ ಮಹಾಜನ
೨೧ ನೂಱಿಪ್ಪದಿಂಬರ ಸನ್ನಿಧಾನದಲಾ ಮಹಾನಾಡಾಗಿ ಶ್ರೀ ಗವಱೇಸ್ವರದೇವ
೨೨ . . . . . . ವಾಗೆ ವೀಸವಂ ಬಿಟ್ಟರು ಇಂತೀ ಧರ್ಮ್ಮಮಂನ್ಯಾಯ*

---

* ಮುಂದಿನ ಸಾಲುಗಳು ಕಟ್ಟೆಯಲ್ಲಿ ಸೇರಿವೆ.

[ಶಾಸನಗಳನ್ನು ನನಗೆ ತೋರಿಸಿ, ಕ್ಷೇತ್ರ ಕಾರ್ಯದಲ್ಲಿ ಸಹಕರಿಸಿದ ಶ್ರೀ ಅ.ದ.ಕಟ್ಟೀಮನಿಯವರಿಗೆ ಅನಂತ ಕೃತಜ್ಞತೆಗಳು. ಕ್ಷೇತ್ರ ಕಾರ್ಯದಲ್ಲಿ ನೆರವು ನೀಡಿದ ಲಕ್ಕುಂಡಿ ಗ್ರಾಮ ಪಂಚಾಯತ ಸದಸ್ಯರಾದ ಶ್ರೀ ಅನಂತ (ಅಣ್ಣಪ್ಪ) ಬಸ್ತಿಯವರನ್ನೂ ನೆನೆಯುತ್ತೇನೆ. ಲಕ್ಕುಂಡಿ ವಸ್ತು ಸಂಗ್ರಹಾಲಯದ ಸಿಬ್ಬಂದಿ ವರ್ಗಕ್ಕೂ ಲಕ್ಕುಂಡಿ ಗ್ರಾಮದ ಜನತೆಗೂ ವಂದನೆಗಳು.]



# ಅಳವಂಡಿಯ ಹೊಸ ಶಾಸನಗಳು

ಎ. ನಾಗವೇಣಿ*

**ಕರ್ನಾಟಕ** ರಾಜ್ಯದ ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲೂಕಿಗೆ ಸೇರಿದ ಅಳವಂಡಿ ಗ್ರಾಮವು ಜಿಲ್ಲಾಕೇಂದ್ರದಿಂದ ಪಶ್ಚಿಮಕ್ಕೆ ೨೫ ಕಿ.ಮೀ. ದೂರದಲ್ಲಿದೆ. ಅಳವಂಡಿಯು ಐತಿಹಾಸಿಕ ಹಿನ್ನೆಲೆಯನ್ನು ಹೊಂದಿರುವ ಗ್ರಾಮವಾಗಿದೆ. ಪ್ರಸ್ತುತ ಕೊಪ್ಪಳ ತಾಲೂಕಿನ ದೊಡ್ಡ ಗ್ರಾಮವಾಗಿದ್ದು, ಗ್ರಾಮಪಂಚಾಯತಿಯನ್ನು ಹೊಂದಿದೆ.

ಕೊಪ್ಪಳ ಪ್ರದೇಶವನ್ನು ಮೌರ್ಯರು, ಶಾತವಾಹನರು, ಕದಂಬರು, ಗಂಗರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ನೊಳಂಬರು, ಕಲಚೂರಿಗಳು, ಹೊಸಮಲೆ ದುರ್ಗದ ಅರಸರು, ವಿಜಯನಗರದ ಅರಸರು, ಬಹುಮನಿ ಸುಲ್ತಾನರು, ಮರಾಠರು ಮುಂತಾದ ಪ್ರಮುಖ ಅರಸರು ಕೊಪ್ಪಳ ಜಿಲ್ಲೆಯನ್ನು ಇಡಿಯಾಗಿ ಇಲ್ಲವೇ ಬಿಡಿಯಾಗಿ ಒಂದು ಆಡಳಿತ ಭಾಗವನ್ನಾಗಿಸಿಕೊಂಡು ಆಳ್ವಿಕೆ ಮಾಡಿರುವರು.

ಅಳವಿಂಡಿಯು ಕುಂತಳ ದೇಶದ ಎಕ್ಕಲವಾಡದಲ್ಲಿನ ಪ್ರಮುಖ ಅಗ್ರಹಾರವಾಗಿತ್ತು. ನಾನ್ನೂರು ಮಹಾಜನರು ಇಲ್ಲಿ ವಾಸವಾಗಿದ್ದರು. ಅಳವಂಡಿಯು ಪ್ರಾಚೀನ ಕಾಲದಲ್ಲಿ 'ಮಹಾಗ್ರಹಾರಮಳವಂಡಿ' ಎಂದು ಕರೆಯಲ್ಪಟ್ಟಿತ್ತು. ಇಲ್ಲಿಯ ಮಹಾಜನರು ವೇದ, ವೇದಾಂಗ, ವ್ಯಾಕರಣ, ಸ್ಮೃತಿ, ಪುರಾಣ, ತರ್ಕ, ನಾಟಕ, ಕಾವ್ಯಗಳ ಬಗ್ಗೆ ತಿಳಿದವರಾಗಿದ್ದರು. ಅಳವಿಂಡಿಯು ನಾನ್ನೂರು ಅಗ್ನಿಹೋತ್ರರ ವಿಪ್ರರ ನೆಲೆವೀಡಾಗಿ, ಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತು. ಅಳವಂಡಿಯಲ್ಲಿ ಆರು ಶಾಸನಗಳು ದೊರೆತಿದ್ದು, ಅವುಗಳನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿ ಶಾಸನ ಸಂಪುಟ-೨ರಲ್ಲಿ ಪ್ರಕಟಿಸಲಾಗಿದೆ. ಇದರಲ್ಲಿ ರಾಷ್ಟ್ರಕೂಟರ ಆಳ್ವಿಕೆಯನ್ನು ಉಲ್ಲೇಖಿಸುವ ಪ್ರಭೂತವರ್ಷ ಗೋವಿಂದನ ಶಾಸನ, ಕ್ರಿ.ಶ.೧೧೫೭ರ ಚಾಲುಕ್ಯ ತ್ರೈಲೋಕ್ಯಮಲ್ಲನ ಆಳ್ವಿಕೆಯ ಶಾಸನ, ಕಲ್ಯಾಣದ ಕಲಚೂರಿ ಆಹವಮಲ್ಲನ ಕಾಲದ ಶಾಸನಗಳು ಇಲ್ಲಿ ದೊರೆತಿವೆ.

**೧. ವೀರಗಲ್ಲು:** ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲು ೪ ಪಟ್ಟಿಕೆಗಳಿಂದ ಕೂಡಿದೆ. ೧ನೇ ಪಟ್ಟಿಕೆಯಲ್ಲಿ ಇಬ್ಬರು ವೀರರು ಯುದ್ದದಲ್ಲಿ ತಮ್ಮ ಕುದುರೆಗಳನ್ನು ಕಳೆದುಕೊಂಡು ಹಾಗೆಯೇ ಹೋರಾಟ ಮಾಡುತ್ತಿರುವ ದೃಶ್ಯ ಕಂಡುಬರುತ್ತದೆ. ಶತ್ರುಗಳು ಕುದುರೆ ಮೇಲೆ ಕುಳಿತುಕೊಂಡು ಹೋರಾಟ ಮಾಡುತ್ತಿರುವರು.

೨ನೇ ಪಟ್ಟಿಕೆಯಲ್ಲಿ ನಾಲ್ಕು ಜನ ಅಪ್ಸರೆಯರು ವೀರರಿಬ್ಬರನ್ನು ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯವಿದೆ.

೩ನೇ ಪಟ್ಟಿಕೆಯಲ್ಲಿ ಆಸನದ ಮೇಲೆ ವೀರರಿಬ್ಬರು ಸ್ವರ್ಗದಲ್ಲಿ ಕುಳಿತು ಅಪ್ಸರೆಯರಿಂದ ಚಾಮರ ಸೇವೆ ಪಡೆಯುವ ದೃಶ್ಯವಿದೆ.

೪ನೇ ಪಟ್ಟಿಕೆಯಲ್ಲಿ ಶಿವಲಿಂಗಕ್ಕೆ ಯತಿ ಪೂಜಿಸುತ್ತಿರುವ, ಆಕಳು ಕರುವಿಗೆ ಹಾಲುಣಿಸುತ್ತಿರುವ ದೃಶ್ಯ, ನಂದಿಯನ್ನು ಕಾಣಬಹುದು.

**೨. ಮಹಾಸತಿಗಲ್ಲು:** ಸುಮಾರು ೧೫-೧೬ನೇ ಶತಮಾನದ ಪಾಳೆಯಗಾರರ ಕಾಲದ ಲಿಪಿಸಹಿತ ಮಹಾಸತಿಗಲ್ಲು. ಸತಿಯರಿಬ್ಬರು ತಮ್ಮ ಬಲಗೈಯಲ್ಲಿ ನಿಂಬೆಹಣ್ಣನ್ನು ಹಿಡಿದುಕೊಂಡಿರುವರು. ಒಬ್ಬ ಸತಿ ಎಡಗೈ ಕೆಳಗೆ ಇಳಿಬಿಟ್ಟಿದ್ದಾಳೆ. ಇನ್ನೊಬ್ಬಳು ಎಡಗೈಯಲ್ಲಿ ಏನನ್ನೋ ಹಿಡಿದಿರುವಳು. ಇಬ್ಬರು ಕೇದಿಗೆಯನ್ನು ಮುಡಿದಿರುವರು. ಕೈಯಲ್ಲಿ ಬಳೆ, ಕಡಗ, ತೋಳ್ಬಂದಿ, ಕಿವಿಯಲ್ಲಿ ಓಲೆ, ಕೊರಳಲ್ಲಿ ಆಭರಣಗಳನ್ನು ಧರಿಸಿರುವರು. ಸೀರೆ ನೆರಿಗೆಯಿಂದ ಕೂಡಿದೆ. ಅಲಂಕೃತಗೊಂಡಿರುವರು. ಪಕ್ಕದಲ್ಲಿ ವೀರರಿಬ್ಬರು ಕೈಮುಗಿದುಕೊಂಡು ನಿಂತಿರುವರು. ಇಬ್ಬರು ವೀರರು ತಮ್ಮ ಎಡಗೈ ತೋಳಿನಲ್ಲಿ ಕತ್ತಿಯನ್ನು ಹಿಡಿದಿರುವರು. ವೀರನ ಪಕ್ಕದಲ್ಲಿ ಕುದುರೆ ಇದೆ.

**ಶಾಸನ ಪಠ್ಯ**

೧. ಮಲ ನಾಯಕನ ತಂಮ ಸಿದ್ದಿ ನಾಯಕ
೨. ಗೌರಿ ನಾಯಕನ ಮಗ ನಾರನಾಯಕನ ತಂಮ
೩. ಬುಶಿ ವಿಂ ನಾಯಕರ ಶ ವಿ
೪. ನಯಕನ ಮಗ ಪರವರ ಮಲ್ಲ



* ೧೮ನೇ ವಾರ್ಡ್, ಮನ್ಮಥಕೇರಿ, ಕಮಲಾಪುರ-೫೮೩೨೨೧, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ, ಮೊ. ೯೪೪೯೧೩೬೨೨೨

೧೯

# ಜಯಪುರದಲ್ಲಿ ಹೊಸ ಜೈನ ಶಾಸನಗಳು

**ಹೆಚ್.ಪಿ. ನಿತಿನ್***

**ಕೊಪ್ಪ** ತಾಲೂಕಿನ ಜಯಪುರ ಗ್ರಾಮದಲ್ಲಿರುವ ಆದಿನಾಥ ಜಿನಾಲಯ ಬಸದಿಯನ್ನು ನೋಡಿಕೊಳ್ಳುತ್ತಿರುವ ಶ್ರಾವಕರಾದ ನಾಗೇಂದ್ರರವರ ಬಳಿಯಿರುವ ತಾಮ್ರ ಶಾಸನ, ಬಸದಿಯಲ್ಲಿರುವ ಜಾಗಟೆಯ ಮೇಲೆ ಬರೆದಿರುವ ಶಾಸನ ಹಾಗೂ ಬಸದಿಯ ಮೂಲಸ್ವಾಮಿ ಆದಿನಾಥ ತೀರ್ಥಂಕರರ ಪಾದ ಪೀಠದಲ್ಲಿ ಈ ಶಾಸನಗಳನ್ನು ಕಾಣಬಹುದು.

**ಆದಿನಾಥ ಸ್ವಾಮಿಯ ಪಾದ ಪೀಠ ಶಾಸನ**

**ಶಾಸನದ ಪಾಠ**

೧ [ಸ್ವಸ್ತಿ] ಸಾಲಿವಾಹನ ಸಕವರಶ [ಸ್ವೋ] ರವನತದ ಅರುವತಲವನೆಯ ಕ್ರೋಧನ ಸಂವತ್ಸರದ ಮಾಗ ಸುದ ಪಂಚಮಿಯು ಸೋಮವಾರದಲು ಬರ್ಗೋಜಿಯರ್ ಅಂಗಡಿಯ ಬಸ್ತಿಗೆ ಕಲ್ಯಾ

೨ ಣ ..ಯು ಚವಿಸ ತೀರ್ಥಕರ ಪ್ರತಿಮೆಯನು ಪ್ರತಿಸ್ಟೆಯನು ಮಾಡಿಸಿ.. ಡಿಸಿದನು ಮಂಗಲ ಮಹಾ ಶ್ರೀ

**ಶಾಸನದ ವಿವರ:** ಎರಡು ಸಾಲುಗಳಿರುವ ಈ ಶಾಸನವು ಬರ್ಗೋಜಿ ಎಂಬುವನು ಕಲ್ಯಾಣ ಪ್ರಾಪ್ತಿಯಾಗಲೆಂದು ಅಂಗಡಿಯ ಬಸದಿಗೆ ಚವ್ವೀಸ ತೀರ್ಥಂಕರ ಪ್ರತಿಮೆಯೊಂದನ್ನು ಮಾಡಿಸಿ ಶಾಲಿವಾಹನ ಶಕವರುಷ ಕ್ರೋಧನನಾಮ ಸಂವತ್ಸರದ ಮಾಗ ಶುದ್ಧ ಪಂಚಮಿಯ ಸೋಮವಾರದಂದು ಪ್ರತಿಷ್ಠಾಪಿಸಿದನು ಎಂದಿದೆ.

**ಶಾಸನದ ಕಾಲ:** ಈ ಶಾಸನದಲ್ಲಿ ಎಲ್ಲಿಯೂ ಅದರ ಕಾಲವನ್ನು ಸ್ಪಷ್ಟವಾಗಿ ನೀಡಲಾಗಿಲ್ಲ. ಆದರೆ ಅದರ ಲಿಪಿಯ ದೃಷ್ಟಿಯಿಂದ ೧೭-೧೮ನೆಯ ಶತಮಾನದ ಶಾಸನವೆಂದು ಊಹಿಸಬಹುದು. ಅದಲ್ಲದೆ ವಿಗ್ರಹದ ಪ್ರತಿಷ್ಠಾಪನೆಯ ಕಾಲದ ವಿವರವನ್ನು ನೀಡುತ್ತ ಶಾಲಿವಾಹನ ಶಕೆಯ ಕ್ರೋಧನ ನಾಮ ಸಂವತ್ಸರದ ಮಾಗ ಶುದ್ಧ ಪಂಚಮಿಯ ಸೋಮವಾರದಂದು ಪ್ರತಿಷ್ಠಾಪಿಸಲಾಯಿತು ಎನ್ನಲಾಗಿದೆ. ಇದು ೧೭೨೪ನೆಯ ಡಿಸೆಂಬರ್ ತಿಂಗಳಿನ ೪ನೇ ತಾರೀಖಿನ ದಿನಕ್ಕೆ ಸರಿ ಹೊಂದುತ್ತದೆ.

**ಜಾಗಟೆಯಲ್ಲಿನ ಶಾಸನ**

**ಶಾಸನದ ಪಾಠ**

ಬಪ್ಪೆ ಬಸ್ತಿ । ಪಾರಿಶ್ವನಾಥ ಸ್ವಮಿಗೆ । ಕಲು ಬಸ್ತಿ । ಬೊಂ । ಹೊಂ । ಚಂದಂಯನ ಭಕ್ತಿ । ೮೮೭

**ಶಾಸನದ ಸಾರಾಂಶ:** ಬಪ್ಪೆ ಬಸದಿಯ ಪಾರ್ಶ್ವನಾಥ ಸ್ವಾಮಿಗೆ ಕಲ್ಲು ಬಸದಿಯ ವ್ಯಾಪ್ತಿಗೆ ಒಳಪಡುವ ಬೊಂ.ಹೊಂ.ಚಂದಯ ಎಂಬುವನು ಭಕ್ತಿಯಿಂದ ಈ ಜಾಗಟೆಯನ್ನು ಮಾಡಿಸಿಕೊಟ್ಟರು.

**ಶಾಸನದ ವಿಶ್ಲೇಷಣೆ:** ಶಾಸನದ ಕಾಲ ಅಸ್ಪಷ್ಟವಾಗಿದ್ದು ಅದರ ಲಿಪಿಯ ದೃಷ್ಟಿಯಿಂದ ಇದೊಂದು ೧೭-೧೮ನೆಯ ಶತಮಾನದ ಶಾಸನ ಎಂದು ತಿಳಿದುಬರುತ್ತದೆ. ಇದರಲ್ಲಿ ಕಾಣಿಸಿರುವ 'ಬಪ್ಪೆ ಬಸದಿ'ಯಲ್ಲಿನ ಜಾಗಟೆ ಇದಾಗಿದ್ದು ಕಾಲಾನಂತರದಲ್ಲಿ ಈ ಶಾಸನ ದೊರೆತಿರುವ ಆದಿನಾಥ ತೀರ್ಥಂಕರ ಬಸದಿಗೆ ಸೇರಿದೆ ಎಂದು ನಿರ್ಧರಿಸಬಹುದು. ಅದಲ್ಲದೆ ಈ ಜಾಗಟೆಯನ್ನು ಕಲ್ಲು ಬಸದಿಯ ವ್ಯಾಪ್ತಿಗೆ ಒಳಪಡುವ ಬೊಂ.ಹೊಂ.ಚಂದಯ ಎಂಬುವನು ಮಾಡಿಸಿದನು ಎಂದು ತಿಳಿಯುತ್ತದೆ. ಜಯಪುರ ಗ್ರಾಮದಿಂದ ಸುಮಾರು ೩ ಕಿ.ಮಿ. ದೂರದಲ್ಲಿರುವ ಕಲ್ಲು ಬಸದಿ ಗ್ರಾಮಕ್ಕೆ ಚಂದಯನು ಸೇರಿದವನೆಂದು ತಿಳಿಯುತ್ತದೆ.

* # ೬೦೭, 'ರತ್ನತ್ರಯ', ೧೨ನೇ ಅಡ್ಡರಸ್ತೆ, ೩ನೇ ಬ್ಲಾಕ್, ೪ನೇ ಹಂತ, ಬಿ.ಟಿ.ಎಂ. ಲೇಔಟ್, ಬೆಂಗಳೂರು-೭೦, ೯೮೮೦೮೧೮೮೩೯

## ಶಾಸನದ ಪಾಠ

೧ ಶ್ರೀ ಆದಿನಾಥಾಯ ನಮಃ ಶ್ರೀ ಮತ್ಪರಮ ಗಂ
೨ ಭೀರ ಸ್ಯಾದ್ವಾದಾಮೋಘ ಲಾಂಛನಂ ಜೀಯಾ ತ್ರೈಲೋಕ್ಯ ನಾ
೩ ಥಸ್ಯ ಶಾಸನಂ ಜಿನಶಾಸನಂ॥ ಸ್ವಸ್ತಿ ಶ್ರೀ ಜಯಾಭ್ಯುದಯ ಶಾ
೪ ಲಿ ವಾಹನ ಶಕವರುಷ ೧೭೨೭ ನೆಯ ಕ್ರೋಧನ ಸಂವತ್ಸರದ ಕಾರ್ತ್ತಿ
೫ ಕ ಶುದ್ಧ ೧೫ ಯಲ್ಲು ಸ. ಬಯಲ ಶ್ರೀ ಆಧೀಶ್ವರ ಸಂನಿಧಾನದ
೬ ಲ್ಲು ॥ ಮೂಡಬಿದುರೆ ಚಾರುಕೀರ್ತ್ತಿ ಪಂಡಿತಾಚಾರ್ಯ್ಯಸ್ವಾಮಿ
೭ ಯವರ ಶಿಷ್ಯ ಚಂದ್ರಕೀರ್ತಿ ಗುರುಗಳ ಜೀಯನವರು ವಸ್ತು ಕಲ್ಯಾ
೮ ಣದ ನೋಂಪಿ ಉದ್ಯಾಪನೆ ಮಾಡಿ ಕಾರ್ತ್ತಿಕ ಶುದ್ಧ ೧೫ಯಲ್ಲು ಸ್ವಾಮಿಗೆ
೯ ಪಂಚಾಮೃತಭಿಷೇಕ ಪೂಜಾಧಿಪಾರಾಧನೆ ಸಹಕಾಲ ಕಾಲಂಪ್ರ
೧೦ ತಿ ನೆಲೆತರನಡವ ಬ. ದಾಶಿಯರದು ಗ ೫ ವರಹ ಲಾಗ ೫ ವರುಷ
೧೧ ಕ್ಕೆ ಧರ್ಮ ಬಡ್ಡಿ ಗ ೧ ವರಹಕ್ಕೆ ವರುಷ ೧ಕ್ಕೆ ಹಾಗ ತುಲಾಂ ೧ ಬಡ್ಡಿಯಲ್ಲು
೧೨ ಗ ೫ ವರಹಕ್ಕೆ ಗ॥೦ ಹೊಂನು ಬಡ್ಡಿಯ ಗ ೫ ವರ ಪೊಂನು...
೧೩ ಸೆಟ್ಟರ ಪುತ್ತರ ವರ್ದ್ಧಯ್ಯಸೆಟ್ಟಿ ವೃಷಬಯ್ಯಸೆಟ್ಟಿ ಯಿರ್ತ್ತರ್ತ್ತರು .
೧೪ ಸ್ತರಾಗಿ ತೆಗೆದುಕೊಂಡು ನಾ . ನಂ ಮನಂತಾಗಿ ಪರಂಪರೆ
೧೫ ಯಲ್ಲು ನೆಲತರದ ಪೂಜೆ ಧರ್ಮವಂನು ನಡೆಸಿಕೊಂಡು ಬರಲೆ
೧೬ ವೆಯಂತ ಸ್ವಾಮಿಬಂಡಾರಕ್ಕೆ ಬರಕೊಟ್ಟ ತಾಂಬ್ರದ ಶಾಸನದ ಪ
೧೭ ಟ್ಟಿ ಯಾ ಪಟ್ಟಿ ಪ್ರಕಾರ ನಡೆಸಿಕೊಂಡು ಬರುತ್ತೇವೆ ಯಿ ಧರ್ಮ್ಮಕ್ಕೆ
೧೮ ವಿಘ್ನಮಾಡಿದವರಿಗೆ ॥ ಜಿನಧರ್ಮ್ಮಸ್ಯ ವಿಘ್ನಾನಿ ತೇಜೋ
೧೯ ಹಾನಿ ದರಿದ್ರತಾ । ದುರ್ಮ್ಮರಣಂ ಚ ಮಹಾರೋಗೋಮಾ
೨೦ ನ ಹಾನಿ ಸದಾಭವೇತ್ ॥ ಯೆಂಬ ಗ್ರಂಥದಭಿಪ್ರಾಯ ವಾಗುತಾ
೨೧ ಯಿದ್ದಿತು ॥ ಯಾ ಧರ್ಮ್ಮವಂನು ಚಂದಾಗಿ ನಡೆಸಿಕೊಂಡು ಬ
೨೨ ಂದವರಿಗೆ ॥ವೃ॥ ಧರ್ಮ್ಮಃ ಸರ್ವ್ವ ಸುಖಾಕರೋಹಿತ ಕರೋಧ
೨೩ ರ್ಮ್ಮಂಬುಧಾಶಿನತೆ ಧರ್ಮ್ಮೇಣ್ಯವಸಮಾಪ್ಯತೆ ಶಿವಸುಖಂ
೨೪ ಧರ್ಮಾಯತಸ್ಮೈ ನಮಃ॥ ಧರ್ಮ್ಮಾನ್ನಾಸ್ತ್ಯ ಪರಂಸು
೨೫ ಹೃದ್ಯವಭೃತಾಂ ಧರ್ಮ್ಮಸ್ಯ ಮೂಲಂ ದಯಾಧರ್ಮ್ಮ
೨೬ ಚಿತ್ತಮಹೋದಧಿ ಪ್ರತಿದಿನಂ ಹೇ ಧರ್ಮ್ಮಮಾಂಪಾಲಯೋ
೨೭ ಯಂಬ ಗ್ರಂಥದಭಿಪ್ರಾಯದಿಂದ ವರ ರಕ್ಷಣ್ಯಮಾಡಿ ಕೊರು
೨೮ . ಯಿದ್ಧಿತು ಯೆಂದು ವೃಷಬಯ್ಯಸೆಟ್ಟಿ ಬರದ ಪಟ್ಟಿಗೆ ಭದ್ರ
೨೯ ಯಾದ್ವರ್ತ್ತತಾಂ ಜಿನಶಾಸನಂ ಮಂಗಲ ಮಹಾಶ್ರೀಶ್ರೀಶ್ರೀಶ್ರೀಶ್ರೀ

**ಶಾಸನದ ವಿವರ:** ಜೈನಧರ್ಮದ ಪ್ರಥಮ ತೀರ್ಥಂಕರರಾದ ಆದಿನಾಥರಿಗೆ ನಮಿಸುತ್ತ ಶ್ರೀ ಮತ್ಪರಮ ಗಂಭೀರನು, ಸ್ಯಾದ್ವಾದ ಅಮೋಘ ಲಾಂಛನದಿಂದ ಶೋಭಿತನಾದ ತ್ರಿಲೋಕದ ಒಡೆಯನಾದ ಜಿನನಿಗೆ ನಮಿಸುತ್ತ ಆರಂಭವಾಗುವ ಈ

ಶಾಸನವು ಶಾಲಿವಾಹನ ಶಕವರುಷ ೧೭೨೭ ನೆಯ ಕ್ರೋಧನ ಸಂವತ್ಸರದ ಕಾರ್ತಿಕ ಶುದ್ಧ ೧೫ ನೆಯ (ಕ್ರಿ.ಶ. ೧೮೦೫ರ ೨೨ ಅಕ್ಟೋಬರ್ ಮಂಗಳವಾರ) ದಿನದಂದು ಮೂಡುಬಿದಿರೆಯ ಚಾರುಕೀರ್ತಿ ಪಂಡಿತಾಚಾರ್ಯ್ಯಸ್ವಾಮಿಗಳ ಶಿಷ್ಯ ಶ್ರೀ ಚಂದ್ರಕೀರ್ತಿ ದೇವರು 'ವಸ್ತು ಕಲ್ಯಾಣ ನೋಂಪಿ' ಯನ್ನು ಸ(ರ್ಗ)ಬಯಲಿನ ಆದಿನಾಥ ಸ್ವಾಮಿಯ ಸನ್ನಿಧಿಯಲ್ಲಿ ಆಚರಿಸಿ ಅದಕ್ಕೆ ಸಂಬಂಧಿಸದ 'ಉದ್ಯಾಪನೆ'ಯನ್ನು ಮಾಡಿದ ಬಗ್ಗೆ ತಿಳಿಸುತ್ತದೆ.

ಇದಲ್ಲದೆ ತೀರ್ಥಂಕರರಿಗೆ ಪ್ರತಿದಿನ ಪಂಚಾಮೃತ ಅಭಿಷೇಕ, ಪೂಜೆ ಹಾಗೂ ದೀಪಾರಾಧನೆಯನ್ನು ಧರ್ಮದ ಆಚರಣೆಗಳಿಗೆ ಅನುಸಾರವಾಗಿ ನಡೆಸಲು ನೀಡಿದ (ಗ ೫ ವರಹ ಲಾಗ ೫ ವರುಷಕ್ಕೆ ಧರ್ಮ ಬಡ್ಡಿ ಗ ೧ ವರಹಕ್ಕೆ ವರುಷ ೧ಕ್ಕೆ ಹಾಗ ತುಲಾಂ ೧ ಬಡ್ಡಿ ಗ ೫ ವರಹಕ್ಕೆ ಗ॥೦) ದಾನವನ್ನು ಪೊಂನುಪೂ (ಜಯ) ಸೆಟ್ಟಿಯ ಪುತ್ರರಾದ ವರ್ದ್ಧಯ್ಯಸೆಟ್ಟಿ ಹಾಗೂ ವೃಷಬಯ್ಯಸೆಟ್ಟಿಯರು ಸ್ವಾಮಿಯ ಭಂಡಾರಕ್ಕೆ ನೀಡದ ದಾನವನ್ನು ಸ್ವೀಕರಿಸಿ ಪರಂಪರೆಯಂತೆ ಪೂಜೆಯನ್ನು ಧರ್ಮಕ್ಕನುಗುಣವಾಗಿ ನಡೆಸಿಕೊಂಡು ಬರುತ್ತೇವೆಂದು ಸ್ವಾಮಿಯ ಭಂಡಾರಕ್ಕೆ ಬರೆದುಕೊಟ್ಟ ವಿವರಗಳನ್ನು ಶಾಸನವು ಒದಗಿಸುತ್ತದೆ.

ವೃಷಬಯ್ಯಸೆಟ್ಟಿ ಎಂಬುವರು ಈ ಶಾಸನವನ್ನು ಬರೆದುದಾಗಿ ತಿಳಿಸಿ ಜಿನಶಾಸನಕ್ಕೆ ಮಂಗಳವಾಗಲಿ ಎಂದು ಹೇಳಲಾಗಿದೆ.

ಈ ಶಾಸನವು ೨೮" x ೧೬" ಅಳತೆಯದಾಗಿದ್ದು, ಕನ್ನಡ ಭಾಷೆ ಹಾಗೂ ಲಿಪಿಯಲ್ಲಿದೆ. ಇದೊಂದು ಜೈನ ಧಾರ್ಮಿಕ ಶಾಸನವಾಗಿದ್ದು ಜೈನಧರ್ಮದ ಪ್ರಥಮ ತೀರ್ಥಂಕರರಾದ ಆದಿನಾಥ ತೀರ್ಥಂಕರರಿಗೆ ವಂದಿಸಿ ಅಂದಿನ ಕಾಲಘಟ್ಟದಲ್ಲಿ (ಕ್ರಿ.ಶ. ೧೮೦೫) ಪ್ರಚಲಿತವಾಗಿದ್ದ ಆಚರಣೆ – 'ವಸ್ತು ಕಲ್ಯಾಣ ನೋಂಪಿ ಉದ್ಯಾಪನೆ'ಯ ವಿವರಗಳನ್ನು ತಿಳಿಸುತ್ತದೆ. ಇದರಲ್ಲಿ ಆದಿನಾಥ ತೀರ್ಥಂಕರರ ಹೆಸರನ್ನು ಉಲ್ಲೇಖಿಸಿದ್ದರೂ ಊರಿನ ಹೆಸರು ಅಸ್ಪಷ್ಟವಾಗಿದೆ, ಆದರೆ ಮೂಡುಬಿದಿರೆಯ ಚಾರುಕೀರ್ತಿ ಸ್ವಾಮಿಗಳು ಹಾಗೂ ಅವರ ಶಿಷ್ಯನ ಉಲ್ಲೇಖವಿರುವುದರಿಂದ ಇದು ಮೂಡುಬಿದಿರೆಯ ಸುತ್ತಮುತ್ತಲಿನ ಪ್ರದೇಶಕ್ಕೆ ಸಂಬಂಧಿಸಿದ್ದೆಂದು ನಿರ್ಧರಿಸಬಹುದು. ಅಲ್ಲದೆ ಈ ಶಾಸನವು ದೊರೆತದ್ದು ಜಯಪುರದ ಆದಿನಾಥ ಬಸದಿಯನ್ನು ನೋಡಿಕೊಳ್ಳುತ್ತಿರುವ ಶ್ರಾವಕರಾದ ನಾಗೇಂದ್ರರವರ ಮನೆಯಲ್ಲಾದ್ದರಿಂದ ಇದು ಅಲ್ಲಿನ ಆದಿನಾಥ ಬಸದಿ ಅಥವಾ ಆ ಪ್ರದೇಶದ್ದೆಂದು ಸಹ ಗ್ರಹಿಸಬಹುದು.

[ಶಾಸನಗಳನ್ನು ಓದಿಕೊಟ್ಟು, ಮಾರ್ಗದರ್ಶನ ನೀಡಿದ ಶಾಸನ ತಜ್ಞರಾದ ಶ್ರೀ ರವಿಕುಮಾರ್ ಕೆ. ನವಲಗುಂದ, ಇವರಿಗೆ ಆದಿನಾಥ ಬಸದಿಯ ಶ್ರೀ ನಾಗೇಂದ್ರರವರಿಗೆ ವಂದನೆಗಳು.]



# ೨೦

# ಕುಣಗಳ್ಳಿ ಗ್ರಾಮದ ಹೊಸ ಶಾಸನ

**ಸಿ.ಇ. ಲೋಕೇಶ್*  ಎಸ್.ಡಿ. ಕುಮಾರಸ್ವಾಮಿ****

**ಕು**ಣಗಹಳ್ಳಿ ಗ್ರಾಮವು ಚಾಮರಾಜನಗರ ಜಲ್ಲೆಯ ಕೊಳ್ಳೇಗಾಲ ತಾಲೂಕಿನಲ್ಲಿದೆ. ಈ ಗ್ರಾಮವು ಕೊಳ್ಳೇಗಾಲ ತಾಲೂಕು ಪಟ್ಟಣದಿಂದ ಸುಮಾರು ೦೫ ಕಿ.ಮೀ. ದೂರದಲ್ಲಿ ದಕ್ಷಿಣ ಭಾಗಕ್ಕಿದೆ. ಈ ಗ್ರಾಮವು ಪ್ರಾಚೀನ ಕಾಲದಿಂದ ಐತಿಹಾಸಿಕವಾಗಿ ಹಾಗೂ ಆರ್ಥಿಕವಾಗಿ ಧಾರ್ಮಿಕವಾಗಿ ಮಹತ್ವದಿಂದ ಕೂಡಿದ್ದಾಗಿದೆ. ನಾವು "ಕೊಳ್ಳೇಗಾಲ ತಾಲೂಕಿನ ದೇವಾಲಯಗಳ ಮತ್ತು ಶಾಸನಗಳ ಒಂದು ಅಧ್ಯಯನ" ಎಂಬ ವಿಷಯದಲ್ಲಿ ಪಿಎಚ್.ಡಿ ಸಂಶೋಧನಾ ನಡೆಸುತ್ತಿದ್ದು, ಕ್ಷೇತ್ರಕಾರ್ಯ ಮಾಡುವ ಸಮಯದಲ್ಲಿ ಪ್ರಾಚೀನ ಶಾಸನ ಇರುವುದು ನಮ್ಮ ಕಣ್ಣಿಗೆ ಕಂಡು ಬಂದಿತು.

ಈ ಶಾಸನವು ಕುಣಗಹಳ್ಳಿ ಗ್ರಾಮದಿಂದ ಪೂರ್ವ ದಿಕ್ಕಿಗಿರುವ ಬೆಟ್ಟದ ಪಕ್ಕದಲ್ಲಿರುವ ಮಹದೇವಮ್ಮ ಎಂಬುವವರ ಹೊಲದಲ್ಲಿ ಮರದ ಕೆಳಗಡೆ ಇದೆ. ಇದನ್ನು ಉತರಾಭಿಮುಖವಾಗಿ ನಿಲ್ಲಿಸಲಾಗಿದ್ದು, ಇದು ಒಂದು ಎರಡು ಅಡಿ ಅಗಲ, ಮೂರುವರೆ ಅಡಿ ಉದ್ದ, ಹಾಗೂ ಅರ್ಧ ಅಡಿ ದಪ್ಪವಾಗಿರುವ ಈ ಶಾಸನವನ್ನು ಗ್ರಾನೈಟ್ ಶಿಲೆಯಲ್ಲಿ ಕೊರೆಯಲಾಗಿದೆ. ಈ ಶಾಸನದ ಭಾಷೆ ಕನ್ನಡ ಮತ್ತು ಸಂಸ್ಕೃತ. ಲಿಪಿ ಕನ್ನಡ ಮತ್ತು ದೇವನಾಗರಿ. ಈ ಶಿಲೆ ಗ್ರಾನೈಟ್ ಶಿಲೆಯಾಗಿದ್ದರೂ ಕೂಡ ಅಕ್ಷರಗಳನ್ನು ಸಣ್ಣದಾಗಿ ಬರೆಯಲಾಗಿದ್ದು, ಕೆಲವೊಂದು ಅಕ್ಷರಗಳು ತೃಟಿತಗೊಂಡಿವೆ. ಶಾಸನದಲ್ಲಿ ಒಟ್ಟು ಇಪ್ಪನಾಲ್ಕು ಸಾಲುಗಳ ಪಾಠವಿದೆ. ಮೊದಲ ಸಾಲು ಪಟ್ಟಿಕೆ ಮೇಲೆ ದೇವನಾಗರಿ ಲಿಪಿಯಲ್ಲಿದೆ. ಇನ್ನುಳಿದ ಸಾಲುಗಳು ಕನ್ನಡ ಲಿಪಿಯಲ್ಲಿದೆ.

ಶಾಸನ ಪಾಠದ ಮೇಲ್ಭಾಗದ ಒಂದುವರೆ ಅಡಿ ಉದ್ದ, ಎರಡು ಅಡಿ ಅಗಲದ ಜಾಗದಲ್ಲಿ ಶಾಸನದ ಬಲ ಮತ್ತು ಎಡಭಾಗದಲ್ಲಿ ಸೂರ್ಯ ಮತ್ತು ಚಂದ್ರರ ಕೆತ್ತನೆ ಹಾಗೂ ಇವುಗಳ ಮಧ್ಯ ಭಾಗದಲ್ಲಿ ಒಂದುವರೆ ಅಡಿ ಎತ್ತರ, ಆರು ಸೆಂ.ಮೀ. ಅಗಲವಿರುವ ಮುಕ್ಕೊಡೆ (ಛತ್ರಿ) ಉಬ್ಬು ಶಿಲ್ಪಗಳಿವೆ.

**ಶಾಸನದ ಪಾಠ**

ಶ್ರೀ ಮದ್ಬ್ರಂಹ್ಮ ದೇವಾಯ ನಮಃ ಶ್ರೀ
೧ ಶ್ರೀಮತ್ಪರಮಗಂಭಿರಸ್ಯ ಧ್ವಾಧಾಮೋಘಲಾಂಛ
೨ ನಂ ಜಿಯೊತ್ರೈಲೋಕ್ಯನಾಥಸ್ಯಶಾಸನಂ ಜಿನಶಾ
೩ ಸನಂ॥ ಸ್ವಸ್ತಿ ಶ್ರೀಜಯಾಭ್ಯುದಯ ಶಾಲಿವಾಹ-
೪ ನ ಶಕವರ್ಷ೧೬೧೦ ಸಂದ ವರ್ತ್ತಮಾನವಾದ ವಿಭವಸ
೫ ಂವತ್ಸರದ ಮಾರ್ಗ್ಗಶಿರ ಶುದ್ಧ೧೩ಯಲ್ಲು ಬಿರುದಂತಿ
೬ ಂಬರಗಂಡ ಲೋಕೈಕವೀರ ಶ್ರೀಮನ್ಮಾಹಾರಾಜಾಧಿರಾಜ
೭ ರಾಜಪರಮೇಶ್ವರ ಪ್ರೌಢಪ್ರತಾಪನ ಪ್ರತಿಮವೀರನರಪತಿ
೮ ಶ್ರೀಚಿಕ್ಕದೇವ ಮಹಾರಾಜವಡಯರ್ರೈಯನವರು ಅರಿ
೯ ಕುಠಾರದ ಬೊಂಮರಸಪಂಡಿತನಿಗೆ ಸತ್ಯಗಾಲದ ಹೋ
೧೦ ಬಳಿಯ ಮುಡುಗುಂಡಕ್ಕೆ ಸಲುವ ಅರಃಕೆರೆಯೆಂಬ ಗ್ರಾ

* ಸಹಾಯಕ ಪ್ರಾಧ್ಯಾಪಕರು, ಮಹಾರಾಜ ಕಾಲೇಜು, ಮೈಸೂರು, ಮೊ. ೯೯೦೨೩೮೫೦೮೨
** ಸಂಶೋಧಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈಸೂರು ವಿವಿ, ಮೈಸೂರು, ಮೊ. ೮೦೭೩೯೧೨೩೧೯



ಶಾಸನದ ಕಲ್ಲು



ಶಾಸನದ ಪಡಿಯಚ್ಚು

೧೧ ವನು ದಾರದತ್ತವಾಗಿ ಕೊಟ್ಟೆವಾಗಿ ಯೀ ಗ್ರಾಮದ
೧೨ ಚತುಃಸಿಮೇಯಲ್ಲೆಗು ನೆಟ್ಟಕಲ್ಲು೨೧ ಹುಟ್ಟುಕಲ್ಲು
೧೩ ೬ ವುಭೆಯ ಮುಕ್ಕಾಡೆ ಕಲ್ಲು೨೪ ರೊಳಗಾದ ಅರೆ
೧೪ ಕೆರೆಯೆಂಬ ಗ್ರಾಮವನು ಸ್ವರ್ನ್ನದಾರಾಪೂರ್ವ್ವಕ
೧೫ ಸರ್ವ್ವಮಾನ್ಯವಾಗಿ ಆಚಂದ್ರಾರ್ಕ್ಕಸ್ಥಾಯಿಯಾಗಿ ನೀನು
೧೬ ನಿಂನ್ನಪುತ್ರಪೌತ್ರ ಪಾರಂಪರ್ಯ್ಯವಾಗಿ ಸುಖದಲ್ಲಿ ಅ
೧೭ ನುಭವಿಸಿಕೊಂಡು ಬರುವಪ್ರಕಾರಕ್ಕೆ ಬರೆಸಿಕೊಟ್ಟ ಭೂ
೧೮ ದಾನಶಾಸನ ॥ ಎಕೈವಭಗಿನಿಲೋಕೆ..ಸರ್ವೇ
೧೯ ಷಾಮೇವಭೂಭಜಾಂ । ನಭೋಜ್ಯ(ಂ)ನಕರ
೨೦ ಗ್ರಾಹ್ಯವಿಪ್ರದತ್ತಾ ವಸುಂದರಾ ॥ ದಾನ
೨೧ ಪಾಲನಯೊರ್ಮ್ಮಧ್ಯ । ದಾನಚ್ಛ್ರೇಯೊನು
೨೨ ಪಾಲನಂ । ದಾನತ್ಸ್ವರ್ಗ್ಗಮವಾಪ್ನೋತಿ ಪಾ
೨೩ ಲನಾವಚ್ಯುತಂಪದಂ ॥೮॥

## ಶಾಸನದ ಸಂಕ್ಷಿಪ್ತ ವಿವರ

ಶಾಸನವು ಜಿನನ ಶ್ಲೋಕದೊಂದಿಗೆ ಪ್ರಾರಂಭಗೊಂಡಿದೆ. ನಂತರ ಕಾಲದ ಕಾಲದ ಉಲ್ಲೇಖದೊಂದಿಗೆ ಮೈಸೂರು ಅರಸ ಚಿಕ್ಕದೇವರಾಜ ಒಡೆಯರು ಅರಸಗೈಯುತಿದ್ದ ಬಗ್ಗೆ ಪ್ರಸ್ತಾಪಿಸುತ್ತದೆ. ಶಾಸನದ ವಸ್ತು ವಿಷಯವು ಚಿಕ್ಕದೇವರಾಜ ಒಡೆಯರವರು ಅರಿಕುಠಾರದ ಬೊಂಮರಸಪಂಡಿತನಿಗೆ ಸತ್ಯಗಾಲ ಹೋಬಳಿಯ ಮುಡಿಗೊಂಡಸ್ಥಳದ ಅರಕೆರೆ ಎಂಬ ಗ್ರಾಮವನ್ನು ದಾನ ನೀಡಿರುವ ಉಲ್ಲೇಖವಿದೆ. ಇದರ ಎಲ್ಲೆಗೆ ಒಟ್ಟು ೨೪ ಮುಕ್ಕೊಡೆ ಕಲ್ಲುಗಳನು ಹಾಕಿಸಿ ೨೧ ಹುಟ್ಟು ಕಲ್ಲುಗಳನ್ನು ಗುರುತು ಮಾಡಲಾಗಿದೆ. ಪ್ರಸ್ತುತ ಅರಕೆರೆ ಗ್ರಾಮವು ಸಂಪೂರ್ಣವಾಗಿ ನಶಿಸಿದು ಬೇಚಿರಾಕ್ ಆಗಿದೆ.





**ಶಾಸನದ ಪಡಿಯಚ್ಚು ತೆಗೆಯಲು ಸಹಕರಿಸಿದ ಗ್ರಾಮಸ್ಥರ ಜೊತೆಯಲ್ಲಿ**

ಈ ಶಿಲಾ ಶಾಸನದಲ್ಲಿ ಕಾಲವನ್ನು ಶಾಲಿವಾಹನ ಶಕವರುಷ ೧೬೧೦ ಸಂದ ವರ್ತಮಾನವಾದ ವಿಭವ ಸಂವತ್ಸರ ಾರ್ಗ್ಗಶಿರ ಶುದ್ದ ೧೩ ಎಂದು ದಾಖಾಲಾಗಿದೆ. ಇದು ಕ್ರಿ.ಶ. ೧೬೮೦ಕ್ಕೆ ಸರಿಹೊಂದುತ್ತದೆ. ಈ ಶಾಸನದ ಲಿಪಿಗೆ ಬಂಧಿಸಿದಂತೆ ಹೇಳುವುದಾರೆ ಮೈಸೂರು ಒಡೆಯರ ಕಾಲದ ಲಿಪಿಯನ್ನು ಲಿಪಿಕಾರನು ಗ್ರಾನೈಟ್ ಶಿಲೆಯಲ್ಲಿ ಚಿಕ್ಕದಾಗಿ ುರುವುದು ಹಾಗೂ ಒಂದು ಸಾಲನ್ನು ದೇವನಾಗರಿ ಲಿಪಿಯಲ್ಲಿ ಕೆತ್ತಿರುವುದು ವಿಶೇಷ.

ಒಟ್ಟಾರೆಯಾಗಿ ಈ ಶಾಸನ ಹೊರಡಿಸಿದ ಕಾಲದಲ್ಲಿ ಮೈಸೂರು ಒಡೆಯರ ಅರಸು ಮನೆತನದ ಆಳ್ವಿಕೆಯ ಲದಲ್ಲಿ ಜೈನ ಧರ್ಮವು ಇತರೆ ಧರ್ಮಗಳಂತೆ ರಾಜಾಶ್ರಯ ಪಡೆದುಕೊಂಡಿತ್ತು ಎಂಬುದು ಈ ಶಾಸನದಿಂದ ಷ್ಟವಾಗುತ್ತದೆ.

[ಈ ಶಾಸನವನ್ನು ಪಡಿಹಚ್ಚು ತೆಗೆಯಲು ಸಹಕಾರ ನೀಡಿದ ಅನಿಲ್.ಎಲ್. ಸಂಶೋಧಕರು, ಅವರಿಗೂ ಶಾಸನ ಓದಿ ತಿಳಿಸಿಕೊಟ್ಟ ಅನಿಲ್ ಮಾರ್ ಸಹಾಯಕ ಶಾಸನ ತಜ್ಞರು ಭಾರತೀಯ ಪುರಾತತ್ವ ಇಲಾಖೆ ಮೈಸೂರು, ಹಾಗೂ ಶಾಸನವನ್ನು ತೋರಿಸಿಕೊಟ್ಟ ಗ್ರಾಮಸ್ಥರಾದ ಸಿದ್ದಶೆಟ್ಟಿ, ಂದಶೆಟ್ಟಿ ಇವರಿಗೆ ನಮ್ಮ ಕೃತಜ್ಞತೆಗಳು.]



## ಆಕರಗ್ರಂಥಗಳು

ನಾಯಕ. ಹಾ.ಮಾ., ಕನ್ನಡ ವಿಷಯ ವಿಶ್ವಕೋಶ, ಸಂಪುಟ ಸಂಖ್ಯೆ ೫, ಮೈಸೂರು ವಿಶ್ವವಿದ್ಯಾನಿಲಯ, ೧೯೭೯.

ನಾಯಕ. ಹಾ.ಮಾ., ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ಸಂಖ್ಯೆ ೪, ಮೈಸೂರು ವಿಶ್ವವಿದ್ಯಾನಿಲಯ, ೧೯೭೫.

ನರಸಿಂಹಮೂರ್ತಿ. ಎ.ವಿ., ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು, ೨೦೦೬.

Dewan Bahadur LD Swamikannu Pillai, An Indian Ephemeris A.D. 700 to A.D.1799, Asian Educationl Services New Delhi -1987.

# ಎರೆಹಂಚಿನಾಳದ ಶಿಲಾಶಾಸನ

**ಮಹೇಶಕುಮಾರ ಹ. ಪಾಟೀಲ* ಅಶೋಕ ಕೆ. ಕಂದಗಲ್****

**ಕೊ**ಪ್ಪಳ ಜಿಲ್ಲೆ, ಕುಕನೂರು ತಾಲೂಕಿನ ಗ್ರಾಮ ಎರೆಹಂಚಿನಾಳದಲ್ಲಿ ಪ್ರೌಢಶಾಲೆಯ ಹೊಸ ಕಟ್ಟಡ ನಿರ್ಮಾಣದ ಸಮಯದಲ್ಲಿ, ಅಲ್ಲಿನ ಬೇವಿನಗಿಡದ ಬುಡದಲ್ಲಿದ್ದ ಸ್ತ್ರೀದೇವತೆಯ(ಉಡಚಮ್ಮ) ಮೂರ್ತಿಯನ್ನು ಸ್ಥಳಾಂತರಿಸುವಾಗ ಆ ಶಿಲಾಮೂರ್ತಿಯು ಮೂಲತಃ ಒಂದು ಶಿಲಾಶಾಸನವೆಂದು ಕಂಡುಬಂದಿದೆ. ಆ ಮೂರ್ತಿಯ ಹಿಂಭಾಗದಲ್ಲಿ ೧೭ ಸಾಲಿನ ಶಾಸನವಿದೆ. ಪ್ರಸ್ತುತ ಶಾಸನವಿರುವ ಶಿಲೆಯು ಬಳಪದ ಕಲ್ಲಿನದ್ದಾಗಿದೆ(ಸಿಸ್ಟ್). ತೃಟಿತಗೊಂಡಿರುವ ಶಾಸನದ ಅಳತೆ ೧.೫ ಅಡಿ ೧.೫ ಅಡಿ ಆಗಿರುತ್ತದೆ. ಕಾಲದ ಉಲ್ಲೇಖವಿಲ್ಲದ ಈ ಶಾಸನವು ಯಾದವ ಅರಸ ಕನರ ರಾಯನ ಕಾಲದ್ದಾಗಿದೆ. ಕ್ರಿ.ಶ. ೧೩ನೆಯ ಶತಮಾನದ ಈ ಶಾಸನವು ಜೈನಶಾಸನವಾಗಿದ್ದು, ಮೊದಲಿಗೆ ಶಾನ್ತಿನಾಥನನ್ನು ಸ್ತುತಿಸಿದೆ. ಮುಂದುವರೆದು ಜೈನಮುನಿ ಸೋಮಾದಿತ್ಯರನ್ನು ಹೊಗಳಲಾಗಿದ್ದು, ಅಲ್ಲಿ ನಿಷಧಿಯೊಂದನ್ನು ನಿಲ್ಲಿಸಿದ ವಿವರಗಳಿವೆ. ಯಾದವ ಅರಸ ಕನ್ನರರಾಯ ಈ ಸಮಯದಲ್ಲಿದ್ದು ದಾನ ನೀಡಿರುವ ಮಾಹಿತಿಯಿದೆ. ಆದರೆ ದಾನದ ಉಲ್ಲೇಖಗಳನ್ನು ಹೇಳುವಾಗ ಮುಂದೆ ಶಾಸನ ತೃಟಿತಗೊಂಡಿದೆ.

ಈ ಗ್ರಾಮದ ತುಂಬೆಲ್ಲಾ ದೇವಸ್ಥಾನದ ಅವಶೇಷಗಳು ಹಾಗೂ ಶಿಲಾಮೂರ್ತಿಗಳು ಅಲ್ಲಲ್ಲಿ ಚದುರಿಬಿದ್ದಿರುವುದು ಕಂಡುಬರುತ್ತದೆ. ಆದರೆ ಯಾವುದೇ ಪ್ರಾಚೀನ ದೇವಸ್ಥಾನ ಮಾತ್ರ ದೊರೆಯಲಿಲ್ಲ. ಈ ಕುರಿತು ನಾವು ಗ್ರಾಮದ ಹಿರಿಯರನ್ನು ಕಂಡು ಮಾತನಾಡಿಸಿದಾಗ ಅವರು ನಮಗೆ ಹಿಂದೆ ರಜಾಕಾರರ ಹಾವಳಿಯ ಸಮಯದಲ್ಲಿ ಊರನ್ನು ಹಾಳುಗೆಡವಿದ್ದರ ಕುರಿತು ಮಾಹಿತಿ ನೀಡಿದರು. ಹಾಗಾಗಿ ಬಹುಶಃ ಇಲ್ಲಿ ಜೈನ ಬಸದಿಯಿದ್ದು, ಅದು ಈಗ ಹಾಳಾಗಿರುವ ಸಾಧ್ಯತೆಯಿದೆ ಎಂದು ಹೇಳಬಹುದು.

**ಶಾಸನದ ಪಠ್ಯ**

೧) . . . . . . . . . . . . . . . . . . ಂ ನೋದ್ದಾಮಂ ಬ . .

೨) . . . . . . . ಸುತ್ರಾಮಂ ಶರ್ಮ್ಮದ ಶಾನ್ತಿನಾಥನೆಸೆವಂ ಪಿಂತಾ . .

೩) . . . . . . . ರ್ತ್ತಿ ಗಂಗಾಧವಳಿತ ಭುವನಾಶೇಷ ಭಬ್ಯಾಳಿ . .

೪) . . . . . . . ಕ್ಷ್ಮೀಧಾಮಂ ಶ್ರೀ ಶಾನ್ತಿನಾಥಂ ಸ್ತಿರ ಜಯನೆಸೆವಂ . .

೫) . . . . . . . ತ ವಿಜಯಶ್ರೀ ಲಲನಾ ಪತಿಯೆಸೆವಂ ಭೂಲೋ . .

೬) . . . . . . . ಯ ದಲ್ತೆ ಜಯಿಸುಗೆ ಭಬ್ಯಾಚರಣಂ ವಿನೆಯಜನ ಸು . .

೭) . . . . . . . ಚಾರಕತೆ ಬಂದಗೆ ಭಬ್ಯಾವಳಿಗಭ್ಯಸ್ತ ಬಹುಶಾಸ್ತ್ರ ತರ್ಕ್ಕ

೮) . . . . . . . ಕ್ಷರನಶೇಷರಂ ಜಿನಮೆನಿನಂ ಶಿಕ್ಷಾ ಚರಿತ್ರ ರತ್ನರನಕ್ಷ . .

೯) . . . . . . . ತದಂ ಲಸತ್ಸೋಮಾದಿತ್ಯ ದೃಢ ಪ್ರಭಾದಿಗರ ದಿಬ್ಯಾಂಗಂ ಜೀರ್ನ್ನೋ

೧೦). . . . . . . ಸಿದಿಗಿಗೆ ಜಯಮಂ ಚಂದ್ರಾರ್ಕ್ಕತಾರಂಬರಂ ಖಖ ನಿರುಪಮ ಪೃಥ್ವಿವಾ . . .

೧೧). . . . . . . ಮಳಿ ಕಹ್ನರರಾಯಂ ಖಖ ಸ್ವಸ್ತಿ ಸಮಸ್ತ ಪೃಥ್ವೀವಲ್ಲಭ ರಾಜಾಧಿ . . .

೧೨). . . . . . . ಸುಧಾರಕಮ ಚಂದ್ರಾದಿ ತಾರ ದಿನಪರತ ಪ್ರ

---

* ಸಹಾಯಕ ಉಪನ್ಯಾಸಕರು, ಇತಿಹಾಸ ವಿಭಾಗ, ಕರ್ನಾಟಕ ಕಲಾ ಮಹಾವಿದ್ಯಾಲಯ, ಧಾರವಾಡ, ಮೊ. ೯೮೪೫೨೨೨೨೬೧

** ಪ್ರಾಚಾರ್ಯರು, ಶಂಕ್ರಪ್ಪ ಸಕ್ರಿ ಪದವಿ ಪೂರ್ವ ಕಾಲೇಜು, ಬಾಗಲಕೋಟೆ.





೩). . . . . . . ಣಿ ಕಹ್ನರರಾಯಂ ಪ್ರೌಢ ಪ್ರತಾಪ ಚಕ್ರವರ್ತ್ತಿಯನ್ದಂ ಖಖ ಯಮೋ

೪). . . . . . . ಭಾಮಂಡಳ ವಿಮಳ ಯಶಃ ಕಾಳಾ . . . . ದಶೋ . .

೫). . . . . . . ಳಗೆಸೆವಂ ಸಿಂಹ . . ಸತ್ವಂ ನಿರುಪಮ . . . . . . . . . . .

೬). . . . . . . ಮೂರ್ತ್ತಿಯ ಸ್ಥಾನಕನೆ . . . . . . . . . . . . . . . . .

೭). . . . . . . . . . . . . . . . . . . . . . . . . . . . . . *

---

ಕೊನೆಯ ಎರಡು ಸಾಲಿನ ಅಕ್ಷರಗಳು ಅಸ್ಪಷ್ಟವಾಗಿವೆ.

[ಶಾಸನದ ಕುರಿತು ಮಾಹಿತಿ ನೀಡಿ ಹಾಗೂ ಕ್ಷೇತ್ರಕಾರ್ಯದಲ್ಲಿ ನಮಗೆ ಸಹಕರಿಸಿದ ಎನ್.ಕೆ. ಹನಸಿ ನಿವೃತ್ತ ಮುಖ್ಯೋಪಾಧ್ಯಾಯರು, ಶಿವಣ್ಣ ಬಾಳಗಿ ಮುಖ್ಯೋಪಾಧ್ಯಾಯರು, ಆರ್.ಬಿ. ಅಬ್ಬಿಗೇರಿ ಶಿಕ್ಷಕರಿಗೆ ಧನ್ಯವಾದಗಳು. ಹಾಗೂ ಓದಿ ಪಠ್ಯವನ್ನು ತಯಾರಿಸಿ ನೀಡಿರುವ ಶ್ರೀಮತಿ ನುಮಾಕ್ಷಿ ಗೋಗಿ ಅವರಿಗೆ ತುಂಬು ಹೃದಯದ ಧನ್ಯವಾದಗಳು.]



# ೨೨

# ಏಕಾಂತ ರಾಮಯ್ಯನ ಬೋಗಾವಿಯ ಹೊಸ ಶಾಸನ

ಕಲವೀರ ಮನ್ವಾಚಾರ*

ಹನ್ನೆರಡನೆಯ ಶತಮಾನ ಸಂಕೀರ್ಣ ಮತ್ತು ಸಂದಿಗ್ಧತೆಯ ಕಾಲಘಟ್ಟವೂ ಆಗಿದೆ. ಆರ್ಥಿಕ ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ಬದಲಾವಣೆಗಳಾಗುವ ಕಾಲವು ಆಗಿದೆ. ರಾಜ್ಯವ್ಯವಸ್ಥೆಯ ಆರಂಭಿಕ ಕಾಲದಿಂದ ಕಲ್ಯಾಣದ ಚಾಲುಕ್ಯರವರಗೆ ಕರ್ನಾಟಕವನ್ನು ಒಂದು ಕೇಂದ್ರೀಕೃತವಾದ ಆಡಳಿತ ಇದ್ದುದು, ತದ ನಂತರದಲ್ಲಿ ಹೊಯ್ಸಳರು ದಕ್ಷಿಣ ಕರ್ನಾಟಕವನ್ನೂ, ಉತ್ತರ ಕರ್ನಾಟಕವನ್ನು ಯಾದವರು ಆಡಳಿತ ನಡೆಸಿದ್ದ ನೋಡುತ್ತೇವೆ. ಕಲಚೂರಿಗಳು ಕಲ್ಯಾಣದ ಚಾಲುಕ್ಯರನ್ನು ಮೂಲೆಗೆ ತಳ್ಳಿದ್ದು ಕರ್ನಾಟಕದ ಆಡಳಿತದ ಮೇಲೆ ಗಮನಾರ್ಹವಾದ ಬದಲಾವಣೆಗೆ ಕಾರಣವಾಯಿತು. ರಾಜಕೀಯವಾಗಿ ಪ್ರಭುತ್ವಗಳ ಏಕಸ್ವಾಮ್ಯತೆಯನ್ನು ಕಳೆದುಕೊಂಡು ಬಡವಾಗುವ ಸ್ಥಿತಿಯನ್ನು ಹೊಂದುವುದಲ್ಲದೆ, ಸಣ್ಣಮಟ್ಟ ರಾಜಮನೆತನಗಳು ಹುಟ್ಟಿಕೊಂಡು ಒಂದು ಸ್ಥಿರವಾದ ರಾಜಮನೆತನಗಳು ಇಲ್ಲವಾಗುವ ಸಂದರ್ಭ. ಇದು ಒಂದು ರೀತಿಯ ಅರಾಜಕತೆಯ ಕಾಲ. ಇನ್ನೊಂದು ಕಡೆ ಆಕ್ರಮಣಕಾರರ ಕಾಲವೂ ಇದಾಗಿದೆ. ಸಾಮಾಜಿಕವಾಗಿ ಅಂದಿನ ಘಟ್ಟವನ್ನು ನೋಡಿದರೆ, ಸಂಕೀರ್ಣಗೊಳ್ಳುವ ಕಾಲ.

ಹತ್ತನೆಯ ಶತಮಾನದ ನಂತರದಲ್ಲಿ ಕರ್ನಾಟಕವನ್ನು ಧಾರ್ಮಿಕವಾಗಿ ನಿಯಂತ್ರಣ ಮಾಡಿದ್ದು ಕಾಳಾಮುಖ ಲಕುಲೀಶ ಪಂಥದವರು. ಹತ್ತನೆಯ ಶತಮಾನದ ಪೂರ್ವದಲ್ಲಿ ಧಾರ್ಮಿಕವಾಗಿ ದುರ್ಬಲವಾಗಿದ್ದ ಅವರು, ನಂತರದಲ್ಲಿ ಅವರಿಲ್ಲದ ಊರುಗಳಿಲ್ಲ ಎನ್ನುವ ಹಾಗೆ ಅತ್ಯುನ್ನತವಾದ ನೆಲೆ ತಲುಪಿದರು. ನಗರ ಕೇಂದ್ರಿತವಾಗಿದ್ದ ಧಾರ್ಮಿಕ ನೆಲೆಗಟ್ಟನ್ನು ಗ್ರಾಮಕೇಂದ್ರಿತವಾಗಿ ಮಾಡಿದ ಹೆಗ್ಗಳಿಕೆ ಕಾಳಾಮುಖರದ್ದು. ಅಲ್ಲದೆ ಗ್ರಾಮವನ್ನು ವ್ಯಾಪಾರಿ ಕೇಂದ್ರವಾಗಿ ಮಾಡಿದ್ದು ಅವರ ಕಾಲ. ಅಂದರೆ, ದೇವಾಲಯ ನಿರ್ಮಾಣ ಮಾಡುವುದು, ವ್ಯಾಪಾರಿಗಳು ಬಂದು ಹೋಗುವುದು ಆ ಮೂಲಕ ಸಂತೆಗಳು ಆಗುವಂತೆ ಮಾಡಲಾಯಿತು. ಇದು ಕೃಷಿ ಸಮುದಾಯಗಳು ನೇರವಾಗಿ ಇದರಲ್ಲಿ ಪಾಲ್ಗೊಳ್ಳುವಂತೆ ಮಾಡುವುದು ಒಂದು ಕಡೆಯಾದರೆ, ಮತ್ತೊಂದು ಕಡೆ ಮೋಕ್ಷ ಎನ್ನುವುದು ದೂರದ ಮರೀಚಿಕೆಯಾಗದೆ ಅವರ ಹತ್ತಿರವೆ ದೊರಕುವಂತೆ ಮಾಡಿದ್ದು ಕಾಳಾಮುಖರು. ಅವರ ವಾದವೇ ಹವನ ಹೋಮಾದ್ವಾರಗಳಿಂದ ದೊರಕದ ಮುಕ್ತಿ ಒಂದು ಲಿಂಗವನ್ನು ಸ್ಥಾಪಿಸುವುದರಿಂದ ದೊರಕುತ್ತದೆ ಎನ್ನುವುದು ಅವರ ವಾದವಾಗಿದ್ದುದು ಜನಪ್ರಿಯತೆಗೆ ಪ್ರಮುಖ ಕಾರಣವೆನ್ನಬಹುದು. ತಳಸಮುದಾಯಗಳು ಎನ್ನಬಹುದಾದ ಅನೇಕ ಸಮುದಾಯಗಳು ತಮ್ಮದೇ ಹೆಸರಿನಲ್ಲಿ ಅಥವಾ ಸಮುದಾಯದ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಿದರು. ವೃತ್ತಿಗಾರರು ತಮ್ಮದೇ ಆದ ಶ್ರೇಣಿಗಳ ಹೆಸರಿನಲ್ಲಿ ದೇವಾಲಯ ನಿರ್ಮಾಣ ಮಾಡಿದ್ದು ಈ ಕಾಲಘಟ್ಟದ ವಿಶೇಷ ಎನ್ನಬಹುದು. ದೇವಾಲಯವೆನ್ನುವುದು ಸಾಂಸ್ಕೃತಿಕ, ಆರ್ಥಿಕ ಕೇಂದ್ರವಾಗಿದ್ದು ಈ ಕಾಲಘಟ್ಟದಲ್ಲಿ. ಪ್ರತಿ ಗ್ರಾಮವು ದೇವಾಲಯಗಳ ಸ್ಥಾನವಾಗುವ ಮೂಲಕ ಆರ್ಥಿಕ ಕೇಂದ್ರವಾಗುವತ್ತ ಜಗಿತವನ್ನು ಕಂಡಿತು. ಅಬ್ಬಲೂರು ಒಂದು ಸಾಮಾನ್ಯ ಗ್ರಾಮವಾಗಿದ್ದುದು, ಬ್ರಹ್ಮೇಶ್ವರ ದೇವಾಲಯ ನಿರ್ಮಾಣವಾಗುತ್ತಲೇ ಅದಕ್ಕೊಂದು ಧಾರ್ಮಿಕ, ಆರ್ಥಿಕ ಸ್ಥಾನಮಾನಗಳು ಪ್ರಾಪ್ತವಾಯಿತು.

## ಏಕಾಂತದ ರಾಮಯ್ಯ ಮತ್ತು ಅಬ್ಬಲೂರು ಶಾಸನ

ಏಕಾಂತದ ರಾಮಯ್ಯ ಕನ್ನಡ ಸಾಹಿತ್ಯ ಮತ್ತು ಶಾಸನಗಳಲ್ಲಿ ಪ್ರಮುಖವಾಗಿ ಕಾಣುವ ವ್ಯಕ್ತಿಗಳಲ್ಲಿ ಪ್ರಮುಖನಾದವನು. ತನ್ನ ಪವಾಡದ ಮೂಲಕ ಚರಿತ್ರೆಯಲ್ಲಿ ಚರ್ಚೆಗೆ ಕಾರಣವಾಗಿರುವ, ಅದರಲ್ಲೂ ಜೈನರೊಡನೆ ಹೋರಾಡಿ (ವೀರ)ಶೈವ ಮತೋದ್ಧಾರಕನೆಂದು, ಪ್ರತಿಷ್ಠಾಪನಾಚಾರ್ಯನಾಗಿ ಹರಿಹರನಿಂದ ಮೊದಲುಗೊಂಡು ಆಧುನಿಕ ವಿದ್ವಾಂಸರಿಂದ ಹೊಗಳಿಕೆಗೆ ಪಾತ್ರನಾಗಿದ್ದಾನೆ. ವೀರಶೈವ ಸಾಹಿತ್ಯವಂತೂ ಅವನನ್ನು ತನ್ನ ಮುಖವಾಣಿಯಾಗಿ, ನಾಯಕನಾಗಿ ಮಾಡಿಕೊಂಡು ಆದರ್ಶ ವ್ಯಕ್ತಿಯನ್ನಾಗಿ ಮಾಡಿಕೊಂಡಿದೆ. ಅದಕ್ಕೆ ಕಾರಣವಾದುದು, ಅವನ 'ಶಿರಸ್ಪವಾಡ'ದ ಕಥೆ. ಅಬ್ಬಲೂರಿನ ಶಾಸನ ಈ

* ಪ್ರಾಧ್ಯಾಪಕರು, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಮೊ. ೯೪೪೯೦೨೧೯೪೯

ಥೆಯನ್ನು ಹೆಣೆಯುವ ಮೂಲಕ ಮೊದಲುಗೊಂಡು, ಹರಿಹರನಿಂದ 'ಏಕಾಂತದ ರಾಮಯ್ಯಗಳ ರಗಳೆ' ರಚಿತವಾಯಿತು. ಲ್ಲಿಂದ ಪ್ರಾರಂಭಗೊಂಡ ಏಕಾಂತದ ರಾಮಯ್ಯಗಳ 'ಪುರಾಣ' ಶಾಂತನಿರಂಜನ ಕವಿಯ 'ಅಬ್ಬಲೂರು ಚರಿತೆ'ಯ ತಂತ್ರ ಕಾವ್ಯ ರಚನೆಯವರೆಗೆ ಬಂದು ನಿಲ್ಲುತ್ತದೆ. ಮಧ್ಯದಲ್ಲಿ ಅನೇಕರು ಏಕಾಂತದ ರಾಮಯ್ಯಗಳನ್ನು ಹೆಸರಿಸುವ ಮೂಲಕ ಅವನನ್ನು ಆದರ್ಶವ್ಯಕ್ತಿಯನ್ನಾಗಿ ಮಾಡಿಕೊಂಡರು. ಆಧುನಿಕ ವಿದ್ವಾಂಸರು ಶಿರಸ್ಪವಾಡದ ಕಲ್ಪನೆಯನ್ನು ಯಥಾವತ್ತಾಗಿ ತೆಗೆದುಕೊಂಡು, ವೀರಶೈವ ಮತೋದ್ಧಾರಕನೆಂದು ಕೀರ್ತಿಸಿದ್ದಾರೆ. ಅದರಲ್ಲಿ ಡಾ ನಾಗಭೂಷಣ ಅವರ ಏಕಾಂತ ರಾಮಯ್ಯ ಮತ್ತು ಆದಯ್ಯ' ಕೃತಿಯನ್ನು ಹೆಸರಿಸಲೇ ಬೇಕು. ಅಲ್ಲದೆ, ಹಿರಿಯ ವಿದ್ವಾಂಸರು ಇದಕ್ಕೆ ನಿಗೂಡಿಸಿರುವುದು ಕಾಣುತ್ತೇವೆ.

ಹಾಗಾದರೆ, ಏಕಾಂತ ರಾಮಯ್ಯ ಯಾರು? ಅವನ ಕಾರ್ಯಕ್ಷೇತ್ರ ಯಾವುದು? ಯಾಕಾಗಿ ಕರ್ನಾಟಕದ ಮಧ್ಯ ಭಾಗಕ್ಕೆ ಬಂದ? ಬಂದವನು ಜೈನರೊಡನೆ ಸಂಘರ್ಷಿಸಲು ಏನು ಕಾರಣ? ಅಬ್ಬಲೂರು ಅಂದು ಜೈನರ ಆಡಂಬೊಲವಾಗಿತ್ತೆ? ಜೈನರ ಬಸದಿಗಳನ್ನು ಒಡೆದು ಹಾಕುವುದು ಅವನ ಉದ್ದೇಶವಾಗಿತ್ತೆ? ಒಡೆದು ಹಾಕುವುದು ಅವನ ಉದ್ದೇಶವೆ ಆಗಿದ್ದರೆ, ಒಬ್ಬನಿಂದ ಆ ಕೆಲಸ ಸಾಧ್ಯವಾಗಿತ್ತೆ? ಅಥವಾ ಅವನ ಸಂಗಡ ಸಂಘಟನೆಯೊಂದು ಇತ್ತೆ? ಅಥವಾ ದೇವಾಲಯ ನಿರ್ಮಾಣಮಾಡುವುದು ಅವನ ಕಾಯಕವಾಗಿತ್ತೆ? ಏಕಾಂತವೆಂದರೆ ಏನು? ಅಬ್ಬಲೂರು ಪ್ರದೇಶದಲ್ಲಿ ಶಿರಸ್ಪವಾಡದ ಐತಿಹ್ಯವೊಂದು ಪ್ರಚಲಿತವಿದ್ದು ಅದಕ್ಕೂ ಏಕಾಂತದ ರಾಮಯ್ಯನಿಗೂ ಏನಾದರೂ ಸಂಬಂಧವಿದೆಯಾ? ಇಂತಹ ಹಲವಾರು ಪ್ರಶ್ನೆಗಳನ್ನು ಹುಟ್ಟಿಕೊಳ್ಳುತ್ತವೆ. ಅವುಗಳಿಗೆ ಉತ್ತರ ಹುಡುಕುವ ಪ್ರಯತ್ನವನ್ನು ಬೋಗಾವಿಯ ಶಾಸನದ ಹಿನ್ನೆಲೆಯಲ್ಲಿ ಈ ಲೇಖನದಲ್ಲಿ ಮಾಡಿದ್ದೇನೆ.

ಸುಮಾರು ಹನ್ನೆರಡನೆಯ ಶತಮಾನದಲ್ಲಿ ರಚಿತವಾಗಿದೆ ಎಂದು ನಂಬಲಾಗಿರುವ ಅಬ್ಬಲೂರು ಶಾಸನವು ಏಕಾಂತದ ರಾಮಯ್ಯನು ಜೈನರೊಡನೆ ನಡೆಸಿದ ಹೋರಾಟವನ್ನು ಹಾಗೂ ಜೈನ ಧರ್ಮದ ವಿರುದ್ಧ ನಡೆಸಿದ ಜಯವನ್ನು ದಾಖಲಿಸುವುದಾಗಿದೆ. ಕರ್ನಾಟಕದಲ್ಲಿ ಮೊದಲ ಬಾರಿಗೆ ಜೈನ ಮತ್ತು ಶೈವರೊಡನೆ ನಡೆದ ಸಂಘರ್ಷವನ್ನು ತಿಳಿಸುತ್ತದೆ. ಶಾಸನದ ಆರಂಭ ಶಿವಸ್ತುತಿಯಿಂದ ಆರಂಭವಾಗುತ್ತದೆ. ಶಿವಸ್ತುತಿ, ಭರತ ಖಂಡ, ಕುಂತಳ, ಅಳಂದೆ ವರ್ಣನೆಗಳು ಮಾತ್ರ ಕಾಣುತ್ತವೆ. ನೇರವಾಗಿ ಕಥಾ ಹಂದರಕ್ಕೆ ಜಿಗಿಯುತ್ತದೆ. ನಂತರ ಬಿಜ್ಜಳನ ವರ್ಣನೆ ಬರುತ್ತದೆ. ಅದು ಹರಿಹರನ ಕರ್ತಾರನ ಕಮ್ಮಟದ ಪರಿಕಲ್ಪನೆಯಂತೆ ದೇವಲೋಕದ ಅಮರಾವತಿಯಂತೆ ಇದ್ದ ಅಳಂದೆಯಲ್ಲಿ ಸುಕೇಶಿ, ಮಂಜುಘೋಷೆಯರು ಶ್ರೀವತ್ಸ ಗೋತ್ರದ ವೇದವೇದಾಂಗಗಳಲ್ಲಿ ಪ್ರಾವೀಣ್ಯನಾದ ಪುರುಷೋತ್ತಮ ಭಟ್ಟ, ಪದ್ಮಾಂಬಿಕೆಯರಾಗಿ ಜನ್ಮತಳೆದರು. ಅವರಿಗೆ ದೀರ್ಘಕಾಲದಲ್ಲಿ ಮಕ್ಕಳಾಗದ ಕಾರಣ ಶಂಭುವನ್ನು ಪೂಜಿಸಿದರು. ಅವರ ಪೂಜೆಗೊಲಿದ ಶಂಭು ವೀರಭದ್ರನ್ನು ಕರೆದು ಭೂಮಿಯಲ್ಲಿ ಜೈನ, ಬೌದ್ಧರ ಪ್ರಾಬಲ್ಯ ಹೆಚ್ಚಾಗಿದೆ, ನೀನು ರಾಮಯ್ಯನಾಗಿ ಹುಟ್ಟು ಎಂದು ಆದೇಶವನ್ನು ಮಾಡುತ್ತಾನೆ. ಅದರಂತೆ ವೀರಭದ್ರನು ಅವರ ಕನಸಿನಲ್ಲಿ ಬಂದು ನಾನು ನಿಮ್ಮಲ್ಲಿ ಹುಟ್ಟುತ್ತೇನೆ ಎಂದು ಹೇಳುತ್ತಾನೆ. ಅದರಂತೆ ಮಗು ಜನನವಾಗುತ್ತದೆ. ಹುಟ್ಟಿದ ಮಗುವಿಗೆ ಸೋಮನೆಂದು ಹೆಸರಿಡದೆ ರಾಮನೆಂದು ಹೆಸರನ್ನು ಇಡುತ್ತಾರೆ. ಕಾಲಾನಂತರದಲ್ಲಿ ತನ್ನ ಹುಟ್ಟಿನ ಕಾರಣವನ್ನು ತಿಳಿದ ರಾಮ ಶಿವಯೋಗಯುಕ್ತನಾಗಿ ನಿಸ್ಪೃಹ ವೃತ್ತಿಯಿಂದ ಚರಿಯುಸುತ್ತ ಅಬ್ಬಲೂರಿಗೆ ಬಂದ.

ಈ ಸಂದರ್ಭದಲ್ಲಿಯೇ ಏಕಾಂತ ಎಂಬ ಹೆಸರು ಬಂದುದನ್ನು ಶಾಸನ ಹೀಗೆ ಹೇಳುತ್ತದೆ

ಏಕಾಗ್ರಭಕ್ತಿ ಯೋಗದಿ ನೇಕಾಕಿಯೆನಲ್ಕೆ ಸಂದು ಶಿವನಂ ಪಿರಿದ । ಪ್ಪೇಕಾನ್ತದೊಳಾರಾಧಿಸಿ ಯೇಕಾನ್ತದ ರಾಮಯ್ಯನೆಂಬ ಹೆಸರಂ ಪಡೆದಂ ॥

ಹೀಗೆ ಸಂಚರಿಸುತ್ತ ಅಬ್ಬಲೂರಿಗೆ ಬಂದ ಏಕಾಂತದ ರಾಮಯ್ಯ ಬ್ರಹ್ಮೇಶ್ವರ (ಇಂದಿನ ಬಸವೇಶ್ವರ ದೇವಾಲಯ) ದೇವಾಲಯಕ್ಕೆ ಬರುತ್ತಾನೆ. ಅಲ್ಲಿ ನಿಸ್ಪೃಹ ವೃತ್ತಿಯಿಂದ ಇರುತ್ತಿರಲು, ಕೆಲ ಜೈನರು, ಸಂಕಗೌಡನೊಡನೆ ಸೇರಿ ಕೈವಾರಿಸುತ್ತಿರಲು, ಅಲ್ಲಿಂದ ಅವರನ್ನು ಹೊರದೂಡಲು ಪ್ರಯತ್ನಿಸುತ್ತಾನೆ ರಾಮಯ್ಯ. ರಾಮಯ್ಯನಿಗೂ ಸಂಕಗಾವುಂಡನಿಗೂ ಶಿವ ಹೆಚ್ಚೋ, ಜಿನ ಹೆಚ್ಚೋ ಎಂದು ವಾಗ್ವಾದವಾಗುತ್ತದೆ. ಶಿವನೇ ಹೆಚ್ಚೆನ್ನುವುದಾದರೆ ತಲೆಯನ್ನು ಕತ್ತರಿಸಿಕೊಂಡು ಮತ್ತೆ ಶಿರವನ್ನು ಪಡೆ ನೀನೇ ಭಕ್ತನಾತನೇ ದೇವಂ" ಎಂದು ಒಪ್ಪಿಕೊಳ್ಳಬಹುದು ಎನ್ನುತ್ತಾನೆ ಸಂಕಗಾವುಂಡ. ಹಾಗಾದರೆ ಏನು ಪಣ ಎಂದು ರಾಮಯ್ಯ ಪಣವೊಡ್ಡುತ್ತಾನೆ. 'ಜಿನ ವಿಗ್ರಹವನ್ನು ತೆಗೆದು ಶಿವನನ್ನು ನಿಲುಪೆವು' ಎಂದಾಗ ಓಲೆಯನ್ನು ಪಡೆದ ಏಕಾಂತದ ರಾಮಯ್ಯ ಖಡ್ಗದಿಂದ ಹುಲ್ಲಕಟ್ಟನರಿವಂತೆ" ತನ್ನ ಶಿರವನ್ನು ಕೊಯ್ದುಕೊಂಡ. ಹೀಗೆ ಕತ್ತರಿಸಿಕೊಂಡ

ಶಿರವನ್ನು ಏಳು ದಿನಗಳ ನಂತರದಲ್ಲಿ ಮರಳಿ ಶಿರವನ್ನು ಪಡೆದ ರಾಮಯ್ಯ, ಜೈನರೆಲ್ಲರನ್ನು ಒಬ್ಬನೆ ಕೊಂದುಹಾಕಿದ. ದೂರನ್ನು ಬಿಜ್ಜಳನ ಬಳಿ ತೆಗೆದುಕೊಂಡ ಹೋದ ಜೈನರು ರಾಮಯ್ಯನ ವಿರುದ್ಧ ದೂರಿದರು. ಏಕಾಂತದ ರಾಮಯ್ಯನನ್ನು ಕರೆದು ಕೇಳಿದಾಗ ಕೊಟ್ಟ ಓಲೆಯನ್ನು ತೋರಿಸಿದ. ಮತ್ತೊಮ್ಮೆ ಆ ಪವಾಡವನ್ನು ಮಾಡುವಂತೆ ಕೋರಿದ ಬಿಜ್ಜಳ. ಆದರೆ, ಜೈನರೆ ಬೇಡವೆಂದು ಹಿಂದೆ ಸರಿದರು. ಏಕಾಂತದ ರಾಮಯ್ಯನಿಗೆ ಜಯಪತ್ರವನ್ನು ಕೊಟ್ಟು, ಸತ್ತಳಿಗೆ-೭೦ರ ಗೋಗಾವೆ(ಬೋಗಾವೆ) ಗ್ರಾಮವನ್ನು ದಾನವಾಗಿ ಕೊಟ್ಟ. ಕಲಚೂರಿಗಳ ನಂತರದಲ್ಲಿ ಬಂದ ತ್ರಿಭುವನಮಲ್ಲ ಸೋಮೇಶ್ವರದೇವ (ಮೂರನೆಯ ತೈಲ) ಏಕಾಂತದ ರಾಮಯ್ಯನು ಜಿನ ಬಸದಿಯನ್ನು ಹಾಳುಮಾಡಿ "ವೀರಸೋಮನಾಥದೇವರ ಪ್ರತಿಷ್ಠೆ ಮಾಡಿ ಶಿವಾಗಮೋಕ್ತವಾಗೆ ಪರ್ಬ್ಬತ ಪ್ರಮಾಣದ ದೇಗುಲಮಂ ಮಾಡಿದರೆಂಬ" ಸಾಹಸವನ್ನು ಕೇಳಿ ಭಿನ್ನವತ್ತಳೆಯನ್ನು, ಅಬ್ಬಲೂರು ಗ್ರಾಮವನ್ನು ದಾನವಾಗಿ ಬಿಡುತ್ತಾನೆ. ಹಾಗೆಯೆ, ಮಂಡಳೇಶ್ವರನಾದ ಕಾಮದೇವನು ಮುಣ್ಡಗೋಡ ಸಮೀಪದ ಜೋಗೇಶ್ವರವನ್ನು ಬಿಡುತ್ತಾನೆ. ಮಲ್ಲಿದೇವರಸನು ನಾಗರಖಂಡ-೭೦ರೊಳಗಣ ಗ್ರಾಮವೊಂದನ್ನು ದಾನವಾಗಿ ಬಿಡುತ್ತಾನೆ. ಇದು ಅಬ್ಬಲೂರಿನ ಶಾಸನೋಕ್ತ ಏಕಾಂತದ ರಾಮಯ್ಯನ ಚರಿತ್ರೆಯಾದರೆ, ಇದಕ್ಕೆ ಭಿನ್ನವಾದ ವ್ಯಾಖ್ಯಾನಗಳು ಸೇರಿ ಮೈಯ್ಗೆಡದ ಹಾಗೆ ಕಥೆಯನ್ನು ಕಟ್ಟಲಾಗಿದೆ. ಹರಿಹರನಾಗಲಿ, ಶಾಂತನಿರಂಜನ ಅಥವಾ ಮುಂದೆ ಬಂದ ವೀರಶೈವ ಕವಿಗಳು ಉದಾಹರಿಸುತ್ತಾ, ಅಲ್ಪಸ್ವಲ್ಪ ಬೆಳೆಸುತ್ತಾ ಬಂದಿದ್ದಾರೆ. ಅಬ್ಬಲೂರು ಪ್ರದೇಶದಲ್ಲಿ ಇದಕ್ಕೆ ಸಮಾನಾಂತರವಾಗಿ ಶಿರಸ್ಪವಾಡದ ಐತಿಹ್ಯವೊಂದು ಪ್ರಚಲಿತದಲ್ಲಿದೆ. ಹೆಸರುಗಳು ಬೇರೆಯಾದರು ಕಥೆ ಮಾತ್ರ ಒಂದೆಯಾಗಿರುವುದು ಈ ಐತಿಹ್ಯದ ವಿಶೇಷ.

**ಏಕಾಂತದ ರಾಮಯ್ಯ, ಎಲ್ಲಿಯವನು? ಯಾರು?**

ಏಕಾಂತದ ರಾಮಯ್ಯ ಎಲ್ಲಿಯವನೆಂಬ ಬಗೆಗೆ ಯಾರಿಗೂ ಸಂದೇಹಗಳಿಲ್ಲ. ಶಾಸನವಾಗಲಿ, ಹರಿಹರನಾಗಲಿ ಸ್ಪಷ್ಟವಾಗಿ ಅಳಂದೆಯಿಂದ ಬಂದವನೆಂದು ಖಂಡಿತವಾಗಿ ಹೇಳುತ್ತವೆ. ಅಬ್ಬಲೂರು ಪ್ರದೇಶದಲ್ಲಿರುವ ಐತಿಹ್ಯ ಕೂಡ ಬೇರೆ ಪ್ರದೇಶದಿಂದ ಬಂದವರೆಂದು ತಿಳಿಸುತ್ತದೆ. ಇವನು ಯಾರು ಎಂಬ ಬಗೆಗೆ ಭಿನ್ನ ಧ್ವನಿಯಲ್ಲಿ ಹೇಳುವುದಿಲ್ಲ. ಅಬ್ಬಲೂರು ಶಾಸನವು 'ವೇದ ವೇದಾಂಗವಿದಂ ಪಾವನ ಚರಿತಗುಣ ಸದ್ಭಾವ ಪುರುಷೋತ್ತಮ ದ್ವಿಜೋತ್ತಮ' ನಾದ ಪುರುಷೋತ್ತಮ ಭಟ್ಟನೆಂದು, ತಾಯಿ ಪದ್ಮಾಂಬಿಕೆ ಎನ್ನುತ್ತದೆ. ಇದನ್ನೆ 'ಅಬ್ಬಲೂರು ಚರಿತೆ' ಅನುಮೋದಿಸುತ್ತದೆ.

ಅಬ್ಬಲೂರು ಶಾಸನವು ಏಕಾಂತದ ರಾಮಯ್ಯನು ಶ್ರೀವತ್ಸ ಗೋತ್ರದ ಬ್ರಾಹ್ಮಣನಾಗಿದ್ದು ವೇದಗಳಲ್ಲಿ ಪಾರಂಗತನಾಗಿದ್ದ ಪುರೋಷೋತ್ತಮ ಭಟ್ಟನ ಮಗನಾಗಿ ಜನ್ಮತಳೆದನು ಎನ್ನುತ್ತದೆ ಶಾಸನ. ಅಲ್ಲದೆ, ಬಂದಳಿಕೆ ಶಾಸನವು ಏಕಾಂತದ ರಾಮಯ್ಯನ ಮೊಮ್ಮಗನ ಉಲ್ಲೇಖಿಸುವಾಗ ರಾಮಭಟ್ಟನ ಹೆಸರು ಬರುತ್ತದೆ. ಇದೇ ಆಕರಗಳನ್ನಿಟ್ಟುಕೊಂಡು ವಿದ್ವಾಂಸರು ಶೈವಬ್ರಾಹ್ಮಣನಾಗಿರಬೇಕು ಎಂದು ತರ್ಕಿಸಿದ್ದಾರೆ. ಬ್ರಾಹ್ಮಣ ಎಂಬುದು ಇಂದಿನ ಒಂದು ಜಾತಿಯಾಗಿರುವ ಹಾಗೆ ಪ್ರಾಚೀನ ಭಾರತದಲ್ಲಿ ಕಾಣುವುದಿಲ್ಲ. ಬದಲಾಗಿ ಅನೇಕ ಕೆಳವರ್ಗಗಳು ಇದರಲ್ಲಿ ಭಾಗವಹಿಸುವ ಮೂಲಕ ತಮ್ಮದೇ ಆದ ಧಾರ್ಮಿಕ ಆವಿಷ್ಕಾರಗಳನ್ನು ರೂಢಿ ಮಾಡಿಕೊಂಡಿದ್ದರು. ವೈದಿಕ ನಂಬಿಕೆಗಳಿಗೆ ವಿರುದ್ಧವಾಗಿ, ಅದರಲ್ಲೂ ಅತೀಯಾದ ಆಚರಣೆಗಳಿಗೆ ವಿರುದ್ಧವಾಗಿ ಬಂಡೆದ್ದ ರೀತಿಯಲ್ಲಿ ಸ್ಥಳೀಯ ಸಮುದಾಯಗಳ ನಂಬಿಕೆಗಳು ಪ್ರಾಬಲ್ಯವನ್ನು ಹೊಂದುವುದನ್ನು ಈ ಕಾಲಘಟ್ಟ ತಿಳಿಸುತ್ತದೆ. ಹೀಗೆ ಬಂಡೆದ್ದ ಸಮುದಾಯಗಳು ವೈದಿಕ ಆಚರಣೆಗಳಿಗೆ ಮುಖಾಮುಖಿಯಾಗುವ ಸಂದರ್ಭ ಒದಗಿದಾಗ ಅಲ್ಲಿ ವೈದಿಕ ಪ್ರವೇಶ ಪಡೆಯಿತು. ವೈದಿಕವು 'ಕಾಯಕ' ಅಥವಾ 'ಕ್ರಿಯೆ'ಗೆ ಅದು ಮಹತ್ವವನ್ನು ಕೊಡಲಿಲ್ಲ. ಜ್ಞಾನವನ್ನು ತೋರಿ ಉಂಬ ಸಾಧನವಾಗಿ ಮಾಡಿಕೊಂಡಿದ್ದು ಅದರ ಸಾಧನೆಯಾಗುತ್ತದೆ. ಅದಕ್ಕೆ ವಿರುದ್ಧವಾಗಿ ಕ್ರಿಯೆಯನ್ನು ಸಾಧನವಾಗಿ ಮಾಡಿಕೊಂಡು ಸಮುದಾಯದ ಸಾಮಾಜಿಕ, ಧಾರ್ಮಿಕ ಒಳಿತಿಗಾಗಿ ಶ್ರಮಿಸಿದ್ದು ವೃತ್ತಿನಿರತ ಕುಶಲಕರ್ಮಿಗಳು. ಇದನ್ನು ಡಾ. ಮಸು ಕೃಷ್ಣಮೂರ್ತಿ ಅವರು ಸ್ಪಷ್ಟಪಡಿಸುತ್ತಾರೆ. "ಮಧ್ಯಕಾಲೀನ ಲೋಕಪರ ಸಾಧನೆಗಳಲ್ಲಿ ವೈಯಕ್ತಿಕ ಮಹತ್ವ ಕೊಡಲಾಯಿತು. ವ್ಯಕ್ತಿ ಪ್ರಮುಖ ಎಂಬುದಕ್ಕೆ ಕಾರಣ ಉತ್ಪಾದನೆಯ ರೂಪದಲ್ಲಿ ಬಹುಪಾಲು ಶಿಲ್ಪಿಗಳು ಸ್ವತಃ ಶಿಲ್ಪದ ಪೂರ್ಣ ರೂಪಗಳನ್ನು ತಾವೇ ಮಾಡಿಕೊಳ್ಳುತ್ತಿದ್ದರು; ಮತ್ತು ವಿಕ್ರೆತರರೂ ತಾವೇ ಆಗಿದ್ದರು. ಈ ಕಾರಣದಿಂದ ಧರ್ಮಸಾಧನೆಯಲ್ಲೂ ವ್ಯಕ್ತಿಗೆ ಮಹತ್ವ ದೊರೆಯಿತು" ಎನ್ನುತ್ತಾರೆ. (ಸಿದ್ಧ ಸಾಹಿತ್ಯ, ಪು. ೮೭). ಈ ಕಾಲದ ಅನೇಕರು ತಮ್ಮನು ಬ್ರಾಹ್ಮಣರೆಂದು ಕರೆದುಕೊಂಡಿದ್ದಾರೆ. ಅದನ್ನು ಮಸು ಕೃಷ್ಣಮೂರ್ತಿಯವರು ಚರ್ಚಿಸಿದ್ದಾರೆ. ಹಾಗೆಯೇ ಅವರನ್ನು ದ್ವಿಜರೆಂದೂ ಕರೆಯಲಾಗಿದೆ. ಶಾಸನಗಳಲ್ಲಿ ದ್ವಿಜ ಹಾಗೂ ಬ್ರಾಹ್ಮಣ ಎನ್ನುವ ಶಬ್ದಗಳು, ಜೊತೆಯಲ್ಲಿ ಗೋಬ್ರಾಹ್ಮಣ, ದೇವಬ್ರಾಹ್ಮಣ ಎನ್ನುವ ಶಬ್ದಗಳು ಬಳಕೆಯಲ್ಲಿ ಆಗುತ್ತವೆ. ಗೋಬ್ರಾಹ್ಮಣ ಎನ್ನುವುದು ವೈದಿಕ ಬ್ರಾಹ್ಮಣರನ್ನು,

ವಬ್ರಾಹ್ಮಣ ಎನ್ನುವುದು ದೇವರನ್ನು ನಿರ್ಮಿಸುವ ವರ್ಗಕ್ಕೆ ಕರೆಯಲಾಗುತ್ತಿತ್ತು. ಬ್ರಾಹ್ಮಣ ಎನ್ನುವುದು ವೈದಿಕ ಬ್ರಾಹ್ಮಣರಿಗೆ ನ್ನುವುದು ನಿಶ್ಚಳವಾಗಿದೆ. ಬ್ರಾಹ್ಮಣ, ಕ್ಷತ್ರಿಯ, ಹಾಗೂ ವೈಶ್ಯ ಈ ಮೂರು ವರ್ಣಗಳಿಗೆ ದ್ವಿಜರೆಂದು 'ಹಲಾಯುಧ', ಂಗರಾಜ ನಿಘಂಟು' ಹೇಳುತ್ತದೆ. ಇದನ್ನೇ ಪಂಪ ತನ್ನ 'ಆದಿ ಪುರಾಣ'ದಲ್ಲಿ "ಆರುಂ ವೃತ್ತಿಗಳನಿವಂ ಮೀರಿದರೆಲ್ಲರ್ ಜನ್ಮರೀ ಬೇರಾದರ್ ದ್ವಿಜರುಂಟೇಂ ಬೇರುಂಟೆ ಮನುಷ್ಯ ಜಾತಿ ತಾನೊಂದೆ ವಲಂ" (ಆದಿಪುರಾಣ ೧೫-೧೪) ಜರಾಗುವುದೆಂದರೆ ಆರು ವೈರಿಗಳನ್ನು ಕೊಂದವರು. ಅವರೆ ದ್ವಿಜರು, ಎಲ್ಲರೂ ದ್ವಿಜರಾಗಲು ಅರ್ಹರು ಎನ್ನುತ್ತಾನೆ ಂಪ. ಮಧ್ಯಕಾಲೀನ ಕರ್ನಾಟಕದ ಚರಿತ್ರೆಯನ್ನು ಗಮನಿಸಿದರೆ, ಶಿಲ್ಪಿಗಳು ಅತ್ಯಂತ ಪ್ರಭಾವಯುತರಾಗಿದ್ದುದನ್ನು ಕಾಣುತ್ತೇವೆ. ್ರಹ್ಮಣ್ಯ ಎನ್ನುವುದು ಏಕಾಕೃತಿಯಲ್ಲಿ ಬೆಳೆದು ಬಂದುದಲ್ಲ. ಬಹು ಸಮುದಾಯಗಳ ಕೂಡುವಿಕೆಯಿಂದ ನಿರ್ಮಿತವಾಗಿರುವುದು. ್ರಾಹ್ಮಣ ದ್ವಿಜ ಎನ್ನುವುದು ಎಲ್ಲರಿಗೂ ಬಳಕೆಯಾಗುತ್ತಿತ್ತು ಎಂಬುದು, ಅದೊಂದು ಜಾತಿಯಾಗಿರಲಿಲ್ಲ ಎನ್ನುವುದನ್ನು ಪ್ಪಬೇಕಾಗುತ್ತದೆ. ಈಗಿನ ಹಾಗೆ ನಿರ್ದಿಷ್ಟ ವರ್ಗಕ್ಕೆ ಸೀಮಿತಗೊಳಿಸಿ ದ್ವಿಜ, ಬ್ರಾಹ್ಮಣರೆಂದು ವಿಭಾಗೀಕರಿಸಿ ನೋಡುವುದು ರವಲ್ಲ. ಶಿಲ್ಪಾಚಾರರು ಶೈವಬ್ರಾಹ್ಮಣರೇ ಆಗಿದ್ದಾರೆ.

ಶೈವಬ್ರಾಹ್ಮಣರು ಹನ್ನೆರಡನೆಯ ಶತಮಾನದ ನಂತರದಲ್ಲಿ ಕರ್ನಾಟಕದಲ್ಲಿ ಕಾಣಬರುತ್ತಾರೆಂದು ಡಾ ಕಲಬುರ್ಗಿ ವರು ಹೇಳುತ್ತಾರೆ. ಕಾರಣ ಆಂಧ್ರಪ್ರದೇಶದಿಂದ ಬಂದವರೆಂದು ಅವರ ಅಭಿಪ್ರಾಯವಾಗಿದೆ. ಇದನ್ನು ಒಪ್ಪಿಕೊಂಡು ೀಳುವುದಾದರೆ, ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದವರೆಗೆ ವೈದಿಕ ಬ್ರಾಹ್ಮಣರು ಕಾಣಬರುತ್ತಾರೆ ಎಂಬುದು ಷ್ಟಯ. ಅದನ್ನು ಶಾಸನಗಳು ಉದಾಹರಿಸುತ್ತವೆ. ಕಪಟರಾಳರು ಏಕಾಂತದ ರಾಮಯ್ಯ ಬ್ರಾಹ್ಮಣನೆಂದು ಒಪ್ಪಕೊಳ್ಳುವುದಿಲ್ಲ. ಪ್ಪಿಕೊಂಡಾಗಲೂ ಸಮಸ್ಯೆಗಳಿವೆಯಲ್ಲ. ಉದಾಹರಣೆಗೆ, ಏಕಾಂತದ ರಾಮಯ್ಯನ ಜನನದ ಬಗೆಗೆ ಶಾಸನ ಹೇಳುವುದೇನು. ವನು ವೀರಭದ್ರನ ಅಂಶದಿಂದ ಜನಿಸಿದವನು. ಅಥವಾ ಅವನ ಅನುಗ್ರಹದಿಂದ ಜನಿಸಿದವನೆನ್ನುತ್ತದೆ ಅಬ್ಬಲೂರು ಸನ. ಬ್ರಾಹ್ಮಣರು ವೀರಭದ್ರನ ಆರಾಧಕರಾಗಿದ್ದರೆ ಎಂದರೆ ಅದು ಸಾಧ್ಯವಾಗದ ಮಾತು. ವೀರಭದ್ರನ ಜನನವೇ ದಿಕ ವಿರುದ್ಧವಾದುದು. ಹೋಮಹವನಗಳ ನಾಶಕನಾಗಿ ಕಾಣುತ್ತಾನೆ. ಅಬ್ಬಲೂರು ಶಾಸನದ ಮೇಲ್ಭಾಗದಲ್ಲಿರುವ ್ಪದಲ್ಲೂ ವೀರಭದ್ರನ ಶಿಲ್ಪವಿದ್ದು ಏಕಾಂತದ ರಾಮಯ್ಯ ವೀರಭದ್ರನ ಆರಾಧಕನಾಗಿದ್ದನೆಂದು ಅದು ಸಾಭೀತು ಪಡಿಸುತ್ತದೆ. ಗೆಯೆ, ಅಬ್ಬಲೂರು ಪರಿಸರದಲ್ಲಿರುವ ಐತಿಹ್ಯವು ವೀರಭದ್ರನಾರಾಧಕರೆಂದು ಹೇಳುತ್ತದೆ. ಏಕಾಂತದ ರಾಮಯ್ಯ ್ರಾಹ್ಮಣನೆಂಬುದು ನಿಜವಾದರೂ ವೈದಿಕ ನಿಲುವುಗಳ ಬ್ರಾಹ್ಮಣನಾಗಿರಲಿಲ್ಲ. ಬದಲಾಗಿ ಈ ರಾಮಯ್ಯ ಶಿಲ್ಪಿಯಾಗಿದ್ದು ೀವಾಲಯ ನಿರ್ಮಾಣಕಾರನಾಗಿದ್ದನೆಂದೂ ಶಾಸನವೇ ಪದೇ ಪದೇ ಹೇಳುವುದರಿಂದ ಶಿಲ್ಪಿಬ್ರಾಹ್ಮಣ ಅಥವಾ ಜನಾಗಿದ್ದುದನ್ನು ಒಪ್ಪಿಕೊಳ್ಳಲೇ ಬೇಕಾಗುತ್ತದೆ. ಈ ಮಾತನ್ನು ಬೋಗಾವಿಯ ಶಾಸನವೇ ಸಾಧಿಸುತ್ತದೆ.

**ಕಾಂತದ ರಾಮಯ್ಯನ ಕಾಲ ಯಾವುದು?**

ಎಂಬ ಪ್ರಶ್ನೆಗೆ ನಾವು ಸರಿಯಾದ ರೀತಿಯಲ್ಲಿ ಉತ್ತರ ಕಂಡುಕೊಳ್ಳಲು ಸಾಧ್ಯವಾಗಿಲ್ಲ. ಕಾರಣ ಕಾರಣ ್ಬಲೂರು ಶಾಸನವೇ ನಮಗೆ ದೊರಕಿರುವ ಮೊದಲ ಉಪಲಬ್ದ ಆಕರವಾಗಿದೆ. ಅದನ್ನು ಡಾ ಫ್ಲೀಟ್ ಅವರು ಮಾರು ಕ್ರಿ ಶ ೧೨೦೦ಎಂದು ಊಹಿಸಿದ್ದಾರೆ. ಏಕಾಂತದ ರಾಮಯ್ಯನ ಕಾಲವನ್ನು ವಚನ ಚಳುವಳಿಯ ಹಿನ್ನೆಲೆಯಲ್ಲಿಯೆ ್ಪಲಾಗಿದೆ ಎಂಬುದು ಗಮನಿಸಬೇಕಾದ ವಿಷಯ. ಅಂದರೆ ಕವಿಚರಿತೆಕಾರರಿಂದ ಆರಂಭಗೊಂಡು, ಸಿ.ನಾಗಭೂಷಣ ವರವರೆಗೆ ಏಕಾಂತದ ರಾಮಯ್ಯನ ಕಾಲವನ್ನು ಕ್ರಿ ಶ ೧೧೨೦ ರಿಂದ ೧೧೮೦ರ ಅವಧಿಯಲ್ಲಿ ಇಡುತ್ತಾರೆ. ್ಬಲೂರು ಶಾಸನವು ಅಧಿಕೃತವಾದ ಕಾಲವನ್ನು ತಿಳಿಸುವುದಿಲ್ಲ. ಬದಲಾಗಿ ತಾನು ಕೇಳಿದ, ಅಲ್ಲಿ ಪ್ರಚಲಿತವಿರುವ ತಿಹ್ಯದ ನೆರವಿನಿಂದ ಆ ಶಾಸನ ರಚಿಸಲಾಗಿದೆ. ಉದಾಹರಣೆಗೆ ಹೇಳುವುದಾದರೆ, ಐತಿಹ್ಯದ ಪ್ರಕಾರ ಎಷ್ಟಾದರೂ ೂಮಿಯನ್ನು ಕೇಳು, ಅಥವಾ ಒಂದು ಕುದುರೆ ಎಷ್ಟು ವೇಗವಾಗಿ ದಣಿದು ನಿಲ್ಲುವವರೆಗಿನ ಭೂಮಿಯನ್ನು ದಾನವಾಗಿ ಡುತ್ತೇವೆ ಎನ್ನುತ್ತದೆ. ಆದರೆ ಅಷ್ಟು ಭೂಮಿ ನಮಗೆ ಬೇಡ ಎಂದು ಅಜ್ಜಗುರುಗಳು ಹೇಳಿದರು ಎಂದು ಐತಿಹ್ಯದಲ್ಲಿ ಣುತ್ತೇವೆ. ಅದನ್ನೆ ಕೆಲವು ಆಕರಗಳಲ್ಲಿ ಕಾಣುತ್ತೇವೆ. ಹರಿಹರನಿಗೆ ಈ ಪ್ರದೇಶದಲ್ಲಿದ್ದ ಐತಿಹ್ಯವು ಕೇಳಿಸಿಕೊಂಡು ಗಳೆಯನ್ನು ರಚಿಸಿರುವ ಹಾಗೆ ತೋರುತ್ತದೆ. ಹರಿಹರದಲ್ಲಿ ಕೆಲಕಾಲ ನೆಲೆನಿಂತಿದ್ದ ಹರಿಹರನಿಗೆ ಅಬ್ಬಲೂರು ಸನಿಹದಲ್ಲಿದ್ದ ರಣ ಕತೆಯ ಹಂದರ ಗೊತ್ತಾಗಿದೆ. ಅದೇ ಕಲ್ಪನೆಯನ್ನು ಹರಿಹರನಿಂದ ಕಡಪಡೆದ ಶಾಸನ ಕವಿ ಶಾಸನ ರಚಿಸಿದ್ದಾನೆ. ಿಹರನ ಕಥಾಹಂದರದ ಛಾಯೆ ಶಾಸನ ರಚನಾಕಾರನ ಮೇಲೆ ದಟ್ಟವಾಗಿ ಬಿದ್ದಿದೆ.

ಏಕಾಂತದ ರಾಮಯ್ಯ ಬಿಜ್ಜಳನ ಸಮಕಾಲೀನ ವ್ಯಕ್ತಿಯನ್ನಾಗಿ ಶಾಸನ ಚಿತ್ರಿಸಿದೆ. ಅಲ್ಲದೆ, ಬಿಜ್ಜಳನು ತನ್ನರಮನೆಗೆ ಿಸಿಕೊಂಡು ದಾನವನ್ನು ಹಾಗೂ ಜಯಪತ್ರವನ್ನು ನೀಡಿದನೆಂದು ಶಾಸನ ತಿಳಿಸುತ್ತದೆ. 'ಅಬ್ಬಲೂರು ಚರಿತೆ'ಯಲ್ಲಿ

ಬಿಜ್ಜಳನ ಜೊತೆಯಲ್ಲಿ ಸಾಮಂತರು, ಬಸವಣ್ಣ, ಕೆಲವು ಜನ ವಚನಕಾರರು ಅಬ್ಬಲೂರಿಗೆ ಬಂದು ಏಕಾಂತದ ರಾಮಯ್ಯನನ್ನು ಕಂಡರು ಎಂದು ಬರುತ್ತದೆ. ಅಲ್ಲದೆ ಬಿಜ್ಜಳ ರಾಮಯ್ಯನಿಗೆ ಹಾಗೂ ಗುರು ಚಿಕ್ಕೇಶನಿಗೆ ಕೆಲವು ಗ್ರಾಮಗಳನ್ನು ದಾನವಾಗಿ ಕೊಟ್ಟನೆಂಬುದನ್ನು ತಿಳಿಸುತ್ತಾನೆ. ಕಾಲದ ದೃಷ್ಟಿಯಿಂದಲೂ ಕಿಟ್ಟಗಾವಿ ಸಂತತಿಯ ಗುರು ಮೂರುಜಾವದ ಪರಂಪರೆ ರಾಮಯ್ಯನ ಕಾಲಕ್ಕೆ ಸರಿ ಹೊಂದುತ್ತವೆ. ಕಿಟ್ಟಗಾವಿ ಸಂತತಿ ನಂತರದಲ್ಲಿ ರಟ್ಟಿಹಳ್ಳಿಯಲ್ಲಿ ಪ್ರಚುರಕ್ಕೆ ಹನ್ನೊಂದನೆಯ ಶತಮಾನದ ಮಧ್ಯಭಾಗದಿಂದ ಕಂಡುಬರುತ್ತದೆ. ಮೊದಲ ಮೂರುಜಾವಿದೇವನ ಉಲ್ಲೇಖವು ಕ್ರಿ.ಶ. ೧೦೫೪ರ ಹಿರೇಮಾಗಳಗೇರಿ ಶಾಸನದಲ್ಲಿ. ಕಿಟ್ಟಗಾವಿ ಸಂತತಿಯ ಗುರು ಪರಂಪರೆಯ ಶಾಸನಗಳಲ್ಲಿ ಏಕಾಂತದ ರಾಮಯ್ಯನ ಕುರಿತಂತೆ ಯಾವುದೇ ಉಲ್ಲೇಖಗಳು ದೊರಕುವುದಿಲ್ಲ. ಬದಲಾಗಿ ಶಾಂತನಿರಂಜನ ಕವಿಯ 'ಅಬ್ಬಲೂರು ಚರಿತೆ'ಯಲ್ಲಿ ಮಾತ್ರ ಕಾಣುತ್ತೇವೆ. ಐತಿಹ್ಯದಲ್ಲಿ ಶೃಂಗೇರಿ ಜಗದ್ಗುರುಗಳಿಂದ ಭೂಮಿಯನ್ನು ಲಿಂಗಮುದ್ರಾಂಕಿತವಾದ ಕಲ್ಲುಗಳಿಂದ ಕೂಡಿದ ದಾನವಾಗಿ ಪಡೆದರು ಎನ್ನುತ್ತದೆ. ಆದರೆ, ಶೃಂಗೇರಿಯ ಜಗದ್ಗುರುಗಳಿಗೂ ಇಲ್ಲಿಗೂ ಯಾವುದೇ ಸಂಬಂಧ ಇರುವ ಹಾಗೆ ಕಾಣುವುದಿಲ್ಲ. ಕಾಳಾಮುಖ ಪರಂಪರೆಯ ಇಳಿಮುಖದ ನಂತರದಲ್ಲಿ ಜನಮಾನಸದಿಂದ ಈ ಗುರುಪರಂಪರೆ ಮರೆಯಾಗಿ ಶೃಂಗೇರಿ ಜಗದ್ಗುರುಗಳು ಬಂದಿರಬೇಕು ಎಂದು ಊಹಿಸಬಹುದು.

'ಫ.ಗು. ಹಳಕಟ್ಟಿ ಅವರು 'ಶಿವಾನುಭವ' ಪತ್ರಿಕೆಯಲ್ಲಿ ಬರೆದಿರುವ 'ಏಕಾಂತದ ರಾಮಯ್ಯ ಮತ್ತು ಅಬ್ಬಲೂರು ಶಿಲಾಶಾಸನ' ಲೇಖನದಲ್ಲಿ ಅನೇಕ ವಿಷಯಗಳನ್ನು ಕುರಿತು ಚರ್ಚಿಸಿದ್ದಾರೆ. ಬಿಜ್ಜಳನು ಕೊಟ್ಟ ದಾನ, ಕಲ್ಯಾಣದ ತ್ರಿಭುವನಮಲ್ಲ ಸೋಮೇಶ್ವರ ಉಲ್ಲೇಖ, ಅಲ್ಲದೆ ಅವರ ಅಧಿಕಾರಿ ಬೊಮ್ಮ ಮತ್ತು ಅವನ ಮಡದಿ ಸುಗ್ಗಳೆ, ಕದಂಬ ಕಾಮದೇವ ಹಾಗೂ ಅವರ ನಂತರದಲ್ಲಿ ಬಂದ ಮಲ್ಲಿದೇವರ ಉಲ್ಲೇಖವನ್ನು ಹೊಂದಿರುವುದಲ್ಲದೆ ಅವರ ಆಳ್ವಿಕೆಯ ಕಾಲವೂ ನಮ್ಮ ಗಮನಕ್ಕೆ ಬಂದಿದೆ. ಅವರೆಲ್ಲರೂ ಸೋಮೇಶ್ವರ ದೇವಾಲಯಕ್ಕೆ ಹಲವು ಗ್ರಾಮಗಳನ್ನು ದಾನಕೊಟ್ಟಿರುವುದು ಕಂಡುಬರುತ್ತದೆ "ಈ ಎಲ್ಲ ವಿವರಣೆಯಿಂದ ಏಕಾಂತದ ರಾಮಯ್ಯನು ಬಸವೇಶ್ವರನ ಕಾಲಕ್ಕೆ ಇದ್ದು ಅವನು ದಕ್ಷಿಣ ಧಾರವಾಡ (ಇಂದಿನ ಹಾವೇರಿ ಜಿಲ್ಲೆ) ಜಿಲ್ಲೆಯಲ್ಲಿ ಒಬ್ಬ ಮಹತ್ವಿಕ ಪುರುಷನಾಗಿ ಅನೇಕ ಸಾಮಂತ ರಾಜರಿಂದ ಮನ್ನಣೆಯನ್ನು ಹೊಂದಿದ್ದು ಸಿದ್ಧವಾಗುತ್ತದೆ." ಆ ಕಾರಣದಿಂದ "ಫ್ಲೀಟ್‌ಸಾಹೇಬರು ಕ್ರಿ.ಶ. ೧೨೦೦ನೆಯ ಇಸ್ವಿಯಲ್ಲಿರ ಬಹುದೆಂದು ತರ್ಕಮಾಡಿದ್ದಾರೆ. ಇದನ್ನು ಗ್ರಹಿಸಲು ನಮಗೆ ಏನೂ ಅಡ್ಡಿ ತೋರುವುದಿಲ್ಲ. ಆದ್ದರಿಂದ ಶಿಲಾಶಾಸನವು ಬಸವೇಶ್ವರನು ಐಕ್ಯನಾದ ಬಳಿಕ ೨೦-೩೦ ವರ್ಷಗಳಲ್ಲಿ ಬರೆಯಿಸಿರಬೇಕು" (ಶಿವಾನುಭವ ಸಂ,ಸಂ.೧೨, ಡಿಸೆಂಬರ್ ೧೯೨೮)ಎಂದು ತೀರ್ಮಾನಿಸುತ್ತಾರೆ. ಮುಂದುವರೆದು ಶಿರಸ್ಸಪವಾಡದ ಘಟನೆಯು "ಬಿಜ್ಜಳನು ಮಹಾಮಂಡಳೇಶ್ವರನೆಂದು ಹೇಳಲ್ಪಟ್ಟಿದ್ದಾನೆ. ಈ ಬಿರುದು ರಾಜ್ಯವಾಳುವ ಅರಸನದಿರದೆ ಅವನಿಗೆ ಅಧೀನನಾದ ಪ್ರಾಂತಾಧಿಪತಿಯಂದು ಇರುತ್ತದೆ. ಮತ್ತು ಅವನು ಕಲ್ಯಾಣ ಪಟ್ಟಣದಲ್ಲಿ ಆಳುತ್ತಿದ್ದದ್ದರ ಉಲ್ಲೇಖವೂ ಇಲ್ಲ. ಆರಂಭದಲ್ಲಿ ಬಿಜ್ಜಳನು ಚಾಲುಕ್ಯ ರಾಜನಾದ ಜಗದೇಕಮಲ್ಲ ಮತ್ತು ತ್ರೈಲೋಕ್ಯಮಲ್ಲನನ್ನು ರಾಜ್ಯದಿಂದ ತಳ್ಳಿ ಸಾರ್ವಭೌಮ ಅರಸನಾಗಿದ್ದದ್ದು ಇತಿಹಾಸದಿಂದ ತಿಳಿರುಬರುತ್ತದೆ. ಬಿಜ್ಜಳನು ರಾಜ್ಯವನ್ನು ಆಕ್ರಮಿಸಿದ್ದು ೧೧೫೬ಮತ್ತು ೧೧೬೨ರ ಮಧ್ಯದಲ್ಲಿ. ಆದ್ದರಿಂದ ಏಕಾಂತದ ರಾಮಯ್ಯನು ಅಬ್ಬಲೂರಲ್ಲಿ ಜೈನ ಧರ್ಮವನ್ನು ನಾಶಮಾಡಿ ಶಿವಧರ್ಮವನ್ನು ಸ್ಥಾಪಿಸಿದ್ದು ಅದಕ್ಕೂ ಪೂರ್ವದಲ್ಲಿ ಎಂದು ಊಹಿಸಬಹುದಾಗಿದೆ" ಎಂದು ಸ್ಪಷ್ಟಪಡಿಸುತ್ತಾರೆ.

ಆದರೆ ಡಾ. ಬಿ.ಆರ್. ಹಿರೇಮಠ ಅವರು ಶಿರಸ್ಸವಾಡದ ಘಟನೆಯನ್ನು ಕ್ರಿ.ಶ. ೧೧೮೫ ಹಾಗೂ ೧೨೦೦ರ ಮಧ್ಯದಲ್ಲಿ ಇಡುತ್ತಾರೆ. ಅದಕ್ಕೆ ಕೊಡುವ ಕಾರಣಗಳೆಂದರೆ, ಬಿಜ್ಜಳ ಏಕಾಂತರಾಮಯ್ಯನನ್ನು ಕಲ್ಯಾಣಕ್ಕೆ ಕರೆಸಿಕೊಂಡುದದನ್ನು ಅಬ್ಬಲೂರು ಶಾಸನ ಹೇಳುತ್ತದೆ. ಏಕಾಂತರಾಮಯ್ಯನು ಬಿಜ್ಜಳನ ವಿನಂತಿಯ ಮೇರೆಗೆ ಕಲ್ಯಾಣಕ್ಕೆ ಹೋದಾಗ ಬಸವಣ್ಣನವರನ್ನು ಕಂಡಿರುವ ಸಾಧ್ಯತೆ ಇದೆ. ಆ ಕಾರಣಕ್ಕಾಗಿ ಬಸವಣ್ಣ-ಬಿಜ್ಜಳ-ರಾಮಯ್ಯ ಸಮಕಾಲೀನರು. ತಾಳೀಕೋಟೆಯ ಶಾಸನವು ಅಬ್ಬಲೂರು ಸೇರಿದಂತೆ ಅಣಲೆವಾಡ, ಪರಯಳಿಗೆ, ಉಣಕಲ್ಲು, ಸಂಪಗಾವಿ, ಮಾರುಡಿಗೆ ಆಣಂಪೂರ, ಕರಹಾಡ, ಕೆಂಬಾವಿ, ಬಮ್ಮಕೂರು ಮೊದಲಾದ ಹದಿನಾರು ಸ್ಥಳಗಳಲ್ಲಿ ಜೈನರನ್ನು ಅವರ ಬಸದಿಗಳನ್ನು ನಾಶಮಾಡಿದ ಸೂಚನೆ ಇದೆ. ಆ ಕಾರಣಕ್ಕಾಗಿ ಶಿರಸ್ಸು ಪವಾಡದ ಘಟನೆಯು ಕ್ರಿ.ಶ. ೧೧೮೫-೧೨೦೦ ಮಧ್ಯದಲ್ಲಿ ನಡೆದಿದೆ ಎಂದು ವಾದ ಮಂಡಿಸುತ್ತಾರೆ.

ಹಿರಿಯ ವಿದ್ವಾಂಸರಾದ ಡಾ. ಭೋಜರಾಜ ಪಾಟೀಲ ಅವರು ಏಕಾಂತದ ರಾಮಯ್ಯನ ಶಿರಸ್ಸವಾಡವು ಕ್ರಿ.ಶ. ೧೧೮೪ರ ಡಿಸೆಂಬರ್ ತಿಂಗಳ ೨೯ರಲ್ಲಿ ನಡೆದಿತ್ತೆಂದು ಚರ್ಚಿಸಿದ್ದಾರೆ. ಅದನ್ನು ಪತ್ರಿಕಾ ಪ್ರಕಟಣೆಯಲ್ಲಿ (ಪ್ರಜಾವಾಣಿ, ೨೦೧೭ ಮಾರ್ಚ್, ೧೦) ನೋಡಬಹುದು. ಅದು ನನಗೆ ಅಪ್ರಸ್ತುತ. ಇಲ್ಲಿ ಬೇಕಾಗಿರುವುದು ಬಿಜ್ಜಳನನ್ನು ನೇರವಾಗಿ

ೋಡಿದ್ದನೇ ಎಂಬುದು? ಬಿಜ್ಜಳನು ಮಂಗಳವೇಡೆಯಲ್ಲಿ ಅಧಿಕಾರ ತೆಗೆದುಕೊಂಡದ್ದು ಮತ್ತು ಕಲ್ಯಾಣಕ್ಕೆ ತನ್ನ ರಾಜಧಾನಿಯನ್ನು ಳಾಂತರ ಮಾಡಿ ರಾಜ್ಯಭಾರ ಮಾಡಿದ್ದು ಕ್ರಿ.ಶ. ೧೧೫೫ರಿಂದ ೧೧೬೭ರ ಅವಧಿಯಲ್ಲಿ. ಈ ಅವಧಿಯಲ್ಲಿ ಬಿಜ್ಜಳ ಕ್ರಿ.ಶ. ೧೬೨ರಲ್ಲಿ ಬಳ್ಳಿಗಾವಿಯಲ್ಲಿ ದಕ್ಷಿಣದ ಮೇಲೆ ವಿಜಯವನ್ನು ಸಾಧಿಸಲು ಬಂದಿದ್ದ. ಅದು ಅವನ ಮೊದಲನೆಯದು ಾದು, ಕೊನೆಯದು ಹೌದು. ಒಂದು ವೇಳೆ ಈ ಘಟನೆ ಕ್ರಿ.ಶ. ೧೧೬೨ರ ಆಜುಬಾಜಿನಲ್ಲಿ ನಡೆದಿದ್ದೆ ಆದರೆ, ಬಿಜ್ಜಳ ಳ್ಳಿಗಾವೆಯಲ್ಲಿದ್ದು ಅಬ್ಬಲೂರಿಗೆ ಭೇಟಿ ಕೊಡದೆ ಹೋಗಿದ್ದಾನೆ. ಅಲ್ಲದೆ, ಬಳ್ಳಿಗಾವೆಯಲ್ಲಿಯೇ ಕುಳಿತು ಅಬ್ಬಲೂರು ್ರಮೇಶ್ವರ ದೇವರಿಗೆ ದಾನಕೊಟ್ಟಿದ್ದನ್ನು ಬಳ್ಳಿಗಾವೆಯ ಕ್ರಿ.ಶ. ೧೧೬೨ರ ಶಾಸನ ತಿಳಿಸುತ್ತದೆ. ಅಂದರೆ, ಬಿಜ್ಜಳನ ಕಾಲದಲ್ಲಿ ಘಟನೆ ನಡೆದಿರಲಿಲ್ಲ. ಹಾಗಿದ್ದರೆ ಖಂಡಿತ ಬಿಜ್ಜಳ ಅಬ್ಬಲೂರಿಗೆ ಭೇಟಿ ಕೊಡುತ್ತಿದ್ದ.

ಒಂದು ವೇಳೆ ಬಿಜ್ಜಳ ತನ್ನರಮನೆಗೆ ಕರೆಸಿಕೊಂಡಿದ್ದ ಎಂದಾದರೆ, ಅದಕ್ಕೆ ಏಕಾಂತದ ರಾಮಯ್ಯ ಒಪ್ಪಿದ್ದನೆ? ಎಂಬ ಶ್ನೆಯನ್ನು ಕೇಳಲೇ ಬೇಕಾಗುತ್ತದೆ. ಯಾಕೆಂದರೆ ಅಬ್ಬಲೂರು ಶಾಸನವೇ ಹೇಳುವಂತೆ "ನಾಡೆ ನೃಪರಂ ದೈನಿದಿಂ ೇಡದೆ" ಅಂದರೆ, ಒಬ್ಬ ಸಾಮಾನ್ಯ ಹಳ್ಳಿಯ ವ್ಯಕ್ತಿಯಂತೆ ದೈನ್ಯದಿಂದ ಬೇಡುವವನಾಗಿರಲಿಲ್ಲ ಎನ್ನುತ್ತದೆ. ಹಾಗೆಯೆ, ೇವಾಲಯಕ್ಕೆಂದು ಎದಿರೆದ್ದು ಬಂದು ಯಾರಾದರು ಹಾಗವನ್ನು ಕೊಟ್ಟರು ಕಳೆದುಕೊಳ್ಳದೆ" ಅದನ್ನು ಪಡೆಯುತ್ತಿದ್ದ. ಷ್ಟು ಸ್ವಾಭಿಮಾನಿಯಾಗಿದ್ದ ಏಕಾಂತದ ರಾಮಯ್ಯ ರಾಜರು, ಮಾಂಡಲಿಕರು ಕೊಡುವ ದಾನಗಳಿಗೆ ಆಸೆ ಪಡುವ ್ಯಕ್ತಿಯಲ್ಲವೆಂದೇ ಶಾಸನ ಹೇಳುವಾಗ ಬಿಜ್ಜಳನ ಆಸ್ಥಾನಕ್ಕೆ ಹೋಗಿದ್ದ ಎನ್ನುವುದು ನಂಬಲು ಸಾಧ್ಯವಿಲ್ಲ. ಏಕಾಂತ ಾಮಯ್ಯ ಬಿಜ್ಜಳನ ಹಿರಿಯ ಸಮಕಾಲೀನನೇ ಆಗಿದ್ದರೂ ಬಿಜ್ಜಳನ ಆಸ್ಥಾನಕ್ಕೆ ಹೋಗಿರಲಿಲ್ಲ ಎಂಬುದನ್ನು ಬೋಗಾವಿ ಾಸನ ನೋಡಿದರೆ ತಿಳಿಯುತ್ತದೆ. ಸಮಕಾಲೀನ ಆಕರಗಳನ್ನಿಟ್ಟು ಕೊಂಡು ನಂತರದಲ್ಲಿ ಅಬ್ಬಲೂರು ಶಾಸನವನ್ನು ಚಿಸಿದ ಹಾಗೆ ತಿಳಿಯುತ್ತದೆ. ಅಬ್ಬಲೂರು ಶಾಸನದ ಲಿಪಿಯು ಕೂಡಾ ೧೩ನೆಯ ಶತಮಾನದಲ್ಲಿ ಹರಿಹರದ ಪರಿಸರದಲ್ಲಿ ೊರಕುತ್ತವೆ. ಆ ಕಾರಣಕ್ಕಾಗಿ ಅಬ್ಬಲೂರು ಶಾಸನವು ಕ್ರಿ.ಶ. ೧೨೦೦-೧೩೦೦ ಅವಧಿಯಲ್ಲಿ ರಚಿತವಾಗಿರುವ ಹಾಗೆ ಾಣುತ್ತದೆ. ಏಕಾಂತದ ರಾಮಯ್ಯನ ಕಾಲವನ್ನು ಡಾ ನಾಗಭೂಷಣ ಅವರು ಒಪ್ಪಿಕೊಂಡಿರುವಂತೆ ಹಾಗೂ ಬೋಗಾವಿ ಾಸನವು ಹೇಳುವಂತೆ ಕ್ರಿ.ಶ. ೧೧೨೦ರಿಂದ ೧೧೮೦ರ ಅವಧಿಯಲ್ಲಿ ಇಡಬಹುದು.

ಹನ್ನೆರಡನೆಯ ಶತಮಾನದಲ್ಲಿ ಅಬ್ಬಲೂರು ಅಷ್ಟೊಂದು ಧಾರ್ಮಿಕ ಪ್ರಭಾವವುಳ್ಳ ಕೇಂದ್ರವಾಗಿತ್ತೆ ಎಂದ ಮೇಲೆ ಹ್ಮೇಶ್ವರ ದೇವಾಲಯವು ಹಾಳುಬಿದ್ದಿತ್ತು ಎಂಬುದನ್ನು ನಂಬಲಿಕ್ಕಾಗುವುದಿಲ್ಲ. ಅದೊಂದು ಸಣ್ಣ ಪ್ರಮಾಣದ ಗ್ರಾಮವಾಗಿ ಾಣುತ್ತದೆ. ಭತ್ತ ಬೆಳೆಯುವ ಪ್ರದೇಶಗಳಲ್ಲಿ ಅಬ್ಬಲೂರು ಒಂದು. ಆದರೆ, ಪಕ್ಕಾ ವ್ಯಾಪಾರಿ ಕೇಂದ್ರವಾಗಿರಲಿಲ್ಲ. ಬ್ರಹ್ಮಗಾವುಂಡನು ಹ್ಮೇಶ್ವರ ದೇವಾಲಯವನ್ನು ಕಟ್ಟಿಸಿದ ನಂತರದಲ್ಲಿ ಧಾರ್ಮಿಕವಾಗಿ ಅದಕ್ಕೆ ಮಹತ್ವ ಬಂದಿತು. ಕಾಳಾಮುಖ ದೇವಾಲಯಗಳ ಕ್ಕದಲ್ಲಿಯೇ ಜೈನರ ಬಸದಿಗಳು ಇದ್ದ ಉದಾಹರಣೆಗಳು ಈ ಪ್ರದೇಶದಲ್ಲಿ ಕಾಣುತ್ತವೆ. ಅಬ್ಬಲೂರು ಪಕ್ಕದಲ್ಲಿರುವ ಂಚೂರು ರೀತಿ ರೀತಿಯದ್ದು. ಇಲ್ಲಿರುವ ತ್ರಿಕೂಟಾಚಲ ಕಲ್ಲೇಶ್ವರ ದೇವಾಲಯ ಕಾಳಾಮುಖರದ್ದಾಗಿತ್ತು. ಕಾಳಾಮುಖ ುತಿ ಶಿಲ್ಪವು ಅದನ್ನು ಸಾರಿ ಹೇಳುತ್ತದೆ. ಕುಂಚೂರು ಜೈನ ಯತಿಗಳು ಪ್ರವಾಸದ ಮಧ್ಯ ಕೆಲಕಾಲ ತಂಗುವ ಕೇಂದ್ರವಾಗಿ ಂದಿಗೂ ಕಾಣುತ್ತದೆ. ಅಲ್ಲಿ ಬಸದಿ ಇದ್ದುದನ್ನು ಜೈನ ವಿಗ್ರಹಗಳು ಹೇಳುತ್ತವೆ. ಬಳ್ಳಿಗಾವೆ ಶೈವ ಕೇಂದ್ರವಾಗಿದ್ದಾಗಲೂ ್ಯೆನರು ಬೌದ್ದರಿಗೂ ಜಾಗವಿತ್ತು. ಹೊಂದಾಣಿಕೆಯ ಮನೋಭಾವ ಇರ್ವರಲ್ಲಿ ಕಾಣುತ್ತೇವೆ. ಹಾಗಿದ್ದಾಗಲೂ ಜೈನ ಮತ್ತು ವರ ಮಧ್ಯ ಕದನವಾಗಿತ್ತು ಎಂದು ಶಾಸನ, ಕಾವ್ಯಗಳು ಹೇಳುತ್ತವೆ. ಅಬ್ಬಲೂರಿನ ಒಂದು ಆಕರವನ್ನಿಟ್ಟುಕೊಂಡು ರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರ ರಾಜ್ಯಗಳ ಶೈವೇತರ ದೇವಾಲಯಗಳನ್ನು ರಾಮಯ್ಯ ನಾಶ ಮಾಡಿದನೆಂಬ ತಿಹಾಸವನ್ನು ಕಟ್ಟುತ್ತೇವೆ. ಇಲ್ಲಿ ಹಿರಿಯ ವಿದ್ವಾಂಸರ ಒಂದು ಉದಾಹರಣೆಯನ್ನು ಕೊಡಲೇಬೇಕು. ಹನ್ನೊಂದನೆಯ ಶಮಾನದಲ್ಲಿ ಆಜೀವಿಕರ ಕೇಂದ್ರವಾಗಿದ್ದ ಆವನಿಯ ಬೆಟ್ಟವು "ಬಸವೋತ್ತರದ ಉಗ್ರ ಶೈವವಾದಿ ಏಕಾಂತದ ರಾಮಯ್ಯನ ನಪಲ್ಲಿ ಕಟ್ಟಿದ ಏಕಾಂತರಾಮಸ್ವಾಮಿಯ ಗುಡಿಯೊಳಗೆ ಲಿಂಗವನ್ನು ಪ್ರತಿಷ್ಠಾಪಿಸಿರುವುದೂ ಮತ್ತು ಆ ಗುಡಿಯ ೂಲೆಯಲ್ಲಿ ಕತ್ತಿಹಿಡಿದ ಕುದುರೆ ಸವಾರನೊಬ್ಬನ ಕಲ್ಲಿನ ವಿಗ್ರಹವಿದ್ದು, ಬಹುಶಃ ಅದು ಏಕಾಂತದ ರಾಮಯ್ಯನದೇ ತಿಮೆಯಾಗಿರಬೇಕೆಂದು ನಾನೂ ಊಹಿಸಿದ್ದೇನೆ." ಮುಂದುವರೆದು "ಏಕಾಂತದ ರಾಮಯ್ಯ ಕರ್ನಾಟಕ-ಮಹಾರಾಷ್ಟ್ರ ಾಗೂ ಆಂಧ್ರಪ್ರದೇಶಗಳ ಅಶೈವ ಧಾರ್ಮಿಕ ಕೇಂದ್ರಗಳ ಮೇಲೆ ದಾಳಿ ನಡೆಸಿ ಶಿವಲಿಂಗಗಳನ್ನು ಪ್ರತಿಷ್ಠಾಪಿಸಿತ್ತಿದ್ದನೆಂಬುದಕ್ಕೆ ಕುಬೇಕಾದಷ್ಟು ಐತಿಹಾಸಿಕ ಆಧಾರಗಳಿದ್ದು ಬಹುಶಃ ಅದೇ ಏಕಾಂತದ ರಾಮಯ್ಯ ಆವನಿಯ ಆಜೀವಿಕರ ಧಾರ್ಮಿಕ ಂದ್ರದ ಮೇಲೂ ದಾಳಿ ನಡೆಸಿರಬಹುದೆಂಬುದಕ್ಕೆ ಶಿವಲಿಂಗದ್ದಾದರೂ ಅಲ್ಲಿನ ಗುಡಿಯ ಹೆಸರು ಏಕಾಂತರಾಮಸ್ವಾಮಿಯ ಡಿಯೆಂದು ಕರೆಯುತ್ತಿರುವುದೇ ಸಾಕ್ಷಿ" (ಲಕ್ಷ್ಮೀಪತಿ ಕೋಲಾರ, ದಕ್ಷಿಣ ದಂಡಾಜೀವಿಕ, ಪು. ೧೭೮) ಎನ್ನುತ್ತಾರೆ.

ಹಿರಿಯರ ವಾದದಲ್ಲಿ ಎರಡು ಅಂಶಗಳು ಎದ್ದು ಕಾಣುತ್ತವೆ. ಒಂದು ಏಕಾಂತ ಎನ್ನುವುದು, ಎರಡನೆಯದು ಕರ್ನಾಟಕ ಆಂಧ್ರ ಮತ್ತು ಮಹಾರಾಷ್ಟ್ರದ ಶೈವೇತರ ದೇವಾಲಯಗಳನ್ನು ನಾಶಮಾಡಿದ ಎನ್ನುವುದು. ಏಕಾಂತ ಎನ್ನುವುದು ಶಾಸನ ಹೇಳುವ ಕತೆಯು ಕಾಲ್ಪನಿಕವಾದುದಾಗಿರಬೇಕು ಏಕಾಂತ ಎನ್ನುವುದು ಅನೇಕಾಂತಕ್ಕೆ ವಿರುದ್ಧವಾಗಿ ಹುಟ್ಟಿದ ವಾದವಾಗಿದೆ. ಇದನ್ನು ಶಾಸನಗಳಲ್ಲಿ ಈಶ್ವರಕತೃ ವಾದವೆಂದು ಕರೆಯಲಾಗಿದೆ. ಶಂಕರರು ಭಾಷ್ಯವನ್ನು ಬರೆಯುವ ಆರಂಭದಲ್ಲಿ "ಮಮ ಏಕಾಂತವಾದಿನಃ ಅನೇಕಾಂತವಾದಿನಃ ಬಹುಪಕ್ಷ"ವಾಗಿರುವುದರಿಂದ ನಾನು ಭಯಪಡುತ್ತೇನೆ. ಆದರೂ ಅದನ್ನು ಸಮರ್ಥವಾಗಿ ಮಾಡುತ್ತೇನೆ ಎಂಬ ಹೇಳಿಕೆಯಿಂದಲೇ ಪ್ರಾರಂಭಿಸುತ್ತಾರೆ. ಕೃಷ್ಣನು ಗೀತೆಯಲ್ಲಿ ಏಕಾಂತವನ್ನು ಹೇಳುತ್ತೇನೆ ಎಂದೇ ಹೇಳಿಕೊಳ್ಳುತ್ತಾನೆ. ಶ್ರೀವೈಷ್ಣವರಲ್ಲಿ ಏಕಾಂತಿಗಳು ಎಂಬ ಪಂಗಡವೊಂದಿದೆ. ಹೀಗಿರುವಲ್ಲಿ ಏಕಾಂತವೆನ್ನುವುದು ವಾದವಾಗಿದೆಯೇ ವಿನಃ ಶಾಸನ ಹೇಳುವಂತೆ ಏಕಾಂತದಲ್ಲಿ ಇದ್ದ ಕಾರಣಕ್ಕೆ ಏಕಾಂತ ಬಂದಿಯೆನ್ನವುದು ಸುಳ್ಳು ಎನಿಸುತ್ತದೆ. ಅಲ್ಲದೆ, ಈ ಪ್ರದೇಶದಲ್ಲಿ ಶ್ರೀವೈಷ್ಣವರ ಪ್ರಭಾಲ್ಯವಿರುವುದರಿಂದ ಹಾಗೂ ಏಕಾಂತಿಗಳು ಎನ್ನುವ ಸಮುದಾಯವೇ ಇರುವುದರಿಂದ ಇಲ್ಲಿಯ ಯಾರೋ ಒಬ್ಬ ರಾಮಯ್ಯನ್ನು ಏಕಾಂತರಾಮಸ್ವಾಮಿ ಎನ್ನುವುದು ಬಂದಿರಬೇಕು ಎನ್ನುವುದು ನನ್ನ ಊಹೆಯಾಗಿದೆ.

**ಬೋಗಾವಿ ಶಾಸನ**

ಏಕಾಂತದ ರಾಮಯ್ಯನ ಕುರಿತ ಅಧ್ಯಯನಗಳು ಬೋಗಾವಿ ಶಾಸನವನ್ನು ನೇರವಾಗಿ ಅಧ್ಯಯನಕ್ಕೆ ತೆಗೆದುಕೊಳ್ಳದೇ ತೆಗೆದುಕೊಂಡ ತೀರ್ಮಾನಗಳಾಗಿವೆ. ಬೋಗಾವಿಯ ಊರ ಹೊರಭಾಗದ ಹಾಳು ಕಲ್ಲೇಶ್ವರ ದೇವಾಲಯದ ಬಯಲಲ್ಲಿರುವ ಶಾಸನವನ್ನು ಕ್ರಿ ಶ ೧೯೪೯-೫೦ರ ವಾರ್ಷಿಕ ವರದಿಯಲ್ಲಿ ನಂ ೫೫೩ರಲ್ಲಿ ವರದಿ ಮಾಡಲಾಗಿದೆ. ಬೋಗಾವಿ ಶಾಸನವು ಏಕಾಂತದ ರಾಮಯ್ಯನ ಜೀವಿತ ಕಾಲದಲ್ಲಿ ನಿರ್ವಹಿಸಿದ ಕಾರ್ಯಗಳನ್ನು ಉಲ್ಲೇಖಿಸುವ ಅಧಿಕೃತ ದಾಖಲೆಯಾಗಿದೆ. ಸುಮಾರು ೩೦ಕ್ಕೂ ಹೆಚ್ಚು ಸಾಲುಗಳನ್ನು ಹೊಂದಿರುವ ಈ ಶಾಸನವು ಶಿವಸ್ತುತಿಯಿಂದ ಆರಂಭಿಸುತ್ತದೆ. ಮಧ್ಯದ ಭಾಗ ಸಂಪೂರ್ಣವಾಗಿ ಹಾಳಾಗಿದ್ದು, ಓದಲು ಸಾಧ್ಯವಾಗುವುದಿಲ್ಲ. ೪ನೆಯ ಸಾಲಿನಲ್ಲಿ ಶ್ರೀ ಮತು ಅಬ್ಬಲೂರು ಎನ್ನುವ ಮಾಹಿತಿ ದೊರಕುತ್ತದೆ. ೧೪ ಮತ್ತು ೧೫ನೆಯ ಸಾಲಿನಲ್ಲಿ ಅಬ್ಬಲೂರ ಶ್ರೀವೀರ ಸೋಮನಾಥ ದೇವರಿಗೆ ಜೋಯಿದೇವರಸ, ಪಂಪರಾಶಿ, ಗೋವಿಂದಮಯ್ಯ ಇವರುಗಳು ಸತ್ತಳಿಗೆ ನಾಡಿನ ಗೋಗಾವೆ ಗ್ರಾಮವೊಂದನ್ನು ಕೊಟ್ಟಂತೆ ತಿಳಿಸುತ್ತದೆ. ಗೋಗಾವೆ ಗ್ರಾಮವು ಬಹುಶಃ ಅದು ಬೋಗಾವಿಯೇ ಆಗಿದೆ. ಅಲ್ಲದೆ, ಸೋಮೇಶ್ವರ ಲಿಂಗದ ಪ್ರತಿಷ್ಠಾಪನೆಯ ಕಾಲದಲ್ಲಿ ದೇವರ ನೈವೇದ್ಯ ಹಾಗೂ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆಂದು ಬನವಾಸಿಯ ಮಂಡಳೇಸ್ವರನಾದ (ಈ ಭಾಗ ತೃಟಿತವಾಗಿದೆ) ಚಟ್ಟಮಯ್ಯ, ಅವನ ಪಳಿಹಾರ ಬಾವರಸ, ನಾಡ ಅಧಿಕಾರಿ ಚಟ್ಟಮಯ್ಯ, ದಾವರಸ ಹರಿಯಣ್ಣ ಇವರುಗಳು ೬೦ ಕಮ್ಮ ಭೂಮಿಯನ್ನು ಹಾಗೂ ೩ ಗಾಣ, ೩ ಅಂಗಡಿಗಳನ್ನು ಏಕಾಂತದ ರಾಮಯ್ಯನ ಅಳಿಯ ಸೋಮೇಯನ ಕೈಯಲ್ಲಿ ಧಾರೆಯನೆರೆದು ಕೊಡುತ್ತಾರೆ. ಬನವಾಸಿಯ-೧೨೦೦೦ರದ ನಾಡಧಿಕಾರಿ ಚಟ್ಟಮಯ್ಯನು ಯಾರೆಂಬುದು ಸ್ಪಷ್ಟವಾಗುವುದಿಲ್ಲ. ಆದರೆ, ಅಬ್ಬಲೂರ ಶಾಸನದಲ್ಲಿ ಸತ್ತಳಿಗ-೭೦ರ ಅಧಿಕಾರಿ ಎನ್ನುತ್ತದೆ. ಈ ಕಾಲದಲ್ಲಿ ಚಟ್ಟಮಯ್ಯ, ಚಟ್ಟಯ್ಯ ಎನ್ನುವ ಅಧಿಕಾರಿಗಳು ಸಿಗುತ್ತರಾದರೂ ಇವನು ಯಾರೆಂಬುದು ತಿಳಿಯದು. ಆದರೆ, ಬನವಾಸಿಯನ್ನು ಆಳುತ್ತಿದ್ದ ಮಂಡಳೇಶ್ವರನ ಉಲ್ಲೇಖ ಇಲ್ಲದಿರುವುದು ಕೊರತೆಯೇ ಸರಿ.

ಶ್ರೀಮದ್ದೇಕಾಂತದ ರಾಮಯ್ಯಂಗಳು ಎಂಬ ಹೆಸರು ಸ್ಪಷ್ಟವಾಗಿ ಶಾಸನದಲ್ಲಿ ಉಲ್ಲೇಖವಾಗಿರುವುದರಿಂದ ಯಾವುದೇ ಅನುಮಾಗಳಿಲ್ಲ. ಅಬ್ಬಲೂರ ಶಾಸನದ ಏಕಾಂತದ ರಾಮಯ್ಯನೇ ಇವನಾಗಿದ್ದಾನೆ. ಏಕಾಂತದ ರಾಮಯ್ಯನ ಕಾಲವನ್ನು ಶಾಸನವು ಉಲ್ಲೇಖಿಸುತ್ತದೆ. ಈವರೆಗೂ ಕಾಲದ ಬಗೆಗೆ ನಿಶ್ಚಿತೆ ಇರಲಿಲ್ಲ. ರಾಮಯ್ಯನ ಕಾಲವನ್ನು ಹನ್ನೆರಡನೆಯ ಶತಮಾನವೆಂದು ಗ್ರಹಿಸಲಾಗಿತ್ತು. ಶಾಸನವು ತೇದಿಯನ್ನು "ಪ್ರಜೋತ್ಪತ್ತಿ ನಾಮ ಸಂವತ್ಸರದ ಸಂಕ್ರಮಣ ಅಮವಾಸೆ, ಸೋಮವಾರದಂದು" ಶ್ರೀಮದ್ದೇಕಾಂತದ ರಾಮಯ್ಯಂಗಳು ಲಿಂಗ ಪ್ರತಿಷ್ಠಾಪನೆಯನ್ನು ಮಾಡಿದ್ದನ್ನು ಅದು ತಿಳಿಸುತ್ತದೆ. ಪ್ರಜೋತ್ಪತ್ತಿ ಸಂವತ್ಸರವು ೧೨ನೆಯ ಶತಮಾನದ ಮಧ್ಯ ಭಾಗದಲ್ಲಿ ಹಾಗೂ ಹದಿಮೂರನೆಯ ಶತಮಾನದ ಆರಂಭದಲ್ಲಿ ಬರುತ್ತದೆ. ಏಕಾಂತದ ರಾಮಯ್ಯನ ಕಾಲವನ್ನು ಹನ್ನೆರಡನೆಯ ಶತಮಾನವೆಂದು ತೆಗೆದುಕೊಂಡರೆ ಕ್ರಿ.ಶ. ೧೧೫೧ರಲ್ಲಿ ಬರುವ ಪ್ರಜಾಪತಿ ಸಂವತ್ಸರವನ್ನು ಅಧಿಕೃತವಾಗಿ ತೆಗೆದುಕೊಳ್ಳ ಬೇಕಾಗುತ್ತದೆ. ಅಲ್ಲದೆ, ಅಂದು ಮಕರಸಂಕ್ರಮಣವೂ ಆಗಿರುವುದರಿಂದ ತೇದಿ ಸರಿಹೊಂದುತ್ತದೆ. ಆ ಕಾರಣದಿಂದ ತೇದಿಯನ್ನು ೧೧೫೧ ಡಿಸೆಂಬರ್ ೯ ಭಾನುವಾರಕ್ಕೆ ಸರಿಹೊಂದುತ್ತದೆ. ಅಮವಾಸೆಯು ಬೆಳಗಿನ ಜಾವಕ್ಕೂ ಮುಂದುವರೆದಿರುವುದರಿಂದ ಸೋಮವಾರವನ್ನು ತೆಗೆದುಕೊಳ್ಳಬಹುದು.

ಂದರೆ ಬಿಜ್ಜಳ ಕಲ್ಯಾಣಕ್ಕೆ ಬರುವ ಪೂರ್ವದಲ್ಲಿಯೇ ಏಕಾಂತರಾಮಯ್ಯ ಅಬ್ಬಲೂರಿಗೆ ಬಂದಿದ್ದನ್ನು ಈ ಶಾಸನ ೃಢಪಡಿಸುತ್ತದೆ. ಎಂದರೆ ವಚನ ಚಳುವಳಿ ಆರಂಭಗೊಳ್ಳುವ ಹತ್ತು ಹದಿನೈದು ವರ್ಷಗಳ ಪೂರ್ವದಲ್ಲಿಯೇ ಏಕಾಂತದ ಾಮಯ್ಯ ತುಂಗಾ-ವರದಾ ಪ್ರದೇಶವನ್ನು ಪ್ರವೇಶ ಮಾಡಿದ್ದನೆಂದು ಸ್ಪಷ್ಟವಾಗುತ್ತದೆ. ಹಾಗಾದರೆ ಅಳಂದೆಯಿಂದ ಾಮಯ್ಯ ಕ್ರಿ.ಶ. ೧೧೫೦ಕ್ಕೂ ಪೂರ್ವದಲ್ಲಿಯೆ ಎಂದರೆ ಸುಮಾರು ಈ ಪ್ರದೇಶಕ್ಕೆ ಬಂದಿರಬೇಕು ಎಂದಾಗುತ್ತದೆ.

ಅಬ್ಬಲೂರು ಸೋಮೇಶ್ವರ ಲಿಂಗವನ್ನು ಪ್ರತಿಷ್ಠೆಯ ಮಾಡಿದ ನಂತರ ತನ್ನ ಅಳಿಯ ಸೋಮಯ್ಯನಿಗೆ ಆ ೇವಾಲಯದ ಜವಾಬ್ದಾರಿಯನ್ನು ವಹಿಸಿಕೊಟ್ಟಿದ್ದನ್ನೂ ಶಾಸನ ಹೇಳುತ್ತದೆ. ಆ ಮೂಲಕ ಅಬ್ಬಲೂರು ಶಾಸನ ಹೇಳುವಂತೆ ಾಮಯ್ಯ ಯಾತ್ರಾರ್ತಿಯಾಗಿ ಒಬ್ಬನೇ ಬಂದ ಎನ್ನುವ ಹೇಳಿಕೆಯನ್ನೇ ನಿರಾಕರಿಸುತ್ತದೆ. ಬಂದಳಿಕೆಯ ಶಾಸನ ಹೇಳುವಂತೆ ಾಮಯ್ಯಂಗಳ ಮರ್ಮ ಎನ್ನುವ ಮಾತನ್ನು ಇದು ಒಪ್ಪಿಕೊಳ್ಳುವ ಮೂಲಕ ಒಬ್ಬನೇ ಬಂದಿರಲಿಲ್ಲ ತನ್ನ ಸಂಗಡಿಗರೊಂದಿಗೆ ಂದಿರುವುದನ್ನು ತಿಳಿಸುತ್ತದೆ. ತಮ್ಮಳಿಯ ಸೋಮೆಯನ ನಿರ್ವಹಣೆಗೆಂದು ಭೂಮಿಯನ್ನು ದಾನವಾಗಿ ಕೊಟ್ಟಿರುವುದೇ ಾಕ್ಷಿಯಾಗಿದೆ. ಸೋಮೇಶ್ವರ ದೇವಾಲಯದ ಸ್ಥಾನಾಚಾರ್ಯನಾಗಿರುವ ಸಾಧ್ಯತೆಯನ್ನು ತಳ್ಳಿಹಾಕಲು ಸಾಧ್ಯವಿಲ್ಲ.

ಇನ್ನೊಂದು ಪ್ರಮುಖವಾದ ವಿಷಯವೆಂದರೆ ವೀರಶೈವ ಮತೋದ್ಧಾರನೆಂಬ ಹೇಳಿಕೆಯನ್ನು ಇದು ಸ್ಪಷ್ಟವಾಗಿ ರಾಕರಿಸುತ್ತದೆ. ಆ ಮೂಲಕ ವಚನ ಚಳುವಳಿಯಲ್ಲಿ ಭಾಗವಹಿಸಿದ ಎಂಬುದನ್ನು ಬೋಗಾವಿ ಶಾಸನ ತಳ್ಳಿಹಾಕುತ್ತದೆ. ಾರಣ ವಚನ ಚಳುವಳಿ ಆರಂಭಗೊಳ್ಳುವ ಪೂರ್ವದಲ್ಲಿಯೇ ರಾಮಯ್ಯ ಅಳಂದೆಯನ್ನು ಬಿಟ್ಟಿದ್ದಾನೆ. ಅ ಕಾರಣವಾಗಿ ಚನ ಚಳುವಳಿಯಲ್ಲಿ ಭಾಗವಹಿಸಿಲ್ಲ ಎಂಬ ತೀರ್ಮಾನಕ್ಕೆ ಬರಬಹುದು.

ಹೀಗೆ ಅನೇಕ ವಿಷಯಗಳನ್ನು ತನ್ನಲ್ಲಿ ಅಂತರ್ಗತ ಮಾಡಿಕೊಂಡಿರುವ ಈ ಶಾಸನ ಶ್ರೀಮತ್ ಏಕಾಂತರಾಮಯ್ಯಂಗಳ್ ಂಬ ಶಬ್ದವನ್ನು ಮೂರು ಬಾರಿ ಉಲ್ಲೇಖಿಸುವ ಮೂಲಕ ಏಕಾಂತರಾಮಯ್ಯನಿಗೆ ಒಂದು ಚಾರಿತ್ರಿಕ ಇತಿಹಾಸವನ್ನು ಟ್ಟಿಕೊಡುತ್ತದೆ. ದೇವಾಲಯಗಳಿಗೆ ಕುಂದನ್ನುಂಟು ಮಾಡುವ ಯಾವ ಘಟನೆಯನ್ನೂ ಕಾಳಾಮುಖರು ಸಹಿಸುತ್ತಿರಲಿಲ್ಲ ಂಬ ಅಂಶವನ್ನು ಕೆಲವೊಂದು ಶಾಸನಗಳು ಉಲ್ಲೇಖಿಸುತ್ತವೆ. ಉದಾಹರಣೆ: ಗುಲ್ಬರ್ಗಾ ಜಿಲ್ಲೆಯ ಶಾಸನವೊಂದು ೂರ ಗೌಡನೊಬ್ಬ ದೇವಾಲಯಕ್ಕೆ ಧಕ್ಕೆಯನ್ನುಂಟು ಮಾಡಿದ ಸಲುವಾಗಿ ಯತಿಯೊಬ್ಬ ಅವನನ್ನು ಕೊಂದು ತಾನೂ ಾಯುತ್ತಾನೆ. ಅದಕ್ಕೆ ಇಬ್ಬರಿಗೂ ದಾನ ಕೊಟ್ಟಂತಹ ವಿಷಯವಿದೆ. ದೇವಾಲಯಕ್ಕೆ ಕುಂದನ್ನುಂಟು ಮಾಡಿದ ತಮ್ಮ ೇವವನ್ನು ತೆಗೆದುಕೊಂಡಂತಹ ಘಟನೆಯನ್ನು ಇಲ್ಲಿಯ ಐತಿಹ್ಯದಲ್ಲಿಯೂ ಕಾಣಬಹುದು. ಇಂತಹ ಘಟನೆ ಇಲ್ಲಿ ಡೆದಿರುವ ಸಾಧ್ಯತೆಯಿದೆ. ಅದು ಅತಿರೇಕಕ್ಕೆ ಹೋಗಿ ಹತ್ಯೆಯಾಗಿ ಪರಿವರ್ತನೆಯಾಗಿರಬಹುದು. ಜೈನರು ಮತ್ತು ಕಾಂತದ ರಾಮಯ್ಯನ ಹೋರಾಟವು ಐತಿಹ್ಯವಾಗಿ ಮಾರ್ಪಾಡಾಗಿರುವ ಸಾಧ್ಯತೆಯಿದೆ. ಇಲ್ಲಿ ನಾನೂ ಜೈನರ ಸದಿಗಳನ್ನು ಒಡೆದೇ ಹಾಕಿಲ್ಲ ಎಂಬ ವಾದವನ್ನು ಮಂಡಿಸುವುದಿಲ್ಲ. ಐತಿಹ್ಯದಲ್ಲಿಯೂ ಜೈನ ಬಸದಿಯನ್ನು ನಾಶಮಾಡಿದ ಷಯ ಬರುವುದರಿಂದ ಘಟನೆಯೊಂದು ನಡೆದಿದೆ. ಅದು ಮುಂದೆ ಪವಾಡವಾಗಿ ಚರಿತ್ರೆ ಮರೆಯಾಗಿದೆ. ಈ ಘಟನೆಯನ್ನು ಮಜೋ-ಆರ್ಥಿಕ ದೃಷ್ಟಿಯಿಂದಲೇ ಗಮನಿಸಬೇಕಾಗಿದೆ. ೧೨ನೆಯ ಶತಮಾನದ ನಂತರದಲ್ಲಿಯೂ ಜೈನರು ಈ ದೇಶದಲ್ಲಿ ಸಮೃದ್ಧರಾಗಿದ್ದುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಸಾಕಷ್ಟು ಜೈನ ಬಸದಿ ಮತ್ತು ಸಮಾಜವನ್ನು ಹೊಂದಿದ್ದ ಪ್ರದೇಶ ಕಾಲಾಂತರದಲ್ಲಿ ಸಂಪೂರ್ಣವಾಗಿ ಶೈವೀಕರಣಗೊಳ್ಳುವ ಕ್ರಿಯೆಯನ್ನು ಶಾಸನಗಳಲ್ಲಿ ಗಮನಿಸಬಹುದು. ವೀಕರಣ ಪ್ರಕ್ರಿಯೆಯಲ್ಲಿ ಈ ಐತಿಹ್ಯ ರೂಪುಗೊಂಡಿರುವ ಸಾಧ್ಯತೆಯನ್ನು ಅಲ್ಲಗಳೆಯಲಾಗುವುದಿಲ್ಲ.

**ಶಾಸನ ಪಠ್ಯ**

ಂ ನಮ ಶಿವಾಯ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯ

. . . .. . . . . . . . . .ಶಂಭವೆ

. . . . . . . . . . . . . . . . . . . . . ಸ . . ಳುತವಾಗೆ

. . . . . . . . . . . . . . . . . . . .ಶ್ರೀಮತು ಅಬ್ಬಲೂರ

. . . . . . . . . . . . . . . . . . . . . .ಶಾಸನ

. . . . . . . . . . . . . . . . . . . . . . ಲೀಲೆಯಿಂ

. . . . . . . . . . . . . . . . . . . . . . ಚಲಾ

೭ . . . . . . . . . . . . . . . . . . . . . .ನಿಗಮ
೮ . . . . . . . . . . . . . . . . . . . . . ಬಿ.ಮ
೯ . . . . . . . . . . . . . . . . . . . . .ರಾಮಯ್ಯ
೧೦ . . . . . . . . . . . . . . . . . . .ರಾಮ
೧೧ . . . . . . . . . . . . . . . . . . .ಮತುಶದರೀ
೧೨ . . . . . . . . . . .. . . . .ಚಂದ್ರಾದಿತ್ಯ
೧೩ . . . . . . . . . . . . . . . . ಹ . ಮಹಸ್ವ
೧೪ . . . . . . . . . . . . . . . . . ಬ್ಬಲೂರಶ್ರೀ
೧೫ ವೀರಸೋಮನಾಥದೇವರಿಗೆ ಕೊಟ್ಟ . . . . . . .ಮನ್ನೆ . . . . ಸತ್ತಳಿಗೆ ಯಪ್ಪತ್ತಱ
೧೬ . . . . . . . . . . . . (ನಾಡ . ಲ್ಲಮನೆ. .ಮೂಲಿಗರಾಗಿ (ಆವು?)ರನಜೆ
೧೭ . . . (ಮನ್ನೆಯ) ಮಲಾ . . ಪ್ರಜೋತ್ಪತ್ತಿ ಸಂವತ್ಸರದ ಸೋಮವಾರ ಅಮ
೧೮ ವಸೆ ಸಂಕ್ರಮಣದಂದು ಶ್ರೀಮ . . .ಸ್ವರ ಧೇವರ ಸನ್ನಿಧಾನದಲು .ಧವನು ಎಕಾನ್ತ
೧೯ ದ ರಾಮಯ್ಯಂಗಳ ಕೈಯಲು ಧಾರಾಪೂರ್ವ್ವಕಂ ಮಾಡಿ ಸರ್ವನಮಸ್ಯವಾಗಿ ಕೊಟ್ಟರು ಸತಸಹ
೨೦ ಜೋಇದೇವರಸ ಪಂಪರಾಸಿ ಗೋವಿನ್ದಮಯ್ಯ ನುಡಿವನು ಬದ್ರದೇವರ ಮಹಸತ್ವ
೨೧ ಚರಿತಾರ್ಥ ನೆಗಳೆ ವಿಸ್ವಾವಿನಿತೊಮವನಿತಳದೊಳು ಪ್ರತಿಷ್ಠಾಸ್ಯಾತ್ಯಾ ಲಕ್ಷಣಂ ಮಹತೋಗುಣ ಮು
೨೨ ಮದನತರಂ ಶ್ರೀಮದೇಕಾನ್ತದ ರಾಮಯ್ಯಂಗಳು ಬಿಜಯಂ ಗೆಯ್ದು ಸುಮುಹೂರ್ತದೊಳು ಸಂಕನಿಕ್ಕಿ ಪ್ರಜಾಭರ
೨೩ ಣಂ ಮಾಡಿ ಕಂಗಳನೀವಂ ಕ(ರ್ಚ್ಚಿ?)ದ ಲಿಂಗಂ ಪ್ರತಿಷ್ಠೆಯಂ ಮಾಡಿ ಶ್ರೀಸೋಮೇಶ್ವರ ದೇವರಿಗೆ ಬಿಟ್ಟ ಕ ೬೦
೨೪ . .ಸ್ತಳದ ಶ್ರೀಮದಂಧಡ ದೇವರ ಮುಂದಣ ಗಡಿ ಮಾರಕೊಂಡು ೧೦೦ಕಂ ಸವಣಗೆಱೆಯಿಂ ತೆಂಕಣ
೨೫ . ಬಿಟ್ಟ ಮತ್ತರ್ ೬೦ ಖಂಡಸ್ಫುಟಿತಜೀರ್ಣ್ಣೋದ್ಧಾರಕ್ಕಂ ತಂಮಳಿಯ ಸೋಮೇಯನಗ್ರಾಸನಕ್ಕಂ ದೇವರ ನೀ
೨೬ ವೇದ್ಯ (ದೂಪದೀಪಕ್ಕಂ) ಪ್ರತಿಷ್ಠಾ ಕಾಲದಲಿ ಧಾರಾಪೂರ್ವ್ವಕಮುಂ ಮಾಡಿಕೊಟ್ಟರು ಶ್ರೀಮತು ಬನವಸೆ ಪಂ
೨೭ .. ನಾಡ ಅಧಿಕಾರಿ ಮಂಡವದರಸ ಚಟ್ಟಯ್ಯಂಗಳು ಅವರ ಪಳಿಹರ ಬದುಮಾಳು ದಾವರಸ
೨೮ . . . ದವರಸ ಅವರ ಪಳಿಹರ ಹರಿಯಣ್ಣನು ಎಚಯ್ಯಂ ಸತ್ತಳಿಗೆಯ ಗೋಗಮೆಯ ಗ್ರಾಮಮಂ \ ನಮಸ್ಯ
೨೯ ವಾಗಿ ದೇವರಿಗೆ ಬಿಟ್ಟ ಕಮ್ಮ ಪತ್ತದಱುನೂಱು ಗಾಣ ಮೂಱು (ಅಂ)ಗಡಿ ಮೂಱು ಸ.ದ ಮೂ . .
೩೦ . . . . . . . . ಧರ್ಮ್ಮವಂ ಪ್ರತಿಪಾಳಿಸುವರು ಶ್ರೀಮದೇಕಾನ್ತದ ರಾಮಯ್ಯಂಗಳು ಶ್ರೀಮ
೩೧ ಅಬ್ಬಲೂರ . . . . . . . . . .
(ಮುಂದಿನ ಸಾಲು ಕಾಣಿಸುವುದಿಲ್ಲ)



# ಮಲ್ಲಿಗೆಹಳ್ಳಿ ಗ್ರಾಮದ ಹೊಸ ಶಾಸನಗಳು

ಎಲ್. ಅನಿಲ್*

**ಚಾ**ಮರಾಜನಗರ ಜಿಲ್ಲೆ, ಯಳಂದೂರು ತಾಲೂಕಿನಲ್ಲಿರುವ ಮಲ್ಲಿಗೆಹಳ್ಳಿ ಗ್ರಾಮವು ಯಳಂದೂರಿನಿಂದ ಸುಮಾರು ಕಿ.ಮೀ. ದೂರದಲ್ಲಿ ಪಶ್ಚಿಮ ಭಾಗಕ್ಕಿದೆ. ಈ ಗ್ರಾಮ ನಾನು ಕ್ಷೇತ್ರಕಾರ್ಯಕ್ಕೆ ತೆರಳಿದ ಸಂದರ್ಭದಲ್ಲಿ ಈ ಶಾಸನಗಳು ತ್ತೆಯಾದವು. ಈ ಕನ್ನಡ ಶಾಸನವು ಗ್ರಾಮದ ಮುಸ್ಲಿಂ ಸಮುದಾಯದ ಜಾಕೀರ್ ಎಂಬುವವರ ಮನೆಯ ಮುಂಭಾಗದಲ್ಲಿದೆ. ದು ಎರಡು ತುಂಡುಗಳಾಗಿ ಹೊಡೆದು ಹೋಗಿದೆ. ಹಾಗೂ ಮತ್ತೊಂದು ತಮಿಳು ಶಾಸನವು ಅದೇ ಗ್ರಾಮದ ಉಪ್ಪಾರ ೀದಿಗೆ ಹೋಗುವ ದಾರಿಯ ಪಕ್ಕದ ಚಾವಡಿ ಕಟ್ಟೆಯ ಮೇಲಿದೆ.

**ಶಾಸನ ಪಾಠ**

......ತ್ತ ಮತ್ರಾಯ.............

......ಹವಾಗಿ ಅನುಭವಸಿ ಬಹಿರಿಯ್ಯಂದು..........

......ಮಹಾ ಶ್ರೀಶ್ರೀಶ್ರೀ ಶುಭಮಸ್ತು

......ಯೋರ್ಮ್ಮದ್ಯೆ ದಾನಾಶ್ರೆಯೋನ್ನಪಾಲನಂ।

ದಾನಾತ್ಸ್ವರ್ಗ್ಗಹ..........

.......ಚ್ಯುತಂ ಪದಂ॥ ಸ್ವದತ್ತಂ ದ್ವಿಗುಣಂ ಪುಣ್ಯಂ

ಪರದತ್ತಾನು ಪಾ [ಲನಂ].....

......ಹರೇಣ ಸ್ವದತ್ತಂ........ಫಲಂ ಭವೇತ್॥ ಸ್ವದತ್ತಾಂ

......ಹರೇತಿ ವಸು......ಂ ಷಷ್ಟಿ ವರ್ಷ ಸಹಸ್ರಾಣಿ

ವಿಷ್ಟಾಯಾಂ ಜಾಯತೇ.........

## ಾಸನದ ಸಂಕ್ಷಿಪ್ತ ವಿವರ

ಈ ಶಾಸನವು ಕಣಶಿಲೆಯಿಂದ ಕೂಡಿದ್ದು ಸುಮಾರು ೨ ಅಡಿ ಅಗಲ, ೩ ಅಡಿ ಎತ್ತರ, ೪ ಇಂಚು ದಪ್ಪವಿರುವ ಈ ಾಸನವು ಕನ್ನಡ ಲಿಪಿ ಮತ್ತು ಕನ್ನಡ ಭಾಷೆಯಲ್ಲಿದೆ. ಈ ಶಾಸನದಲ್ಲಿ ಒಟ್ಟು ೭ ಸಾಲುಗಳಿವೆ. ಶಾಸನದಲ್ಲಿ ಕೆಲವು





ಕನ್ನಡ ಶಾಸನ

ಸಂಶೋಧಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈಸೂರು ವಿವಿ, ಮೈಸೂರು-೫೭೦೦೦೬, ಮೊ. ೯೯೦೨೩೪೮೫೦೮೨





ತಮಿಳು ಶಾಸನ

ಅಕ್ಷರಗಳು ತ್ರುಟಿತಗೊಂಡಿವೆ. ಸಂಸ್ಕೃತ ಭಾಷೆಯಲ್ಲಿರುವ ಶಾಪಾಶಯಗಳನ್ನು ಹೊರತುಪಡಿಸಿ ಈ ಶಾಸನವು ತೇದಿ ರಹಿತವಾಗಿದೆ. ಲಿಪಿಯ ಸ್ವರೂಪ ಮತ್ತು ವಿಷಯದ ಹಿನ್ನೆಲೆಯಲ್ಲಿ ಕ್ರಿ.ಶ. ೧೪-೧೫ನೆಯ ಶತಮಾನಕ್ಕೆ ಸೇರುತ್ತದೆ.

## ತಮಿಳು ಶಾಸನ ಪಾಠ

೧. ಸ್ವಾಮಿ ಅಳ್ವಾನೆನ್ ವೈಟ್ಟಾ ವಿಲಕ್ಕು

೨. ಶ್ರೀ ಮನಮ್ಮೆ ಕಿಲನ್ ಉದಯಲ್ ಏನನು ಮೈತ್ತ........

## ಶಾಸನದ ಸಂಕ್ಷಿಪ್ತ ವಿವರ

ಈ ಶಾಸನವು ಗ್ರಾನೈಟ್ ಶಿಲೆಯಿಂದ ಕೂಡಿದ್ದು ಸುಮಾರು ೪ ಅಡಿ ೫ ಇಂಚು ದಪ್ಪವಿರುವ ಈ ಶಾಸನವು ತಮಿಳು ಲಿಪಿ ಮತ್ತು ತಮಿಳು ಭಾಷೆಯಲ್ಲಿದೆ. ಶಾಸನವು ತ್ರಿಪಟ್ಟಕುಮುದದ ಮೇಲಿದೆ. ಶಾಸನದಲ್ಲಿ ಎರಡು ಸಾಲುಗಳ ಪಾಠವಿದೆ. ಪ್ರಸ್ತುತ ಶಾಸನವು ಅಪೂರ್ಣವಾಗಿದ್ದು ಕ್ರಿ.ಶ. ೧೩ನೆಯ ಶತಮಾನಕ್ಕೆ ಸೇರುತ್ತದೆ. ಮನಮ್ಮೆ ಗ್ರಾಮದ ಸ್ವಾಮಿ ಅಳ್ವಾನೆನ್ ಮತ್ತು ಉದಯನ್ ಎಂಬ ಇಬ್ಬರು ವ್ಯಕ್ತಿಗಳು ದೇವಾಲಯದ ದೀಪಾರಾಧನೆಗೆ ದಾನ ನೀಡಿದ ವಿಷಯವನ್ನು ಶಾಸನವು ತಿಳಿಸುತ್ತದೆ.

[ಈ ಶಾಸನವನ್ನು ಪಡಿಯಚ್ಚು ತೆಗೆಯಲು ಸಹಕಾರ ನೀಡಿದ ಕುಮಾರಸ್ವಾಮಿ, ಎಸ್.ಡಿ., ಮಾಹಿತಿ ನೀಡಿದ ಸ್ಥಳೀಯ ನಿವಾಸಿಯಾದ ಜಾಕೀರ್ ಅವರಿಗೂ, ಶಾಸನ ಓದಿ ತಿಳಿಸಿಕೊಟ್ಟ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ಶಾಸನಶಾಸ್ತ್ರ ತಜ್ಞರಾದ ಬಾಲಮುರುಗನ್ ಮತ್ತು ನಾಗರಾಜಪ್ಪ, ಎಸ್., ಅವರುಗಳಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.]



## ಆಕರ ಗ್ರಂಥಗಳು

೧. ಎಪಿಗ್ರಾಫಿಯಾ ಕರ್ನಾಟಿಕ, ಸಂ. ೪, ೧೯೭೫, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨. ನರಸಿಂಹಮೂರ್ತಿ, ಎ.ವಿ., ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

೩. ದೇವರಕೊಂಡಾರೆಡ್ಡಿ, ಕರ್ನಾಟಕ ಶಾಸನಗಳಲ್ಲಿ ಶಾಪಾಶಯ, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ, ೨೦೦೭-೨೦೦೮.

# ಸಾಣಿಕೆರೆ ಕಾವಲಿನ ಹೊಸ ಶಾಸನ

ಜಿ.ಓ. ಶಿವರಾಜ* ಎನ್. ಕುಮಾರ್**

ಸಾಣಿಕೆರೆ ಚಳ್ಳಕೆರೆ ತಾಲೂಕು ಕೇಂದ್ರದಿಂದ ದಕ್ಷಿಣಕ್ಕೆ ೧೪ ಕಿಲೋಮೀಟರ್ ದೂರದಲ್ಲಿರುವ ಕಂದಾಯ ಗ್ರಾಮ. ಜಯನಗರ ಅರಸರ ಆಳ್ವಿಕೆಗೆ ಒಳಪಟ್ಟ ಗ್ರಾಮವಾಗಿದ್ದು, ಕಾಲಾಂತರ ಚಿತ್ರದುರ್ಗ ಪಾಳೆಯಗಾರರ ಆಳ್ವಿಕೆಗೆ ಸೇರಿದ ಗ್ಗೆ ಕೋಟೆ ಕೊತ್ತಲಗಳು, ಶಾಸನ ಆಧಾರಗಳಿವೆ. ೧೬೭೫ರಲ್ಲಿ ಚಿತ್ರದುರ್ಗ ಪಾಳೆಯಗಾರನಾದ ಮತ್ತೀ ತಿಮ್ಮಣ್ಣನಾಯಕನು ಳ್ವಿಕೆ ನಡೆಸಿದ್ದು, ಕ್ರಮೇಣ ಅದೇ ಗ್ರಾಮದವನೇ ಆದ ಸಾಣಪ್ಪನಾಯಕನನ್ನು ಉಸ್ತುವಾರಿ ರಾಜನನ್ನಾಗಿ ನೇಮಿಸಲಾಗಿದ್ದು, ಣಪ್ಪನಾಯಕನು ಚಿತ್ರದುರ್ಗ ಅರಸರ ಮತ್ತು ನಿಡುಗಲ್ಲು ಪ್ರಾಂತ್ಯದ ಅರಸರ ಸಹಕಾರದಿಂದ ಕೆರೆಯನ್ನು ನಿರ್ಮಾಣಮಾಡಿ ರಿನ ನೆಚ್ಚಿನ ರಾಜನಾಗಿದ್ದರಿಂದ ಆ ಊರಿಗೆ ಆತನ ಹೆಸರಿಂದ ಸಾಣಪ್ಪನಾಯಕನಕೆರೆ ಎಂಬುದಾಗಿ ಕರೆಯುತ್ತಿದ್ದು, ಮೇಣ ಸಾಣಿಕೆರೆ ಎಂದು ಕರೆಯುತ್ತಾರೆಂಬ ಐತಿಹ್ಯವಿದೆ.

ಶಾಸನದ ವಿವರ; ಈ ಶಾಸನವು ವಿಜಯನಗರ ಕಾಲದ ಅಚ್ಯುತರಾಯನು ಬರೆಸಿದ ಶಾಸನವಾಗಿದ್ದು, ಇದು ಣಿಕೆರೆಯ ಕೆರೆಯ ದಕ್ಷಿಣ ದಿಕ್ಕಿನಲ್ಲಿದೆ. ಇದರ ಅಳತೆ ೩ ಅಡಿ ಉದ್ದ ೨.೬ ಅಡಿ ಅಗಲ.



ಸಾಣಿಕೆರೆ ಕಾವಲಿನ ಅಪ್ರಕಟಿತ ಶಾಸನ

ಈ ಶಾಸನದಲ್ಲಿ ಒಟ್ಟು ಒಂಬತ್ತು ಸಾಲುಗಳಿವೆ.

. ವೈಯಸಂವತ್ಸರಧಅಶ್ವಜಶು
. ೧೦ ಲು ಶ್ರೀ ಮತು ಅಚುತರಾಯರ..
. ಕೃಷ್ಣಪನಾಯಕ ಕಾರ್ಯಕರ್ತ ಠ....
. ಸಿವ.ಕೆರೆಯ ಮಹಲಿಂಗರತಿಗ ಉ.
. ..ಉತ್ತರವನು..ತಿಗೆಕಂ.ಕಾಲ
. ಉಂ.. ಕಲ್ಲಮರಕೆ ಅರೂ/ ಕೃತ.
. ಹೂಲ ತೆರಿಗೆ ಕುಂ.....

ಪಿಎಚ್‌ಡಿ ಸಂಶೋಧನಾ ವಿದ್ಯಾರ್ಥಿಗಳು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬, ಮೊ. ೯೧೬೪೭೦೪೩೬೮

೮. ೦ ತಿಮ್ಮನರ ತಂಮ..ಯ..

೯. ರ ಕೂ.ದು ತಿಂಮಂಣನ ಬರಹ

ಈ ಶಾಸನದಲ್ಲಿ ಅಚುತರಾಯ ಎಂಬ ಹೆಸರು ಕಂಡು ಬಂದಿದ್ದು ಅದು ವಿಜಯನಗರ ಸಾಮ್ರಾಜ್ಯದ ಅರಸ ಅಚ್ಯುತರಾಯನೇ ಆಗಿದ್ದರೆ, ಈ ಶಾಸನವು ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಶಾಸನವೆಂದು ಖಚಿತ ಪಡಿಸಿಕೊಳ್ಳಬಹುದು. ಈ ಶಾಸನದಲ್ಲಿ ಮಹಲಿಂಗರತಿ(೦)ಗ ಎಂಬ ಹೆಸರು ಕಂಡು ಬಂದಿದ್ದು ಅದು ವಿಜಯನಗರ ಸಾಮ್ರಾಜ್ಯದಲ್ಲಿದ್ದ ಮೊಳಕಾಲ್ಮೂರು ತಾಲೂಕು ಮೂಲದವನಾಗಿದ್ದು, ಬಿಳಿಚೋಡು ಪರಿಸರದ ಹುಣಸೆಕಲ್ಲುಗುಡ್ಡದಲ್ಲಿ ಐಕ್ಯನಾಗಿದ್ದ ಮಹಾಲಿಂಗರಂಗನೇ ಇವನಾಗಿದ್ದರೆ ಈ ಶಾಸನದ ಮಹತ್ವವು ಹೆಚ್ಚಾಗುತ್ತದೆ. ಏಕೆಂದರೆ ಅವನು ವಿಜಯನಗರ ಕಾಲದಲ್ಲಿ ಸಂಸ್ಕೃತ ಭಾಷೆಗೆ ಸೆಡ್ಡು ಹೊಡೆದು ಕನ್ನಡ ಭಾಷೆಯಲ್ಲಿ ಅನುಭವಾಮೃತ ಎನ್ನುವ ಕೃತಿಯೊಂದನ್ನು ರಚಿಸಿದ್ದು ಅದು ಇಂದಿಗೂ ಕನ್ನಡ ಭಾಷಾ ಸಾಹಿತ್ಯದಲ್ಲಿ ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ.

ಈ ಶಾಸನದಲ್ಲಿ ಕೃಷ್ಣಪನಾಯಕ, ತಿಮ್ಮನರ ತಂಮ, ತಿಂಮಂಣನ ಬರಹ, ಕಲ್ಲಪುರಕೆ, ಹೂ(ಹೊ)ಲ, ತೆರಿಗೆ ಎಂಬ ಪದಗಳ ಉಲ್ಲೇಖವಿದ್ದು, ಈ ಶಾಸನದ ಒಟ್ಟು ಆಶಯ ಅಚ್ಯುತರಾಯನ ಕಾಲಾವಧಿಯಲ್ಲಿ ಕೃಷ್ಣಪ್ಪನಾಯಕ ಎಂಬುವನ ನಾಯಕತ್ವದಲ್ಲಿ ಕಲ್ಲಪುರ ಎಂಬ ಗ್ರಾಮದ ಹೊಲದ ತೆರಿಗೆಯನ್ನು ಸಿವ.ಕೆರೆ ಎನ್ನುವ ಮಹಲಿಂಗರತಿ(೦)ಗ ಎನ್ನುವವನಿಗೆ ದಾನ ಕೊಟ್ಟ ಉಲ್ಲೇಖವಿರುವ ಶಾಸನವಾಗಿದ್ದು, ಇದು ತಿಮ್ಮಣ್ಣನ ತಮ್ಮ ಈ ಶಾಸನವನ್ನು ಹಾಕಿಸಿರುವ ಸಾಧ್ಯತೆಯಿದೆ.

[ನನ್ನ ನೆಚ್ಚಿನ ಗುರುಗಳಾದ ಡಾ. ಕೆ. ಮೋಹನ್ ಕೃಷ್ಣ ರೈ ಮತ್ತು ಡಾ. ಬಿ. ಜಯಮ್ಮ ಅವರಿಗೆ, ಕ್ಷೇತ್ರಕಾರ್ಯದಲ್ಲಿ ಪಾಲ್ಗೊಂಡು ಸಹಕರಿಸಿದ ಸಾಣಿಕೆರೆ ಗ್ರಾಮದ ದಳಪತಿಗಳಾದ ದಯಾನಂದ ಕಾವಲ್, ನವೀನ, ರಘು, ಸ್ನೇಹಿತರಾದ ಜಗದೀಶ್. ಜಿ.ವಿ, ತಿಪ್ಪೇಶ ಹೆಚ್. ಎಂ, ಹಾಗೂ ಶಾಸನಪಾಠವನ್ನು ಓದಿ ಕೊಟ್ಟಿರುವ ರಾಘವೇಂದ್ರಚಾರಿ ಕೆ.ಎಂ. ಇವರೆಲ್ಲರಿಗೂ ಧನ್ಯವಾದಗಳು]



# ಮೈಸೂರು ಜಿಲ್ಲೆಯ ಎರಡು ಹೊಸ ಶಾಸನಗಳು

ಸಿ.ಆರ್. ಮಧುಸೂದನ್*

**ಮೈ**ಸೂರು ನಗರದ ಕೃಷ್ಣರಾಜ ಮೊಹಲ್ಲಾದಲ್ಲಿರುವ ರಾಮಾನುಜ ರಸ್ತೆಯಲ್ಲಿ ವಿಜಯನಗರೋತ್ತರ ಕಾಲದ ದೊಡ್ಡಬಸವೇಶ್ವರ ದೇವಾಲಯವಿದ್ದು, ಇದರಲ್ಲಿ ಗರ್ಭಗುಡಿ ಮತ್ತು ಚಿಕ್ಕದಾದ ನವರಂಗವಿದೆ. ಗರ್ಭಗುಡಿಯಲ್ಲಿ ಅರ್ಧ ಅಡಿ ಎತ್ತರದ ಪಾಣೀಪೀಠದ ಮೇಲೆ ಮೂರು ಅಡಿ ಎತ್ತರ ಮತ್ತು ನಾಲ್ಕು ಅಡಿ ಉದ್ದದ ಗ್ರಾನೈಟ್ ಶಿಲೆಯಿಂದ ಮಾಡಿರುವ ನಂದಿಯ ವಿಗ್ರಹವನ್ನು ಪಶ್ಚಿಮಾಭಿಮುಖವಾಗಿ ಪ್ರತಿಷ್ಠಾಪಿಸಲಾಗಿದೆ. ಈ ನಂದಿಯು ಮುಖವನ್ನು ಮೇಲಕ್ಕೆ ಎತ್ತಿ ಕಿವಿಗಳನ್ನು ನೆಟ್ಟಗೆ ನಿಮಿರಿಕೊಂಡು ಪ್ರಶಾಂತವಾದ ಮುಖಭಾವದ ಭಂಗಿಯಲ್ಲಿದ್ದು, ಬಲಗಾಲನ್ನು ಊರಿ ಎಡಗಾಲನ್ನು ಮಡಿಸಿದ ರೀತಿಯಲ್ಲಿ ಕೆತ್ತಲಾಗಿದೆ. ಈ ನಂದಿಯ ವಿಗ್ರಹದ ಕೊರಳಿನಲ್ಲಿ ಮೂರು ಸುತ್ತಿನ ಗಂಟೆಯ ಸರವಿದೆ. ಹಾಗೆಯೇ ಬೆನ್ನಿನ ಮೇಲೆ ಎದ್ದ ಎತ್ತರವಾದ ಭುಜವಿದ್ದು, ಸರಪಳಿಯ ಅಲಂಕಾರವನ್ನೂ ಹೊಂದಿದೆ. ಚಾಮುಂಡಿ ಬೆಟ್ಟದ ಮೇಲಿರುವ ನಂದಿಯ ವಿಗ್ರಹ ಮತ್ತು ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯದಲ್ಲಿರುವ ನಂದಿಯ ವಿಗ್ರಹಗಳನ್ನು ಬಿಟ್ಟರೆ ಇದನ್ನು ಮೈಸೂರು ಜಿಲ್ಲೆಯಲ್ಲಿರುವ ಪ್ರಾಚೀನವಾದ, ಮೂರನೆಯ ದೊಡ್ಡದಾದ ನಂದಿಯ ವಿಗ್ರಹವೆಂದು ಹೇಳಬಹುದಾಗಿದೆ.

ಈ ದೇವಾಲಯದ ನವರಂಗದಲ್ಲಿ ಎರಡು ಎರಕಹೊಯ್ದ ಗಂಟೆಗಳನ್ನು ನೇತುಹಾಕಲಾಗಿದ್ದು, ಇವುಗಳ ಮೇಲೆ 'ದೊಡ್ಡಬಸವೇಶ್ವರ ದೇವಸ್ಥಾನಕ್ಕೆ ಗಳುವಿನ ಬಸಪ್ಪನವರ ಸೇವಾರ್ಥ' ಎಂದು ಕೊರೆಯಲಾಗಿದೆ. ಇದರ ಕೆಳಗೆ 'ತಾ. ೧-೬-೯೧೧' ಎಂದು ಕೊರೆಯಲಾಗಿದೆ. ಆದರೆ ಇದು ಮೈಸೂರಿನ ಒಡೆಯರ ಕಾಲದ ಶಾಸನವಾಗಿದ್ದು ಇದರ ಕಾಲ '೧-೬- ೧೯೧೧' ಎಂದು ಅದರ ಲಿಪಿ ಮತ್ತು ಇನ್ನಿತರ ಲಭ್ಯ ಆಧಾರಗಳಿಂದ ದೃಢವಾಗಿ ಹೇಳಬಹುದಾಗಿದೆ ಎಂದು ಶಾಸನ ತಜ್ಞರಾದ ಡಾ. ಎಂ.ಜಿ. ಮಂಜುನಾಥ ಅವರು ಪರಿಶೀಲನೆಯ ವೇಳೆ ಅಭಿಪ್ರಾಯಪಟ್ಟಿದ್ದಾರೆ. ಈ ದೇವಾಲಯದಲ್ಲಿರುವ ನಂದಿಯ ವಿಗ್ರಹ ಮತ್ತು ಶಾಸನವು ಇದುವರೆವಿಗೂ ಯಾವುದೇ ದಾಖಲೆಗಳಲ್ಲಿ ಉಲ್ಲೇಖಗೊಂಡಿರುವುದಿಲ್ಲ. ಈ ಅಪ್ರಕಟಿತ ಶಾಸನ ಮತ್ತು ನಂದಿಯ ವಿಗ್ರಹವನ್ನು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗುರುತಿಸಿದ್ದೇನೆ. ಹಾಗೂ ಸುಮಾರು ಒಂದು ನೂರ ಏಳು ವರ್ಷದ ಈ ಶಾಸನವನ್ನು ಮೊಟ್ಟಮೊದಲ ಬಾರಿಗೆ ಈ ಲೇಖನದ ಮುಖೇನ ಪ್ರಕಟಪಡಿಸಲಾಗುತ್ತಿದೆ.

ಹಾಗೆಯೇ ಮತ್ತೊಂದು ಶಾಸನವು ಟಿ. ನರಸೀಪುರ ಸಮೀಪದ ತಿರುಮಕೂಡಲಿನಲ್ಲಿರುವ ಅಗಸ್ತ್ಯೇಶ್ವರ ದೇವಾಲಯದ ದ್ವಾರಮಂಟಪದ ಹೊರ ಗೋಡೆಯ ಮೇಲಿದೆ. ಈ ಎರಡೂ ನದಿಗಳು ಅಲ್ಲಿನ ಸ್ಫಟಿಕ ಸರೋವರದೊಂದಿಗೆ ಸಂಗಮಿಸುವುದರಿಂದ ಈ ಸ್ಥಳಕ್ಕೆ 'ತಿರುಮಕೂಡಲು' ಎಂಬ ಹೆಸರು ಬಂದಿದೆ ಎಂದು ಹೇಳಲಾಗುತ್ತದೆ. ಹೊಯ್ಸಳರ ಇಮ್ಮಡಿ ವೀರಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಕೆತ್ತಲಾಗಿರುವ ತುಂಬಲ ಗ್ರಾಮದ ಕ್ರಿ.ಶ. ೧೧೮೦ರ ಶಾಸನಗಳಲ್ಲಿ,[೧] ಈತನ ಆಳ್ವಿಕೆಯ ಕಾಲದಲ್ಲಿ ಈ ದೇವಾಲಯದ ಪೂಜಾಕಾರ್ಯಕ್ಕಾಗಿ ತುಂಬಲ ಮತ್ತು ಅದರ ಉಪಗ್ರಾಮಗಳನ್ನು ವೀರಬಲ್ಲಾಳ ಅರಸನು ಅಘಜೀಯನಿಗೆ ದತ್ತಿಯಾಗಿ ಬಿಟ್ಟ ವಿಷಯವು ತಿಳಿದುಬರುತ್ತದೆ. ತಿರುಮಕೂಡಲಿನ ಮೊದಲ ಉಲ್ಲೇಖ ಇದಾಗಿದ್ದು, ಪ್ರಾಚೀನ ಶಾಸನಗಳಲ್ಲಿ ಈ ಗ್ರಾಮವನ್ನು 'ದಕ್ಷಿಣ ಪ್ರಯಾಗ, ದಕ್ಷಿಣವಾರಣಾಸಿ, ಭೂಕೈಲಾಸವಾದ ಶ್ರೀರುದ್ರಪಾದ ಸಾನಿಧ್ಯವಾದ ಕಾವೇರಿ ಕಪಿಲ ಸಂಗಮವು ತಿರುಮಕೂಡಲು' ಎಂದೇ ಉಲ್ಲೇಖಗೊಂಡಿದೆ.

ಇಲ್ಲಿರುವ ಪ್ರಮುಖ ಹಾಗೂ ಪ್ರಾಚೀನ ದೇವಾಲಯಗಳಲ್ಲಿ ಅಗಸ್ತ್ಯೇಶ್ವರ ದೇವಾಲಯವೂ ಒಂದು. ಕ್ರಿ.ಶ. ೧೦-೧೧ನೆಯ ಶತಮಾನದ ಕೊನೆಯಲ್ಲಿ ನಿರ್ಮಾಣಗೊಂಡಿತ್ತೆಂದು ಹೇಳಲಾಗುವ ಈ ದೇವಾಲಯವು ಪೂರ್ವಾಭಿಮುಖವಾಗಿ ನಿರ್ಮಾಣವಾಗಿದ್ದು, ವಿಶಾಲವಾದ ಸಂಕೀರ್ಣವನ್ನು ಹೊಂದಿದೆ. ಅಲ್ಲದೆ ಈ ದೇವಾಲಯದ ಮುಖ್ಯದ್ವಾರವು ಉತ್ತರ ದಿಕ್ಕಿಗಿದ್ದು, ಇದರ ಮೂಲಗರ್ಭಗೃಹದಲ್ಲಿ ಅಗಸ್ತ್ಯೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇಗುಲದ ನವರಂಗದಲ್ಲಿ

* ಸಹಾಯಕ ಕನ್ನಡ ಪ್ರಾಧ್ಯಾಪಕ, ಜೆಎಸ್‌ಎಸ್ ಕಲಾ ಮತ್ತು ವಾಣಿಜ್ಯ ಕಾಲೇಜು, ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ, ಮೊ. ೯೪೪೯೭೬೩೮೦೦

ದುಂಡನೆಯ ಆಕಾರದ ಕಂಬಗಳಿದ್ದು, ಇದರ ಬಾಗಿಲು ವಾಡವು ಸರಳವಾಗಿದೆ. ನವರಂಗದ ಮುಂಭಾಗದಲ್ಲಿ ವಿಜಯನಗರ ಕಾಲದ ರಚನೆಯೆಂದು ಹೇಳಲಾಗುವ ವಿಶಾಲವಾದ ಮಂಟಪವಿದೆ. ಇಲ್ಲಿ ವಿಜಯನಗರ ಕಾಲದ ಶೈಲಿಯ ಕಂಬಗಳಿವೆ. ಆನಂತರದಲ್ಲಿ ಇದಕ್ಕೆ ಪ್ರಾಕಾರವನ್ನು ಸೇರಿಸಲಾಗಿದೆ. ಇದರಲ್ಲಿ ಸುಂದರವಾದ ದ್ವಾರಪಾಲಕರು, ಆದಿತ್ಯ, ಸುಬ್ರಹ್ಮಣ್ಯ, ಗಣಪತಿ ಹಾಗೂ ಮಹಿಷಮರ್ಧಿನಿ ಮುಂತಾದ ಶಿಲ್ಪಗಳು ಕಂಡುಬರುತ್ತವೆ. ಈ ದೇವಾಲಯಕ್ಕೆ ಎತ್ತರವಾದ ಕಂಬಗಳನ್ನು ಒಳಗೊಂಡ ವಿಶಾಲವಾದ ಮಂಟಪ ಮತ್ತು ಪ್ರಾಕಾರವನ್ನು ಕ್ರಿ.ಶ. ೧೯ನೆಯ ಶತಮಾನದಲ್ಲಿ ಅಂದರೆ ಮೈಸೂರು ಒಡೆಯರ ಕಾಲದಲ್ಲಿ ನಿರ್ಮಿಸಲಾಗಿದೆ.

ಈ ಮಂಟಪದ ತೊಲೆ ಹಾಗೂ ಛಾವಣಿಗಳ ಮೇಲೆ ಕಪ್ಪು, ಕೆಂಪು ಬಣ್ಣಗಳನ್ನು ಬಳಸಿ ಮುಮ್ಮಡಿ ಕೃಷ್ಣರಾಜಒಡೆಯರ ಮತ್ತು ಬ್ರಿಟಿಷ್ ಅಧಿಕಾರಿಗಳ ಚಿತ್ರಗಳನ್ನೂ ಹಾಗೂ ರೇಖಾಚಿತ್ರ ವಿನ್ಯಾಸಗಳ ಆಕರ್ಷಕವಾದ ಚಿತ್ರಗಳನ್ನು ಬರೆಸಲಾಗಿದೆ. ಆದರೆ ಅವು ಇಂದು ಮಸುಕುಮಸುಕಾಗಿ ದುಸ್ಥಿತಿಯಲ್ಲಿವೆ. ಈ ಮಂಟಪದಲ್ಲಿ ಶಾಸನೋಕ್ತ ನಂದಿಮೂರ್ತಿಯಿದ್ದು, ಇದರ ಮೇಲೆ ಹೊಯ್ಸಳ ವೀರನರಸಿಂಹನ ಆಳ್ವಿಕೆಯ ಕಾಲದ ತಮಿಳಿನ ಶಾಸನವಿದೆ.೨ ಇದರಲ್ಲಿ ತಿರುವಗತ್ತೇಶ್ವರ ಮುಡೈಯಾರ್‌ಗೆ ಜಯ ಸಾಮಂತ ಗಂಗಮಂಡಲ ಪಿಳ್ಳೈದಣ್ಣಾಯಕನು ವೃಷಭದೇವನನ್ನು ಮತ್ತು ಮಂಟಪವನ್ನು ಮಾಡಿಸಿ ದೇವಾಲಯಕ್ಕೆ ನೀಡಿದ ವಿಷಯವನ್ನು ಕೊರೆಸಲಾಗಿದೆ. ಈ ದೇವಾಲಯದ ವಾಯುವ್ಯ ದಿಕ್ಕಿನಲ್ಲಿರುವ, ಇಂದು 'ಪೂರ್ಣಮಂಗಳ ಕಾಮಾಕ್ಷಿ' ಎಂದು ಕರೆಯಲಾಗುವ ಈ ಗುಡಿಯೇ ಶಾಸನೋಕ್ತ ಪಾರ್ವತಿಗುಡಿಯಾಗಿದೆ.” ಎಂದು ಹೇಳಲಾಗುತ್ತದೆ.[೩] ಈ ಗುಡಿಯ ಆವರಣದಲ್ಲಿ ವಿಷ್ಣು ಮತ್ತು ದಕ್ಷಿಣಾಮೂರ್ತಿಯ ಶಿಲ್ಪಗಳು ಕಂಡುಬರುತ್ತವೆ. ಈ ಗುಡಿಯ ಹೊರಪ್ರಾಕಾರದ ಪ್ರವೇಶದ್ವಾರವು ಮುಖ ಮಂಟಪವನ್ನೂ ಮತ್ತು ಪುಟ್ಟ ಶಿಖರವನ್ನೂ ಹೊಂದಿದೆ.

ಈ ದೇವಾಲಯದ ಪ್ರವೇಶದ್ವಾರದ ಬಳಿಯಲ್ಲಿ ಆಕರ್ಷಕವಾದ ತೋರಣಗಳಿದ್ದು ಇದನ್ನು ದೀಪಸ್ತಂಭಗಳು ಹೊತ್ತುನಿಂತಿವೆ. ಇದರ ಬಳಿಯಲ್ಲೇ ಬಲಿಪೀಠವಿದೆ. ಈ ಬಲಿಪೀಠದ ನಾಲ್ಕು ಮುಖಗಳ ಮೇಲೆ ಕ್ರಿ.ಶ. ೧೩ನೆಯ ಶತಮಾನದ ತಮಿಳಿನ ಶಾಸನವಿದ್ದು, ಇದರಲ್ಲಿ ತಿರುವಗಸ್ತ್ಯೇಶ್ವರ ಮುಡೈಯಾರ್ ದೇವರಿಗೆ ಜಯಸಾಮಂತ ಗಂಗಮಂಡಲಪಿಳ್ಳೈ ಅಲಿಯಾಸ್ ವೀರನರಸಿಂಹಪಿಳ್ಳೈದನ್ನಾಯಕನು ಬಲಿಪೀಠವನ್ನು ಮಾಡಿಸಿಕೊಟ್ಟ ಉಲ್ಲೇಖವಿದೆ.[೪] ಅಲ್ಲದೆ ಇಲ್ಲಿ ಹೊಯ್ಸಳರ ಕಾಲದ ಅಷ್ಟಭುಜದ ನಾಟ್ಯ ವಿಷ್ಣುವಿನ ದೇವಾಲಯವಿದೆ. ಇದನ್ನು ಇಂದು ಅಶ್ವತ್ಥನಾರಾಯಣನೆಂದು ಕರೆಯಲಾಗುತ್ತಿದೆ. ಅಗಸ್ತ್ಯೇಶ್ವರ ದೇವಾಲಯದ ಆವರಣದಲ್ಲಿ ಮಾರ್ಕಂಡೇಶ್ವರ, ಸೋಮೇಶ್ವರ, ಗರ್ಗೇಶ್ವರ ಮುಂತಾದವಲ್ಲದೆ ೨೧ ಶಿವಲಿಂಗಗಳನ್ನುಳ್ಳ ಪುಟ್ಟ ಗುಡಿಗಳೂ ಸಹ ಪ್ರಾಕಾರದ ಅಂಚಿನಲ್ಲಿವೆ. ಅಗಸ್ತ್ಯೇಶ್ವರ ದೇವರ ಸನ್ನಿಧಿಯಲ್ಲಿ ಪ್ರತಿ ಮೂರು ವರ್ಷಗಳಿಗೊಮ್ಮೆ ಮಾಘಶುದ್ಧ ಪೌರ್ಣಿಮೆಯಂದು ಕುಂಭಮೇಳವು ನಡೆಯುತ್ತದೆ.

ಈ ಗುಡಿಗೆ ಹೊಂದಿಕೊಂಡಂತೆ ಅಶ್ವತ್ಥಕಟ್ಟೆಯಿದ್ದು, ಇದು ಬ್ರಹ್ಮನಿಂದ ಪೂಜಿತವಾದುದೆಂಬ ಪ್ರತೀತಿಯಿದೆ. ಅಲ್ಲದೆ ಇಲ್ಲಿ ಆಕರ್ಷಕವಾದ ನೂರಾರು ನಾಗರಕಲ್ಲುಗಳಿವೆ. ಇದರ ಬಳಿಯಲ್ಲೇ ಬ್ರಹ್ಮೇಶ್ವರ ದೇವಾಲಯವಿದೆ. ಇದನ್ನು 'ಅಶ್ವತ್ಥಕಟ್ಟೆ ಬ್ರಹ್ಮೇಶ್ವರ ಗುಡಿ' ಎಂದೂ ಕರೆಯಲಾಗುತ್ತದೆ. ಈ ದೇವಾಲಯದ ಗರ್ಭಗೃಹದ ಛಾವಣಿಯಲ್ಲಿ ವಿಜಯನಗರದ ದೊರೆ ಕೃಷ್ಣದೇವರಾಯನ ಆಳ್ವಿಕೆಯ ಕಾಲಕ್ಕೆ ಸೇರಿದ ಶಾಸನವೊಂದಿದ್ದು, ಇದರಲ್ಲಿ ಶರಣಪ್ಪಶೆಟ್ಟಿಯು ಪಾರ್ವತಿದೇವಿಗೆ ದೇವಾಲಯವನ್ನು ಕಟ್ಟಿಸಿದ ವಿಷಯವು ಉಲ್ಲೇಖವಾಗಿದೆ.[೫] ಈ ಗುಡಿಯ ಪಕ್ಕದಲ್ಲೇ ಹತ್ತು ವೃಂದಾವನಗಳಿದ್ದು, ಇದರಲ್ಲಿ ಕ್ರಿ.ಶ. ಸುಮಾರು ೧೮ನೆಯ ಶತಮಾನದಲ್ಲಿದ್ದ ಮಾಧ್ವಯತಿ ರಘುನಾಥತೀರ್ಥ ಶೇಷಚಂದ್ರಿಕಾಚಾರ್ಯರ ವೃಂದಾವನವೂ ಒಂದಾಗಿದೆ.

ತಿರುಮಕೂಡಲಿನಲ್ಲಿರುವ ಈ ಅಗಸ್ತ್ಯೇಶ್ವರ ದೇವಾಲಯದ ಮಹಾದ್ವಾರ ಮಂಟಪದ ಬಲಭಾಗದ ಹೊರಭತ್ತಿಯ ಮೇಲೆ ಮೈಸೂರಿನ ದಿವಾನರಾಗಿದ್ದ ಸರ್ ಮಿರ್ಜಾಇಸ್ಮಾಯಿಲ್‌ರ ಕಾಲದ ಕ್ರಿ.ಶ. ೧೯೪೬ರ ಶಾಸನವೊಂದಿದ್ದು, ಇದನ್ನು ಕಪ್ಪು ಶಿಲೆಯ ಮೇಲೆ ಕೊರೆಯಲಾಗಿದೆ. ಇದು ಸುಮಾರು ಮೂರೂವರೆ ಅಡಿ ಎತ್ತರವಿದ್ದು, ಇದರಲ್ಲಿ ಹಸಿಗೆಸೂರಪ್ಪನೆಂಬ ಬ್ರಾಹ್ಮಣನು ಶಿವಕೂಟದಲ್ಲಿ ಯಾತ್ರಿಕ ಬ್ರಾಹ್ಮಣರ ಭೋಜನಕ್ಕೋಸ್ಕರ ಹತ್ತುಸಾವಿರ ರೂಗಳನ್ನೂ, ತಲಕಾಡು ಸರ್ವೆ ನಂ. ೯೯ರಲ್ಲಿ ೨ ಎಕರೆ ೨೧ ಗುಂಟೆ ಹಾಗೂ ಗಾಣಿಗಕೊಪ್ಪಲು ಸರ್ವೆ ನಂ. ೩೦ರಲ್ಲಿ ೨ ಎಕರೆ ೨೭ ಗುಂಟೆ ಗದ್ದೆಗಳನ್ನೂ ಸಹಾ ದಾನ ಮಾಡಿದ ವಿವರಗಳಿವೆ. ಅಲ್ಲದೆ ಈ ಶಾಸನದ ಕೊನೆಯಲ್ಲಿ ದಿವಾನರಾಗಿದ್ದ ಸರ್ ಮಿರ್ಜಾಇಸ್ಮಾಯಿಲ್ ಅವರು ಬರೆಸಿದ್ದಾಗಿ ಇಂಗ್ಲಿಷ್ ಲಿಪಿಯಲ್ಲಿ ಬರೆಯಲಾಗಿದೆ. ಇದೊಂದು ಅಪ್ರಕಟಿತ ಶಾಸನವಾಗಿದ್ದು, ಇದರಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳನ್ನೂ ಬಳಸಲಾಗಿದ್ದು, ಇದು ಈ ಶಾಸನದ ಮತ್ತೊಂದು ವಿಶೇಷವಾಗಿದೆ. ಅಲ್ಲದೆ ಇದರಲ್ಲಿ 'inscription' ಎಂದು (ಶಾಸನ) ಎಂದು ಇಂಗ್ಲಿಷ್‌ನಲ್ಲಿ ಸ್ಪಷ್ಟವಾಗಿ ಬರೆಯಲಾಗಿದೆ. ನಾನು ಸ್ವತಃ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗುರುತಿಸಲಾದ ಶಾಸನವಾಗಿದ್ದು, ಈ ಅಪ್ರಕಟಿತ ಶಾಸನವು ಮೈಸೂರು ಜಿಲ್ಲೆಯಲ್ಲಿ ಇದುವರೆಗೆ ದೊರೆತಿರುವ

ಅತ್ಯಂತ ಅರ್ವಾಚೀನ ಶಾಸನವಾಗಿದೆ. ಅಲ್ಲದೆ ಇದು ಇದುವರೆವಿಗೂ ಯಾವುದೇ ದಾಖಲೆಗಳಲ್ಲಿ ಪ್ರಕಟವಾಗಿರುವುದಿಲ್ಲ. ಇದರ ಪಾಠವು ಹೀಗಿದೆ.----

"ಸ್ವಸ್ಥಿ ಶ್ರೀಮತ್ ಕೃಷ್ಣರಾಜೇಂದ್ರ
ಓಂ
ಒ.ಸಿ.ಯಸ್.ಐ.ರಾಜತೇತರಾಂ
ಸ್ವಸ್ತಿ, ಶಾ॥ ಶಕ.೧೯.೪೮. ಪ್ರಭವ ಸಂ॥ ಅಶ್ವ ನಿ ಮಾ॥ ಶು॥

ವಿಜಯದಶಮಿ ಗುರುವಾರದಲೂ ಕಾವೇರಿ ಕಪಿಲಾ ಸಂಗಮ ಶ್ರೀ ಅಗಸ್ತ್ಯೇಶ್ವರ ಸ್ವಾಮಿ ಸನ್ನಿಧಿಯಲ್ಲಿ ತಲಕಾಡು ನಾಡ ಹಸಿಗೆಸೂರಪ್ಪನೆಂಬ ಬ್ರಾಹ್ಮಣನು ಶಿವಕೂಟದಲ್ಲಿ ಯಾತ್ರಿಕ ಬ್ರಾಹ್ಮಣ ಭೋಜನಕ್ಕಾಗಿ ಹತ್ತು ಸಾವಿರ ರೂ॥ನ್ನು ತಲಕಾಡು ಸರ್ವೆ ೬೯ ಯ ೨ ಗುಂ ೨೧ ಗಾಣಿಗಕೊಪ್ಪಲು ಸರ್ವೆ ೩೦ ಯ ೨ ಗುಂ ೨೭ ಗದ್ದೆಗಳನ್ನೂ ಸಹಾ ಧರ್ಮ ಮಾಡಿರುವುದನ್ನು ಸರ್ಕಾರದವರು ವಹಿಸಿಕೊಂಡು ಮೇಲ್ಕಂಡವರ ಆದೇಶದಂತೆ ಶಾಶ್ವತವಾಗಿ ನಡೆಸಿಕೊಂಡು ಬರಲು ವಹಿಸಿರುತ್ತಾರೆ." G.O.NO 2585

INSCRIPTION BY STONE LAID
BY
AMIN-UL –MULK . SIR MIRZA MUHAMMAD ISMAIL
K.T.C.I.E.O.B.E
DIWAN OF MYSORE ಎಂದಿದೆ.



**ಅಡಿಟಿಪ್ಪಣಿಗಳು**

೧. ಎಪಿಗ್ರಾಫಿಯ ಕರ್ನಾಟಿಕ-೫, ತಿ. ನರಸೀಪುರ-೪೦, ೪೧, ತುಂಬಲ, ಪುಟ ೪೪೦, ೪೪೧.
೨. ಎಪಿಗ್ರಾಫಿಯ ಕರ್ನಾಟಿಕ-೫, ತಿ. ನರಸೀಪುರ-೨೦, ತಿರುಮಕೂಡಲು, ಪುಟ ೪೨೧.
೩. ಎಪಿಗ್ರಾಫಿಯ ಕರ್ನಾಟಿಕ-೫, ತಿ. ನರಸೀಪುರ-೨೬, ತಿರುಮಕೂಡಲು, ಪುಟ ೪೨೪.
೪. ಎಪಿಗ್ರಾಫಿಯ ಕರ್ನಾಟಿಕ-೫, ತಿ. ನರಸೀಪುರ-೧೯, ತಿರುಮಕೂಡಲು, ಪುಟ ೪೨೧.
೫. ಎಪಿಗ್ರಾಫಿಯ ಕರ್ನಾಟಿಕ-೫, ತಿ. ನರಸೀಪುರ-೨೬, ತಿರುಮಕೂಡಲು, ಪುಟ ೪೨೪.

# ಜೊಂಡಲಗಟ್ಟಿಯ ಹೊಸ ಶಾಸನ

ಎಂ. ಮಂಜುಳಾ ಆಚಾರಿ*

ಹಾವೇರಿ ಜಿಲ್ಲೆಯ ಶಿಗ್ಗಾವಿ ತಾಲೂಕು ಕೇಂದ್ರದಿಂದ ಸು. ೩೦ ಕಿ.ಮೀ. ದೂರದಲ್ಲಿ ಜೊಂಡಲಗಟ್ಟಿ ಗ್ರಾಮವಿದೆ. ಇಲ್ಲಿರುವ ಮಾರುತಿ ದೇವಾಲಯದ ಎದುರಿಗಿರುವ ಹೊಲದಲ್ಲಿ ಈ ಶಾಸನವಿದೆ. ಇದು ಕಲ್ಯಾಣ ಚಾಲುಕ್ಯ ಮನೆತನದ ಆರನೆಯ ವಿಕ್ರಮಾದಿತ್ಯನ ಕಾಲದ ಅಪ್ರಕಟಿತ ಶಾಸನವಾಗಿದೆ. ಇದನ್ನು ಕಪ್ಪು ಮಿಶ್ರಿತ ನೀಲಿ ಛಾಯೆಯ ಬಳಪದ ಶಿಲೆಯ ಮೇಲೆ ಬರೆಯಲಾಗಿದೆ. ಈ ಶಿಲೆಯ ೧೮೦ ಸೆ.ಮೀ. ಎತ್ತರ ಮತ್ತು ೬೦ ಸೆ.ಮೀ ಅಗಲವಾಗಿದೆ. ಇದರಲ್ಲಿ ಒಟ್ಟು ೨೪ ಸಾಲುಗಳಿವೆ. ಶಿಲೆಯ ಮೇಲ್ಭಾಗದಲ್ಲಿ ಉಬ್ಬುಶಿಲ್ಪ ಪಟ್ಟಿಕೆ ಇದೆ. ಅದರ ಮಧ್ಯದಲ್ಲಿ ಶಿವಲಿಂಗ ಬಲಪಾರ್ಶ್ವದಲ್ಲಿ ಆಕಳು ಮತ್ತು ಕರು ಪಕ್ಕದಲ್ಲಿ ಒಬ್ಬ ಯತಿ ಕೈ ಮುಗಿದು ಧ್ಯಾನಾಸಕ್ತನಾಗಿದ್ದಾನೆ. ಎಡಭಾಗಲ್ಲಿ ನಂದಿ ಇದೆ. ಮೇಲ್ಭಾಗದಲ್ಲಿ ಸೂರ್ಯ ಮತ್ತು ಚಂದ್ರರ ಚಿತ್ರಗಳಿವೆ. ಶಾಸನವನ್ನು ಕನ್ನಡ ಲಿಪಿ ಮತ್ತು ಭಾಷೆಯಲ್ಲಿ ಬರೆಯಲಾಗಿದೆ. ಶಾಸನ ಕಲ್ಲು ಅಲ್ಲಲ್ಲಿ ಒಡೆದಿರುವುದರಿಂದ ಕೆಲವು ವಿಷಯಗಳು ಅಸ್ಪಷ್ಟವಾಗಿವೆ. ಶಾಸನದಲ್ಲಿ ಉಲ್ಲೇಖಿತವಾಗಿರುವ ತೇದಿಯ ಆಧಾರದ ಮೇಲೆ ಇದರ ಕಾಲವು ಕ್ರಿ.ಶ. ೧೨ನೇ ಶತಮಾನಕ್ಕೆ ಸಮವಾಗುತ್ತದೆ. ಅಮವಾಸ್ಯೆಯ ಸೂರ್ಯಗ್ರಹಣದ ದಿನದಂದು ಬ್ರಹ್ಮೇಶ್ವರ ದೇವರ ಆಚಾರ್ಯರಿಗೆ ದಾನ ನೀಡಲಾಗಿದೆ.

**ಶಾಸನ ಪಾಠ**

೧. ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪ್ರಥ್ವಿವಲ್ಲಭ ಮಹಾರಾಜದಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರಯ ಕುಳತಿಲಕಂ ಚಾಳುಕ್ಯಭರಣಂ ಶ್ರೀಮತ್ತ್ರಿಭುವನಮಲ್ಲ ದೇವರ

೨. ವಿಜಯ ರಾಜ್ಯಮತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾಚಂದ್ರಾರ್ಕ್ಕ ತಾರಂಬರಂ ಸಲುತ್ತಮಿರೆ. ಸ್ವಸ್ತಿ ಶಮದಿಗ

೩. ತ ಪಂಚಮಹಾಸಬ್ಧ ಮಹಾಮಂಡಳೇಶ್ವರಂ ಬನವಾಸಿ ಪುರವರಾಧಿಶ್ವರಂ ಜಯ್ತನಿ ಮಧುಕೇಶ್ವರದೇ

೪. ವಲ್ದವರ ಪ್ರಸಾದ ಮ್ರಿಗಮದಾಮೋದ ತ್ರಕ್ಷಕ್ಷಾಸಂಭವಂ ಚತುರಾಸಿತಿನಗ್ರರಾದಿಷ್ಟಿತಂ....

೫. .. ಲಲಾಟಲೋಚನಂ ಚತುರ್ಭ್ಭುಜಂ ಜಗದ್ವಿದಿತಾಷ್ಟ ದಸಾಶ್ವ-ಮೇಧದೀಕ್ಷಾದೀಕ್ಷಿತಂ ಹಿಮವದ್ಗಿರೀಂದ್ರ

೬. ರುಂದ್ರ ಶಿಖರ ಸಕ್ತಿ ಸಂಸ್ಥಾಪಿತ ಸ್ಪಟಿಕಸಿಳಾಸ್ತಂಭ ಭದ್ರಮಗಜ....

೭. ಮಹಾಮಹಿಮಾಭಿರಾಮ ಕಾದಂಬಚಕ್ರಿ ಮಯೂರವರ್ಮ ಮಹಾಮಹಿಪಾಳ ಕುಳಭೂಷಣಂ ಪೆರ್ಮಟ್ಟಿತೂರ್ಯ್ಯ ನಿರ್ಘೋಷಣಂ ಶಾಖಾಚರೇಂದ್ರ ಧ್ವಜ ವಿರಾಜಮಾನ ಮನೋತ್ತುಂಗ ಸಿಂಹಲಾಂಛನಂ

೮. ದತ್ತಾರ್ತಿಕಾಂಚನಂ ಸಮರಜಯ ಕಾರಣಂ ಕಾದಂಬರಾಭರಣಮಾ

೯. ಕ್ಕೊರ್ಳ್ವರಗಂಡ ಪ್ರತಾಪಮಾರ್ತಂಡ ಸಾಹಸೊತ್ತುಂಗ ಶ್ರೀ ಮತ್ತ್ರಿಭುವನ ಮಲ್ಲದೇವ

೧೦. ಪಾದಜ್ಜಭ್ರಿಂಗನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ಮನ್ಮಹಾಮಂಡಳೇಶ್ವರಂ ತೈಲಪದೇವರು.

೧೧. ಬನವಾಸಿ ಪನ್ನಿರ್ಚಾಸಿರಮುಮಂ ಪಾನುಂಗಲ್ಲೈನೂರು ಮಂ ರಾಜ್ಯಂಗೈಯುತ್ತಮಿರೆ ಸ್ವಸ್ತಿ ಸಮೊಗುಣ ಸಂಪ

೧೨. ರಾದೇಯ ಬಾಜನೆಯ ಸುಜನ ಜನಮೊ ನಾನು ಮೊ ನಾನು ಮೇ ದಿ ನಿರಾಜ ಹಂಸ ಸಮಸ್ತಗುಣ ಸಂಪನ

೧೩. .... ಗಾವುಂಡನ ಸುಪುತ್ರ ಕೆಲ್ಲಗಾವುಂಡ! ಚಾಳುಕ್ಯ ವಿಕ್ರಮ ಕಾಲದ ೧೭ ನೆಯ

೧೪. ಸಂವತ್ಸರದುತ್ತರಾಯಣ ಸಂಕ್ರಾನ್ತಿ ವ್ಯತಿಪಾತದಂದು ಬ್ರಹ್ಮೇಶ್ವರ...

* ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ಮಹಿಳಾ ಮಹಾವಿದ್ಯಾಲಯ, ಹಾವೇರಿ, ಮೊ. ೯೯೧೩೧೮೮೫೮೩



೧೫. ಕಾಲಂಕರ್ಚಿ ದಾರಾಪೂರ್ವಕಂ ಮಾಡಿ ಬಿಟ್ಟ ಧರ್ಮವೆನ್ತಂದರೆ ದರ್....
೧೬. .....ತ...ರೆ (ಯ) ॥ ಶ್ರೀ ಸೋಮೇಶ್ವರ ನಾರಾಯಣದೇವರಿಗೆ ಗಾವುನ್ಡ......
೧೭. ಧರ್ಮವರ ಪ್ರತಿಪಾಳದೆದೆಲ್ಲ ಸ್ವಮೋದಯಗ್ನ ಮಾಡಿದ.......... ಕಾ....
೧೮. ........ಈದನಗಳಿದವಂಗೆ...........ಯಂ ಕೊಂ॥ ಸ...
೧೯. ಂಮೋಜ.. ಬಿಟ್ಟ...ಬಳ್ಳಿಗಾವಿ (ದೆ) ಯ ದೇವತರು ಇದಂ....
೨೦. ಮವರ ಕುಲಪ್ರದೀಪಕದೇವ ಗಾವುಣ್ಡನುಂ ಬ್ರಹ್ಮೇಶ್ವರ ದೇವರಾಚಾರ್ಯ....
೨೧. ..... ಹುಳದಮವಾಸ್ಯ ಸೂರ್ಯಗ್ರಹಣದಂದು ಕಾಲಂಕರ್ಚಿ ಧಾರಾ....
೨೨. ಬಿಟ್ಟರು । ಆತಿಥಿಯಲು ಬ್ರಹ್ಮಪುರ ಸಮುದ್ಧರಣ....
೨೩. .....ಸಮುದ್ಧರಣ..........

**ಶಾಸನದ ಸಾರಾಂಶ**

ಶಾಸನವು ಕಲ್ಯಾಣ ಚಾಲುಕ್ಯ ಮನೆತನದ ಅರಸನಾದ ಶ್ರೀಮತ್ ತ್ರಿಭುವನಮಲ್ಲ ಅಂದರೆ ಆರನೇಯ ವಿಕ್ರಮಾದಿತ್ಯನ ಪ್ರಶಸ್ತಿಯನ್ನು ಹೇಳುತ್ತದೆ. ಶಾಸನದಲ್ಲಿ ಪಾನುಂಗಲ್ಲು ೫೦೦ ಮತ್ತು ಬನವಾಸಿ ೧೨೦೦೦ ಪ್ರಾಂತ್ಯಗಳನ್ನು ಆಳುತ್ತಿದ್ದ ಮಹಾಮಂಡಳೇಶ್ವರನಾದ ತೈಲಪದೇವನ ಪ್ರಶಸ್ತಿಗಳ ನಿರೂಪಣೆ ಇದೆ.

...ಗಾವುಂಡನ ಮಗನಾದ ಕೆಲ್ಲಗಾವುಂಡನು ಬ್ರಹ್ಮೇಶ್ವರ ದೇವರ ಆಚಾರ್ಯರಿಗೆ ದಾನ ನೀಡಿದ ಉಲ್ಲೇಖವಿದ್ದು ಅಮವಾಸ್ಯೆ ಮತ್ತು ಸೂರ್ಯಗ್ರಹಣದ ದಿನದಂದು ದಾನ ನೀಡಿರುವುದಾಗಿ ಹೇಳಿದೆ. ಇಲ್ಲಿ ಆಚಾರ್ಯರ ಹೆಸರು ಮತ್ತು ದಾನದ (ವಸ್ತು) ವಿವರಗಳು ತ್ರುಟಿತವಾಗಿದೆ.

**ಮಹತ್ವ :** ಇಲ್ಲಿ ಬ್ರಹ್ಮೇಶ್ವರ, ಸೋಮೇಶ್ವರ, ನಾರಾಯಣ ದೇವರುಗಳ ಉಲ್ಲೇಖವಿದೆ. ಕುಲಪ್ರದೀಪಕ ದೇವ ಗಾವುಂಡನು ಬ್ರಹ್ಮೇಶ್ವರ ದೇವರ ಆಚಾರ್ಯರಿಗೆ ದಾನ ನೀಡಿರುವುದು ಮಹತ್ವವಾಗಿದೆ. ಈ ಭಾಗದ ಸುತ್ತ-ಮುತ್ತ ಬ್ರಹ್ಮೇಶ್ವರ ದೇವಾಲಯ ಮತ್ತು ಸೋಮೇಶ್ವರ ದೇವಾಲಯಗಳು ಇಂದು ಕಂಡುಬರುವುದಿಲ್ಲ.



# ೨೭

# ಸಾಂತರಸರ ಕಾಲದ ವೀರಗಲ್ಲು ಶಾಸನ

**ಹೆಚ್. ರಂಗನಾಥರಾವ್ ಕರಾಡ್***

ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲೂಕಿನ ಕಸಬಾ ಹೊಬಳಿಯ ಮಾರುತಿಪುರ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಹೊಸನಗದಿಂದ ಸಾಗರ ನಗರಕ್ಕೆ ತೆರಳುವ ಮಾರ್ಗಮಧ್ಯದಲ್ಲಿರುವ ಕಚ್ಚಿಗೆಬೈಲು ಗ್ರಾಮ, ಬಡೇನಕೊಪ್ಪ ಮತ್ತು ಗುಬ್ಬಿಗ ಗ್ರಾಮಗಳ ಗಡಿಭಾಗದಲ್ಲಿರುವ ಈಶ್ವರ ದೇವಾಲಯವನ್ನು ಪ್ರಸ್ತುತ ನಂದೀಶ್ವರ ದೇವಾಲಯವೆಂದು ಕರೆಯುತ್ತಾರೆ. ಈ ದೇವಾಲಯದ ಮುಂಭಾಗದ ಬಲಬದಿಯಲ್ಲಿ ಮೂರು ಪಟ್ಟಿಕೆಯುಳ್ಳ ಶಾಸನಾಧರಿತ ವೀರಗಲ್ಲು ಕಂಡುಬರುತ್ತದೆ.

ಈ ವೀರಗಲ್ಲು ಶಾಸನವು ಸಾಂತರಸರ ಕಾಲಕ್ಕೆ ಸೇರಿದ್ಧಾಗಿದ್ದು ಹುಂಚ ಅಥವಾ ಹೊಂಬುಜವು ಸಾಂತರಸರ ರಾಜಧಾನಿ ಕೇಂದ್ರವಾಗಿದ್ದಿತ್ತು ಸಾಂತರಸರು ೮ನೇ ಶತಮಾನದಿಂದ ೧೨ನೇ ಶತಮಾನದವರೆಗೆ ರಾಷ್ಟ್ರಕೂಟರ, ಕಲ್ಯಾಣ ಚಾಲುಕ್ಯರ ಹಾಗೂ ಹೊಯ್ಸಳರ ಸಾಮಂತರಾಗಿ ಆಳ್ವಿಕೆ ನಡೆಸಿದ್ದು ಇವರ ಅರಸೊತ್ತಿಗೆಯು ಶಿವಮೊಗ್ಗ ಜಿಲ್ಲೆಯ ಹೊಸನಗರ, ಸಾಗರ ಹಾಗೂ ತೀರ್ಥಹಳ್ಳಿ ತಾಲ್ಲೂಕುಗಳಲ್ಲಿ ವ್ಯಾಪಿಸಿತ್ತು.

ಈ ವೀರಗಲ್ಲು ಮೂರು ಪಟ್ಟಿಕೆಗಳನ್ನು ಹೊಂದಿದೆ ವೀರಗಲ್ಲಿನ ಮೇಲ್ಭಾಗವು ಸ್ವಲ್ಪ ಪ್ರಮಾಣದಲ್ಲಿ ಹಾನಿಯಾಗಿದೆ. ಮತ್ತು ಈ ವೀರಗಲ್ಲು ಬಳಪದ ಕಲ್ಲಿನ ಜಾತಿಗೆ ಸೇರಿದ ಶಿಲೆಯಿಂದ ರಚಿತವಾಗಿದ್ದು ಮೊದಲನೆ ಹಾಗೂ ಎರಡನೇ ಪಟ್ಟಿಕೆಯಲ್ಲಿ ಶಾಸನವನ್ನು ಕಾಣಬಹುದು ಮೊದಲ ಪಟ್ಟಿಕೆಯಲ್ಲಿ ಹಾಗೂ ಎರಡನೇ ಪಟ್ಟಿಕೆಯಲ್ಲಿ ಮೂರುಸಾಲುಗಳನ್ನು ಒಟ್ಟು ಆರು ಸಾಲುಗಳ ಶಾಸನವನ್ನು ಕಾಣಬಹುದು. ಈ ಶಾಸನವು ಕನ್ನಡ ಭಾಷೆ ಮತ್ತು ಕನ್ನಡ ಲಿಪಿಯಲ್ಲಿ ರಚಿತವಾಗಿದೆ.

ಈ ವೀರಗಲ್ಲಿನ ಕೆಳಭಾಗದಲ್ಲಿ ವೀರರು ಯುದ್ಧದಲ್ಲಿ ಹೋರಾಡುತ್ತಿರುವ ದೃಶ್ಯಗಳಿವೆ ಇದರಲ್ಲಿ ಅಶ್ವಗಳ ಮೇಲೆ ಕುಳಿತ ವೀರರು ಕತ್ತಿಗುರಾಣಿ ಹಾಗೂ ಈಟಿಯನ್ನು ಹಿಡಿದು ಹೋರಾಡುತ್ತಿರುವ ದೃಶ್ಯ ಕಂಡುಬರುತ್ತದೆ. ಈ ಪಟ್ಟಿಕೆಯನ್ನು ತೋರಣಗಳಿಂದ ಅಲಂಕೃತಗೊಳಿಸಿರುವುದನ್ನು ಕಾಣಬಹುದಾಗಿದೆ.

ಮಧ್ಯಭಾಗದಲ್ಲಿ ವೀರನು ಕೈಯಲ್ಲಿ ಕತ್ತಿಯನ್ನು ಹಿಡಿದು ಪಲ್ಲಕ್ಕಿಯಲ್ಲಿ ಕುಳಿತಿರುವುದು ಹಾಗೂ ಅಪ್ಸರೆಯರು ಎಡಬಲಬದಿಗಳಲ್ಲಿ ಪಲ್ಲಕ್ಕಿಯನ್ನು ಹೊತ್ತುಹೊಯ್ಯತ್ತಿರುವ ದೃಶ್ಯವನ್ನು ಹಾಗೂ ಪಲ್ಲಕಿಯ ಮೇಲ್ಭಾಗದಲ್ಲಿ ಪಂಚಮವಾದ್ಯಗಳ ಸಮೇತ ವಾದ್ಯಗಾರರು ಸಂಗೀತ ನುಡಿಸುತ್ತಿರುವುದು ಮತ್ತು ಅಪ್ಸರೆಯರು ವೀರನನ್ನು ಸ್ವರ್ಗಕ್ಕೆಕರೆದುಕೊಂಡು ಹೋಗುವ ದೃಶ್ಯ ಕಂಡುಬರುತ್ತದೆ.

ಮೇಲಿನ ಪಟ್ಟಿಕೆಯಲ್ಲಿ ಮದ್ಯಭಾಗದಲ್ಲಿರುವ ಮಂಟಪದಲ್ಲಿ ಶಿವಲಿಂಗವಿದ್ದು ಈ ಲಿಂಗವನ್ನು ಯತಿಯೊಬ್ಬರು ಪೂಜಿಸುತ್ತಿರುವುದು ಹಾಗೂ ಮಂಟಪದ ಬಲಭಾಗದಲ್ಲಿ ವೀರನು ಕುಳಿತಿದ್ದು ಅವನ ಬಲಭಾಗಕ್ಕೆ ಇಬ್ಬರು ಸ್ತ್ರೀಯರು ಕುಳಿತಿರುವವರು (ಸತಿಯರಾಗಿರಬಹುದು) ಈ ಮಂಟಪದ ಎಡಭಾಗದಲ್ಲಿ ಹಸು, ಕರು ಹಾಗೂ ಕೆತ್ತನೆಯನ್ನು ಮತ್ತು ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಕೆತ್ತನೆಗಳನ್ನು ಕಾಣಬಹುದು.

**ಶಾಸನದ ಪಾಠ**

**ಮೊದಲ ಪಟ್ಟಿಕೆ**

೧. ನಮಸ್ತುಂಗ ಸಿಶ್ಚುಂಬಿ ಚಂದ್ರಚಮರಚಾರವೇ, ತ್ರೈಲೋಕ್ಯ ನಗರಾ

೨. ರಂಭ ಮೂಲಸ್ತಂಭಾಯ ಶಂಭವೇ ಸ್ವಸ್ತಿ ಶ್ರೀಮತು ಸಾಂತಳಿ

೩. ಗೆ ಸಾಯಿರದ ಅಳಿಯು ಹೆಗ್ಗಡೆ ಬಲವೆಗ್ಗಡೆ ಚಿತ್ರಭಾನು ಸಂವತ್ಸ

---

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸರ್. ಎಂ.ವಿ. ಸರ್ಕಾರಿ ಕಲಾ ಮತ್ತು ವಾಣಿಜ್ಯ ಕಾಲೇಜು, ಭದ್ರಾವತಿ, ಶಿವಮೊಗ್ಗ ಜಿಲ್ಲೆ.







ಎರಡನೇ ಪಟ್ಟಿಕೆ

೪. ರದ ವೈಶಾಖ ಬಹು ಭುದುವಾರದಲು ಕೊಮಾರ ಮಸಣ ವೆಗ್ಗಡೆಯು

೫. ಕೊಡೆಕಾದಿರೆದಲ್ಲಿ ನಾಗಸೋಮೆಯ ಸಾಹಣಿ ಮಾರಣಂ

೬. ತಕುದುರೆಯ ತಳೂ ತಿರೆದು ಕಾದೀಕೊಂದು ಸುರಲೋಕ ಪ್ರಾಪ್ತನಾದ

**ಶಾಸನದ ವಿವರಣೆ**

ನಮಸ್ತುಂಗ ಸಿಶ್ಚುಂಬಿ ಚಂದ್ರಚಮರಚಾರವೇ, ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ಸ್ವಸ್ತಿ ಶ್ರೀಮತು ಎಂಬ ಶ್ಲೋಕ ಹಾಗೂ ಬಿರುದಾವಳಿಗಳಿಂದ ಪ್ರಾರಂಭವಾಗಿ ಅವರು ಆಳ್ವಿಕೆ ನಡೆಸುವ ಪ್ರದೇಶವಾದ ಸಾಂತಳಿಗೆ ಸಾಯಿರದ ಉಲ್ಲೇಖದೊಂದಿಗೆ ಸಾಂತಳಿಗೆ ಸಾಯಿರವನ್ನು ಅಳಿಯ ಹೆಗ್ಗಡೆ ಬಲವೆಗ್ಗಡೆ ಆಳ್ವಿಕೆ ನಡೆಸುತ್ತಿರುವಾಗ ಚಿತ್ರಭಾನು ಸಂವತ್ಸರದ ವೈಶಾಖ ಬಹು ಬುದುವಾರದಂದು ನಾಗಸೋಮೆಯ ಸಾಹಣಿಯು ಸೈನ್ಯಾಧಿಕಾರಿ ಕೊಮಾರ ಮಸಣವೆಗ್ಗಡೆಯ ಕೂಡ ಕಾದಾಡಿ ಶತ್ರುವನ್ನು ಹಿರಿದುಕೊಂದು ತಾನು ವೀರಮರಣ ಹೊಂದಿ ಸ್ವರ್ಗಲೋಕ ಪ್ರಾಪ್ತನಾದ ಎಂಬ ವಿವರಗಳನ್ನು ಕಾಣಬಹುದಾಗಿದೆ.

ಶಾಸನದ ಮೂಲಕ ಸಾಂತಳಿಗೆ ಸಾಯಿರದ ಅಂದರೆ ಒಂದು ಸಾವಿರ ಹಳ್ಳಿಗಳುಳ್ಳ ಆಡಳಿತ ಘಟಕಗಳೆಂಬುದು ಹಾಗೂ ಸಾಂತಳಿಗೆ ಸಾಯಿರವು ಹೊಂಬುಜದ ಸಾಂತರಸರು ಆಳ್ವಿಕೆ ನಡೆಸಿರುವ ಪ್ರದೇಶವೆಂಬುದು ತಿಳಿದುಬರುತ್ತದೆ.



## ಆಕರ ಗ್ರಂಥಗಳು


೧. ಹೆಗಡೆ ರಾಜಾರಾಂ ಮತ್ತು ಅಶೋಕ ಶೆಟ್ಟರ್. (ಸಂ) (೨೦೦೧), ಮಲೆಕರ್ನಾಟಕದ ಅರಸು ಮನೆತನಗಳು ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ.

೨. ಶೇಷಶಾಸ್ತ್ರಿ.ಆರ್. (೨೦೦೪), ಕರ್ನಾಟಕದ ವೀರಗಲ್ಲುಗಳು. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩. ಪರಮಶಿವಮೂರ್ತಿ.ಡಿ.ವಿ. (೧೯೯೮), ಕನ್ನಡ ಶಾಸನ ಶಿಲ್ಪ ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ.

೪. ನಾಗರಾಜಯ್ಯ ಹಂಪ (೧೯೯೭), ಸಾಂತರರು ಒಂದು ಅಧ್ಯಯನ. ಶ್ರೀ ಸಿದ್ಧಾಂತ ಕೀರ್ತಿ ಗ್ರಂಥಮಾಲೆ ಹೊಂಬುಜ.

೫. ರಾಮಭಟ್ಟ. ಬಿ.ಎಸ್. (೨೦೦೧), ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಸಂಸ್ಕೃತಿ. ಎನ್.ಇ.ಎಸ್. ಪ್ರಕಾಶನ ಶಿವಮೊಗ್ಗ.

೬. ಗೋಪಾಲ್.ಆರ್.(೨೦೦೮), ಶಿವಮೊಗ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಕರ್ನಾಟಕ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು.

# ತಿಳವಳ್ಳಿ ದ್ಯಾಮವ್ವನ ಗುಡಿಯಲ್ಲಿ ದೊರೆತ ಹೊಸ ಶಾಸನ

**ಶಿವಪ್ಪ ನೀರಾವರಿ* ಹನುಮಾಕ್ಷಿ ಗೋಗಿ****

**ಹಾ**ವೇರಿ ಜಿಲ್ಲೆಯ ಹಾನುಗಲ್ಲು ತಾಲ್ಲೂಕಿನ ತಿಳುವಳ್ಳಿಯಲ್ಲಿ ಇತ್ತೀಚೆಗೆ ಕಾಲುವೆ ನಿರ್ಮಿಸಲು, ಭೂಮಿಯನ್ನು ಅಗೆಯುತ್ತಿರುವಾಗ, ದ್ಯಾಮವ್ವನ ಗುಡಿಯ ಪಕ್ಕದಲ್ಲಿ ಈ ಶಾಸನವು ದೊರೆತಿದ್ದು, ಇದುವರೆಗೆ ತಿಳುವಳ್ಳಿಯಲ್ಲಿ ದೊರೆತ ಶಾಸನಗಳಲ್ಲಿಯೇ ಪ್ರಾರಂಭಿಕ ಕಾಲದ ಪ್ರಥಮ ಶಾಸನವಾಗಿದೆ.

ಶಾಸನವು ವಿಷ್ಣುವಿನ 'ಜಯತ್ಯಾವಿಷ್ಕೃತಂ' ಎಂಬ ಸುಪ್ರಸಿದ್ಧ ಸಂಸ್ಕೃತ ಭಾಷೆಯಲ್ಲಿಯ ಸ್ತುತಿಯೊಂದಿಗೆ ಪ್ರಾರಂಭವಾಗುತ್ತದೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಭುವನೈಕಮಲ್ಲ ಮೊದಲನೆಯ ಸೋಮೇಶ್ವರನನ್ನು ಆತನ ಎಲ್ಲ ಬಿರುದಾವಳಿಗಳೊಂದಿಗೆ ಬಣ್ಣಿಸುತ್ತದೆ. ಈ ಸೋಮೇಶ್ವರ ಚಕ್ರವರ್ತಿಯು ರಾಜ್ಯವನ್ನು ಆಳುತ್ತಿರುವಾಗ, ಮಹಾಮಂಡಳೇಶ್ವರ ಕೀರ್ತಿದೇವನು (ಈತನು ಯಾವ ಪ್ರಾಂತದ ಮಹಾಮಂಡಳೇಶ್ವರನೆಂದು ಶಾಸನದಲ್ಲಿ ತಿಳಿಸಿಲ್ಲ.) ಊರೊಂದನ್ನು (ಬಹುಶಃ ತಿಳುವಳ್ಳಿ) ಮುತ್ತಿದಾಗ, ಬನವಾಸಿ ನಾಡಿನಲ್ಲಿಯ ಅಗ್ರಹಾರ ತಿಳಿವಳ್ಳಿಯ ಮಹಾಜನರಲ್ಲಿ ಒಬ್ಬನಾದ, ಕಾಶ್ಯಪ ಗೋತ್ರಕ್ಕೆ ಸೇರಿದ, ತಿಳಿವಳ್ಳಿ ಕುಪ್ಪಟೂರು ಪಿರಿಯ ಕೆರೆಯೂರುಗಳ ಸರ್ವಾತಿಥ್ಯ ಅಣ್ಣಿಮಯ್ಯನು ಮಹಾದಾನಕ್ಕೆ ಪಾದಪೂಜೆಗೆ ೩೬೭ ಲೊಕ್ಕಿ ಗದ್ಯಾಣಗಳ ಹೊನ್ನನ್ನು ಕೊಟ್ಟು ಸರ್ವಾತಿಥ್ಯಕ್ಕೆ ಕೆಜಿಗಾಲ ಹೊಲದಲ್ಲಿ ೨ ಮತ್ತರು ಗದ್ದೆಯನ್ನು ಮತ್ತಯ ೬೦ ಕಮ್ಮಗಳನ್ನು ಹಾಗೂ ಮಾನೆಗೋಲ ಹೊಲದಲ್ಲಿ ೪೦ ಕಮ್ಮಗದ್ದೆಯನ್ನು, ಅಂತೆಯೇ ಮೂಜುಬಳ್ಳಿಯಿಂದ ಉತ್ತರಕ್ಕೆ ೬೭ ಕಮ್ಮ ಗದ್ದೆಯನ್ನು, ಹೀಗೆ ೩ ಮತ್ತರು ೬೭ ಕಮ್ಮ ಭೂಮಿಯನ್ನು ಸರ್ವಾತಿಥ್ಯಕ್ಕಾಗಿ ಬಿಟ್ಟುದನ್ನು ಶಾಸನವು ದಾಖಲಿಸುತ್ತದೆ. ಸರ್ವಾತಿಥ್ಯರಾದ ಅಣ್ಣಿಮಯ್ಯನ ಅಕ್ಕಿಯಬ್ಬೆಯು ತಂದೆ ದಾನವಾಗಿ ಕೊಟ್ಟ ಭೂಮಿಯ ನಂತರ, ಆ ಮೂರು ಊರುಗಳಲ್ಲಿ ಉಳಿದ ಭೂಮಿಯನ್ನು ಏಕಾತಿಥ್ಯಕ್ಕೆಂದು ದಾನವಾಗಿ ಕೊಟ್ಟಳೆಂದು ತಿಳಿಸುತ್ತದೆ.

ತಿಳಿವಳ್ಳಿಯ ಮಹಾಜನರನ್ನು 'ಯಮ ನಿಯಮ ಸ್ವಾಧ್ಯಾಯ ಧ್ಯಾನ ಧರಣ ಮೋನಾನುಷ್ಠಾನ ಪರಾಯಣ ಜಪ ಸಮಾಧಿ ಶೀಳಸಮ್ಪನ್ನರಪ್ಪ' ಎಂದು ಶಾಸನವು ವರ್ಣಿಸುತ್ತದೆ. ಅಂತೆಯೇ ಸರ್ವಾತಿಥ್ಯ ಅಣ್ಣಿಮಯ್ಯನನ್ನು 'ಶ್ರೀಮತ್ ಕಾಶ್ಯಪಗೋತ್ರ ಪವಿತ್ರರಪ್ಪ ತಿಳಿವಳ್ಳಿಯ ಕುಪ್ಪಟೂರ ಪಿರಿಯಕೆಜೆಯೂರ ಅನ್ತು ಮೂಜೂರ ಸರ್ವ್ವಾತಿಥ್ಯ ಅಣ್ಣಿಮಯ್ಯಂಗಳ್' ಎಂದು ಶಾಸನವು ಬಣ್ಣಿಸಿದೆ. ಕನ್ನಡ ಮತ್ತು ಸಂಸ್ಕೃತ ಫಲಶ್ರುತಿ ಶ್ಲೋಕದೊಂದಿಗೆ ಶಾಸನವು ಮುಕ್ತಾಯಗೊಳ್ಳುತ್ತದೆ.

ಇಲ್ಲಿಯ ಏಕಾತಿಥ್ಯ ಮತ್ತು ಸರ್ವಾತಿಥ್ಯ ಎಂಬ ಶಬ್ದಗಳ ಅರ್ಥವೇನೆಂಬುದು ತಿಳಿಯುವುದಿಲ್ಲ. ಬಹುಶಃ ಒಬ್ಬ ವ್ಯಕ್ತಿಗೆ ನೀಡುವ ಆತಿಥ್ಯವು ಏಕಾತಿಥ್ಯವೆಂದು ಎಲ್ಲ ಅತಿಥಿಗಳಿಗೆ ನೀಡುವ ಆತಿಥ್ಯವು ಸರ್ವಾತಿಥ್ಯವೆಂದು ಊಹಿಸಬಹುದು. ಸರ್ವಾತಿಥ್ಯರ ಹಕ್ಕು-ಜವಾಬ್ದಾರಿಗಳ ಕುರಿತಾಗಿ ಮತ್ತು ಮೂರೂ ಊರುಗಳಿಗೆ ಅಣ್ಣಿಮಯ್ಯ ಎಂಬ ಒಬ್ಬನೇ ವ್ಯಕ್ತಿ ಸರ್ವಾತಿಥ್ಯನಾಗಿ ಏಕೆ ಇದ್ದ ಎನ್ನುವುದೂ ಸ್ಪಷ್ಟವಾಗುವುದಿಲ್ಲ. ಊರನ್ನು ಮುತ್ತಿದ್ದಕ್ಕೂ ಈ ಸರ್ವಾತಿಥ್ಯಕ್ಕೂ ಏನು ಸಂಬಂಧವೆಂಬುದೂ ಗೊತ್ತಾಗುವುದಿಲ್ಲ. ಮಹಾದಾನವೆಂದರೇನು ಎಂಬ ವಿವರಣೆಯೂ ದೊರೆಯುವುದಿಲ್ಲ. ಷೋಡಶ ದಾನಗಳಲ್ಲಿ ಇದರ ಸ್ಥಾನವೇನು ? ಅಥವಾ ಎಲ್ಲ ದಾನಗಳನ್ನು ಸೇರಿಸಿ ಮಹಾದಾನ ಎನ್ನುತ್ತಾರೆಯೇ ? ನಿರ್ವದ್ಯವಾಗಿ ಬಿಡುವುದು ಎಂದರೇನು ? ನಿರವದ್ಯ ಎಂಬ ವಿಶೇಷಣವು ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷನಿಗಿದ್ದು, ಅರ್ಥ ಸ್ಪಷ್ಟವಾಗುವುದಿಲ್ಲ.

ತಿಳಿವಳ್ಳಿ (ಶಾಸನ ದೊರೆತ ಸ್ಥಳ ಹಾವೇರಿ ಜಿಲ್ಲೆ, ಹಾನಗಲ್ಲು ತಾಲೂಕಿನ ಇಂದಿನ ತಿಳುವಳ್ಳಿ) ಕುಪ್ಪಟೂರ (ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಇಂದಿನ ಕುಪಟೂರು) ಪಿರಿಯ ಕೆಜೆಯೂರ (ಹಾವೇರಿ ಜಿಲ್ಲೆಯ ಇಂದಿನ ಹಿರೇಕೆರೂರು ತಾಲ್ಲೂಕಿನ ಕೇಂದ್ರಸ್ಥಾನ ಹಿರೇಕೆರೂರು) ಈ ಮೂರು ಸ್ಥಳನಾಮಗಳು ಈ ಶಾಸನದಲ್ಲಿವೆ.

ಇಲ್ಲಿಯ ವ್ಯಕ್ತಿನಾಮಗಳನ್ನು ಗಮನಿಸಿದಾಗ ಅಣ್ಣಿಮಯ್ಯ ಮತ್ತು ಅಕ್ಕಿಯಬ್ಬೆ ಎನ್ನುವ ಹೆಸರುಗಳು ಗಮನ ಸೆಳೆಯುತ್ತಿದ್ದು,

---

* ನವನಗರ, ಹುಬ್ಬಳ್ಳಿ, ಮೊ. ೯೪೪೮೧೩೯೭೭೧, ೯೪೪೮೨೭೨೦೮೯

ಇವೆರಡೂ ಹೆಸರುಗಳು ಎರಡು ಸಂಬಂಧವಾಚಿಗಳನ್ನು ಹೊಂದಿವೆ. ಅಣ್ಣ + ಅಯ್ಯ (ಅಪ್ಪ/ತಂದೆ) = ಅಣ್ಣಿಮಯ್ಯನಾದರೆ, ಅಕ್ಕ + ಅಬ್ಬೆ (ಅವ್ವ/ತಾಯಿ) = ಅಕ್ಕಿಯಬ್ಬೆ ಎಂಬ ರೂಪ ಸಿದ್ಧಿಸುತ್ತದೆ.

ಶಾಸನದ ೭-೮ನೆಯ ಸಾಲುಗಳಲ್ಲಿ ಬರುವ 'ಶಕವರ್ಷ ೯೯೧ನೆಯ ಸೌಮ್ಯ ಸಂವತ್ಸರದ ಆಶ್ವಯುಜದಮವಾಸ್ಯೆ ಸೋಮವಾರದಂದು' ಎನ್ನುವ ಮಿತಿಯು ಕ್ರಿ.ಶ. ೧೦೬೯ರ ಸೆಪ್ಟೆಂಬರ್ ೧೮ಕ್ಕೆ ಸಮನಾಗುತ್ತದೆ.

೧ ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ಣವಂ ರಕ್ಷಿಣೋ-
೨ ನ್ನತ ದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ ॥
೩ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭ ಮಹಾರಾ-
೪ ಜಾಧಿರಾಜಂ ಪರಮೇಶ್ವರಂ ಪರಮ ಭಟ್ಟಾರಕಂ ಸತ್ಯಾಶ್ರಯ ಕುಲ-
೫ ತಿಲಕಂ ಚಾಲುಕ್ಯಾಭರಣಂ ಶ್ರೀಮದ್ಭುವನಯ್ಕಮಲ್ಲದೇವರ ವಿಜಯರಾ-
೬ ಜ್ಯಮುತ್ತರೋತ್ತರಾಭಿವ್ರಿದ್ಧಿ ಪ್ರವರ್ದ್ಧಮಾನಮಾಚಂದ್ರಾರ್ಕ್ಕ ತಾರಂಬರಂ ಸ-
೭ ಲುತ್ತಮಿರೆ ॥ ಶಕವರ್ಷ ೯೯೧ನೆಯ ಸೌಮ್ಯ ಸಂವತ್ಸರದ ಆಶ್ವಯು-
೮ ಜದಮವಾಸ್ಯೆ ಸೋಮವಾರದಂದು ಮಹಾಮಂಡಲೇಶ್ವರಂ ಕೀರ್ತ್ತಿದೇವನೂ-
೯ ರಂ ಮುತ್ತಿದನ್ದು । ಬನವಾಸಿನಾಡೊಳಗಣಗ್ರಹಾರಂ ತಿಳಿವಳ್ಳಿಯ ಮ-
೧೦ ಹಾಜನ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾ-
೧೧ ನುಷ್ಠಾನ ಪರಾಯಣ ಜಪ ಸಮಾಧಿ ಶೀಳಸಮ್ಪನ್ನರಪ್ಪ ಶ್ರೀಮತ್
೧೨ ಕಾಶ್ಯಪ ಗೋತ್ರ ಪವಿತ್ರರಪ್ಪ ತಿಳಿವಳ್ಳಿಯ ಕುಪ್ಪಟೂರ ಪಿರಿಯ
೧೩ ಕೆಱೆಯೂರ ಅನ್ತು ಮೂಱೂರ ಸರ್ವ್ವಾತಿಥ್ಯ ಅಣ್ಣಿಮಯ್ಯಂಗಳ್ ಮ-
೧೪ ಹಾದಾನಕ್ಕೆ ಪಾದಪೂಜೆಗೆ ಮೂನೂಱಱವತ್ತೇಳು ಲೊಕ್ಕಿ ಗ-
೧೫ ದ್ಯಾಣಂ ಪೊನ್ನಂ ಕೊಟ್ಟು ಸರ್ವ್ವಾತಿಥ್ಯಕ್ಕೆ ಕೆಱೆಗಾಲ ಪೊಲದಲು
೧೬ ಬಿಟ್ಟ ಗರ್ದ್ದೆ ಮತ್ತ ೨ ಕಮ್ಮಂ ೬೦ ಮಾನೆಗೋಲ ಪೊಲದಲು ಗರ್ದ್ದೆ ಕಮ್ಮಂ ೪೦ ಮತ್ತಂ
೧೭ ಮೂಱುಬಳ್ಳಿಯಿಂ ಬಡಗಲು ಗರ್ದ್ದೆ ಕಮ್ಮಂ ೬೭ ಅಂತು ಗರ್ದ್ದೆ ಮತ್ತ-
೧೮ ರು ೩ ಕಮ್ಮ ೬೭ಱುಂ ಸರ್ವ್ವಾತಿಥ್ಯಕ್ಕೆ ಆ ಮೂಱುಂ ಸ್ಥಳ-
೧೯ ದಿಂ ಮಿಕ್ಕ ಕೆಯಿ ಏಕಾತಿಥ್ಯಕ್ಕೆ ಸರ್ವ್ವಾತಿಥ್ಯರ ಮಗಳು
೨೦ ಅಕ್ಕಿಯಬ್ಬೆ ನಿರ್ವದ್ಯವಾಗಿ ಬಿಟ್ಟಳೀ ಧರ್ಮ್ಮಮಂ ಸಾಸಿರ್ವ್ವರು
೨೧ ಪ್ರತಿಪಾಳಿಸುವರ್ । ಪ್ರತಿಪಾಳಿಸಿದಾತಂಗೆ ವಾರಣಾಶಿ-
೨೨ ಯೊಳ್ ಸಾಸಿರ ಕವಿಲೆಯಂ ಸಾಸಿರ್ವ್ವರ್ವ್ವೇದಪಾರಗರಪ್ಪ
೨೩ ಬ್ರಾಹ್ಮಣರ್ಗ್ಗೆ ಉಭಯಮುಖಿಗೊಟ್ಟ ಫಲಮಕ್ಕು । ಈ ಧ-
೨೪ ರ್ಮ್ಮಮನಳಿದಾತ ವಾರಣಾಶಿಯೊಳೆ ಸಾಸಿರ ಕವಿಲೆವಂ ಸಾ-
೨೫ ಸಿರ್ವ್ವರ್ವ್ವೇದಪಾರಗರಪ್ಪ ಬ್ರಾಹ್ಮಣರುಮನಳಿದ ಪಾತಕನ-
೨೬ ಕ್ಕುಂ ॥ ಸ್ವದತ್ತಂ ಪರದತ್ತಂ ವಾ ಯೋ ಹರೇತಿ ವಸುನ್ಧರಾಂ ಷಷ್ಟಿ-
೨೭ ರ್ವ್ವರ್ಷ ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ।
೨೮ ಮಂಗಳ ಮಹಾ ಶ್ರೀ ಶ್ರೀ [॥*]



# ಕಮ್ಮರಡಿಯಲ್ಲಿ ದೊರೆತ ವೀರಗಲ್ಲು ಶಾಸನ

ಮೇಕನಗದ್ದೆ ಲಕ್ಷ್ಮಣಗೌಡ*

ಚಿಕ್ಕಮಗಳೂರು ಜಿಲ್ಲೆ ಕೊಪ್ಪ ತಾಲ್ಲೂಕು ಕಮ್ಮರಡಿಯ ಸಮೀಪದಲ್ಲಿರುವ ಚಾವಲ್ಮನೆ ಗ್ರಾಮದ ವ್ಯಾಪ್ತಿಯಲ್ಲಿ ಹರಿಹರಪುರ ಕಮ್ಮರಡಿ ರಸ್ತೆ ಬದಿಯಲ್ಲಿರುವ ಕುಡಿನೆಲ್ಲಿ ಬಸ್ ನಿಲ್ದಾಣದ ಸಮೀಪ ೧೬ನೇ ಶತಮಾನಕ್ಕೆಸೇರಿದ ವೀರಗಲ್ಲುಶಾಸನ ಹಾಗೂ ಸಮೀಪದಲ್ಲಿ, ಲಿಪಿ ಇಲ್ಲದ ಮಾಸ್ತಿಕಲ್ಲು ಪತ್ತೆಯಾಗಿದೆ.

ವೀರಗಲ್ಲು ಸುಮಾರು ಆರು ಅಡಿ ಎತ್ತರ ಹಾಗೂಮೂರು ಅಡಿ ಅಗಲವಿದ್ದು ನಾಲ್ಕು ಪಟ್ಟಿಕೆಗಳಲ್ಲಿ ಆಕರ್ಷಕ ಕೆತ್ತನೆಯನ್ನೊಳಗೊಂಡಿದೆ. ಕೆಳಗಿನ ಪಟ್ಟಿಯಲ್ಲಿ ಐದು ಸಾಲುಗಳಲ್ಲಿ ಸ್ಪಷ್ಟವಾದ ಬರವಣಿಗೆಯ ಶಾಸನವಿದೆ.

ವೀರಗಲ್ಲಿನ ಮೊದಲನೆ ಹಂತದಲ್ಲಿ ಎಲ್ಲಾ ವೀರಗಲ್ಲುಗಳಲ್ಲಿ ಸಾಮಾನ್ಯವಾಗಿರುವಂತೆ ಕುದುರೆಯ ಮೇಲೆ ಕುಳಿತು ಯುದ್ಧ ಮಾಡುತ್ತಿರುವ ವೀರ ಹಾಗೂ ಅವನೊಂದಿಗೆ ನೆಲದ ಮೇಲೆ ನಿಂತು ಹೋರಾಡುತ್ತಿರುವ ವೀರನ ಚಿತ್ರವಿದೆ. ಎರಡನೇ ಹಂತದಲ್ಲಿ ಹೋರಾಟದಲ್ಲಿ ಮಡಿದ ವೀರನನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿಕರೆದೊಯ್ಯುತ್ತಿರುವ ಕೆತ್ತನೆಯಿದೆ. ಮೂರನೇಯ ಹಂತದಲ್ಲಿ ವೀರಸ್ವರ್ಗವನ್ನು ಸೇರಿದ ವೀರನು ದೈವತ್ವಕ್ಕೇರಿ, ಶಾಶ್ವತವಾಗಿ ಮುಕ್ತಿಯನ್ನು ಪಡೆದಿರುವುದು ಕಂಡುಬರುತ್ತದೆ. ನಾಲ್ಕನೇಯ ಹಂತದಲ್ಲಿ ಲಿಂಗಸ್ವರೂಪಿಯಾದ ವೀರನನ್ನು ಸಕಲ ದೇವತೆಗಳೂಪೂಜಿಸುತ್ತಿರುವುದು, ಇದರೊಂದಿಗೆ ಈತನ ತ್ಯಾಗ ಬಲದಾನಗಳು ಆಚಂದ್ರಾರ್ಕವಾಗಿರಲೆಂದು ಸೂರ್ಯಚಂದ್ರರನ್ನು ಕೆತ್ತಲಾಗಿದೆ. ಇದರಲ್ಲಿರುವ ಕೆತ್ತನೆ ಮತ್ತು ಅಕ್ಷರಗಳಿಂದ ಇದೊಂದು ಅಪೂರ್ವವಾದ ವೀರಗಲ್ಲುಶಾಸನ ಎಂದು ಪರಿಗಣಿಸಬಹುದಾಗಿದೆ.

ಈ ವೀರಗಲ್ಲಿನ ಕೆಳಭಾಗದ ಪಟ್ಟಿಕೆಯಲ್ಲಿ ಐದು ಸಾಲುಗಳಲ್ಲಿ ಬರವಣಿಗೆ ಕಂಡುಬಂದಿದೆ. ಲಿಪಿಲಕ್ಷಣಗಳ ಆಧಾರದ ಮೇಲೆ ಇದನ್ನು ೧೫-೧೬ನೇಯ ಕಾಲಮಾನಕ್ಕೆ ಸೇರಿದ್ದೆಂದು ಮೈಸೂರು ವಿಶ್ವವಿದ್ಯಾಲಯದ ನಿವೃತ್ತ ಶಾಸನ ತಜ್ಞ ಶ್ರೀಯುತ ಎಚ್.ಎಂ.ನಾಗರಾಜರಾವ್ ತಿಳಿಸಿದ್ದು ಅದರ ಪಠ್ಯವನ್ನು ಸಿದ್ಧಪಡಿಸಿಕೊಟ್ಟಿದ್ದಾರೆ.





೧) ಶ್ರೀಮತು ಅಲುಮನೆಯ ತಂಮರಸಹೆಗಡೆಯ

೨) ಮಗ ಬೊಂಮರಸಹೆಗಡೆ ತಳತಿ(ಲು)ರಿಮಬಣ ತಂ

೩) ಮರಸ ಚವಲುಮನೆಯ ಜಂಥಣಹೆಗಡೆ ಕರಿ

* ಓಣಿಮನೆ, ಮೇಕನಗದ್ದೆ ಅಂಚೆ, ಮೂಡಿಗೆರೆ, ಚಿಕ್ಕಮಗಳೂರು, ಮೊ. ೯೪೮೨೨೧೬೨೦೦೧





੭) ಯಣ ಹೆ(೦)ಗಡಿ(ತಿ)ಮಡಿಸಿದ ಕಲು ಸ ತಳಸೆ

೩) ಯ ನಡುವುದು

ಸಮೀಪದಲ್ಲಿರುವ ಆಲುಮನೆಯ ತಂಮರಸಹೆಗಡೆಯ ುಗ ಬೊಮರಸ ಹೆಗಡೆ, ಚಾವಲುಮನೆಯ ಜಂಥಣ್ಣಹೆಗಡೆ, ರಿಯಣ್ಣ ಹೆಗಡೆ ಮತ್ತಿತರರಿಗಾಗಿ ಕರಿಯಣನ ಹೆಂಡತಿ ಮಾಡಿಸಿ ನಿಲ್ಲಿಸಿರುವ ಕಲ್ಲು ಎಂಬಂತೆ ಕಂಡುಬರುತ್ತದೆ. ೆಗಡೆ ಎಂಬ ಅಭಿದಾನವು ಅಂದಿನ ಸ್ಥಳೀಯ ಆಡಳಿತಗಾರರಾಗಿದ್ದಂತೆ ಕಂಡುಬರುತ್ತದೆ. ಆ ಬಿರುದು ಕೆಲವು ಕಡೆ ಇಂದಿಗೂ ವಂಶಪಾರಂಪರ್ಯವಾಗಿರುವುದು ಕಂಡು ಬರುತ್ತದೆ.

ಇದರ ಸಮೀಪದಲ್ಲಿರುವ ಮಾಸ್ತಿಕಲ್ಲು ಅತ್ಯಂತ ಆಕರ್ಷಣೀಯವಾಗಿದ್ದು ಎರಡು ಹಂತಗಳಲ್ಲಿ ಆಕರ್ಷಕ ಕೆತ್ತನೆಯಿದೆ. ಮೊದಲನೇಯ ಹಂತದಲ್ಲಿ ವೀರ ಹಾಗೂ ವೀರನ ಪತ್ನಿ ದ್ಯಾನ ಮುದ್ರೆಯಲ್ಲಿದ್ದು ಚಾಚಿರುವ ವ್ಯಾಸನ ತೋಳಿನ ಚಿತ್ರವಿದೆ. ಮೇಲಿನ ಹಂತದಲ್ಲಿ ದೈವತ್ವಕ್ಕೇರಿದ್ದನ್ನು ತಿಳಿಯಬಹುದು. ಬದಿಯಲ್ಲಿ ಸೂರ್ಯ ಚಂದ್ರರ ಚಿತ್ರಗಳಿವೆ.

ಇಂದಿಗೂ ಈ ಕಲ್ಲುಗಳಿಗೆ ಪೂಜೆ ಸಲ್ಲಿಸಲಾಗುತ್ತಿದ್ದು ಅರಿಶಿಣ ಕುಂಕುಮ ಲೇಪಿಸಿರುವುದು ಕಂಡುಬರುತ್ತದೆ. ಲ್ಲುಗಳ ಬುಡದಲ್ಲಿ ಸಣ್ಣಪುಟ್ಟ ಮಣ್ಣಿನ ಕುಡಿಕೆಗಳನ್ನು ಹೂಳಲಾಗಿದೆ.

ಇಂದಿಗೂ ಈ ಊರಿನಲ್ಲಿ ನಡೆಯುವ ಜನಪದ ಆಚರಣೆ–ಮಾರಿಹಬ್ಬದ ಸಂದರ್ಭದಲ್ಲಿ ಈ ಬನದ ಸಮೀಪಕ್ಕೆ ಬಂದಾಗ ಕುರಿ ಬಲಿ ನೀಡುವ ಪದ್ಧತಿಯಿರುವುದನ್ನು ಸ್ಥಳೀಯರು ತಿಳಿಸುತ್ತಾರೆ. ಅಲ್ಲದೆ ಈ ಬನದ ಸಮೀಪ್ಲರ್ಚಕರ ಹೊರತಾಗಿ ಯಾರೂ ತಿರುಗಾಡುವುದಿಲ್ಲ. ಈ ಕಲ್ಲಿನ ಸಮೀಪಕ್ಕೆ ಬರುವುದಿಲ್ಲಾ. ವೀರಗಲ್ಲು–ಮಸ್ತಿಕಲ್ಲುಗಳ ಜನಪದೀಯ ಆಚರಣೆ ಇಂದಿಗೂ ಜೀವಂತವಾಗಿರುವುದು ಇಲ್ಲಿ ಕಂಡುಬರುತ್ತದೆ.



# ಕಳಸ, ಶ್ರೀ ಚಂದ್ರನಾಥ ಬಸದಿಯ ಶಾಸನಗಳ ಮರು ಪರಿಶೀಲನೆ

ಹೆಚ್.ಆರ್. ಪಾಂಡುರಂಗ*

ಚಿಕ್ಕಮಗಳೂರು ಜಿಲ್ಲೆ, ಮೂಡಿಗೆರೆ ತಾಲ್ಲೂಕಿನ ಪಶ್ಚಿಮ ಘಟ್ಟ ಪರ್ವತ ಶ್ರೇಣಿಯ ಮಡಿಲಲ್ಲಿರುವ ಕಳಸ ಹೋಬಳಿ ಆರ್ಥಿಕವಾಗಿಯೂ ಸಮೃದ್ಧ ಪ್ರದೇಶವಾಗಿದ್ದು ಹೊಯ್ಸಳರ ಕಾಲದಲ್ಲಿ "ಕಳಸ ಕಂಪಣ" ಎಂದೂ ವಿಜಯನಗರ ಕಾಲದಲ್ಲಿ "ಕಳಸ ಸೀಮೆ" ಎಂದೂ, ಮೈಸೂರು ಅರಸರ ಕಾಲದಲ್ಲಿ "ಕಳಸ ಮಾಗಣೆ" ಎಂದೂ ಕರೆಯಲ್ಪಡುತ್ತಿದ್ದ ಕಳಸ ಪ್ರದೇಶ, ಹೊಯ್ಸಳರ ಮಾಂಡಲೀಕರಾದ ಸಾಂತರರ' ರಾಜಧಾನಿಯಾಗಿದ್ದು ನಂತರ ವಿಜಯನಗರ ಸಾಮ್ರಾಜ್ಯದ ಮಾಂಡಲೀಕರಾಗಿದ್ದ ಕಳಸ-ಕಾರ್ಕಳ ಭೈರವರಸ ದೊರೆಗಳ ಬೇಸಿಗೆ ರಾಜಧಾನಿಯಾಗಿಯೂ ಐತಿಹಾಸಿಕ ನಗರವಾಗಿತ್ತು. ಕಳಸದ ಭದ್ರಾನದಿ ತೀರದಲ್ಲಿರುವ ಇತಿಹಾಸ ಪ್ರಸಿದ್ಧ ಕೆಳಂಗಡಿ ಶ್ರೀ ಚಂದ್ರನಾಥ ಬಸದಿಯಲ್ಲಿ ಎರಡು ಪ್ರಕಟಿತ ಶಾಸನಗಳ ಅಪ್ರಕಟಿತ ಶೇಷ ಭಾಗದ ಶಾಸನಪಾಠ ನನ್ನ ಕ್ಷೇತ್ರಕಾರ್ಯದಲ್ಲಿ ದೊರೆತಿವೆ.

ಚಂದ್ರನಾಥ ಶಿಲಾ ಪ್ರತಿಮೆಯ ಹಿಂಭಾಗದಲ್ಲಿನ ಪೀಠದಲ್ಲಿದ್ದ ಏಳು ಸಾಲಿನ ಹಳೆಗನ್ನಡ ಶಾಸನ ಭಾಗದಲ್ಲಿ ಕೇವಲ ಐದೂವರೆ ಸಾಲಿನ ಅಪೂರ್ಣ ಶಾಸನ ೧೯೪೬ ರಲ್ಲಿ ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್‌ನಲ್ಲಿ ಮೊದಲ ಬಾರಿಗೆ ಪ್ರಕಟವಾಗಿದ್ದು, ಅದರಲ್ಲಿ ಆರನೇ ಸಾಲಿನ ಅರ್ಧ ಭಾಗದಿಂದ ಏಳನೇ ಸಾಲಿನ ಅಂತ್ಯದವರೆಗೂ ಕೇವಲ ಶಾಸನ ಪಠ್ಯದ ಆವರಣದಲ್ಲಿ " ಈ ಪಂಕ್ತಿ ಅಷ್ಟಬಂಧದಲ್ಲಿ ಸೇರಿದೆ" ಎಂಬ ಟಿಪ್ಪಣಿ ಇದೆ. (ಶಾಸನ ಸಂಖ್ಯೆ-೮, ಪುಟ ೩೬-೩೭, MAR ೧೯೪೬) ಇದೇ ಶಾಸನದ ಪಾಠ ಹೆಚ್ಚು ವ್ಯತ್ಯಾಸಗಳಿಲ್ಲದೆ ಎಫಿಗ್ರಾಫಿಯ ಕರ್ನಾಟಕ - ಸಂಪುಟ ೧೧ರಲ್ಲಿ ಮೂಡಿಗೆರೆ-೯ ಆಗಿ ಪ್ರಕಟವಾಗಿದೆ.

ಚಂದ್ರಬಾಥ ಬಸದಿಯಲ್ಲಿ ಕೈಗೊಂಡ ಕ್ಷೇತ್ರಕಾರ್ಯದಲ್ಲಿ ಚಂದ್ರನಾಥ ವಿಗ್ರಹದ ಹಿಂಭಾಗದ ಅಷ್ಟ ಬಂಧದಲ್ಲಿ ಸೇರಿ ಅದೃಶ್ಯವಾಗಿದ್ದ ಅಪೂರ್ಣ ಶಾಸನದ ಶೇಷ ಭಾಗವನ್ನು ಬಿಡಿಸಿಕೊಂಡು ಉಳಿದ ಪಾಠ ಪಡೆದಿದ್ದು ಸದರಿ ಶಾಸನದ ೬ ಹಾಗೂ ೭ ನೇ ಸಾಲಿನ ಶಾಸನದ ಪಾಠ ದೊರಕಿದೆ. ಶಾಸನ ಅಧ್ಯಯನ ಮರು ಪರಿಶೀಲನೆಯಲ್ಲಿ ಸೇರ್ಪಡೆಯಾಗಿರುವುದರಿಂದ ಸದರಿ ಶಾಸನದ ಸಮಗ್ರ ಹೊಸ ಪಾಠ ಪಡೆಯಲು ಸಾಧ್ಯವಾಗಿದೆ.

**ಮರುಪರಿಶೀಲಿಸಿದ ಶಾಸನದ ಪಾಠ**

೧. ಶ್ರೀ ಮೂಲಸಂಘ ಪನಸೋಗವಲೀ ಪ್ರಸಿದ್ಧೇ ದೇಸೀಗಣೇ ವಿದಿತ ಪು
೨. ಸ್ತಕ ಚಾರುಗಚ್ಛೇ। ಯಃ ಕುಂದಕುಂದಿ ಮುನಿವಂ
೩. ಶ ಲಲಾಮ ಭೂತ ಶ್ರೀಮನ್ನಭೂಲ್ಲಲಿತಕೀರ್ತ್ತಿ ಮಹಾ
೪. ಮುನೀಂದ್ರಃ॥ ತತ್ಪಾದಯುಗಲಾಂಭೋಜ ಶಿಖರೀ
೫. ಭೂತಮಸ್ತಕಃ। ಜಿನದತ್ತಾನ್ವಯಃ ಸ್ವಾಮೀ ಯೋಭೂ [ದ್ಭೈವ]।
೬. [ವ] ನಂದನಃ। ಸ್ವಸ್ತಿಶ್ರೀಸಕವತ್ಸರೇ ಗ್ರಹ ಶರಾಗ್ನಿಂ
೭. ದುಪ್ರಮಾ ಪಿಂಗಳೇ ಮಾಸೆ ಶ್ರೀಮತಿ ಫಾಲ್ಗುನೇ ಜಿತರಿಪುಃ ಶ್ರೀ ಪಾಂಡ್ಯ.

**ಜಿನಬಿಂಬದ ಬಲಗೈ ಕೆಳಗೆ**

೧. ಪೃಥ್ವೀಪತಿಃ ಸೋ
೨. ಯಂ ಶ್ರೀಕಳಶಾ

* ಕೃಷಿ ಅಧಿಕಾರಿ, ಕಳಸ, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಮೊ. ೯೪೪೯೫೪೧೧೬೨

. ಖ್ಯಚಾರುನಗರೇ ಶ್ರೀಚಂ
. ದ್ರನಾಥಪ್ರಭೋ ಪ್ರೀ
. ತ್ಯಾ ಸಾಧಯದುತ್ಸ
. ವೇನ ಮಹತಾ ಬಿಂಬ
. ಪ್ರತಿಷ್ಠಾಪಿತಂ ॥ ಶ್ರೀ



**ಡೆಗೈ ಕೆಳಗಡೆ**

. ಶ್ರೀ ದೇವಚ [ಂ]
೨. ದ್ರದೇವರು ಗೆ
೩. ಯಿಒದು

ಈ ಶಾಸನದ ಮರು ಪರಿಶೀಲನೆಯ ಹೊಸ ಪಾಠದ ಪ್ರಕಾರ ಚಂದ್ರನಾಥ ತೀರ್ಥಂಕರ ವಿಗ್ರಹ ಪ್ರತಿಷ್ಠೆಯಾದ ರ್ಷ ಹಾಗೂ ಅಂದಿನ ಆಳರಸರ ಉಲ್ಲೇಖವಿದೆ. ಈ ಶಾಸನದ ಕಾಲ ಎಂಎಆರ್‌ನಲ್ಲಿರುವಂತೆ ೧೨ನೇ ಶತಮಾನವಲ್ಲ ಥವಾ ಎಪಿಗ್ರಾಫಿಯ ಕರ್ನಾಟಿಕ – ೧೧ರಲ್ಲಿ ಪ್ರಕಟವಾದಂತೆ ೧೬ನೇ ಶತಮಾನವೂ ಅಲ್ಲ. ಬದಲಾಗಿ ಈ ಹಳಗನ್ನಡ ಾಸನದಲ್ಲಿ ಕಾಲಗಣನೆ ಗೂಢವಾದ ಸಂಕೇತಗಳಲ್ಲಿ ೬ ಮತ್ತು ೭ನೇ ಸಾಲಿನಲ್ಲಿ ನಮೂದಿಸಲ್ಪಟ್ಟಿದೆ. "ಸ್ವಸ್ತಿಶ್ರೀ ಸಕವತ್ಸರೇ ಹ ಶರಾಗ್ನಿಂದು ಪ್ರಮಾ ಪಿಂಗಳೇ ಮಾಸೆ ಶ್ರೀಮತಿ ಫಾಲ್ಗುನೇ" ಜಿತರಿಪುಃ ಶ್ರೀಪಾಂಡ್ಯ ಎಂಬ ವಿಶಿಷ್ಟ ಸಾಂಕೇತಿಕ ಾಲಗಣನೆ ಉಲ್ಲೇಖವಾಗಿದೆ. ಅದರಂತೆ ಗ್ರಹ ಎಂದರೆ–೯, ಶರಾ ಎಂದರೆ–೫, ಅಗ್ನಿ ಎಂದರೆ–೩, ಇಂದು ಎಂದರೆ– ಈ ನಾಲ್ಕು ಸಂಖ್ಯೆಗಳನ್ನು ಕೂಡಿಸಿ ಬರೆದಾಗ ೯೫೩೧ ಬರುತ್ತದೆ. ಇದನ್ನು "ಅಂಕಾನಾಂ ವಾಮತೋಗತಿ' ಎಂಬ ಯಮದ ಪ್ರಕಾರ ಬಲದಿಂದ ಎಡಕ್ಕೆ ಓದಿದರೆ ೯೫೩೧ ಎಂಬ ಸಂಖ್ಯೆ ೧೩೫೯ ಆಗುತ್ತದೆ. ಅಂದರೆ ಶಕ ವರ್ಷ ೩೫೯ ಪಿಂಗಳ ನಾಮ ಸಂವತ್ಸರ, ಪಾಲ್ಗುಣ ಮಾಸ ಕಾಲಮಾನಕ್ಕೆ ೭೮ನ್ನು ಸೇರಿಸಿದರೆ ಕ್ರಿ.ಶ. ೧೪೩೭–೧೪೩೮ ಈ ಾಸನದಲ್ಲಿ ವಾರ, ನಕ್ಷತ್ರ, ತಿಥಿಗಳ ಉಲ್ಲೇಖವಿರುವುದಿಲ್ಲ. ಈ ಶಾಸನದ ಏಳನೇ ಸಾಲಿನ ಅಂತ್ಯದಲ್ಲಿ "ಶ್ರೀ ಪಾಂಡ್ಯ" ಂಬ ಉಲ್ಲೇಖವಿದ್ದು ಕಳಸ–ಕಾರ್ಕಳ ರಾಜ್ಯದ ಅಂದಿನ ದೊರೆ "ಶ್ರೀ ವೀರಪಾಂಡ್ಯದೇವರಸ ಒಡೆಯರು" ಇವರ ಳ್ವಿಕೆಯನ್ನು ಹೊಸದಾಗಿ ತಿಳಿಯಬಹುದಾಗಿದೆ.

ವಿಜಯನಗರ ಸಾಮ್ರಾಜ್ಯದ ಸಂಗಮ ವಂಶದ ಪ್ರಸಿದ್ಧ ದೊರೆ, ಚಕ್ರವರ್ತಿ ಶ್ರೀವೀರ ಪ್ರತಾಪ ಇಮ್ಮಡಿ ದೇವರಾಯ ್ರೀ ಪ್ರೌಢ ದೇವರಾಯ) ರ ಮಹಾ ಮಂಡಲೇಶ್ವರ ಹಾಗೂ ಕಳಸ–ಕಾರ್ಕಳ ರಾಜ್ಯದ ಪ್ರಭುಗಳೂ, ಒಡೆಯರ ಪುತ್ರರು ದ ಶ್ರೀ ವೀರಪಾಂಡ್ಯ ದೇವರಸ ಒಡೆಯರ ಕಾಲದಲ್ಲಿ ಶ್ರೀ ಮೂಲ ಸಂಘದ ದೇಸೀಯ ಗಣದ ಪುಸ್ತಕಗಚ್ಛದ ನಸೋಗೆ ಬಳಿಯ ಕುಂದಕುಂದಿ ಮುನಿವಂಶದ ಮುಕುಟ ಪ್ರಾಯರಾದ ಕಾರ್ಕಳದ ಶ್ರೀ ಲಲಿತಕೀರ್ತಿ ಭಟ್ಟಾರಕ ಹಾಮುನೀಂದ್ರರ ಪಾದ ಸೇವಿತನಾದ "ಶ್ರೀ ಪಾಂಡ್ಯ" ಅಂದರೆ ಶ್ರೀ ವೀರಪಾಂಡ್ಯ ದೇವರಸ ಒಡೆಯರ ಆಳ್ವಿಕೆಯಲ್ಲಿ ಳಸ– ಕಾರ್ಕಳ ರಾಜ್ಯದ ಬೇಸಿಗೆ ರಾಜಧಾನಿ ಕಳಸ ನಗರದ ಭದ್ರಾ ತೀರದ ಕೆಳಂಗಡಿಯಲ್ಲಿ ಶ್ರೀ ಚಂದ್ರನಾಥ ೀರ್ಥಂಕರರ ಪ್ರತಿಮೆಯನ್ನು ಕ್ರಿ.ಶ. ೧೪೩೮ ನೇ ಪಿಂಗಳ ನಾಮ ಸಂವತ್ಸರದ ಫಾಲ್ಗುಣ ಮಾಸದಲ್ಲಿ ಕಳಸ–ಕಾರ್ಕಳ ೈರವರಸ ದೊರೆಗಳ ಕುಲ ಗುರುಗಳಾದ ಶ್ರೀ ಲಲಿತ ಕೀರ್ತಿ ದೇವರ ಶಿಷ್ಯರೂ, ಕಳಸ ಜೈನ ಮಠದ ಭಟ್ಟಾರಕರೂ ಆದ ೇವಚಂದ್ರ ದೇವರು ಚಂದ್ರನಾಥ ಬಿಂಬವನ್ನು ಕಳಸ ನಗರದಲ್ಲಿ ಪ್ರತಿಷ್ಠಾಪಿಸಿದರು ಎಂಬ ಉಲ್ಲೇಖವಿದೆ.

ಅಷ್ಟಬಂಧದಲ್ಲಿ ಸೇರಿಹೋಗಿದ್ದ ಈ ಶಾಸನದ ಅಪ್ರಕಟಿತ ಭಾಗವನ್ನು ಬಿಡಿಸಿಕೊಂಡು ಮರು ಅಧ್ಯಯನ ಮಾಡಿದ್ದರಿಂದ ವರೆಗೂ ಅಜ್ಞಾತವಾಗಿದ್ದ ಚಂದ್ರನಾಥ ಬಸದಿಯ ನಿರ್ಮಾಣದ ಕಾಲ ಹಾಗೂ ಭೈರವರಸ ದೊರೆಗಳ ಉಲ್ಲೇಖದಿಂದ ಳಸ ಸೀಮೆಯ ಜೈನಧರ್ಮದ ಇತಿಹಾಸಕ್ಕೆ ಹೊಸ ಚಾರಿತ್ರಿಕ ಸಂಗತಿಗಳು ಸೇರ್ಪಡೆಯಾಗಿದೆ.

**ಬಸದಿಯ ಚತುರ್ವಿಂಶತಿ ತೀರ್ಥಂಕರ ವಿಗ್ರಹದ ಶಾಸನದ ಮರುಪರಿಶೀಲನೆ:** ಈ ಪ್ರಕಟಿತ ಲೋಹದ ಅಪೂರ್ಣ ಾಸನವು ಚಂದ್ರನಾಥ ಬಸದಿಯಲ್ಲಿರುವ ಚತುರ್ವಿಂಶತಿ ತೀರ್ಥಂಕರರ ಲೋಹದ ವಿಗ್ರಹದ ಪೀಠದಲ್ಲಿ ಎಡಭಾಗ ಲಭಾಗ ಹಾಗೂ ಮುಂಭಾಗದಲ್ಲಿದ್ದ ಮೂರು ಸಾಲಿನ ಹಳೆಗನ್ನಡ ಶಾಸನ ಎಂಎಆರ್ ೧೯೪೬ರಲ್ಲಿ ವರದಿಯಾಗಿದ್ದು ಪಿಗ್ರಾಫಿಯ ಕರ್ನಾಟಿಕ–೧೧ರಲ್ಲಿ, ಮಾವಿನಕೆರೆ–೧೦೦ ಶಾಸನವಾಗಿ ಪ್ರಕಟವಾಗಿದೆ. ಶಾಸನದ ಪ್ರಕಾರ ತೊಳಹರ





ಬಳಿಯ ಅನತಕ ಸೆಟ್ಟಿತಿಯ ಮಗ ಆದಿ ಸೆಟ್ಟಿ ಮನ್ಮಥನಾಮ ಸಂವತ್ಸರದ ಶ್ರಾವಣ ಮಾಸದಲ್ಲಿ (ಕ್ರಿ.ಶ. ೧೫೩೫) ಚಂದ್ರನಾಥನ ಚೈತ್ಯಾಲಯದಲ್ಲಿ ಚತುರ್ವಿಂಶತಿ ತೀರ್ಥಂಕರ ಪ್ರತಿಮೆ ಪ್ರತಿಷ್ಠಾಪಿಸಿ ಕೃತಾರ್ಥನಾದ ಉಲ್ಲೇಖವಿದೆ. ಆದರೆ ಈ ಶಾಸನೋಕ್ತ ಅನತಕ ಸೆಟ್ಟಿತಿ ಹೆಸರಿನ ಶಬ್ದವೇ ವಿಚಿತ್ರವಾಗಿದ್ದು "ಅನತಕ" ಎಂಬ ವಿಚಿತ್ರ ಹೆಸರು ಅಂದಿನ ಕಾಲಮಾನದಲ್ಲಿ ಸ್ತ್ರೀಯರಿಗೆ ಇಡಲ್ಪಡುತ್ತಿತ್ತೇ ಎಂಬ ಪ್ರಶ್ನೆ ಉದ್ಭವವಾಗಿದ್ದು ಹಾಗೂ ಆದಿಸೆಟ್ಟಿಯ ತಂದೆಯ ಹೆಸರಿನ ಉಲ್ಲೇಖವಿರದ ಈ ಪ್ರಕಟಿತ ಶಾಸನ ಮರುಪರಿಶೀಲಿಸಿದೆ.

ಪೀಠವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಪ್ರಕಟಿತ ಮೂರು ಭಾಗದ (ಬಲಭಾಗ, ಮುಂಭಾಗ, ಎಡಭಾಗ) ಶಾಸನದೊಂದಿಗೆ ವಿಗ್ರಹ ಪೀಠದ ಹಿಂಭಾಗದಲ್ಲಿಯೂ ಒಂದು ಸಾಲಿನ ಹಳೆಗನ್ನಡ ಶಾಸನವಿದ್ದುದು ಕಂಡು ಬಂತು. ಹೊಸ ಶೋಧನೆಯಿಂದ ಚತುರ್ವಿಂಶತಿ ತೀರ್ಥಂಕರ ವಿಗ್ರಹದ ದಾನಿ ಜೈನ ಶ್ರಾವಕ ಆದಿ ಸೆಟ್ಟಿಯ ತಾಯಿ ಅನತಕ ಸೆಟ್ಟಿತಿಯ ಪತಿಯ ಹೆಸರು ಅವನ ಕುಲಗೋತ್ರ, ಸ್ಥಾನಮಾನದ ಸ್ಪಷ್ಟ ಉಲ್ಲೇಖವಿದೆ. ಈ ಅಪೂರ್ಣವಾಗಿದ್ದ ಶಾಸನಕ್ಕೆ ಸಂಪೂರ್ಣ ಅರ್ಥ ಬಂದಿದ್ದು ಸಮಗ್ರ ಶಾಸನದ ಮರುಪರಿಶೀಲಿಸಿದ ಶಾಸನದ ಪಾಠ ಈ ಕೆಳಕಂಡಂತಿದೆ.

**ಮರು ಪರಿಶೀಲಿಸಿದ ಶಾಸನದ ಪಾಠ**

೧. ಸ್ವಸ್ತಿ ಶ್ರೀಮತು ಮನ್ಮಥ ಸಂವತ್ಸರ। ದ ಪ್ರಥಮ ಶ್ರಾವಣ ಶು ೧ ಗುರುವಾರ ಪುಷ್ಯ ನಕ್ಷತ್ರದಲೂ ಶ್ರೀಚಂ।

೨. ದ್ರ ನಾಥನ ಚಯಿತ್ಯಲಯದಲ್ಲು.

೩. ಪುಳಿಟ್ಟೆ ಬಳಿಯ ಭಂಡಾರಿ ಜತ್ಯಣಸೆಟ್ಟಿಯ ಮದವಳಿಗೆ

೪. ತೊಳಹರಬಳಿಯ ಅನಂತಕಸೆ। ಟ್ಟಿತಿಯ ಮಗ ಆದಿಸೆಟಿಟಯೂ ಯೆರಗಿಸಿದ ಚತುರ್ವಿಂಶತಿ ತಿರ್ಥ[ಂ] । ಕರ ಪ್ರಥುಮೆಯನು ಯಿರಿಸಿ ಕ್ರು ತಾರ್ತ್ಥನಾದೆನು ಭದ್ರಂ ಶುಭಂ ಮಂ। ಗಳಂ ಭೂಯಾತ್ ಪುನರ್ದ್ದರ್ಶನಂ ಶುಭಂ ಮಂಗಳಂ ಮಾಹಾ । ಶ್ರೀ ಶ್ರೀ ಶ್ರೀ ಶ್ರೀ ಶ್ರೀ

ಶಾಸನ ಪಾಠದ ಪ್ರಕಾರ (೧-೭-೧೫೩೫) ಮನ್ಮಥನಾಮ ಸಂವತ್ಸರದ ಶ್ರಾವಣ ಶುಕ್ಲಪಕ್ಷದ ಗುರುವಾರ ಪುಷ್ಯ ನಕ್ಷತ್ರದಲ್ಲಿ ಚಂದ್ರನಾಥ ಬಸದಿಯಲ್ಲಿ ಪುಳಿಟ್ಟೆ ಬಳಿಯ ಭಂಡಾರಿ ಜತ್ಯಣ ಸೆಟ್ಟಿಯ ಹೆಂಡತಿ ಅನಂತಕ ಸೆಟಿಯ ಮಗ ಆದಿಸೆಟ್ಟಿ ಚಂದ್ರನಾಥ ಬಸದಿಯಲ್ಲಿ "ಚತುರ್ವಿಂಶತಿ ತೀರ್ಥಂಕರ ಪ್ರತಿಮೆಯನ್ನು ಪ್ರತಿಷ್ಠಾಪಿಸಿ ಕೃತಾರ್ಥನಾದ" ಎಂಬುದು ಈ ಶಾಸನದ ಮರು ಅಧ್ಯಯನದ ಸಂಪೂರ್ಣ ಸಾರಾಂಶವಾಗಿದೆ.

ಕಳಸದ ಚಂದ್ರನಾಥ ಬಸದಿಯ ಮೇಲಿನ ಎರಡೂ ಶಾಸನಗಳನ್ನು ಮರು ಪರಿಶೀಲನೆಗೆ ಒಳಪಡಿಸಿ ಅಧ್ಯಯನ ಮಾಡಿದ್ದರಿಂದ ಈ ಅಪೂರ್ಣ ಶಾಸನಗಳ ಸಂಪೂರ್ಣ ಸಾರಾಂಶ ದೊರೆತಿದ್ದು, ಹೊಸ ವಿಚಾರಗಳ ಸೇರ್ಪಡೆಯಿಂದ ಕಳಸ ಸೀಮೆ ಜೈನ ಇತಿಹಾಸ ಮತ್ತಷ್ಟು ಸಮೃದ್ಧವಾಗಿದೆ ಎಂದರೆ ಅತಿಶಯೋಕ್ತಿ ಆಗಲಾರದು.

[ಮಾರ್ಗದರ್ಶನ ನೀಡಿದ ಶ್ರೀ ಡಾ. ಬಿ. ರಾಜಶೇಖರಪ್ಪ, ಚಿತ್ರದುರ್ಗ ಹಾಗೂ ಶ್ರೀ ಹೆಚ್.ಎಂ. ನಾಗರಾಜರಾವ್, ಮೈಸೂರು, ಹಾಗೂ ಶ್ರೀ ಬಿ.ಎಸ್. ಗುರುಪ್ರಸಾದ್, ಬೆಂಗಳೂರು ಕ್ಷೇತ್ರ ಕಾರ್ಯದಲ್ಲಿ ನೆರವು ನಿಡಿದ ಶ್ರೀ ಅಜಿತ ಪ್ರಸಾದ್, ಬಸದಿ ಇಂದ್ರರು, ಶ್ರೀ ಚಂದ್ರನಾಥ ಬಸದಿ, ಕಳಸ, ಇವರುಗಳಿಗೆ ಧನ್ಯವಾದಗಳು.]



## ೩೧

# ಲಕ್ಷ್ಮೇಶ್ವರದ ಬಳಿಯ ಕಳಸ ಶಾಸನ : ಮರು ಓದು

**ನಳಿನಿ ವೆಂಕಟೇಶ್***

'**ಶಾ**ಸನ ಸಾಹಿತ್ಯವು ತನ್ನ ಸೋಪಜ್ಞತೆಯಿಂದ ಗಮನ ಸೆಳೆಯುತ್ತವೆ. ನಮ್ಮ ಶಾಸನಗಳಲ್ಲಿ ನಿರೂಪಿತವಾಗಿರುವ ವಿಷಯ ವೈವಿಧ್ಯವು ಅಪಾರವಾದುದು. ಇತಿಹಾಸ. ರಾಜಕೀಯ ವಿಷಯಗಳು, ದಾನ ಶಾಸನಗಳು, ವೀರಗಲ್ಲು ಮಾಸ್ತಿಗಲ್ಲು ಇತ್ಯಾದಿಗಳು. ಅಲ್ಲದೆ ಧರ್ಮ, ಧರ್ಮಸಮನ್ವಯ ಇವು ಕೂಡ ಮುಖ್ಯವಾದುದೇ. ಇವುಗಳಲ್ಲಿ ಯಾವುದೇ ಆದರೂ ಧರ್ಮವೇ ಅದರ ತಳಹದಿಯಾಗಿದ್ದಿತು. ಇವುಗಳಲ್ಲಿ ಹೆಚ್ಚಿನವು ಬರಿಯ ಮಾಹಿತಿಗಳಿಂದ ಕೂಡಿದ್ದರೆ, ಕೆಲವು ಕಾವ್ಯಾತ್ಮಕವಾಗಿ ಇರುತ್ತವೆ. ಶುದ್ಧ ಕಾವ್ಯ ಸ್ವರೂಪಕ್ಕೆ ಬೊಪ್ಪಣ ಪಂಡಿತನ ಗೊಮ್ಮಟಸ್ತುತಿ ಶಾಸನವು ಅತ್ಯುತ್ತಮ ಉದಾಹರಣೆಯಾಗಿದೆ.

ಪ್ರಸ್ತುತ ಶಾಸನವು ಗದಗ ಜಿಲ್ಲೆಯ ಲಕ್ಷ್ಮೇಶ್ವರದ ಸಮೀಪದ ಕಳಸದಲ್ಲಿದೆ. ಈ ಶಾಸನ ಕೂಡ ಕಾವ್ಯಾತ್ಮಕವಾಗಿದ್ದು, ಪ್ರಕಟವಾಗಿದೆ. ವಿಷ್ಣುವಿನ ಪ್ರಾರ್ಥನೆಯೊಂದಿಗೆ ಈ ಶಾಸನ ಪ್ರಾರಂಭವಾಗುತ್ತದೆ. ಇದರಲ್ಲಿ ೭೬ ದೀರ್ಘ ಸಾಲುಗಳಿವೆ. ವೃತ್ತ ಕಂದಪದ್ಯಗಳು ಮತ್ತು ವಚನಗಳಿಂದ ಕೂಡಿದೆ. ರಾಷ್ಟ್ರಕೂಟರ ಕೆಲವೇ ದೊಡ್ಡ ಶಾಸನಗಳಲ್ಲಿ ಈ ಶಾಸನವೂ ಒಂದು ಈ ಶಾಸನವನ್ನು ರಚನೆ ಮಾಡಿದ 'ಕವಿರಾಜರಾಜ' ಎಂಬ ಕವಿಯೇ ಮತ್ತೇಭವಿಕ್ರೀಡಿತ ಛಂದಸ್ಸನ್ನು ಸೂಚಿಸಿದ್ದಾನೆ. ಕಮಳೋದ್ಭವ ವಂಶೋತ್ತಮರನ್ನು' ನವೀನ ರೀತಿಯಿಂದ ವರ್ಣಿಸಿದ್ದೇನೆ ಎಂದು ಹೇಳಿಕೊಂಡಿದ್ದಾನೆ. ಅವನ ಈ ಹೇಳಿಕೆಯು ಯತಾರ್ಥವಾಗಿದೆ. ಈ ಕವಿಯ ಸುಂದರವಾದ ವರ್ಣನೆಗಳು ಈ ಶಾಸನದ ಕಾಲದ ನಂತರ ಬಂದ ಪಂಪನ ವರ್ಣನೆಗಳನ್ನು ನೆನಪಿಸುತ್ತದೆ.

ಇದು ರಾಷ್ಟ್ರಕೂಟ ರಾಜ ಗೋವಿಂದನ ಶಾಸನ. ಕಾಲ ಕ್ರಿ.ಶ. ೯೩೦ ಎಜೀಯನ ಕಾಡಿಯೂರ ಅಗ್ರಹಾರವನ್ನು ವೀಸೋತ್ತರ ಸೋಮಯಾಜಿ ಎಂಬುವನಿಗೆ ದಾನಕೊಟ್ಟ ವಿವರಗಳನ್ನು ಒಳಗೊಂಡಿದೆ.

ಮೊದಲು ಗೊಜ್ಜಿಗನ (ಗೋವಿಂದ) ವರ್ಣನೆಯಿಂದ ಶಾಸನ ಪ್ರಾರಂಭವಾಗುತ್ತದೆ. ಗೊಜ್ಜಿಗನ ಧೈರ್ಯ, ಶೌರ್ಯ, ದಾನಗುಣ, ಶತ್ರುಗಳನ್ನು ಪರಾಕ್ರಮದಿಂದ ಗೆದ್ದು ಸಾಧಿಸಿದ ವಿಜಯ, ಶರಣಾಗತರನ್ನು ರಕ್ಷಿಸಿ ಸಲಹುವುದು. ಹೀಗೆ ಅವನ ಗುಣವರ್ಣನೆ ಸಾಗುತ್ತದೆ. 'ರಜತಾಚಳದ ಹರನ ಆಕಾಶಗಂಗೆ' ಯವರೆಗೂ ಅವನ ಸತ್ಕೀರ್ತಿಯ ಬೆಳದಿಂಗಳಿನಂತೆ ಹರಡಿತ್ತು. ಗೋವಿಂದನ ಪರಾಕ್ರಮಕ್ಕೂ ದಾನಶೀಲತೆಗಳನ್ನು ಅರ್ಜುನ ಹಾಗೂ ಕರ್ಣನಿಗೆ ಕವಿ ಹೋಲಿಸುತ್ತಾನೆ.

ವಿದ್ವಾಂಸರು ಗೋವಿಂದನನ್ನು 'ಪರ್ವತರಾಜನ ಸ್ಥಿರತೆ, ಧೈರ್ಯದಿಂದ ಏಳ್ಗೆ ಸಾಗರದಂತಹ ಗಾಂಭೀರ್ಯವನ್ನು ಹೊಂದಿ ಉನ್ನತಿಯಿಂದ ಪ್ರಸಿದ್ಧನಾಗಿದ್ದ ಎಂದು' ಹೊಗಳುತ್ತಿದ್ದರೆಂದಿದೆ.

**ರೇವದಾಸ ವೀಸೋತ್ತರ ದೀಕ್ಷಿತನ ವರ್ಣನೆ:** ರೇವದಾಸನು ಗೋವಿಂದರಾಜನ ನೃಪನ ಪಾದ ಪದ್ಮೋಪಜೀವಿ. ಬ್ರಾಹ್ಮಣನಾದ ರೇವದಾಸನ ಗುಣಗಳು ಅಗಣಿತ. ರೇವದಾಸನು ಅತಿ ಪದಸ್ಥನೂ (ಹಿರಿಮೆ, ಘನತೆಗಳಿಂದ ಕೂಡಿ ಉತ್ತಮನಾದವನು). ಮಾರ್ಗಸ್ಥನೂ ಆಗಿದ್ದವನು. ಈತನ ಗುಣಗಳನ್ನು ಎಣಿಸುವ 'ಮತಿವಂತರನ್ನು ನಾನೆಲ್ಲಿಯೂ ಕಾಣೆ' ಎಂದು ಕವಿ ಹೇಳುತ್ತಾನೆ. ಇಂತಹ ವೀಸೋತ್ತರ ದೀಕ್ಷಿತನಿಗೆ ದಂಡನಾಯಕನ ಪಟ್ಟ ಕಟ್ಟಲಾಯಿತು. ಒಬ್ಬ ಬ್ರಾಹ್ಮಣನಾಗಿ ಮಾತ್ರ ವೀಸೋತ್ತರ ಸೋಮಯಾಜಿಯು ದಾನ ಪಡೆಯಲಿಲ್ಲ. ಒಬ್ಬ ಯುದ್ಧ ವೀರನಾಗಿಯೂ ಅವನು ಸಾಮರ್ಥ್ಯವನ್ನು ಪಡೆದಿದ್ದ ಆದ್ದರಿಂದಲೇ ಅವನು ದಂಡನಾಥೋತ್ತಮ ಪದವಿಯನ್ನು ಪಡೆದ ಬಳಿಕ ಗೊಜ್ಜಿಗದೇವನು ಆತನನ್ನು ಮುಂದಿಟ್ಟುಕೊಂಡು ಮಹಾಯಜ್ಞವನ್ನು ಮಾಡಿದನು.'ಗುಡಿ (ಬಾವುಟ) ಶಂಕ, ಚಾಮರ, ಬೆಳ್ಗೊಡೆ, ಘಳಿಗೆ (ವಸ್ತ್ರ), ವಿಚಿತ್ರಾತಪತ್ರ, ಪೆರ್ವ್ವಿಡಿ ಸೌಧ, ಚಿತ್ರದಂಡ. ಪಳಿಯ ಝುಳಿಂಬ, ಆನೆ, ಕುದುರೆ, ನಡೆಮಾಡ, ಮಹಾತೂರ್ಯ್ಯಂಗಳಿಂದ ಒಪ್ಪುವ ದಂಡನಾಥೊತ್ತಮ ಪದವಿಯನ್ನು" ಗೋವಿಂದ ನೃಪನು ಕೊಟ್ಟಂತೆ ಹೇಳಿದೆ. ರೇವದಾಸನು ಗುಣಾಂಬೋಧಿಯಾಗಿ ವಿಪ್ರವಂಶಕ್ಕೆ ಬೆಳಕು ನೀಡುವ ದೀಪವಾಗಿ ಮಾಣಿಕ್ಯದಂತಿದ್ದನು.

* # ೧೫, 'ಮನಸ್ವಿನಿ' ಸ್ನೇಹ ಕಾಲೋನಿ, ಚಿಕ್ಕಲ್ಲಸಂದ್ರ, ಬೆಂಗಳೂರು-೫೬೦೦೬೧, ಮೊ: ೯೯೪೫೫೬೦೧೯೪

ಇಂತಹ ಯೋಗ್ಯತೆಯುಳ್ಳ ದೇವದಾಸನನ್ನು ಮುಂದಿಟ್ಟುಕೊಂಡು ರಾಷ್ಟ್ರಕೂಟ ರಾಜ ಗೋವಿಂದನು ಯಜ್ಞವನ್ನು ಮಾಡಿದನು. ಬ್ರಾಹ್ಮಣರಿಗೆ ಹೊಸ ವಸ್ತ್ರಗಳನ್ನು ವೃತ್ತಿಗಳನ್ನು ಕೊಟ್ಟನು. ದೇವದಾಸನಿಂದ ಬ್ರಾಹ್ಮಣವಂಶ ಊರ್ಜಿತವಾಯಿತು.

**ಚಂದ್ರಗ್ರಹಣದಂದು ಮಾಡಿದ ದಾನ:** ಮದಗಜಾರೂಢ ಮತಂಗನೂ, ರಟ್ಟ ವಿದ್ಯಾಧರನೂ ಆದ ಗೋವಿಂದ ನೃಪನು ಶಕವರ್ಷ ೮೫೧ನೆಯ ವಿಕೃತ ಸಂವತ್ಸರದ ಮಾಘದ ಪುಣ್ಣಿಮೆಯ ಆದಿತ್ಯವಾದ ಆಶ್ಲೇಷಾ ನಕ್ಷತ್ರದಲ್ಲಿ ಚಂದ್ರಗ್ರಹಣದ ದಿನ ತುಲಾಪುರುಷ ಕಾಲದಲ್ಲಿ ಭೂಮಿದಾನ, ಕಳ್ಪಾದಪದಾನ (ತೆಂಗಿನ ತೋಟ?) ಆಹಾರದಾನ, ಭೈಷಜ್ಯ. ದಾನಗಳನ್ನು ಮಾಡಿದನು. ಅನಂತರ ದಂಡಾಧಿಪತಿ ರೇವದಾಸ ವೀಸೋತ್ತರ ಸೋಮಯಾಜಿಗೆ ಸರ್ವನಮಸ್ಯಪೂರ್ವಕವಾಗಿ ಎಱೆಯನ ಕಾಡಿಯೂರು ಅಗ್ರಹಾರವನ್ನು ಕೊಟ್ಟನು.

**ಪುಲಿಗೆಱೆಯ ವರ್ಣನೆ:** ಭರತಖಂಡಕ್ಕೆ ಕುಂತಳ ಭೂಮಿ ಆಭರಣ ಪ್ರಾಯವಾಗಿತ್ತು. ಆ ಪ್ರದೇಶಕ್ಕೆ 'ಎರಡಱುನೂರು' ತಿಲಕ ಪ್ರಾಯವಾಗಿತ್ತು. ಪುರಿಕರ ಜನಪದವು (ಈಗಿನ ಲಕ್ಷ್ಮೇಶ್ವರ) ಅದಕ್ಕೆ ವಜ್ರದ ಮೂಗುತಿಯಂತಿತ್ತು.

ಆ ಪುಲಿಗೆಟಿ ನಗರದಲ್ಲಿ ದೇವಾಲಯಗಳ ಸಮೂಹವೇ ಇತ್ತು. ಮತ್ತು ವ್ಯಾಪಾರ ಕೇಂದ್ರಗಳಿಂದ ಕೂಡಿ ಮಹಾಪಟ್ಟಣವಾಗಿ ಪುಲಿಗೆಱೆನಗರವು ಪ್ರಸಿದ್ಧವಾಗಿತ್ತು

**ಕಾಡಿಯೂರಿನ ವರ್ಣನೆ:** ಪುಲಿಗೆಟಿ ನಗರದ ಪಶ್ಚಿಮ ಭಾಗದಲ್ಲಿ ಕಾಡಿಯೂರಿತ್ತು. ಇಲ್ಲಿ ಮೂರು ಪದ್ಯಗಳಲ್ಲಿ ಕಾಡಿಯೂರಿನ ವರ್ಣನೆ ಬಹಳ ಸುಂದರವಾಗಿದೆ.

**ಪೊಱವೊಳಲೊಳ್ದೊದಳ್ದ ನವನನ್ದನ ಭೃನ್ದದಿನೆಳ್ವನಾಳ್ದ ಪೆ**
**ರ್ಗ್ಗೆಱೆಗಳನೊನ್ದೆಗಾವರಿಸುತಿರ್ಪ್ಪ ಮದಾಳಿಯನೆಯ್ದೆ ಪೊದಕಿ**
**ಕ್ಕಿಱಿನಿಮಿರ್ದಿರ್ದ್ದ ಪಾದರಿಯನೂದುವ ತಂಬೆಲರಿಂ ಬೆಡಂಗುವೆ**
**ತ್ತೆಱೆಯನ ಕಾಡಿಯೂರ್ವ್ವಯಸಿ ನೋಟ್ಟರ ಕಣ್ಗೆಸೆದೊಪ್ಪಿ ತೋಱುಗುಂ**

ಈ ಕಾಡಿಯೂರಿನಲ್ಲಿ ನವನಂದನದಂತಹ ಬೃಂದಾವನ, ದೊಡ್ಡಕೆರೆಗಳು ಮದಾಳಿಗಳು, ಪಾದರಿಯ ಹೂವಿನ ಮೂಲಕ ಹಾದುಬಂದ ಗಾಳಿಯ ನಾದ ಮತ್ತು ಕಂಪಿನಿಂದ ಕೂಡಿದ ತಂಬೆಲರು, ಚಿಗುರಿದ ಮಾಮರ, ರಸ ಸೋರುತ್ತಿರುವ ಹಣ್ಣುಗಳು, ಹಣ್ಣುಗಳ ರಸ ಹೀರುತ್ತಿರುವ ಗಿಳಿಗಳು, ಲತೆ ಬಳ್ಳಿಗಳು, ವೀಳೆಯದೆಲೆಯ ಹಂಬು, ನೀರಿನಲ್ಲಿ ಮುಳುಗಿ ಹಾರುವ ಹಂಸಗಳಿಂದ ಮಳೆಹನಿಯಂತೆ ಸಿಡಿಯುವ ನೀರ ಹನಿಗಳು ಇತ್ಯಾದಿ ವರ್ಣನೆಗಳಿಂದ ಕೂಡಿ ಮನೋಹರವಾಗಿದೆ.

ಈ ಕಾಡಿಯೂರಿನಲ್ಲಿ ಎಱೆಯನು ಪ್ರೀತಿಯಿಂದ ನೆಲಸಿದ್ದು, ಅದು 'ಎಱೆಯನ ಕಾಡಿಯೂರು' ಎಂದೇ ಪ್ರಸಿದ್ಧವಾಗಿತ್ತು. ಕಾಡಿಯೂರಿನಲ್ಲಿ ಕಲಿದೇವಸ್ವಾಮಿಯ ಶಿವ ದೇವಾಲಯವಿತ್ತು. ಅಲ್ಲದೆ ಚತುಸ್ಸಮಯ ದೇವಾಲಯಗಳೂ ಇದ್ದವು. ಹತ್ತಿರ ಹತ್ತಿರವಾಗಿದ್ದ, ಎತ್ತರವಾದ ಬೆಡಗಿನಿಂದ ಚತುಸ್ಸಮಯ ದೇವಾಲಯಗಳಿದ್ದವು. ಅಲ್ಲಿ ವಸ್ತ್ರದಾನ. ಆಹಾರದಾನ, ಅರವಟ್ಟಿಗೆ, ಶಾಸ್ತ್ರದಾನಗಳು ನಡೆಯುತ್ತಿದ್ದವು. ಆ ಸಮಯದಲ್ಲಿ ನಡೆಯುತ್ತಿದ್ದ ಪೂಜೆ, ಮುನಿನಾಥರು, ಮತ್ತು ಮಹಾ ಸಂಪತ್ತಿನಿಂದ ಕೂಡಿ ಪ್ರಖ್ಯಾತವಾಗಿದ್ದಿತು.

**ಕೊಂಡಲಿಗೆಱೆಯ ವರ್ಣನೆ:** ಆ ಕಾಡಿಯೂರಿನಲ್ಲಿ ಒಂದು ಸುಂದರವಾದ ಕೆರೆಯಿದ್ದಿತ್ತು. ಅದಕ್ಕೆ ಕುಲಗಿರಿಗಳೇ ಭಿತ್ತಿಯಾಗಿದ್ದವು. ಕೆರೆಯು ಭೂದೇವಿಗೆ ಸುಂದರವಾದ ನವ ಮೇಖಲೆ (ಡಾಬು) ಯಂತೆ ಮೆರೆಯುತ್ತಿದ್ದಿತು. ಆ ಕೆರೆಯ ಸೌಂದರ್ಯ ಎಷ್ಟಿತ್ತೆಂದರೆ ಸಾಕ್ಷಾತ್ ಅಬ್ಜವಾಹನನೇ (ಬ್ರಹ್ಮನೇ) ನೆಲೆಸಲು ಯೋಗ್ಯವಾಗಿದೆಯೇನೋ ಎಂಬಂತಿದ್ದಿತು.

**ಇನ್ನೂರು ಜನ ಬ್ರಾಹ್ಮಣರ ವರ್ಣನೆ:** ಎಱೆಯನ ಕಾಡಿಯೂರು ಅಗ್ರಹಾರದಲ್ಲಿ ವೀಸೋತ್ತರ ದೀಕ್ಷಿತರ ನೇತೃತ್ವದಲ್ಲಿ ಇನ್ನೂರು ಜನ ಬ್ರಾಹ್ಮಣರು ಅಧ್ಯಯನವನ್ನು ಕೈಗೊಂಡಿದ್ದರು. ಆ ಕಾಡಿಯೂರಿನಲ್ಲಿ 'ವೇದವೇ ಪ್ರಮಾಣ, ಅಗ್ನಿಯೇ ಮಹಾದೈವ' ಎನ್ನುವಂತೆ ಆ ಬ್ರಾಹ್ಮಣರು ಇದ್ದರು. ಅವರು ಅಖಿಳ ಶಾಸ್ತ್ರಸಾಗರವೇ ಆಗಿದ್ದರು. ನಿರಹಂಕಾರದಲ್ಲಿ, ಗಂಭೀರತೆಯಯಲ್ಲಿ ಮೇರು ಪರ್ವತತಕ್ಕಿಂತ ಸಾಗಿರಕ್ಕಿಂತ ಅತ್ಯುತ್ತಮರಾಗಿದ್ದರು. ಕವಿ ಅವರನ್ನು "ಪ್ರತಿಪಾಳಿತ ವಿಶ್ವಧರ್ಮ ಸೌಜನ್ಯಶೀಲ ಸಮರ್ಥರುಂ" ಎಂದು ಹೊಗಳಿದ್ದಾನೆ. ಹೃದಯದೊಳಗೆ ಹೊಗುವ ಉದಾತ್ತತೆಯ ಮುಂದೆ ಯಾವ ವೇದವೂ ಇಲ್ಲ ಎನ್ನುವಂತೆ ಆ ಬ್ರಾಹ್ಮಣರಿದ್ದರು. ಬರಿಯ "ವೇದ, ಶಾಸ್ತ್ರ, ಸಂಪ್ರದಾಯವನ್ನು ಅಭ್ಯಾಸ ಮಾಡುತ್ತಾ ಕರ್ಮಠರಾಗದೆ ಅವರು ಹೃದಯವಂತಿಕೆಯೇ ಎಲ್ಲಕ್ಕಿಂತ ಮಿಗಿಲು ಎಂಬಂತಿದ್ದರು" ಎಂಬ ಉದಾತ್ತ ಭಾವನೆಯೇ ಪ್ರಾಮುಖ್ಯತೆಯನ್ನು ಪಡೆದಿತ್ತು.

**ಅಧ್ಯಯನ ನಡೆಸುತ್ತಿದ್ದ ಶಾಸ್ತ್ರಗಳು:** ವ್ಯಾಕರಣ, ಅರ್ಥಶಾಸ್ತ್ರ, ಸಾಹಿತ್ಯ, ವಿದ್ಯೆ, ಇತಿಹಾಸ, ಏಕಾಕ್ಷರ, ಎಲ್ಲ ಗ್ರಂಥಗಳಿಗೂ ೀಕೆ ಬರೆಯುವ ಈ ಎಲ್ಲ ವಿಷಯಗಳನ್ನು ಸಮಗ್ರವಾಗಿ ಅಭ್ಯಾಸ ಮಾಡುತ್ತಿದ್ದರು.

"ವಿದ್ವಾಂಸರಲ್ಲಿ ಅನ್ವಿತಸತ್ವರು, ಆಗಮತಜ್ಞರು, ಅನವದ್ಯ ತತ್ವವಿದರು, ನಿರವದ್ಯೆ ವೇದ ವಿದ್ಯಾಪರಿಣತು, ಅರಿವಿಷಯ ದ್ಧ ವಿದ್ಯಾಗಮ ಸತ್ಪರಿಣಿತರ್" ಎಂದೆನಿಸಿಕೊಂಡಿದ್ದರು.

ಇಂತಹ ಬೆಡಗಿನಿಂದ ಕೂಡಿದ ಕಾಡಿಯೂರೆಂಬ ಮಹಾ ಪದಕಕ್ಕೆ ಸ್ವತಃ ಬ್ರಹ್ಮನೇ ಮಿರುಗುವ ರತ್ನವನ್ನು ರಚನೆ ಾಡಿದನೋ ಎಂಬಂತೆ ಬ್ರಾಹ್ಮಣರಿಂದ ವಿರಾಜಿಸುತ್ತಿದ್ದ ಎಱೆಯನ ಕಾಡಿಯೂರು ಪ್ರಸಿದ್ಧವಾಗಿತ್ತು.

ಎಱೆಹಯ್ಯದೇವನ ಪಾರಾಯಣಕ್ಕೆ ೧೨ ಗದ್ಯಾಣ, ಭಟ್ಟವೃತ್ತಿಗೆ ೧೨ ಗದ್ಯಾಣ ಘಳಿಗೆಗೆ [೨]ಗದ್ಯಣ, ೨೬ ದ್ಧಾಯದ ಪೊನ್ನು ಪ್ರತಿಪಾಳಿಸುವುದು ಮಂಗಳ.

ಈ ಶಾಸನವನ್ನು ಬ್ರಾಹ್ಮಣ ಕವಿ ಕವಿರಾಜರಾಜನು ರಚಿಸಿದ್ದಾನೆ. ಕೊನೆಯಲ್ಲಿ ಶಾಪಾಶಯವಿದೆ.

ಈ ಶಾಸನವನ್ನು ಮೊದಲಿಗೆ ಸಂಪಾದಕರು ವ್ಯಕ್ತಪಡಿಸಿರುವ ಒಂದೆರಡು ಅಭಿಪ್ರಾಯಗಳು ಈ ರೀತಿ ಇವೆ.

"ಇಬ್ಬರು ಬ್ರಾಹ್ಮಣ ನಾಯಕರಾದ ರೇವದಾಸ ದೀಕ್ಷಿತ ಮತ್ತು ವೀಸೋತ್ತರ ದೀಕ್ಷಿತರ ಅದ್ಭುತವಾದ ಹೊಗಳಿಕೆಯಿದೆ. ೀಸೋತ್ತರ ದೀಕ್ಷಿತ ಕೆರೆಯನ್ನು ನಿರ್ಮಿಸಿದನು" ಎಂದು ಹೇಳುತ್ತಾರೆ.

ಆದರೆ ಇದು ಒಬ್ಬನೇ ವ್ಯಕ್ತಿಯ ಹೆಸರಾಗಿದ್ದು ಎಂಟು ಬಾರಿ ಪ್ರಯೋಗವಾಗಿದೆ.

ಪದ್ಯ ೯: ... ಚೆಲ್ವಿಂದೆ ವೀಸೋತ್ತರ ವಿದಿತ...

ಪದ್ಯ ೧೦:... ದಣ್ಡಾಧೀಶ್ವರ ರೇವದಾಸ ವೀಸೋತ್ತರ ದೀಕ್ಷಿತ....

ಪ.೧೨:.... ಯಜ್ಞಮನೆ ಮಾಡೆ ಗುಣಾಗ್ರಣಿ ದೇವದಾಸ ವೀಸೋತ್ತರ ದೀಕ್ಷಿತ....

ಪ.೧೩:... [ಗು.] ಣಾಂ ಭೋನಿಧಿ ವೀಸೋತ್ತರ ಭಟ್ಟಂ....

೧೩ ಗದ್ಯ:... ಅಂತೆನಿಸಿದ ವೀಸೋತ್ತರ ಸೋಮಯ....

" :... ದಣ್ಡಾಧಿಪತಿ ರೇವದಾಸ ವೀಸೋತ್ತರ ಸೋಮಯಾಜಿ....

ಒಬ್ಬ ಬ್ರಾಹ್ಮಣನಾಗಿ ಮಾತ್ರ ವೀಸೋತ್ತರ ಸೋಮಯಾಜಿಯು ದಾನ ಪಡೆಯಲಿಲ್ಲ. ಒಬ್ಬ ಯುದ್ಧ ವೀರನಾಗಿಯೂ ವನು ಸಾಮರ್ಥ್ಯವನ್ನು ಹೊಂದಿದ್ದ. ಆದ್ದರಿಂದಲೇ ಅವನು ದಂಡನಾಥೋತ್ತಮ ಪದವಿಯನ್ನು ಪಡೆದನು. ನಂತರವೇ ೀವಿಂದನ್ನು ಚಂದ್ರಪ್ರಣದ ದಿನ ಕಾಡಿಯೂರು ಅಗ್ರಹಾರವನ್ನು ಇತರ ಬ್ರಾಹ್ಮಣರ ವಿದ್ಯಾಭ್ಯಾಸಕ್ಕಾಗಿ ದಾನವನ್ನು ಾಡಿದನು. ಎಂದು ಹೇಳಬಹುದು. ರಾಜನಾದ ಗೊಜ್ಜಿಗದೇವನು ವೀಸೋತ್ತರನನ್ನು ಮುಂದಿಟ್ಟುಕೊಂಡು ಮಹಾ ುಜ್ಞವನ್ನು ಮಾಡಿದನು. ಪಂಡಿತರಿಗೂ ಬ್ರಾಹ್ಮಣರಿಗೂ ಅನೇಕ ದಾನಗಳನ್ನು ಮಾಡಿದನು.

ಸಂಪಾದಕರ ಮತ್ತೊಂದು ಅಭಿಪ್ರಾಯ: "ವೀಸೋತ್ತರ ದೀಕ್ಷಿತ ಕೆರೆಯನ್ನು ನಿರ್ಮಿಸಿದನು" ಎಂದು ಹೇಳುತ್ತಾರೆ. ುತ್ತು "ಕಲಿದೇವಸ್ವಾಮಿ ಎಂಬುವವನ್ನು ದೇವಾಲಯವನ್ನು ನಿರ್ಮಿಸಿದ್ದು' ಎನ್ನುತ್ತಾರೆ. ಆದರೆ ಶಾಸನದ ಪ್ರಕಾರ ಕೆರೆಯು ೊದಲೇ ಇತ್ತು ಅದನ್ನು ವೀಸೋತ್ತರನು ನಿರ್ಮಿಸಲಿಲ್ಲ. ಹಾಗೂ "ಆ ಕಾಡಿಯೂರ ಕೊಣ್ಡಲಿಗೆಱೆಯ ಕಲಿದೇವಸ್ವಾಮಿಯ ವನಿಲಯಂ" ಎಂದು ಸ್ಪಷ್ಟವಾಗಿ ಹೇಳಿದೆ. ಅಂದರೆ ಕಾಡಿಯೂರನ್ನು ಅಗ್ರಹಾರ ಮೂಡಿ, ದಾನಕೊಡುವ ಮೊದಲೇ ಕೆರೆ ಾಗೂ ಕಕಲಿದೇವಸ್ವಾಮಿಯ ದೇವಾಲಯ ಎರಡೂ ಇತ್ತು ಎಂಬುದು ಸ್ಪಷ್ಟವಾಗುತ್ತದೆ.

ಈ ಕಳಸ ಶಾಸನದಲ್ಲಿ ಬರುವ ವರ್ಣನೆಗಳು ಬಹಳ ಸುಂದರವಾಗಿವೆ. ಪ್ರಾಸಂಗಿತವಾಗಿ ಹೇಳುವುದಾದರೆ ಕನ್ನಡದ ದಿಕವಿ ಪಂಪನ ವಿಕ್ರಮಾರ್ಜುನ ವಿಜಯದ ಬನವಾಸಿ ವರ್ಣನೆಯನ್ನು ನೆನಪಿಸುತ್ತದೆ. ಆದರೆ ಈ ಶಾಸನದ ವರ್ಣನೆ ಂಪನ ಕಾವ್ಯಕ್ಕಿಂತ ಹತ್ತು ವರ್ಷ ಮೊದಲೇ ಬಂದಿದೆ ಎಂಬುದನ್ನು ನೆನಪಿಡಬೇಕು.



# ಸಂತೇಬೆನ್ನೂರು ನಾಯಕರ ಅಪ್ರಕಟಿತ ದಾನಪತ್ರ

**ಸಂತೇಬೆನ್ನೂರು ಸುಮತೀಂದ್ರ ನಾಡಿಗ್***

ವಿಜಯನಗರ ಅರಸರ ಅಧೀನರಾಗಿ ಅಡಳಿತ ನಡೆಸಿದ ಒಂದು ರಾಜವಂಶ ಸಂತೇಬೆನ್ನೂರು ನಾಯಕರು. ಇವರು ಈಗಿನ ದಾವಣಗೆರೆ, ಚಿತ್ರದುರ್ಗ, ಶಿವಮೊಗ್ಗ, ಚಿಕ್ಕಮಗಳೂರು, ತುಮಕೂರು, ಹಾಸನ, ಹಾವೇರಿ, ಜಿಲ್ಲೆಗಳ ಕೆಲ ಭೂ ಭಾಗವನ್ನು ೧೬ನೇ ಶತಮಾನದ ಆರಂಭ ಕಾಲದಲ್ಲಿ ಸಂತೇಬೆನ್ನೂರು ನಂತರ ಬಸವಾಪಟ್ಟಣ ಅನಂತರ ತರಿಕೆರೆಗಳನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ್ದಾಗಿ ಐತಿಹಾಸಿಕ ದಾಖಲೆಗಳಿಂದ ತಿಳಿದುಬರುತ್ತದೆ. ಈ ವಂಶದ ೨೫ಕ್ಕೂ ಹೆಚ್ಚಿನ ನಾಯಕರು ಸರಿ ಸುಮಾರು ಎರಡು ಶತಮಾನಗಳಿಗಿಂತಲೂ ಅಧಿಕವಾಗಿ ಆಡಳಿತ ನಡೆಸಿದ್ದಾಗಿಯೂ ಮತ್ತು ಅವರ ಕಾಲದಲ್ಲಿ ಬರೆಸಿದ ತಾಮ್ರ ಶಾಸನಗಳು ಕೈಫಿಯತ್ತುಗಳು, ಕಡತಗಳು, ಬರಹಗಳು, ದಾಖಲೆಗಳು, ಲೇಖನಗಳು ಮತ್ತು ಹಾಕಿಸಿದ ಶಿಲಾ ಶಾಸನಗಳಿಂದ ಅವರು ಅನೇಕ ದೇವಸ್ಥಾನ ಮಠ ಮಂದಿರಗಳಿಗೆ ದತ್ತಿ ದಾನ ನೀಡಿರುವುದನ್ನು ತಿಳಿಯಬಹುದಾಗಿದೆ. ಈಚಿಗೆ ಚಿತ್ರದುರ್ಗದ ಮುರುಘಾಮಠದಲ್ಲಿದ್ದ ದಾಖಲೆಗಳನ್ನು ಪರಿಶೀಲಿಸಿಸುತ್ತಿದ್ದಾಗ ಚಿತ್ರದುರ್ಗದ ಡಾ॥ ಶ್ರೀಮತಿ ಯಶೋದಮ್ಮ ರಾಜಶೇಖರಪ್ಪನವರಿಗೆ ಸಂತೇಬೆನ್ನೂರು ಸೀತಾರಾಮಪ್ಪನಾಯಕರ ಕಾಲದ ಒಂದು ದಾನ ಪತ್ರ ಇರುವುದನ್ನು ಗುರುತಿಸಿ ನನ್ನ ಗಮನಕ್ಕೆ ತಂದರು ಆ ದಾನಪತ್ರದ ವಿಚಾರವಾಗಿ ಈ ನನ್ನ ಸಂಪ್ರಬಂಧದಲ್ಲಿ ವಿವೇಚಿಸಿದ್ದೇನೆ.

ಈ ದಾನಪತ್ರ ಸಂತೇಬೆನ್ನೂರು ಸೀತಾರಾಮಪ್ಪ ನಾಯಕರು ಅವರ ಕಾರ್ಯಕರ್ತ ಚೌಡಪ್ಪನಿಗೆ ಬರೆದು ಕಳಿಸಿದ್ದಾಗಿದೆ. ಅದರಂತೆ ನಂದನ ಸಂವತ್ಸರದ ಚೈತ್ರ ಶುದ್ಧ ೩ರಲ್ಲಿ ಕಾತೂರು ಶೀಮೆ ವಳಗಣ ಕುಡಿಗಲೂರು ಸ್ಥಳ ರಾಮಗಿರಿ ದುರ್ಗದ ಸಮೀಪದ ಗುಪ್ತಗಾಮಿನಿ ಸಮೀಪದಲ್ಲಿ ಸಿದ್ದನಹಳ್ಳಿ ವಳಿತ ಗ್ರಾಮ ಶಟ್ಟಿಹಳ್ಳಿ ಗ್ರಾಮ ೧ರಲ್ಲಿ ೮ ವರಹ ಭೂಮಿಯನ್ನು ತಮ್ಮ ಹೆತ್ತವರಿಗೆ ಪುಣ್ಯಲೋಕ ಪ್ರಾಪ್ತಿಯಾಗಲೆಂದು ಶಿವಾರ್ಪಿತವಾಗಿ ಆ ಗ್ರಾಮಕ್ಕೆ ಸಿದ್ದಲಿಂಗಾಪುರ ಎಂದು ಪ್ರತಿನಾಮ ನೀಡಿ ದಾನ ಕೊಟ್ಟಿದ್ದನ್ನು ತಿಳಿಸುತ್ತದೆ.

**ಈ ದಾನ ಪತ್ರದಿಂದ ತಿಳಿದು ಬರುವುದೇನೆಂದರೆ**

೧. ದಾನ ಕೊಟ್ಟ ಜಮೀನಿನ ನಾಲ್ಕು ಕಡೆಯಲ್ಲಿ ಲಿಂಗಮುದ್ರೆ ಕಲ್ಲು ಹಾಕಿಸಿ ಈ ದಾನವನ್ನು ಮುರಿಘಾ ಸಿದ್ದಲಿಂಗಸ್ವಾಮಿಗಳಿಗೆ ಸಕಲ ಮರ್ಯಾದೆಯಿಂದ ದಾನಕೊಟ್ಟಿದ್ದಾಗಿ ಲೇಖನ ತಿಳಿಸುತ್ತದೆ.

೨. ಈ ಲೇಖನದಲ್ಲಿನ ದಾನ ಕೊಟ್ಟವನ ಹೆಸರು ಸಂತೇಬೆನ್ನೂರು ಸೀತಾರಾಮಪ್ಪ ನಾಯಕ ಎಂದು ಉಲ್ಲೇಖಿಸಲಾಗಿದೆ. ಇತಿಹಾಸ ದಾಖಲೆಗಳಲ್ಲಿ ಇವನನ್ನು ಬಸವಾಪಟ್ಟಣ, ತರೀಕೇರೆ ನಾಯಕನೆಂದು ಗುರುತಿಸಿದಾರೆಯೇ ಹೊರತು ಸಂತೇಬೆನ್ನೂರು ನಾಯಕನೆಂದಲ್ಲ. ಈ ವಂಶದ ದಾಖಲೆಗಳನ್ನು ಪರಿಶೀಲಿಸಿದಾಗ ಇವರು ಸಂತೇಬೆನ್ನೂರಿನಿಂದ ರಾಜ್ಯ ಆಡಳಿತ ಪ್ರಾರಂಭಿಸಿ ನಂತರ ಬಸವಾಪಟ್ಟಣದ ಹೆಣ್ಣು ಮಗಳನ್ನು ಮದುವೆಯಾಗಿ ಅಲ್ಲಿಗೆ ತಮ್ಮ ರಾಜ್ಯಧಾನಿಯನ್ನು ಬದಲಾಯಿಸಿ ತಂದನಂತರ ಆದೀಲ್ ಶಾಯಿಗಳ ಕಾಲದಲ್ಲಿ ಅವರ ಅಧೀನರಾಗಿ ಕೊನೆಯಲ್ಲಿ ತರೀಕೆರೆಗೆ ಹೋಗಿ ನೆಲಸಿ ಅಲ್ಲಿಂದ ಆಡಳಿತ ನಡೆಸಿದ್ದಾಗಿ ತಿಳಿದು ಬರುತ್ತದೆ. ಈ ವಂಶದ ನಾಯಕರೆಲ್ಲರೂ ಬಸವಾಪಟ್ಟಣ ತರೀಕೆರೆಗಳಿಂದ ಆಡಳಿತ ನಡೆಸುತ್ತಿದ್ದಾಗಲೂ ತಾವು ಬರೆಸಿದ, ಹಾಕಿಸಿದ ೬೦ಕ್ಕೂ ಹೆಚ್ಚು ಶಾಸನಗಳಲ್ಲಿ ತಮ್ಮನ್ನು ಸಂತೇಬೆನ್ನೂರು ನಾಯಕರೆಂದು ಗುರುತಿಸಿ ಕರೆಸಿಕೊಂಡಿದ್ದಾರೆ. ಈ ದಾನಪತ್ರ ಬರೆದುಕೊಟ್ಟ ಸೀತಾರಾಮಪ್ಪನಾಯಕ ಆಗ ಆಡಳಿತ ನಡೆಸುತ್ತಿದುದ್ದು ದಾಖಲೆಗಳಿಂದ ತರೀಕೆರೆಯಿಂದ ಎಂದು ತಿಳಿದುಬಂದರೂ ತಾನು ಸಂತೇಬೆನ್ನೂರು ನಾಯಕನೆಂದು ಕರೆದುಕೊಂಡಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ.

೩. ಇನ್ನು ಈ ದಾನ ಫತ್ರದಲ್ಲಿ ಉಲ್ಲೇಖಿತವಾಗಿರುವ ಸ್ಥಳದ ವಿಚಾರ.: ಕಾತೂರು ಸೀಮೆ ಒಳಗಣ ಕುಡಿಗಲೂರು

* ನಿವೃತ್ತ ಪತ್ರಕರ್ತ, ಸಂತೇಬೆನ್ನೂರು-೫೭೭೫೫೨, ಮೊ. ೯೯೦೦೨೪೩೭೮೦

ಸ್ಥಳದ ವಳಿತಾದ ಸಿದ್ದನಹಳ್ಳಿ ವಳಗ್ರಾಮ ಶೆಟ್ಟಿಹಳ್ಳಿ ಎಂಬ ಗ್ರಾಮಕ್ಕೆ ಸಿದ್ದಲಿಂಗಾಪುರ ಪ್ರತಿನಾಮ ಇಟ್ಟು ದಾನಕೊಟ್ಟಿದ್ದಾಗಿ ತಿಳಿಸುತ್ತದೆ. ಕಾತೂರು ಎಂಬ ಹೆಸರಿನ ೨ಗ್ರಾಮಗಳು ಇವರ ಇತರೆ ಶಿಲಾ ಶಾಸನ ಮತ್ತು ತಾಮ್ರ ಶಾಸನಗಳಲ್ಲಿ ಉಲೇಖಿತವಾಗಿವೆ. ಆದರೆ ಕಾತೂರು ಎಂಬ ಸ್ಥಳಗಳೇ ಕರ್ನಾಟಕದ ಗ್ರಾಮ ಸೂಚಿ ಪಟ್ಟಿಯಲ್ಲಿ ಈಗ ಇಲ್ಲದಿರುವುದು ಅಚ್ಚರಿತರುತದೆ. ಆದರೆ ಹಿರೇಕಾತೂರು ಎಂಬ ಗ್ರಾಮ ಲಕ್ಕವಳ್ಳಿಯಲ್ಲಿ ನಿರ್ಮಿಸಿರುವ ಭದ್ರಾ ಡ್ಯಾಂನಲ್ಲಿ ಮುಳುಗಡೆಯಾಗಿದೆ ಎಂದೂ ಚಿಕ್ಕಕಾತೂರು ಎಂದಿದ್ದ ಇನ್ನೊಂದು ಗ್ರಾಮ ಶಿವಮೊಗ್ಗ ಸಮೀಪದ ಗಾಜನೂರು ಗ್ರಾಮದಲ್ಲಿ ನಿರ್ಮಿಸಿದ ತುಂಗಾ ಡ್ಯಾಂನಲ್ಲಿ ಮುಳುಗಡೆಯಾಗಿದೆ ಎಂದು ತಿಳಿದು ಬರುತ್ತದೆ. ಈ ದಾನಪತ್ರದಲ್ಲಿನ ಇತರೇ ವಿಷಯಗಳನ್ನು ಗಮನಿಸಿದಾಗ ಈ ದಾನ ಪತ್ರದಲ್ಲಿ ಉಲ್ಲೇಖಿತ ಕಾತೂರು ಈಗ ತುಂಗಾ ಡ್ಯಾಂನಲ್ಲಿ ಮುಳುಗಡೆಯಾದ ಚಿಕ್ಕಕಾತೂರು ಇರಬೇಕೆಂಬ ನಿರ್ಣಯಕ್ಕೆ ಬರಬಹುದಾಗಿದೆ. ಕುಡಿಗಲೂರು ಎಂಬ ಸ್ಥಳ ಈಗ ಕುಡಿಗಲೂರು ಮನೆ ಎಂಬ ಸಣ್ಣ ಗ್ರಾಮವಾಗಿದೆ. ಶೆಟ್ಟಿಹಳ್ಳಿ ಗ್ರಾಮವೂ ಅನೇಕವಿದ್ದು ಇಲ್ಲಿ ಉಲ್ಲೇಖಿತ ಗ್ರಾಮ ಈಗಿನ ಶಿವಮೊಗ್ಗ ತಾಲ್ಲೂಕಿನ ಶೆಟ್ಟಿಹಳ್ಳಿ ಗ್ರಾಮವೇ ಆಗಿರುವ ಸಂಭವವೇ ಹೆಚ್ಚು ಅದೇ ಸಿದ್ದಲಿಂಗಾಪುರ ಎಂದು ಮರು ನಾಮಕರಣಗೊಂಡಿದ್ದರೂ ಜನರು ಅದನ್ನು ರೂಢಿಯಾಗಿ ಇಟ್ಟಿಲ್ಲ. ಈಗಿನ ಶೆಟ್ಟಿಹಳ್ಳಿ ಗ್ರಾಮವೂ ಸ್ಥಳಾಂತರಿಸಿದ್ದಾಗಿದೆ. ಇನ್ನೂ ರಾಮದುರ್ಗ ಗವಿಮಠ ಎಂಬುದನ್ನು ಗುರುತಿಸುವುದು ಕಷ್ಟಸಾದ್ಯವಾಗಿದ್ದು ಇವುಗಳು ಡ್ಯಾಂ ನಿರ್ಮಾಣ ಹಂತದಲ್ಲಿ ಮುಳಿಗಡೆಯಾಗಿರುವ ಸಾಧ್ಯತೆ ಇದೆ.

ಇನ್ನು ದಾನಪತ್ರ ಬರೆಸಿಕೊಟ್ಟ ಸೀತಾ ರಾಮಪ್ಪ ನಾಯಕರ ಬಗ್ಗೆ ಹೇಳುಬಹುದಾದರೆ ಈ ವಂಶದ ಅನೇಕ ನಾಯಕರ ಹೆಸರು ಕೆಂಗಪ್ಪ, ಹನುಮಪ್ಪ, ಸೀತಾರಾಮಪ್ಪ ಎಂಬ ಒಂದೇ ರೀತಿಯ ಹಲವಾರು ನಾಯಕರು ಆಡಳಿತ ನಡೆಸಿದ್ದಾಗಿ ತಿಳಿದು ಬರುತ್ತದೆ. ಅವರನ್ನು ಹಿರೇ ಕೆಂಗಪ್ಪ ನಾಯಕ, ಚಿಕ್ಕ ಕೆಂಗಪ್ಪ ನಾಯಕ, ಹಿರೇ ಹನುಮಪ್ಪ ನಾಯಕ, ಚಿಕ್ಕ ಹನುಮಪ್ಪ ನಾಯಕನೆಂದು ಗುರುತಿಸಲಾಗುತ್ತಿದೆ. ಅದರಂತೆ ಸೀತಾ ರಾಮಪ್ಪ ನಾಯಕರೆಂಬ ನಾಲ್ಕೈದು ಜನ ನಾಯಕರು ಆಡಳಿತ ನಡೆಸುತ್ತಿರುವುದಾಗಿ ದಾಖಲೆಗಳು ತಿಳಿಸುತ್ತಿದ್ದು ಈ ದಾನ ಪತ್ರದ ಕಾಲವನ್ನು ಮತ್ತು ಆ ವಂಶದವರು ಬರೆಸಿದ ಕೈಫಿಯುತ್ತುಗಳನ್ನು ಪರಿಶೀಲಿಸಿದಾಗ ಈ ದಾನಪತ್ರ ಬರೆಸಿದ ಸಿತಾರಾಮಪ್ಪ ನಾಯಕ ೩ನೇಯವನಾಗಿದ್ದಾನೆ, ಕೈಫಿಯತ್ತಿನಂತೆ ನಂದನ ಸಂವತ್ಸರದಲ್ಲಿ ಆಡಳಿತ ನಡೆಸಿದ ಸೀತಾರಾಮಪ್ಪ ನಾಯಕ ಇವನೊಬ್ಬನೆ. ಆದ್ದರಿಂದ ಇವನನ್ನು ೩ನೇ ಸೀತಾರಾಮಪ್ಪ ನಾಯಕ ಎಂದು ಗುರುತಿಸಬಹುದಾಗಿದೆ.

೫. ಅದರಂತೆ ಈ ಶಾಸನದ ಕಾಲವನ್ನು ನಾನು ೧೯೪೪ನೇ ನಂದನ ಸಂವತ್ಸರದ ಚೈತ್ರಶುದ್ಧ ತದಿಗೆ ಎಂಬ ನಿರ್ಣಯಕ್ಕೆ ಬಂದಿದ್ದೇನೆ ಅದರಂತೆ ಈ ಶಾಸನ ಕಾಲ ಕ್ರಿ.ಶ. ೧೭೭೨.

೬. ಈ ದಾನ ಪತ್ರ ಶ್ರೀಮಾದ್ ನಿರಂಜನ ಗಣೇಶ್ವರ ಸಿದ್ದಲಿಂಗೇಶ್ವರ ಸಂಪ್ರದಾಯದ ಮುರಿಘೆ ಸಿದ್ದಲಿಂಗಸ್ವಾಮಿಗಳಿಗೆ ಬರೆದುಕೊಟ್ಟಿದ್ದು, ಈ ಲೇಖನ ನಮಗೆ ದೊರೆತ್ತಿದ್ದು ಚಿತ್ರದುರ್ಗದ ಮುರಿಘಾಮಠದ ದಾಖಲೆಗಳಲ್ಲಿ, ಆದರೆ ಈ ದಾನಪತ್ರ ಪರಿಶೀಲಿಸಿದಾಗ ನಮಗೆ ತಿಳಿದು ಬರುವ ವಿಚಾರ ಸೀತಾರಾಮಪ್ಪ ನಾಯಕ ದಾನ ಕೊಟ್ಟಿರುವುದು. ಆನಂದಪುರದ (ಬೆಕ್ಕಿನಕಲ್ಮಠ)ದ ಮುರುಘಾ ಮಠದ ಸಿದ್ದಲಿಂಗಸ್ವಾಮಿಗಳಿಗಾಗಿದೆ ಕಾರಣ ನಂದನ ಸಂವತ್ಸರದಲ್ಲಿ ಪಟ್ಟಾಧ್ಯಕ್ಷರಾಗಿದ್ದವರು ಆನಂದಾಪುರ ಮಠದ ಶ್ರೀ ಸಿದ್ದಲಿಂಗಸ್ವಾಮಿಗಳು ಈ ಬೆಕ್ಕಿನ ಕಲ್ಮಠವನ್ನು ೧೬೭೦ರಲ್ಲಿ ಸಂತೇಬೆನ್ನೂರು ಕೆಂಗಾಹನುಮಪ್ಪ ನಾಯಕ ಕಟ್ಟಿಸಿಕೊಟ್ಟರೆಂಬ ಉಲ್ಲೇಖ ಆ ಮಠದ ಒಂದು ತಾಮ್ರ ಶಾಸನದಿಂದ ತಿಳಿಯಬಹುದಾಗಿದ್ದು ಈ ದಾನಪತ್ರ ಬೆಕ್ಕಿನ ಕಲ್ಮಠದ ಸಿದ್ದಲಿಂಗೇಶ್ವರಸ್ವಾಮಿಗಳಿಗೆ ಬರೆದುಕೊಟ್ಟರೆಂಬುದಕ್ಕೆ ಇನ್ನೊಂದು ಸಾಕ್ಷಿಯಾಗಿದೆ. ಈ ಆನಂದಪುರಮಠ ಚಿತ್ರದುರ್ಗದ ಮುರುಘಾಮಠದ ಪರಂಪರಾಗತ ಮಠವಾಗಿದ್ದು ಈ ದಾನಪತ್ರ ಮೂಲ ಮಠವಾದ ಚಿತ್ರದುರ್ಗ ಮಠದಲ್ಲಿದ್ದರಬೇಕು. ಈ ದಾನ ಶಾಸನದಿಂದ ಮೂಲ ಮಠ ಆನಂದಪುರಮಠಗಳ ಬಾಂಧವ್ಯವನ್ನು ಗುರುತಿಸಬಹುದಾಗಿದೆ.

ಒಟ್ಟಿನಲ್ಲಿ ಈ ದಾನಪತ್ರದಿಂದ ಸಂತೇಬೆನ್ನೂರು ನಾಯಕರ ಇತಿಹಾಸಕ್ಕೆ ಒಂದು ಹೊಸ ವಿಚಾರ ಸೇರ್ಪಡೆಯಾಗುತ್ತಿದ್ದು ಈ ನಾಯಕರ ಬಗ್ಗೆ ಇನ್ನೂ ಸಂಶೋಧನೆ ನಡೆಸಿದ್ದಲ್ಲಿ ಹೆಚ್ಚಿನ ಮಾಹಿತಿ ದೊರೆಯುವುದರಲ್ಲಿ ಸಂಶಯವಿಲ್ಲ.

## ದಾನಪತ್ರದ ಪಾಠ

**ಪತ್ರದ ಮುಂಭಾಗ**

೧. ಶ್ರೀ
೨. [ಶ್ರೀ ಮನ್ ನಿರಂ]ಜನ ಗನೇಶ್ವರವ
೩. .. ತ್ವಾಂಜ. ಸಿದ್ದಲಿಂಗೇಶ್ವರ ಸಾ
೪. ಂಪ್ರದಾಯ ಪಾರಂಪರ್ಯೊತತ್ರ ಶ್ರೀಮಾನ್ಂ
೫. ಮುರ್‍ರಿಗ ಸಿದ್ದಲಿಂಗ ಸ್ವಾಮಿಗಳವರ್‍ರಿಗೆ
೬ ನಂದನ ಸಂವತ್ಸರದ ಚೈತ್ರ ಶು ೩ ಲ್ಲು ಶ್ರೀಮತ್ತ ಸಂತ್ತೆಬೆನೂರ
೭ ಸರ್ಜ ಶೀತ್ತಾರಾಮಪ್ಪ ನಾಯಿಕರ್‍ರು ॥ಪಾ॥ ಚಲುಡ್ಯೆಯಗೆ ಬ
೮. ರಶಿ ಕಳುಹಿಸ್ತ ಕಾರ್‍ಯ್ಯ ನಂಮ್ಮ ರಾಜ್ಯಕ್ಕೆ ಸಲುವ ಕಾತೂರ್‍ರು ಶಿಮೆ
೯. ವಳಗಣ ಕುಡಿಗಲೂರ ಸ್ತಳದ ರಾಮಗಿರ್‍ರಿ ದುರ್ಗದ ಚತ್ರು ದಿಕ್ಕಿ
೧೦. ನ ಗುಪ್ತಗಾಮಿನಿ ಸಮಿಪದಲ್ಲಿ ನೂತ್ತನವಾಗಿ ನಿರ್ಮಿಸಿದ ಗವಿಮ
೧೧. ಟದ ದರ್ಮಕ್ಕೆ ಕುಡಿಗಲೂರ ಸ್ತಳದ ವಳತ್ತಾದ ಸಿದ್ದನಹಳ್ಳಿ
೧೨. ವಳಗ್ರಾಮ ಶೆಟ್ಟಿಹಳ್ಳಿ ಯಂಬ ಗ್ರಾಮ ೧ಕೆ ಸಿಸ್ತು ಕುಳವರನಿಗೆ
೧೩. ಯಂಟ್ಟು ವರಹದ ಭೂಮಿಯಂನ್ನು ನಂಮ್ಮ ಹೆತ್ತವರ್‍ರಿ
೧೪. ಗೆ ಪುಂಣ್ಯ ಲೋಕ ಪ್ರಾಪ್ತಿಯಾಗಬೆಕು ಎಂಬುದ ಕುರ್‍ರಿ
೧೫. ತು ಶಿವಾರ್ಪಿತವಾಗಿ ವಪ್ಪಿಸಿಯಿದ್ದೆವೆ ಆ ರ್ವಿತ್ತಿಗೆ ಶೆ
೧೬. ಟ್ಟಿಹಳ್ಳಿ ಗ್ರಾಮದ ಪ್ರತ್ತಿ ನಾಮ ಸಿದ್ದಲಿಂಗಪುರದ ಗ್ರಾ
೧೭. ಮದ ಸಿಸ್ತು ಪ್ರಮಾಣು ಹಗ್ಗ ಪಟ್ಟಿ ಬಾಬು ಸುಂಕ ಸೊ

**ಪತ್ರದ ಹಿಂಭಾಗ**

೧೮. ದಿಗೆ ಆಚಾರ್‍ತ್ತಿಗೆ ಹೊಲಗಾವಲ ಕಾಡಾರಂಬ ನಿರಾ

೯. ರಂಬ ಹೊಸಗಾಮಿ ತೋಟ ತುಡಿಕೆ ಅಕ್ಷಿಣಿ ಜಲಪಾಶಾ
೦. ಣ ಯಿತ್ಯಾದಿ ಸಕಲ ಸುವರ್ನಾದಾಯಾ ಯಿದಲ್ಲದೆ ಬಂ
೧. ದ ಹೊಸಪಟ್ಟಿ ಮುಂತ್ತಾದಗೀ ಸರ್ವಮಾಂನ್ಯವಗಿ ನಡೆದು
೨. ಬರ್‍ರುವ ಹಾಗೆ ಮಾಡಿ ಯಿ ಗ್ರಾಮದ ಚತ್ರುದಿಕ್ಕಿಗು ಲಿಂಗ್ಗ ಮು
೩. ದ್ರೆ ಸಿಲಾ ಪ್ರತಿಷ್ಠೆಯ ಮಾಡಿ ಯಿ ಗವಿಮಟದ ಸುತ್ತಲು ಶಿಲಾ
೪. ಮಯವಾಗಿ ಯಿರ್‍ರುವದರ್‍ರಿಂದ ಚತ್ರುದಿಕ್ಕಿಗು ಲಿಂಗ್ಗಮು
೫. ದ್ರೆಯಾನ್ನು ಶಿಲೆಯ ಮೇಲೆ ತ್ತಿದ್ದಿಸಿ ಕೊಟ್ಟು ಉಡಿಗೆರ್‍ರೆ ಕನಕ
೬. ವಾದ್ಯ ಗರ್‍ರಿ ಸಬಳ ಉಡಾಸು ಯಿ ಕಾಗದವಂನ್ನು ಅರಮ
೭. ನೆ ಕಡುತ್ತಕ್ಕೆ ಬರಶಿ ತ್ತಿರ್‍ರಿಗಿ ಯಿವರ ಬಗೆಯವರ್‍ರವಶಕ್ಕೆ ಕೊ
೮. ಡುವದ್ದು

[ಈ ಪ್ರಬಂಧದ ಮೂಲ ದಾನ ಪ್ರತಿ ಒದಗಿಸಿದ ಡಾ॥ ಯಶೋಧ ರಾಜಶೇಖರಪ್ಪ ನವರಿಗೂ, ಮೂಲ ದಾನ ಪತ್ರದ ಟಿಪ್ಪಣಿ ಮಾಡಿಕೊಟ್ಟ ಡಾ॥ ರಾಜಶೇಖರಪ್ಪ ಇವರಿಗೂ ಧನ್ಯವಾದಗಳು].



## ಆಕರ ಗ್ರಂಥಗಳು


1. ಸಂತೇಬೆನ್ನೂರು ನಾಯಕರು (೨೦೦೮), ಸಂತೇಬೆನ್ನೂರು ಸುಮತೀಂದ್ರನಾಡಿಗ್ ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ ಬೆಂಗಳೂರು.
2. ಕರ್ನಾಟಕ ಗ್ರಾಮ ಸೂಚಿ (೧೯೮೫), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು.
3. ವಿರತಿಯಂಕರ (೧೯೮೦), ಬೆಕ್ಕಿನಕಲ್ಮಠ, ಆನಂದಾಪುರ.
4. ಚಿತ್ರದುರ್ಗದ ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್‌ಮಠದ ದಾಖಲೆ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ) ಡಾ. ಯಶೋಧಮ್ಮ ರಾಜಶೇಖರಪ್ಪ ಚಿತ್ರದುರ್ಗ.
5. ತರೀಕೆರೆ ನಾಯಕರು (೨೦೧೪), ಸಂತೇಬೆನ್ನೂರು ಸುಮತೀಂದ್ರ ನಾಡಿಗ್, ಸಿವಿಜಿ ಇಂಡಿಯಾ, ಬೆಂಗಳೂರು.

೩೩

# ಮೈಸೂರು ಜಿಲ್ಲೆಯ ಶಾಸನೋಕ್ತ ತುರುಗೋಳ್ ವೀರಗಲ್ಲುಗಳು

ಎಂ.ಕೆ. ವಿನಯ*

**ಪ**ಶುಪಾಲನಾವೃತ್ತಿ ನಮ್ಮ ಪೂರ್ವಜರಿಗೆ ಹೊಸದೇನಲ್ಲ. ಭಾರತದ ನಾಗರೀಕತೆಯಷ್ಟೇ ಪುರಾತನವಾದದ್ದು ಮೊದಲು ಕರ್ನಾಟಕದ ಮೂಲನಿವಾಸಿಗಳಿಗೆ ದನ ಸಾಕಣೆ ಮುಖ್ಯ ಜೀವನೋಪಾಯವಾಗಿತ್ತು. ಸಾಕುಪ್ರಾಣಿಗಳ ಹಿಂಡೇ ಅವರ ಸಂಪತ್ತು ದನಗಳೇ ಅವರ ಧನ. ಈ ದನಗಾರರು ತಮ್ಮ ಹಿಂಡನ್ನು ಒಂದು ಕಡೆ ಕಲೆಹಾಕಿ, ಕೂಡಿ (ದೊಡ್ಡಿ ಅಥವಾ ರೊಪ್ಪದಲ್ಲಿ ಹಾಕಿ) ಬೀಡು ಬಿಡುತ್ತಿದ್ದರು. ಈ ದನಗಳ ಬೀಡಿಗೆ "ಹಟ್ಟಿ" ಎಂದೂ, ಜೋಪಾಸನೆಗಾರರಿಗೆ "ಹಟ್ಟಿಕಾರ"ರೆಂದೂ ಹೆಸರಾಯಿತು. ಇಂದಿಗೂ ಮೈಸೂರು ಮತ್ತು ಮಂಡ್ಯದ ಪ್ರದೇಶಗಳಲ್ಲಿ "ಹಟ್ಟಿ" ಹಾಗೂ "ದೊಡ್ಡಿ"ಯಿಂದ ಕೊನೆಗೊಳ್ಳುವ ಊರಿನ ಹೆಸರುಗಳಿವೆ. ಹಟ್ಟಿಕಾರರೇ ಕರ್ನಾಟಕದ ಮೂಲಪುರುಷರು ಎಂದು ಹೇಳಬಹುದು. ಹಟ್ಟಿಕಾರರ ದನಗಳಿಗೆ "ಹಟ್ಟಿ ದನಗಳು "ಹಳ್ಳಿಕಾರ" ದನಗಳೆಂದು ಹೆಸರು ಬಂದಿರಬಹುದು. ಹಿಂದೂ ಸಂಸ್ಕೃತಿ, ಧರ್ಮದಲ್ಲಿ ಗೋವಿಗೆ ಒಂದು ಪೂಜ್ಯ ಸ್ಥಾನವಿದೆ. ಇಂದಿಗೂ ಸಹ ನಮ್ಮಹಳ್ಳಿಗಳಲ್ಲಿ ಹಟ್ಟಿಯ ಹಬ್ಬವನ್ನು (ದೀಪಾವಳಿಯನ್ನು) ಅತಿ ವಿಜೃಂಭಣೆಯಿಂದ ಆಚರಿಸುತ್ತಾರೆ. ಈ ಹಟ್ಟಿಯ ಹಬ್ಬ ನಾಡಹಬ್ಬ, ದನಕರುಗಳ ಹಬ್ಬ ಅಂದು ದನಗಳಿಗೆ ಮೈತೊಳೆದು, ಶೃಂಗರಿಸಿ ಗೋಪೂಜೆಯನ್ನು ಮಾಡುತ್ತಾರೆ. ಸಾಮಾಜಿಕ ಜೀವನದಲ್ಲಿ ದನಗಳು ಮಹತ್ವದ ಪಾತ್ರವನ್ನು ವಹಿಸುತ್ತವೆ. ಬರಬರುತ್ತಾ ಈ ಹಟ್ಟಿಕಾರರು ತಮ್ಮ ದನಗಳ ಹಿಂಡನೊಂದಿಗೆ ಕೆಲವು ಸ್ಥಳದಲ್ಲಿ ನೆಲೆಯೂರಿ ನಿಂತರು. ತೋಟ ಮಾಡಿ ವ್ಯವಸಾಯದಿಂದ ಜೀವನವನ್ನು ಸಾಗಿಸುತ್ತ ಬಂದರು. ಮುಂದೆ ಅವು ಬೆಳೆದು ಊರುಗಳಾದವು.

**'ತುರುಗೋಳ್'**: ತುರುಗಳೆಂದರೆ ಒಂದು ಗ್ರಾಮದ ಹಸು, ದನಗಳ ಸಂಪತ್ತು. ಗೋವನ್ನು ಪೂಜ್ಯವೆಂದು ಭಾವಿಸುವ ಸಂಸ್ಕೃತಿ, ಪರಂಪರೆ ಈ ನಾಡಿನಲ್ಲಿದೆ. ನಾಡಿನ ವಿಸ್ತರಣೆಯ ಮಹತ್ವಾಕಾಂಕ್ಷೆಯನ್ನು ಹೊಂದಿದ್ದ ರಾಜ ಮಹಾರಾಜರ ಸೈನ್ಯವು ಮೊದಲು ಆ ನಾಡಿನ ಪಶುಸಂಪತ್ತಾದ ಗೋವುಗಳನ್ನು ಅಪಹರಿಸುತ್ತಿತ್ತು. ಇದರಿಂದ ಯುದ್ಧಕ್ಕೆ ಪ್ರೇರಿಸಲಾಗುತ್ತಿತ್ತು. ತನ್ನ ನಾಡಿನ ಗೋವುಗಳನ್ನು ಹಿಂದಿರುಗಿ ಪಡೆಯಲು ಕಾಳಗಕ್ಕಿಳಿಯುವುದು ಅನಿವಾರ್ಯವಾಗಿತ್ತು. ಹೀಗೆ ಯುದ್ಧ ಮೊದಲಾಗಿ ನಾಡಿನ, ಪ್ರಾಂತ್ಯಗಳ ಜಯಾಪಜಯದ ಮೇಲೆ ಆಡಳಿತದ ಹಕ್ಕು ನಿರ್ಣಯವಾಗುತ್ತಿತ್ತು. ಮಹಾಭಾರತ ಕಾವ್ಯದ ವಿರಾಟ ಪರ್ವದಲ್ಲಿ ವಿರಾಟರಾಜನ ಮೇಲೆ ಯುದ್ಧಕ್ಕೆಳಸುವ ಮೊದಲು ಕೌರವರು ಗೋಗ್ರಹಣದ ಮೂಲಕ ಯುದ್ಧಾಹ್ವಾನವನ್ನು ಇತ್ತ ಸಂದರ್ಭವನ್ನು ಇಲ್ಲಿ ಸ್ಮರಿಸಬಹುದು.

ಮೈಸೂರು ಜಿಲ್ಲೆಯಲ್ಲಿ ತುರುಗೋಳ್ ವೀರಗಲ್ಲುಗಳು ಎಲ್ಲ ತಾಲ್ಲೂಕುಗಳಲ್ಲಿಯೂ ದೊರೆಯುತ್ತವೆ. ಮೈಸೂರು ಸಾಂಸ್ಕೃತಿಕ ನಗರಿಯಾಗಿದ್ದೂ ಹತ್ತು ಹಲವು ವಿಶೇಷತೆಯನ್ನು ಒಳಗೊಂಡಿದೆ.

ವರುಣದ ಮಹಾದೇಶ್ವರ ದೇವಾಲಯದ ಒಳಗಿರುವ ಕಲ್ಲಿನಲ್ಲಿ ಚಾಲುಕ್ಯ ವಂಶದ ನರಸಿಂಗನ ಆಳ್ವಿಕೆಯ ಅವದಿಯಲ್ಲಿ ಮಹಾಸಾಮಂತನ ಮಡದಿ ಗಾವಿಲಬ್ಬರಸಿಯು ವೀರಗಲ್ಲನ್ನು ಪ್ರತಿಷ್ಠಾಪಿಸಿರುವ ವಿವರವಿದೆ. ಶಾಸನ ತ್ರುಟಿತವಾಗಿರುವುದರಿಂದ ಹೆಚ್ಚಿನ ಮಾಹಿತಿ ಲಭ್ಯವಿರುವುದಿಲ್ಲ.[೧] ಹಳೇಕೆಸರೆಯಲ್ಲಿ ಸಿಕ್ಕಿರುವ ಅಪ್ರಕಟಿತ ತುರುಗೋಳ್ ಶಿಲಾವೀರಗಲ್ಲು ಇರುವುದನ್ನು ನೋಡಬಹುದು. ಈ ಶಿಲ್ಪವು ಒಂದು ಹಂತವನ್ನು ಒಳಗೊಂಡಿದೆ. ಒಬ್ಬ ತುರುಗಳ್ಳನು ಹಸುವನ್ನು ಹೊಡೆದುಕೊಂಡು ಹೋಗುತ್ತಿರುವ ಚಿತ್ರವಿದೆ. ಹಿಂದೆ ಇಬ್ಬರು ವೀರರು ಆಯುಧವನ್ನಿಡಿದು ಬೆನ್ನಟ್ಟುತ್ತಿರುವ ಸುಂದರ ಚಿತ್ರಣ ಈ ವೀರಗಲ್ಲಿನಲ್ಲಿ ಕಂಡರಿಸಲಾಗಿದೆ. ಇದು ಒಂದು ಹಂತದ ಶಿಲಾಶಾಸನವಾಗಿದೆ. ಈ ರೀತಿ ಒಂದು ಹಂತವನ್ನು ಒಳಗೊಂಡ ಈ ವೀರಗಲ್ಲಿನಲ್ಲಿ ತುರುಗೋಳ್ ಕದನದ ಚಿತ್ರಣವಿದೆ. ಇದು ವಿಜಯನಗರ ಕಾಲದ ತುರುಗಳ್ ಶಾಸನವಾಗಿದೆ. ತುರುಗೋಳ್ ವೀರಗಲ್ಲು: ಚಿಕ್ಕಾನ್ಯದಲ್ಲಿರುವ ಹತ್ತನೇ ಶತಮಾನಕ್ಕೆ ಸೇರಿದ ವೀರಗಲ್ಲು ಶಾಸನದಲ್ಲಿ ಗಂಗರಾಜನಾದ ಸತ್ಯವಾಕ್ಯ ಪೆರ್ಮಾನಡಿಯು ಗಂಗವಾಡಿಯನ್ನು ಆಳ್ವಿಕೆ ಮಾಡುತ್ತಿರುವ ಸಂದರ್ಭದಲ್ಲಿ ಮಾದಯ್ಯನೆಂಬ ಅಧಿಕಾರಿಯು ತುರುಗಾಳಗದಲ್ಲಿ ಹೊರಾಡಿ ಮಡಿದ ವಿವರಗಳಿವೆ.[೨] ಮೈಸೂರಿನ ಸಮೀಪವಿರುವ ಮಲ್ಲೇಗೌಡನಕೊಪ್ಪಲಿನ ವೀರಗಲ್ಲು ಶಾಸನವು ಕ್ರಿ.ಶ. ೧೦೩೬ರ

* ಪಿ.ಎಚ್.ಡಿ. ಸಂಶೋಧನ ವಿದ್ಯಾರ್ಥಿ, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಮೊ. ೭೭೯೫೫೦೯೩೨೨೦

ಲದ್ದಾಗಿದೆ. ಆಷಾಢಮಾಸದ ಅಮವಾಸ್ಯೆಯಂದು ತಿಲುಗರ ಮಾರಿಬಂಗಾಳ್ವನ ಕಿರು ಸೋದರನು ತುರುಗಳನ್ನು ಂಡು ಹೋಗುವಾಗ ಓಳಿನಾಗಯ್ಯನ ಮಗನಾದ ಬಾಗ್ಗುಳಿ ಸಿರಿಯಣ್ಣನು ಚಂಗಾಳ್ವನನ್ನು ಕಾದಿ ತುರುಗಳನ್ನು ರಳಿಸಿ ಹೆಂಡತಿಯರ ಪೆಜಿಗಿಕ್ಕಿ ಕಾದಿ ಸತ್ತನು. ಅವನಿಗೆ ಸೋದರನಾದ ಕಲ್ಲನಿರಿಸಿ ಪರೋಕ್ಷ ವಿನಯವಂಗೈದನು ಂದು ಉಲ್ಲೇಖಿಸಲಾಗಿದೆ.[೩] ಸಿರಿಯಮ್ಮನ ಮಗ ತಿಗುಳರ ಮಾರಿಚಂಗಾಳ್ವನು ತುರುಗಳನ್ನು ಕೊಂಡು ಹೋಗುವ ಸಂದರ್ಭ ಲ್ಲಿ ಪಂಚಯ ಮುದ್ದಯ್ಯನು ಚಂಗಾಳ್ವ ಮತ್ತು ಅವನ ಕಿರು ಸೋದರನನ್ನು ಕಾದಿ ತುರುವಂ ಪೆಂಡಿರುಯಮ ಪೆರೆ ಕಾದಿ ಸತ್ತನು. ಅವನ ಸ್ಮರಣೆಗಾಗಿ ಈ ಕಲ್ಲನು ಉದ್ದಬೆಯ ಮಲ್ಲಯ್ಯನು ಇರಿಸಿದನೆಂದು ಶಾಸನದಲ್ಲಿ ದಾಖಲಿಸಲಾಗಿದೆ.[೪]

ಕ್ರಿ.ಶ. ೯ನೇ ಶತಮಾನದ ನಂಜನಗೂಡು ತಾಲ್ಲೂಕಿನ ಇಗ್ಗಲಿಯ ಶಾಸನವು, ತುರುಗಾಳಗದಲ್ಲಿ ಇಗ್ಗಲಿ ಗ್ರಾಮದ ರುಗಳನ್ನು ರಕ್ಷಿಸಿದ ಅಧಿ ಕಾರಿ ಗಾವುಂಡ, ಚರಮ ಗಾವುಂಡ ಮತ್ತು ಶಿವಯ ಗಾವುಂಡರಿಗೆ ಅಸಗಗಂಗನ ಮಗನಾದ ಳ್ದುವಿ ಗಂಗನು ಮದಿಗೆರೆ ಗ್ರಾಮವನ್ನು ಕೊಡುಗೆಯಾಗಿ ನೀಡಿದ ವಿಷಯವನ್ನು ಉಲ್ಲೇಖಿಸಿದೆ.[೫] ಕ್ರಿ.ಶ. ೧೦ನೇ ಶಮಾನದ ತಿ.ನರಸೀಪುರದ ಚಿವಲಿಯ ಶಾಸನವು, ದಾಸಿಮಾಚಾರಿಯ ತುರುಗಳನ್ನು ಗವರೆ ಆಚಾರಿಯು ರಕ್ಷಿಸಿ ಡಿದ ವಿಷಯವನ್ನು ದಾಖಲಿಸಿದೆ.[೬] ಗಂಗದೊರೆ ಸತ್ಯವಾಕ್ಯ ಪೆರ್ಮಾನಡಿಯ ಇದೇ ಕಾಲಘಟ್ಟದ ಇನ್ನೊಂದು ಶಾಸನವು, ಕ್ಕನ್ನದ ಮೇಲೆ ನಡೆದ ತುರುಗಾಳಗದ ದಾಳಿಯಲ್ಲಿ ಮಾದಿರನು ಮಡಿದ ವಿವರವನ್ನು ದಾಖಲಿಸಿದೆ.[೭] ಪಿರಿಯಾಪಟ್ಟಣ ಲ್ಲೂಕಿನ ಕಿತ್ತೂರು ಗ್ರಾಮದ ಕ್ರಿ.ಶ. ೧೦೦೮ರ ಶಾಸನವು, ತುರುಗಾಳಗದಲ್ಲಿ ಅರೆಮಾರಯ್ಯನ ಮಗ ಚಣ್ಣಯ್ಯನು ಡಿದುದನ್ನು ದಾಖಲಿಸಿದೆ.[೮] ಕ್ರಿ.ಶ. ೧೦೩೯ನೇ ವರ್ಷದ ಮೈಸೂರು ತಾಲ್ಲೂಕಿನ ಮಲ್ಲೇಗೌಡನಕೊಪ್ಪಲು ಗ್ರಾಮದ ಸನವು, ಆಷಾಡದ ಅಮಾವಾಸ್ಯೆಯಂದು ತಿಲುಗರಮಾರಿಯಾದ ಚಂಗಾಳ್ವನು ಕಿರಿಯ ಸಹೋದರನೊಡಗೂಡಿ ತುರು ನ್ನು ಕೊಂಡು ಹೋಗುವಾಗ, ಒಳಿನಾಗಯ್ಯನ ಮಗ ಬಾಗ್ಗುಳಿ ಸಿರಿಯಣ್ಣನು ಕಾಳಗದಲ್ಲಿ ಕಾದಿ ತುರುಗಳನ್ನು ಮರಳಿಸಿ ೃತನಾದುದನ್ನು ಉಲ್ಲೇಖಿಸಿದೆ.[೯] ಇದೇ ಘಟನೆಗೆ ಸಂಬಂಧಿಸಿದಂತೆ, ಪಂಚಿಯ ಸಿರಿಯಮ್ಮನ ಮಗ ಪಂಚಿಯ ುದ್ದಯ್ಯನು ಕೂಡ ಮರಣ ಹೊಂದಿದ್ದನ್ನು ಇನ್ನೊಂದು ಶಾಸನವು ದಾಖಲಿಸಿದೆ.[೧೦] ಕ್ರಿ.ಶ. ೧೧ನೇ ಶತಮಾನದ ಣಸೂರಿನ ಮರೂರು ಗ್ರಾಮದ ಶಾಸನವು, ತುರುಗಾಳಗದಲ್ಲಿ ಇಪಗೊಂಡನೆಂಬ ವೀರನ ಪರಾಕ್ರಮವನ್ನು ಮೆಚ್ಚಿ ಇತ್ತ ದಾನದ ಕೊಡುಗೆಯನ್ನು ದಾಖಲಿಸಿದೆ.[೧೧] ಇದೇ ತಾಲ್ಲೂಕಿನ ಮರದೂರಿನ ಕ್ರಿ.ಶ. ೧೧೦೯ರ ಹೊಯ್ಸಳ ವಿಷ್ಣುವರ್ಧನನ ಳ್ವಿಕೆಯ ಕಾಲದ ಶಾಸನವು, ಚಿಗಬೋವನು ತುರುಗಳನ್ನು ಹೊಡೆದುಕೊಂಡು ಹೋದ ಬವರದಲ್ಲಿ ತುರುಗಳನ್ನು ರಕ್ಷಿಸಿ ಡಿದ ಕದಹುಗೋಡಿನ ಕತ್ತಿಣೆಯ ಕಾರಗವುಡನು ಮಡಿದ ವಿಷಯವನ್ನು ದಾಖಲಿಸಿದೆ.[೧೨] ಇದೇ ಅರಸನ ಕಾಲದ ತ್ತೊಂದು ಶಾಸನವು ಕ್ರಿ.ಶ. ೧೧೨೬–೨೭ರ ಕಾಲಘಟ್ಟದ್ದಾಗಿದ್ದು, ಬೇಡರಹಳ್ಳಿಯ ಬಗದ್ಧನಪಳಿ ಬಮ್ಮಾರನು ತುರುಗಳನ್ನು ಂಡು ಹೋಗುವಾಗ, ನಡೆದ ಹೋರಾಟದಲ್ಲಿ ತುರುಗಳನ್ನು ಮರಳಿಸಿ ಗಂಗರ ಬೋಕಿಮಯ್ಯನು ಸ್ವರ್ಗಸ್ಥನಾದ ಷಯವನ್ನು ಉಲ್ಲೇಖಿಸಿದೆ.[೧೩] ಕ್ರಿ.ಶ. ೧೧ನೇ ಶತಮಾನದ ಶಾಸನವು, ಬಲ್ಲಕೊಂಗಾಳ್ವನು ತುರುಗಳನ್ನು ಹಿಡಿಯಲು ನಮನು ಅವುಗಳನ್ನು ಮರಳಿ ಪಡೆಯುವ ಕಾಳಗದಲ್ಲಿ ಮೃತನಾದುದನ್ನು ದಾಖಲಿಸಿದೆ.[೧೪] ಕುಲೋತ್ತುಂಗ–ಚೋಳ–ಂಗಾಳ್ವದೇವನ ಆಳ್ವಿಕೆಯ ಕಾಲದ ಕ್ರಿ.ಶ. ೧೧೭೪ರ ಅಡಗೂರು ಶಾಸನವು, ವಡಗೂರಿನ ಮಲ್ಲಿಸೆಟ್ಟಿಯ ಮಾವನಾದ ಲ್ಲಸೆಟ್ಟಿಯು ತುರುಗಳನ್ನು ಮರಳಿಸಿ ಸದ್ಗತಿ ಹೊಂದಿದ ವಿಷಯವನ್ನು ದಾಖಲಿಸಿದೆ.[೧೫] ಕ್ರಿ.ಶ. ೧೧೮೯ರ ಕುಲೋತ್ತುಂಗ–ೋಳ–ಚಂಗಾಳ್ವದೇವನ ಆಳ್ವಿಕೆಯ ಕಾಲದಲ್ಲಿ, ಹೆಗ್ಗಂದೂರ ಅಣ್ಣ–––ನು ತುರುಗಳನ್ನು ಹಿಡಿದಾಗ, ನಾಟಯ್ಯನು ರುಗಳನ್ನು ಮರಳಿಸಿ ಮಡಿದ ವಿಷಯವನ್ನು ಉಲ್ಲೇಖಿಸಿದೆ.[೧೬] ಬೆಸಲಾಪುರದ ತೇದಿಯ ಉಲ್ಲೇಖವಿಲ್ಲದಿರುವ ಶಾಸನವು, ಂಗಬಳನವಾಳು ದೇವ ವೀರಗವುಡನು ಮತ್ತು ಬಸಲವನಾಡ ಮಸಣಿದೇವನು ತುರುಗಾಳಗದಲ್ಲಿ ಮಡಿದ ವಿಷಯವನ್ನು ಖಲಿಸಿದೆ.[೧೭] ಕ್ರಿ.ಶ. ೧೩ನೇ ಶತಮಾನದ ತಡಿಮಾಲಿಂಗಿಯ ಶಾಸನವೊಂದು ಆಸಕ್ತಿದಾಯಕ ವಿಷಯವನ್ನು ದಾಖಲಿಸಿದೆ. ಂಗಣ್ಣನು ತನಗೆ ಬರಬೇಕಾದ ಮೊತ್ತಕ್ಕೆ ಪ್ರತಿಯಾಗಿ ಹಳ್ಳಿ ಹಿರಿಯೂರ ಸಮಸ್ತ ಪ್ರಜೆ ಗಾವುಂಡರ ಗೋವುಗಳನ್ನು ೆಹಿಡಿದುಕೊಂಡು ಹೋಗುತ್ತಿರುವಾಗ, ಕಲವೂರ ಮಲ್ಲೆಯ ಮಾರಗೌಡನು ಅವನಿಗೆ ಎಂಭತ್ತು ಗದ್ಯಾಣಗಳನ್ನು ಕೊಟ್ಟು ರುಗಳನ್ನು ಸೆರೆಯಿಂದ ಬಿಡಿಸಿಕೊಟ್ಟನು. ಅವನಿಗೆ ಹೊನ್ನನ್ನು ಹಿಂದಿರುಗಿಸಲು ಆಗದೇ ಹೋದಾಗ, ಆ ಊರಿನ ಹಾಜನಗಳು ಮಲ್ಲೆಯ ಮಾರಗವುಡನ ಮಗ ಚೌಡಪ್ಪನಿಗೆ ನಲ್ವತ್ತು ಸಾವಿರ ಕಂಬಗಳಷ್ಟು ಭೂಮಿಯನ್ನು ಅಕರವಾಗಿ ಂದರೆ ತೆರಿಗೆರಹಿತವಾಗಿ ಭೋಗಿಸುವಂತೆ ಕೊಟ್ಟ ವಿಷಯವನ್ನು ಶಾಸನವು ಉಲ್ಲೇಖಿಸಿದೆ.[೧೮] ಪ್ರಸ್ತುತ ಶಾಸನದಿಂದ, ರಿನ ಮಹಾಜನಗಳು ಸಂಗಣ್ಣನ ಬಳಿ ಸಾಲವಾಗಿ ಪಡೆದ ಹಣಕ್ಕೆ ತುರುಗಳನ್ನು ಸೆರೆಹಿಡಿದಂತೆ ತಿಳಿಯುತ್ತದೆ. ೆಯಾದ ತುರುಗಳನ್ನು ಕಲವೂರ ಮತ್ತೊಬ್ಬ ಪ್ರಜೆ ಮಾರಗಾವುಂಡನು ಬಿಡಿಸಿಕೊಟ್ಟಿದ್ದಕ್ಕೆ ಪ್ರತಿಯಾಗಿ, ಭೂಮಿಯನ್ನು

ಗುತ್ತಿಗೆಗೆ ನೀಡಿದಂತೆ ಅರ್ಥವಾಗುತ್ತದೆ. ಕ್ರಿ.ಶ. ೧೬೬೪ನೇ ವರ್ಷದ ಶಾಸನವು, ಕೊಂಗನಾಡಿನ ನಾಯಕರು ಹನಸೋಗೆಯ ತುರುಗಳನ್ನು ಸೆರೆಹಿಡಿದಾಗ, ನಡೆದ ತುರುಗಾಳಗದಲ್ಲಿ ಮಾರಗವರೆಯು ಮಡಿದುದನ್ನು ದಾಖಲಿಸಿದೆ.[೧೯] ಮಾದಹಳ್ಳಿಯ ಮಲ್ಲಪ್ಪನ ದೇವಸ್ಥಾನದ ಹತ್ತಿರ ಇರುವ ತುರುಗೋಳ್ ವೀರಗಲ್ಲು ಐದು ಅಡಿ ಉದ್ದವಾಗಿದ್ದು, ಮೂರು ಅಡಿ ಅಗಲವಾಗಿದೆ. ಮೂರು ಹಂತಗಳನ್ನು ಒಳಗೊಂಡಿರುವ ಈ ವೀರಗಲ್ಲನ್ನು ಕಣಶಿಲೆಯಿಂದ ಕೆತ್ತಿದ್ದು, ಮೊದಲನೆ ಹಂತದಲ್ಲಿ ತುರುಗಳನ್ನು ಕರೆದೊಯ್ಯುತ್ತಿದ್ದ ಕಳ್ಳರ ಜೊತೆ ಕಾದಾಟ ನಡೆಯುತ್ತಿರುವ ದೃಶ್ಯವನ್ನು ಕಡೆಯಲಾಗಿದೆ. ಶತ್ರುಗಳಿಂದ ತುರುಗಳನ್ನು ಬಿಡಿಸಿಕೊಳ್ಳಲು ವೀರನು ಹೋರಾಡುತ್ತಿದ್ದಾನೆ. ವೀರನು ಭರ್ಜಿಯಿಂದ ಶತ್ರುವನ್ನು ಚುಚ್ಚುತ್ತಿರುವ ಚಿತ್ರಣವಿದೆ. ನಡುವಿನಲ್ಲಿ ವೀರನ ಹಿಂಬದಿಯಲ್ಲಿ ಕತ್ತಿ ತೂಗಾಡುತ್ತಿದೆ. ನಿಂತಿರುವ ಶತ್ರುವು ಕತ್ತಿಯಿಂದ ವೀರನಿಗೆ ಚುಚ್ಚಲು ಅಣಿಯಾಗು ತ್ತಿರುವಂತೆ ತೋರುತ್ತದೆ. ಶತ್ರುಗಳನ್ನು ಭರ್ಜಿಯಿಂದ ಚುಚ್ಚಿ ತನ್ನ ಅಪ್ರತಿಮ ಶೌರ್ಯವನ್ನು ಪ್ರದರ್ಶಿಸಿಸುವಂತೆ ಶಿಲ್ಪಿಯು ಚಿತ್ರಿಸಿದ್ದಾನೆ. ಈ ಹೋರಾಟದಲ್ಲಿ ವೀರನು ಹೋರಾಡಿ ಮಡಿದಿದ್ದಾನೆ. ಎರಡನೆಯ ಹಂತದಲ್ಲಿ ವೀರನು ಶ್ವೇತ ಛತ್ರಿಯ ಕೆಳಗೆ ಕೈಮುಗಿದು ಕುಳಿತಿದ್ದಾನೆ. ಚಾಮರಧಾರಿಣಿಯರು ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಚಿತ್ರಣವಿದೆ. ವೀರನನ್ನು ಕರೆದೊಯ್ಯಲು ದೇವತೆಗಳೆ ಬಂದಿರುವಂತೆ ಚಿತ್ರಿಸಲಾಗಿದೆ. ಈ ಚಿತ್ರಣವು ಸತ್ತ ವೀರನು ಅಪ್ರತಿಮ ವೀರನಾಗಿದ್ದು ಪ್ರಮುಖ ಸ್ಥಾನದಲ್ಲಿದ್ದಂತೆ ತೋರುತ್ತದೆ. ಮೂರನೆ ಹಂತದಲ್ಲಿ ವೀರನು ಕೈಮುಗಿದು ಪದ್ಮಾಸನದಲ್ಲಿ ಕುಳಿತಿದ್ದು ಯತಿಯೊಬ್ಬನು ಕೈಯಲ್ಲಿ ಗಂಟೆ ಬಾರಿಸುತ್ತ ಶಿವಲಿಂಗಕ್ಕೆ ಮತ್ತು ನಂದಿಗೆ ಪೂಜಿಸುತ್ತಿರುವ ಚಿತ್ರಣವಿದೆ. ಲಿಂಗದ ಪಕ್ಕದಲ್ಲಿ ತ್ರಿಶೂಲವಿದ್ದು ಶಿವಲಿಂಗದ ಹಿಂಬದಿಯಲ್ಲಿ ಸಹಸ್ರದಳದ ಕಮಲವನ್ನು ಚಿತ್ರಿಸಿದಂತಿದೆ. ಈ ರೀತಿಯ ತುರುಗೋಳ್ ವೀರಗಲ್ಲುಗಳು ಮೈಸೂರಿನ ಸಕಳ್ಳಿ, ಕ್ಯಾತಮಾರನಹಳ್ಳಿ, ರಮ್ಮನಹಳ್ಳಿ, ಈರನಗೆರೆ, ಹಿನಕಲ್ ಇನ್ನು ಮುಂತಾದ ಕಡೆಗಳಲ್ಲಿ ಸಿಗುತ್ತವೆ.

ಪ್ರಾಚೀನ ಕಾಲದಲ್ಲಿ ದನಕರುಗಳು ಅಂದಿನ ಜನ ಸಾಮಾನ್ಯರ ಸಂಪತ್ತಾಗಿತ್ತು. ಅಂತಹ ಸಂಪತ್ತಿನರಕ್ಷಣೆಗಾಗಿ ಹೋರಾಡಿ ಮಡಿದವರನ್ನು ಗೌರವಿಸಿ ಅವರ ನೆನಪಿಗೆ ವೀರಗಲ್ಲುಗಳನ್ನು ನಿಲ್ಲಿಸುತ್ತಿದ್ದರು. ಗೋವುಗಳಿಗಾಗಿ ತಮ್ಮ ಜೀವನವನ್ನೇ ಬಲಿಕೊಟ್ಟ ಜನಸಮೂಹದ ತ್ಯಾಗ ಒಂದು ಕಡೆಯಾದರೆ ಇಂದಿನ ಬದಲಾದ ಸಂದರ್ಭದಲ್ಲಿ ಪಶುಪಾಲನೆ ತೆರೆಯ ಮರೆಗೆ ಸರಿಯುತ್ತಿದೆ. ಇದರ ಪರಿಣಾಮದಿಂದಾಗಿ ಪಾರಂಪರಿಕ ಕೃಷಿಯು ಅಳಿವಿನಂಚಿನಲ್ಲಿದೆ. ಪಶುಪಾಲನೆಯನ್ನು ಪುನಃ ಅಭಿವೃದ್ಧಿಪಡಿಸುವ ಅನಿವಾರ್ಯತೆ ಇದೆ.



## ಅಡಿಟಿಪ್ಪಣಿಗಳು

೧. ಬಾ.ರಾ. ಗೋಪಾಲ್, ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೫, ಮೈಸೂರು ೧೬೭, ವರುಣ ಪುಟ, ೨೯೩.
೨. ಪೂರ್ವೋಕ್ತ ಸಂಪುಟ ೫, ಮೈಸೂರು, ೧೯೮, ಚಿಕ್ಕಾನ್ಯ, ಪುಟ ३೦೭.
೩. ಪೂರ್ವೋಕ್ತ ಸಂಪುಟ ೫, ಮೈಸೂರು, ೧೧೩, ಮಲ್ಲೇಗೌಡನಕೊಪ್ಪಲು, ಪುಟ ೨೬೪.
೪. ಪೂರ್ವೋಕ್ತ, ಸಂಪುಟ ೫, ಮೈಸೂರು, ೧೧೪, ಮಲ್ಲೇಗೌಡನಕೊಪ್ಪಲು, ಪುಟ ೨೬೫.
೫. ಪೂರ್ವೋಕ್ತ, ಸಂಪುಟ ೩, ನಂಜನಗೂಡು, ೨೦೫, ಇಗ್ಗಲಿ, ಪುಟ ೨೯೭.
೬. ಪೂರ್ವೋಕ್ತ, ಸಂಪುಟ ೫, ತಿ. ನರಸೀಪುರ, ೨೯೪, ಚಿವಲಿ, ಪುಟ ೬೬೦.
೭. ಪೂರ್ವೋಕ್ತ, ಸಂಪುಟ ೫, ಮೈಸೂರು, ೧೯೮, ಚಿಕ್ಕಾನ್ಯ, ಪುಟ ೩೦೬.
೮. ಪೂರ್ವೋಕ್ತ, ಸಂಪುಟ ೪, ಪಿರಿಯಾಪಟ್ಟಣ, ೧೪೪, ಕಿತ್ತೂರು, ಪುಟ ೫೮೩.
೯. ಪೂರ್ವೋಕ್ತ, ಸಂಪುಟ ೫, ಮೈಸೂರು, ೧೧೩, ಮಲ್ಲೇಗೌಡನಕೊಪ್ಪಲು, ಪುಟ ೨೬೪.
೧೦. ಪೂರ್ವೋಕ್ತ, ಮೈಸೂರು, ೧೧೪, ಮಲ್ಲೇಗೌಡನಕೊಪ್ಪಲು, ಪುಟ ೨೬೫.
೧೧. ಪೂರ್ವೋಕ್ತ, ಸಂಪುಟ ೪, ಹುಣಸೂರು, ೫, ಮರೂರು, ಪುಟ ೪೮೫.
೧೨. ಪೂರ್ವೋಕ್ತ, ಹುಣಸೂರು, ೧೫, ಮರದೂರು, ಪುಟ ೪೮೯.
೧೩. ಪೂರ್ವೋಕ್ತ, ಸಂಪುಟ ೫, ಕೃಷ್ಣರಾಜನಗರ, ೮, ಬ್ಯಾಡ್ರಹಳ್ಳಿ, ಪುಟ ೭.
೧೪. ಪೂರ್ವೋಕ್ತ, ಸಂಪುಟ ೪, ಪಿರಿಯಾಪಟ್ಟಣ, ೧೮, ಕಣಗಾಲ, ಪುಟ ೫೧೭.
೧೫. ಪೂರ್ವೋಕ್ತ, ಪಿರಿಯಾಪಟ್ಟಣ, ೧೫, ಅಡಗೂರು, ಪುಟ ೫೧೬.
೧೬. ಪೂರ್ವೋಕ್ತ, ಹುಣಸೂರು, ೩೬, ಹೆಗ್ಗುಂದೂರು, ಪುಟ ೫೦೬.
೧೭. ಪೂರ್ವೋಕ್ತ; ಪಿರಿಯಾಪಟ್ಟಣ, ೧೧೬: ಬೆಸಲಾಪುರ, ಪುಟ ೫೬೬.
೧೮. ಪೂರ್ವೋಕ್ತ, ಸಂಪುಟ ೫, ತಿ. ನರಸೀಪುರ, ೨೪೬: ತಡಿಮಾಲಿಂಗಿ, ಪುಟ ೬೨೮.
೧೯. ಪೂರ್ವೋಕ್ತ, ಕೃಷ್ಣರಾಜನಗರ, ೪೪, ಚಿಕ್ಕಹನಸೋಗೆ, ಪುಟ ೨೭.

# ರಾಯಚೂರಿನ ಬಂದೂಕು ವೀರಗಲ್ಲುಗಳು

ಗೀತಾ ಪಾಟೀಲ*

**ಮ**ಧ್ಯಯುಗದ ಭಾರತೀಯ ಯುದ್ಧರಂಗದಲ್ಲಿ ಫಿರಂಗಿಯ ಪಾತ್ರ ಮಹತ್ವದ್ದಾಗಿದೆ. ಫಿರಂಗಿಯ ತಂತ್ರಜ್ಞಾನಕ್ಕೆ ಸಂಬಂಧಿಸಿದಂತೆ ೧೬ನೆಯ ಶತಮಾನದಲ್ಲಿ ಹೊಸ ಕೌಶಲ್ಯ ಮತ್ತು ಪರಿಕಲ್ಪನೆಗಳು ಪರಿಚಯಗೊಂಡ ಬಗ್ಗೆ ಯುರೋಪ್ ಮತ್ತು ಅಟೋಮನ್ ರಾಜ್ಯಗಳ ಆಧಾರಗಳು ತಿಳಿಸುತ್ತವೆ. ಪೋರ್ಚುಗೀಸರು ೧೪೯೮ರಲ್ಲಿ ಕಲ್ಲಿಕೋಟೆಗೆ ಬಂದಾಗ ಮತ್ತು ಬಾಬರನು ೧೫೨೬ರಲ್ಲಿ ದೆಹಲಿ ಮತ್ತು ಆಗ್ರಾವನ್ನು ಆಕ್ರಮಿಸಿಕೊಂಡಾಗ ಫಿರಂಗಿಗಳ ಪರಿಚಯವಾಗಿರಬಹುದು. ಆದರೂ, ಇಷ್ಟೇ ಪ್ರಮುಖವಾದ ಮತ್ತೆರಡು ಕಾರಣಗಳಿವೆ. ಡಖನ್ ಪ್ರಭುತ್ವವು ಭೂಮಾರ್ಗ ಮತ್ತು ಜಲಮಾರ್ಗದ ಮೂಲಕ ಈಜಿಪ್ಟ್ ಮತ್ತು ಅಟ್ಟೋಮಾನ್ ಸಾಮ್ರಾಜ್ಯಗಳೊಂದಿಗೆ ಸಂಪರ್ಕ ಹೊಂದಿತ್ತು ಮತ್ತು ಚೀನಿಯರ ಜೊತೆಗೆ ವ್ಯಾಪಾರ ಸಂಪರ್ಕ ಹೊಂದಿತ್ತು. ದಕ್ಷಿಣ ಭಾರತದಲ್ಲಿ ವಿಜಯನಗರ ಮತ್ತು ಬಹಮನಿ ಸಾಮ್ರಾಜ್ಯಗಳೆರಡೂ ಡೆಲ್ಲಿ ಸುಲ್ತಾನರಿಗೆ ಹೋಲಿಸಿದಾಗ ತುಂಬಾ ಆತ್ಯಾಧುನಿಕ ಫಿರಂಗಿಗಳನ್ನು ಹೊಂದಿದ್ದರು. ದಕ್ಷಿಣ ಭಾರತದ ಸಾಮ್ರಾಜ್ಯಗಳು ತೋಪು ಮತ್ತು ಫಿರಂಗಿಗಳನ್ನು ತುರ್ಕಿ ಮತ್ತು ಅರೇಬಿಯಾ ದೇಶಗಳಿಂದ ಆಮದು ಮಾಡಿಕೊಳ್ಳುತ್ತಿದ್ದರು[1].

ಕನ್ನಡ ಕಾವ್ಯಗಳಲ್ಲೂ ಇಂತಹ ಆಯುಧಗಳ ಉಲ್ಲೇಖಗಳಿವೆ. ಅವುಗಳೆಲ್ಲವೂ ೧೫ನೆಯ ಶತಮಾನದ ನಂತರದವು. ಈ ಕಾವ್ಯಗಳು ವ್ಯಕ್ತಪಡಿಸುವ ಫಿರಂಗಿ, ಗುಂಡುಗೋವಿ, ಮದ್ದಿನ ಪಟ್ಟಣ, ಶತಘ್ನಿ, ಉಪ್ಪಿನತಿತ್ತಿ, ಪೆಟಲು, ಕೈಗೋವಿ, ಭೂರಿಶತಗ್ನಿ, ತೋಪು ಇನ್ನು ಮುಂತಾದವುಗಳು ಸಿಡಿಮದ್ದಿನ ಸಮರ್ಥ ಬಳಕೆಯನ್ನು ಎತ್ತಿ ಹಿಡಿದಿವೆ[2].

ಕರ್ನಾಟಕದಲ್ಲಿ ಸಿಡಿಮದ್ದಿನ ಬಳಕೆ ಕುರಿತು ಹೇಳುವ ಮುನ್ನ ಚರಿತ್ರೆಯ ಆಕರಗಳಾದ ಸಾಹಿತ್ಯ, ಶಾಸನ, ಸ್ಮಾರಕ, ವೀರಗಲ್ಲು, ಪ್ರವಾಸಿಗರ ವರದಿ ಮೊದಲಾದವುಗಳನ್ನು ಗಮನಿಸಿದ್ದಾಗ ಕ್ರಿ.ಶ. ೧೪ನೆಯ ಶತಮಾನದ ಪೂರ್ವದಲ್ಲಿ ಸಿಡಿಮದ್ದು ಬಳಕೆಯಾದ ಉಲ್ಲೇಖಗಳಿಲ್ಲ. ಎಂ. ಚಿದಾನಂದಮೂರ್ತಿ ಅವರು ಕೂಡ ಸಿಡಿಮದ್ದಿನ ಬಳಕೆ ಪ್ರಾಚೀನ ಕರ್ನಾಟಕದಲ್ಲಿ ಇರಲಿಲ್ಲವೆಂಬುದನ್ನು ಒಪ್ಪುತ್ತಾರೆ. ಸಾಹಿತ್ಯದಲ್ಲಿ ಶಸ್ತ್ರಗಳ ಉಲ್ಲೇಖವಿದ್ದರೂ ಅವು ವಿಷಪೂರಿತ ಆಯುಧಗಳೆ ಹೊರತು ಸಿಡಿಮದ್ದು ಆಗಿರಲಿಲ್ಲ. ಶಾಸನ ಮತ್ತು ಪ್ರವಾಸಿ ವರದಿಗಳು ೧೪ನೆಯ ಶತಮಾನದಲ್ಲಿ ಸಿಡಿಮದ್ದು ಬಳಕೆಯಾಗಿರುವುದನ್ನು ಎತ್ತಿ ಹಿಡಿದಿವೆ.

ಕ್ರಿ.ಶ. ೧೫ನೆಯ ಶತಮಾನದ ಪೂರ್ವ ವೀರಗಲ್ಲುಗಳಲ್ಲಿ ಸಾಮಾನ್ಯವಾಗಿ ಕಾಣಬರುವ ಶಸ್ತ್ರಾಸ್ತ್ರಗಳೆಂದರೆ ಬಿಲ್ಲು-ಬಾಣ, ಕತ್ತಿ-ಗುರಾಣಿ, ಈಟಿ-ಭರ್ಚಿಗಳಾಗಿವೆ. ಇವುಗಳಲ್ಲಿ ಬಂದೂಕಗಳಿರುವುದು ಎಲ್ಲು ದಾಖಲಾಗಿಲ್ಲ. ಆದರೆ ವಿಜಯನಗರ ಮತ್ತು ನಂತರ ಕಾಲದ ವೀರಗಲ್ಲುಗಳಲ್ಲಿ ವೀರರು ತಮ್ಮ ಕೈಗಳಲ್ಲಿ ಕತ್ತಿಯ ಜೊತೆಗೆ ಬಂದೂಕುಗಳನ್ನು ಹಿಡಿದಿರುವುದು ಕಂಡು ಬಂದಿದೆ. ಇಲ್ಲಿ ಬಂದೂಕಿನ ಉಪಯೋಗ ಕಂಡುಕೊಂಡಿದ್ದರು, ವೀರರ ಬಳಿ ಕತ್ತಿ ಅಥವಾ ಬಾಕು, ಚೂರಿ ಇರುವುದು ಇಂದಿನ ಆಯುಧಗಳ ಪ್ರಭಾವವೇ ಇರಬೇಕು.

ವಿಜಯನಗರ ಕಾಲಾವಧಿಯ ವೀರಗಲ್ಲುಗಳಲ್ಲಿ ವಿಶೇಷ ಹಾಗೂ ವಿನೂತನ ಆಯುಧವಾದ ಬಂದೂಕು ಕಂಡುಬರುವುದರಿಂದ ಕರ್ನಾಟಕದಲ್ಲಿ ಸಿಡಿಮದ್ದಿನ ಬಳಕೆ ಕ್ರಿ.ಶ. ೧೪ನೆಯ ಶತಮಾನ ಅಂದರೆ ವಿಜಯನಗರ ಕಾಲದಲ್ಲಿ ಬಳಕೆಗೊಂಡಿತ್ತೆಂಬುದು ಸ್ಪಷ್ಟವಾಗಿದೆ. ವಿಜಯನಗರ ಆರಂಭ ಕಾಲದ ಫಿರಂಗಿ ಪಡೆಯಿದ್ದುದಕ್ಕೆ ಫೆರಿಸ್ತಾನ ಹೇಳಿಕೆ ಸಧ್ಯದ ಆಧಾರವಾಗಿದೆ. ಫೆರಿಸ್ತಾನು ದಾವೂದ್ ಬಿದುರಿಯ ಫತು-ಉಸ್-ಸಲಾತಿನ್ ಕೃತಿಯಲ್ಲಿ ಉಲ್ಲೇಖಿಸಲಾದ ಬಹಮನಿಯ ಮಹಮದ್ ಷಹ ವಿಜಯನಗರದೊಂದಿಗೆ ಕೈಗೊಂಡ ಯುದ್ಧದ ವಿವರಣೆಯನ್ನು ನೀಡುತ್ತಾನೆ. ಕ್ರಿ.ಶ. ೧೩೬೬-೬೮ರ ಸಮಯದಲ್ಲಿ ಮಹಮದನು ವಿಜಯನಗರದ ಬುಕ್ಕರಾಯನನ್ನು ಸೋಲಿಸಿ ೨೦೦೦ ಆನೆಗಳು, ೩೦೦ ಬಂದೂಕು ಮತ್ತು ಫಿರಂಗಿ ಗಾಡಿಗಳು, ೭೦೦ ಅರೇಬಿಯಾದ ಕುದುರೆಗಳು ಹಾಗೂ ಬೆಲೆಬಾಳುವ ಆಭರಣಗಳನ್ನು ಲೂಟಿ

* ಗೌಡ್ರ ಓಣಿ, ೩ನೇ ವಾರ್ಡ್, ಕನಕಗಿರಿ, ಗಂಗಾವತಿ ತಾಲ್ಲೂಕು, ಕೊಪ್ಪಳ-೫೮೩೨೮೩, ಮೊ. ೮೭೩೨೨೨೦೯೬೩

ಮಾಡಿದನೆಂದು ಹೇಳಲಾಗಿದೆ. ಬಂದೂಕವನ್ನು ಫಿರಂಗಿ, ಗುಂಡುಗೋವಿ, ಶತಘ್ನಿ ಮುಂತಾದ ಸಿಡಿಮದ್ದಿನ ಆಯುಧಗಳು ಹದಿನಾರನೆಯ ಶತಮಾನದಿಂದ ಈಚಿನ ಕಾವ್ಯಗಳಲ್ಲಿ ಯಥೇಷ್ಟವಾಗಿ ಕಾಣಿಸಿಕೊಳ್ಳುತ್ತದೆ[೩].

ನ್ಯೂನಿಜ್ ಕೂಡ ಬಿಲ್ಲು-ಬಾಣ, ಕತ್ತಿ, ಗುರಾಣಿ, ಭಲ್ಲೆ, ಭರ್ಜಿಗಳು, ಕೋವಿಗಳು ಮತ್ತು ಫಿರಂಗಿಗಳನ್ನು ಹಾಗೂ ಪೋರ್ಚ್‌ಗೀಸರು ಬಳಸಿದ ವಿನೂತನ ಬಂದೂಕುಗಳ ವಿವರ ನೀಡುತ್ತಾನೆ[೪]. ಶಿಲ್ಪಗಳು ಮತ್ತು ವೀರಗಲ್ಲುಗಳಲ್ಲಿ ಕಾಣಬರುವ ಸಾಮಾನ್ಯ ಚಿತ್ರಣವೆಂದರೆ ಕತ್ತಿ-ಗುರಾಣಿ, ಬಿಲ್ಲು-ಬಾಣ, ಈಟಿಗಳನ್ನು ಹಿಡಿದು ಹೋರಾಡುತ್ತಿರುವ ಯೋಧರವು. ಇಂತಹ ವೀರಗಲ್ಲುಗಳನ್ನು ಕರ್ನಾಟಕದಾದ್ಯಂತ ಕಾಣಬಹುದು. ಆದರೆ ೧೫ನೆಯ ಶತಮಾನ ನಂತರದ ವೀರಗಲ್ಲುಗಳಲ್ಲಿ ವಿಶೇಷವಾಗಿ ಕಂಡುಬರುವ ಆಯುಧವೆಂದರೆ ಬಂದೂಕು[೫].

ಒಟ್ಟಿನಲ್ಲಿ ಪ್ರಾಚೀನ ಭಾರತದಲ್ಲಿ ಫಿರಂಗಿ, ಬಂದೂಕುಗಳಂತ ಅಸ್ತ್ರಗಳ ಬಳಕೆಯಲ್ಲಿದುದರ ಬಗೆಗೆ ಉಲ್ಲೇಖಗಳಿದ್ದರೂ ಬಂದೂಕು ಎಂದು ಅರ್ಥೈಸುವ ಶಬ್ದಗಳ ಅರ್ಥ ಮೂಲತ ಏನೆಂಬುದು ಸ್ಪಷ್ಟವಿಲ್ಲ. ಹಾಗಾಗಿ ನಮ್ಮಲ್ಲಿ ವಿಜಯನಗರ ಕಾಲದಲ್ಲಿ ಅಂದರೇ ೧೫ನೆಯ ಶತಮಾನದಿಂದಿಚೇಗೆ ಬಂದೂಕುಗಳು ಭಾರತಕ್ಕೆ ಪ್ರವೇಶ ಪಡೆದವೆಂದು ಹೇಳಬಹುದು. ಹಾಗಾಗಿಯೇ ೧೫ನೆಯ ಶತಮಾನದಿಂದ ವೀರಗಲ್ಲುಗಳಲ್ಲಿ ಬಂದೂಕುಗಳು ಕಾಣಿಸಿಕೊಂಡಿರುವು ಸ್ಪಷ್ಟವಾಗಿದೆ.

## ರಾಯಚೂರು ಜಿಲ್ಲೆಯ ಬಂದೂಕು ವೀರಗಲ್ಲುಗಳ ವಿವರ

**ಬಂದೂಕು ಹಿಡಿದುಕೊಂಡ ವೀರರು:** ರಾಯಚೂರಿನ ನವರಂಗ ದರ್ವಾಜನ ಪ್ರಾಚ್ಯವಸ್ತು ಸಂಗ್ರಹದಲ್ಲಿರುವ ಆನೆಗೊಂದಿಯ ವೀರಗಲ್ಲು ಶಿಲ್ಪವು, ಕ್ರಿ.ಶ. ೧೬ನೆಯ ಶತಮಾನದ್ದಾಗಿದೆ. ಶಿಲ್ಪದಲ್ಲಿ ಮೂವರು ವೀರರಿದ್ದಾರೆ. ಮೊದಲನೆಯ ವೀರನು ಬಲಗೈಯನ್ನು ಮುಂದೆ ಚಾಚಿ ಬಂದೂಕನ್ನು ಹಿಡಿದುಕೊಂಡಿದ್ದಾನೆ, ಎಡಗೈಯನ್ನು ಇಳಿಬಿಟ್ಟಿದ್ದು ಅದರಲ್ಲಿ ಚೂರಿಯನ್ನು ಹಿಡಿದುಕೊಂಡಿದ್ದಾನೆ. ವೀರನ ಸೊಂಟಕ್ಕೆ ಪಟ್ಟಿಯಿದ್ದು ಅದರ ಮಧ್ಯದಲ್ಲಿ ವಸ್ತ್ರವನ್ನು ಇಳಿಬಿಟ್ಟಿದ್ದಾನೆ. ಎಡಗಡೆಯಲ್ಲಿ ತುರುಬು ಕಟ್ಟಿದ್ದಾನೆ. ಎರಡನೆಯ ವೀರನು ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿದ್ದಾನೆ. ಬಲಗೈಯಲ್ಲಿ ದೊಣ್ಣೆಯನ್ನು ಹಿಡಿದುಕೊಂಡಿದ್ದಾನೆ. ಮೂರನೆಯ ವೀರನು ಎಡಗೈಯನ್ನು ಎದೆಯ ಮೇಲೆ ಇಟ್ಟುಕೊಂಡಂತ್ತೆ ಕತ್ತಿಯನ್ನು ತನ್ನ ಭುಜದ ಮೇಲೆ ಹಿಡಿದುಕೊಂಡಿದ್ದಾನೆ. ಬಲಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿದ್ದು, ಅದರಲ್ಲಿ ಗುರಾಣಿಯನ್ನು ಹಿಡಿದುಕೊಂಡಿದ್ದಾನೆ. ಸೊಂಟಕ್ಕೆ ಪಟ್ಟಿ ಇದ್ದು ಅದರಿಂದ ವಸ್ತ್ರವನ್ನು ಮಧ್ಯದಲ್ಲಿ ಇಳಿಬಿಟ್ಟಿದ್ದಾನೆ. ವೀರನು ಪೇಟವನ್ನು ಧರಿಸಿದ್ದಾನೆ. ಮೂವರು ವೀರರು ಚಲಿಸುವ ಭಂಗಿಯಲ್ಲಿದ್ದಾರೆ.

ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಮುಂಕುಂದ ಗ್ರಾಮದಲ್ಲಿ ಕ್ರಿ.ಶ. ೧೬ನೆಯ ಶತಮಾನಕ್ಕೆ ಸೇರಿದ ಬಂದೂಕು ವೀರಗಲ್ಲಿದೆ. ಈ ಶಿಲ್ಪವನ್ನು ಕಣಶಿಲೆಯಲ್ಲಿ ಕಂಡರಿಸಲಾಗಿದೆ. ವೀರನು ಬಲಗೈಯಲ್ಲಿ ಕತ್ತಿಯನ್ನು ಮೇಲೆ ಎತ್ತಿದ್ದಾನೆ. ಎಡಗೈಯನ್ನು ಮುಂದೆ ಚಾಚಿ ಉದ್ದವಾದ ಬಂದೂಕುವನ್ನು ಹಿಡಿದುಕೊಂಡಿದ್ದಾನೆ. ಈ ವೀರನು ಅಲಂಕಾರಯುತವಾದ ಪೇಟವನ್ನು ಧರಿಸಿದ್ದು ಅದರಿಂದ ಎರಡು ಎಲೆಯನ್ನು ಬಲಬದಿಯಲ್ಲಿ ಇಳಿಬಿಟ್ಟಿದ್ದಾರೆ. ಕಿವಿಗಳಲ್ಲಿ ಕಿವಿಯೊಲೆಯನ್ನು, ಕೊರಳಲ್ಲಿ ಕೊರಳಹಾರ, ಪದಕ ಇರುವ ಸರ ಇದೆ. ಸೊಂಟಕ್ಕೆ ಸೊಂಟಪಟ್ಟಿಯನ್ನು ಧರಿಸಿದ್ದು ಅದರಲ್ಲಿ ವಸ್ತ್ರವನ್ನು ಇಳಿಬಿಡಲಾಗಿದೆ. ಕೈಗಳಲ್ಲಿ ಕಡಗ, ತೋಲ್ಬಂದಿ, ಕಾಲುಗಳಲ್ಲಿ ಕಡಗಗಳನ್ನು ಧರಿಸಿದ್ದಾನೆ. ವೀರನ ಎಡಬದಿಯಲ್ಲಿ ಬಲಗೈಯಲ್ಲಿ ಖಡ್ಗವನ್ನು ಹಿಡಿದು ಎಡಗೈಯನ್ನು ಮೇಲೆ ಎತ್ತಿನಿಂತಿರುವ ಮತ್ತೊಬ್ಬ ವೀರನ ಸಣ್ಣ ಶಿಲ್ಪವನ್ನು ಕೆತ್ತಲಾಗಿದೆ. ಈ ವೀರನು ಪೇಟ, ನಿಲುವಂಗಿಯನ್ನು ಧರಿಸಿದ್ದಾನೆ. ತುಂಬಾ ಅಲಂಕಾರಿಕವಾದ ದಿರಿಸನ್ನು ಧರಿಸಿರುವ ಈ ವೀರನು ಮುಖ್ಯ ವೀರನ ಶಿಲ್ಪಕ್ಕೆ ಯಾವುದೇ ಕುಂದು ಬರದ ರೀತಿಯಲ್ಲಿ ಕಂಡರಿಸಲಾಗಿದೆ. ಮುಖ್ಯ ವೀರನ ಎರಡು ಕಾಲುಗಳ ಮಧ್ಯೆದಲ್ಲಿ ಜಿಂಕೆ, ಬಲಮೊಣಕಾಲಿನ ಪಕ್ಕದಲ್ಲಿ ಶ್ವಾನವನ್ನು ಚಿತ್ರಿಸಿದ್ದಾರೆ. ವೀರನು ಓಡುವ ಭಂಗಿಯಲ್ಲಿದೆ. ಶಿಲ್ಪದ ಮೇಲ್ಭಾಗದಲ್ಲಿ ಸೂರ್ಯ, ಚಂದ್ರನನ್ನು ಚಿತ್ರಿಸಿದ್ದಾರೆ. ಈ ಶಿಲ್ಪವನ್ನು ಗಮನಿಸಿದ್ದಾಗ ಕಾಡಿನಲ್ಲಿ ಬೇಟೆಯಾಡಲು ಹೋಗಿ ಸತ್ತಿರುವುದನ್ನು ತಿಳಿಸುತ್ತದೆ.

ರಾಯಚೂರಿನ ಅಗ್ನಿಶಾಮಕ ಠಾಣೆಯ ಗೋಡೆಗೆ ಇಟ್ಟಿರುವ ೧೭ನೆಯ ಶತಮಾನಕ್ಕೆ ಸೇರಿದ ಬಂದೂಕು ವೀರಗಲ್ಲು ಇಡಲಾಗಿದೆ.ಈ ಶಿಲ್ಪವನ್ನು ಬಿಳಿಕಣಶಿಲೆಯಲ್ಲಿ ಕಂಡರಿಸಲಾಗಿದೆ. ವೀರನು ತಲೆಗೆ ಪೇಟವನ್ನು ಧರಿಸಿದ್ದು ಕೊರಳಲ್ಲಿ ಪದಕವಿರುವ ಸರ ಇದೆ. ವೀರನ ಕಣ್ಣುಗಳನ್ನು ದೊಡ್ಡದಾಗಿದ್ದು, ಮುಖದಲ್ಲಿ ಮೀಸೆಯನ್ನು ತೋರಿಸಿದ್ದಾರೆ. ಕಾಲು ಮತ್ತು ಕೈಗಳಲ್ಲಿ ಕಡಗವನ್ನು ಧರಿಸಿದ್ದಾನೆ. ಸೊಂಟಕ್ಕೆ ಪಟ್ಟಿಯನ್ನು ಕಟ್ಟಿಕೊಂಡು ಕೆಳಗೆ ವಸ್ತ್ರವನ್ನು ಇಳಿಬಿಟ್ಟಿದ್ದಾನೆ. ವೀರನ ಬಲಗೈಯಲ್ಲಿಚೂರಿ ಹಿಡಿದು ಕೈ ಮೇಲೆ ಎತ್ತಿದ್ದಾನೆ. ಎಡಗೈಯನ್ನು ಮುಂದಕ್ಕೆ ಚಾಚಿ ಬಂದೂಕನ್ನು ಹಿಡಿದುಕೊಂಡಿದ್ದಾನೆ.

ವೀರನು ಚಲಿಸುವ ಭಂಗಿಯಲ್ಲಿದ್ದಾನೆ. ಈ ಶಿಲ್ಪವನ್ನು ಗಮನಿಸಿದ್ದಾಗ ಸ್ಥಳೀಯ ವೀರನೆಂದು ತಿಳಿಯುತ್ತದೆ.

ರಾಯಚೂರಿನ ಅಗ್ನಿಶಾಮಕ ಠಾಣೆಯ ಗೋಡೆಗೆ ತಾಕಿಸಿ ಇಟ್ಟಿರುವ ಬಿಳಿಕಣಶಿಲೆಯಲ್ಲಿ ಕಂಡರಿಸಲಾದ ಕ್ರಿ.ಶ. ೧೭ನೆಯ ಶತಮಾನದ ಬಂದೂಕು ವೀರಗಲ್ಲಿದೆ. ಈ ಶಿಲ್ಪದಲ್ಲಿ ವೀರನು ದ್ವಿಭಂಗಿಯಲ್ಲಿ ನಿಂತಿದ್ದಾನೆ. ವೀರನು ದೊಡ್ಡದಾದ ಹುಬ್ಬು, ಕಣ್ಣು, ಮೀಸೆ, ಕಿವಿಯನ್ನು ಚಿತ್ರಿಸಿದ್ದಾರೆ. ತಲೆಗೆ ರೂಮಾಲು ಧರಿಸಿದ್ದು ಅದಕ್ಕೆ ಅಲಂಕಾರಕ್ಕಾಗಿ ಎಲೆಯನ್ನು ಸಿಕಿಸಿಕೊಂಡಿದ್ದಾನೆ. ಕೊರಳಲ್ಲಿ ಒಂದೇ ಪದಕದ ಸರ ಇದೆ.ಸೊಂಟವನ್ನು ವಸ್ತ್ರದಿಂದ ಬಿಗಿದಿದ್ದು ನೆರಿಗೆಯನ್ನು ಇಳಿಬಿಟ್ಟಿದ್ದಾನೆ. ವೀರನು ಬಲಗೈಯಲ್ಲಿ ಚೂರಿಯನ್ನು ಹಿಡಿದು ಮೇಲೆ ಎತ್ತಿದ ಬಂಗಿಯಲ್ಲಿದ್ದು, ಎಡಗೈಯನ್ನು ಮುಂದಕ್ಕೆ ಚಾಚಿ ಬಂದೂಕನ್ನು ಹಿಡಿದುಕೊಂಡಿದ್ದಾನೆ. ಈ ಶಿಲ್ಪವು ಸ್ಥಳೀಯ ವೀರನದೆಂದು ತಿಳಿಯುತ್ತದೆ.

ರಾಯಚೂರಿನ ಅಗ್ನಿಶಾಮಕ ಠಾಣೆಯ ಗೋಡೆಗೆ ಇಟ್ಟಿರುವ ಶಿಲ್ಪದಲ್ಲಿ, ಅಶ್ವಾರೂಢನಾಗಿ ಬಂದೂಕನ್ನು ಹಿಡಿದುಕೊಂಡು ಯುದ್ಧಕ್ಕೆ ಹೊರಟ ದೃಶ್ಯವಿದೆ. ಈ ಶಿಲ್ಪವು ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿದ್ದಾಗಿದೆ. ಈ ಶಿಲ್ಪದಲ್ಲಿವೀರನು ಅಶ್ವದ ಮೇಲೆ ಕುಳಿತಿದ್ದು ತನ್ನ ಬಲಗೈಯನ್ನು ಹಿಂದಕ್ಕೆ ಚಾಚಿ ಬಂದೂಕು ಹಿಡಿದುಕೊಂಡಂತೆ ಕಂಡರಿಸಲಾಗಿದೆ. ಎಡಗೈಯಲ್ಲಿ ಕುದುರೆಯ ಲಗಾಮನ್ನು ಹಿಡಿದ್ದಾನೆ. ವೀರನು ತಲೆಗೆ ತೂರುಬು ಕಟ್ಟಿದ್ದಾನೆ. ವೀರನ ಮುಖದಲ್ಲಿ ದೊಡ್ಡಹುಬ್ಬು, ಕಣ್ಣು, ಮೂಗು, ಮೀಸೆಯನ್ನು ದೊಡ್ಡದಾಗಿ ತೋರಿಸಿದ್ದಾರೆ. ಕೊರಳಿಗೆ ಪದಕ ಇರುವ ಸರವನ್ನು ಧರಿಸಿದ್ದಾನೆ. ಸೊಂಟಕ್ಕೆ ಸೊಂಟ ಪಟ್ಟಿ ಇದ್ದು ಅದರಲ್ಲಿ ಚೂರಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಕುದುರೆಯು ಓಡುವ ಭಂಗಿಯಲ್ಲಿದೆ.

ರಾಯಚೂರಿನ ಅಗ್ನಿಶಾಮಕ ಠಾಣೆಯ ಗೋಡೆಗಿರುವ ೧೭ನೆಯ ಶತಮಾನ ಸೇರಿದ ಒಂದು ಬಂದೂಕು ವೀರಗಲ್ಲು ಇದೆ. ಈ ಶಿಲ್ಪವನ್ನು ಬಿಳಿಕಣಶಿಲೆಯಲ್ಲಿ ಕಂಡರಿಸಲಾಗಿದೆ. ವೀರನು ದ್ವಿಭಂಗಿಯಲ್ಲಿ ನಿಂತಿದ್ದಾನೆ. ವೀರನು ಬಲಗೈಯನ್ನು ಮೇಲೆ ಎತ್ತಿ ಚೂರಿಯನ್ನು ಹಿಡಿದುಕೊಂಡಿದ್ದಾನೆ, ಎಡಗೈಯನ್ನು ಮುಂದಕ್ಕೆ ಚಾಚಿದ್ದು ಬಂದೂಕನ್ನು ಹಿಡಿದುಕೊಂಡಿದ್ದಾನೆ. ವೀರನ ತೊಡೆಯಿಂದ ಸೊಂಟದ ವರೆಗೂ ವಸ್ತ್ರದಿಂದ ಬಿಗಿದುಕೊಂಡಿದ್ದು ನಿಲುಗೆಯನ್ನು ಎರಡು ಕಾಲುಗಳ ಮಧ್ಯೆ ದೊಡ್ಡದಾಗಿ ಇಳಿಬಿಟ್ಟಿದ್ದಾನೆ. ವೀರನಿಗೆ ಹುಬ್ಬು, ಕಣ್ಣು, ಮೀಸೆ, ತುಟಿ ಮತ್ತು ದೊಡ್ಡದಾದ ಕಿವಿಗಳನ್ನು ತೋರಿಸಿದ್ದಾರೆ. ತಲೆಯ ಬಲಭಾಗಕ್ಕೆ ತುರುಬು ಕಟ್ಟಿದ್ದಾನೆ. ಎಡಭಾಗಕ್ಕೆ ಎಲೆಯನ್ನು ಸಿಕ್ಕಿಸಿಕೊಂಡಿದ್ದಾನೆ. ವೀರನು ಚಲಿಸುವ ಭಂಗಿಯಲ್ಲಿದ್ದಾನೆ.

ರಾಯಚೂರಿನ ಅಗ್ನಿಶಾಮಕ ಠಾಣೆಯ ಆವರಣದ ಗೋಡೆಗೆ ಇಟ್ಟಿರುವ ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿದ ಬಂದೂಕು ವೀರಗಲ್ಲು ಶಿಲ್ಪದಲ್ಲಿ ವೀರನು ಕಾಲು ಅಗಲಿಸಿ ಸಮ ಭಂಗಿಯಲ್ಲಿ ನಿಂತಿದ್ದು, ಬಲಗೈಯನ್ನು ಚಾಚಿ ಚೂರಿಯನ್ನು ನೆಲಕ್ಕೆ ತಾಕಿಸಿ ಹಿಡಿದುಕೊಂಡಿದ್ದಾನೆ. ಎಡಗೈಯನ್ನು ಮುಂದಕ್ಕೆ ಚಾಚಿದ್ದು ಅದರಲ್ಲಿ ಬಂದೂಕನ್ನು ಹಿಡಿದುಕೊಂಡಿದ್ದಾನೆ. ವೀರನ ಕಾಲಿನಿಂದ ಕಿವಿಯವರೆಗೆ ಬಂದೂಕನ್ನು ದೊಡ್ಡದಾಗಿ ತೋರಿಸಿದ್ದಾರೆ. ಸೊಂಟಕ್ಕೆ ವಸ್ತ್ರವನ್ನು ಸುತ್ತಿದ್ದು, ವೀರನು ಚಡ್ಡಿಯನ್ನು ಧರಿಸಿದಂತೆ ಕಂಡರಿಸಲಾಗಿದೆ. ಎರಡು ಕಾಲುಗಳ ಮಧ್ಯೆ ನಿರಿಗೆ ಇಳಿಬಿಟ್ಟಿದ್ದಾರೆ. ವೀರನಿಗೆ ದೊಡ್ಡದಾದ ಹುಬ್ಬು, ಕಣ್ಣು, ಮೀಸೆ, ತುಟಿಯನ್ನು ಕಂಡರಿಸಲಾಗಿದೆ. ಕೊರಳಲ್ಲಿ ಪದಕ ಇರುವ ಸರಗಳಿವೆ. ಕೈಗಳಿಗೆ ತೋಳ್ಬಂದಿ, ಕೈಕಡಗವನ್ನು ಧರಿಸಿದ್ದಾನೆ. ಈ ಶಿಲ್ಪದಲ್ಲಿರುವ ವೀರನನ್ನು ಗಮನಿಸಿದಾಗ ನುರಿತ ವೀರನೆಂದು ತಿಳಿದುಬರುತ್ತದೆ.

ರಾಯಚೂರಿನ ಅಗ್ನಿಶಾಮಕ ಠಾಣೆಯ ಆವರಣದ ಗೋಡೆಗೆ ಇಟ್ಟಿರುವ ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿದಬಂದೂಕು ವೀರಗಲ್ಲಿನಲ್ಲಿ ವೀರನು ಸಮಭಂಗಿಯಲ್ಲಿ ನಿಂತಿದ್ದಾನೆ. ತನ್ನ ಎರಡು ಕೈಗಳನ್ನು ಅಗಲವಾಗಿ ಚಾಚಿದ್ದು ಬಲಗೈಯಲ್ಲಿ ಚೂರಿಯನ್ನು ಹಿಡಿದು ಮೇಲೆ ಎತ್ತಿದ್ದಾನೆ. ಎಡಗೈಯಲ್ಲಿ ದೊಡ್ಡದಾದ ಬಂದೂಕುವನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ಬಂದೂಕನ್ನು ಎಡಗಾಲಿನ ಪಾದದ ಮೇಲೆ ಇಟ್ಟುಕೊಂಡಿದ್ದು, ಬಂದೂಕು ತಲೆಯವರೆಗೂ ವಿಸ್ತರಿಸಿದೆ.ವೀರನು ತಲೆಗೆ ಪೇಟವನ್ನು ಧರಿಸಿದ್ದಾನೆ. ವೀರನ ಬಲ ಕಿವಿಯು ತುಂಬಾ ಚಿಕ್ಕದಾಗಿ, ಎಡ ಕಿವಿಯನ್ನು ದೊಡ್ಡದಾಗಿ, ಕಣ್ಣು, ಉದ್ದವಾದ ಮೂಗು, ಮೀಸೆ, ಬಾಯಿಯನ್ನೂ ಚಿತ್ರಿಸಿದ್ದಾರೆ. ಕೊರಳಿಗೆ ಪದಕದ ಸರವಿದೆ. ಕೈಗಳಲ್ಲಿ ತೋಳ್ಬಂದಿ, ಕೈಕಡಗಗಳು ಮತ್ತು ಕಾಲುಗಳಿಗೆ ಕಾಲ್ಕಡಗವನ್ನು ಧರಿಸಿದ್ದಾನೆ. ವೀರನು ಸೊಂಟಕ್ಕೆ ಪಟ್ಟಿ ಇದ್ದು ವಸ್ತ್ರಗಳಿಂದ ಎರಡು ಬದಿಗೆ ಇಳಿಬಿಟ್ಟಿದ್ದಾನೆ. ವೀರನ ಮುಖವನ್ನು ದೊಡ್ಡದಾಗಿ ತೋರಿಸಿದ್ದು ದೇಹವನ್ನು ಚಿಕ್ಕದಾಗಿ ತೋರಿಸಲಾಗಿದೆ.

ರಾಯಚೂರಿನ ಅಗ್ನಿಶಾಮಕ ಠಾಣೆಯ ಆವರಣದಲ್ಲಿರುವ ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿದ ಶಿಲ್ಪವನ್ನು ಬಿಳಿಕಣಶಿಲೆಯಲ್ಲಿ ಕಂಡರಿಸಲಾಗಿದೆ. ವೀರನು ತನ್ನ ಎರಡು ಕೈಗಳನ್ನು ಅಗಲಿಸಿದ್ದು ಬಲಗೈಯಲ್ಲಿ ಚೂರಿಯನ್ನು ಮತ್ತು ಎಡಗೈಯಲ್ಲಿ ಬಂದೂಕನ್ನು ಹಿಡಿದುಕೊಂಡಿದ್ದಾನೆ. ಬಂದೂಕು ವೀರನ ಎಡ ಪಾದದಿಂದ ತಲೆಯವರೆಗೂ ಇದೆ. ವೀರನು

ತಲೆಗೂದಲನ್ನು ಬಲಕ್ಕೆ ತುರುಬು ಕಟ್ಟಿದ್ದಾನೆ. ಎಡಗಡೆ ಎಲೆಯನ್ನು ಸಿಗಿಸಿಕೊಂಡಿದ್ದಾನೆ. ಹಣೆಯ ಮೇಲೆ ಹಣೆಪಟ್ಟಿಯನ್ನು ಕಟ್ಟಿಕೊಂಡಿದ್ದಾನೆ. ದೊಡ್ಡದಾದ ಹುಬ್ಬು, ಕಣ್ಣು, ಮೀಸೆಗಳನ್ನು ಚಿತ್ರಿಸಿದ್ದಾರೆ. ವೀರನ ಕಿವಿಯು ಅಗಲವಾಗಿದ್ದು ಅಲಂಕಾರಯುತ ಕುಂಡಲಗಳನ್ನು ಧರಿಸಿದ್ದಾನೆ. ಕೊರಳಿಗೆ ಪದಕ ಇರುವ ಸರವಿದೆ. ಕೈಗಳಿಗೆ ಕಡಗಗಳನ್ನು ಧರಿಸಿದ್ದಾನೆ. ಸೊಂಟ ಪಟ್ಟಿಯಿಂದ ವಸ್ತ್ರವನ್ನು ಎರಡು ಕಾಲುಗಳ ಮಧ್ಯೆ ಇಳಿಬಿಟ್ಟಿದ್ದಾನೆ. ಬಲಗಾಲವನ್ನು ಚಿಕ್ಕದಾಗಿ ತೋರಿಸಿದ್ದು, ಎಡಗಾಲ ತೊಡೆಯನ್ನು ಮುಂದೆ ಚಾಚಿದ್ದು ಸ್ವಲ್ಪ ಬಾಗಿದಂತೆ ಕಾಣುತ್ತದೆ.

ರಾಯಚೂರಿನ ಪೋಲಿಸ್ ಸುಪರಿಟೆಂಡೆಂಟ್ ಕಾರ್ಯಲಯದ ಆವರಣದಲ್ಲಿರುವ ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿದ ಶಿಲ್ಪವನ್ನು ಕಣಶಿಲೆಯಲ್ಲಿ ಕಂಡರಿಸಲಾಗಿದೆ. ವೀರನು ತನ್ನ ಎರಡು ಕೈಗಳನ್ನು ಅಗಲಿಸಿ ಸಮ ಭಂಗಿಯಲ್ಲಿ ನಿಂತಿದ್ದಾನೆ. ಬಲಗೈಯಲ್ಲಿ ಖಡ್ಗ ಮತ್ತು ಎಡಗೈಯಲ್ಲಿ ದೊಡ್ಡದಾದ ಬಂದೂಕನ್ನು ಹಿಡಿದುಕೊಂಡಿದ್ದಾನೆ. ಬಂದೂಕು ವೀರನ ಪಾದದಿಂದ ತಲೆಯ ಮೇಲ್ಭಾಗದವರೆಗೆ ತೋರಿಸಲಾಗಿದೆ. ವೀರನು ಕೈ ಮತ್ತು ಕಾಲುಗಳಲ್ಲಿ ಕಡಗಗಳನ್ನು ಧರಿಸಿದ್ದಾನೆ. ವೀರನು ಸೊಂಟಕ್ಕೆ ಪಟ್ಟಿಯನ್ನು ಕಟ್ಟಿದ್ದು ಅದರಲ್ಲಿ ಕಿರಿಗತ್ತಿಯನ್ನು ಇಟ್ಟುಕೊಂಡಿದ್ದಾನೆ. ನಿರಿಗೆಗಳನ್ನು ಎರಡು ಕಾಲುಗಳ ನಡುವೆ ಮತ್ತು ಸೋಟದಿಂದ ಎಡ ತೊಡೆಯ ಪಕ್ಕದಿಂದ ಕೆಳಕ್ಕೆ ಇಳಿಬಿಟ್ಟಂತ್ತೆ ಕಂಡರಿಸಲಾಗಿದೆ. ವೀರನ ಹೊಟ್ಟೆಯ ಭಾಗವನ್ನು ಸಪೂರವಾಗಿ ತೋರಿಸಿ, ಕೆಳಭಾಗವನ್ನು ಅಸಹಜವಾಗಿ ತುಂಬಾ ಅಗಲವಾಗಿ ತೊರಿಸಲಾಗಿದೆ. ವೀರನು ತಲೆಯ ಎಡಭಾಗದಲ್ಲಿ ತುರುಬವನ್ನು ಕಟ್ಟಿದ್ದಾನೆ. ದೊಡ್ಡದಾದ ಕಣ್ಣುಗಳು, ಮೂಗು, ಬಾಯಿಯನ್ನು ಚಿತ್ರಿಸಿದ್ದಾರೆ.

ರಾಯಚೂರಿನ ನವರಂಗ ದರ್ವಾಜ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿರುವ ಕ್ರಿ.ಶ. ೧೭ನೆಯ ಶತಮಾನದ ಬಂದೂಕು ವೀರಗಲ್ಲಿದೆ. ಈ ಶಿಲ್ಪವನ್ನು ಬಿಳಿಕಣಶಿಲೆಯಲ್ಲಿ ಕಂಡರಿಸಲಾಗಿದೆ. ವೀರನು ಬಲಗೈಯಲಿ ಬಾಕನ್ನು ಹಿಡಿದು ಕೆಳಕ್ಕೆ ಇಳಿಬಿಟ್ಟಿದ್ದಾನೆ. ಎಡಗೈಯ ಭುಜದ ಮೇಲೆ ದೊಡ್ಡದಾದ ಬಂದೂಕು ಹಿಡಿದುಕೊಂಡಿದ್ದಾನೆ. ಬಂದೂಕನ್ನು ಬಾಗಿದ ರೀತಿಯಲ್ಲಿ ಮತ್ತು ಅಗಲವಾಗಿ ಕಂಡರಿಸಲಾಗಿದೆ. ವೀರನ ಮುಖವನ್ನು ಎಡಗಡೆ ತೋರಿಸಲಾಗಿದೆ. ತಲೆಗೂದಲನ್ನು ತುರುಬು ಕಟ್ಟಿದ್ದು ಅದನ್ನು ತುಂಬಾ ದೊಡ್ಡದಾಗಿ ತೋರಿಸಲಾಗಿದೆ. ವೀರನ ಕಾಲುಗಳು ಪೂರ್ಣವಾಗಿ ಕಾಣಿಸುವುದಿಲ್ಲ ಹಾಗಾಗಿ ಈ ಶಿಲ್ಪವು ಅಪೂರ್ಣ ಪ್ರಮಾಣದಲ್ಲಿದ್ದಂತೆ ಕಾಣುತ್ತದೆ. ಕೆಳಗಡೆ ಒಡೆದ ಯಾವ ಗುರುತು ಇಲ್ಲದಿರುವುದರಿಂದ ಇದನ್ನ ಇಷ್ಟೆ ಖಂಡರಿಸಿರಬೇಕು. ಈ ಶಿಲ್ಪವು ಗಟ್ಟಿ ಬಂಡೆಯಾಗಿರುವುದರಿಂದ ಕಲಾಕುಸುರಿಗೆ ಅಷ್ಟೊಂದು ಮಹತ್ವ ನೀಡಿಲ್ಲ.

## ಬಂದೂಕು ಪ್ರಯೋಗಿಸುತ್ತಿರುವ ವೀರರು

ರಾಯಚೂರಿನ ಪೋಲಿಸ್ ಸುಪರಿಟೆಂಡೆಂಟ್ ಕಾರ್ಯಲಯದ ಆವರಣದಲ್ಲಿ ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿದ ವೀರಗಲ್ಲಿದೆ. ಈ ಶಿಲ್ಪವನ್ನು ಕಣಶಿಲೆಯಲ್ಲಿ ಕಂಡರಿಸಲಾಗಿದೆ. ವೀರನು ಬಂದೂಕು ಪ್ರಯೋಗ ಮಾಡುತ್ತಿದ್ದಾನೆ. ವೀರನು ತಲೆಯ ಕೂದಲನ್ನು ಕಟ್ಟಿ ಹಿಂದಕ್ಕೆ ಇಳಿಬಿಟ್ಟಂತೆ ಚಿತ್ರಿಸಲಾಗಿದೆ. ಸೊಂಟದಲ್ಲಿ ಕತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ವೀರನ ಮೊಣಕಾಲಿನಿಂದ ಕೆಳಭಾಗವು ಕಟ್ಟೆಯಲ್ಲಿ ಹುದುಗಿಹೋಗಿದೆ. ಸರಳ ಧರಿಸನ್ನು ಧರಿಸಿದ್ದಾನೆ.

ರಾಯಚೂರಿನ ಪೋಲಿಸ್ ಸುಪರಿಟೆಂಡೆಂಟ್ ಕಾರ್ಯಲಯದ ಆವರಣದಲ್ಲಿ ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿದ ವೀರಗಲ್ಲಿದೆ. ಈ ಶಿಲ್ಪವನ್ನು ಬಿಳಿಕಣಶಿಲೆಯಲ್ಲಿ ಕಂಡರಿಸಲಾಗಿದೆ. ವೀರನು ಎಡಕ್ಕೆ ಮುಖಮಾಡಿ ತ್ರಿಭಂಗಿಯಲ್ಲಿ ನಿಂತು ಬಂದೂಕು ಪ್ರಯೋಗ ಮಾಡುತ್ತಿರುವಂತೆ ಚಿತ್ತಿಸಲಾಗಿದೆ. ವೀರನು ಸೊಂಟಕ್ಕೆ ವಸ್ತ್ರಗಳಿಂದ ಬಿಗಿದುಕೊಂಡು ಅದರಲ್ಲಿ ಬಾಕುವನ್ನು ಸಿಕ್ಕಿಸಿಕೊಂಡಿದ್ದಾನೆ. ತಲೆಗೆ ಪೇಟದಿಂದ ಅಲಂಕಾರವನ್ನು ಮಾಡಿಕೊಂಡಿದ್ದಾನೆ. ಕೆತ್ತನೆಯು ಅಷ್ಟೊಂದು ಸೂಕ್ಷ್ಮವಾಗಿಲ್ಲ.

ರಾಯಚೂರಿನ ಪೋಲಿಸ್ ಸುಪರಿಟೆಂಡೆಂಟ್ ಕಾರ್ಯಾಲಯದ ಆವರಣದಲ್ಲಿ ಕ್ರಿ.ಶ. ೧೭ನೆಯ ಶತಮಾನದ ವೀರಗಲ್ಲು ಸ್ಮಾರಕ ಶಿಲ್ಪವನ್ನು ಕಣಶಿಲೆಯಲ್ಲಿ ಕಂಡರಿಸಲಾಗಿದೆ. ವೀರನು ಎರಡು ಕೈಗಳಿಂದ ಬಂದೂಕನ್ನು ಹಿಡಿದುಕೊಂಡು ಪ್ರಯೋಗ ಮಾಡುತ್ತಿರುವಂತೆ ಚಿತ್ರಿಸಲಾಗಿದೆ. ವೀರನು ತಲೆಯ ಕೂದಲನ್ನು ಬಲಕ್ಕೆ ತುರುಬು ಕಟ್ಟಿದ್ದಾನೆ. ತಲೆಗೆ ಎರಡು ಕೊಡು ಇಟ್ಟುಕೊಂಡಿದ್ದಾನೆ. ಸೊಂಟದಲ್ಲಿ ಪಟ್ಟಿಯನ್ನು ಕಟ್ಟಿದ್ದು, ನಿಲಿಗೆಯನ್ನು ಇಳಿಬಿಟ್ಟಂತೆ ತೋರಿಸಲಾಗಿದೆ. ಸೋಂಟದಲ್ಲಿ ಬಾಕುವನ್ನು ಸಿಕ್ಕಿಸಿಕೊಂಡಿದ್ದು, ವೀರನು ಚಲಿಸುವ ಭಂಗಿಯಲ್ಲಿದ್ದಾನೆ. ವೀರನ ಹಿಂದೆ ನಾಯಿ ಮತ್ತು ಮುಂದೆ ಎತ್ತುನ್ನು ಚಿತ್ರಿಸಲಾಗಿದೆ. ಈ ಶಿಲ್ಪವನ್ನು ಗಮನಿಸಿದ್ದಾಗ ಕಾಡಿನಲ್ಲಿ ಬೇಟೆಯಾಡಲು ಹೋಗಿ ವೀರನು ಸತ್ತಿರಬಹುದು ಅಥವಾ








ಹಸುವನ್ನು ತೋರಿಸಿರುವುದರಿಂದ ಇದೊಂದು ತುರುಗೋಳ ಶಿಲ್ಪವಾಗಿರುವ ಸಾಧ್ಯತೆಯಿದೆ. ಮೇಲೆ ಸೂರ್ಯ, ಚಂದ್ರರನ್ನು ಕಂಡರಿಸಲಾಗಿದೆ. ಅಲ್ಲಲ್ಲಿ ರೇಖೆಗಳಿಂದ ಅಲಂಕಾರ ಮಾಡಲಾಗಿದೆ.

## ಬಂದೂಕು ವೀರ ಮಾಸ್ತಿಗಲ್ಲು

ರಾಯಚೂರಿನ ಪೋಲಿಸ್ ಸುಪರಿಟೆಂಡೆಂಟ್ ಕಾರ್ಯಲಯದ ಆವರಣದಲ್ಲಿ ಕ್ರಿ.ಶ. ೧೬ನೆಯ ಶತಮಾನದ ವೀರಗಲ್ಲು ಸ್ಮಾರಕ ಶಿಲ್ಪವನ್ನು ಕಣಶಿಲೆಯಲ್ಲಿ ಕಂಡರಿಸಲಾಗಿದೆ. ಈ ಶಿಲ್ಪದಲ್ಲಿ ವೀರನನ್ನು ಸತಿಯೊಂದಿಗೆ ತೊರಿಸಲಾಗಿದೆ. ವೀರನು ಬಲಗಡೆ ತೂರುಬವನ್ನು ಕಟ್ಟಿದ್ದಾನೆ. ಎಡಗಡೆ ಎಲೆಗಳನ್ನು ಸಿಗಿಸಿದ್ದಾನೆ. ಕಿವಿಗಳಿಗೆ ಕರ್ಣಕುಂಡಲಗಳನ್ನು ಧರಿಸಿದ್ದಾನೆ. ವೀರನು ಬಲಗೈಯನ್ನು ಮೇಲೆ ಎತ್ತಿ ಖಡ್ಗವನ್ನು ಹಿಡಿದುಕೊಂಡಿದ್ದಾನೆ. ಎಡಗೈಯನ್ನು ಮುಂದೆ ಚಾಚಿದ್ದು ದೊಡ್ಡದಾದ ಬಂದೂಕು ಹಿಡಿದುಕೊಂಡಿದ್ದಾನೆ. ಸತಿಯು ಸಾಮಾನ್ಯ ದಿರಿಸನ್ನು ಧರಿಸಿದ್ದಾಳೆ. ಸೀರೆಗೆ ರೆಖೆಗಳಿಂದ ಮಡಿಕೆಗಳನ್ನು ತೋರಿಸಲಾಗಿದೆ. ಬಲಗೈಯಲ್ಲಿ ನಿಂಬೆಹಣ್ಣನ್ನು, ಎಡಗೈಯಲ್ಲಿ ಕರಂಡಮುಕುಟವನ್ನು ಹಿಡಿದಿದ್ದಾಳೆ. ಕಿವಿಯಲ್ಲಿ ಕಿವಿಯೋಲೆ, ಕೈಯಲ್ಲಿ ಬಳೆಯನ್ನು ಕಂಡರಿಸಲಾಗಿದೆ.

ರಾಯಚೂರಿನ ಪೋಲಿಸ್ ಸುಪರಿಟೆಂಡೆಂಟ್ ಕಾರ್ಯಲಯದ ಆವರಣದಲ್ಲಿರುವ ಕ್ರಿ.ಶ. ೧೭ನೆಯ ಶತಮಾನದ ವೀರಗಲ್ಲು ಸ್ಮಾರಕ ಶಿಲ್ಪವನ್ನು ಕಣಶಿಲೆಯಲ್ಲಿ ಕಂಡರಿಸಲಾಗಿದೆ. ವೀರನು ಬಲಗಡೆ ತುರುಬು ಕಟ್ಟಿದ್ದು ಕೊರಳಲ್ಲಿ ಪದಕವಿರುವ ಸರ, ಕೈಗಳಲ್ಲಿ ಕಡಗ, ತೋಲ್ಬಂದಿಯನ್ನು, ಸೊಂಟಕ್ಕೆ ಪಟ್ಟಿಯನ್ನು ಧರಿಸಿದ್ದಾನೆ. ವೀರನ್ನು ಸೊಂಟಕ್ಕೆ ವಸ್ತ್ರದಿಂದ ಕಚ್ಚೆ ಬಿಗಿದಿದ್ದಾನೆ. ವೀರನು ಬಲಗೈಯಲ್ಲಿ ಖಡ್ಗವನ್ನು ಹಿಡಿದು ಮೇಲೆ ಎತ್ತಿದ್ದು, ಎಡಗೈಯಲ್ಲಿ ಉದ್ದವಾದ ಬಂದೂಕನ್ನು ಹಿಡಿದುಕೊಂಡು ನಿಂತಿದ್ದಾನೆ. ವೀರ ಮತ್ತು ಬಂದೂಕಿನ ಪಕ್ಕದಲ್ಲಿ ಚಿಕ್ಕದಾದ ವೀರನನ್ನು ತೋರಿಸಿದ್ದಾರೆ.

ವೀರನ ಎದುರಾಳಿ ಸತ್ತಿರುವ ವೀರನೆಂದು ಊಹಿಸಬಹುದು. ವೀರನ ಬಲಗಡೆ ಸತಿಯ ಶಿಲ್ಪವಿದೆ. ಸತಿಯು ಬಲಗಡೆ ತುರುಬು ಕಟ್ಟಿದ್ದಾಳೆ. ಬಲಗೈಯನ್ನು ಇಳಿಬಿಟ್ಟಿದ್ದಾಳೆ. ಎಡಗೈಯಲ್ಲಿ ಮಾದಲ ಹಣ್ಣನ್ನು ಹಿಡಿದಿದ್ದಾಳೆ. ಸ್ತನದ ಭಾಗವನ್ನು ದೊಡ್ಡದಾಗಿ ತೋರಿಸಿದ್ದಾರೆ. ಸತಿಯು ನೆರಿಗೆವುಳ್ಳ ಸೀರೆಯನ್ನು ಧರಿಸಿದ್ದಾಳೆ. ಇಬ್ಬರ ಕುತ್ತಿಗೆಯ ಮೇಲ್ಭಾಗದಲ್ಲಿ ಭಾಗಗಳಲ್ಲಿ ರಂಧ್ರಗಳಿವೆ. ವೀರ ಮತ್ತು ಸತಿಯು ಚಲಿಸುವ ಭಂಗಿಯಲ್ಲಿದ್ದಾರೆ.

ರಾಯಚೂರು ಜಿಲ್ಲೆಯ ಮಸ್ಕಿ ತಾಲೂಕಿನ ನಂಜಲದಿನ್ನಿ ಗ್ರಾಮದೊಳಗೆ ಇರುವ ಮುಖ್ಯ ದಾರಿಯಲ್ಲಿನ ಬಲಭಾಗದ ಹನುಮನಗೌಡರ ಮನೆಯ ಮುಂಭಾಗದಲ್ಲಿ ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿದ ವೀರಗಲ್ಲು ಶಿಲ್ಪವಿದೆ. ಇದನ್ನು ಬಿಳಿ ಗ್ರಾನೈಟ್ ಕಲ್ಲಿನಲ್ಲಿ ಕಂಡರಿಸಲಾಗಿದೆ. ಈ ವೀರಗಲ್ಲು ವಿಜಯನಗರೋತ್ತರ ಕಾಲ(ಮೆದಕಿನಾಳ ನಾಡಗೌಡ) ದಾಗಿದೆ ಎಂದು ಊಹಿಸಿದ್ದೇನೆ. ಈ ಶಿಲ್ಪದಲ್ಲಿ ರಾಜ ಪ್ರಮುಖನು ಕುದುರೆಯ ಮೇಲೆ ಕುಳಿತಿದ್ದಾನೆ. ಅವನು ಪ್ರಮುಖ ಅಥವಾ ಮುಖಂಡ ಎಂದು ತಿಳಿಯಲು ಕಾರಣ ಅವನಿಗೆ ರಾಜಛತ್ರಿಯನ್ನು ಹಿದಿರುವುದು ಈ ರಾಜನ ಒಂದು ಕೈನಲ್ಲಿ ಗುರಾಣಿ ಮತ್ತು ಇನ್ನೊಂದು ಕೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ಕಿವಿಯಲ್ಲಿ ಕರ್ಣಕುಂಡಲಗಳನ್ನು ಕೊರಳಿನಲ್ಲಿ ವಿವಿಧ ಆಭರಣಗಳನ್ನು ಧರಿಸಿದ್ದು ತನ್ನ ಎಡಗಾಲನ್ನು ಕುದುರೆಗೆ ಹಾಕಿರುವ ರಿಕಾಪಿನ ಮೇಲೆ ಇಟ್ಟಿದ್ದಾನೆ. ಇನ್ನು ಕುದುರೆಯ ಬೆನ್ನಿನ ಮೇಲೆ ಅಲಂಕಾರಿಕ ಜೀನನ್ನು ಹಾಕಿದ್ದಾರೆ. ಕುದುರೆಯ ಬಾಯೊಳಗೆ ಕಬ್ಬಿಣದ ಕವಲುಗೋಲು ಇದ್ದು ಇದಕ್ಕೆ ಲಗಾಮು ತಗುಲಿಸಿದ್ದಾರೆ. ಕುದುರೆಯ ಕಾಲುಗಳಿಗೆ ಆಭರಣ ತೊಡಿಸಿದ್ದಾರೆ. ಅದರ ಮುಂದಿನ ಎಡಕಾಲನ್ನು ಸ್ವಲ್ಪ ಮೇಲಕ್ಕೆ ಎತ್ತಿದ ರೀತಿಯಲ್ಲಿ ಕಂಡುಬರುತ್ತದೆ.

ಕುದುರೆಯ ಹಿಂದಿನ ಸೈನಿಕನು ರಾಜ ಪ್ರಮುಖನಿಗೆ ರಾಜಛತ್ರಿಯನ್ನು ತನ್ನ ಎರಡು ಕೈಗಳಿಂದ ಹಿಡಿದಿದ್ದಾನೆ. ಇವನು ಕಿವಿಯಲ್ಲಿ ಕರ್ಣಕುಂಡಲ ಧರಿಸಿದ್ದಾನೆ. ಇವನ ಶಿರಮುಡಿಯನ್ನು ಕಟ್ಟಿದ್ದು ಅದು ಬಲಭಾಗಕ್ಕೆ ವಾಲಿದೆ. ಇನ್ನೂ ಕುದುರೆಯ ಮುಂದೆ ಮತ್ತೊಬ್ಬ ವೀರನನ್ನು ಕಾಣುತ್ತೇವೆ. ಇವನು ಸಹ ವಿವಿಧ ಆಭರಣಗಳನ್ನು ಧರಿಸಿದ್ದು ಶಿರಮುಡಿಯನ್ನು ಕಟ್ಟಿದ್ದು ಅದು ಎಡಭಾಗಕ್ಕೆ ವಾಲಿದಂತಿದೆ. ಕಿವಿಯಲ್ಲಿ ಕುಂಡಲಗಳನ್ನು, ಕೊರಳಿನಲ್ಲಿ ಆಭರಣಗಳನ್ನು ಧರಿಸಿದ್ದಾನೆ. ಇನ್ನು ಭುಜ ಮತ್ತು ಕೈಗಳಲ್ಲಿ ಸಹ ವಿವಿಧ ಆಭರಣಗಳಿವೆ. ತನ್ನ ಎಡಗೈನಲ್ಲಿ ಕಿರುಗತ್ತಿಯನ್ನು ಹಿಡಿದಿದ್ದು, ಬಲಗೈನಲ್ಲಿ ಬಂದೂಕು ಹಿಡಿದಿದ್ದಾನೆ. ವೀರನ ಸೊಂಟದಲ್ಲಿ ವಿವಿಧ ಪಟ್ಟಿಗಳನ್ನು ಮತ್ತು ವಸ್ತ್ರಗಳನ್ನು ಧರಿಸಿದ್ದಾನೆ. ನಿಲಿಗೆಯು ಬಲಭಾಗಕ್ಕೆ ಬಂದಿದೆ. ಈ ರೀತಿಯ ಸೂಕ್ಷ್ಮ ಕೆತ್ತನೆಗಳಿಂದ ಇದೊಂದು ಅಪರೂಪದ ಬಂದೂಕು ವೀರಗಲ್ಲು ಎಂದು ಹೇಳಬಹುದಾಗಿದೆ.[೬]



## ಅಡಿಟಿಪ್ಪಣಿಗಳು

೧. ಬಾಲಸುಬ್ರಮಣಿಯನ್, ೨೦೦೮, ದಿ ಸಾಗ ಆಫ್ ಇಂಡಿಯನ್ ಕೆನಾನ್ಸ್, ಪು. ೧೯-೨೦.

೨. ಕೃಷ್ಣಶರ್ಮ ಬೆಟಗೇರಿ, ೧೯೮೩, ಕರ್ನಾಟಕ ಜನಜೀವನ, ಪು.೨೮ ಮತ್ತು ಕನ್ನಡ ಕಾವ್ಯಗಳಲ್ಲಿ ಸಮರ ಚಿತ್ರಗಳು, ಪು. ೧೦೭.

೩. ಚಿದಾನಂದ ಮೂರ್ತಿ ಎಂ., ೨೦೧೧, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೧೦.

೪. ನಾಗೇಗೌಡ, ಎಚ್.ಎಲ್, ೧೯೬೬, ಪ್ರವಾಸಿ ಕಂಡ ಇಂಡಿಯಾ ಸಂಪುಟ ೨.

೫. ಸೋಮಶೇಖರ್ ಎಸ್.ವೈ., ೨೦೦೯, ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿ, ಪು. ೧೫೫.

೬ ನಾಗರಾಜ, ೨೦೦೮, ಮಸ್ಕಿ ಪರಿಸರದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ, ಪು. ೮೩.

೩೫

# ಸವಣೂರು ತಾಲ್ಲೂಕಿನ ವೀರಗಲ್ಲುಗಳು

**ವೈ. ಮದ್ದಾನಸ್ವಾಮಿ***

**ಐತಿಹಾಸಿಕ** ಅಧ್ಯಯನದ ದೃಷ್ಟಿಯಿಂದ ಸವಣೂರು ತಾಲ್ಲೂಕಿಗೆ ಸೇರಿದ ವೀರಗಲ್ಲುಗಳ ಬಗ್ಗೆ ಮೊದಲು ಇಲ್ಲಿಯ ಶಾಸನಗಳು ಪ್ರಕಟಗೊಂಡ SII- Vol-XVIII, Epigraphia Carnatica ಮತ್ತು Karnataka Inscriptions ಗಳನ್ನು ಪರಿಶೀಲಿಸಿ, ಪ್ರಸ್ತುತ ಪ್ರಬಂಧವನ್ನು ರಚಿಸಲಾಗಿದೆಯಾದರೂ, ಕ್ಷೇತ್ರಕಾರ್ಯವೇ ಪ್ರಬಂಧದ ಜೀವಾಳವಾಗಿದೆ.

**ತುರುಗೋಳ್:** ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ಗೋವು ಒಂದು ಬೆಲೆ ಬಾಳುವ ಮತ್ತು ಪೂಜ್ಯ ವಸ್ತುವಾಗಿ ಪರಿಣಮಿಸಿತ್ತು. ಹಾಗೆ ನೋಡಿದರೆ ಮಹಾಭಾರತದ ವಿರಾಟಪರ್ವ 'ತುರುಗೋಳ' ಯುದ್ಧವೇ ಆಗಿದೆ. ಕಾಲಾಂತರದಲ್ಲಿ ಇದು ಯುದ್ಧ ಸಾರಿದ ಸಂಕೇತವಾಗಿ ಪರಿಣಮಿಸಿತು. ತುರುಗಳನ್ನು ಸೆರೆಹಿಡಿದ ಪ್ರಸಂಗದಲ್ಲಿ ಅವುಗಳನ್ನು ಬಿಡಿಸಲು ಹೋರಾಡುವುದು ವೀರನಾದವನ ಕರ್ತವ್ಯವೆನಿಸಿತ್ತು.

ಕ್ರಿ.ಶ. ೧೦೮೯ರ ಆರನೆಯ ವಿಕ್ರಮಾದಿತ್ಯನ ಕಾಲದ **ಹತ್ತಿಮತ್ತೂರಿನಲ್ಲಿ** ದೊರೆತ ತುರುಗೋಳ್ ಶಿಲ್ಪವೊಂದು ಉಲ್ಲೇಖಿಸುವಂತೆ ಪತ್ತಿಯಮತ್ತವೂರದ ಗೋಗ್ರಹಣದಲ್ಲಿ ತಮ್ಮ ಊರೊಡೆಯ ದೇವುಗಾಂಕನ ಸಲುವಾಗಿ ಜೋಗ ಮತ್ತು ಸಿಂಗ ಎಂಬ ವೀರರು ಜನ್ನುಗನೊಡನೆ ಹೋರಾಡಿ ಮಡಿದ ಶೌರ್ಯವನ್ನು ವಿವರಿಸುತ್ತದೆ. ಸುಮಾರು ೫ ೧/೨ ಅಡಿ ಎತ್ತರದ, ೩ ೧/೨ ಅಡಿ ಅಗಲವಿರುವ ಈ ವೀರಗಲ್ಲು, ೪ ಹಂತಗಳನ್ನು ಹೊಂದಿದೆ. ೧ನೇ ಹಂತದಲ್ಲಿ ೨೧ ಸಾಲುಗಳ ಶಾಸನವಿದೆ. ೨ನೇ ಹಂತದಲ್ಲಿ ಭರ್ಚಿ, ಗುರಾಣಿ ಹಿಡಿದು ಹೋರಾಡುವ ಇಬ್ಬರು ವೀರರ ಹಿಂಭಾಗದಲ್ಲಿ ಗೋವುಗಳಿವೆ. ೩ನೇ ಹಂತದಲ್ಲಿ ಅಪ್ಸರೆಯರೊಂದಿಗಿನ ವೀರ ಹಾಗೂ ೪ನೇ ಹಂತದಲ್ಲಿ ನಂದಿ, ಲಿಂಗು ಮತ್ತು ಇಬ್ಬರು ವೀರರು ಕೈಮುಗಿದು ಕುಳಿತ ಶಿಲ್ಪಗಳಿವೆ. ಮೇಲಿನ ಶಾಸನದ ಸಮೀಪದಲ್ಲಿ ಕೋಡಿ ಹೊನ್ನವ್ವನಗುಡಿ ಎದುರು ಇರುವ ತುರುಗೋಳ್ ಶಿಲ್ಪವೊಂದು ಗೋಗ್ರಹಣದಲ್ಲಿ ಶಿವದಾಸನ ವೀರಮರಣದ ಬಗ್ಗೆ ತಿಳಿಸುತ್ತದೆ.

ಕ್ರಿ.ಶ. ೧೦೬೬ರ **ಹಿರೇಮುಗದೂರಿನ** ಈಶ್ವರ ದೇವಾಲಯದ ಮುಂದಿರುವ ಶಿಲ್ಪವು ಗೋಗ್ರಹಣದಲ್ಲಿ ಮುಗದೂರು ಬಾಚಗಾವುಂಡನ ಆಳು ವೀರಭೋವ ಎಂಬುವವನು ವೀರಮರಣ ಹೊಂದಿದ ಬಗ್ಗೆ ತಿಳಿಸುತ್ತದೆ. ೩ ಹಂತಗಳಿದ್ದ ಇದರ ೧ನೇ ಹಂತ ನೆಲದಲ್ಲಿ ಹೂತಿದೆ. ೨ & ೩ನೇ ಹಂತಗಳ ಮಧ್ಯೆ ಶಾಸನದ ಸಾಲುಗಳಿವೆ.

**ಜೆಲ್ಲಾಪುರದ** ಬರಮಪ್ಪನ ಗುಡಿ ಎಂದು ಹೇಳುವ ಚಿಕ್ಕ ದೇವಾಲಯದ ಒಳಗೆ ೪ ಅಡಿ ಎತ್ತರದ ೩ ಹಂತಗಳನ್ನು ಹೊಂದಿದ ತುರುಗೋಳ್ ಶಿಲ್ಪವಿದೆ. ೧ನೇಹಂತದಲ್ಲಿ ಬಿಲ್ಲು ಹಿಡಿದು ಹೋರಾಡುವ ವೀರನ ಹಿಂಭಾಗದಲ್ಲಿ ಗೋವುಗಳಿವೆ. ೨ನೇ ಹಂತದಲ್ಲಿ ಅಪ್ಸರೆಯರು ವೀರರನ್ನು ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯ & ೩ನೇ ಹಂತದಲ್ಲಿ ಲಿಂಗು, ಅರ್ಚಕ ಹಾಗೂ ಸ್ವರ್ಗಸ್ತ ವೀರನ ಶಿಲ್ಪಗಳಿವೆ.

**ಚಿಕ್ಕಾಳ** ಗ್ರಾಮದ ಬಸವೇಶ್ವರ ದೇವಾಲಯದ ಮುಂದೆ ೩ ಹಂತಗಳನ್ನು ಹೊಂದಿದ ಒಂದು ತುರುಗೋಳ್ ಶಿಲ್ಪವಿದೆ. ೧ನೇ ಹಂತದಲ್ಲಿ ಖಡ್ಗದಿಂದ ವೈರಿಯನ್ನು ತಿವಿದ ವೀರ ಮತ್ತು ಅವನ ಹಿಂಭಾಗದಲ್ಲಿ ತುರುಗಳ ಶಿಲ್ಪಗಳಿವೆ. ೨ನೇ ಹಂತದಲ್ಲಿ ಅಪ್ಸರೆಯರು ವೀರನನ್ನು ಮಂಟಪದಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯವಿದೆ. ೩ನೇ ಹಂತದಲ್ಲಿ ಲಿಂಗು, ಅರ್ಚಕ, ವೀರ, ಸೂರ್ಯ–ಚಂದ್ರರ ಶಿಲ್ಪಗಳಿವೆ. ಈ ಶಿಲ್ಪವು ಒಂದು ಭಾಗದಲ್ಲಿ ಸ್ವಲ್ಪ ಒಡೆದಿದೆ.

**ಚಿಲ್ಲೂರಿನಲ್ಲಿ** ರಾಷ್ಟ್ರಕೂಟ ದೊರೆ ಅಮೋಘವರ್ಷನ ಕಾಲದ, ಕೆಳಗಿನ ಒಂದು ಸ್ಥರ ನೆಲದಲ್ಲಿ ಹೂತಿರುವ ವಿಶೇಷ ತುರುಗೋಳ್ ಶಿಲ್ಪವಿದೆ. ಮೇಲಿನ ೩ ಸ್ಥರಗಳಲ್ಲಿ ಮೂರು ಮೂರರಂತೆ ವಿಭಾಗಗಳಿವೆ, ಮೇಲ್ಭಾಗದಲ್ಲಿ ೩ ಗೋಪುರಗಳಿವೆ. ಇದು ಎರಡು ಸಾಲುಗಳ ಶಾಸನವನ್ನು ಹೊಂದಿದ್ದು, ಚಲ್ಲಕೇತ ಬಂಕೇಯನ ಕಾಲದಲ್ಲಿ ರೂಪಗೊಂಡಿದೆ. ಇದು

* ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹಾವೇರಿ, ಮೊ. ೬೩೨೦೧೮೯೮೮೭

ಗೋಗ್ರಹಣದಲ್ಲಿ ವೀರಮರಣ ಹೊಂದಿದ ಮಾಚ, ಸರುಗ ಮತ್ತು ಚಟ್ಟ ಎಂಬುವವರ ಸ್ಮರಣೆಗಾಗಿ ನಿಲ್ಲಿಸಿದ ಶಿಲ್ಪವಾಗಿದೆ ಎಂದು ಡಾ. ಚೆನ್ನಕ್ಕ ಪಾವಟೆಯವರು ಅಭಿಪ್ರಾಯಪಟ್ಟಿದ್ದಾರೆ.

**ಊರಳಿವು:** ಪ್ರಾಚೀನ ಕಾಲದಲ್ಲಿ ಹಳ್ಳಿಗಳ ರಕ್ಷಣೆಗೆ ಸರಿಯಾದ ವ್ಯವಸ್ಥೆ ಇರಲಿಲ್ಲ, ಹೀಗಾಗಿ ನೆರೆಯ ರಾಜ್ಯದ ಸೈನಿಕರು ಮತ್ತು ಪಕ್ಕದ ಹಳ್ಳಿಯ ದಾಳಿಕೋರರು ಆಗ ಊರುಗಳನ್ನು ಲೂಟಿ ಮಾಡುತ್ತಿದ್ದರು. ಆಗ ಇಡೀ ಗ್ರಾಮ ಸೂರೆಗೊಂಡು ಚೆಲ್ಲಾಪಿಲ್ಲಿಯಾಗಿ ಹೋಗುತ್ತಿತ್ತು. ಇಂಥ ಸಮಯದಲ್ಲಿ ಗಟ್ಟಿಯಾಗಿ ನಿಂತು ವೈರಿಗಳನ್ನು ಎದುರಿಸಿ ಊರನ್ನು ರಕ್ಷಿಸುವುದು ವೀರರ ಧ್ಯೇಯವಾಗಿದ್ದಿತು. ಹತ್ತಿಮತ್ತೂರಿನ ರಾಷ್ಟ್ರಕೂಟ ದೊರೆ ಒಂದನೇಯ ಕೃಷ್ಣನ ಕಾಲದ ಶಾಸನವೊಂದು, ಊರಳಿವಿನಲ್ಲಿ ಸುರಗೆಯೂರಿನ ದಾಸಮ್ಮ ಮತ್ತು ಎರೆಯ ಎಂಬುವವರು ವೀರ ಮರಣವನ್ನಪ್ಪಿದ ಬಗ್ಗೆ ತಿಳಿಸುತ್ತದೆ.

**ಎರವೆಸ:** ಎರವೆಸ ಎಂದರೆ ಒಡೆಯನ ಅಪ್ಪಣೆ & ಆತನ ಉಪ್ಪಿನ ಋಣಕ್ಕಾಗಿ ಹೋರಾಡುವುದು ಇಲ್ಲಿಯ ಧ್ಯೇಯ. ಇದೊಂದು ಕಡ್ಡಾಯ ಕಾರ್ಯವಾಗಿದ್ದು, ಸೈನ್ಯವನ್ನು ನಿರ್ವಹಿಸುವ ಈ ಕಾರ್ಯ ರಾಜ್ಯದ ಹಣೆಬರಹವನ್ನು ನಿರ್ಧರಿಸುತ್ತಿದ್ದಿತು. ಇಂಥ ಯುದ್ಧದಲ್ಲಿ ಮಡಿದ ವೀರರ ನೆಪಗಿಗಾಗಿ ನಿಲ್ಲಿಸಿದ ಕಲ್ಲುಗಳು ಸಾಮಾನ್ಯವಾಗಿ ಯುದ್ಧ ನಡೆದ ಸ್ಥಳದಲ್ಲಿ ಹೆಚ್ಚಾಗಿ ದೊರೆಯುತ್ತವೆ. ಇಂಥದೊಂದು ಶಾಸನ ಹೊಸಳ್ಳಿಯಲ್ಲಿ ಸಿಕ್ಕಿದ್ದು, ಅದು ಯಾದವ ದೊರೆ ಕನ್ನರನ ಕಾಲದ್ದಾಗಿದೆ. ಹನುಮಂತದೇವರ ಗುಡಿಯ ಎದುರಿನಲ್ಲಿರುವ ಇದು ಕ್ರಿ. ಶ. ೧೨೪೯ ರ ಕಾಲದ್ದು. ಈ ಶಾಸನವು ಹೊಸಳ್ಳಿ (ಹೆಬ್ಬಳ್ಳಿ) ಗ್ರಾಮದ ಗೌಡನ ಆದೇಶದ ಮೇರೆಗೆ ಕಾಳಗಮಾಡಿ ಮರಣಹೊಂದಿದ ಮನನಬೋವನ ಬಗ್ಗೆ ತಿಳಿಸುತ್ತದೆ. ನಾಲ್ಕು ಹಂತಗಳನ್ನು ಹೊಂದಿದ ಇದಕ್ಕೆ ಕಪ್ಪುಬಣ್ಣವನ್ನು ಹಚ್ಚಲಾಗಿದೆ.

ಹತ್ತಿಮತ್ತೂರಿನ ಊರ ಹೊರಗೆ ಕೆರಿ ಏರಿಯ ಮೇಲೆ ಇರುವ ಕೋಡಿಬಸವೇಶ್ವರ ದೇವಾಲಯದ ಮುಂದೆ ೩ ಹಂತಗಳ ಶಾಸನೋಕ್ತ ವೀರಗಲ್ಲು ಇದೆ. ೧ನೇ ಹಂತದಲ್ಲಿ ಎರಡೂ ಬದಿಗಳಲ್ಲಿ ಕುದುರೆ ಏರಿದ ವೈರಿಗಳ ವಿರುದ್ಧ ಹೋರಾಡುವ ದೃಶ್ಯ. ೨ನೇ ಹಂತದಲ್ಲಿ ಅಪ್ಸರೆಯರೊಂದಿಗಿನ ವೀರನ ಚಿತ್ರ, ೩ನೇ ಹಂತದಲ್ಲಿ ನಂದಿ, ಲಿಂಗು, ಆರಾಧಕ, ಧ್ಯಾನಸಕ್ತಮೂರ್ತಿಗಳಿವೆ. ಮೇಲ್ಭಾಗದಲ್ಲಿ ಶಾಸನ ಸಾಲುಗಳಿದ್ದು, ಮಲ್ಲೂರಿನ ಚಾವುಂಡೇಯನಾಯಕನ ಸಲುವಾಗಿ ಯುದ್ಧದಲ್ಲಿ ಮಡಿದ ಮಾನೆಯ (ಮಣಯ) ನಾಯಕನ ನೆನಪಿಗಾಗಿ, ಚವುಡದೇವಿಯ ಮಗ ಸಾರೆಯ ನಾಯಕನು ವೀರಗಲ್ಲು ನೆಟ್ಟ ವಿಚಾರವನ್ನು ತಿಳಿಸುತ್ತದೆ.

ಹತ್ತಿಮತ್ತೂರಿನ ಹೊಂಡದ ಹತ್ತಿರವಿರುವ ಕಟ್ಟೆಯ ಮೇಲೆ ೩ ಹಂತಗಳ ವೀರಗಲ್ಲು ಇದ್ದು ಇದರ ಮೇಲ್ಭಾಗದಲ್ಲಿ ಶಾಸನವಿದೆ, ೧ನೇ ಹಂತದಲ್ಲಿ ಬಿಲ್ಲು-ಬಾಣ, ಭರ್ಚಿ, ಖಡ್ಗ-ಗುರಾಣಿ ಹಿಡಿದು ಹೋರಾಡುವ ವೀರನು ಕಾಲಲ್ಲಿ ವೈರಿಯನ್ನು ಮೆಟ್ಟಿನಿಂತಿದ್ದಾನೆ, ೨ನೇ ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯ, ೩ನೇ ಹಂತದಲ್ಲಿ ನಂದಿ, ಲಿಂಗು, ಧ್ಯಾನಸಕ್ತಮೂರ್ತಿ, ಸೂರ್ಯ-ಚಂದ್ರರಿದ್ದಾರೆ. ಮಹಾಮಂಡಲೇಶ್ವರನಾದ ಮಾದರಸನ ಆಜ್ಞೆಯ ಮೇರೆಗೆ ಯುದ್ಧಮಾಡಿ ಮಡಿದ ಅವನ ಸೇವಕನ ನೆನಪಿಗಾಗಿ ಮಲೆಯನಾಯಕ ಎಂಬುವವನು ಈ ವೀರಗಲ್ಲು ನೆಟ್ಟ ವಿಚಾರವಿದೆ.

**ಯುದ್ಧದಲ್ಲಿ ಹೋರಾಡಿ ಮಡಿದ ವೀರರ ವೀರಗಲ್ಲುಗಳು:** ಇಂತಹ ವೀರಗಲ್ಲುಗಳು ಸಾಮಾನ್ಯವಾಗಿ ಶಾಸನವನ್ನು & ಶಿಲ್ಪವನ್ನು ಹೊಂದಿರುತ್ತವೆ. ಪಾಠ ಇಲ್ಲದಿರುವ ವೀರಗಲ್ಲುಗಳು ಅನೇಕ ಸಂಖ್ಯೆಯಲ್ಲಿ ದೊರೆಯುತ್ತವೆ. ಇಲ್ಲಿ ಶಿಲ್ಪಿಯಾದವನು ಸಹಜವಾಗಿ ತನ್ನ ಸಮಕಾಲೀನ ಆಯುಧಗಳನ್ನು, ವೀರರ ಉಡುಪುಗಳನ್ನು ಅವರು ಬಳಸುತ್ತಿದ್ದ ವಾಹನಗಳನ್ನು ನಿರೂಪಿಸಿರುತ್ತಾನೆ. ಈ ಕಾರಣದಿಂದ ಶಿಲ್ಪವು ನಮಗೆ ಅಂದಿನ ಯುದ್ಧದ ಚಿತ್ರಣವನ್ನು ಪುನರಚಿಸುವಲ್ಲಿ ನೆರವಾಗುತ್ತದೆ. ಈ ಯುದ್ಧಗಳಿಗೆ ರಾಜಮನೆತನಗಳ ಮತ್ಸರ, ದಯಾದಿ ವೈಮನಸ್ಸು, ಅರಸ-ಸಾಮಾಂತರ ಘರ್ಷಣೆ & ಕೆಲವೊಮ್ಮೆ ದೌರ್ಜನ್ಯದ ಪ್ರತಿಭಟನೆಯೂ ಕಾರಣವಾಗಿದ್ದವು. ಇಂಥ ಶಾಸನವೊಂದು ಸವಣೂರು ತಾಲ್ಲೂಕಿನ ಹುರಳಿಕುಪ್ಪ ಗ್ರಾಮದಲ್ಲಿರುವ ಈಶ್ವರ ದೇವಾಲಯದ ಆವರಣದಲ್ಲಿದೆ. ಇದು ೧೩ ನೇ ಶತಮಾನಕ್ಕೆ ಸೇರಿದ್ದು, ಯಾಧವ ಸಿಂಘಣನ ಕಾಲದ್ದಾಗಿದೆ. ಈ ವೀರಗಲ್ಲು ಚೂರಿಯ ನವಿಲೆನಾಯಕ ಯುದ್ಧದಲ್ಲಿ ವೀರಮರಣ ಹೊಂದಿದ ಬಗ್ಗೆ ತಿಳಿಸುತ್ತದೆ.

ಮೇಲಿನ ಚಿತ್ರದಲ್ಲಿರುವ ವೀರಗಲ್ಲು ಹುರಳಿಕುಪ್ಪಿ ಗ್ರಾಮದ ಊರ ಹೊರಗೆ ಗಣೇಶಪ್ಪ ಕಲಕೋಟಿ ಇವರ ಹೊಲದಲ್ಲಿ ಇದೆ. ಇದು ೭ ಅಡಿ ಎತ್ತರದ, ೪ ಹಂತಗಳನ್ನು ಹೊಂದಿದ ಬೃಹತ್ ವೀರಗಲ್ಲಾಗಿದೆ. ೧ನೇ ಹಂತದಲ್ಲಿ ಆನೆ, ಕುದುರೆಗಳ ಮೇಲೇರಿ ಬಂದ ವೈರಿಗಳೊಡನೆ ಹೋರಾಡುವ ದೃಶ್ಯವಿದೆ, ೨ನೇ ಹಂತದಲ್ಲಿ ಅಪ್ಸರೆಯರು ವೀರನನ್ನು

ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯ ಮನೋಜ್ಞವಾಗಿದ್ದು, ಆಕಾಶದಲ್ಲಿ ತೇಲಾಡುವಂತೆ ಖಂಡರಿಸಲಾಗಿದೆ. ೩ನೇ ಹಂತದಲ್ಲಿ ಪೀಠದ ಮೇಲೆ ಕುಳಿತ ವೀರ ಮತ್ತು ಸೇವಕಿಯರಿದ್ದಾರೆ. ೪ನೇ ಹಂತದಲ್ಲಿ ಕಲ್ಲು ಮಂಟಪದೊಳಗೆ ಪುಷ್ಪ & ಎರಡೂ ಬದಿಗಳಲ್ಲಿ ಅಸ್ಪಷ್ಟ ಶಿಲ್ಪಗಳಿವೆ.

ಕಡಕೋಳ ಗ್ರಾಮದ ಕಲ್ಲೇಶ್ವರ ಗುಡಿ ಎದುರು ೧೪ ನೇ ಶತಮಾನಕ್ಕೆ ಸೇರಿದ ವೀರಗಲ್ಲೊಂದಿತ್ತು, ಅದು ಮಲ್ಲಪ್ಪನು ಯುದ್ಧದಲ್ಲಿ ಮಡಿದ ವಿಷಯವನ್ನು ತಿಳಿಸುತ್ತದೆ. ಆದರೆ ಸಧ್ಯದಲ್ಲಿ ಅಂತಹ ವೀರಗಲ್ಲು ಅಲ್ಲಿ ಇರುವುದಿಲ್ಲ. ಅದೇ ಗ್ರಾಮದ ಹನುಮಾನ್ ದೇವಾಲಯದ ಹಿಂಭಾಗದಲ್ಲಿ ಒಡೆದುಹೋದ ವೀರಗಲ್ಲೊಂದಿದ್ದು, ಮೇಲಿನ ವೀರಗಲ್ಲು ಇದಾಗಿರಬಹುದೆಂದು ಹೇಳಬಹುದು.

ಹತ್ತಿಮತ್ತೂರಿನ ಹೊಂಡದ ಕಟ್ಟೆಯ ಮೇಲೆ ೩ ಹಂತಗಳ ವೀರಗಲ್ಲು ಇದ್ದು, ೧ನೇ ಹಂತ ನೆಲದಲ್ಲಿ ಹೂತು ಹೋಗಿದೆ. (ಸಿಮೆಂಟ್ ಮಾಡಿದ್ದಾರೆ) ೨ನೇ ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೂಯ್ಯುವ ದೃಶ್ಯವಿದೆ. ಇದರ ಮೇಲ್ಭಾಗದಲ್ಲಿ ಶಾಸನ ಸಾಲುಗಳಿದ್ದು, ಮಲ್ಲೇಯನಾಯಕನ ವೀರಮರಣವನ್ನು ಉಲ್ಲೇಖಿಸುತ್ತವೆ. ೩ನೇ ಹಂತದಲ್ಲಿ ಎತ್ತರದ ಪೀಠದ ಮೇಲೆ ಕುಳಿತ ವೀರನಿದ್ದು, ಇಕ್ಕೆಲಗಳಲ್ಲಿ ಚವರಿಧಾರೆಯರಿದ್ದಾರೆ.

**ನೆತ್ತರುಗೆಯ್ ಕೊಡುಗೆ ವೀರಗಲ್ಲು:** ಯುದ್ಧದಲ್ಲಿ ಮಡಿದ ವೀರರನನ್ನು ಆಶ್ರಯಿಸಿ ಅವನ ತಂದೆ-ತಾಯಿ, ಹೆಂಡತಿ-ಮಕ್ಕಳು, ಬಂಧು-ಬಳಗದವರು ಇರುತ್ತಿದ್ದರು, ವೀರನ ಮರಣದ ನಂತರ ಅವನ ಕುಟುಂಬದವರ ಜೀವನ ನಿರ್ವಹಣೆಗಾಗಿ ಅರಸನಾಗಲಿ, ಒಡೆಯನಾಗಲಿ, ಅಧಿಕಾರಿಯಾಗಲೀ, ದತ್ತಿ (ದಾನ) ಬಿಡುವ ಪರಿಪಾಠವಿತ್ತು. ಇದನ್ನು ನೆತ್ತರು ಕೊಡುಗೆ ಎಂದು ಕರೆಯುತ್ತಿದ್ದರು. ಇಂಥ ಒಂದು ಶಾಸನ ಸವಣೂರು ತಲ್ಲೂಕಿನ ಹೊಸಳ್ಳಿಯಲ್ಲಿ ಸಿಕ್ಕಿದೆ ೧೦ ಅಥವಾ ೧೧ನೇ ಶತಮಾನಕ್ಕೆ ಸೇರಿದ ಈ ತೃಟಿತ ವೀರಗಲ್ಲು ಹೊಸಳ್ಳಿಯಿಂದ ಅರ್ಧ ಕಿ.ಮೀ. ದೂರದಲ್ಲಿರುವ ಹನುಮಂತರಾಯ ಗುಡಿಯ ಮುಂದೆ ಇದೆ. ಪಡೆವಳ ಎರೆಯಮ್ಮನು ಯುದ್ಧದಲ್ಲಿ ವೀರಮರಣ ಹೊಂದಲಾಗಿ ಅವನ ಕುಟುಂಬಕ್ಕೆ ನೆತ್ತರು ಕೊಡುಗೆಯಾಗಿ ಭೂಮಿಯನ್ನು ದಾನವಾಗಿ ನೀಡಿದ ವಿಚಾರವನ್ನು ತಿಳಿಸುತ್ತದೆ. ೧ನೇ ಹಂತದಲ್ಲಿ ಭರ್ಚಿಗಳ ಸಮೂಹದಿಂದ ಆಕ್ರಮಣ ಮಾಡುವ ದೃಶ್ಯ, ೨ನೇ ಹಂತದಲ್ಲಿ ಶಾಸನದ ಕೆಳಗೆ ಚವರಿಧಾರೆಯರೊಂದಿಗಿನ ವೀರನ ಶಿಲ್ಪ ನಾಶವಾಗಿದೆ, ೩ನೇ ಹಂತದಲ್ಲಿ ನಂದಿ, ಲಿಂಗು, ಸೂರ್ಯಚಂದ್ರ & ಧ್ಯಾನಾಸಕ್ತ ಮೂರ್ತಿಗಳಿವೆ. ಶಿಲೆಗೆ ಕಪ್ಪು ಬಣ್ಣ ಹಚ್ಚಲಾಗಿದೆ.

**ಮಂಟಗಣಿಯ ಬ್ರಹ್ಮಲಿಂಗೇಶ್ವರ ವೀರಗಲ್ಲು:** ಪಂಪಣ್ಣ ಶಿಂಗಿಯವರ ಕಣದಲ್ಲಿ ಈ ವೀರಗಲ್ಲು ಇದೆ. ಸುಮಾರು ೫ ೧/೨ ಅಡಿ ಎತ್ತರ ೪ ೧/೨ ಅಡಿ ಅಗಲವಿರುವ ಬೃಹತ್ ವೀರಗಲ್ಲು ಇದಾಗಿದ್ದು, ೩ ಹಂತಗಳನ್ನು ಹೊಂದಿದೆ. ೧ನೆ ಹಂತದಲ್ಲಿ ಕುರಿ ಉಣ್ಣೆಯನ್ನು ಕತ್ತರಿಸುವ ಕತ್ತರಿಯ ಆಕಾರದ ಚಿತ್ರವಿದೆ. ೨ನೇ ಹಂತದಲ್ಲಿ ಗಿಡ, ಚವರಿ, ಶಂಖ, ಖಡ್ಗ & ಚಕ್ರಗಳಿವೆ. ಇದರ ಮಧ್ಯದಲ್ಲಿ ಮೂರ್ತಿ ಇದ್ದು, ೨ ಅಡ್ಡ ಮೀನುಗಳು ಅಲ್ಲದೆ ನಂದಿ, ಚಂದಿರನ ಉಬ್ಬು ಶಿಲ್ಪಗಳಿವೆ. ೩ನೇ ಹಂತದಲ್ಲಿ ಹಳೆಗನ್ನಡ ಶಾಸನ ಸಾಲುಗಳಿದ್ದು, ಎಡಭಾಗದಲ್ಲಿ ಸ್ಪಷ್ಟವಾಗಿ ಗೋಚರಿಸುವುದಿಲ್ಲ. ರಾಷ್ಟ್ರಕೂಟ ಮೂರನೆಯ ಗೋವಿಂದನ ಹೆಸರನ್ನು ಹೊಂದಿರುವ ಇದು ವೀರನೊಬ್ಬನ ಮರಣವನ್ನು ಉಲ್ಲೇಖಿಸುತ್ತಿದ್ದು, ಅವನ ಹೆಸರು ತೃಟಿತಗೊಂಡಿದೆ. ಈ ಶಾಸನ ಕಾಣ್ಣಲಗಾಮುಣ್ಡನ ಹೆಸರನ್ನು ಉಲ್ಲೇಖಿಸುತ್ತದೆ.

**ಸವಣೂರು ಐ.ಬಿ. ಎದುರಿಗಿರುವ ದುರುಗಮ್ಮನ ಗುಡಿಯ ಮುಂದಿರುವ ವೀರಗಲ್ಲು:** ಇದರ ೧ನೇ ಸ್ಥರ ನೆಲದಲ್ಲಿ ಹೂತಿದೆ. ೨ನೇಸ್ಥರದಲ್ಲಿ ವೀರನನ್ನು ತೋಳುಗಳಿಂದ ಬಳಿಸಿ ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯವಿದೆ. ೩ನೇ ಹಂತದಲ್ಲಿ ನಂದಿ, ಲಿಂಗು ಮತ್ತು ಕೈಮುಗಿದು ಕುಳಿತ ವೀರನ ಶಿಲ್ಪಗಳಿವೆ.

**ಹೂವಿನ ಶಿಗ್ಲಿ ಹನುಮಂತದೇವರ ಗುಡಿ ಮುಂದಿರುವ ವೀರಗಲ್ಲು:** ಒಂದನೆಯ ಹಂತ ನೆಲದಲ್ಲಿ ಹೂತುಹೊಗಿದ್ದು, ಸ್ವಲ್ಪಭಾಗ ಗೋಚರಿಸುತ್ತದೆ. ೨ನೇ ಹಂತದಲ್ಲಿ ಅಪ್ಸರೆಯರೊಂದಿಗೆ ವೀರನ ದೃಶ್ಯವಿದೆ. ೩ನೇ ಹಂತ ಅರ್ಧಭಾಗ ಒಡೆದು ಹೋಗಿದೆ.

ಇದೇ ದೇವಾಲಯದ ಹೊರಬಾಗದಲ್ಲಿರುವ ನೀರಿನ ಟ್ಯಾಂಕ್ ಬಳಿಯಲ್ಲಿ ಸುಂದರ ತೃಟಿತ ವೀರಗಲ್ಲಿನ ಸಿಲ್ಪವಿದೆ. ೧ನೇ ಹಂತ ಒಡೆದು ಹೋಗಿದೆ. ೨ನೇ ಹಂತದಲ್ಲಿ ಚವರಿಧಾರೆಯರಾದ ಅಪ್ಸರೆಯರು ಮಂಟಪದಲ್ಲಿ ಕುಳಿತ ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯವಿದೆ. ೩ನೇ ಹಂತದಲ್ಲಿ ನಂದಿ, ಲಿಂಗು, ಅರ್ಚಕ & ಕೈಮುಗಿದು ಕುಳಿತ ವೀರನ ಶಿಲ್ಪವಿದೆ.

**ಕಾರಡಗಿಯ ವೀರಗಲ್ಲುಗಳು**

**ಕುದುರೆ ಕಾಳಗದ ವೀರಗಲ್ಲು:** ಕಾರಡಗಿ ವೀರಭದ್ರೇಶ್ವರ ದೇವಾಲಯದ ಆವರಣದಲ್ಲಿರುವ ಈ ವೀರಗಲ್ಲು ೬ ಅಡಿ



(ಕೋಡಿ ಹೊನ್ನಮ್ಮ ದೇವಾಲಯದ ಪಕ್ಕದಲ್ಲಿರುವ ವೀರಗಲ್ಲು ಹತ್ತಿಮತ್ತೂರು.)



ಬಸವೇಶ್ವರ ದೇವಾಲಯದ ಮುಂದೆ ಇರುವ ತುರುಗೋಳ್ ಶಿಲ್ಪ ಚಳ್ಳಾಳ



ಬರಮಪ್ಪ ದೇವರು ಎಂದು ಕರೆಯುವ ತುರುಗೋಳ್ ಶಿಲ್ಪ ಚೆಲ್ಲಾಪುರ. (ಚಿಕ್ಕ ಗುಡಿಯಲ್ಲಿದೆ)



ಆಂಜನೇಯ ದೇವಾಲಯದ ಮುಂದೆ (ಊರಿನಿಂದ ಅರ್ಧ ಕಿ.ಮೀ ದೂರ) ಇರುವ ವೀರಗಲ್ಲು ಹೊಸಳ್ಳಿ



ಈಶ್ವರ ದೇವಾಲಯದ ಹಿಂಭಾಗದಲ್ಲಿರುವ ವೀರಗಲ್ಲು, ಚಿಲ್ಲೂರು



ಕೋಡಿಬಸವೇಶ್ವರ ದೇವಾಲಯದ ಮುಂದೆ (ಕೆರೆ ಏರಿ) ಇರುವ ವೀರಗಲ್ಲು ಹತ್ತಿಮತ್ತೂರು



ಗಣೇಶಪ್ಪ ಕಲಕೋಟಿ ಇವರ ಹೊಲದಲ್ಲಿರುವ ಬೃಹತ್ ವೀರಗಲ್ಲು, ಹುರಳಿಕುಪ್ಪಿ



ಆಂಜನೇಯ ದೇವಾಲಯದ ಮುಂದೆ (ಊರಿನಿಂದ ಅರ್ಧ ಕಿ.ಮೀ ದೂರ) ಇರುವ ವೀರಗಲ್ಲು ಹೊಸಳ್ಳಿ



ಹೊಂಡದ ಕಟ್ಟೆಯ ಮೇಲಿರುವ ವೀರಗಲ್ಲು ಹತ್ತಿಮತ್ತೂರು



ಪಂಪಣ್ಣ ಶಿಂಗಿ ಇವರ ಕಣದಲ್ಲಿರುವ ವೀರಗಲ್ಲು ಮಂಟಗಣಿ



ಆಂಜನೇಯ ದೇವಾಲಯದ ಹಿಂಭಾಗದಲ್ಲಿರುವ ತೃಟಿತ ವೀರಗಲ್ಲು ಕಡಕೋಳ



ಐ.ಬಿ. ಎದುರಿನಲ್ಲಿರುವ ದುರುಗಮ್ಮ ದೇವಾಲಯದ ಮುಂದೆ ಇರುವ ವೀರಗಲ್ಲು ಸವಣೂರು

ಎತ್ತರ ೨ ೧/೨ ಅಡಿ ಅಗಲವಿದೆ. ೩ ಹಂತಗಳಲ್ಲಿರುವ ಇದರ ಮೊದಲನೆಯ ಹಂತದಲ್ಲಿ ಎರಡೂ ಕಡೆಗಳಲ್ಲಿ ಕುದುರೆ ಏರಿಬಂದ ವೈರಿಗಳ ವಿರುದ್ಧ ಸೆಣಸಾಡುವ ದೃಶ್ಯವಿದ್ದು, ವೀರನು ತನ್ನ ಕಾಲಲ್ಲಿ ವೈರಿಯನ್ನು ಮೆಟ್ಟಿ ನಿಂತಿದ್ದಾನೆ. ಈ ಹಂತದ ಒಂದು ಭಾಗ ಒಡೆದಿದೆ. ೨ನೇ ಹಂತದಲ್ಲಿ ಚವರಿಧಾರೆಯರಾದ ಅಪ್ಸರೆಯರು ಮಂಟಪದಲ್ಲಿ ಕುಳಿತ ವೀರನನ್ನು ಸ್ವರ್ಗಕ್ಕೆ ಒಯ್ಯುವ ದೃಶ್ಯವಿದೆ. ೩ನೇ ಹಂತದಲ್ಲಿ ನಂದಿ, ಲಿಂಗು, ಆರಾಧಕ ಹಾಗೂ ಧ್ಯಾನಸಕ್ತ (ಸ್ವರ್ಗಸ್ಥ) ವೀರನ ಶಿಲ್ಪಗಳಿವೆ.

**ವೀರಭದ್ರ ದೇವಾಲಯದ ಮುಂದಿರುವ ವೀರಗಲ್ಲು:** ಸುಮಾರು ೩ ಅಡಿ ಎತ್ತರ ೨ ೧/೨ ಅಡಿ ಅಗಲವಿರುವ ಇದು ಒಬ್ಬನೇ ವೀರನ ಶಿಲ್ಪವಾಗಿದೆ. ವೀರನು ತಲೆಗೆ ಕಿರೀಟ, ಕಿವಿಯಲ್ಲಿ ಕುಂಡಲಗಳು, ಕೊರಳಿಗೆ ಹಾರ, ಕೈಗಳಿಗೆ ಕಡಗ & ತೋಳ್ಬಂದಿ ಹಾಗೂ ಗಂಡುಗಚ್ಚೆ ಹಾಕಿ ನಡುವಲ್ಲಿ ಬಾಕು ಧರಿಸಿದ್ದಾನೆ. ಬಿಲ್ಲು-ಬಾಣ ಹಿಡಿದ ವೀರನ ಬೆನ್ನಿಗೆ ಬತ್ತಳಿಕೆ ಇದೆ. ಮೇಲ್ಭಾಗದಲ್ಲಿ ನಂದಿ & ಲಿಂಗು ಶಿಲ್ಪಗಳಿವೆ.

**ಕಾರಡಗಿ ಬಸ್ ನಿಲ್ದಾಣದ ಬಳಿ (ಸರಕಾರಿ ಪ್ರಾಥಮಿಕ ಶಾಲೆಯ ಬಳಿ) ಇರುವ ವೀರಗಲ್ಲುಗಳು:** ಸುಮಾರು ೪ ಅಡಿ ಅಗಲವಿರುವ ಒಂದು ವೀರಗಲ್ಲು ಇದ್ದು, ಕೆಳಭಾಗ ನೆಲದಲ್ಲಿ ಹೂತಿದೆ ಮತ್ತು ಮೇಲ್ಭಾಗ ಒಡೆದು ಹೋಗಿದೆ. ಕೆಳಗೆ ಹೋರಾಟದ ದೃಶ್ಯ ಸ್ವಲ್ಪಭಾಗ ಗೋಚರಿಸುತ್ತದೆ. ಇದರ ಮೇಲಿನ ಸ್ಥರದಲ್ಲಿ ಅಪ್ಸರೆಯರು ವೀರನನ್ನು ಕೊಂಡೊಯ್ಯುವ ದೃಶ್ಯವಿದ್ದು, ಅದರ ಮೇಲಿನ ಸ್ಥರ ಒಡೆದು ಹೋಗಿದೆ. ಇದರ ಪಕ್ಕದಲ್ಲಿ ಒಂದು ಗೊಂಬೆ ಶಿಲ್ಪವಿದೆ.

ಇದರ ಸಮೀಪದಲ್ಲಿ ತೃಟಿತ ವೀರಗಲ್ಲು ಇದ್ದು, ಗೋಚರಿಸುತ್ತಿರುವ ಹಂತದಲ್ಲಿ ಮಂಟಪದಲ್ಲಿ ಕುಳಿತ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯವಿದ್ದು, ಇಕ್ಕೆಲಗಳಲ್ಲಿ ಚವರಿಧಾರೆಯರಿದ್ದಾರೆ. ಮೇಲಿನ ಹಂತದಲ್ಲಿ ಲಿಂಗು, ಆರಾಧಕ, ಸೂರ್ಯ-ಚಂದ್ರ & ಪೀಠದ ಮೇಲೆ ಕೈಮುಗಿದು ಕುಳಿತಿರುವ ವೀರನ ಶಿಲ್ಪಗಳಿವೆ. ಮೇಲೆ ತಿಳಿಸಿದ ಈ ಕಲ್ಲುಗಳಿಗೆ, ಊರಲ್ಲಿ ದನಗಳು ಕರುವನ್ನು ಹಾಕಿದರೆ, ಗೀಬಿನ ಹಾಲನ್ನು ತಂದು ಹಾಕುವ ಪದ್ಧತಿ ಈಗಲೂ ಇದೆ.

**ಚವಡಾಳ ಕುದುರೆ ಕಾಳಗದ ಶಿಲ್ಪ:** ಕುದುರೆ ಏರಿಬಂದ ವೈರಿಗಳನ್ನು ಕುದುರೆ ಮೇಲೆ ಕುಳಿತು ಎದುರಿಸುತ್ತಿರುವ & ವೀರನ ಕುದುರೆ ವೈರಿ ಸೈನಿಕನನ್ನು ತುಳಿದ ದೃಶ್ಯ ೧ನೇ ಹಂತದಲ್ಲಿದೆ. ಅಪ್ಸರೆಯರು ವೀರನನ್ನು ತೋಳುಗಳಿಂದ ಬಳಸಿರುವ ದೃಶ್ಯ ೨ನೇ ಹಂತದಲ್ಲಿದೆ. ೩ನೇ ಹಂತದಲ್ಲಿ ಲಿಂಗು, ಅರ್ಚಕ & ಕೈಮುಗಿದು ಕುಳಿತ ವೀರನ ಶಿಲ್ಪಗಳಿವೆ. ೨ ೧/೨ ಅಡಿ ಎತ್ತರ ೧ ಅಡಿ ಅಗಲವಿರುವ ಈ ವೀರಗಲ್ಲು ಗ್ರಾಮದ ಬಸವೇಶ್ವರ ದೇವಾಲಯದಲ್ಲಿದೆ.

**ಗೋವಿನಾಳ ವೀರಗಲ್ಲು:** ಗ್ರಾಮದ ಹೊರಗೆ ಇರುವ ನಿಂಗಪ್ಪ ಎಂ. ಮಣ್ಣೂರ ಇವರ ಹೊಲದ ಬೇವಿನ ಮರದ ಕೆಳಗೆ ಇರುವ ಇದು ೪ ಅಡಿ ಎತ್ತರ ೩ ೧/೨ ಅಡಿ ಅಗಲ ಇದೆ. ಬಿಲ್ಲು-ಬಾಣಗಳನ್ನು ಹಿಡಿದು ನಿಂತಿರುವ ಇಬ್ಬರು ವೀರರ ಶಿಲ್ಪಗಳಿದ್ದು, ಬೆನ್ನ ಹಿಂದೆ ಬತ್ತಳಿಕೆ ಧರಿಸಿದ್ದಾರೆ. ಸೊಂಟದಲ್ಲಿರುವ ಬಾಕುವನ್ನು ಬಲಗೈಯಲ್ಲಿ ಹಿಡಿದ ಈ ವೀರರು ಕಿವಿಗೆ ಕುಂಡಲಿ, ಕೊರಳಿಗೆ ಹಾರ ಧರಿಸಿದ್ದಾರೆ. ಒಬ್ಬ ವೀರ ಕಿರೀಟ ಧರಿಸಿದ್ದರೆ, ಇನ್ನೊಬ್ಬ ತುರುಬನ್ನು ಹಾಕಿದ್ದಾನೆ. ಈ ಶಿಲ್ಪಗಳ ಮೇಲ್ಭಾಗದಲ್ಲಿ ಭರ್ಚಿಹಿಡಿದು ಕುದುರೆ ಏರಿ ಹೊರಟ ವೀರನ ಚಿಕ್ಕ ಶಿಲ್ಪವಿದೆ.

**ಚಿಲ್ಲೂರಿನ ವೀರಗಲ್ಲುಗಳು:** ಪಾಳುಬಿದ್ದ ಈಶ್ವರ ದೇವಾಲಯದ ಮುಂದೆ ೨ ವೀರಗಲ್ಲುಗಳಿವೆ. ಒಂದು ವೀರಗಲ್ಲು ೪ ೧/೨ ಅಡಿ ಎತ್ತರ ೩ ಅಡಿ ಅಲಗವಿದ್ದು, ೩ ಹಂತಗಳನ್ನು ಹೊಂದಿದೆ. ೧ನೇ ಹಂತದಲ್ಲಿ ಆಳೆತ್ತರದ ಬಿಲ್ಲುಹಿಡಿದು ವೈರಿಯನ್ನು ಕಾಲಿನಲ್ಲಿ ಮೆಟ್ಟಿನಿಂತು ವಿರೋಧಿಪಡೆಯ ಕಾಲ್ದಳ, ಗಜದಳ ಮತ್ತು ಕುದುರೆ ದಳಗಳೊಂದಿಗೆ ಹೋರಾಡುವ ದೃಶ್ಯವಿದೆ. ೨ನೇ ಹಂತದಲ್ಲಿ ಮಂಟಪದಲ್ಲಿ ಕುಳಿತ ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ಅಪ್ಸರೆಯರ ಶಿಲ್ಪಗಳಿವೆ. ೩ನೇ ಹಂತ ತೃಟಿತಗೊಂಡಿದ್ದು, ಧ್ಯಾನಾಸಕ್ತ ವೀರನ ಶಿಲ್ಪ ಮಾತ್ರ ಕಾಣುತ್ತದೆ.

ಇದರ ಪಕ್ಕದಲ್ಲಿಯೇ ೩ ಹಂತಗಳನ್ನು ಹೊಂದಿದ ೪ ೧/೨ ಅಡಿ ಎತ್ತರ, ೨ ೧/೨ ಅಡಿ ಅಗಲದ ವೀರಗಲ್ಲು ಇದೆ. ೧ನೇ ಹಂತದಲ್ಲಿ ವೀರನು ಬಿಲ್ಲು-ಬಾಣ ಹಿಡಿದು ಕುದುರೆ & ಕಾಲಾಳುಗಳೊಂದಿಗೆ ಹೋರಾಡುವ ದೃಶ್ಯವಿದೆ. ೨ನೇ ಹಂತದಲ್ಲಿ ಅಪ್ಸರೆಯರೊಂದಿನ ವೀರನ ಶಿಲ್ಪವಿದೆ & ೩ನೇ ಹಂತದಲ್ಲಿ ನಂದಿ, ಲಿಂಗು ಮುಂತಾದ ಅಸ್ಪಷ್ಟ ಶಿಲ್ಪಗಳಿವೆ.

**ಜೆಲ್ಲಾಪುರದ ವೀರಗಲ್ಲು:** ಗ್ರಾಮದಿಂದ ೧ ಕಿ.ಮೀ. ದೂರದಲ್ಲಿರುವ ವೀರಣ್ಣ ಉಂಡಳ್ಳಿಯವರ ಹೊಲದಲ್ಲಿ ಬೇವಿನ ಮರದ ಕೆಳಗೆ ಸುಮಾರು ೬ ಅಡಿ ಎತ್ತರದ ೩ ಹಂತಗಳ ವೀರಗಲ್ಲು ಇದೆ. ಇದು ೨ ಭಾಗಗಳಾಗಿ ಒಡೆದು ಬಿದ್ದಿದೆ. ೧ನೇ ಸ್ಥರದಲ್ಲಿ ಕುದುರೆ ಏರಿ ಬಂದ ವೈರಿಗಳೊಂದಿಗೆ ಹೋರಾಡುವ ದೃಶ್ಯವಿದ್ದು, ಕಾಲಕೆಳಗೆ ೨ ಹೆಣಗಳು ಬಿದ್ದಿವೆ. ೨ನೇ ಸ್ಥರದಲ್ಲಿ ಅಪ್ಸರೆಯರೊಂದಿಗಿನ ವೀರನ ಶಿಲ್ಪವಿದ್ದರೆ, ೩ನೇ ಸ್ಥರದಲ್ಲಿ ಸ್ವರ್ಗಸ್ಥವೀರನ ಶಿಲ್ಪವಿದೆ.

**ಕುರುಬರ ಮಲ್ಲೂರಿನ ವೀರಗಲ್ಲು:** ಹನುಮಂತ & ಬಸವೇಶ್ವರ (ಒಟ್ಟಿಗೆ) ದೇವಾಲಯದ ಮುಂದೆ ೩ ಹಂತಗಳ ವೀರಗಲ್ಲು ಇದೆ. ಮೊದಲನೇ ಹಂತದ ಹೋರಾಟದ ದೃಶ್ಯ ಸ್ವಲ್ಪಭಾಗ ಮಾತ್ರ ಕಾಣುತ್ತಿದ್ದು ಉಳಿದಿದ್ದು ನೆಲದಲ್ಲಿ ಹೂತುಹೋಗಿದೆ. ೨ನೇ ಹಂತದಲ್ಲಿ ೩ ಮಂಟಪಗಳಿದ್ದು, ಮಧ್ಯದಲ್ಲಿ ವೀರನ ಇಕ್ಕೆಲಗಳಲ್ಲಿ ಅಪ್ಸರೆಯರಿದ್ದಾರೆ. ೩ನೇ ಹಂತದಲ್ಲಿ ನಂದಿ, ಲಿಂಗು, ಅರ್ಚಕ & ಸ್ವರ್ಗಸ್ಥವೀರನ ಶಿಲ್ಪಗಳಿವೆ. ವೀರಗಲ್ಲಿನ ಮೇಲ್ಭಾಗವನ್ನು ಗೋಪುರದ ಮಾದರಿಯಲ್ಲಿ ಖಂಡರಿಸಲಾಗಿದೆ.

## ಮೆಳ್ಳಾಗಟ್ಟಿಯ ವೀರಗಲ್ಲುಗಳು

**ಆನೆಕಾಳಗದ ವೀರಗಲ್ಲು:** ಬಸಟ್ಟೆಪ್ಪಗೌಡ ಪಟ್ಟಣಶೆಟ್ಟಿ ಇವರ ಮನೆಯ ಮುಂದೆ ಇರುವ ಇದು ೩ ಹಂತಗಳನ್ನು ಹೊಂದಿದೆ. ೧ನೇ ಹಂತದಲ್ಲಿ ಎರಡೂ ಬದಿಗಳಲ್ಲಿ ಆನೆಗಳನ್ನು ಏರಿದ, ವೀರರ ಮಧ್ಯದಲ್ಲಿ ಇಬ್ಬರು ವೀರರು ಹೋರಾಡುತ್ತಿರುವ ದೃಶ್ಯವಿದ್ದು, ಇದರ ಕೆಳಭಾಗ ನೆಲದಲ್ಲಿ ಹೂತಿದೆ. ೨ನೇ ಹಂತದಲ್ಲಿ ವೀರನನ್ನು ತಮ್ಮ ತೋಳುಗಳಲ್ಲಿ ಬಳಸಿ ಗಾಳಿಯಲ್ಲಿ ತೇಲಾಡುತ್ತಿರುವಂತೆ ಅಪ್ಸರೆಯರನ್ನು ಖಂಡರಿಸಲಾಗಿದೆ. ೩ನೇ ಹಂತದಲ್ಲಿ ಕರುವಿಗೆ ಹಾಲುಣಿಸುವ ಆಕಳು & ಮತ್ತೆರಡು ಶಿಲ್ಪಗಳಿವೆ.

ಇದೇ ಗ್ರಾಮದ ಆಂಜನೇಯ ದೇವಾಲಯದ ಮುಂಭಾಗದಲ್ಲಿ ೫ ಅಡಿ ಎತ್ತರದ, ೪ ಹಂತಗಳನ್ನು ಹೊಂದಿದ ಉದ್ದಕ್ಕೆ ಒಡೆದ ವೀರಗಲ್ಲು ಇದೆ. ೧ ಮತ್ತು ೨ನೇ ಹಂತಗಳಲ್ಲಿ ಕುದುರೆ ಕಾಳಗದ ದೃಶ್ಯ, ೨ನೇ ಹಂತದಲ್ಲಿ ಶಿಲಾ ಮಂಟಪದಲ್ಲಿ ಕುಳಿತ ಇಬ್ಬರು ವೀರರು & ಅಪ್ಸರೆಯರ ದೃಶ್ಯ ಹಾಗೂ ೩ನೇ ಹಂತ ಒಡೆದು ಹೋಗಿದೆ.

**ಹಿರೇಮುಗದೂರಿನ ವೀರಗಲ್ಲು:** ಗ್ರಾಮದ ಹೊರಭಾಗದಲ್ಲಿರುವ ದುರ್ಗಾದೇವಿ ಗುಡಿಯ ಮುಂದೆ ಇರುವ ಇದು ೩ ಹಂತಗಳನ್ನು ಹೊಂದಿದೆ. ೧ನೇ ಹಂತ ಅರ್ಧಕ್ಕೆ ಒಡೆದಿದ್ದು, ಹೋರಾಟದ ದೃಶ್ಯವಿದೆ. ೨ನೇ ಹಂತದಲ್ಲಿ ಚವರಿಧಾರಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯವಿದೆ. ೩ನೇ ಹಂತದಲ್ಲಿ ಸ್ವರ್ಗಸ್ಥವೀರ, ಲಿಂಗು & ಅರ್ಚಕನ ಶಿಲ್ಪಗಳಿವೆ.

**ಹತ್ತಿಮತ್ತೂರಿನ ತೃಟಿತ ಎರಡು ವೀರಗಲ್ಲುಗಳು:** ಹತ್ತಿಮತ್ತೂರಿನ ಊರ ಹೊರಗೆ, ಕೆರೆಯ ದಂಡೆಯ ಕೆಳಗಿರುವ ತೋಟದ ದುರುಗಮ್ಮ ದೇವಾಲಯದ ಪಕ್ಕದಲ್ಲಿ ಎರಡು ಭಗ್ನಗೊಂಡ ವೀರಗಲ್ಲುಗಳಿವೆ. ಒಂದು ವೀರಗಲ್ಲಿನಲ್ಲಿ ಯುದ್ಧದ ದೃಶ್ಯ ಮತ್ತು ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಒಯ್ಯುವ ದೃಶ್ಯವಿದೆ. ಇನ್ನೊಂದು ವೀರಗಲ್ಲು ಉದ್ದಕ್ಕೆ ಒಡೆದಿದ್ದು, ಅಪ್ಸರೆ & ವೀರ ಹಾಗೂ ಮೇಲ್ಭಾಗದಲ್ಲಿ ಲಿಂಗು ಮಾತ್ರ ಗೋಚರಿಸುತ್ತವೆ.



## ಆಕರ ಗ್ರಂಥಗಳು


೧. South Indian Inscriptions. Vol. XVIII.

೨. ಧಾರವಾಡ ಜಿಲ್ಲೆಯ ಶಾಸನ ಸೂಚಿ. ಕಲಬುರ್ಗಿ ಎಂ.ಎಂ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫.

೩. ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು. ಕಲಬುರ್ಗಿ ಎಂ.ಎಂ. ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೧.

೪. ಕರ್ನಾಟಕದ ವೀರಗಲ್ಲುಗಳು, ಶೇಷಶಾಸ್ತ್ರಿ ಆರ್. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೫. ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ. ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

# ಕೊಳ್ಳೇಗಾಲದ ಅಪೂರ್ವ ಸ್ಮಾರಕ ಶಿಲ್ಪ

ಟಿ.ಎಲ್. ಜಗದೀಶ*

**ಕೊ**ಳ್ಳೇಗಾಲವು ಮೈಸೂರಿನಿಂದ ಸರಿ ಸುಮಾರು ೬೫ರಿಂದ ೭೦ ಕಿ.ಮೀ. ದೂರದಲ್ಲಿದೆ. ಕೊಳ್ಳೇಗಾಲ ಪ್ರದೇಶದಲ್ಲಿ ಸುಮಾರು ೧೨೦ ಶಾಸನಗಳು ಇದ್ದು ಗಂಗರು, ಹೊಯ್ಸಳರು, ಚೋಳರು, ವಿಜಯನಗರದ ಅರಸರು, ಹದಿನಾಡು ಪ್ರಭುಗಳು ಅಲ್ಲದೆ ಮೈಸೂರು ಅರಸರು ಆಳ್ವಿಕೆ ನಡೆಸಿರುವುದಕ್ಕೆ ಶಾಸನಗಳು ಆಧಾರಗಳೆನಿಸಿವೆ. ಆ ಶಾಸನಗಳಲ್ಲಿ ಈ ಪರಿಸರಕ್ಕೆ ಸೇರುವ ಸಿದ್ಧಯ್ಯನಪುರದ ದೊಡ್ಡರಂಗನಾಥ ದೇವಾಲಯದ ಬಳಿ ಇರುವ ಕೆರೆಯ ತೂಬಿನ ಮೇಲೆ ನೆಟ್ಟಿರುವ ಕಲ್ಲಿನ ಮೇಲೆ ಶಾಸನವನ್ನು ಕೊರೆಯಲಾಗಿದೆ. ಈ ಶಾಸನವು ಕೊಳ್ಳೇಗಾಲ ಪ್ರದೇಶದ ಅತ್ಯಂತ ಪ್ರಾಚೀನ ಶಾಸನವೆನಿಸಿದರೂ ಅದರಾಚೆಗೂ ಈ ಪ್ರದೇಶದ ಪ್ರಾಚೀನತೆ ವಿಸ್ತರಿಸಿರುವುದನ್ನು ಇತಿಹಾಸಕಾರರು ದೃಢಪಡಿಸಿದ್ದಾರೆ. ಕೊಳ್ಳೇಗಾಲ ಪ್ರದೇಶವು ಮೈಸೂರು ಪ್ರಾಂತ್ಯ ಹಾಗೂ ತಮಿಳುನಾಡಿನ ನಡುವೆ ಇರುವ ಗಡಿಯಂಚಿನ ಪ್ರಮುಖ ಪ್ರದೇಶವಾಗಿದ್ದು, ಹಲವು ಸಂದರ್ಭಗಳಲ್ಲಿ ತನ್ನ ಇರುವಿಕೆಯನ್ನು ಸಾಬೀತು ಪಡಿಸಿದೆ. ಇದಕ್ಕೆ ಶಾಸನಗಳು ಪೂರಕವೆನಿಸಿವೆ.

ಕೊಳ್ಳೆಗೆರೆ, ಕೋಳಗಾಲ ಮುಂತಾದ ಹೆಸರುಗಳಿಂದ ಗುರುತಿಸಿಕೊಂಡಿದ್ದ ಈ ಪ್ರದೇಶವು ಜೈನಧರ್ಮದ ಪ್ರಭಾವಕ್ಕೂ ಒಳಗಾಗಿರುವುದು ಗಮನಾರ್ಹ.

**ಎತ್ತಿನಬಂಡಿಯ ಪ್ರಾಚೀನತೆ:** ಎತ್ತಿನ ಬಂಡಿಯು ಪ್ರಾಚೀನ ಭಾರತೀಯ ಪರಂಪರೆಯಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸರಕನ್ನು ಸಾಗಿಸುವ ಹಾಗೂ ಸುಗಮ ಸಂಚಾರಕ್ಕೆ ಉತ್ತಮ ಸಾಗಾಣಿಕಾ ಸಾಧನವೆನಿಸಿತ್ತು. ಅದಕ್ಕಾಗಿ ಮಾರ್ಗವೊಂದನ್ನು ಸಿದ್ಧಪಡಿಸಿಕೊಳ್ಳಬೇಕಾದ ಅನಿವಾರ್ಯತೆ ಇತ್ತು. ಹಾಗಾಗಿ ಎತ್ತಿನ ಬಂಡಿಯ ಅಗತ್ಯತೆ ಕಂಡು ಬಂದಿರುವ ಸಾಧ್ಯತೆಯಿದೆ. ಹಾಗಾಗಿ ಈ ಎತ್ತಿನ ಬಂಡಿಗೆ ಪ್ರಾಚೀನ ಕಾಲದ ಪರಂಪರೆ ಇರುವುದನ್ನು ಗುರುತಿಸಬಹುದಾಗಿದೆ. ಈ ನಿಟ್ಟಿನಲ್ಲಿ ಕಾಲುನಡಿಗೆ ಹಾಗೂ ಎತ್ತಿನ ಬಂಡಿಗಳ ಮುಖೇನ ಸರಕು ಸಾಗಾಟ ನಡೆಯುತ್ತಿತ್ತು. ಕಾಲಕ್ರಮೇಣ ಇದು ಕೇವಲ ಒಂದು ಪ್ರದೇಶಕ್ಕೆ ಮಾತ್ರ ಸೀಮಿತವಾಗದೆ. ಇತರ ಪ್ರದೇಶಗಳಿಗೆ ವ್ಯಾಪಿಸಿಕೊಂಡಿರಬೇಕು. ಈ ಹಿನ್ನೆಲೆಯಲ್ಲಿ ಎತ್ತಿನ ಬಂಡಿಯು ಒಂದು ದೇಶ ಮತ್ತು ಮತ್ತೊಂದು ದೇಶದ ನಡುವೆ ವ್ಯಾಪಾರ ಸಂಪರ್ಕ ಉಂಟಾಗಲು ನಾಂದಿಯಾಯಿತೆನ್ನಬಹುದು.

ಈ ಎತ್ತಿನ ಬಂಡಿಯ ಅಸ್ತಿತ್ವವು ಸಿಂಧು ಸಂಸ್ಕೃತಿಯ ಕಾಲದಿಂದಲೂ ಇತ್ತು. ಅದಕ್ಕೆ ನಿದರ್ಶನವಾಗಿ ಅಲ್ಲಿನ ಕೆಲವು ನಿವೇಶನಗಳು ಇದಕ್ಕೆ ಸಾಕ್ಷಿಯೆನಿಸಿವೆ. ಹಾಗಾಗಿ ಈ ಎತ್ತಿನ ಬಂಡಿಯ ಅಸ್ತಿತ್ವ ಸಿಂಧೂ ಸಂಸ್ಕೃತಿ ಕಾಲದಿಂದಲೂ ಇತ್ತು ಎನ್ನುವುದಕ್ಕೆ ಅಲ್ಲಿನ ಕೆಲವು ನಿವೇಶನಗಳಲ್ಲಿ ಇಂತಹ ಆಟವಾಡುವ ಬಂಡಿಯ ಮಾದರಿಯ ಅವಶೇಷಗಳನ್ನು ಪತ್ತೆ ಮಾಡಲಾಗಿದೆ.

ಇಂತಹ ಎತ್ತಿನ ಬಂಡಿಯ ಕುರುಹುಗಳು ಸನ್ನತಿಯಲ್ಲಿ ಉತ್ಖನನ ಮಾಡಿದ ಸಂದರ್ಭದಲ್ಲಿ ಬಂಡಿಯ ಉಬ್ಬುಶಿಲ್ಪಗಳು, ಹಾಗೂ ಶಿಲಾಫಲಕಗಳ ಮೇಲೆ ಎತ್ತಿನ ಬಂಡಿಯ ಶಿಲ್ಪಗಳು ಪತ್ತೆಯಾಗಿರುವುದನ್ನು ಗಮನಿಸಬಹುದು. ಕಾಲಕ್ರಮೇಣ ಅಂದರೆ ಮುಂದಿನ ದಿನಗಳಲ್ಲಿ ದೇವಾಲಯಗಳ ಹೊರಭಿತ್ತಿಗಳಲ್ಲಿ ಎತ್ತಿನ ಗಾಡಿಯ ಬಿಡಿ ಬಿಡಿ ಶಿಲ್ಪಗಳು ಅಲ್ಲಲ್ಲಿ ಕಾಣಸಿಗುವುದು ಇದಕ್ಕೆ ಪೂರಕವೆನಿಸುತ್ತದೆ.

ಪ್ರಾಚೀನ ಎತ್ತಿನಬಂಡಿ ರಥದ ಮಾದರಿಯಲ್ಲಿದ್ದು ಕುತೂಹಲಕಾರಿಯೆನಿಸಿದೆ. ಪ್ರಾಯಶಃ ರಾಜ ಪುರುಷನೊಬ್ಬನು ಸರ್ವಾಲಂಕಾರಭೂಷಿತನಾಗಿ ಯುದ್ಧಕ್ಕೆ ಅಥವಾ ಬೇಟೆಗೆ ಹೋಗುತ್ತಿರಬಹುದೆನಿಸುತ್ತದೆ. ಹಾಗೆಂದು ಊಹಿಸಲು ಸಕಾರಣವಿದೆ. ಸ್ಮಾರಕ ಶಿಲ್ಪದಲ್ಲಿರುವ ರಾಜನ ಆಕೃತಿಯು ವೀರಾವೇಶದಿಂದ ಮುನ್ನುಗ್ಗತ್ತಿರುವಂತೆ ಭಾಸವಾಗುತ್ತದೆ. ಅದಕ್ಕೆ ಪೂರಕವೆಂಬಂತೆ ಗಾಡಿಗಳನ್ನು ಎಳೆಯುತ್ತಿರುವ ಎತ್ತುಗಳನ್ನು ಕೊರೆಯಲಾಗಿದೆ. ತಲೆಯನ್ನು ಬಾಗಿಸಿ, ಕಿವಿಯನ್ನು ನಿಮಿರಿಸಿ ಮುನ್ನುಗ್ಗುತ್ತಿರುವ ಈ ಎತ್ತುಗಳ ನಡಿಗೆಯು ಯುದ್ಧಕ್ಕೋ ಅಥವಾ ಬೇಟೆಗೋ ಸರ್ವಸನ್ನದ್ದವಾಗಿ ತೆರಳುತ್ತಿರುವಂತೆ ಶೋಭಿಸುತ್ತದೆ.

* ಕನ್ನಡ ಸಹಾಯಕ ಪ್ರಾಧ್ಯಾಪಕರು, ಮಹಾರಾಣಿ ಮಹಿಳಾ ಕಲಾ ಕಾಲೇಜು, ಮೈಸೂರು, ಮೊ. ೯೯೩೪೮೯೩೬೯೨೦




ಇಂತಹ ಬಲಶಾಲಿಯಾದ ಎತ್ತುಗಳು ಎಳೆಯುತ್ತಿರುವ ರಥ ಅಥವಾ ಬಂಡಿಯು ಗಟ್ಟಿಮುಟ್ಟಾಗಿರುವಂತೆ ಶಿಲ್ಪಿಯು ಶಿಲ್ಪವನ್ನು ಕಡೆದಿದ್ದಾನೆ. ಅಲ್ಲದೆ ಈ (ಬಂಡಿ) ಎರಡು ಗಾಲಿಗಳನ್ನು ಹೊಂದಿದ್ದು ನೊಗವನ್ನು ಕಡೆಯಲಾಗಿದೆ.

ರಾಜಠೀವಿಯಲ್ಲಿರುವ ಪುರುಷನು ಎರಡು ಎತ್ತುಗಳನ್ನು ನಿಯಂತ್ರಿಸುವ ಹಗ್ಗಗಳನ್ನು ಹಿಡಿದು ಮುನ್ನಡೆಸುತ್ತಿದ್ದಾನೆ. ರಾಜನು ಮುನ್ನಡೆಸುತ್ತಿರುವ ರಥದ ಮೇಲ್ಭಾಗದಲ್ಲಿ ಶ್ವೇತಛತ್ರಿಯಿದೆ. ಶಿಲ್ಪದಲ್ಲಿ ಕಡೆದಿರುವ ಪುರುಷನ ಶಿರದಲ್ಲಿ ಕೀರೀಟವಿದ್ದು, ಕಿವಿ ಅಗಲವಾಗಿದೆಯಲ್ಲದೆ, ಕುಂಡಲಗಳನ್ನು ಧರಿಸಿದ್ದಾನೆ. ಶಿಲ್ಪದ ಕುತ್ತಿಗೆಯ ಭಾಗದಲ್ಲಿ ಕಂಠೀಹಾರವಿದೆ. ರಾಜನ ಎಡ ತೋಳಿನಲ್ಲಿ ಬಿಲ್ಲುಬಾಣಗಳಿವೆ ಮಾತ್ರವಲ್ಲ ಬತ್ತಳಿಕೆಯು ಇದೆ. ಅಲ್ಲಿ ಬಾಣಗಳನ್ನು ತಲೆ ಕೆಳಗಾಗಿ ಇಡಲಾಗಿದೆ. ತೋಳಿನಲ್ಲಿ ತೋಳಬಂದಿಯಿದ್ದು, ಕೈಗಳಲ್ಲಿ ಕಡಗಗಳಿವೆ. ರಾಜನು ರಾಜ ಪೋಷಾಕನ್ನು ಧರಿಸಿದ್ದು, ಬಲಭಾಗದ ಕೈಯ್ಯಲ್ಲಿ ಚಾವಟಿಯನ್ನು ಹಿಡಿದು ರಥವನ್ನು ಮುನ್ನಡೆಸುವಂತೆ ಕೊರೆಯಲಾಗಿದೆ. ಅಲ್ಲದೆ ರಾಜನ ಕೊರಳಲ್ಲಿ ಕೊರಳ ಪದಕವು ರಾರಾಜಿಸುತ್ತದೆ. ಒಟ್ಟಾರೆ ಈ ಸ್ಮಾರಕವು ರಾಜನೊಬ್ಬನನ್ನು ಸಂಕೇತಿಸುವ ಈ ಆಕೃತಿಯು ಆಕರ್ಷಕವೆನಿಸುತ್ತದೆ.

**ಮೂಗೂರು ಗ್ರಾಮದಲ್ಲಿ ದೊರೆತ ಎತ್ತಿನ ಗಾಡಿ ವೀರಗಲ್ಲು:** ಮೂಗೂರು ಗ್ರಾಮವು ಕೊಳ್ಳೇಗಾಲದಿಂದ ಆರು ಕೀ. ಮೀ. ದೂರದಲ್ಲಿದೆ. ಈ ಊರಿನ ರಸ್ತೆಯ ಪಕ್ಕದಲ್ಲಿ ದೊರಕಿರುವ ವೀರಗಲ್ಲು ಕೆರೆಯ ಸಮೀಪವಿದೆ. ಇದು ನಾಲ್ಕು ಅಡಿ ಎತ್ತರವಿದ್ದು ಮೂರು ಅಡಿ ಅಗಲವಿದೆ. ಇದರ ಕಾಲಮಾನ ಸುಮಾರು ಹದಿನೈದನೆಯ ಶತಮಾನವೆನಿಸುತ್ತದೆ. ಈ ವೀರಗಲ್ಲಿನಲ್ಲಿ ಮೂರು ಪಟ್ಟಿಕೆಗಳಿದ್ದು ಕೊನೆಯ ಪಟ್ಟಿಕೆಯಲ್ಲಿ ವೀರನೊಬ್ಬನು ಎತ್ತಿನಗಾಡಿಯನ್ನು ಹೊಡೆಯುತ್ತಿರುವಂತೆ ಕಡೆಯಲಾಗಿದೆ. ಬಂಡಿಯಲ್ಲಿ ಸಾಮಾನುಗಳನ್ನು ಸಾಗಿಸುವಾಗ ಕಳ್ಳಕಾಕರಿಂದ ಹೋರಾಟದಲ್ಲಿ ಗಾಡಿ ಹೊಡೆಯುವ ವ್ಯಕ್ತಿ ಮಡಿದಿರುವ ಸಾಧ್ಯತೆಯಿದೆ. ಹಾಗಾಗಿ ಈ ವೀರಗಲ್ಲು ಕೊಳ್ಳೇಗಾಲ ಪ್ರದೇಶದಲ್ಲಿ ದೊರಕಿರುವುದು ಈ ಪ್ರದೇಶದಲ್ಲಿ ಎತ್ತಿನ ಬಂಡಿಯು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿತ್ತು ಎಂಬುದಕ್ಕೆ ಪುಷ್ಟಿ ನೀಡುತ್ತದೆ. ಹಾಗಾಗಿ ಕೊಳ್ಳೇಗಾಲ ಪರಿಸರದಲ್ಲಿ ದೊರೆತಿರುವ ಎತ್ತಿನ ಬಂಡಿಯು ಪ್ರಾಚೀನ ಬಂಡಿಯೆನಿಸಿರುವುದು ಗಮನಾರ್ಹವೆನಿಸುತ್ತದೆ.

[ಲೇಖನವನ್ನು ಸಿದ್ಧಪಡಿಸುವಲ್ಲಿ ಸೂಕ್ತ ಸಲಹೆ ಸೂಚನೆಗಳನ್ನು ನೀಡಿದ ಗುರುಗಳಾದ ಪ್ರೊ.ಎಂ.ಜಿ. ಮಂಜುನಾಥ. ಅವರಿಗೆ ಕೃತಜ್ಞತೆಗಳು.]



## ಆಕರ ಗ್ರಂಥಗಳು

೧. ಬಿ.ಆರ್. ಗೋಪಾಲ್, ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೪ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿವಿ ಮೈಸೂರು.
೨. ಚಿದಾನಂದಮೂರ್ತಿ.ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.
೩. ಶೇಷಶಾಸ್ತ್ರಿ ಆರ್., ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

# ಹಲ್ಮಿಡಿ ಶಾಸನಕ್ಕಿಂತ ಹಿಂದಿನವೆಂದು ಹೇಳಲಾಗುತ್ತಿರುವ ಮೂರು ಶಾಸನಗಳು

– ಬಿ. ರಾಜಶೇಖರಪ್ಪ*

೧೯೩೬ರಲ್ಲಿ ಡಾ.ಎಂ.ಎಚ್. ಕೃಷ್ಣ ಅವರು ಹಾಸನ ಜಿಲ್ಲೆಯ ಬೇಲೂರು ತಾಲೂಕಿನ ಹಲ್ಮಿಡಿ ಗ್ರಾಮದಲ್ಲಿ ಪತ್ತೆ ಮಾಡಿದ ಕನ್ನಡ ಶಾಸನ'ಹಲ್ಮಿಡಿ ಶಾಸನ'ವೆಂದೇ ಪ್ರಖ್ಯಾತವಾಗಿದೆ.ಅದು ಕದಂಬ ದೊರೆ ಕಾಕುತ್ಸ್ಥವರ್ಮನ ಕಾಲದ್ದೆಂದು, ಅದರ ಕಾಲ ಕ್ರಿ.ಶ.ಸು.೪೫೦ ಇರಬೇಕೆಂದು ಅವರು ಅದನ್ನು ಆ ವರ್ಷದ ಮೈಸೂರು ಪುರಾತತ್ವ ವಾರ್ಷಿಕ ವರದಿಯಲ್ಲಿ ಪ್ರಕಟಿಸಿದರು.ಪ್ರಕಟವಾದಂದಿನಿಂದ ಅದು ಇಂದಿನವರೆಗೆ ಕನ್ನಡದ ಅತಿಪ್ರಾಚೀನಶಾಸನ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಅದು ಪ್ರಕಟವಾದ ಹೊಸತರಲ್ಲಿನೆಲಮಂಗಲ ಲಕ್ಷ್ಮೀನಾರಾಯಣರಾವ್ ಅವರು ಅದರ ಕಾಲ ಕ್ರಿ.ಶ. ೪೫೦ರಷ್ಟು ಪ್ರಾಚೀನ ಇರಲಾರದೆಂದು ಅದರಿಂದ ಕೆಲವು ದಶಕಗಳಷ್ಟು ಈಚಿನದೆಂದು ಭಿನ್ನ ಅಭಿಪ್ರಾಯ ವ್ಯಕ್ತಪಡಿಸಿದರು.ಆದರೆ ಇತರ ಬಹುತೇಕ ವಿದ್ವಾಂಸರುಕ್ರಿ.ಶ.ಸು.೪೫೦ರದೆಂದೇ ಒಪ್ಪಿಕೊಂಡಿರುವುದರಿಂದ ಹಲ್ಮಿಡಿ ಶಾಸನವು ಕನ್ನಡ ಭಾಷೆಯ ಅತಿಪ್ರಾಚೀನ ಶಾಸನವೆಂದೇ ಈವರೆಗೂ ಪರಿಗಣಿತವಾಗಿದೆ. ಆದರೆ, ಈಚೆಗೆ ಬೇರೆಬೇರೆಯ ಕೆಲವು ಶಾಸನಗಳು ಅದಕ್ಕಿಂತ ಪ್ರಾಚೀನವಾದವು ಎಂಬ ಹೇಳಿಕೆಗಳು ಅಥವಾ ಅಭಿಪ್ರಾಯಗಳು ಬಂದಿವೆ. ಹಾಗೆ ಹೇಳಲಾಗುತ್ತಿರುವ ಶಾಸನಗಳಲ್ಲಿ ತಗರ್ತಿ (ತಾಗರ್ತಿ) ಮತ್ತು ಶ್ರವಣಬೆಳಗೊಳ ಇವುಗಳ ಎರಡು ಶಾಸನಗಳನ್ನು ಕುರಿತು ನಾನು ಈಗಾಗಲೇ ಹಿಂದಿನ ಎರಡು ಕರ್ನಾಟಕ ಇತಿಹಾಸ ಸಮ್ಮೇಳನಗಳಲ್ಲಿ ಸಂಪ್ರಬಂಧಗಳನ್ನು ಮಂಡಿಸಿದ್ದೇನೆ; ಅವು ಪ್ರಕಟವೂ ಆಗಿವೆ. ಅವನ್ನು ಬಿಟ್ಟು ಉಳಿದ ತಾಳಗುಂದ, ಚಿತ್ರದುರ್ಗ ಮತ್ತು ಉದ್ಯಾವರ ಈ ಮೂರು ಶಾಸನಗಳ ಬಗ್ಗೆ ಬಂದಿರುವ ಹೇಳಿಕೆಗಳನ್ನು ಅಥವಾ ಅಭಿಪ್ರಾಯಗಳನ್ನು ಕುರಿತು ನನ್ನ ಪರಿಶೀಲನೆಯನ್ನು ಈ ಸಂಪ್ರಬಂಧದಲ್ಲಿ ಮಂಡಿಸುತ್ತಿದ್ದೇನೆ.

## ತಾಳಗುಂದದ 'ಸಿಂಹಕಟಾಂಜನ ಶಾಸನ'

ಈಚಿನ ವರ್ಷಗಳಲ್ಲಿ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ತಾಳಗುಂದದ ಪ್ರಾಚ್ಯ ಪರಿಸರದಲ್ಲಿ ಅನೇಕ ಉತ್ಖನನಗಳು ನಡೆದಾಗ, ದೊರಕಿದ ಶಾಸನಗಳಲ್ಲಿ ಒಂದನ್ನು 'ಸಿಂಹ ಕಟಾಂಜನ ಶಾಸನ' ಎಂದು ಕರೆಯಲಾಗಿದೆ.ಭಾರತ ಪುರಾತತ್ವ ಸರ್ವೇಕ್ಷಣ ಇಲಾಖೆಯ ನಂಬಿರಾಜನ್, ಟಿ.ಎಂ.ಕೇಶವ, ಎಸ್.ಕಾರ್ತಿಕ್ ಮುಂತಾದವರು ಈ ಶಾಸನವು ಹಲ್ಮಿಡಿಯದಕ್ಕಿಂತ ಹಿಂದಿನದೆಂದು ಹೇಳಿದ್ದಾರೆ ['ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯ'ದ ೪೨ನೆಯ ಸಂಚಿಕೆ (೨೦೧೭)].

ಇದೇ ಶಾಸನದ ವಿಷಯವಾಗಿ ಶ್ರೀ ಟಿ.ಎಂ. ಕೇಶವ ಮತ್ತು ಶ್ರೀ ಎಸ್.ಕಾರ್ತಿಕ್ ಅವರು ಜೊತೆಗೂಡಿ ಬರೆದಿರುವ ಒಂದು ವಿವರಣಾತ್ಮಕ ಸಚಿತ್ರಲೇಖನ ಇನ್ನೊಂದೆಡೆಯೂ ಪ್ರಕಟವಾಗಿದೆ ['ಇತಿಹಾಸ ದರ್ಪಣ' ತ್ರೈಮಾಸಿಕದ ಪುಸ್ತಕ ೩೧-೩೨; ಅಕ್ಟೋಬರ್ ೨೦೧೬-ಮಾರ್ಚ್೨೦೧೭; ಪು. ೧೩೫-೧೩೬].ಮೇಲೆ ಹೇಳಿದ ಲೇಖನದಲ್ಲಿ ಲೇಖಕರಲ್ಲೊಬ್ಬರಾಗಿ ಹೆಸರಿಸಲ್ಪಟ್ಟ ನಂಬಿರಾಜನ್ ಹೆಸರು ಈ ಲೇಖನದಲ್ಲಿ ಏಕೋ ಕಾಣೆಯಾಗಿದೆ.

ದಿ. ೨೫-೦೪-೨೦೧೭ರ 'ಪ್ರಜಾವಾಣಿ' ಪತ್ರಿಕೆಯಲ್ಲಿ ಇದೇ ಶಾಸನ ಕುರಿತು ಶ್ರೀ ಎಂ.ನವೀನ್ ಕುಮಾರ್ ಎಂಬುವರು 'ಹಿರಿತನ ತಂದ ಶಾಸನ ಎಂಬ ಶೀರ್ಷಿಕೆಯ ಲೇಖನವೊಂದನ್ನು ಬರೆದಿದ್ದಾರೆ.ಈ ಲೇಖನಕ್ಕೆ ಮೇಲೆಹೇಳಿದ ಶ್ರೀ ಟಿ.ಎಂ.ಕೇಶವ ಮತ್ತಿತರರು ಹೇಳಿದ್ದ ವಿಷಯವನ್ನೇ ಬಳಸಿಕೊಂಡಂತಿದೆ.

'ಇತಿಹಾಸ ದರ್ಪಣ' ತ್ರೈಮಾಸಿಕದಲ್ಲಿ ಆ ಶಾಸನದ ಪಾಠವನ್ನು ಅದರ ಲೇಖಕರು ಹೀಗೆ ಕೊಟ್ಟಿದ್ದಾರೆ :

* ಕನ್ನಡ ಪ್ರಾಧ್ಯಾಪಕರು, ಪ್ರಾಂಶುಪಾಲರು (ನಿ), ೨ನೇ ಕ್ರಾಸ್, ಜಯಚಾಮರಾಜೇಂದ್ರ ಬಡಾವಣೆ, ಚಿತ್ರದುರ್ಗ, ಮೊ. ೯೪೮೦೨೨೩೦೭೪

೧ . . . . . . . . . . . ವುಸ

೨ . . . . . . . . . . ತ್ನೋಮಿಯಾ

೩ . . . ಕೊಟ್ಟಾರ್ ಪುಲೋನಾಗೇ ಸ್ಕ

೪ . . . . ಯಮಾಂ ಚನ್ದ್ರಾದಿತ್ಯ

೫ ಮೋಗ ಬೋಯ್ಗರಾ ನಾವಿದಾವಜೀ ನಾಗ[ಣ*]

೬ ಪುಲಿ[ಣ್ಡ*]ಗೆಯಾ ಹಲಮಿ ಕೊಳ್ಳೆ ನಾಲ್ಕುಂ ಮಾಸೇತು

೭ . . . ಜಾ . . . ಮಿ . . . ಭೂ

ಅಲ್ಲಿ ಈ ಪಾಠದ ತಾತ್ಪರ್ಯವನ್ನು ಹೀಗೆ ಕೊಡಲಾಗಿದೆ : "ಚಂದ್ರಾದಿತ್ಯನ ಆಡಳಿತ ಕಾಲದಲ್ಲಿ, ಕ್ಷೌರಿಕ ವೃತ್ತಿಯ ನಾಗಣ್ಣನಿಗೆ ನಾಲ್ಕು ಮಾಸ ಪರ್ಯಂತ ಅನುಭವಿಸಿಕೊಂಡು ಬರಲು ಪುಲಿಂದಿಗೆಯಲ್ಲಿ ಇನ್ನೂ ಉತ್ತಿರದ ಭೂಮಿಯನ್ನು ದಾನವಾಗಿ ನೀಡಲಾಗಿದೆ {ಅಥವಾ ನಾಲ್ಕು ಮಾಷ ಮಾನದ ಇನ್ನೂ ಉಳದ ಭೂಮಿಯನ್ನು ದಾನವಾಗಿ ನೀಡಲಾಗಿದೆ} ಎಂದು ಸ್ಥೂಲವಾಗಿ ಅರ್ಥ ಹೇಳಲು ಸಾಧ್ಯವಿದೆ".

ಈ ಲೇಖಕರು ಕೊಟ್ಟಿರುವ ಲಿಪಿಚಿತ್ರದ ಕೆಲವು ಅಕ್ಷರಗಳ ಆಕೃತಿ, ಓದಿರುವ ಪಾಠದ ಅಕ್ಷರಗಳಿಗೆ ಹೋಲಿಕೆಯಾಗುವಂತಿಲ್ಲ. ಇದು ಗಮನಿಸಬೇಕಾದ ತುಂಬ ಮುಖ್ಯವಾದ ಅಂಶ. ಉದಾಹರಣೆಗೆ, 'ಪುಲೋನಾಗೇ', 'ನಾವಿದಾವಜೀ', ಇತ್ಯಾದಿ.

ಇಲ್ಲಿ ಬರುವ ಚಂದ್ರಾದಿತ್ಯ ನಿಜವಾಗಿಯೂ ರಾಜನಾಗಿದ್ದವನೇ?ರಾಜನಾಗಿದ್ದರೆ ಯಾವ ಪ್ರಾಂತದಲ್ಲಿ ರಾಜನಾಗಿದ್ದ? 'ಬೋಯ್ಗರಾ' ಎಂಬುದಕ್ಕೆ 'ಆಳ್ವಿಕೆ ನಡೆಸುತ್ತಿದ್ದ ಸ್ಥಳೀಯ (ಮಂಡಲಾಧಿಕಾರಿ) ಎಂದು ತೆಗೆದುಕೊಳ್ಳಬಹುದು' ಎಂದು ಹೇಳಿರುವುದಕ್ಕೆ ಆಧಾರವೇನು? ಇದನ್ನು ಬೆಂಬಲಿಸುವ ಯಾವುದಾದರೂ ಪೂರ್ವೋಲ್ಲೇಖವಿದೆಯೆ?– ಇದಾವುದಕ್ಕೂ ಲೇಖಕರು ವಿವರಣೆಯನ್ನು ಕೊಟ್ಟಿರುವುದಿಲ್ಲ. ಸೂಕ್ತ ಪುರಾವೆ ಇಲ್ಲದಿದ್ದರೆ ಸಹಜವಾಗಿಯೆ ಅದು ಕೇವಲ ಲೇಖಕರ ಕಾಲ್ಪನಿಕ ಅಥವಾ ಊಹಾತ್ಮಕ ಅರ್ಥ ಆಗುತ್ತದೆ. ಹಾಗಾಗಿ ಅಂಥ ಅರ್ಥ ಅನುಮಾನಾಸ್ಪದವಾಗುತ್ತದೆ.

ಆ ಲೇಖಕರು ಈ ಶಾಸನದ ಕಾಲದ ಬಗ್ಗೆ ತಮ್ಮ ಅಭಿಪ್ರಾಯ ಕೊಡುವುದರ ಜೊತೆಗೆ ಬೇರೆ ಬೇರೆ ವಿದ್ವಾಂಸರಿಂದಲೂ ಅಭಿಪ್ರಾಯಗಳನ್ನು ಸಂಗ್ರಹಿಸಿದ್ದಾರೆ.ಅದರಲ್ಲಿ ಅವರು "ಈ ಶಾಸನವನ್ನು ಮೊದಲು ಕಂಡುಹಿಡಿದು ಓದಿದ ಟಿ.ಎಂ.ಕೇಶವ ಅವರು ಮೊದಲೇ ಕ್ರಿ.ಶ.ಸು.೩೮೦ ಅಂದರೆ ೪ನೆಯ ಶತಮಾನದ ಶಾಸನವೆಂದು" ಸೂಚಿಸಿದ್ದರೆಂದು ಬರೆದಿದ್ದಾರೆ.ಇದರ ಕಾಲ ಕುರಿತು ಡಾ.ಶ್ರೀನಿವಾಸ ರಿತ್ತಿ, ಡಾ.ಟಿ.ಎಸ್. ರವಿಶಂಕರ್ ಮತ್ತು ಡಾ. ರಾಜಾರಾಮ ಹೆಗಡೆ ಅವರ ಅಭಿಪ್ರಾಯಗಳನ್ನು ಲೇಖನದಲ್ಲಿ ಹೇಳಲಾಗಿದೆ.ಡಾ. ರಿತ್ತಿ ಅವರು ಇದನ್ನು ೫–೬ನೆಯ ಶತಮಾನಕ್ಕೆ ಅಂದರೆ ಬಾದಾಮಿ ಚಾಲುಕ್ಯರ ಪ್ರಾರಂಭಿಕ ಲಿಪಿಗೆ ಹೋಲಿಸಬಹುದು ಎಂದಿದ್ದರೆ, ಡಾ. ರವಿಶಂಕರ್ ಅವರು ಇದರ ಕಾಲ, ಮೊದಲಿಗೆ೫ನೆಯ ಶತಮಾನದ ಸುಮಾರೆಂದೂ, ಆಮೇಲೆ ಕ್ರಿ.ಶ. ೪ನೆಯ ಶತಮಾನವೆಂದೂ ಹೇಳಿದ್ದಾರೆ; ಡಾ. ಹೆಗಡೆ ಅವರು ಇದು ಹಲ್ಮಿಡಿ ಶಾಸನಕ್ಕಿಂತ ಪೂರ್ವದ್ದೆಂದು ಸೂಚಿಸಿರುವುದಾಗಿ ಆ ಲೇಖನದಲ್ಲಿ ಹೇಳಲಾಗಿದೆ. ಆ ಲೇಖನದ ಲೇಖಕರು ಇದರ ಕಾಲ "ಹಲ್ಮಿಡಿಶಾಸನಕ್ಕಿಂತ ಸುಮಾರು ೫೦ ರಿಂದ ೭೫ ವರ್ಷಗಳಷ್ಟು ಹಳೆಯದೆಂದು" ಹೇಳಿರುವುದು ಕೂಡಾ ಈ ಶಾಸನ ಹಲ್ಮಿಡಿಯದಕ್ಕಿಂತ ಹಳೆಯದೆಂತಲೇ ಒತ್ತುಕೊಟ್ಟು ಹೇಳುತ್ತ ಹೋಗಿರುವುದು ಕಾಣುತ್ತದೆ.ಇದರ ಲಿಪಿ ಹಲ್ಮಿಡಿಶಾಸನದಷ್ಟು ಪ್ರಾಚೀನ ಲಿಪಿ ಎಂಬಲ್ಲಿ ಅನುಮಾನವಿಲ್ಲ. ಆದರೆ, ಅಷ್ಟು ಮಾತ್ರಕ್ಕೇ ಇದು ಹಲ್ಮಿಡಿಶಾಸನಕ್ಕಿಂತ ಪ್ರಾಚೀನ ಎಂದು ತಿಳಿಯಲಾಗುವುದಿಲ್ಲ.

ಇದರಲ್ಲಿ ಕನ್ನಡ ಅಕ್ಷರಗಳಿವೆಯಾದರೂ ಸಾಲುಗಳ ಸಂಖ್ಯೆ, ಶಬ್ದಗಳ ಸಂಖ್ಯೆ, ನಿರ್ದಿಷ್ಟವಾಗಿ ಎಷ್ಟು ಎಂಬುದನ್ನು ತಿಳಿಯಲಾಗಿಲ್ಲ. ಸದ್ಯಕ್ಕೆ ಇದರಲ್ಲಿ ೭ ಸಾಲುಗಳಿರಬಹುದೆಂದೂ, ಇದರಲ್ಲಿರುವುದು ಕನ್ನಡದ ೬ ಪದಗಳು ಮಾತ್ರ ಎಂದೂ, ಇದು ವಜಿ ನಾಗಯ್ಯ ಎಂಬ ಅಂಬಿಗನಿಗೆ ಭೂದಾನ ನೀಡಿದ ಬಗ್ಗೆ ಹೇಳುತ್ತದೆಂದೂ ಅವರು ಹೇಳಿರುವುದಾಗಿ ಲೇಖನವೊಂದರಲ್ಲಿ ಹೇಳಲಾಗಿದೆ.ಈಗ್ಗೆ ಎರಡು ವರ್ಷಗಳ ಹಿಂದೆ ಕರ್ನಾಟಕ ಇತಿಹಾಸ ಅಕಾದೆಮಿ ಸಮ್ಮೇಳನ ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ನಡೆದ ಕಾಲಕ್ಕೆ ಶ್ರೀ ಟಿ.ಎಂ.ಕೇಶವ ಅವರು ಈ ಶಾಸನ ಕುರಿತು ಒಂದು ಸಂಪ್ರಬಂಧ ಮಂಡನೆ ಮಾಡಿದರು.ಅದಕ್ಕೆ ಮುಂಚೆ ಅವರು ಆ ಶಾಸನದ ಅಕ್ಷರಗಳಿರುವ ಕೆಲವು ಚಿತ್ರಗಳನ್ನು ನನಗೆ ಲ್ಯಾಪ್‌ಟಾಪ್‌ನಲ್ಲಿ ತೋರಿಸಿದ್ದರು.ನಾನು ಕಂಡಂತೆ ಆ ಶಾಸನದಲ್ಲಿ ಅಲ್ಲಲ್ಲಿ ಅಕ್ಷರಗಳು ಮುಕ್ಕಾಗಿದ್ದುವಷ್ಟೇ ಅಲ್ಲ, ಕೆಲವಂತೂ ತುಂಬ ಅಸ್ಪಷ್ಟವಾಗಿದ್ದುವು.ಅದರಲ್ಲಿರುವ ಎಲ್ಲ ಅಕ್ಷರಗಳೂ ಕೆಲವೆಡೆ ಬಿಡಿಪದಗಳಾಗಿ ಕೂಡುವಂತಿದ್ದರೂ ಪೂರ್ಣ ವಾಕ್ಯಗಳಾಗಿ

ಸಂಯೋಜನೆಗೊಳ್ಳುವಂತಿರಲಿಲ್ಲ. ಆ ಶಾಸನದ ಚಿತ್ರಗಳಲ್ಲಿ ಕಂಡ 'ನಾವಿದ' ಎಂಬ ಶಬ್ದವನ್ನು ಶ್ರೀ ಟಿ.ಎಂ.ಕೇಶವ ಅವರು 'ನಾವಿಕ' ಎಂದು ಅರ್ಥೈಸಿರುವುದಾಗಿ ಹೇಳಿದರು.ಆಗ ನಾನು 'ನಾವಿದ' ಶಬ್ದಕ್ಕೆ ಅವರು ಹೇಳಿದ 'ನಾವಿಕ' ಅರ್ಥ ಇಲ್ಲವೆಂದೂ ಅದು 'ಕ್ಷೌರಿಕ' ಅರ್ಥದ ಶಬ್ದ ಇರುವುದಾಗಿಯೂ ತಿಳಿಸಿದೆ.

ಅದಷ್ಟೇ ಅಲ್ಲ, 'ನಾವಿದ' ಎಂಬಶಬ್ದವನ್ನು 'ನಾವಿಕ' 'ಅಂಬಿಗ' ಎಂದೇ ಅರ್ಥೈಸಲಾಗಿರುವಂತೆ ಪತ್ರಿಕೆಗಳಲ್ಲಿ ಬಂದ ಲೇಖನಗಳಲ್ಲಿ ಕಾಣುತ್ತದೆ.ಉದಾಹರಣೆಗೆ, ಮೇಲೆಹೇಳಿದ 'ಪ್ರಜಾವಾಣಿ' ಪತ್ರಿಕೆಯಲ್ಲಿ ಬಂದ ಶ್ರೀ ನವೀನ್ ಕುಮಾರ್ ಅವರು ತಮ್ಮ ಲೇಖನದಲ್ಲಿ,'ನಾವಿದ' ಎಂಬುದಕ್ಕೆ– ಶ್ರೀ ಟಿ.ಎಂ.ಕೇಶವ ಅವರು ಮೊದಲಿಗೆ ತಪ್ಪಾಗಿ ಇಟ್ಟುಕೊಂಡಿದ್ದ– 'ನಾವಿಕ' ಎನ್ನುವ ಅರ್ಥವನ್ನೇ ಇಟ್ಟುಕೊಂಡುಬರೆದಿದ್ದಾರೆ.ಹಿಂದೆಯೇ ಹೇಳಿದ ಹಾಗೆ ಅದರ ಸರಿಯಾದ ಅರ್ಥ ಕ್ಷೌರಿಕ ಎಂದು. ಅದಲ್ಲದೆ, ಆ ವಜಿ ನಾಗಯ್ಯ ಎಂಬುವವನಿಗೆ ಭೂಮಿಯನ್ನು ನೀಡಲಾದ ಶಾಸನ ಎಂದು ಅರ್ಥೈಸಿರುವುದು ಕೂಡಾ ಸಮಂಜಸವಲ್ಲ. ಏಕೆಂದರೆ, ಈ ಶಾಸನದಲ್ಲಿ ಕೆಲವೆಡೆ ಅಕ್ಷರಗಳ ಕೂಡಿಕೆ ನಿರ್ದಿಷ್ಟ ಶಬ್ದವನ್ನು ಸೂಚಿಸುವಂತಿದ್ದರೆ, ಇನ್ನೆಷ್ಟೋ ಕಡೆ ಅಕ್ಷರಗಳ ಸ್ವರೂಪವೂ ಸ್ಪಷ್ಟವಿಲ್ಲ. ಹಾಗಾಗಿ ನಿರ್ದಿಷ್ಟ ಶಬ್ದರೂಪವೂ ಸ್ಪಷ್ಟವಾಗುವುದಿಲ್ಲ.ಹಾಗೇ ಮುಂದೆ ಇದರ ಪಾಠ ಮತ್ತು ವಾಕ್ಯಶಿಲ್ಪ ಕೂಡಾ ಏನೆಂಬುದೂ ಅಸ್ಪಷ್ಟವೇ. ಮೇಲೆ ಕೊಟ್ಟಿರುವ ಶಾಸನಪಾಠವನ್ನು ಸೂಕ್ಷ್ಮವಾಗಿ ಗಮನಿಸಿದರೆ ಅಲ್ಲಿ ಅದು ಎಷ್ಟು ಹರುಕು–ಮುರುಕಾಗಿದೆ ಎಂಬುದು ಸ್ಪಷ್ಟವಾಗಿ ಕಾಣುತ್ತದೆ.ಹಾಗಾಗಿಈ ಶಾಸನ ಅಪೂರ್ಣಾವಸ್ಥೆಯಲ್ಲಿದೆ ಎಂದು ಹೇಳಲೇಬೇಕು.ವಜಿ ನಾಗಯ್ಯ ಎಂಬ ಅಂಬಿಗನಿಗೆ ಭೂಮಿಯನ್ನು ಉಡುಗೊರೆಯಾಗಿ ನೀಡಿರುವ ಅರ್ಥ ಬರುವಂತೆ ಒಂದು (ವ್ಯವಸ್ಥಿತ, ವ್ಯಾಕರಣಸಮ್ಮತ) ವಾಕ್ಯ ಇರಬೇಕಲ್ಲವೆ?ಅಂತಹ ವಾಕ್ಯ ನಿಜವಾಗಿಯೂ ಅಲ್ಲಿದೆಯೇ?ಇದ್ದರೆ ಅದು ಹೇಗಿದೆ ಎಂಬುದನ್ನು ಮೇಲೆ ಹೇಳಿದ ಶ್ರೀ ಟಿ.ಎಂ.ಕೇಶವ, ಶ್ರೀ ಎಸ್.ಕಾರ್ತಿಕ್ ಮತ್ತು ಇತರರು ಉಲ್ಲೇಖಿಸಬೇಕಾಗಿತ್ತು.ವಜಿ ನಾಗಯ್ಯ ಎಂಬುವನಿಗೆ ಭೂದಾನ ನೀಡಿರುವ ಶಾಸನ ಎಂದು ಅರ್ಥೈಸಿರುವುದು ಪರಮಾಶ್ಚರ್ಯದ ಸಂಗತಿಯಾಗಿದೆ.

" 'ಹಲಮಿ' ಎಂಬುದು ಕನ್ನಡ ಪದವಲ್ಲ. 'ಹಲ' ಎಂದರೆ ಸಂಸ್ಕೃತ ಭಾಷೆಯಲ್ಲಿ 'ನೇಗಿಲು' ಎಂದರ್ಥ. ಹಲಮಿ ಎಂಬುದು ಶಾಸನಗಳಲ್ಲಿ ಬರುವ ಬ್ರಹ್ಮಚಾರಿಕ್ಷೇತ್ರ ಎಂದರೆ ಸಾಗುವಳಿ ಮಾಡದ ಭೂಮಿ ಎಂಬುದಕ್ಕೆ ಸಮಾನ ಶಬ್ದವೆಂದು, ಶ್ರೀ ಎಂ.ವಿ. ವಿಶ್ವೇಶ್ವರ ಅವರು ಸೂಚಿಸಿರುವುದಾಗಿ ಮೇಲೆ ಹೆಸರಿಸಿದ ಲೇಖಕರು ಬರೆದಿದ್ದಾರೆ.ಶ್ರೀ ವಿಶ್ವೇಶ್ವರ ಅವರು ಆ ಅರ್ಥ ಸೂಚಿಸಲು ಯಾವ ಪೂರ್ವೋಲ್ಲೇಖಗಳನ್ನು ಆಧರಿಸಿದ್ದಾರೆ?ಮತ್ತು ಆ ಅರ್ಥವನ್ನು ಯಾವ ಶಬ್ದಕೋಶದ ಆಧಾರದಿಂದ ಹೇಳಿದ್ದಾರೆ?ಎಂಬುದಕ್ಕೆ ಲೇಖಕರು ಯಾವ ವಿವರಣೆಯನ್ನೂ ಕೊಟ್ಟಿಲ್ಲ. ಇದು ಸಹ ಅನುಮಾನಾಸ್ಪದ ಅಂಶವಾಗಿದೆ. ಇದಲ್ಲದೆ, " 'ಹಲಮಿ ಕೊಳೆ' ಎಂಬಲ್ಲಿನ 'ಕೊಳ್ಳೆ' ಶಬ್ದದ ಮೂಲವು 'ಕೊಳ್' ಧಾತುವಾಗಿದೆ. ಇದರ ಅರ್ಥ 'ಪಡೆಯಲು' ಎಂದು" ಎಂಬ ವಿವರಣೆಯನ್ನು ಆ ಲೇಖಕರು ಕೊಟ್ಟಿದ್ದಾರೆ. 'ಪಡೆಯಲು' ಎಂಬ ಅರ್ಥದಲ್ಲಿ ಅಲ್ಲಿ ಇರಬೇಕಿದ್ದ ಶಬ್ದ 'ಕೊಳ್ಳೆ' ಅಲ್ಲ, 'ಕೊಳೆ'. ಹಳಗನ್ನಡದ ಕಾಲಕ್ಕೇ 'ಕೊಳ್' ಧಾತುವಿಗೆ 'ಕೊಳೆ' ಎಂಬ ಕೃದಂತ ರೂಪವಿತ್ತೇ ಹೊರತು 'ಕೊಳ್ಳೆ' ಎಂಬ ಕೃದಂತ ರೂಪ ಇನ್ನೂ ಬಂದಿರಲಿಲ್ಲ. ಹಾಗಿದ್ದಮೇಲೆ ಹಲ್ಮಿಡಿ ಶಾಸನಕ್ಕಿಂತ ಪೂರ್ವದ್ದೆಂದು ಆ ಲೇಖಕರು ಹೇಳುವ ಈ ಶಾಸನ ಪೂರ್ವದ ಹಳಗನ್ನಡ ಕಾಲಕ್ಕೆ ಸೇರಬೇಕಿರುವ ಕಾರಣ, ಅದರಲ್ಲಿ ಅಂಥ ರೂಪವನ್ನು ನಿರೀಕ್ಷಿಸುವಂತಿಲ್ಲ.ಹಾಗಾಗಿ ಆ ಅರ್ಥ ಕೂಡಾ ಕಾಲ್ಪನಿಕ ಎನಿಸುತ್ತದೆ ಅಷ್ಟೇ ಅಲ್ಲದೆ, ಲೇಖಕರ ಪ್ರತಿಪಾದನೆ ದೃಢಗೊಳ್ಳುವುದೂ ಸಾಧ್ಯವಾಗುವುದಿಲ್ಲ. ಅದೇ ರೀತಿ, 'ನಾಲ್ಕು ಮಾಸೇತು' ಎಂಬುದಕ್ಕೆ 'ನಾಲ್ಕು ಮಾಸ ಪರ್ಯಂತ' ಅಥವಾ 'ನಾಲ್ಕು ಮಾಷ ಮಾನದ' ಎಂದು ಲೇಖಕರು ಅರ್ಥೈಸಲು ಸಾಧ್ಯವಾದದ್ದು ಹೇಗೆ? 'ಬೋಯ್ಗರಾ' ಎಂಬುದಕ್ಕೆ 'ಆಳ್ವಿಕೆ ನಡೆಸುತ್ತಿದ್ದ ಸ್ಥಳೀಯ (ಮಂಡಲಾಧಿಕಾರಿ) ಎಂದು ತೆಗೆದುಕೊಳ್ಳಬಹುದು' ಎಂದ ಲೇಖಕರು ತಾತ್ಪರ್ಯ ಕೊಡುವಾಗ ಅದನ್ನು ಬಿಟ್ಟರೇಕೆ?ಈ ಶಾಸನವನ್ನು ಅರ್ಥೈಸುವಲ್ಲಿ ಇಂಥ ಅನೇಕ ಗೋಜಲುಗಳಿವೆ. ಇವಕ್ಕೆಲ್ಲ ಹೇಗೋ ಏನೋ ಅರ್ಥ ಹೇಳಿ ಎಲ್ಲ ಸ್ಪಷ್ಟವಾಗಿದೆ ಎಂಬಂತೆ ಮುಂದೆ ಸಾಗಬಹುದೆ?

ಅಲ್ಲಿ ಉತ್ಖನನ ನಡೆಸಿದಾಗ ಸಿಕ್ಕ ಇಟ್ಟಿಗೆಯ ನೆಲಹಾಸು, ಅಲ್ಲಿ ಸಿಕ್ಕ 'ಕಾ' ಅಕ್ಷರವಿರುವ ಕದಂಬರ ಕಾಲದ ಚಿನ್ನದ ಬೇಳೆಕಾಸು ಮತ್ತಿತರ ನಾಣ್ಯಗಳು, ಅದೇ ಕಟಾಂಜನದಲ್ಲಿರುವ ಇನ್ನೊಂದು ತುಂಡರಿಸಿದ ಶಾಸನ– ಇವನ್ನೆಲ್ಲ ಈ ಶಾಸನದ ಪ್ರಾಚೀನತೆಗೆ ಪೂರಕ ಸಾಕ್ಷಿಗಳೆಂಬಂತೆ ಉಲ್ಲೇಖಿಸಲಾಗಿದೆ.ಇದಲ್ಲದೆ ಈ ಶಾಸನದ ಅಕ್ಷರಗಳ ಶೈಲಿ, ಇದು ಸಿಕ್ಕ ನೆಲದ ಆಳ, ಇತ್ಯಾದಿಗಳಿಂದ ಈ ಶಾಸನ ಹಲ್ಮಿಡಿಯದಕ್ಕಿಂತ ಪೂರ್ವದ್ದು ಎಂದು ಅವರು ತೀರ್ಮಾನಿಸಿದ್ದಾರೆ. ಲಿಪಿ ಹೊರತುಪಡಿಸಿ, ಅವರು ಹೇಳುವ ಇತರ ಅಂಶಗಳು ಶಾಸನದ ಪ್ರಾಚೀನತೆಯನ್ನು ನಿರ್ಧರಿಸಲು ಸಮಂಜಸ ಆಧಾರಗಳಾಗುವುದಿಲ್ಲ. ಅಷ್ಟೇ ಅಲ್ಲ, ಈ ಶಾಸನ ಹಲ್ಮಿಡಿ ಶಾಸನಕ್ಕಿಂತ ಪೂರ್ವದ್ದು ಎಂದು ತೀರ್ಮಾನಿಸಲೂ ಆಗುವುದಿಲ್ಲ. ಏಕೆಂದರೆ, ಕನ್ನಡದ

ಅತಿಪ್ರಾಚೀನ ಶಾಸನವೆಂದು ತಿಳಿಯಲಾದ ಹಲ್ಮಿಡಿ ಶಾಸನ, ಅಷ್ಟೇ ಪ್ರಾಚೀನವಾದ ತಾಳಗುಂದದ ಸ್ತಂಭಶಾಸನ, ಅದಕ್ಕಿಂತ ಪ್ರಾಚೀನವಾದ ಮಳವಳ್ಳಿ ಶಾಸನ, ಇವೆಲ್ಲ ಭೂಮಿಯ ಮೇಲೇ ಸಿಕ್ಕಿದವೇ ಹೊರತು ಯಾವ ಭೂಮಿಯ ಅಡಿಯಲ್ಲೂ ಸಿಕ್ಕಿದವಲ್ಲ.

ಈ ಶಾಸನದ ಚಿತ್ರಗಳನ್ನು ಕೊಟ್ಟಿರುವ ಪಾಠವನ್ನು ನೋಡಿದಾಗ, ಇದರಲ್ಲಿಯ ಲಿಪಿಶೈಲಿ ಹಲ್ಮಿಡಿ ಶಾಸನ ಮತ್ತು ತಮಟಕಲ್ಲು ಶಾಸನಗಳ ಕನ್ನಡ ಲಿಪಿಯನ್ನು ಹೋಲುತ್ತದೆ.ಇದರಲ್ಲಿ ಓದಲಾಗಿರುವ ಕೆಲವು ಅಕ್ಷರಗಳ ಓದಿಕೆ ಕೂಡಾ ಸಮರ್ಪಕ ಇರುವಂತೆ ಕಾಣುವುದಿಲ್ಲ.

ಮೇಲೆ ತಿಳಿಸಿದ 'ಇತಿಹಾಸ ದರ್ಪಣ'ದ ಸಂಚಿಕೆಯಲ್ಲಿ ಈ ಶಾಸನ ಕುರಿತ ಲೇಖನಕ್ಕೆ ಕೊಟ್ಟಿರುವ ಶೀರ್ಷಿಕೆ "ತಾಳಗುಂದದಲ್ಲಿ ದೊರೆತಿರುವ ಕನ್ನಡ ಭಾಷೆಯ ಪ್ರಥಮ ಶಾಸನ, ...". ಆ ಲೇಖನದ ಲೇಖಕರಾದ ಶ್ರೀ ಟಿ.ಎಂ.ಕೇಶವ, ಶ್ರೀ ಎಸ್.ಕಾರ್ತಿಕ್ ಅವರು ಈ ಶೀರ್ಷಿಕೆ ಕೊಡುವಲ್ಲಿ ಆ ಶಾಸನ ಕನ್ನಡದ ಪ್ರಥಮ ಶಾಸನವೆಂದು ಅಂಗೀಕೃತವಾಗಬೇಕೆಂಬ ಅರ್ಥಾತ್ ಹಾಗೆಂದು ಘೋಷಣೆಯಾಗಬೇಕೆಂಬಆಶಯ ಹೊಂದಿರುವುದು ಸ್ಪಷ್ಟ ಕಾಣುತ್ತದೆ.ಎಲ್ಲಾ ಆಗಲೇ ನಿರ್ಧಾರವಾಗಿಬಿಟ್ಟಿದೆ ಎಂಬಂತೆ ಅವರು ಅವಸರದಿಂದ ಇಂಥ ಹೇಳಿಕೆ ಕೊಡುತ್ತಿರುವುದು ಸಾಧು ಎನಿಸುವುದಿಲ್ಲ.

**ಚಿತ್ರದುರ್ಗದ ಕೋಟೆಯೊಳಗಿರುವ ಒಂದು ಶಾಸನ:** ೨೦೧೪ರ ಫೆಬ್ರವರಿ ತಿಂಗಳಲ್ಲಿ, ಬೆಂಗಳೂರು ಬಿಟಿಎಂ ವಿಧಾನಸಭಾ ಕ್ಷೇತ್ರದ (ಕುವೆಂಪು ನಗರದ) ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಡಾ. ದೇವರಕೊಂಡಾರೆಡ್ಡಿಯವರು, ಈಮುಂದಿನಂತೆ ಒಂದು ಹೇಳಿಕೆಯನ್ನು ಕೊಟ್ಟಿರುತ್ತಾರೆ : "ಡಾ. ಎಂ.ಎಚ್. ಕೃಷ್ಣ ಸಂಶೋಧಿಸಿರುವ ಹಲ್ಮಿಡಿ ಶಾಸನವುಮೊದಲ ಕನ್ನಡಶಾಸನ ಎಂದು ಒಪ್ಪಿಗೆಯಾಗಿದೆ.ಆದರೆ ಚಿತ್ರದುರ್ಗದಲ್ಲಿ ಪತ್ತೆಯಾಗಿರುವ ಕ್ರಿ.ಶ. ೨೫೦ರ ಕಾಲಮಾನದ ಶಾಸನದಲ್ಲಿ 'ನಯಮ' ಎಂಬ ಕನ್ನಡ ಪದ ಪತ್ತೆಯಾಗಿದೆ. ಹೀಗಾಗಿ ಇದೇ ಕನ್ನಡದ ಮೊದಲ ಶಾಸನ ಎನ್ನಬಹುದು.ಈಬಗ್ಗೆ ಇನ್ನಷ್ಟು ಸಂಶೋಧನೆ ಅಗತ್ಯ ಇದೆ".ಈಬಗ್ಗೆ ಪತ್ರಿಕೆಯ ವರದಿಯಲ್ಲಿ ಒಂದೆಡೆ "ಇನ್ನೂ ೨೦೦ವರ್ಷ ಹಿಂದಕ್ಕೆ ತೆರಳಿದ ಕನ್ನಡ ಭಾಷೆಯ ಉಗಮ" ಎಂದೂ, ಇನ್ನೊಂದೆಡೆ "ಕನ್ನಡ ಸಾಹಿತ್ಯದ ಉಗಮ ಇನ್ನೂ ೨೦೦ವರ್ಷ ಹಿಂದಕ್ಕೆ ಹೋಗಿದೆ" ಎಂದೂ ಹೇಳಲಾಗಿದೆ.ವರದಿಯಲ್ಲಿ ಆ ಶಾಸನದ ಪದ 'ನಯಮ' ಎಂದು ಎರಡು ಕಡೆ ಬಂದಿದೆ.ವರದಿಗಾರರು ಕಿವಿಯಲ್ಲಿ ಕೇಳಿಸಿಕೊಳ್ಳುವಾಗಲೋ ಬರೆಯುವಾಗಲೋ ತಪ್ಪಾಗಿ ಆ ಶಾಸನದಲ್ಲಿಯ ಪದ 'ನಯಮ' ಎಂದು ವರದಿಯಲ್ಲಿ ಬಂದಿದೆ ಎನಿಸುತ್ತದೆ.ಆದರೆ, ಅದು ವಾಸ್ತವವಾಗಿ 'ಮಯಮ' ಇರಬೇಕಿತ್ತೆನಿಸುತ್ತದೆ.ಈ ಅಂಶ ಈ ಲೇಖನದ ಮುಂದಿನ ವಿವರದಲ್ಲಿ ವಿಶದವಾಗುತ್ತದೆ. ಇದಲ್ಲದೆ ಅವರು ಈ ಶಾಸನದ ಕಾಲಮಾನ ಕ್ರಿ.ಶ. ೨೫೦ ಎಂದಿರುವುದು ಆ ಶಾಸನ ಹೆಚ್ಚು ಕಡಿಮೆ ಶಾತವಾಹನರ ತರುವಾಯದ ಕಾಲ ಅಥವಾ ಕದಂಬರ ಮುಂಚಿನ ಕಾಲ ಎಂದು ಸೂಚಿಸಿದಂತಾಗಿದೆ.

ಡಾ. ದೇವರಕೊಂಡಾರೆಡ್ಡಿಯವರು ಈಮೇಲಿನಂತೆ ಹೇಳಿರುವ ಶಾಸನ 'ಮಯಮ' ಪಾಠ ಇರುವ ಶಾಸನ ಎಂದಾದರೆ, ಅದು ಚಿತ್ರದುರ್ಗದ ಬೆಟ್ಟದ ಮೇಲೆ ತಣ್ಣೀರು ದೋಣೆ ಎಂಬ ಸ್ಥಳದ ಎದುರಲ್ಲಿ ಒಂದು ಬಂಡೆಯಲ್ಲಿ ಕೊರೆಯಲಾಗಿರುವ ಶಾಸನವೇ ಎಂಬಲ್ಲಿ ಅನುಮಾನವಿಲ್ಲ. ಬಿ.ಎಲ್. ರೈಸ್ ಅವರು ಚಿತ್ರದುರ್ಗ ಶಾಸನ ಸಂಪುಟ (ಎ.ಕ. ೧೧)ವನ್ನು ೧೯೦೩ರಲ್ಲಿ ಹೊರತಂದಾಗ, ಅದರಲ್ಲಿ "ಬೆಟ್ಟದಲ್ಲಿ ಒನಕೆಕಂಡಿಯ ಬಾಗಿಲ ಉತ್ತರದ ಕಡೆ ಗುಂಡಿನ ಮೇಲೆ" ಎಂದು ಹೆಸರಿಸಿರುವ ಜಾಗದಲ್ಲಿಯ 'ದಯದ' ಎಂಬ ಒಂದೇ ಒಂದು ಪಂಕ್ತಿಯ ಶಾಸನವನ್ನು ಪ್ರಕಟಿಸಿದ್ದರು (ಚಿತ್ರದುರ್ಗ ೮). ರೈಸರು ಪ್ರಕಟಿಸಿರುವ ಶಾಸನಗಳನ್ನೆಲ್ಲಾ ಒಮ್ಮೆ ಕಣ್ಣಾರೆ ನೋಡಿ ಪರಿಶೀಲಿಸಬೇಕೆಂಬ ಆಕಾಂಕ್ಷೆಯಿಂದ ನಾನು ೧೯೮೭ರಲ್ಲಿ, ಕ್ಷೇತ್ರಕಾರ್ಯ ಕೈಕೊಂಡಾಗ, ರೈಸರು ಕೊಟ್ಟಿರುವ ಆ ಶಾಸನಕ್ಕಾಗಿ ಎಷ್ಟು ಹುಡುಕಾಡಿದರೂ ಅವರು ಸೂಚಿಸಿರುವ ಜಾಗದಲ್ಲೆಲ್ಲೂ ಅದು ಕಾಣಿಸಲಿಲ್ಲ. ಆದರೆ, ಆಮೇಲೆ ಮೇಲೆ ಹೇಳಿದ ತಣ್ಣೀರುದೋಣಿಯ ಬಳಿ ಬಂಡೆಯ ಮೇಲಿನ 'ಮಯಮ' ಎಂಬ ಪಾಠವಿರುವ ಶಾಸನವೇ ಅದು ಇರಬೇಕು ಎನಿಸಿತು. ಏಕೆಂದರೆ, ಈ ಶಾಸನದ 'ಮ' ಅಕ್ಷರ ಅವರಿಗೆ 'ದ' ಅಕ್ಷರದ ರೀತಿಯಲ್ಲಿ ಕಾಣಿಸಿದ್ದರಿಂದ ಅವರು 'ದಯದ' ಎಂಬ ಪಾಠ ಕೊಟ್ಟರೆಂದು ಕಾಣುತ್ತದೆ.'ಮ' ಅಕ್ಷರವೇನೋ ನಡುಗನ್ನಡದ 'ದ' ಅಕ್ಷರವನ್ನು ಹೋಲುವಂತಿದ್ದರೂ ಮಧ್ಯದ 'ಯ' ಹಾಗೆ ನಡುಗನ್ನಡದ 'ಯ' ವನ್ನು ಹೋಲುವಂತಿಲ್ಲ. ಹೀಗಾಗಿ ರೈಸ್ ಅವರು ಕೊಟ್ಟಿರುವ ಈ ಶಾಸನವಿರುವ ಜಾಗದ ವಿವರ ಹಾಗೂ ಅದರ ಪಾಠ ಎರಡೂ ವ್ಯತ್ಯಾಸಗೊಂಡಿರುವಂತೆ ಕಂಡುಬಂದಿತು.ರೈಸ್ ಅವರು ಇದು ಬ್ರಾಹ್ಮೀ ಲಿಪಿಯ ಶಾಸನವೆಂದು ಸರಿಯಾಗಿ ಗುರುತಿಸಿ ಓದಿದ್ದರೆ ಇದರ ಪಾಠ ಬೇರೆಯಾಗಿರುತ್ತಿತ್ತು. ಅಷ್ಟೇ ಅಲ್ಲ, ಇದರ ಬಗ್ಗೆ ವಿಶೇಷ ವಿವರ ಕೊಡುತ್ತಿದ್ದರೆಂಬಲ್ಲಿ ಸಂದೇಹವಿಲ್ಲ.

ಈ ಶಾಸನದಲ್ಲಿ ಸ್ಪಷ್ಟವಾಗಿ ಕಾಣುವುದು ಮೂರು ಅಕ್ಷರಗಳಾದರೂ ಕೊನೆಯಲ್ಲಿ ಇನ್ನೂ ಒಂದು ಅಕ್ಷರ ಇದ್ದು ಅದು ಸವೆದಿರುವಂತೆ ಕಾಣಿಸಿತು.ಸದ್ಯಕ್ಕೆ ಅಲ್ಲಿರುವ ಪಾಠ 'ದಯದ' ಎಂದಲ್ಲ, 'ಮಯಮ' ಎಂದು.ಹಾಗಾಗಿ,ಇದು ಬ್ರಾಹ್ಮೀ ಲಿಪಿಯಲ್ಲಿರುವುದರಿಂದ ಡಾ.ದೇವರಕೊಂಡಾರೆಡ್ಡಿ ಅವರು ಹೇಳಿದಂತೆ ಕನ್ನಡವೂ ಇರಬಹುದು; ಪ್ರಾಕೃತವೂ ಇರಬಹುದು; ಸಂಸ್ಕೃತವೂ ಇರಬಹುದು; ಅದು ನಿರ್ದಿಷ್ಟವಾಗಿ ಯಾವ ಭಾಷೆಯದೆಂದು ರುಜುವಾತಾಗಬೇಕಲ್ಲವೆ?ಹಾಗಾಗಿ ಅದು ಕನ್ನಡ ಶಾಸನವೇ ಎಂದುಈಗಲೇ ಹೇಳಲಾಗುವಂತಿಲ್ಲ.

ಇಲ್ಲಿ 'ಮಯಮ' ಎಂದಷ್ಟೇ ಪಾಠವಿದೆ ಎಂದು ಇಟ್ಟುಕೊಳ್ಳುವುದಾದರೆ, ಆ ಶಬ್ದ ಒಂದು ಹೆಸರಾಗಿರಬಹುದೆ?- ಎಂಬ ಅಂಶವನ್ನೂ ಸ್ವಲ್ಪ ನೋಡೋಣ. ಇಲ್ಲಿಯ ಪಾಠ 'ಮಯಮ' ಎಂದಷ್ಟೇ ಆಗಿದ್ದಿದ್ದರೆ ಅದು ಖಂಡಿತವಾಗಿ ಒಂದು ಹೆಸರು ಅಥವಾ ಹೆಸರಿನ ಸಂಕ್ಷಿಪ್ತ ರೂಪ ಆಗುವುದು ಸಾಧ್ಯವಿತ್ತು. ಏಕೆಂದರೆ, ಮಕಾರದಿಂದ ಕೊನೆಗೊಂಡಿರುವ ಅನೇಕ ಹೆಸರುಗಳು ಮತ್ತು ಹೆಸರಿನ ಸಂಕ್ಷಿಪ್ತ ರೂಪಗಳು ಪ್ರಾಚೀನ ಶಾಸನಗಳಲ್ಲಿ ಸಿಕ್ಕುತ್ತವೆ. ಉದಾಹರಣೆಗೆ, ಜೋಗಮ, ಭಿಲ್ಲಮ, ಕೃಷ್ಣಮ, ಸಂಗಮ, ಕುಂದಮ, ದಾಸಮ, ದಾಸಿಮ, ದಾಯಮ- ಇವು ಮಕಾರದಿಂದ ಕೊನೆಗೊಂಡಿರುವ ಹೆಸರುಗಳಾದರೆ, ಕತ್ತಮ/ಕಟ್ಟಮ, ಸಂಕಮ, ಎಂಬಂತಹ ಹೆಸರುಗಳು ಮಕಾರದಿಂದ ಕೊನೆಗೊಂಡಿದ್ದರೂ ಅವು ಅನುಕ್ರಮವಾಗಿ ಕಾರ್ತವೀರ್ಯ, ಶಂಖವರ್ಮ, ಮುಂತಾದ ಹೆಸರುಗಳ ಸಂಕ್ಷಿಪ್ತ ರೂಪಗಳಾಗಿವೆ. ಹೀಗೆ ಮಯಮ ಎಂಬುದೂ ಯಾವುದಾದರೊಂದು ಉದ್ದ ಹೆಸರಿನ ಸಂಕ್ಷಿಪ್ತ ರೂಪ ಆಗಿರಲೂಬಹುದು. ಅಂದರೆ ಮಯಮ ಎಂಬುದು ಅದು ಇರುವ ರೀತಿಯಲ್ಲೇ ಒಂದು ಹೆಸರಾಗಿರಬಹುದು ಅಥವಾ ಮಯೂರವರ್ಮ ಎಂಬ ರೀತಿಯ ಉದ್ದ ಹೆಸರಿನ ಒಂದು ಸಂಕ್ಷಿಪ್ತ ರೂಪವೂ ಇರಬಹುದು.ಚಿತ್ರದುರ್ಗದ ಬಳಿಯ ಚಂದ್ರವಳ್ಳಿ ಪ್ರದೇಶದಲ್ಲಿ ಕದಂಬರ ಮಯೂರವರ್ಮ ವಾಸವಾಗಿದ್ದುದು ಅಲ್ಲಿಯ ಶಾಸನದಿಂದ ಸುವ್ಯಕ್ತವಾಗಿದೆ. ಮಯೂರವರ್ಮನ ಸಾಹಚರ್ಯದಿಂದ ಮಯಮ ಎಂಬ ಹೆಸರು ಇಲ್ಲಿ ಬಂದಿದ್ದರೆ ಆಶ್ಚರ್ಯವಿಲ್ಲ- ಇಲ್ಲಿ ಇರುವ ಪಾಠ 'ಮಯಮ' ಎಂದಷ್ಟೇ ಆಗಿದ್ದರೆ.'ಮಯಮ'ದ ಅನಂತರ ಅಲ್ಲಿ ಇನ್ನೂ ಒಂದು ಅಕ್ಷರ ಇರಬಹುದೆನ್ನುವುದೇ ಇಲ್ಲಿರುವ ಪಾಠವನ್ನು ಸಂದಿಗ್ಧಗೊಳಿಸಿ, ಹಾಗೆ ತಿಳಿಯಲು ಅಡ್ಡಿಯಾಗಿದೆ ಎಂಬುದನ್ನು ಹೇಳಲೇಬೇಕು.

ಇಲ್ಲಿಯ ಶಬ್ದ-ಸ್ವರೂಪ ಮತ್ತು ಅರ್ಥ ಇವೇ ನಿಖರವಿಲ್ಲದಿರುವಾಗ, ಇದನ್ನು ಕನ್ನಡ ಭಾಷೆಯ ಶಾಸನವೆಂದು ಹೇಗೆ ಹೇಳುವುದು?ಆದ್ದರಿಂದ ಡಾ.ದೇವರಕೊಂಡಾರೆಡ್ಡಿ ಅವರ ಹೇಳಿಕೆಯನ್ನು ಈಮುಂದಿನಂತೆ ಬದಲಿಸಿಕೊಳ್ಳಬೇಕಾದ ಅವಶ್ಯಕತೆ ಕಾಣುತ್ತದೆ. ಅಂದರೆ ಈ ಶಾಸನ ಹಲ್ಮಿಡಿ ಶಾಸನಕ್ಕಿಂತ ಹಿಂದಿನದು ಎಂಬುದು ನಿಜ. ಆದರೆ, ಇದು ಕನ್ನಡ ಶಾಸನ ಎಂದು ಹೇಳಲಾಗುವಂತಿಲ್ಲ. ಕಾರಣವನ್ನು ಈಗಾಗಲೇ ಮೇಲೆ ವಿಶದಪಡಿಸಲಾಗಿದೆ, ಕೊನೆಯಲ್ಲಿ ಒಂದು ಅಕ್ಷರ ನಷ್ಟವಾಗಿರುವಂತೆ ಸಂದೇಹ ಇರುವುದರಿಂದ ಇದರ ಭಾಷೆ, ಇಲ್ಲಿಯ ಪದರೂಪ ನಿಶ್ಚಿತವಾಗುವಂತಿಲ್ಲ ಮತ್ತು ಅದರ ಅರ್ಥವೂ ಕೂಡಾ ಸ್ಪಷ್ಟವಾಗುವಂತಿಲ್ಲ.

### ಉದ್ಯಾವರ ಶಾಸನ

ಇತ್ತೀಚೆಗೆ೨೦೧೬ರ ಜುಲೈ-ಡಿಸೆಂಬರ್ ನ ಕಸಾಪಪ (೯೪-೦೭) ಸಂಚಿಕೆಯಲ್ಲಿ ಹಿರಿಯ ಶಾಸನತಜ್ಞರಾದ ಶ್ರೀ ಸೀತಾರಾಮ ಜಾಗೀರ್‌ದಾರ್ ಅವರು, "ಬಾದಾಮಿಯ (ಕಪ್ಪೆಅರಭಟ್ಟನ) ಶಾಸನಕ್ಕಿಂತ ಉದ್ಯಾವರದ ಪ್ರಾಚೀನ ತ್ರಿಪದಿ ಶಾಸನ ಹಲ್ಮಿಡಿಗಿಂತ ಹಳೆಯದು" ಎಂಬ ಲೇಖನವೊಂದನ್ನು ಪ್ರಕಟಿಸಿತ್ತಾರೆ. ಆ ಶಾಸನದ ಪಾಠ ಇದು :

೧. ಸ್ವಸ್ತಿ ಶ್ರೀ ಪಾಣ್ಡ್ಯವಿ

೨. ಲ್ಲರಸರಾ ಮಗ

೩. ನ್ದೇವು ಸಾದುಪ್ರಿಯನ

೪. ಸಾದುಜನವರ್ಜಿತನ್ವ್ರೆ

೫. ತವಾಹನರುದಯ

೬. ಪುರಮಾನ್ಪೊಗುವಲ್ಲಿ

೭. ಎಜಿದು ಸ್ವರ್ಗ್ಗಾಲಯ

೮. ಕ್ಕೆಜಿದೋನ್

[ಎಪಿ.ಇಂ., ಸಂಪುಟ ೯, ಸಂ. ಹುಲ್ಷ್ ಮತ್ತು ಸ್ಟೆನ್‌ಕೋನೋ, ನವದೆಹಲಿ, ೧೯೦೭-೦೮, ಪು.೧೫-೨೪]

ಈ ಶಾಸನದಲ್ಲಿ ಒಂದು ತ್ರಿಪದಿ ಇದೆಯೆಂದೂ, ಆ ಶಾಸನ ಹಲ್ಮಿಡಿ ಶಾಸನಕ್ಕಿಂತ ಹಳೆಯದು ಎಂದೂ ಅವರು ಆ ಲೇಖನದಲ್ಲಿ ಹೇಳಲು ಯತ್ನಿಸಿದ್ದಾರೆ.ಇಡೀ ಲೇಖನ ಮುಖ್ಯವಾಗಿ ಆ ಶಾಸನದಲ್ಲಿ ತ್ರಿಪದಿ ಇದೆ; ಅದು ಪ್ರಾಸರಹಿತವಾದದ್ದು-ಎಂಬುದನ್ನು ಪ್ರತಿಪಾದಿಸಲಿಕ್ಕೇ ಮೀಸಲಾಗಿದೆ.

ಅವರ ಲೇಖನವನ್ನು ಓದಿ, ಪ್ರಸ್ತುತ ಶಾಸನದ ಪಾಠವನ್ನು ಪರಿಶೀಲಿಸಲಾಗಿ, ಅದರ ಪಾಠದೊಳಗೆ ತ್ರಿಪದಿಯೊಂದು ಇದೆ ಎನ್ನುವುದೇ ಸಂದೇಹಾಸ್ಪದವಾಗಿ ಕಾಣಿಸುತ್ತದೆ. ಈ ಶಾಸನದಲ್ಲಿ ಬರುವ "ಸಾಧುಪ್ರಿಯನಸಾಧುಜನವರ್ಜಿತನ್.." ಎನ್ನುವ ಈ ಶಾಸನದ ಪದಪುಂಜ, ಬಾದಾಮಿ ಶಾಸನದಲ್ಲಿ ಬರುವ "ಶಿಷ್ಟಜನಪ್ರಿಯನ್ ಕಷ್ಟಜನವರ್ಜಿತನ್.." ಮತ್ತು "ಸಾಧುಗೆ ಸಾಧು ಮಾಧೂರ್ಯ್ಯಂಗೆ ಮಾಧೂರ್ಯ್ಯಂ.."ಎಂಬ ಪದಪುಂಜಗಳನ್ನು ಹೋಲುವುದರಿಂದ ಇಲ್ಲಿಯೂ ಒಂದು ತ್ರಿಪದಿ ಇದೆ ಎನ್ನುವ ಹಾಗೆ ಭಾಸವಾಗಿ ಹಾಗೆ ಪ್ರತಿಪಾದಿಸಲು ಅವರು ಯತ್ನಿಸಿದ್ದಾರೆ. ನಿಜವಾಗಿಯೂ ಇಲ್ಲಿ ತ್ರಿಪದಿ ಇದೆಯೆ ಎಂಬುದು ವಿಚಾರಣೀಯ.ಒಟ್ಟಿನಲ್ಲಿ ಅಲ್ಲಿ ತ್ರಿಪದಿ ಇರಲಿ, ಇಲ್ಲದಿರಲಿ, ಅದು ಹಲ್ಮಿಡಿ ಶಾಸನಕ್ಕಿಂತ ನಿಜವಾಗಿಯೂ ಹಳೆಯದೆ?ಎಂಬುದನ್ನಷ್ಟೆ ಈಗ ಮುಖ್ಯವಾಗಿ ನೋಡಬೇಕಾಗಿದೆ.

ಕಡೆಯಲ್ಲಿ ಆ ಶಾಸನದಲ್ಲಿ ಬರುವ 'ಶ್ವೇತವಾಹನರ್' ಎಂದಿರುವುದು'ಶಾತವಾಹನರು' ಎಂದೂ, ಅವರ ಯುದ್ಧದ ಪ್ರಸ್ತಾಪ ಇದರಲ್ಲಿ ಇರುವುದರಿಂದ ಆ ಯುದ್ಧ ಹಲ್ಮಿಡಿ ಶಾಸನಕ್ಕಿಂತ ಸ್ವಲ್ಪ ಮೊದಲು ನಡೆದ ಸಂಗತಿ ಎಂದೂ ಅವರು ಹೇಳಿದ್ದಾರೆ. ಆ ಯುದ್ಧ ಹಲ್ಮಿಡಿ ಶಾಸನಕ್ಕಿಂತ ಪೂರ್ವದಲ್ಲಿ ನಡೆದದ್ದು ಎಂದು ಅವರು ಹೇಳಿರುವುದಕ್ಕೆ ಯಾವ ಆಧಾರವನ್ನೂ ಕೊಟ್ಟಿರುವುದಿಲ್ಲ. ಈ ಶಾಸನದಲ್ಲಿ ಬರುವ ಶ್ವೇತವಾಹನ ಎಂಬ ಹೆಸರು ಶಾತವಾಹನವೇ ಎನ್ನುವ ಭಾವನೆಯಿಂದ, ಈ ಶಾಸನ ಶಾತವಾಹನರು ಉದಯಪುರದ ಮೇಲೆ ನಡೆಸಿದ ಯುದ್ಧದ ಪ್ರಸ್ತಾಪ ಇರುವುದರಿಂದ ಇದು ಹಲ್ಮಿಡಿ ಶಾಸನಕ್ಕಿಂತ ಹಳೆಯದು ಎಂದು ಅವರ ತರ್ಕ ಇದ್ದಂತಿದೆ. ಅಷ್ಟು ಬಿಟ್ಟರೆ ಈ ಶಾಸನ ಹಲ್ಮಿಡಿಯದಕ್ಕಿಂತ ಹಳೆಯದೆನ್ನಲು ಇನ್ನಾವುದೇ ಅಂಶವನ್ನೂ ಮುಂದಿಡಲು ಅವರು ಪ್ರಯತ್ನಿಸಿಲ್ಲ.ಶಾಸನದ ಲಿಪಿ, ಭಾಷೆ, ಇಂಥ ಯಾವ ಅಂಶವನ್ನು ಕುರಿತೂ ಅವರು ಏನನ್ನೂ ಹೇಳಿರುವುದಿಲ್ಲ. ಲಿಪಿ ದೃಷ್ಟಿಯಿಂದ ಇದು ಬಾದಾಮಿ ಶಾಸನಕ್ಕಿಂತ ಹಿಂದಿನದಿರಬಹುದೆ ಎಂದುಸಂದೇಹವಾಗುವುದಾದರೂ, ಅದರಲ್ಲಿ ಬರುವ ಶ್ವೇತವಾಹನ ಹೆಸರಿನ ಕಾರಣ, ಈಗಾಗಲೆ ತಿಳಿದುಬಂದಿರುವಂತೆ, ಇದು ಆಳುಪ ವಂಶದ ಆ ಹೆಸರಿನ ರಾಜನ ಕಾಲದ್ದು ಅಂದರೆ ಕ್ರಿ.ಶ.ಸು. ೯ನೆಯ ಶತಮಾನದ್ದು ಎಂದೂ ಸ್ಪಷ್ಟವಾಗುತ್ತದೆ.

ಈ ಶಾಸನ ಹಲ್ಮಿಡಿಯದಕ್ಕಿಂತ ಪೂರ್ವದ್ದು ಎನ್ನುವುದನ್ನು ಅವರು ಒಂದೇ ಒಂದು ವಾಕ್ಯದಲ್ಲಿ ಹೇಳಿರುವುದರ ಹೊರತು ಆಬಗ್ಗೆ ವಿವರ ಕೊಡುವ ಬೇರೆ ಇನ್ನೊಂದು ವಾಕ್ಯವನ್ನೇ ಬರೆದಿಲ್ಲ. ಒಟ್ಟಾರೆ, ಅವರು ಶ್ವೇತವಾಹನ=ಶಾತವಾಹನ ಎಂಬ ಸಮೀಕರಣವನ್ನು ಇಟ್ಟುಕೊಂಡು, ಈ ಶಾಸನ ಹಲ್ಮಿಡಿಯದಕ್ಕಿಂತ ಹಳೆಯದು ಎಂದು ಹೇಳುವ ಪ್ರಯತ್ನ ಮಾಡಿದ್ದಾರೆ.ಆದರೆ ಉದ್ಯಾವರದ ಇತರ ಶಾಸನಗಳನ್ನು ನೋಡಿದಾಗ, ಶ್ವೇತವಾಹನ ಎಂಬುದು ಚಿತ್ರವಾಹನ ಎಂಬ ರೀತಿಯ ಆಳುಪ ವಂಶದ ಒಬ್ಬ ರಾಜನ ಹೆಸರೇ ಹೊರತು ಶಾತವಾಹನ ಎಂಬ ರಾಜವಂಶದ ಹೆಸರು ಅಲ್ಲವೇ ಅಲ್ಲಮತ್ತು ಆ ರಾಜ,ಕ್ರಿ.ಶ.ಸು.೯ನೇ ಶತಮಾನದಲ್ಲಿದ್ದ ಎನ್ನುವುದು ಈಗಾಗಲೇ ಸ್ಥಾಪಿತವಾಗಿರುವ ಒಂದು ಸಂಗತಿ.ಶಾಸನದಲ್ಲಿ 'ಶ್ವೇತವಾಹನರ್' ಎಂದಿರುವಲ್ಲಿ ಆ ರಾಜನನ್ನು ಗೌರವದಿಂದ ಹಾಗೆ ಬಹುವಚನದಲ್ಲಿ ಹೆಸರಿಸಲಾಗಿದೆ, ಅಷ್ಟೇ.

ಮೇಲೆ ಹೇಳಿದ ಶಾಸನಗಳ ಬಗ್ಗೆ ಎಂಥೆಂಥ ತಾಂತ್ರಿಕ ಅಂಶಗಳ ಪ್ರಶ್ನೆಗಳಿವೆಎಂಬುದು ಈಮೇಲಿನ ವಿವೇಚನೆಯಿಂದ ಸ್ಪಷ್ಟವಾಗಿ ಕಾಣುತ್ತದೆ.ಈ ಶಾಸನಗಳು ಹಲ್ಮಿಡಿ ಶಾಸನಕ್ಕಿಂತ ನಿಜವಾಗಿ ಪೂರ್ವದವು ಎಂದಾದರೆ ಅದು ಸಂತೋಷಿಸಬೇಕಾದ ಸಂಗತಿ.ಇವುಗಳಲ್ಲಿ ಯಾವುದೇ ಶಾಸನ ಹಲ್ಮಿಡಿಯದಕ್ಕಿಂತ ಹಿಂದಿನದು ಎಂದು ನಿಸ್ಸಂಶಯವಾಗಿ ಸಿದ್ಧವಾದರೆ ಮಾತ್ರ, ಅದು ಸರ್ವತ್ರ ಸ್ವೀಕರಣೀಯ ಸಂಗತಿಯಾಗುತ್ತದೆ ಮತ್ತು ಕನ್ನಡದ ಬಗೆಗಿನ ಹೆಮ್ಮೆಯ ಸಂಗತಿಯೂ ಆಗುತ್ತದೆ.ಅದನ್ನು ಶೋಧಿಸಿದವರಿಗೆ ನ್ಯಾಯವಾಗಿ ಬರಬೇಕಾದ ಕೀರ್ತಿಯೂ ಬರುತ್ತದೆ.ಆದರೆ ಅದಕ್ಕೆ ಅವಸರ ಸಲ್ಲದು.ಸೂಕ್ತ ಪ್ರಮಾಣಗಳಿಲ್ಲದೆ ದಿಢೀರ್ ತೀರ್ಮಾನಎಂದೂ ನಿಲ್ಲಲಾರದು. ಕನ್ನಡದ ಆಚಾರ್ಯ ಬಿಎಂಶ್ರೀ ಅವರು "ಕೊನೆಗೆ ನಿಲ್ಲುವುದು ಅಭಿಮಾನವಲ್ಲ, ಸತ್ಯ" ಎಂತಲೂ, ಇನ್ನೊಬ್ಬ ಆಚಾರ್ಯ ತೀನಂಶ್ರೀ ಅವರು "ಅಭಿಮಾನ, ಸತ್ಯದ ಕಣ್ಣು ಮುಚ್ಚಬಾರದು" ಎಂತಲೂ ಹೇಳಿರುವ ಮಾತುಗಳನ್ನು ಇಲ್ಲಿ ನೆನಪಿಸಿಕೊಳ್ಳಬೇಕು; ಕೇವಲ ಭಾವನಾತ್ಮಕತೆ ಸತ್ಯಕ್ಕೆಪುರಾವೆ ಆಗಲಾರದು.

[ಡಾ. ದೇವರಕೊಂಡಾರೆಡ್ಡಿ ಅವರ ಹೇಳಿಕೆ ಬಂದಿರುವ ಪತ್ರಿಕೆಯ ಕಟಿಂಗನ್ನು ನನ್ನ ಕೋರಿಕೆಯ ಮೇರೆಗೆ ಕಳಿಸಿಕೊಟ್ಟು ನೆರವಾದವರು ಡಾ. ಎಂ.ಜಿ. ನಾಗರಾಜ್ ಅವರಿಗೆ ನನ್ನ ಕೃತಜ್ಞತೆಗಳು.]



# ಇಮ್ಮಡಿ ಪುಲಕೇಶಿಯ ಪುಣೆಯ ತಾಮ್ರ ಶಾಸನ : ಮರುಪರಿಶೀಲನೆ

ಎಸ್. ನಾಗರಾಜಪ್ಪ*

**ಈ**ಗ್ಗೆ ಸುಮಾರು ೨ ವರ್ಷಗಳ ಹಿಂದೆ, ೨೦೧೬ರಲ್ಲಿ, ಮಹಾರಾಷ್ಟ್ರ ರಾಜ್ಯದ ಪ್ರಸಿದ್ಧ ನಗರಗಳಲ್ಲೊಂದಾದ ಪುಣೆಯಲ್ಲಿ ಬಾದಾಮಿ ಚಲಿಕ್ಯ ಅರಸ ಇಮ್ಮಡಿ ಪುಲಕೇಶಿಗೆ ಸೇರಿದ ಮೂರು ಫಲಕಗಳ ತಾಮ್ರ ಶಾಸನವೊಂದು ಬೆಳಕಿಗೆ ಬಂದಿತು. ಅಲ್ಲಿನ ಸುಪ್ರಸಿದ್ಧ ಭಂಡಾರ್ಕರ್ ಪ್ರಾಚ್ಯ ಸಂಶೋಧನಾ ಸಂಸ್ಥೆಯ (Bhandarkar Oriental Research Institute) ರಿಜಿಸ್ಟ್ರಾರ್ ಶ್ರೀನಂದ ಬಾಪಟ್ ಮತ್ತು ಅಂತರಾಷ್ಟ್ರೀಯ ಪ್ರಾಚ್ಯವಸ್ತು ಸಂಗ್ರಹಕಾರರ ಸಂಘದ ಸದಸ್ಯರಾದ ಪ್ರದೀಪ್ ಎಸ್. ಸೊಹೋಣಿ ಅವರ ಬಳಿಯಲ್ಲಿ ಈ ತಾಮ್ರಶಾಸನವಿತ್ತು. ಶ್ರೀಯುತರು ಇದನ್ನು ಮುಂಬಯಿಯ ಪ್ರಸಿದ್ಧ ನಾಣ್ಯ ಸಂಗ್ರಹಕಾರ ರಘುವೀರ್ ಪೈ ಅವರಿಂದ ಅಧ್ಯಯನಕ್ಕಾಗಿ ಪಡೆದಿದ್ದರು. ಪ್ರಸ್ತುತ ತಾಮ್ರಶಾಸನವನ್ನು ವಿಜಯಪುರದ ಗುಜರಿ ಅಂಗಡಿಯೊಂದರಲ್ಲಿ, ಸುಮಾರು ೨ ದಶಕಗಳ ಹಿಂದೆ ರಘುವೀರ್ ಪೈ ಅವರು ಕೊಂಡುಕೊಂಡಿದ್ದರು. ಆದರೆ ವಾಸ್ತವವಾಗಿ ತಾಮ್ರ ಶಾಸನವು ದೊರೆತ ಸ್ಥಳ ಯಾವುದು ಎನ್ನುವ ಮಾಹಿತಿ ಅಲಭ್ಯ. ಆದರೆ ಇದು ಕರ್ನಾಟಕ ಮೂಲದ ತಾಮ್ರ ಶಾಸನ ಎನ್ನುವುದು ಸ್ಪಷ್ಟ. ಈ ಶಾಸನದ ಪಡಿಯಚ್ಚು ತೆಗೆದು ಅಧ್ಯಯನ ನಡೆಸುವ ಸದವಕಾಶ ದೊರೆತದ್ದು ನನ್ನ ಸುಯೋಗ.

ಪ್ರಸ್ತುತ ತಾಮ್ರ ಶಾಸನವನ್ನು ಶ್ರೀನಂದ ಬಾಪಟ್ ಮತ್ತು ಪ್ರದೀಪ್ ಎಸ್. ಸೊಹೋಣಿ ಅವರು The Bijapur-Mumbai Copper plate Grant of Chalukya Ruler Pulakesin II , Dated April 04 619 CE, Mentioning his Triumph over Emperor Harshavardhana ಎನ್ನುವ ಶೀರ್ಷಿಕೆಯಲ್ಲಿ ಪುಣೆಯ ಭಂಡಾರ್ಕರ್ ಪ್ರಾಚ್ಯ ಸಂಶೋಧನಾ ಸಂಸ್ಥೆಯ Annals of the Bhandarkar Oriental Research Institute, ಸಂಪುಟ ೯೩ರಲ್ಲಿ ಪ್ರಕಟಿಸಿದ್ದಾರೆ. ಶ್ರಿಯುತರ ಪ್ರಯತ್ನ ಅಭಿನಂದನಾರ್ಹ. ಇವರು ಪುಲಿಕೇಶಿಯು ಹರ್ಷವರ್ಧನನ್ನು ಸೋಲಿಸಿದ ವಿಷಯವನ್ನು ದಾಖಲಿಸಿದ್ದಾರೆ. ಅದರ ಹಿಂದಿನ ರಾಜಕೀಯ ಪರಿಸ್ಥಿತಿ, ಯದ್ಧಕ್ಕೆ ಪ್ರೇರಣೆಯಾದ ಕಾರಣಗಳ ಕುರಿತು ಮೌನ ವಹಿಸಿದ್ದಾರೆ. ಹಾಗೆಯೇ ಅವರ ಶಾಸನದ ಓದಿನಲ್ಲಿಯೂ ದೋಷಗಳಿವೆ. ಹಾಗಾಗಿ ಶಾಸನವನ್ನು ಮರು ಪರಿಶೀಲನೆಗೆ ಒಳಪಡಿಸಿ, ಪರಿಷ್ಕೃತ ಪಾಠದೊಡನೆ ಈ ಮೇಲಿನ ಸಂಗತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಇದರಲ್ಲಿನ ಐತಿಹಾಸಿಕ ಸಂಗತಿಗಳ ಪರಿಶೀಲನೆಯ ನೆಲೆಯಲ್ಲಿ ಇಮ್ಮಡಿ ಪುಲಕೇಶಿ ಮತ್ತು ಹರ್ಷವರ್ಧನ ಮಧ್ಯೆ ನಡೆದ ನರ್ಮದಾ ನದಿ ಕದನದ ವರ್ಷವನ್ನು ನಿರ್ಧರಿಸುವ ಪ್ರಯತ್ನವೇ ಪ್ರಸ್ತುತ ಪ್ರಬಂಧ.

ಈ ಮೊದಲೇ ಹೇಳಿರುವಂತೆ ಮೂರು ಹಲಗೆಗಳ ಪ್ರಸ್ತುತ ತಾಮ್ರ ಶಾಸನ ಗುಚ್ಛವು ಒಟ್ಟು ೯೧೯ ಕಿಲೋಗ್ರಾಂ. ತೂಕವಿದೆ. ಇದರ ಪ್ರತಿ ಹಲಗೆಯು ೨೨.೦ ಸೆಂಟಿಮೀಟರ್ ಉದ್ದ, ೫.೮ ಸೆಂಟಿಮೀಟರ್ ಅಗಲವಿದೆ. ಎಲ್ಲಾ ಹಲಗೆಗಳ ಬಲಪಾರ್ಶ್ವದಲ್ಲಿ ರಂಧ್ರವನ್ನು ಮಾಡಿ, ಅವುಗಳನ್ನು ೮.೭ ಸೆಂಟಿಮೀಟರ್ ವೃತ್ತ ವಿನ್ಯಾಸದ ಬಳೆಗೆ ಸೇರಿಸಿ, ಮುದ್ರೆಯಿಂದ ಬಂಧಿಸಲಾಗಿದೆ. ೨.೮ ಸೆಂಟಿಮೀಟರ್ ವ್ಯಾಸವುಳ್ಳ ಕಂಚಿನ ಮುದ್ರೆಯ ಎರಡೂ ಬದಿಯ ಅಂಚಿನಲ್ಲಿರುವುದು ಬಹುಷಃ ಕೀರ್ತಿಮುಖದ ಅಲಂಕರಣೆ. ವೃತ್ತಾಕಾರದ ಮುದ್ರೆಯಲ್ಲಿ ಬಲಮುಖವಾಗಿ ನಿಂತಿರುವ, ಚಲಿಕ್ಯರ ಅವಧಿಯ ಇತರ ತಾಮ್ರ ಶಾಸನಗಳಲ್ಲಿ ಕಂಡುಬರುವ ಇವರ ಲಾಂಛನ ವರಾಹವನ್ನು ತೋರಲಾಗಿದೆ. ಶಾಸನದ ಮೊದಲನೆಯ ಮತ್ತು ಕೊನೆಯ ಫಲಕಗಳ ಒಳಬದಿ ಹಾಗೂ ನಡುವೆ ಇರುವ ಫಲಕದ ಎರಡೂ ಬದಿಗಳಲ್ಲಿ ಹೀಗೆ ಒಟ್ಟು ೨೦ ಪಂಕ್ತಿಗಳ ಬರವಣಿಗೆಯಿದೆ.

ಆರಂಭಿಕ ಕನ್ನಡ ಲಿಪಿಯಲ್ಲಿ ಬರೆದಿರುವ ಈ ತಾಮ್ರ ಶಾಸನದ ಭಾಷೆ ಸಂಸ್ಕೃತ. ಲಿಪಿಯು ಇಮ್ಮಡಿ ಪುಲಕೇಶಿಯ ಮೊಡಲಿಂಬ್, ತುಂಬೆಯನೂರು ಮತ್ತು ನೆರೂರು ತಾಮ್ರ ಶಾಸನಗಳಿಗೆ ಸ್ವಲ್ಪ ಹೋಲುತ್ತದೆಯಾದರೂ, ಶಾಸನ ರಚನಾಕಾರನ ಕಾರಣದಿಂದ ಲಿಪಿಯ ಸ್ವರೂಪದಲ್ಲಿ ಅನೇಕ ವ್ಯತ್ಯಾಸಗಳನ್ನು ಗುರುತಿಸಬಹುದು. ಶಾಸನದ ಹಲಗೆಗಳನ್ನು ಬಳೆಗೆ

* ಸಹಾಯಕ ಅಧೀಕ್ಷಕ ಶಾಸನ ತಜ್ಞರು, ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ಹೆಬ್ಬಾಳ, ಮೈಸೂರು-೫೭೦೦೧೭, ಮೊ. ೮೯೦೪೪೬೬೩೩೧

ಸೇರಿಸಿರುವ ಭಾಗಗಳಲ್ಲಿ ಕೆಲವು ಅಕ್ಷರಗಳು ಸ್ವಲ್ಪ ಸವೆದಿವೆ. ಆದಾಗ್ಯೂ ಅವುಗಳನ್ನು ಗುರುತಿಸುವುದು ಹೆಚ್ಚಿನ ತೊಡಕೆನಿಸುವುದಿಲ್ಲ. ಕೆಲವೆಡೆ ಭಾಷೆಯ ಪ್ರಯೋಗದಲ್ಲಿ ಸಹ ಕೆಲವು ನ್ಯೂನ್ಯತೆಗಳನ್ನು ಗುರುತಿಸಬಹುದು. ಶಾಸನದ ಪಠ್ಯವು ಈ ಕೆಳಗಿನಂತಿದೆ.

**ಶಾಸನದ ಪಾಠ**

**ಮೊದಲನೆಯ ಹಲಗೆ: ಹಿಂಬದಿ**

೧. ಸ್ವಸ್ತಿ ಶ್ರೀಮತಾಂ ಸಕಲಭುವನ ಸಂಸ್ತೂಯಮಾನ ಮಾನವ್ಯ–

೨. ಸಗೋತ್ರಾಣಾಂ ಹಾರೀತೀಪುತ್ರಾಣಾಂ ಸಪ್ತಲೋಕಮಾತೃಭಿಸು(ಸ್ಸ)–

೩. ಪ್ರಮಾತೃಭಿಃರಭಿವರ್ದ್ಧ(ರ್ದ್ಧಿ)ತಾನಾಂ ಕಾರ್ತ್ತಿಕೇಯ ಪರಿರಕ್ಷಣಪ್ರಾಪ್ತ

೪. [ಕಲ್ಯಾ]ಣಪರಮ್ಪರಾಣಾಂ ಭಗವನ್ನಾರಾಯಣ ಪ್ರಸಾದಾ–

೫. ತ್ಸಮಾಸಾಧಿತ ವರಾಹಲಾಞ್ಛನೇಕ್ಷಣಕ್ಷಣ ವಶೀಕೃತಾಶೇಷಮಹೀಭೃತಾಂ

**ಎರಡನೆಯ ಹಲಗೆ: ಮುಂಬದಿ**

೬. ಚಲಿಕ್ಯಾನಾಂ ಕುಲಮಲಂಕರಿಷ್ಣೋರಶ್ವಮೇಧಾವಭೃತಾ(ತ್ರ)ಪಿ(ಸ್ನಾ)ನ ಪವಿತ್ರೀಕೃತಗಾತ್ರಸ್ಯ

೭ ಸತ್ಯಾಶ್ರಯ ಶ್ರೀ ಪುಲಿಕೇಶಿವಲ್ಲಭ ಮಹಾರಾಜಸ್ಯ ತನಯಃ ಪರಾ–

೮. ಕ್ರಮಾ[ಕ್ರಾ]ನ್ತ ಮನಮ(ವ)ಸ್ಯ ದೀಪಸರನೃಪತಿ ಮಣ್ಡಲಪ್ರಣೀಬದ್ಧ ವಿಶುದ್ಧ

೯. ಕೀರ್ತ್ತಿಪತಾಕಸ್ಯ ಕೀರ್ತ್ತಿವರ್ಮ್ಮವಲ್ಲಭ ಮಹಾರಾಜಸ್ಯ ತನಯೋ ನಯವಿನಯಾದಿ

೧೦. [ಗುಣರಿ]ಭೂತ್ಯಾಶ್ರಯಃ ಸತ್ಯಾಶ್ರಯಃ ಶ್ರೀ ಪ್ರಿ(ಪೃ)ಥಿವೀವಲ್ಲಭಮಹಾರಾಜಾಧಿ–

**ಎರಡನೆಯ ಹಲಗೆ: ಹಿಂಬದಿ**

೧೧. ರಾಜ(ಜಃ) ಸಮರಸಂಘಟ್ಟೋರ್ಮಿಸಂಸತ್ ಶ್ರೀ ಹರ್ಷವರ್ದ್ಧನ ಪರಾಜಯೋಪ

೧೨. ಲ[ಬ್ದ]ಪರಮೇಶ್ವರಾಪರನಾಸ(ಮ)ಧೇಯಃ ಸರ್ವ್ವಾನಾಜ್ಞಾಪಯತಿ ವಿದಿತ

೧೩. ಮಸ್ಯವಾಸ್ಮಾನಿಃ ಕೌಶಿಕಗೋತ್ರಾಯಾಂ ನಾಗಶರ್ಮ್ಮಣಸ್ಯ ವೇದವೇದಾಙ್ಗ ಪಾರಗಸ್ಯ

೧೪. ನವಮೇವರ್ಷೇ ವೈಶಾಖ ಪೂರ್ಣ್ಣಿಮೇ ಚಂದ್ರಗ್ರಹಣದಿವಸೇ ಗೋದಾವರೀಮಹಾನದಿತಟೇ ಬ್ರಹ್ಮಣ

೧೫. [ವಟ]ವಿಯನ್ನಾಮಗ್ರಾಮೇ ಮಾಜುಕ್ಷೇ ಪಂಚಾಶನ್ನಿವರ್ತ್ತನಂ ಚ (ಕ್ಷೇ)ತ್ರಂ ಮಹಾಮಾನೇನ ಶ್ರೀ

೧೬. ಮತಾ ಪುಲಿಕೇಶಿವಲ್ಲಭಮಹಾರಾಜ್ಞೇನ ಚತುವೈಶ್ವದೇವೀಸ(ತ್ರಿ)ಸಯಜ್ಞಗೋತ್ತರಿನಾತಿ ದತ್ತ[ಂ*]

**ಮೂರನೆಯ ಹಲಗೆ: ಮುಂಬದಿ**

೧೭. [ಬಹುಭಿ]ರ್ವಸುಧಾ ಭುಕ್ತಾರಾಜಭಿಸ್ಸದ(ಗ)ರಾದಿಭಿಃ ಯಸ್ಯಯಸ್ಯ–

೧೮. ಯದಾಭೂಮಿಃ ತಸ್ಯತಸ್ಯತದಾಫಲಂ ಸ್ವ[ದ*]ತ್ತಾ[ಂ*] ಪರದತ್ತಾಂ ವಾ–

೧೯. ಯೋ ಹರ(ರೇ)ತಿ ವಸುನ್ಧರಾಂ ಷಷ್ಟಿರ್ವರ್ಷಸಹಸ್ರಾಣಿ ವಿಷ್ಟಾಯಾಂ

೨೦. ಜಾಯತೇ ಕ್ರಿಮಿಃ

**ಶಾಸನದ ತಾತ್ಪರ್ಯ:** ಒಟ್ಟಾರೆಯಾಗಿ ಶಾಸನದ ತಾತ್ಪರ್ಯವನ್ನು ಈ ಕೆಳಗಿನಂತೆ ಕಾಣಬಹುದು. ಸ್ವಸ್ತಿ ಎನ್ನುವ ಮಂಗಳ ಸೂಚಕ ಪದದೊಂದಿಗೆ ಪ್ರಾರಂಭವಾಗುವ ಪ್ರಸ್ತುತ ತಾಮ್ರ ಶಾಸನದಲ್ಲಿ ಚಲಿಕ್ಯರ ಕಾಲದ ಇತರೆ ತಾಮ್ರ ಶಾಸನಗಳಲ್ಲಿ ಕಂಡುಬರುವಂತಹ, ಅವರ ವಂಶಾವಳಿ ಮತ್ತು ಕಾರ್ತಿಕೇಯನ ವರ್ಣನೆಯಿದೆ. ಇದರಲ್ಲಿ ವರಾಹ ಲಾಂಛನವನ್ನು ಹೊಂದಿದ್ದ ಚಲಿಕ್ಯ ವಂಶದಲ್ಲಿ ಹುಟ್ಟಿ, ಅಶ್ವಮೇಧ ಯಾಗವನ್ನು ಮಾಡಿದವನು ಸತ್ಯಾಶ್ರಯ ಪುಲಕೇಶಿ. ಅವನ ಮಗ ಕೀರ್ತಿವರ್ಮ. ಅವನ ಮಗ ಸತ್ಯಾಶ್ರಯ. ಈತ ಹರ್ಷವರ್ಧನನಿಗೆ ಪರಾಜಯವನ್ನು ಉಂಟುಮಾಡಿ, ಪರಮೇಶ್ವರ ಎನ್ನುವ ಅಪರನಾಮವನ್ನು ಹೊಂದಿದ್ದ ಎಂದು ಶಾಸನವು ತಿಳಿಸುತ್ತದೆ. ವೇದ ವೇದಾಂಗಗಳ ಅಧ್ಯಯನದಲ್ಲಿ ಪ್ರಸಿದ್ಧನಾಗಿದ್ದ,

ಕೌಶಿಕಗೋತ್ರಕ್ಕ ಸೇರಿದ ನಾಗಶರ್ಮನಿಗೆ ಅರಸ ಇಮ್ಮಡಿ ಪುಲಕೇಶಿಯು ೫೦ ನಿವರ್ತನ ಭೂಮಿಯನ್ನು ಗೋದಾವರೀ ಮಹಾನದಿಯ ದಂಡೆಯಲ್ಲಿರುವ ಬ್ರಾಹ್ಮಣವಟವಿಯಾ ಎನ್ನುವ ಗ್ರಾಮದಲ್ಲಿ ನೀಡಿದ್ದಾಗಿ ಈ ಶಾಸನವು ತಿಳಿಸುತ್ತದೆ. ಕೊನೆಯ ಹಲಗೆಯಲ್ಲಿ "ಬಹುಭಿರ್ವಸುಧಾ . . ." ಮತ್ತು "ಸ್ವದತ್ತಂ. . ." ಎನ್ನುವ ಶಾಪಾಶಯ ಶ್ಲೋಕಗಳೊಂದಿಗೆ ಶಾಸನವು ಮುಕ್ತಾಯವಾಗುತ್ತದೆ.

**ಶಾಸನದ ಕಾಲ:** ಪ್ರಸ್ತುತ ತಾಮ್ರ ಶಾಸನವು ವಾತಾಪಿ ಚಲಿಕ್ಯ ವಂಶದ ಅರಸ ಒಂದನೆಯ ಕೀರ್ತಿವರ್ಮನ ಮಗ, ಎರಡನೆಯ ಪುಲಕೇಶಿಯು ಹೊರಡಿಸಿದ ಶಾಸನವೆಂದು ಈ ಮೇಲೆಯೇ ಹೇಳಿದೆ. ಇವನ ಆಳ್ವಿಕೆಯ ೯ನೆಯ ವರ್ಷದ, ವೈಶಾಖ ಮಾಸ, ಹುಣ್ಣಿಮೆಯಂದು ಈ ಶಾಸನವನ್ನು ಹೊರಡಿಸಲಾಗಿದೆ. ಅಂದು ಚಂದ್ರಗ್ರಹಣ ಇದ್ದುದಾಗಿಯೂ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಇಮ್ಮಡಿ ಪುಲಕೇಶಿಯು ಕ್ರಿ.ಶ. ೬೧೦ರಿಂದ ೬೪೨ರವರೆಗೆ ಒಟ್ಟು ೩೨ ವರ್ಷಗಳ ಕಾಲ ಆಳ್ವಿಕೆ ನಡೆಸಿದ. ಹಾಗಾಗಿ, ಪ್ರಸ್ತುತ ಶಾಸನದ ಕಾಲವು ಅವನ ಆಳ್ವಿಕೆಯ ೯ನೆಯ ವರ್ಷಕ್ಕೆ, ಅಂದರೆ, ಕ್ರಿ.ಶ. ೬೧೯ ಏಪ್ರಿಲ್ ೪ಕ್ಕೆ ಸರಿಹೊಂದುತ್ತದೆ.

**ಪುಲಕೇಶಿ ಮತ್ತು ಹರ್ಷವರ್ಧನನ ಸಂಘರ್ಷ:** ಪ್ರಸ್ತುತ ಶಾಸನದಲ್ಲಿ ಉಲ್ಲೇಖವಾಗಿರುವ ಸತ್ಯಾಶ್ರಯನು ಇಮ್ಮಡಿ ಪುಲಕೇಶಿ ಎನ್ನುವುದರಲ್ಲಿ ಯಾವುದೇ ಸಂದೇಹವಿಲ್ಲ. ಎಱೆಯ, ಎಱೆಯಮ್ಮ, ಎಱೆಯಿತಿಯಡಿಗಳ್ ಪರಮೇಶ್ವರ, ದಕ್ಷಿಣ ಪಥೇಶ್ವರ ಮತ್ತು ರಣವಿಕ್ರಮ ಎನ್ನುವ ವಿಶೇಷಣಗಳನ್ನು ಹೊಂದ್ದಿದ್ದ ಇವನು ಬಾದಾಮಿ ಚಲಿಕ್ಯರಲ್ಲಿ ಪ್ರಸಿದ್ಧ ಅರಸ. ತನ್ನ ವಿಜಯದ ಕಾರ್ಯಗಳಿಂದ ಅತ್ಯಂತ ಪ್ರಸಿದ್ಧನಾಗಿ ಚಲಿಕ್ಯರ ಕೀರ್ತಿ ಪತಾಕೆಗಳನ್ನು ಇಮ್ಮಡಿಗೊಳಿಸಿದ. ಈ ಹಂತದಲ್ಲಿ ಅವನು ಅನೇಕ ಅರಸರನ್ನು ಸೋಲಿಸಬೇಕಾಗಿ ಬಂತು.

ಮೇಗುತಿಯ ಜೈನ ಬಸದಿಯ ಗೋಡೆಯ ಮೇಲೆ ಬರೆಯಲಾದ ಪುಲಕೇಶಿಯ ಐಹೊಳೆ ಪ್ರಶಸ್ತಿಯು ಅವನ ಪ್ರಮುಖ ಶಾಸನಗಳಲ್ಲೊಂದು. ಇವನ ಯಶೋಗಾಥೆಯನ್ನು ಬಣ್ಣಿಸಲಾದ ಈ ಶಾಸನದಲ್ಲಿ ಸಿಂಹಾಸನವನ್ನು ಮಂಗಳೇಶನಿಂದ ಬಲವಂತವಾಗಿ ಪಡೆದುಕೊಂಡನೆಂದಿದೆ. ಅಪ್ಪಾಯಿಕ ಗೋವಿಂದ, ಒಳಗೊಂಡಂತೆ ಉತ್ತರ ಪಥೇಶ್ವರನೆಂದು ಪ್ರಖ್ಯಾತನಾದ ಹರ್ಷವರ್ಧನನ್ನೂ, ದಕ್ಷಿಣದ ಅನೇಕ ಅರಸರನ್ನೂ ಸೋಲಿಸಿದ. ಈ ಶಾಸನವನ್ನು ಕ್ರಿ.ಶ. ೬೩೦–೩೪ರಲ್ಲಿ ಹಾಕಿಸಲಾಗಿದ್ದು, ಯಾವ ವರ್ಷಗಳಲ್ಲಿ ಯಾವ ಅರಸರನ್ನು ಸೋಲಿಸಿದನೆಂಬ ಮಾಹಿತಿಯಿಲ್ಲ. ಭಾರತಕ್ಕೆ ಭೇಟಿನೀಡಿದ ಹ್ಯೂಯನ್–ತ್ಸಾಂಗ್ ಸಹ ತನ್ನ ಪ್ರವಾಸಿ ಕಥನದಲ್ಲಿ ಪುಲಕೇಶಿಯು ಹರ್ಷವರ್ಧನನನ್ನು ಸೋಲಿಸಿದ ಬಗ್ಗೆ ದಾಖಲಿಸಿದ್ದಾನೆ. ಆದರೆ ಈ ಯುದ್ಧ ನಡೆದ ವರ್ಷವನ್ನು ಎಲ್ಲಿಯೂ ದಾಖಲಿಸಿಲ್ಲ.

ಉತ್ತರ ಮತ್ತು ದಕ್ಷಿಣದ ಎರಡು ಮಹಾ ಶಕ್ತಿಗಳು ನರ್ಮದಾ ನದಿ ತೀರದಲ್ಲಿ ಸಂಧಿಸಿದ್ದು ಯಾವ ವರ್ಷದಲ್ಲಿ ಎನ್ನುವ ಬಗ್ಗೆ ವಿದ್ವನ್ವಲಯದಲ್ಲಿ ಜಿಜ್ಞಾಸೆಗಳಿವೆ. ಈ ಕುರಿತು ಪ್ರತಿಯೊಬ್ಬರೂ ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದಾರೆ. ದುಬ್ರೇಲಿ ಎನ್ನುವ ವಿದ್ವಾಂಸರು ಇದು ಕ್ರಿ.ಶ. ೬೩೭–೩೮ರಲ್ಲಿ ನಡೆಯಿತೆಂದು ತಿಳಿಸಿದರೆ, ಸ್ಮಿತ್ ಅವರು ಕ್ರಿ.ಶ. ೬೨೦ರಲ್ಲಿ ನಡೆಯಿತು ಎನ್ನುತ್ತಾರೆ.

ಹರ್ಷ ಮತ್ತು ಪುಲಕೇಶಿಯ ಯುದ್ಧ ಕ್ರಿ. ಶ.೬೧೨ ಕ್ಕೂ ಪೂರ್ವದಲ್ಲಿ ಜರುಗಿತು ಎನ್ನುವುದು ಜೆ. ಎಫ್. ಫ್ಲೀಟ್ ಅವರ ಅಭಿಮತ. ಇದಕ್ಕೆ ಅವರು ನೀಡುವ ಆಧಾರ, ಪುಲಕೇಶಿಗೆ ಹೈದರಾಬಾದ್ ತಾಮ್ರ ಶಾಸನದಲ್ಲಿರುವ 'ಪರಮೇಶ್ವರ' ಎನ್ನುವ ವಿಶೇಷಣದ ಉಲ್ಲೇಖ ಮತ್ತು ಚೀನಿ ಪ್ರವಾಸಿಗ ಹ್ಯೂಯನ್–ತ್ಸಾಂಗ್‌ನ ವರದಿ. ಶಿಲಾದಿತ್ಯನು (ಹರ್ಷವರ್ಧನ) ತನ್ನ ಆಳ್ವಿಕೆಯ ಮೊದಲ ೬ ವರ್ಷಗಳಲ್ಲಿ ದಿಗ್ವಿಜಯಗಳನ್ನು ಪೂರೈಸಿ ಉಳಿದ ೩೦ ವರ್ಷಗಳನ್ನು ಆಯುಧಗಳನ್ನು ಹಿಡಿಯದೆ ಶಾಂತಿಯುತವಾಗಿದ್ದ ಎನ್ನುವ ಹೇಳಿಕೆಯನ್ನು ಆಧರಿಸಿ ಈ ಮೇಲಿನ ಅಭಿಮತವನ್ನು ವ್ಯಕ್ತಪಡಿಸಿದ್ದಾರೆ. ಆರ್.ಕೆ. ಮುಖರ್ಜಿ, ಕೆ. ಚಟ್ಟೋಪಾಧ್ಯಾಯ, ಪ್ರೊ.ಕೆ.ಎ. ನೀಲಕಂಠಶಾಸ್ತ್ರಿ, ಕೆ.ವಿ. ರಮೇಶ್ ಮತ್ತು ಇತ್ತೀಚೆಗೆ ಶ್ರೀನಿವಾಸ. ವಿ. ಪಾಡಿಗಾರ್ ಅವರು ಸಹ ಈ ಮೇಲಿನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಆದರೆ ಆರ್.ಎಸ್. ತ್ರಿಪಾಠಿ ಮತ್ತು ಎ.ಎಸ್. ಅಲ್ಟೇಕರ್, ಜಿ.ಎಸ್. ಚಟರ್ಜಿ ಮತ್ತು ದೇವಹುತಿ ಅವರುಗಳು ಈ ಮೇಲಿನ ವಾದವನ್ನು ತಿರಸ್ಕರಿಸುತ್ತಾರೆ. ಇವರು ಐಹೊಳೆ ಪ್ರಶಸ್ತಿಯನ್ನು ಆಧರಿಸಿ ಈತ ಹರ್ಷವರ್ಧನನ್ನು ಕ್ರಿ.ಶ.೬೩೦ ಅಥವಾ ೬೩೪ರ ಪೂರ್ವದಲ್ಲಿ ಸೋಲಿಸಿಲ್ಲವೆನ್ನುತಾರೆ. ಹ್ಯೂಯನ್–ತ್ಸಾಂಗ್‌ನ ವರದಿಯಲ್ಲಿ ಮೂವತ್ತು ವರ್ಷಗಳ ಶಾಂತಿಯುತ ಆಳ್ವಿಕೆಯ ನಂತರ ಹರ್ಷವರ್ಧನ ಕೊಂಗಡ ಪ್ರಾತ್ಯದ ಮೇಲೆ ಕ್ರಿ.ಶ. ೬೪೩ರಲ್ಲಿ ದಾಳಿ ಮಾಡಿದ್ದಾಗಿ ಹೇಳಿದ್ದಾರೆ. ಹಾಗಾಗಿ, ಬೇಲ್ ಮತ್ತ ವಟ್ಟೆರ್ಸ್ ಅವರ ಹ್ಯೂಯನ್–ತ್ಸಾಂಗ್‌ನ ವರದಿಗಳ ಅನುವಾದ ಸಹ ಗೊಂದಲಗಳಿಂದ

ಕೂಡಿದೆ ಎನ್ನುವುದು ಅವರ ವಾದ. ಪುಲಕೇಶಿಯು ಸಾಮ್ರಾಜ್ಯದಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಳ್ಳದೆ ಹರ್ಷನನ್ನು ಸೋಲಿಸಿರುವುದು ಸಾಧ್ಯವಿಲ್ಲ. ಆದ್ದರಿಂದ ಡಿ.ಸಿ. ಸರ್ಕಾರ್ ಅವರು ತನ್ನ ಸಾಮ್ರಾಜ್ಯದ ಪಕ್ಕದಲ್ಲಿದ್ದ ಸಣ್ಣ ಪುಟ್ಟ ಪ್ರಭುತ್ವಗಳನ್ನು ಜಯಿಸಿ, ಪರಮೇಶ್ವರ ಎನ್ನುವ ಬಿರುದನ್ನು ಪುಲಕೇಶಿಯು ಧರಿಸಿದ್ದಿರಬೇಕು. ಆನಂತರದಲ್ಲಿ ಅಂದರೆ, ಕ್ರಿ.ಶ. ೬೪೬ಕ್ಕೆ ಮೊದಲು ಈ ಯುದ್ಧವು ಜರುಗಿರುವ ಸಾಧ್ಯತೆಯಿಲ್ಲ ಎನ್ನುತ್ತಾರೆ. ಡಿ.ಪಿ. ದೀಕ್ಷಿತ್ ಸಹ ಕಂಡಲಗಾವ್ ತಾಮ್ರಶಾಸನವನ್ನು ಆಧರಿಸಿ ಕ್ರಿ.ಶ. ೬೧೫ ಎಂದೂ, ಶಂಕರ್ ಗೋಯಲ್ ಅವರು ಕ್ರಿ.ಶ. ೧೬೨೦ರ ನಂತರದಲ್ಲಿ ಈ ಕದನವು ನಡೆದಿದೆ ಎಂದು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ನರ್ಮದಾ ನದಿ ಕದನವು ಪುಲಕೇಶಿಯ ಆಳ್ವಿಕೆಯ ಆರಂಭಿಕ ವರ್ಷಗಳಲ್ಲಿ ನಡೆದಿದೆ ಎನ್ನಲು ಮುಖ್ಯ ಕಾರಣ ಆತ ಧರಿಸಿದ್ದ ಪರಮೇಶ್ವರ ಎನ್ನುವ ಬಿರುದು. ತನ್ನ ಆಳ್ವಿಕೆಯ ಆರಂಭಿಕ ವರ್ಷಗಳ ಅವಧಿಯಲ್ಲಿಯೇ ಇದನ್ನು ಧರಿಸಿದ್ದಾಗಿ ಶಾಸನಗಳಿಂದ ತಿಳಿಯುತ್ತದೆ. ಪುಲಕೇಶಿಯ ಅವಧಿಯಲ್ಲಿ ಹೊರಟ ಒಟ್ಟು ೨೦ ಶಾಸನಗಳಲ್ಲಿ, ಪ್ರಸ್ತುತ ಶಾಸನವೂ ಒಳಗೊಂಡಂತೆ, ಕೇವಲ ೪ ತಾಮ್ರ ಶಾಸನಗಳು ಮಾತ್ರ ಅವನಿಗೆ ಪರಮೇಶ್ವರ ಎಂಬ ವಿಶೇಷಣವನ್ನು ಉಲ್ಲೇಖಿಸಿವೆ. ಇವನ ಆಳ್ವಿಕೆಯ ೩ನೆಯ ವರ್ಷದಲ್ಲಿ (ಕ್ರಿ.ಶ. ೬೧೨) ಹೊರಡಿಸಿದ ಹೈದರಾಬಾದ್ ತಾಮ್ರಶಾಸನವು "ಶ್ರೀ ಸತ್ಯಾಶ್ರಯ ಪೃಥಿವೀವಲ್ಲಭ ಮಹಾರಾಜಃ ಸಮರಶತಸಂಘಟ್ಟಸಂಸಕ್ತ ಪರನೃಪತಿಪಾರಜಯೋಪಲಬ್ದ ಪರಮೇಶ್ವರಾಪರನಾಮಧೇಯಃ" ಎಂದಿದೆ. ಮೊದಲಿಂಬ್‌ನ ತೇದಿರಹಿತ ಶಾಸನದಲ್ಲಿ "ಹಿರಣ್ಯಗರ್ಭಸ್ಯಾಶ್ವಮೇಧಾ(ಧ)ಯಾಜಿನ[ಃ*] ಪೌತ್ರಃ ಸ್ವಬಾಹುಬಲಿ ವಿಕ್ರಮೋಪಾತ್ತರಾಜ್ಯ[ಃ*] ಅನೇಕನೃಪತಿ ಪರಮೇಶ್ವರಃ" ಎಂದಿದೆ. ಕ್ರಿ.ಶ. ೬೧೪–೧೫ರಲ್ಲಿ ಹೊರಡಿಸಿದ ಕಂಡಲಗಾವ್ ತಾಮ್ರಶಾಸನವು "ಸತ್ಯಾಶ್ರಯ ಶ್ರಿ(ಶ್ರೀ) ಪ್ರಿ(ಪೃ)ಥಿವೀವಲ(ಲ್ಲ)ಭ ಮಹಾರಾಜಾಧಿರಾಜ ಪರಮೇಶ್ವರ ಶ್ರೀ ಪುಲಕೇಶಿವಲ(ಲ್ಲ)ಭ ಮಹಾರಾಜಾಧಿರಾಜ ಪರಮೇಶ್ವ[ರ*] ಭಟ್ಟಾರಕ[ಸ್ಯ*] ಸಮಧಿಗತ ಪಞ್ಚಮಹಾಶರ್ಬ(ಬ್ದ) ಅವಾಪ್ತ ಪರಮಪೌರುವ(ಷಾ)ಪರನಾಮಧೇಯ ಸಕಲೋರ್ತ(ತ್ತ)ರಾಪಥಾಧಿಪತಿ ಶ್ರಿ(ಶ್ರೀ)ಹರ್ಷವರ್ಧನ ಪರಾಜಯೋಪಲಬ್ದ(ಬ್ಧಾ)ಪರನಾಮಧೇಯಸ್ಯ" ಎಂದು ಬಣ್ಣಿಸಿದೆ. ಆದರೆ ಈ ಶಾಸನದ ಭಾಷೆ ಮತ್ತು ಲಿಪಿಯ ಸ್ವರೂಪದ ಹಿನ್ನೆಲೆಯಲ್ಲಿ ಕೂಟ ಶಾಸನವೆಂದು ಪರಿಗಣಿಸಿರುವುದು ಉಲ್ಲೇಖನೀಯ. ಒಂದನೆಯ ವಿಕ್ರಮಾದಿತ್ಯ ಮತ್ತು ಅವನ ನಂತರದ ತಾಮ್ರ ಶಾಸನಗಳಲ್ಲಿ ಈ ಮೇಲಿನ ಶಾಸನಗಳಂತೆ ಇಮ್ಮಡಿ ಪುಲಕೇಶಿಯನ್ನು ವರ್ಣಿಸಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ.

ಈ ಮೇಲಿನ ಎಲ್ಲಾ ವಿದ್ವಾಂಸರ ಹೇಳಿಕೆಗಳನ್ನು ಮತ್ತು ಪುಲಕೇಶಿಯ ಶಾಸನಗಳನ್ನು ಅವಲೋಕಿಸಿದರೆ ಅವನ ಯುದ್ಧಗಳ ಸ್ಥೂಲ ಚಿತ್ರಣ ನಮಗೆ ದೊರೆಯುತ್ತದೆ. ಐಹೊಳೆ ಪ್ರಶಸ್ತಿಯಲ್ಲಿ ಬಣ್ಣಿಸಿರುವಂತೆ ಇವನು ತನ್ನ ಯುದ್ಧಗಳನ್ನು ಹಂತಹಂತವಾಗಿ ನಡೆಸಿರುವುದು ಸ್ಪಷ್ಟಪಡುತ್ತದೆ. ಅಳುಪರು ಆಳುತ್ತಿದ್ದ ಆಳುವಖೇಡ, ಕಟಚೂರಿಗಳು ಆಳುತ್ತಿದ್ದ ಕೊಂಕಣ ಪ್ರಾಂತ್ಯ ಮತ್ತು ರೇವತಿ ದ್ವೀಪವನ್ನು ಈ ಪೂರ್ವದಲ್ಲಿ ಮಂಗಳೇಶನ ಅಧೀನದಲ್ಲಿದ್ದವು. ಆದರೆ ಮಂಗಳೇಶ ಮತ್ತು ಪುಲಕೇಶಿಯ ನಡುವಿನ ಉತ್ತರಾಧಿಕಾರತ್ವದ ಕಲಹ ಸಮಯದಲ್ಲಿ ಇವರು ಸ್ವತಂತ್ರರಾಗಿದ್ದಿರಬೇಕು. ಪುಲಕೇಶಿಯು ನಾಡನೂರು ವ್ಯಾಪ್ತಿಯಲ್ಲಿದ್ದ ಸಿಂಬಿಗೆ–ಎಟ್ಟಿತ್ತರಲ್ಲಿ ನಡೆದ ಕದನದಲ್ಲಿ ಮಂಗಳೇಶನನ್ನು ಮಣಿಸಿ, ಚಲಿಕ್ಯ ಸಾಮ್ರಾಜ್ಯದ ಅಧಿಪತಿಯಾಗಿ ಪಟ್ಟಾಭಿಷಿಕ್ತನಾದ ನಂತರ ತನ್ನ ದಂಡೆಯಾತ್ರಗಳನ್ನು ಕೈಗೊಂಡನು. ತನ್ನ ವಿರುದ್ಧ ಧ್ವನಿಯೆತ್ತಿದ್ದ ರಾಷ್ಟ್ರಕೂಟ ಸಾಮಂತರಾದ ಅಪ್ಪಾಯಿಕ ಮತ್ತು ಗೋವಿಂದರನ್ನು ಸದೆಬಡಿದು, ವನವಾಸಿ(ಬನವಾಸಿ)ಯ ಕೋಟೆಯನ್ನು ಗೆದ್ದ ನಂತರ, ಗಂಗರು ಮತ್ತು ಅಳುವಖೇಡದ ಅಳುಪರು ಇವನ ಸಾರ್ವಭೌಮತ್ವವನ್ನು ಒಪ್ಪಿಕೊಂಡಿರಬೇಕು. ಈ ವಿಜಯಗಳ ನಂತರ ತನ್ನ ದಂಡೆಯಾತ್ರೆಯನ್ನು ಕೊಂಕಣ ತೀರಪ್ರದೇಶದ ಕಡೆಗೆ ನೆಟ್ಟಿರಬೇಕು. ಅಲ್ಲಿನ ಮೌರ್ಯರು ಮತ್ತು ಪುರಿ ದ್ವೀಪಗಳನ್ನು ವಶಪಡಿಸಿಕೊಂಡು, ಲಾಟ, ಗುರ್ಜರ ಮತ್ತು ಮಾಳ್ವ ಅರಸರನ್ನು ತನ್ನ ಮಾಂಡಲೀಕರನ್ನಾಗಿ ಮಾಡಿಕೊಂಡ. ಆನಂತರ ಅವನು ಹರ್ಷನನ್ನು ಸೋಲಿಸಿದ. ನರ್ಮದಾ ನದಿಯ ತೀರದಲ್ಲಿ ನಡೆದ ಈ ಕದನದಲ್ಲಿ ವಿಜಯಲಕ್ಷ್ಮಿ ಪುಲಕೇಶಿಯ ಪಾಲಾದಳು. ಇದು ಅವನ ಮಹತ್ತರ ಸಾಧನೆ. ಆನಂತರ ೯೯೦೦೦ ಗ್ರಾಮಗಳಿರುವ ಮೂರು ಮಹಾರಾಷ್ಟ್ರಕಗಳ ಒಡೆಯ ಎನಿಸಿಕೊಂಡ. ಈ ದಿಗ್ವಿಜಯಗಳ ನಂತರ ಪಿಷ್ಟಪುರ ಕೋಟೆಯನ್ನು ಗೆದ್ದು, ಪಲ್ಲವರ ರಾಜಧಾನಿ ಕಂಚಿಯ ಬಿಜಯಂಗೆಯ್ದು, ಕಾವೇರಿ ನದಿಯನ್ನು ದಾಟಿ ಚೋಳ, ಚೇರ ಮತ್ತು ಪಾಂಡ್ಯರನ್ನು ಮಣಿಸಿ ವಾತಾಪಿಗೆ ಹಿಂದಿರುಗಿದನೆಂದು ರವಿಕೀರ್ತಿಯ ಐಹೊಳೆಯ ಪ್ರಶಸ್ತಿ ಅತ್ಯಂತ ಸೊಗಸಾಗಿ ಇವನ ಸಾಧನೆಗಳನ್ನು ಬಣ್ಣಿಸಿದೆ.

ಕ್ರಿ.ಶ. ೬೧೦–೬೧೨ರಲ್ಲಿ ಪುಲಕೇಶಿಯು ಹರ್ಷನನ್ನು ಸೋಲಿಸಿದ್ದಿರಬಹುದಾದ ಸಾಧ್ಯತೆ ಕಡಿಮೆ. ಇದಕ್ಕೆ ಕಾರಣ ಪುಲಕೇಶಿಯ ಅಂದಿನ ರಾಜಕೀಯ ಪರಿಸ್ಥಿತಿ. ಇವನು ಚಲಿಕ್ಯ ಸಿಂಹಾಸನದ ಅಧಿಪತಿಯಾಗಿದ್ದು ಸಹ ರಕ್ತಸಿಕ್ತವಾದ ಭೀಕರ ಯುದ್ಧದ ಮೂಲಕ ಎನ್ನುವುದನ್ನು ಈ ಮೇಲೆಯೇ ಹೇಳಿದೆ. ಈ ಅಭದ್ರ ರಾಜಕೀಯ ಸಮಯದಲ್ಲಿ ತನ್ನ

ಸುತ್ತಮುತ್ತಲ ಅನೇಕ ಸಣ್ಣಪುಟ್ಟ ಪ್ರಭುತ್ವಗಳು ಬಂಡೆದಿದ್ದವು. ಇದು ಪುಲಕೇಶಿಗೆ ನಿಜಕ್ಕೂ ಸವಾಲಾಗಿದ್ದು, ಮುಳ್ಳಿನ ಹಾಸಿಗೆಯಂತಿದ್ದರಿಂದ ಮೊದಲು ಇವರನ್ನು ಮಣಿಸಬೇಕಾಗಿತ್ತು. ಅಳುಪ ಮನೆತನದ ರಾಜಕುಮಾರಿ ಕದಂಬಮಹಾದೇವಿಯನ್ನು ಮಂಗಳೇಶ ವಿವಾಹವಾಗಿದ್ದು, ಅಳುಪ ಅರಸ ಅವರ ಜೊತೆ ಉತ್ತಮ ಬಾಂದವ್ಯ ಹೊಂದಿದ್ದ ಸಂಗತಿಯನ್ನು ಮಾರಟೂರು ತಾಮ್ರ ಶಾಸನವು ತಿಳಿಸುತ್ತದೆ. ಆದರೆ ಪುಲಕೇಶಿಯು ಮಂಗಳೇಶನನ್ನು ಸೋಲಿಸಿ ಕೊಲ್ಲುವ ಮೂಲಕ ಸಿಂಹಾಸನವನ್ನು ಪಡೆದಿದ್ದ. ಹಾಗಾದರೆ ಇದನ್ನು ವಿರೋಧಿಸಿ ಆಳುಪರು ಇವನಿಗೆ ಪ್ರತಿರೋಧ ಒಡ್ಡಿದ್ದರೇ? ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ಈ ಬಗ್ಗೆ ಆಧಾರಗಳ ಕೊರತೆಯಿದೆ. ಆದರೆ ಇದನ್ನು ಹೀಗೆ ಅರ್ಥೈಸಬಹುದು. ಆರಂಭದಲ್ಲಿ ಮಂಗಳೇಶನಿಗೆ ಬೆಂಗವಲಾಗಿ ನಿಂತಿದ್ದ ಅಳುಪರು, ಅವನ ಮರಣಾನಂತರ ತಮ್ಮ ಉಳಿವಿಗಾಗಿ ಸ್ವಾಮಿನಿಷ್ಠೆಯನ್ನು ಬದಲಿಸಿ, ಪ್ರಾಯಶಃ ಪುಲಕೇಶಿಯ ಪ್ರಭುತ್ವವನ್ನು ಒಪ್ಪಿದ್ದಿರಬೇಕು. ಆನಂತರದಲ್ಲಿ ಕೊಂಕಣ ಪ್ರಾಂತ್ಯವನ್ನು ಮತ್ತು ಪುರಿ ದ್ವೀಪವನ್ನು ಗೆಲ್ಲಲು ಇವರು ಪುಲಕೇಶಿಗೆ ನೌಕಾಪಡೆಯ ಸಹಾಯವನ್ನು ಒದಗಿಸಿದ್ದಿರಬಹುದು. ಐಹೊಳೆಯ ಶಾಸನದಲ್ಲಿ ನಿರೂಪಿತವಾಗಿರುವಂತೆ ಹಂತಹಂತವಾಗಿ ಅವರನ್ನು ಸೋಲಿಸಿ, ತನ್ನ ಸ್ಥಾನವನ್ನು ಸುಭದ್ರಪಡಿಸಿಕೊಂಡು, ಇಲ್ಲಿ ತನಗೆ ಯಾವುದೇ ಅಡೆತಡೆಗಳಿಲ್ಲದಾದ ನಂತರವೇ ಎರಡನೆಯ ಹಂತದ ದಿಗ್ವಿಜಯಗಳನ್ನು ಕೈಗೊಂಡಿದ್ದಿರಬೇಕು. ಇತ್ತ ಪುಲಕೇಶಿಯು ಸೇಂದ್ರಕರ ಜೊತೆ ಉತ್ತಮ ಬಾಂಧವ್ಯ ಹೊಂದಿದ್ದು, ಇವರು ಸಹ ಬಾದಾಮಿ ಚಲಿಕ್ಯ ಅರಸರ ನಿಷ್ಠಾವಂತ ಸಾಮಂತರಾಗಿದ್ದರು. ಬಾಣರು ಸಹ ಪುಲಕೇಶಿಗೆ ಆರಂಭದಿಂದಲೇ ಸಹಾಯ ಹಸ್ತ ನೀಡಿದ್ದರು. ಇತ್ತ ಗಂಗ ಅರಸ ದುರ್ವಿನೀತನು ಸಹ ಪುಲಕೇಶಿಗೆ ಸಹಕರಿಸಿದ್ದಿರಬೇಕು.

## ಪುಲಕೇಶಿ ಮತ್ತು ಹರ್ಷನ ಯುದ್ಧಕೆ ಕಾರಣಗಳು

ಇತಿಹಾಸದಲ್ಲಿ ಕಾರ್ಯಕಾರಣಿ ಸಂಬಂಧಗಳಿಗೆ ಮಹತ್ವದ ಸ್ಥಾನವಿದೆ. ಪ್ರತಿ ಘಟನೆಯ ಹಿಂದೆ ಅನೇಕ ಕಾರಣಗಳಿರುತ್ತವೆ. ಅಂತೆಯೇ ಪುಲಕೇಶಿ ಮತ್ತು ಹರ್ಷವರ್ಧನರ ಯುದ್ಧಕೆ ಕಾರಣಗಳು ಇರಲೇ ಬೇಕಲ್ಲವೇ? ಹಾಗಾದರೆ ಆ ಕಾರಣಗಳು ಏನಿದ್ದಿರಬಹುದು? ಈ ವಿಷಯದ ಕುರಿತಂತೆ ಅವಲೋಕಿಸುವುದು ಉತ್ತಮ. ಯುದ್ಧಕ್ಕೆ ಬಿಜಾಂಕುರವಾಗಿದ್ದಿರಬಹುದಾದ ಕಾರಣಗಳನ್ನು ಪ್ರಾಯಶಃ ರಾಜಕೀಯ ಮತ್ತು ಆರ್ಥಿಕ ನೆಲೆಗಟ್ಟಿನಲ್ಲಿ ಈ ಕೆಳಗಿನಂತೆ ವಿಶ್ಲೇಷಿಸಬಹುದು. ಪುಲಕೇಶಿ ಕೊಂಕಣದ ಮೂಲಕ ಹಾದು ಅಲ್ಲಿನ ಮೌರ್ಯ ಅರಸರನ್ನು ಸೋಲಿಸಿದ ನಂತರ ಲಾಟ, ಗೂರ್ಜರ ಮತ್ತು ಮಾಳ್ವದ ಅರಸರನ್ನು ಇವನ ಸರ್ವಭೌಮತ್ವವನ್ನು ಒಪ್ಪಿಕೊಂಡರು ಎಂದು ಐಹೊಳೆ ಶಾಸನವು ಬಣ್ಣಿಸುತ್ತದೆ. ಲಾಟರು ತಾಪ್ತಿ ಮತ್ತು ದಮನಗಂಗಾ ನದಿಯ ನಡುವಿನ ಪ್ರಾಂತ್ಯವನ್ನು ಆಳುತ್ತಿದ್ದರು. ಗೂರ್ಜರರು ಗುಜರಾತಿನ ಉತ್ತರ ಮತ್ತು ಪೂರ್ವ ಭಾಗವನ್ನು ಆಳುತ್ತಿದ್ದು, ಇವರಲ್ಲಿ ಉಜ್ಜೈನಿ ಮತ್ತು ಕನೌಜ್ ಹಾಗೂ ಬ್ರೋಚ್‌ನಿಂದ ಆಳುತ್ತಿದ್ದ ಶಾಖೆಗಳಿದ್ದವು. ಪುಲಕೇಶಿ ಅಧಿನರಾದದ್ದು ಬ್ರೋಚ್ ಶಾಖೆಯ ಗೂರ್ಜರರು ಎಂಬುದು ಬಿ.ಎನ್. ಪುರಿ ಅಭಿಮತ. ಉಳಿದ ಎರಡು ಶಾಖೆಗಳು ೮ನೆಯ ಶತಮಾನದ ನಂತರದ ಅವಧಿಯವು. ಹಾಗಾಗಿ ಐಹೊಳೆ ಶಾಸನದಲ್ಲಿ ಉಕ್ತವಾಗಿರುವ ಗೂರ್ಜರರು ಬ್ರೋಚ್ ಶಾಖೆಯಿಂದ ಆಳುತ್ತಿದ್ದ ಗೂರ್ಜರ ಶಾಖೆ ಎನ್ನಬಹುದು. ಮಾಳ್ವವು ಸಹ ನರ್ಮದಾ ನದಿಯ ಉತ್ತರ ಭಾಗವನ್ನು ಒಳಗೊಂಡಂತೆ ಇಂದಿನ ಮಧ್ಯಪ್ರದೇಶದ ಉಜ್ಜೈನಿ, ವಿದಿಶಾ ಜಿಲ್ಲೆಗಳ ಸುತ್ತಮುತ್ತಲಿನ ಪ್ರದೇಶವನ್ನು ಒಳಗೊಂಡ ಪ್ರಾಂತ್ಯವಾಗಿತ್ತು. ಮಾಳ್ವದ ಅರಸರು ಹರ್ಷನ ಪೂರ್ವಜರೊಡನೆ ವೈವಾಹಿಕ ಸಂಬಂಧ ಬೆಳಸಿದ್ದರು. ರಾಜವರ್ಧನ ಮತ್ತು ಹರ್ಷವರ್ಧನ ಸಿಂಹಾಸನವೇರಲು ಸಹ ಮಾಳ್ವ ಪ್ರಾಂತ್ಯವನ್ನು ಆಳುತ್ತಿದ್ದ ಸ್ಥಳಿಯ ಗುಪ್ತ ಸಾಮ್ರಾಜ್ಯದ ಕುಮಾರಗುಪ್ತ ಮತ್ತು ಮಾಧವಗುಪ್ತ ಸಹಕರಿಸಿದ್ದರು. ಇತ್ತ ಸೌರಾಷ್ಟ್ರವನ್ನು ಆಳುತ್ತಿದ್ದ ಮೈತ್ರಕರ ದೊರೆ ಶಿಲಾದಿತ್ಯ ಮಾಳ್ವರನ್ನು ಬುಡಸಮೇತ ಕೀಳಲು ಪ್ರಯತ್ನಿಸುತ್ತಿದ್ದ. ಹೆಚ್ಚಿನ ಫಲವತ್ತಿನ ಭೂಮಿಯುನ್ನು ಹೊಂದಿದ್ದ ನರ್ಮದಾ ನದಿಯು ವಿಂಧ್ಯ ಮತ್ತು ಸಾತ್ಪುರ ಬೆಟ್ಟ ಶ್ರೇಣಿಗಳ ಮೂಲಕ ಹರಿದು ಬ್ರೋಚ್ ಪಟ್ಟಣದ ಹತ್ತಿರ ಅರಬ್ಬೀ ಸಮುದ್ರವನ್ನು ಸೇರುತ್ತದೆ. ಇದು ವ್ಯಾಪಾರ ವಾಣಿಜ್ಯಕ್ಕೆ ಸಹ ಅತ್ಯಂತ ಆಯಕಟ್ಟಿನ ಪ್ರದೇಶ. ಪ್ರಾಚೀನ ಕಾಲದಿಂದ ವ್ಯಾಪಾರ–ವಾಣಿಜ್ಯ ಕೇಂದ್ರವಾಗಿ, ಸಮುದ್ರವ್ಯಾಪಾರ ಮತ್ತು ಒಳನಾಡಿನ ಜಲಸಾರಿಗೆಯ ಸೇತುವೆಯಂತೆ ಪ್ರಮುಖ ಪಾತ್ರ ವಹಿಸಿದ್ದಿತು. ಈ ಪ್ರದೇಶವನ್ನು ಗೆದ್ದವರಿಗೆ ಹೊರನಾಡು ಮತ್ತು ಒಳನಾಡಿನ ಜಲಸಾರಿಗೆಗೆ ಅನುಕೂಲಕರವಾಗಿದ್ದರಿಂದ ಅನೇಕ ಆರ್ಥಿಕ ಅನುಕೂಲಗಳಿದ್ದವು. ಆದ್ದರಿಂದ ಇದರ ಒಡೆತನಕ್ಕೆ ಇವರುಗಳು ಪ್ರಯತ್ನಿಸುತ್ತಿದ್ದಿರಬೇಕು. ಈ ಮೇಲಿನ ಕಾರಣಗಳ ಜೊತೆಗೆ ಹರ್ಷ ಸಹ ತನ್ನ ವಂಶಜರ ಜೊತೆ ನಿಕಟ ಬಾಂಧವ್ಯ ಹೊಂದಿದ್ದ ಮಾಳ್ವದ ಅರಸರನ್ನು ರಕ್ಷಿಸುವ ಉದ್ದೇಶದಿಂದ ಪುಲಕೇಶಿಯ ಮೇಲೆ ಧಾಪಿಸಿದ್ದಿರಬಹುದು ಹಾಗೂ ಮಾಳ್ವವನ್ನು ಸೋಲಿಸಿ ತನ್ನ ಮೇಲೆಯೂ ಸಹ ಇವನು ದಾಳಿ ಮಾಡುಬಹುದು ಎನ್ನುವ ಪೂರ್ವಕಲ್ಪನೆಯಿಂದ ಪುಲಕೇಶಿಯ ಮೇಲೆ ದಂಡೆತ್ತಿ ಬಂದಿರಬಹುದಾದ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಈ


ತಾಮ್ರ ಶಾಸನದ ಬಳೆಯಲ್ಲಿನ ಮುದ್ರೆ

ಮೇಲಿನ ಕಾರಣಗಳಿಗಾಗಿ ಪ್ರಾಯಶಃ ಹರ್ಷ ಮತ್ತು ಪುಲಕೇಶಿಯ ಮಧ್ಯೆ ಯುದ್ಧ ನಡೆದಂತೆ ತೋರುತ್ತದೆ. ಪ್ರಸ್ತುತ ತಾಮ್ರ ಶಾಸನದಲ್ಲಿ ಉಕ್ತವಾಗಿರುವ "ಸಮರಸಂಘಟ್ಟೋರ್ಮಿ ಸಂಸತ್ ಶ್ರೀ ಹರ್ಷವರ್ಧನ ಪರಾಜಯೋಪಲಬ್ಧ ಪರಮೇಶ್ವರಾಪರನಾಮಧೇಯಃ" ಎಂದಿರುವುದು ಈತ ಹರ್ಷವರ್ಧನನ್ನು ಈ ತಾಮ್ರಪತ್ರವನ್ನು ಹೊರಡಿಸುವ ಸಮಯಕ್ಕೆ ಅಂದರೆ ಕ್ರಿ.ಶ. ೬೧೮-೬೧೯ರಲ್ಲಿ ಸೋಲಿಸಿದ್ದನೆನ್ನುವ ಸಂಗತಿಯು ಅಧಿಕೃತವಾಗಿ ಸ್ಪಷ್ಟಪಡಿಸುತ್ತಿದೆ. ಹಾಗಾಗಿ ಪ್ರಸ್ತುತ ಶಾಸನವನ್ನು ಆಧರಿಸಿ ಪುಲಕೇಶಿ ಮತ್ತು ಹರ್ಷವರ್ಧನರ ಯುದ್ಧವನ್ನು ಈ ಕ್ರಿ.ಶ. ೬೧೮-೬೧೯ರ ಅವಧಿಯಲ್ಲಿ ನಡೆದಿದೆ ಎನ್ನಬಹುದು.

ಒಟ್ಟಾರೆಯಾಗಿ ನರ್ಮದಾ ನದಿ ಕದನದ ಬಗ್ಗೆ ಈವರೆಗೆ ಹಲವು ವಿದ್ವಾಂಸರು ಮಂಡಿಸಿದ ವಾದಗಳನ್ನು ಪ್ರಸ್ತುತ ತಾಮ್ರ ಶಾಸನವು ತೊಡೆದುಹಾಕಿದ್ದು, ಈ ಕುರಿತ ಎಲ್ಲ ಗೊಂದಲಗಳಿಗೆ ಮುಕ್ತಾಯ ಹಾಡಿದೆ. ಇವನು ತನ್ನ ಸ್ವಸ್ಥಾನದಲ್ಲಿನ ರಾಜಕೀಯ ಪರಿಸ್ಥಿತಿಯನ್ನು ಹತೋಟಿಗೆ ತಂದು, ತನ್ನ ಸ್ಥಾನವನ್ನು ಸ್ಥಿರಗೊಳಿಸಿದ ನಂತರವೇ ಉತ್ತರದ ಕಡೆಗೆ ಹೋಗಿ, ಕ್ರಿ.ಶ.೬೧೮-೬೧೯ರಲ್ಲಿ ಹರ್ಷವರ್ಧನನ್ನು ಸೋಲಿಸಿದ್ದಾನೆ. ಆದ್ದರಿಂದ ಪ್ರಸ್ತುತ ಶಾಸನವು ಪುಲಕೇಶಿಯ ಅತ್ಯಂತ ಮಹತ್ವದ ಶಾಸನವಾಗಿದ್ದು, ರಾಜಕೀಯವಾಗಿ ಇವರೆಗೆ ಪ್ರಚಲಿತದಲ್ಲಿದ್ದ ಅನೇಕ ಗೊಂದಲಗಳಿಗೆ ತೆರೆ ಎಳೆದಿದೆ ಎನ್ನುವುದು ಗಮನಾರ್ಹ.



## ಆಕರ ಗ್ರಂಥಗಳು


೧. Baij Nath Puri, 1957, The History of the Gurjara-Pratiharas, Hind Kitabs Ltd, Bombay.

೨. Dikshit D.P., 1980, Political History of the Chalukyas of Badami, Abhinav Publications, New Delhi.

೩. John Faithfull Fleet, 1988, The Dynasties of Kanarese Districts of the Bombay Presidency, Asian Educational Service, New Delhi.

೪. Kailash Chand Jain, 1972, Malwa Through the Ages, Motilal Banarsidass, Delhi.

೫. Nagaraja Rao M.S. (ed.), 1978, Chalukyas of Badami (seminar papers), The Mythic Society, Bangalore.

೬ Nilakanta Sastri, 1966, A History of South India, Oxford University Press, Bombay.

೭. Rajasekhar S. (ed.), 2016, The Chalukyas of Badami, Aryan Books Internationals, New Delhi.

೮. Ramesh K.V., 1984, Chalukyas of Vatapi, Agam Kala Prakashan, Delhi.

೯. Shankar Goyal, 2006, Harsha A Multidisciplinary Political Study, Kusumanjali Book World, Jodhpur.

೧೦. Shreenand L. Bapat and Pradeep S. Sohoni, 2018, 'The Bijapur- Mumbai Copper plate Grant of Chalukya Ruler Pulakesin II , Dated April 04, 619 CE, Mentioning his Triumph over Emperor Harshavardhana', Annals of the Bhandarkar Oriental Research Institute, Vol. 93, , Bhandarkar Oriental Research Institute, Pune. pp. 205-09.

೧೧. Srinivas V. Padigar (ed.), 2010, Inscriptions of Chalukyas of Badami, Indian Council of Historical Research, Bangalore.

೧೨. ಕೃಷ್ಣರಾವ್ ಎಂ.ವಿ. ಮತ್ತು ಕೇಶವ ಭಟ್ಟ, ೧೯೭೦, ಕರ್ನಾಟಕ ಇತಿಹಾಸ ದರ್ಶನ, ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ, ಬೆಂಗಳೂರು.

೧೩. ನರಸಿಂಹಮೂರ್ತಿ ಪಿ.ಎನ್., ೨೦೧೧, 'ಬಾದಾಮಿ ಚಾಳುಕ್ಯ ಅಳುಪ ಸಂಬಂಧಗಳು' ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಗೋಪಾಲ್ ಆರ್.(ಸಂ), ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೧೪. ಶೀಲಾಕಾಂತ ಪತ್ತಾರ, ೨೦೦೦, ಬಾದಾಮಿ:ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಮುರಿಗೆಪ್ಪ ಎ., ಚಿನ್ನಸ್ವಾಮಿ ಸೋಸಲೆ, ರಮೇಶ ನಾಯಕ, ಕೊಟ್ರೇಶ್ ಎಂ. (ಸಂ), ೨೦೦೯, ಬಾದಾಮಿ ಚಾಲುಕ್ಯರು: ಲೇಖನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಬೇಗೂರಿನತೊಂಡಬ್ಬೆ ಶಾಸನದ ಹಿನ್ನೆಲೆಯಲ್ಲಿ ನಾಗತ್ತರ ಪಟ್ಟ: ಮರು ವಿಶ್ಲೇಷಣೆ

ಸ್ಮಿತಾರೆಡ್ಡಿ*

**ಬೇ**ಗೂರು ಬೆಂಗಳೂರು ನಗರದ ಕೇಂದ್ರ ಭಾಗದಿಂದ ಸುಮಾರು ೨೦ ಕಿ.ಮೀ. ದೂರದಲ್ಲಿದ್ದು, ನಗರೀಕರಣ ಪ್ರಕ್ರಿಯೆಯಿಂದಾಗಿ ಇಂದು ಬೆಂಗಳೂರು ನಗರದ ಭಾಗವಾಗಿ ಹೋಗಿದೆ. ಗಂಗ ಹಾಗೂ ಚೋಳ ಅರಸು ಮನೆತನಗಳ ಆಳ್ವಿಕೆಗೊಳಪಟ್ಟಿದ್ದ ಇದು ಒಂಭತ್ತನೆಯ ಶತಮಾನದಿಂದ ಹದಿನೈದನೆಯ ಶತಮಾನದವರೆಗೆ ಪ್ರಮುಖಜೈನ ಹಾಗೂ ಶೈವ ಕೇಂದ್ರವಾಗಿತ್ತು. ಇದಕ್ಕೆ ಸಾಕ್ಷಿಯಾಗಿ ಇಲ್ಲಿ ನಾಗೇಶ್ವರದೇವಾಲಯವೂ ಸೇರಿದಂತೆ ಪಂಚಲಿಂಗೇಶ್ವರ ದೇವಾಲಯ ಹಾಗೂ ಗಂಗರಕಾಲದ ಹಲವಾರು ವೀರಗಲ್ಲುಗಳಿವೆ.

ನಾಗತ್ತರನೆಂಬ ಅಧಿಕಾರಿಯು, ಗಂಗ ಸತ್ಯವಾಕ್ಯ ಪೆರ್ಮಾಡಿಯ (ಕ್ರಿ.ಶ.೮೬೮–೯೦೫) ಹಾಗೂ ಎರೆಯಪ್ಪನ (ಕ್ರಿ.ಶ.೮೮೬–೯೨೮) ಅವಧಿಯಲ್ಲಿ ಇಂದಿನ ಬೆಂಗಳೂರು ತಾಲೂಕಿನ ಬೇಗೂರನ್ನು ಕೇಂದ್ರವಾಗಿರಿಸಿಕೊಂಡು ಬೆಂಪೂರು ಪನ್ನೆರಡು ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದ. ಇವನು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದುದಕ್ಕೆ ಆಧಾರವಾಗಿ ಈವರೆಗೆ ಆನೇಕಲ್ ತಾಲೂಕು ಹಾಗೂ ಬೆಂಗಳೂರು ದಕ್ಷಿಣ ತಾಲೂಕುಗಳಲ್ಲಿ ನಾಗತ್ತರನ ಸುಮಾರು ಹತ್ತು ಶಾಸನಗಳು ಬೆಳಕಿಗೆ ಬಂದಿವೆ ಮತ್ತು ಇನ್ನೂ ಬರುತ್ತಲೇ ಇವೆ.

ನಾಗತ್ತರನ ಪೂರ್ವಾಪರಗಳ ಬಗ್ಗೆಗಾಗಲೀ, ಆವನ ಆಳ್ವಿಕೆಯ ವರ್ಷದ ಬಗೆಗಾಗಲೀ ಈ ಶಾಸನಗಳು ಹೆಚ್ಚಿನ ವಿಷಯಗಳನ್ನು ತಿಳಿಸುವುದಿಲ್ಲ. ಬದಲಾಗಿ ಅಲ್ಲಲ್ಲಿ ಸೂಚ್ಯವಾಗಿ ಕೆಲವು ಸಂಗತಿಗಳನ್ನು ತಿಳಿಸುತ್ತವೆ. ಇತ್ತೀಚೆಗೆ ಹೆಬ್ಬಾಳದಲ್ಲಿ ದೊರೆತ ಶ್ರೀಪುರುಷನ ಕಾಲದಒಂದು ಶಾಸನವು ಸಿರಿ ಪುರುಷ ಮಹಾರಾಜನಕಾಲದಲ್ಲಿ ಪೆರ್ಬೊಳಲ್ನಾಡು ಮುನ್ನೂರನ್ನು ಪೆಳ್ನಾಗತ್ತರಸನು ಆಳುತ್ತಿದ್ದುದನ್ನು ದಾಖಲಿಸುತ್ತದೆ. ಈ ನಾಗತ್ತರನಿಗೂ ಬೆಗೂರಿನ ನಾಗತ್ತರನಿಗೂ ಇರಬಹುದಾದ ಸಂಬಂಧವೇನು ಎಂಬುದು ಸ್ಪಷ್ಟವಿಲ್ಲ. ಹೆಸರಿನ ಸಾಮ್ಯತೆಯಿಂದಷ್ಟೇ ಸಂಬಂಧವನ್ನು ಕಲ್ಪಿಸಬಹುದಷ್ಟೆ.

ನಾಗತ್ತರನು ಬಾಣ ಕುಲಕ್ಕೆ ಸೇರಿದವನಿರಬಹುದೆಂಬುದನ್ನು ಬೇಗೂರಿನ ನಾಗೇಶ್ವರ ದೇವಾಲಯದ ಆವರಣದಲ್ಲಿರುವ ಶಾಸನದಿಂದ ಊಹಿಸಬಹುದಾಗಿದೆ. ಅದರಲ್ಲಿ "ಭುವನ ಕೊಳ್ಗಣ್ಡಶ್ರೋಣಿತಪುರವರೇಶ್ವರ . . . . . ಹರವೃಷಭ ಲಾಂಛನಂ, . . . . . ಬಲಿಕುಲ ಭೂಷಣಂ, ನನ್ನಿಪೆರ್ಬಾಣಂ, ಸಮಯ ಪ್ರವೀಣಂ . . . . . ಸತ್ಯರಾಧೇಯಂ, ಸಾಮಂತ ಸುಂದರಂ, ಲೀಳಾಪುರನ್ದರಂ"[೧] ಮುಂತಾದ ಬಿರುದುಗಳಿಂದ ಪ್ರಶಂಸಿಸುವಾಗ ಅವನು ಬಾಣಕುಲದವನಿರಬಹುದೆಂಬ ಮಾಹಿತಿ ನೀಡುತ್ತದೆ. ದೇವರಕೊಂಡಾರೆಡ್ಡಿಯವರ ಪ್ರಕಾರ, "ಬಾಣ ವಂಸಸ್ಥರು ಅಲ್ಲಲ್ಲಿ ಗಂಗರ ಅಧಿಕಾರಿಗಳಾಗಿದ್ದರೆಂದು ಇತರ ಶಾಸನಗಳಿಂದ ತಿಳಿಯುತ್ತದೆ. ವರ್ತೂರು ಮತ್ತು ಚಲ್ಲಂಪಟ್ಟು ಶಾಸನಗಳಲ್ಲಿ ಮಹಾಬಲಿವಂಶದ ನಿಜಪನ ಮಗ ಅಣ್ಣಿಗನ ಉಲ್ಲೇಖವಿದೆ. ಬಹುಶಃ ಈ ನಾಗತ್ತರನೂ ಬಾಣ ವಂಶದವನಾಗಿದ್ದು, ಗಂಗರ ಅಧೀನದಲ್ಲಿ ಸೇವೆ ಸಲ್ಲಿಸುತ್ತಿದ್ದಿರಬಹುದು."[೨] ಅಗರದ ಶಾಸನ ಇವನನ್ನು'ಸತ್ಯವಾಕ್ಯ ಪೇರ್ಮಾಡಿಯ ಕಲಿಯುಗದಣುವ'ನಾಗಿದ್ದಾನೆಂದು ವರ್ಣಿಸುತ್ತದೆ.[೩] ಕೈಕೊಂಡ್ರಹಳ್ಳಿ ಶಾಸನವೂ ಇವನನ್ನು 'ಕಲಿಯುಗದಣುವ' ಎಂದು ಉಲ್ಲೇಖಿಸುತ್ತದೆ. ಬೇಗೂರಿನ ಶಾಸನದ ಹಿನ್ನೆಲೆಯಲ್ಲಿ ಡಾ॥ ದೇವರಕೊಂಡಾರೆಡ್ಡಿಯವರು ನಾಗತ್ತರನ ಬಗ್ಗೆ ವಿವರವಾಗಿ ಚರ್ಚಿಸಿರುತ್ತಾರೆ[೪]. ಹಾಗೆಯೇ ಶ್ರೀ ಎಸ್. ಕಾರ್ತಿಕ್‌ರವರು ನಾಗತ್ತರನ ಪಾಠಗಳನ್ನು ಮರು ಓದಿಗೆ ಒಳಪಡಿಸಿ ಪಠ್ಯಗಳನ್ನು ಪರಿಷ್ಕರಿಸಿದ್ದಾರೆ.

ನಾಗತ್ತರನ ಶಾಸನಗಳ ಹಿನ್ನೆಲೆಯಲ್ಲಿ ನಾಗತ್ತರನಿಗೆ ರೊಂಡಬ್ಬೆ ಮತ್ತು ಕೊಂಡಬ್ಬೆ ಎಂಬ ಹೆಣ್ಣುಮಕ್ಕಳು, ಪೆರ್ಮಣ ಶೆಟ್ಟಿ, ಪೆಗೊರ ಎಂಬ ಇಬ್ಬರು'ಮನೆ ಮಕ್ಕಳು', ಬುಟ್ಟಣ ಸೆಟ್ಟಿ (ಪತಿ?)ಎಂಬ ಗಂಡು ಮಗನಿದ್ದನೆಂದು ಶಾಸನಗಳ ಹಿನ್ನೆಲೆಯಲ್ಲಿ ವಿದ್ವಾಂಸರು ಗುರುತಿಸಿರುತ್ತಾರೆ. ಇವುಗಳಲ್ಲಿ ರೊಂಡಬ್ಬೆ ಸನ್ಯಸನ ಸ್ವೀಕರಿಸಿ ಮುಡಿಪಿದುದನ್ನು ಕೋಟೆ

---

* ನಿರ್ದೇಶಕರು(ಪ್ರ), ಭಾಷಾಂತರ ನಿರ್ದೇಶನಾಲಯ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು, ಮೊ. ೯೯೪೫೪೭೧೩೦೫

ಆವರಣದಲ್ಲಿರುವ ಶಾಸನ ಉಲ್ಲೇಖಿಸಿದರೆ,೫ದೇವಾಲಯದ ಬಳಿಯಿರುವ ಶಾಸನ ಮತ್ತೊಬ್ಬ ಮಗಳು ಕೊಂಡಬ್ಬೆ ಕರ್ತವ್ಯವೇಳೆಗೊಂಡು ಸತ್ತುದನ್ನು ದಾಖಲಿಸುತ್ತದೆಂದು[೬] ಈವರಗೆ ಗುರುತಿಸಿಕೊಂಡು ಬರಲಾಗಿತ್ತು.

ಎರಡು ವರ್ಷಗಳ ಹಿಂದೆ ಬೇಗೂರಿಗೆ ಭೇಟಿ ನೀಡಿದ್ದಾಗ, ನಾಗತ್ತರನ ಮಗಳು ರೊಂಡಬ್ಬೆ ಕರ್ತವ್ಯವೆಳೆಗೊಂಡು ಸತ್ತುದನ್ನುಉಲ್ಲೇಖಿಸುವ ಶಾಸನ ಮತ್ತು ಅದರ ಶಿಲ್ಪ ವಿಶೇಷವಾಗಿ ನನ್ನ ಗಮನ ಸೆಳೆಯಿತು.ಶಾಸನದಲ್ಲಿರುವ ಶಿಲ್ಪ ಮತ್ತು ಓದಲಾಗಿರುವ ಶಾಸನ ಪಠ್ಯ ಪರಸ್ಪರಒಂದಕ್ಕೊಂದು ಸಂಬಂಧವೇ ಇಲ್ಲದಂತಿರುವುದು ಕಂಡುಬಂತು. ಶಾಸನದಲ್ಲಿ:

"೧. ನಾಗತ್ತರನ

೨. ಮಗಳ್ಕೊ

೩. ಣ್ಡಬ್ಬೆಯು

೪. ಕತ್ತವ್ಯ

೫. ವೆಳೆಗೊ

೬. ಣ್ಡು ಸತ್ತಂ" ಎಂದು ಓದಲಾಗಿದೆ. ಎಂದರೆ ನಾಗತ್ತರನ ಮಗಳು ಕೊಂಡಬ್ಬೆ ಕರ್ತವ್ಯ ವೇಳೆಗೊಂಡು ಸತ್ತಳು ಎಂದು ಅರ್ಥೈಸಲಾಗಿದೆ. ಸ್ತ್ರೀನಾಮ ಸೂಚಕ ಕೊಂಡಬ್ಬೆಗೆ ಪುರುಷವಾಚಕಕ್ರಿಯಾಧಾತು 'ಸತ್ತಂ'ಎಂದು ಬಳಸಲಾಗಿದೆ. ಶಾಸನದಪಠ್ಯವಿರುವ ಮೇಲ್ಭಾಗಹೊಡೆದು ಹೋಗಿದ್ದು ಅದರ ಭಾಗವೂ ಸಹ ಈಗ ಲಭ್ಯವಿಲ್ಲ. ಆದರೆ ಕೊಂಡಬ್ಬೆಯ ಎಂಬ ಪದಗಳನಂತರ ಖಾಲಿ ಇದ್ದುಅಲ್ಲಿ ಯಾವುದೇ ಅಕ್ಷರಗಳನ್ನು ಕೆತ್ತದಿರುವುದು ಪಾಠವನ್ನು ಅರ್ಥೈಸಲು ತೊಡಕಾಗಿದೆ. ಹಾಗಾಗಿ ಅಲ್ಲಿ 'ಪತಿ' ಅಥವಾ 'ಸುತ' ಎಂಬಎರಡು ಅಕ್ಷರಗಳನ್ನುಊಹಾಪಾಠವಾಗಿ ಸೇರಿಸಿಕೊಳ್ಳಬಹುದಾಗಿದೆ. ವಿಶೇಷವೆಂದರೆ ಶಾಸನ ಪಠ್ಯದ ಪ್ರಕಾರ ಈ ಶಾಸನವಿರುವ ಶಿಲ್ಪದಲ್ಲಿ ಕರ್ತವ್ಯ ವೇಳೆಗೊಂಡು ಮೃತಳಾದ ಕೊಂಡಬ್ಬೆಯ ಶಿಲ್ಪವಿರಬೇಕಿತ್ತು. ಆದರೆ, ಶಾಸನದ ಶಿಲ್ಪ ಸ್ತ್ರೀಯ ಶಿಲ್ಪವಾಗಿರದೆ ಪುರುಷನ ಶಿಲ್ಪವಾಗಿದ್ದು, ಇದೊಂದು ಸಾಮಾಜಿಕ ಆತ್ಮ ಬಲಿದಾನದ ಶಾಸನಶಿಲ್ಪವಾಗಿದೆ. ಶಾಸನ ಫಲಕದ ಬಹುಭಾಗವನ್ನು ವೇಳೆವಾಳಿಯಾಗಿ ಸತ್ತ ಪುರುಷನ ಶಿಲ್ಪ ಆಕ್ರಮಿಸಿದೆ. ವೇಳೆವಾಳಿಯು ಪದ್ಮಾಸನದಲ್ಲಿ ಪ್ರಸನ್ನ ವದನನಾಗಿ ಕೈ ಮುಗಿದು ಕುಳಿತಿದ್ದಾನೆ. ಅವನ ಪಕ್ಕದಲ್ಲಿ ಚಿಕ್ಕದಾಗಿ ಒಬ್ಬ ವ್ಯಕ್ತಿ ನಿಂತಿದ್ದು ಕೈಯಲ್ಲಿ ತನಗಿಂತಲೂ ದೊಡ್ಡದಾದ ಕೈಗೊಡಲಿ ಅಥವಾ ಮಚ್ಚಿನಂತಹ ಆಯುಧ ಹಿಡಿದುಕೊಂಡಿದ್ದಾನೆ. ಅವನು ಈಗಾಗಲೇ ವೇಳೆವಾಳಿಯಾಗಿರುವ ವ್ಯಕ್ತಿಯ ತಲೆಯನ್ನು ಕತ್ತರಿಸಿದ್ದಾನೆ ಎಂಬುದರ ಸೂಚಕವಾಗಿ ಶಿಲ್ಪದಲ್ಲಿ ತಲೆಯ ಭಾಗವನ್ನು ಕತ್ತರಿಸಿರುವಂತೆ ಚಿತ್ರಿಸಲಾಗಿದೆ. ಆದರೆ ತಲೆಯ ಭಾಗ ಹಾಗೇ ದೇಹಕ್ಕೆ ಅಂಟಿಕೊಂಡೇ ಇದೆ. ಶಿಲ್ಪದಲ್ಲಿ ಕಂಡುಬರುವ ಈ ಅಂಶಗಳ ಹಿನ್ನೆಲೆಯಲ್ಲಿ ಇದೊಂದು ಪುರುಷನ ವೇಳೆವಾಳಿ ಶಿಲ್ಪವೆಂದು ಸ್ಪಷ್ಟವಾಗುತ್ತದೆ. ಶಾಸನದಲ್ಲಿ ತಿಳಿಸಿರುವಂತೆ ಕೊಂಡಬ್ಬೆ ಮರಣಹೊಂದಿದ್ದರೆ ಅವಳ ಶಿಲ್ಪ ಇರಬೇಕಾಗಿತ್ತಲ್ಲವೇ?

ಈ ಶಾಸನದರೋಮನ್ಅವತರಿಕೆಯಲ್ಲಿರೈಸ್‌ರವರು'ತೊಂಡಬ್ಬೆ' ಎಂದೇ ಓದಿರುತ್ತಾರೆ. ಹಾಗಾಗಿ ಈ ಶಾಸನದಲ್ಲಿ ಈವರೆಗೆ ಗುರುತಿಸಲಾದಂತೆ ನಾಗತ್ತರನ ಮತ್ತೊಬ್ಬ ಮಗಳು ಕೊಂಡಬ್ಬೆಯಾಗಿರದೆ, ಸನ್ಯಸನ ವಿಧಿಯಿಂದ ಮೃತಳಾದ ತೊಂಡಬ್ಬೆಯೇ ಆಗಿದ್ದು, ಅವಳಿಗೆ ಸಂಬಂಧಪಟ್ಟ ವ್ಯಕ್ತಿ ವೇಳೆವಾಳಿಯಾಗಿರುವುದನ್ನು ಸೂಚಿಸುತ್ತದೆ.

ಹಾಗಿದ್ದರೆ, ಈ ಶಾಸನದ ಪಠ್ಯ ಮತ್ತು ಶಿಲ್ಪದ ಪ್ರಕಾರ ವೇಳೆವಾಳಿಯಾಗಿ ಮೃತಪಟ್ಟ ವ್ಯಕ್ತಿಯಾರಿರಬಹುದು ಎಂಬ ಪ್ರಶ್ನೆ ಇಲ್ಲಿ ಉದ್ಭವವಾಗುತ್ತದೆ. ಈ ಶಾಸನವನ್ನು ಮರುಪರಿಷ್ಕರಣೆಗೆ ಒಳಪಡಿಸಿರುವ ಶ್ರೀ ಎಸ್. ಕಾರ್ತಿಕ್‌ರವರು

೧. "ನಾಗತ್ತರನ

೨. ಮಗಳ್ತೊ

೩. ಣ್ಡಬ್ಬೆಯ(ಪತಿ)

೪. ಕತ್ತ(ರ್)ವ್ಯ

೫. ವೇಳೆ ಗೊ

೬. ಣ್ಡು ಸತ್ತಂ" ಎಂದು ಓದುವ ಮೂಲಕ ತೊಂಡಬ್ಬೆಯ 'ಪತಿ' ಇಲ್ಲಿ ವೇಳೆವಾಳಿಯಾಗಿ ಮೃತನಾಗಿರಬಹುದೆಂದು ಊಹಿಸಿರುತ್ತಾರೆ.[೭] ಪತಿ ಇರಬಹುದೆಂಬುದು ಊಹಾಪಾಠವೇ ಹೊರತು, ಅದು ಪತಿಯೋ ಅಥವಾ ಸುತನೋ ಗೊತ್ತಿಲ್ಲ.





ಉಲ್ಲೇಖಿಸುತ್ತವೆ. ಮನೆ ಮಕ್ಕಳೆಂದರೆ ನಿಜ ಸುತರಾಗಿರದೆ, ವೇಳೆವಾಳಿಗಳೆಂಬುದನ್ನು ಇತಿಹಾಸಕಾರರು ಗುರುತಿಸಿದ್ದಾರೆ. ಪೆರ್ಮಣಶೆಟ್ಟಿ ಬೆಂಗುಳೂರ ಕಾಳೆಗದಲ್ಲಿ ಮೃತನಾಗುತ್ತಾನೆ. ಅದೇ ಕಾಳೆಗದಲ್ಲಿ ಅವನ ಮಗ ಬುಟ್ಟಣಸೆಟ್ಟಿ(ಪತಿ)ಯೂ ಮರಣ ಹೊಂದುತ್ತಾನೆ. ಪೆಗೂರ ಯಾವುದೋ ಕಾಳಗದಲ್ಲಿ ಸತ್ತು ಸ್ವರ್ಗಸ್ಥನಾಗುತ್ತಾನೆ. ಮಗಳು ತೊಂಡಬ್ಬೆಯ ಪತಿ(?)ಯೂ'ಕರ್ತವ್ಯವೆಳೆ'ಗೊಂಡುಮರಣಹೊಂದುತ್ತಾನೆ.



ಪತಿ ಎಂಬ ಪಾಠಾಂತರವನ್ನು ಸ್ವೀಕರಿಸಿದಲ್ಲಿ ಬಹುಶಃ ನಾಗತ್ತರನ ಅಳಿಯಎಂದರೆತೊಂಡಬ್ಬೆಯ ಪತಿ ವೇಳೆವಾಳಿಗೊಂಡಿದ್ದರಿಂದ ಅವನ ಮಗಳು ತೊಂಡಬ್ಬೆಜೈನ ಧರ್ಮೀಯಳಾಗಿದ್ದರಿಂದ ಸನ್ಯಸನ ವಿಧಿಯಿಂದ ಮೃತಳಾದಂತೆ ತೋರುತ್ತದೆ. ಹಾಗಾಗಿ ನಾಗತ್ತರನಿಗೆ ರೊಂಡಬ್ಬೆ ಹಾಗೂ ಕೊಂಡಬ್ಬೆ ಎಂಬ ಇಬ್ಬರು ಹೆಣ್ಣು ಮಕ್ಕಳಿರದೆ, ಒಬ್ಬಳೇ ಮಗಳಿದ್ದು ಅವಳ ಹೆಸರು ತೊಂಡಬ್ಬೆ ಎಂಬುದು ಸ್ಪಷ್ಟವಾಗುತ್ತದೆ.

**ನಾಗತ್ತರನದು ಅನ್ವಯಾಗತ ವೇಳೇವಾಳಿಗಳ ಮನೆತನವಾಗಿತ್ತೆ:** ನಾಗತ್ತರನ ಕುಟುಂಬ ಅನ್ವಾಯಗತ ವೇಳೆವಾಳಿ ಮನೆತನವಾಗಿದ್ದಿರಬಹುದೆಂದು ಶಾಸನಗಳ ಹಿನ್ನೆಲೆಯಲ್ಲಿ ಊಹಿಸಲು ಅವಕಾಶವಿದೆ. ನಾಗತ್ತರನಿಗೆ ಪೆಗೂರ[೮] ಹಾಗು ಪೆರ್ಮಣ ಶೆಟ್ಟಿ[೯] ಎಂಬ ಇಬ್ಬರು'ಮನೆಮಕ್ಕಳು' ಹಾಗೂ ಬುಟ್ಟಣ ಸೆಟ್ಟಿ (ಪತಿ) ಎಂಬ ಹೆಸರಿನ ಒಬ್ಬ ಮಗ ಇದ್ದುದನ್ನು ಶಾಸನಗಳು

ಇದಕ್ಕೂ ಮಿಗಿಲಾಗಿ ಸ್ವತಃ ನಾಗತ್ತರನೂ ವೇಳೆವಾಳಿಯಾಗಿದ್ದನೆಂದು ಊಹಿಸಬಹುದು.ನಾಗತ್ತರನನ್ನುಅಗರದ ಶಾಸನ 'ಸತ್ಯವಾಕ್ಯಪೆರ್ಮಾಡಿಯ ಕಲಿಯುಗದಣುವ' ಎಂದು ಬಣ್ಣಿಸಿದರೆ, ಕೈಕೊಂಡ್ರಹಳ್ಳಿಯ ಶಾಸನ 'ಕಲಿಯುಗದಣುವ' ಎಂದು ವರ್ಣಿಸುತ್ತದೆ. 'ಅಣುವ' ಎಂಬ ಪದ ಸ್ವಾಮಿಭೃತ್ಯತೆಯನ್ನು ಸಂಕೇತಿಸುತ್ತದೆ. ಬೇಗೂರಿನ ವೀರಗಲ್ಲು ಶಾಸನವು "ಬೀರಮಹೇಂದ್ರನೊಳ್ ಕಾದಲೆಂದು ಅಯ್ಯಪದೇವಂಗೆ ನಾಗತ್ತರನಂ ದಣ್ಡುವೇಳ್ದೊಡೆ ತುಂಬೆಪಾಡಿಯೊಳ್ಕಾದಿ........ ಆನೆಯೊಳಾನ್ತಿರಿದು ಸತ್ತೊಡದಂ ಕೇಳ್ದಿರೆಯಪಂ ಇರುಗಂಗೆ ನಾಗತ್ತರವಟ್ಟಂಗಟ್ಟಿ ಬೆಂಪೂರ್ಪನ್ನೆರಡುಮಂ ಶಾಸನಬದ್ದವಾಗಿ"[೧೦] ನೀಡುತ್ತಾನೆ. ನಾಗತ್ತರ ಯುದ್ದದಲ್ಲಿ ಸತ್ತಾಗ ಅವನ ಪಟ್ಟವನ್ನು ಗಂಗ ಅರಸು ಎರೆಯಪ್ಪ ಇರುಗನಿಗೆ ನೀಡುತ್ತಾನೆ. ನಾಗತ್ತರ ಪಟ್ಟದ ಬಗ್ಗೆ ಚರ್ಚಿಸಿರುವ ವಿದ್ವಾಂಸರು ಇರುಗ ನಾಗತ್ತರನ ಮಗನಾಗಿದ್ದು, ನಾಗತ್ತರ ಸತ್ತ ನಂತರ ಅವನ ಪಟ್ಟವನ್ನು ಇರುಗನಿಗೆ ಕಟ್ಟಲಾಯಿತೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಆದರೆ ನಾಗತ್ತರನಿಗೆ ಇರುಗ ಎಂಬ ಹೆಸರಿನ ಮಗ ಇರುವ ಬಗ್ಗೆ ಶಾಸನಗಳು ಮೌನ ತಾಳಿವೆ. ಅಗರದ ಶಾಸನದಲ್ಲಿ ನಾಗತ್ತರನ ಆಳ್ವಿಕೆಯಲ್ಲಿ ಇರ್ವುಲಿಯೂರೊಡೆಯ ಇರುಗಮಯ್ಯನ ಮಗ ಸಿರಿಯಮಯ್ಯ ಎರಡು ಕೆರೆಗೆ ತೂಬನ್ನು ಮಾಡಿಸಿದ ಬಗ್ಗೆ ಉಲ್ಲೇಖವಿದೆ. ಆದರೆ ಇವನನ್ನು ನಾಗತ್ತರನ ಮಗನೆಂದು ಹೇಳಿಲ್ಲವೆಂಬುದು ಗಮನಾರ್ಹ.

'ನಾಗತ್ತರಪಟ್ಟವನ್ನು' ಎನ್.ಆರ್. ಲಲಿತಾಂಬರವರು ನಾಗಾಯತರ ಅಂದರೆ ಮಾವಟಿಗರಾಗಿದ್ದು ನಾಗತ್ತರ ಪಟ್ಟವೂ ಕೂಡ ಈ ನಾಗಾಯತ್ತರಿಗೆ ಸಲ್ಲುತ್ತಿದ್ದ ಅಧಿಕಾರವೆನಿಸುತ್ತದೆ. ನಾಗಾಯತರ> ನಾಗಾಯ್ತರ> ನಾಗತ್ತರ ಆಗಿರುವ ಸಾಧ್ಯತೆ ಇದೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ.[೧೧] ಆದರೆ, ಬೇಗೂರಿನ ಶಾಸನ ಹಾಗೂ ನಾಗತ್ತರನಿಗೆ ಸಂಬಂಧಪಟ್ಟ ಇನ್ನಿತರ ಶಾಸನಗಳ ಹಿನ್ನಲೆಯಲ್ಲಿ ನಾಗತ್ತರ ಎಂಬುದು ನಾಗಾಯ್ತರ ಎಂಬ ಪದದಿಂದ ನಿಷ್ಪತ್ತಿಯಾಗಿದೆ ಎಂದು ಊಹಿಸುವುದು ಕಷ್ಟ. ಹಾಗಾಗಿ, ಹಿಂದೆ ವಿವರಿಸಲಾದ ನಾಗತ್ತರನ 'ಮನೆಮಕ್ಕಳು' ಮಗಳುತೊಂಡಬ್ಬೆಯಪತಿ (?)ವೇಳೆವಾಳಿಯಾದದ್ದು, ನಾಗತ್ತರಯುದ್ದದಲ್ಲಿ ಸತ್ತನಂತರ ಇರು ಎಂಬುವವನಿಗೆ ನಾಗತ್ತರನ ಪಟ್ಟವನ್ನು ಕಟ್ಟಿದುದು ಮುಂತಾದ ಅಂಶಗಳ ಹಿನ್ನೆಲೆಯಲ್ಲಿ ನಾಗತ್ತರಪಟ್ಟ ಅನ್ವಯಾಗತ ವೇಳೆವಾಳಿ ಪಟ್ಟವಾಗಿದ್ದು, ನಾಗತ್ತರ ಮರಣ ಹೊಂದಿದ ನಂತರ ಅದನ್ನು ಇರುಗ ಎಂಬುವವನಿಗೆ ನೀಡಿರಬಹುದೆಂದು ಊಹಿಸಬಹುದು. ನಾಗತ್ತರನ ಇನ್ನು ಹೆಚ್ಚಿನ ಶಾಸನಗಳು ಬೆಳಕಿಗೆ ಬಂದರೆ ಈ ಬಗ್ಗೆ ಇನ್ನು ಹೆಚ್ಚಿನ ಸಂಶೋಧನೆಗೆ ಹಾಗೂ ಚರ್ಚೆಗೆ ಅವಕಾಶವಿದೆ.

[ಬೇಗೂರಿನ ನನ್ನೊಂದಿಗೆಕ್ಷೇತ್ರಕಾರ್ಯಕ್ಕೆ ಬಂದು ನೆರವು ನೀಡಿದ ಗುರುಗಳಾದ ಡಾ. ಪಿ. ವಿ. ಕೃಷ್ಣಮೂರ್ತಿಯವರಿಗೆ ಹಾಗು ಕಿರಿಯ ಮಿತ್ರರಾದ ಶ್ರೀ ಎಸ್. ಕಾರ್ತಿಕ್‌ರವರಿಗೆ ಮತ್ತು ಹೆಬ್ಬಾಳದ ಶಾಸನದ ಪಠ್ಯ ಒದಗಿಸಿದ ಶ್ರೀ ಧನಪಾಲ ಮಂಚೇನಹಳ್ಳಿಯವರಿಗೆ ವಿಶೇಷ ಕೃತಜ್ಞತೆಗಳು.]



**ಅಡಿಟಿಪ್ಪಣಿಗಳು**

೧. ದೇವರಕೊಂಡಾರೆಡ್ಡಿ: ದೊಡ್ಡಬೇಗೂರಿನ ನಾಗತ್ತರನ ಶಾಸನ, ಇತಿಹಾಸ ದರ್ಶನ ೩, ಪು. ೧೫೮.

೨. ಅದೇ, ಪು. ೧೫೯.

೩. ಎ.ಕ-೯(ರೈಸ್), ಬೆಂಗಳೂರು-೭೯, ಕ್ರಿ.ಶ.ಸು. ೯ನೆಯ ಶತಮಾನ.

೪. ದೇವರಕೊಂಡಾರೆಡ್ಡಿ: ಬೇಗೂರು ಶಾಸನ ಒಂದು ವಿವೇಚನೆ, ಸಾಧನೆ ಸಂ. ೩, ಸಂ.೨, ಪು. ೯೭.

೫. ಎ.ಕ-೯(ರೈಸ್), ಬೆಂಗಳೂರು-೯೪, ಕ್ರಿ.ಶ.ಸು. ೯ನೆಯ ಶತಮಾನ.

೬ ಎ.ಕ-೯(ರೈಸ್), ಬೆಂಗಳೂರು-೮೮, ಕ್ರಿ.ಶ.ಸು. ೯ನೆಯ ಶತಮಾನ.

೭. ಕಾರ್ತಿಕ್‌ಎಸ್: ಬೆಂಪೊಡೊರೆಯ ನಾಗತ್ತರನ ಶಾಸನಗಳು, ಸಂಶೋಧನ ಸಂಭಾವನೆ, ಮಂಗಳೂರು ವಿಶ್ವವಿದ್ಯಾಲಯ, ಪು. ೧೦.

೮. ಎ.ಕ-೯(ರೈಸ್), ಬೆಂಗಳೂರು-೮೭, ಕ್ರಿ.ಶ.ಸು. ೯ನೆಯ ಶತಮಾನ.

೯. ಎಂ.ಎ.ಆರ್-೧೯೧೫, ಪು. ೪೧.

೧೦. ಎ.ಕ-೯(ರೈಸ್), ಬೆಂಗಳೂರು-೮೩, ಕ್ರಿ.ಶ.ಸು. ೯ನೆಯ ಶತಮಾನ.

೧೧. ಲಲಿತಾಂಬ ಎನ್.ಆರ್: ಶಾಸನವಲ್ಲಿಕರ್ನಾಟಕದ ಹೆಮ್ಮೆಯ ವೀರ ಕುಡಿಗಳು, ಕರ್ನಾಟಕಇತಿಹಾಸ ಸಂಶೋಧನೆ ಮಂಡಲ, ಪು. ೫೭.

# ಚಿಕ್ಕಮಗಳೂರು ತಾಲೂಕಿನ ಕೂದುವಳ್ಳಿ ಅಗ್ರಹಾರ ಹಾಗೂ ಗೌತಮೇಶ್ವರ : ಒಂದು ಸಮೀಕ್ಷೆ

ಕೂ.ಸ. ಅಪರ್ಣ*

**ಕೂ**ದುವಳ್ಳಿ ಎಂಬ ಅಗ್ರಹಾರ/ಗ್ರಾಮವು ಚಿಕ್ಕಮಗಳೂರು ತಾಲೂಕಿನ ವಸ್ತಾರೆ ಹೋಬಳಿಗೆ ಸೇರಿದ್ದು, ಚಿಕ್ಕಮಗಳೂರಿನಿಂದ ನೈಋತ್ಯಕ್ಕೆ ೧೩ ಕಿ.ಮೀ. ದೂರದಲ್ಲಿದೆ. ಮೂಡಿಗೆರೆ/ಶೃಂಗೇರಿಯಿಂದ ಇಲ್ಲಿಗೆ ಬಸ್ ಸೌಕರ್ಯವಿದೆ. ವಸ್ತಾರೆ ಮೂಲಕ ಕೂದುವಳ್ಳಿ ತಲುಪಬಹುದು. ತೋರಣಮಾವು, ಆಲ್ದೂರು, ಚಿತುವಳ್ಳಿ, ವಸ್ತಾರೆ–ಮುಂತಾದವು ಚಿಕ್ಕಮಗಳೂರು ತಾಲ್ಲೂಕಿನ ಕೂದುವಳ್ಳಿಯ ಅಕ್ಕಪಕ್ಕದ ಗ್ರಾಮಗಳು. ಕೂದುವಳ್ಳಿಯು ತಳಿಗೆನಾಡು ಸಾಸಿರಕ್ಕೆ ಸೇರಿತ್ತೆಂದು ಶಾಸನಗಳಿಂದ (೧೩೨–೧೨–೧೩ನೇ ಶತಮಾನ) ವ್ಯಕ್ತವಾಗುತ್ತದೆ. (ಈ ಲೇಖನದಲ್ಲಿ ಉಕ್ತವಾಗಿರುವ ಎಲ್ಲ ಶಾಸನಗಳೂ(ಕೆಲವು ಮಾತ್ರ ಬಿಟ್ಟು) ಚಿಕ್ಕಮಗಳೂರು ಜಿಲ್ಲೆಗೆ ಸಂಬಂಧಿಸಿದ ಶಾಸನ ಸಂಪುಟ–ಎಕ.XI (ಪ.)ರಲ್ಲಿರುವ ಚಿಕ್ಕಮಗಳೂರು ತಾಲೂಕಿನ ಶಾಸನಗಳು. ವಿವರಣೆ ನೀಡುವಾಗ, ಸಂಬಂಧಿಸಿದ ಶಾಸನ ಸಂಖ್ಯೆ ಮತ್ತು ಅದರ ಕಾಲವನ್ನು ಅಲ್ಲಲ್ಲೇ ಆವರಣದಲ್ಲಿ ನೀಡಲಾಗಿದೆ).

ಜೋಳಹಾಳು(೧೫೬–೧೧೯೫), ಕೆಳಗೂರು(೧೬೭–೧೧೬೯), ಹಂಚರವಳ್ಳಿ(ಅದೇ.೧೫೩, ಕ್ರಿ.ಶ. ೧೨೮೨), ಬೈಗೂರು(೧೯೦–ಬಲ್ಲಾಳನ ಕಾಲ) ಮತ್ತು ಕೂದುವಳ್ಳಿ(೧೩೧–೧೧೮೦)ಯ ಶಾಸನಗಳಲ್ಲಿ ತಳಿಗೆನಾಡು ಸಾಸಿರ ಎಂಬ ಉಲ್ಲೇಖವಿದೆ. ಇನ್ನೊಂದು ಶಾಸನದಲ್ಲಿ(೧೮೯–೧೧೯೬) 'ಶಾಯಿರಭೂಮಿಯ ಒಂಭತ್ತು ಮಂದೆ.. ಶಾಯಿರ ಭೂಮಿಯಾಣೆ' ಎಂದೂ ಹೇಳಿರುವುದು ತಳಿಗೆನಾಡು ಸಾಸಿರವನ್ನೇ ಸೂಚಿಸುತ್ತಿದೆ. ತಳಿಗೆನಾಡು ಜಿಲ್ಲೆಯು ಚಿಕ್ಕಮಗಳೂರಿನ ಪಶ್ಚಿಮಕ್ಕೆ ಕೂದುವಳ್ಳಿಯ ಸುತ್ತ ಇರಬೇಕೆಂದು MARನಲ್ಲಿ(೧೯೩೨) ಹೇಳಲಾಗಿದೆ. 'ತಳಿಗೆನಾಡು ಸಾಸಿರ ಭೂಮಿ ಎಂಬುವ ಆಡಳಿತ ಪ್ರದೇಶ, ಇಂದಿನ ಚಿಕ್ಕಮಗಳೂರು ತಾಲೂಕಿನ ಬಹುಭಾಗ ಹಾಗೂ ಅದಕ್ಕೆ ಹೊಂದಿಕೊಂಡಂತಿರುವ ಹಾಸನ ಜಿಲ್ಲೆಯ ಬೇಲೂರು, ಸಕಲೇಶಪುರ, ಅರಕಲಗೂಡು ತಾಲೂಕಿನ ಹಲವು ಪ್ರದೇಶಗಳಲ್ಲಿ ಅಂತರ್ಗತವಾಗಿದ್ದಿತು' ಎಂದು ಪಿ.ವಿ. ಕೃಷ್ಣಮೂರ್ತಿಯವರು ಹೇಳಿದ್ದಾರೆ [(ಲೇ.) ಪುರಾತತ್ವ, ಪು. ೧೭೯]. ತಳಿಹಳ್ಳ ಎಂಬ ಒಂದು ಊರು ಕೂದುವಳ್ಳಿಯಿಂದ ಉತ್ತರದಲ್ಲಿ ೩–೪ ಕಿ.ಮೀ. ದೂರದಲ್ಲಿದೆ. ಇದಕ್ಕೂ ತಳಿಗೆನಾಡಿಗೂ ಏನಾದರೂ ಸಂಬಂಧವಿದೆಯೇ ಎಂದು ಯೋಚಿಸಬೇಕಾಗಿದೆ. ಕೆಲವು ಶಾಸನಗಳಲ್ಲಿ ತಳಿಗೆನಾಡು ಸಾಸಿರದ ೯ ಮಂದೆ(ದಿ?) ಆರುನಾಡು ೧೪ ಹಳ್ಳಿ ಎಂದು ಬರುತ್ತದೆ. ೯ ಮಂದೆ(ದಿ) ಎಂದರೆ ಆ ನಾಡಿನ ಮುಖ್ಯಸ್ಥರು. ೧೪ ಹಳ್ಳಿ ಎಂದಾಗ, ಕೂದುವಳ್ಳಿಯನ್ನು ಕೇಂದ್ರವಾಗಿಟ್ಟುಕೊಂಡು ಹೇಳುವುದಾದರೆ, ಬಹುಶಃ ಉತ್ತರದಲ್ಲಿ–ಗೌತಮೇಶ್ವರ, ತಳಿಹಳ್ಳ, ಜೋಳದಾಳು, ಕೋಡವಳ್ಳಿ, ಪೂರ್ವದಲ್ಲಿ–ವಸ್ತಾರೆ, ಸಿರಿವಳಲು, ಹಲಸುಮನೆ, ದಕ್ಷಿಣದಲ್ಲಿ–ಚಿತುವಳ್ಳಿ, ಕೆಳಗೂರು ಹಾಗೂ ಪಶ್ಚಿಮದಲ್ಲಿ–ಬೈಗೂರು, ಹಂಚರವಳ್ಳಿ, ಆಲ್ದೂರು, ಹಾವಳ್ಳಿ–ಈ ೧೪ ಗ್ರಾಮಗಳು ಸೇರುತ್ತವೆ. ಕೂದುವಳ್ಳಿಗೆ ೨ ಮೈಲಿ ದೂರದಲ್ಲಿರುವ ಗೌತಮೇಶ್ವರ ಗ್ರಾಮವು ಇಲ್ಲಿಗೇ ಹೊಂದಿಕೊಂಡಂತಿದೆ. ಸಂಗಮ ದೊರೆ ಎರಡನೇ ಹರಿಹರನು ಈ ಗ್ರಾಮವನ್ನು, ಶೃಂಗೇರಿ ಪೀಠಾಧಿಪತಿಗಳಾದ ಪುರುಷೋತ್ತಮಭಾರತಿಗಳ ಕಾಲದಲ್ಲಿ ಶೃಂಗೇರಿ ಮಠಕ್ಕೆ ದಾನನೀಡಿದ್ದರಿಂದ ಇದನ್ನು 'ಪುರುಷೋತ್ತಮಪುರ' ಎಂದೂ ಗುರುತಿಸುತ್ತಿದ್ದರು ('ಪುರುಷೋತ್ತಮಪುರ' ಎಂಬುದು ಕೂದುವಳ್ಳಿಗೆ ಪ್ರತಿನಾಮಧೇಯವಾದ ಹೆಸರು (ಎಕ.VI (ರೈಸ್)ಚಿಮ.೮೮–೧೩೯೧); ಆನಂತರ ಇದು ಒಂದು ಅಗ್ರಹಾರವಾಗಿ ಸ್ಥಾಪಿತವಾಯಿತು.

ಕ್ರಿ.ಶ.೧೧ರಿಂದ ೧೫ನೇ ಶತಮಾನದವರೆಗಿನ ಶಾಸನಗಳಲ್ಲಿ ಈ ಊರನ್ನು ಕೂರಿದವಳ್ಳಿ(೧೩೫–೧೦೬೫), ಕೊರ್ದಿವಳ್ಳಿ(೧೩೭–೧೧ನೇ ಶ.), ಕೂದ್ದವಳ್ಳಿ(೧೨–೧೩ನೇ ಶ.), ಕೂದುವಳ್ಳಿ(೧೪೩ ಹಾಗೂ MAR ೧೯೨೯–ಶಾಸನ ಸಂಖ್ಯೆ ೧೮–ಕ್ರಿ.ಶ. ೧೩೯೧–೧೪೦೨) ಎಂದೆಲ್ಲಾ ಕರೆಯಲಾಗಿದೆ. 'ಕೂರಿದ' ಎಂಬ ಶಬ್ದಕ್ಕೆ ಕಿಟ್ಟೆಲ್ ನಿಘಂಟು (ಪುಟ ೪೫೮) ಮತ್ತು 'DED'ನಲ್ಲಿ (ಪುಟ.೧೩೦) Sharp, Acute, or Braveman ಎಂಬ ಅರ್ಥವಿದೆ. ಇದನ್ನು ತೀಕ್ಷ್ಣ, ಚುರುಕು,

* ನಂ. ೧೬೪೮, ೧೭ನೇ ಮುಖ್ಯರಸ್ತೆ, ಬನಶಂಕರಿ ಮೊದಲನೇ ಹಂತ, ೨ನೇ ಬ್ಲಾಕ್, ಬೆಂಗಳೂರು–೫೬೦೦೫೦, ಮೊ. ೯೪೪೯೫೭೭೯೫೧

ಚೂಪಾದ/ಹರಿತವಾದ, ಸಮಕೋನಕ್ಕೆ ಕಡಿಮೆಯಾದ ಕೋನ/ಲಘುಕೋನ, ಧೀರ–ಎಂದೆಲ್ಲಾ ಹೇಳಬಹುದು. 'ಚೂಪಾದ ಎಲೆಗಳುಳ್ಳ ಬಳ್ಳಿಯಾದ ಮೆಣಸು, ಏಲಕ್ಕಿ ಮುಂತಾದುವನ್ನು ಹೆಚ್ಚು ಬೆಳೆಯುವ ಪ್ರದೇಶ' ಎಂಬ ಅರ್ಥದಲ್ಲಿ ಕೂರಿದ–ವಳ್ಳಿ ಎಂಬ ಹೆಸರು ಬಂದಿರಬೇಕು. ಇಂಗ್ಲೀಷ್–ಕನ್ನಡ ನಿಘಂಟಿನಲ್ಲಿ ವಿಶೇಷವಾಗಿ ಹೇಳಿರುವಂತೆ, ತೀಕ್ಷ್ಣಬುದ್ಧಿಯ ತಾರ್ಕಿಕರು (Logician), ಧೀರರೂ ಇಲ್ಲಿದ್ದರೆಂದು ಅರ್ಥೈಸಬಹುದಾದರೂ, ಗ್ರಾಮನಾಮ ಅಧ್ಯಯನದಲ್ಲಿ ನೈಸರ್ಗಿಕ ಭೌಗೋಳಿಕ ಪರಿಸರಕ್ಕೇ ಹೆಚ್ಚು ಮಹತ್ವವಿರುತ್ತದೆ. ಆದ್ದರಿಂದ, ಮೊದಲು ಹೇಳಿದ ಅರ್ಥವೇ ಹೆಚ್ಚು ಸೂಕ್ತವೆನಿಸುತ್ತದೆ. ಕೂರಿದವಳ್ಳಿ, ಕೊರ್ದಿವಳ್ಳಿಗಳೇ ಮುಂದೆ ಕೂದ್ದವಳ್ಳಿ, ಕೂದುವಳ್ಳಿ ಎನಿಸಿರುವುದು ಸಹಜವೇ ಆಗಿದೆ. ಹಂಚರವಳ್ಳಿಯ ಶಾಸನದಲ್ಲಿ (೧೫೩–೧೨೮೩) ಬರುವ ಕೂಡವಳ್ಳಿ ಮತ್ತು ೧೯೮೧ರ ಗೆಜೆಟಿಯರ್‌ನಲ್ಲಿ ಹೇಳಿರುವ Kuduvalli ಅಥವಾ ಕುಡುವಳ್ಳಿ, ಕನ್ನಡ ಗ್ರಾಮಪಟ್ಟಿಯ ಎಪಿಗ್ರಾಫಿಯ ಕರ್ನಾಟಿಕ ಸಂಪುಟದಲ್ಲಿರುವ ಕೂದು(ದ)ವಳ್ಳಿ (Kudavalli) ಹಾಗೂ ೧೯೭೧ರ District Census Hand Bookನಲ್ಲಿರುವ Kuduvally(i)–ಎಲ್ಲವೂ ಒಂದೇ ಎನಿಸುತ್ತದೆ. ಅಂದರೆ, ಈ ಊರಿಗೆ ಕು(ಕೂ)ಡುವಳ್ಳಿ ಹಾಗೂ ಕೂದುವಳ್ಳಿ–ಎರಡೂ ಹೆಸರು ಪ್ರಚಲಿತದಲ್ಲಿದ್ದಿರಬೇಕು. ಈಗಿನ ಹೆಸರು ಮಾತ್ರ ಕೂದುವಳ್ಳಿಯೇ ಆಗಿದೆ.

ನಾವು ಒಂದು ಗ್ರಾಮವನ್ನು ಸಮೀಕ್ಷಿಸುವಾಗ, ಪ್ರಾಚ್ಯಾವಶೇಷದಿಂದ ಆರಂಭಿಸಬೇಕಾಗುತ್ತದೆ. ಆದರೆ ಈ ಊರಿನಲ್ಲಿ ಪುರಾತತ್ವಕ್ಕೆ ಸಂಬಂಧಿಸಿದ ಯಾವುದೇ ಮಾಹಿತಿ ದೊರೆತಿಲ್ಲ. ಅಂತೇ ಒಂದು ಗ್ರಾಮದ ಇತಿಹಾಸವನ್ನರಿಯುವಲ್ಲಿ ಶಾಸನಗಳ ಪಾತ್ರ ಹಿರಿದು. ಹಾಗೆ ಗಮನಿಸಿದರೆ, ಗ್ರಾಮದ ಇನ್ನೊಂದು ಭಾಗವಾಗಿರುವ ಗೌತಮೇಶ್ವರವೂ ಸೇರಿದಂತೆ ಕೂದುವಳ್ಳಿಯಲ್ಲಿ ಒಟ್ಟು ೮ ಶಾಸನಗಳು ದೊರೆತಿವೆ. ಇವು ಕ್ರಿ.ಶ.೧೧ರಿಂದ ೧೩ನೇ ಶತಮಾನದವರೆಗಿನ ಕಾಲವ್ಯಾಪ್ತಿಗೆ ಸೇರುತ್ತವೆ. ಉಳಿದಂತೆ, ಒಂದು ಸನ್ನದು ೧೪–೧೫ನೇ ಶತಮಾನದ್ದಾದರೆ, ಮತ್ತೊಂದು ಶಾಸನವು ಕ್ರಿ.ಶ.೧೭ನೇ ಶತಮಾನದ್ದು. ಎರಡು ಶಾಸನಗಳು ಅಗ್ರಹಾರದಲ್ಲಿ ಸುಗ್ಗಿಕಟ್ಟೆಯ ಬಳಿ ಇರುವ ವೀರಗಲ್ಲುಗಳು (೧೩೧–೧೧೯೬–೮೦ ಮತ್ತು ೧೩೨–೧೨–೧೩ನೇ ಶ.); ಅಲ್ಲದೆ, ಇನ್ನೊಂದು ವೀರಗಲ್ಲು ಗೌತಮೇಶ್ವರ ದೇವಾಲಯದ ಬಳಿ ಇದೆ(೧೩೪–ಕ್ರಿ.ಶ.೧೨೨೧). ಇದೇ ದೇವಾಲಯದ ಬಳಿ ಇನ್ನೂ ೩ ಶಾಸನಗಳಿವೆ (೧೩೩–೧೨೬೫, ೧೩೫–೧೦೬೫, ೧೩೭–೧೧ನೇ ಶ.); ಇವೆಲ್ಲವೂ ದೇವದಾನ ಶಾಸನಗಳು. ಈ ದೇವಾಲಯದಲ್ಲಿರುವ ಭೈರವನ ವಿಗ್ರಹದಲ್ಲಿ ಪೀಠ ಶಾಸನವೂ ಇದೆ(೧೩೬–೧೬೪೯). ಇದರೊಂದಿಗೆ, ಕೂದುವಳ್ಳಿ ಅಗ್ರಹಾರಕ್ಕೆ ಸಂಬಂಧಿಸಿದಂತೆ ಒಂದು ಸನ್ನದಿನ ಪ್ರತಿಯೂ ಇದೆ (ಒಂಖ ೧೯೨೯–ಶಾ.ಸಂಖ್ಯೆ. ೧೮, ಕ್ರಿ.ಶ. ೧೩೯೧–೧೪೦೨).

ಕೂದುವಳ್ಳಿಯನ್ನು ಅಗ್ರಹಾರ ಮಾಡಿದ ವಿಷಯವು ಕ್ರಿ.ಶ.೧೩೯೧–೧೪೦೨ರ ಸನ್ನದಿನಲ್ಲಿದೆ (MAR ೧೯೨೯, ಶಾ. ಸಂಖ್ಯೆ–೧೮; ಇದು ಸನ್ನದಾಗಿರುವುದರಿಂದ ಎಕ XI(ಪ)ರಲ್ಲಿ ಪ್ರಕಟಿಸಿಲ್ಲ). ಈ ಸನ್ನದಿನ ಕೈಬರಹದ ಪ್ರತಿಯು ಪಟೇಲ್ ಸುಬ್ರಾಯ ಪುರಾಣಿಕ ಎಂಬುವವರ ಬಳಿ ಇದ್ದು, ಇವರು, ಈಗ ಅಲ್ಲಿನ ಮಹಾಲಕ್ಷ್ಮೀ ದೇವಾಲಯದ ಅರ್ಚಕರೂ ಆಗಿರುವ ಶ್ರೀ ಕೆ.ಎಸ್. ನಾಗರಾಜ ಪುರಾಣಿಕರ ತಾತಂದಿರು(ತಂದೆ–ಶೇಷಾದ್ರಿ ಪುರಾಣಿಕರು). ಈ ಸನ್ನದಿನಲ್ಲಿ ಎರಡು ಅವಧಿಗಳು ಹಾಗೂ ಎರಡು ವಿಷಯಗಳು ಅಡಕವಾಗಿವೆ. ಮೊದಲಿಗೆ, ಅಂದರೆ, ಕ್ರಿ.ಶ.೧೩೯೧ರಲ್ಲಿ ಎರಡನೇ ಹರಿಹರನು ಕೂದುವಳ್ಳಿಯನ್ನು (ಸ್ವಲ್ಪ ಭಾಗ ಬಿಟ್ಟು) ಶೃಂಗೇರಿ ಮಠಕ್ಕೆ ಕೊಟ್ಟಿದ್ದನು. ಶ್ರೀ ಪುರುಷೋತ್ತಮ ಭಾರತಿಗಳು ಶೃಂಗೇರಿ ಪೀಠಾಧಿಪತಿಗಳಾದಾಗ, ತಾನುಗೊಡಿಗೆ, ಗುಬ್ಬಿಬಯಲು, ಚಟ್ಟೆಮಕ್ಕಿಗಳ ಸ್ವಲ್ಪ ಭೂಮಿಯನ್ನು ಅವರ ಪೂರ್ವಾಶ್ರಮದವರಿಗೆ ನೀಡಲಾಯಿತು. ಇವರ ನಂತರ ಶ್ರೀ ರಾಮಚಂದ್ರಭಾರತಿಗಳು ಪೀಠಕ್ಕೆ ಬಂದಾಗ, ಇವೆಲ್ಲವೂ ಮತ್ತೆ ಮಠಕ್ಕೆ ಸೇರಿದ್ದರಿಂದ, ಹಿಂದಿನ ಗುರುಗಳ ಪೂರ್ವಾಶ್ರಮದವರಿಗೆ ಸಂದಿದ್ದ ಭೂದಾನವನ್ನು ಇವರ ಪೂರ್ವಾಶ್ರಮದವರಾದ ಆರಗದ ಕಲ್ಲಿನಾಥಭಟ್ಟರ ಮಗ ಮಲ್ಲಿಭಟ್ಟರಿಗೆ ಬಿಟ್ಟುಕೊಟ್ಟರು. ಹೀಗಾಗಿ, ಇಷ್ಟು ಭಾಗ ಬಿಟ್ಟು, ಉಳಿದದ್ದು ಶೃಂಗೇರಿ ಮಠದವರ ಕೈಯ್ಯಲ್ಲಿತ್ತು.

ಒಮ್ಮೆ, ಶ್ರೀಮಠದಲ್ಲಿ ಬ್ರಹ್ಮನಾಥದೇವರ(ದೇವರೆಂದು ಪೂಜಿಸಲ್ಪಡುತ್ತಿದ್ದ ಕ್ಷುದ್ರಶಕ್ತಿ) ಉಪದ್ರವ ಬಹಳವಾಗಿ ದನಗಳು ಸಾಯುತ್ತಿದ್ದವು. ಅದನ್ನು ಪರಿಹರಿಸಲು ಶ್ರೀಮಠದವರ ಅಪೇಕ್ಷೆಯಂತೆ, ಮಲ್ಲಿಭಟ್ಟರ ಮುಖಾಂತರವಾಗಿ ಪಂಚಾಕ್ಷರಿ ನರಹರಿಭಟ್ಟರನ್ನು ಕರೆಸಿದರು. ಅವರು ಕೆಲವು ಮಂತ್ರಪಠಣದ ಮೂಲಕ ಬ್ರಹ್ಮದೇವರ ಉಪದ್ರವವನ್ನು ನಿಲ್ಲಿಸಿದರು; ಬ್ರಹ್ಮದೇವರಿಗೆ ಮುಂದೆ 'ನಡಕೊಳ್ಳುವ ಬಗ್ಗೆ ಕಟ್ಟಿತವ ಮಾಡಿ ಗೊತ್ತಗೆ ನಿಲ್ಲಿಸಿ' ಉಪದ್ರವವನ್ನು ಪೂರ್ಣವಾಗಿ ಪರಿಹರಿಸಿದರು. ಇದರಿಂದ ಸಂತಸಗೊಂಡ ಶ್ರೀಮಠದವರು, ಕೂದುವಳ್ಳಿ ಗ್ರಾಮವನ್ನು(ಮಲ್ಲಿಭಟ್ಟರಿಗೆ ನೀಡಿದ್ದ ಪಾಲು ಬಿಟ್ಟು) ಆ ನರಹರಿಭಟ್ಟರಿಗೆ ನೀಡಿದರು. ನರಹರಿಭಟ್ಟರು ಹತ್ತಿರದಲ್ಲಿರುವ ಕೊಂಡನಹಳ್ಳಿ ಗ್ರಾಮದಲ್ಲಿ ವಾಸಿಸುತ್ತಾ, ತಮಗೆ ಬಂದ ಭೂಮಿಯನ್ನು ನೋಡಿಕೊಳ್ಳುತ್ತಿದ್ದರು.

ಕೆಲದಿನಗಳ ನಂತರ ಅಲ್ಲಿಗೆ ಗುತ್ತಿಗೆದಾರರಾಗಿ ಬಂದ ದೇವರಮಕ್ಕಳು, ಬೆಳಿಗ್ಗೆ ಅವರ ಮನೆಗೆ ಕಳುಹಿಸಿದ್ದ ಗಡಿಗುತ್ತಿಗೆ ಭತ್ತವನ್ನು ರಾತ್ರಿ ತಮ್ಮ ಮನೆಗೆ ಕದ್ದೊಯ್ಯುತ್ತಿದ್ದರು. ಒಂದು ವರ್ಷದ ನಂತರ ಇದು ನರಹರಿಭಟ್ಟರಿಗೆ ತಿಳಿಯಿತು. ಅವರು ಶೃಂಗೇರಿ ಮಠಕ್ಕೆ ಹೋಗಿ ಈ ಬಗ್ಗೆ ವಿವರಿಸಿ, ತಾವೊಬ್ಬರೇ ಆ ಗ್ರಾಮವನ್ನು ನಿರ್ವಹಿಸುವುದಕ್ಕಾಗುವುದಿಲ್ಲವೆಂದು ಹೇಳಿದರು; ಹಾಗೂ ಈ ಗ್ರಾಮವನ್ನು ವೃತ್ತಿಶಾಖೆ ಮಾಡಿ, ಅಗ್ರಹಾರ ಮಾಡಿ ಸ್ವಾಮಿಗಳಾದ ತಮ್ಮ ಹೆಸರಿನಲ್ಲಿ ದಾನಶಾಸನ ಬರೆಸಿಕೊಡಬೇಕೆಂದು ಪೀಠಾಧಿಪತಿಗಳಲ್ಲಿ ಕೇಳಿಕೊಂಡರು. ಅದರಂತೆ ಶ್ರೀ ರಾಮಚಂದ್ರಭಾರತಿಗಳು, ೧೪೭(+೯) ಖಂಡುಗ ಭೂಮಿಯನ್ನು ಒಬ್ಬರಿಗೆ ಒಂದು ವೃತ್ತಿಗೆ ೪ ೧/೪ ಖಂಡುಗದಂತೆ ವಿವಿಧ ಗೋತ್ರ ಸೂತ್ರದ ೩೦ ಬ್ರಾಹ್ಮಣರಿಗೆ ಹಂಚಿದರು(ಇವರಲ್ಲಿ ಕೆಲವು ಕಾಶ್ಮೀರಿ ಬ್ರಾಹ್ಮಣರಿಗೂ ದಾನ ದೊರೆತಿದೆ). ಈ ದಾನದಲ್ಲಿ ಪಂಚಾಕ್ಷರಿ ನರಹರಿಭಟ್ಟರ ಮಗ ನೀಲೆ ನರಸಿಂಹಭಟ್ಟರಿಗೆ ೪ ೧/೨ ವೃತ್ತಿಯೂ ದೊರಕಿದೆ. ಇದನ್ನು ಒಂದು ಅಗ್ರಹಾರ ಮಾಡಿದರಲ್ಲದೆ, ಅದರ ಪೂರ್ಣಸ್ವಾಮ್ಯವನ್ನು ನೀಲೆ ನರಸಿಂಹಭಟ್ಟರಿಗೆ ನೀಡಿ ದಾನಶಾಸನ ಬರೆಸಿಕೊಟ್ಟರು. ಇದರೊಂದಿಗೆ, ದೇವತೆಗಳಾದ ಮಹಾಲಕ್ಷ್ಮಿದೇವಿ, ಸೋಮೇಶ್ವರ ಹಾಗೂ ಗಾಯಿತ್ರೀ ಮಂಟಪಕ್ಕೂ ದಾನ ನೀಡಲಾಗಿದೆ. ಅಲ್ಲದೆ, ರಸ್ತೆ ಮಾಡಿಕೊಟ್ಟ ಕುಳಗಾರರಾದ ದೇವರ ಮಕ್ಕಳಿಗೆ(ಬೆಸ್ತರಿಗೆ) ಉಂಬಳಿಯಾಗಿ ೩ ೧/೨ ಖಂಡುಗ ದಾನ ನೀಡಲಾಗಿದೆ. ಅವರು ಈ ಉಂಬಳಿಯನ್ನು ಕೆಲಕಾಲ ಅನುಭವಿಸಿ, ದೊಡ್ಡಣ್ಣಭಟ್ಟ ಎಂಬ ಬ್ರಾಹ್ಮಣನಿಗೆ ಗೌತಮೇಶ್ವರ ದೇವಾಲಯದ ಮಂತ್ರಪುಷ್ಪ ಸೇವೆ ಸಲ್ಲಿಸುವುದಕ್ಕಾಗಿ ದಾನ ಕೊಟ್ಟರು. ಕಾಲಕ್ರಮೇಣ ಆ ಜಾತಿಯವರ ಸಂಖ್ಯೆ ಕಡಿಮೆಯಾಗುತ್ತಾ, ಆ ಜನ ಊರು ಬಿಟ್ಟು ಹೋದರು. ದೇವರ ಸೇವೆಗಾಗಿ ದಾನ ಪಡೆದಿದ್ದ ದೊಡ್ಡಣ್ಣಭಟ್ಟ ಅಪುತ್ರಕನಾದ್ದರಿಂದ ಅವರ ಆಸ್ತಿಯು, ಆ ಭೂಮಿಯನ್ನು ಅಡವಿಟ್ಟುಕೊಂಡಿದ್ದ ಸಿಂಗಾಪುರುದ ಗಿರಿಭಟ್ಟನಿಗೂ, ಅವನೂ ಅಪುತ್ರಕನಾದ್ದರಿಂದ, ಉಪಾಧ್ಯರ ನರಸೀದೇವರಿಗೂ ಆಸ್ತಿ ಸೇರುತ್ತದೆ. ಊರಿನ ಭೂಮಿ ವ್ರಿತ್ತಿವಂತರಿಗೆ ಸೇರಿದ್ದು, ಹಕ್ಕುದಾರಿಕೆ ಇಲ್ಲದ (unclaimed) ಭೂಮಿಯು ಇದ್ದರೆ ಅದು ಶೃಂಗೇರಿ ಮಠಕ್ಕೆ ಸೇರಬೇಕೆಂದೂ ಇದರಲ್ಲಿ ಬರೆಯಲಾಗಿದೆ. ಈ ಎಲ್ಲವೂ ೯–೧೦ ವರುಷಗಳ ಕಾಲಾವಧಿಯಲ್ಲಿ ನಡೆಯಿತೆಂದು ಶಾಸನದ ಕಾಲ ಹೇಳುತ್ತಿದೆ. ಇನ್ನೊಂದು ಗಮನಾರ್ಹವಾದ ವಿಷಯವೆಂದರೆ, ಕ್ರಿ.ಶ.೧೪ನೇ ಶತಮಾನದ ಹೊತ್ತಿಗೇ ಇಲ್ಲಿ ಕಾಶ್ಮೀರೀ ಬ್ರಾಹ್ಮಣರಿದ್ದರು ಹಾಗೂ ಅವರಿಗೆ ದಾನವೂ ಸಂದಿತ್ತು ಎಂಬುದು ಈ ಶಾಸನದಿಂದಲೇ ತಿಳಿದುಬರುತ್ತದೆ. ಕೆ.ವಸಂತಲಕ್ಷ್ಮಿಯವರು ಗುರುತಿಸಿರುವಂತೆ, ಚಿಕ್ಕಮಗಳೂರು ಜಿಲ್ಲೆಯಲ್ಲಿ ಕ್ರಿ.ಶ. ಸುಮಾರು ೧೨ನೇ ಶತಮಾನದಿಂದಲೇ ಕಾಶ್ಮೀರೀ ಬ್ರಾಹ್ಮಣರಿದ್ದರು(ಇದ ಸಂ.೨೨(ಲೇ.)ಪು.೨೪೧–೪೪).

ಇದೇ ವಿವರಗಳನ್ನು ಮತ್ತೊಂದು ಶಾಸನವೂ ನೀಡುತ್ತಿದೆ. ಶಿಲಾಶಾಸನದ ಪ್ರತಿಯಾಗಿರುವ ಆ ಚಿಕ್ಕಮಗಳೂರು ೮೮ರ(ಎಕ VI–ರೈಸ್, ಕಾಲ–೧೩೯೧) ಶಾಸನಕ್ಕೆ ಸಂಬಂಧಿಸಿದಂತೆ ಪ್ರಸ್ತುತ ಶಾಸನವು, ಪೂರಕ ಮಾಹಿತಿ ನೀಡುತ್ತಿದೆ. ಅದು ಸರ್ಜಾಪುರದ ಟೀಚರ್ ರಾಮಸ್ವಾಮೈಯಂಗಾರರಿಂದ ಬಂದ ಪ್ರತಿ. ಆ ಶಾಸನದಲ್ಲಿ (ಅದೇ.) ಹರಿಹರನು ಮಠಕ್ಕೆ ದಾನಕೊಟ್ಟಿದ್ದು, ಅದನ್ನು ವೃತ್ತಿಭಾಗ ಮಾಡಿ ನೀಲೆ ನರಸಿಂಹಭಟ್ಟರು ಮತ್ತಿತರರಿಗೆ, ದೇವರುಗಳಿಗೆ ದಾನ ನೀಡಿದ್ದು–ಎಲ್ಲಾ ವಿಷಯವಿದೆ. ಶ್ರೀ ರಾಮಚಂದ್ರಭಾರತಿಗಳು, ತಮ್ಮ ಗುರುಗಳಾದ ಶ್ರೀ ಪುರುಷೋತ್ತಮ ಭಾರತಿಗಳಿಗೆ ಪ್ರೀತಿಯಾಗಲಿ ಎಂದು ಬ್ರಾಹ್ಮಣರಿಗೆ ಈ ದಾನವನ್ನು ನೀಡಿದರೆಂದು ಆ ಶಾಸನ ಹೇಳಿದರೆ, ಪ್ರಸ್ತುತ ಶಾಸನವು, ಆ ಪರಿಸ್ಥಿತಿಯನ್ನೂ, ಅಗ್ರಹಾರ ಮಾಡಬೇಕಾದ ಸಂದರ್ಭ ಬಂದಿದ್ದನ್ನೂ ವಿವರಿಸಿದೆ (ಈ ಇಬ್ಬರು ಗುರುಗಳ ಕಾಲದ ಬಗ್ಗೆ ಶಾಸನದಲ್ಲಿ ವ್ಯತ್ಯಾಸವಿದೆ ಎಂದು ಈಗಾಗಲೇ ಗುರುತಿಸಿದ್ದಾರೆ). ಒಟ್ಟಾರೆ, ಶ್ರೀ ಪುರುಷೋತ್ತಮಭಾರತಿಗಳ ಕಾಲದಲ್ಲಿ ಶ್ರೀಮಠಕ್ಕೆ ಸಂದ ಈ ಗ್ರಾಮವು ಶ್ರೀ ರಾಮಚಂದ್ರಭಾರತಿಗಳ ಕಾಲದಲ್ಲಿ ಅಗ್ರಹಾರವಾಗಿ ಮಾರ್ಪಟ್ಟಿದ್ದನ್ನು ಪ್ರಸ್ತುತ ಶಾಸನ ಸ್ಪಷ್ಟಪಡಿಸಿದೆ.

ಪ್ರಸ್ತುತ ಶಾಸನದಲ್ಲಿ (MAR ೧೯೨೯–ಶಾ. ಸಂಖ್ಯೆ. ೧೮), ಬ್ರಾಹ್ಮಣರಿಗೆ ಮಾತ್ರವಲ್ಲದೆ, ಮಹಾಲಕ್ಷ್ಮೀ ದೇವರಿಗೆ, ಸೋಮೇಶ್ವರ ದೇವರಿಗೆ ಹಾಗೂ ಗಾಯಿತ್ರೀ ಮಂಟಪಕ್ಕೂ ದಾನ ನೀಡಿದ ವಿಷಯವಿದೆ (ಅಂತೇ, ಗೌತಮೇಶ್ವರ ದೇವಾಲಯದ ಮಂತ್ರಪುಷ್ಪದವರಿಗೂ ಪರೋಕ್ಷವಾಗಿ ದಾನ ಸಂದಿದೆ)–ಈ ಎಲ್ಲವೂ ಊರ ಮಧ್ಯದಲ್ಲಿದೆ. ಮಹಾಲಕ್ಷ್ಮೀ ದೇವಾಲಯ ಮತ್ತು ಗಾಯಿತ್ರೀ ಮಂಟಪಗಳು ಹತ್ತಿರದಲ್ಲೇ ಇವೆ; ಸೋಮೇಶ್ವರ ದೇವಾಲಯ ಮಾತ್ರ ಬೇರೆಡೆ ಇದೆ. ಈಗ ಮಹಾಲಕ್ಷ್ಮೀ ದೇವಾಲಯ ಮತ್ತು ಗಾಯಿತ್ರೀ ಮಂಟಪಗಳ ಮಧ್ಯದಲ್ಲಿ ರಾಮೇಶ್ವರ ದೇವಾಲಯವಿದೆ. ಪಕ್ಕದಲ್ಲೇ ಇರುವ ರಾಮೇಶ್ವರ ದೇವಾಲಯವನ್ನು ಬಿಟ್ಟು ದೂರ ಇರುವ ಸೋಮೇಶ್ವರ ದೇವಾಲಯಕ್ಕೆ ದಾನ ನೀಡಿರುವುದೇಕೋ ತಿಳಿಯುವುದಿಲ್ಲ. ಇದರಿಂದ, ಈ ಶಾಸನದ ಕಾಲಕ್ಕೆ ಈ ದೇವಾಲಯ ಇರಲಿಲ್ಲವೆಂದೂ ಊಹಿಸಲು ಸಾಧ್ಯವಿದೆ. ಈ ದೇವಾಲಯಕ್ಕೆ ಪೂಜಾ ವಂಶಸ್ಥರ ದಾನವಿದೆ ಎಂದು ತಿಳಿದುಬರುತ್ತದೆ.

ಇಷ್ಟೇ ಅಲ್ಲದೆ, ಕೂದುವಳ್ಳಿಯಲ್ಲಿ ವೀರಗಲ್ಲು ಶಾಸನಗಳೂ(–ಊರಿನ ಹೋರಾಟ/ಯುದ್ಧದಲ್ಲಿ ಸತ್ತವರ ನೆನಪಿಗಾಗಿ ನಿಲ್ಲಿಸಿದ ಸ್ಮಾರಕಗಳು)ದೊರೆತಿವೆ(ಚಿತ್ರ–೧). ಇಲ್ಲಿನ ತೋಟದ ನಡುವೆ ಇರುವ ಸುಗ್ಗಿಕಟ್ಟೆ ಬಳಿಯ ಇರುವ ಒಂದು ಶಾಸನವು 'ತುರುಗೋಳ್'ಗೆ (–ಒಂದು ಊರಿನ ಹಸುಗಳನ್ನು ಕೊಂಡೊಯ್ಯುವುದು) ಸಂಬಂಧಿಸಿದ್ದು(೧೩೧–೧೧೭೯–೮೦), ತೃಟಿತವಾಗಿದೆ; ಚಮ್ಮತಿಯ ಘಟ್ಟದಲ್ಲು ಪೊಮ್ಮಡಿ ಹೆಗ್ಗಡೆ ತಂಮ.... ಮಸಣಗೌಡ... ಯನಿರಿದ 'ತುರುಪರಿವಲಿ' ಎಂಬ ಶಬ್ದಗಳು ಮಾತ್ರ ಸ್ಪಷ್ಟವಾಗಿವೆ. ಈ 'ತುರುಗೋಳ್' ಯುದ್ಧವು ಚಮ್ಮತಿಯಘಟ್ಟ ಎಂಬಲ್ಲಿ ನಡೆದಿದ್ದು, ಬಹುಶಃ ಪೊಮ್ಮಡಿ ಹೆಗ್ಗಡೆಯ ತಮ್ಮ ಇದರಲ್ಲಿ ಹೋರಾಡಿರಬಹುದು. ಇಲ್ಲೇ ಇರುವ ಇನ್ನೊಂದು ಶಾಸನ (೧೩೨–೧೨–೧೩ನೇಶ.) ಬಹುಶಃ ಹಿಂದಿನ ಶಾಸನಕ್ಕೇ ಸಂಬಂಧಿಸಿದ್ದಾಗಿದೆ. ಈ ಶಾಸನದಂತೆ, ಹೊಯ್ಸಳ ವೀರಬಲ್ಲಾಳದೇವನು ಸಾಯಿರಾರವೆಯ(–ತಳಿಗೆನಾಡು) ನೆಲೆವೀಡಿನಿಂದ ಆಳ್ವಿಕೆ ನಡೆಸುತ್ತಿದ್ದನು. ಅವನ ಪಾದಪದ್ಮೋಪಜೀವಿಯಾದ, ಕೂದುವಳ್ಳಿಯ ಗಂಟೆಯ ಮಸಣಗೋಪನು ತಳಿಗೆನಾಡು ಸಾಸಿರದ ಪ್ರಭುಗಾವುಂಡನಾಗಿದ್ದನು; ಅಲ್ಲಿ ಗೌಡಗಾಹು ನಡೆಸುತ್ತಿದ್ದವನು–ಮಸಣಗೌಡ ಎಂಬುವವನು; ಇವನ ಮನೆಗೆ ಮಂತ್ರಿಯಾಗಿದ್ದವನು–ಮಾಚಿಸೆಟ್ಟಿ. ಇವನನ್ನು ಶಾಸನವು ಪೊನ್‌ಗೆ ಬಂಟ, ಮಚ್ಚರಿಸುವವರ ಮಸ್ತಕಶೂಲ, ತೊಡರ್ದರಗಾಳ, ಶರಣಾಗತ ವಜ್ರಪಂಜರ–ಎಂದೆಲ್ಲಾ ಹೊಗಳಿದೆ. ಈ ಮಾಚಿಸೆಟ್ಟಿಯು ಬಹುಶಃ ತುರುಗೋಳ್‌ನಲ್ಲಿ ಸತ್ತಾಗ, ಮಸಣಗೌಡನ ನಿರ್ದೇಶನದಂತೆ, ಅವನಿಗೆ 'ಪರೋಕ್ಷವಿನಯ'ಕ್ಕಾಗಿ ಮಾತಿನ ಮಾಕಲಸಿ ಎಂಬುವವಳು (ಶಾಸನ)ಕಲ್ಲು ನಿಲ್ಲಿಸಿದಳೆಂದು ಶಾಸನ ಹೇಳಿದೆ, ಗೌಡಿಕೆಗಾಗಿ(ಮಸಣಗೌಡನಿಗೆ) ೩ ಹಣ ೩ ಹಾಗ ದಾನ ನೀಡಲಾಗಿತ್ತೆಂದೂ ಶಾಸನದಲ್ಲಿದೆ.

ಎಕ.ಸಂಪುಟದ ಪ್ರಸ್ತಾವನೆಯಲ್ಲಿ ಈ ಶಾಸನದ ಬಗ್ಗೆ ಬರೆಯುತ್ತಾ, ಹೊಯ್ಸಳ ದೊರೆ ಎರಡನೇ ಬಲ್ಲಾಳನು ಒಂದನೇ ನರಸಿಂಹನ ವಿರುದ್ಧ ದಂಗೆ ಎದ್ದ ವಿಚಾರವನ್ನು ತಿಳಿಸಿದ್ದಾರೆ. ಅಲ್ಲದೆ, ಇಲ್ಲಿ ಬಲ್ಲಾಳನು ಅನುಸರಿಸಿದ ಮುಖ್ಯಮಾರ್ಗವೆಂದರೆ–ಸಣ್ಣಪುಟ್ಟ ಘರ್ಷಣೆಗಳನ್ನು ನಡೆಸುವುದು ಹಾಗೂ ಹಳ್ಳಿಗಳಿಗೆ ಮುತ್ತಿಗೆ ಹಾಕುವುದು. ಈ ರೀತಿ ಇವನು ತಳಿಗೆನಾಡು ಮತ್ತು ಕೊಡಗಿನಾಡುಗಳಿಗೆ ನುಗ್ಗಿ ಗೊಂದಲವನ್ನುಂಟುಮಾಡಿದನು, ನಂತರ ಹೂವಿನಹಳ್ಳಿಗೆ ನುಗ್ಗಿದನು–ಎಂದಿದ್ದಾರೆ. ಆದ್ದರಿಂದ ಈ ತುರುಗೋಳು ಅಂತಹ ಒಂದು ದಾಳಿಯೇ ಎನ್ನಬಹುದು ಹಾಗೂ ಈ ತುರುಗೋಳಲ್ಲಿ ಸತ್ತವನೇ, ಮೇಲೆ ಹೇಳಿದ ಮಾಚಿಸೆಟ್ಟಿ ಎನ್ನಬಹುದು. ಇಲ್ಲಿರುವ ಶಾಸನಕಲ್ಲುಗಳು ಈಗ ಸಾಕಷ್ಟು ಹೂತುಹೋಗಿವೆ; ಈ ಸುಗ್ಗಿಕಟ್ಟೆಯ ಬಳಿ ೪ ಕಲ್ಲುಗಳಿದ್ದು, ಅವು ೪ ಶಾಸನಕಲ್ಲುಗಳಾಗಿರಬಹುದು ಅಥವಾ ಶಾಸನಕಲ್ಲು ಮುರಿದು ತುಂಡಾಗಿರಬಹುದು; ಅಲ್ಲಿ ಒಟ್ಟು ೩ ಶಾಸನಗಳಿರುವಂತೆ ತೋರುತ್ತದೆ. ಇಲ್ಲಿಗೆ ಹತ್ತಿರವಿರುವ ಗೌತಮೇಶ್ವರ ದೇವಾಲಯದ ಬಳಿ ಇನ್ನೊಂದು ವೀರಗಲ್ಲು ಶಾಸನವಿದ್ದು (೧೩೪–೧೨೨೧), ಅದರಲ್ಲಿ 'ಎರಡನೇ ಬಲ್ಲಾಳನು ದೋರಸಮುದ್ರದಿಂದ ಆಳುತ್ತಿದ್ದ' ಎಂಬ ಪಾಠ ಮಾತ್ರವಿದೆ(ವಿವರವಿಲ್ಲ). ಇಲ್ಲಿ ಒಟ್ಟು ೩ ವೀರಗಲ್ಲುಗಳಿದ್ದು, ಒಂದು, ಮೂರು ಹಂತದ ವೀರಗಲ್ಲಾಗಿದ್ದು, ಇನ್ನೊಂದು, ಎರಡು ಹಂತದ ವೀರಗಲ್ಲಾಗಿದೆ; ಒಂದರಲ್ಲಿ ಮೇಲ್ಭಾಗ ಮುರಿದಿದೆ.

ಗೌತಮೇಶ್ವರ ದೇವಾಲಯದ ಬಳಿ ಇರುವ ಇತರ ಶಾಸನಗಳನ್ನಿಲ್ಲಿ ಗಮನಿಸಬಹುದು. ಹೊಯ್ಸಳ ದೊರೆ ಮೂರನೇ ನರಸಿಂಹನ ಕಾಲದಲ್ಲಿ ಸೋಮೆಯ ದಂಡನಾಯಕನು ಮಹಾಪ್ರಧಾನನಾಗಿದ್ದನು. ಇವನ ಮೈದುನ ಬೊಮ್ಮಣ್ಣ ಎಂಬುವವನು, 'ಆ ನಾಡಿನ ಶಿವಾಲಯಗಳಿಗೆ'ಂದು ತಳಿಗೆನಾಡು ಸಾವಿರದ ತೆರಿಗೆಗಳನ್ನು ದಾನ ನೀಡಿದ್ದನ್ನು, ಗೌತಮೇಶ್ವರ ದೇವಾಲಯದ ಮುಂದಿನ ಎಡಗೋಡೆಗೆ ಆನಿಸಿರುವ ಶಾಸನ ಹೇಳಿದೆ(೧೩೩–೧೨೬೫). ಸೋಮೆಯ ದಣ್ಣಾಯಕರು ಮತ್ತು ರಾಜನರಸಿಂಹದೇವನ ಒಪ್ಪಿಗೆಯನ್ನು ಪಡೆದು, ಅಭ್ಯಾಗತೆ, ಅನ್ಯಾಯ, ತಪ್ಪು, ತವಡಿ, ದಂಡ, ವುಂಡಿಗೆ, ವೊಡದತಲೆ, ವೊಕ್ಕಾಭರಣ–ಇಂತಾವುವೂ ಇಲ್ಲವೆಂದು ಹೇಳಿ, ಸರ್ವಬಾಧಾಪರಿಹಾರವಾಗಿ ಅದನ್ನು ನಾಡ ತಮ್ಮಡಿಗಳಿಗೆ(ಪೂಜಾರಿಗೆ) ನೀಡಿದರು. ದಾನ ನೀಡುವಾಗ, ನಾಡು, ಹಳ್ಳಿ, ಸಮಸ್ತ ಗೌಡುಗಳ ಮುಂದಿಟ್ಟು ಕೊಡಲಾಗಿದೆ ಎಂದು ಹೇಳಿರುವುದಿಲ್ಲಿ ಮುಖ್ಯ. ಹೀಗೆಂದು ಶಾಸನ ಬರೆದವನು–ನಾಡಸೇನಬೋವ ನಾಗಯ್ಯ. ಇದರಿಂದ, ಕೂದುವಳ್ಳಿಯ ಶಿವಾಲಯಗಳಿಗೂ ದಾನ ಬಂದಿರುವುದು ಸ್ಪಷ್ಟವಾಗಿದೆ. ಅಲ್ಲದೆ, ಈ ಶಾಸನದ ಅಂತ್ಯದಲ್ಲಿ 'ಗೌತಮೇಶ್ವರದ ಸನ್ನಿಧಾನದಲ್ಲಿ' ಎಂಬ ಮಾತೂ ಇದೆಯಾದ್ದರಿಂದ, ಈ ದಾನದಲ್ಲಿ ಗೌತಮೇಶ್ವರ ದೇವಾಲಯಕ್ಕೂ ಪಾಲು ಬಂದಿದೆ ಎಂಬುದು ಸೂಚ್ಯವಾಗಿದೆ.

ಗೌತಮೇಶ್ವರ ದೇವಾಲಯದ ಪುಷ್ಕರಿಣಿಯ ದಡದಲ್ಲಿ ಬಿದ್ದಿರುವ ಶಾಸನ(೧೩೭–೧೧ನೇ ಶ.)ವೊಂದು (ಈಗ ಅದು ಅಲ್ಲಿಲ್ಲ) ಗಮನಾರ್ಹವಾದುದಾಗಿದೆ. ಕಾರಣ–ಶಾಸನದ ಪೂರ್ಣಪಾಠ ಕಂದಪದ್ಯದಲ್ಲಿದೆ; ಅಲ್ಲದೆ ಪಂಚತಂತ್ರದ ಕಥೆಯೊಂದನ್ನು ಹೋಲುವಂಥ ಇನ್ನೊಂದು ಘಟನೆಯನ್ನು ಹೇಳಿದೆ. ಮುಖ್ಯವಾಗಿ, ವೃಷಭವೊಂದನ್ನು ಕೊಂದ ಪಾಪದ ಪ್ರಾಯಶ್ಚಿತ್ತಕ್ಕಾಗಿ ದೇವದಾನ ನೀಡಿದ್ದನ್ನು ಈ ಶಾಸನ ಹೇಳಿದೆ. ಜಂಬೂದ್ವೀಪದ ಸುಂದರ ತಾಣವಾದ ಕೈಕೇಶ್ವರದಲ್ಲಿ

ಶಂಭು ನೆಲೆಸಿದ್ದನು. ಅದರಿಂದ ಕೊರ್ದಿವಳ್ಳಿ (ಕೂದುವಳ್ಳಿ) ಇಂಬಾಗಿತ್ತು ಎಂದು ಶಾಸನ ಆರಂಭವಾಗುತ್ತದೆ. ಅಲ್ಲಿ ವಾಮನಭಟ್ಟ ಎಂಬ ಬ್ರಾಹ್ಮಣನಿಗೆ ಭತ್ತದ ಗದ್ದೆಯಿತ್ತು. ಒಂದು ದಿನ ವೃಷಭವೊಂದು ಶಿವನಿಳಯದಿಂದ ವೇಗವಾಗಿ ಹೊರಟು ವಾಮನಯ್ಯನ ಗದ್ದೆಗೆ ಹೋಗಿ ಮೇಯುತ್ತಿತ್ತು(?). ಇದನ್ನು ತಿಳಿದ ವಾಮನಯ್ಯನು, ಮೆರೆಕೋಲನ್ನು ಹಿಡಿದುಕೊಂಡು ಬರಸಿಡಿಲಿನಂತೆ ಬಂದು, ಆ ವೃಷಭನನ್ನು ಹೊಡೆದನು. ಆಗ ವೃಷಭವು 'ಕಳಕಂಠಶರಣು' ಎಂದು ಹೇಳುತ್ತಾ ಬಿದ್ದು, ಸತ್ತುಹೋಯಿತು('ಪ್ರಾಣವು ಅಮರವಾಸವನ್ನೈದಿತು'). 'ಬ್ರಾಹ್ಮಣ ಸ್ತ್ರೀಯೊಬ್ಬಳು ಸತ್ಯವನ್ನು ಪ್ರಮಾಣೀಕರಿಸಿ ನೋಡದೆ ಮುಂಗುಸಿಯನ್ನು ಕೊಂದಳು' ಎಂಬ ನಾಣ್ನುಡಿಯಂತೆ, 'ಅದು ಶಿವನ ವಾಹನವೇ ಆದ ವೃಷಭವೆಂದು ಗುರುತಿಸದೆ, ನಾನೂ ತಪ್ಪು ಮಾಡಿದೆನಲ್ಲಾ' ಎಂದು ಮರುಗಿದ ವಾಮನಭಟ್ಟನು, ಊರ ಮಹಾಜನರ ಮುಂದೆ ಸ್ವಯಂಭೂ ದೇವರಿಗೆ ಎರಡು ವಡ್ಡದ ಕೆಯ್ಯನ್ನು(ಗದ್ದೆ) ದಾನ ಮಾಡುತ್ತಾನೆ. 'ಎತ್ತಿನ ದೇಹ ಬಿದ್ದ(ಸತ್ತುಹೋದ) ಆ ಜಾಗವನ್ನು 'ಎತ್ತಿನ ಮಣ್ಣು' ಎಂದು ಕರೆಯುತ್ತಾರೆ.' ಎಂದು ಶಾಸನವೇ ಹೇಳಿದೆ. ಶಾಸನದಲ್ಲೇ ಹೀಗಿ ಹೇಳಿದೆ ಎಂದ ಮೇಲೆ, ಘಟನೆಯು ಇದಕ್ಕೂ ಸ್ವಲ್ಪ ಮುಂಚೆ ನಡೆದಿದೆ ಎನ್ನಬಹುದು. ಇಲ್ಲಿನ ಕ್ರಿ.ಶ.೧೦೬೫ರ ಮತ್ತೊಂದು ಶಾಸನದಂತೆ(೧೩೫) (ಈಗ ಅಲ್ಲಿಲ್ಲ), ಇದೇ ದೇವಾಲಯಕ್ಕೆ ಸೇನವಾರ ಮಾರಸಿಂಘನು, ಕೂರಿದವಳ್ಳಿಯ(ಕೂದುವಳ್ಳಿ) ೧೦ ಮಣ್ಣು ಗದ್ದೆಯನ್ನು ದಾನವಾಗಿ ನೀಡುತ್ತಾನಲ್ಲದೆ, ವಾಮನಯ್ಯನು ನೀಡಿದ ಭೂಮಿಯ ತೆರಿಗೆಯನ್ನೂ ಮಾನ್ಯ ಮಾಡುತ್ತಾನೆ(ಸೇನವಾರರು (ಈಗಿನ ಚಿಕ್ಕಮಗಳೂರು ಜಿಲ್ಲೆಯ ಸ್ಥಳೀಯ ನಾಯಕರು. ಕ್ರಿ.ಶ.೭ರಿಂದ ೧೦ನೇ ಶತಮಾನದವರೆಗಿದ್ದ ಇವರ ರಾಜಧಾನಿ-ಕೂಡಲೇರುಪುರ, ಕೂಡಲೂರು. ತಾವು ಖಚರ ವಂಶದವರೆಂದು ಹೇಳಿಕೊಂಡಿದ್ದಾರೆ ಒಂಖ). ಪ್ರಸ್ತುತ ಶಾಸನದ(೧೩೫) ಕಾಲ-೧೦೬೫, ಫೆಬ್ರವರಿ ೧೭; ಆದರೆ, ಮೇಲೆ ಹೇಳಿದ ಶಾಸನ(೧೩೭)ಕ್ಕಿಂತ ನಂತರದ ಕಾಲದ್ದು; ಏಕೆಂದರೆ ಅದು, ವಾಮನಯ್ಯನು ಕೊಟ್ಟ ದಾನವನ್ನು ಉಲ್ಲೇಖಿಸುತ್ತದೆ. ಜೊತೆಗೆ, ಈ ಶಾಸನದ ಕಾಲ-ಕ್ರಿ.ಶ.೧೦೬೫ ಹಾಗೂ ಹಿಂದೆ ಹೇಳಿದ ಶಾಸನದ(೧೩೭) ಕಾಲ ಕ್ರಿ.ಶ.೧೧ನೇ ಶತಮಾನ. ಹೀಗಾಗಿ ಹಿಂದೆ ಹೇಳಿದ ಶಾಸನದ ಕಾಲ ಕ್ರಿ.ಶ.೧೦೬೫ಕ್ಕಿಂತ ಮುಂಚೆ ಎಂಬುದು ಸ್ಪಷ್ಟವಾಗುತ್ತದೆ; ಅಲ್ಲದೆ, ಆ ಶಾಸನದಲ್ಲೇ, 'ಎತ್ತಿನಮಣ್ಣು ಎಂದು ಕರೆಯುತ್ತಾರೆ' ಎಂದಿರುವುದರಿಂದ, ಆ ಶಾಸನ ಹೇಳುವ ಘಟನೆ ಹಾಗೂ ಕೈಕೇಸ್ವರದ ಸ್ವಯಂಭೂದೇವರು ಎರಡೂ ಕ್ರಿ.ಶ.೧೦೬೫ಕ್ಕಿಂತ ಸ್ವಲ್ಪ ಹಿಂದಿನದೆಂದು ಹೇಳಬಹುದಾಗಿದೆ. (ಆ ಸ್ಥಳವನ್ನು ಈಗ ಎತ್ತು ಸಮಾಧಿಯಾದ ಜಾಗ, 'ವೃಷಭಸ್ಥಳ' ಎಂದೂ ಹೇಳಲಾಗುತ್ತದೆ).

ಇಲ್ಲಿ ಗಮನಿಸಬೇಕಾದ ಎರಡು ವಿಷಯಗಳೆಂದರೆ-ಎತ್ತಿನ ಮಣ್ಣು ಎಂಬ ಜಾಗ ಮತ್ತು ಕೈಕೇಸ್ವರದ ಸ್ವಯಂಭೂ ದೇವಾಲಯ. ಕೂದುವಳ್ಳಿಯ ಮೇಲಿನ ಬೀದಿಯಿಂದ ಗೌತಮೇಶ್ವರದ ಕಡೆಗೆ ಹೋದರೆ, ಕ್ರಿಶ್ಚಿಯನ್ನರಿಗೆ ಸೇರಿದ ಒಂದು ಗದ್ದೆಯಲ್ಲಿ ಮೂರು ಕಾಲಿನ ಬಸವಣ್ಣನ ಶಿಲ್ಪವಿರುವ ಜಾಗ ನೋಡಬಹುದು. ಅಲ್ಲಿ ನಾಲ್ಕು ಕಂಬಗಳಿದ್ದು, ನಡುವೆ ಈ ಶಿಲ್ಪವಿದೆ. ಬಸವಣ್ಣನಿಗೆಂದು ಆ ಜಾಗವನ್ನು ಹಾಗೇ ಬಿಟ್ಟಿದ್ದಾರೆ; ದೇವಾಲಯವೇನೂ ಉಳಿದಿಲ್ಲ. ಹೀಗಾಗಿ, ಅಲ್ಲಿದ್ದಿರಬಹುದಾದ ದೇವಾಲಯ ಹಾಗೂ ಅದರ ಕಾಲದ ಬಗ್ಗೆ ನಿರ್ಧರಿಸಲು ನಮಗೆ ಸಾಧ್ಯವಾಗುವುದಿಲ್ಲ ಕೈಕೇಸ್ವರ (ಕೈ=ಗದ್ದೆ) ಎಂಬ ಹೆಸರೇ ಸೂಚಿಸುವಂತೆ ಗದ್ದೆಯಲ್ಲಿರುವ ದೇವಾಲಯ ಎಂಬುದಂತೂ ಸ್ಪಷ್ಟವಾಗಿದ್ದು, ಅಲ್ಲಿ ದೇವಾಲಯವಿದ್ದಿರಬೇಕು ಎನಿಸುತ್ತದೆ. ಈ ದೇವರನ್ನು 'ಸ್ವಯಂಭೂದೇವರು' ಎಂದಿರುವುದನ್ನೂ ಇಲ್ಲಿ ಗಮನಿಸಬಹುದು. ಶಾಸನದ ಆರಂಭದಲ್ಲೇ ಈ ದೇವರ ಹೆಸರಿದೆ. ವಿದ್ವಾಂಸರಾದ ಟಿ.ಮುರುಗೇಶಿ ಅವರು ಸಭೆಯಲ್ಲಿ ಹೇಳಿದಂತೆ, ೧೯೮೫ರಲ್ಲಿ ಅಲ್ಲಿಗೆ ಹೋದಾಗ 'ಎತ್ತಿನಮಣ್ಣು' ಜಾಗ ನೋಡಿದ್ದರಂತೆ; ಅಲ್ಲಿ ಮೇಲೆ ಹೇಳಿದಂಥಾ ಬಸವ ಮತ್ತು ಸಣ್ಣ ಲಿಂಗ ಇತ್ತಂತೆ. ಅಲ್ಲಿ ಪೊದೆ ಬೆಳೆದಿದ್ದರಿಂದ ಹತ್ತಿರ ಹೋಗಲು ಸಾಧ್ಯವಾಗಲಿಲ್ಲ. ನಾವು ಮತ್ತೊಮ್ಮೆ ಹೋಗಿ ಚಿತ್ರ ತೆಗೆಸಿ ಅದರ ಮೂಲಕ ಗಮನಿಸಿದಂತೆ, ಈಗ ಬಸವನ ಶಿಲ್ಪ ಮಾತ್ರವೇ ಉಳಿದಿದೆ

ಕೂದುವಳ್ಳಿಗೇ ಸೇರಿರುವ ಗೌತಮೇಶ್ವರ ದೇವಾಲಯದ ಉಲ್ಲೇಖವು ಕ್ರಿ.ಶ.೧೩ನೇ ಶ.(೧೩೩-೧೨೬೫) ಹಾಗೂ ೧೪-೧೫ನೇ ಶತಮಾನದ(MAR೧೯೨೯-ಶಾ.ಸಂಖ್ಯೆ ೧೮) ಶಾಸನಗಳಲ್ಲಿ ದೊರೆಯುತ್ತದೆ. ಮೊದಲ ಶಾಸನದಂತೆ(೧೩೩), 'ಆ ನಾಡಿನ ಶಿವಾಲಯಗಳಿಗೆಂದು ನೀಡಿದ ದಾನದಲ್ಲಿ ಗೌತಮೇಶ್ವರ ದೇವಾಲಯಕ್ಕೂ ಪಾಲು ಸಂದಿರಬೇಕು(ಶಾಸನವು ಈ ದೇವಾಲಯದ ಬಳಿಯೇ ಇರುವುದಲ್ಲದೆ, ಶಾಸನದಲ್ಲಿ 'ಗೌತಮೇಶ್ವರದ ಸನ್ನಿಧಾನ' ಎಂಬ ಮಾತೂ ಇದೆ). ಇದಲ್ಲದೆ, ಈ ದೇವಾಲಯದಲ್ಲಿ ಮಂತ್ರಪುಷ್ಪ ನಡೆಸಲು ದೊಡ್ಡಣ್ಣಭಟ್ಟ ಎಂಬುವವನಿಗೆ ಪರೋಕ್ಷವಾಗಿ ದಾನ ನೀಡಿದ್ದನ್ನು ಮೇಲೆ ಹೇಳಿದ ಕ್ರಿ.ಶ.೧೪-೧೫ನೇ ಶತಮಾನದ ಶಾಸನ ಹೇಳಿದೆ. ಇಲ್ಲಿರುವ ಭೈರವ ಬಿಂಬವನ್ನು ಗೌತಯ ಎಂಬುವವನು ಪ್ರತಿಷ್ಠೆ ಮಾಡಿದನೆಂದು ಕ್ರಿ.ಶ. ೧೬೪೯ರ ಪೀಠ ಶಾಸನ (೧೩೭) ಹೇಳಿದೆ.

ಒಂದು ಗ್ರಾಮದ ಪಾರಂಪರಿಕ, ಧಾರ್ಮಿಕ ಇತಿಹಾಸವನ್ನೂ, ವಾಸ್ತುಶಾಸ್ತ್ರದ ಬೆಳವಣಿಗೆಯನ್ನೂ ಅಲ್ಲಿನ ಪ್ರಾಚೀನ ದೇವಾಲಯಗಳು ವ್ಯಕ್ತಪಡಿಸಿದರೆ, ಅಲ್ಲಿನ ದೇವಾಲಯಗಳಲ್ಲಿ ಇಂದಿಗೂ ನಡೆಯುತ್ತಿರುವ ಪೂಜೆ-ಪುರಸ್ಕಾರಗಳು ಅದರ ಸಾಂಸ್ಕೃತಿಕ ಜೀವಂತಿಕೆಯನ್ನು ಸೂಚಿಸುತ್ತವೆ. ಇನ್ನು ಕೂದುವಳ್ಳಿಯಲ್ಲಿ ಈಗ ಇರುವ ದೇವಾಲಯಗಳನ್ನು ಗಮನಿಸುವುದಾದರೆ, ದೇವೀರಮ್ಮ, ರಾಮೇಶ್ವರ, (ಗಾಯಿತ್ರೀ ಮಂಟಪ), ಕಲಸೇಶ್ವರ, ಹರಿಹರೇಶ್ವರ, ಸೋಮೇಶ್ವರ ಮತ್ತು ಭೈರವ ದೇವಾಲಯಗಳಿವೆ. ಈ ನಾಲ್ಕು ಈಶ್ವರ ದೇವಾಲಯಗಳೊಂದಿಗೆ, ಗೌತಮೇಶ್ವರದ ಗೌತಮೇಶ್ವರ ದೇವಾಲಯವನ್ನೂ ಸೇರಿಸಿ, ಪಂಚಲಿಂಗಗಳೆಂಬ ಅರ್ಥದಲ್ಲಿ, ಕೂದುವಳ್ಳಿಯನ್ನು 'ಚಿಕ್ಕಮಗಳೂರಿನ ತಲಕಾಡು' ಎಂದು ಹೇಳುತ್ತಾರೆ(ಗೆಜ಼ೆಟಿಯರ್). ಹಿಂದೆ, ಇಲ್ಲಿ ಒಂದು ವಿಷ್ಣು ದೇವಾಲಯವೂ ಇತ್ತೆಂಬುದನ್ನು ಗಮನಿಸಿದರೆ, ಇಲ್ಲಿ ಎಲ್ಲ ಮತದ ದೈವಗಳಿಗೆ ಆಶ್ರಯವಿತ್ತು ಎಂಬುದನ್ನು ಗಮನಿಸಬಹುದು.

ಶಾಸನ ಮತ್ತು ಗೆಜ಼ೆಟಿಯರ್ ಹೇಳುವ ಮಹಾಲಕ್ಷ್ಮಿಯನ್ನು ಹಿಂದೆ ದೇವೀರಮ್ಮ ಎಂದು ಕರೆಯುತ್ತಿದ್ದರು(ಈಗ ಮಹಾಲಕ್ಷ್ಮಿ ಎಂದೇ ಕರೆಯುತ್ತಾರೆ). ಇದು ಊರಿನ ಮಧ್ಯದಲ್ಲಿರುವ ದೇವಾಲಯ; ಪೂರ್ವಾಭಿಮುಖವಾಗಿದೆ. ಇಲ್ಲಿನ ಸುತ್ತಮುತ್ತಲ ಗ್ರಾಮಗಳಲ್ಲಿ-ಅಂದರೆ, ಆಲ್ದೂರು, ಸಿರಿವಳಲು, ಬಂಡಿಗಡ, ಕೆಳಗೂರು, ಆವುತಿ, ಬಿಂಡಿಗ, ಅರಳುಗುಪ್ಪೆ, ಹಲಸಬಾಳು-ಮುಂತಾದ ಗ್ರಾಮಗಳಲ್ಲಿ ದೇವೀರಮ್ಮ ಎಂದು ಕರೆಯುವ ದೇವಾಲಯಗಳೇ ಇವೆ. ದೇವೀರಮ್ಮನನ್ನು ದೇವೀರಿ ಜನಾಂಗದವರು ಆರಾಧಿಸುತ್ತಿದ್ದುದರಿಂದ ಆ ಹೆಸರು ಬಂತೆಂದು ಹೇಳುವರಾದರೂ, ಈ ಜನಾಂಗದ ಬಗ್ಗೆ ನನಗೆ ವಿವರ ದೊರೆತಿಲ್ಲ. ಟಿ.ಮುರುಗೇಶಿ ಅವರು ಹೇಳಿದಂತೆ, ದೇವಿ+ಈರಮ್ಮ(-ವೀರಮ್ಮ)=ದೇವೀರಮ್ಮ ಎನ್ನುವುದೇ ಸರಿಯಾಗುತ್ತದೆ. ಸುತ್ತಲ ಊರುಗಳಲ್ಲಿ ದೇವೀರಮ್ಮ ಎಂದು ಕರೆಯುವ ಬಿಂಬಗಳು ಇದ್ದು, ಅವೂ ಮಹಾಲಕ್ಷ್ಮಿಯ ಬಿಂಬವೇ ಎಂದು ತಿಳಿದುಬರುತ್ತದೆ (ಚಿಜಿದ(ಲೇ.)ಪು.೧೪೯)

ಕೂದುವಳ್ಳಿಯ ದೇವೀರಮ್ಮ ದೇವಾಲಯದ ಹಳೆಯ ಮೂಲ ಬಿಂಬವೂ ಮಹಾಲಕ್ಷ್ಮಿಯ ಸ್ವರೂಪವೇ ಆಗಿದೆ. ಈ ಮೂಲಬಿಂಬದ ಕಾಲ-ಕ್ರಿ.ಶ.೧೨ನೇ ಶತಮಾನ. ಇದು ಆಸೀನ ಬಿಂಬ. ಈಗಿರುವ ಮಹಾಲಕ್ಷ್ಮೀ ದೇವಾಲಯವನ್ನು ಹೊಸದಾಗಿ ನಿರ್ಮಿಸಿದ್ದು, ಹಳೆಯ ದೇವಾಲಯವು ೩೦ ವರ್ಷಗಳಿಗೂ ಹಿಂದೆ ಶಿಥಿಲವಾಗಿತ್ತು. ಜೀರ್ಣೋದ್ಧಾರಕ್ಕಾಗಿ ಪ್ರಯತ್ನಿಸಿದಾಗ, ಬಿಂಬದ ದೃಷ್ಟಿ ಸರಿಯಾಗಿಲ್ಲವೆಂದು ತಿಳಿಯಿತು. ಹೀಗಾಗಿ, ಆ ಬಿಂಬವನ್ನು ಹತ್ತಿರದಲ್ಲೇ ಒಂದು ಸಣ್ಣ ಗುಡಿಯಲ್ಲಿ ಸ್ಥಾಪಿಸಿದರು. ನಂತರ ಟ್ರಸ್ಟ್‌ನ ವತಿಯಿಂದ ಮಹಾಲಕ್ಷ್ಮೀ ಬಿಂಬವನ್ನು ಹೊಸದಾಗಿ ಮಾಡಿಸಿದರಲ್ಲದೆ, ಹಳೆಯ ದೇವಾಲಯ ಇದ್ದ ಜಾಗದಲ್ಲೇ ಮತ್ತೆ ಹೊಸದಾಗಿ ದೇವಾಲಯ ನಿರ್ಮಿಸಿ, ಕಳೆದ ವರ್ಷ(೨೦೧೮) ಪ್ರತಿಷ್ಠೆ ಮಾಡಿಸಿದರು.

ಪ್ರಧಾನ ದೇವತೆ ಮಹಾಲಕ್ಷ್ಮೀ ಶಿಲ್ಪದ ಬಗ್ಗೆ ಹೇಳುವುದಾದರೆ, ದೇವಿಯು ಆಸೀನ ಮೂರ್ತಿಯಾಗಿದ್ದು, ಮೇಲಿನ ಕೈಗಳಲ್ಲಿ ಚಕ್ರ(ಬಲಗೈ) ಮತ್ತು ಶಂಖವನ್ನೂ, ಕೆಳಗಿನ ಕೈಗಳಲ್ಲಿ ಖಡ್ಗ(ಬಲಗೈ) ಮತ್ತು ಕಲಶವನ್ನೂ ಹಿಡಿದಿದ್ದಾಳೆ ಚಕ್ರ ಮತ್ತು ಶಂಖಗಳು ಅವಳು ಮಹಾಲಕ್ಷ್ಮಿಯ ಸ್ವರೂಪವೆಂಬುದನ್ನು ಸ್ಪಷ್ಟಪಡಿಸಿವೆ. ದೇವಿಯ ಉತ್ಸವಮೂರ್ತಿಯೊಂದು ದೊರೆತಿದ್ದು(ಲೋಹದ್ದು) ಅವಳ ಎರಡೂ ಕೈಗಳಲ್ಲಿ ಪದ್ಮ ಹಾಗೂ ಅಭಯ ವರದಹಸ್ತಗಳಿವೆ. ವಾಹನವಾಗಿ ಗೂಬೆಯನ್ನು ಬಿಡಿಸಿದೆ(ಇದೂ ಗರ್ಭಗೃಹದಲ್ಲಿದೆ). ಈ ದೇವಾಲಯದಲ್ಲಿ, ಅಮಾವಾಸ್ಯೆಯ ಹಿಂದಿನ ದಿನ(ಚತುರ್ದಶಿ ದಿನ) ಹಾಗೂ ಹುಣ್ಣಿಮೆ ದಿನಗಳಂದು ಮತ್ತು ನವರಾತ್ರಿಯ ಎಲ್ಲ ದಿನಗಳಲ್ಲಿ ಮಾತ್ರ ದೇವಾಲಯದ ಬಾಗಿಲು ತೆಗೆದು ಪೂಜೆ ಸಲ್ಲಿಸುತ್ತಾರೆ; ಉಳಿದಂತೆ ದೇವಾಲಯದ ಬಾಗಿಲು ತೆಗೆಯುವುದಿಲ್ಲ.

ಈ ದೇವಾಲಯದ ಪಕ್ಕದಲ್ಲೇ ಇರುವುದು-ರಾಮೇಶ್ವರ ದೇವಾಲಯ. ಇದು ಸುಮಾರು ೧೪-೧೫ನೇ ಶತಮಾನದ ಸರಳ ರಚನೆಯ ದೇವಾಲಯ. ಹೆಚ್ಚು ಎತ್ತರವಿರದ 'ಮಂಚಕ' ಪ್ರಕಾರದ ಅಧಿಷ್ಠಾನ(Base)ವಿದ್ದು, ಭಿತ್ತಿ-ಪ್ರಸ್ತರದ ರಚನೆ ಸರಳವಾಗಿದೆ(ಮೇಲ್ಕಟ್ಟಡವಿಲ್ಲ). ಒಳಗೆ ಗರ್ಭಗೃಹ-ಅಂತರಾಳವಿದ್ದು, ಮುಂದೆ ಮೆಟ್ಟಿಲುಗಳಿವೆ. ಗರ್ಭಗೃಹದಲ್ಲಿ ಚಿಕ್ಕಲಿಂಗ, ನಂದಿ ಇದೆ; ದೇವಾಲಯ ಈಗ ಶಿಥಿಲಾವಸ್ಥೆಯಲ್ಲಿದೆ (ಇದರ ಪಕ್ಕದಲ್ಲಿರುವ ಶಾಸನೋಕ್ತ ಗಾಯಿತ್ರೀ ಮಂಟಪವು ಸಂಧ್ಯಾವಂದನಾ ಮಂಟಪ; ಆದರೆ ಅದನ್ನೀಗ ಬೇರೆ ರೀತಿಯಲ್ಲೂ ಉಪಯೋಗಿಸುತ್ತಾರೆ). ಈ ದೇವಾಲಯಗಳ ಬಳಿ ಅವಶೇಷಗಳು ಬಿದ್ದಿದ್ದು, ಮುಂದೆ ಒಂದು ಕೆರೆಯೂ ಇದೆ(ಬಹುಪಾಲು ಮುಚ್ಚಿಹೋಗಿದೆ).

ಇಲ್ಲಿಂದ ಮೇಲಿನ ಬೀದಿಗೆ ಹೋಗುವ ಮಾರ್ಗದಲ್ಲಿ ರಸ್ತೆಯಿಂದ ಸ್ವಲ್ಪ ಮೇಲೆ ಇರುವುದು-ಕಲಸೇಶ್ವರ ದೇವಾಲಯ. ಗೆಜ಼ೆಟಿಯರ್‌ನಲ್ಲಿ ಹೇಳಿರುವ ಓಣೇಶ್ವರ ದೇವಾಲಯವನ್ನೇ ಇಂದು ಕಲಸೇಶ್ವರ ದೇವಾಲಯ ಎಂದು ಕರೆಯುತ್ತಿರಬಹುದು.



ಮಹಾಲಕ್ಷ್ಮೀ ಬಿಂಬ



ಹರಿಹರೇಶ್ವರ ದೇವಾಲಯದಲ್ಲಿ
ಇಟ್ಟಿರುವ ಚನ್ನಕೇಶವ ಬಿಂಬ



ಗೌತಮೇಶ್ವರ ದೇವಾಲಯದ ಹೊರಭಾಗ



ಗೌತಮೇಶ್ವರ ದೇವಾಲಯದ ಮುಂಭಾಗದಲ್ಲಿ
ಇಟ್ಟಿರುವ ಮಕರ ತೋರಣ

ಇದೂ ಕೂಡಾ ಸರಳ ರಚನೆಯನ್ನು ಹೊಂದಿದ್ದು ಮೇಲೆ ಹೆಂಚಿನ ಮಾಡನ್ನು ಜೋಡಿಸಿದೆ. ಗರ್ಭಗೃಹದಲ್ಲಿ (ಕಲಸೇಶ್ವರ)ಲಿಂಗವಿದ್ದು, ಇದು ಸು.ಕ್ರಿ.ಶ.೧೩–೧೪ನೇ ಶತಮಾನಕ್ಕೆ ಸೇರುತ್ತದೆ.

ಸೋಮೇಶ್ವರ ಮತ್ತು ಭೈರವ ದೇವಾಲಯಗಳು ಅಕ್ಕಪಕ್ಕವೇ ಇದ್ದು ಊರಬಾಗಿಲ ಹತ್ತಿರದ ಒಂದು ತೋಟದ ಬಳಿ ಇವೆ. ಇವೂ ಪೂರ್ಣವಾಗಿ ಜೀರ್ಣೋದ್ಧಾರಗೊಂಡಿದ್ದು, ದೇವಾಲಯದ ಕಾಲ ಹೇಳಲಾಗುವುದಿಲ್ಲ. ಶಿಖರ ಭಾಗದಲ್ಲಿ, 'ಲುಪಾ' ರೀತಿಯಲ್ಲಿ ಹೆಂಚಿನ ಮಾಡು ಜೋಡಿಸಿದೆ. ಸೋಮೇಶ್ವರ ದೇವಾಲಯದ ಮುಂದಿರುವ ತುಂಡುಕಂಬ– ಹೊಯ್ಸಳರ ಕಾಲದ್ದಾಗಿದೆ.

ಇಲ್ಲಿನ ಕೆಳಗಿನ ಬೀದಿಯಲ್ಲಿ ಹರಿಹರೇಶ್ವರ ದೇವಾಲಯವಿದೆ. ಇದು ಸು.೧೬–೧೭ನೇ ಶತಮಾನದ ದೇವಾಲಯ(ಉತ್ತರಾಭಿಮುಖವಾಗಿದೆ). ಮೊದಲಿಗೆ ಇಲ್ಲಿ ಹರಿಹರನ ಬಿಂಬವಿತ್ತೇನೋ ಗೊತ್ತಿಲ್ಲ. ಈಗ ಇದರ ಗರ್ಭಗೃಹದಲ್ಲಿ ನಂತರ ಕಾಲದ ಒಂದು ಲಿಂಗವಿದೆ(ಹರಿಹರನ ಬಿಂಬವಿಲ್ಲ ಹೊರಗೆ ಅಂತರಾಳದಲ್ಲಿ ಒಂದು ಚನ್ನಕೇಶವನ ಬಿಂಬವನ್ನು ತಂದಿರಿಸಲಾಗಿದೆ. ಇದು ಸು. ೧೨ನೇ ಶತಮಾನದ ಬಿಂಬ. ಇದರ ರಚನೆ ವಿಶೇಷವಾಗಿಲ್ಲದಿದ್ದರೂ, ಸ್ವಲ್ಪ ದೊಡ್ಡ



ಗೌತಮೇಶ್ವರ ದೇವಾಲಯದಲ್ಲಿರುವ ಬಹುಮುಖೀ ಸ್ತಂಭ

ದೇವಾಲಯ. 'ಮಂಚಕ' ಪ್ರಕಾರದ ಅಧಿಷ್ಠಾನದ ಮೇಲೆ ನಿಂತಿರುವ ಈ ದೇವಾಲಯಕ್ಕೆ, ಮೇಲ್ಭಾಗದಲ್ಲಿ ಎರಡು ಹಂತವಿರುವ 'ಲುಪಾ' ರೀತಿಯ(-ಛತ್ರಾಕಾರದ) ಶಿಖರವಿದೆ. ಒಳಗೆ ಗರ್ಭಗೃಹ, ಮುಚ್ಚಿದ ಅಂತರಾಳ ಮತ್ತು ನವರಂಗಗಳಿವೆ. ವಾಸ್ತುಶಿಲ್ಪದ ವಿವಿಧ ಅಂಗಗಳಾದ ದ್ವಾರಶಾಖೆ, ದ್ವಾರಪಾಲಕ, ಸರಳ ರಚನೆಯ ಸ್ತಂಭಗಳು, ವಿತಾನಾಲಂಕರಣ, ಪ್ರದಕ್ಷಿಣಾಪಥ ರೀತಿಯ ರಚನೆ-ಎಲ್ಲವನ್ನೂ ಇಲ್ಲಿ ಕಾಣಬಹುದು.

ಸೋಮೇಶ್ವರ ದೇವಾಲಯದ ಹತ್ತಿರದಲ್ಲಿರುವ ತೋಟದ ಒಳಗೆ ಹೋದರೆ (ಊರ ಬಾಗಿಲ ಕಡೆ), ಅಲ್ಲಿ ಸುಗ್ಗಿಕಟ್ಟೆ ಇದೆ. ಈಗ ಅದು ಸಾಕಷ್ಟು, ಹಾಳಾಗಿ ಉಯ್ಯಾಲೆಕಂಬ ಮಾತ್ರ ಉಳಿದಿದೆ. ಸುಗ್ಗಿ ಹಬ್ಬವನ್ನು ೧೯೬೨ರವರೆಗೂ ಆಚರಿಸುತ್ತಿದ್ದು, ಆನಂತರ ನಿಂತುಹೋಗಿದೆಯಂತೆ.

ಇಲ್ಲಿ ಗಮನಿಸಲೇಬೇಕಾದ ಮತ್ತೊಂದು ದೇವಾಲಯವೆಂದರೆ, ಗೌತಮೇಶ್ವರ ಕ್ಷೇತ್ರದ ಗೌತಮೇಶ್ವರ ದೇವಾಲಯ. ಇದು ಕ್ರಿ.ಶ.೧೨ನೇ ಶತಮಾನದ ದೇವಾಲಯವಾದರೂ ಗರ್ಭಗೃಹದ ಲಿಂಗ ಮತ್ತು ಅಂತರಾಳದ ಬಸವ ಕ್ರಿ.ಶ.೧೧ನೇ ಶತಮಾನಕ್ಕೆ ಸೇರುತ್ತವೆ. ಆದರೂ ದೇವಾಲಯದ ಹೊರಭಾಗವು ಜೀರ್ಣೋದ್ಧಾರಗೊಂಡಿರುವುದು ಸ್ಪಷ್ಟವಾಗಿದೆ; ದೇವಾಲಯದ ಬಳಿ ಶಾಸನಗಳು, ಅವಶೇಷಗಳನ್ನಿಟ್ಟು ಕಾಪಾಡಿರುವುದು ಮೆಚ್ಚತಕ್ಕದ್ದಾಗಿದೆ.

ಈಗಿರುವಂತೆ, ಈ ದೇವಾಲಯವು 'ಷಡ್ವರ್ಗ' ರೀತಿಯ ರಚನೆಯಾಗಿದೆ. ಗರ್ಭಗೃಹದ ಹೊರಭಾಗದಿಂದ ದೇವಾಲಯವನ್ನು ಗಮನಿಸಿದರೆ, ಮಂಚಕ ರೀತಿಯ ಅಧಿಷ್ಠಾನದ (Base) ಮೇಲೆ ಹೊಯ್ಸಳರ ಕಾಲದ ಕಂಬಗಳಿರುವ ಭಿತ್ತಿ (wall) ಇದೆ. ಪ್ರಸ್ತರ(Entablature)ದ ಅಂಗಗಳೂ ಕೂಡಾ ಸ್ಪಷ್ಟವಾಗಿವೆ. ಇದರ ನಂತರದ ಮೇಲ್ಕಟ್ಟಡವು (Superstructure) 'ಫಾಂಸನಾ' ಪ್ರಕಾರಕ್ಕೆ ಸೇರುತ್ತದೆ. ಇದರ ನಂತರದ 'ಶಿಖರ' (Crowning cupola) ಭಾಗವು ಚೌಕಾಕಾರವಾಗಿದ್ದು ('ನಾಗರ' ರೀತಿಯ ಶಿಖರ), ಮೇಲೆ ಸ್ತೂಪಿ/ಕಲಶವಿದೆ (Finial). ಇದರ ಮುಂಭಾಗದಲ್ಲಿರುವ ನವರಂಗದ ಮೇಲ್ಭಾಗದಲ್ಲಿ ಮಾತ್ರ ಇಳಿಜಾರು ರೀತಿಯ ಹೆಂಚಿನ ಮಾಡು ಇದೆ.

ದೇವಾಲಯದ ಒಳಭಾಗಕ್ಕೆ ಬಂದರೆ, ಗರ್ಭಗೃಹ, ತೆರೆದ ಅಂತರಾಳ, ನವರಂಗಗಳಿವೆ. ಗರ್ಭಗೃಹ ದೊಡ್ಡದಾಗಿದ್ದು, ಅಲ್ಲಿರುವ ಲಿಂಗ ಚಿಕ್ಕದಾಗಿದೆ. ತೆರೆದ ಅಂತರಾಳದಲ್ಲಿ ಬಸವನ ಶಿಲ್ಪ, ಮಹಿಷಮರ್ದಿನಿ ಶಿಲ್ಪ (ಸು. ೧೧ನೇ ಶತಮಾನದ್ದು) ಹಾಗೂ ಉದ್ಭವ ಗಣಪತಿ ಮತ್ತು ಇನ್ನೊಂದು ಗಣಪನ ಶಿಲ್ಪಗಳಿವೆ. ನವರಂಗದಲ್ಲಿ ಕ್ರಿ.ಶ.೧೧ನೇ ಶತಮಾನದ ಸಪ್ತಮಾತೃಕೆ, ಹಾಗೂ ೧೭ನೇ ಶತಮಾನದ ಕಾಲಭೈರವನ ಬಿಂಬವಿದೆ (ಶಾಸನವಿದೆ). ನವರಂಗದ ದ್ವಾರಬಂಧ (doorjamb), ದ್ವಾರಶಾಖೆಗಳು (doorframe) ಸುಂದರವಾಗಿವೆ. ಅಂತರಾಳ ದ್ವಾರದಲ್ಲೇ ಪಕ್ಕದಲ್ಲಿರುವ ದ್ವಾರಪಾಲಕ ಶಿಲ್ಪಗಳು ನವರಂಗದ 'ಶ್ರೀಕಾರ' ಪ್ರಕಾರದ ಹಾಗೂ ಬಹುಮುಖೀ ಸ್ತಂಭಗಳು, ದೇವಾಲಯದ ಮುಂದೆ ಇಟ್ಟಿರುವ ಸುಂದರ ಮಕರ ತೋರಣ (ಬಹುಶಃ ಕಂಬಗಳು ಅಥವಾ ದ್ವಾರದ ಮೇಲಿದ್ದಿರುವ ಭಾಗ ಎಲ್ಲವೂ ಹೊಯ್ಸಳರ ಕಾಲದ ಲಕ್ಷಣಗಳನ್ನೂ, ದೇವಾಲಯದ ವಾಸ್ತು

ಸೌಂದರ್ಯವನ್ನೂ ಎತ್ತಿಹಿಡಿದಿವೆ. ದೇವಾಲಯದ ಎಡಭಾಗದಲ್ಲಿ, ಹಂತ ಹಂತಗಳಲ್ಲಿರುವ ದೇವಾಲಯದ ಮಾದರಿ ರಚನೆ, ಹಾಗೂ ರೇಖಾನಾಗರ ಶಿಖರದ ಅಲಂಕರಣವಿರುವ ಭಾಗವಿದೆ (ಇದು ಭಿತ್ತಿ ಅಥವಾ ದ್ವಾರದ ಮೇಲಿನ ಭಾಗವಾಗಿದ್ದಿರಬೇಕು). ಇಲ್ಲಿ ಇನ್ನೂ ಕೆಲವು ಅವಶೇಷಗಳಿವೆ ಇಲ್ಲೇ ಒಂದು ಪುಷ್ಕರಿಣಿಯೂ ಇದೆ. ಪಕ್ಕದಲ್ಲಿ ಇತ್ತೀಚಿನ ಉದ್ಭವ ಆಂಜನೇಯ ದೇವಾಲಯವಿದೆ. ಒಟ್ಟಾರೆ, ಈ ದೇವಾಲಯವು ಈ ಪ್ರದೇಶದಲ್ಲಿ ಉಳಿದಿರುವ ಒಂದು ಪ್ರಾಚೀನ ಪ್ರಮುಖ ದೇವಾಲಯ. ಹೊಯ್ಸಳರ ಕಾಲದ ಬೇಲೂರು ಹಳೇಬೀಡಿನ ದೇವಾಲಯಗಳ ಶ್ರೀಮಂತ ಬೆಡಗು ಇಲ್ಲಿ ಕಾಣಿಸದಿದ್ದರೂ, ಮೂಲ ದೇವಾಲಯದ ಸ್ವರೂಪವು (ಜೀರ್ಣೋದ್ಧಾರವಾಗುವ ಮೊದಲು) ಈಗಿರುವುದಕ್ಕಿಂತಲೂ ಹೆಚ್ಚಿನ ಸೊಬಗಿನಿಂದ ಕೂಡಿತ್ತು ಎನ್ನುವುದರಲ್ಲಿ ಸಂಶಯವಿಲ್ಲ.

ವಿಶೇಷವೆಂದರೆ, ಈಗ (ಅಂದರೆ ೧೯೭೧ರ Census Bookನಲ್ಲಿರುವಂತೆ), ಕೂದುವಳ್ಳಿಯನ್ನು ಆಂಗ್ಲಭಾಷೆಯಲ್ಲಿ Kuduvallyl(i) ಎಂದು ಬರೆಯುತ್ತಾರೆ ಇದಕ್ಕೆ ಸರಿಯಾಗಿ, ಈಗ ಅಲ್ಲಿ ವಾಸವಾಗಿರುವವರ ಹೆಸರಿನ ಪೂರ್ವಾಕ್ಷರವೂ 'ಏ' ಎಂದೇ ಇದೆ; ಎಲ್ಲಿಯೂ ಅದನ್ನು Cooduvally ಎಂದು ದಾಖಲಿಸಿಲ್ಲ.

[ಕೂದುವಳ್ಳಿ ಅಗ್ರಹಾರದ ಹಿರಿಯ ಸ್ಥಳೀಕರಾದ/ಅರ್ಚಕರಾದ ಶ್ರೀ ಕೆ.ಆರ್. ಶೇಷಾಚಲ, ಶ್ರೀ ರಾಮಚಂದ್ರಭಟ್, ಶ್ರೀ ರಮೇಶ್‌ಭಟ್, ಶ್ರೀ ಕಾರ್ತಿಕ್, ಶ್ರೀ ಕೆ.ಎಸ್. ನಾಗರಾಜ ಪುರಾಣಿಕ ಮತ್ತು ಅವರ ಮಾತೃಶ್ರೀ–ಈ ಎಲ್ಲರೂ ನಮ್ಮೊಂದಿಗೆ ಸಹಕರಿಸಿ ಅನೇಕ ರೀತಿಯಲ್ಲಿ ಮಾಹಿತಿಗಳನ್ನು ನೀಡಿದ್ದಾರೆ. ಇವರೆಲ್ಲರಿಗೂ ನಾನು ಚಿರಋಣಿ. ಅಂತೇ, ಪ್ರವಾಸದಲ್ಲಿ ನನ್ನೊಂದಿಗೆ ಬಂದು ಕೆಲವು ವಿಷಯಗಳನ್ನು ಚರ್ಚಿಸಿದ ಆತ್ಮೀಯ ಗೆಳತಿ ಡಾ. ಕೆ. ವಸಂತಲಕ್ಷ್ಮಿಯವರಿಗೂ ಧನ್ಯವಾದಗಳು. ವಿಷಯವನ್ನು ಹಂಚಿಕೊಂಡ ಡಾ. ಪಿ.ವಿ. ಕೃಷ್ಣಮೂರ್ತಿ ಹಾಗೂ ಡಾ. ಟಿ. ಮುರುಗೇಶಿಯವರಿಗೂ ನಮನಗಳು.]



## ಅಡಿಟಿಪ್ಪಣಿಗಳು


೧. ಎಪಿಗ್ರಾಫಿಯ ಕರ್ನಾಟಿಕ–ಸಂ.೬೫ (ಪ), ಮತ್ತು ೧೫ (ರೈಸ್)

೨. ಕೂ.ಸ.ಅಪರ್ಣ–ದೇವಾಲಯ ವಾಸ್ತುಶಿಲ್ಪ ಪರಿಚಯ–ಕನ್ನಡ ವಿಶ್ವವಿದ್ಯಾಲಯ, ಹಂಪೆ, ೧೯೯೯.

೩. ಮಾಕೋನಹಳ್ಳಿ ದೊಡ್ಡಗೌಡ (ಲೇ) ಹಾಗೂ ಗೊ.ರು. ಚನ್ನಬಸಪ್ಪ (ಲೇ.), ಚಿಕ್ಕಮಗಳೂರು ಜಿಲ್ಲಾದರ್ಶನ (ಚಿಜಿದ)–(ಪ್ರಸಂ.)ಬ.ಪಾರ್ಥಸಾರಥಿ, ಜಿಲ್ಲಾ ಶತಮಾನೋತ್ಸವ ಸಮಿತಿ, ಚಿಕ್ಕಮಗಳೂರು, ೧೯೮೬.

೪. ಕೆ.ವಸಂತಲಕ್ಷ್ಮಿ (ಲೇ.)–'ಚಿಕ್ಕಮಗಳೂರು ಜಿಲ್ಲೆಯ ಕಾಶ್ಮೀರೀ ಬ್ರಾಹ್ಮಣರು', ಇತಿಹಾಸ ದರ್ಶನ ಸಂ. ೨೨, ಪು.೨೪೧–೪೪.

೫. ಪಿ.ವಿ. ಕೃಷ್ಣಮೂರ್ತಿ–(ಲೇ.) 'ಚಿಕ್ಕಮಗಳೂರು ಜಿಲ್ಲಾ ಪ್ರದೇಶದ ಆಡಳಿತ ಘಟಕಗಳು'–ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೯, ಪು.೧೭೫–೮೨. ಮತ್ತು ಹೆಚ್. ಜಯಮ್ಮ ಕರಿಯಣ್ಣ (ಲೇ.)–'ಚಿಕ್ಕಮಗಳೂರಿನ ವೀರಗಲ್ಲುಗಳು'. (ವಿವರ ಮೇಲಿನಂತೇ) (ಪು. ).

೬ 'ವಿಜಯವಾಣಿ' ದಿನಪತ್ರಿಕೆ (ಚಿಕ್ಕಮಗಳೂರು)–೧೩.೦೭.೧೫.

೭. Kannada-English Dictionary-Rev. F. Kittel.

೮. Dravidian Etymological Dictionary (DED)-T. Burrow, M.B. Emeneau.

೯. District Census Hand Book-Chikmagalur, 1971.

೧೦. Karnataka Gazetteer-Chikmagalur District, 1981.

೧೧. Mysore Archaeological Reports.

೧೨. ಫೇಸ್‌ಬುಕ್‌ನ 'ಕನ್ನಡ ಸಂಪದ' ಪುಟದಲ್ಲಿದ್ದ 'ಅಶ್ವತ್ಥ' ಅವರನ್ನು ಕುರಿತ ಮಾಹಿತಿಯನ್ನು ನನಗೆ ಕಳುಹಿಸಿಕೊಟ್ಟ ಸೋದರ ಶ್ರೀ ರೇಣುಕಸ್ವಾಮಿ ಒಡೆಯರ್ ಬಿ.ಈ. ಅವರಿಗೆ ಧನ್ಯವಾದಗಳು.

# ಕನಕಗಿರಿ ಸಂಸ್ಥಾನದ ಶಾಸನೋಕ್ತ ರಾಣಿಯರು

ವೈ. ಲತಾ*

ಕನಕಗಿರಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕು ಕೇಂದ್ರದಿಂದ ವಾಯುವ್ಯಕ್ಕೆ ಸುಮಾರು ೩೦ ಕಿ.ಮೀ. ದೂರದಲ್ಲಿದೆ. ಕನಕಗಿರಿಯು ವಿಜಯನಗರ ಅರಸರ ಕಾಲದಲ್ಲಿ ಒಂದು ಸಂಸ್ಥಾನವಾಗಿ ಹುಟ್ಟಿ ಬೆಳೆದು ಪ್ರಸಿದ್ಧಿಯನ್ನು ಪಡೆಯಿತು. ವಿಜಯನಗರದ ಅವನತಿಯ ನಂತರ ಹೈದಾರಬಾದ್ ನಿಜಾಮರ ಅಧೀನದಲ್ಲಿ ತನ್ನ ಆಳ್ವಿಕೆಯನ್ನು ಮಾಡಿತು. ಇಲ್ಲಿ ಗುಜ್ಜಲ ವಂಶದ ೧೩ ಜನ ನಾಯಕ ಅರಸರು ಕ್ರಿ.ಶ. ೧೪೩೬ರಿಂದ ೧೯೪೮ರವರೆಗೆ ಆಳ್ವಿಕೆ ಮಾಡಿದ್ದಾರೆ. ಅವರುಗಳೆಂದರೆ ೧. ಪರಸಪ್ಪ ಉಡಿಚನಾಯಕ (ಕ್ರಿ.ಶ. ೧೪೩೬–೧೫೧೦), ೨. ನವಾಬ ಉಡಿಚನಾಯಕ (ಕ್ರಿ.ಶ. ೧೫೧೦–೧೫೩೩), ೩. ಕೆಲವಡಿ ಉಡಿಚನಾಯಕ (ಕ್ರಿ.ಶ. ೧೫೩೩–೧೫೭೮), ೪. ಒಂದನೇ ಕನಕಪ್ಪ ಉಡಿಚನಾಯಕ (ಕ್ರಿ.ಶ. ೧೫೩೩–೧೫೭೮), ೫. ಇಮ್ಮಡಿ ಉಡಿಚನಾಯಕ (ಮುಮ್ಮಡಿ ಉಡಿಚನಾಯಕ) ಕ್ರಿ.ಶ. ೧೬೧೮–೧೬೮೯), ೬. ಇಮ್ಮಡಿ ಕನಕಪ್ಪನಾಯಕ (ಚಿಕ್ಕಕನಕಪ್ಪನಾಯಕ) (ಕ್ರಿ.ಶ. ೧೬೮೯–೧೭೪೫), ೭. ಮುಮ್ಮಡಿ ಕನಕಪ್ಪ ಉಡಿಚನಾಯಕ (ಕ್ರಿ.ಶ. ೧೭೪೫–೧೭೫೨), ೮. ಹಿರೇ ರಂಗಪ್ಪನಾಯಕ (ಕ್ರಿ.ಶ. ೧೭೫೨–೧೭೭೬), ೯. ಹಿರೇನಾಯಕ (ಕ್ರಿ.ಶ. ೧೭೭೬–೧೮೦೦), ೧೦. ರಂಗನಾಥಪ್ಪ ನಾಯಕ, ೧೧. ರಂಗಪ್ಪನಾಯಕ, ೧೨. ಉಡಿಚಪ್ಪ ನಾಯಕ, ೧೩. ರಂಗಪ್ಪನಾಯಕ. ಈ ಮನೆತನದಲ್ಲಿ ಅನೇಕ ಸಮಾಜೋಪಯೋಗಿ ಕಾರ್ಯಗಳನ್ನು ಮಾಡಿದ್ದಾರೆ.

ಕನಕಗಿರಿಯ ಚರಿತ್ರೆಯಲ್ಲಿ ರಾಣಿಯರ ಪಾತ್ರ ವಿಶೀಷ್ಟವಾಗಿದೆ. ವಿಶೇಷವಾಗಿ ಸಾಮಾಜಿಕವಾಗಿ ಕೆಲಸ ಕಾರ್ಯಗಳು ಕುತೂಹಲ ಮೂಡಿಸುತ್ತವೆ. ಕಮ್ಮಟ ದುರ್ಗದ ಕಂಪಿಲರಾಯನ ಹೆಂಡತಿ ಕುಮಾರರಾಯನ ತಾಯಿಯಾದ ಹರಿಯಲಾದೇವಿ ಮೂಲತಃ ಕನಕಗಿರಿಯ ಗುಜ್ಜಲ ವಂಶದ ನಾಯಕ ಮನೆತನಕ್ಕೆ ಸೇರಿದವಳಾಗಿದ್ದಳು. ಕನಕಗಿರಿಯ ರಾಣಿಯರ ಶಿಲ್ಪಗಳ ಪ್ರಮುಖವಾಗಿ ನಾಯಕ ಅರಸ ಯುದ್ಧಕ್ಕಾಗಿ ರಾಜಮಾತೆಯ ಅನುಮತಿ ಪಡೆಯುತ್ತಿದ್ದ ಶಿಲ್ಪ ಮನೋಜ್ಞವಾಗಿದ್ದು ಅರಸುಮಾತೆಯೆ ರಾಣಿಯರ ಪ್ರಾಮುಖ್ಯತೆಯನ್ನು ಪ್ರತಿಬಿಂಬಿಸುತ್ತದೆ. ಅಂತೆಯೇ ಸಮಕಾಲೀನ ಶಾಸನಗಳು, ಸ್ಮಾರಕಗಳು ಸಾಹಿತ್ಯ ಕೃತಿಗಳು, ಶಿಲ್ಪಗಳು, ಐತಿಹ್ಯಗಳು ರಾಣಿಯರ ಸಾಧನೆಗಳನ್ನು ಸಾರುತ್ತಲಿವೆ. ಇಂಥ ಕೆಲವು ರಾಣಿಯರ ಕುರಿತು ಅವಲೋಕನ ಇಲ್ಲಿದೆ.

**ರಾಣಿ ಕಾಟಮ್ಮ:** ಈಕೆ ಕನಕಗಿರಿಯನ್ನಾಳಿದ ಮೊದಲನೆಯ ದೊರೆ ಕೆಲವಡಿ ಉಡಚನಾಯಕನ (ಕ್ರಿ.ಶ. ೧೫೩೩–೧೫೭೮) ಧರ್ಮಪತ್ನಿಯಾಗಿದ್ದಳು. ಈಕೆಯ ಕುರಿತಾಗಿ ಶಂಕರ ಕವಿಯು ಶರಣ ಮೋನಪ್ಪಯ್ಯನ ಚರಿತ್ರೆ ಅಪ್ರಕಟಿತ ಕೃತಿಯಲ್ಲಿ ಉಲ್ಲೇಖವಿದೆ. ತಿಂಥಿಣಿಯ ಶರಣರಾದ ಮೋನಪ್ಪಯ್ಯನವರು ಲೋಕ ಸಂಚಾರಿಗಳಾಗಿ ಕನಕಗಿರಿಗೆ ಆಗಮಿಸುತ್ತಾರೆ. ಶರಣರ ಆಗಮನದ ವಿಷಯ ತಿಳಿದ ರಾಣಿ ತನ್ನ ಮಗ ಕನಕಪ್ಪ ನಾಯಕನೊಂದಿಗೆ ಸಕಲ ವೈಭವದೊಂದಿಗೆ ಮೋನಪ್ಪಯ್ಯನವರಲ್ಲಿಗೆ ಬಂದು ಭಕ್ತಿಯಿಂದ ಪೂಜಿಸಿ ಗೌರವಿಸುತ್ತಾಳೆ. ಸಂಪ್ರೀತರಾದ ಮೋನಪ್ಪಯ್ಯನವರು ಕಾಟಮ್ಮಳ ಮಗ ಕನಕಪ್ಪ ನಾಯಕನಿಗೆ ಭರ್ಜಿಯನ್ನು ಕೊಟ್ಟು ಆಶೀರ್ವದಿಸುತ್ತಾರೆ. ಅಷ್ಟೇ ಅಲ್ಲದೇ ರಾಣಿಯ ಬಹುದಿನದ ವ್ಯಾಧಿಯನ್ನು ನಿವಾರಿಸಿದರು. ಇದರಿಂದ ಸಂತೃಪ್ತಗೊಂಡ ಕಾಟಮ್ಮ ಶರಣ ಮೋನಪ್ಪಯ್ಯನವರಿಗಾಗಿ ಒಂದು ಮಠವನ್ನು ಕನಕಗಿರಿಯಲ್ಲಿ ಕಟ್ಟಿಸಿ, ಕನಕಗಿರಿಯಲ್ಲಿಯೇ ಉಳಿಯಬೇಕೆಂದು ಭಿನ್ನವಿಸಿಕೊಂಡು ಸಕಲ ವ್ಯವಸ್ಥೆಯನ್ನು ಮಾಡಿದಳು. ಕನಕಗಿರಿಯ ಪ್ರವೇಶದಲ್ಲಿರುವ ಮೋನಪ್ಪಯ್ಯನ ಮಠ(ಮಹಂತರ ಮಠ) ವಿಶಲವಾಗಿದ್ದು, ಈ ಮಠದೊಳಗೆ ಮೋನಪ್ಪಯ್ಯನವರು ತಮ್ಮ ಏಕಾಗ್ರತೆಗಾಗಿ ಕೂಡುತ್ತಿದ್ದ ನೆಲಮಾಳಿಗೆ ಇದೆ. ಅಂತೆಯೇ ಈ ಮಠವು ದೀಪಸ್ತಂಭ, ಮೂರು ಪುಟ್ಟ ಗುಡಿಗಳು ಮತ್ತು ಬಾವಿ, ಪುಷ್ಕರಣಿಗಳನ್ನು ಹೊಂದಿದೆ.

**ರಾಣಿ ಲಕ್ಷ್ಮೀನಾಗತಿ:** ರಾಣಿ ಲಕ್ಷ್ಮೀ ನಾಗತಿಯು ಕನಕಗಿರಿಯ ನಾಲ್ಕನೆಯ ದೊರೆ ಒಂದನೆಯ ಕನಕಪ್ಪ ಉಡಚನಾಯಕನ (ಕ್ರಿ.ಶ. ೧೫೭೭–೧೬೧೮) ಪತ್ನಿ ಮಹಾರಾಣಿಯಾದ ಈಕೆ ಮಹಾದ್ವೈವಭಕ್ತೆ ಯಾಗಿದ್ದಳು. ರಾಣಿ ಲಕ್ಷ್ಮೀನಾಗತಿಯ ಬಗ್ಗೆ

* ಪಿಎಚ್‌ಡಿ ಸಂಶೋಧನ ವಿದ್ಯಾರ್ಥಿನಿ, ಶಾಸನಶಾಸ್ತ್ರ ವಿಭಾಗ, ಕನ್ನಡ ವಿವಿ, ಹಂಪಿ, ವಿದ್ಯಾರಣ್ಯ–೫೮೩೨೭೬, ಹೊಸಪೇಟೆ, ಮೊ. ೯೮೮೦೩೩೩೪೦೩

ಪ್ರಚಲಿತ ಕಥೆಯೊಂದು ಇದೆ. ಇವಳು ಸಾಕ್ಷಾತ್ ಲಕ್ಷ್ಮೀದೇವಿಯ ಸನ್ನಿಧಿಗೆ ಪಾತ್ರಳಾಗಿದ್ದಳಂತೆ. ಕನಕಗಿರಿಯ ಕನಕಾಚಲಪತಿ ದೇವರು (ಶ್ರೀಮನ್ ಲಕ್ಷ್ಮಿನರಸಿಂಹ) ಇವಳ ಭಕ್ತಿಯನ್ನು ಮೆಚ್ಚಿ ಅವಳ ಕುಶಲೋಪರಿ ವಿಚಾರಿಸಲು ಬಂದಿರುವೆ" ಎಂದು ಹೇಳಿದನು. ಇದರಿಂದ ತನ್ನ ಪತ್ನಿಯ ವಿಷಯದಲ್ಲಿ ಪೂಜ್ಯಾಭಾವನೆಯಿಂದ ಇದ್ದುದಾಗಿ ತಿಳಿದುಬರುವುದು. ಬಳಿಕ ರಾಜನು ಅವಳ ಹೆಸರಿನಲ್ಲಿ ಕೆರೆಯನ್ನು ಕಟ್ಟಿಸಿದನು. ಈಗಲೂ ಈ ಕೆರೆಯು ಕನಕಗಿರಿಯ ಪಶ್ಚಿಮಕ್ಕೆ ಇದ್ದು, ಲಕ್ಷ್ಮೀದೇವಿಯ ಕೆರೆ ಎಂದು ಕರೆಯಲಾಗುತ್ತದೆ. ಇದರ ಹತ್ತಿರದಲ್ಲಿ ಕಾಣಿಸುವ ಗುಡ್ಡದ ಇಳಿಜಾರಿನಲ್ಲಿ ಗುಡ್ಡದ ಮೇಲೆ ಗಾಳಿ ಮಂಟಪವನ್ನು ನಿರ್ಮಿಸಿದನು. ಅಂದಿನಿಂದ ಈ ಗುಡ್ಡವು ಲಕ್ಷ್ಮೀದೇವಿ ಗುಡ್ಡವೆಂದೇ ಹೆಸರಾಗಿದೆ.

ಈ ಎಲ್ಲಾ ಅಂಶಗಳನ್ನು ಗಮನಿಸಲಾಗಿ ರಾಣಿ ಲಕ್ಷ್ಮೀನಾಗತಿ ಒಬ್ಬ ವಿಶಿಷ್ಟ ವ್ಯಕ್ತಿತ್ವ ಹೊಂದಿದ್ದಳೆಂದು ತೋರುತ್ತದೆ. ಏಕೆಂದರೆ ಆಕೆಯ ಮಗ ಕನಕಗಿರಿಯ ಐದನೆಯ ದೊರೆ ಇಮ್ಮಡಿ ಉಡಚನಾಯಕ (ಕ್ರಿ.ಶ. ೧೬೧೮-೧೬೪೯)ನ ಕಾಲದಿಂದ ಮುಂದಿನ ಎಲ್ಲ ಅರಸರು ತಮ್ಮ ಹೆಸರಿನ ಮುಂದೆ ಲಕ್ಷ್ಮೀನಾಗತಿ ಹೆಸರನ್ನು ಬಿರುದಿನಲ್ಲಿ ಸೇರ್ಪಡೆಗೊಳಿಸಿಕೊಂಡಿರುವುದನ್ನು ಕಾಣಬಹುದು. ಉದಾ: ಶ್ರೀ ಮನಂ ಮಹಾನಾಯಕಾಚಾರ್ಯ ನಾಯಕ ಶಿರೋಮಣಿಗಳಾದ ಕನಕಗಿರಿ ಲಕ್ಷ್ಮೀನಾಗತಿ ಇಮ್ಮಡಿ ಉಡಚನಾಯಕ. ರಾಣಿಯ ಬಗ್ಗೆ ಪೂಜ್ಯಭಾವನೆ ಇದ್ದುದರಿಂದ ಆಕೆಯ ಹೆಸರನ್ನು ಎಲ್ಲ ದೊರೆಗಳು ತಮ್ಮ ಹೆಸರಿನ ಜೊತೆ ಸೇರಿಸಿಕೊಂಡಿರುವುದು ವಿಧಿತವಾಗುತ್ತದೆ. ಹೀಗೆ ಕನಕಗಿರಿ ಚರಿತ್ರೆಯಲ್ಲಿ ರಾಣಿ ಲಕ್ಷ್ಮೀ ನಾಗತಿಗೆ ಒಂದು ವಿಶೇಷ ಸ್ಥಾನವಿದೆ.

**ರಾಣಿ ಅಚ್ಚಮ್ಮ:** ಈಕೆ ಇಮ್ಮಡಿ ಉಡಚನಾಯಕ (ಕ್ರಿ.ಶ. ೧೬೧೮-೧೭೦೮)ನ ರಾಣಿ. ಈಕೆ ಸಾರ್ವಜನಿಕರ ಉಪಯೋಗಕ್ಕಾಗಿ ಮತ್ತು ಕೃಷಿ ನೀರಾವರಿಗಾಗಿ ಕನಕಗಿರಿ ಸೋಮಸಾಗರ ರಸ್ತೆಯ ಬಳಿ ಬಾವಿಯೊಂದನ್ನು ನಿರ್ಮಿಸಿದಳು. ಅದಕ್ಕೆ ಈಗಲೂ "ಅಚ್ಚಮ್ಮ ಬಾವಿ" ಎಂದೇ ಕರೆಯಲಾಗುತ್ತದೆ. ಕನಕಗಿರಿಯ ಕಲಾತ್ಮಕವಾದ ಬಾವಿಗಳಲ್ಲಿ ಇದು ಒಂದಾಗಿದ್ದು, ೧೦.೨ ಮೀ. ೯.೨. ಮೀ. ವಿಸ್ತಾರದಲ್ಲಿದೆ. ಪ್ರವೇಶ ಮೆಟ್ಟಿಲುಗಳ ಎರಡೂ ಬದಿಯ ಗೋಡೆಗಳಲ್ಲಿ ಶಿವಲಿಂಗ ಹಾಗೂ ಆನಂತಶಯನ ದೇವತಾ ಗೃಹಗಳಿವೆ. ಬಾವಿಯ ಸುತ್ತಲಿನ ಗೋಡೆಗಳು ಆಂಜನೇಯ, ಗರುಡ, ಗಜಾನನ, ನರಶಾರ್ದೂಲ, ಗೊಲ್ಲತಿ, ಗಜಕಾಳಗ, ನಗ್ನ ಸ್ತ್ರೀ ಮೀನು, ಸರ್ಪ ಮುಂತಾದ ಉಬ್ಬು ಶಿಲ್ಪಗಳಿಂದ ಅಲಂಕೃತವಾಗಿದೆ. ಈ ಬಾವಿಯಲ್ಲಿ ಶಿವ ಹಾಗೂ ವಿಷ್ಣುವಿನ ದೇವತಾ ಗೃಹಗಳನ್ನು ನಿರ್ಮಿಸಿ ಶೈವ ವೈಷ್ಣವ ಮತಗಳ ಸಮನ್ವಯತೆಯನ್ನು ಸಾಧಿಸಿರುವುದು ಅಚ್ಚಮ್ಮ ರಾಣಿಯ ಆದರ್ಶವಾಗಿದೆ.

**ರಾಣಿ ಚೆನ್ನಮ್ಮ:** ಚೆನ್ನಮ್ಮ ರಾಣಿಯು ಕೂಡಾ ಇಮ್ಮಡಿ ಉಡಚನಾಯಕನ ರಾಣಿ ಕನಕಗಿರಿಯ ರಾಣಿಯರಲ್ಲಿಯೇ ಅತ್ಯಂತ ವ್ಯಾಪಕವಾದ ಸಾಮಾಜಿಕ ಕಾರ್ಯಗಳನ್ನು ಕೈಗೊಂಡ ಕೀರ್ತಿ ಈಕೆಯದು. ರಾಣಿ ಚೆನ್ನಮ್ಮಳ ಮೂರು ಶಾಸನಗಳು ದೊರೆತಿದ್ದು ಅವು ಈಕೆ ದೇವಾಲಯಗಳನ್ನು ಕೆರೆಗಳನ್ನು ಕಟ್ಟಿಸಿದ ಬಗ್ಗೆ ತಿಳಿಸುತ್ತದೆ. ಕನಕಗಿರಿ ಮುಖ್ಯ ಬಜಾರಿನಲ್ಲಿ ರಾಣಿಯು ಬಸವಣ್ಣ ದೇವರ ದೇವಾಲಯವನ್ನು ಕಟ್ಟಿಸುತ್ತಾಳೆ. ದೇವಾಲಯದ ಗರ್ಭಗೃಹದ ಬಾಗಿಲು ಪಟ್ಟಿಕೆಯ ಮೇಲೆ "ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳ ೬೦ನೆಯ ಸಿದ್ಧಾರ್ಥಿ ನಾಮ ಸಂ.ದ ಮಾ ಶುದ್ಧ ೭ ರಥ ಸಪ್ತಮಿಯಲ್ಲಿ ಕನಕಗಿರಿ ಉಡಚನಾಯಕರ ರಾಣಿ ವಾಸ ಚೆನಂಮನವರು ಬಸವಂಣ ದೇವರ ಗುಡಿ ನಿರ್ಮಾಣ ಮಾಡಿಸಿದರು......ಶ್ರೀ ಎಂಬ ಶಾಸನವಿದೆ. ಹಾಗೆಯೇ ಈಕೆಯ ಕ್ರಿ.ಶ.೧೬೬೦ರ ಕಾಲದ ಮತ್ತೊಂದು ಶಾಸನವು ಕನಕರಾಯನ ಕೆರೆಯನ್ನು ಕಟ್ಟಿಸಿದ ಬಗ್ಗೆ ಕ್ರಿ.ಶ.೧೬೭೪ರ ಕಾಲದ ಶಾಸನವು ದೇವೋತ್ತಮನಾದ ಶ್ರೀ ಕನಕಗಿರಿನಾಥ ಸ್ವಾಮಿ ಗುಡಿಯ ಪಾಳಿಗೆ ಕಲ್ಲು ಹಾಸಿಗೆ ಸೇವೆಗೈದ ಬಗೆಗೆ ತಿಳಿಸುತ್ತದೆ. ಈಕೆ ಕಟ್ಟಿಸಿದ ಮತ್ತೊಂದು ಕೆರೆಗೆ ಚೆನ್ನಾದೇವಿ ಕೆರೆ ಎಂದು ಕರೆಯಲಾಗುತ್ತಿದ್ದು, ಇಂದಿಗೂ ಬಳಕೆಯಲ್ಲಿದೆ.

ಹೈದರ್ ಆಲಿಯ ಕಾಲದಲ್ಲಿ ಮದ್ದಗಿರಿಯನ್ನು ಮತ್ತೆ ಮೈಸೂರಿನ ಒಡೆಯರು ಗೆದ್ದರು. ಬಿದನೂರಿನ ರಾಣಿ ಚೆನ್ನಮ್ಮಳನ್ನು ಆಕೆಯ ಮಗ ಸೋಮಶೇಖರನನ್ನು ಹೈದರಲಿಯು ಮದ್ದಗಿರಿ ಕೋಟೆಯಲ್ಲಿ ಸೆರೆಯಲ್ಲಿಟ್ಟಿದ್ದನು. ಅವರನ್ನು ಬಿಡುಗಡೆ ಮಾಡಿದ ಮೇಲೆ ಹೈದರಲಿಯು ಮದ್ದಗಿರಿ ಕೋಟೆಯನ್ನು ಬಿಜ್ಜಾವರ ರಾಜರಿಗೆ ಹಿಂದಕ್ಕೆ ಕೊಟ್ಟನು. ಆದರೆ ಟಿಪ್ಪುಸುಲ್ತಾನನು ಮತ್ತೆ ಅದನ್ನು ಕ್ರಿ.ಶ.೧೭೭೪ರಲ್ಲಿ ವಶಪಡಿಸಿಕೊಂಡು ಅದಕ್ಕೆ ಫತೇಹಾಬಾದ್ ಎಂದು ಹೊಸದಾ। ಹೆಸರಿಟ್ಟನು. ಈ ಸಮಯದಲ್ಲಿ ಮದ್ದಗಿರಿ ಕೋಟೆಯನ್ನು ಚನ್ನಪ್ಪಗೌಡನು ಆಳುತ್ತಿದ್ದನು.

**ರಾಣಿ ಕನಕಮ್ಮ:** ಈಕೆಯೂ ಕೂಡ ಇಮ್ಮಡಿ ಉಡಚನಾಯಕನ ರಾಣಿ. ರಾಣಿ ಕನಕಮ್ಮ ಕೂಡಾ ದೇವಾಲಯಗಳನ್ನು ಕಟ್ಟಿಸಿರುವಳು. ಕನಕಗಿರಿ ಬಸರಿಹಾಳ ರಸ್ತೆಯಲ್ಲಿ ಗುಡ್ಡದ ಮೇಲೆ ಲಕ್ಷ್ಮೀದೇವಿಯು ಗುಡಿಯನ್ನು ಕಟ್ಟಿಸಿದಳು. ಹಾಗೆ

ಗುಡ್ಡದ ಕೆಳಭಾಗದಲ್ಲಿ ಒಂದು ಭಾವಿಯನ್ನು ಕಟ್ಟಿಸಿರುವಳು. ಈ ಭಾವಿಯಲ್ಲಿ ಈಕೆಯ ಶಾಸನವಿದೆ. ಶಾಲಿವಾಹನ ಶಕೆ ವರುಷ ೧೪೫೦ನೆಯ......... ಸ ಆಶ್ವೀಜ ಶು॥ ೧೦ ಯಲು ಗುಜಲ ವಂಶೋದ್ಭವ ಕನಕಗಿರಿಯ ಯಿಂಮಡಿ ವುಡಸಿ ನಾಯಕನ ರಾಣಿ ವಾಸ....... ಕನಕಂಮನವರು ಶ್ರೀ ಗುಡ್ಡವ ಲಕ್ಷ್ಯ ಮೆನ ಸನಖ ಕೆಡಿಸಿದ ಬಾವಿ ಕ್ರಿ.ಶ.೧೮೬೩ರಲ್ಲಿ ಹೈದರಾಬಾದ್ ನಿಜಾಮನ ಪರವಾಗಿ ಸುರಪುರದ ಪಾಮೆ ನಾಯಕನು ಕನಕಗಿರಿಯ ಮೇಲೆ ದಾಳಿಗೈದು ದೊರೆ ಹಿರೇನಾಯಕನನ್ನು ಹತ್ಯೆಗೈದು, ನಂತರ ಕನಕಗಿರಿ ರಾಜ್ಯ ಪತನಗೊಳ್ಳುತ್ತದೆ. ಕನಕಗಿರಿ ನಿಜಾಮನ ವಶವಾಯಿತು. ಆದರೆ ಹಿರೇನಾಯಕನ ಮಗ ರಂಗನಾಥಪ್ಪ ನಾಯಕ ಬಂಡಾಯವೇಳಲು ಆತನಿಗೆ ನಿಜಾಮನು ಕನಕಗಿರಿಯನ್ನು ಹೊರತುಪಡಿಸಿ ೧೬ ಹಳ್ಳಿಗಳನ್ನು ಬಿಟ್ಟುಕೊಟ್ಟನು. ಹುಲಿಹೈದರ್ ಎಂಬ ಗ್ರಾಮವನ್ನು ಪ್ರಧಾನವಾಗಿಟ್ಟುಕೊಂಡು ಹುಲಿಹೈದರ್ ಸಂಸ್ಥಾನವು ಅಸ್ತಿತ್ವಕ್ಕೆ ಬಂದು ೧೯೪೮ರ ಹೈದರಾಬಾದ್ ವಿಮೋಚನೆಯವರೆಗೂ ಅಸ್ತಿತ್ವದಲ್ಲಿತ್ತು. ಈ ಸಂಸ್ಥಾನದ ರಾಣಿ ವೆಂಕಟಮ್ಮ ಹಾಗೂ ರಾಣಿ ಗೌರಮ್ಮ ತಮ್ಮ ಜನಪರ ಆಡಳಿತದಿಂದಾಗಿ ಗಮನಸೆಳೆಯುತ್ತಾರೆ.

ಕನಕಗಿರಿಯ ಪಶ್ಚಿಮಕ್ಕೆ ಲಕ್ಷ್ಮಿಗುಡ್ಡದ ಬಂಡೆಯಲ್ಲಿನ ಬಾವಿಯ ಗೋಡೆಯ ಮೇಲೆ ಇರುವಂತಹ ಶಾಸನ.

ತ್ರುಟಿತ ಶಾಲಿವಾಹನ ಶಕವರುಷ ೧೪೫೦ನೆಯ ಆಶ್ವೀಜ ಶು ೧೦ ರಲ್ಲಿ ಅಂದರೆ ಕ್ರಿ.ಶ.ಸುಮಾರು ೫-೧೦-೧೬೬೮ರಲ್ಲಿ ಕನಕಗಿರಿ ಯಿಂಮಡಿ ವುಡುಪಿನಾಯಕನ ಹೆಂಡತಿ ಕನಕಮ್ಮನು ಬಾವಿಯನ್ನು ಕಟ್ಟಿಸಿದ ವಿವರಣೆ ಇದೆ.

**ರಾಣಿ ವೆಂಕಟಮ್ಮ:** ಹುಲಿಹೈದರ್ ಸಂಸ್ಥಾನದ ೨ನೆಯ ದೊರೆ ರಂಗಪ್ಪ ನಾಯಕನ ಪಟ್ಟದ ರಾಣಿ ವೆಂಕಟಮ್ಮ ಗಂಡು ಸಂತಾನವಿಲ್ಲದೆ ನಿಧನ ಹೊಂದಲು ರಾಣಿ ವೆಂಕಟಮ್ಮ ಇತರ ಮೂವರು ರಾಣಿಯರ ಸಮಾಕ್ಷಮದಲ್ಲಿ ತನ್ನ ಮೈದುನ ಸೋಮಸಾಗರದ ಕನಕಪ್ಪನಾಯಕನ ಮಗ ಉಡಚನಾಯಕನನ್ನು ದತ್ತು ತೆಗೆದುಕೊಂಡಳು. ಉಡಚನಾಯಕ ಚಿಕ್ಕ ವಯಸ್ಸಿನವನಾಗಿದ್ದರಿಂದ ರಾಣಿ ವೆಂಕಟಮ್ಮ ತಾನೇ ಆಡಳಿತ ನಡೆಸಿದಳು.

**ರಾಣಿ ಗೌರಮ್ಮ:** ಹುಲಿಹೈದರ್ ಸಂಸ್ಥಾನದ ೩ನೆಯ ದೊರೆ ಉಡಚನಾಯಕನ ರಾಣಿ ಗೌರಮ್ಮನ ತವರುಮನೆ ಲಿಂಗಸ್ಗೂರು ತಾಲೂಕಿನ ಗುಡಗುಂಟಿ. ಇಲ್ಲಿಯ ಸಂಸ್ಥಾನಿಕರ ಮನೆತನದವಳು. ಉಡಚಿನಾಯಕ ಮರಣ ಹೊಂದಲು ಇವನ ಮಗ ರಾಜಾರಂಗಪ್ಪನಾಯಕನನ್ನು ರಾಣಿ ಗೌರಮ್ಮ ಪಟ್ಟಕ್ಕೆ ಕೂರಿಸಿದಳು. ಮಗ ಅಲ್ಪ ವಯಸ್ಕನಾಗಿದ್ದರಿಂದ ತಾನೇ ಆಡಳಿತ ನಡೆಸುತ್ತಾಳೆ. ರಾಣಿ ಗೌರಮ್ಮ ರೈತರಿಗೆ ಹೆಚ್ಚಿನ ಅನುಕೂಲತೆಗಳನ್ನು ಒದಗಿಸಿದಳು. ಹೆಚ್ಚಿನ ಧಾನ್ಯ ಬೆಳೆದ ರೈತರನ್ನು ಗೌರವಿಸುತ್ತಿದ್ದಳು. ಹುಲಿಹೈದರ್‌ನಲ್ಲಿ ಒಂದು ಅರಮನೆಯನ್ನು ಕಟ್ಟಿಸುತ್ತಾಳೆ. ಅದೇ ರೀತಿ ಕನಕಗಿರಿಯ ಕನಕಾಚಲಪತಿ ದೇವಾಲಯದ ರತದ ನಿಲುಗಡೆಗಾಗಿ ರಥಶಾಲೆಯನ್ನು ನಿರ್ಮಿಸಿದಳು. ಶ್ರೀಮಂತ ರಾಣಿ ಗೌರಮ್ಮ, ಮಗ ರಂಗಪ್ಪ ನಾಯಕ ಪ್ರಾಯಕ್ಕೆ ಬರುವ ಮೊದಲೇ ನಿಧನರಾದರು. ರಾಣಿ ಆಘತ ಅನುಭವಿಸಿದರು. ಆಪ್ತರ ಸಲಹೆ ಮೇರೆಗೆ ತನ್ನ ಮೈದುನ ಸೋಮಸಾಗರದ ರಂಗನಾಥಪ್ಪನ ಮಗ ರಂಗಪ್ಪ ನಾಯಕನನ್ನು ದತ್ತು ತೆಗೆದುಕೊಂಡಳು. ಆದರೆ ರಂಗಪ್ಪ ಅಲ್ಪ ವಯಸ್ಕನೆಂಬ ನೆಪವೊಡ್ಡಿ ಹೈದರಾಬಾದ್ ನಿಜಾಮ ಹುಲಿಹೈದರ್ ಸಂಸ್ಥಾನವನ್ನು ತನ್ನ ಕೈವಶ ಮಾಡಿಕೊಂಡನು. ರಾಣಿ ಗೌರಮ್ಮ ಹಾಗೂ ಆಕೆಯ ಮಗ ರಂಗಪ್ಪ ನಾಯಕನನ್ನು ವರ್ಷಾಸನ ಗೊತ್ತುಪಡಿಸಿ ಹೈದರಾಬಾದ್‌ನಲ್ಲಿಯೇ ಇಡಲಾಯಿತು. ರಾಣಿ ಗೌರಮ್ಮನವರು ೧೯೫೩ರಲ್ಲಿ ಹೈದರಾಬಾದ್‌ನಲ್ಲಿಯೇ ನಿಧನರಾದರು.

ಹೀಗೆ ಕನಕಗಿರಿಯ ರಾಣಿಯರ ಕಾರ್ಯಚಟುವಟಿಕೆಗಳು ಗಮನ ಸೆಳೆಯುತ್ತವೆ. ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಗಳಲ್ಲಿ ಅವರ ಆಸಕ್ತಿ ಶ್ಲಾಘನೀಯವಾದದ್ದು. ಕೆರೆ-ಬಾವಿಗಳಂತಹ ಜನಪರ ಯೋಜನೆಗಳತ್ತ ನಾಯಕ ದೊರೆಗಳು ತಮ್ಮ ರಾಣಿಯರಿಗೆ ರಾಜಕೀಯ ಸಾಮಾಜಿಕ ಹಾಗೂ ಆರ್ಥಿಕ ಸ್ವಾತಂತ್ರ್ಯವನ್ನು ನೀಡಿರುವುದು. ನಾಯಕ ದೊರೆಗಳ ಉದಾರತನಕ್ಕೆ ಸಾಕ್ಷಿಯಾಗಿದೆ. ಕನಕಗಿರಿ ರಾಣಿಯರಲ್ಲಿ ರಾಣಿ ಲಕ್ಷ್ಮೀನಾಗತಿ ಪ್ರಮುಖಳಾಗಿದ್ದು. ಇಮ್ಮಡಿ ಉಡಚನಾಯಕನ ಕಾಲದಿಂದ ಮುಂದಿನ ಎಲ್ಲಾ ಅರಸರು ತಮ್ಮ ಬಿರುದಿನ ಮುಂದೆ ಲಕ್ಷ್ಮೀನಾಗತಿ ಹೆಸರನ್ನು ಸೇರ್ಪಡೆಗೊಳಿಸಿಕೊಂಡಿರುವುದನ್ನು ಅರಿಯಬಹುದು. ಕರ್ನಾಟಕದ ಚರಿತ್ರೆಯಲ್ಲಿ ಪ್ರಧಾನ ರಾಜ ಮನೆತನಗಳಲ್ಲಿ ಮಕ್ಕಳಿಗೆ "ಕೆರೆಯಂ ಕಟ್ಟಿಸು ಬಾವಿಯ ತೊಡಿಸು ದೇವಾಗಾರಂ" ಮಾಡಿಸು ಎಂದು ಹೇಳಿದ ರಾಣಿಯರು ಬಹುಮಟ್ಟಿಗೆ ಕಂಡುಬರುವಾಗ ಸ್ವತಃ ಅವೆಲ್ಲವನ್ನು ತಾವೇ ಮಾಡಿ ತೋರಿಸಿದ ಕನಕಗಿರಿಯ ರಾಣಿಯರು ವಿಭಿನ್ನವಾಗಿ ಕಂಡುಬರುತ್ತಾರೆ.



## ಆಕರ ಗ್ರಂಥಗಳು

೧. ಅಲ್ಲಾಗಿರಿರಾಜ ಕನಕಗಿರಿ, 'ಪುಣ್ಯಕ್ಷೇತ್ರ ಕನಕಗಿರಿ, ಶ್ರೀರಾಮ್ ಪ್ರಕಾಶನ, ೨೦೦೬, ಪು. ೧೦ರಿಂದ ೧೬.

೨. ಅಮರೇಶ ಯತಗಲ್, 'ಕರ್ನಾಟಕ ನಾಯಕ ಅರಸು ಮನೆತನ'ಗಳ ವಿಶಿಷ್ಟ ಸಾಂಸ್ಕೃತಿಕಾಚರಣೆ ಗಳು, ಪಲ್ಲವಿ ಪಬ್ಲಿಕೇಷನ್, ಕಸಬಾಲಿಂಗಸುಗೊರು, ೨೦೧೮, ಪು. ೧೫೯.

೩. ಕಪಟರಾಳ ಕೃಷ್ಣರಾಯ, ಸಮಗ್ರ ಸಾಹಿತ್ಯ ಮಾಲೆ ೧, ಸುರಪುರ ಸಂಸ್ಥಾನ ಇತಿಹಾಸ, ಪೂರ್ಣಿಮಾ ಪ್ರಕಾಶನ, ಬೆಂಗಳೂರು, ೨೦೦೫, ಪು. ೧೬೩-೧೭೪.

೪. ತಾರಿಹಳ್ಳಿ ಹನುಮಂತಪ್ಪ, 'ಕನಕಗಿರಿ ನಾಯಕರು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೪೯-೫೪.

೫. ದೇವರಕೊಂಡಾರೆಡ್ಡಿ ಡಾ.(ಪ್ರ.ಸಂ)., 'ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨', ಕೊಪ್ಪಳ ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪು. ೫೪.

೬ ಷೇಕ್ ಅಲಿ, ಶಿವಣ್ಣ ಬಿ., ಕರ್ನಾಟಕ ಚರಿತ್ರೆ, ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೮೫

೭. ಶರಣಬಸಪ್ಪ ಪಿ. ಕೊಲ್ಕಾರ, 'ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು', ಕರ್ನಾಟಕ ವಿ.ವಿ., ಧಾರವಾಡ, ಎಂ.ಫಿಲ್. ಪ್ರಬಂಧ, ೨೦೦೧, ಪು. ೭೩.

೮. ಶರಣಬಸಪ್ಪ ಕೊಲ್ಕಾರ, 'ಗಂಗಾವತಿ'(ದರ್ಶನ ಮಾಲಿಕೆ) ಬಸವಿ ಪ್ರಕಾಶನ, ೨೦೧೪, ಪು. ೨೦-೨೨.

# ೩೨

# ತುಮಕೂರು ಜಿಲ್ಲೆಯ ಕೆಲವು ದಾನಶಾಸನಗಳು

**ಸಿದ್ಧಲಿಂಗಮ್ಮ ಕೊಂಡಜ್ಜಿ***

ನಮ್ಮ ದೇಶದ ಪ್ರಾಚೀನ ಇತಿಹಾಸವು ಶಾಸನಗಳ ಭದ್ರ ಅಡಿಪಾಯದ ಮೇಲೆಯೇ ನಿಂತಿದೆ. ಶಾಸನಗಳಿಲ್ಲದಿದ್ದರೆ ಇತಿಹಾಸದ ಸರಿಯಾದ ಪರಿಕಲ್ಪನೆಯೇ ಇರುತ್ತಿರಲಿಲ್ಲ ಎಂಬುದರಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ನಮ್ಮಲ್ಲಿ ವ್ಯವಸ್ಥಿತವಾದ ಪ್ರಾಚೀನ ಇತಿಹಾಸ ರಚನೆಗಳು ಇರದಿದ್ದರೂ ಪ್ರಾಚೀನ ಕಾಲದ ಸಮೃದ್ಧ ಚಿತ್ರಣವನ್ನು ಕೊಡಲು ಶಾಸನಗಳಿಂದಲೇ ಸಾಧ್ಯವಾಗಿದೆ. ಇವು ದೇಶದ ತುಂಬೆಲ್ಲ ಹರಡಿದ್ದು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ದೊರೆತಿದ್ದು ಇವುಗಳ ಸಂಗ್ರಹ, ವಿಶ್ಲೇಷಣೆ, ಅಧ್ಯಯನಗಳಿಂದ ನಮ್ಮ ಇತಿಹಾಸವನ್ನು ಅರಿಯುವುದು ಸಾಧ್ಯವಾಗಿದೆ. ಈ ಶಾಸನಗಳ ಸಂಗ್ರಹಕಾರ್ಯ ಸುಮಾರು ೧೯ನೇ ಶತಮಾನದ ಉತ್ತರಾರ್ಧದಿಂದ ಆರಂಭವಾಗಿದ್ದು ಇಂದಿಗೂ ನಡೆಯುತ್ತಲೇ ಇದೆ. ಬಗೆದಷ್ಟೂ ಬರುವ ಒರತೆಯ ನೀರಿನಂತೆ, ಹುಡುಕಿದಷ್ಟೂ ಶಾಸನಗಳು ಸಿಗುತ್ತಲೇ ಇವೆ. ನಮ್ಮ ದೇಶದ ಇತಿಹಾಸಕ್ಕೆ ಹೊಸ ಹೊಸ ವಿಷಯಗಳು ಸೇರುತ್ತಲೇ ಇವೆ. ಈ ಎಲ್ಲ ಮಾತುಗಳು ಇಡೀ ದೇಶಕ್ಕೆ ಅನ್ವಯಿಸುತ್ತವೆಯಾದರೂ ಇಲ್ಲಿಯ ವಿವರಣೆಯನ್ನು ಕರ್ನಾಟಕದ ತುಮಕೂರು ಜಿಲ್ಲೆಗೆ ಮಾತ್ರ ಸೀಮಿತಗೊಳಿಸಲಾಗಿದೆ.

ತುಮಕೂರು ಜಿಲ್ಲೆಯ ಸಂಸ್ಕೃತಿಯನ್ನರಿಯಲು ಅನೇಕ ಆಕರಗಳ ಜೊತೆಗೆ ಶಾಸನಗಳು ಬಹಳ ಮುಖ್ಯವಾದ ಆಕರಗಳಾಗಿವೆ. ಇಂಥ ಶಾಸನಗಳಲ್ಲಿ ದಾನ–ದತ್ತಿಗಳು, ಜನೋಪಯೋಗಿ ಕಾರ್ಯಗಳು, ಅವರ ಬದುಕು, ವೀರಜೀವನ, ಭಾಷೆ, ಆಚರಣೆಗಳು, ತ್ಯಾಗ, ಬಲಿದಾನ, ಆಡಳಿತ ವರ್ಗ, ತೆರಿಗೆಗಳು, ವ್ಯಾಪಾರ ವೃತ್ತಿಗಳು ಮೊದಲಾದ ವಿಷಯಗಳ ಕುರಿತು ಮಾಹಿತಿ ನೀಡುತ್ತವೆ.

ಬಿ.ಎಲ್. ರೈಸ್, ಆರ್.ನರಸಿಂಹಾಚಾರ್, ಎಂ.ಹೆಚ್.ಕೃಷ್ಣ, ಲಕ್ಷ್ಮೀನಾರಾಯಣರಾವ್ ಮತ್ತು ಶೇಷಾದ್ರಿಯವರ ಶ್ರಮದಿಂದ ತುಮಕೂರು ಜಿಲ್ಲೆಯ ಶಾಸನಗಳು 'ಎಪಿಗ್ರಾಫಿಯಾ ಕರ್ನಾಟಿಕ' ಸಂಪುಟ ೧೨ ಮತ್ತು ೧೬ ಹಾಗೂ 'ಎಂ.ಎ.ಆರ್' ವರದಿಗಳಲ್ಲಿ ಪ್ರಕಟಗೊಂಡಿವೆ.

ಇತರ ಜಿಲ್ಲೆಗಳಲ್ಲಿ ದೊರಕುವಂತೆಯೇ ಈ ಜಿಲ್ಲೆಯಲ್ಲಿಯೂ ದಾನ ಶಾಸನಗಳ ಸಂಖ್ಯೆಯೇ ಹೆಚ್ಚಾಗಿದೆ. ನಂತರದ ಸ್ಥಾನ ಕ್ರಮವಾಗಿ ವೀರಗಲ್ಲು, ನಿಸಿದಿಕಲ್ಲು ಮತ್ತು ಮಹಾಸತಿ ಕಲ್ಲುಗಳಿಗೆ ಸಲ್ಲುತ್ತದೆ. ಇದನ್ನು ಶಾಸನಗಳ ಮೂಲಕ ಸ್ಪಷ್ಟಪಡಿಸಿಕೊಳ್ಳಬಹುದು.

ಹಟ್ಟಣದ ಬಸ್ತಿಯಲ್ಲಿರುವ ಹೊಯ್ಸಳ ವೀರಬಲ್ಲಾಳನ ಶಾಸನದ ಪ್ರಕಾರ[1] ಹಟ್ಟಣದಲ್ಲಿದ್ದ ಮಾಣಿಕ ನಂದಿದೇವರಿಗೆ ಪುಣ್ಯವಾಗಲಿಯೆಂದು ಅಲ್ಲಿನ ನಖರ ಜಿನಾಲಯಕ್ಕೆ ಹಿರಿಯ ಕೆರೆಯ ಸಮೀಪ ಗದ್ದೆಯನ್ನು, ಕಾಳಿಸೆಟ್ಟಿಯ ಕೆರೆಯ ಕೋಡಿಯ ಹತ್ತಿರ ಗದ್ದೆಯನ್ನು ದಾನ ಬಿಡಲಾಗಿದೆ. ಹಾಗೆಯೇ ಭುಜ್ಯಯಣನ ಕೆರೆ, ಮದ್ದಬೋವನ ಕೆರೆ, ಮಾದಿಸೆಟ್ಟಿ ಕೆರೆ, ಮದಗದೇವಸೆಟ್ಟಿ ಕೆರೆಯ ಸಮೀಪವೂ ಸ್ವಲ್ಪ ಸ್ವಲ್ಪ ಗದ್ದೆಯನ್ನು ದಾನ ಬಿಡಲಾಗಿದೆ. ಜೊತೆಗೆ ಆ ಪಟ್ಟಣದ ದೇವರಿಗೆ ದೀಪದ ಎಣ್ಣೆಗೆ ಒಂದು ಗಾಣವನ್ನು ದಾನ ಬಿಟ್ಟ ವಿವರವೂ ಇದೆ. ಈ ಶಾಸನದ ಕವಿ ರೊದ್ದದ ಹಾಲೋಜನ ಮಗ ಬೀರೋಜ. ಶಾಸನದಲ್ಲಿ ದಾನದ ವಿವರದ ಜೊತೆಗೆ ದಾನಧರ್ಮದಲ್ಲಿ ಹೆಸರು ಮಾಡಿದ ಸಾಸಲು ಬಂಮ್ಮಯ್ಯ, ಜೌಕಿಸೆಟ್ಟಿ, ಮಾಚಿಸೆಟ್ಟಿ, ಕಾಳಿಸೆಟ್ಟಿ ಮುಂತಾದವರನ್ನು ಕೀರ್ತಿಸಲಾಗಿದೆ. ಇವರ ಹೆಸರಿನಲ್ಲಿ ಕೆರೆಗಳೂ ಇವೆ. ಹಿಂದೆ ವ್ಯಾಪಾರಸ್ಥರು ತಮ್ಮ ಲಾಭದಲ್ಲಿ ಒಂದು ಪಾಲನ್ನು ಧರ್ಮಕಾರ್ಯಗಳಿಗೆ ಉಪಯೋಗಿಸುತ್ತಿದ್ದದ್ದು ಗೊತ್ತಾಗುತ್ತದೆ.

ಕುಣಿಗಲ್ ತಾಲ್ಲೂಕು ಕೊತ್ತಗೆರೆ ಶಾಸನ[2] 'ಶ್ರೀಮನುಮಹಾಪ್ರಧಾನಸೇನಾಧಿಪತಿ ಸರ್ವಾಧಿಕಾರಿ ಹಿರಿಯಮನೆವೆಗ್ಗಡೆ ಬಲುಪೈಯ್ಯಂಗಳ ಬೆಸದಿಂ// ಶ್ರೀಮನುಮಹಾಪ್ರಧಾನಂದಣ್ಡನಾಯಕಂವುದೆಯಣ್ಣಗಳು ಸ್ವಸ್ತಿ ಶಕವರ್ಷ ೧೧೮೦ನೆಯ ಈಶ್ವರ ಸಂವತ್ಸರದ ಆಷಾಢಬಹುಳ ಏಕಾದಶೀ ಸೋಮವಾರದಕ್ಷಿಣಾಯನ ಸಂಕ್ರಮಣ ವ್ಯತೀಪಾತದ್ದನು, ಶ್ರೀಮತು ಶ್ರೀಪದುಮನಾಭಶ್ರೀ ಕೇಶವದೇವರಂಗ (ಗ) ಭೋಗಕ್ಕನಂನ್ದಾದೀವಿಗೆಗಂ ಜೀರ್ಣ್ನೋದ್ಧಾರಕ್ಕವೆನ್ದು ಕೊತ್ತಂಗೆರೆಯ ಹಿರಿಯೂರ

* ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ರಾಣೆಬೆನ್ನೂರು, ಮೊ. ೯೮೪೫೨೨೫೬೫೯

ಒಳವಾರು ಹೊರವಾರುತೋಟಎಮ್ಮೆಎತ್ತು ಪಶುತೊತ್ತುಕಟ್ಟಿನಭಂಡಿಬೆಳ್ದಂಡಿವಹಣಅಸಗ ಕಂವಾರಬಡಗಿ ಅಗಸ್ಯಾಲಿಕುಂಬಾರನಾವಿದ ಅಂಗಡಿ ಗಾಣ ಜಾಡಸಾಲಿ ತಿಪ್ಪೆಸುಂಕ ಹೊರೆಗಳಂಬನ್ದು ಮಾರುವಯಂಣೆತುಪ್ಪ ಉಪ್ಪು ಹೊಲೆವೊಗ್ಗವೊಳಗಾಗಿ ಸಮಸ್ತಸುಂಕ ಸರ್ವ್ವಾರ್ಯ ವಂ ಶ್ರೀಕೇಶವದೇವರ ಶ್ರೀಪಾದದಲ್ಲಿ ಧಾರಾಪೂರ್ವ್ವಕಂ ಮಾಡಿಕೊಟ್ಟನು' ಎಂದು ಉಲ್ಲೇಖಿಸುತ್ತದೆ. ಇದರಿಂದ ಊರಿನಿಂದ ಸಂಗ್ರಹವಾಗುತ್ತಿದ್ದ ಸಮಸ್ತ ಸುಂಕವನ್ನು ಕೇಶವದೇವರಿಗೆ ದಾನ ಮಾಡಲಾಗುತ್ತಿದ್ದ ವಿಷಯ ಗೊತ್ತಾಗುತ್ತದೆ. ಅಲ್ಲದೇ ಅಲ್ಲಿದ್ದ ಕುಶಲ ವೃತ್ತಿಗಳಾದ ಕಂಮಾರ, ಬಡಗಿ, ನಾವಿದ, ಅಗಸ್ಯಾಲಿ ಮೊದಲಾದವರ ಮೇಲೂ ತೆರಿಗೆ ವಿಧಿಸಲಾಗುತ್ತಿದ್ದ ಅಂಶ ತಿಳಿಯುತ್ತದೆ.

ಕುಣಿಗಲ್ ತಾಲ್ಲೂಕಿನ ಕಮ್ಮನಹಳ್ಳಿಯ[೩] ಕ್ರಿ.ಶ. ೧೧೩೮ ರ ಶಾಸನದಲ್ಲಿ ಕುಣಿಗಲ್ ನಾಡುವಿನ ಕಾರಗೊಂಡನಹಳ್ಳಿಯ ರಾಮೇಶ್ವರ ದೇವಾಲಯಕ್ಕೆ ಭೂದಾನ ನೀಡಿದ ಮಹಾಮಂಚಲೇಶ್ವರ ಹಾಗೂ ತೇಜೊನಿಧಿಪಂಡಿತರು ಕೆರೆ ನಿರ್ಮಿಸಿದ್ದನ್ನು ಉಲ್ಲೇಖಿಸುತ್ತದೆ. ಧಾರ್ಮಿಕ ವ್ಯಕ್ತಿಗಳು ಸಹ ಕೆರೆ ಕಾಮಗಾರಿಗಳಿಗೆ ಪ್ರಾಯೋಜಕತ್ವ ವಹಿಸಿರುವುದು ಇಲ್ಲಿ ಗಮನಿಸಬೇಕಾದ ವಿಷಯ. ಪ್ರಾಯಶಃ ಇಲ್ಲಿ ಧಾರ್ಮಿಕ ಮಹೋನ್ನತಿಯ ಉದ್ದೇಶಗಳಷ್ಟೇ ಲೌಖಿಕ ಚಟುವಟಿಕೆಗಳಿಗೆ ಅಗತ್ಯವಾದ ಸಂಪನ್ಮೂಲಗಳ ಕ್ರೋಢೀಕರಣಕ್ಕೆ ಕೆರೆ– ನೀರಾವರಿ ಆಧಾರಿತ ಕೃಷಿ ಉತ್ಪನ್ನಗಳನ್ನು ಹೆಚ್ಚಿಸುವ, ಪಡೆಯುವ ಪ್ರಕ್ರಿಯೆಯ ಒಂದು ಭಾಗವಾಗಿದ್ದಿತು ಎಂದು ಪರಿಭಾವಿಸಬಹುದಾಗಿದೆ. ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನ ನಿಡುಗಲ್ಲು[೪] ಬೆಟ್ಟದ ಕ್ರಿ.ಶ.೧೧೫೦ ರ ಶಾಸನದಲ್ಲಿ ಸೇನಾಧಿಪತಿ ಹಿರಿಯ ತಂತ್ರಿಪಾಲ. . . . ಮುತ್ತುಕೂರಿನ ಪೂರ್ವಕ್ಕೆ ಕನ್ಯೆಕೆರೆಯನ್ನು ನಿರ್ಮಿಸಿದ್ದನ್ನು ದಾಖಲಿಸಿದೆ. ತಿಪಟೂರಿನ ದಬ್ಬೆಘಟ್ಟದ[೫] ಕ್ರಿ.ಶ. ೧೧೪೦ರ ಶಾಸನದಲ್ಲಿ ನರಸಿಂಗಯ್ಯ ಕೆರೆ ಕಟ್ಟಿಸಿ, ಭೂದಾನ ನೀಡಿರುವುದನ್ನು ದಾಖಲಿಸಿದೆ.

ತುಮಕೂರು ತಾಲ್ಲೂಕು ಕೈದಾಳದ[೬] ಕ್ರಿ.ಶ. ೧೧೫೧ ರ ಶಾಸನದಲ್ಲಿ ವಿಷ್ಣುವರ್ಧನ ಮಹಾರಾಜ ವೈಷ್ಣವ, ಶೈವ ಮತ್ತು ಜೈನ ದೇವಾಲಯಗಳನ್ನು ನಿರ್ಮಿಸಿದ್ದಲ್ಲದೆ 'ಭೀಮಸಮುದ್ರ' ಮತ್ತು 'ಅಡಾಳಸಮುದ್ರ' ಎಂಬ ಕೆರೆಗಳನ್ನು ನಿರ್ಮಿಸಿದ್ದನ್ನು ದಾಖಲಿಸಿದೆ. ಈ ಕಾರ್ಯಸಂಬಂಧ ಸಾಮಂತ ಗೂಳಿಬಚ್ಚಿದೇವ ದೇವಾಲಯ– ಕೆರೆಗಳ ನಿರ್ಮಾಣಕ್ಕಾಗಿ ಹಿರಿಯಕೆರೆ ಎನ್ನಿಕೆರೆ ಭೀಮಸಮುದ್ರದ ಕೆರೆಗಳ ಅಚ್ಚುಕಟ್ಟಿನಲ್ಲಿ ಭೂ ದಾನಗಳನ್ನು ನೀಡಿರುವುದು ದಾಖಲಾಗಿದೆ.

ಚಿಕ್ಕನಾಯ್ಕನಹಳ್ಳಿ ತಾಲ್ಲೂಕಿನ ಬೈಚರಾಕ್ ಕೆಂಪನಹಳ್ಳಿಯ[೭] ಕ್ರಿ.ಶ. ೧೧೯೯ರ ಶಾಸನದಲ್ಲಿ ಮಹಾಸಾಮಂತ ಬಿಟ್ಟಿದೇವನ ಸೇವಕ ಬೈಚ ಶಿವ ದೇವಾಲಯ ಮತ್ತು ಕೆರೆಯನ್ನು ನಿರ್ಮಿಸಿರುವುದನ್ನು ಹಾಗೂ ಆ ಕೆರೆಯ ಅಚ್ಚುಕಟ್ಟಿನ ಭೂಮಿಗಳನ್ನು ದೇವಾಲಯ ಕೈಕಂರ್ಯಗಳಿಗೆ ದಾನ ನೀಡಿರುವುದನ್ನು ದಾಖಲಿಸಿದೆ. ತುಮಕೂರು ತಾಲ್ಲೂಕಿನ ಪಂಡಿತರಹಳ್ಳಿಯ[೮] ಕ್ರಿ.ಶ. ೧೧೬೦ರ ಶಾಸನವೊಂದರಲ್ಲಿ ದಂಡನಾಚಕ ಯರ್ರಮಗಾವಯ್ಯ ದೇವಾಲಯ ದುರಸ್ತಿಪಡಿಸಿ, ಜೈನ ಮಂದಿರ ಹಾಗೂ ಕೆರೆಯನ್ನು ನಿರ್ಮಿಸಿದನೆಂದು ಅದಕ್ಕೆ 'ಪದ್ಮಾವತಿ ಕೆರೆ' ಎಂದು ನಾಮಕರಣ ಮಾಡಿ, ಅದನ್ನು ಬರಸಿಗೆ ದಾನವಾಗಿ ನೀಡಿರುವುದು ದಾಖಲಾಗಿದೆ. ಇದೇ ತಾಲ್ಲೂಕಿನ ಮೋತಿಹಳ್ಳಿಯ[೯] ಕ್ರಿ.ಶ. ೧೨೩೩ರ ಶಾಸನದಲ್ಲಿ ಮೋಟಗೌಡಕೆರೆ ನಿರ್ಮಿಸಿ, ದೇವಾಲಯ ಕಟ್ಟಿಸಿ, ಮರಗಳನ್ನು ನೆಡಿಸಿದ್ದಕ್ಕಾಗಿ ಸಾಮಂತ ಲಕುಮಿಯ್ಯನಾಯಕ ದಾನಗಳನ್ನು ನೀಡಿರುವುದು ದಾಖಲಿಸಿದೆ.

ಕ್ರಿ.ಶ. ೧೧೬೨ರ ತಿಪಟೂರು ಶಾಸನದ[೧೦] ಪ್ರಕಾರ ನೊಣಂಬನ ಕೆರೆ ಹನ್ನೆರಡನ್ನು ಆಳುತ್ತಿದ್ದ ಉತ್ತಮ ಚೋಳನ ಮಗನಾದ ಮನಹಯ ಎಂಬುವನು ತನ್ನ ಉತ್ತಮ ಚೋಳನ ಹೆಸರಿನಲ್ಲಿ ಚೋಳೇಶ್ವರ ದೇವರನ್ನು ಪ್ರತಿಷ್ಠೆ ಮಾಡಿ, ಗಂಗರಾಸಿ ಪಂಡಿತರ ಪಾದವನ್ನು ತೊಳೆದು ಗುಡಿಯ ನಿರ್ವಹಣೆಗೆ ಹಿರಿಯ ಕೆರೆಯ ಬಳಿಯ ಗದ್ದೆಯನ್ನು ದಾನ ಬಿಡುತ್ತಾನೆ. ಅಲ್ಲದೆ ಚೋಳೇಶ್ವರ ದೇವರ ಪ್ರತಿದಿನದ ಶಂಖದ ಮೂಲಸ್ಥಾನದ ಕಲಿದೇವರಿಗೆ, ಗಂಗೇಶ್ವರ ದೇವರಿಗೆ, ಹೊನ್ನುಡಿಕೆಯ ದೇವಿಗಳಿಗೂ ಗದ್ದೆಯನ್ನು ದಾನ ನೀಡಲಾಗಿದೆ. ಅಂದರೆ ತಂದೆಯ ಹೆಸರಿನಲ್ಲಿ ಗುಡಿಕಟ್ಟಿಸಿ ಅದರ ಜೊತೆಯಲ್ಲಿ ಬೇರೆ ಗುಡಿಗಳಿಗೂ ದಾನ ನೀಡಿದ ಸತ್ಸಂಪ್ರದಾಯ ಈ ಶಾಸನದಿಂದ ತಿಳಿಯುತ್ತದೆ.

ಅರಸೀಕೆರೆಯ ಕ್ರಿ.ಶ. ೧೧೬೭ರ ಒಂದು ಶಾಸನದಲಿ[೧೧] ಹೆಂಜೇರ ಅರಸ ಮಲ್ಲದೇವನು ರಾಜ್ಯವಾಳುತ್ತಿದ್ದಾಗ ಇವನ ಪಟ್ಟದರಸಿ ಲಕ್ಷ್ಮಾದೇವಿ ಅರಸಿಯ ಕೆರೆಯ ಮಲ್ಲಿಕಾರ್ಜುನ ದೇವರಿಗೆ ಮತ್ತು ಮಂಗೇಶ್ವರ ದೇವರಿಗೆ ನಿತ್ಯ ನೈವೇದ್ಯ ಮತ್ತು ಇತರೆ ಕಾರ್ಯಗಳಿಗೆ ಗದ್ದೆ, ತೋಟ, ಗಾಣವನ್ನು ಅಲ್ಲಿನ ಗುರು ಶಂಕರಜೀಯರಿಗೆ ದಾನ ನೀಡಿದ ವಿಷಯವಿದೆ. ಇದೇ ಅವಧಿಯ ಮತ್ತೊಂದು ಶಾಸನದಲಿ[೧೨] ಇದೇ ಮಲ್ಲಿದೇವ ಅರಸನ ಮತ್ತೊಬ್ಬಳು ರಾಣಿ ಸೀತಾದೇವಿಯ ವರ್ಣನೆ ಬಹಳ ಅತಿಶಯವಾಗಿ ಬಂದಿದೆ. ಅವಳ ಗುಣಗಾನ ಈ ರೀತಿಯಿದೆ. 'ಶತಸಹಸ್ರ ಫಲಭೋಗ ಭಾಮಿನಿ, ದ್ವಿತೀಯ ಲಕ್ಷ್ಮೀಸಮಾನೆ, ಕಳಹಂಸಯಾನೆ, ಶ್ರವ್ಯಕಾವ್ಯದಿವ್ಯಗೀತವಾದ್ಯನೃತ್ಯಾದಿವಿದ್ಯಾಪ್ರವೀಣೆ, ರಕ್ಷಿತಾನೇಕಭೀತಜನಪ್ರಾಣೆ,

ಪ್ರಶಸ್ತಸಕಳ ಗುಣಮಣಿ ಗಣಾಳಂಕಾರೆ, (ವಿವಿಧವನ್ದಿಬೃನ್ದನಿಸ್ತಾರೆ) ಸಕಲ ಭುವನಭವನ ವ್ಯಾಪ್ತ ಕೀರ್ತಿ ಲತಾಪ್ರತಾನೆ, ಅನವರತ ವಿತರಣ ನಿರತಕರಸರಸಿರುಹ ವಿಗಳಿತದಾನ ಜಲಾರ್ದ್ರೀಕೃತ ವಸುಧೆ, ಆಶ್ರಿತ ವಿಬುಧ ಜನಸುಧೆ, ಕವಿ ಗಮಕಿ ವಾದಿವಾಗ್ಮಿ ವೈತಾಳಿಕ ಪಾಠಕಾದಿ ಜನಪರಿತುಷ್ಟೆ, ಸುರುಚಿ ರತ್ನಾವಿರಚಿತ ಸರ್ವ್ವಾಭರಣಮಂಗಳೆ, ಇತರೇತರ ನಿಬಿಡೋಂನತ ವಿಪುಲ ಪೀವರಕುಚಭರಭೃತಮುಕ್ತಾಗುಣನ್ಯಕ್ಕೃತ ತಾರಕೆ, ಮೃಗಮದಿತಳಕಾಳಂಕ್ರಿತಾ ಭಾಳಕೆ, ಚಲ್ಲೀವಲ್ಲೀವೇಲ್ಲಿತ ಸಮುಜ್ಜೀವಿತ ಮದನೆ', ಇನ್ನು ಮುಂತಾದ ವಿಶೇಷಣಗಳನ್ನುಳ್ಳವಳು. ಇವಳು ಸೀರೇನಾಡಿಗೆ ಸೇರಿದ ಹೇಂಜೇರು ಪಟ್ಟಣದ ಮಹಾಘಟಿಕಾಸ್ಥಾನವಾಗಿದ್ದ ಶ್ರೀ ನೊಣಂಬೇಶ್ವರ ದೇವಸ್ಥಾನಕ್ಕಾಗಿ ಅಲ್ಲಿಯ ಆಚಾರ್ಯ ರಾಜಗುರುಗಳಾದ ಶ್ರೀ ಶಿವದೇವರಿಗೆ ಆ ನೊಣಂಬೇಶ್ವರ ದೇವರ ಆವರಣದಲ್ಲಿ ಛತ್ರವನ್ನು ನಡೆಸಲು ದಾನ ನೀಡಿರುವಳು. ಅಲ್ಲಿಯ ಘಟಿಕಾಸ್ಥಾನದ ಇಬ್ಬರು ಬ್ರಾಹ್ಮಣರಿಗೆ, ಒಂದಷ್ಟು ಜನ ತಪೋಧನರಿಗೆ ಪರಿಚಾರಕರಿಗೆ ಒಟ್ಟು ಮೂವತ್ತು ಜನರಿಗೆ ಅವರ ಆಹಾರಕ್ಕಾಗಿ ವೆಡುಲಚಿನ್ನೆಯನ್ನು ದಾನ ನೀಡಲಾಗಿದೆ. ಈ ಶಾಸನದಿಂದ ಹೆಂಜೇರಿನ ನೊಳಂಬೇಶ್ವರ ದೇವಾಲಯವು ಒಂದು ಪ್ರಸಿದ್ಧ ಘಟಿಕಾಸ್ಥಾನವಾಗಿತ್ತೆಂದು ತಿಳಿದು ಬರುತ್ತದೆ. ನಮ್ಮ ಕರ್ನಾಟಕದ ಪ್ರಾಚೀನ ವಿದ್ಯಾಭ್ಯಾಸದ ಬಗೆಗೆ ಅರಿಯಲು ಈ ಶಾಸನ ಬಹಳ ಸಹಾಯ ಮಾಡುತ್ತದೆ.

ಶೆಟ್ಟಿಕೆರೆಯ ಕ್ರಿ.ಶ. ೧೨೭೨ರ ಅವಧಿಯ ಒಂದು ಶಾಸನದಲ್ಲಿ[13] ೭೫ ಸಾಲುಗಳಿದ್ದು ಆ ಸಾಲುಗಳಲ್ಲಿ ಸಂಪ್ರದಾಯದಂತೆ ರಾಜ ಮಹಾರಾಜರ ವರ್ಣನೆ ಹೆಚ್ಚಾಗಿರದೆ ಕೇವಲ ೧೦ ಸಾಲುಗಳಲ್ಲಿ ಮುಗಿಸಿ ಮಿಕ್ಕ ೬೫ ಸಾಲುಗಳಲ್ಲಿ ದಾನದ ವಿವರಗಳನ್ನು ವೃತ್ತಿಯ ವಿವರಗಳನ್ನು ನೀಡಿರುವುದು ವಿಶೇಷವಾಗಿದೆ. ಹೊಯ್ಸಳ ಅರಸ ವೀರನರಸಿಂಹನು ತನ್ನ ಮೆಚ್ಚಿನ ಪ್ರಧಾನರಾದ ಅಗಸ್ತ್ಯಗೋತ್ರದ ಗೋಪಾಲದಣ್ಣಾಯಕರಿಗೆ ಸೆಟ್ಟಿಯಕೆರೆ ಗ್ರಾಮವನ್ನು ಅಗ್ರಹಾರವನ್ನಾಗಿ ಮಾಡಿ ಅಭಿವೃದ್ಧಿಪಡಿಸಲು ಧಾರೆಯನ್ನೆರೆದು ಕೊಡುವರು. ಇದನ್ನು ಸ್ವೀಕರಿಸಿದ ಗೋಪಾಲದಣ್ಣಾಯಕರು ಅದನ್ನು ಅಗ್ರಹಾರವನ್ನಾಗಿ ಮಾಡಿ ಶ್ರೀ ಭರತಪ್ರಕಾಶಪುರವೆಂದು ಹೆಸರನ್ನಿಟ್ಟು ನಲವತ್ತೇಳು ವೃತ್ತಿಯನ್ನು ವಿಂಗಡಿಸಿ ನಾನಾ ಗೋತ್ರದ ಬ್ರಾಹ್ಮಣರಿಗೆ ೩೬ ವೃತ್ತಿಯನ್ನು ಧಾರೆಯೆರೆದು ನೀಡುವರು. ಮಿಕ್ಕ ಹನ್ನೊಂದು ವೃತ್ತಿಯಲ್ಲಿ ಒಂದು ವೃತ್ತಿಯಲ್ಲಿ ಖಂಡಗಕ್ಕೆ, ಮಿಕ್ಕ ಹತ್ತು ವೃತ್ತಿಯನ್ನು ತಾನೇ ಪ್ರತಿಷ್ಠೆ ಮಾಡಿದ್ದ ಶ್ರೀ ಯೋಗನಾಥ ದೇವರ ಸೇವೆಗೆ ಕೊಡುತ್ತಾನೆ. ಈ ಹತ್ತು ವೃತ್ತಿಯಲ್ಲಿ ಯೋಗನಾಥದೇವರು, ಲಕ್ಷೀನಾರಾಯಣ ದೇವರು, ಶ್ರೀ ಗೋಪಾಲ ದೇವರು, ಶ್ರೀ ವಿಘ್ನೇಶ್ವರ ದೇವರು, ಶ್ರೀ ದುರ್ಗಾದೇವಿ ಸಹಿತ ಅವುಗಳ ನಿತ್ಯ ನೈಮಿತ್ತಿಕ ಮೊದಲಾದ ಅಮೃತಪಡಿಗೆ, ಆ ದೇವರುಗಳ ಊಳಿಗದ ನಂಬಿಯವರಿಗೆ ಸಂಗಾರಿಗಳಿಗೆ, ಪರಿಚಾರಕರಿಗೆ, ಬಾಣಸಿಗರಿಗೆ, ಹೂವು-ಪತ್ರೆ ತರುವ ಪರಿಚಾರಕರಿಗೆ, ಮಾಲೆಗಾರನಿಗೆ, ಉಡವರಿಗರಿಗೆ, ಕೆಡತೆತ್ತು ಕಾವ ಅಂಘರಿಕರಿಗೆ, ಬಾಹ್ಯನೊಬ್ಬನಿಗೆ, ಗೋಪಾಲದಣ್ಣಾಯಕರ ಮಗಳಾದ ಬಾಯಕ್ಕಂಗೆ ದೇವರ ತೋಟದ ಆರೈಕೆಗೆ, ದೇವರ ಕೊಠಾರಿಕೆ, ಪಾಯಸ ಪಕ್ವಾನ್ನದಿಂದ ಕೂಡಿದ ರಂಗವಾಲಿಯ ನಿಯೋಗಕ್ಕೆ, ಗಾಣಿಗ ಕುಂಬಾರ, ಅಗಸರಿಗೆ, ವೈಷ್ಣವರ ಜೀವಿತಕ್ಕೆ, ಮಡಿವರ್ಗ, ಶ್ರೀಗಂಧ, ಕರ್ಪೂರ ಧೂಪಗಳಿಗೆ ಹಾಗೂ ಇನ್ನಿತರ ಕಾರ್ಯಗಳಿಗೆ ಮತ್ತು ಯೋಗೇಶ್ವರ ದೇವಾಲಯದ ಪರಿಸೂತ್ರ, ಕಲ್ಲಕೋಟೆ, ಕಲ್ಲ ಬಾಗಿಲುವಾಡ, ಕಲ್ಲು ಕೊಠಾರ, ಕಲ್ಲ ಬಾಣಸದ ಮನೆಯ ಕೆಲಸಕ್ಕೆ ಕಲ್ಲುಕುಟಿಕರ ಜೀವಿತಕ್ಕೆ, ಸಂಬಂಧಪಟ್ಟ ಮನೆಯವರಿಗೆ ಇಟ್ಟಿಗೆ, ಸೌದೆ ಮುಂತಾದವಕ್ಕೆ ಇಂತಿಷ್ಟು ವೃತ್ತಿಯೆಂದು ನೀಡಲಾಗಿದೆ. ಈ ಶಾಸನದಿಂದ ಪ್ರಾಚೀನ ಕರ್ನಾಟಕದಲ್ಲಿ ದೇವಾಲಯದ ನಿರ್ವಹಣೆಯ ವ್ಯವಸ್ಥೆ ತಿಳಿದುಬರುತ್ತದೆ.

ಹೀಗೆ ಈ ಜಿಲ್ಲೆಯ ಶಾಸನಗಳನ್ನು ಪರಿಶೀಲಿಸಿದಾಗ ಕೆರೆ, ಬಾವಿ, ತೋಟ, ದೇವಾಲಯ ನಿರ್ಮಾಣ- ನಿರ್ವಹಣೆದಂತಹ ಕೆಲಸಗಳಿಂದ ಹಿಡಿದು ದಾನ-ದತ್ತಿ, ಉಂಬಳಿ ಕೊಡುವಂತಹ ಪ್ರಮುಖ ವಿಷಯಗಳು ಇಲ್ಲಿವೆ.



## ಅಡಿಟಿಪ್ಪಣಿಗಳು

೧. ಎ.ಕ. ೧೨. ನಂ. ೧೦೧, ಹಟ್ಟಣ, ತಿಪಟೂರು (ತಾ), ಕ್ರಿ.ಶ. ೧೦೭೮. ೨. ಎ.ಕ.೧೨. ನಂ.೦೧, ಕೊತ್ತಗೆರೆ, ಕುಣಿಗಲ್ (ತಾ), ಕ್ರಿ.ಶ. ೧೧೫೮.
೩. ಎ.ಕ. ೧೨. ನಂ. ೦೩, ಕಮ್ಮನಹಳ್ಳಿ, ಕುಣಿಗಲ್ (ತಾ), ಕ್ರಿ.ಶ. ೧೧೩೮. ೪. ಎ.ಕ.೧೨. ನಂ.೦೩, ನಿಡುಗಲ್ಲು, ಪಾವಗಡ (ತಾ), ಕ್ರಿ.ಶ. ೧೧೫೦.
೫. ಎ.ಕ. ೧೨. ನಂ. ೧೬೨, ತಿಪಟೂರು, ಕ್ರಿ.ಶ. ೧೧೪೦. ೬. ಎ.ಕ. ೧೨. ನಂ. ೦೯, ಕೈದಾಳ, ತುಮಕೂರು (ತಾ), ಕ್ರಿ.ಶ. ೧೧೫೧.
೭. ಎ.ಕ. ೧೨. ನಂ. ೯೮, ಕೆಂಪನಹಳ್ಳಿ, ಚಿಕ್ಕನಾಯಕನಹಳ್ಳಿ (ತಾ), ಕ್ರಿ.ಶ. ೧೧೬೯.
೮. ಎ.ಕ. ೧೨. ನಂ. ೩೮, ಪಂಡಿತರಹಳ್ಳಿ, ತುಮಕೂರು (ತಾ), ಕ್ರಿ.ಶ. ೧೧೬೦.
೯. ಎ.ಕ. ೧೨. ನಂ. ೦೯, ಮೋತಿಹಳ್ಳಿ, ತುಮಕೂರು (ತಾ), ಕ್ರಿ.ಶ. ೧೨೩೩. ೧೦. ಎ.ಕ. ೧೨. ನಂ. ೬೧, ತಿಪಟೂರು, ಕ್ರಿ.ಶ. ೧೧೬೨.
೧೧. ಎ.ಕ.೧೨. ನಂ. ೩೫, ಅರಸಿಕೆರೆ, ಪಾವಗಡ (ತಾ), ಕ್ರಿ.ಶ. ೧೧೬೧. ೧೨. ಎ.ಕ.೧೨. ನಂ. ೨೩, ಹೇಮಾವತಿ, ಶಿರಾ (ತಾ), ಕ್ರಿ.ಶ. ೧೧೬೭
೧೩. ಎ.ಕ. ೧೨. ನಂ. ೦೨, ಶಟ್ಟಿಕೆರೆ, ಚಿಕ್ಕನಾಯಕನಹಳ್ಳಿ (ತಾ), ಕ್ರಿ.ಶ. ೧೨೭೨.

೪೩

# ಕುರುಗೋಡಿನ ಶಾಸನಗಳಲ್ಲಿ ವರ್ತಕರು

ಎಂ. ನಿರ್ಮಲ*

**ಕು**ರುಗೋಡು ಪ್ರದೇಶವು ಬಳ್ಳಾರಿ ಜಿಲ್ಲೆಯ ಮುಖ್ಯ ತಾಲೂಕು ಕೇಂದ್ರವಾಗಿದ್ದು, ಈ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ಕುರುಹುಗಳ ಮಾಹಿತಿ ದೊರೆಯುತ್ತದೆ. ಕುರುಗೋಡು ಪ್ರದೇಶವು ಬೆಟ್ಟಗುಡ್ಡಗಳಿಂದ ಆವೃತ್ತವಾಗಿದ್ದು ತನ್ನದೇ ಆದ ಭೌಗೋಳಿಕ ಪ್ರದೇಶವನ್ನು ಹೊಂದಿದೆ. ಕುರುಗೋಡು ಪ್ರದೇಶದಲ್ಲಿರುವ ಪ್ರತಿಯೊಂದು ಬೆಟ್ಟಕ್ಕೂ ಕಂದಾಯ ಇಲಾಖೆಯಲ್ಲಿ ಜಿಲೆಲಿಕೊಂಡ, ಹನುಮನಕೊಂಡ, ನಿಶಾನಿಕೊಂಡ, ಆಲಬಾವಿಕೊಂಡ, ರಾಮನಕೊಂಡ, ಐದುಗುಡ್ಡಕೊಂಡ, ಜಿಂಕಲಕೊಂಡ ಬೈರಿಕಲ್ಲು ಎಂಬುದಾಗಿ ಗುರುತಿಸಲಾಗಿದೆ. ಕುರುಗೋಡು ಪ್ರದೇಶವು ಪ್ರಾಗೈತಿಹಾಸಿಕ ಕಾಲದಿಂದ ಮಾನವನ ಅಸ್ತಿತ್ವದ ಕುರುಹುಗಳು ಈ ಪರಿಸರದಲ್ಲಿ ದೊರೆತಿವೆ. ಬಳ್ಳಾರಿ ಜಿಲ್ಲೆಯ ಕೋಳೂರಿನ ಶಾಸನವೊಂದು ನಂದರನ್ನು, ಮೌರ್ಯರನ್ನು ಮತ್ತು ಕುಂತಲ ದೇಶವನ್ನು ಉಲ್ಲೇಖಿಸುತ್ತದೆ. ಹಾಗಾಗಿ ಬಳ್ಳಾರಿ ಪ್ರದೇಶವು ಕುಂತಲ ದೇಶಕ್ಕೆ ಸೇರಿತ್ತು. ಕುಂತಲದೇಶ ಪಾಂಡವರ ಕಾಲದಲ್ಲಿ ಪ್ರಸಿದ್ದವಾಗಿದ್ದು, ಇದನ್ನು ಈಗ ಕುರುಗೋಡು ಎಂದು ಕರೆಯುತ್ತಾರೆ. ಕುರುಗೋಡು ಪ್ರದೇಶದಲ್ಲಿ ಶಾತವಾಹನರು, ಮೌರ್ಯರು, ಬಾದಾಮಿ ಚಾಲುಕ್ಯರು, ರಾಷ್ಟಕೂಟರ ಆಳ್ವಿಕೆಗೆ ಒಳಪಟ್ಟಿತ್ತು. ಅವರ ಆಳ್ವಿಕೆಯ ಕುರುಹುಗಳಾದ ಶಾಸನಗಳು ಇಲ್ಲಿ ದೊರೆಯುತ್ತವೆ. ಕಲ್ಯಾಣದ ಚಾಲುಕ್ಯರ ಸಾಮಂತರಾಗಿ ಕುರುಗೋಡಿನ ಸಿಂಧ ಮನೆತನದ ಇಮ್ಮಡಿ ರಾಚಮಲ್ಲ ಆಳ್ವಿಕೆ ನಡೆಸಿದನು. ಈ ವೇಳೆ ತುಂಗಭದ್ರ ಪ್ರದೇಶಕ್ಕಾಗಿ ಹೊಯ್ಸಳರು ಮತ್ತು ಸೇವುಣರ ನಡುವೆ ತೀವ್ರ ಹೋರಾಟಗಳು ಆರಂಭಗೊಂಡಿದ್ದರಿಂದ ಕುರುಗೋಡಿನ ಸಿಂಧರು ತಮ್ಮ ಅಸ್ತಿತ್ವ ಕಳೆದುಕೊಂಡರು.

ವಿಜಯನಗರದ ಅರಸರ ಕಾಲದಲ್ಲಿ ಕುರುಗೋಡನ್ನು ಸೀಮೆಯನ್ನಾಗಿ ಪರಿಗಣಿಸಲಾಗಿತ್ತು. ೧೭೬೮ರಲ್ಲಿ ಈ ಪ್ರದೇಶವು ಹೈದರಾಲಿಯ ವಶವಾಯಿತು. ಇವರ ಕಾಲದಲ್ಲಿ ಕುರುಗೋಡಿನ ಗುಡ್ಡದ ಮೇಲೆ ಹನುಮಂತನ ದೇವಾಲಯ ನಿರ್ಮಾಣಗೊಂಡಿತ್ತು. ಭಕ್ಷಿ ಎಂಬುವನು ಬಳ್ಳಾರಿಯ ಸುಭೇದಾರನಾಗಿ ನೇಮಕಗೊಂಡನು. ಟಿಪ್ಪುವಿನ ಕಾಲದಲ್ಲಿ ಈ ಭಾಗಕ್ಕೆ ಸಿದ್ದಿಮೊಹಿದಿನ್ ಖಾನ್ ಎಂಬುವನು ಸುಭೇದಾರನಾಗಿದ್ದನು ಈ ಪ್ರದೇಶದ ಶಾಸನಗಳಲ್ಲಿ ಭೂಮಿಯನ್ನು ತೆಕ್ಕಲುಭೂಮಿ, ಸೌಳಭೂಮಿ, ಹೊಲ ಎಂದೆಲ್ಲ ಉಲ್ಲೇಖಿಸಿದ್ದಾರೆ. ಒಂದು ಸಾಮ್ರಾಜ್ಯದ ಸಮಗ್ರ ಆರ್ಥಿಕ ವ್ಯವಸ್ಥೆಯ ವಿಚಾರಗಳನ್ನು ಕುರುಗೋಡು ಶಾಸನ ತಿಳಿಸುತ್ತದೆ. ಕೃಷಿ ವ್ಯವಸಾಯವನ್ನು ಮೂಲ ಕಸುಬನ್ನಾಗಿ ಮಾಡಿಕೊಂಡಿದ್ದವರು ಒಕ್ಕಲಿಗರು. ಶಾಸನಗಳು ಅವರನ್ನು ಕುಡಿಯೊಕ್ಕಲರೆಂದು ಕರೆದಿದೆ. ಬೇರೆ ಬೇರೆ ವೃತ್ತಿಸಂಘಗಳಂತೆ ಕುಡಿಯೊಕ್ಕಲರೆಂದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ.

ಇಲ್ಲಿನ ಶಾಸನದಲ್ಲಿ ವ್ಯಾಪಾರವನ್ನು ವೃತ್ತಿಯಾಗಿಸಿಕೊಂಡ ವರ್ತಕ ಸಮುದಾಯಗಳ ಉಲ್ಲೇಖವು ದೊರೆಯುತ್ತದೆ. ಬಲಕುಂದೆ ನಾಡಿನ ಶಾಸನಗಳು ಇವರನ್ನು ಬಿರುದು ಬಣಂಜಿಗ ಎಂದು ಕರೆಯುತ್ತದೆ.[೧] ಈ ವರ್ತಕರು ಸರಕುಗಳನ್ನು ಎತ್ತು, ಕುದುರೆ, ಕೋಣಗಳ ಮೇಲೆ ಹೇರಿಕೊಂಡು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಿ ವ್ಯಾಪಾರ ಮಾಡುತ್ತಿದ್ದ ಜನಾಂಗವೆಂದು ಕುರುಗೋಡು ಶಾಸನವು ಸ್ಪಷ್ಟಪಡಿಸುತ್ತದೆ. ಸೆಟ್ಟಿಗಳೆಂಬ ವರ್ತಕರು ಈ ನಾಡಿನಲ್ಲಿದ್ದು ಸೆಟ್ಟಿಗಳಲ್ಲಿಯೇ ಪೇಳಾವಿಗ ಸೆಟ್ಟಿಯರಿದ್ದು ಇವರು ದೇವಾಲಯಕ್ಕೆ ಸಮಸ್ತ ದವಸ ಧಾನ್ಯದ ಕೆಲವು ಭಾಗವನ್ನು ವೀಸಾ ಬಿಟ್ಟಿರುವುದನ್ನ ಶಾಸನಗಳು ತಿಳಿಸುತ್ತವೆ.

**ನಕರ:** ನಕರರೆಂಬ ವರ್ತಕ ಸಮುದಾಯದ ಉಲ್ಲೇಖ ಇಲ್ಲಿನ ಶಾಸನದಲ್ಲಿ ದೊರೆತ್ತಿದ್ದು ಇವರನ್ನು ಅಂಗಡಿ ಸೆಟ್ಟಿಯರೆಂದು ಕರೆದಿರುವುದರಿಂದ ಇವರು ಸಂತೆ, ಪೇಟೆಗಳಿಗೆ ಹೋಗಿ ವಿವಿಧ ಸರಕುಗಳನ್ನು ಖರೀದಿಸಿ ಸ್ಥಿರವಾದ ಅಂಗಡಿ ಇಲ್ಲವೆ ಮಳಿಗೆಗಳನಿಟ್ಟು ಮಾರುವ ವ್ಯಾಪಾರಿಗಳೆಂದು ಹೇಳಬಹುದು. ಕುರುಗೋಡು ಶಾಸನವು ಪಟ್ಟಣಿ ನಕರರನ್ನು ಉಲ್ಲೇಖಿಸುತ್ತದೆ.[೨]

* ಪಿಎಚ್‌ಡಿ ಸಂಶೋಧನಾ ವಿದ್ಯಾರ್ಥಿನಿ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬, ಮೊ. ೯೭೪೦೧೯೩೨೮೭

**ಮುಮ್ಮರಿದಂಡ:** ಮುಮ್ಮರಿದಂಡ ವ್ಯಾಪಾರಿಗಳಾಗಿದ್ದು ಮುಮ್ಮರಿದಣ್ಡಂಗಳು ಭಣ್ಡವ ತೊಡಗಿಕೊಂಡು ವ್ಯಾಪಾರ ಮಾಡುತ್ತಿದ್ದನ್ನು ಅಲ್ಲಿನ ಶಾಸನ ತಿಳಿಸುತ್ತದೆ.ಇವರು ಗ್ರಾಮ ಪಟ್ಟಣಗಳಲ್ಲಿ ವಾಸಿಸುತ್ತಿದ್ದರು ಅಯಾ ಗ್ರಾಮ ಪಟ್ಟಣಗಳಿಗೆ ಮೂಲ ಸ್ತಂಭರೆನಿಸಿದ್ದರು. ಇವರು ಮುಖ್ಯವಾಗಿ ಪಟ್ಟಣದ ವ್ಯಾಪಾರಿಗಳಾಗಿಯೂ ಕೆಲಸ ನಿರ್ವಹಿಸುತ್ತಿದ್ದರು.[೩]

ಕುರುಗೋಡಿನ ಈ ಶಾಸನದಲ್ಲಿ ಮುಮ್ಮರಿದಂಡಂಗಳ ಪ್ರತಾಪವನ್ನು ವರ್ಣಿಸುತ್ತದೆ.

"ಕಡುಮುಳಿಸಿಂದೆ ಒಯ್ದಂಡೆ ದಿಟ್ಟಂ ಬಿಡಿ ತಾನೆಕನಲ್ದು ಒಯ್ದು ನಾ

ಟ್ಟುಡಿದಡೆ ಮೋಲೆಯಂ ಜನನುಮಾತನ ಬಾಳ್ಕೆಯ ಲೆಕ್ಕದೋಲೆಯಂ

ತೊಡೆದು ಬಿಸುಟ್ಟನೆಂದಮಿ ವುದೆನ್ತಡದೇಂ ಪೊಗಟ್ಟಿಪ್ಪನೇ

ಎಂದು ಕುರುಗೋಡು ಪ್ರದೇಶದ ಮುಮ್ಮರಿದಂಡಗಳ ವ್ಯಾಪಾರಿನೆಲೆಯಾಗಿತ್ತು ಎಂದು ತಿಳಿಯಬಹುದು.[೪]

**ವಡ್ಡವ್ಯವಹಾರಿ:** ವಡ್ಡವ್ಯವಹಾರಿ ಎಂಬ ವರ್ತಕರು ಬಲಕುಂದೆ ನಾಡಿನಲ್ಲಿ ವ್ಯಾಪಾರ ಮಾಡುತ್ತಿದ್ದರು ಮುದ್ದರಸನು ಗೌಡಸ್ವಾಮಿಯೂ ವಡ್ಡಾಚಾರ ಗುಡ್ಡಶಾಸ್ತ್ರನ್ವಿತೂ ಆಗಿದ್ದ ವಡ್ಡ ವ್ಯವಹಾರಿಯಾಗಿದ್ದನ್ನು ಇವರು ಹಿರಿಯ ವ್ಯಾಪಾರಿಗಳು ಎಂದು ಹಿರೇಮಠರ ಸ್ಪಷ್ಟಪಡಿಸುತ್ತಾರೆ. ಹಾಗೂ ಗವರೆ ಎಂಬ ವರ್ತಕರು ಇವರ ಸಮೂಹದ ಒಕ್ಕೂಟದಿಂದ ತ್ರಿಕೂಟ ದೇವಾಲಯದಲ್ಲಿಯ ಒಂದು ಭಾಗವನ್ನು ನಿರ್ಮಿಸಿದ್ದನ್ನು ತಿಳಿಸುತ್ತದೆ. ಗವರೆಗಳಿಂದ ನಿರ್ಮಿಸಿ ಪ್ರತಿಷ್ಠಪಿಸಲ್ಪಟ್ಟ ಈ ಈಶ್ವರವನ್ನು ಗವರೇಶ್ವರ ಎಂದು ಕರೆಯಲಾಗಿದೆ. ಈ ಮೂಲಕವಾಗಿ ಕುರುಗೋಡಿನ ಶಾಸನಗಳು ವರ್ತಕರು ತಮ್ಮದೇಯಾದ ವೃತ್ತಿ ಸಂಘಗಳನ್ನು ಇಟ್ಟುಕೊಂಡು ಸಮಾಜಿಕ ಕಾರ್ಯಗಳನ್ನು ಸಹ ಇವರು ಮಾಡುತ್ತಿರುವುದಕ್ಕೆ ಈ ಶಾಸನ ಉದಾಹರಣೆಯಾಗಿದೆ.

**ನಾನಾದೇಶಿ:** ಕುರುಗೋಡು ಪ್ರದೇಶವು ವ್ಯಾಪಾರದ ಪ್ರಸಿದ್ಧಿಯಿಂದ ಸಂಪತ್ತಿನ ಸಂಗ್ರಹದಿಂದ ಈ ಸ್ಥಳವು ರಾಜಧಾನಿ ಕೇಂದ್ರವಾಗಿ,ಉಪ ವಿಭಾಗವಾಗದ ಮುಖ್ಯಕೇಂದ್ರವಾಗಿ,ಪಟ್ಟಣಗಳ ವ್ಯಾಪಾರದ ಕೇಂದ್ರವಾಗಿ ಪ್ರಸಿದ್ಧಿಯನ್ನು ಪಡೆದಿತ್ತು. ಕುರುಗೋಡು ಪ್ರದೇಶವು ಸಂತೆಯ ವ್ಯಾಪಾರ ಕೇಂದ್ರದ ಜೋತೆಗೆ ದಿನ ನಿತ್ಯದ ವ್ಯಾಪಾರದ ಕೇಂಧ್ರವಾಗಿತ್ತು ಬಲಕುಂದೆ ನಾಡಿಗೆ ಅಥವಾ ಕುರುಗೋಡು ಪಟ್ಟಣಕ್ಕೆ ಲಾಳ,ಮಲೆಯಾಳ,ಚೋಳ ತೆಲುಗು ಹಾಗೂ ಕನ್ನಡ ನಾಡಿನ ಸಮಸ್ತ ನಾನಾದೇಶಿಯವರು ವ್ಯಾಪಾರಕ್ಕಾಗಿ ಆಗಮಿಸಿದ್ದ ಸಂಗತಿ ಅಲ್ಲಿನ ಶಾಸನದಲ್ಲಿದೆ. ಈ ವಿಚಾರವನ್ನು ಕುರಿತಂತೆ ಹೇಳುವುದಾದರೆ ಕುರುಗೋಡು ಪ್ರದೇಶವು ವ್ಯಾಪಾರದಲ್ಲಿ ಅಭಿವೃದ್ಧಿ ಹೊಂದಿದ್ದು ವಿದೇಶದಿಂದ ವರ್ತಕರು ಇಲ್ಲಿ ಬಂದು ನೆಲೆಸಿದರೆಂದು ಹೇಳಬಹುದು.

**ಶಾಸನಗಳಲ್ಲಿ ಅಳತೆ ಮಾಪನಗಳು:** ಕುರುಗೋಡಿನ ಸತ್ಯಾಶ್ರಯನ ಶಾಸನದಲ್ಲಿ ಕುರುಗೋಡಿನ ಗೇಣು-೧೦ ಕೋಲು, ನವಿಲಪೊನ್ನು ಉಲ್ಲೇಖವಿದ್ದು ಇವು ಕೃಷಿ ಭೂಮಿಯ ಅಳತೆಯ ಸಾಧನಗಳಾಗಿದ್ದವೆಂದು ತಿಳಿಯಬಹುದು.[೫] ಕಲ್ಲೇಶ್ವರ ದೇವಾಲಯದ ಮುಂದಿನ ಮಂಟಪದ ದಕ್ಷಿಣ ಭಾಗದಲ್ಲಿ ಇರುವ ಶಾಸನದಲ್ಲಿ ಆರಂಭದಲ್ಲಿಯೇ ಶ್ರೀ ಕಲಿದೇವರನ್ನು ಸ್ಮರಿಸುತ್ತಾ ಶಿವ ಸ್ತುತಿಯೊಂದಿಗೆ ಶಾಸನ ಆರಂಭವಾಗುತ್ತದೆ. ಕುಂತಲದೇಶದ ತುಂಗಭದ್ರ ದಕ್ಷಿಣದಲ್ಲಿ ಇಡೀ ನಾಡಿಗೆ ಹೆಸರನ್ನು ಪಡೆದ ಕುರುಗೋಡು ದುರ್ಗ ಪಟ್ಟಣವಾಗಿ ಬೆಳೆದು ನಿಂತಿರುವ ವರ್ಣನೆಯಿದೆ. ಇದು ಪಾಂಡ್ಯ, ಚೋಳ, ಗುರ್ಜುರ, ತೆಲುಗು ಭಾಷೆಯ ಆಧಿಪತ್ಯ ಹೊಂದಿರುವ ಸಾಮ್ರಾಟರಿಂದ ಬೆಳೆದು ನಿಂತದ್ದು ಇಡೀ ಭೂ ಲೋಕವೇ ಕೊಂಡಾಡುವ ಆಶಾಮಣಿ ಶಿವೈಕ ಚೂಡಾಮಣಿಯಾದ ರಾಚಮಲ್ಲನ ಪ್ರತಿಫಲದಿಂದ ಈ ಪಟ್ಟಣ ಬೆಳೆದಿದೆ. ಇದು ಭೋಗಾಪುರದ ಮಹಾಂಡಳೇಶ್ವರನಾದ ಸಿತಗರಗನ ಸಮಾಧಿಯಾದ ಸ್ಥಳವಾಗಿದೆ ಎಂದು ಮಹಾಮಂಡಳೇಶ್ವರನನ್ನು ಸ್ಮರಿಸಲಾಗಿದೆ. ಈ ನಾಡು ಇಷ್ಟೊಂದು ಪ್ರಸಿದ್ಧಿಗೆ ಬರಲು ಭೂಲೋಕದ ಒಡೆಯನಾದ ಶ್ರೀವೀರಕಲಿದೇವರ ಆಶ್ರಯ ಹಾಗೂ ಮುಂಮ್ಮುರಿ ದಂಡಗಳ ಮಹಿಮೆಯಿಂದ ರಾಚಮಲ್ಲದೇವರ ಸಿರಿಯನ್ನು ಹೆಚ್ಚಿಸಿದ ಪ್ರದೇಶವಾಗಿದೆ. ಈ ಪ್ರದೇಶಕ್ಕೆ ಮೂಲ ಆರ್ಥಿಕ ಪ್ರಾಶಸ್ತೆಯನ್ನು ತಂದು ಕೊಟ್ಟದ್ದು ಗವರೆಯವರಿಂದ. ಹಾಗೂ ಸಕಲ ವ್ಯವಹಾರಗಳಿಂದ ಪ್ರಸಿದ್ಧಿ ಪಡೆದಿದೆ. ನಯ ವಿನಯ ನವರತ್ನಗಳನ್ನು ತನ್ನ ವರ್ಗಗಳಲ್ಲಿ ಜೋಡಿಸಿಕೊಂಡು ಶರಣು ಎಂದವರಿಗೆ ಸಹಾಯವನ್ನು ಮಾಡುತ್ತಾ, ಯುದ್ಧ ಎಂದರೆ ಎದುರಿಸಬಲ್ಲ ಕೋಡಿಲಾಭವನ್ನು ಪಡೆದು ದೃಢವಾದ ಶಕ್ತಿಶಾಲಿಗಳ ಅಯ್ಯಾವೊಳೆಯವರು ದ್ವಾರಾವತೀ ಪುರಕ್ಕೆ ಕಾಣಿಕೆಕೊಟ್ಟ ಕುರುಗೋಡಿನ ಐನೂರ್ವರು ನೆರೆಯ ರಾಜ್ಯದವರಿಗೆ ವ್ಯವಹಾರದಲ್ಲಿ ನಾಚಿಕೆಯನ್ನು ಉಂಟುಮಾಡಬಲ್ಲ ಮುಂಮ್ಮುರಿ ದಂಡಗಳಲ್ಲಿ ಮಹಾನ್ ಶ್ರೇಷ್ಠ ಕಲ್ಲಿಸೆಟ್ಟಿಯು ಸದಾ ಪ್ರೀತಿಯಿಂದ ಕಾಣುವ ಬಣಂಜಿಗರಲ್ಲಿ ಸದಾ ಚೇತನವಾಗಿವರುವ ಕೇತಿಸೆಟ್ಟಿಯ ಜೊತೆ ಇರುವ ನಾಗಮಸೆಟ್ಟಿ, ಮಾಧವಸೆಟ್ಟಿ ಬೇಡಿಸೆಟ್ಟಿ ರುದ್ರಸೆಟ್ಟಿ, ಬೇಲಿಸೆಟ್ಟಿನಾಗಿ

ಸೆಟ್ಟಿಯ ಪತ್ನಿಯಾದ ಸುತರತ್ನಂಗುಣಿಯಾದ ಮಾಕಣಜ್ಜಿ ಹಾಗೂ ಕಲ್ಲಿಸೆಟ್ಟಿಯು ಬಣಜಿಗರಲ್ಲಿ ಬಿರುದಾಂಕಿತನಾದ ಕಲ್ಲಿಸೆಟ್ಟಿಯ ಗೋತ್ರ ಪವಿತ್ರವಾದದ್ದು ಕಲ್ಲಿದೇವರ ವರಪುತ್ರನಾದ, ಕೇತಾಂಬಿಕೆಯ ಪುತ್ರ ಕಲ್ಲಿದೇವ ಸೆಟ್ಟಿಯು ಇಡೀ ಭೂಲೋಕದಲ್ಲಿಯೇ ಆಡಿದ ಮಾತಿಗೆ ಹುಸಿಯಾಡದವ, ಸದಾ ಸೌಂದರ್ಯವಂತನು, ಧೈರ್ಯಶಾಲಿಯು, ಸದಾ ಸಹಾಯ ಮಾಡಬಲ್ಲ ಕಲ್ಲಿದೇವ ಸೆಟ್ಟಿಯನ್ನು ಹೆತ್ತ ಕೇತಾಂಬಿಕೆ ಧನ್ಯಳು, ಕಲ್ಲಿದೇವ ಸೆಟ್ಟಿಯು ವ್ಯಾಪಾರದಲ್ಲಿ, ವ್ಯವಸಾಯದಲ್ಲಿ ಮಹಾನ್ ಶ್ರೇಷ್ಠನು ಎಂದು ವರ್ಣಿಸಲಾಗಿದೆ. ಸಮಾಜದಲ್ಲಿ ಉನ್ನತ ಗೌರವ ಸ್ಥಾನಮಾನ ಹೊಂದಿರುವ ಮಹಾನ್ ಧರ್ಮಿಷ್ಠ ವ್ಯವಹಾರಿಯಾದ ಕಲ್ಲಿದೇವ ಸೆಟ್ಟಿಯು ಕುರುಗೋಡು ದಕ್ಷಿಣ ಭಾಗದಲ್ಲಿ ಮಹಾಕೂಟ ಪ್ರಸಾದವಾದ ದೇವಾಲಯವನ್ನು ಕಟ್ಟಿಸಿ ಅಲ್ಲಿ ಕಲ್ಲಿದೇವರನ್ನು ನಿಲ್ಲಿಸಿ, ಅಲ್ಲಿ ಕಲ್ಲಿದೇವರನ್ನು ಪ್ರತಿಷ್ಠಾಪಿಸಿ ಮಾಡಿದ ವಿಷಯ ಈ ಶಾಸನದಲ್ಲಿದೆ.[೫]

**ವರ್ತಕರ ದಾನ ಕಾರ್ಯಗಳು:** ಸಕ ವರ್ಷದ ೧೯೭೭ನೆಯ ಮನುಮಥ ಸಂವತ್ಸರದ ಪುಷ್ಯದಮಾವಸ್ಯೆ ಸೋಮವಾರ ಸೂರ್ಯಗ್ರಹಣ ಉತ್ತರಾಯಣ ಸಂಕ್ರಮಣದ ಪುಣ್ಯ ತಿಥಿಯಲ್ಲಿ ಮಹಾ ಮಂಡಲೇಶ್ವರ ರಾಜಮಲ್ಲದೇವನ ಕಾಲದಲ್ಲಿ ಕಲ್ಲಿದೇವರಿಗೆ ದಾನ ನೀಡಿರುವ ಅಂಶ ಈ ಶಾಸನದಲ್ಲಿ ಕಂಡುಬರುತ್ತದೆ. ಕಲ್ಲಿಸೆಟ್ಟಿ ಎಂಬ ವರ್ತಕ ಸಮುದಾಯದಲ್ಲಿಯೇ ಅತೀ ಶ್ರೇಷ್ಠ ಎಂದೆಲ್ಲ ವರ್ಣಣೆ ಇದೆ. ಇವನು ಕುರುಗೋಡು ತೆಂಕಣ ಭಾಗದಲ್ಲಿ ಮಹಾಕೂಟ ಪ್ರಸಾದ ದೇಗುಲವನ್ನು ಮಾಡಿಸಿದ್ದರ ಬಗ್ಗೆ ಉಲ್ಲೇಖವಿದೆ. ಹಾಗೆಯೇ ಕೆರೆಯನ್ನು, ಬಾವಿಯನ್ನು ಕಟ್ಟಿಸಿದ ಇವನೇ ಧನ್ಯ, ಇವನನ್ನು ದಾನದಲ್ಲಿ ಪೃಥ್ವೀವಲ್ಲಭಂ ಮಹಾರಾಜ ಎಂದು ಕರೆದಿದ್ದಾರೆ. ಇವನು ದಾನ ನೀಡುವಂತಹ ಸಂದರ್ಭದಲ್ಲಿ ಭೋಗಾವ ಶ್ರೀಪುರದ ಸಿತಗರಗಣ್ಣ, ಸಿಂದಗೋವಿಂದ, ರಾಚಮಲ್ಲದೇವ ಎಂಬುವ ಮುಂಮುರಿದಂಡುಗಳು ಹಾಗೂ ಅಯ್ಯಾಹೊಳೆಯ ಕಲ್ಲಿಸೆಟ್ಟಿ, ಬಣಜಿಗರ ಕೇತಿಸೆಟ್ಟಿ, ನಾಗಮಸೆಟ್ಟಿ, ಮಾಧವಸೆಟ್ಟಿ ರುದ್ರಸೆಟ್ಟಿ, ಚೀಲಿಸೆಟ್ಟಿ, ನಾಗಿಸೆಟ್ಟಿ, ಮಾರಿಸೆಟ್ಟಿ ಇನ್ನಿತರೇ ವರ್ತಕರು ಇಲ್ಲಿ ಸಾಕ್ಷಿಯಾಗಿದ್ದಾರೆ.[೬]

ಕಲ್ಲಿದೇವ ಸೆಟ್ಟಿಯು ವರ್ತಕರಲ್ಲಿಯೇ ಶ್ರೇಷ್ಠನು ಇವನ ಹೆಂಡತಿಯಾದ ಕೇತಾಂಬಿಕೆಯು ಕಲ್ಲಿದೇವ ಸೆಟ್ಟಿಯನ್ನು ಪಡೆದ ಭೂ ಲೋಕದಲ್ಲಿ ಇವಳೆ ಧನ್ಯಳು ಎಂದೆಲ್ಲಾ ವರ್ಣನೆ ಇದೆ. ಕಲ್ಲಿದೇವ ಸೆಟ್ಟಿಯು ನೀಡಿರುವ ಈ ಧಾನದಲ್ಲಿ ಇನ್ನಿತರೆ ವರ್ತಕ ಸಮುದಾಯದವರು ಇಲ್ಲಿ ಈ ದೇವಾಲಯಕ್ಕೆ ಧಾನ ನೀಡಿರುವ ಅಂಶ ತಿಳಿದು ಬರುತ್ತದೆ. ಕುರುಗೋಡು ಬಡಗಣದ ನೀರಹಳ್ಳದ ಗವರೆಯವರು ಕಲ್ಲಿದೇವರಿಗೆ ೨೨೫ ಕಂಬ ಭೂದಾನ ನೀಡಿದ್ದಾರೆ. ಬಳ್ಳಾರೆಯಜ್ಜ ಎಂಬುವವನು ೨೨೫ ಕಂಬ ಭೂಮಿಯನ್ನು ಸಿಂಗದೇವಿಯ ಹೊಲದ ಪಕ್ಕ ಇರುವ ಭೂದಾನ ಮಾಡಿದ್ದಾರೆ. ನಖರಂಗಳು ೩ ಸೊಳಸೆ ಭತ್ತವನ್ನು ಮುಂಮುರಿದಂಡಗಳು ನೀಡಿದ್ದಾರೆ. ಗಾಣಿಗರು ೩ ಗಾಣಗಳನ್ನು ದಾನ ನೀಡಿದ್ದಾರೆ. ತಂಬುಲಿಗ ಸಾಸಿರ್ವರು ದೇವರಿಗೆ ಹೇರೆಂಗೆಲೆ ೧೦೦, ಹೊರೆಗೆಲೆ ೫೦ ನೆರೆದಾವಲು ನಾಡಿನವರು ೧೦ ಕೋಣ, ೧೦ ಎತ್ತು, ೧೦ ಕತ್ತೆ, ೩೦ ಆಡು ದಾನ ನೀಡಿದ ಉಲ್ಲೇಖವಿದೆ.

ಒಟ್ಟಾರೆಯಾಗಿ ವರ್ತಕ ಸಮುದಾಯಗಳು ಪ್ರಾಚೀನ ಮತ್ತು ಮಧ್ಯಕಾಲೀನ ಸಮಾಜದಲ್ಲಿ ಕೇವಲ ತಮ್ಮ ಆರ್ಥಿಕ ಅಭಿವೃದ್ಧಿಯನ್ನು ಮಾಡದೇ, ಸಮಾಜ ಅಭಿವೃದ್ಧಿ ಕಾರ್ಯಗಳನ್ನೂ ಮಾಡಿದ್ದಾರೆ ಎಂಬುವುದಕ್ಕೆ ಕುರುಗೋಡು ಶಾಸನದಲ್ಲಿ ಉಲ್ಲೇಖಿತ ಮುಂಮುರಿದಂಡು, ನಖರ, ಗವರೆ, ಅಯ್ಯಾಹೊಳೆ ತಂಬುಲಿಗ ಸಾಸಿರ್ವರು, ಗಾಣಿಗರು, ಬಣಜಿಗರು ಈ ರೀತಿ ಅನೇಕ ವರ್ತಕ ಸಮುದಾಯಗಳು ಈ ಶಾಸನದಲ್ಲಿ ಉಲ್ಲೇಖಿತರಾಗಿದ್ದಾರೆ. ಅದರಲ್ಲಿ ಧಾನ ಶ್ರೇಷ್ಠನಾಗಿದ್ದ ಕಲ್ಲಿದೇವ ಸೆಟ್ಟಿಯ ಧಾನದ ಬಗ್ಗೆ ಈ ಶಾಸನ ತಿಳಿಸಿದ್ದು, ಇವನ ದಾನಕ್ಕೆ ಪೂರಕವಾಗಿ ಇನ್ನಿತರೆ ವರ್ತಕ ಸಮುದಾಯದವರು ತಮ್ಮ ಸಮುದಾಯದ ಅಸ್ತಿತ್ವದ ಅಂಶವಾಗಿ ಇನ್ನಿತರೆ ದಾನ ಕಾರ್ಯಗಳನ್ನು ಮಾಡಿರುವುದನ್ನು ಈ ಶಾಸನ ತಿಳಿಸುತ್ತದೆ.



## ಅಡಿಟಿಪ್ಪಣಿಗಳು

೧. ಚನ್ನಬಸವಯ್ಯ ಹಿರೇಮಠ, ೧೯೯೫, ಕುರುಗೋಡು ಸಿಂದರು, ಸಂಗಣ್ಣನವರು ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ, ಪುಟ ೨೧೯.
೨. ಅದೇ,. ಪುಟ ೨೨೦.
೩. ಬಾಲಸುಬ್ರಮಣ್ಯ, ೨೦೦೪, ಕುರುಗೋಡು:, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೬೧.
೪. ದೇವರಕೊಂಡಾರೆಡ್ಡಿ, (ಸಂ), ೧೯೯೫, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೯-೧೦.
೫ ಅದೇ., ಪುಟ ೯.
೬ ಅದೇ., ಪುಟ ೧೨.

# ಕಲ್ಯಾಣ ಚಾಳುಕ್ಯ ಮೂರನೆಯ ಸೋಮೇಶ್ವರನ ಧಾರ್ಮಿಕ ಶಾಸನಗಳು

ಡಿ.ಎಂ. ನಾಗರಾಜು*

ಆರನೆಯ ವಿಕ್ರಮಾದಿತ್ಯನ ಉತ್ತರಾಧಿಕಾರಿಯಾಗಿ ಅವನ ಎರಡನೆಯ ಮಗನಾದ ಸೋಮೇಶ್ವರನು ಚಾಲುಕ್ಯ ಸಿಂಹಾಸನವನ್ನು ಏರಿದನು. ಅವನ ಪಟ್ಟಾಭಿಷೇಕವು ಕ್ರಿ.ಶ. ೧೧೨೭ರ ಫೆಬ್ರವರಿ ೨೦ರಂದು ಜರುಗಿದಾಗ ಅರಸನ ಬಾಯಿ ಮಾತಿನ ಪ್ರಕಾರ ಪಸಾಯಿತ ಬಮ್ಮಣ್ಣನು ಜ್ಯೋತಿಷಿ ನನ್ನೆಯಭಟ್ಟನಿಗೆ ಕೊಳಗಂದಾಯವನ್ನು ವಸೂಲು ಮಾಡುವ ವಿಶೇಷ ಹಕ್ಕನ್ನು ಕರುಣಿಸಿದನೆಂದು ಪತನ್ ಚೆರುವಿನಲ್ಲಿ ದೊರೆತ ಶಾಸನದಲ್ಲಿ ತಿಳಿಸಲಾಗಿದೆ. ಶಿಕಾರಿಪುರದ ಶಾಸನವು ಮಾತ್ರ ೧೧೨೭ರ ಪ್ಲವಂಗನಾಮ ಸಂವತ್ಸರವು ಸೋಮೇಶ್ವರನ ಆಳ್ವಿಕೆಯ ಎರಡನೆಯ ವರ್ಷವೆಂದು ಸ್ಪಷ್ಟಪಡಿಸಿದೆ. ಆದ್ದರಿಂದ ಮೂರನೆಯ ಸೋಮೇಶ್ವರನು ತನ್ನ ತಂದೆಯು ೧೧೨೬ರಲ್ಲಿ ಮಡಿದ ಕೂಡಲೇ ರಾಜ್ಯಾಡಳಿತದ ಸೂತ್ರಗಳನ್ನು ವಹಿಸಿಕೊಂಡನೆಂದು, ಕೆಲವು ತಿಂಗಳುಗಳ ನಂತರ ಅಂದರೆ ೧೧೨೭ರಲ್ಲಿ ವಿದ್ಯುಕ್ತವಾಗಿ ಪಟ್ಟಾಭಿಷಿಕ್ತನಾದನೆಂದೂ ಹೇಳಬಹುದು.

ಮೂರನೆಯ ಸೋಮೇಶ್ವರನಿಗೆ 'ಭೂಲೋಕಮಲ್ಲ', 'ತ್ರಿಭುವನಮಲ್ಲ', 'ಸರ್ವಜ್ಞಭೂಪ' ಎಂಬ ಬಿರುದುಗಳಿದ್ದವು. ಅವುಗಳ ಪೈಕಿ 'ಭೂಲೋಕಮಲ್ಲ'ನೆಂಬುದು ಅವನ ಹೆಸರಿಗೆ ಹೆಚ್ಚಾಗಿ ಶಾಸನಗಳಲ್ಲಿ ಬಂದಿದೆ.

ಕಲ್ಯಾಣದ ಚಾಲುಕ್ಯರ ಆಳ್ವಿಕೆಯಲ್ಲಿ ಶೈವಧರ್ಮವು ತನ್ನ ಪರಾಕಾಷ್ಠೆಯನ್ನು ಮುಟ್ಟಿತೆಂದು ಹೇಳಬಹುದು. ಮೊದಲು ಪಾಶುಪತ ಪಂಥವು ಪ್ರಬಲವಾಯಿತು. ಅದರ ಸ್ಥಾಪಕನು ಲಕುಲೀಶನು, ಪಾಶುಪತ ಧರ್ಮದಲ್ಲಿ ಶಿವ ಅಥವಾ ಪರಮಶಿವನು ಅತ್ಯಂತ ಶ್ರೇಷ್ಠನಾದ ದೇವನೆಂದು ಪರಿಗಣಿಸಲ್ಪಟ್ಟನು. ಶೈವರ್ಧಮ ಶ್ರೀಸಾಮಾನ್ಯನನ್ನು ಮಾತ್ರವಲ್ಲದೆ, ರಾಜನಮೆತನದವರನ್ನು ತನ್ನಡೆಗೆ ಸೆಳೆದುಕೊಂಡಿತು. ಚಾಲುಕ್ಯರ ಕಾಲದ ಅರಸರೂ, ಶ್ರೀಮಂತರೂ ದೇವಾಲಯಗಳಿಗೆ ಪುದಿವಟ್ಟುಗಳನ್ನು ನೀಡುವುದು ಪುಣ್ಯ ಕಾರ್ಯವೆಂದು ಭಾವಿಸಿದ್ದರು.

ಕಲ್ಯಾಣವನ್ನಾಳಿದ ಚಾಲುಕ್ಯ ಅರಸರನೇಕರು ಶೈವಧರ್ಮವನ್ನು ಅವಲಂಬಿಸಿದ್ದರೂ, ಜೈನಧರ್ಮಕ್ಕೂ ಹೃತ್ಪೂರ್ವಕವಾಗಿ ಪೋಷಕರಾಗಿದ್ದರು. ಚಾಲುಕ್ಯರ ಕಾಲದ ಧಾರ್ಮಿಕ ವೈಶಿಷ್ಟ್ಯವೆಂದರೆ ಅನ್ಯಧರ್ಮ ಸಹಿಷ್ಣುತೆ ಹಾಗೂ ಒಬ್ಬನೇ ವ್ಯಕ್ತಿಯಲ್ಲಿ ವಿವಿಧ ಧರ್ಮಗಳ ಬಗ್ಗೆ ಶ್ರದ್ಧಾಭಕ್ತಿಯುಳ್ಳವರಾಗಿದ್ದರು.

ಸೋಮೇಶ್ವರನ ಆಳ್ವಿಕೆಯಲ್ಲಿ ಶಾಂತಿ ನೆಲೆಸಿದ್ದಿತು. ಕ್ರಿ.ಶ. ೧೧೨೯ರಲ್ಲಿ ಮೂರನೆಯ ಸೋಮೇಶ್ವರನು ರಚಿಸಿದ 'ಮಾನಸೋಲ್ಲಾಸ' ಅಥವಾ 'ಅಭಿಲಷಿತಾರ್ಥ ಚಿಂತಾಮಣಿ' ಎಂಬ ಪಾಂಡಿತ್ಯಪೂರ್ಣ ಗ್ರಂಥವು ಅವನ ಹೆಸರನ್ನು ಚಿರಸ್ಥಾಯಿಯಾಗಿ ಮಾಡಿದೆ. ಸೋಮೇಶ್ವರನು ಕಾಳಾಮುಖ ಪಂಥಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ಕೊಟ್ಟನು.

ಸೋಮೇಶ್ವರ (ಭೂಲೋಕಮಲ್ಲ) ೧೨ ವರ್ಷಗಳ ಆಳ್ವಿಕೆಯಲ್ಲಿ ಶಾಸನಗಳಲ್ಲಿ ಬರುವ ಧಾರ್ಮಿಕ ಶಾಸನಗಳನ್ನು ಗಮನಿಸಿದಾಗ ಕ್ರಿ.ಶ. ೧೧೨೭ರ ರಾಗಿಮಾಸಲವಾಡ ಶಾಸನದಲ್ಲಿ ಪ್ರಧಾನದಂಡ್ಣನಾಯಕ ಇಂದಿರಾಣ್ಯಗಳ ಅನುಮತಿಯ ಮೇರೆಗೆ ಪೆರ್ಗ್ಗಡೆ ವುಜ್ಜಭಟ್ಟನು ಶ್ರೀರತ್ನಭೂಷಣ ವಿನಾಯಕದೇವರ ಪ್ರತಿಷ್ಠೆ ಮಾಡಿಸಿ, ಸಭಾಮಂಟಪ, ಬಾವಿಯಂ ಮಾಡಿಸಿ ದತ್ತಿಯಿಂದ ೪ ಪಣಗಳನ್ನು ದೇವರ ಸೇವೆಗೆ ಮಾಡಿಸಿದ ದಾಖಲೆ ಹಾಗೂ ಇದೇ ದೇವರಿಗೆ ದಂಡ್ಣನಾಯಕ ಚೋಳಾಣ್ಡರು ನೊಳಂಬವಾಡಿ ೩೨,೦೦೦ ಆಳುತ್ತಿರುವಾಗ ೨ ಪಣ ದಾನ ನೀಡಿದ ವಿವರವಿದೆ. ಇದೇ ಕಾಲದ ಅಸುಂಡಿ ಶಾಸನ ಬಮ್ಮಗಾವುಣ್ಡ ಹಶುಣ್ಡಿಯ ಉರ್ಗಾವುಂಡನು ಶ್ರೀಕಲಿದೇವಸ್ವಾಮಿ ಪ್ರತಿಷ್ಠಾಪಿಸಿ ಅಂಗಭೋಗಕ್ಕಂ ಪೂಜೆ ಪುನಸ್ಕಾರಕ್ಕೆ ಗನ್ಧಧೂಪನಿವೇದ್ಯಕ್ಕೆ ಭೂಮಿದಾನ ನೀಡಿ ಈ ದಾನವನ್ನು ಬ್ರಹ್ಮಸಿಂಗಿಪಂಡಿತನಿಗೆ ಒಪ್ಪಿಸಿದ ದಾಖಲೆಯಿದೆ. ಕಡಲೆವಾಡ ಶಾಸನದಲ್ಲಿ ರಾಜನು ಜಯನ್ತಿಪುರದಲ್ಲಿ ಆಳುತ್ತಿರುವಾಗ ಕಡಲೆವಾಡದ ಸ್ವಯಂಭು ಸೋಮನಾಥ ದೇವಾಲಯಕ್ಕೆ ಭೇಟಿ ನೀಡಿ ಆಳಂದೆ–೧೦೦೦ ಪ್ರಾಂತ್ಯದಲ್ಲಿರುವ ಬಾಗವಾಡಿ–೨೦ರ ಬಳಿಯ ಬಾಡಂಹಿಂಚಗೇರಿಯ ಮೇಲಾಳ್ಕೆಯಲ್ಲಿ ಶ್ರೀಮತು

* # ೯೩೭, 'ರಾಜಗೃಹ', ೨೫ನೇ ಮುಖ್ಯರಸ್ತೆ, ೨ನೇ ಹಂತ, ಜೆ.ಪಿ. ನಗರ, ಮೈಸೂರು–೫೭೦೦೩೧.

ಸೋಮನಾಥದೇವರ ಅಂಗರಂಗಭೋಗ ಧೂಪದೀಪ ನೇವೈದ್ಯಕ್ಕೆ ಕೊಟ್ಟು ಗಂಗರಾಸಿ–ದೇವರ ಕಾಲಂಕರ್ಚ್ಚಿ ಧಾರಾಪೂರ್ವಕಂ ಮಾಡಿಕೊಟ್ಟರು. ಮಾವಳ್ಳಿ ಶಾಸನದಲ್ಲಿ ಪೆರ್ಗ್ಗಡೆ ಬಮ್ಮಚಯ್ಯ ಪಾನುಂಗಲ್ಲು ವಡ್ಡವ್ಯವಹಾರಿ ಬಂದುವರ್ಮಯ್ಯ ಬಸದಿ ಕಟ್ಟಿಸಿ ಪೂಜೆಗೋಸ್ಕರ ಭೂಮಿ ದಾನ ನೀಡಿದ ವಿವರ ಈ ದಾನವನ್ನು ವಾರಿಸೀಣಪಂಡಿತನಿಗೆ ಒಪ್ಪಿಸಿದ ದಾಖಲೆ.

ಕ್ರಿ.ಶ. ೧೧೨೮ರ ರಾಗಿಮಾಸಲವಾಡಿ ಶಾಸನದಲ್ಲಿ ರತ್ನಭೂಷಣ ವಿನಾಯಕ ದೇವರಿಗೆ ಹೆರ್ಗ್ಗಡೆವಜಿಭಟ್ಟಯ್ಯ ಮಹಾಪ್ರಧಾನ ಇಂದ್ರಭಟ್ಟಯನ ಆದೇಶದ ಮೇರೆಗೆ ಪ್ರತಿ ತಿಂಗಳು ೨ ಪಣಗಳು ವಡ್ಡರಾವುಳ ತೆರಿಗೆಗಳಿಂದ ದಾನ ನೀಡಿದ ವಿವರವಿದೆ. ಇದೇ ಕಾಲದ ಇಂಗಳೇಶ್ವರ ಶಾಸನದಲ್ಲಿ ಮಹಾಮಂಡಳೇಶ್ವರ ಹೆಮ್ಮಾಡಿಯರಸರು ಕಳಚೂರಿ ಕುಟುಂಬದವನು ನೀಲಕಂಠದೇವರ ಪೂಜೆ ನೈವೇದ್ಯಗೋಸ್ಕರ ಭೂಮಿ, ಎಣ್ಣೆಗಾಣಗಳನ್ನು ದಾನ ನೀಡಿದ ದಾಖಲೆ ಹಾಗೂ ನೀಲಕಂಠನಾಯಕ ನೀಲಕಂಠ ದೇವಾಲಯ ಕಟ್ಟಿಸಿ ದೇವತಾಪೂಜೆರಂಗಭೋಗಕ್ಕೆ ನಿವೇದ್ಯಕಂ, ಪುರಾಣ ಖಂಡಿಕ ಚೈತ್ರ ಪವಿತ್ರ ನಿತ್ಯಕ್ಕೆ ಧರ್ಮವಾಗಿ ಧಾರಾಪೂರ್ವಕಂ ಮಾಡಿದ ವಿಷಯವಿದೆ. ಲಕ್ಷ್ಮೇಶ್ವರ ಶಾಸನದಲ್ಲಿ ಮಹಾಮಣ್ಡಳೇಶ್ವರ ಜಯಕೇಸಿದೇವರು ರಾಜಧಾನಿ ಪಟ್ಟಣಪುಲಿಗೆಱೆಯ ಶ್ರೀಸ್ವಯಂಭುದಕ್ಷಿಣ–ಸೋಮನಾಥದೇವರಿಗೆ ಹೊಂದಿಕೊಂಡಿರುವ ವಿದ್ಯಾಭ್ಯಾಸದ ಶಾಲೆಗೆ (ಘಳಿಗೆ) ಭೂಮಿ ದಾನ ನೀಡಿದೆ.

ಕ್ರಿ.ಶ. ೧೧೨೯ರ ಕಾಮಧೇನು ಶಾಸನದಲ್ಲಿ ಸಾಸಲಶ್ರೀಸ್ವಯಂಭು ಶ್ರೀ ಕಲಿದೇವಸ್ವಾಮಿ ದೇವರ್ಗ್ಗೆ ಪೂಜೆ, ನಂನ್ದಾದೀವಿಗೆಗೆ ಕದಂಬ ಮನೆತನದ ಮಹಾಮಂಡಳೇಶ್ವರ ಜಯಕೇಶಿದೇವ ಕೊಂಕಣ–೯೦೦ ಮತ್ತು ಫಲಸಿಗೆ–೧೨,೦೦೦ ಆಳುತ್ತಿರುವಾಗ ಹುಲಿವರಮಲ್ಲಸೆಟ್ಟಿ ಭೂಮಿ ಮತ್ತು ಹಣ ದಾನ ನೀಡಿದ್ದಾನೆ. ನಾರಾಯಣಪುರ ಶಾಸನದಲ್ಲಿ ನಾರಾಯಣಪುರದ ಮೂಲಸ್ಥಾನದೇವರ ವಿವಿಧ ಪೂಜೆಗೋಸ್ಕರ ಮಹಾಮಂಡಳೇಶ್ವರ ಪೆರಮಾಡಿಯರಸನು ವ್ಯತಿಪಾತ ಸಂಕ್ರಾನ್ತಿಯ ಸಂದರ್ಭದಲ್ಲಿ ಒಂದು ಮನೆನಿವೇಶನ ದಾನ ನೀಡಿದ್ದಾನೆ. ಕುನಕನೂರು ಶಾಸನದಲ್ಲಿ ಭೀಮದೇವ ಮತ್ತು ಮನ್ನೆಯ ಮಾಚರಸ ಮಗ ಮಹಾಮಂಡಳೇಶ್ವರ ಸಕರದೇವ ಭೋಳಮಹಾರಾಜರು ನಱವಾಡಿ–೩೦೦ ಪ್ರಾಂತ್ಯದಲ್ಲಿರುವ ಪಾಳೆ ಎಪ್ಪತ್ತರಲ್ಲಿ ಹೊಂದಿಕೊಂಡಿರುವ ಘಟಿಕಸ್ಥಾನ, ರಾಮೇಶ್ವರ ದೇವರ ಅಂಗಭೋಗಕ್ಕೆ ಪಾಳ ಪವಿತ್ರ ದೇಶಿವಾಸಿಗಳ ಅನ್ನದಾನಕ್ಕೆ ದಾನ ನೀಡಿದ ದಾಖಲೆಯಿದೆ. ಬಿಜಾಪುರ ಶಾಸನದಲ್ಲಿ ದಂಡನಾಯಕ ವಯಿಜನಾಥಯ್ಯ ಪ್ರಮುಖ ಕರಣಂಗಟುಂ ಮಂನೆಯ ಸೋವರಸರು ಕಾಳಮರಸನು ನಾಡಪ್ರಭುಗಾವುಂಡ ಮುಖ್ಯವಾಗಿ ಸಿನ್ದಿಗೆಯ ಶ್ರೀಮೂಲನಸ್ತಾನದೇವರ ರಂಗಭೋಗ, ಪಾತ್ರ ಪಾವುಟಕ್ಕಂ ಪೊನ್ನದೇವರ ನೈವೇದ್ಯ ಪೂಜೆಗೋಸ್ಕರ ದಾನ ನೀಡಿದ ವಿವರವಿದೆ. ಇದೇ ಕಾಲದ ಬೆಳ್ಳಿಗಾಮೆ ಶಾಸನದಲ್ಲಿ "ಹರಿಹರಕಮುಲಾಸನವೀತರಾಗ ಬೌದ್ಧಲಯಂಗಳಲಿಂದಿನಮುಸುಂಧರೆಗೆಸವ ಪಂಚಶರದಂತಿದೆ ಪಂಚಮಠಗಳೆಸೆವವು ಪಟ್ಟಣದೊಳೆ" ಎಂಬ ವರ್ಣನೆ ಇದೆ. ಶಿಕಾರಿಪರು ಶಾಸನದಲ್ಲಿ ಸೋಮೇಶ್ವರನು ಬನವಾಸಿಯ ಹುಲ್ಲಿನ ತೀರ್ಥಕ್ಕೆ ಬಂದಿದ್ದಾಗ ಬಳ್ಳಿಗಾವೆಯ ಕಾಳಾಮುಖ ದೇವಾಲಯಕ್ಕೆ ಕದಂಬ ಮಂಡಲೇಶ್ವರನು ನೀಡಿದ ದಾನಶಾಸನಕ್ಕೆ ತನ್ನ ಸಮ್ಮತಿಯನ್ನು ಕೊಟ್ಟನೆಂದು ತಿಳಿಸುತ್ತದೆ. ಅಸಟಕಟ್ಟೆ ಶಾಸನದಲ್ಲಿ ಸಿಂದವಾಡಿಸಾಯಿರದೊಟಿಗಣ ತಂಮಾಜ್ಜಿ ಸಿಂದಪೊಟಲಿಮೆಯನ ಕೇಸಿಯಣನು ಅಜ್ಜಿಮಯನ ಕೇತಗಾವುಂಡನು ಮಾಚಗಾವುಂಡನು ಚೊಕ್ಕಿಸೆಟ್ಟಿಯಂ ಕೂಡಿ ಮಾಡಿಸಿದ ಸೋಮೇಶ್ವರದೇವರ ಪೂಜೆ ಪುನಸ್ಕಾರ, ನಂದಾದೀವಿಗೆಗೆ, ನಿವೇದ್ಯಕ್ಕಂ ಖಣ್ಡಸ್ಪುಟಿತ ಜೀರ್ಣೋದ್ಧಾರಕ್ಕೆ ಭೂಮಿ ದಾನ ನೀಡಿದ ದಾಖಲೆಯಿದೆ.

ಕ್ರಿ.ಶ. ೧೧೩೧ರ ಬೈಲೂರು ಶಾಸನದಲ್ಲಿ ಮಹಾಮಣ್ಡಳೇಶ್ವರ ಬಳ್ಳಾರೆಯ ಬೀವರಸರು ಸುಖಸುಂಕದಾವಿನೋದದಿಂದ ಆಳುತ್ತಿರುವಾಗ ಹಟ್ಟಣದ ಬೀರಗವುಡ ೨ ಮತ್ತರು ಭೂಮಿ ದಾನ ನೀಡಿ ಶ್ರೀ ಮಲ್ಲಿಕಾರ್ಜುನ ದೇವರಿಗೆ ಈ ದಾನವನ್ನು ದೇವರಾಸಿಪಂಡಿತರಿಗೆ ಒಪ್ಪಿಸಿದ ವಿವರ. ಇದೇ ಕಾಲದ ಅಡವಿದೇವುಲಪಲ್ಲಿ ಶಾಸನದಲ್ಲಿ ಕೃಷ್ಣನದಿಯ ದಂಡೆಯಲ್ಲಿರುವ ಬೌದ್ಧಮ ಎಂದು ಕರೆಯುವ ಸ್ಥಳದಲ್ಲಿ ರಮಾರಮಣದೇವರ ಪ್ರತಿಷ್ಠಾಪಿಸಲು ಮಹಾಮಂಡಳೇಶ್ವರ ಕಂದೂರಿ ತೊಂಡಯ ಚೋಡ ಕೊಡುರಿಪುರವರಾಧೀಶ್ವರ ಮತ್ತು ಇವನ ಮಂತ್ರಿ ಮೇಡಮನ ಮಗ ಗೋಪತಿ ೨ ಖಂಡುಗಭೂಮಿ ದೇವರ ದೀಪಾರಾಧನೆಗೆ ದಾನ ನೀಡಿದ್ದಾನೆ.

ಕ್ರಿ.ಶ. ೧೧೩೨ರ ಕರಕಂತಪುರಶಾಸನದಲ್ಲಿ ಶ್ರೀಮನ್ಮಹಾಮಣ್ಡಳೇಶ್ವರ ಬಾಚರಸರು ಶ್ರೀ ಮದ್ರಾಜಧಾನಿ ತುಂಬಳ ಸ್ವಯಂಭುಕಱೆಕಂಠದೇವರ ರಂಗಭೋಗಕ್ಕಂ ನಿತ್ಯ ನೈವೇದ್ಯಕ್ಕೆ ನಂದಾದೀವಿಗೆಗಂ ವಾಚಾರ್ಯ್ಯರುಚಂದ್ರಮೌಳಿಪಂಡಿತರು ವಾಮದೇವಪಂಡಿತರಿಗೆ ಸರ್ವನಮಸ್ಯವಾಗಿ ಧಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ. ಇದೇ ಕಾಲದ ಲಕ್ಷ್ಮೇಶ್ವರ ಶಾಸನದಲ್ಲಿ ಇಂದ್ರಕೀರ್ತಿಪಂಡಿತಾಚಾರ್ಯ್ಯ ಮಹಾಸ್ತಾನದ ಗೂಗ್ಗಿಯಬಸದಿ, ಪೆರ್ಗ್ಗಡೆ ಮಲ್ಲಯಣದೇವಪುತ್ರರು ಮತ್ತು ಅರುವತ್ತುಒಕ್ಕಲು ಲಕ್ಕಿಸೆಟ್ಟಿಯ ಮುಖಂಡ ಮನೆ ಕಟ್ಟಿ ದೇವಸ್ಥಾನದ ನಿವೇಶನದಲ್ಲಿ ಬಸದಿಗೆ ಭೂಮಿ ದಾನ ನೀಡಿದ್ದಾನೆ.

ಕ್ರಿ.ಶ. ೧೧೩೩ರ ಮಲಘಾಣಶಾಸನದಲ್ಲಿ ಮಲ್ಲಗಾಣದ ಶ್ರೀಸ್ವಯಂಭುದೇವರ ರಂಗಭೋಗಕ್ಕೆ, ನೈವೇದ್ಯಕಂ ಮಹಾಮಂಡಳೇಶ್ವರ ಕುಮಾರ ಸೋಮರಸರು ಸಿಲಾರವಂಶಸ್ಥ, ತನ್ನ ತಂದೆಯ ಅಭಿವೃದ್ಧಿಗೋಸ್ಕರ ಭೂಮಿ ದಾನ ನೀಡಿದ್ದಾನೆ.

ಕ್ರಿ.ಶ. ೧೧೩೪ರ ಕೊಲಿಮಿಗುಂಡಲ ಶಾಸನದಲ್ಲಿ ಗ್ರಾಮದ ಮುಖಂಡ ಪ್ರಭುಮುಪ್ಪಿರತಿ ಕೇಶವದೇವರ ಪ್ರತಿಷ್ಠಾಪಿಸಿ ಹೂವಿನ ತೋಟ, ಎಣ್ಣೆಗಾಣ, ಪೂಜೆ ನೈವೇದ್ಯಗೋಸ್ಕರ ೨ ಮತ್ತರು ಭೂಮಿದಾನ ನೀಡಿದ ವಿವರವಿದೆ. ಇದೇ ಕಾಲದ ಮಣ್ಣೂರು ಶಾಸನದಲ್ಲಿ ಸ್ವಯಂಭು ಭೀಮೇಶ್ವರ ದೇವರಿಗೆ ಗಾವುಂಡರು, ದಂಡನಾಯಕ ಮತ್ತು ಮಣಿಯಾರು ಪ್ರಭುಗಳು ಭೂಮಿ ಮತ್ತು ನಿವೇಶನ ದಾನ ನೀಡಿದ್ದಾರೆ. ರಾಮದುರ್ಗ ಶಾಸನದಲ್ಲಿ ಮಹಾಮಂಡಳೇಶ್ವರ ಇರುಂಗೋಳ ಚೋಳಮಹಾರಾಜರ ಆದೇಶದ ಮೇರೆಗೆ ಮಹಾಪ್ರಧಾನ ಗರುಡಸೆಟ್ಟಿಯು ಭೀಮೇಶ್ವರ ದೇವರಿಗೆ ೬ ಮತ್ತರು ಭೂಮಿ, ೧ ಹೂವಿತೋಟ, ೧ ಎಣ್ಣೆಗಾಣ ಮತ್ತು ನಿವೇಶನ ದೇವರ ಸೇವೆಗೋಸ್ಕರ ಬಾಪುಸೆಟ್ಟಿ ಮಗ ಭೀವಿಸೆಟ್ಟಿ ಮತ್ತು ಬಮ್ಮಕವ್ವೆ ದಾನ ನೀಡಿದ್ದಾರೆ. ದೇವಗೇರಿ ಶಾಸನದಲ್ಲಿ ಖೇಚರಪಲ ಕಲಿಯಮರಸ ಬಸವೂರು-೧೪೦ರ ರಾಜ್ಯಪಾಲ ಕಣಕಣೇಶ್ವರ ದೇವರಿಗೆ ಭೂಮಿದಾನ ನೀಡಿದ್ದಾರೆ. ನಾಡಬುಟ್ ಶಾಸನದಲ್ಲಿ ಪ್ರಭುಚಂಡಿಮರಸರು ಶ್ರೀ ಚಂಡೇಶ್ವರದೇವರ ಪ್ರತಿಷ್ಠೆ ಮಾಡಿ ಆ ದೇವರಿಗೆ ಖಂಡಸ್ಫುಟಿತ ಜೀರ್ಣೋದ್ಧಾರ, ಪೂಜೆ ಪುನಸ್ಕಾರ ನೈವೇದ್ಯಕ್ಕೆ ಸರ್ವನಮಸ್ಯವಾಗಿ ಧಾರಾಪೂರ್ವಕಂ ಮಾಡಿ ಬಿಟ್ಟ ಮತ್ತರು ೯, ಗಾಣ ೧, ತೋಟಮತ್ತರು-೧, ದೇವಾಲ್ಯಾಯದ ಪಡುವಲು ೧೦ ಕೈ ಅಗಲ, ನೀಳ ೧೫, ೨ ನಿವೇಶನಗಳನ್ನು ನಾಡುಮುಂಮುರಿದಡಂಗಳು ಬಿಟ್ಟರು. ರಾಮದುರ್ಗದ ಶಾಸನದಲ್ಲಿ ಸೌಧರೆಯ ಗರುಡಸೆಟ್ಟಿ ಆಳುತ್ತಿರುವಾಗ ಗೊನನಾಯಕ ಮಾಚಿಕವ್ವನ ಬೆಟ್ಟದ ಕಲಿದೇವರ ಪ್ರತಿಷ್ಠೆ ಮಾಡಿ ಹೆನುಕನಹಾಳ ಮಲ್ಲಪಂಡಿತರ್ಗ್ಗೆ ಧಾರಾಪೂರ್ವಕಂ ಮಾಡಿಕೊಡಲು ಶ್ರೀಮತು ಸೌದೊರೆ ಗರಡುಸೆಟ್ಟಿಯರು ಭೈರವ ಭಗವತಿಯ ಪ್ರತಿಷ್ಠೆ ಮಾಡಿ ಕಲಿದೇವರ ಪೂಜೆ ಪುನಸ್ಕಾರಕ್ಕೆ ಊರಿಂ ದೋಂಣಿಯಂ ಬಡಗಲು ಆಱುವತ್ತು ಗೇಣ ಘಳಿಯ ಬಿಟ್ಟ ಮತ್ತರು ೪, ಗಾಣ ೨, ನಿವೇಶನ ೧, ಪೂದೋಟ ೧ ಬಿಟ್ಟು ದೇವರ ಪ್ರತಿಷ್ಠೆಯಂ ಮಾಡಿಸಿ ಈ ದಾನವನ್ನು ಮಲ್ಲಿಪಂಡಿತರರಾಚಾರ್ಯ್ಯರಿಗೆ ಧಾರಾಪೂರ್ವಕಂ ಮಾಡಿ ಕೊಟ್ಟ ವಿವರವಿದೆ. ಮುಕುಂದಶಾಸನದಲ್ಲಿ ಪೆರ್ಗ್ಗಡೆ ಎಂಬುವನು ಕೇಶವದೇವರ ಪ್ರತಿಷ್ಠಾಪಿಸಿ ದೇವಾಲಯಕ್ಕೆ ಖಣ್ಡಸ್ಫುಟಿತ ಜೀರ್ಣೋದ್ಧಾರ ಮಾಡಿಸಿ ಅದರ ನಿರ್ವಹಣೆಗೋಸ್ಕರ ನಂದಾದೀವಿಗೆಗೆ, ಪೂಜಾರಿಗೆ, ನಿವೇಶನ ಇತರ ಭೂಮಿ ದಾನ ನೀಡಿದ ವಿವರ. ಈ ದಾನವನ್ನು ಬಾಚರಸನು ಭೂಮಿ ದಾನ ನೀಡಿದ ವಿವರ. ಪೆದ್ದತುಂಬಲಮಶಾಸನದ ಮಹಾಮಣ್ಡಳೇಶ್ವರ ತ್ರೈಲೋಕಮಲ್ಲಿದೇವ ಮಹಾರಾಜ ಸಿಂದವಾಡಿ-೧೦೦೦ ಆಳುತ್ತಿರುವಾಗ ತುಂಬಲಬೀಡಿನ ಪಂಚಲಿಂಗದೇವರ ದೇವಾಲಯದ ರಂಗಭೋಗಕ್ಕೆ ನಿವೇಶನ, ಖಣ್ಡಸ್ಫುಟಿತ ಜೀರ್ಣೋದ್ಧಾರಕ್ಕೆ ಭೂಮಿ, ನಿವೇಶನ, ಎಣ್ಣೆಗಾಣ ೨ ಮತ್ತು ಹಣ ದತ್ತಿ ನೀಡಿದ ವಿವರವಿದೆ.

ಕ್ರಿ.ಶ. ೧೧೩೫ರ ಸಿದ್ಧಾಪುರ ಶಾಸನದಲ್ಲಿ ಪೊಸವೊಳಲ ಶ್ರೀಮೂಲಸ್ತಾನದೇವರಿಗೆ ಎರಡು ಪುಳ್ಳ[ರಡಿ]ಯ ತನ್ನ ವ್ರಿತ್ತಿಯಾಳಗೆ ಮೂಲಿಗಹಳ್ಳಗಾವುಂಡ ದೇವರಾಸಿಪಂಡಿತನ ಮಗ ನಾಗರಾಸಿಪಂಡಿತನ ಕಾಲಂಕರ್ಚ್ಚಿ ಧಾರಾಪೂರ್ವಕಂ ಮಾಡಿ ಕೊಟ್ಟ ವಿವರವಿದೆ. ಉಬಚೇರಲ ಶಾಸನದಲ್ಲಿ ಜಕ್ಕೇಶ್ವರ ದೇವರಿಗೆ ಮತ್ತು ಕೇಶವ ದೇವರಿಗೆ ರಂಗಭೋಗ, ಪೂಜೆ ಪುನಸ್ಕಾರ ನಿವೇದ್ಯಕ್ಕೆ ಕೇತುಮಸಟ್ಟಿ, ಮಲ್ಲಯಸೆಟ್ಟಿ ಮತ್ತು ದೇಸಿಮನ್ತಮನವಾಳರು ೫೦೦ರ ಎಲೆಯನ್ನು ಜಕ್ಕೇಶ್ವರ ಸೇವೆಗೆ ಬಿಟ್ಟ ದಾನ.

ಕ್ರಿ.ಶ. ೧೧೩೬ರ ಗದಗ ಶಾಸನದಲ್ಲಿ ಕಾಲಿಮಯಗೇರಿಯ ಹೃಷಿಕೇಶ ದೇವರಂಗಭೋಗಕ್ಕೆಂದು ನನ್ದಾದೀವಿಗೆಗೆ ಬಿಟ್ಟ ಗದ್ಯಾಣ-೧ ದೇವರಭಂಡಾರ ಗದ್ಯಾಣ ೧೦ ಬಾಚೆಯದೇವನು ದಾನ ನೀಡಿದ ವಿವರ ಹಾಗೂ ಕಲಿದೇವನಾಯಕ ಕಾಳಿಮಯ್ಯಗೇರಿಯ ಕೇಶವದೇವರರಂಗಭೋಗಕ್ಕೆ ಮಹಣನ ಮದವಳಿಗೆ ಮಾಳಿಯಕ್ಕೆ ಗದ್ಯಾಣ ೧ ಬಿಟ್ಟ ವಿವರ ಹಾಗೂ ಇದೇ ದೇವರಿಗೆ ಮಧುವಣ್ಣ ಸೋವಿಮಯ್ಯನ ಮಗ ಎಂಬುವನು ಗದ್ಯಾಣ ದಾನ ನೀಡಿದ ವಿವರವಿದೆ. ಮಾತೂರು ಶಾಸನದಲ್ಲಿ ಕೇಶವಭಟ್ಟನು ಕೇಶವದೇವರ ಪ್ರತಿಷ್ಠಾಪಿಸಿ ಮಂಡಲಿಕಗುನ್ದಯ್ಯ ಇವನು ಒಬ್ಬ ಅಧಿಕಾರಿ, ದೇವರ ನೈವೇದ್ಯ ಪೂಜೆಗೋಸ್ಕರ ಉತ್ತರಾಯಣ ಸಂಕ್ರಮಣದಲ್ಲಿ ಅಳತೆಯ ಕೋಲ ದಾಘಡಮರಟೂರು ಕೋಲಿನಲ್ಲಿ ಭೂಮಿ ದಾನ ನೀಡಿದ ದಾಖಲೆಯಿದೆ.

ಕ್ರಿ.ಶ. ೧೧೩೭ರ ಬಂಕಾಪುರ ಶಾಸನದಲ್ಲಿ ಬಂಕಾಪುರದ ಶ್ರೀನಗರೇಶ್ವರ ದೇವರಿಗೆ ಬಸವಗೌಂಡ ಮತ್ತು ಇತರರು ಭೂಮಿದಾನ ನೀಡಿದ್ದಾರೆ. ಬಂಕಾಪುರದ ಬಂಮ್ಮಗಾವುಂಡ ಶ್ರೀಮತುಬಂಕಾಪುರದ ಶ್ರೀನಗರೇಶ್ವರ ದೇವರಿಗೆ ಪೂಜೆಗೋಸ್ಕರ ದಾನ ನೀಡಿ ಚಂದ್ರಭೂಷಣ ಪಂಡಿತದೇವರಿಗೆ ಒಪ್ಪಿಸಿದ ವಿಷಯವಿದೆ. ಗೋರೆಚಿಂಚನಹಳ್ಳಿ ಶಾಸನದಲ್ಲಿ ಉತ್ತರೇಶ್ವರದೇವರ

ದೇವಾಲಯದ ಜೀರ್ಣೋದ್ಧಾರ ಮಾಡಿ ಚಲ್ಲಾಂಕೆಯ ಚಿಕ್ಕಉತ್ತರೇಶ್ವರ ಪ್ರತಿನಾಮ ಮಾಡಿ ಚಿಂಚವಳ್ಳಿ ಸೀಮೆಯಲ್ಲಿ ಹೊಂದಿಕೊಂಡಿರುವ ೪೦೦ ಮತ್ತರು ಭೂಮಿ, ಪೂಜೆ ನಂನ್ದಾದೀವಿಗೆಗೆ ನಿರ್ವಹಣೆಗೆ ಬೇರೆ ಸೇವೆಗಳಿಗೆ ಮತ್ತು ವಿಮಲಾದಿತ್ಯ ಪಂಡಿತ ಉತ್ತರೇಶ್ವರ ದೇವಾಲಯದ ಆಚಾರ್ಯ್ಯನು ಎಣ್ಣೆಗಾಣ ತೋಟವನ್ನು ದಾನ ನೀಡಿದ್ದಾನೆ. ಕೂನಚಗೆರೆ ಶಾಸನದಲ್ಲಿ ಫಾಣಿ-ಕುಲಿ ಮಹಾಮಂಡಳೇಶ್ವರ ರಾಚಮಲ್ಲರಸ ಸ್ವಯಂಭುಕಲಿದೇವರಿಗೆ, ೧೦೦ ಎಲೆ ತೋಟ, ೫೦ ಅಡಿಕೆ ತೋಟ ಇತರ ದಾನ ನೀಡಿದ ವಿವರವಿದೆ.

ಕ್ರಿ.ಶ. ೧೧೩೪ರ ಲಕ್ಷ್ಮೇಶ್ವರ ಶಾಸನದಲ್ಲಿ ಪುರಿಕಾರದ ದಕ್ಷಿಣ ಸೋಮನಾಥ ದೇವರ ಸಗರವಂಶದ ಜಯಕೇಸಿದೇವರಸರು ಮತ್ತು ಇತರರು ಕಿರುಕುಳ ತೆರಿಗೆಗಳಿಂದ ಚಿನ್ನದ ಆದಾಯದಿಂದ ಮತ್ತು ನಿಟ್ಟೂರು ಗ್ರಾಮದ ದೇವಭೋಗದಿಂದ ದಾನ ನೀಡಿದ ವಿವರವಿದೆ. ಕುರ್ತಕೋಟ ಶಾಸನದಲ್ಲಿ ನರಸಿಂಗದೇವರ ಸನ್ತತಂ ನನ್ದಾದೀವಿಗೆಗೆ ದೇವರ ಮುಂದೆ ತಳಾಜಿ ಬೊಪ್ಪೆನಾಯಕ, ಶ್ರೀಮದಿನ್ನೂರ್ವರು (೨೦೦) ಮಹಾಜನರ ಪ್ರಸಾದಿಸಿ ತೆರಿಗೆಗಳಿಂದ ದಾನ ನೀಡಿದ ವಿವರವಿದೆ. ಮದನಬಾವಿ ಶಾಸನದಲ್ಲಿ ಮನ್ನೂರ ಸ್ವಯಂಭು ಕಲಿದೇವರ ಅಂಗಭೋಗಕ್ಕೆ ಗೋವಕದಂಬ ವಂಶಸ್ಥ ಮಹಾಮಂಡಳೇಶ್ವರ ಎರಡನೆಯ ಜಯಕೇಶಿದೇವ ಭೂಮಿ ದಾನ ನೀಡಿದ ದಾಖಲೆ ಹಾಗೂ ಶಂಕರನಾಯಕ ಸುಂಕದ ಪೆರ್ಗ್ಗಡೆ ಪನ್ನಾಯದ ತೆರಿಗೆಗಳಿಂದ ದೇವರಿಗೆ ತೋಟ ದಾನ ನೀಡಿದ ದಾಖಲೆ. ನರಗುಂದ ಶಾಸನದಲ್ಲಿ ಪಿರಿಯನಗರಗುಂದದ ಮಹಾಗ್ರಹಾರ ಶ್ರೀಮದ್ಧವಳ ಶಂಕರದೇವರಿಗೆ ೨೨೦ ಮಹಾಜನರ ಸಮ್ಮುಖದಲ್ಲಿ ರುದ್ರದೇವ (ಸೋದರಭಾವ) ರಾಜ್ಯಪಾಲ ಮಹದೇವರಸ ಬೆಳ್ವಲ-೩೦೦, ಹುಲಗೆರೆ-೩೦೦ ಆಳುತ್ತಿರುವಾಗ ಗದ್ಯಾಣ ದಾನ ನೀಡಿದ ದಾಖಲೆಯಿದೆ. ರುದ್ರದೇವ ಕೊಳನೂರು-೩೦, ಬೆಣ್ಣೆದಡ್ಡ-೭೦ ಮತ್ತು ಭತ್ತಗಾವೆ ಬೆಳವಲ ಭಾಗದಲ್ಲಿ ಆಳುತ್ತಿರುವಾಗ ಒಂದು ಗ್ರಾಮವನ್ನು ಇದೇ ದೇವರಿಗೆ ದಾನ ನೀಡಿದ. ಸಕವರ್ಷ ೧೦೭೫ (ಕ್ರೋನೂಗ್ರಾಮ್) ಸಾಲಗುಂದಿ ಶಾಸನದಲ್ಲಿ ನಾಚಾ ದಂಡನಾಯಕ ತನ್ನ ತಂದೆಯ (ಕಾಳಿದಾಸ ಚಮೂಪ) ಅಭಿವೃದ್ಧಿಗೋಸ್ಕರ ಕಾಲಕಾಲೇಶ್ವರ ದೇವಾಲಯ ಕಟ್ಟಿಸಿ ಹಾಗೂ ಊರೊಡೆಯ ಬಾಚಿಗ ಮತ್ತು ಬೇರೆಯವರು ಇದೇ ದೇವರಿಗೆ ಗ್ರಾಮದ ೩೦೦ ಜನ ಪ್ರಮುಖರು ಸಾಕ್ಷಿಯಾಗಿದ್ದಾರೆ.

ತೇದಿಯಿಲ್ಲದ ಕುಳಗೇರಿ ಶಾಸನದಲ್ಲಿ ಕೆಲವು ಅಧಿಕಾರಿಗಳು ಸುಂಕವರ್ಗ್ಗಡೆ ನಾಗಣ್ಣಸೆಟ್ಟಿ ಮತ್ತು ಸೆಟ್ಟಿಗುತ್ತರ ವ್ಯಾಪಾರಿಗಳ ಸಮುದಾಯದವರು ರುದ್ರೇಶ್ವರ ದೇವಾಲಯದ ಬೇರೆ ವಿವಿಧ ಆದಾಯದಿಂದ ದಾನ ನೀಡಿದ ವಿವರವಿದೆ. ಹಂಡರಕಿ ಶಾಸನದಲ್ಲಿ ಅಹಿಯವಂಶದ ಮಹಾಮಂಡಳೇಶ್ವರ ಬಿಜ್ಜರಸನ ರಾಣಿಬಾಚಲದೇವಿ (ಚೋಳವಂಶಕ್ಕೆ ಸೇರಿದವಳು) ಲೋಕೇಶ್ವರ ದೇವರಿಗೆ ೮ ಮತ್ತರು ಗದ್ದೆಯನ್ನು ದಾನ ನೀಡಿದ ದಾಖಲೆಯಿದೆ. ವಲೂರು ಶಾಸನ ತಮಿಳು ಗ್ರಂಥದಲ್ಲಿದೆ. ಸಿದ್ಧವತದೇವರಿಗೆ ಮುಖ್ಯಸ್ಥರು, ಭಕ್ತರು ಮಲ್ಲಿಕಾರ್ಜುನ ದೇವಾಲಯದ ಆಗುಹೋಗುಗಳಿಗೆ ಮಲ್ಲಿಕಾರ್ಜುನಲ್ಲೂರು ಗ್ರಾಮವನ್ನು ದಾನ ನೀಡಿದ್ದಾರೆ. ಹಲ್ಲೂರು ಶಾಸನ ಸವೆದಿದೆ. ಮಹಾಪ್ರಧಾನ ದಣ್ಡನಾಯಕ ಸೋವರಸರ ಅನುಮತಿಯ ಮೇರೆಗೆ ಹಳ್ಳುಹುರದ ಪೆರ್ಗ್ಗಡೆ ದೇವರಸರು ಹಾಗೂ ಊರಿನ ಪ್ರಮುಖರು ನಾಗೇಶ್ವರ ದೇವರ ಅಂಗಭೋಗಕ್ಕೆ ದಾನ ನೀಡಿದ್ದನ್ನು ತಿಳಿಸುತ್ತದೆ.

ಮೂರನೆ ಸೋಮೇಶ್ವರನ ಕಾಲದಲ್ಲಿ ಶೈವ, ವೈಷ್ಣವ, ಜೈನ ಈ ಧರ್ಮಗಳ ಶಾಸನಗಳು ಇಲ್ಲಿ ಕಂಡುಬಂದಿವೆ. ಕೊನೆಯದಾಗಿ ಚಾಲುಕ್ಯರ ಕಾಲದ ಧಾರ್ಮಿಕ ವೈಶಿಷ್ಟ್ಯವೆಂದರೆ, ಅನ್ಯಧರ್ಮ ಸಹಿಷ್ಣುತೆ ಹಾಗೂ ಒಬ್ಬನೇ ವ್ಯಕ್ತಿಯಲ್ಲಿ ವಿವಿಧ ಧರ್ಮಗಳ ಬಗ್ಗೆ ಶ್ರದ್ಧಾಭಕ್ತಿಯುಳ್ಳವರಾಗಿದ್ದರು.

ಒಟ್ಟಿನಲ್ಲಿ ಹೇಳುವುದಾದರೆ ಬಾದಾಮಿಯ ಚಾಲುಕ್ಯರ ಕಾಲದಲ್ಲಿ ವೈಷ್ಣವಧರ್ಮವೂ, ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಾಳಾಮುಖ ಪಾಶುಪಂಥದ ಶೈವಧರ್ಮವೂ, ಕಳಚೂರ್ಯರ ಕಾಲದಲ್ಲಿ ವೀರಶೈವಧರ್ಮವೂ ಜನಪ್ರಿಯವಾದಂತೆ ತೋರಿದರೂ ಪರಮಧರ್ಮಸಹಿಷ್ಣುತೆ ಇದ್ದಿತೆನ್ನುತವುದರಲ್ಲಿ ಸಂದೇಹವಿಲ್ಲ.



## ಆಕರ ಗ್ರಂಥಗಳು


೧. ಎ.ಆರ್.ಐ.ಇ., ೧೯೧೮, ೧೯೩೩-೩೪, ೧೯೩೮-೩೯, ೧೯೬೫-೬೬, ೧೯೭೬-೭೭, ೧೯೭೭-೭೮, ೧೯೮೦-೮೧, ೧೯೮೫-೮೬, ೧೯೮೭-೮೮, ೧೯೯೧-೯೨, ೨೦೦೦-೦೧,

೨. ಎಸ್.ಐ.ಐ., ಸಂಖ್ಯೆ ೯, ಭಾಗ ೧, ೧೫, ೧೮, ೨೦.

೩. ಕನ್ನಡ ಇನ್‌ಸ್ಕ್ರಿಪ್ಷನ್ಸ್ ಆಫ್ ಆಂಧ್ರ ಪ್ರದೇಶ.

೪. ಎ.ಕ. ಸಂಖ್ಯೆ ೬ (ಶಿಕಾ).

# ಕನ್ನಡ ಶಾಸನಗಳಲ್ಲಿ ಕೃಷಿ ಭೂಮಿಯ ವಿಸ್ತರಣೆ ಒಂದು ನೋಟ

ಆರ್. ರಂಜಿತಾ*

**ಮಾ**ನವನು ತನ್ನ ಜೀವನೋಪಾಯಕ್ಕಾಗಿ ಬೇಟೆ ಮತ್ತು ಪಶುಪಾಲನೆಯೊಂದಿಗೆ ಕೃಷಿಯನ್ನು ರೂಪಿಸಿಕೊಂಡನು. ಇದರ ಪ್ರಮುಖ ಉದ್ದೇಶ ಆಹಾರೋತ್ಪಾದನೆಯಾಗಿತ್ತು. ನವಶಿಲಾಯುಗದ ಜನರಿಂದ ಮೊದಲು ಕೃಷಿ ಆರಂಭವಾಯಿತು ಎನ್ನಲಾಗಿದೆ. ಇವರು ನೆಲವನ್ನು ಕಲ್ಲು, ಪಿಕಾಸಿ, ಹಾರೆ ಮೊದಲಾದ ಆಯುಧಗಳಿಂದ ಹದಗೊಳಿಸುತ್ತಿದ್ದರು. ಆರಂಭದ ಕೃಷಿಯು ನಿಧಾನಗತಿಯಲ್ಲಿ ವಿಸ್ತರಣೆಗೊಳಪಟ್ಟಿತು. ಅದು ಬಹುತೇಕ ಕುಮ್ರಿ ಅಥವಾ ಸ್ಥಳಾಂತರ ಬೇಸಾಯವಾಗಿ ಕಂಡುಬರುತ್ತದೆ. ಕ್ರಿ.ಪೂ.೪ನೆಯ ಶತಮಾನದ ವೇಳೆಗೆ ಸಿಂಧೂ ನದಿ ಬಯಲಿನಲ್ಲಿ ನೆಲವನ್ನು ನೇಗಿಲಿನಿಂದ ಉಳುತ್ತಿದ್ದರು. ಹಾಗೆಯೇ ಗೋಧಿ ಮತ್ತು ಬಾರ್ಲಿಯಂತಹ ಬೆಳೆಗಳನ್ನು ಬೆಳೆಯುತ್ತಿದ್ದರು. ಕರ್ನಾಟಕದಲ್ಲಿ ಕ್ರಿ.ಪೂ. ೨೮೦೦–೧೨೦೦ರ ಅವಧಿಯಲ್ಲಿ ಕೃಷಿ ಆರಂಭಗೊಂಡಿತು ಎನ್ನಲಾಗಿದೆ.[೧] ಇದು ಬಳ್ಳಾರಿ ಜಿಲ್ಲೆಯ ತೆಕ್ಕಲು ಕೋಟೆಯಲ್ಲಿ ದೊರೆತ ಹುರುಳಿಕಾಳು ಹಾಗೂ ಹಾವೇರಿ ಜಿಲ್ಲೆಯ ಹಳ್ಳೂರಿನಲ್ಲಿ ದೊರೆತ ರಾಗಿಕಾಳುಗಳಿಂದ ದೃಢಪಟ್ಟಿದೆ. ಕ್ರಿ.ಪೂ.೧೦೦೦ದಲ್ಲಿ ಯಾವಾಗ ಕಬ್ಬಿಣದ ಆವಿಷ್ಕಾರ ಆರಂಭವಾಯಿತೋ ಆಗ ಕೃಷಿ ಭೂಮಿಯು ವಿಸ್ತರಿಸಲ್ಪಟ್ಟಿತು. 'ಪ್ರೊ. ಗಾರ್ಡನ್ ಜೈಲ್ಡ್ ಕ್ರಿ.ಪೂ. ೬೦೦೦ ದಿಂದೀಚೆಗೆ ಮನುಷ್ಯನು ತನ್ನ ಪರಿಸರದ ವಿರುದ್ಧ ಆಕ್ರಮಣಕಾರಿ ಪ್ರವೃತ್ತಿಯನ್ನು ಬೆಳೆಸಿಕೊಂಡನು ಎನ್ನುತ್ತಾರೆ.[೨]

ಕೃಷಿಯ ಹುಟ್ಟು ಯಾವಾಗ ಆರಂಭವಾಯಿತೋ ಅದರೊಂದಿಗೆ ಕೃಷಿ ಭೂಮಿಯ ವಿಸ್ತರಣೆಯು ಪ್ರಾರಂಭವಾಯಿತು. ಕರ್ನಾಟಕದ ಭೂ ಪ್ರದೇಶವು ಪ್ರಾಚೀನ ಮಾನವರ ಎಲ್ಲ ಸಂದರ್ಭಗಳಲ್ಲಿಯೂ 'ಒಂದು ವಸ್ತು ಸಂಗ್ರಹಾಲಯವಿದ್ದ ಹಾಗೆ' ಎಂಬ ಮಾತು ಇಲ್ಲಿ ಹೆಚ್ಚು ಪ್ರಸ್ತುತವಾದುದು. ಇಲ್ಲಿ ದೊರೆತ ದಾಖಲೆಗಳೇ ಈ ಮಾತಿಗೆ ಪುಷ್ಠಿಯನ್ನು ಒದಗಿಸುತ್ತವೆ. ಪ್ರಸ್ತುತ ಸಂದರ್ಭದಲ್ಲಿ ಕೃಷಿ ಭೂಮಿ ವಿಸ್ತರಣೆಯಂತಹ ಅಧ್ಯಯನಗಳು ಯಾಕೆ ಬೇಕು ಎಂದಾಗ ವರ್ತಮಾನದ ಫಲ ಭೂತಕಾಲವೇ ಆಗಿರುತ್ತದೆ. ಜೊತೆಗೆ ಪ್ರಾಚೀನ ಮಾನವ ಜೀವನದ ಎಲ್ಲ ಆಯಾಮಗಳು ಕೃಷಿ ವ್ಯವಸ್ಥೆಯ ಒಂದು ಭಾಗವಾಗಿಯೇ ತಳುಕು ಹಾಕಿಕೊಂಡಿವೆ. ಜೊತೆಗೆ ಕೃಷಿ ಚಟುವಟಿಕೆಗಳು ಜರುಗಲು ಯಾವ ಭೂಮಿ ಮತ್ತು ಹೇಗೆ ವಿಸ್ತರಣೆಗೆ ಒಳಪಡುತ್ತಿತ್ತು. ಭೂಮಿ ವಿಸ್ತರಣೆಯ ಹಿಂದೆ ಯಾವ ಉದ್ದೇಶಗಳಿರುತ್ತಿದ್ದವು ಎಂಬ ಅಂಶಗಳನ್ನು ಗಮನಿಸುತ್ತಾ ಹೋದಾಗ ಅದರ ಒಂದೆಂದು ಆಯಾಮಗಳು ಅಧ್ಯಯನಕ್ಕೆ ತೆರೆದುಕೊಳ್ಳುತ್ತವೆ.

ಸಮಕಾಲೀನ ಸಂದರ್ಭಕ್ಕೆ ಮುಖಾಮುಖಿ ಮಾಡಿದರೆ ಇಂದು ಪರಿಣಾಮದಲ್ಲಿ ಗಣನೀಯ ವ್ಯತ್ಯಾಸವಿದೆ. ಕೃಷಿ ಭೂಮಿಯ ಬಗೆಗಿನ ಜ್ಞಾನ ಪರಂಪರಾನುಗತವಾದುದು. ಕೃಷಿಯಲ್ಲಿ ಉಳುಮೆ ಮಾಡುವ ಮೊದಲು ಭೂಮಿಯು ಸಾಮಾನ್ಯವಾಗಿ ಕಾಡು, ಪೊದೆ, ಕಲ್ಲು, ಮುಳ್ಳು, ಬೆಟ್ಟಗುಡ್ಡ ಮೊದಲಾದವುಗಳಿಂದ ಆವೃತ್ತವಾದ ಪ್ರದೇಶವಾಗಿರುತ್ತಿತ್ತು. ಇಂತಹ ಭೂಮಿಯನ್ನು ಸ್ವಚ್ಛಗೊಳಿಸಲು ಆ ಪ್ರದೇಶಕ್ಕೆ ಬೆಂಕಿ ಹಚ್ಚಲಾಗಿತ್ತಿತ್ತು. ಇಲ್ಲವೆ ಕಾಡು ಕಡಿದು ಗುಡ್ಡಗಳನ್ನು ಸವೆಸಿ ಸಮತಟ್ಟಾಗಿ ಮಾಡಿಕೊಳ್ಳಲಾಗುತ್ತಿತ್ತು. ಇಂತಹ ಭೂಮಿ ಬರುಡಾದ ನಂತರ ಹೊಸ ಭೂಮಿಯನ್ನು ಸ್ವಚ್ಛಗೊಳಿಸಿ ಉಳುಮೆ ಮಾಡುವ ವಿಧಾನಕ್ಕೆ 'ಜೂಮ್' ಕಡಿ ಅಥಾವಾ ಸುಡು ವಿಧಾನವೆಂದು ಕರೆಯಲಾಗುತ್ತದೆ. ಕಾಡಿನ ತೆರೆದ ಭಾಗಗಳಲ್ಲಿ ಸ್ಥಳ ಬದಲಾಯಿಸುವ ಬೇಸಾಯವನ್ನು ನಡೆಸಲಾಗುತ್ತಿತ್ತು. ಕಾಡನ್ನು ಸುಟ್ಟ ಮೇಲೆ ಅಲ್ಲಿ ಆಹಾರ ಧಾನ್ಯಗಳನ್ನು (ರಾಗಿ, ಬೇಳೆಕಾಳು ಇತ್ಯಾದಿ) ಬೆಳೆಯುತ್ತಿದ್ದರು. ವಿಸ್ತಾರವಾದ ಅರಣ್ಯ ಪ್ರದೇಶಗಳು ಇರುವವರೆಗೂ ಈ ಬಗೆಯ ಬೇಸಾಯ ರೂಢಿಯಲ್ಲಿತ್ತು. ಇಂದಿಗೂ ಆದಿವಾಸಿ ಬುಡಕಟ್ಟುಗಳಲ್ಲಿ, ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಹಾಗೂ ಮಲೆನಾಡಿನ ಕೆಲವು ಭಾಗಗಳಲ್ಲಿ ಈ ವ್ಯವಸ್ಥೆ ರೂಢಿಯಲ್ಲಿದೆ.

ಆರಂಭದ ಕೃಷಿಯು ಆಹಾರೋತ್ಪಾದನೆಯ ಉದೇಶವನ್ನು ಹೊಂದಿತ್ತೇ ವಿನಃ ಆರ್ಥಿಕ ಲಾಭಗಳಿಕೆಯ ಉದ್ದೇಶವನ್ನು ಹೊಂದಿರಲಿಲ್ಲ. ಅದು ಮಾನವನ ಜೀವನಾಧಾರದ ಒಂದು ಮುಖ್ಯ ಭಾಗವಾಗಿತ್ತು. ಕೃಷಿ ಭೂಮಿ ವಿಸ್ತರಣೆಯಾದಂತೆ ಆ ಭೂಮಿಯಲ್ಲಿ ಬೆಳೆ ಬೆಳೆಯಲಾಗುತ್ತಿತ್ತು. ಪ್ರಮುಖವಾಗಿ ವಿಸ್ತರಣೆಗೆ ಒಳಪಡುವ ಭೂಮಿಯು ಕೃಷಿ ಯೋಗ್ಯ

* ಸಂಶೋಧನಾ ವಿದ್ಯಾರ್ಥಿ, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಮೊ. ೬೩೬೧೩೦೬೮೭೦

ಭೂಮಿಯಾಗಿರುತ್ತಿತ್ತು. ಕೆಲವೊಮ್ಮೆ ಕೃಷಿ ಯೋಗ್ಯವಲ್ಲದಿದ್ದರೂ ಅದನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಲಾಗುತ್ತಿತ್ತು. ಇಂತಹ ಪ್ರಕ್ರಿಯೆ 'ಕ್ರಿ.ಶ. ೮ರಿಂದ ೧೪ನೆಯ ಶತಮಾನಗಳ ನಡುವಣ ಅವಧಿಯಲ್ಲಿ ಇತ್ತು ಎನ್ನುವುದಕ್ಕೆ ಸಾಕಷ್ಟು ಆಧಾರಗಳಿವೆ'[೩] ಪ್ರಾಚೀನ ಕಾಲವೆಂದು ಗುರುತಿಸುವ ಈ ಅವಧಿಯಲ್ಲಿ ಮಾತ್ರವಲ್ಲದೆ ಅನಂತರದ ಅಂದರೆ ಕ್ರಿ.ಶ. ೧೪ನೆಯ ಶತಮಾನದ ನಂತರ ಈ ರೀತಿಯ ಪ್ರಕ್ರಿಯೆ ಮುಂದುವರೆದಿರುವುದು ಈ ಕುರಿತ ಉಲ್ಲೇಖಿತ ಶಾಸನಗಳಿಂದ ತಿಳಿದು ಬರುತ್ತದೆ. ಕೃಷಿ ಯೋಗ್ಯ ಭೂಮಿಯಾಗಿ ಪರಿವರ್ತಿಸಿರುವ ಉಲ್ಲೇಖಗೊಂಡಿರುವ ಕ್ರಿ.ಶ. ೧೦ನೆಯ ಶತಮಾನದ ಜಯಸಿಂಹನ ತಳಂಗೆರೆ ಶಾಸನವು ಇದರ ಬಗೆಗೆ ಹೀಗೆ ಉಲ್ಲೇಖಿಸಿದೆ.

**"ಊರ ಕಡೆಯ ತೊಱೆಯ ತಡಿಯ ಕರಿಯ ಕಲ್ಲಮೋಱದಿಂ**
**ಪುತ್ತೂರ ಪೊಲೆಯರಿಪ್ಪ ಕೇರಿಯೋವಟ ನೀರ ಭೂಮಿಯಂ ಸಾರಭೂರಹಂಗಳೋಳಿಯೊಳಗೆ ನೆಱೆ**
**ದ ಕೆಱೆಯನಂಭೋರುಹಾಕ್ಷಿ ತನ್ನಧನದಿನೊಪ್ಪೆ ಮಾಡಿಸಿಟ್ಟದಂ**
**ನಿನ್ತಾರುಮೊಲ್ಲದ ಕಲ್ಕಾಡ ಬೆಟ್ಟಂ ಸವತಳಂ ಮಾಡಿಯೋಡಿಲ ಮನೆಯ ನನ್ದನ**
**ವನವುಮಂ ಮಾಡಿಸಿ ಕೆಱೆಯಂ ಕಟ್ಟಸಿ ತೊಱೆಯ ಸೆಱೆಯಿಟ್ಟೊವಟ ನೆಲ**
**ನಂ ಪಿರಿದುಮಾಯಾಸದಿಂ ಸುಕ್ಷೇತ್ರಂ ಮಾಡಿಸಿದುದು ಮುನ್ನ ಮೂಡೆ**
**ಯಿಕ್ಕುವೊವಟುಪ್ಪು ನೆಲದಾ ಭೂಮಿಯನೊಳಕೊಣ್ಣಗಟನಗಟಿಸಿ"[೪]**

ಈ ಮೇಲಿನ ಶಾಸನದ ಪಾಠವು ತಿಳಿಸುವಂತೆ ಮೋಚಬ್ಬರಸಿಯು ಕರಿಯ ಕಲ್ಲಿನ ಭೂಮಿಯನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಿದಳು. ಅಲ್ಲದೆ ಕೃಷಿಗೆ ಅನುಕೂಲವಾಗುವಂತೆ ಕೆರೆಯನ್ನು ನಿರ್ಮಿಸಿದಳೆಂದು ಶಾಸನವು ಹೇಳುತ್ತದೆ. ಸಾಮಾನ್ಯವಾಗಿ ತೊರೆಯ ಸಮೀಪದ ಭೂಮಿಯನ್ನು ವಿಸ್ತರಿಸಿರುವುದು ಈ ಶಾಸನದಿಂದ ಸ್ಪಷ್ಟವಾಗುತ್ತದೆ. ಹೊಸದಾಗಿ ಕೆರೆಯನ್ನು ನಿರ್ಮಿಸಿದಾಗ ಆ ಕೆರೆಯ ಸುತ್ತಲಿನ ಅಚ್ಚುಕಟ್ಟಾದ ಪ್ರದೇಶದ ಕಾಡನ್ನು ಕಡಿದು ಉಳುಮೆ ಮಾಡಿ ಹೊಸದಾಗಿ ಪೈರು ತೆಗೆಯಲಾಗುತ್ತಿತ್ತು. ಕ್ರಿ.ಶ. ೧೦೭೧ರ ಶಾಸನವು ಕಾಡು ಕಡಿದು ಹೊಸ ಭೂಮಿಯಿಂದ ಬೆಳೆ ತೆಗೆಯುವುದರ ಕುರಿತು ತಿಳಿಸುತ್ತದೆ. 'ಯಾಜ್ದಾನಿ ಅವರು ಸಂಪಾದಿಸಿದ 'ದಿ ಅರ್ಲೀ ಹಿಸ್ಟರಿ ಆಫ್ ದಿ ಡೆಕ್ಕಾನ್' ಗ್ರಂಥದಲ್ಲಿ ಕಾಕತೀಯ ಅರಸ ಪ್ರತಾಪರುದ್ರ ಕೃಷಿಯೇತರ ಭೂಮಿಯನ್ನು ಕೃಷಿಭೂಮಿಯನ್ನಾಗಿ ಪರಿವರ್ತಿಸಿದನೆಂದಿದೆ.[೫] ಕೂಡಲೂರು ಗ್ರಾಮದ ಕ್ರಿ.ಶ. ೧೧೭೭-೭೮ರ ಶಾಸನದಲ್ಲಿ ಹರಿಹರ ದೇವರ ಪೂಜೆಪುನಸ್ಕಾರಕ್ಕೆಂದು 'ಕಲಿದುಗುಸಂದಾಗಿ ಕಾಡಕಡಿದು ಹೊಸಭೂಮಿ ಕೊಡಂಗದ ಮೊಗೆಯಂ'[೬] ಎಂದಿದೆ.

ಕ್ರಿ.ಶ. ೧೧೧೪ರ ಬಿಜಾಪುರ ಜಿಲ್ಲೆಯ ನಿಡೋಣಿಯ ಬರ್ಮಣನ ಶಾಸನವು 'ಗಿಡಗಡಿದುರ್ತು ಬಿತ್ತಿ' ಎಂದು ಉಲ್ಲೇಖಿಸುತ್ತದೆ.[೭] ಕ್ರಿ.ಶ. ೧೧೨೩ರ ಹಾಸನ ಜಿಲ್ಲೆಯ ಶಾಸನವು ಹೀಗೆ ಹೇಳುತ್ತದೆ. 'ಪರನ್ರಿಪರಂತಡಂ ಸದಿದು ಬೇಲಿಯನಿಕ್ಕಿ ಪಟುಪ್ರತಾಪಮುರ್ಬಿರೆ ತಳಕಾಡ ನೀಡುಗಡಿದು ಅಳುಕುಱೆ ಸುಟ್ಟು ತುರಂಗಮಾಫ್ರಿ ಸಂಚರಣದಿನುರ್ತು ವೀರರಸದೊಳು ಪದನಾದಡೆ ಕೂಡೆ ಬೆತ್ತಿದಂ ಸುರುಚಿರ ಕೀರ್ತಿಯಂ ನೃಪಶಿಖಾಮಣಿ ಸಾಹಸಗಂಗ ಪೊಯ್ಸಳ' ಎಂದಿದೆ.[೮] ಹಿರೇಹಳ್ಳಿಯ ಕ್ರಿ.ಶ. ೧೧೮೨ರ ಶಸನದಲ್ಲಿ ಚಿಕ್ಕಮಾರೆಯ ಮೊದಲಾದವರು ಸೇರಿ 'ಕಾಡಂ ಕಡಿದು ಕನ್ನೆಗೆಱೆಯಂ ಕಟ್ಟಿಸಿ ವೂರಂ ಮಾಡಿದರು'[೯] ಎಂದು ತಿಳಿಸುತ್ತದೆ. ಕೊಂಡಳ್ಳಿ ಅಗ್ರಹಾರದ ಮಹಾಜನರ ಕೋರಿಕೆಯ ಮೇರೆಗೆ ಒಬ್ಬ ಗಾವುಂಡ ತನ್ನ ಸಹೋದರರ ಸಹಾಯದಿಂದ ಕಾಡನ್ನು ಕಡಿದು ಒಂದು ಹೊಸ ಹಳ್ಳಿಯನ್ನು ನಿರ್ಮಿಸಿ ಅಲ್ಲಿ ಎರಡು ಹೊಸ ಕೆರೆಗಳನ್ನು ಕಟ್ಟಿಸಿದ.[೧೦] ಕಾಡನ್ನು ಕಡಿದು ಹಳ್ಳಿಗಳನ್ನು ನಿರ್ಮಿಸಿದ, ಕೆರೆಗಳನ್ನು ಕಟ್ಟಿಸಿದ ಉಲ್ಲೇಖಗಳನ್ನು ಗಮನಿಸಿದರೆ ಹೊಸ ಜನವಸತಿಯೊಂದಿಗೆ ಕೃಷಿ ಭೂಮಿ ವಿಸ್ತರಣೆಯಾಗುವುದನ್ನು ಸೂಚಿಸುತ್ತವೆ. ಇದರೊಂದಿಗೆ ಕೃಷಿ ಮತ್ತು ಜಾನುವಾರುಗಳಿಗೆ ಬಳಕೆಯಾಗುವ ಉದ್ದೇಶದಿಂದ ಕೆರೆಗಳನ್ನು ನಿರ್ಮಿಸಿರುವ ಸಾಧ್ಯತೆಗಳಿವೆ. ಹುಲಿಕೆರೆಯ ಕ್ರಿ.ಶ. ೧೧೬೦ರ ಶಾಸನದಲ್ಲಿ ಚಟ್ಟೆಯನು 'ಮಣ್ಣ ಸವನೆನಿಸಿ ಹೊನ್ನಂ ಮಣ್ಣಂ ಗೆಯ್ವವಗೆ ನೆಱೆಯೆ ಕೊಟ್ಟುಂ ಚಟ್ಟಂ ಮಣ್ಣುಂಡು ಹೋದುದೆನಿಸದೆ ತಣ್ಣನೆ ತಣಿಪಿದನಶೇಷಮಂ ಜೀವನದಿಂ'[೧೧] ಎಂದಿದೆ. ಇದರಿಂದ ಭೂಮಿ ವಿಸ್ತರಣೆಯಂತಹ ಕಾರ್ಯಗಳಿಗೆ ಅರಸರು ಮತ್ತು ಇನ್ನಿತರ ಅಧಿಕಾರಿ ವರ್ಗದವರ ಒತ್ತಡ, ಬೆಂಬಲ ಮತ್ತು ಸಹಾಯಗಳು ದೊರೆತಿವೆ. ಅವರು ಸಮರ್ಥರೆನಿಸುವ ವ್ಯಕ್ತಿಗಳನ್ನು ಆಯ್ದು ಈ ಕೆಲಸವನ್ನು ವಹಿಸುತ್ತಿದ್ದು. ಇಂತಹ ಭೂಮಿಯಿಂದ ಯಾವ ವರ್ಷದಿಂದ ತೆರಿಗೆ ನಿಗದಿಯಾಗುತ್ತಿತ್ತು ಮತ್ತು ತೆರಿಗೆಯಿಂದ ವಿನಾಯಿತಿ ದೊರೆಯುತ್ತಿತ್ತು ಎಂಬುದರ ಮಾಹಿತಿ ಶಾಸನಗಳಿಂದ ದೊರೆಯುತ್ತದೆ. ವೀರದೇವನಹಳ್ಳಿಯ ಕ್ರಿ.ಶ. ೧೧೮೬ರ ಶಾಸನದಲ್ಲಿ ವೀರಯ್ಯದಣ್ಣನಾಯಕಂ ತಂನ ನಿಜಸ್ವಾಮಿ ಶ್ರೀ ವೀರಬಲ್ಲಾಳ ದೇವರ ರಾಜ್ಯಾಭ್ಯುದಯಾರ್ಥವಾಗಿ ತಾನೆ ಕಾಡುಕಡಿದು ಮಾಡಿದ ಶ್ರೀ ವೀರಬಲ್ಲಾಳಪುರದೊಳು ರುದ್ರಸಮುದ್ರ

ಗಂಗಾಸಮುದ್ರ ಅಚ್ಯುತಸಮುದ್ರ ವೀರಸಮುದ್ರವೆಂಬ ಕೆರೆಗಳಂ ಕಟ್ಟಿಸಿ ಆ ಪುರಕ್ಕೆ ಗದ್ಯಾಣಂ ನಾಲ್ಕಱ ಮೊದಲಂ ಮಾಡಿ ನಾಲ್ಕು ಗದ್ಯಾಣ ನೀಡಿದರು.[೨] ಕಾಡು ಕಡಿದು ಈ ರೀತಿ ಕೆರೆ ನಿರ್ಮಿಸಲು ವಿಸ್ತಾರವಾದ ಬಯಲು ಮತ್ತು ಇಳಿಜಾರಿನ ಕೆಳಭಾಗದ ಭೂ ಪ್ರದೇಶದ ಅಗತ್ಯತೆ ಇರುವ ಕಾರಣದ ಅನಿವಾರ್ಯದಿಂದಾಗಿ ಕಾಡು ಕಡಿದಿರುವ ಸಾಧ್ಯತೆಗಳಿವೆ.

ಹೊಸದಾಗಿ ಕೃಷಿ ಭೂಮಿಯನ್ನು ವಿಸ್ತರಿಸುವಾಗ ಮುಳ್ಳು ಮೊದಲಾದ ಗಿಡಗಳನ್ನು ಮೊದಲು ಕಡಿದು ಸ್ವಚ್ಛಗೊಳಿಸಿ ಸುತ್ತಲೂ ಬೇಲಿ ಹಾಕಿ, ಅಲ್ಲಿನ ಮರಗಳನ್ನೆಲ್ಲ ಕಡಿದು ಸುಡುತ್ತಿದ್ದರು. ಈ ರೀತಿ ಸ್ವಚ್ಛವಾದ ಭೂಮಿಯನ್ನು ಉಳುಮೆ ಮಾಡಿ, ನೀರು ಹಾಯಿಸಿ, ಬೀಜವನ್ನು ಬಿತ್ತಿ ಬೆಳೆ ಬೆಳೆಯುತ್ತಿದ್ದು.

**ವಿಸ್ತರಣೆಗೊಳಪಡುವ ಭೂಮಿ**

೧. ಕಾಡು ಪೊದೆಗಳಿಂದ ಆವೃತ್ತವಾದ ಪ್ರದೇಶ

೨. ಕಲ್ಲು ಮುಳ್ಳುಗಳಿಂದ ಆವೃತ್ತವಾದ ಪ್ರದೇಶ

೩. ಬಂಜರು ಭೂಮಿ

೪. ನೀರು ನಿಲ್ಲುವ ತಗ್ಗು ಪ್ರದೇಶದ ಸುತ್ತಲಿನ ಸ್ವಚ್ಛ ಪ್ರದೇಶ

೫. ತೊರೆ ಹರಿದು ಮಣ್ಣು ಸೇರಿಸಿಸ ಪ್ರದೇಶ

೬. ನದಿ ಬಯಲುಗಳ ಫಲವತ್ತಾದ ಪ್ರದೇಶ

ಮೇಲಿನ ಶಾಸನಗಳು ತಿಳಿಸುವಂತೆ ಕಾಡು, ಕಲ್ಲು, ಪೊದೆ, ಮುಳ್ಳು ಮೊದಲಾದವುಗಳಿಂದ ಆವೃತ್ತವಾದ ಪ್ರದೇಶವನ್ನು ಕಡಿದು, ಬೆಂಕಿಯಿಂದ ದಹಿಸಿ, ಸಮತಟ್ಟಾಗಿಸಿ ಬದುಗಳನ್ನು ನಿರ್ಮಿಸಿಕೊಂಡು ಕೃಷಿ ಭೂಮಿಯನ್ನು ವ್ಯವಸಾಯಕ್ಕೆ ಅಣಿಗೊಳಿಸಲಾಗುತ್ತಿತ್ತು. ಕೃಷಿ ಭೂಮಿಯನ್ನು ವಿಸ್ತರಿಸುವುದರ ಹಿಂದೆ ಹಲವು ಕಾರಣಗಳಿರುತ್ತಿದ್ದವು. ಒಂದೆಡೆ ಕಾಲದಿಂದ ಕಾಲಕ್ಕೆ ಹೆಚ್ಚುವ ಜನಸಂಖ್ಯೆ. ಜನಸಂಖ್ಯೆಯ ಒತ್ತಡವನ್ನು ಕಡಿಮೆಗೊಳಿಸುವುದು ಒಂದು ಪ್ರಮುಖ ಉದ್ದೇಶವಾಗಿದ್ದು, ಹೊಸದಾಗಿ ನಿರ್ಮಾಣಗೊಳ್ಳುವ ಕೃಷಿಯೋಗ್ಯ ಭೂಮಿಯಲ್ಲಿ ಜನರು ವಾಸಮಾಡುವುದು ಸಹಜ. ಇದು ಜನವಸತಿ ನಿರ್ಮಾಣಗೊಳ್ಳುವುದಕ್ಕೆ ಕಾರಣವಾಯಿತು. ಈ ರೀತಿ ಇದರಿಂದ ಜನಸಂಖ್ಯೆಯ ಒತ್ತಡ ಕಡಿಮೆಯಾಗತೊಡಗಿತು.[೩] ಇನ್ನೊಂದೆಡೆ ಕೃಷಿಯ ಅಭಿವೃದ್ಧಿ. ಕೃಷಿ ಅಭಿವೃದ್ಧಿ ಹೊಂದಿದಂತೆ ಅದು ಆರ್ಥಿಕ ಉತ್ಪನ್ನದ ವ್ಯಾಪ್ತಿಗೊಳಪಟ್ಟಿತು. ಮೊದಲೇ ಉಳುಮೆಯಾಗುತ್ತಿದ್ದ ಭೂಮಿ ತನ್ನ ಸಾರವನ್ನು ಕಳೆದು ಕೊಂಡಾಗ ಬೆಳೆ ಬೆಳೆಯಲಾರದ ಸ್ಥಿತಿ ನಿರ್ಮಾಣಗೊಂಡ ಸಂದರ್ಭದಲ್ಲಿಯೂ ಭೂಮಿ ವಿಸ್ತರಣೆಗೊಳಪಡುತ್ತಿತ್ತು. ತೆರಿಗೆ ಮತ್ತು ಆದಾಯ ಹೆಚ್ಚಳದ ಉದ್ದೇಶದಿಂದ ಭೂಮಿಯನ್ನು ಗೇಣಿಯ ರೂಪದಲ್ಲಿ ನೀಡುವ ಸಲುವಾಗಿ ಕೃಷಿ ಭೂಮಿಯನ್ನಾಗಿ ಪರಿವರ್ತಿಸಲಾಗುತ್ತಿತ್ತು. ಭೂಮಿಯಲ್ಲಿ ಕೃಷಿ ಉತ್ಪನ್ನ ಹೆಚ್ಚಾದಾಗ ಅದನ್ನು ತೆರಿಗೆಯ ವ್ಯಾಪ್ತಿಗೊಳಪಡಿಸಲಾಗುತ್ತಿತ್ತು. 'ಆದರೆ ಹೊಸದಾಗಿ ಭೂಮಿಯನ್ನು ಸ್ವಚ್ಛಗೊಳಿಸಿ ಬೆಳೆದ ಇಂತಿಷ್ಟು ವರ್ಷ ತೆರಿಗೆ ಅಥವಾ ಗೇಣಿಯಿಂದ ವಿನಾಯಿತಿ ದೊರೆಯುತ್ತಿತ್ತು. ಅದು ಸಂಪೂರ್ಣ ಕೃಷಿ ಭೂಮಿಯಾಗಿ ಪರಿವರ್ತನೆಗೊಂಡು ಸಮೃದ್ಧವಾಗಿ ಪಸಲು ಬೆಳೆಯುವಾಗ ತೆರಿಗೆ ಅಥವಾ ಗೇಣಿಗೊಳಪಡುತ್ತಿತ್ತು. ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಕೋಗಳಿಯ ಕ್ರಿ.ಶ. ೯೯೨ರ ಶಾಸನದಲ್ಲಿ 'ಫಲವಾದ ಮಣ್ಣೆ ಅರುವಣವಿಲ್ಲ' ಕೋಗಟೆಯ ಚತುರಾಘಾಟ್ಟದೊಳಾದ ಮಣ್ಣನೀರ ಸಾಮ್ಯಕ್ಕಂ ದಣ್ಡದೋಸಮಿಲ್ಲ. ಸೆಟ್ಟಿಯರ್ಪ್ಪನ್ನಸಿಗರ್ಗ್ಗಾವುಣ್ಡಗಳ್ಮೊದಲಾಗಿ ಮಾನ್ಯಕಾಱ ಮೂಱು. ಶ್ರಾಹೆಗೆ ಪರಿಯರ ಗದ್ಯಾಣವನ್ತಿಱುವರ್ ಅವರ ಕೀೞೊಕ್ಕಲುಟ್ಟುಬರಿಸಂ ಪಟ್ಟಿಮರ್ಯಾದೆ ಎರಡನೆಯ ಶ್ರಾಹೆಗೆ ಪದಿನಯ್ದರವೆ ಮೂರನೆಯ ಶ್ರಾಹೆಗೆ ಪೂರ್ಬ್ಬಸ್ಥಿತಿಯೊಳ್ಕೊರೆ ಬಸದಿಗೆತ್ತಿಱುವರ್'[೪] ಎಂದಿದೆ. ದಾನ ನೀಡಿದ ಭೂಮಿಯನ್ನು ಹಿಸದಾಗಿ ಉಳುಮೆಗೆ ಒಳಪಡಿಸಿದ ಮೊದಲ ವರ್ಷ ತೆರಿಗೆ ಹಾಕುತ್ತಿರಲಿಲ್ಲ. ಮೂರನೆಯ ವರ್ಷ ಅಧೀಕೃತವಾಗಿ ತೆರಿಗೆ ಹಾಕಲಾಗುತ್ತಿತ್ತು. ಹಾಗೆಯೇ ತೆರಿಗೆ ನೀಡದಿದ್ದರೆ ದಂಡ ವಿಧಿಸಲಾಗುತ್ತಿತ್ತು. ದಾನ ನೀಡುವಾಗ ಎಲ್ಲ ಸಮಯದಲ್ಲೂ ಉಳುಮೆಮಾಡಿದ ಭೂಮಿಯನ್ನು ನೀಡುತ್ತಿರಲ್ಲಿಲ್ಲ. ಬದಲಿಗೆ ಈ ರೀತಿ ಉಳುಮೆಯಾಗದ ಭೂಮಿಯನ್ನೂ ಸಹ ನೀಡುತ್ತಿದ್ದರು. ಇಂತಹ ಉಲ್ಲೇಖಗಳು ೧೧ನೆಯ ಶತಮಾನದಿಂದ ಕಾಣಿಸಿಕೊಳ್ಳುತ್ತವೆ. ಆರ್ಥಿಕ ಮತ್ತು ರಾಜಕೀಯ ಸ್ಥಿತಿಯ ಪ್ರಭಾವಗಳು ಇದಕ್ಕೆ ಪ್ರಮುಖ ಕಾರಣಗಳಾಗಿರುವ ಸಾಧ್ಯತೆಗಳು ಹೆಚ್ಚು. ಅನಂತರದ ಕ್ರಿ.ಶ. ೧೫೦೦ರ ಶಾಸನವು 'ಅಡವಿಯ ನೇಗಿಲು ಹೊಡೆದರೆ ಯೇಳು ಪಾಲು'[೫] ಎಂದು ತಿಳಿಸುತ್ತದೆ. ಅಲ್ಲದೆ ತೆರಿಗೆ ಸಂಗ್ರಹದ ಉದ್ದೇಶದೊಂದಿಗೆ ಆದಾಯ ಹೆಚ್ಚಿಸುವ ಉದ್ದೇಶವನ್ನು ಹೊಂದಿತ್ತು.

ಕೃಷಿ ಭೂಮಿ ವಿಸ್ತರಣೆಯಾದಂತೆ ಆಹಾರದ ಉತ್ಪಾನೆಯೊಂದಿಗೆ ದೇಶದ ಆರ್ಥಿಕತೆಯೂ ಸಮೃದ್ಧವಾಗುತ್ತದೆ. ಇಂದಿಗೂ ಕೃಷಿ ಆರ್ಥಿಕತೆಯ ಒಂದು ಬಹುಮುಖ್ಯ ಭಾಗವೇ ಆಗಿದೆ. ಪ್ರಾಚೀನ ಸಂದರ್ಭದ ಕೃಷಿ ಭೂಮಿಯ ವಿಸ್ತರಣೆ ತೀರದ ಲಾಭಗಳಿಕೆಯ ಉದ್ದೇಶದ ಸಾಧ್ಯತೆಗಳ ಪ್ರಮಾಣದಲ್ಲಿ ವಿರಳತೆಯಿಂದ ಕೂಡಿತ್ತು. ಆದರೆ ಇಂದು ಮನುಷ್ಯನ ತೀರದ ಆಸೆಗಳು ನಾಗಲೋಟದ ಕುದುರೆಯ ವೇಗದಲ್ಲಿ ಸಂಚರಿಸುತ್ತಿವೆ. ಇದರಿಂದಾಗಿ ಇಂದು ಪರಿಸರ ಅಳಿವಿನಂಚಿನಲ್ಲಿದೆ. ಕೃಷಿ ಚಟುವಟಿಕೆ ಜರುಗಲು ಕಾಲಕಾಲಕ್ಕೆ ಬರುವ ಮಳೆ ಬಾರದಾಗಿದೆ. ಜೊತೆಗೆ ಪ್ರಕೃತಿಯೇ ಇಂದು ಇದಕ್ಕೆಲ್ಲ ಉತ್ತರಿಸುವ ಸ್ಥಿತಿ ನಿರ್ಮಾಣಗೊಂಡಿದೆ.



## ಅಡಿಟಿಪ್ಪಣಿಗಳು

೧. ಇತಿಹಾಸ ದರ್ಪಣ, ಚರಿತ್ರಾಸಕ್ತರ ಅಂಕಣ, ಕರ್ನಾಟಕದಲ್ಲಿ ಪುರಾತತ್ವ ಅಧ್ಯಯನಗಳು, ೨೦೧೨, ಪು.ಸಂ. ೩೨.
೨. ಬಾಶಮ್ ಎ.ಎಲ್. (ಮೂಲ), ಡಿ.ಆರ್. ಮಿರ್ಜಿ (ಕನ್ನಡಕ್ಕೆ) ಪ್ರಾಚೀನ ಭಾರತವೆಂಬ ಅದ್ಭುತ, ಪು.ಸಂ. ೧೭.
೩. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು.ಸಂ. ೨೧.
೪. ಅಣ್ಣಿಗೇರಿ ಎ.ಎಂ., ಆರ್. ಶೇಷಶಾಸ್ತ್ರಿ (ಸಂ)., ಶಾಸನ ಸಂಗ್ರಹ, ಪು.ಸಂ ೧೭, ೧೬.
೫. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು.ಸಂ. ೨೧.
೬ ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೦೯, ಶಾ.ಸಂ. ೨೨೫, ಬೇ.
೭. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ ೧೦.
೮. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.ಸಂ. ೩೦೪.
೯. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೦೯, ಶಾ.ಸಂ. ೪೧೦, ಬೇ.
೧೦. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು.ಸಂ. ೨೨.
೧೧. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೦೯, ಶಾ.ಸಂ. ೪೧೦, ಬೇ.
೧೨. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೦೯, ಶಾ.ಸಂ. ೪೩೮, ಬೇ.
೧೩. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪು.ಸಂ. ೨೧.
೧೪. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ ೧, ಶಾ.ಸಂ. ೧೭, ಹಗರಿ.
೧೫. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ ೧೦.

## ಆಕರ ಗ್ರಂಥಗಳು


೧. ಅಣ್ಣಿಗೇರಿ ಎ.ಎಂ., ಆರ್. ಶೇಷಶಾಸ್ತ್ರಿ (ಸಂ)., ಶಾಸನ ಸಂಗ್ರಹ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭.
೨. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೧.
೩. ಬಾಶಮ್ ಎ.ಎಲ್., (ಮೂಲ), ಡಿ.ಆರ್. ಮಿರ್ಜಿ (ಕನ್ನಡಕ್ಕೆ) ಪ್ರಾಚೀನ ಭಾರತವೆಂಬ ಅದ್ಭುತ, ಐಬಿಹೆಚ್ ಪ್ರಕಾಶನ, ಬೆಂಗಳೂರು, ೨೦೧೨.
೪. ಮೋಹನ್‌ಕೃಷ್ಣ ರೈ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೭.
೫. ರೋಮಿಲ ಥಾಪರ್ (ಮೂಲ), ಹೆಚ್.ಎಸ್. ಉಮೇಶ್, ಶಶಿಕುಮಾರ್ ಜೆ., (ಕನ್ನಡಕ್ಕೆ) ದೀಪ, ಅವರ ಪ್ರಾಚೀನ ಭಾರತ, ಉಗಮದಿಂದ ಕ್ರಿ.ಶ. ೧೩೦೦ರವರೆಗೆ, ವಿಸ್ಮಯ ಪ್ರಕಾಶನ, ಮೈಸೂರು, ೨೦೧೬.
೬ ಶರ್ಮ ಆರ್.ಎಸ್., ಪ್ರಾಚೀನ ಭಾರತ, ನವ ಕರ್ನಾಟಕ ಪ್ರಕಾಶನ, ೨೦೦೭.
೭. ಷೇಕ್ ಅಲಿ ಬಿ., (ಪ್ರ) ಶಿವಣ್ಣ ಕೆ.ಎಸ್. (ಸಂ)., ಕರ್ನಾಟಕ ಚರಿತ್ರೆ, ಸಂಪುಟ ೩. ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

## ೩೬

# ಹೊಯ್ಸಳ ಶಾಸನಗಳಲ್ಲಿ ಉಲ್ಲೇಖಗೊಂಡ ಶಾಂತಲೆಯ ವ್ಯಕ್ತಿತ್ವ

ಎಸ್. ಶಿವರಾಮು* ಮಹಾಂತೇಶ ಕುತನಿ**

**ಸು**ಮಾರು ೧೧-೧೨ನೇ ಶತಮಾನದ ಹೊತ್ತಿಗೆ ರಾಷ್ಟ್ರಕೂಟರು ಹಾಗೂ ಚಾಲುಕ್ಯರು ಕರ್ನಾಟಕದ ಕುಲಕೀರ್ತಿಯನ್ನು ದಿಗಂತದಲ್ಲಿ ಬೆಳಗಿ ಅದು ನಂದಿ ಹೋಗುವ ಕಾಲದಲ್ಲಿ ಹೊಯ್ಸಳರು ಪ್ರಬುದ್ಧಮಾನಕ್ಕೆ ಬಂದು ಅದಕ್ಕೆ ತೈಲವನ್ನೆರೆದು ಸುಮಾರು ಮೂರುವರೆ ಶತಮಾನಗಳ ಕಾಲ ವೈಭವದಿಂದ ಬೆಳಗುವಂತೆ ಮಾಡಿದರು. ಹೊಯ್ಸಳರ ಆಳ್ವಿಕೆಯ ಕಾಲ ಕರ್ನಾಟಕದ ಇತಿಹಾಸದಲ್ಲೇ ಅಲ್ಲದೆ ಇಡೀ ದಕ್ಷಿಣ ಭಾರತದ ಇತಿಹಾಸದಲ್ಲೇ ಪ್ರಮುಖ ಅಧ್ಯಾಯಗಳಲ್ಲೊಂದಾಗಿದೆ. ಅವರ ರಾಜಕೀಯ ಇತಿಹಾಸ ಎಷ್ಟು ಭವ್ಯವೋ ಅಷ್ಟೇಭವ್ಯವಾದುದು ಅವರ ಸಾಂಸ್ಕೃತಿಕ ಇತಿಹಾಸ. ಇಂತಹ ಒಂದು ಉಜ್ವಲ ಪರಂಪರೆಗೆ ಅನೇಕ ಪ್ರಮುಖ ಹೊಯ್ಸಳ ಅರಸರು ಕಾರಣರಾದರು. ಈ ಮನೆತನ ಸುಮಾರು ೪೦೦ ವರ್ಷಗಳ ಆಳ್ವಿಕೆ ನಡೆಸಿ ೧೩೪೨ ರ ವೇಳೆಗೆ ಕಣ್ಮರೆಯಾಯಿತು. ದಕ್ಷಿಣ ಭಾರತದಲ್ಲೇ ಒಂದು ಪ್ರಮುಖರಾಜ ಮನೆತನವೆಂದೆನಿಸಿಕೊಂಡು ರಾರಾಜಿಸಿತು. ಹೊಯ್ಸಳ ಅರಸರಲ್ಲಿ ವಿಷ್ಣುವರ್ಧನ ಪ್ರಮುಖನು. ವಿಷ್ಣುವರ್ಧನನ ಈ ಕೀರ್ತಿಪತಾಕೆಯಲ್ಲಿ ಅವನ ಮಡದಿ ಶಾಂತಲಾದೇವಿಯ ಪಾತ್ರ ಹಿರಿದಾದುದು. ಅವಳು ಪ್ರತಿಭಾನ್ವಿತೆ, ಅಪ್ರತಿಮಸುಂದರಿ, ಧೈರ್ಯವಂತೆ ಹಾಗೂ ಯುದ್ಧಾಕ್ರಮಣ ಹಾಗೂ ಆಸ್ಥಾನ ಸಮಿತಿಯಲ್ಲಿ ಪ್ರಮುಖವಾದ ಪಾತ್ರವಹಿಸುತ್ತಿದ್ದಳು. ಅವಳು ಮೂಲತಃ ಜೈನಗಳಾಗಿದ್ದರೂ ಸಹ ಅನ್ಯಧರ್ಮಗಳಾದ ಬೌದ್ಧ, ವೈಷ್ಣವ ಮತ್ತು ಶೈವಪಂಥಗಳನ್ನು ಪ್ರೋತ್ಸಾಹಿಸಿದ್ದುದರ ಪರಿಣಾಮವಾಗಿ "ಚತುಸಮಯ ಸಮುದ್ಧರಣ" ಎಂಬ ಬಿರುದನ್ನು ಗಳಿಸಿದ್ದಳು.

ರಾಣಿ ಶಾಂತಲೆಯ ಬಗ್ಗೆ ಹಲವು ಶಾಸನಗಳೂ ಬೆಳಕನ್ನು ಚೆಲ್ಲುತ್ತವೆ. ಶಾಸನಗಳ ಉಲ್ಲೇಖದನ್ವಯ ಅವಳ ಜೀವಿತಾವಧಿ ಕ್ರಿ.ಶ. ೧೧೧೬ರಿಂದ ೧೧೩೧ ಎಂದು ವಿವರಿಸುತ್ತದೆ. ಕರ್ನಾಟಕದ ಯಾವೊಬ್ಬ ರಾಣಿಯ ಬಗ್ಗೆ ಇಷ್ಟೊಂದು ಶಾಸನಗಳು ಲಭ್ಯವಿಲ್ಲ.

**ಆರಂಭಿಕ ಜೀವನ:**ಶಾಂತಲೆಯು 'ಬಲಿಪುರ' ಎಂಬಲ್ಲಿ ಮಾರಸಿಂಗಯ್ಯ ಮತ್ತು ಮಾಚಿಕಬ್ಬೆ ಎಂಬ ದಂಪತಿಗಳಿಗೆ ಮಗಳಾಗಿ 'ಧರ್ಮೇಶ್ವರ' ಎಂಬ ದೈವ ಕೃಪೆಯಿಂದ ಜನಿಸಿದಳು. ಬಲಿಪುರದ ಧರ್ಮೇಶ್ವರ ಅವರ ಮನೆದೇವರಾಗಿತ್ತು.[೧] 'ಧರ್ಮೇಶ್ವರವರಪ್ರಸಾದಪುತ್ರಿ' ಎಂದು ದಾಖಲೆಯ ಉಲ್ಲೇಖಿಸುತ್ತದೆ.[೨] ಅವಳ ಗುರುಗಳು ಪ್ರಭಾಚಂದ್ರ ಸಿದ್ಧಾಂತದೇವ, ಬಾಲ್ಯದಲ್ಲಿ ಶಾಂತಲೆಗೆ ಒಳ್ಳೆಯ ಶಿಕ್ಷಣವನ್ನು ನೀಡಲಾಯಿತು. ಅವಳ ಬುದ್ಧಿಶಕ್ತಿ ಹಾಗೂ ಸೌಂದರ್ಯದ ಚಿತ್ರಣವನ್ನು ಕ್ರಿ.ಶ. ೧೧೨೩ರ ಒಂದು ಶಾಸನದಲ್ಲಿ ಈ ರೀತಿ ವಿವರಿಸಲಾಗಿದೆ.[೩]

ಶಾಸನಗಳಲ್ಲಿ ಶಾಂತಲೆಯನ್ನು ಕುರಿತು ಹೊಯ್ಸಳ ವಿಷ್ಣುವರ್ಧನ ದೇವರು ಪ್ರವರ್ಧಮಾನವಾಗುತ್ತ ಆಚಂದ್ರಾರ್ಕವಾಗಿ ವಿರಾಜಿಸುವಾಗ ಅವನ ಪಾದಕಮಲ ಸೇವಕಿಯಾದ ಹಿರಿಯರಸಿ ಪಟ್ಟ ಮಹಾದೇವಿ ಶಾಂತಲಾದೇವಿಯು ಎರಡನೆಯ ಲಕ್ಷ್ಮೀಯಾಗಿ ಪತಿಯೊಡನೆ ಅನಂತಭೋಗ ಫಲವನ್ನು ಭೋಗಿಸುತ್ತ ಮಹಾಭಾಗ್ಯ ಪ್ರವರ್ಧಮಾನಳಾಗಿ ಕಂಗೊಳಿಸಿದಳು. ದೋಷರಹಿತವಾದ ಸಕಳ ಗುಣವಂತೆಯೂ ಅಭಿನವ ರುಕ್ಮಿಣೀದೇವಿಯೂ, ವಿವೇಕದಲ್ಲಿ ಏಕೈಕ ಬೃಹಸ್ಪತಿಯೂ, ಸಮಯಸ್ಫೂರ್ತಿಯುಳ್ಳ ವಾಚಸ್ಪತಿಯೂ, ಮುನಿಗಳ ಹಾಗೂ ವಿನೇಯ ವಿನೀತೆಯೂ, ನಾಲ್ಕು ಧರ್ಮಗಳನ್ನು ಉದ್ಧಾರ ಮಾಡಿದವಳೂ, ವ್ರತಶೀಲಗುಣ ಚಾರಿತ್ರಗಳಲ್ಲಿ ಅಂತಃಕರಣವುಳ್ಳವಳೂ, ಲೊಕೈಕ ವಿಖ್ಯಾತಳೂ, ಪಾತಿವ್ರತ್ಯದಲ್ಲಿ ಪ್ರಸಿದ್ಧಳಾದ ಸೀತೆಯೂ, ಕೈ ಮುಗಿದವರ ಚಿಂತಾಮಣಿಯೂ, ಸಮ್ಯಕ್ತ್ವ ಚೂಡಾಮಣಿಯೂ, ಮದಿಸಿದ ಸವತಿಯರ ಪಾಲಿಗೆ ಮದಗಜವೂ, ಪುಣ್ಯಸಂಗ್ರಹಕಾರಣೆಯೂ, ಕಾಮದೇವನ ವಿಜಯಪತಾಕೆಯೂ, ಗೀತವಾದ್ಯ ಸೂತ್ರಧಾರಿಣಿಯೂ ಜಿನಸಮಯ ಪ್ರಾಕಾರೆಯೂ, ಜಿನಧರ್ಮದ ಕಥೆಗಳನ್ನು ಕೇಳುವುದರಲ್ಲಿ ಆನಂದ ಪಡುವವಳೂ, ಆಹಾರ, ಅಭಯ, ಭೈಷಜ (ಔಷಧಿ ಶಾಸ್ತ್ರ) ದಾನ ವಿನೋದೆಯೂ ಜೈನಧರ್ಮದಿಂದ ಪಾವನಗೊಂಡವಳೂ, ಭವ್ಯಜನ ಕರುಣಾಮಯಿಯೂ,

* ಮಹಾಂತ ನಿಲಯ, ದೊಡ್ಡಹುಣಸೆ ಮರದ ಹತ್ತಿರ, ಸವಣೂರು, ಸವಣೂರು ತಾಲ್ಲೂಕು, ಹಾವೇರಿ ಜಿಲ್ಲೆ-೫೮೧೧೧೮.
** ಸಹಾಯಕ ಪ್ರಾಧ್ಯಾಪಕರು, ಸ್ನಾತಕೋತ್ತರ ಇತಿಹಾಸ ವಿಭಾಗ, ಮಹಿಳಾ ಸರ್ಕಾರಿ ಕಾಲೇಜು (ಸ್ವಾಯತ್ತ), ಮಂಡ್ಯ, ಮೊ. ೯೮೪೪೯೯೮೮೧೯

ಜಿನಗಂಧೋದಕದಿಂದ ಪವಿತ್ರವಾದ ಉತ್ತಮಾಂಗವುಳ್ಳವಳೂ ಆಗಿ ವಿರಾಜಿಸಿದಳು, ಚಲಿಸುವ ಕಪ್ಪನೆ ಗುಂಗುರುಗುರುಳುಳ್ಳ ಚಂದ್ರವದನೆಯಾದ, ಕಾಮನ ಸತಿಯಾದ ರತಿಗೆ ಎಣೆಯಾದ ಶಾಂತಲಾದೇವಿಯೂ, ವಿಷ್ಣುವರ್ಧನನ ಮನಕ್ಕೂ ಕಣ್ಣಿಗೂ ಪ್ರಿಯೆಯಾಗಿದ್ದಳು. ಇವಳು ರಣರಂಗದಲ್ಲಿ ವಿಷ್ಣುನೃಪಾಲಕನಿಗೆ ವಿಜಯಲಕ್ಷ್ಮಿಯಾಗಿ, ಇವನ ವಕ್ಷಸ್ಥಳದಲ್ಲಿ ಸದಾ ಪರಮಾನಂದಗೊಂಡು ನೆಲಸಿದ ಸಂಪದಲಕ್ಷ್ಮೀಯಾಗಿ ಪತಿಯ ಪರಾಕ್ರಮದ ಕೀರ್ತಿಯನ್ನು ದಿಗಂತಕ್ಕೆ ಮುಟ್ಟಿಸಿದ ಯಶೋಲಕ್ಷ್ಮೀಯಾಗಿ ರಾರಾಜಿಸಿದ ಈ ಶಾಂತಲೆಯನ್ನು ಪೂರ್ಣವಾಗಿ ಬಣ್ಣಿಸಬಲ್ಲವರಾರು ವಿಷ್ಣುವರ್ಧನನು ಕಲಿಗಾಲದ ವಿಷ್ಣುವಾದರೆ ಶಾಂತಲೆಯು ಕಲಿಗಾಲದ ಲಕ್ಷ್ಮೀಯೂ ಅವನ ವಕ್ಷಸ್ಥಳದಲ್ಲಿ ವಿರಾಜಿಸುತ್ತಿರುವ ಸೌಭಾಗ್ಯವನ್ನು ಯಾರು ತಾನೇ ಬಲ್ಲಿಸಬಲ್ಲರು. ಸದ್ಗುಣವಂತೆ, ಸೌಭಾಗ್ಯವಂತೆಯೂ ಆದ ಶಾಂತಲೆಯ ಮುಂದೆ ಶಾರದೆಯಾಗಲಿ ಅಥವಾ ಲಕ್ಷ್ಮಿಯಾಗಲಿ ಸಮನಾಗಲಾರದು ಎಂದು ಬಣ್ಣಿಸಿದೆ.[೪]

**ವೈವಾಹಿಕ ಜೀವನ:** ಶಾಂತಲೆಯ ವಿವಾಹವು ಬಹುಶಃ ವಿಷ್ಣುವರ್ಧನ ಪಟ್ಟಕ್ಕೆ ಬರುವ ಮುನ್ನವೇ ನಡೆದಿರಬಹುದು. ಶಾಂತಲೆಯು ಒಂದು ಹೆಣ್ಣು ಮತ್ತು ಒಂದು ಗಂಡು ಮಗುವಿಗೆ ಜನ್ಮ ನೀಡಿದಳು. ಅವಳ ಮಗಳಾದ ಹರಿಯಾಲಾದೇವಿಯನ್ನು ವಿಷ್ಣುವರ್ಧನನ ಒಬ್ಬ ದಂಡಾಧಿಕಾರಿಯಾಗಿದ್ದ ಸಿಂಗನೊಂದಿಗೆ ವಿವಾಹ ಮಾಡಲಾಗಿತ್ತು. ಮಗನಾದ ಕುಮಾರ ಬಲ್ಲಾಳ ಯುವರಾಜನಾಗಿದ್ದನು. ಶಾಂತಲಾದೇವಿಯು ವಿಷ್ಣುವರ್ಧನನು ಹೊಯ್ಸಳ ಸಾಮ್ರಾಜ್ಯವನ್ನು ವಿಸ್ತರಿಸುವಲ್ಲಿ ಹಾಗೂ ಆ ಸಾಮ್ರಾಜ್ಯದ ಕೀರ್ತಿ ಪತಾಕೆಯನ್ನು ದಿಗಂತದಲ್ಲಿ ಮೊಳಗಿಸುವಲ್ಲಿ ಅವನಿಗೆ ಸ್ಫೂರ್ತಿಯಾಗಿದ್ದಳು.

**ಆಡಳಿತದಲ್ಲಿ ಶಾಂತಲೆ:** ಶಾಂತಲೆಯು ಹೊಯ್ಸಳ ರಾಜ್ಯಾಡಳಿತದಲ್ಲಿಯೂ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದಳು. ರಾಜನಿಗೆ ರಾಜತಾಂತ್ರಿಕ ನಿರ್ಣಯಗಳಲ್ಲಿ ಕೆಲವೊಮ್ಮೆ ಸೂಕ್ತವಾದ ಸಲಹೆಗಳನ್ನು ನೀಡುತ್ತಿದ್ದಳು. ಹಲವು ದಿಗ್ವಿಜಯಗಳಲ್ಲಿಯೂ ಪಾಲ್ಗೊಳ್ಳುತ್ತಿದ್ದಳು.[೫] ಇಷ್ಟೆಲ್ಲಾ ಕಾರ್ಯದಿಂದ ಹೊಯ್ಸಳ ರಾಜತ್ವದಲ್ಲಿ ಶಾಂತಲೆಯ ಪಾತ್ರ ಅಮೋಘವಾದದ್ದು, ವಿಷ್ಣುವರ್ಧನನು ಮತ್ತು ಪಂಚಪ್ರಧಾನರು ಹಲವು ದಾನದತ್ತಿಗಳನ್ನು ನೀಡುವಾಗ ಶಾಂತಲೆಯು ಹಾಜರಿರುತ್ತಿದ್ದಳು. ಬೇಲೂರಿನ ೧೬ನೆಯ ಶಾಸನದಲ್ಲಿ ತಿಳಿಸಿರುವಂತೆ "...ಪತಿಭಕ್ತಿ ಭಾವದ್ವಾಯಕಂ ಹಿತಂ ಎಂಬುದನ್ನರಿದು ವಿನಯದಿಂ ವಿಷ್ಣು ಮಹಾಪತಿಯಾಗಿ ಮೆಚ್ಚಿಸುತೆ ಮಹಾಸತಿ ಶಾಂತಲಾದೇವಿ ಪಟ್ಟಮಂ ಧರಿಸಿದಳ್...[೬] ಹಾಗೆಯೇ ರಾಜ್ಯಾಧಿಕಾರದಲ್ಲಿ ಸ್ತ್ರೀಯರು ಪ್ರಧಾನಪಾತ್ರವನ್ನು ವಹಿಸುತ್ತಿದ್ದರೆಂಬುದಕ್ಕೆ ಕ್ರಿ.ಶ. ೧೧೨೧ನೇ ವರ್ಷದಲ್ಲಿ ಉಲ್ಲೇಖಿಸಿದ ಚನ್ನರಾಯಪಟ್ಟಣದ ೨೬೧ನೇ ಶಾಸನವು ಈ ರೀತಿ ತಿಳಿಸುತ್ತದೆ. "...ಧರ್ಮವಂ ದೇವನಂ, ಪಟ್ಟಮಹಾದೇವಿ ಶಾಂತಲಾದೇವಿಯರು ಪಂಚಪ್ರಧಾನರೊಳ್ ಇದ್ದು ಶಕವರ್ಷಸ್ವಸ್ತಿ ೧೦೪೨ನೆಯ ಸಾರ್ವರಿ ಸಂವತ್ಸರದ ಉತ್ತರಾಯಣ ಸಂಕ್ರಮಣದಂದು ಶಿವಪಂಡಿತರಿಗೆ ಧಾರಪೂರ್ವಕವಾಗಿ ನೀಡಿದ್ದಳೆಂದು ತಿಳಿದುಬರುತ್ತದೆ.[೭] ಹಾಗೆಯೇ ಬೇಲೂರಿನ ದೇವಾಲಯದಲ್ಲಿ ವಿಷ್ಣುವರ್ಧನ ಮತ್ತು ಶಾಂತಲಾದೇವಿಯ ದರ್ಬಾರಿನ ದೃಶ್ಯಗಳನ್ನು ಕೆತ್ತಿರುವುದನ್ನು ನಾವು ಗಮನಿಸಬಹುದು.

**ಜೈನಧರ್ಮಕ್ಕೆ ಪ್ರೋತ್ಸಾಹ:** ಕರ್ನಾಟಕದ ಜೈನಧರ್ಮದ ಚರಿತ್ರೆಯಲ್ಲಿ ಶಾಂತಲೆಯ ಹೆಸರು ಬಲವಾಗಿನಿಲ್ಲುತ್ತದೆ. ಜೈನಧರ್ಮಕ್ಕೆ ಸಂಬಂಧಿಸಿದ ಅವಳ ಹಲವು ಬಿರುದುಗಳು ಅವಳೊಬ್ಬ ಪರಿಪೂರ್ಣಜೈನಗಳಾಗಿದ್ದಳೆಂಬುದನ್ನು ದೃಢೀಕರಿಸುತ್ತವೆ. ಜಿನಧರ್ಮನಿರ್ಮಲೆ, ಜಿನಧರ್ಮಕಾಂತಕಾಂತನ ಪ್ರಮೋದೆ. ಜಿನಗಂಧೋದಕ ಪವಿತ್ರೀಕೃತೋತ್ತಮಾಂಗೆ ಮತ್ತು ಜಿನಸಮಯ ಸಮುದ್ಧಿತ ಪ್ರಕಾರೆ, ಜೈನಧರ್ಮ ಚೂಡಾಲಂಕಾರದ ಅನರ್ಘ್ಯಮಣಿ ಮತ್ತು ಜೈನಧರ್ಮವನ್ನು ಆಳವಾಗಿ ಕಟ್ಟುವವಳು ಎಂದು ವಿವರಿಸಲಾಗಿದೆ. ಶಾಂತಲೆಯ ತಾಯಿ ಮಾಚಿಕಬ್ಬೆ ಉಜ್ವಲ ಜೈನಧರ್ಮದ ಆರಾಧಕಳಾಗಿದ್ದಳು. ಪ್ರಭಾಚಂದ್ರ ಸಿದ್ಧಾಂತ ದೇವ ಶಾಂತಲೆಯ ಗುರುಗಳಾಗಿದ್ದರು.[೮]

**ಸವತಿ ಗಂಧವಾರಣ ಬಸ್ತಿ:** ಸವತಿಗಂಧವಾರಣ ಬಸ್ತಿಯನ್ನು ಎರಡುಕಟ್ಟೆಬಸ್ತಿಯ ಬಲಕ್ಕಿರುವ ದೇವಾಲಯವನ್ನು ಹೊಯ್ಸಳ ವಿಷ್ಣವುರ್ಧನನ ಪಟ್ಟದರಾಣಿ ಶಾಂತಲೆಯು ಕ್ರಿ.ಶ. ೧೧೨೩ರಲ್ಲಿ ಕಟ್ಟಿಸಿದಳು. ಅವಳ ಬಿರುದುಗಳಲ್ಲೊಂದಾದ "ಸವತಿಗಂಧವಾರಣ" ಎಂಬುದನ್ನೆ ಈ ಬಸದಿಗೂ ಇಟ್ಟಿರುವುದು ತುಂಬಾ ಕುತೂಹಲಕಾರಿಯಾದ ವಿಷಯ.[೯] ಶೈವನಾದ ಮಾರಸಿಂಗನಿಗೂ ಜಿನಭಕ್ತಳಾದ ಮಾಚಿಕಬ್ಬೆಗೂ ಜನಿಸಿದ ಶಾಂತಲೆಯು ಸರ್ವಧರ್ಮ ಸಮನ್ವಯವನ್ನು ಹುಟ್ಟಿನಿಂದಲೇ ಸಿದ್ಧಿಸಿಕೊಂಡವಳು. ಸಿಂಹಪೀಠದ ಮೇಲೆ ಪರ್ಯಂಕಾಸನದಲ್ಲಿ ಕುಳಿತ ವಿಗ್ರಹವು ೧೬ನೆಯ ತೀರ್ಥಂಕರನಾದ ಶಾಂತಿನಾಥನದು. ಅಂತರಾಳದಲ್ಲಿರುವ ಪುತ್ಥಳಿಗಳು ಸರ್ವಾಹ್ಣ ಹಾಗೂ ಅಂಬಿಕೆಯರವು. ನವರಂಗದಲ್ಲಿರುವ ಚಿಕ್ಕ, ದುಂಡಾದ, ಕಂಬಗಳಿಗೂ ಸಾಂಪ್ರದಾಯಿಕ ಹೊಯ್ಸಳ ಕಂಬಗಳಿಗೂ, ಇರುವ ಭಿನ್ನತೆ ಸುಲಭವಾಗಿ ಎದ್ದುಕಾಣುವುದು. ಈ ಬಸದಿಯ ಶಿಖರವು ಚಾವುಂಡರಾಯ ಬಸ್ತಿಯ ಶಿಖರವನ್ನು ಸ್ಥೂಲವಾಗಿ ಹೋಲುವುದು ಆದರೆ, ಮೇಲಿಂದ ಮೇಲೆ ಜೀರ್ಣೋದ್ಧಾರಗೊಂಡ ಈ ಗಾರೆ ಇಟ್ಟಿಗೆಯ ಕಟ್ಟಡವು ತನ್ನ ಮೂಲ ಆಕರ್ಷಣೆಯನ್ನು ಕಳೆದುಕೊಂಡಿದೆ.[೧೦]

ರಾಣಿ ಶಾಂತಲೆಯು ಜೈನಬಸದಿ ಮತ್ತು ದೇವಾಲಯಗಳಿಗೆ ಹಲವಾರು ದಾನಗಳನ್ನು ನೀಡಿದ್ದಾಳೆ. 'ಜೈನಧರ್ಮದ ಮುಕುಟಮಣಿ' ಎಂದು ಅವಳನ್ನು ವರ್ಣಿಸಲಾಗಿದೆ. ಉದಾರ ಧಾರ್ಮಿಕ ಪ್ರವೃತ್ತಿವುಳ್ಳ ಶಾಂತಲೆಯು ಧರ್ಮಪ್ರವರ್ತಕರಿಗೆ ಆಹಾರ, ವಸತಿ ಮತ್ತು ಔಷಧಿ ಮುಂತಾದವುಗಳನ್ನು ಉದಾರವಾಗಿ ನೀಡುತ್ತಿದ್ದಳು. ರೋಗಿಗಳಿಗೆ ಅಂಗಹೀನರಿಗೆ ಮತ್ತು ಬಡವರಿಗೂ ಸಹಾ ನೆರವು ನೀಡುತ್ತಿದ್ದಳು. ಚಿಕ್ಕಬೆಟ್ಟದ ಶಾಸನವೊಂದರಲ್ಲಿ ಕ್ರಿ.ಶ. ೧೧೨೩ರಲ್ಲಿ ಪಟ್ಟಮಹಾದೇವಿ ಶಾಂತಲೆಯು ಬೆಳಗೊಳದಲ್ಲಿ ಸವತಿಗಂಧವಾರಣ ಬಸ್ತಿಯನ್ನು ಕಟ್ಟಿಸಿ ಜೈನಸನ್ಯಾಸಿಗಳ ಅನ್ನ ಸಂತರ್ಪಣೆಗಾಗಿ ಕಲ್ಕಣಿನಾಡಿನ ಮೊಟ್ಟೆನವಿಲೆ ಗ್ರಾಮವನ್ನು ಪ್ರಭಾಚಂದ್ರ ಸಿದ್ಧಾಂತದೇವನ ಕಾಲ್ತೊಳೆದ ಮೇಲೆ ದಾನ ನೀಡಿದಳು ಎಂದಿದೆ.[೧೧] ಅದೇ ವರ್ಷದ ಇನ್ನೊಂದು ದಾಖಲೆಯಲ್ಲಿ ಶಾಂತಲೆ 'ವಿಲಾಸನಕಟ್ಟೆ' ಕೆರೆಯನ್ನು ಕಟ್ಟಿಸಿ ಬೆಳಗೊಳದ ಸವತಿಗಂಧ ಬಸದಿಗೆ ದಾನನೀಡಿದಳು ಎಂದಿದೆ. ಅಲ್ಲದೆ ಗಂಗಸಮುದ್ರದ ಕೆಳಗಿನ ಮಧ್ಯ ಬಯಲಿನಲ್ಲಿ ೪೦ ಕೊಳಗ ಆದಾಯ ಬರುವ ಗದ್ದೆಯನ್ನು ಹೊಯ್ಸಳ ವಿಷ್ಣುವರ್ಧನನಿಂದ ಪಡೆದುಕೊಂಡು ತಾನು ಕಟ್ಟಿಸಿದ ಸವತಿಗಂಧವಾರಣ ಬಸದಿಗೆ ದಾನವಾಗಿ ನೀಡಿದಳು ಎಂದಿದೆ.[೧೨]

**ಶೈವ ಮತ್ತು ವೈಷ್ಣವ ಧರ್ಮಕ್ಕೆ ಪ್ರೋತ್ಸಾಹ:** ರಾಣಿ ಶಾಂತಲೆಯು ಜೈನಧರ್ಮೀಯಳಾಗಿದ್ದರೂ ಸರ್ವಧರ್ಮ ಸಮನ್ವಯ ತತ್ವಕ್ಕನುಗುಣವಾಗಿ ಎಲ್ಲಾ ಧರ್ಮವನ್ನೂ ಪ್ರೋತ್ಸಾಹಿಸುತ್ತಿದ್ದಳು. ಆಕೆಯು ಜೈನಳೇ ಆಗಿದ್ದರೂ ಶೈವಸಂಸ್ಥೆಗಳನ್ನು ಗೌರವಿಸಿದಳು ಮತ್ತು ಅವುಗಳಿಗೆ ಧನಸಹಾಯ ಮಾಡಿದಳು. ಆಕೆಯ ತಂದೆಯಾದ ಮಾರಸಿಂಗನು ಶೈವಭಕ್ತನಾಗಿದ್ದನು ಮತ್ತು ಆತನ ಕುಟುಂಬದ ದೈವವು ಬಳ್ಳಿಗಾವೆಯ ಧರ್ಮೇಶ್ವರವಾಗಿದ್ದಿತು. ವಾಸ್ತವವಾಗಿ ಆತನು ಬಳ್ಳಿಗಾವೆಗೆ ಹೋಗಿ ಅಲ್ಲಿ ಶೈವ ಧಾರ್ಮಿಕ ಚಟುವಟಿಕೆಗಳಲ್ಲಿ ಭಾಗವಹಿಸಿದ್ದನು. ಶಾಂತಲಾದೇವಿಯ ಸೋದರಳಿಯನಾದ ಬಲ್ಲಯ್ಯನಾಯಕನೂ ಸಹ ನಿಷ್ಠಾವಂತ ಶೈವನಾಗಿದ್ದನು. ಆತನು ಕ್ರಿ.ಶ. ೧೧೧೬ರಲ್ಲಿ ಮೂಲಗುರುವಿನಲ್ಲಿ ಕಮ್ಮಟೇಶ್ವರನ ದೇವಾಲಯವನ್ನು ಸ್ಥಾಪಿಸಿದನು.[೧೩] ಶಿಲಾಶಾಸನವೊಂದರಲ್ಲಿ ಶಾಂತಲೆಯು ಧರ್ಮೇಶ್ವರನಿಂದ ವರಪಡೆದವಳೆಂದೂ ಈಶ್ವರಹಳ್ಳಿಯಲ್ಲಿ ರಾಮೇಶ್ವರ ದೇವಾಲಯದ ಸ್ಥಾಪಕಳೆಂದೂ ಹೊಗಳಲ್ಪಟ್ಟಿದ್ದಾಳೆ.[೧೪] ಆಕೆಯ ಪತಿಯಿಂದ ವಿರೂಪಾಕ್ಷಪುರದಲ್ಲಿ ಜಯಗೊಂಡೇಶ್ವರ ಮತ್ತು ಚಂಡೀಶ್ವರ ದೇವಾಲಯಗಳಿಗೆ ಧನಸಹಾಯ ಮಾಡಿದಾಗ ಶಾಂತಲೆಯೂ ಉಪಸ್ಥಿತಳಿದ್ದಳೆಂದು ಕ್ರಿ.ಶ. ೧೧೨೧ರ ಶಾಸನವೊಂದು ಹೇಳುತ್ತದೆ.[೧೫]

ಶಾಂತಲೆಯು ತನ್ನ ತಂದೆ ಕಟ್ಟಿಸಿದ ಸೋಮೇಶ್ವರ ದೇವಾಲಯಕ್ಕೆ ಧಾರಾಳವಾಗಿ ದಾನ ಮಾಡಿದಳು.[೧೬] ತಕ್ಷಣವೇ ವಿಷ್ಣುವರ್ಧನನೂ ಅವಳ ಜೊತೆಗೂಡಿ ಸ್ಥಾನಪತಿ (ಪುರೋಹಿತ) ಶಿವಶಕ್ತಿ ಪಂಡಿತನ ಜೀವನೋಪಾಯಕ್ಕಾಗಿ ಮತ್ತೊಂದಷ್ಟು ಭೂಮಿಯನ್ನು ದಾನಮಾಡಿದ. ಇದು ನಡೆದದ್ದು ಕ್ರಿ.ಶ. ೧೧೨೨ರಲ್ಲಿ[೧೭] ಕೇಶವಾಯಶಿವಾಯಚ" ಎಂಬ ಪ್ರಾರ್ಥನೆಯೊಂದಿಗೆ ಆರಂಭವಾಗುವ ಬೇಲೂರು ತಾಲ್ಲೂಕಿನ ದಾಖಲೆಯೊಂದರಲ್ಲಿ ವಿಜಯನಾರಾಯಣ, ಲಕ್ಷ್ಮೀನಾರಾಯಣ ಮತ್ತು ಕೇಶವ ದೇವರ ನಿತ್ಯಪೂಜೆ, ಅಲಂಕಾರ ಮತ್ತು ಮೂರು ಬಾರಿ ನೈವೇದ್ಯಕ್ಕಾಗಿ, ಶ್ರೀ ವೈಷ್ಣವ ಬ್ರಾಹ್ಮಣರು, ನರ್ತಕಿಯರು, ಕುಂಬಾರರು, ವಿದ್ವಾಂಸರು ಮತ್ತು ಹಾರ ಮಾಡುವವರ ಜೀವನೋಪಾಯಕ್ಕಾಗಿ ವಿಷ್ಣುವರ್ಧನನು ರಾಣಿ ಶಾಂತಲೆಯೊಂದಿಗೆ ಗ್ರಾಮಗಳನ್ನು ದಾನಮಾಡಿದನು ಎಂದಿದೆ.[೧೮] ಅಲ್ಲದೆ ದೇವಾಲಯದ ಆದಾಯದಿಂದಾಗುವ ಲಾಭವನ್ನು ದೇವಾಲಯದ ದುರಸ್ತಿ ಕಾರ್ಯಕ್ಕೆ ಬಳಸುವಂತೆ ಅವನು ಆದೇಶಿಸಿದ. ಶಾಂತಿಗ್ರಾಮವೆಂಬ ಹಳ್ಳಿಯನ್ನು ತನ್ನ ಪತಿಯಿಂದ ಶಾಂತಲಾದೇವಿ ಉಡುಗೊರೆಯಾಗಿ ಪಡೆದಳು ಹಾಗೂ ಈ ಹಳ್ಳಿಯ ಭೂಮಿಯನ್ನು ೨೨೦ ಬ್ರಾಹ್ಮಣರಿಗೆ ಹಂಚಿದಳೆಂದು ಕ್ರಿ.ಶ. ೧೧೨೩ಕ್ಕೆ ಸೇರಿದ ಶಾಸನವೊಂದು ಸಾರುತ್ತದೆ. ಶಾಂತಲೆಯು ತನ್ನ ಜೀವವನ್ನು ಅಂತ್ಯಗೊಳಿಸಲು ಆಯ್ದುಕೊಂಡದ್ದು ಜೈನ ಅಥವಾ ವೈಷ್ಣವ ಕೇಂದ್ರವನ್ನಲ್ಲ. ಆದರೆ ಅತಿದೊಡ್ಡ ಶೈವಧಾರ್ಮಿಕ ಕೇಂದ್ರವಾಗಿದ್ದ ಶಿವಗಂಗಾ ಹೆಸರಿನ ಶೈವ ಕೇಂದ್ರವನ್ನು ಆಯ್ದುಕೊಂಡಳೆನ್ನುವುದು ಬಹುಸ್ವಾರಸ್ಯಕರವಾದುದು.

**ಸಂಗೀತ, ನೃತ್ಯ ಮತ್ತು ಲಲಿತಕಲೆಗೆ ಶಾಂತಲೆಯ ಕೊಡುಗೆಗಳು:** ರಾಣಿ ಶಾಂತಲಾದೇವಿ ಲಲಿತಕಲೆಗಳಲ್ಲಿ ಉತ್ತಮ ಕುಶಲತೆಯನ್ನು ಹೊಂದಿದ್ದಳು. ಇವಳ ಹೆಸರು ಸಂಗೀತ ಮತ್ತು ನೃತ್ಯ ಲೋಕದಲ್ಲಿ ನಾಣ್ನುಡಿಯಾಗಿದೆ. ಇವಳನ್ನು 'ನೃತ್ಯ ಸರಸ್ವತಿ', 'ನಾಟ್ಯ ಶಾರದೆ' ಎಂದು ಗುಣಗಾನ ಮಾಡಲಾಗಿದೆ. ಶಾಸನವೊಂದು ವರ್ಣಿಸುವಂತೆ "ಭರತ ಗ್ರಾಮದ ಮನೆಯಲ್ಲಿ ರತ್ನದ ದೀಪವಾಗಿದ್ದು, ಉದ್ದವಾದ ಜಡೆಯನ್ನು ಬಿಟ್ಟ ಸುಂದರಿಯರು ಅವಳ ಪಾದದ ಉಗುರುಗಳಿಗೆ ಪೂಜೆ ಮಾಡುತ್ತಿದ್ದರು. ಶಾಂತಲಾದೇವಿಯು ನೃತ್ಯದ ರತ್ನ ಮತ್ತು ಗಾನ ಸರಸ್ವತಿಯಾಗಿದ್ದಳು.[೧೯]

ಕ್ರಿ.ಶ. ೧೧೧೭ರ ವಿಷ್ಣುವರ್ಧನನ ಪ್ರಖ್ಯಾತ ಬೇಲೂರು ಶಾಸನವು ವಿಷ್ಣುವರ್ಧನ ಮತ್ತು ರಾಣಿ ಶಾಂತಲೆಯ ವ್ಯಕ್ತಿತ್ವದ ಮೇಲೆ ಬೆಳಕನ್ನು ಚೆಲ್ಲುತ್ತದೆ. ಶಾಸನದ ಉಲ್ಲೇಖದನ್ವಯ ಶಾಂತಲೆಯು ಕಲೆಯ ಆರಾಧಕಳಾಗಿದ್ದು, ಭರತನ ನಾಟ್ಯಶಾಸ್ತ್ರ ಪ್ರವೀಣೆಯಾಗಿದ್ದು, ಭರತನ ಆಗಮನಶಾಸ್ತ್ರ ನೃತ್ಯಶೈಲಿಯಲ್ಲಿ ಪಾಂಡಿತ್ಯವುಳ್ಳವಳಾಗಿದ್ದಳು.[೨೦] ಶಾಸನದಲ್ಲಿ

ಉಲ್ಲೇಖಗೊಂಡಿರುವ ಶಾಂತಲೆಯ ನೃತ್ಯದ ವಿವಿಧ ಪ್ರಕಾರಗಳ ಬಗ್ಗೆ ನಿರ್ದಿಷ್ಟ ವಿಚಾರಗಳನ್ನು ತಿಳಿಸುವುದು ಕಷ್ಟವೆನಿಸುತ್ತದೆ. ಸಾಂಪ್ರದಾಯಿಕ ಮತ್ತು ಜಾನಪದ ನೃತ್ಯ ಇವೆರಡೂ ಪ್ರಕಾರಗಳ ಬಗ್ಗೆ ಶಾಸನದಲ್ಲಿ ಉಲ್ಲೇಖಗೊಂಡಿದೆ. ಕೆಲವೊಂದು ಶಾಸನಗಳು ಶಾಂತಲೆಯ ನೃತ್ಯದ ತಾಂತ್ರಿಕ ಗುಣಲಕ್ಷಣಗಳನ್ನೂ ಉಲ್ಲೇಖಿಸಿದೆ.[೨೦] ಅವುಗಳಲ್ಲಿ ತಿಳಿಸಿರುವಂತೆ ಶೃತಿಯೊಳ್ ಸ್ವರದೊಳ್ ಕ್ರಮದ್ವಿತೀಯದೊಳ್ ಮೃಚ್ಛನಳಿಯೊಳ್ ಬೂತನ ಸ್ಥಿತಿಯೊಳ್ ರಾಗಭಕ್ತಿಯೊಳ್ ಎಂದು ಗುಣಗಾನ ಮಾಡಲಾಗಿದೆ. ಬೇಲೂರು ದೇವಾಲಯದ ಮದನಿಕ ಶಿಲ್ಪಗಳು ಶಾಂತಲೆಯ ನೃತ್ಯದ ವಿವಿಧ ಭಂಗಿಗಳನ್ನು ಪ್ರಾತಿನಿಧಿಸುತ್ತಿದೆ ಎಂದು ಹಲವು ವಿದ್ವಾಂಸರು ನಂಬಿದ್ದಾರೆ.

ರಾಣಿ ಶಾಂತಲಾದೇವಿಯ ಅಂತಿಮ ದಿನಗಳು ದುಃಖಮಯವಾಗಿದ್ದವು. ಕ್ರಿ.ಶ. ೧೧೩೧ರ ವೇಳೆಯಲ್ಲಿ ತನ್ನ ಮಗನಾದ ಯುವರಾಜ ಕುಮಾರ ಬಲ್ಲಾಳ ಪಟ್ಟಕ್ಕೆ ಬರುವುದಕ್ಕೆ ಮುನ್ನವೇ ಮರಣಕ್ಕೆ ತುತ್ತಾದನು. ಈ ಘಟನೆ ಶಾಂತಲಾದೇವಿಯ ಮನಸ್ಸಿನ ಮೇಲೆ ಆಘಾತಕಾರಿಯಾದ ಪರಿಣಾಮವನ್ನುಂಟು ಮಾಡಿತು. ಇದರಿಂದ ಮನನೊಂದು ಶಾಂತಲೆಯು ಕ್ರಿ.ಶ. ೧೧೩೧ರಲ್ಲಿ ಶಿವಗಂಗೆಯಲ್ಲಿ ಸಲ್ಲೇಖನಾ ವ್ರತದಿಂದ ತನ್ನ ಜೀವನವನ್ನು ಅಂತ್ಯಗೊಳಿಸಿಕೊಂಡಳು.[೨೨] ತುಂಬು ಯೌವನದಲ್ಲಿ, ತನ್ನ ಕೀರ್ತಿಯ ಪರಾಕಾಷ್ಠೆಯಲ್ಲಿ ಶಾಂತಲೆಯು ಸನ್ಯಸನ ವಿಧಿಯನ್ನಂಗೀಕರಿಸಿ ಪ್ರಾಣತ್ಯಾಗಮಾಡಲು ಯಾವಸನ್ನಿವೇಶಗಳು ಕಾರಣವಾದವು ಎಂಬುದು ಅಜ್ಞಾತವಾಗಿಯೇ ಉಳಿದಿದೆ. ಶಿವಗಂಗೆಯಂತಹ ಶೈವಕ್ಷೇತ್ರದಲ್ಲಿ ಅವಳು ಸನ್ಯಾಸನ ವಿಧಿಯಿಂದ ಮಡಿಯಬೇಕಾದರೆ ಅವಳಿಗೆ ಅಲ್ಲಿ ಅನಿರೀಕ್ಷಿತವಾಗಿ ಕ್ಷಿಪ್ರಗತಿಯಲ್ಲಿ ಸಾವು ಒದಗಿರಬೇಕು. 'ಶಾಂತಲದೇವಿಯು ಕರ್ನಾಟಕ ಸಂಸ್ಕೃತಿಯ ಹೊಮ್ಮಿಸಿರುವ ಹೂವು ಎಂಬ ವಿದ್ವಾಂಸರ ಉದ್ಗಾರವು ಸಾಧುವಾದುದು.[೨೩]

ಹೀಗೆ ವೈಭವದಿಂದ ಕೂಡಿದ ಇವಳ ಜೀವನ ಕೊನೆಗೊಂಡಿತು. ಶ್ರವಣಬೆಳಗೊಳ ಹಾಗೂ ಶಾಸನಗಳು ಅವಳ ಉತ್ತಮಗುಣಗಳ ಬಗ್ಗೆ ಬೆಳಕನ್ನು ಚೆಲ್ಲುತ್ತವೆ.



## ಅಡಿಟಿಪ್ಪಣಿಗಳು

೧. E.C. V Bl.58,1117. A.D.
೨. E.C. V Hn. 116. 1123. A.D.
೩. E.C. V Hn. 116.1123. A.D.
೪. ಬ್ರಹ್ಮಪ್ಪ.ಜಿ. (೧೯೮೮) ಶ್ರವಣಬೆಳಗೊಳದ ಶಾಸನಗಳು, ಶ್ರವಣಬೆಳಗೊಳ, ಪು. ೫೬-೫೭.
೫. Padma.M.B. (1993), The position of women in medieval Karnataka- p.56.
೬ E.C. V Bl. 58.1117. A.D.
೭. E.C. V CP. 261.1121. A.D.
೮. E.C. V Sb. 132 & 140.
೯. Gopal.R. (2000) Cultural Study of Hoysala inscriptions. Mysore P. 169.
೧೦. Settar.S. (1981) Sravanabelgaola-P. 21.
೧೧. E.C. ll. Sb. 132 & 140.
೧೨. Diwakar.R.R. (Ed) (1955) Karnatakadarshana, Bombay. P. 53.
೧೩. E.C. lll. 274.
೧೪. E.C. Vll.Ch. 383.
೧೫. E.C.V. Cn. 260.
೧೬. E.C. V. AK. 124.
೧೭. E.C. V. Cn. 260.
೧೮. E.C. V. Cn. 20.
೧೯. E.C. V. Bl. 58.
೨೦. E.C. V. BI. 16.
೨೧. E.C. V. Bl. 16.
೨೨. E.C. II. Sb. 143.1131.A.D..
೨೩. ಚಿದಾನಂದಮೂರ್ತಿ (೨೦೦೨), ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ-ಬೆಂಗಳೂರು, ಪು. ೪೭೩.

# ಮೈಸೂರು ಜಿಲ್ಲೆಯ ಶಾಸನೋಕ್ತ ನಾಡುಗಳು

ಟಿ.ಎಲ್. ಜಗದೀಶ* ಕೆ.ವಿ. ಮುರಳಿ**

ಕರ್ನಾಟಕ ಬಹಳ ಸಂಪದ್ಭರಿತವಾದ ಪ್ರದೇಶವಾಗಿದ್ದು ಈ ಸ್ಥಳವನ್ನು ಹಲವು ರಾಜವಂಶಗಳು ಆಳ್ವಿಕೆ ನಡೆಸಿವೆ. ಅವರ ಆಳ್ವಿಕೆಯ ಸಂದರ್ಭದಲ್ಲಿ ಪರಿಣಾಮಕಾರಿ ಆಡಳಿತಕ್ಕಾಗಿ ಈ ಪ್ರದೇಶವನ್ನು ವಿವಿಧ ಭಾಗಗಳಾಗಿ ವಿಂಗಡಿಸಿಕೊಂಡು ಆಡಳಿತ ನಡೆಸಿರುವುದು ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ. ಈ ಹಿನ್ನೆಲೆಯಲ್ಲಿ ಒಂದು ರಾಜ್ಯವನ್ನು ಆಡಳಿತಾತ್ಮಕವಾಗಿ ಪ್ರಾಂತ್ಯ, ಮಂಡಲ, ನಾಡು, ವಿಷಯ, ಪರಗಣ, ಸೀಮೆ, ಗ್ರಾಮ ಎಂದು ವಿಭಾಗಿಸಿಕೊಂಡು ಆಳ್ವಿಕೆ ಮಾಡುತ್ತಿದ್ದರು. ಪ್ರತಿಯೊಂದು ಘಟಕಕ್ಕೂ ಪ್ರತ್ಯೇಕ ನಾಯಕ ಅಥವಾ ಮುಖಂಡ ಇದ್ದು ಆಡಳಿತವನ್ನು ಸುಸೂತ್ರಗೊಳಿಸಲು ಶ್ರಮಿಸುತ್ತಿದ್ದನು.

ರಾಜ್ಯದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ರಾಜನು ಒಂದು ಕೇಂದ್ರಾಡಳಿತ ಪ್ರದೇಶವನ್ನಾಗಿಸಿ ಆಳ್ವಿಕೆ ಮಾಡುತ್ತಿದ್ದನು. ಅವನಿಗೆ ಸಹಕಾರ ನೀಡುತ್ತಿದ್ದವರು ಪ್ರಾಂತ್ಯಾಧಿಕಾರಿಗಳು, ದಳವಾಯಿಗಳು. ಹಾಗೆಯೇ ಮಂಡಲ, ನಾಡು, ಪರಗಣ, ವಿಷಯ, ಸೀಮೆ, ಗ್ರಾಮ ಎಂದು ವಿಭಜಿಸಿ ಪ್ರತಿಘಟಕಕ್ಕೂ ಮುಖ್ಯಸ್ಥನನ್ನು ನೇಮಿಸುತ್ತಿದ್ದುದು ಇತಿಹಾಸ ಹಾಗೂ ಶಾಸನಗಳಿಂದ ತಿಳಿದುಬರುತ್ತದೆ. ಮಂಡಲವನ್ನು ಮಂಡಲೇಶ್ವರರು ಆಳ್ವಿಕೆ ನಡೆಸುತ್ತಿದ್ದಂತೆಯೇ ನಾಡುಗಳನ್ನು ನಾಡಗಾವುಂಡ ಅಥವಾ ನಾಡಪ್ರಭು ಆಳ್ವಿಕೆ ಮಾಡುತ್ತಿದ್ದನು. ಪ್ರಸ್ತುತ ಪ್ರತಿ ಹಳ್ಳಿಗಳಲ್ಲೂ ಅಂತಹ ನಾಡಗಾಂವುಡ ಮನೆತನಗಳು ಇರುವುದನ್ನು ಗಮನಿಸಬಹುದಾಗಿದೆ.

ಹೀಗೆ ಪ್ರತಿ ಆಡಳಿತ ಹಂತದಲ್ಲಿಯೂ ಒಬ್ಬೊಬ್ಬ ಮುಖ್ಯಸ್ಥನನ್ನು ನೇಮಿಸಿ ಅವನಿಂದ ಆಡಳಿತ ನಿರ್ವಹಣೆ ಮಾಡಿಸುವ ಪೂರ್ಣ ಹೊಣೆಗಾರಿಕೆ ಆ ದೇಶದ ಅಥವಾ ಆ ರಾಜ್ಯದ ರಾಜನದಾಗಿರುತ್ತಿತ್ತು. ಈ ವ್ಯವಸ್ಥೆಯು ಕೇವಲ ಒಂದು ರಾಜಮನೆತನಕ್ಕೆ ಸೀಮಿತವಾಗದೆ ಬಹುಪಾಲು ರಾಜ ಮನೆತನಗಳು ಇದೇ ಮಾದರಿಯನ್ನು ಅನುಸರಿಸುತ್ತಿದ್ದವು. ಕೆಲವು ಸಂದರ್ಭಗಳಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳನ್ನು ಆಡಳಿತದ ಹಿತದೃಷ್ಟಿಯಿಂದ ಮಾಡಿಕೊಳ್ಳುತ್ತಿದ್ದರೆಂದು ಚರಿತ್ರೆಯಲ್ಲಿ ದಾಖಲಿಸಲಾಗಿದೆ. ಇಂತಹ ವ್ಯವಸ್ಥಿತ ಆಡಳಿತದ ಮಾದರಿಯನ್ನು ಅರಿಯಲು ಶಾಸನಗಳನ್ನು ಅವಲೋಕನ ಮಾಡಿದರೆ ಅದರ ಸ್ಪಷ್ಟ ಚಿತ್ರಣ ದೊರಕುತ್ತದೆ. ಮೈಸೂರು ಜಿಲ್ಲೆಯ ಶಾಸನೋಕ್ತ ನಾಡುಗಳು ಎಂದು ಈ ಪ್ರದೇಶವನ್ನು ಪ್ರತ್ಯೇಕಿಸಿ ಆಳ್ವಿಕೆ ಮಾಡುವ ವ್ಯವಸ್ಥೆ ಅಂದಿನ ದಿನಗಳಲ್ಲಿ ಜಾರಿಯಲ್ಲಿತ್ತು. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಮೈಸೂರು ಜಿಲ್ಲೆಯ ಶಾಸನಗಳ ಮೂಲಕ ನಾಡುಗಳನ್ನು ಕುರಿತು ಅರಿಯುವ ಪ್ರಯತ್ನ ಇದಾಗಿದೆ.

ಮೈಸೂರು ಜಿಲ್ಲೆಯು ಏಳು ತಾಲ್ಲೂಕುಗಳನ್ನು ಒಳಗೊಂಡಿದ್ದು ಮೈಸೂರು ಸಹ ಒಂದು ನಾಡಾಗಿತ್ತು ಎಂಬುದಾಗಿ ಹಲವು ಶಾಸನಗಳು ದೃಡೀಕರಿಸುತ್ತವೆ. ಈ ನಾಡಿನ ಕಲ್ಪನೆಯಾದರೂ ಬಹಳ ಪ್ರಾಚೀನವಾದುದು. ಕ್ರಿ.ಶ. ೯ನೇ ಶತಮಾನದ ಕವಿರಾಜಮಾರ್ಗಕಾರ 'ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್' ಎಂದು ಪ್ರಸ್ತಾಪಿಸಿದ್ದಾನೆ. ಈ ಮಾತು ನಾಡುಗಳನ್ನು ಕುರಿತಾಗಿ ಹೇಳಿರುವ ಮಾತಾಗಿದೆ. ಅಂದರೆ ಈ ನಾಡುಗಳು ಇಂದು ನೆನ್ನೆಯದಾಗಿರದೆ ಅದಕ್ಕೆ ಪ್ರಾಚೀನಕಾಲದ ಇತಿಹಾಸವಿದೆ ಎನ್ನುವುದು ಕವಿರಾಜ ಮಾರ್ಗಕಾರನ ಹೇಳಿಕೆಯಿಂದ ಮನದಟ್ಟಾಗುತ್ತದೆ.

ಆ ಕಾಲಘಟ್ಟದಲ್ಲಿಯೂ ನಾಡುಗಳ ಅಸ್ತಿತ್ವ ಇತ್ತು ಎಂಬುದಾಗಿ ಈ ಕೃತಿಯ ಮೂಲಕ ತಿಳಿದುಬರುತ್ತದೆ. 'ಮೈಸೂರು ಎಳ್ಪತ್ತರ ನಾಡು' ಎನ್ನುವ ಮಾತು ಮೈಸೂರು ಪ್ರಾಚೀನ ಕಾಲದಲ್ಲಿ ಎಪ್ಪತ್ತು ನಾಡುಗಳನ್ನು ಒಳಗೊಂಡ ಸಂಪದ್ಭರಿತವಾದ ಪ್ರದೇಶವೆನಿಸಿತ್ತು. ಅಷ್ಟೆ ಅಲ್ಲದೆ ಮೈಸೂರು ವಿಶಾಲವಾದ ಪ್ರದೇಶವೆನಿಸಿತ್ತು. ಆದುದರಿಂದ ಈ ಪ್ರದೇಶವನ್ನು ಪ್ರಮುಖ ಕೇಂದ್ರವನ್ನಾಗಿ ಮಾಡಿಕೊಂಡು ಹಲವು ರಾಜ ಮನೆತನಗಳು ಆಳ್ವಿಕೆ ನಡೆಸಿರುವುದು ಶಾಸನಾಧಾರಗಳಿಂದ ತಿಳಿದುಬರುತ್ತದೆ. ಮೈಸೂರು ನಾಡು ಎಂದು ದಾಖಲಿಸಿರುವ ಕ್ರಿ.ಶ.೧೧೨೮ರ ಹೊಯ್ಸಳ ವೀರಬಲ್ಲಾಳನ ಶಾಸನದಲ್ಲಿ 'ಮೈಸೂನಾಡ ಮಬ್ಬೆಲತೀರ್ಥ' ಎಂದು ಕಂಡರಿಸಲಾಗಿದೆ. ಈ ಶಾಸನದಲ್ಲಿ ಉಲ್ಲೇಖವಾಗಿರುವ ಮಬ್ಬೆಲತೀರ್ಥ ಎನ್ನುವುದು

* ಸಹಾಯಕ ಪ್ರಾಧ್ಯಾಪಕರು, ಮಹಾರಾಣಿ ಮಹಿಳಾ ಕಲಾ ಕಾಲೇಜು, ಮೈಸೂರು, ಮೊ. ೯೯೬೪೯೩೩೯೨೦
** ಸಹಾಯಕ ಪ್ರಾಧ್ಯಾಪಕರು, ಪ್ರಥಮ ದರ್ಜೆ ಕಾಲೇಜು, ಬೆಟ್ಟಂಪಾಡಿ, ಮೊ. ೯೭೪೩೧೧೧೬೮೬೬

ಪ್ರಸಿದ್ಧ ಜೈನಕ್ಷೇತ್ರವಾಗಿದ್ದು ಮೈಸೂರು ನಾಡಿನೊಳಗಿರುವ ಪ್ರಮುಖ ಪ್ರದೇಶವೆನಿಸಿತ್ತು ಎನ್ನುವುದು ಗಮನಾರ್ಹ ವಿಚಾರವೆನಿಸುತ್ತದೆ.

ನಂಜನಗೂಡಿನ ನಂದಿಗುಂದ ಶಾಸನ ೧೦೨೧ರ ಕಾಲಘಟ್ಟದ ಈ ಶಾಸನದಲ್ಲಿ ಮೈಸೆನಾಡು ಎಂದು ಕರೆಯಲಾಗಿದೆ. ಇದು ಈ ಶಾಸನದಲ್ಲಿ ಮಾತ್ರವಲ್ಲದೆ ಇನ್ನು ಹಲವು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಎಡೆತೊರೆನಾಡು, ಎಡೆದೊರೆನಾಡು ಎಂದು ಕೃಷ್ಣರಾಜನಗರದ ಹಲವು ಶಾಸನಗಳಲ್ಲಿ ಕಂಡುಬರುತ್ತದೆ. ಎಡತೊರೆ ಎಂದರೆ ಇದು ಕಾವೇರಿನದಿ ಹರಿಯುವ ಪ್ರದೇಶವಾಗಿದ್ದು ಆ ನದಿಯ ಬಲಭಾಗದಲ್ಲಿ ಜನವಸತಿ ಪ್ರದೇಶವಿತ್ತು. ಈ ಸ್ಥಳವನ್ನೇ ಎಡತೊರೆ ನಾಡು ಎಂಬುದಾಗಿ ಕರೆಯಲಾಗುತಿತ್ತು. ಎಂಬುದಾಗಿ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಎನ್ನುವುದರ ಕುರುಹು ಇದಾಗಿತ್ತು. ಈ ಪ್ರದೇಶವನ್ನು ಕಾವೇರಿಯಿಂದ ಪಶ್ಚಿಮಕ್ಕಿರುವ ಪ್ರದೇಶಯೆಂದು ಗುರುತಿಸಲಾಗಿತ್ತು ಎಂದು ಹೆಸರಿಸಲಾಗಿದೆ. ಎಡತೊರೆನಾಡು ಅಂದರೆ ಕಾವೇರಿ ನದಿ ಹರಿಯುವ (ಪಶ್ಚಿಮ) ಎಡಭಾಗಕ್ಕಿರುವ ನಾಡು ಇದಾಗಿತ್ತು ಎಂದು ಕೃಷ್ಣರಾಜನಗರದ ಸುತ್ತಮುತ್ತಲ ಪ್ರದೇಶಗಳನ್ನು ಹೆಸರಿಸುತ್ತದೆ.

ಪುನ್ನಾಟ ಅಥವಾ ಪುನ್ನಾಡು, ಪುಂನಾಡು ಎಂದು ಕೀರ್ತಿಪುರ ಅಥವಾ ಕಿತೂರಿನ ಶಾಸನಗಳಲ್ಲಿ ಹೆಸರಿಸಲಾಗಿದೆ ಈ ಪ್ರದೇಶವು ಪುರಾತನ ಕಾಲದ ಇತಿಹಾಸವನ್ನು ಹೊಂದಿದ್ದು ಅದು ರೋಮ್ ದೇಶದ ಜೊತೆ ನಿಕಟ ವ್ಯಾಪಾರ ಸಂಪರ್ಕವನ್ನು ಹೊಂದಿದ ರಾಜಮನೆತನ ಪ್ರದೇಶವಾಗಿತ್ತು. ಈ ಪ್ರದೇಶದಲ್ಲಿ ಆಳ್ವಿಕೆ ಮಾಡುತ್ತಿದ್ದ ಸ್ಕಂದವರ್ಮನು ಗಂಗರೊಡನೆ ವ್ಯಾಪಾರ ಸಂಪರ್ಕವನ್ನೊಂದಿದ್ದರು ಎಂಬುದಾಗಿ ಕೀರ್ತಿಪುರ ಶಾಸನದಿಂದ ತಿಳಿದುಬರುತ್ತದೆ. ಕುಡುಗುನಾಡು, ಕಿಳಿರೆನಾಡು, ಹದಿನಾಡು ಇತ್ಯಾದಿ ನಾಡುಗಳನ್ನು ಒಳಗೊಂಡಿರುವ ವಿಶಾಲವಾದುದು ಈ ಮೈಸೂರು ರಾಜ್ಯವೆನಿಸಿತ್ತು ಎಂಬುದನ್ನು ಈ ಶಾಸನದಿಂದ ಗುರುತಿಸಬಹುದಾಗಿದೆ. ಬಡಗರನಾಡು ವಡುಗರನಾಡು ಎಂದು ಈ ಮೈಸೂರು ಪ್ರದೇಶವನ್ನು ಕುರಿತದ್ದಾಗಿದೆ.

ಕ್ರಿ.ಪೂ. ೧ನೇ ಶತಮಾನದ 'ಪುದುಕೋಟೆ ಜಿಲ್ಲೆ ಸಿತ್ತನ್ನವಾಸಿಲ್' ಪ್ರದೇಶವೆನಿಸಿ ಎರುಮೆಯ್‌ನಾಟ್' ಎಂಬ ಉಲ್ಲೇಖ ಸಿಗುತ್ತದೆ. ತಮಿಳು ಸಾಹಿತ್ಯಗ್ರಂಥವಾದ ಅಗನಾನೂರು ಎಂಬ ಕೃತಿಯಲ್ಲಿ ಎರುಮೈನಾಡು (ಅಂದರೆ ಎಮ್ಮೆಗಳ ನಾಡವನು) ಎಂಬ ಶಬ್ದಗಳು ಅದರ ಪರ್ಯಾಯ ಶಬ್ದಗಳೆಂದೂ ಊಹಿಸಲಾಗಿದೆ.ತಮಿಳುಭಾಷೆಯಲ್ಲಿರುವ ಅಗನಾನೂರು ಎಂಬ ಕವಿ ಸೂಕ್ತಕದಂಬದಲ್ಲಿ ಕ್ರಿ.ಶ. ೨ನೇ ಶತಮಾನದಲ್ಲಿದ್ದ ಮಾಮೂಲ್‌ನಾರ್ ಎಂಬ ಕವಿಯ ಉಕ್ತಿಯಲ್ಲಿ ೧೧೫ನೆಯ ಪದ್ಯದಲ್ಲಿ ಎರುಮೈನಾಡು (ಎರುಮೈ-ಮಹಿಷ) ಎಂದು ಉಲ್ಲೇಖಿಸಿರುವುದನ್ನು ಗಮನಿಸಬಹುದಾಗಿದೆ. ಬಿ.ಎಲ್.ರೈಸ್ ಅವರು ಸುಮಾರು ೧೧-೧೨ನೆಯ ಶತಮಾನದ ಶಾಸನಗಳಲ್ಲಿ ಮೈಸುನಾಡು, ಮೈಸೂರ್ ನಾಡು ಎಂಬುದನ್ನು ಗುರುತಿಸಿದ್ದಾರೆ. ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನಲ್ಲಿರುವ ನಂದಿಗುಂದ ಗ್ರಾಮದಲ್ಲಿರುವ ಶಾಸನವೊಂದರಲ್ಲಿ ೧೦೨೧ರ ಕಾಲಘಟ್ಟದ ಮಯ್ಸುನ್ನಾಡು (ಮಯ್ಸೂರ್‌ನಾಡು) ಎಂಬುದಾಗಿದ್ದು ನಂದಿಗುಂದವು ಮೈಸೂರು ನಾಡಿನೊಳಗೆ ಇದ್ದಂತಹ ಪ್ರದೇಶವಾಗಿತ್ತು.

ನಾಡು ಅಥವಾ ಜನ ವಾಸಿಸುವ ಪ್ರದೇಶವನ್ನು 'ಮಹಿಷ' ಎಂಬ ಪದ ಪ್ರಾಣಿಲಾಂಛನವಾಗಿ ಬಳಸಲಾಗುತ್ತಿತ್ತು ಎಂಬುದರ ಹಿನ್ನಲೆಯಲ್ಲಿ ಈ ಹೆಸರು ರೂಢಿಯಲ್ಲಿದೆ. ಎಂದು ವಿ.ವಿ.ಮಿರಾಶಿಯವರ ಕೆಲವು ಶೋಧಗಳನ್ನು ಗಮನಿಸಿ ಈ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಹೊಯ್ಸಳ ವಿಷ್ಣುವರ್ಧನನು ಕ್ರಿ.ಸ.೧೧೧೧-೧೧೪೧ರ ವೇಳೆಗೆ ಕಾಲಘಟ್ಟದಲ್ಲಿ ಕ್ರಿ.ಶ.೧೧೨೮ರ ಶಾಸನವೊಂದರಲ್ಲಿ ಮೈಸೂನಾಡು ಸ್ವಸ್ತಿ ಶ್ರೀಮಾರ್ಬಲದ ತೀರ್ಥಕ್ಕೆ ಎಂದು ದಾಖಲಿಸಲಾಗಿದೆ. ಇಲ್ಲಿ ಮಹಾಬಲದತೀರ್ಥ, ಮಹಾಬಲಾಚಲ ಇರುವ ಊರಾಗಿತ್ತೆಂಬುದು ತಿಳಿದುಬರುತ್ತದೆ. ಮೈಸೂರಿನ ಕುಮಾರಬೀಡಿನ ಶಾಸನ (೨೦೭), ಕುಮಾರಬೀಡು(೧೨೧)ರ ಕಾಲಘಟ್ಟವಾಗಿದ್ದು ಮಹಾಮಂಡಲೇಶ್ವರ ಕುಲೋತ್ತುಂಗಚೋಳ ಭುಜಬಲವೀರಗಂಗ ಹೊಯ್ಸಳ ದೇವರು ಗಂಗವಾಡಿ ತೊಂಬತ್ತು ಸಾವಿರವನ್ನೊಳಗೊಂಡ (ಏಕಚಕ್ರಾಧಿಪತ್ಯದಿಂದ) ಆಳ್ವಿಕೆ ನಡೆಸುತ್ತಿದ್ದ ಆ ಪರಿಧಿಗೆ ಮೈಸೆನಾಡನ್ನು ಒಳಗೊಂಡ ಪ್ರದೇಶವಾಗಿತ್ತೆಂದು ತಿಳಿದುಬರುತ್ತದೆ. ಮೈಸೂರಿನ ಸಮೀಪವಿರುವ ಹೆಮ್ಮನಹಳ್ಳಿಯ (೨೧೫) ಶಾಸನವು ಹೊಯ್ಸಳ ಇಮ್ಮಡಿ ವೀರಬಲ್ಲಾಳರ ಆಳ್ವಿಕೆಯ ಕಾಲವಾಗಿದೆ.

ಈ ಪ್ರಕಾರ ಅವನ ದಂಡನಾಯಕನಾಗಿರುವ ಬಿಟ್ಟಿಮಯ್ಯಂಗಳು ಮಯ್ಯೆನಾಡು ಪ್ರದೇಶವನ್ನು ಹಡದಣದ ಮಂಡಳಿಕ, ಮರೆಸೆಯ ಮಂಡಲಸಾಮಿಗಳು ಅಲ್ಲದೆ ಹೂಣರ ಬೂತಗೌಡ, ಬೆನಗನಹಳ್ಳಿಯ ಹರದಗೌಡ, ಬೂತುಗಹಳ್ಳಿಯ ನಾಚೆಗೌಡ, ಬೋಗವದಿಯ ಬೀರಗೌಡ, ಮಾರಗೌಡ, ಮಯ್ಯೆಗೌಡ ಹೀಗೆ ಈ ಮೇಲ್ಕಂಡ ಊರುಗಳಿಂದ ಆವೃತವಾದ

ನಾಡು ಇಮ್ಮಡಿವೀರಬಲ್ಲಾಳನ ಆಳ್ವಿಕೆಗೆ ಒಳಪಟ್ಟಿತ್ತು ಎಂಬ ಅಂಶ ಮನದಟ್ಟಾಗುತ್ತದೆ. ಹಡಜನ ಗ್ರಾಮವು ಮೈಸೂರಿನ ಚಾಮುಂಡಿಯಬೆಟ್ಟದ ತಪ್ಪಲಲ್ಲಿದ್ದು ಮೈಸೂರು ಅರಸು ಮನೆತನದ ಆರಂಭವಾಗುವುದಕ್ಕೆ ಮುನ್ನ ಚಾಮರಾಜೊಡೆಯರು ಕಾಲವಾದ ಮೇಲೆ ಪತ್ನಿ ದೇವಾಜಮ್ಮಣ್ಣಿ ಈ ಪ್ರದೇಶದಲ್ಲಿರುತ್ತಾಳೆ. ಇವಳಿಗೆ ಚಿಕ್ಕದೇವರಸಿ ಎಂಬ ಮಗಳು ಇದ್ದಳು. ಇವಳನ್ನು ಮದುವೆಯಾಗಲು ಹಡಜನ ಸಮೀಪವಿರುವ ಕಾರುಗಳ್ಳಿ ಮಾರನಾಯಕನು ಅವಳನ್ನು ಪೀಡಿಸುತ್ತಿದ್ದನೆಂಬ ಅಂಶವನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದಾದೆ.

ಹುಣಸೂರಿನ ಸಮೀಪವಿರುವ ಮರೂರಿನಲ್ಲಿ ಕ್ರಿ.ಶ. ೯ನೇ ಶತಮಾನದ ಶಾಸನವಿದೆ ಇದು ಚೋಳ ರಾಜನಾದ ರಾಜೇಂದ್ರ ಚೋಳನ ಆಳ್ವಿಕೆಗೆ ಒಳಪಟ್ಟ ಪ್ರದೇಶವೆನಿಸಿದೆ. ಈ ಶಾಸನದ ಪ್ರಮುಖ ವಿಚಾರವೆಂದರೆ ಈ ಪ್ರದೇಶದಲ್ಲಿ ನಾಡ ಮರವುರ  ವರಲಕ್ಷ್ಮಗಾವುಂಡನ ಮಗ ಬಮ್ಮಗಾವುಣ್ಡನಾಡ ರಾಜೇನ್ದ್ರ ಚೋಳಶೆಟ್ಟಿ ಚಲದಂಕ ರಾಮನಾಗಿದ್ದು ಅವನ ನೆನಪಿಗಾಗಿ ಖಂಡುಗ ಭೂಮಿದಾನ ಮಾಡುವ ವಿವರವಿದೆ.

ರಾಮಪುರಪಟ್ಟಣದ ಶಾಸನವು ಕ್ರಿ.ಶ. ೧೧ನೇ ಶತಮಾನದ ಕಾಲಘಟ್ಟದ್ದಾಗಿದೆ. ಆ ಸಂದರ್ಭದಲ್ಲಿ ಹೊಯ್ಸಳ ಅರಸು ಬಿಟ್ಟಿದೇವನು ಆಳ್ವಿಕೆ ಮಾಡುತ್ತಿದ್ದ ಸಂದರ್ಭವದು. ೧೧೨೪-೨೫ರ ಕಾಲಘಟ್ಟವದು. ಈ ವೇಳೆಗೆ ಬೃಹಸ್ಪತಿ ಲಗ್ನದಲ್ಲಿ ತೊರೆನಾಡ ಹೆಜ್ಜ್ಯಾದಿಯಲ್ಲಿ ಶ್ರೀಮನ್‌ಮಹಾಪ್ರಧಾನನಾದ ದಂಡನಾಯಕ ಚಟ್ಟಿಮಯ್ಯನು ತನ್ನ ತಾಯಿಯ ನೆನಪಿಗಾಗಿ ಎರಡು ಬಸದಿಗಳನ್ನು ಕಟ್ಟಿಸಿರುವ ವಿವರಗಳು ಸಿಗುತ್ತವೆ. ಇಲ್ಲಿ ತೊರೆನಾಡು ಎನ್ನುವುದು ನೀರಾವರಿಯನ್ನು ಹೊಂದಿರುವ ಪ್ರದೇಶವೆನಿಸಿತ್ತು. ಎಂಬುದಾಗಿ ಶಾಸನಗಳಿಂದ ತಿಳಿದುಬರುತ್ತದೆ.

ಹೀಗೆ ನಾಡುಗಳು ಎಂಬುದು ಆಡಳಿತ ವಿಕೇಂದ್ರಿತ ಪ್ರದೇಶವಾಗಿದ್ದು, ಅಧಿಕಾರ ಹಂಚಿಕೆ ಮಾಡಿಕೊಳ್ಳುವ ವ್ಯವಸ್ಥೆ ಇತ್ತು. ಇದರಿಂದ ಈ ಪ್ರದೇಶ ಭದ್ರತೆಯ ದೃಷ್ಟಿಯಿಂದ ನಾಡುಗಳು ಪ್ರಮುಖ ಪಾತ್ರವೆನಿಸಿದ್ದು ಸ್ಥಳೀಯ ಸಮಸ್ಯೆಗಳನ್ನು ನಿವಾರಿಸಿ ಪರಿಹಾರ ಕಂಡುಕೊಳ್ಳುವ ವ್ಯವಸ್ಥಿತ ಆಡಳಿತ ಕೇಂದ್ರವೆನಿಸಿತ್ತು. ಈ ಹಿನ್ನೆಲೆಯಲ್ಲಿ ನಾಡುಗಳ ಅಸ್ತಿತ್ವ ಬಂದಿರಬಹುದೆನಿಸುತ್ತದೆ.



## ಆಕರ ಗ್ರಂಥಗಳು


೧. ಚಿದಾನಂದಮೂರ್ತಿ ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೩೪೨.

೨. ಹಯವದನರಾವ್ ಹಿಸ್ಟರಿ ಆಫ್ ಮೈಸೂರು ಸಂಪುಟ ೧, ೧೯೪೩, ಪುಟ ೨೦-೨೧.

೩. ಕರ್ನಾಟಕ ಕವಿಚರಿತೆ ಸಂ. ೨, ೧೯೨೩, ಅವತರಣಿಕೆ, ಪುಟ ೨೪-೨೬.

೪. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಅಕ್ಟೋಬರ್ ೧೯೧೮, ಪುಟ ೧೨೭-೨೮.

೫. ಬಾ.ರಾ. ಗೋಪಾಲ್ ಎಪಿಗ್ರಾಫಿಯ ಕರ್ನಾಟಕ ಸಂಪುಟ ೫, ಮೈಸೂರು ಶಾಸನಗಳು, ೨೧೫, ಹೆಮ್ಮನಹಳ್ಳಿ, ಪುಟ ೩೧೭.

೬ ಎಪಿಗ್ರಾಫಿಯ ಕರ್ನಾಟಕ, ಶಾಸನ ಸಂಪುಟ ४, ಮರೂರು.

೨೮

# ಸಣ್ಣೆನಾಡು–೩೦೦: ಶಾಸನಗಳ ಹಿನ್ನೆಲೆಯಲ್ಲಿ ಅವಲೋಕನ

ಪಿ.ವಿ. ಕೃಷ್ಣಮೂರ್ತಿ*

**ಬೆಂ**ಗಳೂರು ಜಿಲ್ಲೆಯ ಎರಡುಪ್ರಮುಖ ನದಿಗಳೆಂದರೆ; ಒಂದುಅರ್ಕಾವತೀಇನ್ನೊಂದು ದಕ್ಷಿಣಪಿನಾಕಿನೀ. ಈ ಜಿಲ್ಲಾ ಪ್ರದೇಶದಲ್ಲಿನ ಪ್ರಾಚೀನ ಆಡಳಿತ ಘಟಕಗಳ ಉಲ್ಲೇಖಗಳನ್ನು ಅವಲೋಕಿಸಿದರೆ, ಅವು ಈ ನದಿಗಳ ಪರಿಸರದಲ್ಲೇ ಅಸ್ತಿತ್ವ ಪಡೆದಿರುವುದನ್ನು ಮನಗಾಣಬಹುದು.ಉದಾ: **ಕುಕ್ಕಲನಾಡು** ಎಂಬುದು ಈ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ದಕ್ಷಿಣಗಡಿಯಿಂದ ಆರಂಭಗೊಂಡು ಮುಂದೆ ದಕ್ಷಿಣಕ್ಕೆ ನೆಲಮಂಗಲ, ಬೆಂಗಳೂರು ಉತ್ತರ, ದಕ್ಷಿಣ ಹಾಗೂ ಮಾಗಡಿ ತಾಲ್ಲೂಕುಗಳ ಹಲವು ಭಾಗಗಳನ್ನು ಒಳಕೊಂಡಂತೆ ಅರ್ಕಾವತೀ ನದೀ ಜಲಾನಯನದ ವ್ಯಾಪ್ತಿಯಲ್ಲೇ ರೂಪುಗೊಂಡಿದ್ದ ಒಂದು ಪ್ರಾಚೀನ ಆಡಳಿತ ವಿಭಾಗವಾಗಿದ್ದಿತು. ಅರ್ಕಾವತೀ ನದಿಯು ಮುಂದುವರೆದು ಮುಂದೆ **ಕಿಳ್ಗಲಿನಾಡು, ಕಿಳಲೆನಾಡು** ಹಾಗೂ **ಸೀಗಲ್‌ನಾಡು**ಗಳ ಮೂಲಕ ಹರಿದು ಕಾವೇರಿಯನ್ನು ಕೂಡಿಕೊಳ್ಳುತ್ತದೆ. ಅದೇ ರೀತಿ ತೊಱೆವಳಿನಾಡು ಎಂಬುದು ದಕ್ಷಿಣಪಿನಾಕಿನೀ ನದಿಯ, ವಿಶೇಷವಾಗಿ ಅದರ ಎಡದಂಡೆಯ ವ್ಯಾಪ್ತಿಯಲ್ಲಿ ಕಂಡುಬರುವ ನಾಡಾಗಿದೆ. ಪ್ರಸ್ತುತ **ಸಟ್ಟಿನ್ನಿಮೂನೂರು, ಸಣ್ಣೆನಾಡು** ಅಥವಾ **ಸಣ್ಣೆ–೩೦೦** ಎಂಬುದುಕೂಡ ಈ ಜಿಲ್ಲಾ ಪ್ರದೇಶದಲ್ಲಿಕಂಡು ಬರುವ ಇನ್ನೊಂದು ಮುಖ್ಯ ಪ್ರಾಚೀನ ಆಡಳಿತ ಘಟಕವಾಗಿದೆ. ಇದರ ಪ್ರದೇಶ ವ್ಯಾಪ್ತಿಯನ್ನು ಲಭ್ಯ ಶಾಸನಾಧಾರಗಳ ಹಿನ್ನೆಲೆಯಲ್ಲಿ ನಿರ್ಧರಿಸುವ ಅಗತ್ಯವಿದೆ.ಈ ನಾಡನ್ನು ಉಲ್ಲೇಖಿಸುವ ಸುಮಾರು ೧೨ಕ್ಕೂ ಅಧಿಕ ಶಾಸನಗಳು ಕ್ರಿ.ಶ. ಸು.೯ನೆಯ ಶತಮಾನದಿಂದ ೧೫ನೆಯ ಶತಮಾನದವರೆಗೆ ವ್ಯಾಪಿಸಿರುವುದನ್ನು ಕಾಣಬಹುದು. ಅವು ಮುಖ್ಯವಾಗಿ ಗಂಗ, ರಾಷ್ಟ್ರಕೂಟ, ಚೋಳ, ಹೊಯ್ಸಳ ಮತ್ತು ವಿಜಯನಗರಅರಸರ ಆಳ್ವಿಕೆಯ ಕುರುಹುಗಳಾಗಿದೇವನಹಳ್ಳಿ ತಾಲ್ಲೂಕಿನ ಅರದೇಶಹಳ್ಳಿ, ಬ್ಯಾಡರಹಳ್ಳಿ, ಆವತಿ, ಬುಳ್ಳಹಳ್ಳಿ, ಗಂಗವಾರ; ಬೆಂಗಳೂರು ಉತ್ತರ ತಾಲ್ಲೂಕಿನ ಅಲ್ಲಾಳಸಂದ್ರ, ಸೋಲದೇವಹಳ್ಳಿ; ಬೆಂಗಳೂರು ಪೂರ್ವ ತಾಲ್ಲೂಕಿನ ಕಾಡುಗೋಡಿ, ಪಟ್ಟಂದೂರು, ಕಿತ್ತಿಗನವೂರು ಗ್ರಾಮಗಳಲ್ಲಿ ಇವೆ.

ಮೊದಲಿಗೆಗಂಗರ ಆಳ್ವಿಕೆಯ ಕುರುಹಾಗಿಇತ್ತೀಚೆಗೆ ಶೋಧವಾಗಿರುವಶಾಸನಚಿಕ್ಕಸಣ್ಣೇಗ್ರಾಮದಲ್ಲಿದ್ದು 'ಸ್ವಸ್ತಿ ಶ್ರೀ ಪೆರ್ಮ್ಮನಡಿಗಳ್ ಸಟ್ಟಿ . . .' ಎಂಬ ತ್ರುಟಿತ ಉಲ್ಲೇಖ ಬಂದಿದೆ.ಬಹುವಾಗಿ ತ್ರುಟಿತವಾಗಿರುವ ಈ ಶಾಸನದ ಕಾಲ ಸು.೯ನೆಯ ಶತಮಾನ.[ಇ.ದ.–೩೪ (೨೦೧೯), ಪು.  ]. ರಾಷ್ಟ್ರಕೂಟರ ಇಮ್ಮಡಿಕೃಷ್ಣನ ಕಾಲದಲ್ಲಿ ಈ ನಾಡಿನ ಉಲ್ಲೇಖ **ಸಟ್ಟಿನ್ನಿಮೂನೂಱುಂ, ಸಣ್ಣೆ–೩೦೦** ಎಂದೂ ಅನಂತರ ಚೋಳರ ಶಾಸನಗಳಲ್ಲಿ **ಸಣ್ಣೆನಾಡು, ಸಣ್ಣೈನಾಟ್ಟು** ಎಂದ್ಲು ಬಂದಿದೆ. ಕ್ರಿ.ಶ.೧೦೨೫ಕ್ಕೆ ಸೇರಿದ ಚೋಳದೊರೆ ರಾಜೇಂದ್ರನ ಸೋಲದೇವನಹಳ್ಳಿಯ ಶಾಸನದಲ್ಲಿ ಸಮಕಾಲಿನ ಹಲವು ನೆರೆಹೊರೆಯ ನಾಡುಗಳು ಅಂದರೆ **ಕುಕ್ಕನೂರ್‌ನಾಡು, ಕುರುಕುನ್ದಾಚ್ಚಿನಾಡು, ಮಣ್ಣೆನಾಡು** ಎಂಬುವು **ಸಣ್ಣೆನಾಡಿ**ನೊಂದಿಗೆ ಪ್ರಸ್ತಾಪಿಸಲ್ಪಟ್ಟಿವೆ. ಈ ನಾಡುಗಳೆಲ್ಲಾ **ವಿಕ್ರಮಚೋಳಮಂಡಲದ ದಡಿಗಾವಳಿ**ಯವ್ಯಾಪ್ತಿಗೆ ಸೇರಿದವಾಗಿವೆ. ಇಲ್ಲಿ ಪ್ರಸ್ತಾಪಿತವಾಗಿರುವ **ದಡಿಗಾವಳಿ** ಎಂಬುದು ಗಂಗರ ಆರಂಭಿಕ ಆಳ್ವಿಕೆಯ ಪ್ರದೇಶ ಸೂಚಕವಾಗಿದೆ. ಆ ಪ್ರದೇಶವನ್ನು ಚೋಳರು ಅಕ್ರಮಿಸಿದಾಗ ಅದಕ್ಕೆ **ವಿಕ್ರಮಚೋಳಮಂಡಲ**ವೆಂದು ಹೆಸರನ್ನು ಕೊಟ್ಟಿದ್ದರು.ಅದೇ ಮುಂದೆ **ನಿಗರಿಲಿ ಚೋಳಮಂಡಲ**ವೆಂದು ಚೋಳರ ಆಳ್ವಿಕೆಯ ಕಾಲದಲ್ಲೇ ನಾಮಾಂತರಗೊಂಡಿತು.

ಸಣ್ಣೆನಾಡನ್ನು ಉಲ್ಲೇಖಿಸುವ ಶಾಸನಗಳು ಲಭ್ಯವಾಗಿರುವ ಸ್ಥಳಗಳುಮತ್ತು ಆ ನಾಡಿನಲ್ಲಿ ಅಂತರ್ಗತವಾಗಿರುವ ಸ್ಥಳಗಳನ್ನು ನಕ್ಷೆಯ ಮೇಲೆ ಗುರುತಿಸಿದರೆ ಆ ನಾಡಿನ ವ್ಯಾಪ್ತಿಯು; ಉತ್ತರಕ್ಕೆ ಪ್ರಸಿದ್ಧ ನಂದಿಬೆಟ್ಟಗಳು, ದಕ್ಷಿಣಕ್ಕೆ ಬೆಂಗಳೂರು ಪೂರ್ವ ತಾಲ್ಲೂಕಿನ ಪಟ್ಟಂದೂರು ಕಾಡುಗೋಡಿ ಗ್ರಾಮಗಳವರೆಗೂ, ಪೂರ್ವಕ್ಕೆ ದಕ್ಷಿಣಪಿನಾಕಿನೀ ತಟದವರೆಗಿನ ಪ್ರದೇಶ, ಪಶ್ಚಿಮಕ್ಕೆ ಬಹುಮಟ್ಟಿಗೆ ದಕ್ಷಿಣಪಿನಾಕಿನೀ ಜಲಾನಯನ ಪ್ರದೇಶವನ್ನು ಮಾತ್ರ ಒಳಗೊಂಡಿದ್ದಿತೆಂದು

* #೩.೭, 'ಶ್ರೀ ಕೃಷ್ಣಕೃಪ', ೩ನೆಯ ಅಡ್ಡರಸ್ತೆ, ಮೊದಲನೆಯ ಮುನೇಶ್ವರ ಬ್ಲಾಕ್, ಹರಿನಗರ ಕ್ರಾಸ್, ಬೆಂಗಳೂರು–೫೬೦೧೦೮, ಮೊ. ೯೦೩೬೮೦೮೩೯೫

ಹೇಳಬಹುದಾಗಿದೆ. ಅಂದರೆ ಪೂರ್ವಕ್ಕೆ **ತೊಜೀವಳಿನಾಡು,** ಪಶ್ಚಿಮಕ್ಕೆ **ಮಣ್ಣೆನಾಡು** ಮತ್ತು **ಕುಕ್ಕಲನಾಡು**ಗಳು, ಉತ್ತರಕ್ಕೆ **ಕಳವರನಾಡು** ಮತ್ತು **ಕೆರೆಕುಂದ-೩೦೦**; ದಕ್ಷಿಣಕ್ಕೆ **ಮೊರಸುನಾಡಿನ** ಭಾಗವಾಗಿದ್ದ ಮಾಶಂದಿನಾಡು, ಬೆಂಪೂರು-೧೨ಎಂಬುವು **ಸಣ್ಣೈನಾಡಿನ** ಎಲ್ಲೆಗಳಾಗಿದ್ದವು. **ಸಣ್ಣೈನಾಡಿನ** ಪ್ರದೇಶದಲ್ಲಿ ಗಮನಾರ್ಹ ಬೆಟ್ಟಗುಡ್ಡಗಳಾವುವು ಕಂಡು ಬರುವುದಿಲ್ಲ ಹೆಚ್ಚಿನ ಮಟ್ಟಿಗೆ ಸಮತಟ್ಟಾಗಿದ್ದು ಪಶ್ಚಿಮದಿಂದ ಪೂರ್ವಕ್ಕೆ ತುಸು ಇಳಿಜಾರಿನಿಂದಕೂಡಿರುವ, ದಕ್ಷಿಣಪಿನಾಕಿನೀಯ ಬಲ ಬದಿಯ ಜಲಾನಯನ ಪ್ರದೇಶವೇ ಆಗಿದೆಯೆಂದು ಹೇಳಬಹುದು. ಈ ಪ್ರದೇಶದ ಮಧ್ಯಭಾಗದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಸಂಪರ್ಕ ಕಲ್ಪಿಸುವ ಪ್ರಾಚೀನ ವಾಣಿಜ್ಯಮಾರ್ಗವು ಹಾದುಹೋಗುತ್ತಿದ್ದುದು ಗಮನಾರ್ಹ ಅಂಶವಾಗಿದೆ. ಅದೇಇಂದಿನ ರಾಷ್ಟ್ರೀಯಹೆದ್ದಾರಿ ಸಂಖ್ಯೆ ೪ ಆಗಿರುತ್ತದೆ. ಈ ಹೆದ್ದಾರಿಯ ಉದ್ದಕ್ಕೂ ನಂದಿ, ಆವತಿ, ಚಿಕ್ಕಸಣ್ಣೆ, ದೊಡ್ಡಸಣ್ಣೆ, ಎಲಹಂಕ, ಹೆಬ್ಬಾಳ, ನೆರೆಯಲ್ಲಿ ಗಂಗವಾರ, ಕಾಡುಗೋಡಿ, ಪಟ್ಟಂದೂರು ಮುಂತಾದ ಪ್ರಾಚೀನ ಸ್ಥಳಗಳು ಪ್ರಾಯಃ ಪ್ರಾಚೀನ ವಾಣಿಜ್ಯ ಕೇಂದ್ರಗಳಾಗಿ ಅಭಿವೃದ್ಧಿ ಪಡೆದಿದ್ದವು ಎಂದು ಹೇಳಲು ಅವಕಾಶವಿದೆ. ಈ ಪ್ರದೇಶದ ಕೇಂದ್ರ ಸ್ಥಳವುಪ್ರಾಯಃ ಇಂದು ಸಣ್ಣೆಗ್ರಾಮದ ಸನಿಹದ ನೆಲೆಯೇ ಆಗಿದ್ದಿತೆಂದು ಹೇಳಲು ಸಾಧ್ಯವಿದೆ. ಇಂದು ಗಣಿಗಾರಿಕೆಗೆ ಈಡಾಗಿ ಹೋಗಿರುವ ಸಣ್ಣೆಯಗ್ರಾಮದ ಗುಡ್ಡವು ಹಿಂದೆ ರಕ್ಷಣಾ ಕೋಟೆಯಿಂದ ಕೂಡಿದ್ದಿತೆಂದು ಹೇಳಲು ಅಲ್ಲಿ ಅಳಿದುಳಿದಿರುವ ಪ್ರಾಚ್ಯ ಅವಶೇಷಗಳು ಸಾಕ್ಷಿ ನುಡಿಯುವಂತಿವೆ. ಈ ಗುಡ್ಡಕ್ಕೆ ಹೊಂದಿಕೊಂಡಂತೆ ವಾಯವ್ಯ ದಿಸೆಯಲ್ಲಿ ವಿಶಾಲವಾದ ಕೆರೆಯಿದೆ. ಈ ಗುಡ್ಡದ ಹಿಂಬದಿಯ ಪ್ರದೇಶವನ್ನು 'ಹಳೆಯಊರು' ಎಂದು ಕರೆಯುತ್ತಾರೆ. ಅದು ಬೇಚರಾಕ್ ಆಗಿದ್ದು ಅಲ್ಲಿ ಗ್ರಾಮದ ಅವಶೇಷಗಳು ಈಗಲೂ ಇರುವುದನ್ನು ಗಮನಿಸಬಹುದು. ಪ್ರಾಯಃ ಅದೇ ಸಣ್ಣೇಸ್ಥಳದ ಮೂಲ ನೆಲೆಯಾಗಿದ್ದಿರಬೇಕು. ಕಾಲಾಂತರದಲ್ಲಿ ಚಿಕ್ಕಸಣ್ಣೆ-ದೊಡ್ಡಸಣ್ಣೆ ಎಂಬ ಎರಡು ಪ್ರತ್ಯೇಕ ಗ್ರಾಮಗಳಾಗಿ ಬೇರ್ಪಟ್ಟಿರಬೇಕು. ಹೀಗೆ ಸಹಜ ನೈಸರ್ಗಿಕ ಸೌಕರ್ಯಗಳಿಂದ ಸುಸಜ್ಜಿತವಾಗಿದ್ದ ಸಣ್ಣೆನಾಡಿನ ರಾಜಧಾನಿ ಅಂದಿನ ವಾಣಿಜ್ಯ ಚಟುವಟಿಕೆಗಳ ನೆಲೆಯಾಗಿದ್ದಿತೆಂದು ಹೇಳಬಹುದು. ಈ **ಸಣ್ಣೆಮೂನೂರು** ಪ್ರದೇಶದಲ್ಲಿ **ಪುನ್ನಾಡ-೭೦, ಪೆರ್ಬೊಳಲ್‌ನಾಡು-೩೦** ಪ್ರದೇಶ ಹಾಗೂ ಪ್ರಾಚೀನ **ಕರಿಕನಾಡು** ಹಾಗೂ ಮುಂದೆ ಚೋಳರ ಕಾಲದಲ್ಲಿ ಅಂಕುರಿಸಿದ **ಎಲಹಕ್ಕನಾಡು** ಕೂಡ ಇದರಲ್ಲಿಯೇ ಅಂತರ್ಗತವಾಗಿದ್ದವು ಎಂದು ಹೇಳಬಹುದು.

ಉತ್ತರ-ದಕ್ಷಿಣವಾಗಿ ಸುಮಾರು ೮೦ ಕಿ.ಮೀ. ವ್ಯಾಪ್ತಿಯುಳ್ಳ ಈ ನಾಡನ್ನು ಆ ಕಾಲಕ್ಕಾಗಲೇ ಉತ್ತರ ಮತ್ತು ದಕ್ಷಿಣ ಎಂದು ವಿಭಾಗಿಸಿದ್ದ ಅಂಶ ಶಾಸನಗಳಿಂದಲೇ ತಿಳಿಯುತ್ತದೆ. ಕ್ರಿ.ಶ. ೧೨೮೩ರ ಆವತಿ ಹೋಬಳಿ ಬುಳ್ಳಹಳ್ಳಿ ಶಾಸನ'ಮಹಾಮಂಡಳೇಶ್ವರ ತ್ರಿಭುವನ ಮಲ್ಲ ನಂದಿಗಿರಿನಾಥವೆಂಬಿದೇವ ಎಂಬುವ ನಂದಿದೇವನು ನಿಗರಿಲಿ ಚೋಳಮಂಡಲದ **ಉತ್ತರ ಸಣ್ಣೆನಾಡಿನ ಕೊಡುವತ್ತಿ**ಯ ಕುಳೈಮಾಂಪಳ್ಳಂ ಗ್ರಾಮವನ್ನು ನಂದಿಸಮುತ್ತಿರಂ ಎಂಬ ಹೆಸರಿನ ಕೆರೆಯ . . .' ಎಂಬುವ ಉಲ್ಲೇಖ, ಕ್ರಿ.ಶ, ೧೩೪೩ರ ಪಟ್ಟಂದೂರು ಶಾಸನದ **'ಸಣ್ಣೆನಾಡ ತೆಂಕಣ ಬಾಗೆಯ** ತೊಜೀವಳ ವಿತ್ತಿಯ ಕಾಡಗೋಡಿ ಸ್ಥಳ' ಎಂಬ ಉಲ್ಲೇಖ, ಕ್ರಿ.ಶ. ೧೪೦೧ರ ಕಿತ್ತಗನೂರು ಶಾಸನದ 'ಸಣ್ಣೆನಾಡಿನ **ದಕ್ಷಿಣ ವಿಭಾಗದ ಕಿತ್ತೈನೂರ್'** ಎಂಬುವ ಉಲ್ಲೇಖಗಳಿಂದ ಸಣ್ಣೇನಾಡನ್ನು ಉತ್ತರ ಮತ್ತು ದಕ್ಷಿಣದ ಭಾಗಗಳಾಗಿ ಗುರುತಿಸಿರುವುದು ಗಮನಾರ್ಹ ಸಂಗತಿಯಾಗಿದೆ. ಅಂದರೆ ಪ್ರಸಿದ್ಧ ನಂದಿದುರ್ಗದ ದಕ್ಷಿಣ ತಪ್ಪಲಿನಲ್ಲಿರುವ ಕೊಡವತ್ತಿ ಗ್ರಾಮವು ಸಣ್ಣೆನಾಡಿನ ಉತ್ತರದ ಗಡಿಯಾದರೆ ಬೆಂಗಳೂರು ಸಮೀಪದ ಕಾಡುಗೋಡಿಯು ಆ ನಾಡಿನದಕ್ಷಿಣ ಗಡಿಗ್ರಾಮವೆಂದು ತೀರ್ಮಾನಿಸಬಹುದಗಿದೆ. ಹಾಗೇ ಈ ನಾಡಿನ ಪೂರ್ವಕ್ಕೆ ಬರುವ ದಕ್ಷಿಣಪಿನಾಕಿನೀ ನದಿಯ ಎಡದಂಡೆಯ ತೊಜೀವಳ ಪ್ರದೇಶವೂ ಇದರ ವಾಪ್ತಿಗೇ ಸೇರಿದ್ದಿತೇ? ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ.

ಸಣ್ಣೆನಾಡಿನ ವ್ಯಾಪ್ತಿಯಲ್ಲಿ ಅನೇಕ ಪ್ರಾಗೈತಿಹಸಿಕ ನೆಲೆಗಳೂ ಕಂಡುಬಂದಿವೆ. ದೇವನಹಳ್ಳಿ ತಾಲ್ಲೂಕಿನ ಅರದೇಶನಹಳ್ಳಿ, ಕೊಣ್ಣೂರು, ಕೊಯಿರಾ, ದೇವನಹಳ್ಳಿ, ಬೇಡರಹಳ್ಳಿ, ಮನಗೊಂಡನಹಳ್ಳಿ, ರೈಲ್ವೆಗೊಲ್ಲಹಳ್ಳಿ; ದೊಡ್ಡಬಳ್ಳಾಪುರ ತಾಲ್ಲೂಕಿನ ರಾಜಘಟ್ಟ; ಬೆಂಗಳೂರು ಉತ್ತರ ತಾಲ್ಲೂಕಿನ ಚಿಕ್ಕಜಾಲ, ಜ್ಯೋತಿಪುರ, ಮುಂತಾದ ಎಡೆಗಳಲ್ಲಿ ಬೃಹತ್ ಶಿಲಾಯುಗ, ಸೂಕ್ಷ್ಮ ಶಿಲಾಯುಗ ಮತ್ತು ಇತಿಹಾಸ ಆರಂಭ ಕಾಲದ ನೆಲೆಗಳಿದ್ದು; ಶಿಲಾಗೋರಿ ನೆಲೆ, ಶಿಲಾವೃತ್ತಗಳು, ಕಿಂಡಿಕೋಣೆ ಗೋರಿಗಳು, ಶವಕುಣಿಯ ಶಿಲಾವೃತ್ತಗಳು ನಿಲಸುಗಲ್ಲು, ಕಪ್ಪು-ಕೆಂಪು ವರ್ಣದ ವಿವಿಧ ಮಾದರಿ ಮಡಕೆಗಳು, ಮೂರು ಕಾಲುಗಲುಳ್ಳ ಮಡಕೆ, ಕಲ್ಲಿನ ಒರಳುಕಲ್ಲು; ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಉಪಕರಣಗಳಾದ ಅರ್ಧ ಚಂದ್ರಾಕೃತಿ, ಮೊನೆ ಮತ್ತು ಚಕ್ಕೆಗಳು, ಹರಳುಗಲ್ಲು ಮತ್ತು ಕ್ವಾರ್ಟ್ಸ್ ಶಿಲೆಗಳಲ್ಲಿ ರೂಪಿಸಲಾದ ಹೆರೆಚಕ್ಕೆ, ನೀಳಚೆಕ್ಕೆ, ತ್ರಿಭುಜಾಕೃತಿ ಉಪಕರಣಗಳು ಹಾಗೂ ಇತಿಹಾಸ ಆರಂಭ ಕಾಲದ ಇಟ್ಟಿಗೆ, ಮಡಿಕೆ, ಬೌದ್ಧ ಸ್ತೂಪಾಕೃತಿಗಳು, ಬ್ರಾಹ್ಮೀ ಲಿಪಿಯ ಬರಹಗಳು, ರೋಮನ್ ನಾಣ್ಯಗಳು ಇತ್ಯಾದಿಗಳು ಈ ಪ್ರದೇಶದಲ್ಲಿ ಮತ್ತು ಈ ಪ್ರದೇಶದ ಆಸುಪಾಸಿನಲ್ಲಿ ಕಂಡುಬಂದಿವೆ.

ರಾಜಕೀಯವಾಗಿ ಈ ಸಣ್ಣೆನಾಡಿನ ಮೇಲೆ ಗಂಗರ ದುರ್ವಿನೀತ, ಶ್ರೀಪುರುಷ, ಮಾರಸಿಂಹ ಪೆರ್ಮಾನಡಿಗಳ್;ರಾಷ್ಟ್ರಕೂಟರಇಮ್ಮಡಿ ಕೃಷ್ಣ, ಅಕಾಲವರ್ಷ, ಮುಮ್ಮಡಿ ಕೃಷ್ಣ; ಚೋಳರ ರಾಜೇಂದ್ರದೇವ, ರಾಜಾಧಿರಾಜದೇವ, ವೀರರಾಜೇಂದ್ರ, ಕುಲೋತ್ತುಂಗಚೋಳ; ಹೊಯ್ಸಳರ ವೀರಗಂಗ ಪೊಯ್ಸಳದೇವ (ವಿಷ್ಣುವರ್ಧನ), ಇಮ್ಮಡಿವೀರಬಲ್ಲಾಳ, ವೀರರಾಮನಾಥ, ಮುಮ್ಮಡಿವೀರಬಲ್ಲಾಳ; ವಿಜಯನಗರದ ವೀರಹರಿಯಪ್ಪ ಒಡೆಯ, (ಇಮ್ಮಡಿ ಹರಿಹರ) ಇವರುಗಳ ಆಡಳಿತ ನಡೆದಿರುವ ಬಗ್ಗೆ ಶಾಸನಗಳಿವೆ.

ಕ್ರಿ.ಶ. ೫೧೭ರ ಗಂಗ ದುರ್ವಿನೀತನ ಮಲ್ಲೋಹಳ್ಳಿ ತಾಮ್ರ ಶಾಸನದಲ್ಲಿ ಪುನ್ನಾಟ(-೭೦)ದ ಪ್ರಸ್ತಾಪವಿದೆ. ಇದು ಸಣ್ಣೆನಾಡಿನ ಪ್ರದೇಶದಲ್ಲಿನ ಒಂದು ಉಪ ವಿಭಾಗವೆನ್ನಬಹುದು. ಕ್ರಿ.ಶ. ಸು. ೮೦೦ರ ಸುಮಾರಿನ ಚಿಕ್ಕಸಣ್ಣೆ ಗ್ರಾಮದ ಶಾಸನದಲ್ಲಿ ಪೆರ್ಮ್ಮನಡಿಗಳ್ ಸಟ್ಣೆನಾಡಾಳೆ ಎಂಬ ತ್ರುಟಿತ ಉಲ್ಲೇಖ ಕಂಡು ಬರುತ್ತದೆ. ಕ್ರಿ.ಶ. ಸು. ೯೦೦ರ ಅರದೇಶಹಳ್ಳಿ ಶಾಸನ . . ವರಸರು . . . ಕಡುಕಲ್ಲ ಪುಲ್ಲಮಂಗಲ ತೆಱದಾರ **ಪುನ್ನಾಡನ್** ಆಳೆ. . . ಎಂಬ ತ್ರುಟಿತ ಉಲ್ಲೇಖವಿದೆ.

ಕ್ರಿ.ಶ. ಸು, ೯೦೦ರ ಅರದೇಶಹಳ್ಳಿ ವೀರಗಲ್ಲು ಶಾಸನ ಅಕಾಲವರ್ಷ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕ ಇಮ್ಮಡಿ ಕನ್ನರ ದೇವನು ಪೃಥ್ವೀರಾಜ್ಯಂಗೆಯೆ ತತ್ಪ್ರಸಾದದೆ ಗಂಗವಾಸನ ಮಗನ್ ಗೋವಿಂದರನ್ ಎಂಬುವನು **ಸಟ್ಣೆಮೂನೂಱುಂಕುಣಿಂಗಿಲ್ ಅಯಿನೂರುಂ** ಪ್ರತಿಪಾಲಿಸಿತ್ತಿರೆ ನಂದಿಗುಂದದ ಮುಮೆನಾಯಗ ಎಂಬುವನು ನನ್ದಿಗುನ್ದದಲ್ಲಿ ನಡೆದ ತುಱುಗಾಳೆಗವೊಂದರಲ್ಲಿ ವೈರಿಯನ್ನು ಎದುರಿಸಿ ತುಱಗಳನ್ನು ರಕ್ಷಿಸಿ ಮಡಿದ ವಿವರ ನೀಡುತ್ತದೆ.(ದೇವ ೪೨.)

ಕ್ರಿ.ಶ. ೧೦೨೯ರ ಸೋಲದೇವನಹಳ್ಳಿಯ ಚೋಳ ದೊರೆ ರಾಜೇಂದ್ರಚೋಳನ ಕಾಲದಲ್ಲಿ ಹಲವುನೆರಹೊರೆಯ ನಾಡುಗಳ ಅಂದರೆ ದಡಿಗಾವಳಿಯಾದ ವಿಕ್ರಮಚೋಳಮಂಡಲದ ಕುಕ್ಕನೂರ್ನ್ನಾಡು, ಸಣ್ಣೆನಾಡು, ಕುಱುಕುಂದಾಚ್ಚಿನಾಡು, ಮಣ್ಣೆನಾಡುಗಳ ಉಲ್ಲೇಖ ಬಂದಿದ್ದು ಆ ನಾಡುಗಳ ಗಾವುಂಡರ ಸಾಕ್ಷಿಯಲ್ಲಿ ಬಾಣಪುರದ ಭೂಮಿಯನ್ನುದೇವಭೋಗವಾಗಿ ಸಿದ್ಧೇಶ್ವರ ದೇವರಿಗೆ ದತ್ತಿ ಬಿಟ್ಟ ವಿವರ ಬಂದಿದೆ. (ನೆಲ-೧).

ಕಾಡುಗೋಡಿ ಗ್ರಾಮದ ಕ್ರಿ. ಶ. ೧೦೪೩ರ ರಾಜೇಂದ್ರ ಚೋಳದೇವನ ಶಾಸನವು ವಿಕ್ರಮಚೋಳಮಂಡಲವಾದ ದಡಿಗಾವಟಿಯಲ್ಲಿನ ಸಣ್ಣೈನಾಡಿನ ಗೌಡ ಪೆರ್ಮಾಡಿ ಗಾಮುಂಡನ ಮಗ ರಾಜರಾಜ ವೇಳಾನ್ ಎಂಬುವನುಪಟ್ಟಂದೂರ ಕೆರೆಯನ್ನು ಕಟ್ಟಿಸಿ ಮೂರು ತೂಬುಗಳನ್ನಿರಿಸಿ ದುರ್ಗಾ, ಕ್ಷೇತ್ರಪಾಲ ಮತ್ತು ಗಣಪತಿ ಶಿಲ್ಪಗಳನ್ನು ಸ್ಥಾಪಿಸಿ ಪೂಟ್ಟೇರು ಮತ್ತು ಪಿಣ್ಯೈಯುಳಾಚ್ಚಲ್-೭೫೦ ಕುಳಿ ಭೂಮಿಯನ್ನು ದತ್ತಿಬಿಟ್ಟ ಅಸ್ಪಷ್ಟವಿವರವಿದೆ. (ಹೊ.ಕೋ-೧೪೨). ಇಲ್ಲಿ ಕೆರೆಗಳ ರಚನೆಯೊಂದಿಗೆ ದುರ್ಗಾ, ಕ್ಷೇತ್ರಪಾಲ ಮತ್ತು ಗಣಪತಿ ಶಿಲ್ಪಗಳನ್ನು ಸ್ಥಾಪಿಸುವ ಸಂಗತಿ ಗಮನಾರ್ಹ, ಇಂದಿಗೂ ಅನೇಕ ಕೆರೆಗಳ ಸಮೀಪದಲ್ಲಿ ದುರ್ಗಾದೇವಿಯ ಶಿಲ್ಪಗಳಿದ್ದು ಅವನ್ನು ದುಗ್ಗಲಮ್ಮ ಎಂದು ಕರೆಯುವುದು ಸಾಮಾನ್ಯವಾಗಿದೆ.

ಚೋಳ ರಾಜಾಧಿರಾಜನ ಕ್ರಿ.ಶ. ೧೦೪೬ರ ಗಂಗವಾರ ಗ್ರಾಮದ ಶಾಸನವು ರಾಜನ ಸಾಧನೆಗಳ ಧೀರ್ಘವಾದ ವಿವರಗಳನ್ನು ನೀಡಿರುವುದನ್ನು ಕಾಣಬಹುದು. ಜಯಗೊಂಡ ಚೋಳನೆಂಬ ಹೆಸರಿನಿಂದ ರಾಜ್ಯವಾಳುತ್ತಿದ್ದಾಗ . . ಕುಱಿಡಿವಶವಯನ್ವೀಮಾನ್ ಎಂಬ ಜಯಗೊಂಡ ಚೋಳವೇಳಾನ್ ಎಂಬುವನು ಸಣ್ಣೈನಾಡಿನ ಗಾಮುಂಡನಾಗಿದ್ದನು. ಸಣ್ಣೈನಾಡು ವಿಕ್ರಮಚೋಳ ಮಂಡಲದ ಭಾಗವಾಗಿದ್ದಿತು. ನಡುಮನೂರಿನ ವಶುವಯನ್ ಮಾಚ್ಚಿ ಎಂಬಕಿಡಾರಂಗೊಂಡ ಚೋಳವೇಳಾನ್; ಗಂಗಪುರದ ಶಾಮುಣ್. . . ಕಲಿಯನ್ ಎಂಬ ತಯಿಲಕುಲಕಾಲವೇಳಾನ್; ಪಟ್ಟಂತಲ್ಲಿನ ಶಾಮುಂಡನ್ ಎಂಬ ರಾಜರಾಜವೇಳಾನ್; ಶಿನ್ನಗರಂನ ಸಭೆಯ ಸದಸ್ಯನಾದ ಬ್ರಾಹ್ಮಣವಶವನಾಯಕ ಮೊದಲಾದ ಅನೇಕ ಸ್ಥಳಗಳ ಬ್ರಾಹ್ಮಣರು ಸೇರಿ ದೇವತೆಯಜಾತ್ರೆಯ ಸಂದರ್ಭದಲ್ಲಿ (ಮಣ್ಣಿಯಾಶಾರಿ) ದತ್ತಿ ಬಿಟ್ಟ ವಿವರ. (ದೇವ-೭೫).

ಅದೇ ಗಂಗವಾರದ ಕ್ರಿ.ಶ. ೧೦೫೦ರ ಅದೇ ರಾಜಾಧಿರಾಜದೇವನ, ದೇವಾಲಯದ ಗೋಡೆಯ ಮೇಲಿರುವ ಶಾಸನವು ಅಸ್ಪಷ್ಟವಾಗಿದ್ದು ದೀರ್ಘ ಬಿರುದಾವಳಿಗಳಿಂದ ಕೂಡಿದೆ. ವಿಕ್ರಮಚೋಳ ಮಂಡಲದ ದಡಿಗವಾಡಿಯ ಸಣ್ಣೈನಾಡಿನ ಉತ್ಪತ್ತಿಯಲ್ಲಿ ಸೇನಾಪತಿ ರಾಜೇಂದ್ರಚೋಳ ಬ್ರಹ್ಮ ಮಾರಾಯನು ಅವನ ಜೀವನ ಪರ್ಯಂತ ಅರ್ಧ ಪಾಲನ್ನು ಪಡೆದು ಕೊಳ್ಳಲು ಅಧಿಕೃತಗೊಳಿಸಲಾಯಿತು. ಅಲ್ಲದೆ ನೀರಾವರಿ ಭೂಮಿಯಲ್ಲಿ ರಾಜಭಾಗದ ೧ ಪಾಲು ಕೃಷಿಕನ ೧.೫ ಪಾಲನ್ನು,ಹೊಲಗಳಲ್ಲಿ ರಾಜಭಾಗ ೧ ಪಾಲು ಮತ್ತು ಕೃಷಿಕನ ೩ ಪಾಲನ್ನು ಪಡೆದುಕೊಳ್ಳುವಂತೆ ಅಧಿಕೃತಗೊಳಸಿರುವ ಸಂಗತಿಯನ್ನು ತಿಳಿಸುತ್ತದೆ. ಜೊತೆಗೆ ಕುಮ್ಮರಿ ಕೃಷಿಗೆ ಒಳಪಟ್ಟ ಎಲ್ಲಾ ಉತ್ಪನ್ನವೂ ಅವನಿಗೆ ಸಲ್ಲುವಂತೆ ಅಧಿಕೃತಗೊಳಿಸಿದ ವಿವರವಿದೆ. (ದೇವ-೭೬).

ದೇವನಹಳ್ಳಿ ತಾಲ್ಲೂಕು ಕುಂದಾಣದ ಹೋಬಳಿಯ ಗ್ರಾಮವಾದ ಬ್ಯಾಡರಹಳ್ಳಿಯಲ್ಲಿರುವ ವೀರಗಲ್ಲು ಕ್ರಿ. ಶ. ೧೦೬೭ಕ್ಕೆ ಸೇರಿದ್ದು ಚೋಳ ವೀರರಾಜೇಂದ್ರದೇವನ ೫ನೆಯ ಆಡಳಿತ ವರ್ಷಕ್ಕೆ ಸೇರಿದುದಾಗಿದೆ. ವಿಕ್ರಮಚೋಳಮಂಡಲದ ಸಣ್ಣೈನಾಡಿನ ತಿಪ್ಪೂರಿನ ಒಡೆಯನಾದ ವಸವ್ವೆಯ ಎಂಬುವ ರಾಯವೇಳಾನನ ಮಡದಿ ಸೋಮಕ್ಕ ಎಂಬುವಳು ಅಗ್ನಿ ಪ್ರವೇಶ ಮಾಡಿದಾಗ ಈ ಕಲ್ಲನ್ನು ಸ್ಥಾಪಿಸಿರುವ ಬಗ್ಗೆ ವಿವರವಿದೆ.(ದೇವ–೧೪).

ಅಲ್ಲಾಳಸಂದ್ರ ಗ್ರಾಮದಲ್ಲಿನ ಕ್ರಿ.ಶ. ೧೦೮೦ರ ಕುಲೋತುಂಗ ಚೋಳನ ಕನ್ನಡ ಶಾಸನವು ಸಣ್ಣೆನಾಡ ಅಧಿಪತಿ ಕಾಡೆಯನಾಯಕನ ಭಂಟ ಮುಮ್ಮಡಿ ಸೆಟ್ಟಿಯ ಮಗ ಗೂಳಿಯಣ್ಣನ ತಮ್ಮ ರಾಮದೇವನು ಹಿರಿಯ ಹಂದಿಯ ಬೇಟೆಗೆ ಹೋಗಿ ತಾನೂ ಗಾಯಗೊಂಡು ಮಡಿದ ವಿವರವನ್ನು ನೀಡುತ್ತದೆ. (ಬೆಂ. ೩೨)

ಕ್ರಿ.ಶ. ೧೧೩೩ರ ಆವತಿಯ ವೀರಗಲ್ಲು ಹೊಯ್ಸಳ ವೀರಗಂಗನದಾಗಿದೆ. ಗಂಗರ ಪೆರ್ಗಡೆ ಮಾಚ್ಚಗಾಮುಂಡನು ವೀರಗಲ್ಲನ್ನು ಸ್ಥಾಪಿಸಿದನು. ಈತನು ಸಣ್ಣೆನಾಡಿನ ಆವತ್ತಿಯೂರಿನ ಒಡೆಯನಾಗಿದ್ದನು. ಗಂಗರ ಪೆರ್ಗಡೆಯಾಗಿದ್ದ ಮಾಚ್ಚಗಾಮುಂಡನು ಕಾವ ಗಾಮುಂಡನ ಮಗ, ಈತನ ತಂದೆ ಪೊಲ್ಲಗಾಮುಂಡ ಗಂಗ ವಂಶದ ಉಯ . . . ಗಾಮುಂಡನ ಮರಿಮೊಮ್ಮಗ ಪೊಲ್ಲಗಾಮುಂಡನ ಮೊಮ್ಮಗನಾದ ಕಾವಗಾವುಂಡನ ಮಗ.(ದೇವ–೨೦). ವೀರ?

ಕಾಡುಗೋಡಿ ಕಾಶೀವಿಶ್ವೇಶ್ವರ ದೇವಾಲಯದ ಶಾಸನವು ವಿಕ್ರಮಚೋಳಮಂಡಲದ ಸಣ್ಣೈನಾಡಿನ ಕಾಡಮಂಗಲದ ಪಟ್ಟಂದೂರಿನ ರಾಜಾಧಿರಾಜ ಬಂಗೀಶ್ವರಉಡ್ಯೆಯರ್ ದೇವರಿಗೆಮೊದಲೇ ನೀಡಿದ್ದ ಕೊಡುಗೆಗಳ ಮೇಲಿನ ಕರವನ್ನು ಮನ್ನಮಾಡಿ ಬಂಗಿಯ ಕುಟುಂಬದವರಿಗೆ ದತ್ತಿ ಬಿಟ್ಟ ವಿವರ. (೧೧೫೦ ಹೊ.ಕೋ ೧೪೩) ಅದೇ ಸ್ಥಳದ ೧೧೫೧ ರ ೧೪೩ ಎ ಶಾಸನವು ವಂಗೀಶ್ವರ ಉಡ್ಯೆಯಾರ್ ದೇವಾಲಯದ ಅಗತ್ಯಗಳನ್ನು ನಿರ್ದಿಷ್ಟ ವರ್ಷದಲ್ಲಿ ಸ್ವಲ್ಪ ಹಣವನ್ನು ಸೆಂಬಿ ಬಟ್ಟಾರ್‌ನ ಮಗ ನಾಗಬಟ್ಟ ಮುಂತಾದವರು ನೀಡಿರುತ್ತಾರೆ.

ಕ್ರಿ.ಶ. ೧೧೭೪, ಹೊಯ್ಸಳ ಇಮ್ಮಡಿ ಬಲ್ಲಾಳನ ಶಾಸನದಲ್ಲಿ **'ವಿರರಾಜೇನ್ದರ ಹೊಯ್ಸಳ ಸಣ್ಣೇನಾಡಾಳ್ವ** ಚಂಗಿಕುಳ ಕಮಳ ಮಾರ್ತಾಂಡನತುಳ ಭುಜಬಳಾವಷ್ಟಂಭ ಕಾಮಕೋಟಿ ದೇವಿ ವರಪ್ರಸಾದ ನಾಮಾವಳೀಮುಖ್ಯರಪ್ಪ ಸಾವನ್ತ ಭರತೆಯನಾಯಕಂ' ಎಂಬ ಉಲ್ಲೇಖ ಎಕ ೭, ನಾಗಮಂಗಲ ೨೯ ರಲ್ಲಿ ಬಂದಿದ್ದೆ, ಉಕ್ತವಾಗಿರುವ ಸಣ್ಣೆನಾಡು ಮತ್ತು ಸಾವನ್ತ ಭರತೆಯನಾಯಕರ ಬಗ್ಗೆ ಪ್ರತ್ಯೇಕ ಅಧ್ಯನದ ಅಗತ್ಯವಿದೆ. ಎಂದೆನಿಸುತ್ತದೆ.

ಕ್ರಿ.ಶ. ೧೨೬೭ರ ಗಂಗವಾರದ ಶಾಸನ ಮಹಾಮಂಡಳೇಶ್ವರ ತ್ರಿಭುವನಮಲ್ಲ ನಂದಿಗಿರಿನಾಥ ಮೂನ್‌ಋನಾಡಾಳ್ವರ್ ಶಿತಗರಗಣ್ಡ ಅಣ್ಣನಂಕಕಾರ ವೆಂಬಿದೇವರ್ ಎಂಬುವನು ಭಯಪೆಪಳ್ಳಿಯಾರ್ ಗಂಗಪುರದ ಜೀಯಾರರಿಗೆ ಪೊನ್ನು ದತ್ತಿ ಬಿಟ್ಟ ವಿವರ (ದೇವ೭೯).

ಕ್ರಿ.ಶ. ೧೨೮೩ರ ಆವತಿ ಹೋಬಳಿ ಬುಳ್ಳಹಳ್ಳಿ ಶಾಸನವು ಮಹಾಮಂಡಳೇಶ್ವರ ತ್ರಿಭುವನ ಮಲ್ಲ ನಂದಿಗಿರಿನಾಥವೆಬಿದೇವ ಎಂಬುವ ನಂದಿದೇವನು ನಿಗರಿಲಿ ಚೋಳಮಂಡಲದ ಉತ್ತರ ಸಣ್ಣೆನಾಡಿನ ಕೊಡುವತ್ತಿಯ ಕುಳೈಮಾಂಪಳ್ಳಂ ಗ್ರಾಮವನ್ನು ನಂದಿಸಮುತ್ತಿರಂ ಎಂಬ ಹೆಸರಿನ ಕೆರೆಯ ಕೆಳಗಿನ ಭೂಮಿಯನ್ನು ೩೨ ಜನ ಬ್ರಾಹ್ಮಣರಿಗೆ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಂತೆ ದತ್ತಿ ನೀಡಲಾಗಿದೆ. ನಂದೀಶ್ವರ ದೇವರ ಸಮ್ಮುಖದಲ್ಲಿ ವಿಷುವತ್ಸಂಕ್ರಾಂತಿ, ಆಯನ ಸಂಕ್ರಮಣ ಕಾಲಗಳಲ್ಲಿ ಹಬ್ಬಹರಿದಿನಗಳೇ ಮುಂತಾದ ಸಂದರ್ಭಗಳಲ್ಲಿ ವೇದಗಳ ಪಾರಾಯಣ ಮಾಡಬೇಕು. ಆ ಸೇವೆಗಳಿಗಾಗಿ ಪ್ರಸಾದವನ್ನು ಪಡೆಯುತ್ತಾರೆ. ಅದರಲ್ಲಿ ಸಂತಾನನವಿಲ್ಲದೆ ಗತಿಸಿದರೆ ಅವರ ಆಸ್ತಿಯ ಪಾಲನ್ನು ದೇವರಿಗೆ ಮತ್ತು ನನಗೆ ಹಂಚಬೇಕು. ಅಲ್ಲದೆ ಕೆರೆಯ ಕೆಳಗಿನ ಭೂಮಿಯನ್ನು ನೀರಾವರಿಗೆ ಅಣಿಗೊಳಿದಬೇಕು.(ಹೊಕೋ ೧). ಅಂಬಲ ಪೆರುಮಾಳರ ಸಮ್ಮುಖದಲ್ಲಿ ದತ್ತಿ ನೀಡಲಾಯಿತು. (ದೇ೨೮).

ಕ್ರಿ.ಶ. ೧೩೪೩ರ ಪಟ್ಟಂದೂರು ಶಾಸನ ಹೊಯ್ಸಳ ವೀರಬಲ್ಲಾಳನದಾಗಿದ್ದು ಉಣಮಲೆ ಪಟ್ಟಣದಿಂದ ರಾಜ್ಯವಾಳುತ್ತಿರುತ್ತಾನೆ. ಆತನ ಮಹಾ ಸಾಮಂತಾದಿಪತಿ ಚಿಕ್ಕಕಳಯನಾಯಕರು ಸಣ್ಣೆನಾಡ ತೆಂಕಣ ಬಾಗೆಯ ತೋಜೆವಳ ವಿತ್ತಿಯ ಕಾಡಗೋಡಿ ಸ್ಥಳದ ಸಮಸ್ತ ಗವುಂಡಗಳು ಈ ಸಣ್ಣೆರಾಜ್ಯದ ಸೇನಬೋವ ಪೆರುಂಬಾಚರಿಯ ಸಾತುವಲಅಲ್ಲಾಳರಿಂಗೆ ಈ ಸ್ಥಳದೊಳಗಣ ಪಟ್ಟಂದೂರ ಗದ್ದೆ ಬೆದ್ದಲು ಚತುಸೀಮೆಪೂರ್ಬಮರಿಆದಿ ಏನುಳ್ಳ ಹೊಲ ಸೀಮೆಯನು ಸರ್ಬಮಾನ್ಯದ ಕೊಡಿಗೆಯಾಗಿ ದತ್ತಿ ಬಿಟ್ಟ ವಿವರ. (ಬೆಂ. ೪೧)

ಕ್ರಿ.ಶ. ೧೩೮೦ ಬೇಚಿರಾಕ್ ಬೇಲೂರ್ ವೀರ ಹರಿಯಪ್ಪ ಒಡೆಯನ ಶಾಸನ ತುಜೈವಟಿನಾಟ್ಟು ವೇಲೂರಿನಲ್ಲಿ ಶಿವನೇಶ್ವರಮುಡ್ಯೆಯನಾಯನಾರಿಗೆ ಎಜ್ಜ . ಚ . ಯ . . .

**ಸಣ್ಣಿ ನಾಡು ಮೂನೂರು**

ಕ್ರಿ.ಶ. ೧೩೯೯ರ ಇಮ್ಮಡಿ ಹರಿಹರನ ಹೊಸಕೋಟೆ ತಾಲ್ಲೂಕಿನ ಬಿಳಿಸಿವಾಲೆಯ ಶಾಸನದಲ್ಲಿ ನಿಗಿರಿಲಿ ಶೋಲಿನಾಡಿನ ಶೆಣ್ಣೈನಾಡಿನೊಳಗಿನ ತೆಂಕೂಱುನಾಡಿನ ಅಧಿಕಾರಿಯಾದ **ಕಱಿಕಿಱೈನ ದಾಮೋದರ ಶೆಟ್ಟಿಯಾರ್** ಎಂಬುವನು ದೀಪಸ್ತಂಭವನ್ನು ಮಾಡಿಸಿ ನಿಲ್ಲಿಸಿದ ವಿವರ ಬಂದಿದೆ. (ಮೈ.ಆ.ರಿ ೧೯೧೧ ಪು.೩೨)

ಕ್ರಿ. ಶ. ೧೪೦೧ರ ಕಿತ್ತಗನೂರು ಗೋಪಾಲಸ್ವಾಮಿ ದೇವಾಲಯದ ಮುಂದಿನ ಗರುಡಗಂಬದಲ್ಲಿನ ಶಾಸನ ರಾಜಾಧಿರಾಜ ರಾಜ ಪರಮೇಶ್ವರ ಶ್ರೀ ವೀರಹರಿಹರರಾಯರ ಆಳ್ವಿಕೆಯಲ್ಲಿ ಸಣ್ಣೆ ನಾಡಿನ ದಕ್ಷಿಣ ವಿಭಾಗದ ಕಿತ್ತೈನೂರಿನ ಪೆರುಂಬಾಚ್ಚೇರಿಯಲ್ಲಿರುವ ತೇವಪೆರ ಮಾಳ್ ದೇವರಿಗೆ ದತ್ತಿ ಬಿಟ್ಟ ಅಸ್ಪಷ್ಟ ವಿವರ.

ಮುಳುಬಾಗಿಲು ೧೧೩೭ ಎಲ್ದೂರು ಶಾಸನ ನಿಗರಿಲಿ ಚೋಳ ಮಂಡಲದ **ಪುನ್ನಾಟ್ಟು** ಮಂಡಲಿಕ . . ಕಿ. . ಪಳ್ಳಿದೇವ ಮಂಡಲಿಕರ ಮಗನ್ . . ರಶಕ್ಕಿ . . . . ಶ್ರೀ ಮಲ್ಲಿಕಾರ್ಜುನ ದೇವರಿಗೆಇರಟಿ ಮೂ . . . ಸಮುದ್ರಮು. . . ಎಂಬ ತ್ರುಟಿತ ಉಲ್ಲೇವಿದೆ.

ಸಣ್ಣೆನಾಡಿಗೆ ಸಂಬಂಧಿಸಿದ ಈ ಮೇಲಿನ ಶಾಸನಗಳ ಹಿನ್ನೆಯಲ್ಲಿ ಗಂಗ ರಾಷ್ಟ್ರಕೂಟರ ಕಾಲದಲ್ಲಿ ಅನೇಕ ತುರುಗಾಳೆಗಗಳು, ಚೋಳರ ಆಳ್ವಿಕೆಯಲ್ಲಿ ದೇವಾಲಯಗಳ ರಚನೆ ಮತ್ತು ಪೂಜಾ ಕೈಂಕರ್ಯಗಳಿಗೆ ಹಾಗೂ ವಿಪ್ರರಿಗೆ, ಯತಿಗಳಿಗೆ ವಿಪುಲ ದಾನ ದತ್ತಿಗಳನ್ನು ನೀಡಿರುವ ಸಂಗತಿ ಹಾಗೂ ದೀಪಸ್ತಂಭ ಸ್ಥಾಪನೆ, ಮಹಾಸತಿ ಸ್ಮಾರಕ (ಸೋಮಕ್ಕ ಎಂಬುವಳು ಅಗ್ನಿ ಪ್ರವೇಶದ ಉಲ್ಲೇಖ) ಮತ್ತು ಹಂದಿಬೇಟೆ ವೀರಗಲ್ಲು ಸ್ಮಾರಕಗಳೂ ಕಂಡುಬಂದಿವೆ. ಈ ಪ್ರದೇಶ ಮುಖ್ಯವಾಗಿ ವಾಣಿಜ್ಯ ಚಟುವಟಿಕೆಗಳ ಚಲನವಲನಾ ಪ್ರದೇಶವಾಗಿದ್ದಿತೆಂದು ತೋರುತ್ತದೆ. ಈ ನಾಡಿನ ವ್ಯಾಪ್ತಿಯಲ್ಲಿ ಬರುವ ಪೆರ್ಬೊಳಲ್-೩೦ ಅಂದರೆ ಹೆಬ್ಬಾಳ ಗ್ರಾಮವು ೩೦ ಗ್ರಾಮಗಳ ಕೇಂದ್ರಸ್ಥಳವಾಗಿ ಪಿರಿಯ ಪೊಳಲ್ ಅಂದರೆ ದೊಡ್ಡ ಪಟ್ಟಣವಾಗಿ ೮ನೆಯ ಶತಮಾನಕ್ಕಾಗಲೇ ಮೆರದಿತ್ತೆಂದು ಇತ್ತೀಚೆಗೆ ಅಲ್ಲಿ ಶೋಧವಾದ ಗಂಗ ಶ್ರೀಪುರುಷನ ಶಾಸನದಿಂದ ಮನಗಾಣಬಹುದಾಗಿದೆ. (ನೋಡಿ: ಇತಿಹಾಸ ದರ್ಪಣ ೨೦೧೮).

## ಆಕರ ಗ್ರಂಥಗಳು


೧. ಎಪಿಗ್ರಾಫಿಯಾ ಕರ್ನಾಟಕ, ಸಂಪುಟ ೯ (ರೈಸ್ ಆವೃತ್ತಿ), ಬೆಂಗಳೂರು, ೧೯೦೫.

೨. ಡಾ. ಕೆ.ಬಿ. ಶಿವತಾರಕ್., ಕರ್ನಾಟಕದ ಪುರಾತತ್ತ್ವನೆಲೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೩. ಡಾ. ಪಿ.ವಿ. ಕೃಷ್ಣಮೂರ್ತಿ., ಶಾಸನ ಇತಿಹಾಸ ಮಂಥನ, ತುಮಕೂರ ವಿಶ್ವವಿದ್ಯಾನಿಲಯ, ತುಮಕೂರು, ೨೦೧೧.

# ಮಾಟೂರು ವಂಶದ ಅರಸರು

ಹೆಚ್.ಎಸ್. ಉಷಾರಾಣಿ*

ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯರ ನಡುವೆ ರಾಜಕೀಯ ಸಂಘರ್ಷ ನಡೆಯುತ್ತಿದ್ದ ಕಾಲವದು. ಇವರ ಯಶಸ್ವಿ ಆಳ್ವಿಕೆಗೆ ಹಲವು ಸಾಮಂತ ಮನೆತನಗಳು ಶ್ರಮಿಸಿವೆ. ಅವುಗಳಲ್ಲಿ ಮಾಟೂರು ವಂಶದ ಅರಸರು ಒಬ್ಬರು. ಲಭ್ಯವಿರುವ ಶಾಸನಗಳನ್ನು ಆಧರಿಸಿ ಉಲ್ಲೇಖಿತ ಅರಸರ ಚಟುವಟಿಕೆಗಳನ್ನು ವಿಶ್ಲೇಷಿಸುವುದೇ ಪ್ರಸ್ತುತ ಪ್ರಬಂಧದ ಉದ್ದೇಶ.

ಮಟ್ಟರ, ಮಾಟೂರು ಬ್ರಹ್ಮಕ್ಷತ್ರಿಯ ವಂಶದ ಅರಸರ ಉಲ್ಲೇಖ ಸುಮಾರು ೧೭ ಶಾಸನಗಳಲ್ಲಿ ಕಂಡುಬರುತ್ತದೆ. ಅದರಂತೆ ಈ ವಂಶದ ಅರಸರ ಮೊದಲ ಪ್ರಸ್ತಾಪ ಹಾವೇರಿ ತಾಲ್ಲೂಕಿನ ಕ್ರಿ.ಶ. ೯೨೭ರ ಕದರಮಂದಲಗಿ ಶಾಸನದಲ್ಲಿ[೧] ಉಕ್ತವಾಗಿರುವುದು ಹೀಗಿದೆ. ಈ ಶಾಸನವು ಮಾಟ್ಟರ ವಂಶದ ಭೋಗಪತಿಯಾಗಿದ್ದ ಆಯಿಚವರ್ಮರಸನನ್ನು ಹೆಸರಿಸುತ್ತದೆ. ಈತನೊಂದಿಗೆ ಚಿಕ್ಕಂಬರ ವಂಶದ ಕುಳುಗಗಾವುಂಡ ಹಾಗೂ ಇತರ ಗಾವುಂಡರು ವಿದ್ಯಾದಾನಕ್ಕೆಂದು ವೃಷಭಣಂದಿಗೊರವ ಮತ್ತು ಶಿರಳಣನ್ದಿ ಗೊರವರಿಗೆ ಭೂದಾನ ನೀಡಿದ್ದನ್ನು ಹೇಳುತ್ತದೆ. ಇವರು ಪ್ರಾರಂಭದಲ್ಲಿ ಭೋಗ ಎಂಬ ಆಡಳಿತ ಘಟಕದ ಮುಖ್ಯಸ್ಥರಾಗಿದ್ದುದು ಖಚಿತ. ಶೈವ ಕಾಳಾಮುಖ ಆಚಾರ್ಯರಾದ ಗೊರವರಿಗೆ ಭೂದಾನ ನೀಡಿದ್ದುದು ಗೋಚರಿಸುತ್ತದೆ.

ಕ್ರಿ.ಶ. ೯೩೯ರ ಕನ್ನರದೇವನ (ಮೂರನೇ ಕೃಷ್ಣ) ಓಟೂರು ಶಾಸನ[೨] ಪ್ರಕಾರ, ಈ ವಂಶದ ಅರಸರು ತಮ್ಮದೇ ಆದ ಲಾಂಛನ, ಧ್ವಜ ಹೊಂದಿದ್ದನ್ನು ಈ ರೀತಿ ಗಮನಿಸುತ್ತೇವೆ. ಅದು ಹೀಗಿದೆ: ಪಂಚಮಹಾಶಬ್ಧ ಮಹಾಸಾಮಂತಾಧಿಪತಿ, ತ್ರಿಕುಂದಪುರವರೇಶ್ವರ, ಬ್ರಹ್ಮಕ್ಷತ್ರಿಯ ಮಾಟೂರ ವಂಶೋದ್ಭವ ಛತ್ರ ಹಯಲಾಂಛನ, ದರ್ಪಣ ಧ್ವಜ ಹೊಂದಿದ್ದ ಶ್ರೀ ಮದ್ಮಾಚಿಮರಸ ಬನವಸಿ ೧೨,೦೦೦ ಕ್ಕೆ ಅಧಿಕಾರಿಯಾಗಿದ್ದಾಗ ಎಡೆನಾಡಿನ ಪೆರ್ಗಡೆ ನಾಕಿಮಯ್ಯ ಚಿತ್ತರವೆ ಹಳ್ಳಿ ಮತ್ತು ಓಟೂರನ್ನು ಆಳುತ್ತಿರಲು ವಂಶಪಾರಂಪರ್ಯದ ಹಕ್ಕಿನಿಂದ ದೇವಾಲಯ ನಿರ್ಮಿಸಿ ಭೂದಾನ ನೀಡಿದನು. ಆತನ ತಮ್ಮ ವೆಲೆಯಮ ಬಾವಿಕಟ್ಟಿಸಿ ಮಠ ಮಾಡಿಸಿದನು. ಅಲ್ಲದೆ ಪೊಲೆಯಮ್ಮ ಎಂಬಾತನ ಪತ್ನಿ ಗೊಮ್ಮಬ್ಬೆ ಕೇಸವ ಆದಿತ್ಯರನ್ನು ಪ್ರತಿಷ್ಠಾಪಿಸಿದಳು. ಪೊಲೆಯಮ್ಮನು ಶಕ್ತಿಪರಿಷೆಯ ಈಶ್ವರಯ್ಯನಬ ಕಾಲು ತೊಳೆದು ಭೂದಾನ ಕೊಟ್ಟರು. ಈಶ್ವರಯ್ಯನು ವಳಯ ಅಗ್ರಹಾರದಲ್ಲಿದ್ದಂತೆ ಹೇಳಿದೆ. ಈ ಶಾಸನದನ್ವಯ ಕೇವಲ ಒಂದು ದಶಕದಲ್ಲಿ ಮಾಟೂರು ವಂಶದ ಮಾಚಿಯರಸ ಬನವಾಸಿ ೧೨,೦೦೦ ವನ್ನು ಸ್ವತಂತ್ರವಾಗಿ ಆಳುತ್ತಿದ್ದು, ಪಾಳೆಯಗಾರರ ಅಥವಾ ಸಾಮಂತನ ಸ್ಥಾನಮಾನ ಗಳಿಸಿದಂತಿದೆ.

ಕ್ರಿ.ಶ. ೯೩೯ರ ಹೆಚ್ಚೆ ಶಾಸನ[೩] ಅದೇ ಕನ್ನರದೇವನ ಆಳ್ವಿಕೆಯಲ್ಲಿ ಮಹಾಸಾಮಂತಾಧಿಪತಿಯಾಗಿದ್ದ ಮಾಟೂರು ವಂಶೋದ್ಭವ ಶ್ರೀ ಮಾಚಿಗನು ಪುಣ್ಯಕಾರ್ಯದಲ್ಲಿ ತೊಡಗಬೇಕೆಂದು ಭಕ್ತಿಯಿಂದ ಗೋವ ಬನವಾಸಿಯ ಚಟ್ಟಯ್ಯ ದೇವನ ಜೊತೆಗೂಡಿ ಸ್ವಸ್ತಿಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪಸಮಾಧಿಶೀಲ ಗುಣಸಂಪನ್ನರಪ್ಪ ಶ್ರೀರುದ್ರಶಕ್ತಿ ಪಂಡಿತ ದೇವರ ಕಾಲುತೊಳೆದು ಬ್ರಹ್ಮ ಬೊಜೆಂಗ ಸ್ವಾಮಿಯವರ ವೈರಾಗ್ಯ ಸ್ಥಾನವಾಗಿದ್ದ ಶ್ರೀವರದಾತ್ಮನ ದೇಗುಲಕ್ಕೆ ಭೂದಾನ ನೀಡಿದರು ಎಂದು ಹೇಳುತ್ತದೆ.

ಅದೇ ರೀತಿ ಕ್ರಿ.ಶ. ೯೫೯-೬೦ರ ಕೆಳಗಿನ ತಿರುಗಣಿಕೆ ಶಾಸನ[೪] ಎಡೆನಾಡು-೭೦ನ್ನು ಆಳುತಿದ್ದ ಮಾಚಿಗನನ್ನು ಹೆಸರಿಸುತ್ತದೆ. ಅಲ್ಲದೆ ಕಿರುವುಣಸೆಯ ಬಿಯಳಮ್ಮನ ಮಗ ಪಡೆವಳ ಆರಿಗನು ಮತ್ತು ಎರೆಯಬ್ಬೆಯರು ಮಾಡಿದ ಗೋಸಹಸ್ರದಾನದ ಬಗ್ಗೆ ತಿಳಿಸುತ್ತದೆ. ಇದರಿಂದ ಗೋದಾನ ಸಾಮಾನ್ಯವಾಗಿತ್ತು. ಇದನ್ನು ಪುಣ್ಯ ಕಾರ್ಯವೆಂದು ಭಾವಿಸಲಾಗಿತ್ತೆಂಬುದು ದಿಟ.

* #೨೭೪, ೩ನೇ ಮುಖ್ಯರಸ್ತೆ, ಬ್ಯಾಂಕ್ ನೌಕರರ ಬಡಾವಣೆ, ಬೋಗಾದಿ, ಮೈಸೂರು-೨೬, ಮೊ. ೯೮೮೦೪೪೭೪೯೩

ಕ್ರಿ.ಶ. ೯೫೪ರ ಕಕ್ಕರಸಿಯ ಕಲ್ಲೇಶ್ವರ ದೇವಾಲಯ ಶಾಸನ[೫] ಕನ್ನರದೇವ ರಾಜ್ಯವಾಳುತ್ತಿದ್ದಾಗ ಮಹಾಸಾಮಂತಾಧಿಪತಿ ತ್ರಿಕುಂದಪುರವರೇಶ್ವರ ಬ್ರಹ್ಮಕ್ಷತ್ರಿಯ ಮಾಟೂರ ವಂಶೋದ್ಭವ ವಿರಾಜಮಾನನಾಗಿದ್ದ ಎಂದಷ್ಟೆ ಮಾಹಿತಿ ನೀಡುತ್ತದೆ. ಯಾವುದೇ ಅರಸನನ್ನು ಹೆಸರಿಸುವುದಿಲ್ಲ.

ಕಾಲದ ಉಲ್ಲೇಖವಿಲ್ಲದ ಕಕ್ಕಲದೇವನ (ನಾಲ್ಕನೇ ಅಮೋಘ ವರ್ಷ) ಹೆಚ್ಚೆ ಶಾಸನ[೬] ಆತನ ಆಳ್ವಿಕೆಯಲ್ಲಿ ಮಹಾಸಾಮಂತನಾಗಿ ತ್ರಿಕುಂದಪುರವರೇಶ್ವರನಾದ ಮಾಟೂರು ವಂಶೋದ್ಭವನಾದ ಶ್ರೀಶಾಂತಿವರ್ಮನು ಹೆಳ್ದೆಸೆಯಲ್ಲಿ ಆಳುತ್ತಿದ್ದಾಗ ಆಕಟಿಗ ಎಂಬಾತ ಸ್ವರ್ಗಸ್ಥನಾದ ಪ್ರಯುಕ್ತ ಆಕಟಿಕನಿಗೆ ಧರ್ಮನಿಮಿತ್ತವಾಗಿ ೨೪ ಪುರಧರ್ಮವಾಗಿ ಮಹಾಜನರ ಕಾಲಂ ಕರ್ಚಿ ಬಿಟ್ಟನೆಂದು ಹೇಳಿದೆ. ವಿವರ ಸ್ಪಷ್ಟವಾಗಿಲ್ಲ.

ಕ್ರಿ.ಶ. ೧೦ನೇ ಶತಮಾನದ ಶ್ರವಣಬೆಳಗೊಳ ಶಾಸನ[೭] ರಾಷ್ಟ್ರಕೂಟರ ದೊರೆ ನಾಲ್ಕನೇ ಇಂದ್ರನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡುವಲ್ಲಿ ಶ್ರಮಿಸಿದ ಗಂಗ ಮಾರಸಿಂಹ ಕೊನೆಗೆ ಬಂಕಾಪುರದಲ್ಲಿ ಮರಣ ಹೊಂದಿದ. ಹೀಗೆ ನೊಳಂಬಕುಲಾಂತಕ ಮಾರಸಿಂಹನ ಸ್ಮರಾಣಾರ್ಥ ಕೆತ್ತಿಸಿದ ಈ ಶಾಸನದಲ್ಲಿ ಮಾಟೂರು ವಂಶಜಸ್ಯ ಎಂಬ ಉಲ್ಲೇಖವಿದೆ. ಪ್ರಾಯಶಃ ಮಾಟೂರು ವಂಶಸ್ಥರು ಇಂದ್ರನ ಪಟ್ಟಾಭಿಷೇಕ ಸಮಾರಂಭಕ್ಕೆ ಸಹಕರಿಸಿದ್ದರೆಂದು ಊಹಿಸಬಹುದು. ಏಕೆಂದರೆ ರಾಷ್ಟ್ರಕೂಟರ ಕರ್ಕ ಚಾಲುಕ್ಯ ತೈಲಪನಿಂದ ಸೋತು ಸೊರಬ ತಾಲ್ಲೂಕಿನಲ್ಲಿ ಒಂದು ಸಣ್ಣ ರಾಜ್ಯ ನಿರ್ಮಿಸಿ ಮತ್ತೆ ಮಾನ್ಯಖೇಟ ಪ್ರವೇಶಿಸಲು ಯತ್ನಿಸಿದರೂ ಸಫಲವಾಗದೆ ಕೊನೆಯ ದೊರೆ ಇಂದ್ರನು ಬಂಕಾಪುರದಲ್ಲಿ ನೆಲೆಗೊಂಡು ರಾಷ್ಟ್ರಕೂಟರ ಕೊನೆಯ ರಾಜನಾಗಿದ್ದುದು ತಿಳಿದಿರುವ ವಿಷಯ. ಈಗಾಗಲೇ ಸೊರಬ ತಾಲ್ಲೂಕಿನಲ್ಲಿ ನೆಲೆಯೂರಿದ್ದ ಮಾಟೂರು ವಂಶಸ್ಥರು ರಾಷ್ಟ್ರಕೂಟರ ರಾಜಕೀಯ ಕ್ಷೇತ್ರ ಪ್ರವೇಶಿಸಿದುದು ಇದುವರೆಗಿನ ಅಧ್ಯಯನದಿಂದ ತಿಳಿದಿರುವ ಸಂಗತಿ.

ಕ್ರಿ.ಶ. ೯೭೯ರ ಸೀತಾರಾಮಪಳ್ಳಿ ಶಾಸನ[೮] (ಮೇದಕ್‌ಜಿಲ್ಲೆ ಗಜ್ವೇಲ ತಾಲ್ಲೂಕು. ಆಂಧ್ರ) ಚಕ್ರವರ್ತಿ ಅಹವಮಲ್ಲದೇವನ ಆಳ್ವಿಕೆಯಲ್ಲಿ ಆತನ ಪಾದಪಂಕಜ ಭ್ರಮರಾಯ ಮಾನಂ ಮಾಟೂರು ವಂಶದ ಮಹಾಸಾಮಂತಾಧಿಪತಿ ಶ್ರೀರೇವಣರಸ ಮೆದಕು ಮೂರರ ಬಳಿಯ ರಾವಿಪೊಳಲನ್ನು ಆಳುತ್ತಿದ್ದಾಗ ಹಿಂದೆ ಕ್ರಿ.ಶ. ೯೨೧ರಲ್ಲಿ ಶಂಕರಗಂಡ ಎಂಬಾತ ಅಗ್ರಹಾರ ವೇಲೂರು ಗ್ರಾಮಕ್ಕೆ ಬಿಟ್ಟ ವೃತ್ತಿಗಳಿಗೆ ಲೋಪವುಂಟಾಗಿ ಎಂಟು ಪ್ರಭುಗಳು ನೂರು ಮಹಾಜನರನ್ನು ಕರೆಸಿ ಅವರಿಗೆ ಧಾರಾಪೂರ್ವಕವಾಗಿ ಮತ್ತೆ ವೆಲೂರು ಅಗ್ರಹಾರವನ್ನು ಬಿಡುತ್ತಾನೆ. ಶ್ರೀರೇವಣರಸನ ಉಲ್ಲೇಖಿತ ಕಾರ್ಯ ಮಾಟೂರು ಅರಸರು ಪ್ರಸ್ತುತ ಆಂಧ್ರಪ್ರದೇಶದ ಮೇದಕ್ ಜಿಲ್ಲೆಯವರೆಗೂ ತಮ್ಮ ಪ್ರಭಾವ ಬೀರಿದ್ದನ್ನು ಸೂಚಿಸುತ್ತದೆ.

ಕ್ರಿ.ಶ. ೯೯೧ರ ಹೆಚ್ಚೆಗ್ರಾಮ ಶಾಸನ[೯] ಚಾಳುಕ್ಯ ಅಹವಮಲ್ಲದೇವನ ಆಳ್ವಿಕೆಯಲ್ಲಿ ಮಹಾಸಾಮಂತಾಧಿಪತಿಯಾಗಿದ್ದ ಶಾಂತಿವರ್ಮನ ಆಡಳಿತ ವ್ಯಾಪ್ತಿಯನ್ನು ತಿಳಿಸುತ್ತದೆ. ಅದರಂತೆ ಬೆಳುಹೆ-೭, ಎಡೆನಾಡು-೭೦, ತಂದವೂರ-೧೨, ಗೆದೆಯ-೧೨, ಪುಲಿವಟ್ಟ-೧೨, ಕಲ್ವತ್ತಿ-೭ ಮತ್ತು ಸಾಂತಳಿಗೆ ೧೦೦೦ ಪ್ರದೇಶಗಳು ಶಾಂತಿವರ್ಮರ ನಿಯಂತ್ರಣದಲ್ಲಿದ್ದವು. ಹೀಗಿರಲು ಸಾಂತಳಿಗೆಯ ಬೀರಸಾವಂತನ ಮೇಲೆ ನಡೆಯುವ ಐವತ್ತು ನಾಡೊಳಗಣ ಸೀಬಳ್ಳಿ ಯೆರೆಯಯ್ಯನ ಜೇಷ್ಠಪುತ್ರ ನಂಗಮ್ಮನ ಮಗ ಜೋಗಯ್ಯನಿಗೆ ದಯೆಗೆಯ್ದು ಗೆದೆಯ-೧೨ ರಲ್ಲಿ ಹುಟ್ಟಿದ ಅಂದರೆ ಉತ್ಪನ್ನವಾದ 'ಬಳ್ದಿನಪೊನ್ನ'ನ್ನು ಸಮಭಾಗವಾಗಿ ಬಿಟ್ಟು ಗೆದೆಯ ಸರ್ವಾಭ್ಯಂತರ ಸಿದ್ದಿಯಾಳೆಯ ೧೨ಕ್ಕೆ ನಾಲ್ಗಾವುಂಡ ದಂಡ ದೋಷಗಳನ್ನು ಬಿಡುತ್ತಾನೆ.

ಕ್ರಿ.ಶ. ೧೦೧೭ರ ಡಿಸೆಂಬರ್ ಹದಿನೈದರ ಎರಡನೇ ಜಯಸಿಂಹನ ಕನನವಳ್ಳಿ ಶಾಸನ[೧೦] ಪ್ರಕಾರ, ಮಹಾಮಂಡಳೇಶ್ವರ? ಬನವಾಸಿ ೧೨,೦೦೦ ವನ್ನಾಳುತ್ತಿದ್ದಾಗ ಆತನ ಸಹೋದರ ಶ್ರೀಮನ್ ಮೂಕರಸನು, ದುಷ್ಟನಿಗ್ರಹ ಶಿಷ್ಟಪ್ರತಿಪಾಳಕನಾಗಿದ್ದ. ಅಲ್ಲದೆ ಮಹಾಸಾಮಂತ ಬ್ರಹಕ್ಷತ್ರಿಯ ಮಾಟೂರು ವಂಶೋಧ್ಭವನಾದ ಮಾಚಿಗ ಮಾರ್ತಾಂಡ ಸಮರ ಪ್ರಚಂಡ ನುಡಿದಂತೆ ಗಂಡನೆನೆಸಿದ ಸಿರಿಯಾಗಾರರಸನು ಎರಡು-೭೦ನ್ನು ಮನೆಯ ೧೨ನ್ನು ದುಷ್ಟನಿಗ್ರಹ ಶಿಷ್ಟಪ್ರತಿಪಾಳನಂತೆ ಆಳುತ್ತಿದ್ದನೆಂದೂ ಹೇಳಲಾಗಿದೆ. ಶಕ ೯೩೯ರ ಪಿಂಗ ಸಂವತ್ಸರದ ಪಂಚಮಿಶುದ್ಧ ಆದಿತ್ಯವಾರದಂದು ಹಸ್ತನಕ್ಷತ್ರ ವ್ಯತೀಪಾತ ಉತ್ತರಾಯಣದಂದು ನನ್ದಿಗ್ರಾಮ ಎಂದಷ್ಟೆ ಇದೆ. ಉಳಿದಂತೆ ಶಾಸನ ತೃಟಿತವಾಗಿದೆ.

ಕ್ರಿ.ಶ. ೧೦೩೨ರ ಐದು ಶಾಸನಗಳು ಚಾಲುಕ್ಯ ಜಯಸಿಂಹನ ಕಾಲಕ್ಕೆ ಸೇರಿದ್ದು ಮಾಟೂರು ವಂಶದ ದೇವೂರ ಶಾಂತಯ್ಯನು ಎಡೆನಾಡನ್ನು ಆಳುತ್ತಿದ್ದಾಗ ಪೆರ್ಗಡೆ ಮಾದಿಣಯ್ಯ ಬನವಾಸಿ ೧೨,೦೦೦ನ್ನು ನಿಯಂತ್ರಿಸುತ್ತಿದ್ದ. ಇವರ ಆಳ್ವಿಕೆಯಲ್ಲಿ ಗುಡುವೆ ಗ್ರಾಮದಲ್ಲಿ ನಡೆದ ತುರುಕಾಳಗ ಹಾಗೂ ತುರುಗೊಳ್ ವೀರರ ಸಾಹಸಗಾಥೆ ಗಮನಾರ್ಹ ಅದು ಹೀಗಿದೆ: ೧. ಪೆರ್ಗಡೆ ಮಾದಿನಯ್ಯ ಬನವಾಸಿ ಕೋಟೆ ಕದಂಬಯ್ಯನ ಮೇಲೆ ಬಂದಾಗ ಶ್ರೀಮತ್ ಕದಂಬನಾರಾಯಣ

ಶಾಂತಯ್ಯದೇವ ಗುಡುವೆಯನಿರಿದು ತುರುಕೊಳ್ಳುವಾಗ ಮಾರಸೂರರ ವಿಜಯಗಾವುಂಡನ ಮಗ ಕುಪ್ಪಣ್ಣಗಾವುಂಡರು ತುರುಗಳಿಗೆ ಅಡ್ಡಬಂದು ಇರಿದು ದೇವಲೋಕಕ್ಕೆ ಹೋದ ಸಂಗತಿ ತಿಳಿಯುತ್ತದೆ.[೧೧]

೨. ಗುಡುವೆಗ್ರಾಮದ ವೀರಕಲ್ಲು ಶಾಸನ[೧೨] ಮಾಟೂರು ವಂಶದ ದೇವೂರ ಶಾಂತಯ್ಯ ಎಡೆನಾಡನ್ನಾಳುತ್ತಿದ್ದಾಗ ಪೆರ್ಗಡೆ ಮಾಂಜಣಯ್ಯ ಶಕ ೯೫೪ನೆಯ ಆಂಗೀರಸ ಸಂವತ್ಸರ ಮಾರ್ಗಶಿರ ಶುದ್ಧ[೧೩] ಶನಿವಾರದಂದು ಬನವಾಸಿಯ ಕದಂಬಯ್ಯ ನಾರಾಯಣನ ಮೇಲೆ ಬಂದು ದೇವರ ಗುಡುವಿಯನ್ನು ಇರಿದು ತುರುಗಳನ್ನು ಕೊಳ್ಳುವಾಗ ಕೆಳೆಯ ಗಾವುಂಡನ ಮಗ ಹೊರವಣ್ಣಗಾವುಂಡನು ತುರುಗಳಿಗೆ ಅಡ್ಡಬಂದು ಶತ್ರುಗಳನ್ನು ಇರಿದು ದೇವಲೋಕಕ್ಕೆ ಹೋದನೆಂದೂ ಬಿಕ್ಕಯ್ಯ ಗಾವುಂಡ ಕಲ್ಲುನೆಟ್ಟು ಕಟುಕೋಜ ಕಲ್ಲನ್ನು ಕೆತ್ತಿದನೆಂದು ಹೇಳಲಾಗಿದೆ. ಇದರಿಂದ ಹೊರವಣ್ಣಗಾವುಂಡನಿಗೆ ನಿಲ್ಲಿಸಿದ ವೀರಕಲ್ಲು ಎಂದು ಸ್ಪಷ್ಟವಾಗಿದೆ.

೩. ಅದೇ ಗುಡುವೆಗ್ರಾಮದ ಮಡಿವಾಳ ಮಹದೇವನ ಹಿತ್ತಿಲ ಬದಿಯಲ್ಲಿರುವ ಮತ್ತೊಂದು ವೀರಗಲ್ಲು ಶಾಸನ ೧೩ ಪ್ರಕಾರ, ಶ್ರೀಮತ್ ದೇವೂರ ಶಾಂತಯ್ಯದೇವ ಎಡೆನಾಡನ್ನಾಳುತ್ತಿದ್ದಾಗ ಬನವಾಸಿಯ ಪೆರ್ಗಡೆ ಮಾದಿಣಯ್ಯ ಕದಂಬಯ್ಯನ ಮೇಲೆ ಬಂದಾಗ ಲೋಕಯ್ಯ ಮತ್ತು ಚಿಕ್ಕಯ್ಯರು ಊರ ಗಾವುಂಡಿಕೆಗೆಯ್ಯುತ್ತಿದ್ದರು. ಶಕ ೯೫೪ನೆಯ ಆಂಗೀರಸ ಸಂವತ್ಸರ ಮಾರ್ಗಶಿರ ಶುದ್ಧ ೧೩ ಶನಿವಾರದಂದು ಕದಂಬಯ್ಯ ಶಾಂತಯ್ಯನ ಮೇಲೆ ಬಂದು ಗುಡುವೆಯನ್ನು ಇರಿದು ತುರುಕೊಳ್ಳುವಾಗ ಗೊರವರ ಹೊನ್ನಯ್ಯ ತುರುಗಳನ್ನು ಹಿಂದಿಟ್ಟು ಹಲವರನ್ನು ಕೊಂದು ಒಳಹೊಕ್ಕು ಇರಿದು ದೇವಲೋಕ ಸೇರಿದ. ಹಾಗಾಗಿ ಹೊನ್ನಯ್ಯನ ಮಗ ಚಟ್ಟಯ್ಯ ಕಲ್ಲು ನಿಲ್ಲಿಸಿದನೆಂದು ಹೇಳಿದೆ.

೪. ಗುಡುವೆಗ್ರಾಮದ ಮತ್ತೊಂದು ವೀರಗಲ್ಲು ಶಾಸನ[೧೪] ನೀಡುವ ವಿವರ ಹೀಗಿದೆ. ಅದೇ ಮಾಟೂರು ವಂಶದ ದೇವೂರ ಶಾಂತಯ್ಯ ದೇವ ಎಡೆನಾಡನ್ನಾಳುತ್ತಿದ್ದಾಗ ಪೆರ್ಗಡೆ ಮಾದಿನಯ್ಯ ಬನವಾಸಿಯ ಕದಂಬಯ್ಯ ದೇವನ ಮೇಲೆ ಬಂದಾಗ ಶಕ ೯೫೪ನೇ ಅಂಗೀರಸ ಸಂವತ್ಸರ ಮಾರ್ಗಶಿರ ಶುದ್ಧ ೧೩ ಶನಿವಾರದಂದು ಕದಂಬಯ್ಯ ಶಾಂತಯ್ಯ ದೇವನ ಗುಡುವೆಯನಿರಿದು ತುರುಕೊಳ್ಳುವಾಗ ತುರುಗಳಿಗೆ ಅಡ್ಡಬಂದು ಶತ್ರುಗಳನ್ನು ಇರಿದು ಲೋಕಯ್ಯ ಚಿಕ್ಕಯ್ಯ ಗಾವುಂಡರು ದೇವಲೋಕ ಸೇರಿದರು.

ಕೊನೆಯದಾಗಿ ಗುಡುವೆಗ್ರಾಮದ ಇನ್ನೊಂದು ವೀರಗಲ್ಲು ಶಾಸನ[೧೫] ಪ್ರಕಾರ, ಮಾಟೂರು ಶಾಂತಯ್ಯ ರಾಜ್ಯವಾಳುತ್ತಿದ್ದಾಗ ಪೆರ್ಗಡೆ ಮಾದಿಣಯ್ಯನು ಬನವಾಸಿಯ ಕೋಟೆಯ ಮೇಲೆ ಏರಿಬಂದಿದ್ದು ಶಕವರ್ಷ ೯೫೪ನೆಯ ಆಂಗೀರಸ ಸಂವತ್ಸರದ ಮಾರ್ಗಶಿರ ತೇರ ಶನಿವಾರದಂದು ಕದಂಬನಾರಾಯಣನು ಶ್ರೀ ಶಾಂತಯ್ಯ ದೇವನು ಗುಡುವೆಯ ತುರುಗಳನ್ನು ಕೊಳ್ಳುವಾಗ ಆ ಭಾಗದ ಕಾವಯ್ಯ ತುರುಗಳಿಗೆ ಅಡ್ಡಬಂದು ಇರಿದು ದೇವಲೋಕ ಸೇರಿದ. ಈ ಹಿನ್ನೆಲೆಯಲ್ಲಿ ಗಾವುಂಡ ಲೋಕಯ್ಯ ಮತ್ತು ಬೀರಯ್ಯ ಶಾಸನ ಹಾಕಿಸುತ್ತಾರೆ. ಕಟುಕೋಜ ಈ ಶಾಸನ ಕೆತ್ತಿದ್ದಾನೆ.

ಕ್ರಿ.ಶ. ೧೦೩೨ರ ಸಾರೆಕೊಪ್ಪ ಶಾಸನ[೧೬] ಜಯಸಿಂಹನ ಆಳ್ವಿಕೆಯಲ್ಲಿ ಬ್ರಹ್ಮದೇವನು ಬನವಾಸಿ ೧೨,೦೦೦ ವನ್ನು ಆಳುತ್ತಿದ್ದನೆಂದು ಮಾಟೂರು ವಂಶಸ್ಥನನ್ನು ಚೋಳ ವಂಶ ನಂದನನೆಂದೂ ದರ್ಪಣ ಧ್ವಜನಾದ ............. ಯ್ಯದೇವ ಎಂದು ಉಲ್ಲೇಖಿಸಿ ಮನೆಯ ಪ್ರದಾನರು ಎಡೆನಾಡರ್ಪ ಎಂದು ದಾಖಲಿಸುತ್ತದೆ. ಶಾಸನ ತೃಟಿತವಾಗಿದೆ. ಈ ಶಾಸನದಲ್ಲಿ ಹೆಸರಿಸಿರುವ ..........ಯ್ಯದೇವ ತಂದೆ ಅಥವಾ ತಾಯಿ ಕಡೆಯಿಂದ ಚೋಳ ವಂಶದ ನಂದನನೆಂದೂ ಗುರುತಿಸಬಹುದು.

ಇನ್ನು ಕ್ರಿ.ಶ. ೧೦೩೨ರ ಜಯಸಿಂಹನ ಮತ್ತೊಂದು ಶಾಸನ[೧೭] ಮಾಟೂರು ವಂಶಸ್ಥರ ರಣಶೌರ್ಯದ ಬಗ್ಗೆ ತಿಳಿಸುತ್ತದೆ. ಮಾಟೂರು ವಂಶದ ಶ್ರೀಮದಾಲಯ್ಯನು ಬನವಾಸಿ ೧೨,೦೦೦ ವನ್ನು ಸಾಂತಳಿಗೆ ೧,೦೦೦ ವನ್ನು ಆಳುತ್ತಿದ್ದ. ಈತ ಮಾಂಡಳಿಕ ಕುಂದಮನನ್ನು ಕುಪ್ಪಗುಡ್ಡೆಯ ಬಯಲಿನಲ್ಲಿ ಎದುರಿಸಿದ ಮಹಾಜಿರಂಗದೊಳ್ ತೊಲಗದಗಂಡ ಎಂಬ ಖ್ಯಾತಿಯ ಆಲಯ್ಯ ಹೋರಾಟದಲ್ಲಿ ಮೃತಪಟ್ಟ. ಆತನ ಮಗ ಶ್ರೀ ಜಯಸಿಂಗದೇವ ಸಮಸ್ತಶಾಸ್ತ್ರ ಪಾರಾಯಣ ಅಶ್ವವಿದ್ಯವಿದತಶಾಳಿಹೋತ್ರಂ ಎಂದೆನಿಸಿದ್ದು ತನ್ನಯ್ಯಂಗೆ ಪರೋಕ್ಷವಿನಯವಾಗಿ ಅಗ್ರಹಾರ ಕುಪ್ಪಗುಡ್ಡೆಯಲ್ಲಿ ಆಲೇಶ್ವರ ದೇಗುಲ ಮಾಡಿಸಿದ. ಅಲ್ಲದೆ ದೇವರ ನೈವೇದ್ಯಕ್ಕೆ ದೀಪಕ್ಕೆ ಹಾಗೂ ಪೂಜೆಗೆಂದು ತೋಟ, ಗದ್ದೆ ದತ್ತಿ ಬಿಟ್ಟದ್ದನ್ನು ದಾಖಲಿಸಿದೆ. ಈ ಶಾಸನ ಬರೆದಾತ ಕವಿರಾಜವಲ್ಲಭ ಎನಿಸಿದ್ದ ಕಪ್ಪಣ್ಣಭಟ್ಟ ಹಾಗೂ ದೇಗುಲ ಮಾಡಿದ ಬಮ್ಮೋಜನೆಂಬ ವಿವರವಿದೆ.

ಇದುವರೆಗಿನ ಶಾಸನಗಳ ಅಧ್ಯಯನದಿಂದ ಬಹುತೇಕ ಮಾಟೂರು ಅರಸರ ಮಾಹಿತಿ ಸೊರಬ ತಾಲ್ಲೂಕಿನ ಸುತ್ತ ಮುತ್ತ ಹೆಣೆದುಕೊಂಡಿದೆ. ಇವರು ಹಾವೇರಿಯಲ್ಲಿ ಉದಯಿಸಿದರೂ ಮೇದಕ್ ಜಿಲ್ಲೆಯವರೆಗೆ ವಿಸ್ತರಿಸಿದ್ದರು. ಇವರ

ಚಟುವಟಿಕೆಯ ಕೇಂದ್ರ ಶಿವಮೊಗ್ಗ ಜಿಲ್ಲೆಯಾಗಿತ್ತೆಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ಹೀಗಾಗಿ ಮಾಟೂರು ವಂಶಸ್ಥರ ಬಗ್ಗೆ ಈ ಕೆಳಗಿನ ತೀರ್ಮಾನಕ್ಕೆ ಬರಲಾಗಿದೆ.

೧. ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಭೋಗಪತಿಯಾಗಿದ್ದ ಮಾಟೂರು ವಂಶಸ್ಥರು ಕ್ರಮೇಣ ಸಾಮಂತರ ಸ್ಥಾನಮಾನಗಳಿಸಿದರು.

೨. ಮೇಲಿನ ಅಧ್ಯಯನದಿಂದ ಮಾಟೂರು ವಂಶಸ್ಥರು ವಂಶಪಾರಂಪರ್ಯವಾಗಿ ಮುಂದುವರೆದಂತೆ ತೋರುವುದಿಲ್ಲ. ಮಾಚಿಅರಸ, ರೇವಣರಸ, ಸಿರಿಯಾಗಾರ, ಶಾಂತಿವರ್ಮ, ದೇವೂರ ಶಾಂತಯ್ಯ, ಆಲಯ್ಯ ಮೊದಲಾದವರ ಪರಸ್ಪರ ಸಂಬಂಧದ ಬಗ್ಗೆ ಶಾಸನಗಳು ಮೌನವಾಗಿವೆ. ದೇವೂರು ಪ್ರಸ್ತುತ ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಗ್ರಾಮ. ಹೀಗಾಗಿ ಶಾಂತಯ್ಯ ಎಂಬಾತ ದೇವೂರಿನಿಂದ ಬಂದು ನೆಲೆಸಿದವಾಗಿರಬೇಕು. ಹಾಗೆಯೇ ಮಾಟೂರು, ಮರತೂರು ಎಂಬ ಪದ ಸ್ಥಳ ಸೂಚಕವಾಗಿದ್ದು, ಅಲ್ಲಿ ನೆಲೆಸಿದ್ದ ಕುಟುಂಬಗಳನ್ನು ಉಲ್ಲೇಖಿಸುತ್ತದೆಂದು ಅರ್ಥೈಸಬಹುದು.

೩. ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಉಲ್ಲೇಖಿತ ವಂಶಸ್ಥರು ಶೈವಧರ್ಮದ ಪಂಥಗಳಿಗೆ ಹೆಚ್ಚು ಒತ್ತು ನೀಡಿದಂತಿದೆ. ಉದಾಹರಣೆಗೆ ವೃಷಭನಂದಿಗೊರವ, ಶಿರಣನಂದಿಗೊರವ ಹಾಗೂ ಬ್ರಹ್ಮಬೊಜೆಂಗ ಮತ್ತು ರುದ್ರಶಕ್ತಿಪಂಡಿತರ ಪ್ರಸ್ತಾಪ ಇದಕ್ಕೆ ಪುಷ್ಠಿ ನೀಡುತ್ತದೆ.

೪. ಇವರ ಆಳ್ವಿಕೆಯಲ್ಲಿ ಗೋಸಹಸ್ರದಾನ ನೀಡಿದ ದಾಖಲೆ ಹಾಗೂ ತುರುಗೋಳ್ ವೀರರ ವೀರಕಲ್ಲು ಶಾಸನಗಳ ವಿವರದಿಂದ ಗೋಸಂರಕ್ಷಣಾ ಕಾರ್ಯ ಭರದಿಂದ ಸಾಗಿತ್ತೆಂದು ವೇದ್ಯವಾಗುತ್ತದೆ.

೫. ರಣರಂಗದಲ್ಲಿ ಹೋರಾಡುವ ಪ್ರವೃತ್ತಿಯವರೆಂದು ಕುಪ್ಪಗುಡ್ಡೆ ಶಾಸನದಿಂದ ತಿಳಿಯಬಹುದು.

೬. ತ್ರಿಕುಂದಪುರವರೇಶ್ವರ ಎಂಬ ಬಿರುದು ಇವರು ಮೂರು ಬೆಟ್ಟಗಳಿಂದ ಆವೃತ್ತವಾದ ಪ್ರದೇಶಕ್ಕೆ ಒಡೆಯರಾಗಿದ್ದರೆಂದು ಸೂಚಿಸುತ್ತದೆ. ಎಡೆನಾಡು ಬನವಾಸಿ ೧೨,೦೦೦, ಸಾಂತಳಿಗೆ ೧,೦೦೦ ಹೆಳ್ದೆಸೆ, ಪುಲಿವಟ್ಟ, ತಂದವೂರ, ಗೆದೆಯ ವಿಶೇಷವಾಗಿ ಇವರ ಆಡಳಿತ ವ್ಯಾಪ್ತಿಗೊಳಪಟ್ಟ ಪ್ರದೇಶಗಳು.

೭ ಉಲ್ಲೇಖಿತ ಅರಸರ ಆಳ್ವಿಕೆಯಲ್ಲಿ ವಳಯ ಅಗ್ರಹಾರ, ವೇಳೆಯ ಅಗ್ರಹಾರ ಮತ್ತು ಕುಪ್ಪಗುಡ್ಡೆ ಅಗ್ರಹಾರಗಳು ಗಮನಾರ್ಹ. ಇವು ಬ್ರಾಹ್ಮಣೇತರರ ಅಗ್ರಹಾರಗಳು.

೮. ದೇವಾಲಯ ನಿರ್ಮಿಸಿದ್ದ ಶಿಲ್ಪಿ ದೇವೋಜ, ವೀರಗಲ್ಲು ಶಿಲ್ಪಿ ಕಟುಕೋಜ ಈ ವಂಶಸ್ಥರ ಗಮನ ಸೆಳೆದಿದ್ದಾರೆ.

೯. ಗೊರವರ ಹೊನ್ನಯ್ಯ, ಕುಪ್ಪಣ್ಣಗಾವುಂಡ, ಲೋಕಯ್ಯ, ಬಿಕ್ಕಯ್ಯ, ಹೊರವಣ್ಣಗಾವುಂಡ ಮುಂತಾದವರು ಗೋಸಂರಕ್ಷಣೆಗಾಗಿ ಮಾಡಿದ ತ್ಯಾಗ, ಬಲಿದಾನ ಮೆಚ್ಚುವಂತದ್ದು.

೧೦. ಗೋವ ಬನವಾಸಿಯ ಚಟ್ಟಯ್ಯನೊಂದಿಗೆ ಸೌಹಾರ್ದತೆ ಇವರ ರಾಜತಾಂತ್ರಿಕ ನೈಪುಣ್ಯಕ್ಕೆ ನಿದರ್ಶನ.

೧೧. ರಾವಿಪೊಳಲಿನ ಆಳ್ವಿಕೆಯಲ್ಲಿದ್ದಾಗ ವೇಲೂರ ಅಗ್ರಹಾರದ ಲೋಪದೋಷಗಳಿಗೆ ಪರಿಹಾರ ನೀಡಿದ್ದು, ಆಂಧ್ರಪ್ರದೇಶ ಮೇದಕ್ ಜಿಲ್ಲೆಯವರೆಗೆ ಇವರ ಪ್ರಭಾವ ವಿಸ್ತರಿಸಿದ್ದನ್ನು ಕಾಣಬಹುದು.

೧೨. ಕೊನೆಯದಾಗಿ ಭಾಷಾ ದೃಷ್ಟಿಯಿಂದ ಬಳಸಲ್ಪಟ್ಟಿರುವ 'ಬಳ್ದಿನ ಪೊನ್ನು' ಎಂಬ ಪದ ಸಂಶೋಧಕರಿಗೆ ಕುತೂಹಲ ಮೂಡಿಸಿದೆ. ಎಲ್ಲಕ್ಕೂ ಮಿಗಿಲಾಗಿ ಅಂದು ಕವಿರಾಜನೆಂದು ಗುರುತಿಸಲ್ಪಟ್ಟ ಕುಪ್ಪಣ್ಣಭಟ್ಟ ಕುಪ್ಪೆಗುಡ್ಡೆ ಶಾಸನ ರಚಿಸಿದಾತ ಎಂಬುದು ಈ ಅರಸು ಮನೆತನದ ಹೆಗ್ಗಳಿಕೆಗೆ ಮತ್ತೊಂದು ನಿದರ್ಶನ.

ಹೀಗೆ ಮಾಟೂರು, ಮರತೂರು, ಮಟ್ಟರ, ಮಂಟೂರು ಎಂಬ ಪದಗಳು ವಂಶವಾಹಿನಿಯಾಗಿ ಮೂಡಿಬಂದಿದ್ದಾಗ್ಯೂ ಅವು ಸ್ಥಳಸೂಚಕಗಳಾಗಿದ್ದು ಸ್ಥಳೀಯ ಕುಟುಂಬಗಳ ನೆಲೆಸುವಿಕೆ ಹಾಗೂ ಪ್ರಸರಿಸುವಿಕೆಗೆ ಕಾರಣವಾಗಿತ್ತೆಂದು ನಿರ್ಧರಿಸಿದರೆ ತಪ್ಪಾಗಲಾರದು.



## ಅಡಿಟಿಪ್ಪಣಿಗಳು

೧. ರಾಷ್ಟ್ರಕೂಟರ ಶಾಸನಗಳು ಸಂಪುಟ ೧, ಶಾಸನ ೨೩೦.

೨. ಅದೇ, ಸಂಪುಟ ೨, ಶಾಸನ ೨೭೦.

೩. ಅದೇ, ಶಾಸನ ೨೭೬.

೪. ಅದೇ, ಶಾಸನ ೩೫೨.

೫. ಅದೇ, ಶಾಸನ ೩೧೧.

೬. ಅದೇ, ಶಾಸನ ೫೦೫.

೭. ಅದೇ, ಅನುಬಂಧ ೧, ಶಾಸನ ೦೯, "ಎಪಿಗ್ರಾಫಿಯ ಕರ್ನಾಟಕ ಸಂಪುಟ ೨, ಶಾಸನ ೬೪.

೮. ಕಲ್ಯಾಣ ಚಾಲುಕ್ಯರ ಶಾಸನಗಳು, ಸಂಪುಟ ೧, ಶಾಸನ–೬.

೯. ಅದೇ, ಶಾಸನ ೨೬.

೧೦. ಅದೇ, ಶಾಸನ ೧೧.

೧೧. ಅದೇ, ಶಾಸನ ೭೫.

೧೨. ಅದೇ, ಶಾಸನ ೭೪.

೧೩. ಅದೇ, ಶಾಸನ ೭೬.

೧೪. ಅದೇ, ಶಾಸನ ೭೭.

೧೫. ಅದೇ, ಶಾಸನ ೧೦೭.

೧೬. ಅದೇ, ಶಾಸನ ೧೧೪.

೧೭. ಅದೇ, ಶಾಸನ ೮೭.

# ಐತಿಹಾಸಿಕ ಮಹಿಳೆ 'ವಿಜಯಕುಮಾರಿ'

**ವಿ. ಸಂಧ್ಯಾ***

**ಸಾ**ಧಾರಣವಾಗಿ ಇತಿಹಾಸದಲ್ಲಿ ರಾಜಮಹಾರಾಜರ, ಪ್ರಬಲ ಅಧಿಕಾರಿ ವರ್ಗದವರ, ದಾನಕೊಟ್ಟವರ ಚರಿತ್ರೆಗಳು ದಾಖಲಾಗಿರುತ್ತದೆ. ಇಂಥವರ ವಿಚಾರಗಳು ಶಾಸನ, ಕಾವ್ಯ ಮೊದಲಾದ ಆಕರಗಳಲ್ಲಿ ಕೆಲವೊಮ್ಮೆ ಉತ್ಪ್ರೇಕ್ಷೆಯೆನಿಸುವಷ್ಟು ಬಣ್ಣನೆಗಳಿಂದ ಕೂಡಿರುತ್ತವೆ. ಅನೇಕ ಆಸ್ಥಾನ ಕವಿಗಳು ತಮ್ಮ ಆಶ್ರಯದಾತರನ್ನು ಕಾವ್ಯನಾಯಕರನ್ನಾಗಿಸಿ ಅಥವಾ ನಾಯಕನಿಗೆ ಸಮೀಕರಿಸಿ ಗ್ರಂಥ ರಚಿಸಿದ್ದಾರೆ. ಕನ್ನಡದಲ್ಲಿ ರಚಿತವಾಗಿರುವ ಬಹುಪಾಲು ಕಾವ್ಯಗಳೆಲ್ಲ ಪುರುಷಪ್ರಧಾನ ಕಾವ್ಯವೇ ಆಗಿದೆ. ಆದರೆ, ಹದಿನಾರನೆಯ ಶತಮಾನದಲ್ಲಿ ರಚಿತವಾಗಿರುವ 'ವಿಜಯಕುಮಾರಿ ಚರಿತೆ'[೧] ಎಂಬ ಕಾವ್ಯವು ಯಾವುದೇ ಪುರಾಣದ ವಸ್ತುವಾಗಿರದೆ, ಐತಿಹಾಸಿಕ ಅಂಶಗಳಿಂದ ಕೂಡಿದೆ, ಅಲ್ಲದೆ ಇದೊಂದು ಅರಸ ಅಥವಾ ಯಾವುದೇ ಪುರುಷನ ಕುರಿತಾದ ಕಾವ್ಯವಾಗಿರದೆ, ಸಾಮಾನ್ಯ ಮಹಿಳೆಯೊಬ್ಬಳನ್ನು ನಾಯಕಿಯನ್ನಾಗಿಸಿ ರಚಿಸಿರುವ ಕಾವ್ಯವಾಗಿ, ವಿಶೇಷ ಗಮನ ಸೆಳೆಯುತ್ತದೆ.

ವಿಜಯಕುಮಾರಿ ಚರಿತೆಯು ಕ್ರಿ.ಶ. ೧೫೬೮ರಲ್ಲಿ ಕವಿ ಶ್ರುತಕೀರ್ತಿಯಿಂದ ರಚಿತವಾಗಿರುವ ಕಾವ್ಯವಾಗಿದೆ. ಕವಿಯು ತಾನು ಕೃತಿ ರಚನೆಗೆ ತೊಡಗಿದ ಕಾಲ ಹಾಗೂ ಕೃತಿ ಸಂಪೂರ್ಣಗೊಂಡ ಕಾಲ ಎರಡನ್ನೂ ಸ್ಪಷ್ಟವಾಗಿ ತಿಳಿಸಿದ್ದಾನೆ. ಇದು ಹದಿನಾರನೆಯ ಶತಮಾನದಲ್ಲಿ ರಚಿತವಾದ ಕಾವ್ಯವಾಗಿದ್ದರೂ, ಹನ್ನೆರಡನೆಯ ಶತಮಾನದ ವಸ್ತುವನ್ನೊಳಗೊಂಡಿದೆ. ಹಲವಾರು ಐತಿಹಾಸಿಕ ಅಂಶಗಳನ್ನು ಒಳಗೊಂಡ ಈ ಕೃತಿಯು ಸ್ವತಂತ್ರ ರಚನೆಯಂತೆ ತೋರಿದರೂ ಇದಕ್ಕೆ ಮೂಲ ಪ್ರೇರಣೆಯಾದ ಕೃತಿಯೊಂದಿದೆ, ಅದನ್ನು ಕವಿಯು ಈ ರೀತಿ ಹೇಳಿದ್ದಾನೆ:

**ಉತ್ತರದೇಶದೊಳಾರ್ಯಭಾಷೆಯೊಳು ಚೆಲವೆತ್ತಿರಲೀ ಸತ್ಕಥೆಯನು**
**ವಿಸ್ತರಿಸುವುದು ಕನ್ನಡದೊಳಗೆಂದು ಜೈನೋತ್ತಮರೆಲ್ಲ ಪ್ರಾರ್ಥಿಸಲು ॥ (೧-೨೬)**

ಹೀಗೆ ಆರ್ಯಭಾಷೆಯಲ್ಲಿ ಉತ್ತರದೇಶದ ಕೃತಿಯೊಂದನ್ನು ಕನ್ನಡದಲ್ಲಿ ವಿಸ್ತರಿಸಿ ರಚಿಸೆಂದು ಜೈನೋತ್ತಮರೆಲ್ಲ ಕೇಳಿಕೊಂಡ ಮೇರೆಗೆ ತಾನು ಈ ಕೃತಿಯನ್ನು ಬರೆದುದಾಗಿ ಹೇಳಿಕೊಂಡಿದ್ದಾನೆ. ಆದರೆ, ಶ್ರುತಕೀರ್ತಿ ಹೇಳಿರುವ ಆ ಆರ್ಯಭಾಷೆಯ ಕೃತಿ ಯಾವುದೆಂದು ತಿಳಿದುಬಂದಿಲ್ಲ. ಇದು ಮರಾಠಿ ಭಾಷೆಯ ಕೃತಿ ಇದ್ದಿರಬಹುದು. ಆದರೆ ಈ ಕೃತಿಯ ಘಟನೆಗಳೆಲ್ಲ ನಡೆದಿರುವುದು ಹೊಯ್ಸಳದೇಶದಲ್ಲಿ. ದೋರಸಮುದ್ರ ನಗರ, ಬೀದಿ, ಅಂಗಡಿ, ಜಿನಾಲಯಗಳ ವರ್ಣನೆ ಈ ಕೃತಿಯಲ್ಲಿದೆ. ಜನಜನಿತವಾದ ಕನ್ನಡದ ಕತೆಯೊಂದು ಉತ್ತರದೇಶದಲ್ಲಿ ಹಬ್ಬಿ ಅಲ್ಲಿನ ಭಾಷೆಯಲ್ಲಿ ರಚಿತವಾಗಿ ಪುನಃ ಕನ್ನಡಕ್ಕೆ ಬಂದಿದೆ ಎಂದು ತೋರುತ್ತದೆ.

ಕವಿ ತನ್ನ ಕಾವ್ಯ ರಚನೆಯ ಉದ್ದೇಶವನ್ನು ಹೀಗೆ ತಿಳಿಸಿದ್ದಾನೆ.[೨]

**ಜಾರ ಚೋರರ ಮೇಲೆ ವಾಕ್ಚಾತುರ್ಯಕೆ । ಸೇರಿಸಿತಿಲ್ಲ ಕಾವ್ಯಗಳ**
**ಸಾರವನರಿದು ಪೇಳಿದುದಿಲ್ಲ ಪರಿಣಾಮ । ಕಾರಣವಾಗಿ ಪೇಳಿದೆನು ॥**

**ಇಲಿಯ ಭೀತಿಗೆ ಮನೆ ಮಾಡರೆ ನೊಣಕಾಗಿ । ಸಲೆಯಮೃತಾನ್ನವನುಣರೆ**
**ಖಲಜನ ಭಯಕಂಜಿ ಕೃತಿವೇಳದಿರ್ಪರೆ । ನೆಲದೊಳು ಸುಜನರಾದವರು ॥ ೧-೪೧ ॥**

ಈ ಪದ್ಯದಲ್ಲಿ ದುರ್ಜನರಿಗೆ ಹೆದರಿ ಕೃತಿಯನ್ನು ಹೇಳದೆ ಇರುವರೆ ಎಂಬ ಕವಿಯ ಸಾಲು, ಈ ಕತೆಯನ್ನು ಕುರಿತು ರಚಿಸುವುದಕ್ಕೆ ವಿರೋಧ ಇದ್ದಿರಬಹುದೆ ಎಂಬ ಸಂದೇಹ ಮೂಡುತ್ತದೆ. ಮೂಲತಃ ಇದೊಂದು ಜೈನ-ವೀರಶೈವ ಸಂಘರ್ಷದ ಹಿನ್ನೆಲೆಯಲ್ಲಿ ರಚಿತವಾದ ಕಾವ್ಯವಾಗಿದೆ. ಹನ್ನೆರಡನೆಯ ಶತಮಾನದ ಇತಿಹಾಸವನ್ನು ಅವಲೋಕಿಸಿದಾಗ ಅಲ್ಲಿ ವಚನ ಚಳುವಳಿಯ ಕ್ರಾಂತಿ, ಏಕಾಂತ ರಾಮಯ್ಯ, ಆದಯ್ಯ ಮೊದಲಾದ ಪ್ರಕರಣಗಳಲ್ಲಿ ಜೈನ-ವೀರಶೈವ ಮತದ

* # ೧೫೩, ೫ನೆಯ ಅಡ್ಡರಸ್ತೆ, ಮೊದಲನೆಯ ಹಂತ, ಆರ್.ಕೆ. ಬಡಾವಣೆ, ಪದ್ಮನಾಭನಗರ, ಬೆಂಗಳೂರು-೭೦, ಮೊ. ೯೯೮೬೧೬೪೮೯೦

ನಡುವೆ ಘರ್ಷಣೆ ಇದ್ದದ್ದು ಸ್ಪಷ್ಟವಾಗುತ್ತದೆ. ಈ ಕಥಾವಸ್ತುವು ಕೂಡ ಹನ್ನೆರಡನೆಯ ಶತಮಾನದಲ್ಲಿ ನಡೆದ ಅಂತದ್ದೇ ಒಂದು ಪ್ರಕರಣವಾಗಿದೆ. ಇಂತಹ ಗಂಭೀರ ಪರಿಸ್ಥಿತಿಯಲ್ಲಿ, ಕವಿಗೆ ಹದಿನಾರನೆಯ ಶತಮಾನದಲ್ಲಿ ಈ ವಸ್ತುವನ್ನು ಆರಿಸಿಕೊಂಡು ಕೃತಿ ರಚಿಸುವುದಕ್ಕೂ ವಿರೋಧ ಇತ್ತೆನ್ನುವ ಮಾತು ಉತ್ಪ್ರೇಕ್ಷೆ ಇದ್ದಿರಲಾರದು.

ಈ ಕೃತಿಯನ್ನು ರಚಿಸಿರುವ ಶ್ರುತಕೀರ್ತಿಯು ಜೈನ ಧರ್ಮೀಯನಾಗಿದ್ದು, ಹಲವೆಡೆಗಳಲ್ಲಿ ಸ್ವಧರ್ಮ ಪಕ್ಷಪಾತ ಹಾಗೂ ಪೂರ್ವಾಗ್ರಹ ಪೀಡಿತನಾಗಿರುವುದು ತೋರುತ್ತದೆ. ಕಾವ್ಯದ ಅರ್ಧಭಾಗ ವಿಜಯಕುಮಾರಿಯ ಕತೆಯಾದರೆ ಉಳಿದ ಅರ್ಧಭಾಗ ಬಸವಣ್ಣನವರ ಕತೆಯೇ ತುಂಬಿದೆ. ಈ ಭಾಗದಲ್ಲಿ ಕವಿಯ ಸ್ವಧರ್ಮ ಗುಣಮಂಡನೆ, ಅನ್ಯ ಧರ್ಮ ಖಂಡನೆಯ ಸ್ವರೂಪ ಸ್ಪಷ್ಟವಾಗಿ ವ್ಯಕ್ತವಾಗಿದೆ.

**ವಿಜಯಕುಮಾರಿಯ ಚರಿತೆ**

ಆದಿಜಿನ, ಸಿದ್ಧರು, ಸಾಧು, ವಾಗ್ದೇವಿ, ಗಣಧರ, ತನ್ನ ಗುರುಪರಂಪರೆಗೆ ವಂದಿಸಿ ಕವಿಯು ವಿಜಯಕುಮಾರಿಯ ಕಥೆಯನ್ನು ಆರಂಭಿಸಿದ್ದಾನೆ. ಸ್ವರ್ಗ ನಾಗಲೋಕಗಳ ಮಧ್ಯೆ ಇರುವ ನರಲೋಕದಲ್ಲಿನ ಆರ್ಯಾಖಂಡದ ಐವತ್ತಾರು ದೇಶಗಳಲ್ಲಿ ಒಂದಾದ ಹೊಯ್ಸಳದೇಶದಲ್ಲಿ ಈ ಕಥಾನಕವು ನಡೆಯುತ್ತದೆ. ಸವಿಸ್ತಾರವಾದ ವರ್ಣನೆಯೊಂದಿಗೆ ಕವಿ ದ್ವಾರಸಮುದ್ರ ನಾಡಿನ ವರ್ಣನೆ ಮಾಡಿದ್ದಾನೆ. ಆ ಊರಿನಲ್ಲಿ ಪಾಯಿಸೆಟ್ಟಿ ಹಾಗು ಪದ್ಮಾವತಿ ದೇವಿಯರಿಗೆ ಜನಿಸಿದ ಹೆಣ್ಣುಮಗುವಿಗೆ ವಿಜಯ ಪಾರ್ಶ್ವನಾಥನ ಹೆಸರಿರಲೆಂದು ವಿಜಯಕುಮಾರಿ ಎಂದು ಹೆಸರಿಡುತ್ತಾರೆ. ಈ ಶ್ರಾವಕ ದಂಪತಿಗಳು ತಮ್ಮ ಶಕ್ತ್ಯಾನುಸಾರ ಜಿನಮುನಿಗಳ ಪೂಜೆ, ದಾನಾದಿಗಳನ್ನು ಮಾಡುತ್ತಾ, ಮಗಳಿಗೆ ಉತ್ತಮ ವಿದ್ಯಾಭ್ಯಾಸ ಕೊಡಿಸುತ್ತಾರೆ. ವ್ಯಾಕರಣ, ಅಲಂಕಾರ ಮೊದಲಾದ ಶಾಸ್ತ್ರ ವಿದ್ಯೆಗಳನ್ನು ವಿಜಯಕುಮಾರಿಯು ಶ್ರುತಸಾಗರ ಮುನಿಗಳಿಂದ ಕಲಿಯುತ್ತಾಳೆ. ಯೌವನಾವಸ್ಥೆಗೆ ಕಾಲಿಟ್ಟ ವಿಜಯಮ್ಮಿಗೆ ಗುರುಗಳು ಇನ್ನುಮುಂದೆ ಗುರುಕುಲಕ್ಕೆ ಬರುವುದು ಬೇಡವೆಂದು ತಿಳಿಯ ಹೇಳುತ್ತಾರೆ. ಇದರಿಂದಾಗ ದುಃಖಿತಳ ಮಗಳಿಗೆ ಪಾಯಿಸೆಟ್ಟಿಯು ಮನೆಯ ಆವರಣದಲ್ಲಿಯೇ ಮಂಟಪವನ್ನು ನಿರ್ಮಾಣ ಮಾಡಿಸಿಕೊಟ್ಟು, ಮನೆಯಲ್ಲಿಯೇ ಅಧ್ಯಯನ ಮುಂದುವರೆಯುವಂತೆ ನೋಡಿಕೊಳ್ಳುತ್ತಾನೆ. ಹೀಗೆ ಬೆಳೆದು ನಿಂತ ತಂಗಿಯ ಮಗಳು ವಿಜಯಕುಮಾರಿಯನ್ನು ಅವಳ ಸೋದರಮಾವ ಮಹದೇವಸೆಟ್ಟಿಯು ತನ್ನ ಮಗನಿಗೆ ಮದುವೆ ಮಾಡಿಕೊಡೆಂದು ತಂಗಿಯಲ್ಲಿ ಕೇಳುತ್ತಾನೆ. ವೀರಶೈವ ಧರ್ಮೀಯನಾದ ಸೋದರಮಾವನ ಮಗನನ್ನು ಮದುವೆಯಾಗಲು ಜೈನಧರ್ಮದಲ್ಲಿ ನಿಷ್ಠೆ ಹೊಂದಿದ್ದ ವಿಜಯಕುಮಾರಿಯು ನಿರಾಕರಿಸುತ್ತಾಳೆ.

ವಿಜಯಕುಮಾರಿ ಹಾಗೂ ಅವಳ ಸೋದರಮಾವನ ನಡುವೆ ಧರ್ಮದ ಕುರಿತಾಗಿ ವಾಗ್ವಾದದಲ್ಲಿ ಹಾಗೂ ವಿಜಯಕುಮಾರಿ ತನ್ನ ತಾಯಿಗೆ ತಿಳಿಸಿ ಹೇಳುವ ಕೆಲವು ವಿಚಾರಗಳಲ್ಲಿ, ಹಲವು ವೀರಶೈವರ, ವಚನಕಾರರ ಕತೆಗಳೊಂದಿಗೆ ಬಸವಣ್ಣನ ಕತೆಯೂ ಸವಿಸ್ತಾರವಾಗಿ ಮೂಡಿಬಂದಿದೆ. ಇಲ್ಲಿ ಬಸವಣ್ಣನಿಗೆ ಆಶ್ರಯ ನೀಡುವ ಬಿಜ್ಜಳನನ್ನು ಜೈನನೆಂದೂ, ಆತನಿಗೆ ತನ್ನ ಸಹೋದರಿಯನ್ನು ಮದುವೆ ಮಾಡಿ ಕೊಡುವ ಮೂಲಕ ಸಂಬಂಧ ಬೆಳೆಸಿದ ಬಸವಣ್ಣನನ್ನು ರಾಜ್ಯ ಬೊಕ್ಕಸವನ್ನೂ, ಅಧಿಕಾರವನ್ನೂ ದುರುಪಯೋಗ ಪಡಿಸಿಕೊಂಡವನೆಂದು ಚಿತ್ರಿಸಲಾಗಿದೆ. ಅಷ್ಟೇ ಅಲ್ಲದೆ, ಬಿಜ್ಜಳನ ಕೊಲೆಗೆ ಕಾರಣನಾಗುವ ಬಸವಣ್ಣನಿಗೆ, ಬಿಜ್ಜಳನ ಮಗ ತಿರುಗಿ ಬೀಳುತ್ತಾನೆ.

ಇಂತಹ ಅನೇಕ ಅಭಿಪ್ರಾಯ ಹೊಂದಿದ್ದ ವಿಜಯಕುಮಾರಿಯು ವೀರಶೈವ ಧರ್ಮವನ್ನು ವಿರೋಧಿಸಲು, ಇದನ್ನು ಹಠವಾಗಿ ಸ್ವೀಕರಿಸಿದ ಅವಳ ಸೋದರ ಮಾವ ಅವಳನ್ನು ಮದುವೆಗೆ ಬಹಳವಾಗಿ ಒತ್ತಾಯಿಸುತ್ತಾನೆ. ಕಡೆಗೆ ವಿಜಯಕುಮಾರಿಯು ಜಿನೇಂದ್ರಸಾಕ್ಷಿಯಲ್ಲಿ ಬ್ರಹ್ಮಚರ್ಯವ್ರತ ಸ್ವೀಕರಿಸಿದೆನೆಂದು ಘೋಷಿಸಿ ಚೈತ್ಯಾಲಯಕ್ಕೆ ತೆರಳಿ ಜಿನದೀಕ್ಷೆಯನ್ನು ಪಡೆಯುತ್ತಾಳೆ. ಇವಳ ಹಟಕ್ಕೆ ಮಣಿದ ತಂದೆತಾಯಿಗಳು ಜಿನಾಲಯಕ್ಕೆ ಬಂದು ಸ್ನಾನವಮಾಡಿಸಿ ಗಂಧೋದಕ ತಳೆಯುತ್ತಾರೆ. ದೀಕ್ಷಾಗ್ರಂಥಗಳನ್ನು ಓದುವ ಮುಮುಕ್ಷುಗಳು ಆಕೆಗೆ ದೀಕ್ಷೆ ನೀಡಿ 'ಶ್ರೀಮತಿ' ಯೆಂದು ಹೆಸರಿಡುತ್ತಾರೆ. ವಿಜಯಕುಮಾರಿ ಶ್ರೀಮತಿಯಾಗಿ ಭೂಮಿಯಲ್ಲಿ ಸಂಚರಿಸಿ ಪಾತಕಗಳನ್ನು ಪರಿಹರಿಸಿ ಸಲ್ಲೇಖನ ವಿಧಿಗಳನ್ನು ತಳೆಯುತ್ತಾಳೆ. ಇದನ್ನು ಕವಿ ಈ ರೀತಿ ತಿಳಿಸಿದ್ದಾನೆ:

**ಭೂತಳದೊಳು ಚರಿಯಿಸಿ ಭವ್ಯಜನಗಳ । ಪಾತಕವನು ಪರಿಹರಿಸಿ**
**ಘಾತಿಸಿಯಶುಭಕರ್ಮಂಗಳ ತಳೆದಳು ಪ್ರ । ಖ್ಯಾತೆ ಸಲ್ಲೇಖನ ವಿಧಿಯ ॥ ೧೨೬೪ ॥**

ಈ ಪ್ರಕಾರವಾದವ ಕಥಾಹಂದರವನ್ನು ಹೊಂದಿರುವ ವಿಜಯಕುಮಾರಿ ಚರಿತೆಯು, ವಸ್ತುವಿನ ದೃಷ್ಟಿಯಿಂದ ಸಾಹಿತ್ಯಕ್ಕೆ ಹೊಸ ಆಯಾಮ ನೀಡಿದ ಕೃತಿಯಾಗಿದೆ ಎನಿಸಿದರೂ, ಈವರೆಗೂ ಇಲ್ಲದ ಹೊಸ ಕಾವ್ಯವಸ್ತು

ಅಚ್ಚರಿಯನ್ನುಂಟುಮಾಡುತ್ತದೆ. ಕತೆಯು ಮಹಿಳಾ ಪ್ರಧಾನವಾಗಿರುವುದಷ್ಟೇ ಅಲ್ಲದೆ, ಯಾವುದೇ ಪೌರಾಣಿಕ, ಆಗಮ ಗ್ರಂಥದ ಇಲ್ಲವೆ ಕಥೆಯ ಭಾಗವಲ್ಲ. ಜೈನ ಕಾವ್ಯಗಳಲ್ಲಿ ಚಂದನಾಂಬಿಕೆಯ ಕಥೆ, ಚೇಳಿನಿಯ ಕತೆ ಮೊದಲಾದವುಗಳು ರಚಿತವಾಗಿವೆಯಾದರೂ ಇವೆಲ್ಲಾ ಜೈನ ಆಗಮ ಅಥವಾ ಪುರಾಣಗಳ ಕಥೆಯ ಭಾಗವಾಗಿದೆ. ಇದನ್ನು ಹೊರತು ಪಡಿಸಿ, ಪುರಾಣೇತರ ಪ್ರಕರಣಗಳಲ್ಲಿ ಬರುವ ಮಹಿಳೆಯರ ವಿಚಾರಗಳೆಂದರೆ ದಾನ ಅಥವಾ ಧಾರ್ಮಿಕ ಕಾರ್ಯಗಳಲ್ಲಿ ಹೆಸರು ಮಾಡಿರುವ ಅತ್ತಿಮಬ್ಬೆಯಂತಹ ಮಹಿಳೆಯ ವಿಚಾರವಾಗಿರುತ್ತದೆ. ಆದರೆ ಇಲ್ಲಿ ವಿಜಯಕುಮಾರಿಯು ಸಾಧಾರಣ ವ್ಯಾಪಾರಿಯೊಬ್ಬನ ಮಗಳು. ಅಂತಸ್ತು ಅಧಿಕಾರ ಯಾವುದೂ ಇಲ್ಲದ ಮನೆತನ. ಜೊತೆಗೆ, ಯಾವುದೇ ಆಸ್ಥಾನದ ಕವಿ ಅಲ್ಲದ, ಜೈನಯತಿ ಶ್ರುತಕೀರ್ತಿಯಿಂದ ರಚಿತವಾಗಿರುವ ಕೃತಿ. ಈತ ಮೊದಲು ಗೃಹಸ್ಥನಾಗಿದ್ದು ಆ ಬಳಿಕ ಸನ್ಯಾಸ ಸ್ವೀಕರಿಸಿರುವ ವಿಚಾರ ಹಾಗೂ ಈತನ ಗುರುಪರಂಪರೆಯನ್ನು ಕುರಿತಂತೆ ವಿದ್ವಾಂಸರು ಚರ್ಚಿಸಿದ್ದಾರೆ೨ ಇಂತಹ ಕವಿ ತನ್ನ ಪರಿಸರದಲ್ಲಿ ಪ್ರಚಲಿತವಿದ್ದ ತೀರ್ಥಂಕರರ ಚರಿತ್ರೆಯನ್ನು ಕೈಬಿಟ್ಟು ವಿಜಯಕುಮಾರಿಯನ್ನು ಕಥಾನಾಯಕಿಯನ್ನಾಗಿ ಮಾಡಿರುವುದು ಆಶ್ಚರ್ಯವೆನಿಸುತ್ತದೆ. ಬಹುಶಃ ಅಂದಿನ ತಮ್ಮ ಸಮುದಾಯದಲ್ಲಿ ಪ್ರಚಲಿತವಿದ್ದ ಕತೆಯೊಂದು ಇದಾಗಿರುವ ಸಾಧ್ಯತೆ ಇದೆ.

**ಐತಿಹಾಸಿಕ ವಿಚಾರಗಳು**

ಕಾವ್ಯದಲ್ಲಿ ಹಲವಾರು ಐತಿಹಾಸಿಕ ವಿಚಾರಗಳು ತಿಳಿದುಬರುತ್ತದೆ. ಮೊಟ್ಟಮೊದಲನೆಯದಾಗಿ ಈ ಕಥೆಯ ನಾಯಕಿ ವಿಜಯಕುಮಾರಿಯು ಬಸವಣ್ಣನ ಕಾಲದವಳು ಎಂದು ಕಾವ್ಯವು ಹೇಳುತ್ತದೆ. ಬಸವಣ್ಣನ ಕಿರಿಯ ಸಮಕಾಲೀನಳು ಎನ್ನಬಹುದು. ಸಾಧಾರಣವಾಗಿ ಜೈನ ಕಾವ್ಯಗಳೆಲ್ಲಾ ಉತ್ತರಭಾರತದ ಸ್ಥಳಗಳನ್ನು ಉಲ್ಲೇಖಿಸುತ್ತದೆ. ಉದಾಹರಣೆಗೆ ಪಾಟಲೀಪುತ್ರ, ಕೌಶಂಬಿ ಎಂಬ ಪೊಳಲ್.. ಮೊದಲಾದವುಗಳನ್ನು ಕಾಣಬಹುದು. ಆದರೆ ವಿಜಯಕುಮಾರಿಯ ತಂದೆ–ತಾಯಿ ಇದ್ದದ್ದು ಹೊಯ್ಸಳನಾಡಿನ ರಾಜಧಾನಿಯಾಗಿದ್ದ ದ್ವಾರಸಮುದ್ರದಲ್ಲಿ. ಇವಳ ಸೋದರಮಾವ ಮಹದೇವ ಸೆಟ್ಟಿ ಇದ್ದದ್ದು ಶಿವನಸಮುದ್ರದಲ್ಲಿ. ಕವಿಯು ಇಲ್ಲಿನ ವಿಜಯಪಾರ್ಶ್ವ ಜಿನಾಲಯದ ವರ್ಣನೆ ನೀಡಿದ್ದಾನೆ. ಜೊತೆಗೆ ಇದನ್ನು ಹೊಯ್ಸಳ ಮಂತ್ರಿ ಬೊಪ್ಪ ನಿರ್ಮಾಣ ಮಾಡಿದನೆಂಬ ವಿಚಾರ ಕಾವ್ಯದಲ್ಲಿದೆ. ಇದಕ್ಕೆ ಶಾಸನ ಆಧಾರವೂ ದೊರಕುತ್ತದೆ. ಗಂಗರಾಜನ ಮಗ ಬೊಪ್ಪ ದಂಡೇಶ ತಂದೆಯ ಪರೋಕ್ಷ ವಿನಯವಾಗಿ ಬೇಲೂರಿನಲ್ಲಿ ವಿಜಯಪಾರ್ಶ್ವನಾಥನ ಬಸದಿಯನ್ನು ಕಟ್ಟಿಸಿದ್ದಾನೆ ಎನ್ನುವುದನ್ನು ಶಾಸನವು ಸವಿಸ್ತಾರವಾಗಿ ಬಣ್ಣಿಸುತ್ತದೆ[೩].

ವಿಜಯಕುಮಾರಿಗೆ ಐದು ವರ್ಷವಾದಾಗ ತಂದೆ ಪಾಯಣಸೆಟ್ಟಿಯು ಅವಳಿಗೆ ವಿದ್ಯಾಭ್ಯಾಸಕ್ಕೆ ಏರ್ಪಾಟು ಮಾಡುತ್ತಾನೆ. ಇವಳು ತನ್ನ ಗುರುಗಳಾದ ಶ್ರುತಕೀರ್ತಿಯಿಂದ ವ್ಯಾಕರಣ ಅಭಿಧಾನ, ಕಾವ್ಯ, ಅಲಂಕಾರ ಮೊದಲಾದ ಶಾಸ್ತ್ರಗಳನ್ನು ಕಲಿತಳು ಎಂದು ಕವಿ ತಿಳಿಸಿದ್ದಾನೆ. ವಿಜಯಕುಮಾರಿಯು ವಿದ್ಯೆ ಕಲಿಯಲು ಗುರುಕುಲಕ್ಕೆ ಹೋಗುತ್ತಿದ್ದಳು, ಯೌವನಾವಸ್ಥೆಗೆ ಬಂದಾಗ ಅವಳ ಗುರು ಅವಳನ್ನು ಕುರಿತು “ಮಾವಿನ ಪೂ ಮಂಜಿಗೆ ಕೆಡುವಂದದಿ ಭಾವಕಿಯರ ನೋಟವಿಷಕೆ ತೀವಿದ ವ್ರತ ಕೆಡುವುದು ಯತಿಜನ್ಮಕಮ್ಮ ಕೋವಿದೆ ನೀ ಬರಬೇಡ ...... ಏಕಾಂತವಾಸದೊಳಗೆ ನಾವಿದ್ದಾಗ ಏಕಾಕಿಯಾಗಿ ನೀ ಬರಲು ಆ ಕಾಲದೊಳಗೆ ಮಾತಾಡಿಸಬಾರದಾ ಲೋಕಿಸಬಾರದು ಮಗಳೆ...” ಎಂದು ಹಿತನುಡಿ ನುಡಿದು ಇನ್ನು ಮುಂದೆ ನೀನು ಗುರುಕುಲಕ್ಕೆ ಬರುವುದು ಬೇಡ ಎನ್ನುತ್ತಾರೆ.

ಶ್ರುತಕೀರ್ತಿ ಎಂಬ ಗುರುಗಳು ದ್ವಾರಸಮುದ್ರದಲ್ಲಿ ಗುರುಕುಲ ನಿರ್ಮಿಸಿ ವಿದ್ಯಾಭ್ಯಾಸ ನಡೆಸುತ್ತಿದ್ದರೆನ್ನುವುದು ಈ ಕಾವ್ಯದಿಂದ ತಿಳಿದು ಬರುತ್ತದೆ. ಜೊತೆಗೆ ಕ್ರಿ.ಶ ೧೧೬೩ರ ಶ್ರವಣಬೆಳಗೊಳದ ಶಾಸನವೊಂದು[೪] ಶ್ರುತಕೀರ್ತಿಯನ್ನು ಉಲ್ಲೇಖಿಸುತ್ತದೆ. ಈ ಶಾಸನದಲ್ಲಿ ಹಲವು ಹೊಯ್ಸಳ ಅಧಿಕಾರಿಗಳು ಸೇರಿ ತಮ್ಮ ಗುರು ದೇವಕೀರ್ತಿ ಪಂಡಿತರಿಗೆ ಪರೋಕ್ಷ ವಿನಯವಾಗಿ ದಾನ ನೀಡಿದ್ದಾರೆ. ಈ ಶಾಸನವು ದೇವಕೀರ್ತಿ ಪಂಡಿತರ ಸಮಕಾಲೀನರಾಗಿದ್ದ ಶ್ರುತಕೀರ್ತಿಯನ್ನೂ ಹೆಸರಿಸುತ್ತದೆ. ಶ್ರುತಕೀರ್ತಿಯು ಹಿಂದಿನಿಂದಲೂ ಮುಂದಿನಿಂದಲೂ ಓದಬಹುದಾಗಿದ್ದ ‘ರಾಘವ ಪಾಂಡವೀಯಂ’ ಎಂಬ ಅದ್ಭುತ ಕಾವ್ಯವನ್ನು ರಚಿಸಿದ್ದರೆಂದು ಈ ಶಾಸನದಿಂದ ತಿಳಿದುಬರುತ್ತದೆ. ಹೊಯ್ಸಳ ಆಳ್ವಿಕೆಯಲ್ಲಿನ ಭಾರತಿಮಯ್ಯ ದಂಡನಾಯಕ, ಬೂಚಿಮಯ್ಯ, ಹೆಗ್ಗಡೆ ಕೋರಯ್ಯ ಮೊದಲಾದ ಹಲವು ಪ್ರಸಿದ್ಧ ಅಧಿಕಾರಿಗಳು ಕಲಿತ ಗುರುಕುಲದಲ್ಲಿನ ಗುರು ದೇವಕೀರ್ತಿ ಪಂಡಿತರೊಂದಿಗೆ ಇದ್ದ ಮತ್ತೊಬ್ಬ ಗುರು ಶ್ರುತಕೀರ್ತಿ ಎನ್ನುವುದು ಈ ಶಾಸನದಿಂದ ತಿಳಿದು ಬರುತ್ತದೆ. ಕಾಲ ಹೊಂದಿಕೆಯಾಗುವುದರೊಂದಿಗೆ, ಈತನೂ ಗುರುವಾಗಿದ್ದನೆನ್ನುವುದು ತಿಳಿದುಬರುವುದರಿಂದ, ಶಾಸನ ಉಲ್ಲೇಖಿಸುವ ಶ್ರುತಕೀರ್ತಿ ಹಾಗೂ ವಿಜಯಕುಮಾರಿಯ ಗುರು ಶ್ರುತಕೀರ್ತಿ ಒಬ್ಬನೇ ವ್ಯಕ್ತಿಯಾಗಿರುವ ಸಾಧ್ಯತೆ ಇದೆ.

ಧರಣಿಪಂಡಿತ ರಚಿಸಿರುವ ಬಿಜ್ಜಳರಾಯಚರಿತ್ರೆಯ ಅಂತ್ಯದಲ್ಲಿ:

**ಇನ್ನು ಬಿಜ್ಜಳನ ಕಥೆಯ ವಿಜಯಮ್ಮಿಯು ತನ್ನ ತಾಯಿಗೆ ಪೇಳ್ದಳಾಗ**
**ಚೆನ್ನಾಗಿ ವಿಸ್ತಾರವಾಗಲೆಂದು ಧರಣೀಂದ್ರ ನನ್ನಿಯಿಂ ಪೇಳ್ದನಾ ಕೃತಿಯ**

ಎಂಬ ಹೇಳಿಕೆಯು, ವಿಜಯಕುಮಾರಿ ಅಥವಾ ವಿಜಯಮ್ಮಿ ಎಂಬುವ ಮಹಿಳೆ ವೀರಶೈವರ ಹಾಗೂ ಬಸವಣ್ಣನವರ ಕುರಿತಂತೆ ಹೇಳಿರಬಹುದಾದ ಕತೆಯೊಂದು ಅಂದಿನ ಸಮಾಜದಲ್ಲಿ ಹಲವು ವರ್ಷಗಳ ಕಾಲ ಜನಮನದಲ್ಲಿ ನಿಂತಿತ್ತು, ಅಥವಾ ಬಿಜ್ಜಳನನ್ನು ಕುರಿತು ವಿಜಯಕುಮಾರಿ ರಚಿಸಿರುವ ಕಾವ್ಯ ಇದ್ದಿರಬಹುದೇ ಎಂಬ ಅನುಮಾನಕ್ಕೂ ಆಸ್ಪದವಿದೆ.

ವಿಜಯಕುಮಾರಿ ಕುರಿತಾದ ಕೃತಿಗಳು: ಈ ವಿಜಯಕುಮಾರಿಯ ಜೀವನ ವಿಚಾರ ತಿಳಿಸುವ ಕೃತಿ ಶ್ರುತಕೀರ್ತಿಯದೊಂದೆ ಆಗಿರದೆ ಈ ಕಾಲಘಟ್ಟದಲ್ಲಿ ಇನ್ನೂ ಕೆಲವು ವಿಜಯಕುಮಾರಿಯ ಕುರಿತಾದ ಕಾವ್ಯಗಳು ರಚಿತವಾಗಿವೆ. ಅವುಗಳಲ್ಲಿ ಶ್ರುತಕೀರ್ತಿಯ ಈ 'ವಿಜಯಕುಮಾರಿ ಚರಿತೆ' ರಚಿತವಾದ ಆಸುಪಾಸಿನಲ್ಲಿಯೇ ರಚಿತವಾಗಿದ್ದಿರಬಹುದಾದ ಅಜ್ಞಾತ ಕವಿಯ 'ವಿಜಯಕುಮಾರಿ ಚರಿತೆ'ಯೊಂದಿದೆ. ಇದನ್ನು ಶ್ರುತಕೀರ್ತಿಯ ಕೃತಿಯೊಂದಿಗೆ ಅನುಬಂಧದಲ್ಲಿ ನೀಡಿ ಪ್ರಕಟಿಸಲಾಗಿದೆ. ಈ ಕೃತಿಗಳಿಗೂ ಸ್ವಲ್ಪ ಮುಂಚಿತವಾಗಿ ರಚಿತವಾಗಿರಬಹುದಾದ 'ವಿಜಯಮ್ಮಿ ಚರಿತೆ' ಕೃತಿಯು ಸು. ೧೪೫೦-೧೫೦೦ರ ಕಾಲಾವಧಿಯದೆಂದು ವಿದ್ವಾಂಸರು ತರ್ಕಿಸುತ್ತಾರೆ[೫]. ವಿಜಯಕುಮಾರಿಯ ಕತೆಯು ಐತಿಹಾಸಿಕವಲ್ಲದಿದ್ದರೆ, ಒಂದೇ ರೀತಿಯ ಕಾಲ್ಪನಿಕ ಕತೆ ಹಲವು ಮಂದಿ ಬರೆದಿರಲು ಸಾಧ್ಯವಿಲ್ಲ.

ಈ ಕಾವ್ಯಭಾಗದಲ್ಲಿ ವಿಜಯಕುಮಾರಿಯ ಕತೆ ಮಾತ್ರ ಬಂದಿರುವುದರಿಂದ ಇದಕ್ಕೆ 'ವಿಜಯಕುಮಾರಿ ಚರಿತೆ', 'ವಿಜಯಮ್ಮಿ ಚರಿತೆ' ಎಂದು ಹೆಸರಿಸಿದ್ದಾರೆ. ಇದು ವಿಜಯಕುಮಾರಿಯು ಜೈನ ಸನ್ಯಾಸಿನಿಯಾಗಿ ದೀಕ್ಷೆ ಪಡೆಯುವವರೆಗು ಮಾತ್ರ ಕತೆ ನಿರೂಪಿತವಾಗಿದೆ. ಅವಳು ಜೈನ ಸನ್ಯಾಸಿನಿ ಆದನಂತರ ಅವಳಿಗೆ 'ಶ್ರೀಮತಿ' ಎಂಬ ಹೆಸರನ್ನು ಇಟ್ಟರೆನ್ನುವ ವಿಚಾರ ಈ ಕಾವ್ಯಗಳು ಹೇಳಿವೆ. ಆದರೆ, ಶ್ರೀಮತಿಯ ವೃತ್ತಾಂತ ಅವಳು ಸಲ್ಲೇಖನ ವ್ರತದಿಂದ ಮುಡುಪುವ ವರೆಗಿನ ಭಾಗವನ್ನು ಯಾವ ಕಾವ್ಯವೂ ತಿಳಿಸಿಲ್ಲ.

ಇತರ ಕಾವ್ಯಗಳ ಉಲ್ಲೇಖ: ರಾಘವಾಂಕ ತನ್ನ ಸೋಮನಾಥ ಚರಿತೆಯಲ್ಲಿ ಜೈನ-ವೀರಶೈವ ಸಂಘರ್ಷದ ಚಿತ್ರಣವನ್ನು ನೀಡುವಾಗ 'ಶ್ರೀಮತಿ'ಯನ್ನು ಉಲ್ಲೇಖಿಸಿದ್ದಾನೆ. ಇಲ್ಲಿ ಕವಿಯು ವೀರಶೈವರಿಂದ ಹಿಂಸೆಗೆ ಒಳಗಾದ ಕೆಲವು ಜೈನರನ್ನು ಹೆಸರಿಸಿದ್ದಾನೆ.

**ನೇಮಿಯಂ ಕೆಡುಕುತ್ತಿ ಮಲಧಾರಿಗಳ ನಿಱಿದು**
**ಹೇಮಚಂದ್ರನನೊರಸಿ ಮಾಘನಂದಿಯ ಕೊಂದು**
**ಶ್ರೀಮತಿಗಳಂ ಪಿಡಿದು ತ್ರೈವಿದ್ಯರಂ ತಂದು ತಾರ ಕುಂಡೆಯ ಹಾಯಿಸಿ**
**ಭೂಮಿಗೊರಗಿಸಿ ವರ್ಧಮಾನರಂ ಶ್ರುತಿಕೀರ್ತಿ**
**ನಾಮಮಂ ಕೊಡೆದು ಪಾರಿಸಮಾನನೆಂದು ಕಾ**
**ಯ್ದು ಮೂಲಸಂಘ ಜಾಪುಲಿ ಸಂಘವೆಂಬುಭಯ ಸಂಘಮಂ ಭಂಗಿಸಿದನು ॥**[೬] (೫-೪೩)

ಈ ಪದ್ಯದಲ್ಲಿ, ನೇಮಿಯನ್ನು ಕೆಡಹಿ, ಮಲಧಾರಿಗಳನ್ನು ಇರಿದು, ಹೇಮಚಂದ್ರ, ಮಾಘನಂದಿ, ತ್ರೈವಿದ್ಯರು, ವರ್ಧಮಾನ, ಶ್ರುತಿಕೀರ್ತಿಯರನ್ನು ಕೊಂದದ್ದಲ್ಲದೆ, ಮೂಲಸಂಘ - ಜಾಪುಲಿ ಸಂಘಗಳನ್ನು ಭಂಗಿಸಿದ ವಿಚಾರ ದೊಂದಿಗೆ ಶ್ರೀಮತಿಯನ್ನೂ ಹಿಂಸಿಸಿದ ವಿಚಾರ ಉಕ್ತವಾಗಿದೆ. ಇಲ್ಲಿ 'ಶ್ರೀಮತಿ' ಎಂಬ ಮಹಿಳೆ ಜೈನ ಸಮುದಾಯದವಳೆನ್ನುವ ವಿಚಾರ ಮಾತ್ರ ತಿಳಿಯುತ್ತದೆಯಲ್ಲದೆ, ಇವಳ ಕುರಿತಾದ ಬೇರೆ ಯಾವ ವಿಚಾರವೂ ತಿಳಿಯುವುದಿಲ್ಲ. ಕವಿ ರಾಘವಾಂಕ ಕ್ರಿ.ಶ. ೧೨೦೫ರ ಸುಮಾರಿನಲ್ಲಿ ಜನಿಸಿ ಕ್ರಿ.ಶ. ೧೨೨೦ರ ಸುಮಾರಿಗೆ ಕಾವ್ಯರಚನೆಯನ್ನಾರಂಭಿಸಿ ಕ್ರಿ.ಶ. ೧೨೯೫ರ ವರೆಗೂ ಜೀವಿಸಿರಬಹುದು ಎಂದು ವಿದ್ವಾಂಸರು ಅಭಿಪ್ರಾಯ ಪಡುವ ಹಿನ್ನೆಲೆಯಲ್ಲಿ ಇವನು ಉಲ್ಲೇಖಿಸಿರುವ ಶ್ರೀಮತಿಯು ಇವನ ಹಿರಿಯ ಸಮಕಾಲೀನಳಾಗಿರಬೇಕು. ಇದು ಬಸವಣ್ಣನ ಕಿರಿಯ ಸಮಕಾಲೀನಳಾಗಿದ್ದಳೆಂದು ತಿಳಿಯುವ ವಿಜಯಕುಮಾರಿಯ ಕಾಲವಾಗಿದೆ. ಸಂಪಾದಕರಾದ ವೈ.ಸಿ.ಭಾನುಮತಿ "ವಿಜಯಕುಮಾರಿ ಚಾರಿತ್ರಿಕ ವ್ಯಕ್ತಿಯಾಗಿರುವ ಸಾಧ್ಯತೆಯಿದೆ. ಆಕೆ ಚಾರಿತ್ರಿಕ ವ್ಯಕ್ತಿಯಾಗಿದ್ದರೆ ವಿಜಯಕುಮಾರಿ ಚರಿತೆಯ ವಸ್ತುವಿನ ಕಾಲ ೧೨ನೆಯ ಶತಮಾನವೆಂದು ಊಹಿಸಬಹುದು"[೭] ಎಂದು ತಿಳಿಸಿದ್ದಾರೆ. ಅಲ್ಲದೆ, ಶ್ರೀಮತಿಯೆಂಬ ನಾಮಧೇಯವನ್ನು ತಳೆದ ವಿಜಯಕುಮಾರಿಯು "ಜೈನ ಸನ್ಯಾಸಿನಿಯಾಗಿ ಲೋಕದಲ್ಲೆಲ್ಲಾ ಸಂಚರಿಸಿ, ಹಲವು ಪಾತಕಗಳನ್ನು ಪರಿಹರಿಸಿ.." ಇವಳು ಜೈನ ಸನ್ಯಾಸಿನಿಯಾಗಿ ಹಲವು ಅಜ್ಞಾನಗಳನ್ನು ಹೋಗಲಾಡಿಸಿದ್ದಾಳೆ ಎಂಬಲ್ಲಿ ಧಾರ್ಮಿಕ ಬೋಧನೆಗಳ್ನು ಮಾಡಿದ್ದಾಳೆ ಎನ್ನುವುದು ತಿಳಿದು

ಬರುತ್ತದೆ. ಜೊತೆಗೆ ಈ ಹಿಂದೆ ಚರ್ಚಿಸಿರುವಂತೆ ಬಿಜ್ಜಳನನ್ನು ಕುರಿತಾದ ಕಾವ್ಯರಚಿಸಿರುವ ಸಾಧ್ಯತೆಯೂ ಇದೆ. ಅಂತಹ ಸಂದರ್ಭದಲ್ಲಿ ಸಂಘರ್ಷಗಳು ನಡೆದು, ರಾಘವಾಂಕ ತಿಳಿಸಿರುವಂತೆ, ನೇಮಿ, ಮಲಧಾರಿಗಳನ್ನು ಇರಿದು, ಹೇಮಚಂದ್ರ, ಮಾಘನಂದಿಯನ್ನು ಕೊಂದು ತ್ರೈವಿದ್ಯರಂ, ವರ್ಧಮಾನರನ್ನು ಹಿಂಸಿಸಿರುವಂತೆ, ಶ್ರೀಮತಿಯನ್ನೂ ಹಿಡಿದು ಹಿಂಸೆ ಕೊಟ್ಟಿದ್ದಾರೆ. ವಿಜಯಕುಮಾರಿ ಕಾವ್ಯವು ತಿಳಿಸುವಂತೆ, ಇವಳು ಕಡೆಯಲ್ಲಿ ಸಲ್ಲೇಖನ ವ್ರತವನ್ನು ನಡೆಸಿ, ಮುಡುಪಿದ್ದಾಳೆ.

ಕವಿ ರಾಘವಾಂಕನಲ್ಲದೆ, ಮತ್ತೋರ್ವ ಕನ್ನಡದ ಕವಿಯು ಶ್ರೀಮತಿಯನ್ನು (ಕಂತಿಯಾದ ನಂತರದ ವಿಜಯಕುಮಾರಿಯ ಹೆಸರು) ಉಲ್ಲೇಖಿಸಿದ್ದಾನೆ. ೧೫ನೆಯ ಶತಮಾನದ ಕವಿ ನೇಮರಸ ತನ್ನ ಲೋಭದತ್ತ ಚರಿತೆಯಲ್ಲಿ 'ಶ್ರೀಮತಿ' ಎಂಬ ಹೆಸರಿನ ಕವಯತ್ರಿಯೊಬ್ಬಳು ಇದ್ದಳೆನ್ನುವ ಸುಳಿವನ್ನು ನೀಡಿದ್ದಾನೆ. ಇವನು ತನ್ನ ಪೂರ್ವದ ಕವಿಗಳನ್ನು ಸ್ಮರಿಸುವ ಸಂದರ್ಭದಲ್ಲಿ 'ಶ್ರೀಮತಿ'ಯನ್ನು ಮೊದಲಿಗಳನ್ನಾಗಿ ಹೆಸರಿಸಿದ್ದಾನೆ.

**ಶ್ರೀಮತಿಯನು ಹಂಪನ ನಾಗಚಂದ್ರನ**
**ನೇಮಿಯನಗ್ಗಳಯಯ್ಯನನು**
**ರಾಮಶೀಯದ ಪೊನ್ನ ರನ್ನ ಜನ್ನರನೆನೆನೆರ**
**ದೀ ಮಹಾಕೃತಿಯನು ಪೇಳುವೆನಾ ॥**

ಇಲ್ಲಿ ಕವಿಯು ಹಂಪ, ನಾಗಚಂದ್ರ, ನೇಮಿ, ಅಗ್ಗಳ ಮೊದಲಾದವರೊಂದಿಗೆ ಶ್ರೀಮತಿಯನ್ನು ಹೆಸರಿಸಿರುವುದರಿಂದ ಇವಳೂ ಕೂಡ ಕಾವ್ಯವನ್ನು ರಚಿಸಿರುವಳೆಂದು ತಿಳಿದು ಬರುತ್ತದೆ. ವಿಜಯಕುಮಾರಿಗೆ ಅವಳ ತಂದೆ ವ್ಯಾಕರಣ, ಮೀಮಾಂಸೆ ಮೊದಲಾದ ಶಾಸ್ತ್ರಗಳನ್ನು ಗುರುಮುಖೇನ ಕಲಿಸಿದನು, ನಂತರ ಪ್ರೌಢ ವಯಸ್ಸಿಗೆ ಬಂದಮೇಲೆ ಮನೆಯ ಆವರಣದಲ್ಲಿಯೇ ಮಂಟಪ ನಿರ್ಮಿಸಿಕೊಟ್ಟು ಓದನ್ನು ಮುಂದುವರಿಸಲು ಸಹಕಾರ ನೀಡಿರುತ್ತಾನೆ. ಇಂತಹ ವಿದ್ಯಾಪಾರಂಗತಳಾಗಿದ್ದ ವಿಜಯಕುಮಾರಿ ಕಾವ್ಯರಚಿಸಿರಲು ಯೋಗ್ಯಳಾಗಿರುವುದರಲ್ಲಿ ಸಂಶಯವಿಲ್ಲ. "ಒಟ್ಟಿನಲ್ಲಿ ವಿಜಯಕುಮಾರಿ ಚರಿತೆ ವಾಸ್ತವ ಮತ್ತು ಕಲ್ಪನೆಗಳ ಸಮ್ಮಿಶ್ರಣ"[೮]

ಹೀಗೆ ಸಾಮಾನ್ಯ ಮನೆತನದಲ್ಲಿ ಹುಟ್ಟಿದ ವಿಜಯಕುಮಾರಿಯು ತಾನು ಅನುಸರಿಸುತ್ತಿದ್ದ ಧರ್ಮಕ್ಕೆ ಚ್ಯುತಿ ಬಾರದ ಹಾಗೆ, ಸಂಸಾರ ಬಂಧನದಲ್ಲಿ ಸಿಲುಕದೆ ದಿಟ್ಟ ನಿರ್ಧಾರವನ್ನು ತಳೆದು ತನ್ನ ಧಾರ್ಮಿಕ ಸ್ವಾತಂತ್ರ ಉಳಿಸಿಕೊಳ್ಳುವಲ್ಲಿ ಸಾಹಸಿ ಎನಿಸಿದ ಮಹಿಳೆಯಾಗಿದ್ದಾಳೆ. ಹಾಗಿದ್ದುದರಿಂದಲೇ ಇವಳ ಪಾತ್ರಚಿತ್ರಣ ಕುರಿತಾದ ಕಾವ್ಯಗಳು ರಚನೆಯಾಗಲು ಸಾಧ್ಯವಾಗಿದೆ. ಆದರೆ, ಇತಿಹಾಸದ ಪುಟಗಳಲ್ಲಿ ಮರೆಯಾಗಿರುವ ಈ ಧೀರ ಮಹಿಳೆಯನ್ನು ಗುರುತಿಸುವ ಪ್ರಯತ್ನ ನಡೆಯಬೇಕಿದೆ.



**ಅಡಿಟಿಪ್ಪಣಿಗಳು**


೧. ಭಾನುಮತಿ.ವೈ.ಸಿ. (ಸಂ), ವಿಜಯಕುಮಾರಿ ಚರಿತೆ, ೧೯೮೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ.

೨. ಪ್ರಸ್ತಾವನೆ, ಪೂರ್ವೋಕ್ತ.

೩. ಎಕ ೫, (ರೈಸ್), ಬೇಲೂರು, ೧೨೪, ೧೧೩೩.

೪. ಎಕ (ರೈಸ್), ಶ್ರವಣಬೆಳಗೊಳ, ೬೪, ೧೧೬೩.

೫. ಸಣ್ಣಯ್ಯ.ಬಿ.ಎಸ್., ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ, ೨೦೦೨, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ಪು. ೨೫೩.

೬. ರಾಘವಾಂಕ, ಸೋಮನಾಥ ಚರಿತೆ, (೫–೪೩).

೭. ಭಾನುಮತಿ.ವೈ.ಸಿ., ಪ್ರಸ್ತಾವನೆ, ವಿಜಯಕುಮಾರಿ ಚರಿತೆ, ಪು. ೪೨.

೮. ಪೂರ್ವೋಕ್ತ, ಪು. ೪೫.

# ಬಾಗಲಕೋಟೆಯ ನಕರರು

ವೀಣಾ ಕಲ್ಮಠ*

'ರಾಜ್ಯದಲ್ಲಿ ವರ್ತಕರಿಗಿಂತಲೂ ಹೆಚ್ಚಿನ ಐಶ್ವರ್ಯ ಬೇರಾವುದೂ ಇಲ್ಲ' ಎಂಬ ಮಹಾಭಾರತದಲ್ಲಿನ ಸಾಲು ಸಾಮಾಜಿಕ ಬದುಕಿನಲ್ಲಿ ವರ್ತಕರ ಪ್ರಾಮುಖ್ಯತೆಯನ್ನು ಪ್ರಸ್ತಾಪಿಸುತ್ತದೆ. ಪಟ್ಟಣಗಳ, ನಗರಗಳ ವಿಕಾಸ ಹಾಗೂ ಅಭಿವೃದ್ಧಿಯಲ್ಲಿ ವ್ಯಾಪಾರಿಗಳು ತಮ್ಮದೆ ಆದ ವೈಯಕ್ತಿಕ, ಸಾಂಘಿಕ ಕೊಡುಗೆ ನೀಡುವ ಮೂಲಕ ಇತಿಹಾಸದಲ್ಲಿ ದಾಖಲಾಗಿದ್ದಾರೆ. ಪ್ರಾಚೀನ ಕಾಲದಿಂದಲೂ ವರ್ತಕರನ್ನು ಮುಂಮುರಿದಂಡ, ಸೆಟ್ಟಿಗ, ಗವರೆ, ಗತ್ರಿಗ, ನಕರ ಮುಂತಾದ ಪ್ರಕಾರಗಳಲ್ಲಿ ಗುರುತಿಸಲಾಗಿದೆ.

ವರ್ತಕರ ಸಮಾಜದ ಒಂದು ಭಾಗವಾದ 'ನಕರ' ರ ಕುರಿತು ಗಮನಿಸುವುದಾಗಿದೆ. ನಕರರನ್ನು ಶಾಸನಗಳಲ್ಲಿ 'ಅಂಗಡಿ ಸೆಟ್ಟಿ' ಗಳೆಂದು ಕರೆಯಲಾಗಿದೆ. ನಕರರು ಹೆಚ್ಚಿನ ಸಂದರ್ಭದಲ್ಲಿ ಪಟ್ಟಣವಾಸಿಗಳಾಗಿದ್ದು, ಸಂತೆ, ಪೇಟೆಗಳಿಗೆ ಬಂದ ಸರಕನ್ನು ಖರೀದಿಸಿ ತಮ್ಮ ತಮ್ಮ ಅಂಗಡಿಗಳಲ್ಲಿ ಅಥವಾ ಬಯಲು ಮಳಿಗೆಗೆಳಲ್ಲಿ ಮಾರಾಟ ಮಾಡುತ್ತಿದ್ದರು. ನಕರ ಎಂಬ ಅರ್ಥಕ್ಕೆ ಪರ್ಯಾಯವಾಗಿ ನಖರ, ನಗರ, ಮಹಾನಕರ, ಮಹಾನಗರ, ಎಂಬ ಪದಗಳು ಶಾಸನಗಳಲ್ಲಿ ಉಲ್ಲೇಖವಾಗಿರುವುದು ಕಂಡುಬರುತ್ತದೆ.

ನಕರರಲ್ಲಿ ಜೈನ ಮತ್ತು ಶೈವ ಧರ್ಮೀಯರಿದ್ದು, ಜೈನ ನಕರರನ್ನು ಕುರಿತು ಶ್ರವಣಬೆಳ್ಗೊಳ ಶಾಸನಗಳಲ್ಲಿ ಉಲ್ಲೇಖ ದೊರೆಯುತ್ತದೆ. ಜೈನ ನಕರರು ನಕರ ಜಿನಾಲಯ ನಿರ್ಮಿಸಿರುವುದು ಮತ್ತು ಭವ್ಯ ನಕರ, ಮಾಣಿಕ್ಯ ನಕರ ಎಂದು ನಕರರನ್ನು ಕರೆದಿರುವುದು ಬೇಲೂರು ಹಾಗೂ ಶ್ರವಣಬೆಳ್ಗೊಳ ಶಾಸನಗಳಲ್ಲಿ ಉಲ್ಲೇಖವಿದೆ. ಶೈವ ನಕರರು ನಾಡಿನ ಪ್ರಮುಖ ಪಟ್ಟಣಗಳಲ್ಲೆಲ್ಲ ಇದ್ದು, ಇವರ ಆರಾಧ್ಯ ದೈವ ನಕರೇಶ್ವರ ಆಗಿದೆ[೧]

ನಕರರಲ್ಲಿ ಆಯಾ ವಸ್ತುಗಳನ್ನು ವ್ಯಾಪಾರ ಮಾಡುವವರನ್ನು ಅದೇ ಹೆಸರುಗಳನ್ನು ಸೇರಿಸಿ ಕರೆಯುವ ಪದ್ಧತಿ ಇದ್ದಿತು. ಚಿನ್ನಗೆಯಿಕದ ನಕರ, ತೆಲ್ಲಿಗನಕರ ಇತ್ಯಾದಿ 'ಶ್ರೇಷ್ಠ ವ್ಯಕ್ತಿತ್ವವುಳ್ಳವರು, ಸತ್ಯವಂತರು, ಶುಚಿತ್ವವುಳ್ಳವರು, ಆಚಾರವಂತರು, ನಯವಿನಯವಂತರಾಗಿದ್ದರೆಂಬ' ವಿವರಣೆ ಬಳ್ಳಿಗಾವೆ ಚಿನ್ನಗೆಯ್ಕ ನಕರರ ಬಗ್ಗೆ ಶಾಸನದಲ್ಲಿ ಉಲ್ಲೇವಿದೆ. ಹಾಗೆ ಕೆಲವು ಪ್ರದೇಶಗಳಲ್ಲಿ ನಕರರು ಚಾಡಿಕೋರರಾಗಿದ್ದೆಂಬ ಕಾರಣಕ್ಕೆ ಅವಜ್ಞೆಗೊಳಗಾಗಿರುವುದು ಕಂಡು ಬರುತ್ತದೆ.

ನಕರರ ಕುರಿತಾದ ಈವರೆಗಿನ ಎಲ್ಲ ಮಾಹಿತಿಗಳನ್ನು ಗಮನಿಸಿಕೊಂಡು ಬಾಗಲಕೋಟೆ ಜಿಲ್ಲೆಯ ಶಾಸನಗಳನ್ನು ಅನುಲಕ್ಷಿಸಿ ನಕರರ ಕುರಿತಾದ ಅಂಶಗಳನ್ನು ಪ್ರಸ್ತುತದಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ.

* ಕಂದಗಲ್ಲ ಗ್ರಾಮದ ಈಗಿನ ಹನುಮಂತ ದೇವಾಲಯದ ಆವರಣದ ಕಲ್ಲಿನ ಮೇಲಿರುವ ಶಾಸನದಲ್ಲಿ ವ್ಯಾಪಾರಿಗಳ ಕುರಿತು ಉಲ್ಲೇಖವಿದೆ.[೨]

ಈ ಶಾಸನ ಸುಮಾರು ೧೨ನೇ ಶತಮಾನದ (ಕ್ರಿ.ಶ.೧೨೦೭) ಸಂದರ್ಭದಲ್ಲಿ ತೆಲ್ಲಿಗೇಶ್ವರ ದೇವಾಲಯದ ಜಿರ್ಣೋದ್ಧಾರ ಕೈಗೊಂಡ ಕುರಿತು ವಿವರವಿದೆ (ಸಿಂಹಣ ದೇವನ ಕಾಲದ್ದು)

* ಅಯ್ಯಾಹೊಳೆ ೫೦೦ವರು ಕಂದಗಾಲೆಯ ಸೆಟ್ಟಿಗುತ್ತರು ಮುಂತಾದ ಐವತ್ತೊಕ್ಕಲು ಸೇರಿ ಮಾಡಿಸಿದ ತೆಲ್ಲಿಗೇಶ್ವರ ದೇವಾಲಯಕ್ಕೆ ದಾನ–ದತ್ತಿ ಕೊಟ್ಟ ವಿವರವನ್ನು ಗಮನಿಸಿದಾಗ,
* ಅಯ್ಯೂರ್ವ್ವರು ಸ್ವಾಮಿಗಳು ಕರಡಿಕಲ್ಲ ೩೦೦ ಗ್ರಾಮಾನುಗ್ರಾಮದ ಕಾಣಿಕೆ ವರ್ಷಕ್ಕೆ ಹಣಮಂ ಬಿಟ್ಟರು
* ಸಾಸಿವ್ವನರು ಯೆಲೆಯ ಹೇಱಿಂಗೆ ೧೦೦ ಒಳ್ಳೆಲೆಯಂ ಬಿಟ್ಟರು
* ಐವತ್ತೊಕ್ಕಲುಗಳು ತಾವು ಮಾರುಗೊಂಡ ಎಳ್ಳಿಗೆ ಹೊಂಗೆ ವೀಸವುಮಂ

---

* ವೀಣಾ ಕಲ್ಮಠ, ಸ್ನಾತಕೋತ್ತರ ವಿಭಾಗ, ಬಸವೇಶ್ವರ ಕಲಾ ಮಹಾವಿದ್ಯಾಲಯ, ಬಾಗಲಕೋಟೆ.

* ಗಾಣ ಮೆಟ್ಟವರು ವರ್ಷಕ್ಕೆ ೧ ಹಣಮಂ ಕೊಟ್ಟರು.
* ಮುಂಮುರಿದಂಡ ನಖರಂಗಳು ಸಟ್ಟುಗ ಭತ್ತವಂ ಕೊಟ್ಟರು.
* ಐನೂರ್ವರು, ಐವತ್ತೊಕ್ಕಲು ಎಂಬ ವಿವರಗಳು ವರ್ತಕರ ಪ್ರಕಾರಗಳಿದ್ದ ಬಗ್ಗೆ ವಿವರಿಸುವುದಲ್ಲದೆ ಮುಂಮುರಿದಂಡ ನಕರಂಗಳು ಎಂಬ ವರ್ತಕ ಪ್ರಕಾರವಿದ್ದು, ತಲ್ಲಿಗೇಶ್ವರ ದೇವಾಲಯಕ್ಕೆ ದಾನ ಕೊಡುವ ವರ್ತಕರಲ್ಲಿ ಇವರು ಇದ್ದು ಭತ್ತವನ್ನು ದಾನ ಕೊಡುವುದಾಗಿತ್ತು. ಅಂದರೆ ಕಂದಗಲ್ ಗ್ರಾಮದಲ್ಲಿ ಮುಂಮುರಿದಂಡ ನಕರರು ಇದ್ದರೆಂಬುದು ಸ್ಪಷ್ಟವಾಗುತ್ತದೆ.

ದುರ್ಗಾಗುಡಿ ಹೊರ ಭಾಗದಲ್ಲಿ ೮ನೆ ಶತಮಾನಕ್ಕೆ ಸೇರಿದ ಶಾಸನವಿದ್ದು, ಸ್ವಸ್ತಿ ವಿಕ್ರಮಾದಿತ್ಯ ಸತ್ಯಾಶ್ರಯ ಮಹಾರಾಜನ ಆಳ್ವಿಕೆ ಕಾಲದಲ್ಲಿ ರೇವಡಿ ಭಟ್ಟ ಅಟಳವನ್ನು ಆಳುತ್ತಿದ್ದಾಗ ಕೋಮರ ಸಿಂಗನ ದೇವಾಲಯದ ಆದಿತ್ಯ ಭಟರಿಗೆ ತಮಗೆ ಬಂದ ಸುಂಕದ ಭಾಗವನ್ನು ಕೊಟ್ಟಿದ್ದು, 'ಇದನ್ನು ಮಹಾಜನರ ಮತ್ತು ನಕರದವರು ನಡೆಸುವುದು' ಎಂಬ ವಿವರದಲ್ಲಿ ನಕರರು ಸುಂಕವನ್ನು ಸಂಗ್ರಹಿಸುವ ಕಾರ್ಯದಲ್ಲಿ ವಿಶೇಷ ಸ್ಥಾನ ಪಡೆದಿದ್ದರು.

**ಒಂದು ಪೇಱಿಂಗೆ ಒರ್ಮಾನಂ ಭಣ್ಡವೇಱಿಂಗೆ**
**ಆಯ್ದು ವೀಸವಂ ಎಲೆ [ವೇ] ರಿಂಗೆ**
**ಅಯ್ವತ್ತು ಇನಿತು ರಾಜಶ್ರಾವಿತ್ತಂ**
**ಇದಾನ್ಸಲಿಸುಗೆ ಆವೊನಾನುಂ**[೩]

ಈ ಶಾಸನ ವಿವರಣೆ ಗಮನಿಸಿದಾಗ ರಾಜನ ಅಧಿಕಾರಿಗಳಾದ ಮಹಾಜನರಷ್ಟೇ ನಕರದವರು ಪ್ರಾತಿನಿಧ್ಯ ಪಡೆದಿದ್ದರೆಂದು ಮಹಾಜನರ ನಂತರದಲ್ಲಿ ಮಾರುಕಟ್ಟೆ ಸುಂಕ ಸಂಗ್ರಹಿಸುವ ಕಾರ್ಯ ನಕರರದಾಗಿತ್ತು ಎಂಬುದು ಗೊತ್ತಾಗುತ್ತದೆ.

ಐಹೊಳೆಯ ಗೌಡರ ಗುಡಿಯ ತೊಲೆಯ ಮೇಲೆ ರಚಿತವಾದ ಈ ಶಾಸನದಲ್ಲಿ ಐಹೊಳೆ ಪಟ್ಟಣದ ೫೦೦ ಮಹಾಜನರು, ನಗರಗಳು ಮತ್ತು ಪುರ ಪ್ರಮುಖರು ದುರ್ಗಾಭಗವತಿಗೆ ಭೂಮಿ ದಾನ ಕೊಟ್ಟ ಬಗ್ಗೆ ವಿವರವಿದೆ.

**ಸಮುದಯವಯ್ನೂರು ಮಹಾಜನಮು**
**ಎಂಟುನ್ನಗರಮುನೂರಾ ಇರ್ಪ್ಪದಿನ್ವರು**[೪]

ಎಂಬಲ್ಲಿ ನಗರ ಕುರಿತು ಪ್ರಸ್ತಾಪವಿದೆ. ನಕರರ ಮೂಲಕ ನಗರವೆಂಬ ವ್ಯಾಪಕ ರೂಪ ಪಡೆದಿದ್ದು ಸ್ಥಿರ ವ್ಯಾಪಾರಿಗಳಾದ ಇವರು ಭೂಮಿಯನ್ನು ದಾನ ಕೊಡುವಷ್ಟು ಸಿರಿವಂತರಾಗಿರುವುದು ಕಂಡು ಬರುತ್ತದೆ.

ಸೂರ್ಯನಾರಾಯಣನ ಗುಡಿಯ ಕಂಬದ ಮೇಲೆ ಹತ್ತು ಸಾಲುಗಳ ಶಾಸನವಿದ್ದು ೯-೧೦ ಶತಮಾನಕ್ಕೆ ಸೇರಿದ್ದೆಂದು ವಿದ್ವಾಂಸರು ಗುರುತಿಸಿದ್ದು ಇಲ್ಲಿ ನಕರ ಎಂಬ ಉಲ್ಲೇಖವಿದೆ.

**ಸ್ವಸ್ತಿ ಅಯ್ನೂರ್ವ್ವರು ಎಂಟು ನಕರವು ಇದ್ದು**
**ಮಾಡಿದ ಸಮೆಯ ಪಿಂಡಿಯ**
**ತುಕಂ ಬಿಸಿಗೆ ಅಱುವಲ ಬಿಸಿಗೆಯು**[೫]

ಗೌಡರ ಗುಡಿಯ ಶಾಸನದಲ್ಲಿ ಪ್ರಸ್ತಾಪಿತ ಎಂಟು ನಗರ ಮತ್ತು ಇಲ್ಲಿನ ಎಂಟು ನಕರ ಎಂಬ ಪದಗಳಲ್ಲಿ ಸಾಮ್ಯತೆ ತೋರುತ್ತದೆ. ಗೌಡರ ಗುಡಿಯ ಶಾಸನದಲ್ಲಿ ವಿವರಗಳಲ್ಲಿ ನಕರ-ನಗರ ಎಂಬುದು ಐನೂರ್ವರ ಜೊತೆ ಗುರುತಿಸಿದ್ದು ಆರ್ಥಿಕವಾಗಿ ನಕರರು ಸಬಲರಾಗಿದ್ದು, ವಿಶೇಷ ಮನ್ನಣೆ ಪಡೆದಂತೆ ತೋರುತ್ತದೆ. ಐನೂರ್ವರು ಮತ್ತು ನಕರರು ಐಹೊಳೆಯವರಾಗಿದ್ದು ಅಲ್ಲಿದ್ದುಕೊಂಡು ಮಾಡಿದ ದಾನ ಕುರಿತು ವಿವರವಿದೆ.

ಬೀಳಗಿ ಗ್ರಾಮದ ಎಸ್.ಕೆ. ಕೊಪ್ಪ ಗ್ರಾಮದ ದುರ್ಗವ್ವನ ದೇವಾಲಯದ ಚಪ್ಪಡಿಕಲ್ಲಿನ ಮೇಲೆ ಇರುವ ಶಾಸನವು ೧೦೭೫ನೇ ಕಾಲದ್ದು, ಕಲ್ಯಾಣದ ಚಾಲುಕ್ಯರ ಚಕ್ರವರ್ತಿಯಾದ ಭುವನೈಕ ಮಲ್ಲನ ಆಳ್ವಿಕೆಯ ಕುರಿತು ರಚನೆಗೊಂಡಿದೆ. ಇವನ ವಂಶಜನಾದ ಸೋಮೇಶ್ವರನ ಆಳ್ವಿಕೆಯಲ್ಲಿ ದಂಡನಾಯಕ ನಿಂಬಣಯ್ಯನ ಬಿನ್ನಹದಂತೆ ಬಲ್ಲವರಸ ಎಂಬುವನು ವಿಕ್ರಮಪುರದ ಶ್ರೀ ಸ್ವಯಂಭು ನಗರೇಶ್ವರ ದೇವರ ಮಠದ ಕಾಳಾಮುಖಯತಿ, ಪರ್ವತವಳಿಯ ತ್ರಿಭುವನಶಕ್ತಿ ಪಂಡಿತ ದೇವರ ಶಿಷ್ಯ ತತ್ಪುರುಷ ಪಂಡಿತದೇವನಿಗೆ ಬಾದುಬ್ಬೆಯ ಪಾಳು ಎಂಬ ಗ್ರಾಮವನ್ನು ವಿದ್ಯಾರ್ಥಿ ತಪೋಧನರ ಆಹಾರಕ್ಕೆ ದೇವರ ಪೂಜೆಗೆ ಸರ್ವನಮಸ್ಯ ಮಾಡಿ ನೀಡಿದ ಬಗ್ಗೆ ಹೇಳಲಾಗಿದೆ.

"ವಿಕ್ರಮಪುರದ ಶ್ರೀಸ್ವಯಂಭು ನಗರೇಶ್ವರ ದೇವರ ಮಠದ ನೈಷ್ಠಿಕ ತಪೋಧನರ್ಕ್ಕಾಳಾಮುಖ....[೬]

ನಕರರ ಆರಾಧ್ಯ ದೇವರಾದ ನಗರೇಶ್ವರನಿಗೆ ದತ್ತಿ ಬಿಟ್ಟ ವಿವರಣೆಯಿದೆ. ಇಡಿಯಾಗಿ ಶಾಸನದಲ್ಲಿ ಬೇರೆ ಬೇರೆಯವರು ಒಂದು ಮತ್ತರು, ಹೂವಿನ ತೋಟ, ನೈವೇದ್ಯಕ್ಕೆ ಒಂದು ಮತ್ತರು ಗದ್ದೆ, ತಪೋಧನರ ಊಟಕ್ಕೆ ಒಂದು ಮತ್ತರು ಗದ್ದೆ ಇತ್ಯಾದಿ ನಗರೇಶ್ವರ ದೇವಾಲಯ ಮುಖ್ಯವಾಗಿಸಿಕೊಂಡು ದಾನ ದತ್ತಿ ಕೊಡಲಾಗಿದೆ.

ಶಾಸನದಲ್ಲಿ ದೊರೆತ ಆಕರಗಳ ಜೊತೆಗೆ ಪ್ರಸ್ತುತ ಬಾಗಲಕೋಟೆಯಲ್ಲಿ ಹಳೆಪಡೆಯಲ್ಲಿ ನಗರೇಶ್ವರ ದೇವಾಲಯವಿದೆ.

ಈ ಎಲ್ಲ ವಿವರಣೆಗಳು ನಗರೇಶ್ವರ ದೇವಸ್ಥಾನ ವಿಶೇಷ ಪ್ರಾತಿನಿಧ್ಯ ಪಡೆದದ್ದನ್ನು ಪ್ರಸ್ತಾಪಿಸುತ್ತದೆ.

ಒಟ್ಟಾರೆಯಾಗಿ ನಕರರಿಗೆ ಸಂಬಂಧಿತ ಎಲ್ಲ ಆಕರಗಳನ್ನು ಗಮನಿಸಿದಾಗ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ.

* ನಕರರು ಪಟ್ಟಣಗಳಲ್ಲಿ ವಾಸಿಸುತ್ತಿದ್ದರೆಂಬ ಅಂಶ ನಿಜವಾದುದಾಗಿದೆ.
* ನಕರರು ಪಟ್ಟಣದ ಸ್ಥಿರ ವ್ಯಾಪಾರಸ್ಥರಾಗಿದ್ದರಿಂದ ಸ್ಥಳೀಯ ಆರ್ಥಿಕ ವ್ಯವಹಾರಗಳಲ್ಲಿ ಇವರಿಗೆ ಆದ್ಯತೆ ದೊರೆಯುತ್ತಿದ್ದಿತು.
* ನಕರರು ಆರ್ಥಿಕವಾಗಿ ಸಬಲರಾಗಿದ್ದು ಐಯ್ಯಾಹೊಳೆ ಐನೂರ್ವ್ವರ ಕಾಲದಲ್ಲಿ ಪ್ರಮುಖ ಸ್ಥಾನ ಪಡೆದಿದ್ದರು
* ಭೂಮಿಯನ್ನು ದಾನ ಕೊಡುವಷ್ಟು ಆರ್ಥಿಕವಾಗಿ ಸದೃಢರಾಗಿದ್ದರೆಂಬುದು ಸ್ಪಷ್ಟ.
* ಮಹಾಜನರ ಜೊತೆ ನಕರರನ್ನು ಗೌರವಿಸಿ ಮಾತನಾಡಿದ್ದು ಗಮನಿಸಿದಾಗ ಅವರಷ್ಟೆ ಗೌರವದ ಸ್ಥಾನವನ್ನು ನಕರರು ಹೊಂದಿದ್ದರು.

ಒಟ್ಟಾರೆ ಅಯ್ಯಾಹೊಳೆ ಐನೂರ್ವ್ವರ ಕಾಲದಲ್ಲಿ ನಕರರು ಇದ್ದು ಬಾಗಲಕೋಟೆ ಭಾಗದಲ್ಲಿ ಸ್ಥಿರ ವ್ಯಾಪಾರಿಗಳಾಗಿದ್ದು, ದಾನ-ದತ್ತಿ ಕೊಡುವ ಕಾರ್ಯದಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವರೆಂಬುದು ಸ್ಪಷ್ಟವಾಗುತ್ತದೆ.

ಬಾಗಲಕೋಟೆ ಜಿಲ್ಲೆಯಲ್ಲಿ ಶಾಸನಗಳಲ್ಲಿ ನಕರರು ಗುರುತಿಸುವ ಪ್ರಯತ್ನದಲ್ಲಿ ವರ್ತಕರ ಬೇರೆ ಬೇರೆ ಪ್ರಕಾರಗಳಾದ ತಂಬುಲಿಗ, ಸಾಸಿರ್ವರು, ಮುಂಮುರಿದಂಡರು, ಸೆಟ್ಟಿಗುತ್ತರು, ತೆಲ್ಲಿಗರು, ಗಾತ್ರಿಗರು ಐವತ್ತೊಕ್ಕಲು ಇದ್ದರಲ್ಲದೆ ಜೈನ ವರ್ತಕರು ಇದ್ದರೆಂಬ ಉಲ್ಲೇಖಗಳು ಶಾಸನಗಳಲ್ಲಿ ಸ್ಪಷ್ಟವಿದ್ದು ವರ್ತಕರ ಕುರಿತು ಹೆಚ್ಚಿನ ಅಧ್ಯಯನಕ್ಕೆ ಅವಕಾಶ ಮಾಡಿಕೊಡುತ್ತವೆ.

## ಅಡಿಟಿಪ್ಪಣಿಗಳು

೧. ಶಾಸನಗಳಲ್ಲಿ ಕರ್ನಾಟಕ ವರ್ತಕರು, ಬಿ.ಆರ್. ಹಿರೇಮಠ, ಪು.ಸಂ. ೩೫.
೨. ಬಾಗಲಕೋಟೆ ಜಿಲ್ಲೆಯ ಶಾಸನ, ಪುಟ ೯, ಪು. ಸಂ. ೪೪೫.
೩. ಅದೇ ಪು.ಸಂ. ೩೫೬, (ಶಾ.ಸಂ. I.A-VIII P-286).
೪. ಅದೇ ಪು.ಸಂ. ೩೫೯.
೫. ಅದೇ ಪು.ಸಂ. ೩೬೦.
೬ ಅದೇ ಪು.ಸಂ. ೫೯.

## ಆಕರ ಗ್ರಂಥಗಳು

೧. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಡಾ. ಎಂ. ಚಿದಾನಂದಮೂರ್ತಿ, ಸ್ವಪ್ನಾ ಬುಕ್ ಹೌಸ್, ಬೆಂಗಳೂರು, ೨೦೦೧.
೨. ಶಾಸನಗಳಲ್ಲಿ ಕರ್ನಾಟಕ ವರ್ತಕರು, ಬಿ.ಆರ್. ಹಿರೇಮಠ, ೧೯೮೬, ಕ.ವಿ.ವಿ. ಧಾರವಾಡ.
೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ. ೯-೨೦೦೬, ಹಂಪಿ ವಿ.ವಿ., ಹಂಪಿ.
೪. ಡಾ. ಬಿ.ಆರ್. ಹಿರೇಮಠರ ಶಾಸನ ಅಧ್ಯಯನ.

# ದುಂಮೆಯ ಕಾಳಗ ಒಂದು ವಿವೇಚನೆ

ಸಿ.ಎಂ. ತಿಪ್ಪೇಸ್ವಾಮಿ*

೧೨ನೇ ಶತಮಾನ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಒಂದು ಮಹತ್ವದ ತಿರುವನ್ನು ಪಡೆದ ಕಾಲ. ಕಲ್ಯಾಣದಲ್ಲಿ ಆಳುತ್ತಿದ್ದ ಚಾಲುಕ್ಯರು ಆ ಶತಮಾನಾರಂಭ ಕಾಲದಲ್ಲಿ ಆರನೇ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಉತ್ತುಂಗಕ್ಕೇರಿದರು. ವಿಶಾಲವಾದ ಸಾಮ್ರಾಜ್ಯವನ್ನಾಳುತ್ತಿದ್ದ ಚಾಲುಕ್ಯರಿಗೆ ತಮ್ಮ ಸಾಮಂತರೇ ಅಗಿದ್ದ ಹೊಯ್ಸಳರ ಪ್ರಾಬಲ್ಯ ಹೆಚ್ಚುತ್ತಿದ್ದ ಬಿಸಿ ಆಗಾಗ ತಟ್ಟುತ್ತಿತ್ತು. ಆದರೂ ವಿಕ್ರಮಾದಿತ್ಯ ತನ್ನ ದಕ್ಷತೆಯಿಂದ ಎಲ್ಲಾ ಸಾಮಂತರನ್ನೂ ತನ್ನ ಹಿಡಿತದಲ್ಲಿಟ್ಟುಕೊಂಡಿದ್ದ. ಇಂಥ ಸಂದರ್ಭದಲ್ಲಿ ಚಾಲುಕ್ಯರ ಪ್ರಬಲ ಸಾಮಂತರೆನಿಸಿದ್ದ ಉಚ್ಚಂಗಿ ಪಾಂಡ್ಯರು ಹಾಗೂ ಹೊಯ್ಸಳರ ನಡುವೆ ಆಗಾಗ್ಗೆ ಕದನಗಳು ನಡೆಯುತ್ತಿದ್ದವು. ಪಾಂಡ್ಯರು ಚಾಲುಕ್ಯರ ನಿಷ್ಠಾವಂತರೆನಿಸಿದ್ದರೆ, ಹೊಯ್ಸಳರು ಸ್ವತಂತ್ರಾಕಾಂಕ್ಷಿಗಳಾಗಿದ್ದರು. ಹೊಯ್ಸಳ – ಚಾಲುಕ್ಯರ ನಡುವಿನ ತಿಕ್ಕಾಟದ ಮಹತ್ವದ ಒಂದು ಘಟ್ಟ ದುಂಮೆಯ ಕಾಳಗ. ಈ ಕಾಳಗದ ಉಲ್ಲೇಖವು ಹೊಯ್ಸಳರ ಹಲವು ಶಾಸನಗಳಲ್ಲಿ ಬಂದು ಇದೊಂದು ಮುಖ್ಯವಾದ ಮೈಲುಗಲ್ಲು ಎಂಬ ಸೂಚನೆಯನ್ನು ನೀಡುತ್ತವೆ. ಈ ಕಾಳಗ ನೆಡೆಯಲು ಕಾರಣವೇನು, ಎಲ್ಲಿ ನಡೆಯಿತು, ಇದರಲ್ಲಿ ಭಾಗವಹಿಸಿದವರು ಯಾರು ಮತ್ತು ಇದರ ಮಹತ್ವವೇನು ಎಂಬುದನ್ನು ಶಾಸನಾಧಾರದಿಂದ ಸಾದರಪಡಿಸುವುದೇ ಈ ಲೇಖನದ ಉದ್ದೇಶ.

ದುಂಮಿಯು ಎರಡು ಪ್ರಾಚೀನ ಕಾಲದ ಆಡಳಿತ ಪ್ರದೇಶಗಳ ಗಡಿ ಭಾಗದ ಆಯಕಟ್ಟಿನ ಗ್ರಾಮ. ಇದೊಂದು ಪ್ರಮುಖ ವಾಣಿಜ್ಯ ಕೇಂದ್ರವಾಗಿ ಕಾಲಾನಂತರ ಬೆಳೆಯಿತು. ಸ್ಥಳೀಯ ಐತಿಹ್ಯಗಳಂತೆ ಮಹಾಭಾರತದ ಕಾಲದಲ್ಲಿ ದೌಮ್ಯ ಋಷಿಗಳು ಇಲ್ಲಿ ತಪಸ್ಸನ್ನಾಚರಿಸಿದ್ದರಿಂದ ಈ ಗ್ರಾಮಕ್ಕೆ ದುಮ್ಮಿ ಎಂಬ ಹೆಸರು ಬಂತು. ಅವರು ತಪಸ್ಸನ್ನಾಚರಿಸಿದ ಗುಹೆಯು ಗ್ರಾಮದ ಪಕ್ಕದ ಗುಡ್ಡದಲ್ಲಿದ್ದು, ಇಂದು ಅದು ಕೆಂಚಮ್ಮನ ಗುಡಿಯಾಗಿದೆ. ಇದರ ಇತಿಹಾಸವನ್ನು ನಿರೂಪಿಸುವ ೯ ಶಾಸನಗಳು ಇದೇ ಗ್ರಾಮದ ಪರಿಸರದಲ್ಲಿದ್ದರೆ ಒಂದು ತಾಮ್ರಶಾಸನ ದಾವಣಗೆರೆ ತಾಲ್ಲೂಕಿನ ಕಾಶಿಪುರದಲ್ಲಿ ಸಿಕ್ಕಿತ್ತು. ಈ ತಾಮ್ರಶಾಸನವು ದುಮ್ಮಿಯ ಪ್ರಾಚೀನತೆಯನ್ನು ಕದಂಬರ ಕಾಲಕ್ಕೆ ಕೊಂಡೊಯ್ಯುತ್ತದೆ. ಕದಂಬರ ರವಿಮಹಾರಾಜನು (ರವಿವರ್ಮ) ನೀಡಿದ ದಾನಶಾಸನದಲ್ಲಿ ದುರ್ಮ್ಮಯ ಎಂಬ ಗ್ರಾಮದ ಭೂಮಿಯನ್ನು ಒಬ್ಬ ಬ್ರಾಹ್ಮಣನಿಗೆ ದಾನ ನೀಡಿದ್ದನ್ನು ಹೇಳಿದೆ.[೧] ಈ ಶಾಸನದಲ್ಲಿ ಬಂದಿರುವ ಇತರೆ ಗ್ರಾಮಗಳ ಆಧಾರ ದುಮ್ಮಯ ಎಂಬುದು ಪ್ರಾಚೀನ ದುಮ್ಮಿಯೇ ಇರಬಹುದೆಂದು ಅಭಿಪ್ರಾಯಪಡಲಾಗಿದೆ. ಇದು ದೃಢವಾದರೆ ದುಮ್ಮಿಯ ಪ್ರಾಚೀನತೆಯನ್ನು ಕ್ರಿ.ಶ. ೫೦೦ರ ಸುಮಾರಿಗೆ ಕೊಂಡೊಯ್ಯಬಹುದು. ಮುಂದೆ ಹೊಯ್ಸಳರ ಕಾಲದಲ್ಲಿ ೩ನೇ ನರಸಿಂಹನು ಅರಸನಾಗಿದ್ದಾಗ ಸೇವುಣರ ಸೇನೆ ದ್ವಾರಸಮುದ್ರವನ್ನು ಮುತ್ತಿತ್ತು. ಆಗ ಹೊಯ್ಸಳರ ಕಡೆಯ ಚಿಕ್ಕದೇವ, ಅಂಕನಾಯಕ, ಖಂಡೆಯರಾಯ ರಾಣೆ ಮುಂತಾದವರು ಸೇವುಣರ ೧೨,೦೦೦ ಅಶ್ವದಳವನ್ನು ನಾಶಪಡಿಸಿ ದುಮ್ಮಿಯವರೆಗೆ ಅಟ್ಟಿಕೊಂಡು ಬಂದರು ಎಂದು ದಾಖಲೆ ಇದೆ.[೨] ಇದು ದುಮ್ಮಿಯು ಆ ಕಾಲಘಟ್ಟದ ಒಂದು ಪ್ರಮುಖ ನೆಲೆಯಾಗಿತ್ತೆಂದು ತಿಳಿಸುತ್ತದೆ. ಮುಂದೆ ವಿಜಯನಗರ ಕಾಲದಲ್ಲಿ ಕೆಲವು ಶಾಸನಗಳನ್ನು ಹಾಕಲಾಗಿದೆ. ಕ್ರಿ.ಶ. ೧೫೨೫ರಲ್ಲಿ ದುಂಮಿಯನ್ನು ಮಲ್ಲರಸಯ್ಯನೆಂಬುವವನು ಆಳುತ್ತಿದ್ದಾಗ ಈ ಭಾಗದ ಆಡಳಿತ ನಡೆಸುತ್ತಿದ್ದ ಕೃಷ್ಣಪ್ಪನಾಯಕನನ್ನು ದಕ್ಷಿಣ ಭುಜಾದಂಡಾಧೀಶ ಎಂದು ಕರೆಯಲಾಗಿದೆ. ಇದು ಪರೋಕ್ಷವಾಗಿ ಸಾಮ್ರಾಜ್ಯದ ದಕ್ಷಿಣದ ಪ್ರಮುಖ ಪಟ್ಟಣವೇ ಆಗಿದ್ದುದನ್ನು ಸೂಚಿಸುವಂತಿದೆ. ಇಲ್ಲೊಂದು ನಿರಾಶ್ರಯ ಮಠವಿದ್ದುದನ್ನು ಶಾಸನವು ದಾಖಲಿಸಿದೆ. ಇನ್ನೊಂದು ಶಾಸನವು[೩] ದುಂಮಿ ಪಟ್ಟಣವು ನಿರ್ಜನವಾಗುವ ಹಂತ ತಲುಪಿ ನಂತರ ಮೊದಲಿನ ರೀತಿ ಆದುದನ್ನು ಹೇಳುತ್ತದೆ. ಕ್ರಿ.ಶ. ೧೫೨೭ ದುಂಮಿಯ ಕೆರೆ ಶಿಥಿಲವಾಗಿ ಪ್ರಜೆಗಳಿಗೆ ವ್ಯವಸಾಯದ ಉತ್ಪನ್ನ ಸಿಕ್ಕದಂತಾಗಿ ಕಷ್ಟಪಡುತ್ತಿರುವಾಗ ಅಲ್ಲಿನ ಪಾರುಪತ್ಯದಾರ ಇದಾವುದನ್ನೂ ಲೆಕ್ಕಿಸದೆ ಅರಸರಿಗೆ ಸಲ್ಲಬೇಕಾದ ತೆರಿಗೆಯನ್ನು ಬಲವಂತದಿಂದ ವಸೂಲಿ ಮಾಡುತ್ತಿದ್ದ. ಇದರಿಂದ ಬೇಸತ್ತ ಜನ ದುಂಮಿಯನ್ನು ತ್ಯಜಿಸಿ ವಲಸೆ ಹೋದರು ಹಾಗೂ ಈ ಬಗ್ಗೆ ಅರಸರ ಗಮನ ಸೆಳೆದರು. ಪ್ರಜಾಪಾಲಕನಾದ ಕೃಷ್ಣದೇವರಾಯನು ತಕ್ಷಣ ಇದಕ್ಕೊಂದು ವ್ಯವಸ್ಥೆಯನ್ನು

* ಇಸಿಲ, # ೮೬, ೧ನೇ ಅಡ್ಡರಸ್ತೆ, ಮಾಸ್ತಮ್ಮ ಬಡಾವಣೆ, ಒನಕೆ ಓಬವ್ವ ಕ್ರೀಡಾಂಗಣದ ಡಬಲ್ ರೋಡ್, ಚಿತ್ರದುರ್ಗ, ಮೊ. ೭೭೬೦೬೦೪೦೫೪

ಮಾಡಿ ವಲಸೆ ಹೋಗಿದ್ದ ದುಂಮಿಯ ಜನ ಹಿಂದಿರುಗಲು ತಿಳಿಸಿ, ಅವರಿಂದ ಯಾವುದೇ ರೀತಿಯ ಅನ್ಯಾಯದ ಕರವಸೂಲಿ ಮಾಡುವುದಿಲ್ಲವೆಂದು ಪ್ರಮಾಣಪೂರ್ವಕವಾಗಿ ನಿರೂಪ ಕಳಿಸಿದ. ಇದರಿಂದಾಗಿ ದುಂಮಿ ಗ್ರಾಮಸ್ಥರು ಹಿಂದಿರುಗಿ ಮತ್ತೆ ಸುಭಿಕ್ಷವಾಯಿತೆನ್ನಬಹುದು. ಇದೊಂದು ಪ್ರಜಾಪಾಲನೆಯ ಅಪರೂಪದ ನಿದರ್ಶನ.

ಈಗ ದುಮ್ಮಿಯಲ್ಲಿ ೨ ಈಶ್ವರನ ಗುಡಿಗಳಿದ್ದು ಒಂದು ಶಿಥಿಲಾವಸ್ಥೆಯಲ್ಲಿದೆ, ಮತ್ತೊಂದು ಜೀರ್ಣೋದ್ಧಾರಗೊಂಡು ಸುಂದರವಾಗಿದೆ. ಗ್ರಾಮದಲ್ಲಿರುವ ವೀರಭದ್ರದೇವಾಲಯದ ವೀರಭದ್ರನನ್ನು ದುಂಮಿಯ ಪುರವರಾಧೀಶ್ವರನೆಂದು ಕರೆಯಲಾಗಿದೆ. ಗ್ರಾಮದಲ್ಲಿ ಒಂದು ಮಠವಿದ್ದು ಅದು ಯಾವಾಗಿ ಸ್ಥಾಪಿಸಲಾಗಿದೆ ಎಂಬ ಬಗ್ಗೆ ಖಚಿತ ದಾಖಲೆ ಇಲ್ಲ. ಹಿಂದೆ ಇಲ್ಲಿ ಒಂದು ಜೈನ ದೇಗುಲವಿದ್ದ ಕುರುಹಿದೆ.[೪] ೧೪ನೇ ಶತಮಾನದಲ್ಲಿ ಇಲ್ಲೊಂದು ಬ್ರಹ್ಮಪುರಿ ಇದ್ದುದೂ ಕಂಡುಬರುತ್ತದೆ.[೫] ಗ್ರಾಮದ ಕೆರೆಯ ದಂಡೆಯ ಒಳಮುಖದಲ್ಲಿ ಬಹುಭಾಗ ಹೂತು ಹೋಗಿರುವ ಒಂದು ವೀರಗಲ್ಲಿದೆ. ಇಂದು ತಾಲ್ಲೂಕಿನ ಕೇಂದ್ರವಾಗಿರುವ ಹೊಳಲ್ಕೆರೆಯನ್ನು ಗುರುತಿಸಲು ಬೇರೆ ಪ್ರದೇಶದವರು 'ದುಂಮಿ-ಹೊಳಲ್ಕೆರೆ' ಎಂದು ಕರೆಯುತ್ತಿದ್ದರು. ಇದು ಹಿಂದೆ ಈ ಗ್ರಾಮವು ಹೊಳಲ್ಕೆರೆಗಿಂತಲೂ ಪ್ರಸಿದ್ಧವಾಗಿದ್ದು, ಈ ಪ್ರದೇಶದ ಪ್ರಮುಖ ಪಟ್ಟಣವಾಗಿತ್ತೆಂಬುದನ್ನು ನಿರೂಪಿಸುತ್ತದೆ. ದುಂಮಿಯ ಗುಡ್ಡದ ಮೇಲೆ ನಿಂತರೆ ಸುತ್ತಲಿನ ದೂರದ ಪ್ರದೇಶಗಳು ಉತ್ತಮವಾಗಿ ಗೋಚರವಾಗುವುದರಿಂದ ಸೇನಾ ಕಾವಲಿಗೆ ಈ ಗಡಿ ಭಾಗದ ಗ್ರಾಮವು ಉತ್ತಮ ಆಯ್ಕೆಯಾಗಿತ್ತು.

## ದುಂಮೆಯ ಕಾಳಗ

ಈ ಕಾಳಗದಲ್ಲಿ ಹೊಯ್ಸಳರೊಂದಿಗೆ ಚಾಲುಕ್ಯರು ನೇರವಾಗಿ ಯುದ್ಧದಲ್ಲಿ ಭಾಗವಹಿಸದಿದ್ದರೂ, ಚಾಲುಕ್ಯರ ಸಾಮಂತರು ಹಾಗೂ ಹೊಯ್ಸಳರ ಆಳ್ವಿಕೆಯ ಪ್ರದೇಶಕ್ಕೆ ಹೊಂದಿಕೊಂಡಿದ್ದ ಭಾಗದಲ್ಲಿ ಅವರ ಪ್ರತಿನಿಧಿಗಳಂತಿದ್ದ ಉಚ್ಚಂಗಿ ಪಾಂಡ್ಯರೊಡನೆ ಯುದ್ಧ ನಡೆಯಿತು. ಹೊಯ್ಸಳ-ಪಾಂಡ್ಯರ ನಡುವೆ ಎಷ್ಟು ಬಾರಿ ಯುದ್ಧ ನಡೆದವು ಎಂಬುದು ಖಚಿತವಾಗಿ ಹೇಳಲಾಗದಿದ್ದರೂ, ಪ್ರತಿ ಬಾರಿ ಉತ್ತರ ದಿಕ್ಕಿನಲ್ಲಿ ಮಾಡಿದ ದಂಡಯಾತ್ರೆಗಳಲ್ಲಿ ಹೊಯ್ಸಳ-ಪಾಂಡ್ಯರ ನಡುವೆ ಘರ್ಷಣೆಗಳು ಸಂಭವಿಸಿವೆ. ಈ ಕದನ ನಡೆದ ಅವಧಿಯ ಶಾಸನಗಳಲ್ಲದೆ ತದ ನಂತರದ ಕಾಲದ ಅನೇಕ ಶಾಸನಗಳು ದುಂಮೆಯ ಕದನವನ್ನು ಸ್ಮರಿಸಿವೆ. ಒಂದನೆ ಬಲ್ಲಾಳನ ಕಾಲದಲ್ಲಿ ಕ್ರಿ.ಶ. ೧೧೦೩ರಲ್ಲಿ ನಡೆದ ದಾಳಿಯಲ್ಲಿ ಹೊಯ್ಸಳರು 'ಪಾಂಡ್ಯರ ಅಹಂಕಾರವನ್ನು ತಮ್ಮ ಖಡ್ಗದಿಂದ ಅಡಗಿಸಿದರು'. ಅಲ್ಲಿಂದ ಮುಂದೆ ನುಗ್ಗಿದ ಹೊಯ್ಸಳರನ್ನು ಮುಂದೆ ಕಲ್ಯಾಣ ಚಾಲುಕ್ಯರ ಪರವಾಗಿ ಸಿಂಧರ ೨ನೇ ಅಚುಗಿಯು ಹೊಯ್ಸಳರನ್ನು ಹಿಮ್ಮೆಟ್ಟಿಸಿದ. ವಿಷ್ಣುವರ್ಧನನು ಅರಸನಾದ ಮೇಲೆ ಅವನು ಮೊದಲು ತನ್ನ ಸುತ್ತಲಿನ ಭಾಗಗಳನ್ನು ನಿಯಂತ್ರಣಕ್ಕೆ ತಂದು ಮತ್ತೆ ಉಚ್ಚಂಗಿಯ ಮೇಲೆ ದಾಳಿ ಮಾಡಿದ. ಇದು ಕ್ರಿ.ಶ. ಸುಮಾರು ೧೧೧೧-೧೩ರ ನಡುವೆ ನಡೆಯಿತು. ಇದಾದ ನಂತರ, ಅನೇಕ ಶಾಸನಗಳಲ್ಲಿ ಉಲ್ಲೇಖಗೊಂಡಿರುವ 'ದುಂಮೆಯ ಕಾಳಗ ಎಂದು ಹೆಸರಾದ ಕಾಳಗವು ಹೊಯ್ಸಳ ವಿಷ್ಣುವರ್ಧನನ ಸಾಮ್ರಾಜ್ಯ ವಿಸ್ತರಣೆ, ಸಾರ್ವಭೌಮತ್ವದ ಸಾಧಿಸುವ ಒಂದು ಗಂಭೀರ ಪ್ರಯತ್ನವಾಗಿತ್ತು. ಈ ಯುದ್ಧಕ್ಕೆ ಪ್ರೇರಣೆ ನೀಡಿದ್ದು ಪಾಂಡ್ಯ ರಾಜ ಇರಬಹುದು ಎಂದು ಡೆರೆಟ್ ಅಭಿಪ್ರಾಯಪಡುತ್ತಾರೆ.[೬] ಈ ಆಕ್ರಮಣದಲ್ಲಿ ಯಶಸ್ವಿಯಾದ ವಿಷ್ಣುವರ್ಧನ 'ಉಚ್ಚಂಗಿಕೊಂಡ', 'ನೊಳಂಬವಾಡಿಕೊಂಡ' ಎನಿಸಿಕೊಂಡ.

ಈ ಯುದ್ಧ ನಡೆದ ನಿಖರ ದಿನ ಗೊತ್ತಿಲ್ಲವಾದರೂ ಕ್ರಿ.ಶ.೧೧೧೬ರ ಮಧ್ಯಭಾಗದಲ್ಲಿ ನಡೆದಿರಬಹುದೆಂದು ಶಾಸನಾಧಾರಗಳ ಮೇಲೆ ಊಹಿಸಬಹುದು. ಈ ಸಮಯಕ್ಕೆ ಮೊದಲು ವಿಷ್ಣುವರ್ಧನನು 'ತಲಕಾಡುಗೊಂಡ'ನಾಗಿ, ಚೋಳರನ್ನೋಡಿಸಿ (ತಳಕಾಡೊಳ್ಸುಳಿದಾಡಿತುಂಗನಗವಪ್ಪುಂಚ್ಚಂಗಿಯಂ ಸಾರ್ದನಾಕುಳಚಿತ್ತಂ)[೭], ಕೊಂಗಾಳ್ವರೊಡನೆ ಹೋರಾಡಿ ವಿಶ್ರಮಿಸಬಯಸಿದ್ದ. ಇವನು ಉಚ್ಚಂಗಿಯ ಪಾಂಡ್ಯರ ಮೇಲೆ ನುಗ್ಗಲು ಅವನೇ ಮೊದಲು ನಿರ್ಧರಿಸಿದ್ದನೆಂದು ಕಂಡುಬರುವುದಿಲ್ಲವೆಂದು ಡೆರೆಟ್‌ರವರು ಅಭಿಪ್ರಾಯಪಟ್ಟರೂ, ಶಾಸನಗಳು ವಿಷ್ಣುವರ್ಧನನೇ ಪಾಂಡ್ಯನ ಕೋಪವನ್ನು ಪ್ರಚೋದಿಸಿದನೆಂದು ಹೇಳಿರುವುದರಿಂದ ಈ ಕದನದ ಮುನ್ನುಡಿ ಬರೆದವನು ವಿಷ್ಣುವರ್ಧನನೇ ಎಂದು ತಿಳಿಯುತ್ತದೆ. ಈಗಾಗಲೇ ಕಂಡುಬಂದಂತೆ ತ್ರಿಭುವನಮಲ್ಲ ಪಾಂಡ್ಯನೂ ರಾಜ್ಯವಿಸ್ತರಣಾಕಾಂಕ್ಷಿಯಾಗಿಯೇ. ಇವನು ತನ್ನ ಅವಧಿಯಲ್ಲಿ ಒಬ್ಬ ಸಾಮಂತನಾಗಿ (ಮಹಾಮಂಡಲೇಶ್ವರನಾಗಿ) ವಿಸ್ತಾರವಾದ ಪ್ರದೇಶಗಳನ್ನು ಆಳಿದ್ದು ಕಂಡುಬರುತ್ತದೆ. ಅಂತೆಯೇ, ಬಹುಶಃ ಹೊಯ್ಸಳ ನಾಡಿನೆಡೆಯೂ ರಾಜ್ಯವಿಸ್ತರಣೆಗೆ ಪ್ರಯತ್ನಿಸಿ ವಿಷ್ಣುವರ್ಧನನ ಕೋಪವನ್ನು ಪ್ರಚೋದಿಸಿರಬಹುದು. ಯುದ್ಧ ನೆಡೆದ ಸ್ಥಳವು ಆಸಂದಿ ನಾಡಿನ[೮] ಗಡಿಭಾಗವಾದ ದುಮ್ಮಿಯಲ್ಲಿ. ಇದನ್ನು ಬಿ.ಎಲ್.ರೈಸ್ ರವರು ದುಮ್ಮಿಯ ಗುಡ್ಡದಲ್ಲಿ ಎಂದು ಗುರ್ತಿಸಿದ್ದಾರೆ.[೯]

ಈ ಯುದ್ಧದಲ್ಲಿ ವಿಷ್ಣುವರ್ಧನನೊಂದಿಗೆ ಬಂದು ಹೋರಾಡಿದ ಕೆಲವು ದಂಡನಾಯಕರು, ಸಾಮಂತರನ್ನು ಕೆಲವು ಶಾಸನಗಳಲ್ಲಿ ಕಾಣಬಹುದು. ಚಾಮದೇವನೆಂಬ ಸೇನಾಪತಿ, ಸಾಮಂತ ಚಟ್ಟ ಎಂಬ ಹುಳಿಯಱೆಯ ಸಾಮಂತ, ಬೊಪ್ಪನೆಂಬ ಸೇನಾಪತಿ, ಆರಂದೂರ ಲೆಂಕ ಮಾಚಂಣ ಮುಂತಾದವರು. ವಿಷ್ಣುವರ್ಧನನ ಪತ್ನಿ ಶಾಂತಲೆಯೂ ಈ ಯುದ್ಧಕಾಲದ ಯಾತ್ರೆಯಲ್ಲಿದ್ದಿರಬಹುದು ಎಂಬ ಅಭಿಪ್ರಾಯ ಡೆರೆಟ್ ರವರದು. ಇದಕ್ಕೆ ಅವರು ಯಾವ ದಾಖಲೆಗಳನ್ನು ಆಧರಿಸಿದ್ದಾರೆಂದು ಹೇಳಿಲ್ಲ. ಕ್ರಿ.ಶ. ೧೧೧೮ರಲ್ಲಿ ವಿಷ್ಣುವರ್ಧನನು ಪಾಂಡ್ಯರ ಮೇಲೆ ದಂಡೆತ್ತಿ ಬಂದುದನ್ನು ಚಿಕ್ಕಮಗಳೂರಿನ ಆಲ್ದೂರಿನ ವೀರಗಲ್ಲೊಂದು – 'ಸ್ವಸ್ತಿ ಶ್ರೀಮನ್ಮಹಾಮಂಡಲೇಶ್ವರಂ ತ್ರಿಭುವನಮಲ್ಲ ತಳೆಕಾಡುಗೊಂಡ ಕೊಂಗು ನಂಗಲಿ ಬನವಾಸೆ ಹಲಸುಗೆ ಹಾನುಂಗಲ್ಲುಗೊಂಡ ಭುಜಬಳವೀರಗಂಗ ಹೊಯ್ಸಳ ಬಿಟ್ಟಿದೇವರು ಪಾಂಡ್ಯನ ಮೇಲೆತ್ತಿ ದುಂಮ್ಮೆಯ ಕಾಳೆಗದಲು..' ಎಂದು ಹೇಳಿದೆ.[೧೦] ಈ ವೀರಗಲ್ಲಿನ ಪಕ್ಕದಲ್ಲೇ ಇರುವ ಇನ್ನೊಂದು ವೀರಗಲ್ಲು[೧೧] ವಿಷ್ಣುವರ್ಧನನ ಪರ ಹೋರಾಡಿ ಮಡಿದ ವೀರನೊಬ್ಬನ ಮಾಹಿತಿಯನ್ನು ನೀಡಿದ್ದು ತೇದಿಯನ್ನು 'ದುರ್ಮ್ಮುಖಿ ಸಂವತ್ಸರದ ಜೇಷ್ಟಮಾಸದ ವಡ್ಡವಾರ' ಎಂದು ದಾಖಲಿಸಿದೆ. ಇದು ಬಹುತೇಕ ದುಂಮೆಯ ಕದನದ ಭಾಗವೇ ಆದ ಘರ್ಷಣೆಗಳ ಭಾಗವಾಗಿರುವುದನ್ನು ಊಹಿಸಬಹುದು. ಈ ಶಾಸನದ ಆಧರಿಸಿ ದುಂಮೆಯ ಕದನ ನಡೆದ ಕಾಲವನ್ನು ಕ್ರಿ.ಶ. ೧೧೧೮ರ ಮೇ ೨೦ರ ಆಸುಪಾಸಿನಲ್ಲಿ ಎಂದು ನಿರ್ಧರಿಸಬಹುದು.

ದುಮ್ಮಿಯ ಬಳಿಗೆ ಹೊಯ್ಸಳರ ಸೇನೆ ಬಂದ ಮಾಹಿತಿಯನ್ನು ತಿಳಿದ ಪಾಂಡ್ಯನು ಕೋಪದಿಂದ ಧಾವಿಸಿ ಬಂದು ಎಮ್ಮಿಗನೂರಿನ ಮೂಲಕ ತನ್ನ ಸೇನೆಯನ್ನು ನುಗ್ಗಿಸಿದ. ('ಪಾಂಡ್ಯನ್ರಿಪಂ ಮುಳಿದಾಂತು ತೂಳ್ದು ಬಂದೆಂಮಿಗ ನೂರಲೊಡ್ಡಿದಡೆ...')[೧೨] ಈ ಸೇನೆಯು ಆನೆ ಹಾಗು ಅಶ್ವದಳಗಳಿಂದ ಕೂಡಿತ್ತೆಂದು ಈ ಕಾಳಗವನ್ನು ಉಲ್ಲೇಖಿಸುವ ಬಹುತೇಕ ದಾಖಲೆಗಳು ಸ್ಪಷ್ಟವಾಗಿ ಹೇಳಿವೆ. ಈ ಕಾಳಗವನ್ನು ಬಣ್ಣಿಸಿರುವ ಎಲ್ಲಾ ದಾಖಲೆಗಳು ವಿಶೇಷವಾಗಿ ಪಾಂಡ್ಯರದು ಪ್ರಬಲ ಸೇನೆಯಾಗಿತ್ತೆಂದೇ ಬಣ್ಣಿಸಿವೆ. ಬೇಲೂರಿನ ಶಾಸನವೊಂದು ವಿಷ್ಣುವರ್ಧನನು 'ಪಾಂಡ್ಯಗಂಡಶೈಳ'ಕ್ಕೆ ಸಿಡಿಲಿನಂತೆರಗಿದ ಎಂದು ಹೇಳುವಲ್ಲೂ ಪಾಂಡ್ಯರಸನ ಶಕ್ತಿಯನ್ನು ಪರೋಕ್ಷವಾಗೇ ಬಣ್ಣಿಸಿದೆ. ಆ ಸಂದರ್ಭದಲ್ಲಿ ಸಾಮಂತ ಚಟ್ಟ ಮಾಡಿದ ಸಾಹಸವನ್ನು ಶಾಸನಗಳಲ್ಲಿ ಕಾಣಬಹುದು.

'ವಿಷ್ಣುನ್ರಿಪಾಲಿಕನೋಡೆ ವೈರಿಯಂ ಪೆಂಮಳಿಸಿರ್ದ್ದ ವಾಜಿಗಜಯೂಥಮನಾಳ್ದಱೆಯಟ್ಟಿ..ರ್ಯ್ಯನಿಂದಣ್ಣಿದ ಗಂಧಸಿಂಧುರಮಂ ತಂದುಮದಿಪತಿಗಿತ್ತ ಚಟ್ಟಯ ॥'[೧೩]

ಅಂದರೆ ವಿಷ್ಣುನ್ರಿಪನು ನೋಡನೋಡುತ್ತಿರೆ ಚಟ್ಟಯನು ವೈರಿಯಮೇಲೆ ಬಿದ್ದು (ಸೋಲಿಸಿ) ದೊಡ್ಡ ಆನೆಯೊಂದನ್ನು ಹಿಡಿದು ತಂದು ರಾಜನಿಗಿತ್ತ. ಈ ಕಾರ್ಯವು ಹೊಯ್ಸಳರಿಗೆ ಕಾಳಗದಲ್ಲಾದ ಮೇಲುಗೈಯನ್ನು ತೋರಿಸುತ್ತದೆಯಲ್ಲದೆ, ಚಟ್ಟಯನ ವಿಧೇಯತೆಯ ಬಗ್ಗೆ ವಿಷ್ಣುವರ್ಧನನಿಗಿದ್ದ ಅನುಮಾನವೊಂದು ದೂರವಾಯಿತು ಎಂದು ಡೆರೆಟ್ ಅಭಿಪ್ರಾಯಿಸಿದ್ದಾರೆ.

ಈ ಕಾಳಗವು ಕೇವಲ ದುಮ್ಮಿ ಹಾಗೂ ಎಮ್ಮಿಗನೂರಿಗೆ ಸೀಮಿತವಾಗಿರದೆ ಆಸುಪಾಸಿನ ಸ್ಥಳಗಳಲ್ಲು ನಡೆದ ಸಾಕ್ಷಿಗಳಿವೆ. ಚಿಕ್ಕಮಗಳೂರು ತಾಲ್ಲೂಕಿನ ಜಾಲಹಳ್ಳಿ ಬಳಿಯೂ ಈ ಕಾಳಗ ನಡೆದು, ಆರುಂದೂರ ಲೆಂಕ ಮಾಚಂಣ ಎಂಬುವವನು, 'ವೀರಗಂಗ ಹೊಯ್ಸಳ ಬಿಟ್ಟಿದೇವರು ಪಾಂಡ್ಯನ ಮೇಲೆತ್ತಿ ದುಂಮೆಯ ಕಾಳಗದಲು ಆನೆಯ ಘಟ ಕುದುರೆಯದಳವೆತ್ತಿದಲ್ಲಿ ಆರುಂದೂರು ಲೆಂಕ ಮಾಚಂಣಕ್ಕಂಮಡಿ ಜೀವಿತಕ್ಕೆ ಪಾವಹಡವಳನ ಹೊಣೆಯ ಕೊಳುಕ್ಕಡಿದು ಹರದ ಜಾಳಹಳಿಗಾ ಎಂದಱಿದನು..'[೧೪]

ಅಂದರೆ ಹೊಯ್ಸಳ ಬಿಟ್ಟಿದೇವನು ಪಾಂಡ್ಯನ ಮೇಲೆ ದುಮ್ಮಿಯ ಕಾಳಗದಲ್ಲಿದ್ದಾಗ ಆನೆಯ, ಕುದುರೆಯ ದಳ ಎದುರಾದಾಗ, ಆರುಂದೂರ ಲೆಂಕನಾಗಿದ್ದ ಮಾಚಂಣನು 'ಪಾವ'ನೆಂಬ ಸೇನಾಪತಿಯಿಂದ ಇಮ್ಮಡಿ ಜೀವಿತಕ್ಕೆ (ದುಪ್ಪಟ್ಟು ಕೂಲಿ?) ಬಲವನ್ನು(ಸೇನೆ) ಒಗ್ಗೂಡಿಸಿ ಜಾಳಹಳ್ಳಿಯನ್ನು ನಾಶಮಾಡಿದ. ಈ ಶಾಸನವನ್ನು ವರ್ತಕರ ಕುಟುಂಬವೊಂದು ಕ್ರಿ.ಶ. ೧೧೧೮ರಲ್ಲಿ ಹಾಕಿಸಿದ್ದು, ಬಹುಶಃ ಈ ಯಶಸ್ವಿ ಕಾರ್ಯಾಚರಣೆಯಲ್ಲಿ ಮಾಚಂಣ ಸತ್ತಿರಬಹುದು.

ಇದಾದ ನಂತರ ಹುಳಿಯಾರಿನ ಸಾಮಂತ ಚಟ್ಟನ ಸೇನಾಪತಿ ಚಾಮದೇವನೆಂಬುವನು ಉಚ್ಚಂಗಿಯ ಮೇಲೆ ದಾಳಿ ಮಾಡಿದುದನ್ನು ಕ್ರಿ.ಶ.೧೧೪೯ರ ಶಾಸನ ಹೇಳಿದೆ.

'ಪಚ್ಚವಡಂಬೆಂಗಾಣದನಿಚ್ಚಟಗಲಿಮನಹ ಬಿಟ್ಟಿದೇವಂ ನೋಡಲು ಉಚ್ಚಂಗಿಯ ಮೇಲಿಱಿದಂ ಮಚ್ಚರಿಸುವರೆದೆಯ ಗೂಂಟ ಗೋವಿಭಂಟಂ ।'[೧೫]

ಹೊಯ್ಸಳರು ಈ ಯುದ್ಧದಲ್ಲಿ ಮೇಲುಗೈ ಸಾಧಿಸದರೆಂಬುದು ಖಚಿತವಾದರೂ ಅಂತಿಮವಾಗಿ ಸೋತ ಅರಸನನ್ನು





ಹೇಗೆ ನಡೆಸಿಕೊಂಡರೆಂಬುದರ ಬಗ್ಗೆ ಖಚಿತ ಮಾಹಿತಿ ಇಲ್ಲ. ಬೇಲೂರು ತಾಲೂಕಿನ ಒಂದು ಶಾಸನವು[೧೬] ಕ್ರಿ.ಶ. ೧೧೬೦ರ ಕಾಲದ್ದಾಗಿದ್ದು, ಈ ಕಾಳಗದಲ್ಲಿ ಹೊಯ್ಸಳನ ಗೆಲುವನ್ನು ಸಾರುತ್ತದೆ. ಇದು ವಿಷ್ಣುವರ್ಧನನು ತನ್ನ ಕತ್ತಿಯಿಂದಲೇ ಪಾಂಡ್ಯನನ್ನು ಇರಿದನು ಎಂದಿದೆ–

'ಕರವಾಳಡೆ ಪಾಂಡ್ಯಂ ಕರವಾಳಿಂ ಹೊಯ್ಸಳೇಶನಿಱಿಯೊಲ್ಕೆಲ್ಲಲ್ಕರವಾಳಲ್ಲದೆ ಕಾದಲ್ಕರವಾಳಿಲ್ಲಾಯ್ತು ನೋಡೆ ತಿಗುಳನ ಪಡೆಯೊಳು॥'

ಇದನ್ನು ರೈಸ್‌ರವರು ಈ ಕದನದಲ್ಲಿ ಭಾಗವಹಿಸಿದ್ದು ತಿಗುಳ ಪಡೆ. ಇದನ್ನು ಚೋಳರ ಸೇನೆ, ತಮಿಳರ ಸೇನೆ ಎಂದೂ ಗುರ್ತಿಸಲಾಗಿದೆ.[೧೭] ಆದರೆ ತ್ರಿಭುವನಮಲ್ಲ ಪಾಂಡ್ಯನು ಈ ಕದನದಲ್ಲಿ ಮಡಿದನೇ ಎಂಬುದನ್ನು ಅನೇಕ ಇತಿಹಾಸಕಾರರು ಒಪ್ಪುವುದಿಲ್ಲ. ಏಕೆಂದರೆ ಈ ಕದನದ ನಂತರವೂ ಹಲವು ವರ್ಷಗಳವರೆಗೆ, ಸುಮಾರು ಕ್ರಿ.ಶ. ೧೧೨೬ರವರೆಗೆ, ಈ ಅರಸನ ಶಾಸನಗಳು ಸಿಕ್ಕುವುದರಿಂದ ಇವನು ಆಗ ಮೃತಪಟ್ಟಿಲ್ಲ. ಕೆಲವು ಶಾಸನಗಳಲ್ಲಿ ಹೇಳಿದಂತೆ 'ಪಾಂಡ್ಯನನ್ನು ಇರಿದನು' ಎಂಬುದನ್ನು ಪಾಂಡ್ಯನನ್ನು ಕೊಂದನು ಎಂಬುದರ ಬದಲಾಗಿ ಬಿಟ್ಟಿದೇವನೇ ಈ ಕದನದಲ್ಲಿ ನೇರವಾಗಿ ಭಾಗವಹಿಸಿ ಪಾಂಡ್ಯರ ಸೇನೆಗೆ ನಷ್ಟವನ್ನುಂಟು ಮಾಡಿದನು, ಹಿಮ್ಮೆಟ್ಟಿಸಿದನು, ಸೋಲಿಸಿದನು ಎಂದು ಅರ್ಥೈಸುವುದು ಸೂಕ್ತ. ಈ ಮಾಹಿತಿಯನ್ನು ಒಳಗೊಂಡಿರುವ ಶಾಸನವು, ಈ ಕದನ ನಡೆದ ಸುಮಾರು ೪೫ ವರ್ಷಗಳ ನಂತರ ರಚಿತವಾದುದರಿಂದ ಕೆಲವು ಉತ್ಪ್ರೇಕ್ಷೆಗಳು, ಲೋಪದೋಷಗಳಿರುವುದು ಸಹಜ. ಇದಲ್ಲದೆ ಹುಳಿಯಾರಿನ ಶಾಸನವೊಂದು[೧೮] ಜಗದೇಕಮಲ್ಲರಾಯ ಪೆರ್ಮಾಡಿ ದೇವರು ಕಲ್ಯಾಣದಲ್ಲಿ ಆಳುತ್ತಿದ್ದ ಕಾಲದ್ದಾಗಿದ್ದು, ಗೋವಿದೇವನೆಂಬ ಸಾಮಂತನ ತಂದೆಯಾಗಿದ್ದ ಚಟ್ಟನ ಸಾಹಸವನ್ನು ವರ್ಣಿಸಿದೆ. ಇವನು ಅರಿಸೇನೆಯನ್ನು ತೆಲಗಿಯವರೆಗೂ ಅಟ್ಟಿಸಿಕೊಂಡು ಹೋದುದನ್ನೂ ಹೇಳಿದೆ.

'ಚಂಡಭುಜಾಸಿಯೊಳಾನೆಗಳ್ದ ವಿಕ್ರಮಗ್ಗ್ರಂಕಡಿಕೆಯ್ದು ತೆಲಗಿಯೊಳು ದಂಡಚಮೂಪ ಮೂ. ದಲಿಸಿ ಪಾಯ್ಸಿದಡಾ ರಣರಂಗದಲ್ಲಿ ಮಾರ್ಕ್ಕೊಂಡು ಕಱುತ್ತುತಾಗಿದರಿಸೇನೆಯ ವಿಕ್ರಮ ಚಟ್ಟನುದ್ಧತಂ ಗಂಡರದೇವ ಗೇಣಲರಱಿದು.. ಪೇಳದೆ ಶೌರ್ಯ್ಯದೇಳ್ಗೆಯಂ ॥' ಎಂದು ಚಟ್ಟನ ಶೌರ್ಯವನ್ನು ವರ್ಣಿಸಿದೆ.

ಈ ಕದನದಲ್ಲಿ ಚಟ್ಟಯ, ಮಾಚಂಣರಲ್ಲದೆ, 'ಬೊಪ್ಪ' ಎಂಬ ಸೇನಾಪತಿಯೂ ಪಾಲ್ಗೊಂಡಿದ್ದಾನೆ.[೧೯] ಇವನ ಶೌರ್ಯವನ್ನು ಹೀಗೆ ವರ್ಣಿಸಿದೆ.

'ರಾಮನೊಂದಂಬು ಪೀರುವಂತೆರೆ ಪಾಣ್ಡ್ಯಕ್ಷೋಣೀಪಾಳ ಪ್ರಬಳಬಳಪಯೋರಾಸಿಯಂ ತನ್ನ ಖಳ್ಗಂಬರದಿಂದಂ ಪೀರಿ ಗೆಲ್ದಂ ಜಗಬಿರುದಭಳಪ್ಪಂ ಚಮೂನಾಥ ಬೊಪ್ಪಂ॥'

ಪಾಂಡ್ಯರ ಸೇನಾಸಾಗರವನ್ನು ಹೀರಿದ ಬೊಪ್ಪನ ಸಾಹಸವು ಬಹುಶಃ ಅವನು ಉಚ್ಚಂಗಿಯ ಮೇಲೆ ಮುಂದಿನ ವರ್ಷಗಳನ್ನು ನಡೆದ ಯುದ್ಧದ ಘಟನೆಯನ್ನು ಹೇಳುವಂತಿದ್ದರೂ ಇದು ದುಮ್ಮಿ ಕಾಳಗಕ್ಕೆ ಸಂಬಂಧಿಸಿದುದೆಂದು ಕೊಯಿಲೋರವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೨೦]

ಇವೆಲ್ಲದರ ನಂತರವೂ ಪಾಂಡ್ಯರ ಆಳ್ವಿಕೆಯು ಅವಿಚ್ಛಿನ್ನವಾಗಿ ಮುಂದುವರೆದಿರುವುದು ಕಂಡುಬರುತ್ತದೆ. ಆದ್ದರಿಂದ ದುಮ್ಮಿಯ ಕಾಳಗವು ಭೀಕರವಾಗಿದ್ದರೂ, ವ್ಯಾಪಕವಾಗಿದ್ದರೂ ನಿರ್ಣಾಯಕವಾಗಲಿಲ್ಲ, ಪಾಂಡ್ಯರ ಆಳ್ವಿಕೆಯನ್ನು ಕೊನೆಗಾಣಿಸಲಿಲ್ಲ. ಬದಲಿಗೆ ಪಾಂಡ್ಯರ ಮೇಲಾಟಕ್ಕೆ ಹೊಯ್ಸಳರು ಅಂಕುಶವಿಟ್ಟರೆಂದು ತಿಳಿಯಬಹುದು. ದುಮ್ಮಿ,



**ದುಮ್ಮಿ ಕೆರೆಯಲ್ಲಿ ಹೂತಿರುವ ಒಂದು ವೀರಗಲು**

ಎಮ್ಮಿಗನೂರಿನ ಕಾಳಗದ ಯಶಸ್ಸು ಹೊಯ್ಸಳರಲ್ಲಿ ಮುಂದೆ ಪಾಂಡ್ಯರ ಮತ್ತೊಂದು ಭದ್ರನೆಲೆಯಾಗಿದ್ದ ಗಿರಿದುರ್ಗ ಉಚ್ಚಂಗಿಯನ್ನು ಗೆಲ್ಲಲು ಆತ್ಮವಿಶ್ವಾಸವನ್ನು ಮೂಡಿಸಿತಲ್ಲದೆ ಚಾಲುಕ್ಯರ ಸಾಮಂತತನದ ನೊಗವನ್ನು ಕಿತ್ತೊಗೆಯುವ ಆಕಾಂಕ್ಷೆಯನ್ನು ಬಲಗೊಳಿಸಿತು.

ದುಮ್ಮಿಯ ಕದನಾನಂತರವೂ ವಿಷ್ಣುವರ್ಧನನು ಪಾಂಡ್ಯನಾಡಿನ ಮೇಲೆ ಆಗಾಗ್ಗೆ ದಾಳಿ ಮಾಡುತ್ತಿದ್ದರೂ ಶಾಶ್ವತವಾಗಿ ಆ ಪ್ರದೇಶಗಳನ್ನು ತನ್ನ ಅಂಕೆಯಲ್ಲಿಟ್ಟುಕೊಳ್ಳಲು ಆಗಲಿಲ್ಲ. ವಿಷ್ಣುವರ್ಧನನ ಮೊಮ್ಮಗ ೨ನೇ ಬಲ್ಲಾಳನು 'ಉಚ್ಚಂಗಿಕೊಂಡ' ಎಂಬ ಬಿರುದನ್ನು ಪಡೆದುದು ಹೇಗೆ ಎಂಬುದನ್ನು ವರ್ಣರಂಜಿತವಾಗಿ ಬಣ್ಣಿಸುವ ಶಾಸನಗಳಿಂದ ಊಹಿಸಬಹುದಾದ ಅಂಶವೇನೆಂದರೆ, ವಿಜಯಪಾಂಡ್ಯನಿಂದ ಉಚ್ಚಂಗಿಯನ್ನು ವಶಪಡಿಸಿಕೊಂಡವನು ಹೊಯ್ಸಳರಲ್ಲೆ ಇವನೇ ಮೊದಲನೆಯವನಾದ್ದರಿಂದ,[೨೧] ಹಿಂದೆ ತ್ರಿಭುವನಮಲ್ಲ ಪಾಂಡ್ಯನ ಜೀವಿತಾವಧಿಯಲ್ಲಿ ಯಾವಾಗಲಾದರೂ ವಿಷ್ಣುವರ್ಧನನು ಉಚ್ಚಂಗಿಯನ್ನು ವಶಪಡಿಸಿಕೊಂಡಿದ್ದನೇ ಎಂಬ ಬಗ್ಗೆ ಸಂಶೋಧಕರಲ್ಲಿ ಶಂಕೆ ಇದೆ.[೨೨] 'ಚಿರಕಾಲಂ ರಿಪುಗಳ್ಗಸಾಧುಮೆನಿಸಿ ದುರ್ದುಚ್ಚಂಗಿಯಂ' ಎಂದು ವರ್ಣಿಸುವ ಕ್ರಿ.ಶ. ೧೧೮೧ರ ಶಾಸನವು ಅಭಿಪ್ರಾಯಕ್ಕೆ ಪುಷ್ಟಿಯನ್ನು ನೀಡುತ್ತದೆ.

೧. 'ದುಂಮೆಯ ಕದನ' ವು ಹೊಯ್ಸಳರಿಗೆ ಚಾಲುಕ್ಯರ ಸಾಮಂತತನದಿಂದ ಮುಕ್ತಿಹೊಂದುವ ಪ್ರಯತ್ನದಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿದ ಕದನ.

೨. ಹೊಯ್ಸಳ ವಿಷ್ಣುವರ್ಧನನ ರಾಜ್ಯವಿಸ್ತರಣಾಕಾಂಕ್ಷೆಯೇ ಈ ಕದನಕ್ಕೆ ಕಾರಣ.

೩. ಈ ಕದನದಲ್ಲಿ ತ್ರಿಭುವನಮಲ್ಲ ಪಾಂಡ್ಯನು ಹಿಮ್ಮೆಟ್ಟಿದನಾದರೂ ಉಚ್ಚಂಗಿ ಪಾಂಡ್ಯರ ಮೇಲಾಗಲೀ, ಚಾಲುಕ್ಯರ ಮೇಲಾಗಲೀ ತಕ್ಷಣದ ತೀವ್ರ ಪರಿಣಾಮವನ್ನು ಬೀರಲಿಲ್ಲವಾದರೂ ಮುಂದೆ ಹೊಯ್ಸಳರ ಸ್ವತಂತ್ರದ ಮುನ್ನುಡಿಯಾಯಿತು.

೪. ಈ ಕದನವು ಪಾಂಡ್ಯರ ಖ್ಯಾತ ಸೈನ್ಯವನ್ನು ಹೊಯ್ಸಳರು ಹಿಮ್ಮೆಟ್ಟಿಸಿ ಪಾಂಡ್ಯರ ಆಕ್ರಮಣವನ್ನು ತಡೆದರು.

೫. ಇದೊಂದು ದುಮ್ಮಿ, ಹಿರೇಎಮ್ಮಿಗನೂರು, ಜಾಲಹಳ್ಳಿಗಳನ್ನೊಳಗೊಂಡ ಆಸಂದಿ ನಾಡಿನ ಗಡಿಭಾಗದ ವಿಸ್ತಾರವಾದ ಪ್ರದೇಶದಲ್ಲಿ ನಡೆಯಿತು. ಇದೊಂದು ಮಹತ್ತರ ಸಾಧನೆ ಎಂದು ಹೊಯ್ಸಳರು ಪರಿಗಣಿಸಿದರು.



## ಅಡಿಟಿಪ್ಪಣಿಗಳು

೧. ಎಂ.ಎ.ಆರ್. ೧೯೪೩, ನಂ. ೧.

೨. ಎಂ.ಎ.ಆರ್. ೧೯೩೭, ನಂ. ೨೩.

೩. ಎಂ.ಎ.ಆರ್. ೧೯೩೯, ನಂ. ೧೬.

೪. ಎಕ ೧೧, ಹೊಳಲ್ಕೆರೆ, ೧೫.

೫. ಡಾ. ಎಸ್.ವೈ. ಸೋಮಶೇಖರ್, ಕರ್ನಾಟಕ ದೇವಾಲಯ ಕೋಶ, ಚಿತ್ರದುರ್ಗ ಜಿಲ್ಲೆ, ಪುಟ ೩೩೭.

೬ ಎಂ.ಎ.ಆರ್. ೧೯೩೯, ನಂ. ೧೮.

೭. ಡೆರೆಟ್, ದಿ ಹೊಯ್ಸಳಾಸ್, ಪುಟ ೪೮.

೮. ಎಕ ೬, ಕಡೂರು, ೬೯.

೯. ಕಡೂರು ತಾಲ್ಲೂಕಿನ ಆಸಂದಿ ಕೇಂದ್ರವಾಗಿರುವ ಇದು ಚಿಕ್ಕಮಗಳೂರು, ಕಡೂರು, ತರೀಕೆರೆ, ನರಸಿಂಹರಾಜಪುರ, ಬೇಲೂರು, ಅರಸೀಕೆರೆಯ ಭಾಗಗಳನ್ನೊಳಗೊಂಡಿತ್ತು.

೧೦. ಎಕ ೬, ಪೀರಿಕೆ, ಪು. ೧೫.

೧೧. ಎಕ ೬, ಚಿಕ್ಕಮಗಳೂರು, ೯೯.

೧೨. ಎಕ ೬, ಚಿಕ್ಕಮಗಳೂರು, ೧೦೦.

೧೩. ಎಕ ೧೨, ಚಿಕ್ಕನಾಯಕನಹಳ್ಳಿ, ೩೫.

೧೪. ಎಕ ೧೨, ಚಿಕ್ಕನಾಯಕನಹಳ್ಳಿ, ೩೫.

೧೫. ಎಕ ೬, ಚಿಕ್ಕಮಗಳೂರು, ೯೯.

೧೬. ಎಕ ೬, ಚಿಕ್ಕಮಗಳೂರು, ೨೯.

೧೭. ಎಕ ೫, ಬೇಲೂರು, ೧೭೧.

೧೮. ಡೆರೆಟ್, ದಿ ಹೊಯ್ಸಳಾಸ್, ಪು. ೧೨, ೪೨.

೧೯. ಎಕ ೧೨, ಚಿಕ್ಕನಾಯಕನಹಳ್ಳಿ, ೩೫.

೨೦. ಎಂ.ಎ.ಆರ್. ೧೯೨೫, ಪು. ೪೦.

೨೧. ಕೊಯಿಲೋ, ಹೊಯ್ಸಳ ವಂಶ, ಪು. ೮೫.

೨೨. ಡೆರೆಟ್, ದಿ ಹೊಯ್ಸಳಾಸ್ ಪು. ೪೬.

೨೩. ದಿನಕರ ದೇಸಾಯಿ, ಮಹಾಮಂಡಲೇಶ್ವರಾಸ್ ಅಂಡರ್ ಚಾಲುಕ್ಯಾಸ್, ಪು. ೨೩೫.

## ಆಕರ ಗ್ರಂಥಗಳು


೧. ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ (ಹಳೆಯ).

೨. ಎಂ.ಎ.ಆರ್. ೧೯೨೫.

೩. ಡೆರೆಟ್, ದಿ ಹೊಯ್ಸಳಾಸ್.

೪. ಕೊಯಿಲೋ, ಹೊಯ್ಸಳ ವಂಶ.

# ಚಾರಿತ್ರಿಕ ಮಹತ್ವದ "ಮಣಿನಾಗರ"

ಬಸವರಾಜ.ವೀ.ಖೋತ*

ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲ್ಲೂಕಿನ ಕೆರೂರ ಹೋಬಳಿಗೆ ಸೇರಿದ 'ಮಣಿನಾಗರ' ಎಂಬ ಗ್ರಾಮ ಚಾರಿತ್ರಿಕ ದೃಷ್ಟಿಯಿಂದ ಮಹತ್ವವದ್ದಾಗಿದೆ. ತಾಲ್ಲೂಕು ಕೇಂದ್ರದಿಂದ ಉತ್ತರ ದಿಕ್ಕಿಗೆ ೧೬ ಕಿ.ಮೀ. ದೂರದಲ್ಲಿರುವ 'ಮಣಿನಾಗರ'ವನ್ನು ಶಾಸನಗಳಲ್ಲಿ ಮಣಿನಾಗ[೧], ಮಣಿನಾಗಕಂಬ[೨], ಮಣಿಂಗನಾಗರ[೩] ವೆಂದು ಪ್ರಸ್ತಾಪಿಸಲಾಗಿದ್ದು, ಚಾಲುಕ್ಯರ ಕಾಲದಿಂದ ವಿಜಯನಗರದ ಕಾಲದವರೆಗಿನ ಅವಧಿಯಲ್ಲಿ ಮಹತ್ವದ ಪಾತ್ರವಹಿಸಿತ್ತು.

'ಮಣಿನಾಗರ' ಗ್ರಾಮನಾಮವು 'ಮಣಿನಾಗಕಂಬ'ವೆಂಬ ವೀರನ ಹೆಸರಿನಿಂದ ನಿಷ್ಪತ್ತಿಗೊಂಡಿರುವದು ಕ್ರಿ.ಶ. ೬ನೇ ಶತಮಾನದ ಬಾದಾಮಿ[೪] ಮತ್ತು ಪಟ್ಟದಕಲ್ಲಿನ[೫]ನ ಶಾಸನಗಳಿಂದ ತಿಳಿದು ಬರುತ್ತದೆ. ಸ್ಥಳೀಯ ಐತಿಹ್ಯ ಪ್ರಕಾರ ಸರ್ಪಗಳ ಸಂಖ್ಯೆ ಹೆಚ್ಚು ಇರುವದರಿಂದ ಈ ಗ್ರಾಮಕ್ಕೆ 'ಮಣಿನಾಗರಪುರ[೬]'ವೆಂದು ಗ್ರಾಮನಾಮ ಬರಲು ಕಾರಣವಾಯಿತು. 'ಮಣಿನಾಗರ' ಗ್ರಾಮನಾಮವನ್ನು ವ್ಯಕ್ತಿವಾಚಕ ಹಾಗೂ ದೈವೀವಾಚಕ ಎರಡೂ ರೀತಿಯಿಂದ ವ್ಯಕ್ತವಾಗುತ್ತದೆ.

ಚಾರಿತ್ರಿಕ ದೃಷ್ಟಿಯಿಂದ ಅವಲೋಕಿಸಿದಾಗ 'ಮಣಿನಾಗರ' ಗ್ರಾಮದ ಉಲ್ಲೇಖಗಳು ಕ್ರಿ.ಶ. ೧೫-೧೬ನೇ ಶತಮಾನದ 'ಮಣಿನಾಗರ'ವೆಂದು, ಬೇಲೂರ ನಾಯಕರು ಮಣಿನಾಗರ ಗ್ರಾಮದವರು ಎಂಬುದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಬೇಲೂರ ನಾಯಕರ ಮನೆತನದ ಉಗಮಕ್ಕೆ ಕಾರಣವಾದ ಈ ಗ್ರಾಮನಾಮವು ಐತಿಹಾಸಿಕ ಮಹತ್ವ ಪಡೆದುಕೊಳ್ಳುತ್ತದೆ.

ವಿಜಯನಗರ ಅರಸರ ಅವನತಿಯ ನಂತರದ ಕಾಲದಲ್ಲಿ ಅಲ್ಲಲ್ಲಿ ಸ್ವತಂತ್ರ ಪಾಳೆಗಾರರು ಉಗಮಗೊಂಡು ಹಲವಾರು ಪಾಳೆಗಾರಿಕೆ ಸಂಸ್ಥಾನಗಳು ಅಸ್ತಿತ್ವಕ್ಕೆ ಬಂದವು. ಅವುಗಳಲ್ಲಿ ಬೇಲೂರ ನಾಯಕರ ಪಾತ್ರ ಕೂಡ ಮಹತ್ವದ್ದಾಗಿದೆ. ವಿಜಯನಗರದ ಕೃಷ್ಣದೇವರಾಯನ ಕಾಲಕ್ಕೆ ಸಂಬಂಧಿಸಿದಂತೆ ಆದಿಲ್‌ಷಾಹಿಗಳ ದಾಳಿಗಳನ್ನು ತಡೆಗಟ್ಟುವಗೋಸ್ಕರ ಸಾಮ್ರಾಜ್ಯದ ಆಡಳಿತವನ್ನು ಪ್ರಾಂತಗಳನ್ನಾಗಿ ವಿಂಗಡಿಸಿ, ಹಲವು ವಿಶ್ವಾಸ ಹೊಂದಿದ ಮಾಂಡಲಿಕರಿಗೆ ವಂಶಪಾರಂಪರ್ಯವಾಗಿ ನೋಡಿಕೊಂಡು ಹೋಗಲು ನಾಯಕತ್ವವನ್ನು ವಹಿಸಿ ಕೊಟ್ಟದ್ದು ಇತಿಹಾಸದಿಂದ ತಿಳಿದು ಬರುತ್ತದೆ.

ಐಗೂರು ನಾಯಕರು, ಹೊಳೇನರಸಿಪುರ ಪ್ರಭುಗಳು, ಬೇಲೂರ ನಾಯಕರು ಎಂದು ಕರೆಯಿಸಿಕೊಳ್ಳುವ ನಾಯಕ ಪ್ರಭುಗಳನ್ನು 'ಬೇಲೂರ ನಾಯಕರು'ವೆಂದು ಕರೆದುಕೊಂಡಿದ್ದಾರೆ. ಇವರ ಇತಿಹಾಸ ವಿಜಯನಗರದ ಕೃಷ್ಣದೇವರಾಯನ ಆಡಳಿತಕ್ಕೆ ಒಳಪಡುವುದಕ್ಕಿಂತ ಮುಂಚಿತವಾಗಿಯೇ ಸಿಂಧನಾಡಿನ ಬಾಗಡೆಗೆ-೭೦ರ ಆಡಳಿತಕ್ಕೆ ಒಳಪಟ್ಟಿತ್ತು ಎಂಬುದು ಬಾದಾಮಿ (ಶಾ.ಸಂ. ೪೦೦) ಮತ್ತು ಪಟ್ಟದಕಲ್ಲಿನ (ಶಾ.ಸಂ. ೧೦೬) ಶಾಸನಗಳಿಂದ ತಿಳಿದು ಬರುತ್ತದೆ.

ವಿಜಯನಗರ ಕಾಲದಲ್ಲಿನ ಮಣಿನಾಗರಕ್ಕೆ ಸಂಬಂಧಿಸಿದಂತೆ ಬೇಲೂರು ನಾಯಕರಾದ ತಿಮ್ಮಪ್ಪನಾಯಕ, ಬಯ್ಯಪ್ಪ ನಾಯಕ, ಎರಕೃಷ್ಣನಾಯಕ, ಮೂರನೆಯ ಕೃಷ್ಣಪ್ಪನಾಯಕ ಮುಂತಾದ ನಾಯಕರ ವಂಶಜರು ಮೂಲತಃ 'ಮಣಿನಾಗರ' ಗ್ರಾಮಕ್ಕೆ ಸೇರಿದವರು ಎಂಬುದು ಅವರ ಬಿರುದು ಮತ್ತು ವಂಶಾವಳಿಯಿಂದ ತಿಳಿದು ಬರುತ್ತದೆ. ಮೊದಲು ಸ್ಥಳೀಯರಾಗಿದ್ದು, ವಿಜಯನಗರ ಅವನತಿಯಿಂದಾಗಿ ಬೇಲೂರ ಪ್ರಾಂತವನ್ನು ಸ್ವತಂತ್ರವಾಗಿ ಆಳಲಾರಂಭಿಸಿದರು. ವಿಜಯನಗರದ ದೊರೆ ಕೃಷ್ಣದೇವರಾಯನ ಕಾಲಕ್ಕೆ ಬರೀದಷಾಹಿ ಅರಸನ ಮೇಲೆ ದಂಡೆತ್ತಿ ಹೋಗಿ ಅವನ ಸರ್ವಸಂಪತ್ತನ್ನು ರಾಜ್ಯವನ್ನು ಕೊಂಡದ್ದು 'ಕೆಳದಿ ನೃಪ ವಿಜಯ' ಗ್ರಂಥದಿಂದಲೂ ತಿಳಿದು ಬರುತ್ತದೆ. ವಿಜಯನಗರದ ಕೃಷ್ಣದೇವರಾಯನ ಸೈನ್ಯದಲ್ಲಿ ಕೆಳದಿ ನಾಯಕರಿದ್ದಂತೆ ಸದಾಶಿವರಾಯನ ಆಳ್ವಿಕೆಯಲ್ಲಿ ಹಡಪದ ಯಜಿಕೃಷ್ಣನಾಯಕನ (ಬಾದಾಮಿ ಶಾ.ಸಂ. ೩೮೮) ಸೈನ್ಯವಿತ್ತು. ಬೇಲೂರ ನಾಯಕರ ಮನೆತನದ ರಾಜರುಗಳಲ್ಲಿ ಕೃಷ್ಣನಾಯಕನು ವಿಜಯನಗರ ಅರಸರಿಗೆ ಹೆಚ್ಚು ಆಪ್ತನಾಗಿದ್ದು ತಿಳಿದು ಬರುತ್ತದೆ.

ಹಾಸನ ಜಿಲ್ಲೆಯ ಹೊಳೆನರಸೀಪುರದ ಕಟ್ಟಕರೆಯ ಶ್ರೀಕಂಠಯ್ಯನ ಶಾಸನ (ಕ್ರಿ.ಶ. ೧೫೬೩) ದಲ್ಲಿ ಬೇಲೂರ

* ಕನ್ನಡ ಸ್ನಾತಕೋತ್ತರ ವಿಭಾಗ, ಬಸವೇಶ್ವರ ಕಲಾ ಮಹಾವಿದ್ಯಾಲಯ, ಬಾಗಲಕೋಟೆ, ಮೊ. ೯೧೪೧೬೨೯೯೭೧

ನಾಯಕನಾದ ಕೃಷ್ಣಪ್ಪನಾಯಕನನ್ನು ಉಲ್ಲೇಖಿಸಿ ಕಟ್ಟೆಕೆರೆ ಗ್ರಾಮದಲ್ಲಿ ದಾನ ನೀಡಿದ ವಿವರಗಳಿವೆ. ಇದರಲ್ಲಿ ಗಿರಿಯಪ್ಪ ನಾಯಕರ ಪ್ರಪೌತ್ರ ತಿಮ್ಮಪ್ಪ ನಾಯಕರವರ ಪೌತ್ರರಾದ ಬೈಯಪ್ಪ ನಾಯಕರ ಪುತ್ರರಾದ ಬೈಯಪ್ಪ ನಾಯಕರ ಪುತ್ರ ಮಣಿನಾಗಪುರಾಧೀಶ್ವರ ಎಂದು ಉಕ್ತವಾಗಿದೆ.

ಬೇಲೂರ ನಾಯಕರಾದ "ಬಯ್ಯಪ್ಪನಾಯಕನು ಬಾದಾಮಿ ಕೋಟೆಯನ್ನು ಬಲಪಡಿಸಿದ"[೭] ಪ್ರಸ್ತಾಪ ಮತ್ತು "ಅಚ್ಯುತರಾಯನ ಕಾಲದಲ್ಲಿ ಚಿಕ್ಕ ಚೆನ್ನಪ್ಪನಾಯಕ ಎಂಬಾತನು ಬನದ ಮಹಾ ಮಾಯಿಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದ್ದನ್ನು ಮತ್ತೊಂದು ಶಾಸನವು ಉಲ್ಲೇಖಿಸುತ್ತದೆ.[೮] ದಾಣಕ ಸಿರಿವೂರ (ಡಾಣಕಶಿರೂರ)ವನ್ನು ದಾನ"[೯] ಮಾಡಿದ ವಿವರಗಳು ಲಭ್ಯವಾಗುತ್ತವೆ. ಬೇಲೂರ ನಾಯಕರ ಹೆಚ್ಚಿನ ಶಾಸನಗಳು ದಾನ ಶಾಸನಗಳಾಗಿದ್ದು, ಕೆಲ ಶಾಸನಗಳಲ್ಲಿ ಶ್ರೀರಂಗರಾಯ ಮೊದಲಾದವರ ಪ್ರಸ್ತಾಪವಿದೆ.

ಬೇಲೂರ ನಾಯಕರು ಎಂದು ಕರೆದುಕೊಳ್ಳುವ ಬೇಲೂರಿನ ನಾಯಕರ ಮೂಲ ಪುರುಷರ ರಾಮದಾನ ನಾಯಕ. ಹೊಳೆನರಸೀಪುರ, ಅರಕಲಗೂಡು, ಹಾಸನ, ಆಲೂರು, ಬೇಲೂರ ಮತ್ತು ಸಕಲೇಶಪುರ ಇತ್ಯಾದಿ ತಾಲೂಕುಗಳಲ್ಲಿ ಇದುವರೆಗೆ ಉಲಬ್ಧವಾದ ಸುಮಾರು ೯೫ ಶಾಸನಗಳಿಂದ ಬೇಲೂರ ನಾಯಕರ ವಂಶಾವಳಿಯನ್ನು ರೂಪಿಸಿದ್ದು, ಅವುಗಳಲ್ಲಿ ಹೆಚ್ಚಿನ ಶಾಸನಗಳಲ್ಲಿ 'ಮಣಿನಾಗಪುರವಾಧೀಶ್ವರ'ರೆಂದು ಬಿರುದು ಧರಿಸಿದ್ದು ವ್ಯಕ್ತವಾಗುತ್ತದೆ.

ಬೇಲೂರ ನಾಯಕರಿಗೆ ಸಂಬಂಧಿಸಿದಂತೆ ಹಾಸನ ಜಿಲ್ಲೆಯ ಲಭ್ಯ ಶಾಸನಗಳಲ್ಲಿ ವಿಶೇಷವಾಗಿ 'ಮಣಿನಾಗಪುರವಾಧೀಶ್ವರ' ವೆಂಬುದು ಉಲೇಖವಿದ್ದು, ಅದರಲ್ಲಿ ಬಯ್ಯಪ್ಪನಾಯಕ, ಕೃಷ್ಣಪ್ಪನಾಯಕ ನರಸಿಂಹನಾಯಕ, ವೆಂಕಟಾದ್ರಿನಾಯಕ ಹೀಗೆ ಹಲವು ನಾಯಕರ ಪ್ರಸ್ತಾಪಗಳು ಬಂದಿವೆ. ಇವುಗಳಲ್ಲಿ ತಮ್ಮನ್ನು 'ಮಣಿನಾಗಪುರವಾಧೀಶ್ವರ'ಯೆಂದು ಕರೆದುಕೊಂಡಿರುವುದರಿಂದ ವಿಜಯನಗರ ಆಳ್ವಿಕೆ ಕಾಲದಲ್ಲಿ ಮಣಿನಾಗರ ಪರಿಸರದ ಆಡಳಿತದಲ್ಲಿ ಪ್ರಮುಖ ಪಾತ್ರವಹಿಸಿದ್ದು ತಿಳಿದು ಬರುತ್ತದೆ. ಇವರ "ಪ್ರಸಿದ್ಧವಾದ ಬಿರುದುಗಳೆಂದರೆ (ಹಾಸನ ಜಿಲ್ಲೆ ಶಾ.ಸಂ. ೫೪) ಮಣಿನಾಗಪುರವಾಧೀಶ್ವರ, ಸಿಂಧಗೋವಿಂದ, ಧವಳಾಂಕ ಭೀಮ, ಸೀತಕರಗಂಡ ಮತ್ತು ಬರೀದ ಸಪ್ತಾಂಗ ಹರಣ"[೧೧] ಮುಂತಾದವು.

ಮತ್ತೊಂದು ಮಹತ್ವದ ವಿಷಯವೆಂದರೆ ಬೇಲೂರ ನಾಯಕರು ತಮ್ಮ ಶಾಸನಗಳಲ್ಲಿ ಕಂಡರಿಸಿದ ಬಿರುದುಗಳಲ್ಲಿ ಸಿಂಧಗೋವಿಂದ ಪ್ರಶಸ್ತಿಯು ಮತ್ತಷ್ಟು ಕುತೂಹಲ ಮೂಡಿಸುತ್ತದೆ. ಸಿಂಧರು ಆ ಕಾಲಕ್ಕಾಗಲೇ ಅಸ್ತಿತ್ವವನ್ನು ಕಳೆದುಕೊಂಡಿದ್ದರೂ, ಬೇಲೂರು ನಾಯಕರು 'ಸಿಂಧಗೋವಿಂದ' ಎಂದು ಹೇಳಿಕೊಂಡಿರುವುದರಿಂದ ಮೂಲತಃ 'ಸಿಂಧ' ಮನೆತನದವರೇ ಎಂದು ಸಂದೇಹವುಂಟಾಗುತ್ತದೆ. 'ಸಿಂಧ' ಮನೆತನದ ಮತ್ತೊಂದು ಮುಂದುವರೆದ ಮನೆತನ ಇದಾಗಿರಬಹುದು. ಈ ಎಲ್ಲ ಅಂಶಗಳಿಂದ ಹೆಚ್ಚಿನ ಸಂಶೋಧನೆಗೆ ಎಡೆ ಮಾಡಿಕೊಟ್ಟದ್ದು ಬೇಲೂರು ನಾಯಕರ ಪ್ರಸ್ತಾಪ, ಸಿಂಧ ಮನೆತನಕ್ಕೆ ಸಂಬಂಧಿಸಿದ ವಿಷಯದ ಬಗ್ಗೆ ಹೆಚ್ಚಿನ ಅಧ್ಯಯನ ಮಾಡುವ ಅಗತ್ಯವಿದೆ.

ಹಾಸನ ಜಿಲ್ಲೆಯ ಹೊಳೆನರಸೀಪುರ (ಕ್ರಿ.ಶ. ೧೫೬೩), ಬೇಲೂರು (ಕ್ರಿ.ಶ. ೧೫೪೯), ಬಿಸ್ತಿಹಳ್ಳಿ (ಕ್ರಿ.ಶ. ೧೬೨೮), ಅಚಂಗಿ, ಮಲಪನಹಳ್ಳಿ (ಕ್ರಿ.ಶ. ೧೬೪೫), ಬಿಜಗಟ್ಟಿ (ಕ್ರಿ.ಶ. ೧೬೬೨), ಹೆಬ್ಬಾಲೆ (ಕ್ರಿ.ಶ. ೧೬೬೫), ಕಂಚೇನಹಳ್ಳಿ (ಕ್ರಿ.ಶ. ೧೬೬೫), ಬಸವನಕೊಪ್ಪಲು, ಜೋಡಿಮುತ್ತಿಗೆ, ಸಕಲೇಶಪುರ, ಕೊತ್ತಹಳ್ಳಿ, ಕೃಷ್ಣಾಪುರ, ಸುಂದಕೆರೆಗಳಲ್ಲಿ ದೊರೆತ ಶಾಸನಗಳಿಂದ ಬೇಲೂರ ನಾಯಕರು 'ಮಣಿನಾಗರಪುರವಾಧೀಶ್ವರ' ಎಂಬ ಬಿರುದನ್ನು ಹೊಂದಿದ ವಿಷಯ ಬೆಳಕಿಗೆ ಬರುತ್ತದೆ.

ಒಟ್ಟಾರೆ ಹಾಸನ ಜಿಲ್ಲೆಯ ಬೇಲೂರ ನಾಯಕರ ಮನೆತನ ಮಣಿನಘರದವರು ಎಂದು ತಿಳಿದುಬಂದರೂ ಈ ಕುರಿತು ಇನ್ನೂ ಹೆಚ್ಚಿನ ಅಧ್ಯಯನದ ಅವಶ್ಯಕತೆಯಿದೆ.

## ಅಡಿಟಿಪ್ಪಣಿಗಳು

೧. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ ೯, ಶಾಸನ ಸಂಖ್ಯೆ ೪೦೦, ಪುಟ ೩೪೧.
೨. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ ೯, ಶಾಸನ ಸಂಖ್ಯೆ ೧೦೪, ಪುಟ ೨೨೪.
೩. ಪಾಳೆಗಾರರ ಶಾಸನಗಳು ಸಂಪುಟ ೨, ಸಂ. ಪ್ರೊ. ಕೆ. ಗಂಗಾನಾಯಕ್, ಪು. XII.
೪. ಕರ್ನಾಟಕ ಗ್ರಾಮ ಚರಿತ್ರೆ ಕೋಶ, ಬಾಗಲಕೋಟೆ, ಸಂ. ಪ್ರೊ. ಅಂಬಳಿಕೆ ಹಿರಿಯಣ್ಣ, ಪು. ೨೯೨.
೫. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ ೯, ಶಾಸನ ಸಂಖ್ಯೆ ೪೦೦, ಪು. ೩೪೧.
೬ ಕರ್ನಾಟಕ ಗ್ರಾಮ ಚರಿತ್ರೆ ಕೋಶ, ಬಾಗಲಕೋಟೆಯ ಸಂ.ಪ್ರೊ. ಅಂಬಳಿಕೆ ಹಿರಿಯಣ್ಣ, ಪು. ೨೯೨.
೭. ಬಾಗಲಕೋಟೆ ಜಿಲ್ಲಾ ಸಂಸ್ಕೃತಿ, ಪು. ೨೫.
೮. ಅದೇ – " – "
೯. ಅದೇ – " – "

# ಕುರುಬರ ಕುಟುಂಬ ನಾಮಗಳು

ಎಫ್.ಟಿ. ಹಳ್ಳಿಕೇರಿ*

ಇತ್ತೀಚಿನ ದಶಕಗಳಲ್ಲಿ ನಾಮಶಾಸ್ತ್ರವು ಮಹತ್ವದ ಅಧ್ಯಯನ ಶಿಸ್ತಾಗಿ ರೂಪುಗೊಂಡಿದೆ. ಇದು ಸ್ಥಳನಾಮ ವ್ಯಕ್ತಿನಾಮ ಮತ್ತು ಕುಟುಂಬನಾಮ ಎಂಬ ಮೂರು ಭಾಗಗಳಿವೆ. ಸ್ಥಳನಾಮ ಮತ್ತು ವ್ಯಕ್ತಿನಾಮದ ಬಗ್ಗೆ ವಿಸ್ತೃತವಾದ ಅಧ್ಯಯನಗಳು ನಡೆದಿವೆ. ಆದರೆ ಕುಟುಂಬನಾಮದ ಬಗ್ಗೆ ಹೇಳಿಕೊಳ್ಳುವಷ್ಟು ಅಧ್ಯಯನ ಚರ್ಚೆಗಳು ನಡೆದಿಲ್ಲ. ಆದರೂ ಎಂ.ಎಂ.ಕಲಬುರ್ಗಿ ಅವರು ಕನ್ನಡ ನಾಮವಿಜ್ಞಾನ (೧೯೮೯) ಹೆಸರಿನ ಕೃತಿಯಲ್ಲಿ ಕುಟುಂಬನಾಮ ಎಂಬ ಭಾಗದಲ್ಲಿ ಅವುಗಳ ಬಳಕೆಯ ವಿಧಾನ, ಪ್ರಕಾರ ವೈವಿಧ್ಯತೆ ಹಾಗೂ ಇತರ ಸಂಗತಿಗಳು ಎಂದು ಮೂರು ಬಗೆಗಳಲ್ಲಿ ವಿವೇಚನೆ ಮಾಡಿದ್ದಾರೆ. ಈ ಕೃತಿಯಲ್ಲದೇ ಅಡ್ಡಹೆಸರು (ಮಾರ್ಗ–೨, ಪುಟ ೪೬೭), ವೀರಶೈವ ವರ್ತಕವರ್ಗದ ಅಡ್ಡಹೆಸರುಗಳು (ಮಾರ್ಗ–೨, ಪುಟ ೪೭೬) ಲೇಖನಗಳನ್ನೂ ಪ್ರಕಟಿಸಿದ್ದಾರೆ.

ಮೊದಲು ಕುಟುಂಬನಾಮ ಎಂದರೇನು, ಅದಕ್ಕಿರುವ ಪರ್ಯಾಯ ಹೆಸರುಗಳು, ಅವುಗಳ ಬಳಕೆಯ ವಿಧಾನ, ಪ್ರಕಾರ ವೈವಿಧ್ಯವನ್ನು ಕುರಿತು ಗಮನಿಸೋಣ. ಒಂದು ಮನೆತನ ಅಥವಾ ಕುಟುಂಬದ ಅಸ್ತಿತ್ವವನ್ನು ಪ್ರತ್ಯೇಕವಾಗಿ ಗುರುತಿಸುವಲ್ಲಿ ಕುಟುಂಬನಾಮಗಳು ಬಹುಮುಖ್ಯವಾದ ಪಾತ್ರವಹಿಸುತ್ತವೆ. ಭಾರತದಲ್ಲಿ ಕುಟುಂಬನಾಮಗಳು ಬಹು ಹಿಂದಿನಿಂದಲೂ ಇದ್ದ ಬಗ್ಗೆ ಉಲ್ಲೇಖಗಳು ಸಿಗುತ್ತವೆ. ಮೌರ್ಯ, ಗುಪ್ತ, ಕದಂಬ, ಚಾಲುಕ್ಯ, ಹೊಯ್ಸಳ, ಹಂಡೆ ಮುಂತಾದ ಪ್ರಸಿದ್ಧ ರಾಜಮನೆತನಗಳ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಹಂಡೆ, ಎಂ.ಎಂ.ಕಲಬುರ್ಗಿ ಅವರು ಹೇಳುವಂತೆ "ಒಬ್ಬನನ್ನು ಗುರುತಿಸುವಲ್ಲಿ ಬಳಸುವ ವ್ಯಕ್ತಿನಾಮ, ಪಿತೃನಾಮಗಳಲ್ಲದ ಮೂರನೆಯ ನಾಮವೇ ಕುಟುಂಬನಾಮ" (ನಾಮವಿಜ್ಞಾನ ಪುಟ ೩೭). ಇದಕ್ಕೆ ಅಡ್ಡಹೆಸರು, ಕುಲನಾಮ, ವಂಶನಾಮ, ಮನೆತನದ ಹೆಸರು ಎಂದೂ ಕರೆಯಲಾಗುತ್ತಿದೆ. ಎಂ. ಚಿದಾನಂದಮೂರ್ತಿಯವರು ಕುಲನಾಮ, ವಂಶನಾಮ, ಮನೆತನದ ಹೆಸರು ಎಂದು ಪರ್ಯಾಯವಾಗಿ ಕರೆದಿದ್ದಾರೆ (ಚಿದಾನಂದ ಸಮಗ್ರ ಸಂಪುಟ–೨, ಭಾಷಾವಿಜ್ಞಾನ ಮತ್ತು ಛಂದಸ್ಸು, ಪುಟ ೪೬). ಕರ್ನಾಟಕದ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಭಿನ್ನರೀತಿಯಲ್ಲಿ ಕುಟುಂಬನಾಂಗಳು ಬಳಕೆಯಾಗುತ್ತ ಬಂದಿವೆ. ಮೊದಲನೆಯದು ಉತ್ತರ ಕರ್ನಾಟಕದಲ್ಲಿ ಅಡ್ಡಹೆಸರು ಪ್ರಧಾನ–ಹೆಸರು ಅಪ್ರಧಾನ. ಉದಾ : ಎಂ.ಎಂ. ಕಲಬುರ್ಗಿ. ದಕ್ಷಿಣ ಕರ್ನಾಟಕದಲ್ಲಿ ಅಡ್ಡಹೆಸರು ಅಪ್ರಧಾನ–ಹೆಸರು ಪ್ರಧಾನ, ಉದಾ: ಡಿ.ಎಲ್. ನರಸಿಂಹಾಚಾರ್. ಇನ್ನು ಮೂರನೆಯದಾಗಿ ಅಡ್ಡಹೆಸರು ಪ್ರಧಾನ–ಹೆಸರು ಪ್ರಧಾನ ಪದ್ಧತಿ. ಉದಾ: ಪಾಟೀಲ ಪುಟ್ಟಪ್ಪ, ಕಡಿದಾಳ ಮಂಜಪ್ಪ ಇತ್ಯಾದಿ. ಕರ್ನಾಟಕದಲ್ಲಿ ಪ್ರಚಲಿತದಲ್ಲಿರುವ ಅಡ್ಡಹೆಸರುಗಳನ್ನು ಪ್ರಕಾರ ದೃಷ್ಟಿಯಿಂದ ಗ್ರಾಮನಾಮವಾಚಿ, ವೃತ್ತಿನಾಮವಾಚಿ, ವಸ್ತುನಾಮವಾಚಿ, ಇತರ ನಾಮವಾಚಿ ಎಂದು ನಾಲ್ಕು ಪ್ರಕಾರಗಳಲ್ಲಿ ವಿಂಗಡಿಸಬಹುದು. ಈಗ ನೇರವಾಗಿ ಕುರುಬರ ಕುಟುಂಬನಾಮಗಳ ಸಾಂಸ್ಕೃತಿಕ ಅನನ್ಯತೆಯನ್ನು ಕುರಿತು ಚರ್ಚಿಸುತ್ತೇನೆ.

ಸಾಂಸ್ಕೃತಿಕ–ಚಾರಿತ್ರಿಕ ದೃಷ್ಟಿಯಿಂದ ಕುರುಬ ಸಮುದಾಯ ತುಂಬ ಶ್ರೀಮಂತವಾಗಿದೆ. ಈ ಸಮುದಾಯದ ಕುಟುಂಬನಾಮಗಳು ವೈವಿಧ್ಯತೆ ಮತ್ತು ವೈಶಿಷ್ಟತೆಗಳಿಂದ ಕೂಡಿವೆ. ಕುರುಬರು ಮತ್ತು ಕುರುಬರೇತರ ಸಮುದಾಯಗಳಿಗೆ ಸಾಮಾನ್ಯವಾಗಿರುವ ಅಡ್ಡಹೆಸರುಗಳನ್ನು ಬಿಟ್ಟರೂ ಕುರುಬರಿಗೆ ವಿಶಿಷ್ಟವಾದ ಕೆಲವು ಅಡ್ಡಹೆಸರುಗಳು ರೂಢಿಯಲ್ಲಿವೆ. ಕುರುಬರ, ಕುರಿಯವರ, ಬೀರಣ್ಣನವರ, ಇಟ್ಟಣ್ಣನವರ, ಹಾಲವರ, ಡೊಳ್ಳಿನ, ಕಂಬಳಿ, ಧನಗಾರ, ಪೂಜಾರ, ಒಡೆಯರ, ಗುರುವಿನ ಇತ್ಯಾದಿ ಅಡ್ಡಹೆಸರುಗಳನ್ನು ಕೇಳಿದಾಗ ಕೂಡಲೇ ಆ ವ್ಯಕ್ತಿ ಅಥವಾ ಆ ಮನೆತನ ಕುರುಬ ಸಮುದಾಯದ್ದು ಎಂಬುದು ಸ್ಪಷ್ಟವಾಗಿ ಗುರುತಿಸಬಹುದು. ಪ್ರಾಚೀನ ಕಾಲದಲ್ಲಿಯೂ ಕುರುಬರ ಕುಟುಂಬನಾಮಗಳು ಚಲಾವಣೆಯಲ್ಲಿದ್ದ ಬಗ್ಗೆ ಶಾಸನ ಕಾವ್ಯ ಪುರಾಣ ಮತ್ತು ಚಾರಿತ್ರಿಕ ದಾಖಲೆಗಳು ಮಾಹಿತಿಯನ್ನು ನೀಡುತ್ತವೆ. ಧನಗರ ಕಂಚಿಯಬ್ಬೆ, ಕುರುಬರ ಹಲಗ, ಕುರುಬರ ಕಾಳಯ್ಯ, ವಡೇರ ಸಣ್ಣಸಿದ್ಧಯ್ಯ, ಲಿಂಗಣ್ಣ ಒಡೆಯರ, ಕುರುಬರ ಮುದ್ದಗಾವುಂಡ

* ಪ್ರಾಧ್ಯಾಪಕ, ಹಸ್ತಪ್ರತಿ ಶಾಸ್ತ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ–೫೮೩೨೭೬, ಬಳ್ಳಾರಿ ಜಿಲ್ಲೆ, ಮೊ. ೯೪೪೮೧೮೪೦೨೨.

ಇತ್ಯಾದಿ. ಇಂಥ ಅಡ್ಡಹೆಸರುಗಳ ಬಗ್ಗೆ ಪ್ರತ್ಯೇಕವಾಗಿ ಸಂಶೋಧನೆ-ಅಧ್ಯಯನ ಮಾಡಬಹುದು. ಈವರೆಗೆ ಕುರುಬರ ಕುಟುಂಬನಾಮಗಳ ಬಗ್ಗೆಯಂತೂ ಎಳ್ಳಷ್ಟೂ ಅಧ್ಯಯನ ನಡೆದಿಲ್ಲ. ಆ ಕೊರತೆಯನ್ನು ಹೋಗಲಾಡಿಸಲು ಕುರುಬರ ಕುಟುಂಬನಾಮಗಳ ಸಾಂಸ್ಕೃತಿಕ ಮಹತ್ವವನ್ನು ಪ್ರಸ್ತುತ ಸಂಪ್ರಬಂಧದಲ್ಲಿ ಕುರಿತು ಚರ್ಚಿಸಲಿದ್ದೇನೆ.

ಅಧ್ಯಯನದ ಅನುಕೂಲಕ್ಕಾಗಿ ಕುರುಬರ ಕುಟುಂಬನಾಮಗಳನ್ನು ೧. ವೃತ್ತಿವಾಚಿ ೨. ದೈವವಾಚಿ ೩. ಜನಾಂಗ (ಜಾತಿ) ವಾಚಿ ೪. ವಸ್ತುವಾಚಿ ೫. ಸ್ಥಳವಾಚಿ ಎಂದು ಐದು ಭಾಗಗಳಲ್ಲಿ ವಿಂಗಡಿಸಬಹುದು.

**೧. ವೃತ್ತಿವಾಚಿ**

೧. ಕುರಿ, ಕುರಿಯವರ, ಕುರಿಗಾರ, ಏಳುಕುರಿ, ೨. ಆಡಿನ, ಆಡಿನವರ, ೩. ಡೊಳ್ಳಿನ, ಡೊಳ್ಳಿನವರ, ೪. ಒಡೆಯರ, ಗುರುವಿನ,೫. ಕಂಬಳಿ, ಕಂಬಳಿಯವರ, ೬. ನಾಯ್ಕರ, ಕೆಂಚನಾಯ್ಕರ, ಬಾಲನಾಯ್ಕರ, ಕಿಡೆನಾಯ್ಕರ, ಗೊಂದನಾಯ್ಕರ, ೭. ಈರಗಾರ, ೮. ಚೌಡಿಕೆಯವರ, ೯. ವಾಲೀಕಾರ, ೧೦. ಕುದರಿ, ಕುದುರೆಕಾರ, ೧೧. ಹಾಲವರ, ಹಾಲಿನವರ, ಹಾಲಿಯವರ, ಹಾಲಣ್ಣವರ, ೧೨. ಗೊರವರ, ಗೊರಪ್ಪನವರ, ಗೊರವಪ್ಪನವರ, ೧೩. ವಗ್ಗಯ್ಯನವರ, ವಗ್ಗರ, ವಗ್ಗಿ, ೧೪. ಪೂಜಾರ, ಪೂಜೇರಿ, ಪೂಜ್ಯಾರ, ೧೫. ವಾಲಿಕಾರ.

**೨. ದೈವವಾಚಿ**

೧. ಬೀರಪ್ಪನವರ, ಬೀರಣ್ಣವರ, ಬೀರಣ್ಣನವರ, ಬೀರಗೌಡರ, ಬೀರಗೊಂಡ, ೨. ಮಾಳಪ್ಪನವರ, ಮಾಳವ್ವನವರ, ಮಾಳಾಪುರ, ಮಾಳಣ್ಣವರ, ಮಾಳಕ್ಕನವರ, ೩. ಹುಲ್ಲಪ್ಪನವರ, ಹುಲ್ಲಣ್ಣನವರ, ಹುಲ್ಲನ್ನವರ, ೪. ಗುಡ್ಡಪ್ಪನವರ, ೫. ಇಟ್ಟಣ್ಣವರ, ೬. ಅಮೋಗಿ, ಅಮೋಗಿಮಠ, ಕೆಂಡದಮಠ, ೭. ಜಟ್ಟೆಪ್ಪನವರ, ಜಟ್ಟೆನ್ನವರ, ಜಟಗಣ್ಣವರ, ೮. ಮಾಯಣ್ಣವರ.

**೩. ಜಾತಿ-ಜನಾಂಗ-ಬೆಡಗುವಾಚಿ**

೧. ಸಣ್ಣಕುರುಬರ, ದೊಡ್ಡಕುರುಬರ, ರಿತ್ತಿಕುರುಬರ, ೨. ಧನಗಾರ ೩. ಹಂಡಿ, ಹಂಡೆ, ಹಂಡಿಯವರ, ಹಂಡೆನವರ, ಹಂಡೆಗೌಡ, ೪. ಬನ್ನಿ, ಬನ್ನೆ, ಬನ್ನೆಯವರ, ಬನ್ನೆಪ್ಪನವರ.

**೪. ವಸ್ತುವಾಚಿ**

೧. ಭಂಡಾರ, ಭಂಡಾರದವರ, ೨. ಈಟಿ, ಈಟಿಯವರ, ೩. ಕರಿ, ಕರಿಯವರ, ಕರಿಗಾರ, ಕರಿಯಪ್ಪನವರ, ಕರಿಬಣ್ಣನವರ, ಕರೆಣ್ಣನವರ, ಕರಿಗವಡರ, ೪. ಅಂಬಲಿ, ಅಂಬಲಿಯವರ, ೫. ಹಟ್ಟಿ, ಹಟ್ಟಿಯವರ, ೬. ದಡ್ಡಿ ೭. ಉಣ್ಣಿಯವರ.

**೫. ಸ್ಥಳವಾಚಿ**

ಹೆಗ್ಗನದೊಡ್ಡಿ,

ಇವು ನಾನು ಗಮನಿಸಿದ ಕುರುಬರ ಕುಟುಂಬನಾಮಗಳು. ಇವುಗಳಲ್ಲಿ ಕೆಲವು ಕುಟುಂಬನಾಮಗಳು ಕುತೂಹಲಕಾರಿ ಸಂಗತಿಗಳನ್ನು ತಿಳಿಸುತ್ತವೆ. ಅವುಗಳಲ್ಲಿ ಕೆಲವನ್ನು ಕುರಿತು ಈಗ ವಿವೇಚಿಸಲಾಗಿದೆ.

**೧. ಕುರುಬರ**

ಇದು ಜನಾಂಗವಾಚಿ ಕುಟುಂಬನಾಮ. ಈ ಅಡ್ಡಹೆಸರು ಕೇಳಿದಾಕ್ಷಣ ಕುರುಬ ಸಮುದಾಯದವನು ಎಂಬುದು ಮೇಲ್ನೋಟಕ್ಕೆ ಗೊತ್ತಾಗುತ್ತದೆ. ಈ ಹೆಸರಿನ ಅಡ್ಡಹೆಸರುಗಳು ಕರ್ನಾಟಕದಲ್ಲಿ ಅಧಿಕಪ್ರಮಾಣದಲ್ಲಿ ದೊರಕುತ್ತವೆ. ಪ್ರಾಚೀನ ಶಾಸನ-ಕಾವ್ಯ-ಪುರಾಣ-ದಾಖಲೆಗಳಲ್ಲಿ ಈ ಹೆಸರಿನ ವ್ಯಕ್ತಿಗಳ ಹೆಸರುಗಳು ಹೆಚ್ಚಿನ ಪ್ರಮಾಣದಲ್ಲಿ ದೊರಕುತ್ತವೆ. ಕುರುಬರ ನಾಗಯ್ಯ, ಕುರುಬರ ಕಾಳಯ್ಯ, ಕುರುಬರ ಹಲಗ, ಕುರುಬರ ಸಿದ್ಧೇಶ್ವರ, ಕುರುಬರ ಮುದ್ದುಗಾವುಂಡ ಮುಂತಾದ ಅಡ್ಡಹೆಸರುಗಳನ್ನು ಶಾಸನಗಳಲ್ಲಿ ಕಾಣಬಹುದು. ಹಾಗೆಯೇ ಕುರುಬರ ಸಾಯಿದೇವಯ್ಯ (ಶಿವತತ್ವ ಚಿಂತಾಮಣಿ ಪು. ೪೦೪), ಕುರುಬರ ಮಲ್ಲಿದೇವ (ತಗರ ಪವಾಡ ೬-೩೦),

ಆಧುನಿಕ ಕಾಲದಲ್ಲಿ ಕುರುಬರ, ಹಿರೇಕುರುಬರ, ಸಣ್ಣಕುರುಬರ, ರಿತ್ತಿಕುರುಬರ ಎಂಬ ರೂಪಗಳಲ್ಲಿ ದೊರೆಯುತ್ತವೆ. ಈ ಹೆಸರಿನ ಅಡ್ಡಹೆಸರುಗಳನ್ನು ಅನೇಕ ಮನೆತನದವರು ಹೊಂದಿರುತ್ತಾರೆ. ಹೀಗಾಗಿ ಇಂಥ ಮನೆತನಗಳನ್ನು ಪ್ರತ್ಯೇಕವಾಗಿ

ಗುರುತಿಸಲು ಕುರುಬರ ಎಂಬುದು ಸಣ್ಣಕುರುಬರ, ದೊಡ್ಡಕುರುಬರ, ರಿತ್ತಿಕುರುಬರ ಎಂದು ನಾನಾ ರೀತಿಯಲ್ಲಿ ರೂಢಿಗೆ ಬಂದಿರಬಹುದು.

**೨. ಕುರಿ**

ಕುರುಬರ ಮೂಲ ಉದ್ಯೋಗ ಕುರಿಸಾಕಾಣಿಕೆ, ಅವುಗಳ ಪಾಲನೆ ಪೋಷಣೆ. ಹೀಗಾಗಿ ಒಂದು ಕಾಲಕ್ಕೆ ಯಾವುದೇ ಊರಿನಲ್ಲಿ ಕುರಿಗಳು ಇದ್ದ ಸ್ಥಳವೇ ಕುರುಬರ ಓಣಿಯೆಂದು ಖಚಿತವಾಗಿ ಹೇಳಬಹುದಿತ್ತು. ಹೀಗಾಗಿ ಕುರಿಗಳ ಸಾಕಾಣಿಕೆ ಮಾಡುವ ಮನೆತನವನ್ನು ಕುರಿ, ಕುರಿಯವರ, ಕುರಿಗಾರ, ಏಳ್ಕುರಿ ಮೊದಲಾಗಿ ಕರೆಯಲಾಗುತ್ತಿತ್ತು. ಅದೇ ಹೆಸರು ಕುಟುಂಬನಾಮವಾಗಿ ಈಗಲೂ ಇರುವುದನ್ನು ಗಮನಿಸಬಹುದು. ಕರ್ನಾಟಕದ ಕುರುಬ ಸಮುದಾಯದಲ್ಲಿ ಅತೀಹೆಚ್ಚು ಸಂಖ್ಯೆಯಲ್ಲಿ ಈ ಹೆಸರಿನ ಕುಟುಂಬನಾಮಗಳು ಸಿಗುತ್ತವೆ. ನಾನು ಗಮನಿಸಿದ ಹಾಗೆ ಗದಗ ಹಾವೇರಿ ಜಿಲ್ಲೆಗಳಲ್ಲಿ ಈ ಹೆಸರಿನ ಮನೆತನಗಳು ಕುರುಬರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣಬಹುದು. ಈ ಹೆಸರನ್ನು ಕೇಳಿದಾಕ್ಷಣ ಆತ ಕುರುಬ ಸಮುದಾಯದವನು ಎಂದೂ ತಟ್ಟನೆ ಹೇಳಬಹುದು.

೧೯೧೦ರಲ್ಲಿ ಲಕ್ಷ್ಮೇಶ್ವರದಲ್ಲಿ ನಡೆದ ಹಾಲುಮತ ಧರ್ಮೋತ್ತೇಜಕ ಮಹಾಸಭೆಯಲ್ಲಿ ಭಾಗವಹಿಸಿದ ಕುರುಬ ವ್ಯಕ್ತಿಗಳ ಹೆಸರುಗಳನ್ನು ವರದಿಯಲ್ಲಿ ದಾಖಲಿಸಲಾಗಿದೆ. ಮಾಗಡಿಯ ಕರಿಯಪ್ಪ ಗೂಳಪ್ಪ ಕುರಿ, ಮಲ್ಲಪ್ಪ ಹನುಮಪ್ಪ ಕುರಿ, ಮಾಡಹಳ್ಳಿಯ ಕರಿಯಪ್ಪ ಭೀಮಪ್ಪ ಕುರಿ, ಎಳವತ್ತಿಯ ಫಕೀರಪ್ಪ ರಾಮಪ್ಪ ಕುರಿಯವರ ಇತ್ಯಾದಿ ಹೇಳುತ್ತ ಹೋದರೆ ಒಂದು ದೊಡ್ಡ ಪಟ್ಟಿಯೇ ಬೆಳೆಯುತ್ತದೆ.

**೩. ಒಡೆಯರ**

ಕುರುಬ ಸಮುದಾಯದ ಧಾರ್ಮಿಕ-ಸಾಮಾಜಿಕ ಕ್ಷೇತ್ರದಲ್ಲಿ ಒಡೆಯರ ಪಾತ್ರ ಮಹತ್ವದ್ದಾಗಿದೆ. ಕುರುಬರ ಕುಲಗುರುಗಳಾದ ರೇವಣಸಿದ್ಧೇಶ್ವರ, ಸಿದ್ಧರಾಮೇಶ್ವರ, ಅಮೋಘಸಿದ್ಧೇಶ್ವರ ಅವರ ಪರಂಪರೆಗೆ ಕ್ರಮವಾಗಿ ಶಾಂತೊಡೆಯರು, ಮಂಕೊಡೆಯರು, ಅಮೋಗಿಯವರು  ನೇಮಕವಾದವರು. ಆ ಪರಂಪರೆಯ ವಾರಸುದಾರರಾಗಿ ಒಡೆಯರ, ಗುರುವಿನ, ಗುರುವಿನವರು, ಅಮೋಗಿ, ಮಂಕನವರ  ಇತ್ಯಾದಿ ಹೆಸರಿನ ಮನೆತನದವರು ಈಗಲೂ ಇರುವುದನ್ನು ಗಮನಿಸಬಹುದು. ಇವರು ಆಯಾ ಮಠದ ಗುರುಗಳಾಗಿ ಕುರುಬರಿಗೆ ಮಾರ್ಗದರ್ಶನ ಮಾಡುತ್ತ ಬಂದವರು. ನಾಮಕರಣ, ಮದುವೆ, ಮರಣ, ಹಬ್ಬ-ಹರಿದಿನ, ಆಚರಣೆಗಳಂಥ ಸಂದರ್ಭಗಳಲ್ಲಿ ಒಡೆಯರ ಉಪಸ್ಥಿತಿ ಅಗತ್ಯವಾಗಿದೆ. ಇವರು ಕುರುಬರಿಗೆ ಗುರುಗಳಾಗಿ ನೇಮಕವಾದವರು. ಸಮುದಾಯದಲ್ಲಿ ತಂಟೆ-ತಗಾದೆಗಳು ಬಂದರೆ ಒಡೆಯರ ಸಮಕ್ಷಮದಲ್ಲಿ ಅವುಗಳನ್ನು ಬಗೆಹರಿಸಿ ಕೊಳ್ಳುತ್ತಿದ್ದರು. ಇದಕ್ಕೆ ಶಾಸನ-ಕಾವ್ಯ-ದಾಖಲೆಗಳಲ್ಲಿ ಅನೇಕ ನಿದರ್ಶನಗಳು ಸಿಗುತ್ತವೆ. ಸಿದ್ದಪ್ಪವೊಡೆಯರ, ರೇವಣ್ಣ ವೊಡೆಯರ, ವಡೇರ ಸಣ್ಣಸಿದ್ಧಯ್ಯ ಎಂಬ ಶಾಸನೋಲ್ಲೇಖಗಳಿವೆ.

ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಸರೂರ ಗ್ರಾಮ ಕುರುಬರ ಪ್ರಾಚೀನ ಸಾಂಸ್ಕೃತಿಕ ಕೇಂದ್ರ. ಇಲ್ಲಿ ರೇವಣಸಿದ್ಧ-ಶಾಂತಮುತ್ತಯ್ಯ, ಸಿದ್ಧಮಂಕ-ಮಂಕೊಡೆಯರು ನೆಲೆಸಿದ ಸ್ಥಳ. ಹೀಗಾಗಿ ಒಡೆಯರ ಮನೆತನಗಳಿಗೆ ಹಾಗೂ ಕುರುಬರಿಗೆ ಸರೂರು ಒಂದು ಧಾರ್ಮಿಕ ಕ್ಷೇತ್ರವಾಗಿ ಪ್ರಸಿದ್ಧವಾಗಿದೆ. ಒಡೆಯರಲ್ಲಿ ಕೆಲವರು ಸರವೂರ, ಸರೂರ ಎಂಬ ಕುಟುಂಬನಾಮ ಹೊಂದಿದ್ದನ್ನು ಕಾಣುತ್ತೇವೆ. ಆಧುನಿಕ ಕಾಲದಲ್ಲಿಯೂ ಒಡೆಯರ, ಗುರುವಿನ, ಗುರುವಿನವರು, ಮಂಕನವರು, ಸರವೂರ ಎಂಬ ಕುಟುಂಬನಾಮಗಳು ಕರ್ನಾಟಕದಾದ್ಯಂತ ಕಾಣುತ್ತವೆ. ಸಿದ್ದಯ್ಯ ಒಡೆಯರ, ಚನ್ನಯ್ಯ ಒಡೆಯರ, ಕೊಟ್ರಯ್ಯ ಗುರುವಿನ, ಫಕೀರಯ್ಯ ಸರವೂರ, ಕಲ್ಲಯ್ಯನವರು ಅಮೋಗಿ, ಸಿದ್ಧಯ್ಯ ಗುರುವಿನ, ಇಂಥ ನೂರಾರು ಕುಟುಂಬನಾಮಗಳನ್ನು ಸಂಗ್ರಹಿಸಬಹುದು. ಇನ್ನು ಕೆಲವು ಒಡೆಯರು ತಾವು ಅಧಿಪತಿಗಳಾಗಿದ್ದ ಮಠದ ಹೆಸರನ್ನೇ ತಮ್ಮ ಕುಟುಂಬನಾಮವನ್ನಾಗಿಟ್ಟುಕೊಂಡಿದ್ದಾರೆ. ಉದಾ; ಬಾದಾಮಿ ತಾಲೂಕಿನ ಹಿರೇನಸ್ಸಿ ಗ್ರಾಮದ ಬಸಯ್ಯನವರು ಕಾಡಯ್ಯನಮಠ, ಹಾವೇರಿ ಜಿಲ್ಲೆ ಬಂಕಾಪುರದ ಕೆಂಡದಮಠ, ಕಲಘಟಗಿಯ ಅಮೋಘಿಮಠ ಇತ್ಯಾದಿ. ಹೀಗೆ ಕುರುಬರ ಮಠಗಳಿಗೆ ಗುರುಗಳಾಗಿದ್ದುಕೊಂಡು ಕುರುಬಕುಟುಂಬಗಳಿಗೆ ಮಾರ್ಗದರ್ಶನ ಮಾಡುವಲ್ಲಿ, ಕಳೆದ ಶತಮಾನದಲ್ಲಿ ಹಾಲುಮತ ಧಾರ್ಮಿಕ ಮಹಾಸಭೆಗಳನ್ನು ಆಯೋಜಿಸುವುದರ ಮೂಲಕ ಕುರುಬ ಸಮುದಾಯದ ಬೆಳವಣಿಗೆಯಲ್ಲಿ ಒಡೆಯರ ಕೊಡುಗೆ ಬಹುದೊಡ್ಡದು. ಹೀಗಾಗಿ ಕುರುಬರ ಕುಟುಂಬನಾಮಗಳಲ್ಲಿ ಒಡೆಯರ ಎಂಬುದು ಪ್ರಸಿದ್ಧವಾದ ಮನೆತನವೆಂದೇ ಹೇಳಬೇಕು.

### ೪. ಹಂಡೆ

ಕುರುಬರ ಅರಸುಮನೆತನಗಳಲ್ಲಿ ಹಂಡೆ ಮನೆತನವೂ ಒಂದು. ವಿಜಯನಗರೋತ್ತರ ಕಾಲದಲ್ಲಿ ಬಳ್ಳಾರಿ, ಬಂಕಾಪುರ, ಅನಂತಪುರಗಳನ್ನು ಮುಖ್ಯಕೇಂದ್ರವನ್ನಾಗಿ ಮಾಡಿಕೊಂಡು ರಾಜ್ಯಭಾರ ಮಾಡಿದ ಮನೆತನವಿದು. ಈ ಮನೆತನದಲ್ಲಿ ಹಂಡೆ ಹನುಮಪ್ಪನಾಯಕನು ಪ್ರಸಿದ್ಧ ವ್ಯಕ್ತಿ. ಶಾಸನಗಳಲ್ಲಿ ಹಂಡೆ ದನಗರ ತಿಮ್ಮರಾವುತ, ಮಲಕಂಣ ಹಂಡೆಗೌಡ ಎಂಬ ಕುಟುಂಬನಾಮಗಳಿವೆ. ಆಧುನಿಕ ಕಾಲದಲ್ಲಿ ಬಂಕಾಪುರದ ಬಾಬುರಾವ ಹಂಡೆ, ನಾದಿಗಟ್ಟಿಯ ರಾಮಪ್ಪ ಹುಲ್ಲಪ್ಪ ಹಂಡಿ, ನಾವಳ್ಳಿ ಗ್ರಾಮದ ರಾಮಪ್ಪ ಹಂಡಿ ಇತ್ಯಾದಿ.

ಬಂಕಾಪುರದಲ್ಲಿ ಹಂಡೆ ಹೆಸರಿನ ಮನೆತನ ಪ್ರಸಿದ್ಧವಾದುದು. ಈ ಹಿಂದೆ ಆಳ್ವಿಕೆ ಮಾಡಿದ ಹಂಡೆ ಹನುಮಪ್ಪನಾಯಕನ ವಂಶಸ್ಥರು ಈಗಲೂ ಇಲ್ಲಿ ಕಾಣಬಹುದು. ಹಂಡೆ ಹನುಮಪ್ಪನಾಯಕ, ಹಂಡೆ ರಾಮಪ್ಪನಾಯಕ, ಹಂಡೆ ಮಲುಕಪ್ಪನಾಯಕ ಮುಂತಾದ ಹೆಸರುಗಳಲ್ಲಿ ಬರುವ ಹಂಡೆ ಪದವು ಕುಟುಂಬನಾಮವನ್ನು ಸೂಚಿಸುತ್ತದೆ.

### ೫. ಕಂಬಳಿ

ಕುರುಬರ ಪ್ರಾಚೀನ ಉದ್ಯೋಗಗಳಲ್ಲಿ ಕಂಬಳಿ ತಯಾರಿಕೆಯೂ ಒಂದು. ಕುರಿಯ ಉಣ್ಣೆಯಿಂದ ತಯಾರಿಸಿದ ಈ ಕಂಬಳಿ ಚಳಿಗಾಲದಲ್ಲಿ ಮನುಷ್ಯನನ್ನು ಬೆಚ್ಚಗೆ ಇಡುತ್ತದೆ. ಹಾಗೆಯೇ ಮನೆಯಲ್ಲಿ ಯಾವುದೇ ಕಾರ್ಯಕ್ರಮ ನಡೆದರೂ ಕಂಬಳಿ ಬೇಕೆಬೇಕು. ಹೀಗಾಗಿ ಈ ವೃತ್ತಿಯನ್ನು ಮಾಡುತ್ತಿದ್ದ ಕೆಲವು ಕುರುಬ ಮನೆತನಗಳಿಗೆ ಕಂಬಳಿ ಎಂಬ ಹೆಸರು ಬಂದಿದೆ. ಕರಿ ಅಂದರೆ ಕುರಿಯ ಉಣ್ಣೆ. ಇದರಿಂದ ತಯಾರಿಸಿದುದು ಕಂಬಳಿ. ಹೀಗಾಗಿ ಕರಿ, ಕರಿಯವರ, ಕರಿಗಾರ ಎಂಬ ಕುಟುಂಬನಾಮಗಳು ಈ ಸಮುದಾಯದಲ್ಲಿವೆ. ತಗರ ಪವಾಡ ಕೃತಿಯಲ್ಲಿ ಕರಿಯ ತಿಮ್ಮೇಗೌಡ (೬-೪೨) ಎಂಬ ಉಲ್ಲೇಖವಿದೆ.

ಆಧುನಿಕ ಕಾಲದಲ್ಲಿಯಂತೂ ಕುರುಬರಲ್ಲಿ ಕಂಬಳಿ ಹೆಸರಿನ ಮನೆತನಗಳಿವೆ. ಉದಾ:ಅಬ್ಬಿಗೇರಿಯ ಮಹಾದೇವಪ್ಪ ಕಂಬಳಿ, ಯಲಬುರ್ಗಾದ ಲೇಖಕ ಈರಪ್ಪ ಕಂಬಳಿ, ನಾವಳ್ಳಿಯ ಮಲ್ಲಿಕಾರ್ಜುನ ಕಂಬಳಿ, ಹಿಟ್ನಾಳದ ಕಂಬಳಿ ರಾಮಣ್ಣ, ಗಂಗಾವತಿಯ ನಿಂಗಪ್ಪ ಕಂಬಳಿ, ಕೊಪ್ಪಳದ ಸುರೇಶ ಕಂಬಳಿ ಮುಂತಾದವರನ್ನು ಇಲ್ಲಿ ಉಲ್ಲೇಖಿಸಬಹುದು.

### ೬. ಡೊಳ್ಳಿನ

ಡೊಳ್ಳು ಕುರುಬ ಸಮುದಾಯದ ಒಂದು ಪ್ರಸಿದ್ಧ ಜಾನಪದ ಕಲೆ. ಕುರುಬರ ಓಣಿಗಳಲ್ಲಿ, ಅಲ್ಲಿನ ಬೀರಪ್ಪನ ಗುಡಿಗಳಿದ್ದಲ್ಲಿ ಡೊಳ್ಳುಗಳ ನಿನಾದ ಇದ್ದೇ ಇರುತ್ತದೆ. ಹೀಗಾಗಿ ಈ ಕಲೆಯಲ್ಲಿ ನಿಪುಣರಾದವರ ಮನೆತನಕ್ಕೆ ಡೊಳ್ಳಿನ, ಡೊಳ್ಳಿನವರು ಎಂಬ ಕುಟುಂಬನಾಮಗಳು ಬಹುಹಿಂದಿನಿಂದಲೂ ಇರುವುದನ್ನು ಕಾಣುತ್ತೇವೆ.

ಆಧುನಿಕ ಕಾಲದಲ್ಲಿ ಈ ಹೆಸರಿನ ಮನೆತನಗಳು ಇವೆ. ಉದಾ: ಹೊಂಬಳದ ಆನಂದ ಡೊಳ್ಳಿನ, ಯಲಬುರ್ಗದ ಬಸವರಾಜ ಡೊಳ್ಳಿನ, ಕೊಪ್ಪಳದ ಮಂಜುನಾಥ ಡೊಳ್ಳಿನ ಇತ್ಯಾದಿ.

### ೭. ಬೀರಪ್ಪನವರ

ಕುರುಬರ ಪರಮ ಆರಾಧ್ಯ ದೈವ ಬೀರದೇವರು. ಈತನನ್ನು ಬೀರಲಿಂಗೇಶ್ವರ, ಬೀರಪ್ಪದೇವರು ಎಂದು ಕರೆಯಲಾಗುತ್ತದೆ. ಕುರುಬರು ವಾಸವಿದ್ದ ಓಣಿಗಳಲ್ಲಿ ಕೇರಿಗಳಲ್ಲಿ ಊರುಗಳಲ್ಲಿ ಬೀರದೇವರ ಗುಡಿ ಗದ್ದುಗೆಗಳಿರುವುದು ಸರ್ವೇ ಸಾಮಾನ್ಯ. ಪ್ರತಿವರ್ಷ ಬೀರದೇವರ ಉತ್ಸವ ಜಾತ್ರೆ ಪಲ್ಲಕ್ಕಿ ಮೆರವಣಿಗೆ ಅದ್ದೂರಿಯಾಗಿ ನಡೆಸಲಾಗುತ್ತದೆ. ಅಷ್ಟೊಂದು ಭಕ್ತಿಯಿಂದ ಬೀರದೇವರನ್ನು ಆಚರಿಸುವ ಪದ್ದತಿ ಈಗಲೂ ಇದೆ. ಹೀಗಾಗಿ ಕುರುಬರಲ್ಲಿ ಬೀರಪ್ಪನವರ, ಬೀರಣ್ಣನವರ, ಬೀರೇಗೌಡರ, ಬೀರಪ್ಪಗೌಡರ ಹೆಸರಿನ ಕುಟುಂಬನಾಮಗಳು ಕಂಡುಬರುತ್ತವೆ.

### ೮. ಹುಲ್ಲಪ್ಪನವರ

ಹುಲ್ಲಪ್ಪ-ಚಂದಪ್ಪ, ಕುರುಬರ ಜೋಡಿ ದೈವಗಳು, ಹುನಗುಂದ ತಾಲೂಕಿನ ಗುಡೂರು ಹುಲ್ಲಪ್ಪನ ನೆಲೆ, ಕುಷ್ಟಗಿ ತಾಲೂಕಿನ ಹನಮ ಸಾಗರದ ಹತ್ತಿರವಿರುವ ಬೆಟ್ಟ ಚಂದಪ್ಪನ ನೆಲೆ. ಚಂದಪ್ಪ, ಆತನ ಮಗ ಹುಲ್ಲಪ್ಪ ಇಬ್ಬರೂ ವೀರರು. ಇವರಲ್ಲಿ ಹುಲ್ಲಪ್ಪ ಜನಪ್ರಿಯ ದೇವರು. ಹೀಗಾಗಿ ಹುಲ್ಲನ್ನವರ, ಹುಲ್ಲಪ್ಪನವರ ಹೆಸರಿನ ಕುಟುಂಬನಾಮಗಳು ಕುರುಬರಲ್ಲಿ ಇರುವುದನ್ನು ಈಗಲೂ ಗುರುತಿಸಬಹುದು. ಅಣ್ಣಿಗೇರಿ ತಾಲೂಕಿನ ತುಪ್ಪದಕುರಹಟ್ಟಿಯಲ್ಲಿ ಹುಲ್ಲನ್ನವರ ಹೆಸರಿನ ಕುಟುಂಬಗಳಿವೆ.

ಆ ಕುಟುಂಬದಲ್ಲಿ ಹುಲ್ಲಪ್ಪ ಹೆಸರಿನ ವ್ಯಕ್ತಿಗಳು ಇದ್ದಾರೆ. ಅಷ್ಟೇ ಏಕೆ ಆ ಊರಿನಲ್ಲಿ ಹುಲ್ಲಪ್ಪನ ಗುಡಿ ಮತ್ತು ಗದ್ದುಗೆ ಇರುವುದನ್ನು ಗಮನಿಸಬೇಕು.

### ೯. ಮುದಿಯಪ್ಪನವರ

ಕುರುಬರ ಮೂಲಪುರುಷರಲ್ಲಿ ಮುದ್ದಪ್ಪ ಮತ್ತು ಮುದ್ದವ್ವ ಪ್ರಮುಖರು. ಇವರಿಬ್ಬರು ಶಿವ–ಪಾರ್ವತಿಯರ ಅವತಾರವೆಂಬ ಐತಿಹ್ಯಗಳು ಹಾಲುಮತ ಪುರಾಣಗಳಲ್ಲಿವೆ. ಮುದಿಯಪ್ಪ, ಮುದ್ದೇಗೌಡ, ಮುದಿಮಲ್ಲಪ್ಪ ಹೆಸರಿನ ವ್ಯಕ್ತಿಗಳು ಮತ್ತು ಮುದಿಯಜ್ಜನವರ, ಮುದ್ದೆಪ್ಪನವರ, ಮುದಿಯಪ್ಪನವರ ಹೆಸರಿನ ಕುಟುಂಬನಾಮಗಳು ಕುರುಬರಲ್ಲಿವೆ.

### ೧೦. ನಾಯ್ಕರ

ನಾಯ್ಕರ, ಕಿಡೆನಾಯ್ಕರ, ಹುಲಿನಾಯ್ಕರ, ಕೆಂಚನಾಯ್ಕರ ಹೆಸರಿನ ಕುಟುಂಬನಾಮಗಳು ಕುರುಬ ಸಮಾಜದಲ್ಲಿವೆ. ಸಮುದಾಯದ ಮುಖಂಡ ಅಥವಾ ಮುಖ್ಯಸ್ಥನಿಗೆ ನಾಯಕ ಎಂದು ಕರೆಯಲಾಗುತ್ತದೆ. ಹೀಗಾಗಿ ಕುರುಬರಲ್ಲಿ ನಾಯಕ, ನಾಯ್ಕರ ಹೆಸರಿನ ಕುಟುಂಬನಾಮಗಳು ಕಾಣಸಿಗುತ್ತವೆ. ಪ್ರಸಿದ್ಧ ರಾಜಕಾರಿಣಿಯಾಗಿದ್ದ ಧಾರವಾಡದ ಡಿ.ಕೆ. ನಾಯ್ಕರ, ತುಮಕೂರಿನ ಪ್ರಖ್ಯಾತ ವೈದ್ಯರಾದ ಡಾ. ಎಂ.ಆರ್. ಹುಲಿನಾಯ್ಕರ ಮುಂತಾದ ಕುಟುಂಬನಾಮಗಳನ್ನು ಉಲ್ಲೇಖಿಸಬಹುದು.

### ಆಯ್ದ ಕೆಲವು ವಿಶೇಷ ಕುಟುಂಬ ನಾಮಗಳು

ಬೀರಣ್ಣವರ, ಹುಲ್ಲಣ್ಣವರ, ಕುರಿ, ಕುರಿಯವರ, ಕುರಿಗಾರ, ಜಟ್ಟೆಣ್ಣವರ, ಕುರುಬರ, ಹಾಲವರ, ಹಂಡೆ, ಹಂಡೆಯವರ, ನಾಯ್ಕರ, ಬೀರಗೌಡರ, ಹಟ್ಟಿಯವರ, ದನಗಾರ, ಧನಗರ, ಆಡಿನವರ, ಡೊಳ್ಳಿನ, ಒಡೆಯರ, ಗುರುವಿನ, ಅಂಬಲಿಯವರ, ಪಿಡಗಣ್ಣವರ, ಬನಪ್ಪನವರ, ಇಟ್ಟಣ್ಣವರ, ಇಟ್ಟಪ್ಪನವರ, ಜೋಗಿನ, ಮೈಲಾರದ, ಅಮೋಗಿಮಠ, ಕೆಂಡದಮಠ, ಪಿಡ್ಡಿ, ಮುತ್ತಣ್ಣವರ, ಹುಲಿನಾಯ್ಕರ, ಕೊಂತೆಪ್ಪನವರ, ಹುಲ್ಲನ್ನವರ, ಹುಲ್ಲಪ್ಪನವರ, ಕಂಬಳಿ, ಕಂಬಳಿಯವರ, ಲಕ್ಕಣ್ಣವರ, ಲಕ್ಕಪ್ಪನವರ, ಲಕ್ಕನಗೌಡ್ರ, ಏಳ್ಕುರಿ, ವಾಲಿಕಾರ, ಕೋಲ್ಕಾರ, ಈರಗಾರ, ಭಂಡಾರಿ, ಬಿಲ್ಲರ, ಮಾಳಪ್ಪನವರ, ಮಾಳವ್ವನವರ, ಕಂಬಳಿ, ಕಂಬಳಿಯವರ, ಕುರಿ, ಕುರಿಯವರ, ಕುರಿಗಾರ, ಕರಿಯವರ, ಕರಿಗಾರ.

ಹೀಗೆ ಕುರುಬರ ಕುಟುಂಬ ನಾಮಗಳ ಪಟ್ಟಿಯನ್ನು ಬೆಳೆಸುತ್ತ ಹೋಗಬಹುದು. ಇಂಥ ವಿಷಯಗಳು ಸಂಶೋಧನ ಕ್ಷೇತ್ರದಲ್ಲಿ ಉಪೇಕ್ಷೆಗೆ ಒಳಗಾಗಿವೆ. ಈ ಬಗ್ಗೆ ಇನ್ನೂ ವಿಸ್ತಾರವಾದ ಅಧ್ಯಯನ ಮಾಡಲು ಅವಕಾಶಗಳಿವೆ.



## ಆಕರ ಗ್ರಂಥಗಳು


೧. ಎಂ.ಎಂ. ಕಲಬುರ್ಗಿ, ಕನ್ನಡ ನಾಮವಿಜ್ಞಾನ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೪.

೨. ಎಂ. ಚಿದಾನಂದಮೂರ್ತಿ, ಚಿದಾನಂದ ಸಂಪುಟ–೨, ಸಪ್ನಬುಕ್ ಹೌಸ್, ಬೆಂಗಳೂರು.

೩. ಎಫ್.ಟಿ. ಹಳ್ಳಿಕೇರಿ, ಹಾಲುಮತ ಸಂಸ್ಕೃತಿ–೧, ವಿಕಾಸ ಪ್ರಕಾಶನ, ಹೊಸಪೇಟೆ, ೨೦೧೧.

೪. ಎಸ್. ಬಸಪ್ಪ (ಸಂ), ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೫. ಎಫ್.ಟಿ. ಹಳ್ಳಿಕೇರಿ (ಸಂ), ಹಾಲುಮತ ಮಹಾಸಭೆ: ವರದಿಗಳು ಮತ್ತು ಭಾಷಣಗಳು, ವಿಕಾಸ ಪ್ರಕಾಶನ, ಹೊಸಪೇಟೆ, ೨೦೦೯.

೬. ಎಂ.ಎಂ. ಕಲಬುರ್ಗಿ, ಸಿ.ಕೆ. ಪರಶುರಾಮಯ್ಯ, ಎಫ್.ಟಿ. ಹಳ್ಳಿಕೇರಿ (ಸಂ), ತಗರ ಪವಾಡ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪.

೭. ಎಂ.ಎಂ. ಕಲಬುರ್ಗಿ, ವೈ.ಸಿ. ಬಾನುಮತಿ (ಸಂ), ಸಿದ್ಧಮಂಕ ಚರಿತೆ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೨೦೦೪.

# ಹಂಪಿ ಪರಿಸರದಲ್ಲಿ ಮುಸ್ಲಿಮರ ಶಾಸನ

**ಹೆಚ್.ಎಸ್. ಅಕ್ತರ್ ಖಾನಂ***

**ದ**ಕ್ಷಿಣ ಭಾರತದ ವ್ಯಾಪ್ತಿಯಲ್ಲಿ ಕಂಡುಬರುವ ವಿಜಯನಗರ ಚರಿತ್ರೆಯನ್ನು ಇಂದು ನಾವು ಹಲವು ಆಯಾಮಗಳ ಮೂಲಕ ಅಧ್ಯಯನವನ್ನು ಕೈಗೊಳ್ಳಬಹುದು. ಈ ಸಾಮ್ರಾಜ್ಯದ ಚರಿತ್ರೆಯನ್ನು ಅಧ್ಯಯನ ಮಾಡಲು ಲಭ್ಯವಿರುವ ಆಕಾರಗಳನ್ನು ಪುನರ್‌ಪರಿಶೀಲಿಸಿದಾಗ ಅಲ್ಲಿ ಕಂಡು ಬರುವ ಹೊಸ ವಿಷಯಗಳನ್ನು ಗುರುತಿಸಬಹುದು. ಮಧ್ಯಕಾಲೀನ ಯುಗದಲ್ಲಿ ವಿಜಯನಗರ ಸಾಮ್ರಾಜ್ಯವು ಹಲವು ಕಾರಣಗಳಿಗಾಗಿ ವೈಶಿಷ್ಟಪೂರ್ಣವಾದ ರಾಜ್ಯವಾಗಿತ್ತು. ಇದಕ್ಕೆ ಪೂರಕ ಎಂಬಂತೆ ಕ್ರಿ.ಶ. ೧೩ ನೇ ಶತಮಾನದಿಂದ ಹಿಡಿದು ೧೭ ನೇ ಶತಮಾನದವರೆಗೂ ವಿಜಯನಗರದ ಚರಿತ್ರೆಗೆ ಸಂಬಂಧಿಸಿದ ಹಲವಾರು ಶಾಸನಗಳು  ನಮಗೆ ಲಭ್ಯವಾಗುತ್ತವೆ. ಈ ಹಿನ್ನೆಲೆಯಲ್ಲಿಯೇ ವಿಜಯನಗರದ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಚರಿತ್ರೆಯ ಅಧ್ಯಯನಗಳು ಕಂಡುಬರುತ್ತವೆ. ಈ ಅಧ್ಯಯನಗಳ ಕುರಿತು ಚರಿತ್ರೆಕಾರರು ತಮ್ಮ ತಮ್ಮ ನಿಲುವುಗಳ ಮೂಲಕ ವಿಭಿನ್ನ ದೃಷ್ಟಿಕೋನದಲ್ಲಿ ವಿಜಯನಗರ ಚರಿತ್ರೆಯನ್ನು ರಚಿಸಿದರು. ಹೀಗೆ ರಚನೆಯಾದ ಚರಿತ್ರೆಯಲ್ಲಿ ಹಲವು ಸೈದ್ಧಾಂತಿಕತೆಗಳು ಏಕಮುಖ ಚರಿತ್ರೆ ನಿರ್ಮಾಣಕ್ಕೆ ದಾರಿ ಮಾಡಿದವು. ಇವುಗಳಿಂದ ವಾಸ್ತವ ಚರಿತ್ರೆಯನ್ನು ಮರೆಮಾಚಿಸಲಾಯಿತು. ಈ ರೀತಿಯ ಚರಿತ್ರೆ ರಚನೆಗಳು ಯುರೋಪ್ ಸಾಮ್ರಾಜ್ಯಶಾಹಿಯ ಆಳ್ವಿಕೆಯಲ್ಲಿ ಆರಂಭವಾದವು. ವಸಾಹತುಶಾಹಿ ಚರಿತ್ರೆಗಾರರು ತಮ್ಮ ಸಾಮ್ರಾಜ್ಯಶಾಹಿ ಧೋರಣೆಗಳಿಗೆ ಅನುಕೂಲವಾಗುವಂತೆ ಚರಿತ್ರೆಯನ್ನು ಬಳಸಿಕೊಂಡರು. ಇದರೊಂದಿಗೆ ವಸಾಹತುಶಾಹಿಗಳು ಭಾರತದ ಚರಿತ್ರೆಯನ್ನು ಹಿಂದೂ–ಮುಸ್ಲಿಂ ಎನ್ನುವ ವಿರೋಧದ ಸೈದ್ಧಾಂತಿಕ ಧೋರಣೆಗಳನ್ನು ರೂಪಿಸಿದರು.  ಇವರು ಇಲ್ಲಿ ಆಯ್ದುಕೊಂಡ ಚಾರಿತ್ರಿಕ ದಾಖಲೆಗಳು ಧಾರ್ಮಿಕ ಒಡಕನ್ನು ಬಿಂಬಿಸುವಂತಹಗಳಾಗಿದ್ದವು. ಇದರಿಂದ ವಿಜಯನಗರ ಚರಿತ್ರೆಯನ್ನು ದಕ್ಷಿಣ ಭಾರತದಲ್ಲಿ ಹಿಂದೂ ಸಾಮ್ರಾಜ್ಯವಾಗಿ ರೂಪಿಸಿದರು. ಆದರೆ ವಾಸ್ತವವಾಗಿ  ಇಡೀ ಭಾರತದ ಚರಿತ್ರೆಯನ್ನು ನಾವು ಪರಾಮರ್ಶಿಸಿದಾಗ ವಿವಿಧ ಕಾಲಘಟ್ಟಗಳಲ್ಲಿ ಪ್ರಾಬಲ್ಯವನ್ನು ಹೊಂದಿದ ಹಲವು ಪಂಗಡಗಳ ಕೈಯಲ್ಲಿ ಪ್ರಭುತ್ವದ ಆಳ್ವಿಕೆಯು ಏರ್ಪಟ್ಟಿತ್ತು. ಇವುಗಳನ್ನು ಚರಿತ್ರೆಯ ಓದಿನಲ್ಲಿ ಗಮನಿಸಬಹುದು. ಅಲ್ಲದೆ ಈ ಪಂಗಡಗಳು ಪ್ರಪಂಚದ ಬೇರೆ ಬೇರೆ ಭಾಗಗಳಿಂದ ಬಂದು ಇಲ್ಲಿ ತಮ್ಮ ನೆಲೆಗಳನ್ನು ಕಂಡುಕೊಂಡ ನಂತರ ತಮ್ಮದೇ ಸಮುದಾಯಗಳಾಗಿ ಗುರುತಿಸಿಕೊಂಡರು. ಈ ರೀತಿ ಸಾಮಾಜಿಕವಾಗಿ ಬೆಂಬಲ ಪಡೆದ ಈ ಸಮುದಾಯಗಳು ಜಾತಿ, ಧಾರ್ಮಿಕ ಹಿನ್ನೆಲೆಯಲ್ಲಿ ತಮ್ಮನ್ನು ಗುರುತಿಸಿಕೊಂಡು ಸ್ಥಳೀಯರಾದರು. ಈ ರೀತಿಯ ವಿವಿಧ ಪಂಗಡಗಳ ವಿಘಟನೆಗಳು ಹಲವು ರಾಜ್ಯಗಳಾಗಿ ರಚನೆಯಾದವು. ಹೀಗೆ ವಿವಿಧ ಕಾಲದಲ್ಲಿ ಬೇರೆ ಬೇರೆ ಪಂಥದ ಸಾಮ್ರಾಜ್ಯಗಳು ರಚನೆಗೊಂಡವು. ಈ ರಾಜ್ಯಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿದ್ದವು. ಮುಂದೆ ಈ ರಾಜ್ಯಗಳು ಒಂದಾಗದೇ ಅವರಲ್ಲೇ ಸಾಮ್ರಾಜ್ಯದ ವಿಸ್ತರಣೆಗಾಗಿ ಕಾದಾಡಿದವು.

ಭಾರತದ ಚರಿತ್ರೆಯನ್ನು ಅಧ್ಯಯನಕ್ಕೆ ಒಳಪಡಿಸಿದಾಗ ದಾಖಲೆಗಳು ನಮಗೆ ಸಿಕ್ಕಿದ್ದರೂ ಸಹ ಭಾರತದ ಚರಿತ್ರೆಯನ್ನು ಒಂದೇ ದೃಷ್ಟಿಕೋನದಲ್ಲಿ ನೋಡುವ ಬಗೆಯನ್ನು ಕಾಣುತ್ತೇವೆ. ಹೀಗೆ ವಿಜಯನಗರ ಚರಿತ್ರೆಯು ಸಹ ಭಿನ್ನವಾಗಿದೆ. ವಿಜಯನಗರ ಚರಿತ್ರೆಯು ಹಲವು ಧಾರ್ಮಿಕ ಸಮುದಾಯಗಳನ್ನು ಒಳಗೊಂಡ ಬಹುಮುಖಿ ಸಮುದಾಯಗಳ ವಿಶಿಷ್ಟವಾದ ಚರಿತ್ರೆಯಾಗಿತ್ತು. ಇದಕ್ಕೆ ಸಂಬಂಧಿಸಿದಂತೆ ಚಾರಿತ್ರಿಕ ದಾಖಲೆಗಳು ನಮಗೆ ಲಭ್ಯವಾಗುತ್ತವೆ. ವಿಜಯನಗರ ಸಾಮ್ರಾಜ್ಯದಲ್ಲಿ ಶೈವ, ವೈಷ್ಣವ, ಜೈನ, ಬೌದ್ಧ, ಮುಸ್ಲಿಂ ಸಮುದಾಯಕ್ಕೆ ಸಂಬಂಧಿಸಿದ ಶಾಸನಗಳು, ಮೂರ್ತಿಶಿಲ್ಪಗಳು, ಸ್ಮಾರಕಾವಶೇಷಗಳು ಲಭ್ಯವಾಗಿವೆ.

ವಿಜಯನಗರ ಚರಿತ್ರೆಯನ್ನು ವಿಶ್ಲೇಷಿಸಿದಾಗ ಹಲವು ಧಾರ್ಮಿಕ ಸಮುದಾಯಗಳನ್ನು ಒಳಗೊಂಡ ಬಹುಸಂಸ್ಕೃತಿಯ ಸಾಮ್ರಾಜ್ಯವಾಗಿತ್ತು ಎನ್ನುವ ಅಂಶ ನಮಗೆ ತಿಳಿದುಬರುತ್ತದೆ. ಇದರಲ್ಲಿ ಶೈವ, ವೈಷ್ಣವಕ್ಕೆ ಸಂಬಂಧಿಸಿದ ಅಸಂಖ್ಯಾತ ದೇವಾಲಯಗಳು, ದತ್ತಿ ಶಾಸನಗಳು, ಮಂಟಪಗಳು ಲಭ್ಯವಾಗಿದ್ದರೂ ಸಹ ಇವುಗಳು ಜೊತೆಯಲ್ಲಿ ಜೈನ, ಬೌದ್ಧಧರ್ಮಕ್ಕೆ

* ಸಂಶೋಧನಾ ವಿದ್ಯಾರ್ಥಿ, ಚರಿತ್ರೆ ವಿಭಾಗ, ಕನ್ನಡ ವಿವಿ, ಹಂಪಿ, ಮೊ. ೯೪೮೧೭೧೭೪೧೪

ಸಂಬಂಧಿಸಿದ ಹಲವು ದೇವಾಲಯಗಳು, ಮೂರ್ತಿ ಶಿಲ್ಪಗಳು, ಶಾಸನಗಳು ಕಂಡುಬರುತ್ತವೆ. ಇವುಗಳ ಮಾದರಿಯಲ್ಲೆ ಹಲವು ಶಾಸನಗಳು ಮುಸ್ಲಿಂ ಸಮುದಾಯಗಳಿಗೆ ಸಂಬಂಧಿಸಿದ ಚಾರಿತ್ರಿಕ ದಾಖಲೆಗಳನ್ನು ಒದಗಿಸುತ್ತವೆ. ಈ ಸಮುದಾಯಕ್ಕೆ ಸಂಬಂಧಿಸಿದ ಶಾಸನಗಳಲ್ಲಿ ಸುಮಾರು ೮ ಶಾಸನಗಳು ಲಭ್ಯವಾಗಿವೆ. ಇವುಗಳಲ್ಲಿ ಒಂದು ಶಾಸನವನ್ನು ಆಯ್ದುಕೊಳ್ಳಲಾಗಿದೆ. ಈ ಶಾಸನದಲ್ಲಿ ಉಲ್ಲೇಖಿತವಾದಂತೆ ಈ ಸಮುದಾಯಗಳ ಧಾರ್ಮಿಕ ನಂಬಿಕೆ ಆಚರಣೆ, ಸಂಸ್ಕೃತಿಯನ್ನು ತಿಳಿಯುವ ಪ್ರಯತ್ನವನ್ನು ಮಾಡಲಾಗಿದೆ.

ನಂದನ ಸಂವತ್ಸರದ ಚೈತ್ರ, ಶು.೫, ಶುಕ್ರವಾರವು ಕ್ರಿ.ಶ. ೦೩-೦೩-೧೪೭೨ ರ ಭಾನುವಾರ (ಶುಕ್ರವಾರವಲ್ಲ) ಕ್ಕೆ ಸರಿ ಹೊಂದುತ್ತದೆ. ಹಂಪಿ ಶಾಸನದಲ್ಲಿ 'ದಾದನ ರಾಹುತನ ಮಗ ಸಖಲಾದಿರಾಹುತನು ಗುಮ್ಮಟವನ್ನು ಕಟ್ಟಿಸಿ, ಇದರ ಒಳಕ್ಕೆ ಹೂಳು ತರಬಾರದೆಂದೂ ಹಾಗೆ ಮಾಡಿದರೆ ತಮ್ಮ ತಾಯಿಯನ್ನು ತೀರ್ಥದಲ್ಲಿ ಕೊಂದ ಪಾಪ ಬರುವುದು ಎಂದು ಹೇಳಿ ಕಲಾಬಿನ ಆಣೆ ಇಟ್ಟಿರುತ್ತಾನೆ. ಅಲ್ಲದೆ ಹೀಗೆ ಮಾಡಿದವರು ಕತ್ತೆ, ನಾಯಿ, ಹಂದಿ ಜನ್ಮ ಹೊಂದುತ್ತಾರೆಂದು ಈ ಶಾಸನ ತಿಳಿಸುತ್ತದೆ. (ಹಂಪಿ ಶಾಸನ ಸಂ. ೨, ಪುಟ ೨೨೮).

ಈ ಮೇಲಿನ ಶಾಸನದಲ್ಲಿ ತಿಳಿಸುವಂತೆ ಇದು ಮುಸ್ಲಿಮರ ನಂಬಿಕೆ ಹಾಗೂ ಆಚರಣೆಯನ್ನು ತಿಳಿಸುತ್ತದೆ. ದಾದ ಎಂಬ ಹೆಸರಿನ ಮುಸ್ಲಿಂ ಸೇವಕನ ಮಗ ಸಖಲಾದಿರಾಹುತನು ಕಟ್ಟಿಸಿದ ಗುಮ್ಮಟದ ದಾನದ ವಿವರ ಇಲ್ಲಿ ಕಂಡುಬರುತ್ತದೆ. ಈ ಗುಮ್ಮಟವನ್ನು ಕ್ರಿ.ಶ. ೧೪೭೨ ರಲ್ಲಿ ದೇವರಾಯನ ಆಳ್ವಿಕೆ ಕಾಲಘಟ್ಟದಲ್ಲಿ ಕಟ್ಟಿಸಲಾಯಿತು. ಮುಸ್ಲಿಮರಿಗೆ ವಸತಿ ನೆಲೆಯನ್ನು, ಧಾರ್ಮಿಕ ಆಚರಣೆಗೆ ಅವಕಾಶವನ್ನು ವಿಜಯನಗರದ ಅರಸರು ನೀಡಿದ್ದರು ಎಂಬ ಅಂಶ ಇದರಿಂದ ತಿಳಿದುಬರುತ್ತದೆ. ಅಲ್ಲದೇ ಮುಸ್ಲಿಮರು ಅರೇಬಿಕ್ ಶಿಕ್ಷಣವನ್ನು ಸಹ ಪಡೆಯುತ್ತಿದ್ದರು ಎಂಬುದಕ್ಕೆ ಈ ಶಾಸನದಲ್ಲಿ ಉಲ್ಲೇಖವಾದ ಪದಗಳಿಂದ ತಿಳಿದು ಬರುತ್ತದೆ. ಕಲಾಬಿನ ಆಣೆ ಎಂಬ ವಿವರಣೆ ಇಲ್ಲಿದೆ. ಕಲಾಬ್ ಎಂದರೆ ಮುಸ್ಲಿಮರು ತಮ್ಮ ಧಾರ್ಮಿಕ ನಂಬಿಕೆಯಲ್ಲಿ ಮೂಲ ತತ್ವ ಪಾಲನೆಯಲ್ಲಿ ಕಲ್ಮಾ ಒಂದಾಗಿದೆ. ಪ್ರತಿ ಮುಸ್ಲೀಮರು ಪಾಲಿಸಲೇ ಬೇಕಾದ ಶ್ಲೋಕವಾಗಿದೆ. ಐದು ಶ್ಲೋಕಗಳನ್ನು ಒಳಗೊಂಡ ಪಠಣೆಯೇ ಕಲ್ಮಾ ಆಗಿದೆ. ಈ ಹಿನ್ನೆಲೆಯಲ್ಲಿ ಮುಸ್ಲಿಂ ಧಾರ್ಮಿಕ ತತ್ವ ಸಿದ್ಧಾಂತಗಳನ್ನು ಪಾಲಿಸುವಂತಹ ಸಮುದಾಯ ಇಲ್ಲಿ ನೆಲೆಸಿತ್ತೇಂಬುದು ಸ್ಪಷ್ಟವಾಗುತ್ತದೆ. ಹಾಗೆಯೇ ಇಲ್ಲಿ ಅರೇಬಿಕ್ ಶಿಕ್ಷಣಕ್ಕೂ ಮಹತ್ವವನ್ನು ನೀಡಿದ್ದರು ಎಂಬುದನ್ನು ಇದರಿಂದ ಗುರುತಿಸಬಹುದಾಗಿದೆ. ಇಲ್ಲಿ ರಾಜಾಶ್ರಯವನ್ನು ಪಡೆದ ಮುಸ್ಲಿಮರು ತಮ್ಮ ಧಾರ್ಮಿಕ ವಿಧಿ-ವಿಧಾನವನ್ನು ಶಿಕ್ಷಣವನ್ನು ಪಡೆಯುತ್ತಿದ್ದರೆಂಬುದು ಅರಿಯಬಹುದು. ಇದಕ್ಕೆ ಸಂಬಂಧಿಸಿದಂತೆ ಯಾವುದೇ ಆಕರಗಳು ಲಭ್ಯವಾಗಿಲ್ಲ. ಆದರೆ ಇಲ್ಲಿ ದೊರೆತಿರುವ ಇಂತಹ ಹಲವು ಶಾಸನಗಳ ಪಠ್ಯಗಳಿಂದ ಇವರ ಸಂಸ್ಕೃತಿಯನ್ನು ಅರಿಯಬಹುದು. ಈ ಸಂಸ್ಕೃತಿಯು ವಿಜಯನಗರದ ಆಳ್ವಿಕೆ ಸಂದರ್ಭದಲ್ಲಿ ಬಹುಮುಖಿ ಸಂಸ್ಕೃತಿಯಲ್ಲಿ ಬಿಂಬಿಸುವಂತಹದಾಗಿದೆ. ಇನ್ನು ಧಾರ್ಮಿಕ ಆಚರಣೆಗಳಲ್ಲಿ ಮಕ್ಕಾ ಯಾತ್ರೆಯನ್ನು ಇವರು ಮಾಡುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಈ ಶಾಸನದಲ್ಲಿನ ಉಲ್ಲೇಖದ ಆಧಾರದ ಮೇಲೆ ಮುಸ್ಲಿಂ ಸಮುದಾಯದವರು ಇಸ್ಲಾಂ ಷರಿಯತ್ ಮೂಲಕವೇ ತಮ್ಮ ಜೀವನವನ್ನು ನಡೆಸುತ್ತಿದ್ದರು ಎನ್ನುವುದನ್ನು ತಿಳಿಯುತ್ತದೆ. ಹೀಗೆ ವಿಜಯನಗರ ಪರಿಸರದಲ್ಲಿ ಲಭ್ಯವಿರುವ ಈ ಶಾಸನವು ಮುಸ್ಲಿಂ ಸಮುದಾಯವು ಇಲ್ಲಿ ನೆಲೆಸಿದ್ದ ಬಗೆಗೆ ಅವರ ಸಂಪ್ರದಾಯಗಳನ್ನು ಅರಿಯಲು ಸಹಾಯಕವಾಗಿದೆ.



## ಆಕರ ಗ್ರಂಥಗಳು


೧. ಕೋಡದ ಎಸ್.ಬಿ., ವಿಜಯನಗರ ಸಾಮ್ರಾಜ್ಯ ಹಾಗೂ ಹಿಂದೂ ಮುಸ್ಲಿಂ ಬಾಂಧವ್ಯ, ಎಸ್.ಬಿ. ಕೋಡದ ಪ್ರಕಾಶಕರು, ಧಾರವಾಡ, ೧೯೬೬.

೨. ದೇವರಕೊಂಡಾರೆಡ್ಡಿ ಹಂಪಿ ಶಾಸನಗಳು, ಸಂ-೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು. ೨೨೮.

೩. ದೇಸಾಯಿ ಪಿ.ಬಿ., ವಿಜಯನಗರ ಸಾಮ್ರಾಜ್ಯ, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ, ೨೦೦೮.

# ಬಾಸವೂರು ಕಂಪಣದ ಗ್ರಾಮನಾಮಗಳು

**ಶಿವಯೋಗಿ ಕೋರಿಶೆಟ್ಟರ***

ಸ್ಥಳಗಳನ್ನು ಗುರುತಿಸುವ ಉದ್ದೇಶದಿಂದ ಗ್ರಾಮಗಳಿಗೆ ಹೆಸರಿಸುವುದನ್ನು ಕಾಣಬಹುದು. ಪ್ರಾಚೀನ ಕಾಲದಲ್ಲಿ ಸ್ಥಳಗಳ ಹೆಸರುಗಳನ್ನು ಬಹಳ ವಿವೇಚನೆಯಿಂದ ಅರ್ಥಗರ್ಭಿತವಾಗಿ ಇಟ್ಟಿರುವುದನ್ನು ಕಾಣುತ್ತೇವೆ. ಹೀಗಾಗಿ ಪ್ರತಿ ಹೆಸರಿನಲ್ಲಿ ಗಾಢವಾದ ಅರ್ಥ ಮತ್ತು ಐತಿಹಾಸಿಕ ಹಿನ್ನಲೆ ಹುದುಗಿರುತ್ತದೆ. ಇವುಗಳ ಅಧ್ಯಯನವು ಅಲ್ಲಿಯ ಭೌಗೋಳಿಕ ಅಂಶ, ಜನಾಂಗ ಹಾಗೂ ಸಂಸ್ಕೃತಿಗಳನ್ನು ಪ್ರತಿಬಿಂಬಿಸುತ್ತವೆ.

ಗ್ರಾಮನಾಮಗಳು ಸಾಮಾನ್ಯವಾಗಿ ಕೂಡುನುಡಿಗಳಾಗಿರುತ್ತವೆ. ಅಪರೂಪಕ್ಕೆ ಏಕಘಟಕಗಳನ್ನೂ ಕಾಣಬಹುದು. ದ್ವಿಘಟಕಗಳಿಂದಾದ ನಾಮಗಳಲ್ಲಿ ಪೂರ್ವ ಘಟಕಕ್ಕೆ ನಿರ್ದಿಷ್ಟವೆಂತಲೂ, ಉತ್ತರ ಘಟಕಕ್ಕೆ ವಾರ್ಗಿಕವೆಂದೂ ಕರೆಯಲಾಗುತ್ತದೆ. 'ನಿರ್ದಿಷ್ಟ' ಘಟಕವು ಮುಖ್ಯವಾಗಿದ್ದು, ಇದರಲ್ಲಿ ಊರ ಹೆಸರಿನ ಮೂಲಾರ್ಥ ಹಾಗೂ ವಿಶಿಷ್ಟತೆ ಅಡಕವಾಗಿರುತ್ತದೆ. ಇದು ನಿರ್ದಿಷ್ಟದ ಪರಿಸರವನ್ನು ವಿವರಿಸುತ್ತದೆ. ಆದರೆ 'ವಾರ್ಗಿಕ'ವು ವರ್ಗಗೊಳಿಸುವುದಾಗಿದ್ದು, ಇನ್ನಿತರ ನಿರ್ದಿಷ್ಟಗಳೊಂದಿಗೆ ಸಹಯೋಗ ಹೊಂದುತ್ತದೆ. ನಿರ್ದಿಷ್ಟ ಹಾಗೂ ವಾರ್ಗಿಕದ ಆಧಾರದ ಮೇಲೆ ನಿಷ್ಪತ್ತಿಯನ್ನು ಹೇಳಬೇಕಾಗುತ್ತದೆ.

ಕಾಲ, ಭಾಷೆ ವ್ಯತ್ಯಾಸಗೊಂಡಂತೆ, ಗ್ರಾಮನಾಮಗಳು ವ್ಯತ್ಯಾಸಗೊಂಡಿರುವುದನ್ನು ಕಾಣಬಹುದು. ಹೀಗಾಗಿ ಪ್ರಚಲಿತ ಹೆಸರಿನ ಆಧಾರದ ಮೇಲೆ ನಿಷ್ಪತ್ತಿ ಹೇಳುವುದು ತಪ್ಪಾಗುತ್ತದೆ. ಇಂತಹ ಸಂದರ್ಭದಲ್ಲಿ ಶಾಸನ, ಸಾಹಿತ್ಯ, ಸರ್ಕಾರಿ ದಾಖಲೆಗಳನ್ನು ಆಧರಿಸಬೇಕಾಗುತ್ತದೆ. ಕೆಲವೊಮ್ಮೆ ಸಂಸ್ಕೃತಿಗೊಂಡ ಊರುಗಳ ಬಗ್ಗೆ ಮೂಲರೂಪವನ್ನು ಪರಿಶೀಲಿಸಬೇಕಾಗುತ್ತದೆ.

**ಕಂಪಣ ಬಾಸವೂರು:** ಪ್ರಾಚೀನ ಕುಂತಳ ದೇಶದ ಬನವಾಸಿ-೧೨೦೦೦ ಪ್ರಾಂತದ ಹಲವಾರು ಕಂಪಣಗಳಲ್ಲಿ ಬಾಸವೂರು-೧೪೦ ಒಂದು. ಸಾರ್ವಭೌಮರಾದ ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ, ಕಳಚೂರಿ, ಕೆಲಕಾಲ ಹೊಯ್ಸಳ ನಂತರದಲ್ಲಿ ಯಾದವ ಮನೆತನಗಳ ಆಳ್ವಿಕೆಗೆ ಈ ಕಂಪಣ ಒಳಪಟ್ಟಿತ್ತು. ಕ್ರಿ.ಶ. ೮ನೇ ಶತಮಾನದಿಂದ ೧೩ನೇ ಶತಮಾನದ ಅಂತ್ಯದವರೆಗೆ ಸುಮಾರು ಐದು ಶತಮಾನಗಳಿಗೂ ಹೆಚ್ಚು ಸುದೀರ್ಘ ಇತಿಹಾಸವನ್ನು ಈ ಕಂಪಣವು ಹೊಂದಿದೆ. ಬಾಸವೂರು ಕಂಪಣವು ಇಂದಿನ ಹಾವೇರಿ ಜಿಲ್ಲೆಯ ಹಾವೇರಿ, ಹಾನಗಲ್ ಹಾಗೂ ಬ್ಯಾಡಗಿ ತಾಲೂಕಿನ ಪ್ರದೇಶಗಳನ್ನು ಒಳಗೊಂಡಿತ್ತು. ಹಾನಗಲ್ ತಾಲೂಕಿನ 'ಹಿರೇಬಾಸೂರು' ಈ ಕಂಪಣದ ಕೇಂದ್ರಸ್ಥಳವಾಗಿದ್ದು, ಇದನ್ನು ರಾಜಧಾನಿಯನ್ನಾಗಿ ಹೊಂದಿ ಸೇನವಾರ ಹಾಗೂ ಖಚರ ವಂಶದ ದೊರೆಗಳು ರಾಜ್ಯಭಾರ ಮಾಡಿದ್ದಾರೆ. ಕಾಗಿನೆಲೆ-೧೨ ಹಾಗೂ ಕಲಕೇರಿ ಎಂಬ ಎರಡು ಉಪವಿಭಾಗಗಳನ್ನು ಬಾಸವೂರು ಕಂಪಣ ಒಳಗೊಂಡಿತ್ತು.

ಬಾಸವೂರು-೧೪೦ ಕಂಪಣದ ಐತಿಹಾಸಿಕ ಗ್ರಾಮನಾಮಗಳು ಮತ್ತು ಅವು ಒಳಗೊಂಡಿರಬಹುದಾದ ಅರ್ಥಗಳನ್ನು ಈ ಕೆಳಗಿನಂತೆ ಅಧ್ಯಯನ ಮಾಡಲಾಗಿದೆ.

**ಅಣಜಿ:** ಇದೆ ಗ್ರಾಮದಲ್ಲಿನ ಶಾಸನವು ಇದನ್ನು 'ಅನ್ದಿ' ಎಂಬುದಾಗಿ ಉಲ್ಲೇಖಿಸಿದೆ. (ಕೆ.ಆರ್.ಆಯ್.ಪ್ರೊ.ರಿ, ೧೩, ಪು. ೭೫) ಇದಕ್ಕೆ ಅಂದಿ-ಅಣದಿ-ಅಣದಿಗೆ ಎಂಬಂಥ ರೂಪಗಳಿವೆ. ಅಣದಿಗೆ ಎಂದರೆ ನೀರಿನ ಹೂಜೆ. ಅಣದಿಗೆ-ಅಣದಿ-ಅಣದೆ ಅಂದರೆ, ಆ ಊರಿನ ಅಡಿಯಲ್ಲಿರುವ ಭೂಗರ್ಭ ನೀರಿನ ಹೂಜಿಯಂತಿದೆ ಎಂದರ್ಥ. ಇದು ಗ್ರಾಮದ ಅಂತರ್ಜಲವನ್ನು ಸೂಚಿಸುತ್ತದೆ. ಹೊಜಿಯಲ್ಲಿರುವ ನೀರು ತಳದಿಂದ ಮೇಲ್ಭಾಗದವರೆಗೂ ಹೇಗೆ ತುಂಬಿಕೊಂಡಿರುತ್ತದೆಯೋ, ಹಾಗೆ ಈ ಊರ ವ್ಯಾಪ್ತಿಯ ಭೂಪ್ರದೇಶದಲ್ಲಿ ತೀರ ತಳದಿಂದ ಮೇಲ್ಭಾಗದವರೆಗೂ ನೀರು ಸಮೃದ್ಧವಾಗಿ ತುಂಬಿಕೊಂಡಿರುವುದನ್ನು ಇದು ಸೂಚಿಸುತ್ತದೆ.

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಗುದ್ಲೆಪ್ಪ ಹಳ್ಳಿಕೇರಿ ಪದವಿ ಮಹಾವಿದ್ಯಾಲಯ, ಹಾವೇರಿ, ಮೊ. ೯೮೪೪೮೧೯೯೧೭೫

**ಕನ್ನೇಶ್ವರ:** ಈ ಗ್ರಾಮನಾಮವು ದೇವರ ಹೆಸರಿನಲ್ಲಿದೆ. ಕನ್ನೇಶ್ವರ ಎಂದು ಕರೆಯಲ್ಪಡುವ ಹಾನಗಲ್ ತಾಲೂಕಿನ ಈ ಊರಿನಲ್ಲಿ ಒಂದು ಶಿವಾಲಯವಿದ್ದು, ಅಲ್ಲಿಯ ಲಿಂಗಕ್ಕೆ ಕನ್ನೇಶ್ವರ ಎಂಬ ಹೆಸರಿದೆ. ಇದೇ ಹೆಸರು ಈ ಊರಿಗೆ ಅನ್ವಯಿಸಿಕೊಂಡಿದೆ. ಕನ್ನಮಯ್ಯ ಎಂಬವನು ಈ ದೇವಾಲಯವನ್ನು ನಿರ್ಮಿಸಿದ್ದಾನೆ.

**ಕಬ್ಬೂರು:** ಕ್ರಿ.ಶ. ೧೦೨೫ರ ಕಬ್ಬೂರು ಶಾಸನದಲ್ಲಿ ಈ ಗ್ರಾಮವು 'ಕರ್ಬ್ಬೂರ' ಎಂದು ಉಲ್ಲೇಖಿತಗೊಂಡಿದೆ. (ಸೌ.ಇಂ.ಇನ್ಸ, ಸಂ. ೧೮, ಶಾ.ಸಂ. ೪೫, ಕಬ್ಬೂರು) ಇದರ ವಿಭಜನೆಯು ಕಬ್+ಆರ್+ಊರು ಎಂದಾಗುತ್ತದೆ. ಈ ಮೂರೂ ಪದಗಳು ಸೇರಿಕೊಂಡು ಶಾಸನವು ಹೇಳುವ ಕರ್ಬೂರು ಸಿದ್ಧವಾಗಿದೆ. ನಿರ್ದಿಷ್ಟದಲ್ಲಿ ಬರುವ 'ಕಬ್ಬು' ಇದರ ಅರ್ಥ ಸುತ್ತುಗಟ್ಟು, ಬಳಸು ಎಂದಿದೆ. ಇಲ್ಲಿ ಬರುವ ಇನ್ನೊಂದು ನಿರ್ದಿಷ್ಟ 'ಆರ್' ಶಬ್ದದ ಅರ್ಥ ನೀರು ಎಂದಾಗುತ್ತದೆ. ಮೊದಲ ಎರಡೂ ನಿರ್ದಿಷ್ಟಗಳನ್ನು ಸೇರಿಸಿದರೆ ನೀರಿನಿಂದ ಸುತ್ತುವರಿದ ಸೀಮೆ ಎಂದಾಗುತ್ತದೆ. ಕಬ್ಬೂರು ಎಂದರೆ ನೀರಿನಿಂದ ಸುತ್ತುವರಿದ ಪ್ರದೇಶ ಎಂದಾಗುತ್ತದೆ. (ನೋಡಿ, ಹಿರೇಕೆರೂರ ತಾಲೂಕಿನ ಗ್ರಾಮನಾಮಗಳ ಅಧ್ಯಯನ, ಭೋಜರಾಜ ಪಾಟೀಲ, ಪು. ೫೧).

**ಕರ್ಜಗಿ:** ಇಲ್ಲಿಯ ಶಾಸನದಲ್ಲಿ 'ಕರಜಗಿ' ಎಂದಿದೆ. ಇದನ್ನು ಕರ+ಜ+ಗಿ ಎಂದು ವಿಗ್ರಹಿಸಬೇಕು. ಇಲ್ಲಿ 'ಜ' ಎಂಬುದು ನಿರ್ದಿಷ್ಟ, 'ಗಿ' ಎಂಬುದು ವಾರ್ಗಿಕ. 'ಕರ' ಎಂಬುದು ನಿರ್ದಿಷ್ಟಕ್ಕೆ ವಿಶೇಷಣವಾಗಿ ಬಂದಿದೆ. ನಿರ್ದಿಷ್ಟವಾಗಿರುವ 'ಜ' ಇದರ ಅರ್ಥ ಜಲ (ನೀರು) ವಾರ್ಗಿಕವಾಗಿರುವ 'ಗಿ' ಇದರ ಅರ್ಥ ಗ್ರಾಮ. ಇದರ ಸವೆದ ರೂಪ 'ಗಿ' ವಿಶೇಷಣವಾಗಿರುವ 'ಕ' ಹೆಚ್ಚು ಎಂಬ ಅರ್ಥ ಕೊಡುತ್ತದೆ. ಈಗ ಕರಜಗಿ ಎಂದರೆ ನೀರು ಹೆಚ್ಚಾಗಿರುವ ಊರು. ವರದಾ ನದಿಯು ಈ ಊರನ್ನು ಸುತ್ತುವರಿದು ಹರಿಯುತ್ತದೆ. ಇದರಿಂದಾಗಿ ಈ ಹೆಸರು ಬಂದಿರುವ ಸಾಧ್ಯತೆ ಇದೆ.

**ಕಲಕೇರಿ:** ಇದು ವಸ್ತುವಾಚಕ ಗ್ರಾಮನಾಮ. ಇದರ ವಿಭಜನೆಯು ಕಲ್ಲು+ಕೆರೆ ಎಂದಾಗುತ್ತದೆ. ಈ ಊರಲ್ಲಿರುವ ಕೆರೆಗೆ ಸುತ್ತಲೂ ಕಲ್ಲಿನ ಒಡ್ಡು ನಿರ್ಮಿಸಿದ್ದರಿಂದಾಗಿ ಇದು ಕಲ್ಲಿನ ಕೆರೆ ರೂಢಿಯಲ್ಲಿ ಕಲ್ಕೇರೆ, ಕಲಕೇರಿ ಎಂದಾಗಿದೆ.

**ಕಳ್ಳಿಹಾಳ:** ಇದು ಸಸ್ಯವಾಚಕ ಗ್ರಾಮನಾಮ. ಕಳ್ಳಿ+ಹಾಳ ಎಂಬುದು ಇದರ ವಿಭಜಿತ ರೂಪ. ನಿರ್ದಿಷ್ಟದಲ್ಲಿರುವ ಕಳ್ಳಿಯು ಕಳ್ಳಿ ಎಂಬ ಸಸ್ಯವೇ ಆಗಿದೆ. ಕಳ್ಳಿಗಳಲ್ಲಿ ಅನೇಕ ಬಗೆಗಳುಂಟು. ಅದರಲ್ಲಿ ಯಾವುದೋ ಒಂದು ಕಳ್ಳಿ ಇಲ್ಲಿ ವಿಶೇಷವಾಗಿ ಬೆಳೆಯುತ್ತಿರಬೇಕು. ಆದ್ದರಿಂದ ಕಳ್ಳಿ ಎಂಬುದು ನಿರ್ದಿಷ್ಟದಲ್ಲಿ ಸೇರಿಕೊಂಡಿದೆ. ಇನ್ನು ಹಾಳ ಎಂಬುದು ಅತೀ ವಿಶಿಷ್ಟವಾದ ಪದ ಬಹು ಪ್ರಾಚೀನವಾದ ವಾಸಸ್ಥಳಕ್ಕೆ ಹಾಳ ಸೇರುತ್ತದೆ. ಇಲ್ಲಿ ಕಳ್ಳಿಹಾಳ ಎಂದರೆ ಕಳ್ಳಿ ಬೆಳೆಯುವ ಬಹು ಪ್ರಾಚೀನವಾದ ಪ್ರದೇಶ ಎಂದು ಅರ್ಥ. ಆದರೆ ಶಾಸನದಲ್ಲಿ ಈ ಊರಿಗೆ 'ಅಜ್ಜಡಿ'ಎಂದು ಕರೆಯಲಾಗಿದೆ. (ಸೌ.ಇಂ.ಇನ್ಸ, ಸಂ. ೧೮, ಶಾ.ಸಂ. ೪೪, ಕಳ್ಳಿಹಾಳ) ಅಜ್ಜದಲ್ಲಿಯೂ ಕಳ್ಳಿ ಎಂಬ ಅರ್ಥವೇ ಹುದುಗಿದೆ. ಆದ್ದರಿಂದ ಅಜ್ಜಡಿ ಸರಳವಾಗಿ ಕಳ್ಳಿಹಾಳ ಎಂದಾಗಿದೆ.

**ಕಾಗಿನೆಲೆ:** ಕಾಗಿ+ನೆಲೆ ಇದು ಪಕ್ಷಿವಾಚಕ ಗ್ರಾಮನಾಮವು. ಕ್ರಿ.ಶ ೧೧೨೧ರ ಕಾಗಿನೆಲೆ ಶಾಸನದಲ್ಲಿ 'ಕಾಗೆನೆಲೆ' ಎಂದು ಉಲ್ಲೇಖಿತಗೊಂಡಿದೆ. (ಸೌ.ಇಂ.ಇನ್ಸ, ಸಂ.೧೮, ಶಾ.ಸಂ. ೧೧೭, ಕಾಗಿನೆಲೆ) ನಿರ್ದಿಷ್ಟದಲ್ಲಿರುವ 'ಕಾಗಿ'ಪಕ್ಷಿಗಳಿಗೆ ಅನ್ವಯಿಸುವ ಶಬ್ದವು. ಇನ್ನು ವಾರ್ಗಿಕದಲ್ಲಿರುವ 'ನೆಲೆ' ಎಂಬುದು ಒಂದಕ್ಕಿಂತ ಹೆಚ್ಚು ಅರ್ಥಗಳನ್ನು ಕೊಡುತ್ತದೆ. ಇದರ ಸಹಜವಾದ ಒಂದು ಅರ್ಥವು ವಾಸಸ್ಥಳ ಎಂದಾಗುತ್ತದೆ. ಇದನ್ನು ಅನ್ವಯಿಸಿ ಹೇಳುವುದಾದರೆ, ಕಾಗಿನೆಲೆ ಎಂದರೆ ಕಾಗಿಗಳ ವಾಸಸ್ಥಳ ಎಂದಾಗುತ್ತದೆ. ಆದರೆ ಇದು ಅಷ್ಟೊಂದು ಸಮಂಜಸವಲ್ಲ. 'ನೆಲೆ' ಎಂಬುದು 'ನೆಲ್ಲು' ಎಂಬುದರಿಂದ ಬಂದಿದೆ. ನೆಲ್ಲು ಎಂದರೆ ಭತ್ತ ಬೆಳೆಯುವ ಗದ್ದೆಗಳು. ಭತ್ತ ಬೆಳೆಯುವ ಗದ್ದೆಗಳ ಸೀಮೆಗೂ ಕಾಗೆಗೂ ಒಂದು ಸಂಬಂಧವಿದೆ. ಎಲ್ಲಿ ವಿಶೇಷವಾಗಿ ಭತ್ತಬೆಳೆಯುತ್ತಾರೊ, ಆ ಪ್ರದೇಶದಲ್ಲಿ ಕಾಗೆಗಳು ವಿಶೇಷವಾಗಿ ವಾಸವಾಗಿರುತ್ತವೆ. ಆದ್ದರಿಂದ ಕಾಗಿನೆಲೆ ಎಂದರೆ ಕಾಗೆಗಳು ವಾಸಿಸುವ ಭತ್ತ ಬೆಳೆಯುವ ಸೀಮೆ ಎಂದೇ ಅರ್ಥೈಸಬೇಕು.

**ಕುಳೇನೂರು:** ಕುಳೆನೂರಿನಲ್ಲಿ ದೊರೆತ ಕಾಲನಿರ್ದೇಶನವಿಲ್ಲದ ಶಾಸನದಲ್ಲಿ ಈ ಗ್ರಾಮವನ್ನು 'ಕುಳುವನೂರ' ಎಂಬುದಾಗಿ ಉಲ್ಲೇಖಿಸಲಾಗಿದೆ. (ಸೌ.ಇಂ.ಇನ್ಸ, ಸಂ.೧೮, ಶಾ.ಸಂ. ೪೧೧, ಕುಳೇನೂರು) ಇದು ವ್ಯಕ್ತಿವಾಚಕ ಗ್ರಾಮನಾಮವು. ಶಾಸನದ ಈ ಪದವನ್ನು ವಿಭಜಿಸಿದರೆ ಕುಳುವನ+ಊರು ಎಂದಾಗುತ್ತದೆ. ನಿರ್ದಿಷ್ಟದಲ್ಲಿರುವ ಕುಳುವನ ಎಂಬುದು 'ಕುಳುವ' ಎಂಬ ವ್ಯಕ್ತಿಯ ನಾಮವಾಗಿದೆ. ಈ ಊರು ಆತನ ಹೆಸರಿನಲ್ಲಿ ನಿರ್ಮಾಣವಾಗಿದೆ ಅಥವಾ ಈ ಊರಿಗೆ ಆತನ ಹೆಸರನ್ನು ನಾಮಕರಣ ಮಾಡಿದ್ದಾರೆ. ಆದ್ದರಿಂದ ಕುಳುವನ ಊರು ಕುಳುವನೂರು ಎಂದಾಗಿದೆ. ರೂಢಿಯಲ್ಲಿ ಕುಳುವ ಎಂಬುದು ಸಂಕ್ಷಿಪ್ತಿಕರಣಗೊಂಡು, ಕುಳೆ ಎಂದಾಗಿದೆ. ಇದೇ ಮುಂದುವರಿದು ಕುಳೇನೂರು ಎಂದಾಗಿದೆ.

**ಕೆಲೂರು:** ಈ ಗ್ರಾಮವನ್ನು ಹಾವೇರಿಯ ಪುರದಸಿದ್ಧೇಶ್ವರ ದೇವಾಲಯದ ಬಳಿ ಇರುವ ಕಾಲನಿರ್ದೇಶನವಿಲ್ಲದ ವೀರಗಲ್ಲು ಶಾಸನದಲ್ಲಿ 'ಕೆಲವುರ' ಎಂದಿದೆ. (ಸೌ.ಇಂ.ಇನ್ಸ, ಸಂ. ೧೮, ಶಾ.ಸಂ. ೨೭೩, ಹಾವೇರಿ) ಇದು ಜನಾಂಗವಾಚಿ ಗ್ರಾಮನಾಮ. ಕೆಲವರ+ಊರು ಕೆಲವೂರು >ಕೆಲೂರು ಎಂದಾಗಿದೆ. 'ಕೆಲ್' ಎಂಬುದು ಒಂದು ಜನಾಂಗ. ಅಂತವರು ವಾಸವಾಗಿದ್ದ ಊರು ಕೆಲ್ಲರ ಊರು. ಇದೇ ಕೆಲೂರು ಎಂದಾಗಿದೆ.

**ಕೋಳೂರು:** ಇದು ಜನಾಂಗವಾಚಕ ಗ್ರಾಮನಾಮವಾಗಿದೆ. ಇದರ ವಿಗ್ರಹವು ಕೋಳಿ+ಊರು ಎಂದಾಗುತ್ತದೆ. ಆದರೆ ನಿರ್ದಿಷ್ಟದಲ್ಲಿರುವ 'ಕೋಳಿ' ಎಂಬುದು 'ಕೋಳಿಯರು' ಎಂಬುದರ ಸಂಕ್ಷಿಪ್ತ ರೂಪ. ಕೋಳಿಯರು ಭಾರತದ ಪ್ರಾಚೀನ ಸಮುದಾಯವಾಗಿದೆ. ಇವರು ಹೆಚ್ಚಾಗಿ ನದಿ ತೀರಗಳಲ್ಲಿ ಇಲ್ಲವೇ ನೀರಿನಾಶ್ರಯವಿರುವಲ್ಲಿ ವಾಸವಾಗಿರುತ್ತಿದ್ದರು. ಸದ್ಯ ಕೋಳೂರು ಕೂಡಾ ವರದಾ ನದಿಯ ದಂಡೆಯ ಮೇಲೆಯೆ ಇದೆ. ಆದ್ದರಿಂದ ಇದರ ಅರ್ಥ ಕೋಳಿಯರು ಎಂಬ ಜನಾಂಗ ವಾಸವಿದ್ದ ಊರು ಎಂದಾಗುತ್ತದೆ.

**ಕೋಡಿಹಳ್ಳಿ:** ಇದು ನಿಸರ್ಗವಾಚಕ ಗ್ರಾಮನಾಮವಾಗಿದೆ. ಮಲ್ಲೂರಿನ ಕ್ರಿ.ಶ. ೧೬೩೬ರ ಶಾಸನದಲ್ಲಿ ಇದೇ ಹೆಸರಿನಿಂದ ಈ ಊರನ್ನು ಗುರುತಿಸಲಾಗಿದೆ. ಹಾವೇರಿ ತಾಲೂಕಿನ ಹೆಗ್ಗೆರೆ ಕೆರೆಯ ಕೋಡಿಯ ಪಕ್ಕದಲ್ಲಿ ಈ ಊರು ಇರುವುದರಿಂದ ಸಹಜವಾಗಿ ಕೋಡಿಹಳ್ಳಿ ಎಂಬ ಹೆಸರು ಅನ್ವರ್ಥಕವಾಗಿ ಬಂದಿದೆ.

**ಗಣಜೂರು:** ಶಾಸನದಲ್ಲಿ ಇದು 'ಗಣಜೂರು' ಎಂದೇ ಇದೆ. ಇದೂ ಕೂಡಾ ಜನಾಂಗವಾಚಿ ಗ್ರಾಮನಾಮವಾಗಿದೆ. ಗಣಜರು+ಊರು ಗಣಜೂರು ಎಂದಾಗಿದೆ. ಗಣಜರು ಒಂದು ಜನಾಂಗದ ಹೆಸರು.

**ದೇವಿಹೊಸೂರು:** ದೇವಿಯ+ಹೊಸವೂರು ಎಂಬುದು ಇದರ ವಿಭಜಿತ ರೂಪ. ಕ್ರಿ.ಶ.೧೦೬೩ರ ದೇವಿಹೊಸೂರು ಶಾಸನದಲ್ಲಿ ಇದು 'ದೆಯ್ಯದ ಪೊಸವೂರ' ಎಂದೇ ಉಲ್ಲೇಖಿತವಾಗಿದೆ. ಈ ಗ್ರಾಮದಲ್ಲಿರುವ ನಿರ್ದಿಷ್ಠವು ದೈವಕ್ಕೆ ಸಂಬಂಧಿಸಿದ್ದುದು. ಒಂದು ಹೊಸವೂರು ನಿರ್ಮಾಣ ಮಾಡಿ ಅಲ್ಲಿ ದೇವಿಯ ಪ್ರತಿಷ್ಠಾಪನೆ ಮಾಡಿದ್ದರಿಂದಾಗಿ ಇದು ದೇವಿ (ದೆಯ್ಯ)ಯ ಪೊಸವೂರು > ದೇವಿಹೊಸೂರು ಎಂದಾಗಿದೆ.

**ದೇವಗಿರಿ:** ಕ್ರಿ.ಶ. ೧೧೦೨ರ ದೇವಿಹೊಸೂರು ಹಾಗೂ ಇಲ್ಲಿಯೇ ದೊರೆತಿರುವ ಇನ್ನಿತರ ಶಾಸನಗಳಲ್ಲಿ ಈ ಊರ ಹೆಸರು 'ದೇವಂಗೇರೆ', 'ದೇವಂಗಿರಿ' ಎಂದು ಮುಂತಾಗಿ ದಾಖಲಾಗಿದೆ. ಇಲ್ಲಿ ದೇವರ+ಗಿರಿ ದೇವಗಿರಿಯಾಗಿದೆ. ಇದು ಬೆಟ್ಟ(ಗಿರಿ)ದ ಕೆಳಗಿರುವ ಊರು. ಇಲ್ಲಿರುವ ಬೆಟ್ಟದ ಮೇಲೆ ಪ್ರಮುಖವಾಗಿ ಮಲ್ಲಿಕಾರ್ಜುನ ದೇವಾಲಯ ಹಾಗೂ ಇನ್ನೂ ಹಲವಾರು ಚಿಕ್ಕ ಪುಟ್ಟ ದೇವಾಲಯಗಳೂ ಇವೆ. ಇದೇ ರೂಢಿಯಲ್ಲಿ ದೇವಗಿರಿಯಂದು ಕರೆಯಲ್ಪಟ್ಟಿದೆ.

**ಬೆಂಚಳ್ಳಿ:** ಕ್ರಿ.ಶ. ೧೪೧೨ರ ಸಂಗೂರು ಶಾಸನದಲ್ಲಿ ಈ ಗ್ರಾಮವನ್ನು 'ಬೆಂಚಿಯಹಳ್ಳಿ' ಎಂದಿದೆ. ಇದು ವ್ಯಕ್ತಿವಾಚಕ (ಸ್ತ್ರೀ) ಗ್ರಾಮನಾಮ. 'ಬೆಂಚಿ' ಎಂಬುದು ಓರ್ವ ಮಹಿಳೆಯ ಹೆಸರು. ಈ ಹೆಸರು ದೇವತೆಯದಾದರೂ ಆಗಿರಬಹುದು ಅಥವಾ ವ್ಯಕ್ತಿಯದಾದರೂ ಆಗಿರಬಹುದು. ಇಂತಹ ಬೆಂಚಿಯಹಳ್ಳಿ ಬೆಂಚಳ್ಳಿ ಎಂದಾಗಿದೆ.

**ಬ್ಯಾತನಾಳ:** ಇದೇ ಗ್ರಾಮದಲ್ಲಿನ ಶಾಸನದಲ್ಲಿ ಈ ಊರು 'ಬೇತನಹಾಳ' ಎಂಬುದಾಗಿ ಉಲ್ಲೇಖಿತವಾಗಿದ್ದು, (ಕಲಬುರ್ಗಿ ಎಂ.ಎಂ., ಧಾ.ಜಿ.ಶಾ.ಸೂ. ಪು. ೭೯) ಇದು ವ್ಯಕ್ತಿವಾಚಕವಾಗಿದೆ. ಇದನ್ನು ವಿಭಜಿಸಿದರೆ ಬೇತನ+ಹಾಳ ಎಂದಾಗುತ್ತದೆ. ನಿರ್ದಿಷ್ಟದಲ್ಲಿರುವ ಬೇತನ ಎಂಬುದು 'ಬೇತ' ಎಂಬ ವ್ಯಕ್ತಿಯ ನಾಮವಾಗಿದೆ. ಈ ಗ್ರಾಮ ಆತನ ಹೆಸರಿನಲ್ಲಿ ನಿರ್ಮಾಣಗೊಂಡಿದೆ. 'ಹಾಳ' ಎಂಬುದು ಊರಿನ ಪ್ರಾಚೀನತೆಯನ್ನು ತಿಳಿಸುತ್ತದೆ. ಹೀಗಾಗಿ ಬೇತನ ಹೆಸರಿನ ಪ್ರಾಚೀನವಾಗಿರುವ ಈ ಗ್ರಾಮ ಜನರ ಆಡುಮಾತಿನಲ್ಲಿ ಬ್ಯಾತನಾಳವಾಗಿದೆ. ಮೂಲ ಬ್ಯಾತನಾಳದಲ್ಲಿ ದೇವಾಲಯ ಶಾಸನ ಸೇರಿದಂತೆ ಅನೇಕ ಪ್ರಾಚ್ಯಾವಶೇಷಗಳನ್ನು ಇಂದಿಗೂ ಕಾಣಬಹುದು. ಈ ಹಳೆಯ ಊರಿನ ಪಕ್ಕದಲ್ಲಿ ಹೊಸ ಬ್ಯಾತನಾಳವಿದೆ.

**ಮಲ್ಲೂರು:** ಇದರ ವಿಭಜನೆ ಮಲ್ಲ+ಊರು ಎಂದಾಗುತ್ತದೆ. ಕ್ರಿ.ಶ. ೧೦೪೮ರ ಮಲ್ಲೂರಿನ ಶಾಸನದಲ್ಲಿ 'ಮಲ್ಲವೂರು' ಎಂದೇ ಇದೆ. ಮಲ್ಲರು ಹೋರಾಟ ಮಾಡುವ ಶಕ್ತಿಶಾಲಿ ಜನರು. ಅಂತಹ ಜನರು ವಾಸವಾದಂತಹ ಒಂದು ಪ್ರದೇಶ ಇದು. ಇದು ನಿಜವಾಗಿಯೂ ಮಲ್ಲರ+ಊರು ಎಂದೇ ವಿಗ್ರಹವಾಗಬೇಕು.

**ಮಾಸಣಗಿ:** ಇದನ್ನು ಮಾಸ+ಅಣಗಿ ಎಂದು ವಿಭಜಿಸಬಹುದಾಗಿದೆ. ಶಾಸನದಲ್ಲಿನ ಇದರ ಮೂಲರೂಪ 'ಮಾಸಳಿಗೆ' ಎಂದಿದೆ. ಇದರ ವಿಗ್ರಹವೂ ಕೂಡಾ ಮಾಸ+ಅಳಿಗೆ ಎಂದಾಗುತ್ತದೆ. ಇಲ್ಲಿ 'ಳ' 'ಣ' ಗಳಲ್ಲಿ ವ್ಯತ್ಯಾಸವಿರುವುದಿಲ್ಲ. (ನೊಳ, ನೊಣ ಎಂಬಂತೆ) ಈಗ ಮಾಸ ಎಂಬುದೇ ಎರಡರಲ್ಲಿಯೂ ನಿರ್ದಿಷ್ಟವಾಗಿದೆ. ಇದರ ಮೂಲ ರೂಪ 'ವಾಸ' ಎಂದಾಗುತ್ತದೆ. ವಾಸ ಎಂದರೆ ಒಂದು ಪ್ರದೇಶದಲ್ಲಿ ನೆಲೆಸಿರುವುದು ಎಂದು ಅರ್ಥ. 'ಅಣಿಗೆ' ಎಂದರೆ ಒಂದು

ಉದ್ದೇಶಕ್ಕಾಗಿ ಬಳಸಿಕೊಳ್ಳುವ ವಸ್ತು. ಹೀಗಾಗಿ ವಾಸದ ಉದ್ದೇಶಕ್ಕಾಗಿ ಬಳಸಿಕೊಂಡ ಭೂಪ್ರದೇಶವು ಮಾಸಣಿಗೆ, ಮಾಸಳಿಗೆ ಎಂದಾಗುತ್ತದೆ.

**ಮುತ್ತಳ್ಳಿ:** ಇದು ಜನಾಂಗವಾಚಕ ಗ್ರಾಮನಾಮವಾಗಿದೆ. ಶಾಸನದಲ್ಲಿ ಇದು 'ಮತ್ತೀಹಳ್ಳಿ' 'ಮತ್ತಳ್ಳಿ' ಗ್ರಾಮನಾಮವನ್ನು ಪಂಡಿತರು ಮುತ್ತರಹಳ್ಳಿ ಎಂದು ಸಾಧಿಸಿದ್ದಾರೆ. ಇದನ್ನು ವಿಂಗಡಿಸಲಾಗಿ ಮುತ್ತರು+ ಹಳ್ಳಿ ಎಂದಾಗುತ್ತದೆ. 'ಮುತ್ತರು' ಕೂಡಾ ಒಂದು ಪ್ರಾಚೀನ ಜನಾಂಗ. ಇಂತಹ ಜನಾಂಗವು ವಾಸವಾಗಿದ್ದ ಊರು ಮುತ್ತರಹಳ್ಳಿ > ಮುತ್ತಳ್ಳಿ ಎಂದಾಗಿದೆ.

**ಮುತ್ತೂರು:** ಇದೂ ಕೂಡಾ ಜನಾಂಗವಾಚಿ ಗ್ರಾಮನಾಮವಾಗಿದೆ. ಮುತ್ತೂರಿನ ಕ್ರಿ.ಶ. ೧೧೨೨ರ ಶಾಸನದಲ್ಲಿ ಇದು ಮತ್ತೂರು ಎಂದು ದಾಖಲಾಗಿದೆ. ಇದನ್ನೂ ಮುತ್ತರ+ಊರು ಎಂದು ವಿಭಜಿಸಬೇಕು. ಮುತ್ತರು ಎಂಬ ಪ್ರಾಚೀನ ಜನಾಂಗವು ವಾಸವಾಗಿದ್ದ ಊರು ಮುತ್ತೂರು ಇಲ್ಲವೇ ಮತ್ತೂರು ಎಂಬುದಾಗಿ ರೂಢಿಯಲ್ಲಿ ಬಂದುದುಂಟು.

**ಸಂಗೂರು:** ಕ್ರಿ.ಶ. ೧೨೬೫ರ ಶಾಸನದಲ್ಲಿ ಈ ಊರ ಹೆಸರು 'ಚಂಗೂರು' ಎಂದು ದಾಖಲಾಗಿದೆ. ಕನ್ನಡದಲ್ಲಿ 'ಚ' ಕಾರವು 'ಹ' ಕಾರವಾಗುತ್ತದೆ. ಇದು ಸಹಜ ಪ್ರಕ್ರಿಯೆ. ಈ ನಿಯಮದಂತೆ ಚಂಗೂರು ಎಂಬುದು ಕಾಲಾಂತರದಲ್ಲಿ ಸಂಗೂರು ಆಗಿದೆ. ಚಂಗೂರು ಇದರ ವಿಂಗಡಣೆಯನ್ನು ಚಂಗ + ಊರು ಎಂದೇ ಮಾಡಬೇಕಾಗುತ್ತದೆ. ಅಕಸ್ಮಾತಾಗಿ ಚಂಗನ + ಊರು ಎಂದು ವ್ಯಕ್ತಿವಾಚಕವಾಗಿ ಮಾಡಿದ್ದಾದರೆ, ಅದು 'ಚಂಗನೂರು' ಎಂದಾಗಬೇಕಿತ್ತು. ಹಾಗೆ ಆಗಿಲ್ಲವಾದ್ದರಿಂದ ಇದನ್ನು ಮೊದಲೇ ಹೇಳಿದಂತೆ ಚಂಗ + ಊರು ಎಂದೇ ವಿಭಜಿಸಬೇಕು. ಇಲ್ಲಿ ನಿರ್ದಿಷ್ಟವಾಗಿರುವ 'ಚಂಗ' ಎಂದರೆ ಒಂದು ಬಗೆಯ ಔಷಧಿ ಸಸ್ಯ. ವರದಾ ನದಿಯ ದಂಡೆಯ ಮೇಲಿರುವ ಈ ಊರ ಸೀಮೆಯಲ್ಲಿ ಈ ಔಷಧಿ ಸಸ್ಯ ಹೆಚ್ಚಾಗಿ ಕಾಣಿಸಿಕೊಂಡಿದ್ದರಿಂದಲೇ ಚಂಗೂರು ಎಂದು ಈ ಊರನ್ನು ಕರೆಯಲಾಗಿದೆ. ಆದ್ದರಿಂದ ಒಂದು ಬಗೆಯ ಔಷಧಿ ಸಸ್ಯವು ಅಧಿಕ ಪ್ರಮಾಣದಲ್ಲಿ ಲಭ್ಯವಿರುವ ಜನವಸತಿಯುಳ್ಳ ಒಂದು ಪ್ರದೇಶವೇ ಚಂಗೂರು (ಸಂಗೂರು) ಎಂದಾಗಿದೆ.

**ಹಾವೇರಿ:** ಹಾವೇರಿ ಇದರ ಮೂಲರೂಪ 'ಪಾವೇರಿ' ಇದನ್ನು ಪಾ+ಏರಿ (ಪಾ+ವ್+ಏರಿ ಇಲ್ಲಿ 'ವ' ಆಗಮವಾಗಿದೆ) ಈಗ ನಿರ್ದಿಷ್ಟವಾಗಿರುವ 'ಪಾ' ಸಂಸ್ಕೃತ ಶಬ್ದ. ಇದರ ಅರ್ಥಗಳು ಕುಡಿ, ಸುರಕ್ಷಿತ ಎಂದು ಆಗುತ್ತವೆ. ವಾರ್ಗಿಕವಾಗಿರುವ 'ಏರಿ' ಕನ್ನಡ ಶಬ್ದ. ಇದರ ಅರ್ಥ ಜಲಾಶಯ ಈಗ ಹಾವೇರಿಯ ಒಟ್ಟು ಅರ್ಥ ಕುಡಿಯುವ ನೀರಿನ ಜಲಾಶಯ ಆಗಿದೆ.

**ಹಿರೇಬಾಸೂರು:** ಕ್ರಿ.ಶ. ೧೧೨೧ರ ಕಾಗಿನೆಲೆ ಶಾಸನದಲ್ಲಿ 'ವ್ಯಾಸಪುರ' ಎಂದು ಉಲ್ಲೇಖಗೊಂಡಿದೆ. (ಸೌ.ಇಂ.ಇನ್ಸ, ಸಂ. ೧೮, ಶಾ.ಸಂ. ೧೧೭, ಕಾಗಿನೆಲೆ, ಕ್ರಿ.ಶ. ೧೧೨೧.) ಇದನ್ನು ವ್ಯಾಸರ+ಪುರ ಎಂದು ವಿಂಗಡಿಸಬೇಕು. ನಿರ್ದಿಷ್ಟದಲ್ಲಿರುವ ವ್ಯಾಸರು ಮಹಾಭಾರತವನ್ನು ಬರೆದ ಮಹಾಕವಿ. ಅವರ ಹೆಸರನ್ನು ತಮ್ಮ ಊರಿಗೆ ನಾಮಕರಣ ಮಾಡಿಕೊಂಡಿದ್ದಾರೆ. ಇದು ಪುರಾಣವಾಚಕ ಹಾಗೂ ಆದರ್ಶವಾಚಕ ಗ್ರಾಮನಾಮವಾಗಿದೆ. 'ವ್ಯಾಸ' ಎಂಬುದರ ತದ್ಭವ 'ಭಾಸ' ಎಂದಾಗಿದೆ. ಅದುವೇ ಅಲ್ಪ ಪ್ರಾಣವಾಗಿ 'ಬಾಸ' ಎಂದಾಗಿದೆ. 'ಪುರ' ಇಲ್ಲಿ 'ಸುರ' ಎಂದು ಪಲ್ಲಟಗೊಂಡಿದೆ. ಆದ್ದರಿಂದ ವ್ಯಾಸಪುರದ ತದ್ಭವ ರೂಪ ಬಾಸೂರು ಎಂದಾಗಿದೆ. ಈ ಬಾಸೂರುಗಳು ಒಂದೇ ಕಡೆಯಲ್ಲಿ ಎರಡು ಕಂಡುಬಂದಿದ್ದರಿಂದ ಇವುಗಳನ್ನು ನಿರ್ದಿಷ್ಟಗೊಳಿಸಲು ಒಂದನ್ನು ಹಿರೇಬಾಸೂರು ಎಂದು, ಇನ್ನೊಂದನ್ನು ಚಿಕ್ಕಬಾಸೂರು ಎಂದು ಕರೆಯಲಾಗಿದೆ.

**ಹಿರೇಲಿಂಗದಹಳ್ಳಿ:** ಹಾವೇರಿಯಿಂದ ದಕ್ಷಿಣಕ್ಕೆ ೪ ಕಿ.ಮೀ. ದೂರದಲ್ಲಿ ಲಿಂಗದಹಳ್ಳಿ ಎಂಬ ಗ್ರಾಮವಿದೆ. ಈ ಭಾಗದಲ್ಲಿ ಇಂತಹ ಎರಡು ಊರುಗಳು ಇರುವುದರಿಂದ ಜನಸಂಖ್ಯೆ ಹೆಚ್ಚು ಇರುವ ಊರನ್ನು ಹಿರೇಲಿಂಗದಹಳ್ಳಿ ಎಂದು, ಕಡಿಮೆ ಜನಸಂಖ್ಯೆ ಇರುವ ಊರನ್ನು ಚಿಕ್ಕಲಿಂಗದಹಳ್ಳಿ ಎಂದು ನಿರ್ಧರಿಸಲಾಯಿತು. ಹಳ್ಳಿಯಲ್ಲಿ ಒಂದು ಕಾಲಕ್ಕೆ ಸ್ಥಾವರಲಿಂಗದ ಪ್ರತಿಷ್ಠಾಪನೆ ಮಾಡಲಾಗಿ ಊರಿಗೆ ಲಿಂಗದಹಳ್ಳಿ ಎಂಬ ಹೆಸರಾಯಿತು. ಹಿರೇಲಿಂಗದಹಳ್ಳಿ ಪರಿಸರದಲ್ಲಿ ದೊರೆತಿರುವ ಶಾಸನದಲ್ಲಿ (ಸೌ.ಇಂ.ಇನ್ಸ, ಸಂ.೧೮, ಶಾ.ಸಂ. ೨೫೭, ಹಿರೇಲಿಂಗದಹಳ್ಳಿ) ಈ ಗ್ರಾಮವನ್ನು 'ಆಲೂರು' ಎಂದು ಗುರುತಿಸಲಾಗಿದೆ. ಇದರ ವಿಭಜನೆಯು ಆಲ+ಊರು ಎಂದಾಗುತ್ತದೆ. ನಿರ್ದಿಷ್ಠದಲ್ಲಿರುವ 'ಆಲ' ಇದರ ಅರ್ಥವು ನೀರು. ನೀರು ವಿಶೇಷವಾಗಿ ಇರುವಂತಹ ಅಂದರೆ ಕೆರೆಕಟ್ಟೆಗಳು, ಹಳ್ಳಗಳು ಎಂದು ಅರ್ಥವಾಗುತ್ತದೆ. ಇಂತಹ ಆಲ (ನೀರು) ಇರುವ ಊರು ಆಲೂರು ಎಂದಾಗುತ್ತದೆ.

**ಹಿರೇಹಳ್ಳಿ:** ಕ್ರಿ.ಶ. ೧೧೨೧ರ ಶಾಸನದಲ್ಲಿ ಈ ಊರ ಹೆಸರನ್ನು 'ಗೊಟ್ಟಗಡಿ' ಎಂದು ದಾಖಲಿಸಲಾಗಿದೆ. (ಕ.ಇನ್ಸ, ಸಂ. ೪, ಶಾ.ಸಂ. ೨೮, ಹಿರೇಹಳ್ಳಿ, ಕ್ರಿ.ಶ. ೧೧೨೧) ಗೊಟ್ಟಗಡಿಗೂ, ಈಗಿರುವ ಹಿರೇಹಳ್ಳಿ ಹೆಸರಿಗೂ ಯಾವುದೇ ಸಂಬಂಧವನ್ನು ಕಲ್ಪಿಸಲಾಗದು. ಅದುವೇ ಬೇರೆ ಇದುವೇ ಬೇರೆ. ಆದರೆ ಒಂದೇ ಊರಿನ ಪ್ರಾಚೀನ (ಗೊಟ್ಟಗಡಿ) ಒಂದು ಅರ್ವಾಚೀನ (ಹಿರೇಹಳ್ಳಿ) ಹೆಸರು. ಪ್ರಾಚೀನವಾದ 'ಗೊಟ್ಟಗಡಿ' ಈ ಹೆಸರನ್ನು ವಿಗ್ರಹಿಸುವುದಾದರೆ ಗೊಟ್ಟ +

ಗಡಿ ಎಂದು ವಿಭಾಗಿಸಬೇಕಾಗುತ್ತದೆ. ನಿರ್ದಿಷ್ಟವಾಗಿರುವ 'ಗೊಟ್ಟ' ಇದರ ಮೂಲರೂಪ 'ಕೊಟ್ಟ' ಎಂಬುದಾಗಿದೆ. ಕೊಟ್ಟವೆ ಗೊಟ್ಟವಾಗಿದೆ. 'ಕೊಟ್ಟ' ಶಬ್ಧದ ಅರ್ಥ ದನಗಳನ್ನು ನಿಲ್ಲಿಸುವ ಒಂದು ಸೀಮಿತ ಪ್ರದೇಶ. ಇಂದಿನ ಕೊಟ್ಟಿಗೆ ಎಂಬುದು ಇದರ ಸಮನಾರ್ಥಕವಾದ ಪದವಾಗಿದೆ. 'ಗಡಿ' ಎಂಬ ವಾರ್ಗಿಕದ ಅರ್ಥ ಒಂದು ಸೀಮಿತ ಪ್ರದೇಶ ಎಂದಾಗುತ್ತದೆ. ಆದ್ದರಿಂದ ಒಟ್ಟಾಗಿ ಹೇಳುವುದಾದರೆ ಸಾಕು ದನಗಳನ್ನು ನಿಲ್ಲಿಸುವ ಒಂದು ಸೀಮಿತ ಪ್ರದೇಶವು ಗೊಟ್ಟಗಡಿ ಎಂದಾಗುತ್ತದೆ.

ಮಲೆನಾಡ ಸೀಮೆಗೆ ಹತ್ತಿರುವ ಈ ಗ್ರಾಮವು ಹುಲ್ಲು ನೀರಿನಿಂದ ಸಮೃದ್ದವಾಗಿದೆ. ಆದ್ದರಿಂದ ಇಲ್ಲಿ ದನಗಾಹಿಗಳು ತಮ್ಮ ಸಾಕು ದನಗಳೊಂದಿಗೆ ವಾಸವಾಗಿದ್ದರಿಂದ ಊರಿಗೆ ಗೊಟ್ಟಗಡಿ ಎಂಬ ಹೆಸರು ಬಂದಿರಲು ಸಾಕು. ಇದೇ ಊರಿನ ಅರ್ವಾಚೀನ ಗ್ರಾಮನಾಮವಾಗಿರುವ ಹಿರೇಹಳ್ಳಿ ಎಂಬುದು ಸಮೀಪದಲ್ಲಿಯೇ ಚಿಕ್ಕಹಳ್ಳಿ ಎಂಬ ಗ್ರಾಮವಿರುವುದರಿಂದ ಜನರು ಇದನ್ನು ಮೂಲ ಹೆಸರು ಬಿಟ್ಟು ಹಿರೇಹಳ್ಳಿ ಎಂದು ಕರೆಯಲಾರಂಭಿಸಿದ್ದರಿಂದ ಇದೇ ಗ್ರಾಮನಾಮವಾಗಿ ರೂಢಿಯಲ್ಲಿ ಬಂದಿದೆ.

**ಹುಲ್ಲಾಳ:** ಇದು (ಪುಲ್ಲವಳ) ಸಸ್ಯವಾಚಕ ಗ್ರಾಮನಾಮವಾಗಿದೆ. ಪುಲ್ಲು + ಪಳ ಎಂದು ಇದರ ವಿಭಜಿತ ರೂಪ. ನಿರ್ದಿಷ್ಟದಲ್ಲಿರುವ 'ಪುಲ್ಲು' ಹುಲ್ಲಾಗಿದೆ. ಇಲ್ಲಿ ವಿಶೇಷವಾಗಿ ಹುಲ್ಲು ಬೆಳೆಯುತ್ತಿರುವುದರಿಂದಲೇ ಈ ಹೆಸರು ಅಂಟಿಕೊಂಡಿದೆ. ಇಲ್ಲಿ ವಾರ್ಗಿಕವಾಗಿರುವ 'ವಳ' ವು 'ಪಳ' ದಿಂದ ಬಂದಿದೆ. ಇದು ಪಳ್ಳಿಯ ಮತ್ತೊಂದು ರೂಪ. ಪಳ್ಳಿ> ಪಳ> ವಳ ಎಂದಾಗಿದೆ. ಅಂದರೆ ಪುಲ್ಲವಳವು ಹುಲ್ಲು ಅಧಿಕವಾಗಿ ಬೆಳೆಯುವ ಒಂದು ಗ್ರಾಮವಾಗಿದೆ. ಪುಲ್ಲವಳವೆ ಕಾಲಾಂತರದಲ್ಲಿ ಹುಲ್ಲಾಳ ಎಂದಾಗಿದೆ.

**ಹೊಂಬರಡಿ:** ಚಾಲುಕ್ಯ ಒಂದನೇ ಸೋಮೇಶ್ವರನ ಕಾಲದ ಹೊಂಬರಡಿಯ ಶಾಸನದಲ್ಲಿ ಇದರ ಮೂಲರೂಪ 'ವೊಮ್ಮರಡಿ' ಎಂದಿದೆ. (ಸೌ.ಇಂ.ಇನ್ಸ, ಸಂ.೧೮, ಶಾ.ಸಂ,೭೩, ಹೊಮ್ಮರಡಿ) ವೊಮ್ಮರಡಿ ಇದರ ವಿಗ್ರಹವು ಒಂದು+ಮರಡಿ ಎಂದಾಗುತ್ತದೆ. ವೊಮ್ಮರಡಿ ಎಂದರೆ ಕಲ್ಲಿನ ಒಂದು ಗುಡ್ಡವಿರುವ ಪ್ರದೇಶವು. ಆದರೆ ಜನರ ಮಾತಿನಲ್ಲಿ ಇದು ಹೊಂಬರಡಿ ಎಂದಾಗಿ, ಬಂಗಾರ ಲಭ್ಯವಿರುವ ಗುಡ್ಡ ಎಂಬ ಅಭಿಪ್ರಾಯವಿದೆ. ಆದರೆ ಈ ಅರ್ಥ ಸರಿಯಾದುದಲ್ಲ.

ಇದೇ ಕಂಪಣದಲ್ಲಿ ಬರುವ ಶಾಸನೋಕ್ತ ಗ್ರಾಮಗಳಾದ ದಿಡಗೂರು, ಕೂಸನೂರು, ಬ್ಯಾಗವಾದಿ, ಉಪ್ಪುಣಸಿ ಗ್ರಾಮಗಳ ನಿಷ್ಪತ್ತಿಯನ್ನು ಭೇದಿಸಲಾಗಿಲ್ಲ. ಒಟ್ಟಿನಲ್ಲಿ ಒಂದು ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಕ ಅಧ್ಯಯನ ಸಾಫಲ್ಯ ಹೊಂದುವಲ್ಲಿ ಅಲ್ಲಿನ ಭೌಗೋಳಿಕ ಅಂಶಗಳು, ವಾಸಿಸುತ್ತಿದ್ದ ಜನಾಂಗ, ಪೌರಾಣಿಕ ಹಿನ್ನಲೆಯ ಅರಿವು ಅಗತ್ಯವಾಗಿದ್ದು, ಗ್ರಾಮನಾಮಗಳ ಅಧ್ಯಯನವು ಅಂತಹ ಅಗತ್ಯತೆಗಳನ್ನು ಪೂರೈಸುತ್ತದೆಯನ್ನಬಹುದು.



## ಆಕರ ಗ್ರಂಥಗಳು


೧. ಸೌಥ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ ಸಂ. ೧೮ ಹಾಗೂ ೨೦.

೨. ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್ ಸಂ. ೪.

೩. ಕಲಬುರ್ಗಿ ಎಂ.ಎಂ., ಧಾರವಾಡ ಜಿಲ್ಲಾ ಶಾಸನ ಸೂಚಿ.

೪. ಪಾಟೀಲ ಭೋಜರಾಜ., ಹಿರೇಕೆರೂರು ತಾಲೂಕು ಗ್ರಾಮನಾಮ ಅಧ್ಯಯನ.

೫. ಕಲಬುರ್ಗಿ ಎಂ.ಎಂ., ಕನ್ನಡ ನಾಮವಿಜ್ಞಾನ.

# ಮಲೆನಾಡಿನಲ್ಲಿ ಹೊಯ್ಸಳರ ತೆರಿಗೆ ವ್ಯವಸ್ಥೆ: ಒಂದು ಅಧ್ಯಯನ

ಮಧುರಾಜ್*

**ಹೊ**ಯ್ಸಳರು ಮಧ್ಯಯುಗೀನ ಕಾಲದಲ್ಲಿ ಕರ್ನಾಟಕದ ಬಹುತೇಕ ಪ್ರದೇಶಗಳನ್ನಾಳಿದ ಶ್ರೇಷ್ಠ ರಾಜವಂಶಗಳಲ್ಲಿ ಒಂದು. ಈ ರಾಜವಂಶದ ರಾಜಕೀಯ ಬೆಳವಣಿಗೆಗಳನ್ನು ಎಳೆಎಳೆಯಾಗಿ ಬಿತ್ತರಿಸುವ ಅಧ್ಯಯನಗಳು ನಡೆದಿವೆ. ಇತರ ರಾಜವಂಶಗಳಂತೆ ಆಡಳಿತಾತ್ಮಕವಾಗಿಯೂ ಅನೇಕ ವಿಚಾರಗಳ ಬಗ್ಗೆ ಬೆಳಕು ಚೆಲ್ಲುವ ಪ್ರಯತ್ನಗಳಾಗಿವೆ. ಹೊಯ್ಸಳರ ಕಂದಾಯ ಪದ್ಧತಿಯನ್ನು ಅನುಲಕ್ಷಿಸಿ, ಆಳವಾದ ಅಧ್ಯಯನಗಳು ವಿರಳವಾಗಿದೆ. ಇಂತಹ ಸನ್ನಿವೇಶದಲ್ಲಿ ಹೊಯ್ಸಳರ ಕಂದಾಯ ವ್ಯವಸ್ಥೆಯನ್ನು ಭೌಗೋಳಿಕ ಲಕ್ಷಣಗಳಿಗನುಗುಣವಾಗಿ ವಿಮರ್ಶಿಸುವಂತಹ ಪ್ರಯತ್ನ ಇದಾಗಿದೆ. ಪ್ರಾಥಮಿಕ ಆಧಾರಗಳನ್ನು ಉಪಯೋಗಿಸಿಕೊಂಡು ಸಂಖ್ಯಾಶಾಸ್ತ್ರದ ಮಾದರಿಯಲ್ಲಿ ಮಲೆನಾಡು ಪ್ರದೇಶದಲ್ಲಿ ಹೊಯ್ಸಳರು ತೆರಿಗೆ ವ್ಯವಸ್ಥೆಯನ್ನು ರೂಪಿಸಿಕೊಂಡಿರುವುದನ್ನು ಈ ಮೂಲಕ ವಿಮರ್ಶಿಸಲಾಗಿದೆ.

ಹೊಯ್ಸಳರು ಮಲೆನಾಡಿನಲ್ಲಿ ತಮಗಿಂತ ಕಿರಿಯ ಸಾಮಂತರುಗಳ ನಡುವಿನ ಸಂಬಂಧಗಳನ್ನು ತಮ್ಮ ಆರ್ಥಿಕ ಹಿತದೃಷ್ಟಿಯನ್ನು ಇಟ್ಟುಕೊಂಡು ರಾಜಕೀಯವಾಗಿ ತಮ್ಮ ರಾಜ್ಯದ ವಿಸ್ತರಣೆಯನ್ನು ಮಾಡಿರುವುದನ್ನು ಅಭಿವ್ಯಕ್ತಪಡಿಸುತ್ತದೆ. ಭೌಗೋಳಿಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡೇ ವಿಸ್ತರಣಾ ಚಟುವಟಿಕೆಗಳಲ್ಲಿ ಹೊಯ್ಸಳರು ಭಾಗವಹಿಸಿದ್ದರು. ರಾಜ್ಯ ತನ್ನ ಆರ್ಥಿಕ ಲಾಭಕ್ಕಾಗಿ ಉಳಿದ ಭೌಗೋಳಿಕ ಪ್ರದೇಶಗಳ ಮೇಲೆ ತನ್ನ ನಿಯಂತ್ರಣವನ್ನು ಸಾಧಿಸಿದಂತಹ ಪ್ರಯತ್ನಗಳನ್ನು ನಾವು ಇಲ್ಲಿ ಗಮನಿಸಬಹುದು.

ಈ ಹಿನ್ನೆಲೆಯಲ್ಲಿ ಹೊಯ್ಸಳರ ತೆರಿಗೆ ವ್ಯವಸ್ಥೆಯನ್ನು ವವ್ಯಸ್ಥಿವಾಗಿ ನಡೆಸುವ ಪ್ರಯತ್ನ ಇದಾಗಿದೆ. ಮಲೆನಾಡು ಪ್ರದೇಶವು ಪಶ್ಚಿಮ ಘಟ್ಟಗಳ ಪೂರ್ವದ ಅಂಚಿನ ಮತ್ತು ಪಶ್ಚಿಮದ ಗಡಿಯ ಮಧ್ಯೆ ತೆರೆದ ಉತ್ತರದದಿಣ್ಣೆ – ತಗ್ಗುಗಳಿಂದ ಕೂಡಿದ ಬಯಲು ಪ್ರದೇಶವಾಗಿದೆ. ಇದು ಸಾಕಷ್ಟು ಕಾಡು ಹಾಗು ಪರ್ವತಗಳಿಂದ ಆವೃತವಾಗಿದ್ದು, ಸದಾ ಹಸಿರಾಗಿರುವ ಪ್ರದೇಶ. ಕಾಡು ಉತ್ಪತ್ತಿಗೆ ಒಳ್ಳೆಯ ಪ್ರದೇಶವಾಗಿರುವುದರಿಂದ ಆರ್ಥಿಕವಾಗಿ ಲಾಭದಾಯಕವಾಗಿತ್ತು. ಭಾರೀ ಹಾಗೂ ನಿಶ್ಚಿತ ಮಳೆಯಾಗುತ್ತದೆ (೪೦ ರಿಂದ ೧೦೦ಸೆಂಟಿ ಮೀಟರಿನಷ್ಟು). ಇಲ್ಲಿಯ ಭೌಗೋಳಿಕ ಪರಿಸ್ಥಿತಿಯು ಭಿನ್ನವಾಗಿದ್ದು, ಮಲೆನಾಡಿನ ಪೂರ್ವಭಾಗದಲ್ಲಿ ವಿಶಾಲವಾಗಿರುವ ಈ ಏರು ತಗ್ಗು ಪ್ರದೇಶಗಳು ಪ್ರಸ್ತಭೂಮಿಯಾದರೂ ಮೈದಾನಪ್ರದೇಶಗಳಷ್ಟು ನೀರಾವರಿ ಸೌಕರ್ಯಗಳನ್ನು ಹೊಂದಿರುವುದಿಲ್ಲ.[೧] ಇದು ನಿಸರ್ಗದ ಸಸ್ಯ ಸಂಪತ್ತನ್ನು ಹೊಂದಿದ್ದು, ಕೃಷಿ ಸಮುದಾಯಕ್ಕೆ ಸೂಕ್ತವಾದುದು. ಈ ಅರೆಮಲೆನಾಡಿನ ವಿಸ್ತಾರವು ಸರಿ ಸುಮಾರು ೩೦ ಕಿ.ಮೀ.ನಿಂದ ೬೦ ಕಿ.ಮೀ.ಗಳಾಗಿದ್ದು, ಕೊನೆಯ ಭಾಗದಲ್ಲಿ ದಕ್ಷಿಣದಲ್ಲಿ ಮೈಸೂರು ಪ್ರಾಂತ್ಯವನ್ನು ತಲುಪುತ್ತದೆ. ಈ ಅರೆ ಮಲೆನಾಡು ಪ್ರದೇಶ ಸಾಮಾನ್ಯವಾಗಿ ಯಗಚಿ ನದಿಯ ತಳಪ್ರದೇಶವಾಗಿದ್ದು, ಚಿಕ್ಕಮಗಳೂರು ಮತ್ತು ಬೇಲೂರು ಹಾಗೂ ಹಾಸನದ ಪಶ್ಚಿಮ ಭಾಗಗಳಲ್ಲಿ ಕಂಡುಬರುತ್ತದೆ.[೨]

ಮಲೆನಾಡು ಪ್ರದೇಶದಲ್ಲಿ ದೊರೆತ ಹೊಯ್ಸಳರ ಶಾಸನದ ಸಮೀಕ್ಷೆಯ ಪ್ರಕಾರ ತೆರಿಗೆ ಪದ ಉಲ್ಲೇಖಿತ ೧೭೧ ಶಾಸನಗಳು ದೊರಕಿವೆ. ಈ ಶಾಸನಗಳಲ್ಲಿ ೧೮೩ ವಿವಿಧ ತೆರಿಗೆಯ ಪದಗಳಿದ್ದು, ಒಟ್ಟು ಪುನರಾವರ್ತನೆಯಾದ ತೆರಿಗೆಗಳ ಸಂಖ್ಯೆ: ೫೫೯ ಆಗಿದೆ.[೩] ಈ ಮೂಲಾಧಾರಗಳ ಹಿನ್ನೆಲೆಯಲ್ಲಿ ಮಲೆನಾಡಿನ ತೆರಿಗೆ ವ್ಯವಸ್ಥೆಯನ್ನು ಅಧ್ಯಯನ ನಡೆಸಿದಾಗ ಭೌಗೋಳಿಕ ಸನ್ನಿವೇಶವು ತೆರಿಗೆ ವ್ಯವಸ್ಥೆಯ ಮೇಲೆ ಪ್ರಭಾವ ಬೀರಿರುವುದನ್ನು ನಾವು ಖಚಿತಪಡಿಸಬಹುದಾಗಿದೆ. ಮಲೆನಾಡು ಹೊಯ್ಸಳರ ಕೇಂದ್ರಾಡಳಿತಕ್ಕೆ ಒಳಪಟ್ಟಿದ್ದ ಪ್ರದೇಶವಾದ್ದರಿಂದ ಆದಾಯ ಕ್ರೋಢೀಕರಣದ ಮೂಲವಾಗಿದೆ. ಶಾಸನಾಧಾರಗಳಿಂದ ಹೊಯ್ಸಳರ ಅರ್ಥವ್ಯವಸ್ಥೆಯು ಕೃಷಿಯಾಧಾರಿತವಾಗಿದೆಯೆಂದು ತಿಳಿದುಬರುತ್ತದೆ.

* ಇತಿಹಾಸ ಉಪನ್ಯಾಸಕರು, ಪೂರ್ಣಪ್ರಜ್ಞ ಪದವಿಪೂರ್ವ ಕಾಲೇಜು, ಅದಮಾರು, ಉಡುಪಿ ಜಿಲ್ಲೆ, ಮೊ. ೯೪೮೦೫೭೫೫೯೩

## ಮಲೆನಾಡು ಪ್ರದೇಶದಲ್ಲಿ ಕಂದಾಯ ಪದ ಉಲ್ಲೇಖಿತ ಶಾಸನಗಳು ದೊರೆತ ಸ್ಥಳ




ಹೊಯ್ಸಳ ರಾಜ್ಯದ ಮಲೆನಾಡು ಪ್ರದೇಶದ ಶಾಸನಗಳಲ್ಲಿ ಅತ್ಯಂತ ಹೆಚ್ಚು ಪ್ರಸ್ತಾಪಿಸಲ್ಪಟ್ಟ ತೆರಿಗೆ ಪದ 'ಸುಂಕ'. ಇದು ಸಂಸ್ಕೃತದ 'ಶುಲ್ಕ' ಪದದಿಂದ ರೂಪುಗೊಂಡಿದ್ದು, ಯಾವುದೇ ಒಂದು ವಸ್ತುವನ್ನು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ರವಾನಿಸುವಾಗ ವಿಧಿಸುವ 'ಕರಭಾರ'ವಾಗಿದೆ.[೪] ಆದರೆ ಕೆಲವೊಂದು ಸಂದರ್ಭದಲ್ಲಿ ಈ ಸುಂಕವು ತನ್ನ ವ್ಯಾಪ್ತಿಯನ್ನು ವಿಸ್ತರಿಸಿದಂತಹ ಉದಾಹರಣೆಗಳನ್ನು ಗಮನಿಸಬಹುದು. ಸಾಮಾನ್ಯವಾಗಿ ದೈನಂದಿನ ಉಪಯೋಗದ ವಸ್ತುಗಳ ಮೇಲಿನ ಕರವು ಹೆಚ್ಚು ಆದಾಯ ತರುವಂತಹ ಮೂಲವಾಗಿರುತ್ತದೆ. ಹೊಯ್ಸಳರ ಸಮಕಾಲೀನ ಗ್ರಂಥಗಳು ಸುಂಕ ವಿಧಿಸುವ ಪ್ರಮಾಣ ಮತ್ತು ಯಾವ ವಸ್ತುಗಳ ಮೇಲೆ ಎಷ್ಟೆಷ್ಟು ಸುಂಕ ವಿಧಿಸಬಹುದೆಂಬ ವಿಚಾರವನ್ನು ಉಲ್ಲೇಖಿಸುತ್ತದೆ. ಸೋಮೇಶ್ವರ ಹಾಗೂ ಮನುವಿನ ಪ್ರಕಾರ ಪ್ರಾಣಿಗಳು ಹಾಗೂ ಚಿನ್ನದ ಮೇಲೆ ಶೇ. ೫೦ ಸುಂಕ ವಿಧಿಸಬೇಕು. ಇನ್ನಿತರ ವಸ್ತುಗಳಾದ ಸುಗಂಧ ದ್ರವ್ಯ, ಔಷಧಿ, ಹೂವು, ಹಣ್ಣು, ತರಕಾರಿ, ಮಣ್ಣಿನ ಮಡಿಕೆ, ಚರ್ಮದ ಸಾಮಗ್ರಿಗಳ ಮೇಲೆ ಶೇ. ೧೬ರಷ್ಟು ಸುಂಕ ವಿಧಿಸಬಹುದೆಂದು ತಿಳಿಸಿದ್ದಾರೆ.[೫] ಈ ವಿಚಾರವು ಹೊಯ್ಸಳರ ಕಾಲದ ರಾಜ್ಯದ ವಾಣಿಜ್ಯ ವ್ಯವಹಾರಗಳು ಮಲೆನಾಡಿನಲ್ಲಿ ಸಮೃದ್ಧವಾಗಿದ್ದು, ಸುಂಕವು ಈ ಭಾಗದ ಆದಾಯದ ಪ್ರಮುಖ ಆಕರವಾಗಿದೆ ಎನ್ನುವುದನ್ನು ಸ್ಪಷ್ಟಪಡಿಸುತ್ತದೆ. ಇದಕ್ಕೆ ಇಂಬು ನೀಡುವಂತೆ ಮಲೆನಾಡಿನ ಹೊಯ್ಸಳರ ಶಾಸನಗಳಲ್ಲಿ ೪೩ ಬಾರಿ ಸುಂಕ ಪದವು ಪುನರಾವರ್ತನೆ ಆಗಿದೆ. ಈಗಾಗಲೇ ಹೊಯ್ಸಳರ ತೆರಿಗೆ ಪದ್ಧತಿಯಲ್ಲಿ ಹಲವಾರು ಅಧ್ಯಯನಗಳು ಪ್ರತಿಪಾದಿಸಿದಂತೆ 'ಸಿದ್ಧಾಯ' ಪದವು ಅತ್ಯಂತ ಹೆಚ್ಚು ಪ್ರಸ್ತಾಪಿಸಲ್ಪಟ್ಟ ಹೊಯ್ಸಳ ರಾಜ್ಯದ ಆದಾಯದ ಮೂಲವಾಗಿದೆ. ಸಿದ್ಧಾಯವು ಸಾಮಾನ್ಯವಾಗಿ ಭೂಮಿಯ ಒಡೆತನದ ಮೇಲೆ ವಿಧಿಸುವ ಕಂದಾಯವೆಂದು ಪರಿಭಾವಿಸಲಾಗಿದೆ.[೬] ಆದರೆ ಮನೆ, ಅಂಗಡಿ, ಅಗ್ರಹಾರ, ಹಳ್ಳಿಗಳ ಮೇಲೂ ವಿಧಿಸಿರುವುದರಿಂದ ಕೇವಲ ಕೃಷಿಭೂಮಿಯ ಮೇಲಿನ ತೆರಿಗೆಯಾಗಿರದೆ ಇತರ ಮೂಲಗಳಿಂದಲೂ ಸಂಗ್ರಹಿಸಲ್ಪಡಬಹುದಾಗಿದೆ. ಇದಲ್ಲದೆ ಸಿದ್ಧಾಯವು ರಾಜ್ಯದ ಪ್ರಧಾನ ಆದಾಯವಾಗಿರಲು ಮುಖ್ಯ ಕಾರಣವೆಂದರೆ ಇದನ್ನು ಸಾರ್ವತ್ರಿಕ ತೆರಿಗೆಯಾಗಿ ವಿಧಿಸಲಾಗುತ್ತಿತ್ತು. ಧಾರ್ಮಿಕ ಸಂಸ್ಥೆಗಳಾದ ದೇವಾಲಯಗಳು, ಬಸದಿಗಳು ಮತ್ತು ಬ್ರಹ್ಮದೇವ ಹಳ್ಳಿಗಳು ಇದರಿಂದ ಹೊರತಾಗಿರಲಿಲ್ಲ. ಶ್ರೀಮಂತ, ಬಡವ ಅಥವಾ ಯಾವುದೇ ವೃತ್ತಿ

## ತೆರಿಗೆಯ ಪದಗಳನ್ನು ಉಲ್ಲೇಖಿಸುವ ಮಲೆನಾಡಿನ ಶಾಸನಗಳು

| ಕ್ರ.ಸಂ. | ಸ್ಥಳದ ಹೆಸರು | ಕ್ರ.ಸಂ. | ಸ್ಥಳದ ಹೆಸರು | ಕ್ರ.ಸಂ. | ಸ್ಥಳದ ಹೆಸರು |
|---|---|---|---|---|---|
| ೧. | ಹೆಬ್ಬಯಲು | ೩೬. | ಪುಷ್ಪಗಿರಿ | ೭೧ | ಅಮೃತಪುರ |
| ೨. | ಹುಂಚ | ೩೭. | ಹಗರಿ | ೭೨ | ದ್ಯಾಂಪುರ |
| ೩. | ಕೆರೆಹಳ್ಳಿ | ೩೮. | ಬಸ್ತಿಹಳ್ಳಿ | ೭೩ | ಕುಂಟನ ಮಾದಾವೂರು |
| ೪. | ದೇವಸ | ೩೯. | ಆಗಸರ ಹಳ್ಳಿ | ೭೪ | ಸೋಮಾಪುರ |
| ೫. | ಆವಿನಹಳ್ಳಿ | ೪೦. | ನಾರನಪುರ | ೭೫ | ಗಾದಿಹಳ್ಳಿ |
| ೬. | ಚಿಮಲೆ | ೪೧. | ಸುಗ್ಗಲೂರು | ೭೬ | ಕೆಂಕೇರಿ |
| ೭ | ಸಾಕಲಾಲು | ೪೨. | ಸಿದ್ಧಾಪುರ | ೭೭ | ಸೋಮನಹಳ್ಳಿ |
| ೮. | ಎಡಹಳ್ಳಿ | ೪೩. | ಚಂದಾಪುರ | ೭೮ | ಕೆರೆಸಂತೆ |
| ೯. | ಹರಕೇರಿ | ೪೪. | ಶೃಂಗೇರಿ | ೭೯ | ಮತ್ತಾವೂರು |
| ೧೦. | ಕುರಲೆ | ೪೫. | ಮಟ್ಟದ ಹಳ್ಳಿ | ೮೦ | ಮಲ್ಲೇಶ್ವರ |
| ೧೧. | ತಟ್ಟೆಕೆರೆ | ೪೬. | ಹಂಟೂರು | ೮೧ | ಕುಪ್ಪೆಹಾಳು |
| ೧೨. | ಆಲಹಳ್ಳಿ | ೪೭. | ಪಲ್ಗುಣಿ | ೮೨ | ಬ್ರಹ್ಮಸಮುದ್ರ |
| ೧೩. | ನಿಡಿಗಿ | ೪೮. | ಕಡಿದಾಳು | ೮೩ | ಅಸಂಧಿ |
| ೧೪. | ಚೋರಾಡಿ | ೪೯. | ಕಳಸ | ೮೪ | ಒಕ್ಕಲಗೆರೆ |
| ೧೫. | ಸಂತೆಕಡೂರು | ೫೦. | ತರಿವೆ | ೮೫ | ಜಮ್ಮಾಪುರ |
| ೧೬. | ಕೂಡ್ಲಿ | ೫೧. | ಚಿತ್ತವಳ್ಳಿ | ೮೬ | ಹೀರೇನಲ್ಲೂರು |
| ೧೭. | ಕುಸ್ಕೂರು | ೫೨. | ಮತ್ತಾವರ | ೮೭ | ಬಿಟ್ಟೇನ ಹಳ್ಳಿ |
| ೧೮. | ಅಬ್ಬರನ ಕಟ್ಟೆ | ೫೩. | ಕಳಸಾಪುರ | ೮೮ | ಮಾದಾಪುರ |
| ೧೯. | ದಾನಸಾಲೆ | ೫೪ | ಅಂಬಲೆ | ೮೯ | ದೇವನೂರು |
| ೨೦. | ಕೊಡೂರು | ೫೫. | ಕಂಡ್ಯ | ೯೦ | ಹೇರಳಘಟ್ಟ |
| ೨೧. | ಹೊರನೆಬೈಲು | ೫೬. | ಬೆಳವಡಿ | ೯೧ | ಬಾನೂರು ಅಗ್ರಹಾರ |
| ೨೨. | ಭದ್ರಾವತಿ | ೫೭. | ಈಶ್ವರಹಳ್ಳಿ | ೯೨ | ಬನವಾಸಿ |
| ೨೩. | ಮಾಲೇನಹಳ್ಳಿ | ೫೮. | ಇಂದಾವರ | ೯೩ | ಬಳ್ಳಿಗಾಮಿ |
| ೨೪. | ಹೊನ್ನಾಳಿ | ೫೯. | ಮಾರಲೆ | ೯೪ | ಕನ್ನಾವೂರು |
| ೨೫. | ನಗರ | ೬೦. | ಗೌತಮೇಶ್ವರ | ೯೫ | ಗೌಡ ಅಗ್ರಹಾರ |
| ೨೬. | ತೊಳಲು | ೬೧. | ಹಂಚರವಳ್ಳಿ | ೯೬ | ಬಲಿಪುರ |
| ೨೭. | ಬೇಲೂರು | ೬೨. | ಆನೂರು | ೯೭ | ಬೇಗೂರು ಅಗ್ರಹಾರ |
| ೨೮. | ಘಟ್ಟದ ಹಳ್ಳಿ | ೬೩. | ಹಲಸುಬಾಳು | ೯೮ | ತಡವನಾಲೆ |
| ೨೯. | ಹಳೆಬೀಡು | ೬೪. | ನಾಗಲಾಪುರ | ೯೯ | ಬೆಲವಣಿ |
| ೩೦. | ಕ್ಯಾತಲಾಪುರ | ೬೫. | ಹಳೆಯೂರು | ೧೦೦ | ಆರಲೂರು |
| ೩೧. | ಹುಲಿಕೆರೆ | ೬೬. | ಸಮಾತಲ | ೧೦೧ | ಜೆಡ್ಡುಲಿಗಿ |
| ೩೨. | ಕೂಡಲೂರು | ೬೭ | ಚಿಕ್ಕಕಾಟೂರು | ೧೦೨ | ಸಲಿಯೂರು |
| ೩೩. | ಮಾರೇನ ಹಳ್ಳಿ | ೬೮. | ನಂದಿ | ೧೦೩ | ಬಾಲೆಯ ಹಳ್ಳಿ |
| ೩೪. | ಬೆಳವಾಡಿ | ೬೯. | ತರಿಕೆರೆ | ೧೦೪ | ಸಿರಿವೊಳಲು |
| ೩೫. | ಕುಮಾರನ ಹಳ್ಳಿ | ೭೦. | ಇಟಗಿ | ೧೦೫ | ಶಿಕಾರಿಪುರ |

ತಾರತಮ್ಯ ಇಲ್ಲದೇ ಸರ್ವರೂ ಪಾವತಿಸಬೇಕಾದ ಕಂದಾಯ ಸಿದ್ಧಾಯ.[೭] ದೇವಾಲಯ ಹಾಗೂ ಬ್ರಾಹ್ಮಣರಿಗೆ ಬೇರೆ ತೆರಿಗೆಗಳಿಂದ ವಿನಾಯಿತಿ ನೀಡುತ್ತಿದ್ದರೂ, ಸಿದ್ಧಾಯವನ್ನು ಕಡ್ಡಾಯವಾಗಿ ಪಾವತಿಸಬೇಕಾಗಿತ್ತು.[೮] ಆದರೆ ಮಲೆನಾಡು ಪ್ರದೇಶದಲ್ಲಿ 'ಸಿದ್ಧಾಯ' ಪದವು ೩೯ ಬಾರಿ ಉಲ್ಲೇಖವಾಗಿದ್ದು, ಸುಂಕ ಪದಕ್ಕಿಂತ ಕಡಿಮೆಯಾಗಿದೆ. ಅದರಂತೆ ತೆರಿಗೆ ಮುಕ್ತಗೊಳಿಸುವ ಅಥವಾ ಸರ್ವಮಾನ್ಯ ಪದವು ೨೯ ಬಾರಿ ಪುನರಾವರ್ತನೆಗೊಂಡಿರುವುದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಈ ವಿಚಾರವಾಗಿ ಅಧ್ಯಯನ ನಡೆಸಿದಾಗ ಹೆಚ್ಚಿನ ಭೂಭಾಗ ಮಲೆನಾಡು ದಟ್ಟ ಅರಣ್ಯ ಪ್ರದೇಶಗಳಿಂದ ಆವರಿಸಲ್ಪಟ್ಟಿದೆ.[೯] ಇದರಿಂದಾಗಿ ಕೃಷಿ ಚಟುವಟಿಕೆಗಳ ವಿಸ್ತರಣೆಯ ಕೊರತೆಯಿಂದಾಗಿ ಆದಾಯದ ಮೂಲದಲ್ಲಿ ಅಲ್ಪ ಪ್ರಮಾಣದ ಹಿನ್ನೆಡೆಯಾಗಿರಬಹುದು. ಈ ಕಾರಣಕ್ಕಾಗಿಯೇ ರಾಜ್ಯಾಡಳಿತವು ಅನೇಕ ಶಾಸನಗಳಲ್ಲಿ ಹೆಚ್ಚು-ಹೆಚ್ಚು ಅರಣ್ಯ ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಲು ರೈತಾಪಿ ವರ್ಗದವರಿಗೆ ಉತ್ತೇಜನ ನೀಡುವ ಉದ್ದೇಶದಿಂದ ತೆರಿಗೆಯನ್ನು ಹಲವು ವರ್ಷಗಳವರೆಗೆ ದುಬಾರಿಯಾದ ಸಿದ್ಧಾಯ ಕಂದಾಯದಿಂದ ಮುಕ್ತಗೊಳಿಸಿದ ಉಲ್ಲೇಖಗಳನ್ನು ಗಮನಿಸಬಹುದು.[೧೦]

ರಾಜ್ಯಾಡಳಿತಕ್ಕೆ ತನ್ನ ರಾಜ್ಯದ ತೆರಿಗೆಯನ್ನು ಹೆಚ್ಚಿಸುವಂತಹ ಅಗತ್ಯವಿದೆ. ಹೊಯ್ಸಳರು ಬಲವಂತವಾಗಿ ತನ್ನ ಪ್ರಜೆಗಳ ಮೇಲೆ ತೆರಿಗೆ ಹೇರಿ, ತಮ್ಮ ಅಗತ್ಯತೆಗಳನ್ನು ಈಡೇರಿಸಲ್ಲಿಲ್ಲ; ಹೊರತಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹಿಸುವುದು, ನೀರಾವರಿ ಸೌಲಭ್ಯ ಒದಗಿಸುವುದು, ತೆರಿಗೆ ವಿನಾಯಿತಿ ನೀಡುವುದು ಹಾಗೂ ಕೃಷಿ ಚಟುವಟಿಕೆಯನ್ನು ವಿಸ್ತರಿಸುವ ರೈತರಿಗೆ ಆರಂಭದಲ್ಲಿ ನಾನಾ ರೀತಿಯ ಬೆಂಬಲವನ್ನು ಘೋಷಿಸಿರುವುದು ಹಲವಾರು ಶಾಸನಗಳಲ್ಲಿ ಪ್ರಸ್ತಾಪಿಸಲಾಗಿದೆ. ಮಲೆನಾಡಿನಲ್ಲಿ ವಾಣಿಜ್ಯ ಬೆಳೆಗಳು ಹೆಚ್ಚಾಗಿ ಬೆಳೆಯುವ ಕಾರಣ ಭೂಮಿಯ ಮೇಲಿನ ತೆರಿಗೆಯನ್ನು ಮನ್ನಿಸಿ, ವಾಣಿಜ್ಯ ಬೆಳೆಯಾದ ಅಡಕೆಯ ಮೇಲೆ ತೆರಿಗೆ ವಿಧಿಸಿರುವುದು ಭೌಗೋಳಿಕ ಹಿನ್ನೆಲೆಯಲ್ಲಿ ಮಹತ್ವವನ್ನು ಪಡೆದುಕೊಳ್ಳುತ್ತದೆ. ಅರಣ್ಯ ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಲು ತೆರಿಗೆ ವಿನಾಯಿತಿ ನೀಡಿದ್ದಲ್ಲದೆ ಈ ಭೂಮಿಯನ್ನು ಅಡಕೆ ಕೃಷಿಗೆ ಬಳಸಿಕೊಳ್ಳಲು ಅವಕಾಶವಾಗುವಂತೆ ಅಡಕೆ ಗಿಡಗಳು ಫಲ ನೀಡುವವರೆಗೆ ತೆರಿಗೆ ಮುಕ್ತಗೊಳಿಸಿರುವುದು[೧೧] ಹೊಯ್ಸಳರ ತೆರಿಗೆ ವ್ಯವಸ್ಥೆಯ ಹಿಂದೆ ಭೌಗೋಳಿಕ ಪರಿಣಾಮಗಳು ಅಡಗಿವೆ ಎನ್ನುವುದನ್ನು ಇನ್ನಷ್ಟು ಪುಷ್ಟಿಗೊಳಿಸುತ್ತದೆ.

ಅದರಂತೆಯೇ 'ಸರ್ವಮಾನ್ಯ' ಪದ ಹೆಚ್ಚಾಗಿ ಕಂಡು ಬಂದಿರುವುದು ಭೌಗೋಳಿಕ ಹಿನ್ನೆಲೆಯಲ್ಲಿ ಅತ್ಯಂತ ಪ್ರಮುಖವಾಗಿದೆ. ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಬ್ರಾಹ್ಮಣರು/ಪುರೋಹಿತ ವರ್ಗದವರು ಮಲೆನಾಡು ಪ್ರದೇಶದಲ್ಲಿ ವಾಸವಾಗಿದ್ದು, ಹಲವರು ಕೃಷಿ ವೃತ್ತಿಯನ್ನು ತಮ್ಮದಾಗಿಸಿಕೊಂಡಿದ್ದರು. ಬ್ರಹ್ಮದೇಯ, ಭೂಹಿಡುವಳಿಗಳು ದಾನದತ್ತಿಯ ರೂಪದಲ್ಲಿ ಬ್ರಾಹ್ಮಣ ಕುಟುಂಬಗಳಿಗೆ ನೀಡಲಾಗುತ್ತಿದ್ದು, ವೈದಿಕ ವಿಧಿ-ವಿಧಾನ, ಜ್ಯೋತಿಷ್ಯ ಇತ್ಯಾದಿ ವೃತ್ತಿಗಳನ್ನು ನಡೆಸಲು ಹಳ್ಳಿಗಳನ್ನು ಬ್ರಹ್ಮದೇಯವಾಗಿ ನೀಡಲಾಗುತ್ತಿತ್ತು.[೧೨] ಆದರೆ ೧೨ನೇ ಶತಮಾನದ ಕಾಲಘಟ್ಟದಲ್ಲಿ ದೇವಾಲಯಗಳ ನಂಟು ಹೊಂದಿದ 'ಬ್ರಹ್ಮದೇಯ' ಹಳ್ಳಿಗಳು ದೇವಾಲಯಗಳಿಂದ ಬೇರ್ಪಟ್ಟಿದ್ದವು. ದೇವಾಲಯಗಳು ತಮ್ಮ ಆಡಳಿತ ನಿರ್ವಹಿಸಲು ಮತ್ತು ದೈನಂದಿನ ಚಟುವಟಿಕೆಗಳಿಗೆ ತಮ್ಮದೇ ಆದ ಪ್ರತ್ಯೇಕ ಆಡಳಿತ ಸ್ವರೂಪವನ್ನು ನೀಡಿತು.[೧೩] ಹೊಯ್ಸಳರು ದೇವಾಲಯದ ಆಡಳಿತ ನಿರ್ವಹಣೆಗೆ ಸ್ಥಾನಿಕ ಅಥವಾ ಸ್ಥಾನಪತಿಯನ್ನು ನೇಮಿಸಿದರು. ಇದರಿಂದಾಗಿ ಮಲೆನಾಡಿನಲ್ಲಿ ಹೊಯ್ಸಳರ ಕಾಲದ ದೇವಾಲಯಗಳು ಬ್ರಹ್ಮದೇಯದೊಂದಿಗೆ ಭೂ ಮಾಲಿಕ ಸಂಸ್ಥೆಯಾಗಿ ಬೆಳೆಯಿತು.[೧೪] ತತ್ಪರಿಣಾಮ ದೇವಾಲಯಗಳು ಧಾರ್ಮಿಕ ವಿಧಿ-ವಿಧಾನದ ಆಚರಣೆಗಳಿಗೆ ಕೊಡುತ್ತಿದ್ದ ಮಹತ್ವವು ಕಾಲಕ್ರಮೇಣ ಕಡಿಮೆಯಾಗಿ, ಭೂಮಿಯ ನಿರ್ವಹಣೆಗೆ ಪ್ರಥಮ ಆದ್ಯತೆಯನ್ನು ನೀಡುವುದರೊಂದಿಗೆ ದೇವಾಲಯಗಳು ಬೃಹತ್ ಭೂ ಹಿಡುವಳಿದಾರರಾಗಿ ಮತ್ತು ಭೂ ನಿರ್ವಹಣೆಯ ಸಂಸ್ಥೆಯಾಗಿ ತನ್ನ ಕಾರ್ಯವನ್ನು ನಂತರದ ದಿನಗಳಲ್ಲಿ ಬದಲಾಯಿಸುವಂತಾಯಿತು.[೧೫]

ಈ ಎಲ್ಲಾ ವಿಚಾರಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸುಂಕವು ಅತ್ಯಂತ ಪ್ರಮುಖ ಮಲೆನಾಡಿನ ಆದಾಯದ ಮೂಲವಾಗಿದೆ ಎಂದು ತಿಳಿದುಬರುತ್ತದೆ. ಇದರ ಜೊತೆಜೊತೆಗೆ ಸುಂಕ ಪದಕ್ಕೆ ತತ್ಸಮಾನವಾದಂತಹ ಮಾರಾಟ ಮಾಡುವ ಸರಕಿನ ಮೇಲೆ ಅಥವಾ ನಗದು ವ್ಯಾಪಾರಕ್ಕೆ ಸಂಬಂಧಿಸಿದಂತೆ ವಿಧಿಸುವ ದೊಡ್ಡ ಮೊತ್ತದ ಕರ- ವಡ್ಡರಾವುಳ,[೧೬] ಮಲೆನಾಡಿನ ಶಾಸನಗಳಲ್ಲಿ ೧೭ ಬಾರಿ ಪ್ರಸ್ತಾಪಿಸಿದೆ. ಊರು ಅಥವಾ ಪ್ರದೇಶದ ಮೇಲೆ ವಿಧಿಸುವ ಒಟ್ಟು ಸುಂಕ ಅಂದರೆ ಹೆರ್ಜುಂಕ[೧೭] ಪದವು ೧೫ ಬಾರಿ ಪ್ರಸ್ತಾಪಿಸಲಾಗಿದೆ. ವಾಣಿಜ್ಯ ಬೆಳೆಯಾದ ಎಲೆ ಅಡಿಕೆಯ ಮೇಲೆ ವಿಧಿಸುವ ಪನ್ನಾಯ[೧೮] ಸುಂಕ ೧೦ ಬಾರಿ ಪ್ರಸ್ತಾಪಿಸಲಾಗಿದೆ. ಸುಂಕ ವಿನಾಯಿತಿಯನ್ನು ಉಲ್ಲೇಖಿಸುವ ಮಾನ್ಯ ಪದವನ್ನು ೯ ಬಾರಿ, ಹೆಜ್ಜುಂಕಕ್ಕೆ ಸಮನಾದ ಅರ್ಥ ನೀಡುವ 'ಪೆರ್ಜುಂಕ'[೧೯] ಪದವನ್ನು ೮ ಬಾರಿ ಪ್ರಸ್ತಾಪಿಸಲಾಗಿದೆ. ಸರಕುಗಳ ಸಾಗಣೆಯ ಸಮಯದಲ್ಲಿ ಕಳ್ಳಕಾಕರಿಂದ ರಕ್ಷಣೆ ನೀಡುವ ಸಲುವಾಗಿ ಪಡೆಯುತ್ತಿದ್ದ ಬಿಲ್ಕೊಡೆ ಮತ್ತು ಬೀರವಣ[೨೦] ತಲಾ ೬ ಮತ್ತು ೫ ಬಾರಿ

ಪ್ರಸ್ತಾಪಿತವಾಗಿದ್ದು, ಸುಂಕವು ಇನ್ನಿತರ ತೆರಿಗೆಗಳಿಗಿಂತಲೂ ಮಲೆನಾಡು ಪ್ರದೇಶದಲ್ಲಿ ಅತ್ಯಂತ ಪ್ರಮುಖ ರಾಜ್ಯದ ಆದಾಯದ ಮೂಲವಾಗಿದೆ ಎನ್ನುವುದನ್ನು ಇನ್ನಷ್ಟು ನಿಖರವಾಗಿ ಸಾಬೀತುಪಡಿಸುತ್ತದೆ. ಈ ಎಲ್ಲ ಅಧ್ಯಯನಗಳಿಂದ ಬಹಳ ಮುಖ್ಯವಾಗಿ ಹೊಯ್ಸಳ ರಾಜ್ಯದ ತಮ್ಮ ತೆರಿಗೆ ಪದ್ಧತಿಯನ್ನು ರೂಪಿಸುವಂತಹ ಸಂದರ್ಭದಲ್ಲಿ ಆಯಾ ಪ್ರದೇಶದ ಭೌಗೋಳಿಕ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ತೆರಿಗೆಯನ್ನು ವಿಧಿಸುವ ಪದ್ಧತಿಯನ್ನು ರೂಢಿಸಿಕೊಂಡಿತ್ತು. ಆ ಮೂಲಕ ಪ್ರಜೆಗಳ ಹಿತ ಕಾಪಾಡುವ ಕಾರ್ಯದಲ್ಲಿ ಯಶಸ್ವಿಯಾಗಿತ್ತು. ಈ ಕಾರಣದಿಂದಲೇ ಸುಮಾರು ೩೦೦ ವರ್ಷಗಳ ವರೆಗೆ ಸುದೀರ್ಘ ಆಡಳಿತವನ್ನು ನಡೆಸಲು ಸಾಧ್ಯವಾಗಿದೆ.

ಪ್ರತಿಯೊಂದು ರಾಜ್ಯವು ತನ್ನದೇ ಆದ ಆಯ-ವ್ಯಯದ ಯೋಜನೆಗಳನ್ನು ಹೊಂದಿರುತ್ತದೆ. ಆದರೆ ಈ ಯೋಜನೆಗಳನ್ನು ಕಾರ್ಯಗತಗೊಳಿಸಲು ಅನೇಕ ತೊಡಕುಗಳನ್ನು ಎದುರಿಸಬೇಕಾಗುತ್ತದೆ. ಇಂತಹ ಸನ್ನಿವೇಶದಲ್ಲಿ ಪ್ರಜೆಗಳಿಗೆ ಯಾವುದೇ ರೀತಿಯ ತೊಂದರೆ ಉಂಟಾಗದಂತೆ ತೆರಿಗೆಯ ಮೂಲಕ ಆದಾಯಗಳಿಸಿಕೊಳ್ಳುವುದು ಮುಖ್ಯ. ವಿಶೇಷವಾಗಿ ತೆರಿಗೆಗಳನ್ನು ಭೌಗೋಳಿಕ ಸನ್ನಿವೇಶಗಳಿಗೆ ಹೊಂದಿಕೊಂಡು ಸಂಗ್ರಹಿಸುವ ಅನಿವಾರ್ಯತೆ ರಾಜ್ಯಗಳಿಗಿರುತ್ತದೆ. ಯಾಕೆಂದರೆ ಭೂಮಿಯನ್ನು ಪಡೆಯುವುದು ಮತ್ತು ಪಡೆದದ್ದನ್ನು ಪಾಲಿಸುವುದು ರಾಜ್ಯಾಡಳಿತ ಮುಖ್ಯ ಉದ್ದೇಶ ಎಂದು ಅರ್ಥಶಾಸ್ತ್ರ ಸೇರಿದಂತೆ ಅನೇಕ ಪ್ರಾಚೀನ ಗ್ರಂಥಗಳು ಪ್ರತಿಪಾದಿಸಿವೆ. ಈ ದೃಷ್ಟಿಕೋನದಿಂದ ನೋಡುವುದಾದರೆ ಹೊಯ್ಸಳರು ತಾವು ಆಡಳಿತ ನಡೆಸುತ್ತಿದ್ದ ಭೂಮಿಯ ಮೇಲ್ಮೈ ಲಕ್ಷಣಗಳನ್ನು ಸರಿಯಾಗಿ ಅರಿತುಕೊಂಡು ಭವಿಷ್ಯದ ಹಿತಚಿಂತನೆಯೊಂದಿಗೆ ತೆರಿಗೆ ವ್ಯವಸ್ಥೆಯನ್ನು ರೂಪಿಸಿಕೊಳ್ಳುತ್ತಿದ್ದರು ಎಂಬುದು ಈ ಮೇಲಿನ ಅಂಶಗಳಿಂದ ತಿಳಿದುಬರುತ್ತದೆ.



**ಅಡಿಟಿಪ್ಪಣಿಗಳು**

೧. Lokanathan P.S., 'Techno- Economic Survey of Mysore', Delhi, 1965 p. 51.
೨. Malini Adiga, 'The Making of Southern Karnataka', Chennai, 2006, p-6.
೩. Madhuraj, 'Revenue System under the Hoysalas: A topographical and Chronological Analysis' (Unpublished Thesis of Mangalore University -2007) Pp -155-156.
೪. Gururajachar S., 'Some aspects of economic and social life in Karnataka' (A.D. 1000-1300) p-145.
೫. ಅದೇ ಪುಟ ೧೫೭.
೬ ಮಧುರಾಜ್, ಪೂರ್ವೋಕ್ತ, ಪುಟ ೨೨೩.
೭. ಮಧುರಾಜ್, 'ಹೊಳೆನರಸೀಪುರ ತಾಲೂಕಿನ ಹೊಯ್ಸಳರ ತೆರಿಗೆ ಪದ್ಧತಿಯ ಶಾಸನೋಕ್ತ ಅಧ್ಯಯನ' 'ತುಳುವ'/ಸಂಪುಟ-೫, ಸಂಚಿಕೆ ೧, ೨೦೧೫ ಪುಟ ೫೪.
೮. Usharani H.S., 'Agrarian System under the Hoysalas' (Unpulbished thesis of Mysore University) Pp. 45-46.
೯. Lokanathan P.S., Op.cit. p. 8.
೧೦. Usharani H.S. Op.cit., p. 49.
೧೧. Ibid, Pp 39-41.
೧೨. Ibid, p. 44.
೧೩. Burton Stein, 'Pesant State and Society in Medieval South India' p. 153.
೧೪. H.S. Usharani, ಪೂರ್ವೋಕ್ತ, ಪು. ೪೫.
೧೫. Tapan Ray Chaudary and Irfan Habib, 'The Cambridge Economic History of India'. Vol. I p. 113.
೧೬. ಜಗದೀಶ, 'ವಡ್ಡರಾವುಲ ಮತ್ತು ಹೆರ್ಜುಂಕ ತೆರಿಗೆಗಳು ಒಂದು ಟಿಪ್ಪಣಿ' ಇತಿಹಾಸ ದರ್ಶನ, ಸಂಚಿಕೆ-೨೭, ಬೆಂಗಳೂರು, ೨೦೧೭, ಪು-೧೮೭.
೧೭. ಅದೇ.
೧೮. Shridhar B., 'Pannaya- A tax on betel leaves during Hoysala's', Studies in Karnataka History and Culture, Mysore-1987, p.
೧೯. ಜಗದೀಶ, 'ವಡ್ಡರಾವುಲ ಮತ್ತು ಹೆರ್ಜುಂಕ ತೆರಿಗೆಗಳು ಒಂದು ಟಿಪ್ಪಣಿ' ಇತಿಹಾಸ ದರ್ಶನ, ಸಂಚಿಕೆ-೨೭, ಬೆಂಗಳೂರು, ೨೦೧೭, ಪುಟ ೧೮೯.
೨೦. ಅದೇ.

# ಶಿವಯೋಗ ಮಂದಿರದ ಹಸ್ತಪ್ರತಿ ಗ್ರಂಥ ಭಂಡಾರ

**ಶಕುಂತಲಾ ಸಿಂಧೂರ***

**ಪ್ರಾ**ಚೀನ ಕಾಲದಲ್ಲಿ ನಮ್ಮ ಪೂರ್ವಜರು ಸಾಹಿತ್ಯ ಕಾವ್ಯವನ್ನು ಎಲೆಗಳ ಮೇಲೆ ಬರೆದು ಸಂರಕ್ಷಿಸುತ್ತಿದ್ದರು. ಇದೇ ಮುಂದುವರೆದು ತಾಳೆಗರಿಯ ಮೇಲೆ ಬರೆಯುವ ಪದ್ಧತಿ ರೂಢಿಗೆ ಬಂದಿತು. ಈ ತಾಳೆಗರಿ ಮೇಲಿನ ಬರಹವನ್ನು "ಹಸ್ತಪ್ರತಿ" ಎನ್ನಲಾಗಿದೆ. ಈ ಹಸ್ತಪ್ರತಿಗಳು ಕನ್ನಡ ಸಾಹಿತ್ಯದ ವೈವಿಧ್ಯಮಯವಾದ ಸಾಂಸ್ಕೃತಿಕ ಪರಂಪರೆಯ ಪ್ರತಿಬಿಂಬಗಳಂತಿದ್ದು ತಮ್ಮದೇ ಆದ ಸಾವಿರಾರು ವರ್ಷಗಳ ಗತಕಾಲದ ಇತಿಹಾಸದ ದ್ಯೋತಕವಾಗಿರುತ್ತವೆ.

ಹಸ್ತಪ್ರತಿಗಳಿಗೆ ಹಲವಾರು ಪರ್ಯಾಯ ನಾಮಗಳಿರುವುದು ತಿಳಿದುಬರುತ್ತದೆ. 'ಕಟ್ಟು' ತಾಳೆಗರಿಕಟ್ಟ' 'ತಾಡೋಲೆ' 'ಹೊತ್ತಿಗೆ' ಈ ಮೊದಲಾದ ಹೆಸರುಗಳನ್ನು ಒಳಗೊಂಡಿರುತ್ತವೆ. ಇಂಗ್ಲೀಷ್‌ನಲ್ಲಿ 'Manscript' ಎನ್ನುತ್ತಾರೆ.

ಪ್ರಕಾರಗಳು : ೧. ತಾಳೆಗರಿಗಳು, ೨) ಕೋರಿಕಾಗದಗಳು, ೩) ಕಡತಗಳು, (೪) ಹಲಗೆ ಮತ್ತು ಚರ್ಮ ಹೀಗೆ ನಾಲ್ಕು ಪ್ರಕಾರಗಳಲ್ಲಿರುತ್ತವೆ.

೧. ತಾಳೆಗರಿಗಳಲ್ಲಿ ತಾಳ ಮತ್ತು ಶ್ರೀ ತಾಳ ಎಂದು ಎರಡು ವಿಧಗಳಿವೆ. ತಾಳ ಆಕಾರದಲ್ಲಿ ಸಣ್ಣದು. ಸ್ವರೂಪದಲ್ಲಿ ಬಿರುಸು. ಬಾಗಿಸಿದರೆ ಮುರಿಯುತ್ತದೆ. ಶ್ರೀತಾಳ ಆಕಾರದಲ್ಲಿ ದೊಡ್ಡದು ಸ್ವರೂಪದಲ್ಲಿ ಮೃದುವಾಗಿರುತ್ತದೆ.

೨. ಕೋರಿ ಕಾಗದಗಳು : ಆಧುನಿಕ ಕಾಗದದದ ಪರಿಚಯವಾದದ್ದು ಪೋರ್ಚುಗೀಸರ ಕಾಲದಲ್ಲಿ ಆದರೆ ಇದಕ್ಕೂ ಮೊದಲು ನಮ್ಮ ಪೂರ್ವಜರು ತಮ್ಮದೇ ಆದ ರೀತಿಯಲ್ಲಿ ಕಾಗದವನ್ನು ತಯಾರಿಸುತ್ತಿದ್ದು. ಅದನ್ನು 'ಕೋರಿಕಾಗದ' ಎನ್ನುತ್ತಿದ್ದರು. ಇದರಲ್ಲಿ ಎರಡು ಪ್ರಕಾರ. ಅವುಗಳೆಂದರೆ "ವಹೀ" ಮತ್ತು "ನೀಲಿ ಹೊತ್ತಿಗೆ"ಗಳು. 'ನೀಲಿಹೊತ್ತಿಗೆ'ಯನ್ನು ಮಕ್ಕಳು ಓದುವವಂತಿರಲಿಲ್ಲ.

೩. ಕಡತಗಳು : ಇವುಗಳನ್ನು ಬಟ್ಟೆಯಿಂದ ತಯಾರಿಸುತ್ತಿದ್ದರು. ಇವನ್ನು ಹೆಚ್ಚಾಗಿ ಕಚ್ಚಾ ಬರೆಯಲು ಲೆಕ್ಕಪತ್ರವಿಡಲು ಬಳಸುತ್ತಿದ್ದರು.

೪. ಹಲಗೆ ಮತ್ತು ಚರ್ಮ: ಮರದ ಹಲಗೆಯ ಮೇಲೆ ಮತ್ತು ಜಿಂಕೆಯಂತಹ ಪ್ರಾಣಿಗಳ ಚರ್ಮದ ಮೇಲೆ ಬರೆದದ್ದು ನಮಗೆ ಲಭಿಸುತ್ತವೆ.

ಹಸ್ತಪ್ರತಿಯ ಮೇಲೆ ಬರೆಯಲು ಉಪಯೋಗಿಸುವ ಸಾಧನಗಳಿಗೆ 'ಗಲಗು' 'ಕಂಠ' 'ಅಧೇಯ' ಎಂದು ಕರೆಯುತ್ತಿದ್ದರು. ಅವುಗಳನ್ನು ಲೋಹದಿಂದ ತಯಾರಿಸುತ್ತಿದ್ದರು. ಅವುಗಳಿಗೆ ಗೆಜ್ಜೆಯನ್ನು ಕೂಡಾ ಕಟ್ಟುತ್ತಿದ್ದರು. ಅದರ ನಾದ ಕವಿಗೆ 'ಸ್ಪೂರ್ತಿ' ಯನ್ನುಂಟುಮಾಡುವದೆಂದು ಭಾವಿಸಿದ್ದರು. ಇದನ್ನೇ ಕುಮಾರವ್ಯಾಸನು 'ಬಳಸಿ ಬರೆಯಲು ಕಂಠ ಪತ್ರದ ಉಲುಹುಗೆಡದೊಂದಗ್ಗಳಿಕೆ' ಎಂದು ಹೇಳಿದ್ದಾನೆ.

ಇವುಗಳನ್ನು ಕಪ್ಪು, ಮಸಿ, ಬಣ್ಣಗಳಲ್ಲಿ ಅದ್ದಿ ಬರೆಯುತ್ತಿದ್ದರು. ದಾಸವಾಳದ ಬೇರಿನಿಂದ ಬಣ್ಣವನ್ನು ತಯಾರಿಸಿ ಚಿತ್ರಗಳನ್ನು ಕೂಡ ಚಿತ್ರಿಸುತ್ತಿದ್ದರೆಂದು ಹೇಳಲಾಗಿದೆ.

ಇವುಗಳನ್ನು ಆಕಸ್ಮಿಕ ಬೆಂಕಿಯಿಂದ ನೀರಿನಿಂದ ಮೂರ್ಖರ ಕೈಯಿಂದ ರಕ್ಷಿಸುತ್ತಿದ್ದರು. ಈ ಹಸ್ತ ಪ್ರತಿಗಳು ನಮ್ಮ ಕನ್ನಡ ಸಾಹಿತ್ಯಕ್ಕೆ ಅಪಾರವದಂಥ ಕೊಡುಗೆಯನ್ನು ಅರ್ಪಿಸಿರುವುದು ಅವಿಸ್ಮರಣೀಯವಾದುದು. ವಿಜಯನಗರದ ಇತಿಹಾಸವನ್ನು ರಚಿಸುವಲ್ಲಿಯೂ ಇವವುಗಳ ಕೊಡುಗೆ ಅಪೂರ್ವವಾದದು. ಇವುಗಳನ್ನು ರಕ್ಷಿಸುವದು ಸರ್ವರ ಹೊಣೆ!

ಶ್ರೀಮದ್ವೀರಶೈವ ಶಿವಯೋಗಮಂದಿರದ ಸಂಸ್ಥಾಪಕರಾದ ಶ್ರೀ ಕುಮಾರ ಶಿವಯೋಗಿಗಳು ಶಿವಯೋಗಿಗಳು ಶಿವಯೋಗಮಂದಿರದಲ್ಲಿ ಹಸ್ತಪ್ರತಿ ಭಂಡಾರದ ಹರಿಕಾರರೆನಿಸಿರುವರು. ಗ್ರಂಥಶೋಧ ಪೋಷಣೆ ಪ್ರಕಟಣೆಗಳಿಗೆ ಚಾಲನೆ ನೀಡಿದ ಪ್ರಪ್ರಥಮರು. ಕನ್ನಡ ಸಾಹಿತ್ಯ ರಚನೆಕಾರರಿಂದ ಸಮೃದ್ಧಗೊಂಡಂತೆ ಸಂಪಾದನೆ, ಪೋಷಣೆಗಳಿಂದಲೂ ಶ್ರೀಮಂತ ಪರಂಪರೆ ಎನಿಸಿರುವಲ್ಲಿ ಹಸ್ತಪ್ರತಿಗಳ ಪಾತ್ರ ಅಮೂಲ್ಯವಾಗಿದೆ. ಹೀಗಾಗಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ

* ಕನ್ನಡ ಪ್ರಾಧ್ಯಾಪಕರು, ಕೆ.ಎಲ್.ಇ. ಸಂಸ್ಥೆಯ ಜೆ.ಟಿ. ಕಾಲೇಜು, ಗದಗ, ಮೊ. ೯೪೮೩೨೧೭೯೯೩

ಬರಹಗಾರರಿಗೆ ಇರುವ ಸ್ಥಾನಮಾನ ಗೌರವಾದರಗಳು ಗ್ರಂಥ ಸಂಪಾದಕರಿಗೂ ಸಾಹಿತ್ಯ ಪೋಷಕರಿಗೂ ಇರುವಂತೆ ಇವೆಲ್ಲವುಗಳಿಗೆ ಮೂಲ ಪ್ರೇರಣೆಯಂತಿರುವ ಹಸ್ತಪ್ರತಿ ಸಂಗ್ರಹಕ್ಕೆ ವಿಶಿಷ್ಟ ಆದ್ಯತೆ ದೊರೆಯುತ್ತದೆ. ಸಾಹಿತ್ಯ ಪೋಷಣೆಯು ಸಾಹಿತ್ಯ ಉನ್ನತಿಯೊಂದಿಗೆ ಧಾರ್ಮಿಕ ಸಾಂಸ್ಕೃತಿಕ ಚಾರಿತ್ರಿಕ ಅಂಶಗಳನ್ನು ಸಂರಕ್ಷಿಸಿ ಪ್ರಸಾರಣಗೈಯುವ 'ಸಾಂಸ್ಕೃತಿಕ ಕ್ರಾಂತಿ' ಯಲ್ಲಿ ಹಸ್ತಪ್ರತಿಗಳು ಮಹತ್ವದವುಗಳಾಗಿರುತ್ತವೆ. ತಮ್ಮ ಮಟ್ಟಿಗೆ ಮತ್ರವಲ್ಲದೆ ತಮ್ಮ ಸುತ್ತಲಿನ ಪರಿಸರಕ್ಕಾಗಿ ಒಳ್ಳೆಯದನ್ನೇ ಮಾಡಬೇಕೆಂಬ ಉತ್ಕಟವಾದ ಆದರ್ಶವನ್ನುಳ್ಳ ಶ್ರೀ ಕುಮಾರ ಶಿವಯೋಗಿಗಳ ಸಾಹಿತ್ಯ ಪೋಷಣೆ ಮಾರ್ಗಮ ಒಂದು ಸಾಂಸ್ಕೃತಿಕ ಕ್ರಾಂತಿಯೇ ಆಗಿದೆ. ಅದಕ್ಕೆ ಅವರು ಸ್ವಪ್ರೇರಣೆಯಿಂದ ಮನಮುಟ್ಟಿ ಮಾಡಿದ ಕಾರ್ಯಗಳೇ ನಿದರ್ಶನಗಳಾಗಿರುತ್ತವೆ.

ಪರಧರ್ಮೀಯರಿಂದ ಆಗಾಗ ಬಂದೊದಗಿದ ವಿಪತ್ತು ವಿದೇಶಿಯರ ಆಕ್ರಮಣ ಅರಸೊತ್ತಿಗೆಳ ಆಡಳಿತ ವಿಸ್ತಾರ ಹಂಬಲವಾಗಿ ವೀರಶೈವ ಸಾಹಿತ್ಯ ಮತ್ತು ವಚನಸಾಹಿತ್ಯವು ಮಠಗಳ ಕತ್ತಲು ಕೋಣೆಯಲ್ಲಿ ನೆಲಮಾಳಿಗೆಯಲ್ಲಿ ಮನೆಗಳ ಮೂಲೆಯಲ್ಲಿ ಜಗುಲಿಯಲ್ಲಿ ಹಾಗೂ ಗೊಡೆಗಳೊಳಗೆ ಹುದುಗಿಕೊಮಡಿತ್ತು. ಅಭಿಮಾನಿಗಳಾದ ನಮ್ಮ ಹಿರಿಯರು ತಮ್ಮ ಪ್ರಾಣಕ್ಕೂ ಮಿಗಿಲಾಗಿ ಆ ಸಾಹಿತ್ಯವನ್ನು ಬಚ್ಚಿಟ್ಟಿದ್ದ ಪರಿಯದು. ಅವುಗಳನ್ನೇ ಪೂಜಾರ್ಹ ದೇವರುಗಳೆಂದು ಗೋಡೆಗಳಲ್ಲಿ ಮಾಡಗಳನ್ನು ಪ್ರತ್ಯೇಕ ಜಗುಲಿಗಳನ್ನು ನಿರ್ಮಿಸಿ ಪೂಜಿಸುವ ನಂಬಿಕೆಯೊಂದು ಉಳಿದು ಬಂದಿತ್ತು. ಈ ನಂಬಿಕೆಯ ಸಾಧಕ ಬಾಧಕಗಳು ಏನೇ ಇದ್ದರೂ ಬಹುತೇಕ ನಮ್ಮ ಸಾಹಿತ್ಯ ವಚನಗಳ ಕಟ್ಟು ಕೈ ಬರಹ ಹಸ್ತಪ್ರತಿ ತಾಡೋತಿ ಧರ್ಮ ಗ್ರಂಥಗಳು ಸುರಕ್ಷಿತವಾದುಂತೂ ಸುಳ್ಳೇನಲ್ಲ. ಶ್ರೀ ಕುಮಾರ ಶಿವಯೋಗಿಗಳ ಸಾಹಿತ್ಯ ಪೋಷಣೆಯ ಕಾರ್ಯವನ್ನು ಮೆಚ್ಚಿದ ವಚನ ಪಿತಾಮಹ ಫ.ಗು.ಹಳ್ಳಕಟ್ಟಿಯವರು "ಶ್ರೀ ಸ್ವಾಮಿಗಳವರು ಮಂದಿರದ ಒಂದು ದೊಡ್ಡ ನಿಧಿಯನ್ನು ಕೂಡಿಸಿದ್ದು, ಅಲ್ಲಿ ಕಟ್ಟಡಗಳನ್ನು ನಿರ್ಮಾಣ ಮಾಡಿದ್ದೂ ಮಹತ್ವದ ಕಾರ್ಯಗಳೆಂಬುದು ನಿಸ್ಸಂದೇಹವಾದ್ದು. ಆದರೆ ಹಣಕ್ಕಿಂತಲೂ ಮಹತ್ವವೆನಿಸಿಕೊಳ್ಳುವ ಹಸ್ತಪ್ರತಿಗಳ ಸಂಗ್ರಹಮಾಡುವುದು ಅಷ್ಟೇ ಶ್ರೇಯಸ್ಕರವಾಗಿರುತ್ತದೆ. ಇಂಥ ಹಸ್ತಪ್ರತಿಗಳನ್ನು ಸಂಗ್ರಹಿಸದಿದ್ದರೆ ಸಂಸ್ಕೃತಿಯು ಉಳಿಯುವ ಬೆಳೆಯುವ ಸಂಭವವೇ ಇಲ್ಲ" ಎಂದಿದ್ದಾರೆ.

ಶ್ರೀಮನಿಪ್ರಪ್ರಭುಸ್ವಾಮಿಗಳು ಬೂದಿ ಸ್ವಾಮಿಮಠ ಹೊಸಹಳ್ಳಿ ಇವರು ಶ್ರೀ ಕುಮಾರ ಶಿವಯೋಗಿಗಳ ಗ್ರಂಥ ಹಾಗೂ ಹಸ್ತಪ್ರತಿಗಳ ಸಂಶೋಧನೆಯ ಕಾರ್ಯ ಕುರಿತು ಹೇಳುತ್ತ "ಈಗ ವಚನ ವಾಙ್ಮಯ ಪಿತಾಮಹರೆಂದು ಪ್ರಖ್ಯಾತರಾಗಿರುವ ಶ್ರೀ ಫ.ಗು.ಹಳಕಟ್ಟಿಯವರಿಗೆ ಮೊಟ್ಟಮೊದಲು ವಚನ ವಾಙ್ಮಯವನ್ನು ಸಂಶೋಧಿಸಲು ಸಂಗ್ರಹಿಸಲು ಪ್ರಕಟಿಸಲು ಸಲಹೆ ಸೂಚನೆ-ಸಹಾಯ ಸಹಕಾರವನ್ನು ಹಾಗೂ ತಾವು ಸಂಗ್ರಹಿಸಿದ ಹಲವು ಹಸ್ತಪ್ರತಿಗಳನ್ನು ಒದಗಿಸಿಕೊಟ್ಟರು ಪೂಜ್ಯರಾದ ಹಾನಗಲ್ಲ ಕುಮಾರ ಶಿವಯೋಗಿಗಳವರು. ಈಗ ಅಚ್ಚಿನ ಮನೆಯಿಂದ ಅಂದಚಂದವಾಗಿ ಮುದ್ರಿತವಾಗಿ ಪ್ರಕಟವಾಗಿರುವ ಬಗೆಬಗೆಯ ವಚನ ಸಾಹಿತ್ಯವನ್ನು ನಾವು ಓದಿ ಆನಂದಿಸುತ್ತಲಿರುವುದು ಅವರ ಪುಣ್ಯ ಪ್ರಭಾವದ ದ್ಯೋತಕವಾಗಿದೆ. ಎಂದಿದ್ದಾರೆ. ಶ್ರೀ ಕುಮಾರ ಶಿವಯೋಗಿಗಳು ವೀರಶೈವ ಸಾಹಿತ್ಯ, ತತ್ವ ಸಂಸ್ಕೃತಿಗಳ ಪ್ರಸಾರ ಮಾಡುವುದರೊಂದಿಗೆ ಸಾಹಿತ್ಯ ಸಂರಕ್ಷಣಣೆಯ ನಿಟ್ಟಿನಲ್ಲಿ ಗ್ರಾಮ, ಮನೆ, ಮಠಗಳಿಗೆ ಸಂಚರಿಸಿ ವಚನಗಳ ಕಟ್ಟು ಶೋಧ, ತಾಡೋತಿಗಳ ಸಂಗ್ರಹಣೆ ಮತ್ತು ಅವುಗಳ ಮಹತ್ವವನ್ನು ಜನರಿಗೆ ಮನವರಿಕೆ ಮಾಡಿಕೊಟ್ಟರು. ವಿದ್ವಾಂಸರನ್ನು ಸಂಶೋಧಕರನ್ನು ಕರೆದು ಸಂಗ್ರಹಿಸಿದ ಸಾಹಿತ್ಯವನ್ನು ಸರಿಪಡಿಸುವ ಕಾರ್ಯ ಚುರುಕುಗೊಳಿಸಿದರು. ಶ್ರೀ ಕುಮಾರ ಶಿವಯೋಗಿಗಳು. ಒಂದರ್ಥದಲ್ಲಿ 'ಶ್ರೀ ಕುಮಾರ ಸ್ವಾಮೀಜಿಯವರು ವೀರಶೈವರ ಚಲನಶೀಲ ಸಂರಕ್ಷಕ ಕೋಶ' ವಾಗಿದ್ದರೆಂಬುದು ವಾಸ್ತವಿಕ ಸಂಗತಿ.

ತಾಳೆಗರಿ ಕೈಬರಹ ಸಂಗ್ರಹ ಮತ್ತು ಪೋಷಣೆಗೈಯುವಲ್ಲಿ ಶ್ರೀಗಳವರ ಕಳಕಳಿ ಅನುಕರಣೀಯವಾದುದು. ಶ್ರೀಗಳ ಕಾಳಜಿ-ಕುತೂಹಲಗಳು ಸಾಹಿತ್ಯಶೋಧದತ್ತ ವಾಲಿರುವದು ಅಪೂರ್ವ ಸನ್ನಿವೇಶವೇ ಸರಿ! ಅವರ ದಾರ್ಶನಿಕ ದೂರದರ್ಶಿತ್ವದಿಂದ ಶರಣ ಸಾಹಿತ್ಯ ವೀರಶೈವ ಸಾಹಿತ್ಯ ಬೆಳಕು ಕಾಣುವಂತಾಯಿತು. ಮನೆ ಮಠಗಳಲ್ಲಿ ತಾಳೆಗರಿ ತಾಡೋಲೆ ಹಸ್ತಪ್ರತಿ ಇತ್ಯಾದಿಗಳು ಕೇವಲ ಧರ್ಮ ನಂಬಿಕೆಯಂತೆ ಧೂಪ - ದೀಪಾರತಿಗಳಿಂದ ಪೂಜಿಸಲ್ಪಡುತ್ತಿದ್ದ ಕಟ್ಟುಗಳು ಕುತೂಹಲ ಶೋಧದ ರೂಪದಾಳಿ ಒಂದು ಮಿಂಚಿನ ಸಂಚಾರವನ್ನುಮಟು ಮಾಡಿರುವುದು ಚೇತೋಹಾರಿ ಅನುಭವವಾಗಿರುವುದು. ನಾಡಿನ ಒಳಗೂ - ಹೊರಗೂ ಸಂಚರಿಸಿ ಎರಡು ಸಾವಿರಕ್ಕೂ ಮಿಕ್ಕಿ ತಾಳೆಗರಿ ಹಸ್ತಪ್ರತಿ ಕಟ್ಟುಗಳನ್ನು ಸಂಗ್ರಹಿಸಿ ಪೋಷಿಸಿ ಪ್ರಕಟಿಸಿದ ಕೀರ್ತಿ ಶ್ರೀ ಕುಮಾರ ಶಿವಯೋಗಿಗಳಿಗೆ ಸಲ್ಲುತ್ತದೆ.

ಫ.ಗು. ಹಳಕಟ್ಟಿ ಮತ್ತು ಹೊಸಹಳ್ಳಿ ಮಠದ ಪೂಜ್ಯರು ಈರ್ವರ ಅಭಿಪ್ರಾಯವನ್ನು ಅನುಲಕ್ಷಿಸಿ ಹೇಳುವುದಾದರೆ ವೀರಶೈವ ಸಾಹಿತ್ಯ ಮತ್ತು ವಚನ ಶಾಸ್ತ್ರಗಳ ಹಸ್ತಪ್ರತಿಗಳ ಸಂಗ್ರಹ ಮತ್ತು ಪೋಷಣೆಗಾಗಿ ಮೊಟ್ಟಮೊದಲ ಕ್ರಿಯಾಶೀಲರಾದವರು ಶ್ರೀ ಕುಮಾರ ಶಿವಯೋಗಿಗಳು ಎಂಬುದು ಅಕ್ಷರಶಃ ಮಹತ್ವದ ಸಂಗತಿ" ಒನ್ನೂ ಒಂದು ಮಹತ್ವದ ವಿಷಯವೆಂದರೆ

ತಾವು ಶಿವಪೂಜೆಗೆಂದು ಭಕ್ತರ ಮನೆಗೆ ಹೋದಾಗ ಶ್ರೀ ಕುಮಾರ ಶಿವಯೋಗಿಗಳು ಭಕ್ತರು ಕೊಟ್ಟ ಕಾಣಿಕೆಯನ್ನು ಭಕ್ತರಿಗೇ ಮರಳಿಸಿ ಅವರ ಮನೆಯಲ್ಲಿದ್ದ ಕೈಬರಹ ತಾಳೆಗರಿ ತಾಡೋಲೆಗಳನ್ನು ಮಾತ್ರ ಜೋಳಿಗೆಗೆ ಹಾಕಿಕೊಂಡು ಅವುಗಳನ್ನು ತಂದು ಭದ್ರವಾಗಿ ಶಿವಯೋಗಮಂದಿರದ ಶ್ರೀ ವಿಜಯಮಹಾಂತೇಶ್ವರ ಗ್ರಂಥಾಲಯದಲ್ಲಿ ಸಂರಕ್ಷಿಸುತ್ತಿದ್ದರು ಎಂಬುದನ್ನು ಅವಲೋಕಿಸಿದಾಗ ಸಾಹಿತ್ಯ ಸಂಗ್ರಹ – ಪೋಷಣೆಗಳ ಬಗ್ಗೆ ಶ್ರೀಗಳವರ ಕಳಕಳಿ ಅಪಾರವಾಗಿತ್ತೆಂಬುದು ಮನವರಿಕೆಯಾಗುತ್ತದೆ.

ಶ್ರೀ ಕುಮಾರ ಶಿವಯೋಗಿಗಳ ಸಾಹಿತ್ಯ ಪೋಷಣೆ ಮತ್ತು ಸಂವರ್ಧನೆ ಬಗ್ಗೆ ಉಮಾಪತಿಶಾಸ್ತ್ರಿ ಜಿ.ಎಂ. ಅವರ ಅಭಿಪ್ರಾಯ ಹೀಗಿದೆ "ಶಿವಾಗಮಗಳು ಸಂಸ್ಕೃತದಲ್ಲಿದ್ದು ವಚನಗಳು ಅಚ್ಚಗನ್ನಡದಲ್ಲಿವೆ. ಇವೆರಡರಲ್ಲಿಯೂ ಇದ್ದ ಉದ್ಧರಣೆ ಸಾಹಿತ್ಯವನ್ನು ಪ್ರಕಟಗೊಳಿಸುವಲ್ಲಿ ಶ್ರೀ ಕುಮಾರ ಶಿವಯೋಗಿಗಳು ಪ್ರಥಮರು ಶಿವಯೋಗ ಮಂದಿರದಲ್ಲಿ ವಚನ ಸಾಹಿತ್ಯದ ಹಸ್ತಪ್ರತಿಗಳನ್ನು ಸಂಗ್ರಹಿಸಿ ಅವುಗಳ ಸಂಶೋಧನೆ ಮತ್ತು ಪ್ರಕಟಣೆಗೆ ಯೋಜನೆಗಳನ್ನು ರೂಪಿಸಿದ್ದರು. ಮದ್ರಾಸ್ ಬನಾರಸ್ ಇತ್ಯಾದಿ ಗ್ರಂಥಾಲಯಗಳಲ್ಲಿರುವ ವೀರಶೈವ ಸಾಹಿತ್ಯವನ್ನು ಸಂಗ್ರಹಿಸುವುದಕ್ಕಾಗಿ ವಿದ್ಯಾಸಂರನ್ನು ಪಂಡಿತರನ್ನು ಕಳಿಸಿದ್ದುಂಟು" ಎಂದು ಹೇಳಿರುವ ವಿದ್ವಾಂಸರ ಅಭಿಪ್ರಾಯವು ಶ್ರೀ ಕುಮಾರ ಶಿವಯೋಗಿಗಳ ಸಆಹಿತ್ಯ ಪೋಷಣೆಯ ಹಸ್ತಪ್ರತಿಗಳ ಮಹತ್ವವನ್ನು ಸ್ಪಷ್ಟಪಡಿಸುತ್ತದೆ.

ಶ್ರೀ ಕುಮಾರ ಶಿವಯೋಗಿಗಳು ತಾವು ಸಂಗ್ರಹಿಸಿದ ಹಸ್ತಪ್ರತಿಗಳನ್ನು ಫ.ಗು. ಹಳಕಟ್ಟಿಯವರಿಗೆ ಕೊಟ್ಟು ಆರ್ಥಿಕ ಸಹಾಯವನ್ನು ಒದಗಿಸಿ ಮುದ್ರಿಸಲು ಅಪ್ಪಣೆಗೈದಿರುವವರ ಪ್ರತೀಕವಾಗಿ ಇಂದು ಅಮೂಲ್ಯ ಸಾಹಿತ್ಯ ಉಳಿಯುವಂತಾಗಿ ಸಂಶೋಧಕರನ್ನು ಕೈಬೀಸಿ ಆಹ್ವಾನಿಸುತ್ತಲಿರುವುದು ಜ್ವಲಂತ ಚಿತ್ರಣ, ೧೯೨೪ರಲ್ಲಿ ಗದಗಿನ ಶ್ರೀ ಜಗದ್ಗುರು ತೋಂಟದಾರ್ಯ ಮಠವು "ವಚನಶಾಸ್ತ್ರಸಾರ" ಎಂಬ ಪ್ರಪ್ರಥಮ ಸಂಪುಟದ ಗ್ರಂಥವನ್ನು ಶ್ರೀ ಕುಮಾರ ಶಿವಯೋಗಿಗಳ ಸ್ಮಾರಕದಲ್ಲಿ ಹೊರತಂದಿತು. ಇದರಿಂದಾಗಿ ವಚನ ಸಾಹಿತ್ಯದ ಪ್ರಕಟಣೆ ಮತ್ತು ಪ್ರಸಾರದ ಬಾಗಿಲುಗಳು ತೆರೆದುಕೊಂಡುದು ಶ್ರೀ ಕುಮಾರ ಶಿವಯೋಗಿಗಳ ಪ್ರೇರಣೆ ಪ್ರೋತ್ಸಾಹವು ಸಾಹಿತ್ಯಾಸಕ್ತರಿಗೆ ಸ್ಫೂರ್ತಿಯ ಸೆಲೆಯಾಯಿತಲ್ಲದೆ ಹಸ್ತಪ್ರತಿಗಳಲ್ಲಿ ಹುದುಗಿರುವ ಸಂಸ್ಕೃತಿ ಸಂಪ್ರದಾಯ ಪರಂಪರೆಯ ವೈಶಿಷ್ಟ್ಯಗಳನ್ನು ಅಜರಾಮರವಾಗಿ ದಾಖಲಿಸಲು ಮುಂದಿನ ಪೀಳಿಗೆಗೆ ಕಾಯ್ದಿರಿಸಲು ಉತ್ತೇಜನ ಲಭಿಸಿತು.

ಶಿವಯೋಗ ಮಂದಿರದ ಶ್ರೀ ವಿಜಯ ಮಹಾಂತೇಶ್ವರ ಗ್ರಂಥಾಲಯದಲ್ಲಿಂದು ಸಹಸ್ರ ಸಹಸ್ರ ಗ್ರಂಥರಾಶಿಯನ್ನು ಸಂಶೋಧಕರು ಆಕರ ಸಾಮಗ್ರಿಯನ್ನಾಗಿ ಸದ್ಬಳಕೆ ಮಾಡುತ್ತಿರುವುದು ಪ್ರೇರಣದಾಯಕವಾಗಿದೆ. ವ್ಯಾಸೋಕ್ತ ಹದಿನೆಂಟು ಪುರಾಣಗಳು ವೇದಗಳು ಉಪನಿಷತ್ತುಗಳು ಧಾರ್ಮಿಕ ಚಾರಿತ್ರಿಕ ಸಾಹಿತ್ಯದ ತಾಳೆಗರಿ ಮತ್ತು ಕಾಗದ ಹಸ್ತಪ್ರತಿಯ ಕಟ್ಟುಗಳು ಸಂಶೋಧನಾಸಕ್ತರ ದಾಹವನ್ನು ತಣಿಸಲು ಕಾತುರತೆಯಿಂದ ಕಾಯುತ್ತಲಿರುವುದು ಅನ್ವೇಷಕರ ಸೌಭಾಗ್ಯದ ಸಂಕೇತವಾಗಿದೆ. ೧೯೧೦ರಲ್ಲಿ ಶ್ರೀ ಕುಮಾರ ಶಿವಯೋಗಿಗಳಿಂದ ಸ್ಥಾಪನೆಯಾಗಿರುವ ಶ್ರೀ ವಿಜಯ ಮಹಾಂತೇಶ್ವರ ಗ್ರಂಥಾಲಯವು ಹಸ್ತಪ್ರತಿಗಳ ಹಾಗೂ ವಿವಿಧ ರೂಪದ ಗ್ರಂಥಗಳ ನಿಧಿಯಂತಿದೆ. ಇಂಥ ಅಪಾರ ಸಂಪತ್ತನ್ನು ಸದ್ವಿನಿಯೋಗಗೊಳಿಸಿಕೊಂಡು ಪುನೀತರಾಗುವುದು ಅದೃಷ್ಟಶಾಲಿಗಳ ಸೌಭಾಗ್ಯವೇ ಸರಿ.

ಶ್ರೀ ಕುಮಾರ ಶಿವಯೋಗಿಗಳು ಬರೆಯಿಸಿದ ಗೂಳೂರು ಸಿದ್ಧವೀರಣ್ಣೊಡೆಯನ (ಕ್ರಿ.ಶ. ೧೫೬೦) ಶೂನ್ಯ ಸಂಪಾದನೆಯ ಕಾಗದದ ಹಸ್ತಪ್ರತಿಯು ಬೆಂಗಳೂರಿನ ಕರ್ನಾಟಕ ರಾಜ್ಯ ಪತ್ರಾಗಾರದಲ್ಲಿರುವುದನ್ನು ಖ್ಯಾತ ಸಂಶೋಧಕರಾದ ಡಾ. ಎಂ. ಚಿದಾನಂದಮೂರ್ತಿಯವರು ಬೆಳಕಿಗೆ ತಂದಿದ್ದಾರೆ. ಆ ಶೂನ್ಯ ಸಂಪಾದನೆಯು ಅಚ್ಚಾಗಿ ಹಲವು ಆವೃತ್ತಿಗಳನ್ನು ಕಂಡಿದೆಯಾದರೂ ಶ್ರೀಗಳಂತಹ ಪೂಜ್ಯ ಮಹನೀಯರೊಬ್ಬರು ಆ ಗ್ರಂಥವನ್ನು ಕೈಯಾರೆ ಮುಟ್ಟಿ ಅಧ್ಯಯನಗೈದ ಹಸ್ತಪ್ರತಿಯೆಂಬ ಭಾವುಕ ಮೌಲ್ಯ ಆ ವಸ್ತುವಾಗಿದೆ. ಸಂರಕ್ಷಣಾ ಯೋಗ್ಯವಾದ ಆ ಪ್ರತಿಯು ೧೯೧೦ರಲ್ಲಿ ಲಿಖಿತವಾಗಿದೆ ಎಂಬುದನ್ನೂ ಡಾ. ಎಂ. ಚಿದಾನಂದಮೂರ್ತಿಯವರು ಖಚಿತಪಡಿಸಿದ್ದಾರೆ.

ಹಸ್ತಪ್ರತಿಯ ಕೊನೆಯ ಭಾಗ ಹೀಗಿದೆ. "ಶ್ರೀಗುರು ಹಾನಗಲ್ಲ ಮಹಾಸ್ವಾಮಿಗಳು ಯೀ ಶೂನ್ಯ ಸಂಪಾದನೆ ಬರೆಸಿದ್ಯೆಯಿದು ಸಮಾಪ್ತವಾದದ್ದು. ಶಕೆ ೧೮೩೨ ಸಾಧಾರಣ ನಾಮ ಸಂವತ್ಸರದ ಜೇಷ್ಠ ಬಹುಳ ತದಿಗೆ ಮಂದವಾರಯಿದು. ಯಾರು ಬರೆದಿದ್ದೆಂದರೆ ಬಾಗಲಕೋಟೆ ತಾಲ್ಲೂಕು ಪೈಕಿ ಹಳ್ಳೂರಲ್ಲಿಯಿರುವ ಸಿದ್ದನ್ನರಾಮಯ್ಯನವರಿಂದ ಲಿಖಿಸಿತು" ಎಂಬುದಾಗಿದೆ. ಶ್ರೀಗಳವರ ಪ್ರಭಾವದಿಂದ ಕರ್ನಾಟಕದ ಬಹುತೇಕ ಮಠಗಳು ಹಸ್ತಪ್ರತಿ ಗ್ರಂಥ ಸಂಪಾದನೆ ಮತ್ತು ಪ್ರಕಟಣೆ ಕಾರ್ಯದಲ್ಲಿ ನಿರತವಾಗಿರುತ್ತವೆ. ಈ ಪರಂಪರೆಯನ್ನು ಮುಂದುವರಿಸುವ ಜವಾಬ್ದಾರಿ ಸರ್ವ ಸಾಹಿತ್ಯಾಸಕ್ತರದಾಗಿದೆ.



# ಸುರಪುರ ಸಂಸ್ಥಾನದ ದೇವಾಲಯಗಳ ಸಮನ್ವಯತೆ

ಎಸ್.ಕೆ. ಅರುಣಿ*

**ದೇ**ವಗಿರಿ ಯಾದವ ಅರಸರ ಪತನ ದೆಹಲಿ ತೊಘಲಕ್ ಸುಲ್ತಾನರಿಂದ ಕ್ರಿ.ಶ. ೧೩ರಲ್ಲಿ ಆದನಂತರ ಇಂದಿನ ಯಾದಗಿರಿ ಜಿಲ್ಲೆಯ ಶಹಾಪುರ ತಾಲೂಕಿನ ಸಗರದಲ್ಲಿ ಪ್ರಾಂತ್ಯವನ್ನು ಸ್ಥಾಪಿಸಿದರು. ಈ ಪ್ರಾಂತ್ಯಕ್ಕೆ ದೆಹಲಿ ಸುಲ್ತಾನರು ಬಾಹುದ್ದಿನ್ ಘಾರಸಫ್ ಎಂಬ ದಂಡನಾಯಕನ್ನು ಪ್ರಾಂತ್ಯಾಧಿಕಾರಿಯನ್ನಾಗಿ ನೇಮಿಸಿದರು. ಇದರೊಂದಿಗೆ ಸುಧೀರ್ಘವಾದ ಪರಂಪರೆ ತಡೆಯಾಯಿತು. ಮುಖ್ಯವಾಗಿ ಸಗರನಾಡು ಎಂದು ಕರೆಯಲ್ಪಡುವ ಕೃಷ್ಣಾ-ಭೀಮೆ ನದಿಗಳ ನಡುವಿನ ಭೂ-ಪ್ರದೇಶದಲ್ಲಿ ಪ್ರಚಲಿತದಲ್ಲಿನ ದೇವಾಲಯಗಳ ನಿರ್ಮಾಣ ಸ್ಥಗಿತವಾದವು.

ತೊಘಲರ ಆಳ್ವಿಕೆ ಬಹುಕಾಲ ಉಳಿದುಕೊಳ್ಳಲಿಲ್ಲ. ಕ್ರಿ.ಶ. ೧೩೪೭ರಲ್ಲಿ ಗುಲ್ಬರ್ಗಾದಲ್ಲಿ ಬಹಮನಿ ರಾಜ್ಯ ಸ್ಥಾಪನೆಯಾಯಿತು. ಸಗರ ನಾಡು ಒಳಗೊಂಡಂತೆ ಅಳಂದೆ-ಸಾಸಿರ ಎಡದೊರೆನಾಡು ಕಲಬುರ್ಗಿ ವಿಶಾಲ ಭೂ-ಪ್ರದೇಶ ಬಹುಮನಿ ರಾಜ್ಯದ ನೇರ ಆಳ್ವಿಕೆಗೆ ಒಳಪಟ್ಟಿತು. ಸಗರನಾಡಿನ ಕೇಂದ್ರವಾಗಿದ್ದ ಸಗರವು ಬಹಮನಿಯ ಮುಖ್ಯ ಪ್ರಾಂತ್ಯದ ಕೇಂದ್ರಸ್ಥಾನವಾಯಿತು. ಡೆಕ್ಕನ್ ಸುಲ್ತಾನರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಹಾಗೂ ಮುಸ್ಲಿಂ ಕಲೆಗೆ ಒತ್ತು ನೀಡುವುದರೊಂದಿಗೆ ಸಗರನಾಡಿನಲ್ಲಿ ದೇವಾಲಯ ನಿರ್ಮಾಣ ಕ್ರಿ.ಶ. ೧೩೪೦ರ ದಶಕದಿಂದಲೇ ಸ್ಥಗಿತಗೊಂಡಿತು. ಬಹಮನಿಯವರ ನಂತರ ಬಿಜಾಪುರದ ಆದಿಲಶಾಹಿ ಸುಲ್ತಾನರ ಆಳ್ವಿಕೆ ಕ್ರಿ.ಶ. ೧೪೯೬ರಲ್ಲಿ ಪ್ರಾರಂಭಗೊಂಡಿತು. ಸಗರನಾಡಿಗೆ ಹತ್ತಿರದಲ್ಲಿದ್ದ ಬಿಜಾಪುರ ಸಗರನಾಡನ್ನು ತಮ್ಮ ನೇರ ಆಡಳಿತಕ್ಕೆ ಒಳಪಡಿಸಿಕೊಂಡರು. ಇದು ಕೂಡ ದೇವಾಲಯಗಳ ನಿರ್ಮಾಣಕ್ಕೆ ಮರುಜೀವ ನೀಡಲು ವಿಫಲವಾಯಿತು. ಆದಿಲಶಾಹಿ ಸುಲ್ತಾನರ ಆಳ್ವಿಕೆಯ ಉತ್ತರಾರ್ಧದ ಅವಧಿಯಲ್ಲಿ ದೇವಾಲಯಗಳನ್ನು ನಿರ್ಮಿಸುವ ಸಂಪ್ರದಾಯ ಪುನರ್ ಉದಯವಾಗತೊಡಗಿತು. ಮುಖ್ಯವಾಗಿ ೧೫೬೫ರ ತಾಳಿಕೋಟೆ ಕದನದ ನಂತರ ಕೃಷ್ಣಾ ನದಿಯ ಬಲದಂಡೆಯ ಭಾಗವಾದ ಬಿಜಾಪುರ ಯಾದಗಿರಿ ಜಿಲ್ಲೆಯಲ್ಲಿ ಶೈವ ದೇವಾಲಯಗಳು ಹಾಗೂ ಯತಿಗಳ ಗದ್ದುಗೆಗಳ ನಿರ್ಮಾಣ ಪ್ರಾರಂಭವಾಗಿತು. ಕೊಡೆಕಲ್ ಬಸವಣ್ಣನ ಗುಡಿ; ತಿಂತಣಿ ಮೊನಪ್ಪಯ್ಯ ಸಾರಂಗ ಮಠ, ಇತ್ಯಾದಿಗಳು ನಾಡಿನ ದೇವಾಲಯ ನಿರ್ಮಾಣದ ಸಂಪ್ರದಾಯದ ಮರುಸ್ಥಾಪನೆ ಎಂದು ಗುರುತಿಸಬಹುದು. ತಾಳಿಕೋಟೆ ಯುದ್ಧ ಕೊನೆಗೊಳ್ಳುತ್ತಿದ್ದಂತೆ ಸಗರನಾಡಿನಲ್ಲಿ ನಾಯಕ ಅರಸರ ಆಳ್ವಿಕೆ ಮೊಳಕೆಯೊಡೆಯುತ್ತದೆ. ಎರಡು ಶತಮಾನಗಳ ಕಾಲ ಆಳ್ವಿಕೆ ನಡೆಸಿದ ಸುರಪುರ ಸಂಸ್ಥಾನ ಡೆಕ್ಕನ್ ಸುಲ್ತಾನರ ರಾಜ್ಯದ ಹೃದಯಭಾಗವೆಂತಿದ್ದ ಸಗರನಾಡಿನಲ್ಲಿ ದೇವಾಲಯಗಳ ನಿರ್ಮಾಣಕ್ಕೆ ಪುನರ್ ಜೀವನ ನೀಡಿದರು. ಅಲ್ಲದೆ, ದಕ್ಷಿಣಭಾರತದಲ್ಲಿ ಪ್ರಚಲಿತದಲ್ಲಿದ್ದ ಸಂಪ್ರದಾಯಿಕ ದ್ರಾವಿಡ ಶೈಲಿಯ ದೇವಾಲಯಗಳ ನಿರ್ಮಾಣಕ್ಕೆ ಒತ್ತು ನೀಡಿದರು. ಪಕ್ಕದ ಮರಾಠರ ದೇವಾಲಯ ಶೈಲಿಯ ಪ್ರಭಾವವನ್ನು ದಿಕ್ಕರಿಸಿ ದಕ್ಷಿಣ ಭಾರತದಲ್ಲಿ ಬಹಳ ಪ್ರಸಿದ್ಧಪಡೆದಿದ್ದ ವಿಜಯನಗರ ಶೈಲಿಯ ದ್ರಾವಿಡ ದೇವಾಲಯ ಅನುಸರಿಸಿದರು. ಪ್ರಸ್ತುತ ಲೇಖನ ದೇವಾಲಯ ರಹಿತ ಸಂಪ್ರದಾಯದ ಪ್ರದೇಶದಲ್ಲಿ ಸಂಪ್ರದಾಯಿಕ ದ್ರಾವಿಡ ದೇವಾಲಯಗಳ ವಾಸ್ತುಶೈಲಿಯನ್ನು ಅನುಸರಿಸುವ ಕ್ರಮದ ಬಗ್ಗೆಯೂ ಚರ್ಚಿಸುವುದಾಗಿದೆ.

ಸುರಪುರ ಸಂಸ್ಥಾನ : ಕ್ರಿ.ಶ. ೧೬೫೦ರಲ್ಲಿ ಬಿಜಾಪುರ ಆದಿಲಶಾಹಿ ಸುಲ್ತಾನರು ನೀಡಿದ ಸಗರನಾಡು ಪ್ರದೇಶದ ಜಾಗೀರು ಅನ್ವಯ ಸಂಸ್ಥಾನವು ಆದಿಲಶಾಹಿ ಸುಲ್ತಾನರ ಆಪ್ತವಲಯದ ಸಾಮಂತರಾಗಿ ಮೂಡಿಬರುತ್ತಾರೆ. ಇದಕ್ಕೂ ಮೊದಲು ಸಂಸ್ಥಾನದ ಪೂರ್ವಿಕರು 'ದೇಸಾಯಿ' ಹುದ್ದೆಯಲ್ಲಿ ನೇಮಕಗೊಂಡು ಸುಲ್ತಾನರ ಮೆಚ್ಚುಗೆಯನ್ನು ಪಡೆದಿದ್ದರು. ಸುಲ್ತಾನರಿಂದ ಜಾಗೀರು ಪಡೆದು ಕೆಲವೇ ದಶಕಗಳಲ್ಲಿ ಮೊಗಲ ಬಾದಶಾಹ ಔರಂಗಬೇಬ ಬಿಜಾಪುರ ಸುಲ್ತಾನರನ್ನು ೧೬೭೬ರಲ್ಲಿ ಸೋಲಿಸಿ ಇಡಿ ರಾಜ್ಯವನ್ನು ಮೊಗಲ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳುತ್ತಾನೆ. ಇದರೊಂದಿಗೆ ಸಂಸ್ಥಾನವು ಕೂಡ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ಮೊಗಲರೊಂದಿಗೆ ಸಂಸ್ಥಾನ ಸಂಧಾನ ಮಾಡಿಕೊಳ್ಳದೇ; ನೇರವಾಗಿ ಸಂಘರ್ಷಕ್ಕೆ

* ನಿರ್ದೇಶಕರು, ಐ.ಸಿ.ಹೆಚ್.ಆರ್., ದಕ್ಷಿಣ ವಲಯ, ಅರಮನೆ ರಸ್ತೆ, ಬೆಂಗಳೂರು, ಮೊ. ೯೪೪೮೩೦೮೫೨೧

ಇಳಿಯುತ್ತದೆ. ವಾಗಣಗೇರಾ ಯುದ್ಧ ೧೬೮೦ ರಿಂದ ೧೭೦೬ರವರೆಗೆ ಸತತವಾಗಿ ನಡೆಯುತ್ತದೆ. ಬಲಾಢ್ಯವಾದ ಮರಾಠರನ್ನು ಮತ್ತು ಆದಿಲಶಾಹಿಗಳನ್ನು ಸಂಹರಿಸಿದ್ದ ಔರಂಗಜೇಬ ಚಿಕ್ಕ ಸಂಸ್ಥಾನದ ಗೊರಿಲ್ಲಾ ಯುದ್ಧದಲ್ಲಿ ಸೋಲನ್ನು ಅನುಭವಿಸುವ ಹಂತಕ್ಕೆ ಬರುತ್ತಾನೆ. ಕೊನೆಗೆ ಬೇಸತ್ತು ಸ್ವತಃ ತನ್ನ ಆಪ್ತ ಸೈನ್ಯವನ್ನು ಸಜ್ಜಗೊಳಿಸಿ ವಾಗಣಗೇರಿಯ ಮೇಲೆ ಎರಗುತ್ತಾನೆ. ಯುವ ದಂಡನಾಯಕನಾಗಿದ್ದ ಅಸಫಜಾ (ಹೈದರಾಬಾದದಲ್ಲಿ ನಿಜಾಮ್ ರಾಜ್ಯ ಸ್ಥಾಪಕ) ನೇತೃತ್ವದಲ್ಲಿ ಚಾಣಾಕ್ಷತೆಯಿಂದ ಸಂಸ್ಥಾನದ ಅರಸ ಬಹರಿ ಪಿಡ್ಡನಾಯಕನನ್ನು ಸೋಲಿಸುತ್ತಾನೆ. ಆದರೆ ಪಿಡ್ಡನಾಯಕ ಸೆರೆಯಾಗದೆ ತಪ್ಪಿಸಿಕೊಂಡು ಆಂಧ್ರದ ಅರಣ್ಯದಲ್ಲಿ ಅವಿತುಕೊಮಡು ಮೊಗಲರ ವಿರುದ್ಧ ಸೈನ್ಯವನ್ನು ಸಜ್ಜುಗೊಳಿಸಲು ಪ್ರಯತ್ನಿಸುತ್ತಾನೆ. ದುರಾದೃಷ್ಟವಶಾತ್ ಮೊಗಲ ಬಾದಶಹಾ ಔರಂಗಜೇಬ ೧೭೦೭ರಲ್ಲಿ ಅಸುನೀಗುತ್ತಾನೆ. ಮೊಗಲರ ಪ್ರಭುತ್ವ ಡೆಕ್ಕನ ಪ್ರದೇಶದಲ್ಲಿ ಕಳೆದುಕೊಳ್ಳುತ್ತದೆ. ಇದರ ಲಾಭ ಪಡೆದು ಪಿಡ್ಡನಾಯಕ ಕಳೆದು ಹೋಗಿದ್ದ ಸಂಸ್ಥಾನದ ಆಳ್ವಿಕೆ ಪುನರ್ ಸ್ಥಾಪಿಸುತ್ತಾನೆ. ಇದು ಸಂಸ್ಥಾನದ ಚರಿತ್ರೆ ಹಾಗೂ ಸಾಂಸ್ಕೃತಿಕ ರಂಗಗಳಿಗೆ ಮಹತ್ವಘಟ್ಟವೆಂದರೆ ಗುರುತಿಸಬಹುದು. ಮೊಗಲ ಹಾಗೂ ಆದಿಲಶಾಹಿ ಸುಲ್ತಾನರಂತಹ ಔತ್ತರೇಯ ಸಂಸ್ಕೃತಿಯನ್ನು ಸಂಸ್ಥಾನಿಕರು ತಿರಸ್ಕರಿಸಿ ದಕ್ಷಿಣಾತ್ಯ ಸಂಸ್ಕೃತಿಯನ್ನು ಒಪ್ಪಿಕೊಳ್ಳುವ ಸಂಪ್ರದಾಯಕ್ಕೆ ಒತ್ತು ನೀಡುವುದು ಇಲ್ಲಿಂದ ಗುರುತಿಸಬಹುದು.

ಸುರಪುರ ನಗರವನ್ನು ಕ್ರಿ.ಶ. ೧೭೧೦ರ ಸುಮಾರಿಗೆ ಬಹರಿ ಪಿಡ್ಡನಾಯಕನು ಸ್ಥಾಪಿಸಿ ಸಂಪ್ರದಾಯಿಕ ವಿಜಯನಗರ ಶೈಲಿಯ ಕಲೆಯನ್ನು ಪ್ರೋತ್ಸಾಹಿಸಿದನು ಕ್ರಿ.ಶ. ೧೭೧೦ರಿಂದ ಸಂಸ್ಥಾನದ ಆಳ್ವಿಕೆಯ ಅಂತ್ಯದವರೆಗೆ ಅಂದರೆ ೧೮೫೮ರವರೆಗೂ ಸಂಸ್ಥಾನ ರಾಜ್ಯದಲ್ಲಿ ವಿಜಯನಗರ ಶೈಲಿಯ ದೇವಾಲಯಗಳು, ಶಿಲ್ಪಗಳು ಹಾಗೂ ಚಿತ್ರಕಲೆ ಬೆಳೆದುಬಂದಿತು. ೧೮೫೮ರ ದಂಗೆಯಲ್ಲಿ ಸಂಸ್ಥಾನ ಭಾಗಿಯಾಗಿ ತನ್ನ ಆಳ್ವಿಕೆಯನ್ನು ಬ್ರಿಟೀಷರ ವಿರುದ್ಧ ಹೋರಾಡಿ ಕಳೆದುಕೊಂಡಿತು. ಇದರೊಂದಿಗೆ ಸಂಸ್ಥಾನದ ಆಳ್ವಿಕೆ ಕೊನೆಗೊಂಡಿತಲ್ಲದೆ; ವಿಜಯನಗರ ಶೈಲಿಯ ಅನುಕರಣೆಯೂ ಕೊನೆಗೊಂಡಿತು.

## ಮೂರು ಹಂತಗಳಾಗಿ ವಿಂಗಡನೆ

ಸುರಪುರ ಸಂಸ್ಥಾನದ ದೇವಾಲಯ ನಿರ್ಮಾಣಗಳನ್ನು ಮೂರು ಹಂತಗಳಲ್ಲಿ ವಿಂಗಡಿಸಬಹುದು.

ಪ್ರಾರಂಭಿಕ ಹಂತ– ಸಂಸ್ಥಾನ ತನ್ನ ಪೂರ್ಣ ಸ್ವರಾಜಯ ಹೊಂದುವ ಪೂರ್ವದ ಕಾಲ ೧೬೫೦ ರಿಂದ ೧೭೧೦ ವರೆಗಿನ ದೇವಾಲಯಗಳು ಕಕ್ಕೆರಾ, ವಾಗಣಗೇರಿ, ರಾಯನಪಾಳ್ಯ, ಶಹಾಪುರ ಇತ್ಯಾದಿಗಳಲ್ಲಿ ನಿರ್ಮಾಣವಾಗಿದೆ. ಬಿಜಾಪುರ ಸುಲ್ತಾನರ ಆಶ್ರಯದಲ್ಲಿ ಸಂಸ್ಥಾನ ತನ್ನ ಆಳ್ವಿಕೆಯನ್ನು ನಡೆಸುತ್ತಿದ್ದರಿಂದ ಆ ಕಾಲದಲ್ಲಿ ಪ್ರಚಲಿತದಲ್ಲಿದ್ದ ಕಮಾನು, ಗುಮ್ಮಟ, ಮಿನಾರೇಟ್ ಇತ್ಯಾದಿಯ ಶೈಲಿಯ ವಿವಿಧ ಆಯಾಮಗಳನ್ನು ತನ್ನ ದೇವಾಲಯ ನಿರ್ಮಾಣದಲ್ಲಿಯೂ ಅಳವಡಿಸಿಕೊಂಡಿತು. ಮುಖ್ಯವಾಗಿ ಗುಮ್ಮಟಾಕಾರದ ದೇವಾಲಯಗಳ ನಿರ್ಮಾಣ ಮಾಡುವುದರಿಂದ ರಾಜಕೀಯವಾಗಿಯೂ ಅಸ್ತಿತ್ವಕ್ಕೆ ದಕ್ಕೆಯಾಗುತ್ತಿರಲಿಲ್ಲ. ಅದರಂತೆ ಆ ಕಾಲದಲ್ಲಿ ಗೋರಿಗಳಂತಹ ಕಟ್ಟಡಗಳೇ ಹೆಚ್ಚು ರಚಿಸುವ ಕಲೆ ಗೊತ್ತಿದ್ದ ಕಲಾಕಾರರು ಲಬ್ಯವಿದ್ದರು. ಆ ಕಾರಣಕ್ಕಾಗಿ ಸಂಸ್ಥಾನದ ಆರಂಭಿಕ ದೇವಾಲಯ ಕಲೆಯನ್ನು ರಚಿಸುವಲ್ಲಿ ಸ್ಥಳೀಯ ಕಲಾವಿದರು. ವಾಸ್ತುಶಿಲ್ಪಿಗಳು ನೇಮಕ ಮಾಡಿಕೊಂಡಿರಬಹುದು. ಕಕ್ಕೆರಾದ ಜಕ್ಕಪ್ಪ ದೇಸಾಯಿ ಸಮಾಧಿ ಪಕ್ಕದ ಶಿವದೇವಾಲಯ, ರಾಯನ ಪಾಳ್ಯದ ಶಿವದೇವಾಲಯ ಹಾಗೂ ವಾಗಣಗೇರಿಯ ಬ್ರಹ್ಮನ ದೇವಾಲಯ ಗುಮ್ಮಟಾಕಾರದಲ್ಲಿ ನಿರ್ಮಾಣವಾದ ದೇವಾಲಯಗಳು.

ಎರಡನೇಯ ಹಂತದ ದೇವಾಲಯಗಳು : ಬಲವಂತ ಬಹರಿ ಇಮ್ಮಡಿ ಪಿಡ್ಡನಾಯಕ ವಾಗಣಗೇರಿಯಲ್ಲಿ ತನ್ನ ಸಂಸ್ಥಾನವನ್ನು ಬದ್ರಪಡಿಸಲು ಕ್ರಿ.ಶ. ೧೬೭೦ರ ದಶಕದಲ್ಲಿಯೇ ಪ್ರಾರಂಭಿಸುತ್ತಾನೆ. ಒಂದೆಡೆ ಮರಾಠ ಸರದಾರರು ಮೊಗಲ ಔರಂಗಜೇಬನ ಡೆಕ್ಕನ್ ದಾಳಿಗಳಿಂದಾಗಿ ನಿಷ್ಕ್ರಿಯರಾಗುತ್ತಿದ್ದು. ಇನ್ನೊಂದೆಡೆ ಬಿಜಾಪುರ ಸುಲ್ತಾನ ರಾಜ್ಯವನ್ನು ಮೊಗಲ ಸಾಮ್ರಜ್ಯಕ್ಕೆ ಸೇರ್ಪಡೆಯಾಯಿತು. ಈ ಸಂದಿಗ್ಧ ಪರಿಸ್ಥಿತಿಯ ಲಾಭ ಪಡೆದ ಇಮ್ಮಡಿ ಪಿಡ್ಡನಾಯಕ ವಾಗಣಗೇರಿಯಲ್ಲಿ ತನ್ನ ನೆಲೆಯನ್ನು ಬದ್ರಪಡಿಸಿಕೊಮಡು ದೇವಾಲಯಗಳ ನಿರ್ಮಾಣಕ್ಕೆ ಯೋಜನೆ ರೂಪಿಸುತ್ತಾನೆ. ಗೋಸಲ ವಂಶದ ಮನೆದೇವತೆಯಾದ ವೇಣುಗೋಪಾಲ ಸ್ವಾಮಿ ದೇವಾಲಯವನ್ನು ನಿರ್ಮಿಸುವುದಕ್ಕಾಗಿ ಯೋಜನೆಯನ್ನು ರೂಪಿಸುತ್ತಾನೆ. ವಿವಿಧ ಶಿಲ್ಪಿಕಾರರನ್ನು ವಾಸ್ತುಶಿಲ್ಪಿಗಳನ್ನು ಕರೆಯಿಸಿ ದೇವಾಲಯದ ತಲವಿನ್ಯಾಸ ರೂಪಿಸುವುದರ ಜೊತೆಗೆ ಶಿಲ್ಪಿಗಳಿಂದ ಕಂಬ, ಬೋದಿಗೆ, ಭಿತ್ತಿ ಶಿಲ್ಪ ಸೋಪಾನಗಳನ್ನು ಅಲಂಕಾರಿಕವಾಗಿ ಶಿಲೆಗಳಲ್ಲಿ ಕೊರೆಯಿಸುತ್ತಾನೆ. ದೇವಾಲಯದ ಅಧಿಷ್ಟಾನವು ವಾಗಣಗೇರಿ ಕೋಟೆಯ ಮುಖ್ಯ ಭಾಗದಲ್ಲಿ ಸ್ಥಾಪನೆಯೂ ಆಗುತ್ತದೆ. ಅದು ಸುಮಾರು ಕ್ರಿ.ಶ. ೧೭೦೪–೦೫ರ ಅವಧಿಯಾಗಿರಬಹುದು. ಆದರೆ ಮೊಗಲ ಔರಂಗಜೇಬ ಸ್ವತಃ ತನ್ನ ಆಪ್ತ ಸೈನ್ಯದೊಂದಿಗೆ ವಾಗಣಗೇರಿಗೆ ದಾಳಿ

ಮಾಡುವುದರೊಂದಿಗೆ ಪಿಡ್ಡನಾಯಕ ಅನುಭವಿಸಬೇಕಾಗುತ್ತದೆ. ಈ ಸೋಲಿನೊಂದಿಗೆ ನಿರ್ಮಾಣ ಹಂತದಲ್ಲಿದ್ದ ದೇವಾಲಯ ಅಲ್ಲಿಗೇ ಕೊನೆಗೊಳ್ಳುತ್ತದೆ. ಈ ವೇಣುಗೋಪಾಲ ಸ್ವಾಮಿ ದೇವಾಲಯ ರಚನೆಯ ಶೈಲಿಯನ್ನು ಗಮನಿಸಲಾಗಿ ಇದು ಗುಮ್ಮಟಾಕಾರದ ಕಲೆಗಿಂತಲೂ ಬಿನ್ನವಾಗಿ ರಚನೆಯಾಗುವ ಹಂತದಲ್ಲಿತ್ತು. ಪ್ರಾಯಶಃ ವಿಜಯನಗರದ ಉಪ-ಶೈಲಿಯ ರಚನೆಯಲ್ಲಿ ನಿರ್ಮಾಣವಾಗುತ್ತಿತ್ತು.

**ಮೂರನೆಯ ಹಂತ:** ಔರಂಗಜೇಬನ ಮರಣದ ನಂತರ ಇಮ್ಮಡಿ ಪಿಡ್ಡನಾಯಕ ಪುನಃ ತನ್ನ ಸಂಸ್ಥಾನದ ರಾಜ್ಯವನ್ನು ಪಡೆದು ರಾಜ್ಯಭಾರ ಪ್ರಾರಂಭಿಸಿದ. ನೂತನವಾಗಿ ರಾಜಧಾನಿ ಸುರಪುರವನ್ನು ಸ್ಥಾಪಿಸಿದನು. ಇದು ಸಂಸ್ಥಾನದ ಕಲೆ, ವಾಸ್ತುಶಿಲ್ಪಕ್ಕೆ ಒಂದು ಮಹತ್ವದ ಘಟ್ಟವೆಂದೇ ಹೇಳಬಹುದು. ಬಿಜಾಪುರ ಸುಲ್ತಾನರ ಆಶ್ರಯ ಅಥವಾ ಮೊಗಲರಂತಹ ಸಾಮ್ರಾಜ್ಯಶಾಹಿ ಶೈಲಿಯ ಅನುಕರಣೆಗೆ ಅನುಗುಣವಾಗಿ ಸಂಸ್ಥಾನದ ಕಲೆಯು ಬೆಳೆಯುವುದು ಅವಶ್ಯಕತೆ ಇರಲಿಲ್ಲ. ಇಡೀ ಸುರಪುರದ ರಚನೆಯನ್ನು ಪ್ರಾಚೀನ ಸಂಪ್ರದಾಯಿಕ ವಾಸ್ತುಶಾಸ್ತ್ರಗಳ ಮಾದರಿಯಲ್ಲಿ ರಚಿಸಿದನು. ಊರನ್ನು ಮಂಡಲಗಳನ್ನಾಗಿ ವಿಂಗಡಿಸಿದನು. ಮಧ್ಯದ ಮಂಡಲದಲ್ಲಿ ಅರಮನೆ ಹಾಗೂ ದೇವಸ್ಥಾನಗಳನ್ನು ನಿರ್ಮಿಸಿದನು. ಭಾರತೀಯ ಪರಂಪರೆಯ ಅಂಶಗಳನ್ನು ಈ ರಾಜಧಾನಿ ನಗರದ ರಚನೆಯಲ್ಲಿ ಗುರುತಿಸಬಹುದು.

ಸಂಸ್ಥಾನದ ರಾಜದೇಗುಲವೆಂದೇ ಗುರುತಿಸಲ್ಪಡುವ ವೇಣುಗೋಪಾಲ ಸ್ವಾಮಿ ದೇವಾಲಯ ವಿಜಯನಗರ ಶೈಲಿಯಲ್ಲಿ ರಚನೆಗೆ ಒತ್ತುನೀಡಿದೆ. ತಲವಿನ್ಯಾಸದ ರಚನೆಯು ಸಗರನಾಡಿನಲ್ಲಿ ಪ್ರಚಲಿತದಲ್ಲಿದ್ದ ಕಲ್ಯಾಣಿ ಚಾಲುಕ್ಯರ ದೇವಾಲಯಗಳ ಪ್ರಭಾವದೊಂದಿಗೆ ಗುರುತಿಸಬಹುದು. ಆದರೆ ಶಿಲ್ಪಕಲೆ, ಶಿಖರ, ಇತ್ಯಾದಿಗಳ ವಿಜಯನಗರ ಶೈಲಿಯ ಪ್ರಭಾವ ಕಾಣುತ್ತೇವೆ. ಮುಖ್ಯವಾಗಿ ಸುರಪುರದ ದೇವಾಲಯಗಳು ಅನಂತಪುರ ಜಿಲ್ಲೆಯ ಚಂದ್ರಗಿರಿಯ ವಿಜಯನಗರ ದೇವಾಲಯಗಳ ಪ್ರಭಾವದಲ್ಲಿ ನಿರ್ಮಿಸಲಾಗಿವೆ.

ಸಂಸ್ಥಾನದ ಮೂಲ ಪುರುಷರು ಅನಂತಪುರ ಜಿಲ್ಲೆಯ ರತ್ನಗಿರಿಯವರು. ಅಲ್ಲದೇ ಅನೇಕ ಕಲಾವಿದರನ್ನು ಆಂಧ್ರದಿಂದ ಬರಮಾಡಿಕೊಂಡಿದ್ದರು. ಈ ಎಲ್ಲಾ ಕಾರಣಗಳಿಂದ ಸಂಸ್ಥಾನದ ಅರಸರ ಕಲೆಯ ಮೂಲ ಸೆಲೆಯನ್ನು ರತ್ನಗಿರಿ ಅತವಾ ಚಂದ್ರಗಿರಿ ಪ್ರದೇಶವೆಂದು ಗುರುತಿಸಬಹುದು.



# ಅಣ್ಣಿಗೇರಿ ಪಟ್ಟಣದ ಪ್ರಮುಖ ಶೈವ ದೇವಾಲಯಗಳು

**ಸಂಜಯ ಎನ್. ಹಂಜೆ***

ಅಣ್ಣಿಗೇರಿ ಪಟ್ಟಣವು ಕ್ರಿ.ಶ. ಸುಮಾರು ೭ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೂ ಬೆಳ್ವೊಲ-೩೦೦ ಆಡಳಿತ ವಿಭಾಗದ ರಾಜಧಾನಿಯಾಗಿದ್ದಿತು. ಈ ಪಟ್ಟಣದಲ್ಲಿ ಕ್ರಿ.ಶ. ಸುಮಾರು ೧೦ನೆಯ ಶತಮಾನದಿಂದಲೂ ಶೈವ ಧರ್ಮದ ಸಾಂಸ್ಕೃತಿಕ ಚಟುವಟಿಕೆಗಳು ಸಾಂಗವಾಗಿ ನಡೆದು ಬಂದಿವೆ. ಬೆಳ್ವೊಲ-೩೦೦ ಆಡಳಿತ ವಿಭಾಗವನ್ನಾಳಿದ ಆಳರಸರಾದಿ ಅಧಿಕಾರಿಗಳು ಮತ್ತು ಸಮಕಾಲೀನ ಮಹಾಮಂಡಳೇಶ್ವರರು, ಮಹಾಸಾಮಂತರು, ಪ್ರಭುಗಾವುಂಡರು, ಗಾವುಂಡರು ಹಾಗೂ ತತ್ಕಾಲೀನ ವರ್ತಕರು, ಪ್ರಜೆಗಳು ಶೈವಾಚಾರ್ಯರ ಉಪದೇಶಗಳಿಂದ ಪ್ರೇರಿತರಾಗಿ ಶೈವ ದೇವಾಲಯಗಳ ನಿರ್ಮಾಣವನ್ನು ವಿಶೇಷವಾಗಿ ಕೈಗೊಂಡಿದ್ದಾರೆ. ಹೀಗಾಗಿ ಈ ಪಟ್ಟಣದಲ್ಲಿ ಅನೇಕ ಶೈವ ದೇವಾಲಯಗಳು ನಿರ್ಮಾಣವಾಗಿವೆ.

## ೧. ಅಮೃತೇಶ್ವರ ದೇವಾಲಯ (ಹಳೆ ಅಮೃತೇಶ್ವರ ದೇವಾಲಯ)

ಲಕ್ಷ್ಮೇಶ್ವರದ ಕ್ರಿ.ಶ. ೯೬೮ರ ಶಾಸನದಲ್ಲಿ, ಅಣ್ಣಿಗೇರಿಯ ಪಾರ್ಶ್ವನಾಗಾರ್ಜುನ ಜಿನಾಲಯಕ್ಕೆ ದಾನ ಮಾಡಿದ ಭೂಮಿಯ ಸೀಮಾ ವಿವರಗಳಲ್ಲಿ ಅಮೃತೇಶ್ವರ ಕ್ಷೇತ್ರದ (ಅಮೃತೇಶ್ವರ ದೇವಾಲಯದ ಭೂಮಿ) ನಿರೂಪಣೆಯಿದೆ.[೧] ಇದರಿಂದ ಅಣ್ಣಿಗೇರಿ ಪಟ್ಟಣದಲ್ಲಿ ಕ್ರಿ.ಶ. ಸುಮಾರು ೧೦ನೆಯ ಶತಮಾನದ ಪೂರ್ವಾರ್ಧದಲ್ಲಿ ನಿರ್ಮಾಣವಾಗಿದ್ದ ಅಮೃತೇಶ್ವರ ದೇವಾಲಯ ಇತ್ತೆಂಬುದು ಮನದಟ್ಟಾಗುತ್ತದೆ. ಆದರೆ ಆ ದೇವಾಲಯದ ನಿರ್ಮಾತೃರ ಕುರಿತು ಸ್ಪಷ್ಟವಿಲ್ಲ. ಆ ದೇವಾಲಯವು ಕಾಲಾಂತರದಲ್ಲಿ ಜೀರ್ಣೋದ್ಧಾರವಾಗುತ್ತ ಇಂದಿಗೂ ಉಳಿದು ಬಂದಿದೆ. ಇಂದಿನ ಹಳೆಯ ಅಮೃತೇಶ್ವರ ನಗರದಲ್ಲಿರುವ ಹಳೆಯ ಅಮೃತೇಶ್ವರ ದೇವಾಲಯವೇ ಪ್ರಸ್ತುತ ಶಾಸನೋಕ್ತ ಅಮೃತೇಶ್ವರ ದೇವಾಲಯವಾಗಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ ಮತ್ತು ಮಾಳಿಗೆಯ ರೂಪದ ತೆರೆದ ಮಂಟಪವಿದೆ. ಮಂಟಪದಲ್ಲಿ ಕ್ರಿ.ಶ. ಸುಮಾರು ೧೦ನೆಯ ಶತಮಾನದ ಎರಡು ರುದ್ರಕಾಂತ ಪ್ರಕಾರದ ಸ್ತಂಭಗಳಿವೆ. ಗರ್ಭಗೃಹದ ವಿತಾನದಲ್ಲಿ ಶಿಲಾಚಪ್ಪಡಿಗಳನ್ನು ಕೋನಾಕಾರದಲ್ಲಿ ಅಡ್ಡಡ್ಡವಾಗಿ ಪೇರಿಸಲಾಗಿದೆ. ಈ ದೇವಾಲಯದ ಪರಿಸರದಲ್ಲಿ ಮೂಲ ದೇವಾಲಯದ ರುದ್ರಕಾಂತ ಪ್ರಕಾರದ ಸ್ತಂಭಗಳು ಇತ್ಯಾದಿ ಬಿಡಿ ವಾಸ್ತು ಅವಶೇಷಗಳು ಮತ್ತು ಅದರಲ್ಲಿ ಪ್ರತಿಷ್ಠಾಪಿತವಾಗಿದ್ದ ಶಿವಲಿಂಗ, ನಂದಿ ಇತ್ಯಾದಿ ಶಿಲ್ಪಾವಶೇಷಗಳು ಹರಡಿಕೊಂಡಿವೆ. ಈ ದೇವಾಲಯದ ಆವರಣದಲ್ಲಿ ದೊರೆತಿರುವ ಕ್ರಿ.ಶ. ೧೦೫೯ರ ತ್ರುಟಿತ ಶಾಸನದಲ್ಲಿ, ಮಹಾಪ್ರಧಾನ ಚಲ್ಲಮ ನಾಯಕನ ಆದೇಶದಂತೆ ಮಾಳಯ್ಯ, ರೇವಣ ನಾಯಕ ಮತ್ತು ಸಮಸ್ತ ಪ್ರಧಾನರು ಕೂಡಿಕೊಂಡು ದೇವಾಲಯವೊಂದಕ್ಕೆ ಸರ್ವನಮಸ್ಯವಾಗಿ ಭೂದಾನ ಮಾಡಿದ ವಿವರವಿದೆ.[೨] ಪ್ರಸ್ತುತ ಶಾಸನೋಕ್ತ ದೇವಾಲಯವು ಈ ಮೇಲಿನ ಅಮೃತೇಶ್ವರ ದೇವಾಲಯ ಆಗಿರುವಂತೆ ತೋರುತ್ತದೆ.

## ೨. ಅಮೃತೇಶ್ವರ ದೇವಾಲಯ

ಕ್ರಿ.ಶ. ೧೧೬೧ರ ಶಾಸನದಲ್ಲಿ, ದಂಡನಾಯಕ ಶ್ರೀಧರಯ್ಯನು ಅಮೃತೇಶ್ವರ ದೇವಾಲಯದ ರಂಗಪೂಜೆಗೆ ಭೂದಾನ ಮಾಡಿದ ನಿರೂಪಣೆಯಿದೆ.[೩] ಕ್ರಿ.ಶ. ೧೧೭೩ರ ಶಾಸನದಲ್ಲಿ, ನಾಗೇಶ್ವರ ದೇವಾಲಯಕ್ಕೆ ದಾನ ಮಾಡಿದ ಭೂಮಿಯ ಸೀಮಾ ವಿವರಗಳಲ್ಲಿ ಅಮೃತೇಶ್ವರ ದೇವಾಲಯದ ಪಡಿಹಾರ ಚಾವಣನ ಹೊಲ, ಛತ್ರದ ಹೊಲ, ಸೂಳೆಯ ಹೊಲ ಎಂಬ ನಿರೂಪಣೆಗಳಿವೆ.[೪] ಕ್ರಿ.ಶ. ೧೧೭೯ರ ಶಾಸನದಲ್ಲಿ, ದಂಡನಾಯಕ ಧನ್ನುಗಿದೇವರಸನ ಧರ್ಮಪತ್ನಿ ಹಿರಿಯ ದಂಡನಾಯಕಿ ಸುಗ್ಗಲದೇವಿ ಅಮೃತೇಶ್ವರ ದೇವಾಲಯದ ನಂದಾದೀವಿಗೆಗಾಗಿ ಆರು ಗದ್ಯಾಣಗಳನ್ನು ದಾನ ಮಾಡಿದ ಪ್ರಸ್ತಾಪವಿದೆ.[೫] ಕ್ರಿ.ಶ. ೧೧೭೯ರ ಶಾಸನದಲ್ಲಿ, ಕರಿತೊರೆಯ ಪಟ್ಟಸಾಹನಿ ವೆರ್ಗ್ಗಡೆ, ಹುಲಿಗೆರೆನಾಡಿನ ಹೆಗ್ಗಡೆ ಪ್ರತಾಪ

* ವರ್ಧಮಾನ ದೇಸಾಯಿ, ೨ನೆಯ ಅಡ್ಡರಸ್ತೆ, ಸಪ್ತಾಪುರ, ಧಾರವಾಡ-೫೮೦೦೦೧, ಮೊ. ೯೫೩೫೧೭೨೪೩೩

ದಂಡನಾಯಕರು ಮತ್ತು ತಳಾರ ಬಾಚಯ್ಯನಾಯಕ ಕೂಡಿಕೊಂಡು ಕುರುವರ ಎರೆಯಮ್ಮ ಗಾವುಂಡನ ಮಗನಾದ ನಾಗಗಾವುಂಡನಿಂದ ಭೂಮಿಯನ್ನು ಮಾರುಗೊಂಡು ಸ್ವಯಂಭು ಅಮೃತೇಶ್ವರ ದೇವಾಲಯದ ಧಾರ್ಮಿಕ ಕಾರ್ಯಗಳಿಗೆ ತ್ರಿವರ್ಗ್ಗದ ಸಮಕ್ಷಮದಲ್ಲಿ ದಾನ ಮಾಡಿದ ವಿವರವಿದೆ.[೬] ಕ್ರಿ.ಶ. ೧೧೯೦ರ ಶಾಸನದಲ್ಲಿ, ಮಹಾಮಂಡಳೇಶ್ವರ ಬಾಚಿದೇವರಸನು ತನ್ನ ವಂಶಾಭಿವೃದ್ಧಿಗಾಗಿ, ಸಂತಾನ ಸಮೃದ್ಧಿಗಾಗಿ, ಕಳತ್ರಾನುರಾಗಕ್ಕಾಗಿ, ನಿತ್ಯಸುಖಾನುಭೋಗಕ್ಕಾಗಿ, ತನಗೆ ಜನಿಸಿದ ಮಗ ಪೆರ್ಮ್ಮನಿಗಾಗಿ, ಸಮಸ್ತ ಜನರ ಕೂರ್ಮ್ಮೆಗಾಗಿ, ತನ್ನನಾಳ್ದರ ರಾಜ್ಯಶ್ರೀಯ ಪರ್ಚ್ಚಗಾಗಿ, ಧಾರ್ಮಿಕರ ಮೆಚ್ಚುಗೆಗಾಗಿ, ನಿತ್ಯಾರ್ತ್ಥ ಮನೋರಥಾ ಪ್ರಾಪ್ತಿಗಾಗಿ, ಶ್ರೀಜಯಕೀರ್ತಿಕಾಂತಿಬುಧಧಿ ಸಾಮರ್ಥ್ಯ ಪ್ರಾಪ್ತಿಗಾಗಿ, ಸಕಳ ಕಾಂತಿಕ ಪೌಷ್ಟಿಕ ಪ್ರಭಾವಕ್ಕಾಗಿ, ದೇವಪ್ರಸಾದ ಕಾರುಣ್ಯಭಾವಕ್ಕಾಗಿ, ಐಹಿಕಾಮುಷ್ಕಿಕ ಪದಾನುಭವನಕ್ಕಾಗಿ, ಪರಮೈಶ್ವರ್ಯ ಲಕ್ಷ್ಮೀಭವನಕ್ಕಾಗಿ ಅಮೃತೇಶ್ವರ ದೇವಾಲಯದಲ್ಲಿ ಪ್ರತಿ ತಿಂಗಳು ಅಮವಾಸ್ಯೆಯಂದು ನಡೆಯುವ ರಂಗಭೋಗ ಚಟುವಟಿಕೆಗಳಿಗೆ, ನೈವೇದ್ಯ, ಪೂಜೆ ವಿಧಾನಕ್ಕೆ ರಾಜಾಧ್ಯಕ್ಷ ಚಿಂತಾನಾಯಕನ ಅಂಗಡಿಯಿಂದ ಜೋಳವನ್ನು ಸ್ಥಳೀಯ ತ್ರಿವರ್ಗಗಳು, ಸಮಯಂಗಳ ಸಾಸಿರ್ವರ ಸನ್ನಿಧಾನದಲ್ಲಿ ದಾನ ಮಾಡಿದ ನಿರೂಪಣೆಯಿದೆ.[೭]

ಕ್ರಿ.ಶ. ೧೧೯೭ರ ಶಾಸನದಲ್ಲಿ, ಲಕ್ಷ್ಮೀಧರ ದಂಡನಾಯಕ ಮತ್ತು ಆತನ ಅಳಿಯನಾದ ಸಿಂಗಣ ದಂಡನಾಯಕ ಕೂಡಿಕೊಂಡು ಅಮೃತೇಶ್ವರ ದೇವಾಲಯಕ್ಕೆ ಭೂದಾನ ಮಾಡಿದ ವಿವರವಿದೆ.[೮] ಕ್ರಿ.ಶ. ೧೨೦೦ರ ಶಾಸನದಲ್ಲಿ, ಕಂಡಿಮಯ್ಯ ನಾಯಕನ ಮಗ ಮೊಖರಿ ಕೇಸಿಯಣ್ಣ(?) ಮತ್ತು ದೊಮ್ಮರ (ಡೊಂಬರ) ವಿಕರಸ ಕೂಡಿಕೊಂಡು ಮಾಂಡಳಿಕ ಬಾಚಯ್ಯನ (ಬಾಚಿದೇವರಸ) ನೇತೃತ್ವದಲ್ಲಿ ಅಮೃತೇಶ್ವರ ದೇವರ ನೈವೇದ್ಯಕ್ಕೆ ಆರುನೂರು ಮತ್ತರು ಕಮ್ಮ ಭೂಮಿಯನ್ನು ದಾನ ಮಾಡಿದ ಪ್ರಸ್ತಾಪವಿದೆ.[೯] ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನದಲ್ಲಿ, ಅಮೃತೇಶ್ವರ ದೇವರಿಗೆ ಪ್ರತಿನಿತ್ಯ ಮೂವತ್ತು ಹೂವುಗಳನ್ನು ಏರಿಸಲು ಹರೆಕಾರ ಚಿಕಾರ್ಯನು(?) ಒಂದು ಗದ್ಯಾಣವನ್ನು(?) ದಾನ ಮಾಡಿದ ನಿರೂಪಣೆಯಿದೆ.[೧೦] ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನದಲ್ಲಿ, ಸೇವುಣರ ಜೈತುಗಿದೇವನ ಪಟ್ಟದರಸಿ ಆಚಲದೇವಿಯ ಮನೆಹೆರ್ಗ್ಗಡೆ ಚಂದಯ್ಯನು ಅಮೃತೇಶ್ವರ ದೇವರಿಗೆ ಪ್ರತಿನಿತ್ಯ ಐವತ್ತು ಹೂವುಗಳನ್ನು ಏರಿಸಲು ಒಂದು ಗದ್ಯಾಣವನ್ನು ದಾನ ಮಾಡಿದ ವಿವರವಿದೆ.[೧೧]

ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನದಲ್ಲಿ, ಅಮೃತೇಶ್ವರ ದೇವಾಲಯದ ಪುತ್ರಕರ (ಭಕ್ತರು) ಹಿರಿಮೆಯ ಪರಿಚಯವಿದೆ.[೧೨] ಕ್ರಿ.ಶ. ೧೨೦೨ರ ಶಾಸನದಲ್ಲಿ, ದಂಡನಾಯಕ ಬಸವಯ್ಯನು ಚಕ್ರವರ್ತಿಯ ಅಪ್ಪಣೆಯಂತೆ ತ್ರಿವರ್ಗಗಳು, ಸಮಯಂಗಳ ಸನ್ನಿಧಾನದಲ್ಲಿ ಅಮೃತನಾಥ ದೇವರಿಗೆ ಮಹಾವಿಭೂತಿಯಿಂದ ಮಾಡುವ ಅಷ್ಟಮಿ ಚತುರ್ದಶಿಯ ಪೂಜೆಗೆ ಸರ್ವಾತಿಥ್ಯದ ಮಾಹರಯ್ಯನ ಮೊಮ್ಮಗ ಲಖ್ಖಯ್ಯ ಮತ್ತು ಗೋವಿಂದದೇವನಿಗೆ ಧಾರಾಪೂರ್ವಕವಾಗಿ ಭೂದಾನ ಮಾಡಿದ ವಿವರವಿದೆ.[೧೩] ಕ್ರಿ.ಶ. ೧೨೦೩ರ ಶಾಸನದಲ್ಲಿ, ಬಲವಂಕ ಯಡವಂಕದ ಕೇಶವ ಠಕ್ಕುರನು ಅಮೃತೇಶ್ವರ ದೇವರಿಗೆ ಪ್ರತಿನಿತ್ಯ ಐವತ್ತು ಸೇವಂತಿಗೆ ಹೂವುಗಳನ್ನು ಏರಿಸಲು ಒಂದು ಗದ್ಯಾಣವನ್ನು ದಾನ ಮಾಡಿದ ವಿವರವಿದೆ.[೧೪] ಕ್ರಿ.ಶ. ೧೨೦೪ರ ಶಾಸನದಲ್ಲಿ, ಹೊಯ್ಸಳರ ಇಮ್ಮಡಿ ವೀರಬಲ್ಲಾಳದೇವನ ಡಿಂಗರಿಗ (ಸೇವಕ) ವಜ್ರಥಟ್ಟಿನ ಕಾಳೆಯ (ಕಾಳಯ್ಯ), ಮಾಳೆಯ (ಮಾಳಯ್ಯ), ರಾಹುತ ಎಂಬುವವರು ಕೂಡಿಕೊಂಡು ಅಮೃತೇಶ್ವರ ದೇವರ ಶಿಖೆಗೆ (ಶಿರ/ಕಿರೀಟ) ಪ್ರತಿನಿತ್ಯ ಮೂವತ್ತು ಸೇವಂತಿಗೆ ಹೂವುಗಳನ್ನು ಏರಿಸಲು ಒಂದು ಗದ್ಯಾಣವನ್ನು ದಾನ ಮಾಡಿದ ನಿರೂಪಣೆಯಿದೆ.[೧೫] ಕ್ರಿ.ಶ. ೧೨೦೫ರ ಶಾಸನದಲ್ಲಿ, ಹಾಕಿಸೆಟ್ಟಿ ದೇವಯ್ಯನು ಅಮೃತೇಶ್ವರ ದೇವರಿಗೆ ಚವುತಿ ಸಪ್ತಮಿ ತ್ರಯೋದಶಿ ಮೂರು ತಿಥಿಯ ಪಾಯಸದ ನೈವೇದ್ಯಕ್ಕೆ ನಾಲ್ಕು ಕಡಕೆ ಎಂಟೆಲೆಯ ಎಳೆಗಳನ್ನು ದಾನ ಮಾಡಿದ ಪ್ರಸ್ತಾಪವಿದೆ.[೧೬]

ಕ್ರಿ.ಶ. ೧೨೦೬-೦೭ರ ಶಾಸನದಲ್ಲಿ, ಪೆರ್ಗ್ಗಡೆ ಮಲ್ಲಿದೇವನು ಅಮೃತೇಶ್ವರ ದೇವರಿಗೆ ಭೂದಾನವನ್ನು ಮತ್ತು ಸೋಮಯ್ಯನು ಅಮೃತೇಶ್ವರ ದೇವರ ಶಿಖೆಗೆ ಪ್ರತಿನಿತ್ಯ ಸೇವಂತಿಗೆ ಹೂವುಗಳನ್ನು ಏರಿಸಲು ಮೂರು ಗದ್ಯಾಣಗಳನ್ನು ದಾನ ಮಾಡಿದ ಪ್ರಸ್ತಾಪವಿದೆ.[೧೭] ಕ್ರಿ.ಶ. ೧೨೦೮ರ ಶಾಸನದಲ್ಲಿ, ಹೊಯ್ಸಳರ ವೀರಬಲ್ಲಾಳದೇವನ ಹಿರಿಯರಸಿ (ಪಟ್ಟದರಸಿ) ಪದ್ಮಲದೇವಿಯ ಕೂಸ (ಪ್ರೀತಿಯ ಮಗನಂತಿರುವ) ಏಚಣ್ಣನು ಅಮೃತೇಶ್ವರ ದೇವರ ಶಿಖೆಗೆ ಪ್ರತಿನಿತ್ಯ ಐವತ್ತು ಪುಷ್ಪಗಳನ್ನು ಏರಿಸಲು ಬೇಕಾದ ಖರ್ಚನ್ನು ನಿಭಾಯಿಸಲು ಅನುವಾಗುವಂತೆ ಒಂದು ಗದ್ಯಾಣವನ್ನು ದಾನ ಮಾಡಿದ ನಿರೂಪಣೆಯಿದೆ.[೧೮] ಕ್ರಿ.ಶ. ೧೨೨೮ರ ಶಾಸನದಲ್ಲಿ, ಅಮೃತೇಶ್ವರ ದೇವರ ಪುರದೊಳಗೆ ವಾಸಕಾಟೆ (ವಾಸಕಾರ) ಖಸವಯ್ಯನ ಮಕ್ಕಳಾದ ರುದ್ರಯ್ಯ ಮತ್ತು ಚಂದಯ್ಯ ಎಂಬುವವರು ತಮ್ಮ ವಾಯಪುಲಿಯ ಬೊಮ್ಮಯ್ಯನ ಹೆಸರಿನಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಿರುವ ಮತ್ತು ಪ್ರಭುಪ್ರವಾಳ (ಪ್ರಭುಗಾವುಂಡ) ಬೊಮ್ಮಯ್ಯನು ಅಮೃತೇಶ್ವರ ದೇವಾಲಯಕ್ಕೆ ದಾನ ಮಾಡಿದ ವಿವರವಿದೆ.[೧೯]

ಕ್ರಿ.ಶ. ೧೨೩೧ರ ಶಾಸನದಲ್ಲಿ, ಕೊಂಕಣದೇಶದ ಚಕ್ರವರ್ತಿ ವೀರಭುಜಬಳ ಅರಿಯ ರೇವಿಸೆಟ್ಟಿ ಅಣ್ಣಿಗೇರಿ ಪಟ್ಟಣದಲ್ಲಿ ಮುಂಚೆ ನಡೆಯುತ್ತಿದ್ದ (ಕೊಡಮಾಡಿದ್ದ) ಪನ್ನಾಯ ಸುಂಕವನ್ನು ಅಮೃತೇಶ್ವರ ದೇವರ ಸನ್ನಿಧಾನದಲ್ಲಿ ಧಾರಾಪೂರ್ವಕವಾಗಿ ದಾನ ಮಾಡಿದ ನಿರೂಪಣೆಯಿದೆ.[೨೦] ಕ್ರಿ.ಶ. ಸುಮಾರು ೧೩ನೆಯ ಶತಮಾನದ ತ್ರುಟಿತ ಶಾಸನದಲ್ಲಿ, ಮಂಡಲಿಕ ಬಾಚಣ್ಣನು ಅಮೃತೇಶ್ವರ ದೇವರಿಗೆ ತ್ರಿವರ್ಗಗಳು ಮತ್ತು ಸಮಯಸಾಸಿರ್ವರ ಸನ್ನಿಧಾನದಲ್ಲಿ ದಾನ ಮಾಡಿದ ವಿವರವಿದೆ.[೨೧] ಕ್ರಿ.ಶ. ಸುಮಾರು ೧೩ನೆಯ ಶತಮಾನದ ಶಾಸನದಲ್ಲಿ, ಅಮೃತೇಶ್ವರ ದೇವಾಲಯದ ಅಂಗಭೋಗ ಮೊದಲಾದ ಚಟುವಟಿಕೆಗಳಿಗೆ ಭೂದಾನ ಮಾಡಿದ ಪ್ರಸ್ತಾಪವಿದೆ.[೨೨] ಕ್ರಿ.ಶ. ೧೫೩೯ರ ಶಾಸನದಲ್ಲಿ, ವಿಜಯನಗರದ ವೀರಪ್ರತಾಪ ಅಚ್ಯುತರಾಯನು ಭಾಸ್ಕರಕ್ಷೇತ್ರ ತುಂಗಭದ್ರಾನದಿ ತೀರದ ವಿಠಲೇಶ್ವರನ ಸನ್ನಿಧಿಯಲ್ಲಿ ಮಾಧವ ಪ್ರೀತ್ಯರ್ಥವಾಗಿ ಸಮಸ್ತ ಭೂಸುರರಿಗೆ (ಬ್ರಾಹ್ಮಣರು) ಆನಂದನಿಧಿ ಎಂಬ ದಾನವನ್ನು ಕೊಡಮಾಡಿ ಅವರನ್ನು ಸಂತೋಷಪಡಿಸಿದ ಪ್ರಶಸ್ತಿಯನ್ನು ಅಮೃತೇಶ್ವರ ದೇವರ ಸನ್ನಿಧಾನದಲ್ಲಿ ಬರೆಸಿದ ವಿವರವಿದೆ.[೨೩]

ಹಾನಗಲ್ಲ ತಾಲ್ಲೂಕಿನ ಕಲಕೇರಿಯ ಕ್ರಿ.ಶ. ೧೨೦೭ರ ಶಾಸನದಲ್ಲಿ, ಕಲಕೇರಿಯ ನಾಳ್ಪ್ರಭು (ನಾಡಪ್ರಭು) ಹರಿಯಮ್ಮಸೆಟ್ಟಿ ಎಂಬುವವನು ಸ್ವಯಂಭು ಸೋಮೇಶ್ವರ ದೇವರಿಗೆ ಅಣ್ಣಿಗೇರಿಯ ಅಮೃತೇಶ್ವರ ದೇವರ ಪಾದಪದ್ಮಾರಾಧಕನಾದ (ಭಕ್ತ) ಮುಡಗೇರಿಯ ಅಮಿತೆಯ ಸಾಹಣಿಯ ಸಮ್ಮುಖದಲ್ಲಿ ಭಿಕ್ಷೆಯ ಮೂರುಜಾವಿದೇವನ ಪಾದಗಳನ್ನು ತೊಳೆದು ಗದ್ದೆಯನ್ನು ದಾನ ಮಾಡಿದ ನಿರೂಪಣೆಯಿದೆ.[೨೪] ಹುಬ್ಬಳ್ಳಿ ಮತ್ತು ಧಾರವಾಡ ತಾಲ್ಲೂಕಿನ ಹೆಬ್ಬಳ್ಳಿಯ ಕ್ರಿ.ಶ. ೧೨೪೮ರ ಶಾಸನಗಳಲ್ಲಿ, ದಂಡನಾಯಕ ಬೀಚಿಸೆಟ್ಟಿಯ ನಿರೂಪದಂತೆ ಆತನ ಅಳಿಯ ಸರ್ವಾಧಿಕಾರಿ ಮಲ್ಲಿಸೆಟ್ಟಿ ಅಣ್ಣಿಗೇರಿಯ ಅಮೃತೇಶ್ವರ ದೇವರ ಸನ್ನಿಧಿಯಲ್ಲಿ ಅನಾದಿ ಬಣಂಜುಪಟ್ಟಣವೆನಿಸಿದ ಹುಬ್ಬಳ್ಳಿಯ ಗೌಡುಗಳು, ಎಂಟುಹಿಟ್ಟುಗಳು ಮತ್ತು ಪಂಚಮಠದವರ ಕಯ್ಯಲ್ಲಿ ಧಾರೆಯನ್ನು ಎರೆಸಿಕೊಂಡು ಬ್ರಹ್ಮಪುರಿಯಲ್ಲಿಯ ಬ್ರಾಹ್ಮಣರಿಗೆ ಸಹಿರಣ್ಯವಾಗಿ ಧಾರಾಪೂರ್ವಕವಾಗಿ ಭೂದಾನ ಮಾಡಿದ ಪ್ರಸ್ತಾಪಗಳಿವೆ.

ಅಮೃತೇಶ್ವರ ದೇವಾಲಯದ ಪ್ರಾಚೀನತೆ, ಹಿರಿಮೆ, ಮಹಿಮೆಗಳು ಕೆಲವು ಪುರಾಣಗಳಾದಿ ಕೃತಿ–ಕಾವ್ಯಗಳಲ್ಲಿಯೂ ದಾಖಲಾಗಿವೆ. ಕ್ರಿ.ಶ. ಸುಮಾರು ೧೭–೧೮ನೆಯ ಶತಮಾನದಲ್ಲಿ ರಚಿತವಾಗಿರುವ ಭವಿಷ್ಯೋತ್ತರ ಪುರಾಣದ ಕ್ರತುಪುರ ಮಹಾತ್ಮ್ಯದಲ್ಲಿ ಅಣ್ಣಿಗೇರಿ ಮತ್ತು ಅಮೃತೇಶ್ವರನ ಹಿರಿಮೆ ಸವಿಸ್ತಾರವಾಗಿ ನಿರೂಪಿತವಾಗಿದೆ.[೨೫] "ನಾಲ್ಕು ಯೋಜನ ವಿಸ್ತೀರ್ಣವಾದ ಈ ಅನ್ನಗಿರಿ ಕ್ಷೇತ್ರದಲ್ಲಿ ಶ್ರೀಶಂಕರನು ಲಿಂಗರೂಪದಿಂದ ಭೂಗರ್ಭದಲ್ಲಿದ್ದನು. ಐದು ಕಾಮಧೇನುಗಳು ಭಕ್ತಿಯಿಂದ ಆ ಲಿಂಗಕ್ಕೆ ಹಾಲೆರೆಯುತ್ತಿದ್ದವು. ಸಹಸ್ರಾರು ವರ್ಷಗಳು ಸಂದಬಳಿಕ ಒಮ್ಮೆ ಬ್ರಹ್ಮನೂ ಸಮಸ್ತ ದೇವತೆಗಳೂ ಈ ಕ್ಷೇತ್ರಕ್ಕೆ ಬಂದಿರಲಾಗಿ ಲಿಂಗವು ಭೂಮಿಯಿಂದ ಒಡಮೂಡಿತು. ಬ್ರಹ್ಮನು ಸಕಲ ಋಷಿಗಳನ್ನು ಕರಸಿಕೊಂಡು ವಿಧ್ಯುಕ್ತವಾಗಿ ಲಿಂಗ ಪ್ರತಿಷ್ಠಾಪನೆ ಮಾಡಿದನು. ಆ ಕಾಲದಲ್ಲಿ ಬ್ರಹ್ಮನು ಅನ್ನಸಂತರ್ಪಣೆಗಾಗಿ ಸಂಕಲ್ಪ ಮಾಡುತ್ತಲೇ ಅನ್ನದ ಗಿರಿಯೇ ಅಲ್ಲಿ ಉಂಟಾಯಿತು. ಇದರಿಂದ ಈ ಕ್ಷೇತ್ರಕ್ಕೆ 'ಅನ್ನಗಿರಿ' ಎಂದೂ ಅಮೃತಾಭಿಷೇಕದಿಂದ ಉದ್ಭೂತವಾದುದರಿಂದ ಈ ಲಿಂಗಕ್ಕೆ 'ಅಮೃತೇಶ್ವರ' ಎಂದೂ ಹೆಸರಾಯಿತು. ಕಾಮಧೇನುಗಳ ಭಕ್ತಿಪೂರ್ವಕವಾದ ಇಚ್ಛಾನುಸಾರವಾಗಿ, ಗದುಗಿನ ತ್ರಿಕೂಟೇಶ್ವರನ ದರ್ಶನಾರ್ಥಿಗಳು ಮೊದಲು ಈ ಅಮೃತೇಶ್ವರನನ್ನು ಕಂಡು ಆರಾಧಿಸದೆ ಹೋದರೆ ಅವರ ಯಾತ್ರಾಫಲವು ವ್ಯರ್ಥವಾಗಲೆಂಬ ಅಗ್ರಪೂಜೆಯ ಹಿರಿಮೆ ಇದಕ್ಕೆ ಪ್ರಾಪ್ತವಾಯಿತು. ಇದೇ ಪ್ರಕಾರವಾಗಿ, ದ್ವಾಪರಯುಗದಲ್ಲಿ ಪಾಂಡವರು ವನವಾಸ ಕಾಲದಲ್ಲಿ ಮೊದಲು ಈ ಕ್ಷೇತ್ರಕ್ಕೆ ಬಂದು ಅಮೃತೇಶ್ವರನನ್ನು ಪೂಜಿಸಿ ಕ್ರತುಪುರಕ್ಕೆ ತೆರಳಿದರು. ಮುಂದೆ ಈ ಭಾಗದಲ್ಲಿ ಶಂಖುಕರ್ಣನೆಂಬ ಪ್ರಬಲ ದೈತ್ಯನ ಹಾವಳಿಯು ಹೆಚ್ಚಾಗಲು ಅಮೃತೇಶ್ವರನು ನಂದಿಕೇಶ್ವರನಿಂದ ಅವನನ್ನು ಕೊಲ್ಲಿಸಿ ಲೋಕವನ್ನು ಸಂರಕ್ಷಿಸಿದನು".[೨೬]

ಕ್ರಿ.ಶ. ಸುಮಾರು ೧೨–೧೩ನೆಯ ಶತಮಾನದಲ್ಲಾಗಲೇ ಅಮೃತೇಶ್ವರ ದೇವಾಲಯವು ದಕ್ಷಿಣ ವಾರಣಾಸಿ ದಿವ್ಯತೀರ್ಥ, ಸಕಲಕಲಾ ಸಾನ್ನಿಧ್ಯ, ದಕ್ಷಿಣ ವಾರಣಾಸಿ ಎಂತಲೂ ಮತ್ತು ಈ ದೇವಾಲಯದಲ್ಲಿ ಪ್ರತಿಷ್ಠಾಪಿತವಾದ ಶಿವಲಿಂಗವು ಜಾಗೃತಲಿಂಗ, ಸ್ವಯಂಭುಲಿಂಗ, ಅಮೃತಲಿಂಗ, ದಿವ್ಯಲಿಂಗ ಎಂತಲೂ ಪ್ರಸಿದ್ಧವಾಗಿದ್ದವು. ಹರಿಹರನು 'ಏಕಾಂತರಾಮಿತಂದೆಯ ರಗಳೆ'ಯಲ್ಲಿ (ಕ್ರಿ.ಶ. ಸುಮಾರು ೧೩ನೆಯ ಶತಮಾನ) "ಅಬ್ಬಲೂರದಲ್ಲಿ ಹರಭಕ್ತ ಏಕಾಂತರಾಮಯ್ಯನು ಜೈನರೊಂದಿಗೆ ಸವಾಲನೊಡ್ಡಿ ತನ್ನ ಶಿರವನ್ನು ಕತ್ತರಿಸಿಕೊಂಡನು. ಇಬ್ಬರ ಮಧ್ಯದಲ್ಲಿಯೂ ಆದ ಒಪ್ಪಂದದಂತೆ ಆ ಶಿರವನ್ನು ಅಗ್ಗಣಿಯ ಹೊನ್ನತಂದೆಗಳು ಹೊಸ ಹೊನ್ನ ಹರಿಯಾಣದಲ್ಲಿರಿಸಿ ಅದನ್ನು ಹೊತ್ತುಕೊಂಡು ಶಿವನ ಏಳು ಪುಣ್ಯಕ್ಷೇತ್ರಗಳಲ್ಲಿ ಆ ಶಿರವನ್ನು ಮೆರೆಸಲು ಕೊಂಡೊಯ್ದರು. ಹುಲಿಗೆರೆ ಪಟ್ಟಣದ (ಲಕ್ಷ್ಮೇಶ್ವರ) ಸೋಮನಾಥ, ಅಣ್ಣಿಗೇರಿಯ ಅಮೃತನಾಥ, ಕೆಂಭಾವಿಯ ಭೋಗನಾಥ, ಕಪ್ಪಡಿಯ ಸಂಗಮೇಶ್ವರ, ಆ ವೃಂದದ ನಾಗನಾಥ, ಸೊನ್ನಲಿಗೆಯ (ಸೊಲ್ಲಾಪುರ) ಜಗದ್ಗುರು

ಸಿದ್ಧರಾಮ, ಹಂಪೆಯ ವಿರುಪಾಕ್ಷಲಿಂಗ ದೇವಾಲಯಗಳಿಗೆ ಹೋಗಿ ರಾಮಯ್ಯನನ್ನು ರಕ್ಷಿಸುವಂತೆ ಪ್ರಾರ್ಥಿಸಿಕೊಂಡರು. ಹೀಗೆ ಏಳು ಕ್ಷೇತ್ರಗಳಲ್ಲಿ ಏಳು ದಿವಸಗಳವರೆಗೆ ಶಿರವನ್ನು ಮೆರಸಿ ಅಬ್ಬಲೂರಿಗೆ ಬಂದರು. ಜೈನ ಮುಖಂಡರನ್ನೂ, ಭವ್ಯರನ್ನೂ ಕರೆಯಿಸಿ, ಅವರ ಸಮಕ್ಷಮದಲ್ಲಿ ರುಂಡವನ್ನು ಮುಂಡಕ್ಕೆ ಹೊಂದಿಸಿ ಏಳು ಸಿದ್ಧಕ್ಷೇತ್ರಗಳ ಪುಣ್ಯಜಲವನ್ನು ಆ ರುಂಡದ ಮೇಲೆ ಸಿಂಪಡಿಸಿದರು. ಆಗ ರಾಮಯ್ಯನು ಚೈತನ್ಯವನ್ನು ಹೊಂದಿದನು" ಎಂದು ಅಮೃತೇಶ್ವರನ ಹಿರಿಮೆಯನ್ನು ನಿರೂಪಿಸಿದ್ದಾನೆ.[೨೭]

ಅಂತರವಳ್ಳಿಯ ಶಾಂತನಿರಂಜನನ 'ಅಬ್ಬಲೂರು ಚರಿತೆ'ಯಲ್ಲಿ (ಕ್ರಿ.ಶ. ೧೬೫೦) "ಶಿವಭಕ್ತ ಏಕಾಂತರಾಮಯ್ಯನು ಪರಶಿವನ ಆಜ್ಞೆಯಂತೆ ಜೈನರನ್ನು ನಿರ್ಮೂಲನ ಮಾಡಲು ಅಬ್ಬಲೂರಿಗೆ ಆಗಮಿಸಿದ ಸಂದರ್ಭದಲ್ಲಿ ಆತನು ಇಲ್ಲಿಯ ಜೈನರೊಂದಿಗೆ ವಾದ–ವಿವಾದಗಳನ್ನು ನಡೆಸಿ ಕತ್ತರಿಸಿಕೊಂಡ ಶಿರವನ್ನು ಹುಲಿಗೆರೆಯ (ಲಕ್ಷ್ಮೇಶ್ವರ) ಅಗ್ರಣಿಯ ಹೊನ್ನಿತಂದೆಗಳು ಹೊಂಬರಿವಾಣದಲ್ಲಿರಿಸಿಕೊಂಡು ಹುಲಿಗೆರೆಯಲ್ಲಿ ಸೋಮನಾಥ, ಅಣ್ಣಿಗೇರಿಯಲ್ಲಿ ಅಮೃತೇಶ್ವರ, ಕಪ್ಪಡಿಯಲ್ಲಿ ಸಂಗಮನಾಥ, ಕೆಂಬಾವಿಯಲ್ಲಿ ಭೋಗೇಶ್ವರ, ಸೊನ್ನಲಿಗೆಯಲ್ಲಿ (ಸೊಲ್ಲಾಪುರ) ಸಿದ್ಧರಾಮೇಶ್ವರಲಿಂಗ, ಆವುಂಡದಲ್ಲಿ ನಾಗನಾಥ, ಹಂಪೆಯ ವಿರೂಪಾಕ್ಷ ದೇವಾಲಯಗಳಿಗೆ ಹೋಗಿ ರಾಮಯ್ಯನನ್ನು ರಕ್ಷಿಸುವಂತೆ ಪ್ರಾರ್ಥಿಸಿಕೊಂಡರು" ಎಂದು ದಾಖಲಿಸಿದ್ದಾನೆ.[೨೮]

ಅಮೃತೇಶ್ವರ ದೇವಾಲಯದ ವಾಸ್ತು ಲಕ್ಷಣಗಳ ಕುರಿತು ಥಾಮಸ್ ಹಾರ್ಡಿ, ಹೆನ್ರಿ ಕಸೆನ್ಸ್, ಎಂ.ಎ. ಧಾಕಿ, ಗೆರಾರ್ಡ ಫೊಕೆಮಾ, ಎ.ಎಂ. ಅಣ್ಣಿಗೇರಿ, ಸಿ. ಮಹದೇವ, ಶ್ರೀನಿವಾಸ ಪಾಡಿಗಾರ, ಆರ್.ಎಂ. ಷಡಕ್ಷರಯ್ಯ, ಬಿ. ಜಯಮ್ಮ ಮೊದಲಾದವರು ಅಧ್ಯಯನ ಮಾಡಿದ್ದಾರೆ.[೨೯] ಈ ದೇವಾಲಯದ ನಿರ್ಮಾಣದಲ್ಲಿ ಕಪ್ಪುಶಿಲೆಯನ್ನು ಬಳಸಲಾಗಿದೆ. ಕೆಲವು ವಾಸ್ತು ಭಾಗಗಳಿಗೆ ಅಲಂಕರಣೆಯ ಉದ್ದೇಶದಿಂದ ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯನ್ನು ಬಳಸಲಾಗಿದೆ. ಈ ದೇವಾಲಯವು ಮೂಲತಃ ಉತ್ತರಾಭಿಮುಖವಾಗಿದ್ದು, ನಂತರದ ಕಾಲದಲ್ಲಿ ನವರಂಗದ ಪೂರ್ವಬದಿಯ ದ್ವಾರವನ್ನು ಮುಖ್ಯಪ್ರವೇಶ ದ್ವಾರವನ್ನಾಗಿ ಮಾಡಲಾಗಿದೆ. ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ (ಗೂಢಮಂಟಪ), ಸಭಾಮಂಟಪ (ಅಗ್ರಮಂಟಪ / ರಂಗಮಂಟಪ), ಮುಖಮಂಟಪಗಳಿವೆ.

ಗರ್ಭಗೃಹವು ಚೌಕಾಕಾರವಾಗಿದ್ದು, ಇದರ ನಾಲ್ಕೂ ಮೂಲೆಗಳಲ್ಲಿ ನಾಲ್ಕು ಭದ್ರಕ ಪ್ರಕಾರದ ಭಿತ್ತಿಗಂಬಗಳಿವೆ. ಹಿಂಬದಿಯ (ದಕ್ಷಿಣ) ಭಿತ್ತಿಯಲ್ಲಿ ಮಧ್ಯಪಟ್ಟಿಕಾವಿದೆ. ಉತ್ತರಬದಿಯ ಭಿತ್ತಿಯಲ್ಲಿ ಗೂಡುವಿದೆ. ವಿತಾನದಲ್ಲಿ ಪದ್ಮಮಂಡಲದ ಅಲಂಕಾರವಿದೆ. ಇದರ ಸುತ್ತಲೂ ಆರು ಚಿಕ್ಕ ಪದ್ಮಮಂಡಲಗಳ ಚಿತ್ರಣಗಳಿವೆ. ದ್ವಾರಬಂಧವು ಪಂಚಶಾಖಾ ರೀತಿಯಲ್ಲಿದ್ದು, ಇದರಲ್ಲಿ ನಾಗಬಂಧ, ಗಂಧರ್ವ ದಂಪತಿ, ಸ್ತಂಭ, ರತ್ನವಲ್ಲಿ, ಪದ್ಮದಲವರಿ ಶಾಖಾಗಳಿವೆ. ಈ ಶಾಖಾಗಳ ಕೆಳಭಾಗದಲ್ಲಿರುವ ಪೇದ್ಯಾಭಾಗದಲ್ಲಿ ರತಿ, ಕಾಮ, ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ರತಿಯ ಶಿರದ ಮೇಲೆ ನಾಟ್ಯಗಣೇಶನ ಶಿಲ್ಪವಿದೆ. ಕಾಮನ ಶಿರದ ಮೇಲಿರುವ ಕೀರ್ತಿಮುಖದ ಸುರುಳಿಯಲ್ಲಿ ನರ್ತಿಸುತ್ತಿರುವ ಗಂಧರ್ವರ ಶಿಲ್ಪಗಳಿವೆ. ಲಲಾಟ ಪಟ್ಟಿಯಲ್ಲಿ ದ್ವಿಭುಜೆ ಗಜಲಕ್ಷ್ಮಿಯ (ಶ್ರೀಯಾದೇವಿ) ಉಬ್ಬುಶಿಲ್ಪವಿದೆ. ಉತ್ತರಾಂಗದಲ್ಲಿ ದ್ರಾವಿಡ ಮಾದರಿಯ ಏಳು ಶಿಖರಗಳ ಪ್ರತಿರೂಪಗಳಿವೆ. ಇವುಗಳ ಮಧ್ಯದಲ್ಲಿ ಸ್ಥಾನಕ ಶಿವನ ಶಿಲ್ಪವಿದ್ದು, ಈತನ ಪಾರ್ಶ್ವದಲ್ಲಿ ತಲಾ ಎರಡೆರಡು ಸ್ತ್ರೀಯರ ಶಿಲ್ಪಗಳಿವೆ. ಈ ಶಿಲ್ಪಗಳ ಇಕ್ಕೆಲಗಳಲ್ಲಿ ಸೂರ್ಯನ ಹನ್ನೆರಡು ಶಿಲ್ಪಗಳಿವೆ. ಉದುಂಬರದ ಮುಂಬದಿಯಲ್ಲಿ ಚಂದ್ರಶಿಲೆಯ ರಚನೆಯಿದ್ದು, ತ್ರುಟಿತವಾಗಿದೆ.

ಅಂತರಾಳವು ಚೌಕಾಕಾರವಾಗಿದ್ದು, ನಾಲ್ಕೂ ಮೂಲೆಗಳಲ್ಲಿ ನಾಲ್ಕು ಭದ್ರಕ ಪ್ರಕಾರದ ಭಿತ್ತಿಗಂಬಗಳಿವೆ. ವಿತಾನದಲ್ಲಿ ಪದ್ಮಮಂಡಲದ ಅಲಂಕಾರವಿದೆ. ವಿತಾನಕ್ಕೆ ಆಸರೆಯಾಗಿ ನಂತರದ ಕಾಲದಲ್ಲಿ ನಾಲ್ಕು ಸರಳವಾದ ನೀಳ ಸ್ತಂಭಗಳನ್ನು ನಿಲ್ಲಿಸಲಾಗಿದೆ. ಅಂತರಾಳವು ಮೊದಲಿಗೆ ಅರ್ಧಮಂಟಪವಾಗಿದ್ದು, ಅದು ಎರಡು ಸ್ತಂಭಗಳ ಆಧಾರವನ್ನು ಹೊಂದಿತ್ತು. ಇದರೊಂದಿಗೆ ಕಪೋತವು ಇತ್ತು. ಪ್ರಸ್ತುತ ಕಪೋತ ಮಾತ್ರ ಉಳಿದಿದೆ. ನಂತರದ ಕಾಲದಲ್ಲಿ ಪಂಚಶಾಖಾ ರೀತಿಯಲ್ಲಿರುವ ದ್ವಾರಬಂಧವನ್ನು ಅಳವಡಿಸಲಾಗಿದೆ. ಈ ಶಾಖಾಗಳೆಲ್ಲವೂ ನಿರಲಂಕೃತವಾಗಿವೆ. ಲಲಾಟ ಪಟ್ಟಿಯಲ್ಲಿ ಪದ್ಮದ ಚಿತ್ರಣವಿದೆ. ಇದರ ಮೇಲ್ಭಾಗದಲ್ಲಿ ಗಜಸಾಲುವಿದೆ. ದ್ವಾರಬಂಧದ ಪಾರ್ಶ್ವದಲ್ಲಿ ಪದ್ಮಾಲಂಕಾರದ ಜಾಲಂಧ್ರಗಳನ್ನು ಸೇರಿಸಲಾಗಿದೆ.

ನವರಂಗವು ಚೌಕಾಕಾರವಾಗಿದ್ದು, ಇದರ ಮಧ್ಯದಲ್ಲಿ ಚಿತ್ರಖಂಡ ಪ್ರಕಾರದ ನಾಲ್ಕು ಸ್ತಂಭಗಳಿವೆ. ಇವುಗಳು ಪೀಠ, ಪಾದ, ದಂಡ, ಕಲಶ, ಫಲಕ, ಬೋದಿಗೆಯನ್ನು ಹೊಂದಿವೆ. ಈ ಎಲ್ಲ ಅಂಗಗಳು ಪದ್ಮ, ರತ್ನ ಇತ್ಯಾದಿ ಸೂಕ್ಷ್ಮಕೆತ್ತನೆಗಳಿಂದ ಅಲಂಕೃತವಾಗಿವೆ. ಈ ಸ್ತಂಭಗಳಿಗೆ ಸಮಾನಾಂತರವಾಗಿ ಸುತ್ತಲಿನ ಭಿತ್ತಿಗಳಲ್ಲಿ ಭದ್ರಕ ಪ್ರಕಾರದ ಹನ್ನೆರಡು ಭಿತ್ತಿಗಂಬಗಳಿವೆ. ನವರಂಗದ ವಾಯವ್ಯ ಮೂಲೆಯಲ್ಲಿ ಮೊದಲಿಗೆ ತ್ರೈಪುರುಷರ (ಬ್ರಹ್ಮ, ವಿಷ್ಣು, ಮಹೇಶ್ವರ) ಶಿಲ್ಪಗಳಿದ್ದವು. ಪ್ರಸ್ತುತ ಶಿವಲಿಂಗಗಳನ್ನು ಪ್ರತಿಷ್ಠಾಪಿಸಲಾಗಿದೆ.

ನವರಂಗದ ಉತ್ತರಬದಿಯ ಪ್ರವೇಶ ಮಂಟಪಕ್ಕೆ ಹೊಂದಿಕೊಂಡಂತೆ ಸಭಾಮಂಟಪವಿದೆ. ನಕ್ಷತ್ರಾಕಾರದಲ್ಲಿರುವ ಈ ಮಂಟಪಕ್ಕೆ ಪೂರ್ವ, ದಕ್ಷಿಣ, ಉತ್ತರಗಳಿಂದ ಪ್ರವೇಶದ್ವಾರಗಳಿವೆ.

ನವರಂಗದ ದಕ್ಷಿಣಬದಿಯ ದ್ವಾರಬಂಧದ ಮುಂಭಾಗದಲ್ಲಿ ಚೌಕಾಕಾರವಾದ ಮುಖಮಂಟಪವಿದೆ. ವಿತಾನದಲ್ಲಿ ಪದ್ಮಮಂಡಲದ ಅಲಂಕಾರವಿದೆ. ಇದು ಮುಂದೆ ಎರಡು ಜೋಡಿ ಹಾಗೂ ಹಿಂಭಾಗದಲ್ಲಿ ಒಂದು ಜೋಡಿ ಸ್ತಂಭಗಳುಳ್ಳ ತೆರೆದ ರಚನೆಯಾಗಿದೆ. ಈ ಸ್ತಂಭಗಳು ಭದ್ರಕ, ವಿಷ್ಣುಕಾಂತ, ಮಿಶ್ರಕ ಇತ್ಯಾದಿ ರೂಪದ್ದಾಗಿವೆ. ಇವುಗಳಲ್ಲೊಂದು ಗದುಗಿನ ತ್ರಿಕೂಟೇಶ್ವರ ದೇವಾಲಯದಲ್ಲಿರುವಂತೆ ವೃತ್ತಾಕಾರದ ಕಾಂಡವುಳ್ಳದ್ದಾಗಿದೆ. ಎರಡು ಸ್ತಂಭಗಳು ಚೂಪು ಅಷ್ಟಕೋನಾಕೃತಿಯ ಘಂಟಾಕೃತಿಯಲ್ಲಿವೆ. ಮತ್ತೆರಡು ಸ್ತಂಭಗಳು ಅಷ್ಟಕೋನಾಕೃತಿಯ ಚೂಪು ಸ್ತಂಭಗಳೇ ಆದರೂ ಸ್ವಲ್ಪ ದಪ್ಪವಾಗಿವೆ. ಮತ್ತೆರಡು ಸ್ತಂಭಗಳು ಚೌಕ, ದಿಂಡು, ಘಂಟಾಕಾರ, ಕಲಶಗಳನ್ನು ಹೊಂದಿವೆ.

ಅಧಿಷ್ಠಾನವು ಪಾದಬಂಧ ಪ್ರಕಾರದಾಗಿದ್ದು, ವೇದಿಬಂಧ ರೀತಿಯಲ್ಲಿದೆ. ಇದರಲ್ಲಿ ಖುರಕ, ಪದ್ಮದಲ, ತ್ರಿಪಟ್ಟ ಕುಮುದ, ಕಪೋತ, ಮಕರಪಟ್ಟಿಕಾ, ವೇದಿ ಭಾಗಗಳಿವೆ. ಮಕರಪಟ್ಟಿಕಾ ವ್ಯಾಳಗಳಿಂದ ಅಲಂಕೃತವಾಗಿದ್ದು, ಇವುಗಳ ಮಧ್ಯದಲ್ಲಿ ಸರಸ್ವತಿ, ಪಾರ್ವತಿ, ಗಣೇಶ, ನರ್ತಕರು ಮೊದಲಾದ ಉಬ್ಬುಶಿಲ್ಪಗಳಿವೆ. ಸಭಾಮಂಟಪದ ಅಧಿಷ್ಠಾನವು ಮಂಚಬಂಧ ಪ್ರಕಾರದಾಗಿದ್ದು, ಇದರಲ್ಲಿ ಭಿಟ್, ಖುರಕ, ಪದ್ಮದಲ, ಎತ್ತರವಾದ ಗಲ, ಊರ್ಧ್ವಪದ್ಮ, ಪಟ್ಟಿಕಾ ಭಾಗಗಳಿವೆ. ಜಂಘಾದಲ್ಲಿ (ಭಿತ್ತಿ) ಭದ್ರ, ಉಪಭದ್ರ, ಕರ್ಣ ಭಾಗಗಳಿವೆ. ಕರ್ಣಗಳಲ್ಲಿ ದ್ರಾವಿಡಕೂಟ ಕೋಷ್ಠಗಳಿವೆ. ಪ್ರತಿರಥಗಳ ಕೋಣಗಳಲ್ಲಿ ಕುಡ್ಯಸ್ತಂಭಗಳಿವೆ. ಗರ್ಭಗೃಹದ ಮೂರೂ ಬದಿಯ ಹೊರಭಿತ್ತಿಯ ಭದ್ರಕಗಳಲ್ಲಿ ಖಟ್ಟಕ ಪ್ರಕಾರದ ದೇವಕೋಷ್ಠಗಳಿವೆ. ಈ ಮೂರೂ ದೇವಕೋಷ್ಠಗಳ ಮೇಲ್ಭಾಗದಲ್ಲಿ ಅಲಂಕಾರಯುತ ದ್ರಾವಿಡ ಶೈಲಿಯ ಶಿಖರಗಳ ಪ್ರತಿಕೃತಿಗಳಿವೆ. ದಕ್ಷಿಣ ಬದಿಯ ದೇವಕೋಷ್ಠದಲ್ಲಿ ಮೊದಲಿಗೆ ಶಿವನ ಸದಾಶಿವ ರೂಪದ ಶಿಲ್ಪವಿತ್ತು. ಇದು ಈ ದೇವಕೋಷ್ಠದ ಶಿಖರದ ಮುಮ್ಮುಖದಲ್ಲಿರುವ ಚತುರ್ಭುಜ ಸದಾಶಿವನ ಶಿಲ್ಪದ ಆಧಾರದಿಂದ ಸ್ಪಷ್ಟವಾಗುತ್ತದೆ. ಸದಾಶಿವನ ಪಾರ್ಶ್ವದಲ್ಲಿ ಭೃಂಗಿ, ವಾದಕರು, ನರ್ತಕರ ಶಿಲ್ಪಗಳಿವೆ. ಪಶ್ಚಿಮ ಬದಿಯ ದೇವಕೋಷ್ಠದಲ್ಲಿ ಯಾವ ಶಿಲ್ಪವಿತ್ತೆಂಬುದನ್ನು ಸೂಚಿಸುವ ಕುರುಹುಗಳಿಲ್ಲ. ಉತ್ತರ ಬದಿಯ ದೇವಕೋಷ್ಠದಲ್ಲಿ ಮೊದಲಿಗೆ ವಿಷ್ಣುವಿನ ಶಿಲ್ಪವಿತ್ತು. ಇದು ಈ ದೇವಕೋಷ್ಠದ ಶಿಖರದ ಮುಮ್ಮುಖದಲ್ಲಿರುವ ಭೂವರಾಹನ ಶಿಲ್ಪದ ಆಧಾರದಿಂದ ವ್ಯಕ್ತವಾಗುತ್ತದೆ. ಭೂವರಾಹನ ಪಾರ್ಶ್ವದಲ್ಲಿ ಶ್ರೀದೇವಿ, ಭೂದೇವಿ, ಚತುರ್ಭುಜ ಶಿವ, ಪದ್ಮನಿಧಿ ಶಿಲ್ಪಗಳಿವೆ. ಭಿತ್ತಿಯ ಮೇಲೆ ಪ್ರಸ್ತರದ ಮಟ್ಟದಲ್ಲಿ ಬಳ್ಳಿಯುಳ್ಳ ಆಕರ್ಷಕ ನಾಸಿಗಳಿವೆ. ಹಾರದಲ್ಲಿರುವ ಕೂಟಗಳು, ನಾಸಿಗಳು ಮತ್ತು ಶಾಲಗಳು ಬಹಳಷ್ಟು ಅಲಂಕೃತವಾಗಿವೆ.

ಗರ್ಭಗೃಹದ ಉತ್ತರ ಬದಿಯ ಅಧಿಷ್ಠಾನದಲ್ಲಿ ದೀರ್ಘವಾದ ಮಕರವಕ್ತ್ರ ಪ್ರಕಾರದ ಪ್ರಣಾಳ (ಜಲಹರಿ) ಇರುವುದು. ಇದರ ಎರಡೂ ಅಂಚಿನಲ್ಲಿ ಮಕರವಕ್ತ್ರಗಳನ್ನು ಅಳವಡಿಸಿರುವುದು ವಿಶೇಷವಾಗಿದೆ. ಈ ದೇವಾಲಯದ ಕೆಲವು ವಾಸ್ತು ಭಾಗಗಳನ್ನು ನಿರ್ಮಿಸಿದ ಶಿಲ್ಪಿಗಳೂ ಇಲ್ಲಿಯ ಶಾಸನಗಳಲ್ಲಿ ದಾಖಲಾಗಿದ್ದಾರೆ. ಕ್ರಿ.ಶ. ಸುಮಾರು ೧೩ನೆಯ ಶತಮಾನದ ಶಾಸನದಲ್ಲಿ, ದಯ ಎಂಬುವವನು ಇಲ್ಲಿಗೆ ಆಗಮಿಸಿ ಸೇವೆ ಸಲ್ಲಿಸಿದ ಪ್ರಸ್ತಾಪವಿದೆ.[೩೦] ಸಭಾಮಂಟಪದ ಹಾರದ ನಾಸಿಯಲ್ಲಿರುವ ಕ್ರಿ.ಶ. ಸುಮಾರು ೧೩ನೆಯ ಶತಮಾನದ ಶಾಸನದಲ್ಲಿ ದೇಮೋಜ ಎಂಬ ಶಿಲ್ಪಿಯ ನಿರೂಪಣೆಯಿದೆ.[೩೧] ಕ್ರಿ.ಶ. ಸುಮಾರು ೧೫ನೆಯ ಶತಮಾನದ ಶಾಸನದಲ್ಲಿ, ಎಳಮೇಲದ ಬಸವೋಜನು ಪದ್ಮನಾಥನ ಬಿನ್ನಹದ ಮೇರೆಗೆ ದೇವಾಲಯದ ಪ್ರಾಂಗಣದಲ್ಲಿ ಹಾಸುಗಲ್ಲುಗಳನ್ನು ಹಾಕಿಸಿದ ವಿವರವಿದೆ.[೩೨] ಕ್ರಿ.ಶ. ಸುಮಾರು ೧೬ನೆಯ ಶತಮಾನದ ಶಾಸನದಲ್ಲಿ ಜನುಮನು ದೇವಾಲಯದ ಪ್ರಾಂಗಣದಲ್ಲಿ ಹಾಸುಗಲ್ಲುಗಳನ್ನು ಹಾಕಿಸಿದ ಪ್ರಸ್ತಾಪವಿದೆ.[೩೩] ಕ್ರಿ.ಶ. ಸುಮಾರು ೧೮-೧೯ನೆಯ ಶತಮಾನದ ಶಾಸನಗಳಲ್ಲಿ ವಿಠಪ್ಪ, ನಾರಾಯಣ, ವೀರಪ್ಪ, ನನ್ನಮ, ನಿಂಗಾ (ನಿಂಗಣ್ಣ) ಎಂಬುವವರು ದೇವಾಲಯದ ಪ್ರಾಗಂಣದಲ್ಲಿ ಹಾಸುಗಲ್ಲುಗಳನ್ನು ಹಾಕಿಸಿದ ನಿರೂಪಣೆಗಳಿವೆ.[೩೪]

ಅಮೃತೇಶ್ವರ ದೇವಾಲಯವು ನಿರ್ಮಾಣವಾದ ಕಾಲದಿಂದಲೂ ಈ ದೇವಾಲಯಕ್ಕೆ ಸಂಬಂಧಿಸಿದ ಸ್ಥಾನಾಚಾರ್ಯರು, ಸ್ಥಳೀಯ ತ್ರಿವರ್ಗಗಳು, ಸಮಯದವರ ನೇತೃತ್ವದಲ್ಲಿ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳು ನಿರಂತರವಾಗಿ ನಡೆಯುತ್ತ ಬಂದಿವೆ. ಅಂದು ಪುರಾಣವಾಚನ, ಸಂಗೀತ, ನೃತ್ಯ ಚಟುವಟಿಕೆಗಳು ಮತ್ತು ಪ್ರತಿವರ್ಷ ಚೈತ್ರಮಾಸ, ಶಿವರಾತ್ರಿ ಮತ್ತು ಪ್ರತಿ ತಿಂಗಳು ಅಮವಾಸ್ಯೆಯಂದು ವಿಶೇಷ ಪೂಜೆಗಳು ನಡೆಯುತ್ತಿದ್ದವು ಎಂಬುದಕ್ಕೆ ಶಾಸನಾಧಾರಗಳಿವೆ.[೩೫]

## ೩. ವೀರಬ್ರಹ್ಮೇಶ್ವರ ದೇವಾಲಯ (ಪುರದ ವೀರಭದ್ರೇಶ್ವರ ದೇವಾಲಯ)

ಕ್ರಿ.ಶ. ೧೧೮೮ರ ಶಾಸನದಲ್ಲಿ "ವೀರಬೊಮ್ಮರಸ ದಂಡನಾಯಕನು ವೀರಬ್ರಹ್ಮೇಶ್ವರ ದೇವಾಲಯದ ಅಂಗಭೋಗ, ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರ, ಸಕಲ ಮಾಹೇಶ್ವರರ ಆಹಾರದಾನಕ್ಕೆಂದು ಸಗರದ ವೀರಗೊಗ್ಗಿದೇವನಿಗೆ ಭೂದಾನ ಮಾಡಿದನು" ಎಂದು ವಿವರವಿದೆ.[೩೬] ಇದರಿಂದ ಅಣ್ಣಿಗೇರಿ ಪಟ್ಟಣದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ವೀರಬ್ರಹ್ಮೇಶ್ವರ ದೇವಾಲಯ ಇತ್ತೆಂಬುದು ಸ್ಪಷ್ಟವಾಗುತ್ತದೆ. ಇಂದಿನ ಪುರದ ವೀರಭದ್ರೇಶ್ವರ ದೇವಾಲಯವೇ ಪ್ರಸ್ತುತ ಶಾಸನೋಕ್ತ ವೀರಬ್ರಹ್ಮೇಶ್ವರ ದೇವಾಲಯವಾಗಿದೆ. ಮೊದಲಿಗೆ ಈ ದೇವಾಲಯದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿತ್ತು. ವಿಜಯನಗರೋತ್ತರ ಕಾಲಾವಧಿಯಲ್ಲಿ ಶಿವಲಿಂಗದ ಪೀಠದ ಮೇಲೆ ವೀರಭದ್ರನ ಶಿಲ್ಪವನ್ನು ಪ್ರತಿಷ್ಠಾಪಿಸಿ, ಇದನ್ನು ವೀರಭದ್ರೇಶ್ವರ ದೇವಾಲಯವಾಗಿ ಮಾರ್ಪಡಿಸಿರುವಂತೆ ತೋರುತ್ತದೆ.

ಈ ದೇವಾಲಯದ ವಾಸ್ತು ಲಕ್ಷಣಗಳ ಕುರಿತು ಆರ್.ಎಂ. ಷಡಕ್ಷರಯ್ಯ, ಸಿ. ಮಹದೇವ, ಬಿ. ಜಯಮ್ಮ, ಹೆಚ್. ಚಂದ್ರಶೇಖರ ಅವರು ಸಂಕ್ಷಿಪ್ತವಾಗಿ ಅಧ್ಯಯನ ಮಾಡಿದ್ದಾರೆ.[೩೭] ಈ ದೇವಾಲಯದ ನಿರ್ಮಾಣದಲ್ಲಿ ಕಪ್ಪು ಶಿಲೆಯನ್ನು ಬಳಸಲಾಗಿದೆ. ಕೆಲವು ವಾಸ್ತು ಭಾಗಗಳಿಗೆ ಅಲಂಕರಣೆಯ ಉದ್ದೇಶದಿಂದ ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯನ್ನು ಬಳಸಲಾಗಿದೆ. ಇದು ಪೂರ್ವಾಭಿಮುಖವಾಗಿದ್ದು, ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪಗಳಿವೆ. ಗರ್ಭಗೃಹವು ಚೌಕಾಕಾರವಾಗಿದ್ದು, ನಾಲ್ಕೂ ಮೂಲೆಗಳಲ್ಲಿ ನಾಲ್ಕು ಭಿತ್ತಿಗಂಬಗಳಿವೆ.

ನವರಂಗವು ಚೌಕಾಕಾರವಾಗಿದ್ದು, ಇದರ ಮಧ್ಯದಲ್ಲಿ ವಿಷ್ಣುಕಾಂತ ಪ್ರಕಾರದ ನಾಲ್ಕು ಸ್ತಂಭಗಳಿವೆ. ಇವುಗಳು ಪೀಠ, ಪಾದ, ದಂಡ, ಕಲಶ, ಫಲಕ, ಬೋದಿಗೆಯನ್ನು ಹೊಂದಿವೆ. ಈ ಎಲ್ಲ ಅಂಗಗಳು ಪದ್ಮ, ಬಳ್ಳಿ, ಪೂರ್ಣಕಲಶ ಇತ್ಯಾದಿ ಸೂಕ್ಷ್ಮ ಕೆತ್ತನೆಗಳಿಂದ ಅಲಂಕೃತವಾಗಿವೆ. ವಿತಾನದಲ್ಲಿ ಪದ್ಮಮಂಡಲದ ಅಲಂಕಾರವಿದೆ. ಈ ಮಂಟಪಕ್ಕೆ ಉತ್ತರಾಭಿಮುಖವಾಗಿ ಒಂದು ದ್ವಾರಬಂಧವಿದೆ. ಇದು ದ್ವಿಶಾಖಾ ರೀತಿಯಲ್ಲಿದ್ದು, ಇದರಲ್ಲಿ ಪದ್ಮಶಾಖಾ ಪ್ರಧಾನವಾಗಿದೆ. ಲಲಾಟ ಪಟ್ಟಿಯಲ್ಲಿ ಪದ್ಮದ ಚಿತ್ರಣವಿದೆ. ಈ ಮಂಟಪದಲ್ಲಿ ಶಿರಹಟ್ಟಿ ತಾಲ್ಲೂಕಿನ ದೇವನೂರದ ಶಿದ್ರಾಮಯ್ಯಸ್ವಾಮಿ ರುದ್ರಯ್ಯಸ್ವಾಮಿ ಹಿರೇಮಠ ಅವರ ಸ್ಮರಣಾರ್ಥವಾಗಿ ಅವರ ಮಗನಾದ ಚಂದ್ರಶೇಖರಯ್ಯ ಅವರು ೧೯೬೫ರಲ್ಲಿ ಬಿಳಿಕಲ್ಲು ಫರಸಿಯನ್ನು ಹಾಕಿಸಿದ್ದಾರೆ.[೩೮] ನವರಂಗದ ಮುಂಭಾಗದಲ್ಲಿ ನಂತರದ ಕಾಲಾವಧಿಯಲ್ಲಿ ನಿರ್ಮಿಸಲಾದ ಮುಖಮಂಟಪವು ಚೌಕಾಕಾರವಾಗಿದ್ದು, ತೆರೆದ ರೀತಿಯಲ್ಲಿದೆ. ಇದರಲ್ಲಿ ಬಾದಾಮಿಯ ತಿಳಿಗೆಂಪು ವರ್ಣದ ಮರಳುಗಲ್ಲುಗಳ ನಾಲ್ಕು ಸ್ತಂಭಗಳಿವೆ.

ಅಧಿಷ್ಠಾನವು ಪಾದಬಂಧ ಪ್ರಕಾರದ್ದಾಗಿದ್ದು, ಕಪೋತಬಂಧ ರೀತಿಯಲ್ಲಿದೆ. ಇದರಲ್ಲಿ ಉಪಾನ, ಜಗತಿ, ಕಂಪ, ಪದ್ಮ, ತ್ರಿಪಟ್ಟ ಕುಮುದ, ಕಪೋತ ಭಾಗಗಳಿವೆ. ಭಿತ್ತಿಯ ರಚನೆಯಲ್ಲಿ ದೊಡ್ಡ ಗಾತ್ರದ ಶಿಲೆಗಳನ್ನು ಬಳಸಲಾಗಿದೆ. ಭಿತ್ತಿಯಲ್ಲಿರುವ ದೇವಕೋಷ್ಠದಲ್ಲಿ ಚತುರ್ಭುಜ ಭೈರವನ ಶಿಲ್ಪವಿದೆ. ಭಿತ್ತಿಯ ಮೇಲ್ಭಾಗದಲ್ಲಿ ಸುತ್ತಲೂ ಹಾರವಿದೆ. ಇದರಲ್ಲಿ ವಿಷ್ಣು, ನಾಟ್ಯ ಸ್ತ್ರೀ, ನಟರಾಜ, ಚಾಮರಧಾರಿಣಿ, ವಾದಕರು, ವೈಷ್ಣವಿ, ಶಿವ, ನಂದಿ, ನಂದೀಶ, ಗಣೇಶ, ಹಂಸ, ಪದ್ಮ, ಗಜ, ಸಪ್ತಮಾತೃಕೆ, ವರುಣ, ಯಮ, ಸಿದ್ಧಲಿಂಗ, ಯತಿ, ಕಾರ್ತಿಕೇಯ, ಲಕ್ಷ್ಮೀ, ಗಂಡಭೇರುಂಡ, ಮಿಥುನ ದಂಪತಿಗಳು, ವೀರಭದ್ರ, ಇಂದ್ರ, ಚತುರ್ಮುಖ ಬ್ರಹ್ಮ, ರಾಮ, ಲಕ್ಷ್ಮಣ ಮೊದಲಾದ ಹಲವು ಉಬ್ಬುಶಿಲ್ಪಗಳಿವೆ. ಗರ್ಭಗೃಹದ ಮೇಲ್ಭಾಗದಲ್ಲಿ ಫಾಂಸನಾ ಶೈಲಿಯ ಶಿಖರವಿದೆ. ಇದರಲ್ಲಿ ಹನ್ನೊಂದು ಕಪೋತ ಪಟ್ಟಿಗಳಿವೆ. ಇದರ ಗಾಢದಲ್ಲಿ ವೀರಭದ್ರನ ಶಿಲ್ಪವಿದೆ. ಈ ದೇವಾಲಯದ ಮುಂಭಾಗದಲ್ಲಿ ೨೦೧೨ರಲ್ಲಿ ದೀಪಸ್ತಂಭವನ್ನು ಕಣಶಿಲೆಯಲ್ಲಿ ಕಂಡರಿಸಲ್ಪಟ್ಟಿರುವ ಈ ಸ್ತಂಭವು ಇಪ್ಪತ್ತೊಂದು ಅಡಿ ಎತ್ತರವಾಗಿದೆ.

## ೪. ವಿರೂಪಾಕ್ಷ ದೇವಾಲಯ (ತ್ರಿಕೂಟಾಚಲ)

ಕ್ರಿ.ಶ. ೧೧೮೪ರ ಶಾಸನದಲ್ಲಿ, ವೀರಬ್ರಹ್ಮೇಶ್ವರ ದೇವಾಲಯಕ್ಕೆ ದಾನ ಮಾಡಿದ ಭೂಮಿಯ ಸೀಮಾ ವಿವರಗಳಲ್ಲಿ ವಿರೂಪಾಕ್ಷ ದೇವಾಲಯದ ಉಲ್ಲೇಖವಿದೆ.[೩೯] ಕ್ರಿ.ಶ. ೧೨೦೮ರ ಶಾಸನದಲ್ಲಿ, ವಿರೂಪಾಕ್ಷ ದೇವಾಲಯದ ಸ್ಥಾನಾಚಾರ್ಯನಾದ ಮಲ್ಲಿಕಾರ್ಜುನದೇವನ ಮಗಳೂ (ಶಿಷ್ಯೆ), ದೇವಯ್ಯ ಸಾಹಣಿಯ ಮದವಳಿಗೆಯೂ ಆದ ವೊಜಮ್ಮವ್ವೆ ಗುರುಪರ್ವಕ್ಕೆಂದು ಪೊಂಗ, ಹಾಗವನ್ನು ವ್ರಿತ್ತಿಯಾಗಿ ಕೊಡಲು ಸಂಕಲ್ಪಿಸಿ, ತಪೋಧನರ ಆಹಾರದಾನಕ್ಕಾಗಿ ಒಂದು ಗದ್ಯಾಣವನ್ನು ಹಾಗೂ ಆ ದೇವಯ್ಯ ಸಾಹಣಿಯ ವೊಮ್ಮವ್ವೆ ಹೊಂಗೆ, ಹಾಗ, ಬೆಳೆ, ಒಂದು ಗದ್ಯಾಣವನ್ನು ದಾನ ಮಾಡಿದ ನಿರೂಪಣೆಯಿದೆ.[೪೦] ಕ್ರಿ.ಶ. ೧೨೦೯ರ ಶಾಸನದಲ್ಲಿ, ವೀರುಪಾಕ್ಷ ದೇವಾಲಯದ ಸ್ಥಾನಾಚಾರ್ಯನಾದ ಮಲ್ಲಿಕಾರ್ಜುನದೇವನ ಮಗನೂ (ಶಿಷ್ಯ), ರಾಯಹಣಿಗಂಡನೂ, ಪೆಂಡಾರಜಂಗಳಿ ಸೋಹಣಿಯರಗಂಡನೂ, ಬಳ್ಳೇಶ್ವರದೇವರ ಆರಾಧಕನೂ ಗಂಡಪಿಂಡಾರ

ಕಾಳೇಯ ಸಾಹಣಿಯ ಮಗನಾದ ಸೋವೆಯಸಾಹಣಿ ತಪೋಧನರ ಆಹಾರದಾನಕ್ಕೆ ಪ್ರತಿ ತಿಂಗಳು ಒಂದು ಹಾಗದಂತೆ ಕೊಡಮಾಡಲು ಸಂಕಲ್ಪಿಸಿ ಹನ್ನೊಂದು ಹಾಗವನ್ನು ಮತ್ತು ಎರಡು ಗದ್ಯಾಣಗಳನ್ನು ದಾನ ಮಾಡಿದ ಪ್ರಸ್ತಾಪವಿದೆ.[೪೧]

ಕ್ರಿ.ಶ. ೧೨೦೮ ಮತ್ತು ೧೨೦೯ರ ಎರಡು ಶಾಸನಗಳಿವೆ. ದ್ವಾರಬಂಧವು ಸರಳವಾಗಿದ್ದು, ಜೀರ್ಣೋದ್ಧಾರವಾಗಿದೆ. ನವರಂಗ ಮಂಟಪದಲ್ಲಿ ದಕ್ಷಿಣ ಮತ್ತು ಉತ್ತರಾಭಿಮುಖವಾಗಿ ಗರ್ಭಗೃಹ, ಅಂತರಾಳಗಳಿದ್ದ ಕುರುಹುಗಳಿವೆ. ಪ್ರಸ್ತುತ ಅವುಗಳ ಅಂತರಾಳ ಭಾಗಗಳು ಮಾತ್ರ ಉಳಿದು ಬಂದಿವೆ. ಈ ಹಿನ್ನೆಲೆಯಲ್ಲಿ ಈ ದೇವಾಲಯವು ಮೂಲತಃ ತ್ರಿಕೂಟಾಚಲ ತಲವಿನ್ಯಾಸದ ದೇವಾಲಯವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಇದರಲ್ಲಿ ಅಂದು ಬ್ರಹ್ಮ, ವಿಷ್ಣು, ಮಹೇಶ್ವರನ ಶಿಲ್ಪಗಳು ಪ್ರತಿಷ್ಠಾಪಿತವಾಗಿದ್ದವು. ಮುಖಮಂಟಪವನ್ನು ತೋಂಟದಾರ್ಯ ಮಠದ ಸದರವನ್ನಾಗಿ ಮಾರ್ಪಡಿಸಲಾಗಿದೆ. ಇದರಲ್ಲಿ ಅಣ್ಣಿಗೇರಿಯ ಅಂಬುತವ್ವ ಬಸಪ್ಪ ಹಕ್ಕರಕಿ ಅವರು ಕ್ರಿ.ಶ. ೧೯೫೨ರ ಅಗಸ್ಟ್ ೫ರಂದು ಪಾಟಿಕಲ್ಲುಗಳನ್ನು (ಹಾಸುಗಲ್ಲು) ಹಾಕಿಸಿದ್ದಾರೆ.[೪೨] ದೇವಾಲಯದ ಹೊರಭಾಗವು ಸಂಪೂರ್ಣವಾಗಿ ಜೀರ್ಣೋದ್ಧಾರವಾಗಿದೆ. ಹೀಗಾಗಿ ಅಧಿಷ್ಠಾನ, ಭಿತ್ತಿ, ಪ್ರಸ್ತರ, ಶಿಖರ ಇತ್ಯಾದಿ ರಚನೆಗಳ ಮೂಲ ಸ್ವರೂಪ ಸ್ಪಷ್ಟವಿಲ್ಲ. ಗರ್ಭಗೃಹದ ಹೊರಭಿತ್ತಿಯ ರಚನೆಯಲ್ಲಿ ದೊಡ್ಡ ಗಾತ್ರದ ಶಿಲೆಗಳನ್ನು ಬಳಸಲಾಗಿದೆ.

**೫. ಈಶ್ವರ ದೇವಾಲಯ (ಕಲ್ಮಠ / ತ್ರಿಕೂಟಾಚಲ)**

ಹೊಸಪೇಟೆ ಓಣಿಯಲ್ಲಿ ಈಶ್ವರ ದೇವಾಲಯವಿದೆ. ಇದನ್ನು ಪ್ರಸ್ತುತ ಕಲ್ಮಠ ಎಂದು ಕರೆಯಲಾಗುತ್ತದೆ. ಈ ದೇವಾಲಯದ ನಿರ್ಮಾತೃರು ಮತ್ತು ಇದು ನಿರ್ಮಾಣವಾದ ಕಾಲಮಾನದ ಕುರಿತು ಸ್ಪಷ್ಟವಿಲ್ಲ. ಇದರ ವಾಸ್ತು ಲಕ್ಷಣಗಳನ್ನು ಅವಲೋಕಿಸಿದರೆ, ಇದು ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದಲ್ಲಿ ನಿರ್ಮಾಣವಾಗಿರುವಂತೆ ತೋರುತ್ತದೆ. ಈ ದೇವಾಲಯದ ವಾಸ್ತು ಲಕ್ಷಣಗಳ ಕುರಿತು ಸಿ. ಮಹದೇವ ಮತ್ತು ಬಿ. ಜಯಮ್ಮ ಅವರು ಸಂಕ್ಷಿಪ್ತವಾಗಿ ಅಧ್ಯಯನ ಮಾಡಿದ್ದಾರೆ.[೪೩] ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗಗಳಿವೆ. ಆದರೆ ಇದರ ತಲವಿನ್ಯಾಸ ಮತ್ತು ವಾಸ್ತು ಲಕ್ಷಣಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಇದು ವಾಸ್ತವವಾಗಿ ತ್ರಿಕೂಟಾಚಲ ದೇವಾಲಯವಾಗಿತ್ತೆಂಬುದು ಮನದಟ್ಟಾಗುತ್ತದೆ.

ನವರಂಗವು ಚೌಕಾಕಾರವಾಗಿದ್ದು, ಇದರ ಮಧ್ಯದಲ್ಲಿ ರುದ್ರಕಾಂತ ಪ್ರಕಾರದ ನಾಲ್ಕು ಸ್ತಂಭಗಳಿವೆ. ಇವುಗಳು ಪೀಠ, ಪಾದ, ದಂಡ, ಕಲಶ, ಫಲಕ, ಬೋದಿಗೆಯನ್ನು ಹೊಂದಿವೆ. ಕಳಶ ಭಾಗವು ಎಳೆಗಳಿಂದ ಅಲಂಕೃತವಾಗಿದೆ. ಈ ನಾಲ್ಕೂ ಸ್ತಂಭಗಳ ಪೀಠಗಳಿಗೆ ಹೊಂದಿಕೊಂಡಂತೆ ಮಧ್ಯದಲ್ಲಿ ವೃತ್ತಾಕಾರದ ಶಿಲಾವೇದಿಕೆಯಿದೆ. ವಿತಾನದ ಒಂಭತ್ತು ಅಂಕಣಗಳಲ್ಲೂ ಪದ್ಮಮಂಡಲದ ಅಲಂಕಾರಗಳಿವೆ. ವಿತಾನದ ಮಧ್ಯದ ಅಂಕಣದ ತೊಲೆಗಳ ಸುತ್ತಲೂ ವಾದ್ಯಗಾರರು, ನರ್ತಕರು, ಪದ್ಮಗಳ ಉಬ್ಬುಶಿಲ್ಪಗಳಿವೆ. ನವರಂಗದ ಸುತ್ತಲಿನ ಭಿತ್ತಿಗಳಲ್ಲಿ ಎಂಟು ದೇವಕೋಷ್ಠಗಳಿವೆ. ಇವೆಲ್ಲವುಗಳ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರಗಳ ಪ್ರತಿರೂಪಗಳಿವೆ. ಇವುಗಳಲ್ಲಿ ಪ್ರಸ್ತುತ ಯಾವುದೇ ಶಿಲ್ಪಗಳಿಲ್ಲ. ಇವುಗಳ ದ್ವಾರಬಂಧಗಳು ಪಂಚಶಾಖಾ ರೀತಿಯಲ್ಲಿವೆ. ಲಲಾಟ ಪಟ್ಟಿಗಳು ಸರಳವಾಗಿವೆ. ನವರಂಗದ ಪ್ರಧಾನ ದ್ವಾರಬಂಧವು ಸಪ್ತಶಾಖಾ ರೀತಿಯಲ್ಲಿದ್ದು, ಇದರಲ್ಲಿ ಎರಡು ಸ್ತಂಭಶಾಖಾಗಳು ಪ್ರಧಾನವಾಗಿವೆ. ಲಲಾಟ ಪಟ್ಟಿಯಲ್ಲಿ ಯಾವುದೇ ಶಿಲ್ಪವಿಲ್ಲ. ಇದು ಸಪಾಟಾಗಿದೆ. ಪೇದ್ಯಾಭಾಗಗಳು ನಿರಲಂಕೃತವಾಗಿವೆ. ನವರಂಗ ಮಂಟಪದಲ್ಲಿ ದಕ್ಷಿಣ ಮತ್ತು ಉತ್ತರಾಭಿಮುಖವಾಗಿ ಗರ್ಭಗೃಹ, ಅಂತರಾಳಗಳಿದ್ದ ಕುರುಹುಗಳಿವೆ. ಪ್ರಸ್ತುತ ಅವುಗಳ ದ್ವಾರಬಂಧಗಳು ಮಾತ್ರ ಉಳಿದು ಬಂದಿವೆ. ಎರಡೂ ದ್ವಾರಬಂಧಗಳು ತ್ರಿಶಾಖಾ ರೀತಿಯಲ್ಲಿದ್ದು, ಇವುಗಳಲ್ಲಿ ಸ್ತಂಭಶಾಖಾ ಪ್ರಧಾನವಾಗಿವೆ. ಲಲಾಟ ಪಟ್ಟಿಕೆಗಳಲ್ಲಿ ಶಿಲ್ಪಗಳಿಲ್ಲ. ಇವುಗಳು ಸಪಾಟಾಗಿವೆ. ಉತ್ತರಾಂಗಗಳು ನಿರಲಂಕೃತವಾಗಿವೆ. ದಕ್ಷಿಣಬದಿಯ ದ್ವಾರಬಂಧದ ಪಾರ್ಶ್ವದಲ್ಲಿ ಪದ್ಮಾಲಂಕಾರದ ಜಾಲಂಧ್ರಗಳನ್ನು ಅಳವಡಿಸಲಾಗಿದೆ. ಉತ್ತರಬದಿಯ ದ್ವಾರಬಂಧದ ಪಾರ್ಶ್ವದಲ್ಲಿದ್ದ ಜಾಲಂಧ್ರಗಳು ನಾಶವಾಗಿವೆ. ಈ ಎಲ್ಲ ಲಕ್ಷಣಗಳ ಹಿನ್ನೆಲೆಯಲ್ಲಿ ಈ ದೇವಾಲಯವು ಮೂಲತಃ ತ್ರಿಕೂಟಾಚಲ ತಲವಿನ್ಯಾಸದ ದೇವಾಲಯವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಇದರಲ್ಲಿ ಅಂದು ಬ್ರಹ್ಮ, ವಿಷ್ಣು, ಮಹೇಶ್ವರನ ಶಿಲ್ಪಗಳು ಪ್ರತಿಷ್ಠಾಪಿತವಾಗಿದ್ದವು. ಈ ನವರಂಗ ಮಂಟಪದ ಮುಂಬದಿಯ ಭಿತ್ತಿಯನ್ನು ಫಕೀರಪ್ಪ ಮರಿತಮ್ಮಪ್ಪ ಬಳ್ಳೊಳ್ಳಿ ಅವರು ಕ್ರಿ.ಶ. ೧೯೨೬ರಲ್ಲಿ ಜೀರ್ಣೋದ್ಧಾರ ಮಾಡಿಸಿದ್ದಾರೆ. ೭೭ ನವರಂಗದ ಮುಂಭಾಗದಲ್ಲಿದ್ದ ಚೌಕಾಕಾರವಾದ ಮುಖಮಂಟಪವು ಸಂಪೂರ್ಣ ನಾಶವಾಗಿದ್ದು, ಅದರ ತಲವೇದಿಕೆ ಮಾತ್ರ ಉಳಿದಿದೆ.

ಅಧಿಷ್ಠಾನವು ಪ್ರತಿಬಂಧ ಪ್ರಕಾರದಾಗಿದ್ದು, ಕಪೋತಬಂಧ ರೀತಿಯಲ್ಲಿದೆ. ಇದರಲ್ಲಿ ಉಪಾನ, ಜಗತಿ, ಕಂಪ, ವೃತ್ತಾಕಾರದ ಕುಮುದ, ಪದ್ಮ, ಮಕರಪಟ್ಟಿಕಾ, ಸಿಂಹಪಟ್ಟಿಕಾ, ಕಪೋತ ಭಾಗಗಳಿವೆ. ಭಿತ್ತಿಗಳಲ್ಲಿ ಕೋಷ್ಠಪಂಜರಗಳಿದ್ದು,

ಇವುಗಳ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರಗಳ ಪ್ರತಿರೂಪಗಳಿವೆ. ಇವುಗಳ ಮೇಲೆ ಶಿವ ಮತ್ತು ವಿಷ್ಣುವಿನ ಶಿಲ್ಪಫಲಕಗಳಿವೆ. ಗರ್ಭಗೃಹದ ಹೊರಭಿತ್ತಿಯ ಮೂರು ಭಾಗಗಳಲ್ಲಿಯೂ ದೇವಕೋಷ್ಠಗಳಿವೆ. ಇವುಗಳ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರಗಳು ಮತ್ತು ಪಾರ್ಶ್ವದಲ್ಲಿ ನಾಗರ ಶೈಲಿಯ ಶಿಖರಗಳ ಪ್ರತಿರೂಪಗಳಿವೆ. ಗರ್ಭಗೃಹದ ಮೇಲ್ಭಾಗದಲ್ಲಿದ್ದ ಶಿಖರ ನಾಶವಾಗಿದೆ.

**೬. ಬನಶಂಕರಿ ದೇವಾಲಯ (ತ್ರಿಕೂಟಾಚಲ)**

ಕುರುಬರ ಓಣಿಯಲ್ಲಿ (ಕುರುಬಗೇರಿ) ಬನಶಂಕರಿ ದೇವಾಲಯವಿದೆ. ಈ ದೇವಾಲಯದ ನಿರ್ಮಾತೃರು ಮತ್ತು ಇದು ನಿರ್ಮಾಣವಾದ ಕಾಲಮಾನದ ಕುರಿತು ಸ್ಪಷ್ಟವಿಲ್ಲ. ಕಾಲಾಂತರದಲ್ಲಿ ಜೀರ್ಣೋದ್ಧಾರವಾಗುತ್ತ ಬಂದಿದೆ. ಹೀಗಾಗಿ ಕೆಲವು ವಾಸ್ತು ಲಕ್ಷಣಗಳು ನೂತನ ಸ್ವರೂಪವನ್ನು ಪಡೆದಿವೆ. ಇದರ ವಾಸ್ತು ಲಕ್ಷಣಗಳನ್ನು ಅವಲೋಕಿಸಿದರೆ, ಇದು ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ನಿರ್ಮಾಣವಾಗಿರುವಂತೆ ತೋರುತ್ತದೆ. ಈ ದೇವಾಲಯದ ವಾಸ್ತು ಲಕ್ಷಣಗಳ ಕುರಿತು ಆರ್.ಎಂ. ಷಡಕ್ಷರಯ್ಯ, ಸಿ. ಮಹದೇವ ಮತ್ತು ಬಿ. ಜಯಮ್ಮ ಅವರು ಸಂಕ್ಷಿಪ್ತವಾಗಿ ಅಧ್ಯಯನ ಮಾಡಿದ್ದಾರೆ.[೪೪] ಈ ದೇವಾಲಯದ ನಿರ್ಮಾಣದಲ್ಲಿ ಕಪ್ಪು ಶಿಲೆಯನ್ನು ಬಳಸಲಾಗಿದೆ. ಕೆಲವು ವಾಸ್ತು ಭಾಗಗಳಿಗೆ ಅಲಂಕರಣೆಯ ಉದ್ದೇಶದಿಂದ ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯನ್ನು ಉಪಯೋಗಿಸಲಾಗಿದೆ. ಇದು ಪೂರ್ವಾಭಿಮುಖವಾಗಿದ್ದು, ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ, ನವರಂಗದ ಪಾರ್ಶ್ವದಲ್ಲಿ ಎರಡು ಗರ್ಭಗೃಹಗಳು, ಮುಖಮಂಟಪಗಳಿವೆ. ಹೀಗಾಗಿ ಈ ದೇವಾಲಯವು ಮೂಲತಃ ಬ್ರಹ್ಮ, ವಿಷ್ಣು, ಮಹೇಶ್ವರನ ಶಿಲ್ಪಗಳ ಪ್ರತಿಷ್ಠಾಪಿತ ತ್ರಿಕೂಟ ದೇವಾಲಯ ಎಂಬುದು ದೃಢಪಡುತ್ತದೆ. ಕಾಲಾಂತರದಲ್ಲಿ ಗರ್ಭಗೃಹದಲ್ಲಿ ಭೈರವಿಯ ಶಿಲ್ಪವನ್ನು ಪ್ರತಿಷ್ಠಾಪಿಸಿ, ಇದನ್ನು ಬನಶಂಕರಿ ದೇವಾಲಯವೆಂದು ಕರೆಯಲಾಗಿದೆ.

ಗರ್ಭಗೃಹವು ಚೌಕಾಕಾರವಾಗಿದ್ದು, ನಾಲ್ಕೂ ಮೂಲೆಗಳಲ್ಲಿ ನಾಲ್ಕು ಭಿತ್ತಿಗಂಬಗಳಿವೆ. ವಿತಾನದಲ್ಲಿ ಪದ್ಮಮಂಡಲದ ಅಲಂಕಾರವಿದೆ. ದ್ವಾರಬಂಧವು ಪಂಚಶಾಖಾ ರೀತಿಯಲ್ಲಿದ್ದು, ಇದರಲ್ಲಿ ಸ್ತಂಭಶಾಖಾ ಪ್ರಧಾನವಾಗಿದೆ. ಶಾಖಾಗಳ ಕೆಳಭಾಗದಲ್ಲಿರುವ ಪೇದ್ಯಾಭಾಗವು ನಿರಲಂಕೃತವಾಗಿದೆ. ಲಲಾಟ ಪಟ್ಟಿಯಲ್ಲಿ ಕಮಲಾಲಂಕೃತ ವಿಮಾನದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಉತ್ತರಾಂಗದಲ್ಲಿರುವ ಏಕರತ್ನ, ದ್ವಿರತ್ನಗಳ ಅಲಂಕರಣೆಗಳು ಗಮನೀಯವಾಗಿವೆ. ಉದುಂಬರಕ್ಕೆ ಹೊಂದಿಕೊಂಡಂತೆ ಮುಂಬದಿಯಲ್ಲಿ ಚಂದ್ರಶಿಲೆಯ ರಚನೆಯಿದೆ. ಅಂತರಾಳವು ಚೌಕಾಕಾರವಾಗಿದ್ದು, ನಾಲ್ಕೂ ಮೂಲೆಗಳಲ್ಲಿ ನಾಲ್ಕು ಭಿತ್ತಿಗಂಬಗಳಿವೆ. ವಿತಾನದಲ್ಲಿ ಪದ್ಮಮಂಡಲದ ಅಲಂಕಾರವಿದೆ. ದ್ವಾರಬಂಧವು ತ್ರಿಶಾಖಾ ರೀತಿಯಲ್ಲಿದ್ದು, ಇದರಲ್ಲಿ ರತ್ನ, ವಲ್ಲಿ, ಪದ್ಮ ಶಾಖಾಗಳಿವೆ. ಲಲಾಟಪಟ್ಟಿ ಸಪಾಟಾಗಿದೆ. ದ್ವಾರಬಂಧದ ಪಾರ್ಶ್ವದಲ್ಲಿ ಪದ್ಮಾಲಂಕಾರದ ಜಾಲಂಧ್ರಗಳಿವೆ. ದ್ವಾರಬಂಧದ ಮೇಲ್ಭಾಗದಲ್ಲಿ ಮಕರತೋರಣವಿದ್ದು, ಇದರ ಮಧ್ಯದಲ್ಲಿ ಬ್ರಹ್ಮ, ಮಹೇಶ್ವರ, ವಿಷ್ಣುವಿನ ಉಬ್ಬುಶಿಲ್ಪಗಳಿವೆ.

ನವರಂಗವು ಚೌಕಾಕಾರವಾಗಿದ್ದು, ಇದರ ಮಧ್ಯದಲ್ಲಿ ರುದ್ರಕಾಂತ ಪ್ರಕಾರದ ನಾಲ್ಕು ಸ್ತಂಭಗಳಿವೆ. ಇವುಗಳು ಪೀಠ, ಪಾದ, ದಂಡ, ಕಲಶ, ಫಲಕ, ಬೋದಿಗೆಯನ್ನು ಹೊಂದಿವೆ. ಈ ಎಲ್ಲ ಅಂಗಗಳು ಸೂಕ್ಷ್ಮ ಕೆತ್ತನೆಗಳಿಂದ ಅಲಂಕೃತವಾಗಿವೆ. ಈ ನಾಲ್ಕು ಸ್ತಂಭಗಳಿಗೆ ಸಮಾನಾಂತರವಾಗಿ ಸುತ್ತಲಿನ ಭಿತ್ತಿಗಳಲ್ಲಿ ಹನ್ನೆರಡು ಭಿತ್ತಿಗಂಬಗಳಿವೆ. ಇದರಲ್ಲಿ ಎರಡು ದೇವಕೋಷ್ಠಗಳಿವೆ. ಇವುಗಳ ಮೇಲ್ಭಾಗದಲ್ಲಿ ದ್ವಿತಲ ದ್ರಾವಿಡ ಶೈಲಿಯ ಶಿಖರಗಳ ಪ್ರತಿರೂಪಗಳಿವೆ. ಇವುಗಳ ದ್ವಾರಬಂಧಗಳು ತ್ರಿಶಾಖಾ ರೀತಿಯಲ್ಲಿದ್ದು, ಇವುಗಳಲ್ಲಿ ಸ್ತಂಭಶಾಖಾ ಪ್ರಧಾನವಾಗಿವೆ. ಇವುಗಳ ಲಲಾಟ ಪಟ್ಟಿಗಳು ಸರಳವಾಗಿವೆ. ವಿತಾನವು ಸಮತಲವಾಗಿದೆ. ಈ ಮಂಟಪದ ಪೂರ್ವಬದಿಯ ಭಿತ್ತಿ ಮತ್ತು ದ್ವಾರಬಂಧ ನಾಶವಾಗಿವೆ. ನವರಂಗ ಮಂಟಪಕ್ಕೆ ಹೊಂದಿಕೊಂಡಂತೆ ಉತ್ತರ ಮತ್ತು ದಕ್ಷಿಣಾಭಿಮುಖವಾಗಿ ಎರಡು ಗರ್ಭಗೃಹಗಳಿವೆ. ಈ ಎರಡೂ ಗರ್ಭಗೃಹಗಳು ಚೌಕಾಕಾರವಾಗಿದ್ದು, ನಾಲ್ಕೂ ಮೂಲೆಗಳಲ್ಲಿ ನಾಲ್ಕು ಭಿತ್ತಿಗಂಬಗಳಿವೆ. ಉತ್ತರಬದಿಯ ಗರ್ಭಗೃಹದ ದ್ವಾರಬಂಧವು ತ್ರಿಶಾಖಾ ರೀತಿಯಲ್ಲಿದ್ದು, ಇವೆಲ್ಲವೂ ನಿರಲಂಕೃತವಾಗಿವೆ. ಈ ಶಾಖಾಗಳ ಕೆಳಭಾಗದಲ್ಲಿರುವ ಪೇದ್ಯಾಭಾಗವು ನಿರಲಂಕೃತವಾಗಿದೆ. ಲಲಾಟ ಪಟ್ಟಿಯಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ದಕ್ಷಿಣಬದಿಯ ಗರ್ಭಗೃಹದ ದ್ವಾರಬಂಧವು ಪಂಚಶಾಖಾ ರೀತಿಯಲ್ಲಿದ್ದು, ಇವೆಲ್ಲವೂ ನಿರಲಂಕೃತವಾಗಿವೆ. ಲಲಾಟಪಟ್ಟಿ ಮತ್ತು ಪೇದ್ಯಾಭಾಗ ನಿರಲಂಕೃತವಾಗಿವೆ. ನವರಂಗದ ಮುಂಭಾಗದಲ್ಲಿದ್ದ ಚೌಕಾಕಾರವಾದ ಮುಖಮಂಟಪವು ನಾಶವಾಗಿದ್ದು, ಅದರ ತಲವೇದಿಕೆ ಗೋಚರಿಸುತ್ತದೆ.



## ಅಡಿಟಿಪ್ಪಣಿಗಳು

೧. ಗೋಗಿ ಹನುಮಾಕ್ಷಿ (ಸಂ.), ಲಕ್ಷ್ಮೇಶ್ವರ : ಸಾಂಸ್ಕೃತಿಕ ಅಧ್ಯಯನ (೨೦೧೫), ಶಾ.ಸಂ. ೧೭, ಪು. ೨೮-೩೦.

೨. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೩. ಎಸ್.ಆಯ್.ಆಯ್. ಸಂ. XV, ಶಾ.ಸಂ. ೧೦೦.

೪. ಅದೇ, ಶಾ.ಸಂ. ೧೨೨.

೫. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೬ ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೭. ಎಸ್.ಆಯ್.ಆಯ್. ಸಂ. XV, ಶಾ.ಸಂ. ೧೪೯.

೮. ಅದೇ, ಶಾ.ಸಂ. ೨೧೩.

೯. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೧೦. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೧೧. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೧೨. ಎಸ್.ಆಯ್.ಆಯ್. ಸಂ. XV, ಶಾ.ಸಂ. ೩೦೪.

೧೩. ಅದೇ, ಶಾ.ಸಂ. ೨೧೬.

೧೪. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೧೫. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೧೬. ಎಸ್.ಆಯ್.ಆಯ್. ಸಂ. ಫಿಗಿ, ಶಾ.ಸಂ. ೨೧೭.

೧೭. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೧೮. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೧೯. ಗೋಗಿ ಹನುಮಾಕ್ಷಿ, "ಅಣ್ಣಿಗೇರಿಯಲ್ಲಿ ದೊರೆತ ಹೊಸ ಶಾಸನಗಳು", ಪೂರ್ವೋಕ್ತ, ಪು. ೧೭೯-೧೮೦.

೨೦. ಎಸ್.ಆಯ್.ಆಯ್. ಸಂ. XV, ಶಾ.ಸಂ. ೬೧೧.

೨೧. ಅದೇ, ಶಾ.ಸಂ. ೧೨೪.

೨೨. ಅದೇ, ಶಾ.ಸಂ. ೧೯೪.

೨೩. ಅದೇ, ಶಾ.ಸಂ. ೨೫೪.

೨೪. ಅದೇ, ಶಾ.ಸಂ. ೨೨೮.

೨೫. ಅದೇ, ಶಾ.ಸಂ. ೧೮೭. ಕಲಬುರ್ಗಿ ಎಂ.ಎಂ. (ಸಂ.), ಧಾರವಾಡ ತಾಲೂಕಿನ ಶಾಸನಗಳು (೧೯೭೬), ಶಾ.ಸಂ. ೭೨, ಪು. ೧೫೮-೧೬೦.

೨೬. ಅಣ್ಣಿಗೇರಿ ಅಮೃತ ಮಹಾದೇವ, ಅಣ್ಣಿಗೇರಿಯ ಶ್ರೀ ಸ್ವಯಂಭು ಅಮೃತೇಶ್ವರ (೧೯೬೦), ಪು. ೪೨-೭೮.

೨೭. ಅದೇ, ಪು. ೫-೬.

೨೮. ಕಲಬುರ್ಗಿ ಎಂ.ಎಂ. (ಸಂ.), ಹರಿಹರನ ರಗಳೆಗಳು (೨೦೦೧), ಏಕಾಂತರಾಮಿತಂದೆಯ ರಗಳೆ, ಪ.ಸಂ. ೩೩೦-೩೪೦, ಪು. ೩೬೩.

೨೯. ಬಸವಾರಾಧ್ಯ ಎನ್. (ಸಂ.), ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತೆ (೧೯೭೩), ಐದನೆಯ ಸಂಧಿ, ಪ.ಸಂ. ೧೭, ಪು. ೭೨.

೩೦. ಧಾಕಿ ಎಂ.ಎ., ಎನ್ಸೈಕ್ಲೊಪೀಡಿಯಾ ಆಫ್ ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್ (೧೯೯೬), ಪು. ೧೧೦-೧೧೪. ಅಣ್ಣಿಗೇರಿ ಅಮೃತ ಮಹಾದೇವ, ಅಣ್ಣಿಗೇರಿಯ ಶ್ರೀ ಸ್ವಯಂಭು ಅಮೃತೇಶ್ವರ (೧೯೬೦), ಪು. ೨೩-೩೨. ಮಹದೇವ ಸಿ., ಕರ್ನಾಟಕ ದೇವಾಲಯ ಕೋಶ: ಧಾರವಾಡ ಜಿಲ್ಲೆ (೨೦೦೬), ಪು. ೧೧೬-೧೧೮. ಪಾಡಿಗಾರ ಶ್ರೀನಿವಾಸ ವಿ., "ಧಾರವಾಡ ಜಿಲ್ಲೆಯ ಕೆಲವು ವಿಶಿಷ್ಟ ಪ್ರಾಚೀನ ದೇವಾಲಯಗಳು", ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (೨೦೦೮), ಪು. ೪೦೦-೪೦೪, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. ಜಯಮ್ಮ ಬಿ., ಧಾರವಾಡ ಜಿಲ್ಲೆಯ ಪುರಾತತ್ವ (೨೦೧೦), ಪು. ೧೪೧-೧೪೭.

೩೧. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೩೨. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೩೩. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೩೪. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೩೫. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನಗಳು.

೩೬. ಎಸ್.ಆಯ್.ಆಯ್. ಸಂ. ಫಿಗಿ, ಶಾ.ಸಂ. ೧೦೦.

೩೭. ಎಸ್.ಆಯ್.ಆಯ್. ಸಂ. ಫಿಗಿ, ಶಾ.ಸಂ. ೫೯.

೩೮. ಮಹದೇವ ಸಿ., ಪೂರ್ವೋಕ್ತ, ಪು. ೧೨೧-೧೨೨. ಜಯಮ್ಮ ಬಿ., ಪೂರ್ವೋಕ್ತ, ಪು. ೧೬೬-೧೬೯. ಚಂದ್ರಶೇಖರ ಹೆಚ್., "ಅಣ್ಣಿಗೇರಿಯ ಪುರದ ವೀರಭದ್ರ ದೇವಾಲಯ : ಮೂಲತಃ ಶಿವಾಲಯ", ಇತಿಹಾಸ ದರ್ಶನ ಸಂ. ೨೮ (೨೦೧೩), ಪು. ೪೪೪-೪೪೭, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.

೩೯. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೪೦. ಎಸ್.ಆಯ್.ಆಯ್. ಶಾ.ಸಂ. ೫೯.

೪೧. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೪೨. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೪೩. ಕ್ಷೇತ್ರಕಾರ್ಯದಲ್ಲಿ ದೊರೆತ ಅಪ್ರಕಟಿತ ಶಾಸನ.

೪೪. ಮಹದೇವ ಸಿ., ಪೂರ್ವೋಕ್ತ, ಪು. ೧೧೮-೧೧೯. ಜಯಮ್ಮ ಬಿ., ಪೂರ್ವೋಕ್ತ, ಪು. ೧೫೬-೧೫೮.

೩೧

# ಹುನಗುಂದ ತಾಲ್ಲೂಕಿನ ಶಾಸನೋಕ್ತ ದೇವಾಲಯಗಳು

ಓಜರಾಬಿ ನದಾಫ್*

ಬಾಗಲಕೋಟೆ ಜಿಲ್ಲೆಯ ತಾಲ್ಲೂಕು ಕೇಂದ್ರವಾದ ಹುನಗುಂದವು ಪ್ರಾಗ್ಯೆತಿಹಾಸಿಕ ಕಾಲದಿಂದ ಮೊದಲ್ಗೊಂಡು ಬ್ರಿಟಿಷರ ಆಳ್ವಿಕೆಯ ಕಾಲದವರೆಗಿನ ಆರ್ಥಿಕತೆ, ಧರ್ಮ, ರಾಜಕೀಯ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪಕ್ಷೇತ್ರಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಹುನಗುಂದವನ್ನು ಶಾಸನಗಳಲ್ಲಿ 'ಪೊನ್ನಗುಂದ-೩೦ರ ನಾಡು' ಎಂದು ಉಲ್ಲೇಖಿಸಲಾಗಿದೆ. ಹುನಗುಂದ ತಾಲ್ಲೂಕು ಶಾತವಾಹನ, ಗಂಗ, ಕದಂಬ, ಬಾದಾಮಿಯ ಚಾಲುಕ್ಯರು, ಕಲ್ಯಾಣದ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಯಾದವರು, ವಿಜಯನಗರದ ಅರಸರು, ಆದಿಲ್‌ಶಾಹಿಗಳು, ಅನೇಕ ದೇಸಗತಿಗಳು ಹಾಗೂ ಬ್ರಿಟಿಷರು ಈ ನೆಲದಲ್ಲಿ ಆಳಿದ್ದಾರೆ. ಇಲ್ಲಿ ಆಳಿದ ಕೆಲವು ಅರಸುಮನೆತನದ ಅರಸರು ದೇವಾಲಯ ಗಳನ್ನು ನಿರ್ಮಿಸಿದ ಆಧಾರಗಳು ಶಾಸನಗಳಿಂದ ತಿಳಿದುಬರುತ್ತದೆ. ಆದುದರಿಂದ ನಾನು ಹುನಗುಂದ ತಾಲ್ಲೂಕಿನ ಶಾಸನೋಕ್ತ ದೇವಾಲಯಗಳ ಕುರಿತು ಅನೇಕ ಶಾಸನಗಳು ಬೆಳಕನ್ನು ಚೆಲ್ಲುತ್ತವೆ.

ಹುನಗುಂದ ತಾಲ್ಲೂಕನ್ನು ಜಗತ್ತಿನ ನಕಾಶೆಯಲ್ಲಿ ಗುರುತಿಸುವಂತೆ ಮಾಡಿದ ಹುನಗುಂದ ತಾಲ್ಲೂಕಿನ ಪ್ರಸಿದ್ಧ ಐತಿಹಾಸಿಕ ಸ್ಥಳ ಐಹೊಳೆ. ಇದು ಹಳೆ ಶಿಲಾಯುಗದಿಂದ ಆಧುನಿಕ ಕಾಲದವರೆಗೂ ತನ್ನದೇ ಆದ ಕೊಡುಗೆಯನ್ನು ಭಾರತದ ಐತಿಹಾಸಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ನೀಡಿದೆ. 'ಭಾರತದ ವಾಸ್ತುಶಿಲ್ಪದ ತೊಟ್ಟಿಲೆಂದು' ಪ್ರಸಿದ್ಧವಾದ ಐಹೊಳೆಯು ಬಾದಾಮಿ ಚಾಲುಕ್ಯರ ಕಲೆಯ ಕೇಂದ್ರವಾಗಿದ್ದು, ಇಲ್ಲಿರುವ ಹುಚ್ಚಮಲ್ಲಿ ದೇವಾಲಯದ ಬಳಿಯಲ್ಲಿನ ಕಲ್ಲಿನ ಮೇಲೆ ಕೆತ್ತಲಾಗಿರುವ ಶಾಸನದಲ್ಲಿ 'ಶಾಂತಗೌಡ' ಎಂಬ ನಾಡಪ್ರಭು ಒಂದು ದೇವಾಲಯವನ್ನು ನಿರ್ಮಿಸಿ, ಆ ದೇವಾಲಯಕ್ಕೆ ಗೋ ಸಹಸ್ರವನ್ನು ದಾನವಾಗಿ ನೀಡಿದ ಮಾಹಿತಿಯನ್ನು ಚಂದ್ರಮೌಳಿಭಳಾರ ನೆಂಬುವನು ಉಲ್ಲೇಖಿಸಿದ್ದಾನೆ.[೧]

ಹುಚ್ಚಮಲ್ಲಿ ದೇವಾಲಯ

ಪಶ್ಚಿಮಾಭಿಮುಖವಾಗಿರುವ ಈ ದೇವಾಲಯವು ಮುಖಮಂಟಪ, ಸಭಾಮಂಟಪ ಮತ್ತು ಗರ್ಭಗೃಹವನ್ನು ಹೊಂದಿದೆ. ಒಂದು ಕಾಲದಲ್ಲಿ ಈ ದೇವಾಲಯದಲ್ಲಿ ಸ್ಥಳೀಯ ಹಚ್ಚಮಲ್ಲಿ ಎಂಬಾಕೆಯು ವಾಸಿಸುತ್ತಿದ್ದರಿಂದ ಇದನ್ನು ಹುಚ್ಚಮಲ್ಲಿ ದೇವಾಲಯವೆಂದು ಕರೆಯಲಾಗಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಮುಖಮಂಟಪದ ದ್ವಾರಬಂಧದ ನಾಲ್ಕು ಶಾಖೆಗಳಿಂದ ಕೂಡಿದ್ದು ಅಲಂಕೃತವಾಗಿದೆ. ಮುಖಮಂಟಪದ ವಿತಾನದಲ್ಲಿ ಬ್ರಹ್ಮ, ವಿಷ್ಣು, ನಟರಾಜ ಮತ್ತು ಇಂದ್ರನ ಶಿಲ್ಪಗಳಿವೆ. ಇದಕ್ಕೆ ಪ್ರದಕ್ಷಿಣಾಪಥವಿದೆ. ಗರ್ಭಗೃಹದ ಮೇಲೆ ರೇಖಾನಗರ ಶೈಲಿಯ ಶಿಲ್ಪಗಳಿವೆ. ಸುಖನಾಸಿಯ ಮುಮ್ಮುಖದಲ್ಲಿ ನಟರಾಜನ ಶಿಲ್ಪವಿದೆ. ಇದನ್ನು ದಕ್ಷಿಣ ಭಾರತದಲ್ಲಿ ನಾಗರಶೈಲಿಯ ಪ್ರಪ್ರಥಮ ದೇವಾಲಯವಾಗಿದೆ. ಈ ದೇವಾಲಯದ ಮುಂದೆ ಮೆಟ್ಟಿಲುಗಳನ್ನು ಹೊಂದಿರುವ ಒಂದು ಕೊಳವಿದೆ. ಬ್ರಹ್ಮ, ವಿಷ್ಣು, ಗಜಲಕ್ಷ್ಮಿ, ಕಾರ್ತಿಕೇಯ, ಕುದುರೆ, ಆನೆ, ಭಕ್ತರು, ಪಂಚತಂತ್ರದ ಮೊಸಳೆ ಮತ್ತು ಮಂಗಗಳ ಕಥಾನಿರೂಪಣೆ ಸನ್ನಿವೇಶ, ಕಿರಾತಾರ್ಜುನಿಯರ ಕಥಾನಿರೂಪಣೆ ಮೊದಲಾದ ಉಬ್ಬು ಶಿಲ್ಪಗಳಿವೆ.[೨]

ಐಹೊಳೆಯ ಚರಂತಿಮಠದ ಗೋಡೆಯಲ್ಲಿ ಸೇರಿಸಲಾದ ಕ್ರಿ.ಶ.೧೧೧೯ರ ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ ತ್ರಿಭುವನಮಲ್ಲದೇವನು ರಾಜ್ಯಭಾರ ಮಾಡುತ್ತಿದ್ದಾಗ ಅಯ್ಯಾಹೊಳೆ-೫೦೦ ಸ್ವಾಮಿಗಳ ಪುತ್ರ ಕೇಶವಯ್ಯನೆಂಬುವನಿದ್ದ. ಇವನ ತಂದೆ ಜೇಮಪಾರ್ಯ, ತಾಯಿ ಜಾತಿಯಕ್ಕ, ಗುರು ಚಂದ್ರಬ್ರತಿ, ಹೆಂಡತಿ ಸಾವಿಯಕ್ಕ, ಇವನ ಮಗ ಕಲ್ಲಿಗ(ಕಲಿದೇವ) ಶಾಸನದಲ್ಲಿ ಕೇಶವನ ದಾನಗುಣಗಳ ವರ್ಣನೆಯಿದೆ: ಈ ಕೇಶವಯ್ಯಸೆಟ್ಟಿಯು ತಮ್ಮ ತಾಯಿಯ ಇಚ್ಛೆಯಂತೆಪಟ್ಟಸಾಲೆ ಯನ್ನು, ತನ್ನ ಹೆಂಡತಿ ಸಾವಿಯಕ್ಕಳ ವಿಜ್ಞಾಪನೆಯಂತೆ 'ಮೂಡಣ ಬಸದಿಯನ್ನು' ತನ್ನ ಶ್ರೇಯೋಭಿವೃದ್ಧಿಗೆ 'ಪಶ್ಚಿಮದ ಬಸದಿಯ ಬಾವಿ' ಮತ್ತು 'ಲೋಕಪಾಲಕ ಮೂರ್ತಿ'ಗಳನ್ನು ಮಾಡಿಸಿದ. ಇವುಗಳನ್ನು ಶುಭದಿನದಲ್ಲಿ ಪ್ರತಿಷ್ಠಾಪಿಸಿ ದೇವರ ಪೂಜೆಗಾಗಿ ಭೂಮಿ, ಗಾಣ ಮತ್ತು ಮನೆಗಳನ್ನು ದತ್ತಿ ಬಿಡುತ್ತಾನೆ. ಶಾಸನದಲ್ಲಿ ಇವನನ್ನು ನಡತೆಯಲ್ಲಿ ಮನುವಿಗೂ,

* ಸಂಶೋಧನಾ ವಿದ್ಯಾರ್ಥಿ, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬, ಮೊ. ೯೮೮೭೩ ೭೫೫೮೧

ಶುಚಿತ್ವದಲ್ಲಿ 'ವಾಯುವಿನ ಮಗ'ನೆಂದೂ, ಎತ್ತರದಲ್ಲಿ ಹಿಮಾಲಯ ಪರ್ವತ, ಬುದ್ಧಿಯಲ್ಲಿ 'ಬೃಹಸ್ಪತಿ' ಎಂದು ಮುಂತಾದ ಹೊಗಳಿಕೆಗಳಿವೆ.[೩]

ಅವಳಿ ಬಸದಿಗಳು

ಐಹೊಳೆಯಲ್ಲಿ ಸ್ಥಳೀಯವಾಗಿ ಅವಳಿ ಬಸದಿಗಳೆಂದೇ ಕರೆಯಲಾಗುತ್ತಿರುವ ಜೈನ ದೇವಾಲಯಗಳು ಅಲ್ಲಿರುವ ಕ್ರಿ.ಶ.೧೧೨೦ರ ಶಾಸನದ ಪ್ರಕಾರ ಈ ದೇವಾಲಯವನ್ನು ೧೧ನೇ ಶತಮಾನ ದಲ್ಲಿ ಕೇಶವಶೆಟ್ಟಿ ಮತ್ತು ಅವನ ಮಡದಿಯಾದ ಸಾವಿಯಕ್ಕ ಎಂಬುವರು ಕಟ್ಟಿಸಿದ್ದಾರೆಂದು ತಿಳಿಯುತ್ತದೆ. ದಕ್ಷಿಣಾಭಿಮುಖವಾಗಿ ನಿರ್ಮಿತವಾಗಿರುವ ಎರಡು ಬಸದಿಗಳು ಒಂದೇ ಮುಖಮಂಟಪವನ್ನು ಹೊಂದಿವೆ. ಮುಖಮಂಟಪದಲ್ಲಿರುವ ಸ್ತಂಭಗಳು ಚೌಕಾಕಾರದಲ್ಲಿವೆ. ಬಲಭಾಗದಲ್ಲಿರುವ ಬಸದಿಯ ನವರಂಗದ ಬಾಗಿಲುವಾಡದ ಚೌಕಟ್ಟು ಹೂವಿನ ಸುಳುಹುಗಳು ಮತ್ತು ಸಿಂಹಗಳ ಶಿಲ್ಪಗಳಿಂದ ಅಲಂಕಾರವಾಗಿದೆ. ಬಾಗಿಲುವಾಡದ ಲಲಾಟದಲ್ಲಿ ಜಿನಬಿಂಬವಿದೆ. ಮೇಲ್ಭಾಗದಲ್ಲಿ ಮೊದಲ ೧೨ ತೀರ್ಥಂಕರರು ನಿಂತಿರುವಂತೆ ಶಿಲ್ಪಗಳನ್ನು ಮತ್ತು ಅವರ ಪಕ್ಕದಲ್ಲಿ ಅವರಿಗೆ ಸಂಬಂಧಿಸಿದ ಯಕ್ಷ-ಯಕ್ಷಣಿಯರ ಶಿಲ್ಪಗಳನ್ನುಕೆತ್ತಲಾಗಿದೆ. ನವರಂಗದ ಮೇಲ್ಛಾವಣಿಯಲ್ಲಿ ಕೆಳಮುಖವಾಗಿ ಕೆತ್ತಲ್ಪಟ್ಟಿರುವ ಕಮಲದ ಹೂವಿನ ಶಿಲ್ಪವಿದೆ. ಈ ಅವಳಿ ಬಸದಿಯ ಒಂದು ಗರ್ಭಗುಡಿಯಲ್ಲಿ ಜೈನ ತೀರ್ಥಂಕರನ ಮೂರ್ತಿಯಿದೆ.[೪]

ಹುನಗುಂದದ ರಾಮಲಿಂಗೇಶ್ವರ ದೇವಾಲಯ, ಇದನ್ನು ಸ್ಥಳೀಯವಾಗಿ ರಾಮಲಿಂಗೇಶ್ವರ ದೇವಾಲಯವೆಂದು ಆರಾಧಿಸುತ್ತಾರೆ. ಈ ದೇವಾಲಯವು ಹುನಗುಂದ ನಗರದ ಉತ್ತರದ ಗುಡ್ಡದ ಕೆಳಗೆ ಕೋಟೆಯ ಭಾಗದಲ್ಲಿ ನಿರ್ಮಿತವಾಗಿದೆ. ಈ ದೇವಾಲಯವು ದ್ವಾರಮಂಟಪ, ನವರಂಗ ಮಂಟಪ, ನಂದಿ ಮಂಟಪ, ಚಿಕ್ಕದಾದ ಗರ್ಭಗುಡಿ ಎಂಬ ಭಾಗಗಳನ್ನು ಒಳಗೊಂಡಿರುವುದು, ಗರ್ಭಗೃಹದ ದ್ವಾರಬಾಗಿಲಿನಲ್ಲಿ ಸೌಂದರ್ಯಯುತವಾದ ದ್ವಾರಶಾಖೆಗಳನ್ನು ಹೊಂದಿದೆ. ಗರ್ಭಗೃಹದ ಮಂಗಲಭಾಗದಲ್ಲಿ ಗಜಲಕ್ಷ್ಮೀಯನ್ನು ಮತ್ತು ಲಲಾಟದಲ್ಲಿ ವ್ಯಾಳ ಮೂಲದ ದ್ರಾವಿಡ ಶಾಲಕೂಟವನ್ನೊಳಗೊಂಡ ಸ್ತೂಪಿಗಳಿಂದ ಅಲಂಕೃತವಾಗಿದೆ. ಈ ದೇವಾಲಯವು ಎರಡು ಅಂತಸ್ತನ್ನು ಹೊಂದಿದ ಮಂದಿರವಾಗಿದೆ. ದೇವಾಲಯವು ವಿಶಾಲವಾದ ಪ್ರಾಂಗಣವನ್ನು ಹೊಂದಿದೆ. ನವರಂಗ ಮಂಟಪದಲ್ಲಿ ೧೬ ಚೌಕಾಕಾರದ ಕಂಬಗಳಿವೆ. ಈ ಕಂಬಗಳು ಪರಶಿವನ ಲೀಲೆಗಳನ್ನು ತೋರ್ಪಡಿಸುವ ಸುಂದರವಾದ ಶಿಲ್ಪಗಳಿಂದ ಅಲಂಕೃತಗೊಂಡಿದೆ.

ಈ ದೇವಾಲಯದ ಮತ್ತೊಂದು ವಿಶೇಷವಾದ ಲಕ್ಷಣವೆಂದರೆ ಗರ್ಭಗುಡಿಯ ನೆಲಮಟ್ಟಕ್ಕಿಂತ ಕೆಳಗಿದ್ದು, ಚಿಕ್ಕದಾಗಿದೆ. ಗರ್ಭಗುಡಿಯ ಎದುರಿಗೆ ಭೂಮಿಯಮಟ್ಟಕ್ಕೆ ಸಮಾನಾಂತರದಲ್ಲಿ ನಂದಿ ಮಂಟಪವು ಇದೆ. ಈ ನಂದಿ ಮಂಟಪದ ಮೇಲ್ಛಾವಣಿಯಲ್ಲಿ ನಂದಿಯನ್ನೇರಿ ಕುಳಿತಿರುವ ಶಿವ ಪಾರ್ವತಿಯರ ಉಬ್ಬುಶಿಲ್ಪವಿರುವುದು ನಂದಿಯ ಹಿಂಭಾಗದಲ್ಲಿ ಶಿವನ ಕಡೆಗೆ ಮುಖಮಾಡಿ ಸುಖಾಸನದಲ್ಲಿ ಕುಳಿತಿರುವ ಪಾರ್ವತಿಯ ಶಿಲ್ಪವು ಕಾಣುವುದು ಪಾರ್ವತಿಯು ತನ್ನ ಎಡಗೈಯಲ್ಲಿ ಪದ್ಮವನ್ನು ಹಿಡಿದುಕೊಂಡಿರುವ ಶಿಲ್ಪ ನಯನ ಮನೋಹರ ವಾಗಿದೆ. ಅದರಂತೆ ಚತುರ್ಭುಜನಾದ ಶಿವನು ತನ್ನ ಎರಡು ಕೈಗಳಲ್ಲಿ ತಂಬೂರಿಯನ್ನು, ಮತ್ತೆರಡು ಕೈಗಳಲ್ಲಿ ಡಮರುಗ ಹಾಗೂ ತ್ರಿಶೂಲಗಳನ್ನು ಹಿಡಿದಿರುವನು. ಅವನೂ ಸಹ ಸುಖಾಸನದಲ್ಲಿ ಕುಳಿತಿರುವನು. ಅವನ ಸುತ್ತಲೂ ಗಣಧರರಿರುವರು. ನಂದಿಯ ಹಿಂದಿನ ಪಾದದ ಬಳಿಯಲ್ಲು ನವಿಲನ್ನೇರಿ ಕುಳಿತ ಕಾರ್ತಿಕೆಯನ ಶಿಲ್ಪವೂ ಕಂಡುಬರುತ್ತದೆ. ಈ ವಿವರ ಮತ್ತು ಶೈಲಿಯಲ್ಲಿ ನಾಗನಾಥ ದೇವಾಲಯದ ಭುವನೇಶ್ವರಿಯ ಶಿಲ್ಪಗಳನ್ನು ಹೋಲುತ್ತವೆ. ಮತ್ತೊಂದು ಶಿಲ್ಪವು ಗರುಡವನ್ನೇರಿದ ಚತುರ್ಭುಜ ವಿಷ್ಣುವಿನದಾಗಿದೆ. ವಿಷ್ಣು ತನ್ನ ಹಸ್ತದಲ್ಲಿ ಚಕ್ರ, ಗಧೆ, ಶಂಖ, ಪದ್ಮಗಳನ್ನು ಹಿಡಿದಿರುವನು. ಅವನ ಸುತ್ತಲೂ ಮುನಿಗಳು ಮತ್ತು ಗಣವೃಂದದವರು ಇರುವಂತೆ ಚಿತ್ರಿಸಲಾಗಿದೆ.[೫]

ಇಂದು ದೇವಾಲಯಕ್ಕೆ ದಪ್ಪವಾಗಿ ಸುಣ್ಣ ಬಳಿದಿರುವುದರಿಂದ ಅದರ ಸೌಂದರ್ಯದ ಕೊರತೆ ಎದ್ದು ಕಾಣುತ್ತದೆ. ಗರ್ಭಗುಡಿಗೆ ಹೊಂದಿಕೊಂಡೇ ಪ್ರದಕ್ಷಿಣಾ ಪಥವು ಕಂಡುಬರುವುದಿಲ್ಲ. ಆದರೆ ದೇವಾಲಯದ ಹೊರಭಾಗದ ಆವರಣವೇ ಪ್ರದಕ್ಷಿಣಾ ಪಥವಾಗಿದೆ. ಈ ದೇವಾಲಯದ ಮೇಲ್ಭಾಗದಲ್ಲಿ ಮತ್ತೊಂದು ಚಿಕ್ಕದಾದ ಗರ್ಭಗುಡಿಯು ಕಂಡುಬರುತ್ತದೆ. ಈ ಗರ್ಭಗುಡಿಗೆ ಹೋಗಲು ದೇವಾಲಯದ ಹಿಂಬದಿಯಲ್ಲಿ ಮೆಟ್ಟಿಲುಗಳ ವ್ಯವಸ್ಥೆ ಇದೆ. ದೇವಾಲಯದ ಆವರಣದ ಕಟ್ಟೆಯ ಮೇಲೆ ಪೂರ್ವದಲ್ಲಿ ಮತ್ತು ವಾಯುವ್ಯ ಭಾಗದಲ್ಲಿ ಎರಡು ಲಿಂಗಗಳನ್ನು ಸ್ಥಾಪಿಸಲಾಗಿದೆ.

ನವರಂಗಮಂಟಪದ ಮೇಲ್ಛಾವಣಿಯಲ್ಲಿ ಕ್ರಿ.ಶ.೧೦೭೪ರಲ್ಲಿ ಕಲ್ಯಾಣ ಚಕ್ರವರ್ತಿ ೨ನೇ ಸೋಮೇಶ್ವರನ ಆಳ್ವಿಕೆಯ ಕಾಲಾವಧಿಯಲ್ಲಿ ಬರೆಯಿಸಿದ ಒಂದು ಶಾಸನವಿದೆ. ಇದರಲ್ಲಿ "ಸೂರಸ್ತಗಣ ಜೈನಪಂಡಿತನಾದ ಆರ್ಯನಂದಿ ಭಟಾರಕನ

ಶಿಷ್ಯನಾಗಿದ್ದ ಆರ್ಯಪಂಡಿತನು ಪೊನ್ನಗುಂದ-೩೦ರ ಆಡಳಿತ ವಿಭಾಗದ ರಾಜಧಾನಿಯಾಗಿದ್ದ ಪೊನ್ನಗುಂದದಲ್ಲಿ ಅರಸರ ಬಸದಿಗೆ ನೀಡಿದ ಭೂದಾನವನ್ನು" ಕುರಿತು ಉಲ್ಲೇಖಿಸಲಾಗಿದೆ. ಅಲ್ಲದೇ ಮುಂದುವರೆದು ಈ ಶಾಸನದಲ್ಲಿ ಶ್ರೀಕರಣ ದೇವನಾಯಕ ಪೆರ್ಗಡೆ ನಾಕಿಮಯ್ಯ, ಪೆರ್ಗಡೆ ರೇವಣಯ್ಯ, ಕರಣ ಅಚಪಯ್ಯನಾಯಕ, ಮಹಾಮಂಡಲೇಶ್ವರ ಲಕ್ಷ್ಮರಸ ಮುಂತಾದ ಅಧಿಕಾರಿಗಳ ಹೆಸರುಗಳನ್ನು ಸಹ ಉಲ್ಲೇಖಿಸಲಾಗಿದೆ.[೬]

ಹುನಗುಂದ ತಾಲೂಕಿನ ಮತ್ತೊಂದು ಐತಿಹಾಸಿಕ ಗ್ರಾಮ ಅರಸಿಬೀದಿ ಈ ಗ್ರಾಮದಲ್ಲಿಯ ಗೊಣದ ಬೆಡಂಗಿ ಜಿನಾಲಯ ಗೊಣದ ಬೆಂಡಗಿ ಎಂಬ ಬಿರುದಾಂಕಿತಳಾಗಿದ್ದ ಕಿಸುಕಾಡು-೭೦ರ ಆಡಳಿತಗಾರಳೂ ಆಗಿದ್ದ ಮತ್ತು ಜೈನಧರ್ಮದ ಅನುಯಾಯಿಯೂ ಆಗಿದ್ದ ಅಕ್ಕಾದೇವಿಯ ಕಾಲಾವಧಿಯಲ್ಲಿ ಈ ದೇವಾಲಯವು ನಿರ್ಮಾಣಗೊಂಡಿತ್ತು. ಆದುದರಿಂದ ಈ ದೇವಾಲಯಕ್ಕೆ ಗೊಣದ ಬೆಡಂಗಿ ಜಿನಾಲಯವೆಂದು ಕರೆಯುವರು. ಈ ದೇವಾಲಯವು ಚಾಲುಕ್ಯರ ಕಾಲದ ಒಂದು ತ್ರಿಕೂಟ ದೇವಾಲಯವಾಗಿದ್ದು, ಹೊರಗಿನಿಂದ ನೋಡಿದರೆ ಇದು ಇಟಗಿಯ ಮಹಾದೇವ ದೇವಾಲಯವನ್ನು ಹೋಲುವುದು. ಉತ್ತರಾಭಿಮುಖವಾದ ಈ ಜಿನಾಲಯವು ಮೂರು ಗರ್ಭಗೃಹ, ಒಂದು ಅಂತರಾಳ, ಎರಡು ಅರ್ಧಮಂಟಪಗಳನ್ನು, ನವರಂಗ, ಮಹಾಮಂಟಪಗಳನ್ನು ಒಳಗೊಂಡಿದೆ. ಪಶ್ಚಿಮದ ಕಡೆಯಿರುವ ಅಂತರಾಳದ ಪ್ರವೇಶದ್ವಾರದ ಪಕ್ಕಕ್ಕೆ ಸುಂದರವಾರ ಎರಡು ಜಾಲಂಧ್ರಗಳಿವೆ. ಮುಂಭಾಗದಲ್ಲಿ ಆಕರ್ಷಕವಾದ ಸ್ತಂಭಗಳಿಂದ ಕೂಡಿದ ಮುಖ ಮಂಟಪವಿದೆ. ಈ ದೇವಾಲಯಗಳ ಮಂಟಪದಲ್ಲಿ ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಮಾದರಿಯ ಕಂಬಗಳು ಮತ್ತು ಮಣಿಕೇಶ್ವರ ದೇವಾಲಯದ ಮಾದರಿಯ ಜಾಲಂಧ್ರಗಳನ್ನು ನಿರ್ಮಿಸಲಾಗಿದೆ.

ಮೇಲ್ಛಾವಣಿಯ ಮಧ್ಯಭಾಗದಲ್ಲಿ ಕೆಳಮುಖವಾದ ಕಮಲದ ಹೂವಿನ ಶಿಲ್ಪ ನೋಡುಗರನ್ನು ತನ್ನತ್ತ ಸೆಳೆದುಕೊಳ್ಳುವಂತೆ ಕಂಗೋಳಿಸುವುದು. ಮುಖಮಂಟಪವನ್ನು ಸುತ್ತಲೂ ಕಕ್ಷಾಸನವು ಆವರಿಸಿಕೊಂಡಿದೆ. ಮೂರು ಗರ್ಭಗುಡಿಗಳ ಒಳಭಾಗದಲ್ಲಿ ಶಿಥಿಲಾವಸ್ಥೆಯಲ್ಲಿರುವ ಪೀಠಗಳಿದ್ದು, ಪೀಠದ ಮೇಲೆ ಯಾವುದೇ ಮೂರ್ತಿಗಳಿಲ್ಲ. ಗರ್ಭಗುಡಿಗಳ ಪೀಠದ ಪ್ರಭಾವಳಿಯ ಮೇಲ್ಭಾಗದಲ್ಲಿ ಮತ್ತು ಗರ್ಭಗುಡಿಯ ದ್ವಾರಬಾಗಿಲು ನಾಲ್ಕು ಅಲಂಕಾರಿಕವಾದ ದ್ವಾರಶಾಖೆಗಳನ್ನು ಹೊಂದಿದ್ದು, ಮಂಗಲದಲ್ಲಿ ಧ್ಯಾನಸಕ್ತನಾಗಿ ಕುಳಿತಿರುವ ಜೈನ ತೀರ್ಥಂಕರನ ಶಿಲ್ಪವಿದೆ. ಆ ಶಿಲ್ಪದ ಆಧಾರದ ಮೇಲೆಯೇ ಇದೊಂದು ಜೈನಮಂದಿರವೆಂದು ಗುರುತಿಸಲು ಸಾಧ್ಯ. ಪೀಠದ ಮೇಲ್ಭಾಗದಲ್ಲಿ ಮಕರ ತೋರಣದ ಶಿಲ್ಪವು ಕಂಡುಬರುವುದು.

ಪೀಠದ ಹಿಂದೆ ಅಲಂಕೃತವಾದ ಪ್ರಭಾವಳಿಯಿದೆ. ಪ್ರಭಾವಳಿಯ ಮೇಲ್ಭಾಗದಲ್ಲಿ ಶಿಖರದಂತೆ ಕೆತ್ತನೆಯಿದ್ದು, ಇಕ್ಕೆಲಗಳಲ್ಲಿ ಬಳ್ಳಿಗಳಿಂದ ಅಲಂಕಾರಗೊಂಡಿದೆ. ಈ ಜಿನಾಲಯವನ್ನು ಗುಣದ ಬೆಡಂಗೀರ್ ಎಂಬ ಬಿರುದನ್ನು ಹೊಂದಿರುವ ವಿಕ್ರಮಾದಿತ್ಯನ ಸಹೋದರಿಯಾದ ಅಕ್ಕಾದೇವಿಯು ನಿರ್ಮಾಣ ಮಾಡಿರುವುದರಿಂದ ಇದಕ್ಕೆ ಗುಣದ ಬೆಡಂಗಿ ಜಿನಾಲಯವೆಂದು ಶಾಸನಗಳಲ್ಲಿ ಉಲ್ಲೇಖವಿದೆ. ಕ್ರಿ.ಶ.೧೦೪೭ರಲ್ಲಿ ರಚಿತವಾದ ಗೊಣದ ಬೆಡಂಗಿ ಜಿನಾಲಯದ ಎದುರಿಗೆ ಬಿದ್ದಿರುವ ಕಲ್ಲಿನ ಮೇಲೆ ಬರೆಯಲ್ಪಟ್ಟಿರುವ ಶಾಸನದಲ್ಲಿ ಈ ಜಿನಾಲಯದ ನಾಗಸೇನ ಪಂಡಿತರಿಗೆ ಭೂದಾನ ನೀಡಿದ ವಿವರವನ್ನು ಉಲ್ಲೇಖಿಸಲಾಗಿದೆ. ಅಲ್ಲದೆ ಈ ದೇವಾಲಯದ ಕಲ್ಕುಟಿಕನಾದ ಸೂರೋಜ ಎಂಬುವನಿಗೆ ೧೨ ಮತ್ತರು ಫಲವತ್ತಾದ ಭೂಮಿಯನ್ನು ಮತ್ತು ಒಂದು ಮತ್ತರು ತೋಟವನ್ನು ದಾನಬಿಟ್ಟ ವಿಷಯವನ್ನು ದಾಖಲಿಸಿದೆ.[೭]

ಹುನಗುಂದ ತಾಲ್ಲೂಕಿನಲ್ಲಿರುವ ಮತ್ತೊಂದು ಗ್ರಾಮ ನಂದವಾಡಗಿಯಲ್ಲಿ ಚಾಲುಕ್ಯ ತ್ರೈಲೋಕ್ಯಮಲ್ಲ ೧ನೇ ಸೋಮೇಶ್ವರನು ನಾಗಲೇಶ್ವರ ಮಠವನ್ನು ನಿರ್ಮಿಸಿದನೆಂದು ಅಲ್ಲಿರುವ ಕ್ರಿ.ಶ.೧೦೪೪ರ ಶಾಸನದಿಂದ ತಿಳಿದುಬರುವುದು. ನಂದರು ಈ ಪ್ರದೇಶವನ್ನು ಆಳ್ವಿಕೆ ಮಾಡಿರು ವುದರಿಂದ ಈ ಊರಿಗೆ 'ನಂದವಾಡಿಗೆ' ಎಂದು ಕರೆಯಲಾಯಿತು. ಇಂದು ನಾಗಲೇಶ್ವರ ಮಠವು ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿರುವುದರಿಂದ ಮೊದಲಿನ ಲಕ್ಷಣಗಳನ್ನು ಗುರುತಿಸುವುದು ಕಷ್ಟವಾಗಿದೆ.[೮]

ಹುನಗುಂದ ತಾಲ್ಲೂಕಿನ ಕೆಲೂರು ಗ್ರಾಮವು ಶಾಸನದಲ್ಲಿ ಉಲ್ಲೇಖಗೊಂಡಿದ್ದು, ಈ ಶಾಸನ ೧೮೨೪ರ ಕಾಲದಲ್ಲಿ ರಚಿವಾದ ಗ್ರಾಮಪಂಚಾಯಿತಿಯ ಕಚೇರಿಯ ಮುಂಭಾಗದಲ್ಲಿ ಇಟ್ಟಿರುವ ಕಲ್ಲಿನ ಮೇಲಿದೆ. ಕುಂಪಣಿ ಸರ್ಕಾರವು ಕೆಲೂರಿನ ಮೇಲೆ ಸಾಧಿಸಿದ ಜಯವನ್ನು ಇದು ಉಲ್ಲೇಖಿಸುತ್ತದೆ. ಕುಂಪಣಿ ಸರ್ಕಾರ ಎಂದರೇ ಈಸ್ಟ್ ಇಂಡಿಯಾ ಕಂಪನಿಯಾಗಿದ ಎಂದು ಶಾಸನ ಹೇಳುತ್ತದೆ. ಕೆಲೂರು ಗ್ರಾಮದಲ್ಲಿ ಪಂಚಲಿಂಗೇಶ್ವರ ಅಥವಾ ರಾಮೇಶ್ವರ ದೇವಾಲಯವು ಐತಿಹಾಸಿಕ ಮಹತ್ವವವನ್ನು ಪಡೆದುಕೊಂಡಿದೆ. ಒಂದೇ ಜಗುಲಿಯ ಮೇಲೆ ಐದು ಚಿಕ್ಕ ಚಿಕ್ಕ ದೇವಾಲಯಗಳು ನಿರ್ಮಾಣವಾಗಿದ್ದು, ಅವುಗಳು ಚಾಲುಕ್ಯರ ಶೈಲಿಯಲ್ಲಿವೆ. ಒಂದು ದೇವಾಲಯಕ್ಕೂ ಮತ್ತೊಂದು ದೇವಾಲಯಕ್ಕೂ

ಯಾವುದೇ ವ್ಯತ್ಯಾಸವಿಲ್ಲವಾದರೂ ದೇವಾಲಯದ ಮೇಲ್ಭಾಗದಲ್ಲಿರುವ ಶಿಖರಗಳು ಮಾತ್ರ ಒಂದರಂತೆ ಮತ್ತೊಂದು ಇರದೇ ಭಿನ್ನ ಭಿನ್ನವಾಗಿಯೇ ನಿರ್ಮಿತವಾಗಿವೆ.[೯]

ಇಲ್ಲಿರುವ ಪ್ರತಿಯೊಂದು ದೇವಾಲಯದ ಹೊರಭಾಗದ ಗೋಡೆಯ ಮೇಲೆ ನಾಲ್ಕು ಭಾಗದಲ್ಲೂ ವಿಷ್ಣು ಮತ್ತು ಶಿವನಿಗೆ ಸಂಬಂಧಿಸಿದ ಶಿಲ್ಪಗಳನ್ನು ಕೆತ್ತಲಾಗಿದೆ. ದೇವಾಲಯದ ದ್ವಾರದ ಬಳಿಯಲ್ಲಿ ಗಡ್ಡದಾರಿಯಾದ ಜಟಾ ಮುಕುಟವನ್ನು ಹೊಂದಿದ ದ್ವಾರಪಾಲಕರಿದ್ದು, ಕೊರಳಲ್ಲಿ ಗಂಟೆಯುಳ್ಳ ಯಜ್ಞೋಪವಿತವಿದೆ. ಎಡಗೈಯಲ್ಲಿ ನಾಗ, ಬಲಗೈಯಲ್ಲಿ ಪರಶುವನ್ನು ಹಿಡಿದಿರುವಂತೆ ಕಂಡುಬರುವುದು. ಮತ್ತೊಂದು ದ್ವಾರಪಾಲಕ ಮೂರ್ತಿಯು ಕೆಳಗಿನ ಬಲಗೈಯಲ್ಲಿ ಗದೆ, ಎಡಗೈಯಲ್ಲಿ ಪರಶುವನ್ನು ಹಿಡಿದುಕೊಂಡಿರುವುದು ಮತ್ತು ಕೊರಳಲ್ಲಿ ಗಂಟೆಯನ್ನು ಯಜ್ಞೋಪವವಿತವಿದೆ.

ಎರಡನೇ ದೇವಾಲಯದ ದ್ವಾರದಲ್ಲಿರುವ ಶೈವ ದ್ವಾರಪಾಲಕನೂ ಸಹ ತನ್ನ ಮೇಲಿನ ಕೈಗಳಲ್ಲಿ ನಾಗ, ಪರಶುವನ್ನು ಹಿಡಿದುಕೊಂಡಿರುವುದು ಗೋಚರಿಸುವುದು. ಪ್ರಥಮ ದೇವಾಲಯದ ಹೊರಭಾಗದ ಗೋಡೆಯ ಮೇಲೆ ವಾಮನ ಅವತಾರದ ತ್ರಿಭಂಗಿಯಲ್ಲಿರುವ ವಿಷ್ಣುವಿನ ಶಿಲ್ಪವಿದೆ. ಹಿಂಭಾಗದಲ್ಲಿ ತಲೆಯ ಮೇಲೆ ವರ್ತುಲಾಕಾರದ ಛತ್ರಿ, ಎಡಗೈಯಲ್ಲಿ ನಾಗ, ತಲೆಯ ಅಕ್ಕ-ಪಕ್ಕದ ಭಾಗದಲ್ಲಿ ಚಾಮರ, ಜಟಾಮುಕುಟ ಕಂಡುಬರುವುದು. ಕೆಳಗಿನ ಕೈಯಲ್ಲಿ ವೀಣೆಯನ್ನು ಹಿಡಿದುಕೊಂಡಿರುವಂತೆ ತೋರುವುದು. ಮತ್ತೊಂದು ಗೋಡೆಯ ಭಾಗದಲ್ಲಿ ನರಸಿಂಹ ಅವತಾರದ ವಿಷ್ಣುವಿನ ಶಿಲ್ಪವಿದೆ. ಎರಡನೇ ದೇವಾಲಯದ ಹಿಂಭಾಗದ ಹೊರಗೋಡೆಯಲ್ಲಿ ಅರ್ಧನಾರೀಶ್ವರ ಶಿಲ್ಪವನ್ನು ಹೊಂದಿರುವುದು ಕಂಡುಬರುತ್ತದೆ.

ಮೂರನೇ ದೇವಾಲಯದ ದ್ವಾರದಲ್ಲಿ ದ್ವಿಭುಜನಾದ ದ್ವಾರಪಾಲಕನ ವಿಗ್ರಹವಿದೆ. ಕೈಯಲ್ಲಿ ಖಡ್ಗ, ಮುಕುಟದ ಶಿಲ್ಪವಿದಾಗಿದೆ. ದೇವಾಲಯದ ಹೊರಭಾಗದಲ್ಲಿ ಭೂ ವರಹಾವತಾರದ ವಿಷ್ಣು ಇದ್ದು, ಕಾಲಲ್ಲಿ ನಾಗರಾಜನ ಶಿಲ್ಪ, ದಂತದಲ್ಲಿ ಭೂದೇವಿಯ ಶಿಲ್ಪವು ಗೋಚರವಾಗುವುದು. ಇನ್ನೊಂದು ಭಾಗದಲ್ಲಿ ನಿಂತಿರುವ ವಿಷ್ಣುವಿನ ಶಿಲ್ಪವಿದ್ದು, ಮೇಲ್ಭಾಗದ ಬಲಗೈಯಲ್ಲಿ ಚಕ್ರ, ಕೆಳಭಾಗದ ಬಲಗೈಯಲ್ಲಿ ಗದೆ, ಎಡಗೈಯ ಮೇಲ್ಭಾಗದಲ್ಲಿ ಶಂಖ ಮುಂತಾದ ಆಯುಧಗಳನ್ನು ಹಿಡಿದುಕೊಂಡಿದ್ದು, ಕೆಳಗಿನ ಬಲಗೈಯನ್ನು ಟೊಂಕದ ಮೇಲೆ ಇಟ್ಟುಕೊಂಡು ನಿಂತಿರುವ ಏಕಭಂಗಿಯ ಶಿಲ್ಪವಾಗಿದೆ.

ವರಾಹ, ವಾಮನ, ನರಸಿಂಹ, ಕೇಶವ ಮುಂತಾದ ಅವತಾರಗಳಲ್ಲಿರುವ ವಿಷ್ಣುವಿನ ಮತ್ತು ನಾಟ್ಯ ಭಂಗಿಯಲ್ಲಿರುವ ಶಿವನ ಶಿಲ್ಪಗಳು ಅಲ್ಲಿ ಕಂಡುಬರುತ್ತವೆ. ದೇವಾಲಯಗಳು ನಿಸರ್ಗದ ಮಡಿಲಲ್ಲಿ ಗುಡ್ಡಗಳ ಸಾಲಿನ ಮಧ್ಯದಲ್ಲಿ ನಿರ್ಮಿತವಾಗಿವೆ. ದೇವಾಲಯಗಳ ಉತ್ತರಕ್ಕೆ ವಿಶಾಲವಾದ ಕರೆಯೊಂದು ನಿರ್ಮಿತವಾಗಿವೆ. ದೇವಾಲಯವು ಒಂದೇ ಒಂದು ಸುಂದರವಾದ ದ್ವಾರವನ್ನು ಒಳಗೊಂಡಿದೆ. ಈ ದ್ವಾರದ ಮೇಲ್ಭಾಗದ ಪಟ್ಟಿಕೆಯಲ್ಲಿ ಮಕರ ತೋರಣದ ಶಿಲ್ಪವನ್ನು ಕೆತ್ತಲಾಗಿದೆ. ದೇವಾಲಯಗಳ ಮೇಲಿರುವ ಶಿಖರಗಳಲ್ಲಿ ಎರಡು ಶಿಖರಗಳು ದ್ರಾವಿಡ ಶೈಲಿಯಲ್ಲಿದ್ದರೆ, ಮತ್ತೆರಡು ಶಿಖರಗಳು ನಾಗರಶೈಲಿಯಲ್ಲಿ ನಿರ್ಮಿತವಾಗಿವೆ. ಕೆಲೂರಿನ ದೇವಾಲಯಗಳ ಸಮುಚ್ಚಯದ ಕುರಿತು ವಿವಿಧ ತಜ್ಞರು ಬೇರೆ ಬೇರೆ ಕಾಲಾವಧಿಯಲ್ಲಿ ನಿರ್ಮಿತವಾಗಿವೆ ಎಂಬ ಹೇಳಿಕೆಗಳನ್ನು ನೀಡುತ್ತಾರೆ.

ಈ ದೇವಾಲಯದ ಗೋಡೆಗಳ ಮೇಲಿರುವ ಮೂರ್ತಿಶಿಲ್ಪಗಳ ಅಧಾರದ ಮೇಲೆ ಇದು ರಾಷ್ಟ್ರಕೂಟರ ಕಾಲಕ್ಕೆ ಸೇರಿದುವಾಗಿದೆ ಎಂದು ಡಾ.ಆರ್.ಎಂ.ಷಡಕ್ಷರಯ್ಯ ಅಭಿಪ್ರಾಯಪಟ್ಟಿದ್ದಾರೆ. ಆ ದೇವಾಲಯಗಳ ಲಕ್ಷಣಗಳನ್ನು ಅವಲೋಕಿಸಿದಾಗ ಕಲ್ಯಾಣ ಚಾಲುಕ್ಯರ ಕಾಲದ್ದು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಈ ದೇವಾಲಯವು ರಾಷ್ಟ್ರಕೂಟರ ಕೊನೆಯ ಕಾಲವಧಿಯಲ್ಲಿ, ಕಲ್ಯಾಣ ಚಾಲುಕ್ಯರ ಆರಂಭಿಕ ಆಳ್ವಿಕೆಯ ಕಾಲಾವಧಿಯಲ್ಲಿ ರಚನೆಯಾಗಿರಬಹುದು ಎಂದು ಡಾ.ಶೀಲಾಕಾಂತ ಪತ್ತಾರ ಅವರು ಅಭಿಪ್ರಾಯಪಟ್ಟಿದ್ದಾರೆ. ಇದು ಕಲ್ಯಾಣ ಚಾಲುಕ್ಯರ ರಾಷ್ಟ್ರಕೂಟರ ಸಾಮಂತರಾಗಿ ಆಳ್ವಿಕೆ ಮಾಡುವ ಸಂದರ್ಭದಲ್ಲಿ ನಿರ್ಮಿಸಿರಬಹುದೆಂದು ಊಹಿಸಬಹುದಾಗಿದೆ.[೧೦]

ಹೀಗೆ ಹುನಗುಂದ ತಾಲ್ಲೂಕಿನ ಶಾಸನಗಳು ಇಲ್ಲಿಯ ಆಳರಸರು, ವ್ಯಾಪಾರಿಗಳು, ಸಾಮಾನ್ಯವರ್ಗದ ಮಹಿಳೆಯರು ಮತ್ತು ದಂಡನಾಯಕರುಗಳು ದೇವಾಲಯಗಳನ್ನು ನಿರ್ಮಿಸಿರುವ ಕುರಿತಾಗಿ ಮಾಹಿತಿಯನ್ನು ನೀಡುತ್ತದೆ. ಇಂದಿಗೂ ಆಯಾಸ್ಥಳಗಳಲ್ಲಿ ಈ ದೇವಾಲಯಗಳಿರುವುದನ್ನು ಗುರುತಿಸಬಹುದಾಗಿದೆ.



## ಅಡಿಟಿಪ್ಪಣಿಗಳು

೧. ಡಾ.ದೇವರಕೊಂಡಾರೆಡ್ಡಿ(ಮು.ಸಂ.), ಬಾಗಲಕೋಟೆ ಜಿಲ್ಲೆಯ ಶಾಸನ ಸಂಪುಟ ೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು.೩೬೬

೨. ಪರಶುರಾಮ ಎಫ್.ಗೋಡಿ, ಚಾಲುಕ್ಯ ಮಾರ್ಗದರ್ಶಿ, ಸಾಗರ ಪ್ರಕಾಶನ, ಐಹೊಳೆ, ೨೦೦೭, ಪು.೧೮

೩. ಡಾ.ದೇವರಕೊಂಡಾರೆಡ್ಡಿ(ಮು.ಸಂ.), ಪೂರ್ವೋಕ್ತ, ಪು.೩೭೨-೩೭೪

೪. ನಾಗಣ್ಣನವರ ಎಸ್.ಆರ್., ಹುನಗುಂದ ತಾಲೂಕಿನ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳು, ವಿಶ್ವವಿದ್ಯಾಲಯ ಧನಸಹಾಯ ಆಯೋಗಕ್ಕೆ ಸಲ್ಲಿಸಿದ ಕಿರು ಯೋಜನಾ ಸಂಶೋಧನಾ ಪ್ರಬಂಧ, ೨೦೧೬, ಪು.೭೪

೫. ಭಾರತ ಸರ್ಕಾರದ ಗ್ಯಾಸೆಟಿಯರ್ ಕರ್ನಾಟಕ ರಾಜ್ಯ, ಬಿಜಾಪೂರ ಜಿಲ್ಲೆ, ಪು.೧೧೬೭-೬೮

೬. ಅದೇ, ಪು.೧೬೭-೬೮

೭. ಅದೇ, ಪು.೧೦೩೪-೩೫

೮. ಡಾ.ದೇವರಕೊಂಡಾರೆಡ್ಡಿ(ಮು.ಸಂ.), ಪೂರ್ವೋಕ್ತ, ಪು.೪೩೭-೪೪೦

೯. ಅದೇ, ಪು.೪೨೭-೪೨೮

೧೦. ನಾಗಣ್ಣನವರ ಎಸ್.ಆರ್., ಪೂರ್ವೋಕ್ತ, ೨೦೧೬, ಪು.೮೬-೮೮

೬೨

# ಹಿರಿಯೂರಿನ ವಿಜಯನಗರ ಕಾಲದ ವೆಂಕಟರಮಣ ದೇವಾಲಯ

ಡಿ. ಜಗದೀಶ*

ಕರ್ನಾಟಕ ದೇವಾಲಯ ಸಂಸ್ಕೃತಿಯ ನಾಡು. ಆರಂಭದಲ್ಲಿ ಧರ್ಮಚರಣೆಗೆ ದೇವಾಲಯಗಳು ನಿರ್ಮಾಣವಾದರೂ ಕ್ರಮೇಣ ಗ್ರಾಮದ ಎಲ್ಲಾ ಚಟುವಟಿಕೆಗಳೂ ದೇವಾಲಯದಲ್ಲಿಯೇ ನಡೆಯಲಾರಂಭಿಸಿದವು. ಆದ್ದರಿಂದ ದೇವಾಲಯಗಳನ್ನು ವಿಸ್ತರಿಸಲಾಯಿತು. ಕರ್ನಾಟಕವನ್ನಾಳಿದ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಗಳು ಹೊಸ ದೇವಾಲಯಗಳನ್ನು ನಿರ್ಮಿಸುವುದರ ಜೊತೆಗೆ ಹಳೆಯ ದೇವಾಲಯಗಳ ಜೀರ್ಣೋದ್ಧಾರ ಮತ್ತು ಅಸ್ತಿತ್ವದಲ್ಲಿದ್ದ ದೇವಾಲಯಗಳನ್ನು ವಿಸ್ತರಿಸುವ ಪದ್ಧತಿಯನ್ನು ಅನುಸರಿಸಿದರು. ಅಂದರೆ ಮೊದಲೇ ಕಟ್ಟಿದ್ದ ದೇವಾಸ್ಥಾನಕ್ಕೆ ಕಲ್ಯಾಣಮಂಟಪ, ಮಹಾರಂಗಮಂಟಪ, ಉತ್ಸವಮಂಟಪಗಳಂತಹ ಕಟ್ಟಡಗಳನ್ನು ನಿರ್ಮಿಸಿ ದೇವಾಲಯದ ಭವ್ಯತೆಯನ್ನು ಹೆಚ್ಚಿಸುವುದು. ಇದು ಆ ಕಾಲದ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿಗೆ ಅನಿವಾರ್ಯವಾಗಿತ್ತು. ಇರುವ ದೇವಾಲಯ ನಿರ್ಮಾಣವನ್ನು ಕೇವಲ ರಾಜಧಾನಿಗೆ ಸೀಮಿತಗೊಳಿಸದೆ ಇಡೀ ಸಾಮ್ರಾಜ್ಯಕ್ಕೆ ವಿಸ್ತರಿಸಿದ್ದರ ಪರಿಣಾಮವಾಗಿ ಆನೇಕ ದೇವಾಲಯಗಳು ನಿರ್ಮಾಣವಾದವು. ದೇವಾಲಯ ಸಂಸ್ಕೃತಿಯನ್ನು ಪೋಷಿಸಿದ ವಿಜಯನಗರವನ್ನಾಳಿದ ತುಳುವ ಅರಸರು ವೈಷ್ಣವದೇವಾಲಯಗಳ ನಿರ್ಮಾಣಕ್ಕೆ ಆದ್ಯತೆ ನೀಡಿದರು. ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲೂಕಿನ ಹಿರಿಯೂರು ಪಟ್ಟಣದ ಶ್ರೀ ವೆಂಕಟರಮಣ ದೇವಾಲಯವನ್ನು ಕುರಿತು ಚರ್ಚಿಸಲಾಗಿದೆ.

ಚಿತ್ರದುರ್ಗದಿಂದ ಆಗ್ನೇಯ ದಿಕ್ಕಿಗೆ ೪೦ ಕಿ.ಮೀ. ಅಂತರದಲ್ಲಿರುವ ಹಿರಿಯೂರನ್ನು ಘನಪುರಿ, ಹೊನ್ನಹಿರಿಯೂರು ಎಂಬ ಪ್ರಾಚೀನ ಹೆಸರಿನಿಂದ ಕರೆಯಲಾಗಿದ್ದು, ಈಗ ಹಿರಿಯೂರು ತಾಲೂಕು ಆಡಳಿತ ಕೇಂದ್ರವಾಗಿದೆ. ವೇದಾವತಿ ನದಿ ತೀರದ ಬಲದಂಡೆಯ ಮೇಲೆ ಬೆಂಗಳೂರು–ಚಿತ್ರದುರ್ಗ ರಾಷ್ಟ್ರೀಯ ಹೆದ್ದಾರಿಯ ಭಾಗದಲ್ಲಿ ಬರುವ ಈ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ೧೬ನೇ ಶತಮಾನದಲ್ಲಿ ಮಾಯಸಂದ್ರದ ಕೇಶವನಾಯಕನಿಂದ ಸ್ಥಾಪಿತವಾದ ಈ ಪ್ರದೇಶವನ್ನು ಆ ವಂಶದ ಮೂರು ತಲೆಮಾರಿನವರು ಆಳಿದ್ದಾರೆ. ಅನಂತರ ಇದು ಬಿಜಾಪುರದ ಸುಲ್ತಾನರ ವಶವಾಗಿದ್ದು ಮುಂದೆ ಚಿತ್ರದುರ್ಗ ಪಾಳೆಯಗಾರರ ಆಳ್ವಿಕೆಗೆ ಒಳಪಟ್ಟು ೧೭೬೨ರಲ್ಲಿ ಹೈದರಾಲಿಯ ವಶವಾಗಿದೆ.[೧]

ಹಿರಿಯೂರಿನ ಹೆಚ್ಚು ಶಾಸನಗಳು ಸದಾಶಿವರಾಯನ ಕಾಲದ ಕ್ರಿ.ಶ. ೧೫೬೭ರ ಶಾಸನದಲ್ಲಿ[೨] (ಹರತಿಯ ಕೆಂಚಪ್ಪನಾಯಕ ಹಾಗೂ ಇನ್ನೊಂದು ಶಾಸನದಲ್ಲಿ ಮಹಾಮಂಡಲೇಶ್ವರನಾದ ರಾಮರಾಜ ಎರದಿಮ್ಮರಾಜಯನ ಅವಧಿಯಲ್ಲಿ ಕಾರ್ಯಕರ್ತನಾದ ಕಾಮಗೇತಿ ತಿಮ್ಮಣ್ಣನಾಯಕ ಆಳುತ್ತಿದ ವಿವರಗಳು ದೊರೆಯುತ್ತವೆ.) ಹಿರಿಯೂರಿನಲ್ಲಿ ವೆಂಕಟರಮಣ, ವೀರಭದ್ರ, ತೇರುಮಲ್ಲೇಶ್ವರ, ಮೊದಲಾದ ದೇವಾಲಯಗಳಿವೆ. ವೆಂಕಟರಮಣ ದೇವಾಲಯವನ್ನು ಕೆಂಚಪ್ಪನಾಯಕನ ಶಾಸನವೊಂದರಲ್ಲಿ ಹಿರಿಯೂರು ತಿರುಮಲದೇವರಿಗೆ ದಾನದತ್ತಿಗಳನ್ನು ನೀಡಿದ ವಿವರವಿದೆ.[೩] ಇದರಿಂದ ಹಿರಿಯೂರು ನಗರದಲ್ಲಿ ವಿಜಯನಗರ ಕಾಲದ ದೇವಾಲಯ ಇದ್ದು ಅದರ ವಾಸ್ತು ಲಕ್ಷಣಗಳು ವಿಜಯನಗರ ಕಾಲವನ್ನೆ ಸೂಚಿಸುತ್ತವೆ. ಈ ಹಿನ್ನೆಲೆಯಲ್ಲಿ ಹಿರಿಯೂರಿನ ಪಟ್ಟಣದ ವಿಜಯನಗರ ಕಾಲದ ವೆಂಕಟರಮಣ ದೇವಾಲಯದ ವಾಸ್ತು ಮತ್ತು ಮೂರ್ತಿ ಶಿಲ್ಪದ ಲಕ್ಷಣಗಳನ್ನು ಕುರಿತು ತಿಳಿಯಲು ಈ ಪ್ರಬಂಧದಲ್ಲಿ ಪ್ರಯತ್ನಿಸಲಾಗಿದೆ.

## ದೇವಾಲಯದ ವೈಶಿಷ್ಟ್ಯತೆ

* ಅಪಾಯದಂಚಿನಲ್ಲಿರುವ ಈ ದೇವಾಲಯದ ವಾಸ್ತು ವೈಶಿಷ್ಟ್ಯತೆ ಮತ್ತು ಅಲ್ಲಿರುವ ಶಿಲ್ಪಗಳನ್ನು ವ್ಯವಸ್ಥಿತವಾಗಿ ಗುರುತಿಸುವುದು.
* ಈ ದೇವಾಲಯದ ರಕ್ಷಣೆಗಾಗಿ ವಿಶೇಷವಾಗಿ ನಿರ್ಮಿಸಿರುವ ರಕ್ಷಣಾ ಮತ್ತು ಆವರಣಾ ಗೋಡೆ (Encloser wall/ Embankment Wall)ಯ ವಿಶೇಷತೆಯನ್ನು ದಾಖಲಿಸುವುದು.
* ದೇವಾಲಯಕ್ಕೆ ಸಂಬಂಧಿಸಿದ ಸ್ಥಳೀಯ ಐತಿಹ್ಯಗಳನ್ನು ಗುರುತಿಸುವುದು.

* ಪಿಎಚ್‌ಡಿ ಸಂಶೋಧನಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಮೊ. ೯೬೮೬೩೫೨೪೨೮




**ವೆಂಕಟರಮಣ ದೇವಾಲಯದ ಪಾರ್ಶ್ವನೋಟ, ಶಿಖರ ಭಾಗ, ಮತ್ತು ಗಜವಕ್ರ ಪ್ರನಾಳ**



**ದೇವಾಲಯದ ಬಾಗಿಲವಾಡ ಹಾಗೂ ನವರಂಗ**

ವಿಜಯನಗರದ ತುಳುವ ದೊರೆಗಳ ಕಾಲದಲ್ಲಿ ನಿರ್ಮಿತವಾದ ಈ ದೇವಾಲಯ ಆರಂಭಿಕ ವಿಜಯನಗರ ಶೈಲಿಯಲ್ಲಿದ್ದು, ಕಲೆ ಮತ್ತು ವಾಸ್ತು ಶಿಲ್ಪದ ದೃಷ್ಟಿಯಿಂದ ಅತ್ಯಂತ ಪ್ರಮುಖವಾಗಿದೆ. ವಿಜಯನಗರ ತುಳುವ ಅರಸರ ಮನೆ ದೈವವಾಗಿದ್ದ ಅಲ್ಲದೆ ಈ ದೇವಾಲಯಕ್ಕೆ ದಾನ ದತ್ತಿಗಳನ್ನು ನೀಡಿದ ಪ್ರತೀತಿ ಇಲ್ಲಿದೆ.

**ದೇವಾಲಯದ ವಾಸ್ತು ವೈಶಿಷ್ಟತೆ:** ದೇವಾಲಯದ ವಿವಿಧ ವಾಸ್ತು ಭಾಗಗಳು ಮತ್ತು ಅವುಗಳ ವೈಶಿಷ್ಟತೆಯನ್ನು ವ್ಯವಸ್ಥಿತವಾಗಿ ಅರಿಯಲು ದೇವಾಲಯದ ಒಳ ಭಾಗದ ಅಲಂಕಾರ ಮತ್ತು ದೇವಾಲಯದ ಹೊರ ಭಾಗದ ಅಲಂಕಾರಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಅದಕ್ಕೆ ಸಂಬಧಿಸಿದ ವಿವರಗಳು ಈ ಮುಂದಿವೆ.

**ದೇವಾಲಯದ ಒಳ ಭಾಗದ ಅಲಂಕಾರ:** ಗರ್ಭಗೃಹ, ಅಂತರಾಳ, ನವರಂಗ, ಹೊಂದಿದೆ. ಗರ್ಭಗೃಹದಲ್ಲಿ ಎತ್ತರವಾದ ಪೀಠದ ಮೇಲೆ ಸಮಭಂಗಿಯಲ್ಲಿರುವ ವೆಂಕಟರಮಣ ಮೂರ್ತಿ ಶಿಲ್ಪವಿದೆ. ಅಂತರಾಳದ ಬಾಗಿಲುವಾಡದಲ್ಲಿ ವೈಷ್ಣವ ದ್ವಾರಪಾಲಕರಿದ್ದು ಲಲಾಟ ಬಿಂಬದಲ್ಲಿ ಬಾಲಕೃಷ್ಣನ ಉಬ್ಬು ಶಿಲ್ಪವಿದೆ, ಅಂತರಾಳದ ಅಕ್ಕಪಕ್ಕದಲ್ಲಿ ಆಂಜನೇಯ ಮತ್ತು ಪದ್ಮವತಿಯರ ಸಣ್ಣಗುಡಿಗಳಿವೆ ಮತ್ತು ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಅವುಗಳನ್ನು ವಿವರಿಸುವುದಾದರೆ, ಪಾದ, ದಂಡ ದಂಡಾಗ್ರ, (ಕಲಶ, ತಾಟಿಕ, ಘಟ, ಮಂಡಿ, ಫಲಕ ವೀರಕಂಠ ಬೋದಿಗೆಯನ್ನು) ಕಾಣಬಹುದಾಗಿದೆ. ಮಿಶ್ರಕ ರೀತಿಯ ಕಂಬಗಳೂ, ಕಮಲದ ವಿತಾನ, ಶಾಖಾಲಂಕೃತ ದ್ವಾರಗಳಿವೆ. ನವರಂಗದ ಉತ್ತರ ದಿಕ್ಕಿಗೆ ಒಂದು ಪ್ರವೇಶದ್ವಾರವಿದೆ.

**ದೇವಾಲಯದ ಹೊರಭಾಗದ ಅಲಂಕಾರ:** ಈ ದೇವಾಲಯದ ಹೊರಭಾಗದಲ್ಲಿ ಗರ್ಭಗೃಹದ ಮುಂಭಾಗವು ಜೀರ್ಣೋದ್ಧಾರವಾಗಿದೆ. ಈ ದೇವಾಲಯದಲ್ಲಿ ಉಪಪೀಠವು ಇರುವುದು ಗಮನಾರ್ಹವಾಗಿದ್ದು, ಉಪಪೀಠ, ಪಾದಬಂಧ, ಅಧಿಷ್ಠಾನದ ಮೇಲೆ ದೇವಾಲಯವಿದೆ. ನಿರಾಲಂಕೃತ ಭಿತ್ತಿ, ಮತ್ತು ಕಪೋತಯುಕ್ತ ನಾಸಿ ಇರುವ ಪ್ರಸ್ತರದ ಭಾಗಗಳಿವೆ. ಇದರ ಮೇಲ್ಕಟ್ಟಡವು (Superstucture) ಸ್ವಲ್ಪ ಹಾಳಾಗಿದ್ದರೂ ಮೂಲರೂಪ ಮರೆಯಾಗಿಲ್ಲ. ಇಟ್ಟಿಗೆ–ಗಾರೆಯಿಂದ ಈ ಭಾಗವನ್ನು ಕಟ್ಟಿದ್ದು, ಇದೊಂದು ದ್ವಿದಳ ದೇವಾಲಯವಾಗಿದೆ. 'ಗೃಹಪಿಂಡಿ'ಯನ್ನೂ ಒಳಗೊಂಡಂತೆ 'ತಲ'ದಲ್ಲಿ ತಲದಲ್ಲಿ ಬಿಂಬಗಳಿದ್ದುದು ಸ್ಪಷ್ಟವಾಗಿದೆ. ಇಟ್ಟಿಗೆ–ಗಾರೆಯಿಂದ ರಚಿಸಲಾಗಿದ್ದು ಶಿಖರವು 'ರುದ್ರಛಂದ' ರೀತಿಯಲ್ಲಿದ್ದು, ಅದು ನಾಸಿ–ಅನುನಾಸಿಗಳಿಂದ ಅಲಂಕೃತಗೊಂಡಿದೆ. ಇವುಗಳ ಹಿನ್ನೆಲೆಯಲ್ಲಿ ಈ ದೇವಾಲಯವನ್ನು ವಿಜಯನಗರ ಕಾಲದ ದೇವಾಲಯ ಎಂದು ಗುರುತಿಸಲಾಗಿದೆ. ನವರಂಗದ ಮುಖ್ಯ ದ್ವಾರದ ಒಳ ಭಿತ್ತಿಯ ಪಕ್ಕದಲ್ಲಿ ಶ್ರೀವೈಷ್ಣವ ಪಂಥದ ೧೨ ಆಳ್ವಾರರ ಶಿಲಾಮೂರ್ತಿಗಳಿವೆ. ಆಳ್ವಾರರು ಶ್ರೀವೈಷ್ಣವ ದೇವಾಲಯಗಳಲ್ಲಿ ಕಂಡುಬರುವ ಶಿಲಾವಿಗ್ರಹಗಳ ಈ ದೇವಾಲಯದ ನವರಂಗದ ಬಲಭಾಗದಲ್ಲಿ ಇವೆ.೪

**ವೆಂಕಟರಮಣ ಮೂರ್ತಿಶಿಲ್ಪ:** ವೆಂಕಟರಮಣ·ದೇವಾಲಯದಲ್ಲಿ ಹಲವು ಮೂರ್ತಿಶಿಲ್ಪಗಳಿದ್ದು ಇವುಗಳನ್ನು ಕಪ್ಪು ಶಿಲೆಯಲ್ಲಿ ಕಂಡರಿಸಲಾಗಿದೆ. ಗರ್ಭಗೃಹದಲ್ಲಿ ಎತ್ತರದ ಪೀಠದ ಮೇಲೆ ವೆಂಕಟರಮಣ ಮೂರು ಅಡಿ ಎತ್ತರದ ಮೂರ್ತಿಶಿಲ್ಪವಿದೆ ಮತ್ತು ಮೂರ್ತಿಶಿಲ್ಪದ ಹಿಂಬದಿಯಲ್ಲಿ ಪ್ರಭಾವಳಿ ಇದೆ. ವೆಂಕಟರಮಣ ಸಮಭಂಗಿಯಲ್ಲಿದ್ದು ನಾಲ್ಕು ಕೈಗಳನ್ನು ಹೊಂದಿದ್ದು ಕೀರಿಟಮಕುಟಧಾರಿಯಾಗಿರುವನು ಹಿಂಬದಿಯ ಬಲಗೈಯಲ್ಲಿ ಚಕ್ರ ಮತ್ತು ಮತ್ತೊಂದು ಕೈಯನ್ನು ವರದ ಮುದ್ರೆಯಲ್ಲಿರಿಸಿದ್ದು ಎಡಗೈಯಲ್ಲಿ ಶಂಖ ಮತ್ತು ಗದೆಯನ್ನು ಹಿಡಿದಿರುವನು ಕಿವಿಯಲ್ಲಿ ಪತ್ರಕುಂಡಲ, ಕೊರಳಲ್ಲಿ





**ನವರಂಗದ ಕಂಬ ಮತ್ತು ವೃತ್ತಾಕಾರದ ಛತ್ತು**

ಕಂಠಹಾರ, ಹಾರ ನೀಳಾಹಾರ, ಉದರಬಂದ, ಯಜ್ಞೋಪವಿತ ಮತ್ತು ಕೈಯಲ್ಲಿ ಕೈಗಡಗ ಕಾಲ್ಗಡಗ, ತೊಳಲ್ಲಿ ಬಾಹುವಾಳ, ಭುಜದಲ್ಲಿ ಭುಜಬಂಧಿ ಮತ್ತು ಸೊಂಟದಿಂದ ಪಾದದವರೆಗೂ ನೀಳವಾದ ನೆರಗೆಯುಳ್ಳ ಧೋತಿಯನ್ನು ಧರಿಸಿರುವನು.

ಒಟ್ಟಾರೆಯಾಗಿ ಈ ವೆಂಕಟರಮಣ ದೇವಾಲಯವು ಹಿರಿಯೂರಿನಲ್ಲಿರುವ ವೈಷ್ಣವದೇವಾಲಯಗಳಲ್ಲಿ ತನ್ನದೇ ಆದ ಪ್ರಾಮುಖ್ಯತೆಯನ್ನು ಹಾಗೂ ಭಿನ್ನತೆಯನ್ನು ಒಳಗೊಂಡಿದೆ. ದೇವಾಲಯದ ಸಂರಕ್ಷಣಾ ಕಾರ್ಯಗಳು ಆದಷ್ಟು ಶೀಘ್ರವಾಗಿ ಪೂರ್ಣಗೊಂಡು ಚಾರಿತ್ರಿಕ ಆಕರವಾದ ಈ ದೇವಾಲಯವನ್ನು ಮುಂದಿನ ಪೀಳಿಗೆಗೆ ತುರ್ತಾಗಿ ಉಳಿಸಿಕೊಡಬೇಕಾದ ಅವಶ್ಯಕತೆ.



## ಅಡಿಟಿಪ್ಪಣಿಗಳು

೧. ನಾಯಕ್ ಡಿ.ಬಿ., (ಸಂ), ೨೦೧೭, ಕರ್ನಾಟಕ ಗ್ರಾಮ ಚರಿತ್ರೆ ಕೋಶ ಚಿತ್ರದುರ್ಗ ಜಿಲ್ಲೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಬೆಂಗಳೂರು, ಪುಟ ೩೬೨.

೨. ಎಪಿಗ್ರಾಫಿಯ ಕರ್ನಾಟಕ ಶಾಸನ ಸಂಪುಟ ೧೧, ಶಾಸನ ಸಂ.೪೨, ಪುಟ ೩೦೩

೩. ಅಪರ್ಣ ಕೂ.ಸ., (ಸಂ), 'ಚಿತ್ರದುರ್ಗ ಜಿಲ್ಲೆಯ ವಿಜಯಗರ ಕಾಲದ ದೇವಾಲಯಗಳ ವಾಸ್ತು ಶಿಲ್ಪ ಮತು ಮೂರ್ತಿಶಿಲ್ಪ' ೨೦೦೫, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಪ್ರ.ಸಂ), ಗೋಪಾಲ್ ಆರ್., ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.

೪. ಕ್ಷೇತ್ರಕಾರ್ಯದ ಮಾಹಿತಿ.

## ೬೩

# ರಾಮದುರ್ಗ ತಾಲೂಕಿನ ದೇವಿ ದೇವಾಲಯಗಳು

**ಶ್ರೀಧರ ಕೆ. ಕಾಂಬಳೆ***

ಕರ್ನಾಟಕದ ಇತಿಹಾಸದಲ್ಲಿ ಬೆಳಗಾವಿ ಜಿಲ್ಲೆ ವಿಶಿಷ್ಟವಾದ ಸ್ಥಾನವನ್ನು ಹೊಂದಿದೆ. ಈ ಜಿಲ್ಲೆ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಹೊಯ್ಸಳರು, ವಿಜಯನಗರದ ಅರಸರು, ಆದಿಲ್ ಷಾಹಿಗಳು, ಮೊಗಲ್‌ರು, ಮರಾಠರು, ಸಂಸ್ಥಾನಗಳು ಮುಂತಾದ ಅರಸು ಮನೆತನಗಳು ಆಡಳಿತದ ವ್ಯಾಪ್ತಿಗೊಳಪಟ್ಟಿದೆ. ಹೀಗಾಗಿ ಈ ಅರಸು ಮನೆತನಗಳು ತಮ್ಮ ಆಡಳಿತಾವಧಿಯಲ್ಲಿ ಬೆಳಗಾವಿ ಜಿಲ್ಲೆಗೆ ತಮ್ಮದೇ ಆದ ಸಾಂಸ್ಕೃತಿಕ ಕೊಡುಗೆಯನ್ನು ನೀಡಿವೆ. ಮುಧೋಳ, ಬದಾಮಿ, ನರಗುಂದ, ಸವದತ್ತಿ ಮತ್ತು ಗೋಕಾಕ ತಾಲೂಕಗಳ ಸುತ್ತವರೆದಿವೆ. ಈ ತಾಲೂಕಿನ ದಕ್ಷಿಣ ದಿಕ್ಕಿನಲ್ಲಿ ಪಶ್ಚಿಮದಿಂದ ಪೂರ್ವಕ್ಕೆ 'ಮಲಪ್ರಭಾ' ನದಿ ಹರಿಯುತ್ತದೆ. ಇದು ರಾಮದುರ್ಗದ ಭೌಗೋಳಿಕ ಚಿತ್ರಣವಾಗಿದೆ.

ರಾಮದುರ್ಗ ಪ್ರದೇಶದಲ್ಲಿ ಕಂಡುಬರುವ ದೇವಾಲಯಗಳನ್ನು ಪರಿಶೀಲಿಸಿ ಅಧ್ಯಯನ ಮಾಡಿದಾಗ ಅವುಗಳಲ್ಲಿ ಶೈವ ದೇವಾಲಯಗಳ ಸಂಖ್ಯೆ ಅಧಿಕವಾಗಿರುವುದು ವಿಶೇಷವಾಗಿ ಗಮನಕ್ಕೆ ಬರುತ್ತದೆ. ಒಂದೆರೆಡು ಜೈನ ಬಸದಿಗಳು ಕಂಡುಬಂದರೂ ಕೂಡ ಅವು ಕಾಲಾಂತರದಲ್ಲಿ ಶೈವ ಮತ್ತು ವೈಷ್ಣವ ಮತಕ್ಕೆ ಪರಿವರ್ತಿತವಾಗಿರುವುದನ್ನು ಕಾಣಬಹುದು. ರಾಮದುರ್ಗ ತಾಲೂಕಿನಲ್ಲಿ ವಿವಿಧ ಅರಸು ಮನೆತನಗಳ ಅಧಿಕಾರವಧಿಯಲ್ಲಿ ನಿರ್ಮಾಣಗೊಂಡಿದ್ದು, ಅವುಗಳಲ್ಲಿ ಕೆಲವು ದೇವಾಲಯಗಳು ಕಾಲದಿಂದ ಕಾಲಕ್ಕೆ ಜೀರ್ಣೋದ್ಧಾರಗೊಂಡು ಸುಸ್ಥಿತಿಯಲ್ಲಿವೆ. ಪ್ರಸ್ತುತ ಲೇಖನದಲ್ಲಿ ಶಾಕ್ತ ದೇವಾಲಯಗಳಿಗೆ ಸಂಬಂಧಿಸಿದ ಚಾರಿತ್ರಿಕ ಅಂಶಗಳ ಕುರಿತು ವಿವರಿಸಲಾಗಿದೆ.

### ಶಾಕ್ತ ಮತದ ಹಿನ್ನೆಲೆ

ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದಂತಹ ಧಾರ್ಮಿಕ ಪಂಥಗಳಲ್ಲಿ ಶಾಕ್ತಪಂಥ ಕೂಡ ಒಂದಾಗಿದೆ. "ಶಾಕ್ತ" ಎಂದರೆ ಶಕ್ತಿಯ ಒಂದು ಆರಾಧನೆ. ಮಾತೃದೇವತೆಯ ಪೂಜೆ ವೈದಿಕ ಯಾಗಕ್ಕಿಂತಲೂ ಬಹಳ ಹಿಂದಿನಿಂದ ನಡೆದುಕೊಂಡು ಬಂದ ಪದ್ಧತಿಯಾಗಿದೆ. ಆನಪದರಿಗೆ ಪುರಾತನ ಕಾಲದಿಂದಲೂ ಮಾತೃ ದೇವತೆಗೆ ಶಕ್ತಿವಾದದ ಹಿನ್ನೆಲೆಯಲ್ಲಿ ಸ್ತ್ರೀಯನ್ನೂ (ಮಾತೃಗಳು) ದೇವತಾಸ್ವರೂಪರೆಂದು ನೂರಾರು ಹೆಸರುಗಳಿಂದ ಕರೆದರು.

ಅವುಗಳಿಗೆ ಮೂಲ ಒಬ್ಬಳೇ ದೇವಿಯೆಂದು ಹೇಳಲಾಗಿದೆ. ದೇವಿಯನ್ನು ದುರ್ಗಾ, ಮಹಿಷಾಸುರ ಮರ್ದಿನಿ, ಭದ್ರಕಾಳಿ, ಚಂಡಿಕಾ, ನವದುರ್ಗಿ, ಶ್ರೀ ಚಕ್ರದೇವಿ, ಮಹಾಕಾಳಿ, ಉಮಾಪಾರ್ವತಿ, ಭೈರವಿ, ಅಂಬಾ, ಅಂಬಿಕೆ, ಗೌರಿ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಶಿವನ ಜೊತೆಗಿರುವ ದೇವಿಯನ್ನು ಶೈವರು ದೇವಿ ಎಂದೂ ವಿಷ್ಣುವಿನ ಜೊತೆಗೆ ಲಕ್ಷ್ಮೀ ಇರುವಾಗ ವೈಷ್ಣವರು ಲಕ್ಷ್ಮೀದೇವಿಯೆಂದೂ ಪೂಜಿಸುತ್ತಾರೆ.

ಭಾರತದಲ್ಲಿ ಪುರುಷ ಪ್ರಧಾನ ದೇವತೆಗಳ ದೇವಾಲಯಗಳಿಗೆ ಹೆಚ್ಚು ಪ್ರಾಧಾನ್ಯತೆ ನೀಡಿದ್ದರಿಂದ ಹೆಣ್ಣು ದೇವತೆಗಳ ದೇವಾಲಯಗಳ ನಿರ್ಮಾಣ ಅಲ್ಪ ಪ್ರಮಾಣದಲ್ಲಿ ಕಂಡು ಬರುತ್ತದೆ. ಶಿಲ್ಪದಲ್ಲಿ ಸಮಾನ ಅವಕಾಶ ಪಡೆದಿದ್ದರೂ ದೇವಾಲಯ ನಿರ್ಮಾಣದಲ್ಲಿ ಮಾತ್ರ ಶಾಕ್ತ ದೇವಾಲಯಗಳ ನಿರ್ಮಾಣವನ್ನು ಕಡೆಗಣಿಸಲಾಯಿತು. ಇಂತಹ ಕೆಲವು ದೇವಾಲಯಗಳು ರಾಮದುರ್ಗ ಪರಿಸರದಲ್ಲಿ ನಿರ್ಮಾಣವಾಗಿರುವುದು ಕಂಡುಬರುತ್ತದೆ.

### ಶಬರಿ ದೇವಾಲಯ, (ಸುರೇಬಾನ)

ಸುರೇಬಾನಿನಿಂದ ಎರಡು ಕಿ.ಮೀ. ದೂರದಲ್ಲಿ ಶಬರಿಕೊಳ್ಳವು ಇದೆ. ಈ ಪ್ರದೇಶದಲ್ಲಿದ್ದ ಬೇಡರ ಶಬರಿಯು ಶ್ರೀರಾಮನಿಗೆ ತಿನ್ನಲು ಬೋರೆಹಣ್ಣುಗಳನ್ನು, ಕೊಟ್ಟಳು ಎಂಬ ಪೌರಾಣಿಕ ಸಂಗತಿ ಪ್ರಚುರದಲ್ಲಿದೆ. ಇಲ್ಲಿರುವ ಎರಡು

* ಪಿಎಚ್‌ಡಿ ಸಂಶೋಧನಾರ್ಥಿ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಕನ್ನಡ ವಿವಿ, ಹಂಪಿ, ಮೊ. ೭೨೫೯೫೯೧೮೬೮೧

ಬೆಟ್ಟಗಳ ಸಂಧಿಸುವಿಕೆ ಸ್ಥಳದಲ್ಲಿ ಒಂದು ಕೊಳವಿದ್ದು, ಇದಕ್ಕೆ ಸೂರವ್ವನಕೊಳ್ಳ ಎಂದು ಕರೆಯುತ್ತಾರೆ. ವಾಸ್ತುಶಾಸ್ತ್ರ ಗ್ರಂಥದಲ್ಲಿ ಉಲ್ಲೇಖಿತವಾದ ಬಂಡಿಯ ಭಾವಣಿಯ ಆಕಾರದ 'ಶಾಲಾಕಾರ' ದೇಗುಲಕ್ಕೆ ಇದು ಉತ್ತಮ ನಿದರ್ಶನವಾಗಿದೆ. ದೇವಿಯ ದೇಗುಲಗಳು ಮಾತ್ರ ಈ ಆಕಾರದ ನಿರ್ಮಾಣವಾಗುತ್ತಿದ್ದುದನ್ನು ಇಲ್ಲಿ ಗಮನಿಸಬಹುದು. ಆಯಾತಾಕಾರದ ವಿನ್ಯಾಸದಲ್ಲಿರುವ ಈ ದೇವಾಲಯದ ಗರ್ಭಗೃಹ, ವಿಸ್ತಾರವಾದ ಮತ್ತು ಚೌಕಾಕಾರದ ಕಂಬಗಳಿಂದ ಕೂಡಿದ ನವರಂಗ, ತಳವಿನ್ಯಾಸ ಮತ್ತು ಬಾಹ್ಯ ವಿವರಗಳು ಈ ಶಬರಿ ದೇವಾಲಯವನ್ನು ಅಪರೂಪದ್ದಾಗಿವೆ.

ಈ ದೇವಾಲಯವು ಉತ್ತರಾಭಿಮುಖವಾಗಿದ್ದು, ಸು. ಕ್ರಿ.ಶ. ೯ರಿಂದ ಕ್ರಿ.ಶ. ೧೨ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ಗರ್ಭಗೃಹದಲ್ಲಿ ಸುಮಾರು ಎರಡು ಅಡಿ ಎತ್ತರ ಪೀಠದ ಮೇಲೆ ಶಬರಿದೇವಿಯ ಮೂರ್ತಿಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದ್ದು, ಇದರ ಸುತ್ತಲೂ ಪ್ರಭಾವಳಿ ಕೆತ್ತಲಾಗಿದೆ. ಗರ್ಭಗೃಹದ ಭುವನೇಶ್ವರಿ ಭಾಗದಲ್ಲಿ ಅರ್ಧಕೋನಾಕೃತಿಯ ಕೆತ್ತನೆಯ ನಡುವೆ ಪದ್ಮದ ಉಬ್ಬುಕೆತ್ತನೆಯ ಅಲಂಕಾರವಿದೆ. ದ್ವಾರಬಂಧವು ಪ್ರಿಶಾಖಾ ರೀತಿಯದ್ದಾಗಿದೆ. ಕೆಳಭಾಗದಲ್ಲಿ ಮೂರ್ತಿ ಶಿಲ್ಪಗಳು ಕಂಡುಬರುತ್ತವೆ. ಲಲಾಟ ಯಾವುದೇ ಶಿಲ್ಪ ಕಂಡುಬರುವುದಿಲ್ಲ. ಅಂತರಾಳವು ಚೌಕಾಕಾರವಾಗಿದ್ದು ಇಕ್ಕೆಲದಲ್ಲಿ ಎರಡು ಭದ್ರಕ ಕಂಬಗಳಿವೆ. ಛತ್ತಿನಲ್ಲಿ ಪದ್ಮ ಮಂಡಲದ ಅಲಂಕಾರವಿದೆ.

ಅಂತರಾಳಕ್ಕೆ ಹೊಂದಿಕೊಂಡು ನವರಂಗವಿದ್ದು ಮಧ್ಯದಲ್ಲಿ ನಾಲ್ಕು ಸ್ತಂಭಗಳಿವೆ. ಕಂಬಗಳು ಕಲ್ಯಾಣ ಚಾಲುಕ್ಯ ವಾಸ್ತುಶೈಲಿಯನ್ನು ಹೋಲುತ್ತದೆ. ಮೇಲ್ಭಾಗದ ಛತ್ತಿನಲ್ಲಿ ಪದ್ಮದ ಅಲಂಕಾರಗಳಿವೆ. ನವರಂಗದ ಗೋಡೆಗಳಲ್ಲಿ ಅರ್ಧಕಂಬಗಳು ಕಂಡುಬರುತ್ತವೆ. ಇಕ್ಕೆಲದಲ್ಲಿ ಎರಡು ಜಾಲಾಂಧ್ರಗಳಿವೆ. ದ್ವಾರವು ನಿರಾಲಂಕಾರಿಯಾಗಿದೆ. ಅಕ್ಕಪಕ್ಕದಲ್ಲಿ ಮೂರ್ತಿಶಿಲ್ಪಗಳು ಕಂಡುಬರುತ್ತವೆ.

ನವರಂಗಕ್ಕೆ ಹೊಂದಿಕೊಂಡು ತೆರೆದ ಸಭಾಮಂಟಪವಿದ್ದು ಇದರಲ್ಲಿ ಸ್ತಂಭಗಳು ವಿವಿಧ ಮಾದರಿಯಲ್ಲಿವೆ. ದೇವಾಲಯದ ಹೊರಭಾಗದಲ್ಲಿ ಕಕ್ಷಾಸನವಿದ್ದು, ಅಧಿಷ್ಠಾನವು ಖುರಕ, ಪದ್ಮ, ಆಂತರಿಕ ವೃತ್ತ ಕುಮದ ಮತ್ತು ಕಪೋತಗಳಿಂದ ಕೂಡಿದೆ. ಭಿತ್ತಿಯ ಸುತ್ತಲೂ ಕುಡ್ಯ ಸ್ತಂಭಗಳಿವೆ. ಶಿಖರವು ದಾಕ್ಷಿಣಾತ್ಯ ಶೈಲಿಯಲ್ಲಿದ್ದು, ತ್ರಿತಳ ಮಹಡಿಯನ್ನು ಹೊಂದಿದೆ. ಶಿಖರವು ಶಾಲಾ ಮಾದರಿಯಲ್ಲಿದೆ. ಶಿಲ್ಪದ ಮೇಲ್ಭಾಗದಲ್ಲಿ ಸ್ತೂಪಿ, ಕಲಶವಿದೆ. ಶಬರಿ ದೇವಾಲಯದಲ್ಲಿರುವ ಹಿಂಭಾಗದಲ್ಲಿ ಚಿಕ್ಕದಾದ ರಾಮನಗುಡಿ ಗರ್ಭಗೃಹದಲ್ಲಿ ಶಿವಲಿಂಗವಿದೆ. ಮುಂಭಾಗದಲ್ಲಿ ಗಣೇಶ ಮತ್ತು ಸ್ತ್ರೀದೇವತೆಯ ಮೂರ್ತಿಗಳಿವೆ.

ಶಬರಿ ದೇವಾಲಯದ ಹೊರಗೋಡೆಯೋ ಅಥವಾ ಒಳಗೋಡೆಯೋ? ಗೋಡೆಯ ಮೇಲೆ ಒಂದು ಶಾಸನವಿದ್ದು, ಕ್ರಿ.ಶ. ೧೧೧೯ರ ಕಲ್ಯಾಣಿ ಚಾಲುಕ್ಯರ ದೊರೆ ಆರನೆ ವಿಕ್ರಮಾದಿತ್ಯನ ಶಾಸನದ ಲಿಪಿಯ ನಾಗರಿಪಿಲಿ ಸಂಸ್ಕೃತ ಭಾಷೆಯಲ್ಲಿದೆ. ಈ ಶಾಸನವು ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ ಸಂಪುಟ ೨೦ ರಲ್ಲಿ ಪ್ರಕಟಗೊಂಡಿದೆ.

ಇದರಲ್ಲಿ ಶಬರಿ ದೇವರ ರಥೋತ್ಸವವನ್ನು ಆರಂಭಿಸಿದ ಉಲ್ಲೇಖವಿದೆ. ಈ ಶಾಸನದ ಕಾಲ ಶಕ ೧೦೩೧ ಶುಕ್ಲ ವೈಶಾಖ ಇತ್ಯಾದಿ ವಿವರವಿದೆ. ಇದರಿಂದ ಇದರ ಕಾಲಮಾನ ಕ್ರಿಮಶಮ ೧೧೧೯ ಕ್ಕೆ ಸಮವಾಗುತ್ತದೆ. ಹನ್ನೆರಡನೆ ಶತಮಾನದ ಆರಂಭದಲ್ಲಿಯೇ ಶಬರಿ ದೇವರಿಗೆ ರಥೋತ್ಸವ, ಉತ್ಸವಗಳ ಮೊದಲಾದ ಆಚರಣೆಗಳು ನಡೆಯುತ್ತಿದ್ದವೆಂದು ಈ ಶಾಸನದಿಂದ ತಿಳಿಯುತ್ತದೆ.

**ಪಾರ್ವತೇಶ್ವರ ದೇವಾಲಯ, ಕಟಕೋಳ**

ಕಟಕೋಳವು ಕೊಲ್ಹಾಪುರ ಮಹಾರಾಜರ ಕಾಲದಲ್ಲಿ "ಮಹಲ್" ಆಗಿತ್ತು. ಇದನ್ನು ಲಿಂಗಾಯತ ದೇಸಾಯರೇ ಆಳುತ್ತಿದ್ದರು.

ಈ ದೇವಾಯಲವು ಕಟಕೋಳ ಭಾಗದಲ್ಲಿ ಗ್ರಾಮದ ಮಧ್ಯ ಕಂಡುಬರುತ್ತದೆ. ಪೂರ್ವಾಭಿಮುಖವಾದ ದೇವಾಲಯವನ್ನು ಕೆಂಪು ಮರಳು ಶಿಲೆಯಿಂದ ಕ್ರಿ.ಶ. ೧೧-೧೨ನೇ ಶತಮಾನದಲ್ಲಿ ನಿರ್ಮಿಸಲಾಗಿದೆ ಪಾರ್ವತೇಶ್ವರ ದೇವಾಲಯದ ಚೌಕಾಕಾರದ ಗರ್ಭಗೃಹದ ಮಧ್ಯದಲ್ಲಿ ಈಶ್ವರಲಿಂಗವಿದ್ದು, ಗೋಡೆಯ ಭಾಗದಲ್ಲಿ ನಾಲ್ಕು ಅರ್ಧಗಂಭಗಳಿವೆ. ಭುವನೇಶ್ವರಿಯಲ್ಲಿ ಪದ್ಮದ ಅಲಂಕಾರವಿದೆ. ದ್ವಾರಬಂಧವು ಅಲಂಕೃತವಾಗಿದ್ದು ಸ್ತಂಭಶಾಖೆ ಪ್ರಧಾನವಾಗಿದೆ. ಲಲಾಟ ಪಟ್ಟಿಕೆಯಲ್ಲಿ ಗಣೇಶನ ವಿಗ್ರಹವಿದೆ. ಗರ್ಭಗೃಹಕ್ಕೆ ಹೊಂದಿಕೊಂಡು ಅಂತರಾಳವಿದ್ದು ನಾಲ್ಕು ಮೂಲೆಗಳಲ್ಲಿ ಅರ್ಧಗಂಭಗಳಿವೆ. ವಿತಾನದಲ್ಲಿ ಪದ್ಮದ ಅಲಂಕಾರವಿದೆ. ದ್ವಾರಬಂಧವು ಅಲಂಕೃತವಾಗಿದ್ದು ಸ್ತಂಭ ಶಾಖೆ ಪ್ರಧಾನವಾಗಿದೆ. ಲಲಾಟದಲ್ಲಿ ಗಣೇಶನ ಶಿಲ್ಪವಿದೆ. ಅಂತರಾಳಕ್ಕೆ ಹೊಂದಿಕೊಂಡು ನವರಂಗವಿದ್ದು, ಮಧ್ಯದಲ್ಲಿ ನಾಲ್ಕು ಸ್ತಂಭ ಶಾಖೆ ಪ್ರಧಾನವಾಗಿದೆ. ಲಲಾಟದಲ್ಲಿ



ಶಬರಿ ದೇವಾಲಯ, ಸುರೇಬಾನ



ಪಾರ್ವತೇಶ್ವರ ದೇವಾಲಯ, ಕಟಕೋಳ



ಶಬರಿದೇವಿ ಮೂರ್ತಿಶಿಲ್ಪ



ಬೋರಾದೇವಿ ಮೂರ್ತಿಶಿಲ್ಪ

ಗಣೇಶನ ಶಿಲ್ಪವಿದೆ. ಅಂತರಾಳಕ್ಕೆ ಹೊಂದಿಕೊಂಡು ನವರಂಗವಿದ್ದು, ಮಧ್ಯದಲ್ಲಿ ನಾಲ್ಕು ಸ್ತಂಭಗಳು ಅಲಂಕೃತವಾಗಿವೆ. ಅವು ಚೌಕಾರವಾಗಿದ್ದು ಅದರ ಮಧ್ಯದಲ್ಲಿ ನಂದಿ ವಿಗ್ರಹವಿದೆ. ಮೇಲ್ಭಾಗದಲ್ಲಿ ಅಷ್ಟಕೋನಾಕೃತಿಯ ಮಧ್ಯದಲ್ಲಿ ಪದ್ಮಮಂಡಲದ ಅಲಂಕಾರವಿದೆ. ನಾಲ್ಕು ಗೂಡಕೋಷ್ಟಗಳಿದ್ದು ಅವುಗಳು ಬರಿದಾಗಿವೆ. ದೇವಾಲಯದ ಹೊರ ವಾಸ್ತು ವಿವರ ಸರಳವಾಗಿದ್ದು, ಅಧಿಷ್ಠಾನ ಮಣ್ಣಿನಲ್ಲಿ ಹೂತುಗೊಂಡಿದೆ. ಭಿತ್ತಿ ಸರಳವಾವಾಗಿದೆ. ಶಿಖರದ ಅರ್ಧಭಾಗ ಉಳಿದುಕೊಂಡಿದ್ದು ಇನ್ನಾರ್ಧಭಾಗ ನಾಶವಾಗಿದ್ದು, ದೇವಾಲಯದ ಹೊರ ಭಾಗ ಜೀರ್ಣಾವಸ್ಥೆಯಲ್ಲಿದೆ.

## ಬೋರಾದೇವಿ ದೇವಾಲಯ, ಮೇಗುಂಡೇಶ್ವರಕೊಳ್ಳ

ರಾಮದುರ್ಗದಿಂದ ಮೂರು ಕಿ.ಮೀ. ದೂರದಲ್ಲಿ ನಿಸರ್ಗ ರಮಣೀಯವಾದ ಮೇಗುಂಡಿಕೊಳ್ಳ ಗ್ರಾಮವಿದೆ. ಪೂರ್ವ ದಿಕ್ಕಿನ ಗುಡ್ಡದ ನಡುವೆ ನಾಲಿಗೆ ಪಡೆಯು ಮೋಹಕವಾಗಿ ಕಾಣುತ್ತದೆ. ದೇವಾಲಯವು ಪೂರ್ವಾಭಿಮುಖವಾಗಿದ್ದು ಕೆಂಪು ಮರಳು ಶಿಲೆಯಲ್ಲಿ ಕ್ರಿ.ಶ. ೧೨ನೇ ಶತಮಾನದಲ್ಲಿ ನಿರ್ಮಿಸಲಾಗಿದೆ. ಮೇಗುಂಡಿಕೊಳ್ಳದಲ್ಲಿನ ಮೇಗುಂಡೇಶ್ವರ ದೇವಾಲಯದ ಪಕ್ಕದಲ್ಲಿ ಬೋರಾದೇವಿಯ ದೇವಾಲಯವಿದೆ. ಚೌಕಾಕಾರದ ಗರ್ಭಗೃಹದ ಮಧ್ಯದಲ್ಲಿ ೨ ಅಡಿ ಎತ್ತರದ ಪೀಠದ ಮೇಲೆ ಬೋರಮ್ಮ ದೇವಿಯ ಶಿಲ್ಪವಿದೆ. ಗರ್ಭಗೃಹದ ಗೋಡೆಯಲ್ಲಿ ನಾಲ್ಕು ಅರ್ಧಗಂಭಗಳಿವೆ. ವಿತಾನದಲ್ಲಿ ಪದ್ಮಮಂಡಲದ ಅಲಂಕಾರವಿದ್ದು, ದ್ವಾರಬಂಧವು ನಾಲ್ಕು ಶಾಖೆಗಳನ್ನು ಹೊಂದಿದ್ದು ಸರಳವಾಗಿದೆ. ಲಲಾಟ ಪಟ್ಟಿಕೆಯಲ್ಲಿ ಪದ್ಮದ ಅಲಂಕಾರವಿದೆ. ಈ ದೇವಾಲಯ ಸ್ಥಳೀಯರಿಂದ ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ.

ಗರ್ಭಗೃಹಕ್ಕೆ ಹೊಂದಿಕೊಂಡಂತೆ ಅಂತರಾಳದಲ್ಲಿ ಅರ್ಧಗಂಭಗಳು ಸಹ ಕಂಡುಬರುತ್ತವೆ. ದ್ವಾರಬಂಧವು ನಾಲ್ಕು

ಶಾಖೆಗಳನ್ನು ಹೊಂದಿದ್ದು ಲಲಾಟಕಂಭ ಸರಳವಾಗಿದೆ. ಅಂತರಾಳಕ್ಕೆ ಹೊಂದಿಕೊಂಡಂತೆ ನವರಂಗವಿದ್ದು ಮಧ್ಯದಲ್ಲಿ ನಾಲ್ಕು ಅಲಂಕೃತ ಸ್ತಂಭಗಳಿವೆ. ವಿತಾನದ ಮಧ್ಯದಲ್ಲಿ ಪದ್ಮದ ಅಲಂಕಾರವಿದೆ. ಸುತ್ತಲೂ ಕಕ್ಷಾಸನವಿದ್ದು ಪೂರ್ವ ದಕ್ಷಿಣೋತ್ತರವಾಗಿ ಪ್ರವೇಶಿಸಲು ಸೋಪಾನಗಳನ್ನು ಮಾಡಲಾಗಿದೆ. ಈ ದೇವಾಲಯದ ಅಧಿಷ್ಠಾನ ಮತ್ತು ಭಿತ್ತಿ ಸರಳವಾಗಿದ್ದು ಹೊರಭಿತ್ತಿಯ ಯಾವುದೇ ಅಲಂಕಾರಿಕ ಕೆತ್ತನೆಗಳಿಲ್ಲ.

## ಸುಗ್ಗಲೇಶ್ವರ ದೇವಾಲಯ, ಕಿಲ್ಲಾ ತೊರಗಲ್

ರಾಮದುರ್ಗದಿಂದ ೧೦ ಕಿ.ಮೀ. ದೂರದ ಕೋಟೆಯಲ್ಲಿರುವ ಸಮೂಹ ದೇವಾಲಯಗಳಲ್ಲಿ ಈ ಸುಗ್ಗಲೇಶ್ವರ ದೇವಿಯ ದೇವಾಲಯ ಕೂಡ ಒಂದಾಗಿದೆ. ಈ ದೇವಾಲಯ ಉತ್ತರಾಭಿಮುಖವಾಗಿದ್ದು, ಕೆಂಪು ಮರಳು ಶಿಲೆಯನ್ನು ಬಳಸಿ ಕ್ರಿ.ಶ.ಸು. ೧೨ನೇ ಶತಮಾನದಲ್ಲಿ ನಿರ್ಮಿಸಲಾಗಿದೆ.

ಕ್ರಿ.ಶ. ೧೧೮೮ ಕಲಚೂರಿ ಅರಸ ರಾಯಮುರಾರಿ ಸೋವಿದೇವನ ಆಳ್ವಿಕೆಯ ಕಾಲದಲ್ಲಿ ಸಾಮಂತ ಅರಸ ಭೂತೆಯದೇವನ ಕಾಲದಲ್ಲಿ ಅವನ ವಂಶಜರಾದ ಬಮ್ಮದೇವರಸನ ಮಡದಿ ಸಗ್ಗಲದೇವಿ ಈ ದೇವಾಲಯವನ್ನು ಕಟ್ಟಿದ್ದಾಳೆ. ಸುಗ್ಗಲದೇವಿ ಶ್ರೀ ಸುಗ್ಗಲೇಶ್ವರ ದೇವರಿಗೆ ಉತ್ರಾಯಣ ಸಂಕ್ರಮಣ ವ್ಯತಿಪಾತ ಎಂದು ಬಮ್ಮದೇವರಸರ ಕೈಯಿಂದ ದೇವಾಲಯಕ್ಕೆ ಧೂಪ ದ್ವೀಪ ನೈವೇದ್ಯ ತಾಂಬುಲಕ್ಕೆ ಎರಡು ಮತ್ತರು ಭೂಮಿ ೪೫೦ ಕಂಬ ಭೂಮಿಯನ್ನು ದಾನ ನೀಡಿರುವುದು ಶಾಸನದಲ್ಲಿ ದಾಖಲಾಗಿದೆ..

ಗರ್ಭಗೃಹ ಚೌಕಾಕಾರವಾಗಿದ್ದು ಮಧ್ಯದಲ್ಲಿ ಶಿವಲಿಂಗವಿದೆ. ಗರ್ಭಗೃಹದ ವಿತಾನದಲ್ಲಿ ಪದ್ಮದ ಅಲಂಕಾರವಿದ್ದು, ದ್ವಾರಬಂಧದ ಶಾಖೆಗಳಲ್ಲಿ ಸ್ತಂಭ ಶಾಖೆಯ ರಚನೆ ಕೆತ್ತನೆ ಪ್ರಧಾನವಾಗಿದೆ. ಲಲಾಟ ಬಿಂಬದಲ್ಲಿ ಯಾವುದೇ ಶಿಲ್ಪ ಕಂಡುಬರುವುದಿಲ್ಲ. ಅದರ ಮೇಲೆ ಮೂರು ರೇಖಾನಾಗರ ಶೈಲಿಯ ಪ್ರತಿರೂಪಗಳು ಕಂಡುಬರುತ್ತವೆ. ಗರ್ಭಗೃಹಕ್ಕೆ ಹೊಂದಿಕೊಂಡಿರುವ ಚೌಕಾಕಾರವಾಗಿದ್ದು, ಅಂತರಾಳದ  ಬಾಗಿಲುವಾಡದಲಲಾಟ ಬಿಂಬದಲ್ಲಿ ಗಣೇಶನ ಶಿಲ್ಪವಿದೆ. ಅಂತರಾಳದ ಇಕ್ಕೆಲಗಳಲ್ಲಿ ಎರಡು ದೇವಕೊಷ್ಟಕಗಳಿದ್ದು, ಅವುಗಳಲ್ಲಿ ಯಾವುದೇ ಮೂರ್ತಿಶಿಲ್ಪಗಳು ಕಂಡುಬರುವುದಿಲ್ಲ.

ನವರಂಗದಲ್ಲಿ ನಾಲ್ಕು ಕಂಬಗಳಿದ್ದು. ನವರಂಗದ ಸುತ್ತಲೂ ಕಕ್ಷಾಸನವಿದೆ. ಕಕ್ಷಾಸನದ ಮೇಲ್ಭಾಗದ ಸುತ್ತಲೂ ಬ್ರಹ್ಮಕಾಂಡ ಶೈಲಿಯ ಸ್ತಂಭಗಳಿವೆ. ನವರಂಗದ ಪೂರ್ವ ಮತ್ತು ಪಶ್ಚಿಮ ದಿಕ್ಕಿಗೆ ಪ್ರವೇಶ ದ್ವಾರಗಳಿವೆ. ಸುತ್ತಲೂ ೨೨ ಕಂಬಗಳಿವೆ. ಅಧಿಷ್ಠಾನವು ಉಪಾನ, ಜಗತಿ, ಪದ್ಮ, ಕುಮುದ, ವೇದಿಯಿಂದ ಅಲಂಕೃತವಾಗಿದೆ. ಭಿತ್ತಿಯ ಯಾವುದೇ ಅಲಂಕೃತ ಕೆತ್ತನೆಯಿಲ್ಲದೆ ಸರಳವಾಗಿ ಆದರೆ ಗರ್ಭಗೃಹದ ಭಿತ್ತಿಯ ಭಾಗದಲ್ಲಿ ಮೂರ್ತಿಶಿಲ್ಪ ರಹಿತ ೩ ದೇವಕೊಷ್ಠಕಗಳಿವೆ.

ಗರ್ಭಗೃಹದ ಮೇಲ್ಭಾಗದಲ್ಲಿ ಭಾಂಸನಾ ಶೈಲಿಯ ಶಿಖರವಿದೆ. ಈ ಶಿಖರವು ೧೫ ಸ್ತರಗಳನ್ನು ಹೊಂದಿದ್ದು, ಶಿವ, ಗಣೇಶ, ಪಾರ್ವತಿ, ಭೈರವ, ವೀರಭದ್ರ, ನರಸಿಂಹ, ಮಹಿಷಾಸುರ ಮರ್ಧಿನಿ, ವಾದ್ಯಗಾರರು ಮೊದಲಾದ ಧಾರ್ಮಿಕ ಮತ್ತು ಲೌಕಿಕ ಶಿಲ್ಪಗಳನ್ನು ಗಾರೆಯಿಂದ ನಿರ್ಮಿಸಲಾಗಿದೆ. ಶಿಲ್ಪಗಳನ್ನು ಮೇಲ್ಭಾಗದಲ್ಲಿ ಸ್ತೂಪಿ, ಕಲಶ ನಾಶವಾಗಿದೆ.



## ಆಕರ ಗ್ರಂಥಗಳು


೧. ರಹಮತ್ ತರೀಕೆರೆ, ೨೦೧೭, "ಕರ್ನಾಟಕ ಶಾಕ್ತಪಂಥ" ಪ್ರಸಾರಾಂಗ, ಕ.ವಿ.ವಿ. ಹಂಪಿ.

೨. ನಾಯಕ ಡಿ.ಬಿ, ೧೮೭, "ಕರ್ನಾಟಕ ಶಕ್ತಿ ದೇವತೆಗಳು", ಐಬಿಎಚ್ ಪ್ರಕಾಶನ, ಬೆಂಗಳೂರು.

೩. ಸ್ಮಿತಾ ಸುರೇಬಾನಕರ, "ಬೆಳಗಾವಿ ವಾಸ್ತುಶಿಲ್ಪನಿಧಿ", ಕನ್ನಡ ಪರಿಷತ್, ಬೆಳಗಾವಿ.

೪. ರಾಂಪೂರ ಸಿದ್ದಣ್ಣ ಎನ್, "ಬಾಗಡಗೆ ಸಿಂಧರು" (ದೇವಾಲಯಗಳ ವಾಸ್ತುಶಿಲ್ಪ) ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ.

೫. ರಾಜೇಂದ್ರ ಅಣ್ಣಾನವರ, "ರಾಮದುರ್ಗ ತಾಲೂಕು ದರ್ಶನ", ಐಬಿಎಚ್ ಪ್ರಕಾಶನ, ಬೆಂಗಳೂರು.

೬ ಆರ್. ಗೋಪಾಲ್, ೨೦೧೦, "ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ", ಪು.ಸಂ. ೨೮೧.

೭. ಪಿ.ಕೆ. ಕಾರಭಾರಿ, "ರಾಮದುರ್ಗ ಪ್ರದೇಶದ ಪುರಾತತ್ವ", ಕ.ವಿ.ವಿ, ಧಾರವಾಡ.

೮. ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ ಸಂಪುಟ ೨೦.

೯. ನಂದಿಮಠ ಎಸ್.ಸಿ : ಸುಗ್ಗಲದೇವಿಯರ ಶಿಲಾಶಾಸನವು-ತೊರಗಲ್", ಶಿವಾನುಭವ, ಸಂ. ೧೧ ನವಕರ್ನಾಟಕ, ಪು. ೨೫-೩೩.

# ಕಾಮಧೇನು ಗ್ರಾಮ : ಒಂದು ಶೈವ ಕೇಂದ್ರ

ಮಂಗಲಾ ಎಂ. ಗೌಡ*

ಕರ್ನಾಟಕ ರಾಜ್ಯದ ವಾಯುವ್ಯ ಭಾಗದಲ್ಲಿರುವ ಧಾರವಾಡ ಜಿಲ್ಲೆಯು ಐದು ತಾಲೂಕುಗಳನ್ನು ಒಳಗೊಂಡಿದೆ. ಅವುಗಳಲ್ಲಿ ಕಲಘಟಗಿ ತಾಲೂಕು ಒಂದಾಗಿದೆ. ಈ ತಾಲೂಕಿನಲ್ಲಿರುವ ಕಾಮಧೇನು ಗ್ರಾಮವು ತಾಲೂಕಿನಿಂದ ನೈರುತ್ಯಕ್ಕೆ ೧೦ ಕಿ.ಮಿ. ದೂರದಲ್ಲಿದ್ದು, ಉಗ್ಗಿನಕೇರಿ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿದೆ. ಈ ಗ್ರಾಮ ಸಣ್ಣಗ್ರಾಮವಾದರೂ ಇಲ್ಲಿರುವ ಪ್ರಾಚೀನ ಕೆರೆ, ಬಾವಿ, ಶಾಸನಗಳು ಹಾಗೂ ಪ್ರಸಿದ್ಧ ಕಲ್ಮೇಶ್ವರ ದೇವಸ್ಥಾನವಿರುವುದರಿಂದ ಇದೊಂದು ಶೈವ ಪರಂಪರೆಯ ತಾಣವೆಂದು ಪರಿಗಣಿಸಲು ಅವಕಾಶವಿದೆ. ಇಲ್ಲಿ ಆಳ್ವಿಕೆ ನಡೆಸಿದ ರಾಜಮನೆತನಗಳಾದ ಮಾನ್ಯಖೇಟದ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಗೋವೆಯ ಕದಂಬರ ಕಾಲದ ಶಾಸನಗಳಿವೆ. ಹಲಸಿಗೆ-೧೨೦೦೦, ಕುಂದೂರು-೫೦೦, ಬೆಳ್ವೊಲ-೩೦೦, ಕೊಂಕಣ-೯೦೦ ಹೀಗೆ ಪ್ರಾಚೀನ ಆಡಳಿತ ವಿಭಾಗಗಳ ಭಾಗವಾಗಿದೆ. ಇಲ್ಲಿ ರಾಜರಿಗೆ ಅಧೀನರಾಗಿ ಮಾಂಡಳಿಕರು, ಸಾಮಂತರು, ಅಧಿಕಾರಿಗಳು, ಗಾವುಂಡರು, ವೃತ್ತಿ ಸಂಘಗಳು ಶೈವದೇವಾಲಯಗಳಿಗೆ ದಾನ-ದತ್ತಿ ನೀಡುವದರ ಮೂಲಕ ಶೈವಧರ್ಮಕ್ಕೆ ಪ್ರೋತ್ಸಾಹ ನೀಡಿದ್ದಾರೆ. ಈ ಹಿನ್ನಲೆಯಲ್ಲಿ ಶಾಸನಗಳನ್ನಾಧರಿಸಿ ಕಾಮಧೇನು ಗ್ರಾಮವನ್ನು ಶೈವ ಕೇಂದ್ರವಾಗಿ ಗುರುತಿಸಿ ವಿಶ್ಲೇಷಣೆಗೊಳಪಡಿಸಲಾಗಿದೆ.

ಮಹಾಕಾವ್ಯಗಳು, ಹಾಗೂ ಪುರಾಣಗಳಲ್ಲಿ ಶೈವಧರ್ಮದ ಪ್ರಾಚೀನತೆ ಇರುವದು ತಿಳಿದುಬರುತ್ತದೆ. ಕಾಲಘಟ್ಟದಲ್ಲಿ ಆಳ್ವಿಕೆಮಾಡಿದ ಶಾತವಾಹನರು, ಬನವಾಸಿ ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಹೊಯ್ಸಳರು ವಿಜಯನಗರದ ಅರಸರು ಜೊತೆಗೆ ಮಹಾಮಂಡಳೇಶ್ವರರ ರಾಜಾಶ್ರಯ ಮತ್ತು ಪ್ರೋತ್ಸಾಹದಿಂದಾಗಿ ಈ ಧರ್ಮಕ್ಕೆ ಸಂಬಂಧಿಸಿದ ಶಾಸನಗಳು, ದೇವಾಲಯ, ಮೂರ್ತಿಶಿಲ್ಪಗಳು ದೋರೆತಿರುವದರಿಂದ ಶೈವಧರ್ಮಕ್ಕೆ ಪೋಷಣೆಯನ್ನು ನೀಡಿರುವದು ಶಾಸನಗಳಿಂದ ತಿಳಿದುಬರುತ್ತದೆ.

ಧಾರವಾಡ ಜಿಲ್ಲೆಯಲ್ಲಿ ಮೊಟ್ಟ ಮೊದಲು ಶಾಸನೋಕ್ತ ಶೈವ ಸ್ಥಾನಾಚಾರ್ಯನಾದ ಎರೆಯಮ್ಮ ದೀಕ್ಷಿತನ ಉಲ್ಲೇಖವು ಕ್ರಿ.ಶ. ೯೮೦ರ ನವಲಗುಂದ ತಾಲೂಕಿನ ಕುರಹಟ್ಟಿಯ ಶಾಸನದಲ್ಲಿದೆ.[೧] ಕಾಮಧೇನುವಿನ ಕ್ರಿ.ಶ. ೧೧೨೯ರ ಶಾಸನದಲ್ಲಿ ಶೈವ ಸ್ಥಾನಾಚಾರ್ಯ ತೇಜೊರಾಶಿ ಪಂಡಿತರ ಕುರಿತು ತಿಳಿಸುತ್ತದೆ.[೨] ಹೀಗಾಗಿ ಶಾಸನಗಳ ಹಿನ್ನೆಲೆಯಲ್ಲಿ ಕಾಮಧೇನು ಶೈವಕೇಂದ್ರವಾಗಿತ್ತು ಎಂಬುದನ್ನು ದೃಢಪಡಿಸಬಹುದು.

ಕಾಮಧೇನು ಗ್ರಾಮದ ಪ್ರಾಚೀನ ಹೆಸರು 'ಸಾಸಲು' ಎಂದಿದೆ. ಪುರಾಣ ಪ್ರಸಿದ್ಧ ಕಾಮಧೇನು (ಆಕಳುವಿನ) ಪವಾಡ ನಡೆದ ಸ್ಥಳವೆಂದು ಹೇಳಲಾಗುತ್ತದೆ.

### ಶೈವ ಕೇಂದ್ರವಾಗಿ ಕಾಮಧೇನು ಗ್ರಾಮ

ಕಾಮಧೇನು ಗ್ರಾಮದಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದ ಎರಡು ಶಾಸನಗಳು ಕಂಡುಬಂದಿದೆ. ಕ್ರಿ.ಶ. ೧೧೨೯ರ ಕಲ್ಯಾಣ ಚಾಲುಕ್ಯರ ಮೂರನೆಯ ಸೋಮೇಶ್ವರನ ಶಾಸನದಲ್ಲಿ ಸ್ವಯಂಭೂ ಕಲಿದೇವ ಸ್ವಾಮಿಯ ಉಲ್ಲೇಖವಿದ್ದು, ಶೈವ ಸ್ಥಾನಾಚಾರ್ಯ ತೇಜೊರಾಶಿ ಪಂಡಿತರ ಕುರಿತು ತಿಳಿಸುತ್ತದೆ. ಮಲ್ಲಿಸೆಟ್ಟಿ ಎಂಬವವನು ಕಲಿದೇವ ಸ್ವಾಮಿ ದೇವಾಲಯಕ್ಕೆ ದಾನ ನೀಡಿದ ಬಗ್ಗೆ ಈ ಶಾಸನ ತಿಳಿಸುತ್ತದೆ.[೩] ಇನ್ನೊಂದು ಕ್ರಿ.ಶ. ೧೧೭೧ರ ಶಾಸನದಲ್ಲಿ ಗೋವೇ ಕದಂಬರ ಪೆರ್ಮಾಡಿದೇವನ ಶಾಸನದಲ್ಲಿ ಸಾಸಲದ ಕಲಿದೇವರಿಗೆ ಮಠ ಮತ್ತು ಭೂಮಿಯನ್ನು ಬಿಟ್ಟಿರುವ ಉಲ್ಲೇಖವಿದೆ.[೪] ಇಲ್ಲಿ ಕಲ್ಮೇಶ್ವರ ದೇವಾಲಯವಿದ್ದು, ಶೈವ ಪರಂಪರೆಯ ತಾಣವಾಗಿದೆ. ಶಾಸನೋಕ್ತ ಸ್ವಯಂಭೂ ಕಲಿದೇವಸ್ವಾಮಿ ದೇವಾಲಯವೇ ಇಂದಿನ ಕಲ್ಮೇಶ್ವರ ದೇಗುಲವಾಗಿ ಗುರುತಿಸಿಕೊಂಡಿದೆ. ಇದರಿಂದ ಪ್ರಾಚೀನ ಸ್ವಯಂಭೂ ಕಲಿದೇವ ಕಲ್ಮೇಶ್ವರವಾಗಿದೆ ಎನ್ನಬಹುದು. ವಾಸ್ತುಶಿಲ್ಪ ಕಲೆಗೆ ಹೆಸರಾದ ಕಲ್ಮೇಶ್ವರ ದೇವಸ್ಥಾನ ಧಾರ್ಮಿಕ ಮತ್ತು ಆಧ್ಯಾತ್ಮಿಕ ಪರಂಪರೆಯನ್ನು ತನ್ನೊಡಲೋಳಗೆ ಇಟ್ಟುಕೊಂಡಿದೆ.

* ೨ನೇ ಅಡ್ಡರಸ್ತೆ, ಗಣೇಶ ನಗರ, ಹಳಿಯಾಳ, ಉತ್ತರ ಕನ್ನಡ ಜಿಲ್ಲೆ.

### ತೇಜೋರಾಸಿ ಪಂಡಿತರು

ಧಾರವಾಡ ತಾಲೂಕಿನ ನಿಗದಿಯ ಕ್ರಿ.ಶ. ೧೧೧೧ರ ಶಾಸನದಲ್ಲಿ ಒಬ್ಬ ತೇಜೋರಾಶಿ ಪಂಡಿತರ ಉಲ್ಲೇಖ[೫] ಮತ್ತು ಕಲಘಟಗಿ ತಾಲೂಕಿನ ಕಾಮಧೇನು ಕ್ರಿ.ಶ. ೧೧೨೯ರ  ಶಾಸನದಲ್ಲಿ ಇನ್ನೊಬ್ಬ ತೇಜೋರಾಶಿ ಪಂಡಿತರ ಉಲ್ಲೇಖವಿದೆ.[೬] ನಿಗದಿಯ ತೇಜೋರಾಶಿ ಪಂಡಿತ ಕ್ರಿಯಾಶಕ್ತಿ ಪಂಡಿತರ ಶಿಷ್ಯ. ಕಾಮಧೇನುವಿನ ತೇಜೋರಶಿ ಪಂಡಿತ ದೇವರಾಸಿ ಪಂಡಿತರ ಶಿಷ್ಯ(ಪುತ್ರ). ಹೀಗಾಗಿ ಇವರಿಬ್ಬರು ಒಂದೇ ಹೆಸರಿನ ಬೇರೆ ಬೇರೆ ವ್ಯಕ್ತಿಗಳಾಗಿದ್ದಿರಬಹುದು. ಇವರಿಬ್ಬರ ಕಾಲಗಳಲ್ಲೂ ೨೮ ವರ್ಷಗಳ ಅಂತರವಿರುವುದರಿಂದ ಈ ಅಭಿಪ್ರಾಯಕ್ಕೆ ಕಾರಣವಾಗಿದೆ. ನಿಗದಿಯ ಶಾಸನದಲ್ಲಿ ಕದಂಬರ ಮಹಾಮಂಡಳೇಶ್ವರ ಗೊವಲದೇವನು ಕೊಂಕಣ ಮಂಡಲವನ್ನು ರಾಜಧಾನಿ ಗೋವೆಯಿಂದಲೇ ಆಳುತ್ತಿರುವಾಗ ನಿಗುಂದೆ (ನಿಗದಿ)ಯ ಚಾವುಂಡಗಾವುಂಡನು ತೇಜೋರಾಶಿ ಪಂಡಿತರಿಗೆ ಭೂಮಿ ಹಾಗೂ ಮಠವನ್ನು ದಾನವಾಗಿ ನೀಡಿದ್ದು ದಾಖಲಾಗಿದೆ. ಹೀಗಾಗಿ ತೇಜೋರಾಶಿ ಪಂಡಿತರನ್ನು ಮಠದ ಆಚಾರ್ಯರನ್ನಾಗಿಸಿ, ಅದರ ನಿರ್ವಹಣೆಗೆ ಭೂದಾನ ಮಾಡಿರಬಹುದು. ಕಾಮಧೇನು ಶಾಸನವು ಕದಂಬರ ಮಹಾಮಂಡಳೇಶ್ವರ ಜಯಕೇಶಿದೇವ ಕೊಂಕಣ-೯೦೦ ಮತ್ತು ಪಲಸಿಗೆ-೧೨೦೦೦ನ್ನು ಆಳುತ್ತಿರುವಾಗ ಹುಲಿವರದ ಮಲ್ಲಿಸೆಟ್ಟಿಯು ಪಲಸಿಗೆ ನಾಡಿನ ಸಾಸಲು ಗ್ರಾಮದಲ್ಲಿಯ ಸ್ವಯಂಭೂ ಕಲಿದೇವಸ್ವಾಮಯದೇವರಿಗೆ ಭೂ(ಗದ್ದೆ) ಮತ್ತು ಹಣ ದಾನ ಮಾಡಿದಂತೆ ಹೇಳಲಾಗಿದೆ. ಈ ದಾನವನ್ನು ಕಲಿದೇವಸ್ವಾಮಿ ದೇವಾಲಯದ ಸ್ಥಾನಾಚಾರ್ಯ ದೇವರಾಸಿ ಪಂಡಿತರ ಪುತ್ರ(ಶಿಷ್ಯ) ತೇಜೋರಾಸಿ ಪಂಡಿತರ ಕಾಲನ್ನೂ ತೊಳೆದು ಧಾರಾಪೂರ್ವಕ ಸರ್ವಬಾಧಾ ಪರಿಹಾರವಾಗಿ ನೀಡಲಾಗಿದೆ. ದಾನ ಮಾಡಿದ ಮಲ್ಲಿಸೆಟ್ಟಿಯು ತನ್ನ ಪುತ್ರ ಮಿತ್ರಕಳತ್ರ ನಿರಂತರ ದಾನಧರ್ಮ ಮಾಡುತ್ತಿರುವವನಾಗಿದ್ದು, ವಿಶೇಷ ಧರ್ಮಬುದ್ಧಿ ಅವನಲ್ಲಿ ಜಾಗ್ರತಗೊಂಡು, ಕಲಿದೇವರಿಗೆ ದಾನಮಾಡಲು ತೊಡಗಿದನೆಂದು ಶಾಸನ ಬಣ್ಣಿಸಿದೆ. ಸದರಿ ದಾನದ ಭೂಮಿಯನ್ನು ಬೇರೆಯವರಿಂದ ಅಯ್ವತ್ತು ಗದ್ಯಾಣ ಲೊಕ್ಕಿಯಪೊನ್ನು ಕೊಟ್ಟು ಕೊಂಡುಕೊಂಡು ನೀಡಿರುವುದು ವಿಶೇಷವಾಗಿದೆ. ಹಾಗೆಯೇ ಸಾಸಲು ಗ್ರಾಮದ ವಿಶೇಷ ವರ್ಣನೆಯೂ ಶಾಸನದಲ್ಲಿದೆ. ಇಂತಹ ಮಹತ್ವದ ಗ್ರಾಮದಲ್ಲಿ ದೇವಾಲಯದ ಸ್ಥಾನಪತಿಯಾಗಿ ತೇಜೋರಾಶಿ ಪಂಡಿತರು ಕಾರ್ಯನಿರ್ವಹಿಸುತ್ತಿದ್ದರು. ಇವರು ದೇವರಾಶಿ ಪಂಡಿತರ ಪುತ್ರನೆಂದು ಹೇಳಿದೆ. ಆದರೆ ವಾಸ್ತವದಲ್ಲಿ ಅವನ ಶಿಷ್ಯರಾಗಿದ್ದರು. ಶಿಷ್ಯನನ್ನು ಪುತ್ರನೆಂದು ಹೇಳುವ ಪರಂಪರೆ ಈ ಶಾಸನದಲ್ಲಿದೆ.

### ಕಲ್ಮೇಶ್ವರ ದೇವಾಲಯ

ಕಾಮಧೇನುವಿನ ಕಲ್ಮೇಶ್ವರ ದೇವಾಲಯವು ಪೂರ್ವಾಭಿಮುಖವಾಗಿದ್ದು, ಇದರ ತಳವಿನ್ಯಾಸವು ನಕ್ಷತ್ರಾಕಾರವಾಗಿದೆ. ಗರ್ಭಗೃಹ, ಅಂತರಾಳ, ನಂದಿಮಂಟಪ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹವು ಚೌಕಾಕಾರವಾಗಿದ್ದು, ನಾಲ್ಕು ಮೂಲೆಗಳಲ್ಲಿ ಅರೆಗಂಬಗಳಿವೆ. ಹಿಂಬದಿಯ ಭಿತ್ತಿಯಲ್ಲಿ ಮಧ್ಯಪಟ್ಟಿಕಾ ಇದೆ. ಭತ್ತಿನಲ್ಲಿ ಕಮಲದ ಅಲಂಕರಣೆ ಇದೆ. ಗರ್ಭಗೃಹದ ಪ್ರವೇಶದ್ವಾರ ಸರಳವಾಗಿದೆ. ಗರ್ಭಗೃಹದ ಮಧ್ಯ ಶಿವಲಿಂಗವಿದೆ. ಗರ್ಭಗೃಹದ ಮುಂಭಾಗದ ಅಂತರಾಳದ ವಿತಾನದಲ್ಲಿ ೯ ಪದ್ಮಗಳ ಅಲಂಕರಣೆ ಇದೆ. ಪ್ರವೇಶದ್ವಾರ ತ್ರಿಶಾಖಾಲಂಕಾರದಲ್ಲಿದೆ. ಶಾಖೆಗಳಲ್ಲಿ ಅರೆಗಂಬ ಬಿಟ್ಟರೆ ಉಳಿದವು ಸರಳವಾಗಿವೆ. ಲಲಾಟ ಪಟ್ಟಿಕೆ ಸರಳವಾಗಿದೆ. ಉತ್ತರಾಂಗದ ತೋರಣದ ಮಧ್ಯದಲ್ಲಿ ಸಮಭಂಗಿಯಲ್ಲಿ ನಿಂತಿರುವ ಬ್ರಹ್ಮ, ಶಿವ ಮತ್ತು ವಿಷ್ಣುವಿನ ಕೆತ್ತನೆಗಳಿವೆ. ದ್ವಾರಬಂಧದ ಬದಿಗಳಲ್ಲಿ ಕಮಲಾಂಕೃತ ಜಾಲಾಂಧ್ರವನ್ನು ಅಳವಡಿಸಲಾಗಿದೆ. ಅಂತರಾಳಕ್ಕೆ ಹೊಂದಿಕೊಂಡಂತೆ ಆಯತಾಕಾರದ ನಂದಿ ಮಂಟಪವಿದ್ದು, ಇಲ್ಲಿ ನಾಲ್ಕು ದೇವಕೋಷ್ಠಗಳಿವೆ. ಅವುಗಳಲ್ಲಿ ಸಪ್ತಮಾತೃಕಾ, ಗಣೇಶ, ಮಹಿಷಮರ್ಧಿನಿ ಮತ್ತು ವಿಷ್ಣುವಿನ ಶಿಲ್ಪಗಳಿವೆ. ನಂದಿಮಂಟಪದ ಪ್ರವೇಶದ್ವಾರದ ಶಾಖೆಗಳಲ್ಲಿ ಸ್ತಂಭಶಾಖೆ ಬಿಟ್ಟರೆ ಉಳಿದವು ಸರಳವಾಗಿವೆ. ಲಲಾಟಪಟ್ಟಿಕೆ ಖಾಲಿ ಇದೆ. ಪೇದ್ಯಭಾಗದಲ್ಲಿ ದ್ವಾರಪಾಲಕ ಮತ್ತು ಸೇವಕಿಯರ ಶಿಲ್ಪಗಳಿವೆ. ದ್ವಾರಬಂಧದ ಬದಿಗಳಲ್ಲಿ ಜಾಲಂಧ್ರಗಳಿವೆ. ದೇವಾಲಯದ ಸಭಾಮಂಟಪಕ್ಕೆ ಮೂರು ಪ್ರವೇಶದ್ವಾರಗಳಿವೆ. ಸಭಾಮಂಟಪದ ಮಧ್ಯದಲ್ಲಿ ನಾಲ್ಕು ಕಂಬಗಳಿವೆ. ಸಭಾಮಂಟಪದ ಸುತ್ತಲು ಇರುವ ಕಕ್ಷಾಸನದಲ್ಲಿ ಇಪ್ಪತ್ತೆರಡು ಕಿರುಗಂಬಗಳಿದ್ದು, ಮಧ್ಯದ ನಾಲ್ಕು ಕಂಬಗಳು ಪೀಠ, ಪಾದ, ದಿಂಡು, ಚೌಕ, ಕಲಶ, ಫಲಕ ಮತ್ತು ಸರಳಭೋಧಿಗೆಯಲ್ಲಿವೆ. ದಿಂಡಿನಲ್ಲಿ ಪದ್ಮ ಮತ್ತು ರತ್ನ ಪಟ್ಟಿಕೆಗಳಿವೆ. ಕಕ್ಷಾಸನದಲ್ಲಿರುವ ಕಂಬಗಳು ಪೀಠ, ಬಹುಮುಖ ನೀಳ ದಿಂಡು, ಕಳಶ ಮತ್ತು ಸರಳ ಭೋಧಿಗೆಯಲ್ಲಿವೆ. ಸಭಾಮಂಟಪದ ವಿತಾನದಲ್ಲಿ ಒಟ್ಟು ನಲವತ್ತೊಂದು ಅರಳಿದ ಪದ್ಮಗಳಿವೆ.

ದೇವಾಲಯದ ಅಧಿಷ್ಠಾನದಲ್ಲಿ ಉಪಾನ, ಜಗತಿ, ಚೂಪುಕುಮುದ, ದಂತಪಟ್ಟಿಕಾ ಮತ್ತು ಕಪೋತ ಭಾಗಗಳಿವೆ. ಭಿತ್ತಿಯು ಭದ್ರ ಮತ್ತು ಉಪಭದ್ರ ಕರ್ಣಭಾಗಗಳಿಂದ ಕೂಡಿದೆ. ಭದ್ರ ಭಾಗದಲ್ಲಿ ಮೂರು ಕಡೆ ಮೂರು ದೇವಕೋಷ್ಠಗಳಿವೆ. ಈ ದೇವಕೋಷ್ಠಗಳು ಎರಡು ಅಂತಸ್ತಿನಲ್ಲಿರುವುದು ಗಮನೀಯವಾಗಿದೆ. ಮೇಲೆ ದ್ರಾವಿಡ ವಿಮಾನಗಳಿವೆ. ಗೆರಾರ್ಡ್ ಅವರು ದೇವಕೋಷ್ಠಗಳ ವಿಮಾನಗಳಲ್ಲಿ ಒಂದು ದ್ರಾವಿಡ ಮತ್ತೆರಡು ನಾಗರ ವಿಮಾನಗಳೆಂತಲೂ ನಾಗರ ವಿಮಾನಗಳಲ್ಲಿ ಒಂದು ಭೂಮಿಜ ಎಂದು ತಿಳಿಸುತ್ತಾರೆ. ದೇವಕೋಷ್ಠಗಳಲ್ಲಿದ್ದ ಶಿಲ್ಪಗಳು ಈಗ ಕಾಣುತ್ತಿಲ್ಲ. ಶಿಲ್ಪಗಳಿದ್ದವು ಎನ್ನಲು ಗೂಡಿನಲ್ಲಿ ಶಿಲ್ಪಗಳನ್ನು ಅಳವಡಿಸಲು ಇರುತ್ತಿದ್ದ ರಂದ್ರಗಳಿವೆ. ದೇವಕೋಷ್ಠಗಳು ಎರಡು ಅಂತಸ್ತಿನಲ್ಲಿವೆ. ಈ ಲಕ್ಷಣವು ಹೊಯ್ಸಳ ಮತ್ತು ಅವರ ಸಮಕಾಲೀನರಾದ ಕಾಕತಿಯರ ದೇವಾಲಯಗಳಲ್ಲಿ ಸಾಮಾನ್ಯವಾಗಿದೆ. ಉಪಭದ್ರಭಾಗದಲ್ಲಿ ಸ್ತಂಭಪಂಜರ, ಕರ್ಣಭಾಗದಲ್ಲಿ ಕೋಷ್ಠಪಂಜರಗಳಿವೆ. ಸ್ತಂಭ ಪಂಜರಗಳಿಗೆ ಈ ಭಾಗದ ಬೇರೆ ದೇವಾಲಯಗಳಲ್ಲಿ ತೋರಣದ ಅಲಂಕರಣೆ ಇದ್ದರೆ, ಆ ಅಲಂಕರಣೆ ಇಲ್ಲಿ ಕಂಡು ಬರದಿರುವುದು ವಿಶೇಷವೆನಿಸಿದೆ. ಸಭಾಮಂಟಪದ ಅಧಿಷ್ಠಾನವು ಮಂಚಬಂಧ ಮಾದರಿಯಲ್ಲಿದೆ. ಇದು ಉಪಾನ ಜಗತಿಗಳ ಮತ್ತು ಕಪೋತಗಳಿಂದ ಕೂಡಿದೆ. ಕಪೋತದಲ್ಲಿ ದಂತಪಟ್ಟಿಕಾ ಇದೆ. ತಳಭಾಗದಲ್ಲಿ ಪುಷ್ಪಗಳ ಅಲಂಕಾರವಿದೆ. ಕಪೋತದ ಮೇಲೆ (ಕಕ್ಷಾಸನದ ಹಿಂಭಾಗ) ಕಿರು ಸ್ತಂಭಗಳಿಗೆ ನಾಗರಶೈಲಿಯ ಶಿಖರಗಳಿವೆ. ಶಿಖರಗಳ ಮಧ್ಯೆ ವ್ಯಾಳಗಳಿವೆ. ಶಿಖರಗಳ ಮೇಲಿನ ಪಟ್ಟಿಕೆ ಸರಳವಾಗಿದೆ. ಉಣಕಲ್ಲ ಮತ್ತು ಕುಂದಗೋಳ ದೇವಾಲಯದ ಕಕ್ಷಾಸನದ ಅಲಂಕರಣೆಯಂತಿಯೇ ಇಲ್ಲಿಯೂ ಇದೆ. ಆದರೆ ಶಿಖರಗಳ ಮೇಲಿನ ಪಟ್ಟಿಕೆ ಇಲ್ಲಿ ಸರಳವಾಗಿದ್ದರೆ, ಅಲ್ಲಿ ಕಿರು ದೇವ-ದೇವತೆಯರ ಚಿತ್ರಗಳಿವೆ. ಆಧುನಿಕ ಶಿಖರವಿದೆ. ಭಿತ್ತಿಯಲ್ಲಿರುವ ದೇವಕೋಷ್ಠಗಳು ಎರಡು ಅಂತಸುಗಳಲ್ಲಿದ್ದು ಕೆಳಗಿನ ಅಂತಸ್ತು ಗೂಡಿನಂತಿದ್ದು ಮೇಲಿನ ಅಂತಸ್ತು ಮುಚ್ಚಿಕೊಂಡಿರುವುದು ವಿಶೇಷ ಎನಿಸುತ್ತದೆ. ದೇವಾಲಯದ ವಾಸ್ತುಲಕ್ಷಣದ ಹಿನ್ನೆಲೆಯಲ್ಲಿ ಈ ದೇವಾಲಯದ ಕಾಲಮಾನ ಕ್ರಿ.ಶ. ಸು. ೧೨ನೆಯ ಶತಮಾನಕ್ಕೆ ಸೇರುತ್ತದೆ.[೭]

ಗ್ರಾಮದ ಪ್ರಮುಖ ಆಕರ್ಷಣೀಯ ಕೇಂದ್ರವಾದ ಕಲ್ಮೇಶ್ವರ ದೇವಾಲಯವು ಕದಂಬರ ಕಾಲದಲ್ಲಿ ನಿರ್ಮಾಣವಾಗಿದ್ದು, ನಂತರ ಚಾಲುಕ್ಯರ ಕಾಲದವರೆಗೂ ಬೆಳೆದು ಬಂದು ಇತ್ತೀಚಿಗೆ ಶಿಖರವನ್ನು ನಿರ್ಮಿಸಲಾಗಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಅದರ ಪ್ರತಿರೂಪವು ಶಾಸನ ಕಲ್ಲಿನ ಮೇಲೆ ಕೆತ್ತಲಾಗಿದೆ.

ಕಾಮಧೇನುವಿನ ಕಲ್ಮೇಶ್ವರ ದೇವಾಲಯದಲ್ಲಿ ನಿತ್ಯ ಪ್ರಾತಃಕಾಲ ಪೂಜೆ ಸಲ್ಲಿಸಲಾಗುತ್ತದೆ. ಯುಗಾದಿ, ಶ್ರಾವಣ, ಮಹಾನವಮಿ, ಶಿವರಾತ್ರಿಯಂದು ವಿಶೇಷ ಪೂಜೆ ಆಯೋಜಿಸಲಾಗುತ್ತದೆ. ಕಾಮಧೇನುವಿನ ಕಲ್ಮೇಶವರ ದೇವಾಲಯದಲ್ಲಿ ದವನದ ಹುಣ್ಣಿಮೆಯಂದು ಮೂರು ದಿನಗಳು ಜಾತ್ರೆ ವಿಜೃಂಭಣೆಯಿಂದ ನಡೆಯುತ್ತದೆ. ಈ ಗ್ರಾಮದ ಶೈವ ಪರಂಪರೆಯ ಮುಂದುವರೆದ ಭಾಗವಾಗಿ ಸಿದ್ಧಾರೂಢರ ಮಠ, ಕರಿಬಸವೇಶ್ವರ ದೇವಾಲಯ, ಗಣೇಶ, ಬೀರೇಶ್ವರ ದೇವಸ್ಥಾನಗಳು ಗ್ರಾಮದಲ್ಲಿದೆ.

ಗ್ರಾಮದ ಪಕ್ಕದಲ್ಲಿ ಶಾಲ್ಮಲಾ ನದಿ ಹರಿಯುತ್ತಿದ್ದು, ಸಣ್ಣ ಜಲಪಾತವನ್ನು ಸೃಷ್ಟಿಸಿ, ನಯನಮನೋಹರವಾಗಿದೆ. ಜನರು ಇದನ್ನು 'ದಬೆದಬೆಹಳ್ಳ' ಎಂದು ಕರೆಯುತ್ತಾರೆ. ಸಂಕ್ರಾಂತಿ ಮತ್ತು ಶಿವರಾತ್ರಿ ಸಂದರ್ಭದಲ್ಲಿ ಸುತ್ತಮುತ್ತಲಿನ ಸಾವಿರಾರು ಜನರು ಇಲ್ಲಿಗೆ ಆಗಮಿಸಿ ಜಲಪಾತದಲ್ಲಿ ಸ್ನಾನಮಾಡಿ ಕಲ್ಮೇಶ್ವರದೇವರ ದರ್ಶನಪಡೆದು ವನಮಹೋತ್ಸವವನ್ನು ಆಚರಿಸಿ, ಸಂತೋಷ ಪಡುತ್ತಾರೆ. ಈ ಗ್ರಾಮದಲ್ಲಿ ಐತಿಹಾಸಿಕ ಕೆರೆ ಮತ್ತು ಬಾವಿಗಳಿವೆ. ಗ್ರಾಮಕ್ಕೆ ಉತ್ತಮವಾದ ರಸ್ತೆ, ನೀರಿನ ಸೌಕರ್ಯ, ವಾಹನ, ಚರಂಡಿ ನಿರ್ಮಾಣ ಇತ್ಯಾದಿ ಸ್ವಚ್ಚತೆಗೆ ಆದ್ಯತೆ ನೀಡಬೇಕಾಗಿದೆ. ಈ ಗ್ರಾಮದ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಿದರೆ ಇದು ಶೈವಧರ್ಮದ ಪ್ರವಾಸಿ ತಾಣವಾಗುವ ಅರ್ಹತೆ ಪಡೆದಿದೆ ಎಂದು ಹೇಳಬಹುದು.

ಕಾಮಧೇನುವಿನ ಕ್ರಿ.ಶ. ೧೧೭೯ರ ಕಲ್ಯಾಣ ಚಾಲುಕ್ಯರ ಮೂರನೆಯ ಸೋಮೇಶ್ವರ ಶಾಸನದಲ್ಲಿ ಸ್ವಯಂಭೂದೇವ ಕಲಿದೇವಸ್ವಾಮಿ ದೇವಾಲಯ ಮತ್ತು ಸ್ಥಾನಾಚಾರ್ಯರಾದ ತೇಜೋರಾಶಿ ಪಂಡಿತರ ಕುರಿತು ತಿಳಿಸುತ್ತದೆ. ಈ ದೇವಾಲಯವನ್ನು ಕಲ್ಮೇಶ್ವರ ದೇವಾಲಯ ಮತ್ತು ಅಲ್ಲಿನ ಸ್ಥಾನಾಚಾರ್ಯರಾದ ತೇಜೋರಾಶಿ ಪಂಡಿತರು ಮತ್ತು ಇಲ್ಲಿರುವ ಶಿವಲಿಂಗ, ನಂದಿ, ಗಣೇಶ, ಮತ್ತು ಶಿವನ ಪರಿವಾರ ದೇವತೆಗಳು ಸಪ್ತಮಾತೃಕಾ, ಮಹಿಷಮರ್ಧಿನಿ ಮತ್ತು ಶಿಲ್ಪಗಳಿವೆ. ಜೊತೆಗೆ ಧಾರ್ಮಿಕವಾಗಿ ಕಾಮಧೇನು ಪ್ರವಾಸಿತಾಣವಾಗಿ ಅಭಿವೃದ್ಧಿ ಪಡೆದಿರುವದು ಕಾಣಬಹುದು.



## ಅಡಿಟಿಪ್ಪಣಿಗಳು

೧. ಎಸ್.ಆಯ್.ಆಯ್ ಸಂ. XI-I, ಶಾ.ಸಂ. ೪೫. ಕುರಹಟ್ಟಿ ಕ್ರಿ.ಶ. ೯೮೦. ಕಲಬುರ್ಗಿ ಎಂ.ಎಂ., ಧಾ.ಜಿ.ಶಾ.ಸೂ. ಶಾ.ಸಂ. ೩೧. ಗಂಗಾನಾಯಕ ಕೆ. ಎನ್., ನಾಗಯ್ಯ ಜೆ.ಎಂ., ಕಲ್ಯಾಣ ಚಾಲುಕ್ಯರ ಶಾಸನಗಳು, ಸಂ. I. ಶಾ.ಸಂ. ೯.

೨. ಎಸ್.ಆಯ್.ಆಯ್. ಸಂ. XX. ಶಾ.ಸಂ. ೧೦೧. ಕಾಮಧೇನು, ಕ್ರಿ.ಶ. ೧೧೨೯. ಕಲಬುರ್ಗಿ ಎಂ.ಎಂ., ಧಾ.ಜಿ.ಶಾ.ಸೂ. ಶಾ.ಸಂ. ೧೨. ಗುರವ ಆರ್.ಎನ್., ದ ಕದಂಬಾಸ ಆಫ್ ಗೋವಾ, ಶಾ.ಸಂ. ೨೪.

೩. ಅದೇ.

೪. ಎಸ್.ಆಯ್.ಆಯ್. ಸಂ. XX. ಶಾ.ಸಂ. ೨೫೨. ಕಾಮಧೇನು, ಕ್ರಿ.ಶ. ೧೧೭೧. ಕಲಬುರ್ಗಿ ಎಂ.ಎಂ., ಧಾ.ಜಿ.ಶಾ.ಸೂ. ಶಾ.ಸಂ. ೧೩. ಗುರವ ಆರ್.ಎನ್., ದ ಕದಂಬಾಸ ಆಫ್ ಗೋವಾ. ಶಾ.ಸಂ. ೫೧.

೫. ಎಸ್.ಆಯ್.ಆಯ್. ಸಂ. XI-ii. ಶಾ.ಸಂ. ೧೬೦. ನಿಗದಿ, ಕ್ರಿ.ಶ. ೧೧೧೧. ಕಲಬುರ್ಗಿ ಎಂ.ಎಂ., ಧಾ.ಜಿ.ಶಾ.ಸೂ., ಶಾ.ಸಂ. ೩೭. ಕಲಬುರ್ಗಿ ಎಂ.ಎಂ., ಧಾ.ತಾ.ಶಾ, ಶಾ.ಸಂ. ೪೪.

೬ ಎಸ್.ಆಯ್.ಆಯ್. ಸಂ. XX. ಶಾ.ಸಂ. ೧೦೧. ಕಾಮಧೇನು, ಕ್ರಿ.ಶ. ೧೧೨೯. ಕಲಬುರ್ಗಿ ಎಂ.ಎಂ., ಧಾ.ಜಿ.ಶಾ.ಸೂ. ಶಾ.ಸಂ. ೧೨. ಗುರವ ಆರ್. ಎನ್., ದ ಕದಂಬಾಸ ಆಫ್ ಗೋವಾ, ಶಾ.ಸಂ. ೨೪.

೭. ಶಾಂತಕುಮಾರಿ ಎಸ್.ಎಲ್., ಪು. ೧೨೩., ಗೆರಾಲ್ಡ್ ಪೊಕಿಮಾ, ಪೂರ್ವೋಕ್ತ, ಪು. ೪೨೪. ಮಹದೇವ ಸಿ., ಪೂರ್ವೋಕ್ತ, ಪು. ೪-೬, ಜಯಮ್ಮ ಬಿ., ಪೂರ್ವೋಕ್ತ, ಪು. ೪೨೪.

# ೬೫

# ಶ್ರವಣಬೆಳಗೊಳ ಮತ್ತು ಅರೆತಿಪ್ಪೂರು ಕ್ಷೇತ್ರಗಳ ಸಾಮ್ಯತೆ

ಹೆಚ್.ಎಲ್. ರೂಪೇಶ್ ಕುಮಾರ್*

ತೀರ್ಥವೆಂದರೆ ಪವಿತ್ರವಾದುದು, ಪಾವನವಾದುದು ಎಂದರ್ಥ. ಕ್ಷೇತ್ರ ಎಂದರೆ ಇಂತಹ ಉತ್ತಮವೂ, ಪವಿತ್ರವೂ, ಆದ ಚಿಹ್ನೆ ಕುರುಹುಗಳಿರುವ ಸ್ಥಳ ಎಂದರ್ಥ ಹೀಗಾಗಿ ಪವಿತ್ರವಾದ ಪೂಜ್ಯವಾದ ಪ್ರವಾಸೀತಾಣಗಳೇ ತೀರ್ಥಕ್ಷೇತ್ರಗಳು ಇವು ನಮ್ಮ ಮೂಲ ಪುರುಷರಾದ, ಧರ್ಮ ಪ್ರವರ್ತಕರಾದ ತೀರ್ಥಾದೀಶರು ಜನ್ಮ ತಾಳಿದ ತಪಸ್ಸುಗೈದ, ಕೇವಲಜ್ಞಾನ ಹೊಂದಿದ ವಿಹಾರ ಮಾಡಿ ಧರ್ಮೋಪದೇಶ ನೀಡಿದ, ಮತ್ತು ಮುಕ್ತಿ ಹೊಂದಿದ, ಮಹೋನ್ನತ ಪೂಜ್ಯ ಸ್ಥಳಗಳಾಗಿವೆ ಅಲ್ಲದೆ ಕೆಲವು ಆತಿಶಯವಾದ ಮಹಿಮೆಯನ್ನು ಸಾರುವ ಧರ್ಮಪ್ರಭಾವನೆಯ, ಮಹಾತ್ಮರಾದ ಪೂಜ್ಯ ಮುನಿಗಳು ನೆಲೆಸಿದ್ದ ಹಾಗೂ ಗುರು ಭಟ್ಟಾರಕರ ಮಠಗಳಿರುವ ಕಲೆಯ ಸಂಸ್ಕೃತಿಯ, ವಿದ್ಯೆಯ ಕೇಂದ್ರಗಳಾಗಿರುವ ಸ್ಥಳಗಳೇ ತೀರ್ಥಕ್ಷೇತ್ರಗಳೆಂದು ಪ್ರಸಿದ್ಧವಾಗಿವೆ. ಈ ಹಿನ್ನಲೆಯಲ್ಲಿ ದಕ್ಷಿಣ ಭಾರತದ ಅತೀ ಪ್ರಾಚೀನ ಶಾಸನಲ್ಲೋಕಿತ ಜೈನ ತೀರ್ಥಗಳಾದ ಶ್ರವಣಬೆಳಗೊಳ ಹಾಗೂ ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕಿನ ಅರೆತಿಪ್ಪೂರು ಜೈನ ತೀರ್ಥಗಳ ಸಾಮ್ಯತೆಯನ್ನು ಪ್ರಸ್ತುತಪಡಿಸುವುದಾಗಿದೆ.

ಇಡೀ ಶ್ರವಣಬೆಳಗೊಳ ಕ್ಷೇತ್ರ ಅರೆತಿಪ್ಪೂರಿನ ತದ್ರೂಪ ಅರೆತಿಪ್ಪೂರು ಶ್ರವಣಬೆಳಗೊಳಕ್ಕಿಂತ ಪುರಾತನವಾದುದು, ಶ್ರವಣಬೆಳಗೊಳದ ಬಾಹುಬಲಿ ಮೂರ್ತಿ ಕ್ರಿ.ಶ. ೯೮೩ರಲ್ಲಿ ನಿರ್ಮಾಣಗೊಂಡಿದ್ದರೆ, ಅರೆತಿಪ್ಪೂರಿನದ್ದು, ಕ್ರಿ.ಶ. ೯೧೨ರಲ್ಲಿ ನಿರ್ಮಾಣಗೊಂಡಿದೆ. ಅರೆತಿಪ್ಪೂರು ಮಾದರಿಯಲ್ಲೆ ಶ್ರವಣಬೆಳಗೊಳ ಕ್ಷೇತ್ರವನ್ನು ನಿರ್ಮಾಣ ಮಾಡಲಾಗಿದೆ ಎಂದು ಜೈನ ಪರಂಪರೆ ಹೇಳುತ್ತದೆ. ಅಲ್ಲಿರುವಂತೆ ಇಲ್ಲಿಯೂ ಚಿಕ್ಕಬೆಟ್ಟ ಮತ್ತು ದೊಡ್ಡಬೆಟ್ಟಗಳಿವೆ. ಇಪ್ಪತ್ತ ನಾಲ್ಕು ತೀರ್ಥಂಕರ ಮೂರ್ತಿಗಳಿವೆ ಅಲ್ಲಿ ಗುಳ್ಳಕಾಯಿ ಅಜ್ಜಿ ಇದ್ದರೆ ಇಲ್ಲಿ ಕೂಷ್ಮಾಂಡಿನಿ ದೇವಿ ಇದ್ದಾಳೆ. ಎರಡೂ ಕ್ಷೇತ್ರಗಳ ಬೆಟ್ಟದ ತಟದಲ್ಲಿ ಕೊಳಗಳಿವೆ, ದೊಣೆಗಳಿವೆ, ತೀರ್ಥಂಕರರ ಉಬ್ಬು ಶಿಲ್ಪಗಳಿವೆ.

ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು, ಕೂಲಿಗೆರೆಯ ಶಾಸನವು ಕನಕಗಿರಿ ತೀರ್ಥವನ್ನು ಅಂದರೆ ತಿಪ್ಪೂರು ತೀರ್ಥವನ್ನು ಅದರ ಆಚಾರ್ಯರನ್ನು ಗಂಗರ ಆಳ್ವಿಕೆಯನ್ನು, ಮಣಲೆಯರನು ಬಸದಿಯನ್ನು ಕಟ್ಟಿಸಿದನೆಂಬುದನ್ನು ಸವಿವರವಾಗಿ ನಿರೂಪಿಸಿದೆ, ಗಂಗರ ನೀತಿಮಾರ್ಗ ಪೆರ್ಮನಾಡಿಯ ಆಳ್ವಿಕೆಗೆ ಸೇರಿದ ಈ ಶಾಸನೋಕ್ತ ಮಣಲೆಯರನ್ನು ಕನಕಗಿರಿಯ, ಅಂದರೆ ತಿಪ್ಪೂರಿನ ಚಿಕ್ಕ ಬೆಟ್ಟದ ಮೇಲೆ ಬಸದಿಯನ್ನು ನಿರ್ಮಿಸಿ ತನಗೆ ಅಧಿಕಾರದತ್ತವಾಗಿ ಬಂದಿದ್ದ ಎಲ್ಲಾ ಸಾಮಂತರ ತೆರಿಗೆಗಳನ್ನು ಆ ಬಸದಿಯ ಒಡೆತನ ಇದ್ದ ಕನಕಸೇನ ಭಟ್ಟಾರಕರಿಗೆ ಈ ತಿಪ್ಪೆಯೂರ ತೆರಿಗೆ ಸ್ವಾಮ್ಯವನ್ನು ಬಿಟ್ಟುಕೊಟ್ಟನು ಎಂಬ ವಿಚಾರವನ್ನು ತಿಳಿಸುತ್ತದೆ. ಅಂದರೆ ೮ನೇ ಶತಮಾನಕ್ಕೂ ಮುಂಚೆಯ ಅರೆತಿಪ್ಪೂರು ಕ್ಷೇತ್ರ ಜೈನ ತೀರ್ಥದ ಸ್ಥಾನಮಾನವನ್ನು ಗಳಿಸಿಕೊಂಡಿತ್ತು ಎಂಬುದು ಈ ಶಾಸನದ ಅಧ್ಯಯನದಿಂದ ವೇದ್ಯವಾಗುತ್ತದೆ. ಕರ್ನಾಟಕದ ಪ್ರಾಚೀನತಮ ಜೈನ ತೀರ್ಥ ಕ್ಷೇತ್ರಗಳೆಂದರೆ ಶ್ರವಣಬೆಳಗೊಳ ಮತ್ತು ಅರೆತಿಪ್ಪೂರು. ಕಳ್ಬಪ್ಪು ತೀರ್ಥವು ಶ್ರವಣಬೆಳಗೊಳದ ಚಿಕ್ಕಬೆಟ್ಟ, ಗೊಮ್ಮಟ ದೇವರ ತೀರ್ಥವೆಂದರೆ ಅಲ್ಲಿನ ದೊಟ್ಟ ಬೆಟ್ಟ ಹಾಗೂ ಬೆಳ್ಗೊಳ ತೀರ್ಥವೆಂದರೆ ಎರಡು ಬೆಟ್ಟಗಳ ಕೆಳಗಿನ ಊರು ತಿಪ್ಪೂರು ತೀರ್ಥವೆಂದರೆ ಕನಕಗಿರಿ ತೀರ್ಥ (ತಿಪ್ಪೂರಿನ ಜೈನ ಅವಶೇಷಗಳನ್ನೊಳಗೊಂಡಿರುವ ಚಿಕ್ಕಬೆಟ್ಟ) ಕರ್ನಾಟಕದಲ್ಲಿ ಜೈನರಿಗೆ ಸಂಬಂಧಿಸಿದಂತೆ ಮೂರು ಕನಕಗಿರಿ ಕ್ಷೇತ್ರಗಳಿವೆ ಅವುಗಳೆಂದರೆ ಕೊಪ್ಪಳ ಜಿಲ್ಲೆಯ ಕನಕಗಿರಿ (ಕೊಪಣಾಚಲ) ಚಾಮರಾಜನಗರ ಜಿಲ್ಲೆಯ ಕನಕಗಿರಿ (ಮಲೆಯೂರು) ಹಾಗೂ ಮಂಡ್ಯ ಜಿಲ್ಲೆಯ ಕನಕಗಿರಿ (ತಿಪ್ಪೂರು ತೀರ್ಥ) ಕೊಪಾಣಚಲವನ್ನು ಉತ್ತರ ಕರ್ನಾಟಕದ ಶ್ರವಣಬೆಳಗೊಳ ಎಂದು ಕರೆಯಲಾಗಿದೆ. ತಲಕಾಡಿನಲ್ಲಿ ಉತ್ಖನನದ ವೇಳೆ ಕಂಡುಬಂದಿರುವ ಜೈನ ಅವಶೇಷಗಳನ್ನು ಗಮನಿಸಿ ಗಂಗರಾಜನು, ಅಂದರೆ ಹೋಯ್ಸಳ ವಿಷ್ಣುವರ್ಧನನ ಸೇನಾದಿಪತಿ ತಲಕಾಡನ್ನು ಕೊಪಣವನ್ನಾಗಿಸಿದನು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

* ತ್ರೈಲೋಕ್ಯ ನಿಲಯ, ಹಳೇ ಪೋಸ್ಟ್ ಆಫೀಸ್ ಪಕ್ಕ, ಕೆ.ಆರ್.ಎಸ್. ರಸ್ತೆ, ವಿ.ಸಿ. ಕಾಲೋನಿ, ಪಾಂಡವಪುರ, ಮಂಡ್ಯ ಜಿಲ್ಲೆ, ಮೊ. ೯೯೬೪೪೯೬೨೫೮

ಶ್ರವಣಬೆಳಗೊಳದಲ್ಲಿ ದೊಡ್ಡಬೆಟ್ಟವನ್ನು ವಿಂಧ್ಯಗಿರಿ ಎಂದು ಹಾಗೂ ಚಿಕ್ಕಬೆಟ್ಟವನ್ನು ಚಂದ್ರಗಿರಿಯೆಂದು ಕರೆದರೆ, ಅರೆತಿಪ್ಪೂರಿನಲ್ಲಿರುವ ದೊಡ್ಡಬೆಟ್ಟವನ್ನು ಶ್ರವಣಪ್ಪನ ಗುಡ್ಡ ಅಥವಾ ಶ್ರವಣಬೆಟ್ಟವೆಂದೂ ಚಿಕ್ಕಬೆಟ್ಟವನ್ನು ಕನಕಗಿರಿ ಎಂದು ಕರೆಯಲಾಗುತ್ತದೆ. ಶ್ರವಣಬೆಳಗೊಳದ ವಿಂಧ್ಯಗಿರಿಯ ಮೇಲೆ ವಿಶ್ವವಿಖ್ಯಾತ ಬಾಹುಬಲಿ ಮೂರ್ತಿಯಿರುವಂತೆ ಅರೆತಿಪ್ಪೂರಿನ ಶ್ರವಣ ಗುಡ್ಡದಲ್ಲಿ ಅಂದರೆ ದೊಡ್ಡಬೆಟ್ಟದಲ್ಲಿಯೂ ಸಹ ಬಾಹುಬಲಿ ಮೂರ್ತಿ ಇದೆ. ವಿದ್ವಾಂಸರ ಪ್ರಕಾರ ಈ ಬಾಹುಬಲಿಯ ಮೂರ್ತಿಯನ್ನು ಶ್ರವಣಬೆಳಗೊಳದ ಮೂರ್ತಿಯನ್ನು ಸ್ಥಾಪಿಸುವುಕ್ಕೆ ಪೂರ್ವದಲ್ಲಿಯೇ ಸ್ಥಾಪಿಸಿರಬಹುದೆಂಬ ಅಭಿಪ್ರಾಯಗಳಿವೆ. ಅದಕ್ಕೆ ಕಾರಣಗಳು ಇಲ್ಲದಿಲ್ಲ. ತಿಪ್ಪೂರಿನ ಬಾಹುಬಲಿ ಉಬ್ಬುಶಿಲ್ಪವಾಗಿರುವುದರಿಂದ ಮತ್ತು ಈ ತೀರ್ಥದಲ್ಲಿ ಗಂಗರ ಕಾಲದ ಜಿನಾಲಯಗಳು ಬೇರೊಂದು ಬೆಟ್ಟದಲ್ಲಿ ಕಂಡುಬಂದಿರುವುದರಿಂದ ಶ್ರವಣಬೆಳಗೊಳ ಮಾದರಿಯಲ್ಲಿಯೇ ಈ ತೀರ್ಥವಿರಿವುದರಿಂದ ಗಂಗರ ರಾಜಧಾನಿ ತಲಕಾಡಿಗೆ ಇದು ಅತೀ ಸಮೀಪದಲ್ಲಿರುವುದರಿಂದ ಪ್ರಾಯಶಃ ಪ್ರಾರಂಭದ ದಿನಗಳಲ್ಲಿ ಇಲ್ಲಿ ಗೊಮ್ಮಟನನ್ನು ಸ್ಥಾಪಿಸಿ ಅನಂತರ ಶ್ರವಣಬೆಳಗೊಳದಲ್ಲಿ ಬೃಹತ್ ಗೊಮ್ಮಟನನ್ನು ಸ್ಥಾಪಿಸಿರಬಹುದಾದ ಸಾಧ್ಯಸಾಧ್ಯತೆಯನ್ನು ತಳ್ಳಿ ಹಾಕಲಾಗುವುದಿಲ್ಲ. ಶಿಲ್ಪದ ದೃಷ್ಟಿಯಿಂದ ತಿಪ್ಪೂರಿನ ಬಾಹುಬಲಿ ಮೂರ್ತಿಯು ಹೆಚ್ಚಿನ ಯಾವ ಅಲಂಕಾರಿಕ, ಕಂಡರಣೆಕೆ ಕಂಡುಬರದೆ ಒಂದು ಸಾಮಾನ್ಯ ಬಾಹುಬಲಿ ಮೂರ್ತಿಯಂತೆ ಕಂಡು ಬರುತ್ತದೆ.

ಶ್ರವಣಬೆಳಗೊಳದ ಚಿಕ್ಕಬೆಟ್ಟ (ಚಂದ್ರಗಿರಿಯಲ್ಲಿ ಭದ್ರಬಾಹು ಗುಹಾಲಯ ಸೇರಿದಂತೆ ಹದಿಮೂರು ಜೈನ ಬಸದಿಗಳು ಕಂಡು ಬರುತ್ತವೆ. ಅವುಗಳೆಂದರೆ ಶಾಂತಿನಾಥ ಬಸದಿ, ಕಮಟ ಪಾರ್ಶ್ವನಾಥ ಬಸದಿ (ಅಂತರಾಳ ಪಾರ್ಶ್ವನಾಥ ಸ್ವಾಮಿ ಬಸದಿ) ಚಂದ್ರಗುಪ್ತ ಬಸದಿ ಕತ್ತಲೆ ಬಸದಿ, ಶಾಸನ ಬಸದಿ, ಅಥವಾ ಆದಿನಾಥ ಜಿನಾಲಯ ಚಂದ್ರಪ್ರಭ ಬಸದಿ ಅಥವಾ ವಕ್ರಗಚ್ಛ ಬಸದಿ, ಸುಪಾರ್ಶನಾಥ ಬಸದಿ, ಚಾಮುಂಡಾರಾಯ ಬಸದಿ, ಮಜ್ಜಿಗಣ್ಣನ ಬಸದಿ, ಎರಡುಕಟ್ಟೆ ಅಥವಾ ಆದಿನಾಥ ಬಸದಿ, ಸವತಿಗಂಧವಾರಣ ಬಸದಿ, ತೇರಿನ ಬಸದಿ ಹಾಗೂ ಶಾಂತೀಶ್ವರ ಅಥವಾ ಶಾಂತಿನಾಥ ಬಸದಿ ಇವಲ್ಲೆವೂ ಗಂಗಹೋಯ್ಸಳರ ಕಾಲಘಟ್ಟದಲ್ಲಿ ನಿರ್ಮಿತವಾದವು.

ಅರೆತಿಪ್ಪೂರಿನ ಚಿಕ್ಕಬೆಟ್ಟದ ಮೇಲಿರುವ ಜೈನ ಅವಶೇಷಗಳನ್ನು ಗಮನಿಸಿದಾಗ ಅಲ್ಲಿನ ಸ್ಮಾರಕಗಳು ಸುಮಾರು ಐದು ಮತ್ತು ಆರನೇ ಶತಮಾನಕ್ಕೆ ಸೇರಿದ್ದವು ಎನ್ನಬಹುದು. ೨೦೧೪ರಿಂದೀಚೆಗೆ ಇಲ್ಲಿ ಪುರಾತತ್ವ ಇಲಾಖೆಯವರು ಉತ್ಖನನವನ್ನು ಕೈಗೊಂಡಿದ್ದಾರೆ. ಇಲ್ಲಿಯವರೆಗೆ ಒಂದು ತ್ರಿಕೂಚಚಾಲ ಬಸದಿಯ ಅಧಿಷ್ಟಾನ ಸೇರಿದಂತೆ ಹನ್ನೆರಡು ಬಸದಿಗಳ ಅಧಿಷ್ಟಾನಗಳನ್ನು, ತೀರ್ಥಂಕರರ ಹಾಗೂ ಯಕ್ಷ ಯಕ್ಷಿಯರ ಶಿಲ್ಪಗಳನ್ನು ಹೊರತೆಗೆಯಲಾಗಿದೆ. ತ್ರಿಕೂಟಚಲ ಬಸದಿಯಲ್ಲಿ ಆದಿನಾಥ, ಪಾರ್ಶ್ವನಾಥ, ಮತ್ತು ಶಾಂತಿನಾಥ ತೀರ್ಥಂಕರ ವಿಗ್ರಹಗಳಿದ್ದವು ಎಂದು ತಿಳಿಯಲಾಗಿದೆ. ಈ ಬಸದಿಯ ಮೂಲ ಗರ್ಭಗೃಹದಲ್ಲಿ ಪಾರ್ಶ್ವನಾಥನ ವಿಗ್ರಹವನ್ನು ಸ್ಥಾಪಿಸಲಾಗಿತ್ತು ಎನ್ನುವ ವಿಚಾರವನ್ನು ವಿದ್ವಾಂಸರು ವ್ಯಕ್ತಿಪಡಿಸಿದ್ದಾರೆ. ಅಲ್ಲದೆ ತ್ರಿಕೂಟಚಲ ಬಸದಿಯ ಮುಂದೆ ಸುಂದರವಾದ ದ್ವಾರಪಾಲರ ವಿಗ್ರಹಗಳು ಸಹ ಇವೆ. ಕನಕಗಿರಿ ತೀರ್ಥದ ಒಂದು ಕಡೆ ಹತ್ತು ಬಸದಿಗಳ ಸಮುಚ್ಚಯವಿದ್ದರೆ, ಮತ್ತೊಂದೆಡೆ ಒಂದು ಬಸದಿಯಿದೆ. ಒಟ್ಟಾರೆ ಹನ್ನೆರೆಡು ಬಸದಿಗಳಿದ್ದು, ಮಧ್ಯ ಮಹಾಮಂಟಪವಿದೆ. ಎಲ್ಲಾ ಬಸದಿಗಳು ಮಹಾಮಂಟಪಕ್ಕೆ ಮುಖಮೂಡಿದೆ. ಪ್ರಾಯಶಃ ಮುಖಮಂಟಪವು ಮಠವಾಗಿದ್ದಿರಬಹುದೆಂಬ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಮುಖಮಂಟಪವು ವಿಶಾಲವಾದ ಹಜಾರದಂತಿದ್ದು, ಜೈನ ಮುನಿಗಳ, ಶ್ರಾವಕರ ವಸತಿಯಾಗಿದ್ದಿರಬಹುದು. ಹನ್ನೆರಡು ಚೈತ್ಯಾಲಯಗಳನ್ನು ಬೆಳಕಿಗೆ ಬಂದಿದ್ದರೂ, ಬರಿ ಅವುಗಳ ಅಧಿಷ್ಟಾನ ಭಾಗ ಮಾತ್ರ ಇಂದು ಉಳಿದುಕೊಂಡಿದೆ.

ಅರೆತಿಪ್ಪೂರಿನಲ್ಲಿ ಮಾಡಿರುವ ಇಟ್ಟಿಗೆಯ ಕೆಲಸ ಕರ್ನಾಟಕದಲ್ಲಿ ಎಲ್ಲಿಯೂ ಕಂಡು ಬಂದಿರುವುದಿಲ್ಲ ಹಾಗೂ ಇಲ್ಲಿನ ಅವಶೇಷಗಳು ನಳಂದ, ವಿಷ್ಣುಪುರ ಹಾಗೂ ತಮಿಳುನಾಡಿನ ಕೆಲವು ಅವಶೇಷಗಳನ್ನು ನೆನಪಿಸುತ್ತವೆ ಎಂದು ಖ್ಯಾತ ವಿದ್ವಾಂಸ ಹಂಪಾ ನಾಗರಾಜಯ್ಯನವರು ಅಭಿಪ್ರಾಯಪಟ್ಟಿದ್ದಾರೆ.

ಶ್ರವಣಬೆಳಗೊಳದ ಚಿಕ್ಕಬೆಟ್ಟದ ಮೇಲೆ ಕಂಡುಬರುವಂತೆ, ತಿಪ್ಪೂರಿನ ಚಿಕ್ಕಗುಡ್ಡದ ಮೇಲೆ ಇರುವ ದೊಣೆಗಳಲ್ಲಿರುವ ನೀರನ್ನು ಅಭಿಷೇಕಕ್ಕಾಗಿ ಹಾಗೂ ವಿಗ್ರಹಗಳು ಬಳಸುತ್ತಿದ್ದರೆನ್ನಬಹುದಾಗಿದೆ.

ಶ್ರವಣಬೆಳಗೊಳದ ದೊಡ್ಡಬೆಟ್ಟದ ಅಖಂಡ ಬಾಗಿಲು ಬಳಿ ಬಂಡೆಯ ಮೇಲೆ ಕೆತ್ತಿರುವ ತೀರ್ಥಂಕರ ಉಬ್ಬುಶಿಲ್ಪಗಳಿರುವಂತೆ ತಿಪ್ಪೂರಿನ ಚಿಕ್ಕಬೆಟ್ಟದ ಮೇಲೆ ದೋಣಿಯ ಬಳಿಯ ಬಂಡೆಯ ಮೇಲೆ ತೀರ್ಥಂಕರ ಉಬ್ಬುಶಿಲ್ಪಗಳು ಕಂಡು ಬರುತ್ತದೆ. ಚಿಕ್ಕಬೆಟ್ಟದ ಮೇಲೆ ಬಸದಿಗಳಿದ್ದುದಕ್ಕೆ ಸಾಕ್ಷಿಯಾಗಿ ಇಲ್ಲಿ ಬೇರೆ ಬೇರೆ ಕಡೆಗಳಲ್ಲಿ ದೊಡ್ಡದೊಡ್ಡವಾದ ಇಟ್ಟಿಗೆಗಳ ರಾಶಿಗಳಿವೆ. ಈ ಬಸದಿಗಳು ಯಾವ ತೀರ್ಥಂಕರನದ್ದೆಂದು ಸೂಕ್ಷ್ಮ ಪರೀಶಿಲನೆಯಿಂದ ತಿಳಿಯಬಹುದು. ಚಿಕ್ಕಬೆಟ್ಟದ ಮೇಲೆ ಒಂದು

ಪಾರ್ಶ್ವದಲ್ಲಿರುವ ದೋಣೆಯ ಒಳಗೆ ಎರಡು ಪಾರ್ಶ್ವನಾಥ ತೀರ್ಥಂಕರರ ವಿಗ್ರಹ ಹಾಗೂ ಒಂದು ರುಂಡ ರಹಿತ ತೀರ್ಥಂಕರರ ವಿಗ್ರಹ ಹಾಗೂ ದೋಣೆಯ ಮೇಲ್ಭಾಗದಲ್ಲಿ ಒಂದು ಸುಪಾರ್ಶ್ವನಾಥ ತೀರ್ಥಂಕರನ ವಿಗ್ರಹವಿದೆ. ರುಂಡ ರಹಿತ ತೀರ್ಥಂಕರರ ಮೂರ್ತಿಯು ಪದ್ಮಾಸನ ಭಂಗಿಯಲ್ಲಿದ್ದು, ಮಹಾವೀರನದ್ದೆಂದು ಗುರುತಿಸಬಹುದು. ಅಲ್ಲದೆ ಅಲ್ಲಿಯೇ ಇರುವ ಅವಶೇಷಗಳಲ್ಲಿ ಸಿಂಹಾಸನದ ಅಥವಾ ಸಿಂಹಪೀಠದಲ್ಲಿ ಸಿಂಹ ಲಾಂಛನವಿದೆ. ಈ ಆಧಾರದಿಂದ ಇಲ್ಲಿನ ಒಂದು ಬಸದಿ ಮಹಾವೀರನದ್ದಾಗಿತ್ತೆನ್ನುವುದರಲ್ಲಿ ಸಂಶಯವಿಲ್ಲ. ದೋಣೆಯ ಮೇಲಿರುವ ಸುಪಾರ್ಶ್ವನಾಥನ ಸುಂದರ ಮೂರ್ತಿ ಇಲ್ಲಿನ ಸುಪಾರ್ಶ್ವನಾಥನ ಬಸದಿಯೆದ್ದು ಹಾಗೂ ಇಲ್ಲಿನ ಅವಶೇಷಗಳಲ್ಲಿ ದೊರೆತ ಎರಡು ತೀರ್ಥಂಕರರ ಉಬ್ಬು ಶಿಲ್ಪಗಳು ಯಾವುದೋ ಬಸದಿಯ ದೇವಕೋಷ್ಠಕದಲ್ಲಿದ್ದುವೆಂದು ಊಹಿಸಬಹುದು.

ಶ್ರವಣಬೆಳಗೊಳದ ಬಸದಿಗಳಲ್ಲಿ ಕಂಡು ಬರುವ ಗೋಮೇದ ಯಕ್ಷ, ಸರ್ವಾಣ್ಣ ಯಕ್ಷ ಹಾಗೂ ಕೂಷ್ಮಾಂಡಿನಿ ಯಕ್ಷಿಯ ಶಿಲ್ಪಗಳು ಇಲ್ಲಿ ದೊರೆತಿದ್ದು, ಶಿಲ್ಪರಚನೆಯಲ್ಲಿ ಮೂಲಭೂತವಾಗಿ ಯಾವ ವ್ಯತ್ಯಾಸವನ್ನು ಗುರುತಿಸುವದಕ್ಕಾಗುವುದಿಲ್ಲ. ಅಂದರೆ ಇಲ್ಲಿನ ಹಾಗೂ ಶ್ರವಣಬೆಳಗೊಳದಲ್ಲಿ ಕಂಡು ಬಂದಿರುವ ಶಿಲ್ಪಗಳು ಒಂದೇ ಕಾಲಘಟ್ಟದಾಗಿವೆ.

ಕೂಷ್ಮಾಂಡಿನಿ ಯಕ್ಷಿ ಶ್ರವಣಬೆಳಗೊಳದ ಕ್ಷೇತ್ರಾಧಿದೇವತೆಯಾದರೆ, ತಿಪ್ಪೂರಿನಲ್ಲಿಯ ಜೈನೇಶ್ವರಿ ಅಂದರೆ ಕೂಷ್ಮಾಂಡಿನಿಯೇ (ಅಂಬಿಕಾ) ಕ್ಷೇತ್ರಾದಿದೇವತೆ. ತಿಪ್ಪೂರಿನಲ್ಲಿರುವ ಜೈನಶ್ವೇರಿ ಗುಡಿಯು ಈಗ ಇರುವ ಸ್ಥಳದಲ್ಲಿಯೇ ಹಿಂದೆ ಬಸದಿ ಇತ್ತೆಂದು ಉಹಿಸಲು ಆಧಾರವಾಗಿ ಜೈನೇಶ್ವರಿ ಗುಡಿಯ ಎದುರಿನಲ್ಲಿಯೇ ಹಳೆಯ ಬಸದಿಯ ಅವಶೇಷಗಳಾದ ಕಂಬಗಳು ಬೋದಿಗೆಗಳು ಇತ್ಯಾದಿಗಳು ಬಿದ್ದಿದೆ. ಹಿಂದೆ ಇದ್ದ ಬಸದಿಯನ್ನು ನೆಲಸಮ ಮಾಡಿ ಅದೇ ಸ್ಥಳದಲ್ಲಿಯೇ ಹಿಂದಿನ ಅಧಿಷ್ಠಾನದ ಮೇಲೆಯೇ ಹೊಸ ಗುಡಿಯನ್ನು ಕಟ್ಟಿರುವ ಕುರುಹುಗಳು ಕಂಡು ಬರುತ್ತದೆ. ಬಹುಶಃ ಆಗ ಆ ಬಸದಿಯಲ್ಲಿದ್ದಿರಬಹುದಾದ ಯಕ್ಷಿಯ ವಿಗ್ರಹವನ್ನು ಹೊಸಗುಡಿಯಲ್ಲಿಟ್ಟು ಪೂಜಿಸುತ್ತಿದ್ದರೆಂದು ಕಾಣುತ್ತದೆ. ಸ್ಥಳೀಯರು ಹೇಳುವ ಪ್ರಕಾರ ಹಿಂದೆ ಇಲ್ಲಿದ್ದ ವಿಗ್ರಹದ ಕಿರೀಟದಲ್ಲಿ ತೀರ್ಥಂಕರನ ಶಿಲ್ಪವಿದ್ದು. ಕಂಕುಳಲ್ಲಿ ಮಗುವನ್ನು ಕೂಡಿಸಿಕೊಂಡು ಪಾದಗಳ ಬಳಿ ಸಿಂಹವಿದ್ದ ಸ್ತ್ರೀ ದೇವತೆಯ ಶಿಲ್ಪವನ್ನು ಜೈನೇಶ್ವರಿ ಎಂದು ಪೂಜಿಸುತ್ತಿದ್ದರೆಂದು ತಿಳಿದು ಬರುತ್ತದೆ. ಈ ಎಲ್ಲಾ ಲಕ್ಷಣಗಳನ್ನು ಗಮನಿಸಿದರೆ ಅದು ಅಂಬಿಕಾಯಕ್ಷಿಯದು (ಕೂಷ್ಮಾಂಡಿನಿ) ಎಂದು ತಿಳಿದು ಬರುತ್ತದೆ.

ಎರಡು ತೀರ್ಥಗಳು ಗಂಗರ ಕಾಲದಲ್ಲಿ ಸಮೃದ್ಧ ಜೈನನೆಲೆಯಾಗಿದ್ದು ಮತ್ತೆ ಹೊಯ್ಸಳರ ಕಾಲದಲ್ಲಿ ಅದೇ ಪ್ರಖ್ಯಾತಿಯನ್ನು ಪಡೆದುಕೊಂಡಂತಹವು. ಶ್ರವಣಬೆಳಗೊಳ ತೀರ್ಥವು ಹೊಯ್ಸಳೊತ್ತರ ಕಾಲದಲ್ಲೂ ಸಹ ರಾಜಾಶ್ರಯವನ್ನು ಪಡೆದು ಅಭಿವೃದ್ಧಿ ಹೊಂದಿ ಪ್ರಸ್ತುತದಲ್ಲೂ, ಅತ್ಯಂತ ಸುಸ್ಥಿತಿಯಲ್ಲಿರುವ ಜೈನ ಕ್ಷೇತ್ರವಾದರೆ, ತಿಪ್ಪೂರು ತೀರ್ಥವು ಹೊಯ್ಸಳರ ನಂತರದ ಕಾಲದಲ್ಲಿ ಅವಜ್ಞೆಗೆ ಒಳಗಾಗಿ ತನ್ನ ಅಸ್ಥಿತ್ವವನ್ನು ಶಾಶ್ವತವಾಗಿ ಕಳೆದುಕೊಂಡಿತೆಂದು ಭಾವಿಸಬೇಕಾಗುತ್ತದೆ.

ಕಡೆಯದಾಗಿ ಗಂಗರು ಪ್ರಾಯಶಃ ಅರೆತಿಪ್ಪೂರನ್ನು ಪ್ರಾಯೋಗಿಕ ಜೈನ ನೆಲೆಯನ್ನಾಗಿ ಅಭಿವೃದ್ಧಿಪಡಿಸಿ, ಅನಂತರ ಅತ್ಯಂತ ಸಮೃದ್ಧಿ ಕ್ಷೇತ್ರವಾಗಿ ಶ್ರವಣಬೆಳಗೊಳದಲ್ಲಿ ಶ್ರೇಷ್ಠ ಮಟ್ಟದ ಜೈನ ನೆಲೆಯನ್ನು ಪ್ರಾರಂಭಿಸಿದರೆಂದು ಮತ್ತು ಅದನ್ನು ಅಭಿವೃದ್ಧಿಪಡಿಸಿದರೆಂದು ಹೇಳಬೇಕಾಗುತ್ತದೆ. ಈ ಎರಡು ಕ್ಷೇತ್ರಗಳಲ್ಲಿ ಒಂದೇ ತೆರನಾದ ಸ್ಮಾರಕಗಳ ನಿರ್ಮಾಣ ಕಂಡು ಬರುತ್ತದೆ. ಎತ್ತರದ ಏರಲು ಕಷ್ಟಕರವಾದ ಬೆಟ್ಟದ ಮೇಲೆ ಗೊಮ್ಮಟ ಮೂರ್ತಿಯನ್ನು ಮತ್ತು ಕುಳ್ಳಗಿನ ಸುಲಭವಾಗಿ ಏರಲು ಸಾಧ್ಯವಾದ ಗುಡ್ಡದ ಮೇಲೆ ಬಸದಿಗಳನ್ನು ಮತ್ತು ವಿಹಾರಗಳನ್ನು ನಿರ್ಮಿಸಿ, ಧಾರ್ಮಿಕ ಕೈಂಕರ್ಯಗಳಿಗೆ, ಮುನಿಗಳು ನೆಲೆ ನಿಲ್ಲಲು ಸಣ್ಣ ಗುಡ್ಡವನ್ನು ಬಳಸಿಕೊಂಡು ವೈಭವದ ಯಾತ್ರೆಗಳಿಗೆ ದೊಡ್ಡ ಗುಡ್ಡವನ್ನು ಬಳಸಿಕೊಂಡಿರುವ ಕ್ರಮ ಇಲ್ಲಿಯೇ ಆರಂಭವಾಗಿರಬೇಕು ಈ ಮಾದರಿ ಯಶಸ್ವಿಯಾದುದನ್ನು ಶ್ರವಣಬೆಳಗೊಳದಲ್ಲಿ ಪ್ರಾಯಶಃ ದೊಡ್ಡ ಪ್ರಮಾಣದಲ್ಲಿ ನೆರವೇರಿಸಿರುವ ಸಾಧ್ಯತೆಯನ್ನು ತಳ್ಳಿಹಾಕಲಾಗುವುದಿಲ್ಲ.

## ಆಕರ ಗ್ರಂಥಗಳು


೧. ತಮಿಳುಸೆಲ್ವಿ : ಅರೆತಿಪ್ಪೂರಿನ ಜೈನ ಅವಶೇಷಗಳು, ಮುಕ್ಕೊಡೆ, ಡಾ:ಸಿ.ಎಸ್. ವಾಸುದೇವನ್ (ಸಂ), ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧.

೨. ಮಂಜುನಾಥ ಎಂ.ಜಿ : ಮಂಡ್ಯ ಜಿಲ್ಲೆಯಲ್ಲಿ ಜೈನ ಧರ್ಮ, ಮಂಡ್ಯ ಜಿಲ್ಲೆಯ ಪುರಾತತ್ವ ಮತ್ತು ಇತಿಹಾಸ, ಡಾ: ಆರ್ ಗೋಪಾಲ್ (ಸಂ) ಮೈಸೂರು, ೨೦೦೯.

೩. ಪುಟ್ಟಸ್ವಾಮಿ ಬಿ.ಎಸ್ : ಅರೆತಿಪ್ಪೂರು– ಏ ಜೈನಾಸೆಂಟರ್ ಇನ್ ಜೈನಿಸಂ ಥ್ರೂ ದಿ ಏಜಸ್ ಡಾ: ಗೋಪಾಲ್ ಆರ್. (ಸಂ) ಮೈಸೂರು, ೨೦೧೧.

೩೩

# ಸೋಂದಾ ಅರಸರ ಧರ್ಮ ಸಹಿಷ್ಣುತೆ

**ಲಕ್ಷ್ಮೀಶ ಹೆಗಡೆ ಸೋಂದಾ***

**ಸೋಂ**ದಾ ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ ಒಂದು ಹೋಬಳಿ. ಇದು ಶಿರಸಿಯಿಂದ ಹದಿನೆಂಟು ಕಿಲೋಮೀಟರ್ ಅಂತರದಲ್ಲಿದೆ. ಇದೊಂದು ಐತಿಹಾಸಿಕವಾಗಿ ಮತ್ತು ಧಾರ್ಮಿಕವಾಗಿ ಪ್ರಾಮುಖ್ಯತೆ ಪಡೆದಿರುವ ಪ್ರದೇಶವಾಗಿದೆ. ಸೋಂದಾದ ಐತಿಹಾಸಿಕ ಪ್ರಾಮುಖ್ಯತೆ ಪ್ರಾಗೈತಿಹಾಸಿಕ ಕಾಲದವರೆಗೂ ಹೋಗುತ್ತದೆ. ಈ ಪ್ರದೇಶವು ಹಿಂದೆ ಸುಧಾಪುರ, ಸೋಮಧಾಪುರ, ಸೋವದೆ, ಸ್ವಾದಿ, ಸೋದೆ[೧] ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿತ್ತು. ಸುಮಾರು ಕ್ರಿ.ಶ. ೧೦ನೇ ಶತಮಾನದಿಂದ ಈ ಪ್ರದೇಶವು ಹಾನ್ಗಲ್ ಕದಂಬರ ಆಡಳಿತ ವ್ಯಾಪ್ತಿಯಲ್ಲಿತ್ತು. ಹತ್ತನೇ ಶತಮಾನಕ್ಕೂ ಪೂರ್ವದಲ್ಲಿ ಈ ಸ್ಥಳ ಯಾವುದೇ ರಾಜ ಮನೆತನ ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿ ಗುರುತಿಸಿಕೊಳ್ಳದೆ ಕೇವಲ ಧಾರ್ಮಿಕ ಮತ್ತು ಆಧ್ಯಾತ್ಮಿಕ ಪ್ರದೇಶವಾಗಿತ್ತು. ಈ ಪ್ರದೇಶವನ್ನು ರಾಜಧಾನಿಯನ್ನಾಗಿಸಿ ತಮ್ಮ ತಮ್ಮ ಆಡಳಿತದ ಪ್ರಮುಖ ಕೇಂದ್ರವನ್ನಾಗಿ ಮಾಡಿಕೊಂಡವರು ಸೋಂದೆ ಅರಸರು. ಈ ಅರಸು ಮನೆತನದ ಮೂಲದ ಕುರಿತು ಜಿಜ್ಞಾಸೆಯಿದೆ. ಮರಾಠ ಬಖೈರುಗಳ ಪ್ರಕಾರ ವಿಜಯನಗರದ ರಾಜನಾಗಿದ್ದ ಸದಾಶಿವರಾಯನ ತಂಗಿಯ ಮಗನಾಗಿದ್ದ ಬಂಕಾಪುರದ ವೆಂಕಟಪತಿದೇವನು ಈ ವಂಶದ ಮೂಲಪುರುಷನೆಂದು ಹೇಳಲಾಗಿದೆ. ಇನ್ನೊಂದು ಅಭಿಪ್ರಾಯದಲ್ಲಿ ಬುಕಾನನ್‌ನ ಸಂಗ್ರಹದ ಪ್ರಕಾರ[೨] ವಿಜಯನಗರದ ವೆಂಕಟಪತಿರಾಯನು ತನ್ನ ಸಹೋದರಿಯ ಮಗ ಅರಸಪ್ಪ ನಾಯಕನಿಗೆ ಸೋದೇ ಪ್ರದೇಶವನ್ನು ಬಿಟ್ಟುಕೊಟ್ಟಿದ್ದ, ನಂತರ ಅರಸಪ್ಪ ನಾಯಕನು ಸೋದೆಯಲ್ಲಿದ್ದ ಜೈನ ಪಾಳೇಗಾರನನ್ನು ಓಡಿಸಿ ತನ್ನ ಅಧಿಪತ್ಯವನ್ನು ಸಾಧಿಸಿಕೊಂಡ ಎಂಬುದಾಗಿದೆ.

ಮೂರನೆಯದಾಗಿ ಕ್ರಿ.ಶ ೧೪೦೪ರ ಹುಲೇಕಲ್ ಶಾಸನ ಮತ್ತು ಕ್ರಿ.ಶ. ೧೪೫೧ರ ವಿಜಯನಗರದ ದೇವರಾಯನ ಸೋದೆಯ ಶಾಸನದ ಪ್ರಕಾರ[೩] ಸೋದೆಯ ಅರಸರು ವಿಜಯನಗರದ ಮೂಲದವರಾಗಿ ಅವರಿಗೆ ಅಧೀನರಾಗಿ ಇಲ್ಲಿ ಆಳ್ವಿಕೆ ಮಾಡುತ್ತಿದ್ದರು ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ ಅಲ್ಲದೆ ಇವರು ಈ ಹಿಂದೆ ಇದ್ದ ನಾಯಕ ವಂಶದವರೇ ಎಂದು ಹೇಳಬಹುದು. ಸೋದೆಯ ಅರಸೊತ್ತಿಗೆಯನ್ನು ಆಳ್ವಿಕೆ ಮಾಡಿದ ಪ್ರಮುಖ ಅರಸರುಗಳೆಂದರೆ ೧. ಇಮ್ಮಡಿ ಅರಸಪ್ಪ ನಾಯಕ (ಕ್ರಿ.ಶ. ೧೫೫೫–೧೫೯೮)

೨. ರಾಮಚಂದ್ರ ನಾಯಕ (ಕ್ರಿ.ಶ. ೧೫೯೮–೧೬೧೮) ೩. ರಘುನಾಥ ನಾಯಕ (ಕ್ರಿ.ಶ. ೧೬೧೮–೧೬೩೮) ೪. ಮಧುಲಿಂಗ ನಾಯಕ (ಕ್ರಿ.ಶ. ೧೬೩೮–೧೬೬೫) ೫. ಸವಾಯಿ ರಾಮಚಂದ್ರ ನಾಯಕ (ಕ್ರಿ.ಶ. ೧೬೬೫–೧೬೭೮) ೬. ಒಂದನೇ ಸದಾಶಿವರಾಯ (ಕ್ರಿ.ಶ. ೧೬೭೮–೧೭೧೮) ೭. ಬಸವಲಿಂಗರಾಯ (ಕ್ರಿ.ಶ. ೧೭೧೮–೧೭೪೫) ೮. ಇಮ್ಮಡಿ ಸದಾಶಿವರಾಯ (ಕ್ರಿ.ಶ. ೧೭೪೫–೧೭೬೩)

ಸೋದೆ ಅರಸರ ಮೂಲದ ಜಿಜ್ಞಾಸೆಯಲ್ಲಿ ಎರಡು ವಿಭಿನ್ನ ಅಭಿಪ್ರಾಯಗಳಿವೆ. ಮೊದಲನೆಯದಾಗಿ ಅದಾಗಲೇ ಸೋದೆಯಲ್ಲಿದ್ದ ನಾಯಕ ವಂಶಸ್ಥರೇ ಇವರು ಎಂದಾದರೆ ಇವರ ಮೂಲಧರ್ಮ ಜೈನಧರ್ಮವೆಂದು ಹೇಳಬೇಕಾಗುತ್ತದೆ. ಮರಾಠಿ ಬಖೈರು ಮತ್ತು ಬುಕಾನನ ಪ್ರಕಾರ ಇವರು ಮೂಲತಃ ವೈಷ್ಣವ, ಪಂಥೀಯರು ಎಂದಾಗುತ್ತದೆ. ಅವರ ಮೂಲದ ಕುರಿತು ಈ ಭಿನ್ನತೆ ಏನೇ ಇದ್ದರು ಒಂದಂತು ಸ್ಪಷ್ಟ, ಸೋದೆಯನ್ನಾಳಿದ ಅರಸರು ಮೊದಲು ಜೈನ ಧರ್ಮ ನಂತರ ವೈಷ್ಣವ ಪಂಥ ಆನಂತರ ಸ್ಮಾರ್ಥ ಕೊನೆಯಲ್ಲಿ ಶೈವ ಪಂಥದ ಅನುಯಾಯಿಗಳಾಗಿ ಮನೆತನದ ಆಳ್ವಿಕೆಯ ಮುಕ್ತಾಯದವರೆಗೂ ಶೈವರಾಗಿಯೇ ಉಳಿದರು ಮತ್ತು ಗೋವಾದ ಬಾಂದೋರದಲ್ಲಿ ಇಂದಿಗೂ ಅಸ್ತಿತ್ವದಲ್ಲಿರುವ ಈ ವಂಶಸ್ಥರು ಶೈವ ಪಂಥೀಯರಾಗಿಯೇ ಮುಂದುವರೆದಿದ್ದಾರೆ.

ಸೋದೆ ಅರಸರ ಶ್ರೇಷ್ಠತೆ ಕಂಡು ಬರುವುದೇ ಅವರು ಅನುಸರಿಸಿದ್ದ ಧಾರ್ಮಿಕ ಸಹಿಷ್ಣುತಾ ನೀತಿಯಲ್ಲಿ ಸೋದೆ ಅರಸುಮನೆತನದ ಆರಂಭಿಕ ಅರಸನಿಂದ ಹಿಡಿದು ಕೊನೆಯ ಅರಸನವರೆಗೂ ಈ ನೀತಿ ಮುಂದುವರೆದಿತ್ತು ಎಂಬುದು ವಿಶೇಷ ಸಂಗತಿ. ಈ ಮನೆತನದ ಆರಂಭಿಕ ಅರಸನಾಗಿದ್ದ ಇಮ್ಮಡಿ ಅರಸಪ್ಪ ನಾಯಕ (ಕ್ರಿ.ಶ. ೧೫೫೫–೧೫೯೮) ಈತ

* ಉಪನ್ಯಾಸಕರು, ಸಾ. ಬಾಡ್ಲಕೊಪ್ಪ, ಸೋಂದಾ ಅಂಚೆ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ, ಮೊ. ೯೪೮೨೨೨೧೨೧೬೬

ಧರ್ಮ ಮಹಾಪ್ರಭು ಎನಿಸಿಕೊಂಡಿದ್ದ. ಧರ್ಮಾತೀತ ಸಾಮಂತ ದೊರೆಯಾಗಿದ್ದ ಈತ ಮೂಲತಃ ಜೈನಮತಾವಲಂಬಿಯಾಗಿದ್ದರೂ ಆಗ ಸೋದೆಯಲ್ಲಿದ್ದ ವಾದಿರಾಜರ ಪ್ರಭಾವದಿಂದ ವೈಷ್ಣವ ಪಂಥದ ಅನುಯಾಯಿಯಾದ ವಾದಿರಾಜರ ಆಣತಿಯಂತೆಯೇ ಸೋದೆಯಲ್ಲಿ ರಮಾ ತ್ರಿವಿಕ್ರಮ ದೇವಾಲಯ, ಹುಣಸೇಹೊಂಡದ ಪೇಟೆ ವೆಂಕಟರಮಣ ದೇವಾಲಯ, ಮುತ್ತಿನಕೆರೆಯ ವೆಂಕಟರಮಣ ದೇವಾಲಯ, ಹಾಗೆಯೇ ವಾದಿರಾಜ ಮಠದ ಕಟ್ಟಡ, ಜೈನಮಠದ ಕಟ್ಟಡಗಳನ್ನೂ ನಿರ್ಮಿಸಿದ. ಬನವಾಸಿಯಲ್ಲಿ ನರಸಿಂಹ ಗುಡಿಯನ್ನೂ ಸ್ಥಾಪಿಸಿದ್ದ. ಇದರ ಜೊತೆಯಲ್ಲಿ ಆದಿಶಂಕರಾಚಾರ್ಯರಿಂದ ಕಾಶಿಯ ದಶಾಶ್ವಮೇಧ ಘಾಟಿನಲ್ಲಿ ಸ್ಥಾಪಿಸಲ್ಪಟ್ಟು ನಂತರ ಉಜ್ಜಯಿನಿ, ಗೋಕರ್ಣ, ಕಡತೋಕೆಗೆ ಬಂದು ಅಲ್ಲಿಂದ ಸೋದೆಯ ಶಾಲ್ಮಲಾ ನದಿಯ ದಂಡೆಯ ಮೇಲೆ ಅಸ್ಥಿತ್ವದಲ್ಲಿದ ಸ್ಮಾರ್ತರ ಮಠವನ್ನು ಸ್ಥಳಾಂತರಿಸಿ ಅದಕ್ಕೆ ಹೊಸ ಕಟ್ಟಡವನ್ನು ನಿರ್ಮಿಸಿ ಅದಕ್ಕೆ ಸ್ವರ್ಣವಲ್ಲೀ ಮಠ ಎಂಬ ಹೆಸರನ್ನು ನೀಡಿದ್ದ[೪]. ವಾದಿರಾಜ ಮಠದ ರಥಬೀದಿಯಲ್ಲಿ ನಿಲ್ಲಿಸಿಟ್ಟ ಶಾಸನ ರಮಾ ತ್ರಿವಿಕ್ರಮ ದೇವಾಲಯದ ನಿರ್ಮಾಣದ ಇತಿಹಾಸವನ್ನು ಹೇಳಿದರೆ, ಸ್ವರ್ಣವಲ್ಲೀ ಮಠದ ನರಸಿಂಹ ದೇವಾಲಯದ ಗೋಡೆಯ ಮೇಲೆ ಕೆತ್ತಲ್ಪಟ್ಟ ಶಾಸನ ಸ್ವರ್ಣವಲ್ಲೀ ಮಠದ ನಿರ್ಮಾಣದ ಕಟ್ಟಡ ನಿರ್ಮಾಣಕ್ಕೂ ಶಾಸನಾಧಾರಗಳಿವೆ[೫]. ಮೇಲಿನ ಸಂಗತಿಗಳು ಸೋದೆಯ ಇಮ್ಮಡಿ ಅರಸಪ್ಪನಾಯಕನ ಶ್ರೇಷ್ಠ ಧರ್ಮ ಸಹಿಷ್ಣುತಾ ನೀತಿಗೆ ಸಾಕ್ಷಿಗಳಾಗಿವೆ.

ಅರಸಪ್ಪ ನಾಯಕನ ನಂತರ ಸೋದೆಯ ಸಿಂಹಾಸನವನ್ನು ಅಲಂಕರಿಸಿದವನು ರಾಮಚಂದ್ರ ನಾಯಕ (ಕ್ರಿ.ಶ. ೧೫೫೮-೧೬೧೮) ಈತ ಕೂಡಾ ತನ್ನ ತಂದೆಯ ಸಪರಂಪರೆಯನ್ನು ಮುಂದುವರೆಸಿದ್ದ.

ಈತ ಕೂಡಾ ಸೋದೆಯಲಿದ್ದ ಮೂರು ಧರ್ಮಪೀಠಗಳಿಗೂ ಸಾಕಷ್ಟು ದಾನ ದತ್ತಿಗಳನ್ನು ನೀಡಿ ಸಮಾನವಾಗಿ ಗೌರವಿಸಿದ್ದ. ಶಿರಸಿಯಲ್ಲಿ ಜೈನಬಸದಿಗಳನ್ನು ನಿರ್ಮಿಸಿ, ಮಹಾಗಣಪತಿ ದೇವಾಲಯ, ವೀರಭದ್ರ ದೇವಾಲಯಗಳನ್ನೂ ನಿರ್ಮಿಸಿ ಶಿರಸಿಗೆ ಚನ್ನಪಟ್ಟಣ ಎಂದು ಹೆಸರಿಸಿ ಅಲ್ಲಿ ರಸ್ತೆಗಳನ್ನು, ಕೋಟೆಗಳನ್ನು, ಕೆರೆಗಳನ್ನು ನಿರ್ಮಿಸಿ ಶಿರಸಿಯ ಸ್ಥಾಪಕನೆನಿಸಿದ್ದ[೬]. ಅಂತೆಯೇ ಬನವಾಸಿಯ ಮಧುಕೇಶ್ವರ ದೇವಾಲಯಕ್ಕೂ ನಡೆದುಕೊಳ್ಳುತ್ತಿದ್ದ ಈತ ಈ ದೇವಾಲಯಕ್ಕೆ ಮಹಾರಥವೊಂದನ್ನು ನಿರ್ಮಿಸಿ ಕೊಡುಗೆಯಾಗಿ ನೀಡಿದ್ದ. ಇವನ ಈ ಕಾರ್ಯಗಳೂ ಧರ್ಮಸಹಿಷ್ಣುತೆಯ ಶ್ರೇಷ್ಠ ನಿದರ್ಶನ ಎನ್ನಬಹುದು. ಹಾಗಲ್ಲದೇ ಸೋದೆಯ ಸಮೀಪದ ಬೆಳಗುಂದ್ಲಿ[೭] ಎಂಬಲ್ಲಿ ಲಕ್ಷ್ಮೀ ನಾರಾಯಣ ದೇವಾಲಯವನ್ನು ಆತನೇ ನಿರ್ಮಿಸಿದ್ದ.

ರಾಮಚಂದ್ರ ನಾಯಕನ ನಂತರ ಸೋದೆಯ ಅರಸೊತ್ತಿಗೆಯನ್ನು ಅಲಂಕರಿಸಿದವನು ಇವನ ಮಗನಾದ ರಘುನಾಥ ನಾಯಕ (ಕ್ರಿ.ಶ.೧೬೧೮-೧೬೩೮) ಕ್ರಿ.ಶ. ೧೬೨೪ರ ಬನವಾಸಿ ಶಾಸನ ಮತ್ತು ೧೬೩೧ರ ಶಿರಸಿಯ ಶಾಸನ ಹಾಗೂ ಮತ್ತಿತರ ದಾಖಲೆಗಳು ಈತನ ಧಾರ್ಮಿಕ ವ್ಯಕ್ತಿತ್ವವನ್ನು ತಿಳಿಸುತ್ತದೆ. ಸೋದೆಯಲ್ಲಿದ್ದ ಮೂರು ವಿಭಿನ್ನ ಪಂಥಗಳ ಧರ್ಮಪೀಠಗಳಿಗೆ ಸಮಾನ ಆದ್ಯತೆ ನೀಡಿದ್ದ. ಕ್ರಿ.ಶ. ೧೬೨೯ರ ತಾಮ್ರಪಟ ಶಾಸನವೊಂದು ಸೋದೆಯ ವಾದಿರಾಜ ಮಠದ ರಥಬೀದಿಯಲ್ಲಿ ಗುಡಿಯೊಂದನ್ನು ನಿರ್ಮಿಸಿ ತಮ್ಮ ಪೂರ್ವಜರು ಪೂಜಿಸಲು ಬಂದ ಸೀತಾರಾಮಚಂದ್ರ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ ವಿಚಾರ ತಿಳಿಸುತ್ತದೆ[೮]. ಅಂತೆಯೇ ಕ್ರಿ.ಶ. ೧೬೨೯ರ ತಾಮ್ರಪಟ ಶಾಸನವೊಂದು ಹುಲೇಕಲ್ಲಿನ ಲಕ್ಷ್ಮೀನಾರಾಯಣ ದೇವಾಲಯಕ್ಕೆ ಗ್ರಾಮಗಳನ್ನು ದತ್ತಿ ನೀಡಿದ ವಿಚಾರ ತಿಳಿಸುತ್ತದೆ. ಈತನ ಮಹೋನ್ನತ ಸಾಧನೆ ಎಂದರೆ ಬನವಾಸಿಯ ಮಧುಕೇಶ್ವರ ದೇವಾಲಯಕ್ಕೆ ಶಿವರಾತ್ರಿಯ ಸಂದರ್ಭದಲ್ಲಿ ಈತ ಕಾಣಿಕೆಯಾಗಿ ನೀಡಿದ ಮನೋಜ್ಞ ಕಲಾಕುಸುರಿಯ ಶಿಲಾಮಂಟಪ. ರಘುನಾಥ ನಾಯಕನ ನಂತರ ಸೋದೆಯ ರಾಜಪಟ್ಟವನ್ನೇರಿದವನು ಈತನ ಮಗ ಮಧುಲಿಂಗ ನಾಯಕ (ಕ್ರಿ.ಶ. ೧೬೩೮-೧೬೬೫) ಈತನ ಕಾಲದಿಂದ ಸೋದೆಯ ಅರಸರು ಶೈವಧರ್ಮಕ್ಕೆ ಮತಾಂತರ ಹೊಂದಿದರು. ಆದಾಗ್ಯೂ ಅನ್ಯ ಧರ್ಮ ಮತ್ತು ಅನ್ಯ ಪಂಥಗಳ ಕುರಿತಾದ ಸಮಾನ ಭಾವಕ್ಕೆ ಯಾವ ಧಕ್ಕೆಯೂ ಬರಲಿಲ್ಲ. ಆದರೆ ವೈಷ್ಣವ, ಸ್ಮಾರ್ತ, ಮತ್ತು ಜೈನ ಮಠಗಳ ಜೊತೆ ಸೋದೆಯಲ್ಲಿ ವೀರಶೈವ ಪರಂಪರೆಯೂ ಪ್ರಾರಂಭವಾಗಿದ್ದು ಇವನ ಕಾಲದಲ್ಲಿಯೇ, ಮುಖ್ಯವಾಗಿ ಸೋದೆಯ ಮಹಂತಿನಮಠ ಅಥವಾ ಮಹಂತ್ರೀ ಮಠ ಎಂದು ಕರೆಯಲ್ಪಡುತ್ತಿರುವ ಪ್ರಸ್ತುತದ ಸೋದೆಯ ವೀರಶೈವರ ವಿರಕ್ತ ಮಠವು ಈತನ ಕಾಲದಲ್ಲಿಯೇ ಸೋದೆಯಲ್ಲಿ ನಿರ್ಮಿಸಲ್ಪಟ್ಟಿತು. ಇದ ಯಾವುದೇ ಶಾಸನಾಧಾಗಳಿಲ್ಲದಿದ್ದರೂ ತಾರ್ಕಿಕ

ಹಿನ್ನೆಲೆಯಲ್ಲಿ ಇದನ್ನು ಹೇಳಬಹುದು. ಈತನ ನಂತರ ಇವನ ಜ್ಯೇಷ್ಠ ಪುತ್ರ ಸವಾಯಿರಾಮಚಂದ್ರ ನಾಯಕ (ಕ್ರಿ.ಶ. ೧೬೬೫-೧೬೭೮) ರಾಜನಾದ. ಈತ ಮೂಲತಃ ಶೈವ ಧರ್ಮದ ಅನುಯಾಯಿಯಾಗಿದ್ದರೂ ವಾದಿರಾಜ ಮಠ, ಜೈನ ಮಠಗಳಿಗೆ ಪ್ರಾಮುಖ್ಯತೆ ನೀಡಿ ಗೌರವಿಸಿದ್ದ, ಅದರಲ್ಲೂ ವಿಶೇಷವಾಗಿ ಸ್ವರ್ಣವಲ್ಲೀ ಮಠದ ಮೇಲೆ ಈತನಿಗೆ ಅಪಾರ

ಭಕ್ತಿ ಗೌರವವಿದ್ದುದು ತೋರುತ್ತದೆ. ಸ್ವರ್ಣವಲ್ಲೀ ಮಠದ ನರಸಿಂಹ ಗುಡಿಯ ಎದುರಿಗೆ ನಿಲ್ಲಿಸಿದ ಶಾಸನವೊಂದು ಈ ವಿಚಾರವನ್ನು ಸ್ಪಷ್ಟಪಡಿಸುತ್ತದೆ[೯]. ಇದು ಸ್ವತಃ ಈತನೇ ಹೊರಡಿಸಿದ ಶಾಸನ, ಇದರ ಕಾಲಮಾನ ಕ್ರಿ.ಶ ೧೬೭೪ ಈ ಶಾಸನದ ವಿಶೇಷತೆ ಎಂದರೆ ಶಾಸನದ ಮೇಲೆ ಯಜ್ಞಕುಂಡದ ಚಿತ್ರವನ್ನು ಕೆತ್ತಲ್ಪಟ್ಟ ದೇಶದ ಅತ್ಯಂತ ಅಪರೂಪದ ಶಾಸನ ಇದಾಗಿದೆ. ಇದು ಒಳಗೊಂಡಿರುವ ವಿಷಯವೇನೆಂದರೆ, ರಾಜ ಕುಟುಂಬದ ಮತ್ತು ನಾಡಿನ ಹಿತಕ್ಕೋಸ್ಕರ ಸ್ವಸ್ಥಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷ ೧೫೬೫ನೆಯ ಪ್ರಮಾದಿ ನಾಮ ಸಂವತ್ಸರದ ಮಾಘ ಶುದ್ಧ ೪ ಸ್ಥಿರವಾರದಂದು ಸ್ವರ್ಣವಲ್ಲೀ ಮಠದ ಸರ್ವಜ್ಞ ಸರಸ್ವತೀ ಶ್ರೀ ಪಾದಂಗಳವರ ಸಾನಿಧ್ಯದಲ್ಲಿ ಸೋದೆಯ ಮಹಾಪ್ರಭು ಸವಾಯಿ ರಾಮಚಂದ್ರ ನಾಯಕರು, ಕಾಶೀ ಕ್ಷೇತ್ರದಿಂದ ವಿಶ್ವಪತಿ ಭಟ್ಟರನ್ನು ಕರೆಸಿ ಕಡತೋಕೆಯ ಶಂಭೂದೇವರ ಭಟ್ಟರ ಮಗ ಅಗ್ನಿಹೋತ್ರಿ ಕೇಶವ ಭಟ್ಟರ ಕೈಯಲ್ಲಿ ಯಜ್ಞವೊಂದನ್ನು ಮಾಡಿಸಿದ ವಿಚಾರವನ್ನು ತಿಳಿಸುತ್ತದೆ.

ಸವಾಯಿ ರಾಮಚಂದ್ರ ನಾಯಕರ ನಂತರ ಸೋದೆಯ ಅರಸನಾದವನು ಈ ಮನೆತನದ ಅತ್ಯಂತ ಪ್ರಸಿದ್ಧ ರಾಜನೆನಿಸಿದ ಒಂದನೇ ಸದಾಶಿವರಾಯ (ಕ್ರಿ.ಶ. ೧೬೭೮–೧೭೧೮) ಈತನೋರ್ವ ಶೈವಧರ್ಮೀಯ ದೊರೆ, ಸೋದೆಯಲ್ಲಿ ಶೈವ ಪಂಥವನ್ನು ಪ್ರಬಲವಾಗಿ ಬೆಳೆಸಲು ಪ್ರಯತ್ನಿಸಿದ್ದ ದೊರೆ, ಇದರ ಜೊತೆಯಲ್ಲೇ ಧರ್ಮ ಸಹಿಷ್ಣುತೆಯನ್ನೂ ಅನುಸರಿಸಿದವನು ಈತನೋರ್ವ ವಿದ್ವಾಂಸ ರಾಜ, ಸಾಹಿತಿ, ಕವಿ, ಸಂಗೀತಜ್ಞ, ಕಲೆ, ವಾಸ್ತುಶಿಲ್ಪ, ಸಂಸ್ಕೃತಿಯ ಪೋಷಕ ಆರಾಧಕ ಚತುರ್ಭಾಷಾ ಪಂಡಿತ[೧೦] (ಕನ್ನಡ, ಸಂಸ್ಕೃತ, ಉರ್ದು, ಮರಾಠಿ) ಧರ್ಮ ಸಹಿಷ್ಣುತಾ ನೆಲೆಯಲ್ಲಿ ಈತನ ಮಹತ್ತರ ಕೊಡುಗೆಗಳೆಂದರೆ ಸೋದೆಯ ಹಳೆಯೂರು ಎಂಬಲ್ಲಿ ದ್ವಿಕೂಟ ಶಿಲಾಮಯ ದೇವಾಲಯವೊಂದನ್ನು ನಿರ್ಮಿಸಿ ಅವರಲ್ಲಿ ಒಂದು ಗರ್ಭಗುಡಿಯಲ್ಲಿ ಶಂಕರ ಅಥವಾ ಶಿವಲಿಂಗವನ್ನು ಪ್ರತಿಷ್ಠಾಪಿಸಿ ಮತ್ತೊಂದರಲ್ಲಿ ನಾರಾಯಣ ಅಥವಾ ವಿಷ್ಣುವಿನ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದ, ಇದು ಸೋದೆ ಅರಸರ ಧಾರ್ಮಿಕ ಸಹಿಷ್ಣುತೆಗೆ ಸಾಕ್ಷಿಯಾಗಿ ಇಂದಿಗೂ ಸುರಕ್ಷಿತವಾಗಿದೆ. ಇದನ್ನೂ ಹೊರತು ಪಡಿಸಿ ಈತನ ಧಾರ್ಮಿಕ ಕೊಡುಗೆಗಳೆಂದರೆ, ಶಾಲ್ಮಲಾ ನದಿಯ ತಟದಲ್ಲಿ ಸಾವಿರಾರು ಲಿಂಗಗಳನ್ನು ಕೆತ್ತಿಸಿದ್ದು, ಬನವಾಸಿಯ ಮಧುಕೇಶ್ವರ ದೇವಾಲಯಕ್ಕೆ ಅತ್ಯಂತ ಸುಂದರ ಕಲಾ ಕುಸುರಿಯುಳ್ಳ ತ್ರೈಲೋಕ್ಯ ಮಂಟಪವನ್ನು ಕೊಡುಗೆಯಾಗಿ ನೀಡಿದ್ದು, ಶಿರಸಿಯ ಅತ್ಯಂತ ಪ್ರಸಿದ್ಧಮಾರಿಕಾಂಬಾ ದೇವಾಲಯದ ಸ್ಥಾಪನೆ, ಇತ್ಯಾದಿ. ಈತ ಬಿಜಾಪುರದ ಆದಿಲ್ ಷಾಹಿಗಳ ಜೊತೆಗೂ ಸ್ನೇಹಯುತವಾದ ಸಂಬಂಧಹೊಂದಿದ್ದ ತನ್ನ ಸಾಮ್ರಾಜ್ಯದ ಪ್ರಸಿದ್ಧ ಕಲೆಯಾದ ಯಕ್ಷಗಾನವನ್ನು ಬಿಜಾಪುರದ ಸುಲ್ತಾನನ ಆಸ್ಥಾನದಲ್ಲಿ ಪ್ರದರ್ಶಿಸಿ ತನ್ನ ಸೃಜನಶೀಲ ಚಿಂತನೆಗೂ ಸಾಕ್ಷಿಯಾಗಿದ್ದ[೧೧]. ಈತನ ಸಮಾಧಿ ಅಥವಾ ಗದ್ದುಗೆ ಸೋದೆಯ ಬಾಡಲಕೊಪ್ಪ ಎಂಬ ಸ್ಥಳದಲ್ಲಿರುವ ಗದ್ದುಗೆ ಸ್ಮಾರಕದ ಎದುರಿಗಿದೆ.

ಸದಾಶಿವರಾಯನ ನಂತರದ ಆಳ್ವಿಕೆ ಬಸವಲಿಂಗರಾಯನದು, (ಕ್ರಿ.ಶ. ೧೭೧೮–೧೭೪೫) ಈತ ಕೂಡಾ ತನ್ನ ಪೂರ್ವಜರ ಹಾಗೆಯೇ ಧಾರ್ಮಿಕ ಸಮಾನತೆಯ ನಿಲುವನ್ನು ಮುಂದುವರೆಸಿದ, ಸೋದೆಯ ನಾಲ್ಕು ವಿಭಿನ್ನ ಪಂಥಗಳ ಮಠಗಳನ್ನು ಸಮಾನವಾಗಿ ಕಂಡು ಪೋಷಿಸಿದ, ಬನವಾಸಿಯ ಮಧುಕೇಶ್ವರ ದೇವಾಲಯದ ಆವರಣದಲ್ಲಿಯೇ ಶಿಲಾಮಯವಾದ ಗುಡಿಯೊಂದನ್ನ ನಿರ್ಮಿಸಿ ಶಿವಲಿಂಗವೊಂದನ್ನು ಪ್ರತಿಷ್ಠಾಪಿಸಿ ಅದಕ್ಕೆ ಬಸವಲಿಂಗೇಶ್ವರ ಗುಡಿ ಎಂದು ಕರೆದ, ಇವನ ನಂತರದ ಆಳ್ವಿಕೆ ಈ ಮನೆತನದ ಕೊನೆಯ ರಾಜನಾಗಿದ್ದ ಇಮ್ಮಡಿ ಸದಾಶಿವರಾಯನದು (ಕ್ರಿ.ಶ. ೧೭೪೫–೧೭೬೩) ಈತ ಕೂಡಾ ಹಿಂದಿನ ಸತ್ಪರಂಪರೆಯನ್ನು ಮುಂದುವರೆಸಿ ಅದಕ್ಕೆ ಧಕ್ಕೆ ಬಾರದ ರೀತಿಯಲ್ಲಿ ನಡೆದುಕೊಂಡ.

ಈ ಮೇಲಿನ ಸಂಗತಿಗಳು ಕ್ರಿ.ಶ. ೧೫ನೇ ಶತಮಾನದಿಂದ ೧೮ನೇ ಶತಮಾನದ ಮಧ್ಯದವರೆಗೆ ಸೋದೆ ಅರಸುಮನೆತನದ ಅರಸರು ಅನುಸರಿಸಿದ ಧಾರ್ಮಿಕ ಸಹಿಷ್ಣುತಾ ನೀತಿಯಾದರೆ, ಇನ್ನೊಂದು ರೀತಿಯಲ್ಲಿ ಇದೇ ನೀತಿ ಅನಾವರಣಗೊಳ್ಳುತ್ತದೆ. ಅದು ಸೋದೆ ಕ್ಷೇತ್ರದಲ್ಲಿ ಅಸ್ತಿತ್ವದಲ್ಲಿರುವ ವಿಭಿನ್ನ ಧರ್ಮ, ಪಂಥಗಳ ಮಠಗಳು ಮೊದಲಿನಿಂದ ಇಂದಿನವರೆಗೂ ಅನುಸರಿಸಿಕೊಂಡು ಬರುತ್ತಿರುವ ಧಾರ್ಮಿಕ ಸಹಿಷ್ಣುತೆ, ಪ್ರಾಚೀನಕಾಲದಿಂದಲೂ ನಾವು ನೋಡುತ್ತಿರುವ ಸಾಮಾನ್ಯ ಸಂಗತಿ ಎಂದರೆ ವಿಭಿನ್ನ ಪಂಥಗಳ (ಕೆಲವೊಮ್ಮೆ ಒಂದೇ ಪಂಥದ) ಧರ್ಮ ಪೀಠಗಳ ಮಧ್ಯೆ ಪರಸ್ಪರ ಭಿನ್ನಾಭಿಪ್ರಾಯಗಳು, ವೈಮನಸ್ಸುಗಳು ಇರುತ್ತವೆ, ಆದರೆ ಸೋದೆಕ್ಷೇತ್ರ ಇದಕ್ಕೆ ತದ್ವಿರುದ್ಧವಾಗಿದೆ. ಸೋಂದಾ ಕ್ಷೇತ್ರದಲ್ಲಿ ಈಗಲೂ ಅಸ್ತಿತ್ವದಲ್ಲಿರುವ ಪ್ರಮುಖ ಮಠಗಳೆಂದರೆ ಸ್ವರ್ಣವಲ್ಲೀ ಮಠ, ವಾದಿರಾಜ ಮಠ ಮತ್ತು ಜೈನ ಮಠ ಇವುಗಳಲ್ಲಿ ಸ್ವರ್ಣವಲ್ಲೀ ಮಠ ಶಂಕರಪೀಠವಾಗಿದ್ದು ಕಾಶಿಯಿಂದ ಉಜ್ಜಯಿನಿ ಕಡತೋಕ, ಗೋಕರ್ಣ ಸಹಸ್ರಲಿಂಗ ಮತ್ತು ಪ್ರಸ್ತುತ ಸ್ಥಳಕ್ಕೆ ವಿಭಿನ್ನ ಕಾಲದಲ್ಲಿ ಸ್ಥಳಾಂತರಗೊಂಡ ೧೨೦೦ ವರ್ಷಗಳ ಸುದೀರ್ಘ ಚರಿತ್ರೆ ಇರುವ ಮಠವಾಗಿದೆ[೧೨]. ಇದು ಪ್ರಮುಖವಾಗಿ ಸ್ಮಾರ್ತರ ಕಾರ್ಹಾಡರ ಮತ್ತು ರಾಮ ಕ್ಷತ್ರಿಯರ ಮಠವಾಗಿದೆ. ಆದರೆ ಪಂಥ ಜಾತಿ ಭೇದವಿಲ್ಲದೆ ಸರ್ವಜನಾಂಗೀಯರು

ಇಲ್ಲಿ ನಡೆದುಕೊಳ್ಳುತ್ತಿದ್ದಾರೆ, ಈ ಕ್ಷೇತ್ರದ ಮತ್ತೊಂದು ಪ್ರಸಿದ್ಧ ಮಠವೆಂದರೆ ವಾದಿರಾಜ ಮಠ, ಇದು ಉಡುಪಿಯ ಅಷ್ಟಮಠಗಳಲ್ಲಿ ಒಂದಾಗಿದ್ದು ಮೊದಲು ಕುಂಭಾಶಿಯಲ್ಲಿತ್ತು ನಂತರ ಯತಿ ವಾದಿರಾಜರಿಂದ ಈ ಮಠ ಸೋದೆಯಲ್ಲಿ ಸ್ಥಾನ ಪಡೆಯಿತು. ಕ್ರಿ.ಶ. ೧೬ನೇ ಶತಮಾನದ ಆರಂಭದಿಂದ ಸೋದೆಯಲ್ಲಿ ವಾದಿರಾಜಮಠ ನೆಲೆಗೊಂಡಿದೆ.

ಇದು ಮಧ್ವಪೀಠವಾಗಿದ್ದು ಸನಾತನ ಸಂಪ್ರದಾಯದ ಸಾಕ್ಷಿಯಂತಿದೆ. ಸ್ವಾದಿ ದಿಗಂಬರ ಜೈನ ಮಠ ಸೋದೆ ಕ್ಷೇತ್ರದ ಮತ್ತೊಂದು ಪ್ರಾಚೀನ ಧರ್ಮ ಪೀಠವಾಗಿದೆ. ಸೋದೆಯಲ್ಲಿ ೮ನೇ ಶತಮನಾದಿಂದಲೇ ಜೈನರ ಆಸ್ತಿತ್ವವಿರುವುದನ್ನು ದಾಖಲೆಗಳಿಂದ ತಿಳಿಯಬಹುದು.[೧೩] ೮ನೇ ಶತಮಾನಾದ ತಾಮ್ರಪಟ ಶಾಸನವೊಂದರ ಪ್ರಕಾರ ೮ನೇ ಶತಮಾನದಲ್ಲಿ ಚಾವುಂಡರಾಯನ ಮಗ ಜಿನವಲ್ಲಭ ಸೋದೆಯಲ್ಲಿ ಬಸದಿಯೊಂದನ್ನು ನಿರ್ಮಿಸಿದ ಉಲ್ಲೇಖವಿದೆ.[೧೪]

ಸೋದೆಯ ವೀರಶೈವ ಪರಂಪರೆಯ ಮಹಂತಿನಮಠವು ಈಗ ವಿರಕ್ತಮಠವಾಗಿದ್ದು, ಗುರು–ಪರಂಪರೆಯು ಇಲ್ಲಿ ಈಗ ಅಸ್ತಿತ್ವದಲ್ಲಿಲ್ಲ.

ಈಗ ಅಸ್ಥಿತ್ವದಲ್ಲಿರುವ ಈ ಮೂರು ಪ್ರಮುಖ ಧರ್ಮಪೀಠಗಳಾದ ಸ್ವರ್ಣವಲ್ಲೀ ಮಠ, ವಾದಿರಾಜ ಮಠ ಮತ್ತು ಜೈನಮಠಗಳು ಸಮಾಜಕ್ಕೆ ಮಾದರಿ ಎನಿಸುವ ರೀತಿಯಲ್ಲಿ ಅವಿನಾಭಾವ ಸಂಬಂಧವನ್ನು ಉಳಿಸಿಕೊಂಡು ಅನುಸರಿಸುತ್ತಿದೆ. ಮಠಗಳ ಮಧ್ಯೆ, ಪರಸ್ಪರ, ಸೌಹಾರ್ದ ಸಂಬಂಧವಿದೆ. ಉದಾಹರಣೆಗೆ ವಾದಿರಾಜ ಮಠದ ಕೆಲವು ಸಾಂಪ್ರದಾಯಿಕ ಹಬ್ಬ ಅಥವಾ ಆಚರಣೆಗೆ ಆ ಮಠದ ಉಪಾಧಿವಂತರು ಸ್ವರ್ಣವಲ್ಲೀ ಮಠಕ್ಕೆ ಬಂದು ಆಮಂತ್ರಿಸುವುದು, ಅಂತೆಯೇ ಸ್ವರ್ಣವಲ್ಲೀ ಮಠದ ಕೆಲವು ಸಾಂಪ್ರದಾಯಿಕ ಹಬ್ಬದ ಸಂದರ್ಭದಲ್ಲಿ ಸ್ವರ್ಣವಲ್ಲೀ ಮಠದ ಶಾನುಭೋಗರು ವಾದಿರಾಜ ಮಠಕ್ಕೆ ಜೈನಮಠಗಳಿಗೆ ಹೋಗಿ ಆಮಂತ್ರಿಸುವ ಪದ್ಧತಿ ನೂರಾರು ವರ್ಷಗಳಿಂದ ಇಂದಿನವರೆಗೂ ನಡೆದುಕೊಂಡು ಬರುತ್ತಿದೆ.

ಇನ್ನೊಂದು ಅತ್ಯಂತ ಅಪರೂಪದ ಸಂಗತಿಯೊಂದಿದೆ, ಸ್ವರ್ಣವಲ್ಲೀ ಮಠದಲ್ಲಿ ನಡೆಯುವ ವೈಶಾಖ ಶುದ್ಧ ಚತುರ್ದಶಿಯ ರಥೋತ್ಸವದಲ್ಲಿ ರಥವನ್ನು ಕಟ್ಟುವ ಕಾರ್ಯವನ್ನು ಮುಸ್ಲಿಂ ಸಮುದಾಯದ ಬಾಂಧವರೇ ಮಾಡಬೇಕು. ಇದು ಅನೇಕ ಶತಮಾನಗಳಿಂದ ನಡೆದುಕೊಂಡು ಬರುತ್ತಿದೆ. ಹೇಗೆ ಈ ಪದ್ಧತಿ ಬೆಳೆದು ಬಂದಿತೆಂದರೆ, ಸುಮಾರು ಮುನ್ನೂರು ವರ್ಷಗಳ ಹಿಂದೆ ಇದನ್ನು ಹಿಂದೂಗಳೇ ಮಾಡುತ್ತಿದ್ದರು, ಆದರೆ ಕಾರಣಾಂತರಗಳಿಂದ ಆ ಕೆಲಸ ನಿರ್ವಹಿಸುತ್ತಿದ್ದ ಆ ಹಿಂದೂ ಕುಟುಂಬದವರು ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಿದ್ದರು. ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ ಮತಾಂತರ ಹೊಂದಿದರು ಎಂಬ ಕಾರಣಕ್ಕಾಗಿ ಮಠವೂ ಆ ಕುಟುಂಬದವರನ್ನು ಈ ಕಾರಣದಿಂದ ಬದಲಾಯಿಸಲಿಲ್ಲ. ನಾವಿನ್ನು ಹಿಂದುಗಳಲ್ಲ ಎಂಬ ಕಾರಣಕ್ಕೆ ಅವರೂ ಈ ಕಾರ್ಯದಿಂದ ವಿಮುಖರಾಗಲಿಲ್ಲ. ಹೀಗಾಗಿ ಇಂದಿಗೂ ರಥಕಟ್ಟುವ ಕಾರ್ಯವನ್ನು ಅವರೇ ಮಾಡುತ್ತಿದ್ದಾರೆ. ಮತ್ತು ಮಠದ ಧಾರ್ಮಿಕ ಕಾರ್ಯಕ್ರಮಗಳಲ್ಲೂ ಭಾಗವಹಿಸುತ್ತಾರೆ.

ಹೀಗೆ ಅನೇಕ ಶತಮಾನಗಳಿಂದ ಸೋಂದಾ ಕ್ಷೇತ್ರವು ಅರಸರಿಂದ ಮತ್ತು ಧರ್ಮಪೀಠಗಳಿಂದ ಧಾರ್ಮಿಕ ಸಹಿಷ್ಣತೆಗೆ ಸಾಕ್ಷಿಯಾಗಿರುವ ನಾಡಿನ ಅಪರೂಪದ ಕ್ಷೇತ್ರವಾಗಿದೆ.



## ಅಡಿಟಿಪ್ಪಣಿಗಳು

೧. ಸ್ವಾದಿ ಅರಸು ಮನೆತನ – ಬಿ.ಆರ್ ಹಿರೇಮಠ್ ಪುಟ ಸಂಖ್ಯೆ ೩೬.

೨. A journey from Madras through Mysore Canara & Malbar Vol II, Asian Education Services New Delhi.

೩. Epigraphia Indica Vol XXXIV. ೪. Epigraphia Indica Vol XXXIV. ೫. Epigraphia Indica Vol XXXIV.

೬ ಕರ್ನಾಟಕದ ಖೈಫಿಯತ್ತುಗಳು – ಡಾ. ಎಮ್.ಎಮ್. ಕಲ್ಬುರ್ಗಿ.

೭. ಉ.ಕ ಜಿಲ್ಲೆಯ ಯಲ್ಲಾಪುರ ತಾಲೂಕಿನ ಪುಟ್ಟ ಹೋಬಳಿ.

೮. ರಾಮಚಂದ್ರ ದೇವಸ್ಥಾನದ ಅರ್ಚಕರಾದ ಗುರುರಾಜಾಚಾರ್ಯರಲ್ಲಿರುವ ತಾಮ್ರಪಟ.

೯. Epigraphia Indica Vol XXXIV.

೧೦. ಸೋದೆ ಅರಸರು, ಡಾ. ಎಮ್.ಜಿ. ವಾರಿ–ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ ಮೈಸೂರು.

೧೧. ಕರ್ನಾಟಕದ ಖೈಫಿಯತ್ತುಗಳು, ಡಾ. ಎಮ್.ಎಮ್. ಕಲ್ಬುರ್ಗಿ.

೧೨. ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನದ ಚರಿತ್ರೆ, ಡಾ. ಎ.ಕೆ ಶಾಸ್ತ್ರಿ – ಶ್ರೀ ಭಗವತ್ಪಾದ ಪ್ರಕಾಶನ ಶ್ರೀ ಸ್ವರ್ಣವಲ್ಲೀ ಮಹಾಸಂಸ್ಥಾನ ಸೋಂದ.

# ಬೌದ್ಧಯಾನಗಳಲ್ಲಿನ ನಾಥ ಸಂಪ್ರದಾಯದ ಬೆಳಲುಗಳು

ಸಿದ್ಧಗಿರಿ ಚಂದ್ರೇಗೌಡ*

ವೇದಗಳು ಇಂದಿಗೆ ಸುಮಾರು ನಾಲ್ಕಾರು ಸಾವಿರ ವರ್ಷಗಳ ಹಿಂದಿನಿಂದಲೂ ಜ್ಞಾನದ ಹರಿವನ್ನು ಹರಿಸಿದರೂ ಸಹ ಆ ಸಂಪತ್ತು ಆಶ್ರಮವಾಸಿಗಳ ಯಜ್ಞಯಾಗಾದಿಗಳಲ್ಲಿ ಹುದುಗಿ ಹೋಗಿ ತಮ್ಮಂತೆಯೇ ಮನುಷ್ಯರಾದ ಬಹುಸಂಖ್ಯಾತ ಮಾನವರನ್ನು ಬೇಧ ಮಾಡಿ ಹೊರಗಿಟ್ಟುದ್ದಲ್ಲದೆ ಮತಾಚರಣೆಯಲ್ಲಿಯೂ ಕೆಲವೊಂದು ಕಠಿಣ ಧರ್ಮಾಚಾರಣೆ ಹಾಗೂ ಧಾರ್ಮಿಕ ಕ್ರಿಯೆಯಲ್ಲಿಯೂ ತಾರತಮ್ಯ ಭೇದಗಳನ್ನು ಬರುಬರುತ್ತಾ ರೂಪಿಸಿಕೊಂಡದ್ದರಿಂದಾಗಿ ಸ್ಮೃತಿ ಕಾಲಕ್ಕಾಗಲೇ ವೇದಾನುಯಾಯಿಗಳು ಶೂದ್ರ ಸಮೂಹವನ್ನು ಧಾರ್ಮಿಕ ನೆಲೆಯಿಂದ ಪೂರ್ಣವಾಗಿ ಹೊರದಬ್ಬಿ ಜ್ಞಾನ ಬಾಗಿಲನ್ನು ಶಾಶ್ವತವಾಗಿ ಮುಚ್ಚಿಕೊಂಡ ಪರಿಣಾಮದಿಂದಾಗಿ ಆ ಕಾಲೀನ ಧಾರ್ಮಿಕ ಚರಿತ್ರೆಯೂ ತಿರುವನ್ನು ಯಾಚಿಸಿತ್ತೋ ಎಂಬಂತೆ ಮಾನವರೆಲ್ಲರನ್ನು ಮಾನವರೆಂದು ಪ್ರೀತಿಸುವಂತಹ ಸರಳ, ಶಾಂತ, ಸೌಮ್ಯ, ಮಾರ್ಗದ ಧಾರ್ಮಾಚಾರಣೆಯ ಹಾದಿಬೇಕೆಂಬ ಕಾಲದ ಕರೆಯಿಂದಾಗಿ ಗೌತಮ ಬುದ್ಧನ ಉಗಮವಾಗಿ ಆಕಾಲೀನ ಧಾರ್ಮಿಕ ಚರಿತ್ರೆಗೆ ತಿರುವನ್ನು ಕೊಟ್ಟಿತು.

ತದನಂತರ ಭಾರತಖಂಡದಲ್ಲಿ ಬುದ್ಧನ ಅಹಿಂಸಾ ಮಾರ್ಗದ ಸಮಾಜ ನಿರ್ಮಾಣವಾಗಿ ಎಲ್ಲಾ ಕಡೆಯೂ ಸೌಮ್ಯ, ಶಾಂತ, ಸರಳ ಅಡಿಗಟ್ಟಿನ ಮೇಲೆ ರಾಜಮಹಾರಾಜರ ಮನ್ನಣೆಯನ್ನು ಜನಸಾಮಾನ್ಯರ ಮೆಚ್ಚುಗೆಯನ್ನು ಪಡೆದುಕೊಂಡು ಬೌದ್ಧ ಧರ್ಮದ ಬೃಹತ್ ಸೌಧ ನಿರ್ಮಾಣವಾಯಿತು.

ಹಾಗೆಯೇ ಯಾವುದೇ ವ್ಯಕ್ತಿಯಾಗಲಿ, ಯಾವುದೇ ತತ್ವವಾಗಲಿ, ಯಾವುದೇ ಧರ್ಮವಾಗಲಿ, ಜಾತಿ ವ್ಯವಸ್ಥೆಯೇ ಆಗಲಿ ಅಥವಾ ಸಾಮ್ರಾಜ್ಯವಾದವೇ ಆಗಲಿ, ಅಥವಾ ಈಗಿರುವ ರಾಜಕೀಯ ಪಕ್ಷಗಳೂ ಸಹ ಶಾಶ್ವತವೂ ಅಲ್ಲ, ಸ್ಥಿರವೂ ಅಲ್ಲ. ಇವುಗಳೆಲ್ಲವೂ ಉನ್ನತಿಯ ಜೊತೆಯಲ್ಲಿಯೇ ಅವನತಿಯನ್ನು ಹೊತ್ತುಕೊಂಡು ಸಾಗುತ್ತಾ ಇರುತ್ತವೆ. ಇದು ಭೂ ಕಕ್ಷೆಯ ತಿರುವಿನೋಪಾದಿಯಲ್ಲಿಯೇ ಮುನ್ನಡೆಯುತ್ತಿರುವಂತಹ ಪ್ರಾಕೃತಿಕ ಕಾಲ ಧರ್ಮ. ಈ ಕಾಲಧರ್ಮದ ತಿರುವೋ ಎಂಬಂತೆ ಉನ್ನತಿಯೂ ಒಂದು ಹಂತದ ನಂತರ ತನಗರಿವಿಲ್ಲದಂತೆಯೇ ಅವನತಿಯ ಹಾದಿಯನ್ನೂ ಸಹ ಬಹುದೂರ ಸವೆಸಿರುತ್ತದೆ.

ಹೀಗೇಯೇ ಬುದ್ಧ ಧರ್ಮವು ಹಳ್ಳಿಗಾಡಿನಲ್ಲಿಯೂ ತಳಮಟ್ಟದ ಆಚರಣಾ ವಿಧಿವಿಧಾನಗಳಿಂದ ಗಟ್ಟಿಗೊಳ್ಳದೆ ಮೇಲ್ಮಟ್ಟದಲ್ಲಿ ಮಾತ್ರ ಬುದ್ಧಂ ಶರಣಂ ಗಚ್ಚಾಮಿ, ಧರ್ಮಂ ಶರಣಂ ಗಚ್ಚಾಮಿ, ಸಂಘಂ ಶರಣಂ ಗಚ್ಚಾಮಿ ಹೀಗೆ ಶರಣಂ ಗಚ್ಚಾಮಿ ಶರಣಂ ಗಚ್ಚಾಮಿ ಎಂಬ ಎಂಬ ಘೋಷವು ಎಲ್ಲಾ ರಂಗಗಳಲ್ಲಿಯೂ ಹಬ್ಬಿ ಸಮಾಜದಲ್ಲಿ ಶಾಂತಿ ಅಹಿಂಸಾ ಸರಳ ಸಮಾಜ ನಿರ್ಮಾಣವಾದುದ್ದೇನೋ ದಿಟ. ಆದರೆ ಈ ಆಂದೋಲನದ ಇನ್ನೊಂದು ಮುಖವು ನಿಷ್ಯಕ್ತ ನಿರ್ವೀರ್ಯತನವನ್ನು ಜನಸಾಮಾನ್ಯರಲ್ಲಿ ತುಂಬಿತು.

ಆದರೆ ಬುದ್ಧಧರ್ಮದ ಅಹಿಂಸಾಪರ ಧರ್ಮಾಚರಣೆಯೇ ಕಾಲಧರ್ಮದ ಪರಿಯಲ್ಲಿ ದೌರ್ಬಲ್ಯದ ರೂಪತಾಳಿ ಈ ಬೃಹತ್ ದೇಶದ ಜನಸಮೂಹವು ಹೊರಗಿನ ಆಕ್ರಮಣಕಾರಿಗಳನ್ನು ಎದುರಿಸಿ ತನ್ನನ್ನು ತಾನು ರಕ್ಷಿಸಿಕೊಳ್ಳಲಾರದಂತಹ ದುರ್ಬಲ ಜನಾಂಗವನ್ನು ನಿರ್ಮಾಣ ಮಾಡಿತ್ತು. ಇದರ ಪರಿಣಾಮ ನಿಶ್ಯಕ್ತ, ನಿರ್ವೀರ್ಯ ರಾಷ್ಟ್ರವಾಗಿ ನಿರ್ಮಾಣವಾಗುವುದರಲ್ಲಿತ್ತೇನು, ನಿರ್ಮಾಣವೇ ಆಗಿತ್ತು.

ಇದರ ಪ್ರತೀಕವೇ ಬೃಹತ್ ಭಾರತದ ಬಹುಮುಖ್ಯ ಅಂಗವಾದ ಇಂದಿನ ಅಫ್‌ಘಾನಿಸ್ತಾನ್, ಬಲೂಚಿಸ್ತಾನ್, ಹಾಗೂ ಸಿಂಧ್ ಪ್ರಾಂತ್ಯಗಳನ್ನು ಕ್ರಿ.ಶ ೭೧೨ ರಲ್ಲಿ ಅರಬ್ಬರು ಗೆದ್ದುಕೊಂಡ ನಂತರ ಬುದ್ಧಾನುಯಾಯಿಗಳಿಂದ ತುಂಬಿದ ದೇಶದ ಆಯಕಟ್ಟಿನ ಈ ಪ್ರದೇಶದ ಜನಸಮೂಹವು ಬಹುಬೇಗ ಇಸ್ಲಾಮೀಕರಣದ ಹಾದಿಯನ್ನು ಸುಲಭವಾಗಿ ತುಳಿಯಲು

* ಸಿದ್ಧಗಿರಿ ಕಾಫಿ ಎಸ್ಟೇಟ್, ಜಾಗರ ಅಂಚೆ, ಚಿಕ್ಕಮಗಳೂರು ಜಿಲ್ಲೆ, ಮೊ. ೯೪೪೯೪೧೪೦೭೪

ಆಸ್ಪದವಾದುದನ್ನು ಕಾಣಬಹುದು. (KERN: MANUAL OF INDIAN BUDDHISM (KIB) ಪುಟ ೧೩೨-೧೩೩ ಹಾಗೆಯೇ ಯಾವುದೇ ಪ್ರಬಲ ಇಸ್ಲಾಮೀ ದಾಳಿಗಾಗಲೀ ಆಳ್ವಿಕೆಗಾಗಲೀ ತುತ್ತಾಗದ ಪೂರ್ವ ಭಾರತದ ಬಂಗಾಲ ಪ್ರಾಂತ್ಯದ ಬುದ್ಧಾನುಯಾಯಿಗಳು ಸಹ ಸುಲಭವಾಗಿ ಇಸ್ಲಾಮೀಕರಣಗೊಂಡದ್ದನ್ನು ಉದಾಹರಿಸಬಹುದು.

ಆದರೆ ನಾಥ ಸಂಪ್ರದಾಯದ ಅನುಯಾಯಿಗಳಿಗೆ ಮತ್ಸೇಂದ್ರಗೋರಕಾದಿ ಚೌರಾಸೆ ಸಿದ್ದರುಗಳು ರೂಪಿಸಿಕೊಟ್ಟಂತಹ ಕುಲದೇವರು, ಗ್ರಾಮದೇವತಾ ಹಬ್ಬ ಹರಿದಿನದ ಜಾತ್ರಾ ಮಹೋತ್ಸವದ ಆಚರಣಾ ಹಿರಿಮೆಯಿಂದಾಗಿ ಸ್ವಾಭಿಮಾನಿ ಹಿಂದುಗಳು ಪ್ರಾಣಕೊಟ್ಟರೇ ಹೊರತು ತನ್ನ ಕುಲದ ಪಿತೃಗಳಿಗೆ ಕುಲದೇವರುಗಳಿಗೆ ದ್ರೋಹ ಬಗೆಯದೆ ಸ್ವಾಭಿಮಾನಿಗಳಾಗಿ ಬದುಕಿದರು. ಇದರಿಂದಾಗಿಯೇ ಮುಸ್ಲಿಂ ದೊರೆಗಳ ನಾನಾ ಮತೀಯ ಷಡ್ಯಂತ್ರವನ್ನು ಸುಮಾರು ೬೦೦-೭೦೦ ವರ್ಷಗಳ ಕಾಲ ಸಮೂಹಿಕ ಸಂಘಟಣೆಯ ಅಭಾವದ ಕಾರಣದಿಂದ ಭಾರತಿಯರು ಅನುಭವಿಸಿದರೂ ಸಹ ಮತೀಯ ಪರಿವರ್ತನೆಯಾಗದೆ ಧರ್ಮ ಮತ್ತು ದೇಶದ ಏಕತೆಯನ್ನು ಧೈರ್ಯದಿಂದ ರಕ್ಷಿಸಿದರು. ಇದರ ಹಿರಿಮೆ ನಾಥಸಂಪ್ರದಾಯದ ಆದ್ಯ ಪ್ರವರ್ತಕರಾದ ಮತ್ಸೇಂದ್ರ ಗೋರಕಾದಿ ಚೌರಾಸೆ ಸಿದ್ದರುಗಳಿಗೆ ಸಲ್ಲುತ್ತದೆ.

ಇದು ಬುದ್ಧ ಧರ್ಮದೊಳಗಿನ ಚಿಂತನೆಯ ತಿರುಳಾಗಿ ಮಾರ್ಪಟ್ಟು ಬುದ್ಧ ಧರ್ಮದ ಚಿಂತನಾ ವೇಗ ಹೆಚ್ಚಿಸುವುದರ ಜೊತೆಜೊತೆಯಲ್ಲಿಯೇ ಹೊಸದಾಗಿ ಉದಯವಾದ ನಾಥ ಸಂಪ್ರದಾಯದ ಸಿದ್ದರೊಡನೆ ನಡೆಸುತ್ತಿದ್ದ ಯೋಗ ಮತ್ತು ತಾಂತ್ರಿಕ ವಿಧಿವಿಧಾನ ಅನುಷ್ಠಾನಗಳೊಡನೆ ನಡೆಯುತ್ತಿದ್ದ ತಾತ್ವಿಕ ವಾಗ್ವಾದಗಳಲ್ಲಿ ನಿರಂತರ ಸೋಲನ್ನು ಅನುಭವಿಸುತ್ತಿತ್ತು.

ಇದರ ಫಲವಾಗಿ ಬೌದ್ಧಭಿಕ್ಷುಗಳು ಹಾಗೂ ನಾಥ ಸಂಪ್ರದಾಯದ ಚೌರಾಸೆ ಸಿದ್ದರೊಡನೆ ಒಂದು ರೀತಿಯ ಗುರು-ಶಿಷ್ಯ ಸಮನ್ವಯ ಭಾವವು ಸಹಜವಾಗಿ ಬೆಳೆಯುವಂತಾದುದಲ್ಲದೇ ಈ ನಾಥ ಸಿದ್ದರ ಸಂಪರ್ಕದಿಂದ ಬೌದ್ಧ ಶ್ರವಣರುಗಳಲ್ಲಿ ರಹಸ್ಯ ಸಂಘಗಳು ಪ್ರತಿಯೊಂದು ಪ್ರಾಂತ್ಯದಲ್ಲೂ ಹುಟ್ಟಿಕೊಂಡಿದ್ದಲ್ಲದೆ ಇದೊಂದು ಸಂಘಟನೆಯಾಗಿ ವೃದ್ಧಿಸಿರಬಹುದು ಇದಕ್ಕೆ ಯೋಗಭ್ಯಾಸಗಳು ಹಾಗೂ ತಾಂತ್ರಿಕ ವಿಧಿವಿಧಾನಗಳು ಸೇರಿದಾಗ ಬೌದ್ಧ ಶ್ರಾವಣರ ಮಹಾಯಾನವು ಹೇಗೆ ರೂಪುತಾಳಿತ್ತು ಎಂಬುದನ್ನು ನಾವು ಯಾವ ಕ್ಲೇಶಕ್ಕೂ ತುತ್ತಾಗದೇ ಊಹಿಸಬಹುದಾಗಿದೆ.

ಈ ಸಮನ್ವಯವು ಬುದ್ಧ ಶ್ರವಣರುಗಳಲ್ಲಿ ಸಾರ್ವತ್ರಿಕ ಭಾವವಾಗಿ ಮಾರ್ಪಟ್ಟು ಈ ಭಿನ್ನ ಮನಸ್ಸಿನ ಭಿಕ್ಷುಗಳು ಬೌದ್ಧಧರ್ಮದಕೋಟೆಯ ಹೆಬ್ಬಾಗಿಲನ್ನೇ ತೆರೆದು ನಾಥ ಸಂಪ್ರದಾಯದ ಯೋಗ ಮತ್ತು ತಾಂತ್ರಿಕ ಅನುಷ್ಠಾನಗಳನ್ನು ತಮ್ಮಲ್ಲಿ ಅಳವಡಿಸಿಕೊಂಡು ನಾಥ ಸಂಪ್ರದಾಯದ ಆದ್ಯ ಪ್ರವರ್ತಕ ಮತ್ಸೇಂದ್ರ (ಶ್ರೀಕಂಠ) ನಾಥನನ್ನು ತ್ರೀಲೋಕೇಶ ಧ್ಯಾನೀಬುದ್ಧನೆಂಬ ಗುರುಭಾವವನ್ನು ಪೂರ್ವ ಭಾರತ, ನೇಪಾಳ, ಟಿಬೆಟ್ ದೇಶದ ಬೌದ್ಧಶ್ರವಣರುಗಳು ಅಳವಡಿಸಿಕೊಂಡರು.

ಕ್ರಿಸ್ತಶಕೆಯ ಮೊದಲನೇ ಶತಮಾನದ ಉತ್ತರಾರ್ಧಭಾಗವನ್ನು ಆಳುತ್ತಿದ್ದ ಕುಶಾನರ ವಂಶದ ಪ್ರಖ್ಯಾತ ಚಕ್ರವರ್ತಿ ಕಾನಿಷ್ಕ (ಕ್ರಿ.ಶ ೭೮-೧೦೨) ನ ಆಡಳಿತ ಕಾಲಾವಧಿಯಲ್ಲಿ ನಾಲ್ಕನೇ ಬುದ್ಧ ಸಮ್ಮೇಳನವು ಕಾಶ್ಮೀರದ ಕುಂದಳವನ ಎಂಬಲ್ಲಿ ಜರುಗಿತು. ಈ ಸಂದರ್ಭದಲ್ಲಿ ಪೂರ್ವ ಭಾರತ, ನೇಪಾಳ, ಟಿಬೆಟ್ ದೇಶಗಳಲ್ಲಿನ ಭೌದ್ಧಭಿಕ್ಷುಗಳು ತ್ರಿಲೋಕೇಶಾಧಿ ಪಂಚಸಿದ್ಧರುಗಳನ್ನು ಬೌದ್ಧ ಭಿಕ್ಷುಗಳೆಂದು ಈಗಾಗಲೇ ಮೇಲ್ಕಂಡಂತೆ ಅಂಗೀಕರಿಸಿಕೊಂಡು ಅವರಿಂದ ತಾಂತ್ರಿಕ ವಿಧಿವಿಧಾನಗಳನ್ನು ಪಡೆದು ಕರಗತಮಾಡಿಕೊಂಡಂತಹ ಬಹುಸಂಖ್ಯಾತ ಬುದ್ಧಭಿಕ್ಷುಗಳು ನಾಥಸಂಪ್ರದಾಯದ ಆದ್ಯಪ್ರವರ್ತಕರುಗಳಾದ ಮತ್ಸೇಂದ್ರ ಗೋರಕಾದಿ ಪಂಚಸಿದ್ದರುಗಳು ಜನತೆಯನ್ನು ಕಷ್ಟಕಾರ್ಪಣ್ಯಗಳಿಂದ ಪಾರು ಮಾಡುವ ಸಲುವಾಗಿ ತಥಾಗತನು ತನ್ನ ಮಹಾನಿರ್ವಾಣವನ್ನೇ ತ್ಯಾಗ ಮಾಡಿ ಆವಿರ್ಭವಿಸಿ ಬಂದಿರುವ ಪಂಚಧ್ಯಾನಿ ಬುದ್ಧರುಗಳೆಂದು ಮಾನ್ಯ ಮಾಡಬೇಕೆಂಬ ನಿರ್ಣಯವನ್ನು ಸಭೆಯಲ್ಲಿ ಮಂಡಿಸಿದ್ದಲ್ಲದೇ ಈ ನಿರ್ಣಯವನ್ನು ಒಪ್ಪಲೇಬೇಕೆಂದು ಪಟ್ಟುಹಿಡಿದರು.

ಆದರೆ ಈಗಿನ ಆಫ್‌ಘಾನಿಸ್ತಾನ್, ಬಲೂಚಿಸ್ತಾನ್ ಮತ್ತು ಸಿಂಧ್ ಪ್ರಾಂತ್ಯದ ಬುದ್ಧಾನುಯಾಯಿಗಳು ತ್ರಿಲೋಕೇಶಾಧಿ ಪಂಚಸಿದ್ದರುಗಳು ನಾಥ ಸಂಪ್ರದಾಯದ ತಾಂತ್ರಿಕಯತಿಗಳೆಂಬ ಕಾರಣವನ್ನು ಮುಂದಿಟ್ಟುಕೊಂಡು ಈ ನಿರ್ಣಯವನ್ನು ಒಪ್ಪದ ಕಾರಣದಿಂದಾಗಿ ಚರಿತ್ರೆಯ ಪುಟಗಳಲ್ಲಿ ಎಂದೆಂದೂ ಅಳಿಸಲಾಗದಂತಹ ಮಹಾ ಘಟನೆಯೊಂದು ಅನಿವಾರ್ಯವಾಗಿ ಬುದ್ಧಾನುಯಾಯಿಗಳಲ್ಲಿ ಘಟಿಸಿ ಬುದ್ಧಧರ್ಮವು ಇಬ್ಭಾಗವಾಯಿತು.

ವಸುಮಿತ್ರನ ಅಧ್ಯಕ್ಷತೆಯಲ್ಲಿ ಮಹಾಯಾನಿ, ಅಶ್ವಘೋಷನ ಅಧ್ಯಕ್ಷತೆಯಲ್ಲಿ ಹೀನಾಯಾನಿಗಳೆಂಬುದಾಗಿ ಬೇರೆ ಬೇರೆ ಪಂಗಡವಾಗಿ ಸಭೆ ನಡೆದು ಗೌತಮ ಬುದ್ಧಯುಗವು ಕಲ್ಪಾಂತ್ಯದ ಸ್ಫೋಟವನ್ನು ಕಂಡಿತು. (ಹೆಚ್ಚು ಕಡಿಮೆ ಕ್ರಿ.ಶ೧ನೇ ಶತಮಾನದಲ್ಲಿ ಭೌದ್ಧಧರ್ಮವು ಹೀನಾಯಾನ ಮಹಾಯಾನಗಳೆಂಬ ಶಾಖೆಗಳಾದವು. (KERN: MANUAL OF INDIAN BUDDHISM (KIB) ಪುಟ ೧೨೪) ನಂತರ ಈ ಮಹಾಯಾನಿ ಪಂಥೀಯ ತಾಂತ್ರಿಕ ಬುದ್ಧರಿಗೆ ಮತ್ಸೇಂದ್ರನಾಥನ

(ತ್ರಿಲೋಕೇಶನ) ಶಿಷ್ಯನಾದ ನಾಗಾರ್ಜುನ ಸಿದ್ಧನು ಪ್ರಜ್ಞಾಪಾರಮಿತಸೂತ್ರವೆಂಬ ಧರ್ಮಸೂತ್ರವನ್ನು ರಚಿಸಿಕೊಟ್ಟು ತಾತ್ವಿಕ ನೆಲಗಟ್ಟನ್ನು ಭದ್ರಪಡಿಸಿಕೊಟ್ಟನು. ಈ ಘಟನಾ ಕಾಲೀನದ ನಂತರ ಮಹಾಯಾನವು ವಜ್ರಾಯಾನ, ಮಂತ್ರಾಯಾನ ಸಹಜಯಾನ, ಕಾಲಚಕ್ರಯಾನ, ಜೆನ್‌ಗಳೆಂಬ ಪಂಗಡಗಳಾಗಿ ವಿಸ್ತಾರಗೊಂಡು ವಿಶ್ವವ್ಯಾಪಿ ಹರಡಿಕೊಂಡಂತಹ ನಾಥಸಂಪ್ರದಾಯದ ಬಿಳಲುಗಳಾದುದರಿಂದಲೇ ಈ ಘಟನೆಯ ನಂತರ ಮಹಾಯಾನ ಪಂಥೀಯ ಬೌದ್ಧಭಿಕ್ಷುಗಳನ್ನು ಭಿಕ್ಷುಗಳೆನ್ನದೆ ಬೌದ್ಧಸಿದ್ಧರುಗಳು, ಬೌದ್ಧ ಶ್ರವಣರುಗಳು ಹಾಗೂ ಬೌದ್ಧಲಾಮಗಳು ಎಂದು ಸಂಬೋಧಿಸಲು ಶುರುವಾಯಿತು.

ಈ ಬೌದ್ಧಯಾನಗಳಲ್ಲಿನ ನಾಥ ಸಂಪ್ರದಾಯದ ಹಿನ್ನೆಲೆಯಿಂದಾಗಿಯೇ ಟಿಬೆಟ್, ಚೀನಾ, ಮಂಗೋಲಿಯ, ಜಪಾನ್, ಹಾಗೂ ಇಂಡೋನೇಷ್ಯಾ ರಾಷ್ಟ್ರಗಳಲ್ಲಿನ ಬೌದ್ಧರುಗಳ ಧಾರ್ಮಿಕ ಆಚರಣೆಯಲ್ಲಿ ಮದ್ಯ, ಮತ್ಸ್ಯ, ಮಾಂಸಾದಿ ಸೇವನೆಯ ಆಚರಣೆ ಶುರುವಾಗಿದೆ. ಈ ತಾಂತ್ರಿಕ ಆಚರಣಾ ಕುರುಹುಗಳಿಂದಾಗಿಯೇ ಮಹಾಯಾನ, ವಜ್ರಯಾನಾದಿ ಬೌದ್ಧರುಗಳು ನಾಥಸಂಪ್ರದಾಯವೆಂಬ ಮಹಾವೃಕ್ಷದ ಬಿಳಲುಗಳು ಎಂದು ಸಾಬೀತು ಪಡಿಸಲು ನಮಗೆ ದಕ್ಕಿದ ಜೀವಂತ ಸಾಕ್ಷಿಗಳು. ಈ ಪರಿಯ ಧಾರ್ಮಿಕ ಆಚರಣೆಯ ಹಿನ್ನೆಲೆಯಿಂದಾಗಿಯೇ ಲಲಿತ ವಿಸ್ತಾರವೆಂಬ ಹೀನಾಯಾನ ಬೌದ್ಧಗ್ರಂಥದಲ್ಲಿ ನಾಥ ಸಂಪ್ರದಾಯದ ಮತ್ಸೇಂದ್ರ ಗೋರಕಾದಿ ಸಿದ್ಧರುಗಳನ್ನು ಕೌಲ ಕಾಪಾಲಿಕರೆಂದು ತುಚ್ಛವಾಗಿ ಹೀಗಳೆಯಲಾಗಿದೆ. ಈ ಹಿನ್ನೆಲೆಯಿಂದಾಗಿಯೇ ಹೀನಾಯಾನಿ ಬೌದ್ಧರುಗಳು ಮಹಾಯಾನಿ ವಜ್ರಯಾನಾದಿ ಬೌದ್ಧರುಗಳನ್ನು ಕೌಲ, ಕಾಪಾಲಿಕ ಬೌದ್ಧರೆಂದು ಈಗಲೂ ಸಹ ಹೀಗಳೆಯುತ್ತಿರುವುದನ್ನು ನಾವುಗಳು ಜೀವಂತ ಆಕಾರವಾಗಿ ಪರಿಗಣಿಸಲೇ ಬೇಕಾಗುತ್ತದೆ.

ಬುದ್ಧ ಧರ್ಮದ ಮಹಾಸ್ಫೋಟಕ್ಕೆ ಕಾರಣೀಭೂತನಾದ ತ್ರಿಲೋಕೇಶಾದಿ ಪಂಚಸಿದ್ಧರುಗಳೆಂಬ ತಾಂತ್ರಿಕ ವ್ಯಕ್ತಿಗಳು ಯಾರು ಎಂಬುದನ್ನು ಅರಸಲು ಹೊರಟರೆ ನಾಥ ಸಂಪ್ರದಾಯದ ಹಾದಿಯನ್ನು ಸವೆಸಲೇ ಬೇಕಾಗುತ್ತದೆ. ಈ ನಾಥ ಸಂಪ್ರದಾಯವು ಶಕ್ತಿವಿಶಿಷ್ಠಾದ್ವೈತ ಕೌಲ ಚಾರ್ವಾಕ, ಕಾಪಾಲಿಕ, ಶಾಕ್ತ, ಹಾಗೂ ಲಾಕುಳಶೈವ (ಲಕುಲೀಶ) ಪರಂಪರೆಯೆಂದೇ ಪ್ರಖ್ಯಾತಗೊಂಡ ಪಾಶುಪಥ ಸಿದ್ಧಾಂತ ಇದರ ಉಪ ಶಾಖೆಗಳಾದ ಕಾಶ್ಮೀರಿಶೈವ, ಕಾಳಮುಖ ಮುಂತಾದ ಶೈವ ಸಿದ್ಧಾಂತದ ಎಳೆಗಳಿಂದ ಸಂಕೀರ್ಣಗೊಂಡಂತಹ ಸಂಪ್ರದಾಯವಿದು.

ಈ ನಾಥ ಸಂಪ್ರದಾಯದ ಆದ್ಯ ಪ್ರವರ್ತಕ ಮತ್ಸೇಂದ್ರನಾಥ. ಇವನು ಭಾರತೀಯ ತತ್ವಶಾಸ್ತ್ರದ ಪ್ರಮುಖ ಮಗ್ಗಲುಗಳಲ್ಲೊಂದಾದ ಶಕ್ತಿವಿಶಿಷ್ಠಾದ್ವೈತ ಕೌಲ, ಸಿದ್ಧಾಂತದ ಪ್ರತಿಪಾದಕ ಪಾಶುಪಥ (ಲಾಕುಳಶೈವ) ಸಿದ್ಧಾಂತಚಾರ್ಯನೆಂದೇ ಪ್ರಖ್ಯಾತನಾದ ಗೋರಕನಾಥನ ದೀಕ್ಷಾಗುರು ಭಾರತೀಯ ತತ್ವಶಾಸ್ತ್ರದ ವಿಕಾಸಕ್ಕೆ ಬಹುಮುಖ್ಯವಾದ ಆವರಣವನ್ನು ಪ್ರಪ್ರಥಮವಾಗಿ ರೂಪಿಸಿ ಕೊಟ್ಟ ಚಾರಿತ್ರಿಕ ಪುರುಷನೇ ಈ ಮತ್ಸೇಂದ್ರನಾಥನೆಂಬ ಯೋಗಿ. ಅಭಿನವಗುಪ್ತ ರಚಿಸಿರುವ ತಂತ್ರಲೋಕವೆಂಬ ಕೃತಿಯಲ್ಲಿ ಮತ್ಸೇಂದ್ರ ಗೋರಕರುಗಳನ್ನು ಶಿವನಶಾಸನಗಳನ್ನು ಕುರಿತ ಮೂಲ ಹಕ್ಕುದಾರರು ಎಂಬ ಬಹಳ ಮುಖ್ಯವಾದ ಮಾಹಿತಿಯನ್ನು ಒದಗಿಸಿದೆ.

ಭಾರತದ ಭೂಭಾಗದಲ್ಲಿ ಕ್ರಿಸ್ತಶಕಾರಂಬದಿಂದೀಚೆಗೆ ಆವಿರ್ಭಸಿರುವಂತಹ ಧಾರ್ಮಿಕ ಚೌಕಟ್ಟುಗಳೆಲ್ಲಾ ಈ ಮಾಯಾರೂಪಿ ದಾದಾ ಎಂದೇ ವಿಶೇಷಣಕ್ಕೆ ಭಾಗೀನರಾದ ಮಹರ್ಷಿ ಮತ್ಸೇಂದ್ರನಾಥನ ಜಾಲದೊಳಗೆ ಒಂದಲ್ಲಾ ಒಂದು ರೀತಿಯಲ್ಲಿ ರೂಪುಗೊಂಡಂತವುಗಳು ಅಂದರೆ ಅತಿಶಯೋಕ್ತಿ ಹಾಗೂ ಅಶ್ಚರ್ಯಪಡುವಂತದೇನಲ್ಲ. ಇವನು ಒಬ್ಬ ಮಾನವ ಉಪದೇಶಕನಾಗಿದ್ದನೆಂದು ನೇಪಾಳದ ರಾಜಭಂಡಾರದಲ್ಲಿ ಸುರಕ್ಷಿತವಾಗಿರುವ ಹಸ್ತಪ್ರತಿಯ ರೂಪದಲ್ಲಿರುವ ಪಿಂಗಳ ಮತವೆಂಬ ತಾಂತ್ರಿಕ ತಾಡಾಗ್ರಂಥವು ದೃಢಪಡಿಸುತ್ತದೆ.

ಈ ಮತ್ಸೇಂದ್ರನಾಥನ ಕಾಲಾವಧಿಯವರೆಗೆ ವೈಯುಕ್ತಿಕ ಮೋಕ್ಷಾಕಾಂಕ್ಷೆಗೆ ಮಾತ್ರ ಸೀಮಿತವಾಗಿ ಯಾವುದೇ ಕರ್ಮಗಳಲ್ಲೂ ಪ್ರತಿಪಾದಿಸದೇ ಇದ್ದಂತಹ ಸನ್ಯಾಸವನ್ನು ಸಮಾಜಮುಖಿಯಾಗಿಸಿ ಧರ್ಮೋಪದೇಶ ಹಾಗೂ ಧರ್ಮರಕ್ಷಣೆಗಾಗಿ ವಿನಿಯೋಗಿಸಿಕೊಳ್ಳಲು ಕ್ರಿಸ್ತಶಕ ಮೊದಲನೇ ಶತಮಾನದಲ್ಲಿಯೇ ದೇಶಾದ್ಯಂತ ಧರ್ಮರಕ್ಷಣಾ ನಿಮಿತ್ತವಾಗಿ ಮಠಗಳನ್ನು ಮೊಟ್ಟಮೊದಲು ಸ್ಥಾಪಿಸುವ ಮೂಲಕ ನಂತರ ಕಾಲೀನ ಆಚಾರ್ಯಪುರುಷರೆಲ್ಲರಿಗೂ ಮಠಗಳನ್ನು ಸ್ಥಾಪಿಸಲು ಮಾರ್ಗಸೂಚಿಗಳು ಹಾಗೂ ಪ್ರೇರಕರಾದವರು ಮತ್ಸೇಂದ್ರ ಗೋರಕಾದಿ ಸಿದ್ಧರುಗಳು ಎಂಬಂತಹ ಸತ್ಯಸಂಗತಿಗಳ ನಿರೂಪನೆಯು ಅತಿಶಯೋಕ್ತಿ ಆಗಲಾರದು.

ಮತ್ಸೇಂದ್ರ ಗೋರಕಾದಿಗಳ ಪ್ರಸ್ತಾಪವಿಲ್ಲದ ಭೂ ಪ್ರದೇಶವು ಭರತಖಂಡದಲ್ಲೆಲ್ಲೂ ಇಲ್ಲವೆಂದು ಹೇಳಬಹುದು. ಶ್ರೀ ವಯೋಗಿ ಹರಿಯೆಂಬ ವಿದ್ವಾಂಸರು ಸಂಪಾಧಿಸಿರುವ "ಸಂತ್ ಸುಧಾಸಾರ" ಹಾಗೂ ಪರುರಾಮ ಚತುರ್ವೇದಿಯವರ

"ಉತ್ತರ ಭಾರತ್‌ಕೀ ಸಂತ್ ಪರಂಪರ" ಎಂಬ ಬೃಹತ್ ಗ್ರಂಥಗಳ ಪುಟಗಳನ್ನು ತಿರುವಿನೋಡಿದರೆ ನಾಥ ಸಂಪ್ರದಾಯದ ಆದ್ಯ ಪ್ರವರ್ತಕರುಗಳಾದ ಮತ್ಸೇಂದ್ರ ಗೋರಕಾದಿ ಚೌರಾಸೆ ಸಿದ್ದರುಗಳ ಗುರು ಪರಂಪರಾ ವಂಶ ವಿಸ್ತಾರವು ಹೇಗೆ ಭಾರತದ ಉದ್ದಗಲದಲ್ಲೆಲ್ಲಾ ಹಬ್ಬಿಕೊಂಡಿದೆ ಎಂಬುದು ಅರ್ಥವಾಗುತ್ತದೆ.

ಎ) ಇವರ ಜೀವಿತ ಕಾಲಮಾನವನ್ನು ಕ್ರಿಸ್ತಶಕಾರಂಭದೆತ್ತರಕ್ಕೆ ಕೊಂಡುಹೋಗಲು ವರ್ಷ ೬೧ ಇ.ಪಿ.ಇಂಡಿಕಾ ೨೧, ತೇದಿ ಕ್ರಿಶ ೩೮೦ ಎಂದು ಗುರುತಿಸಿರುವ ಎರಡನೇ ಚಂದ್ರಗುಪ್ತನ ಕಾಲದ ಸ್ತಂಭ ಶಾಸನ.

ಬಿ) ಹಾಗೆಯೇ ಬಂಗಾಳ ಚರಿತ್ರೆ ಪುಟ ೪೦೫–೪೦೬ರಲ್ಲಿನ ಪುಟಗಳಲ್ಲಿ ಉಲ್ಲೇಖಿಸಿದ ಮಲೆಯ ಮತ್ತು ಬೋರ್ನಿಯಾ ದ್ವೀಪಗಳಲ್ಲಿನ ಎರಡು ಶಾಸನಗಳ ಆಧಾರ ರೀತಿಯ (ಪಿ.ಸಿ.ಬಾಗ್‌ಚಿ).

ಸಿ) ಪಂಜಾಬ್ ಮ್ಯೂಸಿಯಂನ ನೋಂದಾಯಿತ ಪಟ್ಟಿಯಲ್ಲಿನ ಪುಟ ೧೮೩–೧೮೪ರಲ್ಲಿ ಸುರಕ್ಷಿತವಾಗಿರುವ ಕ್ರಿಸ್ತಶಕ ಮೊದಲನೇ ಶತಮಾನದ ಕುಶಾನರ ವಂಶಸ್ತನಾದ ಕಾನಿಷ್ಕನ ಕಾಲದ ಚಿನ್ನ ನಾಣ್ಯದ ಮೇಲಿನ ಮುದ್ರಾಂಕಿತವಾಗಿರುವ ಗೋರಕನಾಥನ ಪ್ರಥಿಮಾಕಾರ (ಕೀರ್ತಿಶೇಷ ಸಂಶೋಧಕ ಖಿ.ಏ.ಮಜುಂದಾರ್)

ಡಿ) ಜರ್ನಲ್ ಆಫ್ ದ ಬಾಂಬೆ ಬ್ರಾಂಚ್ ಆಫ್ ರಾಯಲ್ ಏಷ್ಯಾಟಿಕ ಸೊಸೈಟಿ ZZII –p-151 ರಲ್ಲಿ ಉಲ್ಲೇಖ.

ಇ) archeological survey of india annual report p.no.179 ಈ ಉಲ್ಲೇಖದ ಆಧಾರರೀತ್ಯ ಮತ್ಸೇಂದ್ರನಾಥ ಯತಿಯು ಶಕ್ತಿ ವಿಶಿಷ್ಟಾದ್ವೈತ ಕೌಲಸಿದ್ಧಾಂತಾಚಾರ್ಯರು, ಇವರು ಅಸ್ಸಾಂ ರಾಜ್ಯದಲ್ಲಿನ ಖಾಮುಖ್ಯದಿಂದಾದಿಯಾಗಿ ಕರ್ನಾಟಕದಲ್ಲಿನ ಸವದತ್ತಿ, ಚಂದ್ರಗುತ್ತಿ, ಬೂದಿಹಾಳ, ಅಗತೀರ್ಥದಂತಹ ಶಕ್ತಿಪೀಠಗಳನ್ನು ದೇಶದ ಮೂಲೆಮೂಲೆಗಳಲ್ಲಿ ಸ್ಥಾಪಿಸಿದ ನಂತರ ಬಂಗಾಳದಲ್ಲಿನ ಗಂಗಾತೀರದ ಮಹಾನಂದ ಎಂಬಲ್ಲಿ ಸ್ವಲ್ಪಕಾಲ ಆಶ್ರಮವನ್ನು ಸ್ಥಾಪಿಸಿಕೊಂಡಿದ್ದು, ತದನಂತರ ನೇಪಾಳ ಮಾರ್ಗವಾಗಿ ಟಿಬೆಟ್ ದೇಶದ ಕಡೆಗೆ ಹೋದರೆಂಬಲ್ಲಿಯ ತನಕ ಮಾತ್ರ ನಾಥ ಸಂಪ್ರದಾಯದ ಕೋಶಗಳಲ್ಲಿ ಕಾಣ ಸಿಗುತ್ತದೆ. ನಂತರ ಇವರ ನೇಪಾಳ, ಟಿಬೆಟ್ ದಾರ್ಮಿಕ ಆಕಾರಗಳಲ್ಲಿ ಕಾಣಸಿಗುತ್ತಾರೆ. ಈ ಮತ್ಸೇಂದ್ರನಾಥರು ಸ್ಥಾಪಿಸಿದ ಗಂಗಾತೀರದಲ್ಲಿನ ಮಹಾನಂದಾಶ್ರಮವು ೧೪ನೇ ಶತಮಾನದಲ್ಲಿ ಮುಸ್ಲಿಮರ ದಾಳಿಗೆ ತುತ್ತಾದುದ್ದು ಬಂಗಾಳದ ಜನನಾಡಿಯಲ್ಲಿ ಇಂದಿಗೂ ಜೀವಂತವಾಗಿದೆ. (ಬಂಗಾಳ ಚರಿತ್ರಾ ಪಿ.ಸಿ. ಬಾಗ್ಚಿ).

ನಂತರ ಇವರು ನೇಪಾಳ, ಟಿಬೆಟ್, ಚೈನಾದೇಶದ ಬೌದ್ಧ ಆಕಾರಗಳಲ್ಲಿ ತ್ರೀಲೋಕೇಶ್ವರ ಎಂಬ ಹೆಸರಿನಿಂದ ಗೋಚರಿಸುತ್ತಿರುವುದಲ್ಲದೆ ನಾಥ ಸಂಪ್ರದಾಯದ ಚೌರಾಸೆ ಸಂಖ್ಯೆಯ ಸಿದ್ದರುಗಳ ನಾಮಾವಳಿಯ ಪಟ್ಟಿಯು ಇಂದಿಗೂ ನಮಗೆ ನಿಕರವಾಗಿ ಸಿಕ್ಕುವುದು ಟಿಬೇಟಿಯನ್ ವಜ್ರಾಯಾನಿ ಬೌದ್ಧಕೋಶಗಳಲ್ಲಿಯೇ ಎಂಬುದು ಈ ಪ್ರಬಂಧಕ್ಕೆ ವಿಶೇಷ ಆಕಾರವೆಂದೇ ಪರಿಗಣಿಸಬಹುದು.

ಹೀಗೆಯೇ ನಾಥ ಸಂಪ್ರದಾಯದ ತಾಂತ್ರಿಕ ಅನುಷ್ಠಾನದ ಜೊತೆಜೊತೆಯಲ್ಲಿಯೇ ಯೋಗ, ಆಯುರ್ವೇದ, ವೈದ್ಯಕೀಯ, ರಾಸಾಯನ, ರಸಾಯನಿಕ ಮುಂತಾದ ವಿಧ್ಯೆಗಳು ಸಹ ಬೌದ್ಧಧರ್ಮವನ್ನು ಹೊಕ್ಕಿದ ಪರಿಣಾಮದಿಂದಾಗಿ ಇದು ಒಂದು ಸುಸಂಘಟಿತ, ಪ್ರಬುದ್ಧ, ಜನಪ್ರಿಯ ನವ ಬುದ್ಧಧರ್ಮದ ಉದಯಕ್ಕೆ ಕಾರಣೀಕರ್ತವಾಯಿತು. ಆದರೆ ಈ ಪರಿಯ ಪರಿವರ್ತನಾ ಭಾವದಿಂದ ತಾನು ಜನ್ಮತಾಳಿದ ನೆಲದಲ್ಲಿ ಮಾತ್ರ ಬುದ್ಧಧರ್ಮವು ನಶಿಸಿಯೇ ಹೋಯಿತು, ಆದರೆ ಮಹಾಯಾನಿ ಬೌದ್ಧಧರ್ಮವು ನೇಪಾಳ, ಟಿಬೆಟ್ ಮಾರ್ಗವಾಗಿ ಚೀನಾ, ಜಪಾನ್, ಮಂಗೋಲಿಯಾ ಮುಂತಾದ ದೇಶಗಳಲೆಲ್ಲಾ ಹಬ್ಬಿಕೊಂಡು ಯೋಗದರ್ಶನದ ಮೇಲೆ ತನ್ನದೇ ಆದ ಯೋಗ ಪ್ರವೃತ್ತಿಯನ್ನು ಬೆಳೆಸಿಕೊಂಡು ವಜ್ರಾಯಾನ, ಕಾಲಚಕ್ರಯಾನ, ಸಹಜಯಾನ ಹಾಗೂ ಜನ್ ಮುಂತಾದ ಯಾನಗಳಿಗೆ ಜನ್ಮಕೊಟ್ಟಿತು.

ಬುದ್ಧಧರ್ಮವನ್ನು ಸೀಳಿ ಮಹಾಯಾನಾದಿಗಳು ಆವಿರ್ಭವಿಸಲು ಕಾರಣೀಕರ್ತನಾದ ನಾಥ ಸಂಪ್ರದಾಯದ ಆದ್ಯ ಪ್ರವರ್ತಕ ಮತ್ಸೇಂದ್ರನಾಥರು ನೇಪಾಳ, ಟಿಬೆಟ್, ಚೀನಾ ದೇಶದ ಮಹಾಯಾನ–ವಜ್ರಯಾನಾದಿ ಕೋಶಗಳಲ್ಲಿ ತ್ರಿಲೋಕೇಶ್ವರ, ಲೋಕೇಶ್ವರ ಧ್ಯಾನೀ ಬುದ್ಧ ಎಂಬ ಹೆಸರಿನಿಂದ ಗುರುತಿಸಿಕೊಂಡದ್ದಲ್ಲದೆ ನಾಥ ಸಂಪ್ರದಾಯದ ತಾಂತ್ರಿಕ ಗ್ರಂಥಗಳು ಟಿಬೇಟಿಯನ್ ಭಾಷೆಗೆ ಪರಿವರ್ತನೆಗೊಂಡದ್ದು ತಿಳಿದುಬರುತ್ತದೆ. (ಟಿಬೆಟಿಯನ್ ಭಾಷೆಯ ಬಾನ್ ಹುರ್ ಸಂಪುಟ XLVII ಮತ್ತು XLVIII ಸಂಶೋಧಕ ಪ್ರೋ ಕಾರ್ಡಿಯಾರ್). ಈ ಪರಿಯ ಪರಿವರ್ತನಾಭಾವದಿಂದ ನಾಥ ಸಂಪ್ರದಾಯದ ಯೋಗಾಧಾರಿತ ತಾಂತ್ರಿಕ ವಿಧ್ಯೆಗೆ ಬಹುವ್ಯಾಪ್ತಿಯ ಉತ್ತೇಜನ ದೊರೆತಂತೆ ತೋರುತ್ತದೆ.

ಇದೇ ರೀತಿ ನಾಥ ಸಂಪ್ರದಾಯದ ತಾಂತ್ರಿಕ ಗಂಥಗಳು ಚೀನಾ, ಜಪಾನ್ ಮುಂತಾದ ದೇಶವನ್ನು ಸೇರಿ ಬೌದ್ಧಯಾನಗಳಿಗೆ ಸಂಬಂಧಪಟ್ಟಂತಹ ಯೋಗ, ಮಂತ್ರ, ತಂತ್ರ, ಆಚಾರ, ಸ್ತೋತ್ರ ಮುಂತಾದ ವಿಷಯಗಳ ಮೇಲೆ

ನೂರಾರು ಗ್ರಂಥಗಳು ಹುಟ್ಟಿಕೊಂಡಿವೆ. (ಸಂಶೋಧಕ ಪ್ರೋ ಕಾರ್ಡಿಯಾರ್) ಇದಕ್ಕೆ ಪೂರಕವಾದ ಆಕಾರಕ್ಕೆ ಸಾಕ್ಷಿಯಾಗಿ ಗುರುತಿಸಲು ನೇಪಾಳ ಹಾಗೂ ಟಿಬೆಟ್ ದೇಶದ ಆರಾಧ್ಯದೈವ ಮತ್ಸೇಂದ್ರನಾಥ. ಇವನನ್ನು ನೇಪಾಳದಲ್ಲಿ ತ್ರಿಲೋಕೇಶ ಧ್ಯಾನಿ ಬುದ್ಧನೆಂದು ಬುದ್ಧಯಾನದಲ್ಲಿ ಪೂಜಿಸಲ್ಪಡುತ್ತಿದ್ದಾನೆ. ಇವನನ್ನು ಪ್ರತಿವರ್ಷದ ಚೈತ್ರಮಾಸದ ಪ್ರಥಮ ದಿವಸ ಮತ್ಸೇಂದ್ರನಾಥನ ಶಿಷ್ಯನಾದ ಗೋರಕನಾಥನ ಅನುಯಾಯಿಗಳೆಂದೇ ಗುರುತಿಸಿಕೊಂಡಿರುವ ನೇಪಾಳದ ಗೋರಕ ಜನಾಂಗದವರು ಹಾಗೂ ಮಹಾಯಾನಿ ವಜ್ರಯಾನಾದಿ ಬುದ್ಧಯಾನಿಗಳು ಒಟ್ಟಿಗೆ ಸೇರಿ ಆಚರಿಸುವ ಮತ್ಸೇಂದ್ರ ಯಾನೇ ತ್ರಿಲೋಕೇಶನ ಹೆಸರಿನಲ್ಲಿ ನಡೆಯುವ ಜಾತ್ರಾ ಮಹೋತ್ಸವವೇ ಜೀವಂತ ಸಾಕ್ಷಿ. (white history of Nepal).

ಹೀಗೆಯೇ ಟಿಬೆಟ್ ಮತ್ತು ಬರ್ಮಾದೇಶಗಳಲ್ಲಿನ ಬೌದ್ಧಯಾನಿಗಳು ಸಹ ಮತ್ಸೇಂದ್ರನಾಥನನ್ನು ತ್ರಿಲೋಕೇಶ ಧ್ಯಾನಿ ಬುದ್ಧನೆಂದು ಪೂಜಿಸಿ ಜಾತ್ರಾ ಮಹೋತ್ಸವ ನಡೆಸುತ್ತಾರೆ. (bell history of Tibet p.no.63). ಹೀಗೆ ನಾಥ ಸಂಪ್ರದಾಯ ಮತ್ತು ಬುದ್ಧಯಾನಿಗಳ ಕೊಡುಕೊಳ್ಳುವಂತಹ ಧಾರ್ಮಿಕ, ಸಂಪ್ರದಾಯದ ಹಿನ್ನೆಲೆಯ ಆಚರಣಾ ಪ್ರತೀಕವೇ ನಾಥ ಸಂಪ್ರದಾಯದ ಕದ್ರಿ ಗೋರಕಪೀಠಾಧೀಶರ ಸುಪರ್ದಿಯಲ್ಲಿದ್ದ ಮಂಗಳೂರು ಕದರೀ ಮಂಜುನಾಥ ದೇವಳದ ವಠಾರದಲ್ಲಿ ಮಂಜುನಾಥ, ಮತ್ಸೇಂದ್ರನಾಥ, ಗೋರಕನಾಥ, ಚೋರಂಗಿನಾಥ ಹಾಗೂ ತ್ರಿಲೋಕೇಶ, ಲೋಕೇಶಾದಿ ಧ್ಯಾನೀಬುದ್ಧರುಗಳ ಪ್ರತಿಮಾಕಾರಗಳು ಒಂದೆಡೆಯಲ್ಲಿ ಸುರಕ್ಷಿತವಾಗಿ ನಮಗೆ ದಕ್ಕಲು ಅವಕಾಶವಾಗಿರುವುದು.

ಗೌತಮನ ಬುದ್ಧಯುಗದ ಕಲ್ಪಾಂತ್ಯಕ್ಕೆ ಕಾರಣೀಕರ್ತನಾದ ಮಂಗಳೂರು ಕದ್ರಿಯಲ್ಲಿನ ಮಂಜುನಾಥನ ದೇವಳದಲ್ಲಿರುವಂತ ತ್ರಿಲೋಕೇಶ ಧ್ಯಾನೀ ಬುದ್ಧ ಹಾಗೂ ಲೋಕೇಶ ಧ್ಯಾನೀ ಬುದ್ಧನ ವಿಗ್ರಹದ (ಫೋಟೋ ೧,೨) ಬಲ ಅಂಗೈ ಕರಸ್ಥಳ ಮಧ್ಯದಲ್ಲಿ ಹಾಗೂ ಚಿತ್ರದುರ್ಗ ಮುರುಗಶ್ರೀಗಳು ವಿದೇಶ ಪ್ರವಾಸದ ಸಂದರ್ಭದಲ್ಲಿ ಚೀನಾದೇಶದಿಂದ ತಂದಂತಹ ಬುದ್ಧಯತಿಗಳ ವಿಗ್ರಹದಲ್ಲಿನ ಎಡ ಕರಸ್ಥಳ ಮಧ್ಯದಲ್ಲಿ ಬಹಿರಂಗವಾಗಿ ತೋರುತ್ತಿರುವಂತಹ ಶಿವನ ಹೆಗ್ಗುರುತಾದ ಲಿಂಗಾಕಾರದ ಚಿನ್ಹೆಯ ಬಗ್ಗೆ (ಫೋಟೋ ೩,೪) ಸಂಶೋಧಿಸಲೇಬೇಕಾಗಿದೆ. ಇವುಗಳು ನಮಗೆ ಅಪರೂಪಕ್ಕೆ ದಕ್ಕಿದ ಗತಕಾಲದ ಚಾರಿತ್ರಿಕ ಸತ್ಯದ ಕುರುಹುಗಳಾಗಿರುವುದರಿಂದ ಈ ಪುರಾತನ ಚಾರಿತ್ರಿಕ ಕುರುಹುಗಳ ಹಿನ್ನೆಲೆಗಳನ್ನು ಯಾವುದೇ ಕಾರಣಕ್ಕೂ ತಾತ್ಸಾರದಿಂದ ನೋಡುವುದಾಗಲಿ, ಬಚ್ಚಿಡುವುದಾಗಲಿ ಸೂಕ್ತವಲ್ಲ. ಯಾವ ಯಾವ ಚಾರಿತ್ರಿಕ ಕುರುಹುಗಳು, ಯಾವ ಕಾರಣದಿಂದಾಗಿ ಸೂಕ್ತ ಕಾಲಕ್ಕಾಗಿಯೋ ಅಥವಾ ಸೂಕ್ತ ಸಂಶೋಧಕನಿಗಾಗಿ ಕಾಯುತ್ತಿರುತ್ತವೆಯೋ ಆ ಕಾಲದ ತಿರುವಿಗೆ ಗೊತ್ತಿರುವ ವಿಷಯವಿದು.

ಗತಕಾಲದ ಚಾರಿತ್ರಿಕ ಘಟನೆಗಳೆಲ್ಲಾ ಇಲ್ಲಿವರೆಗೂ ನಾವು ನಿರ್ಣಯಿಸಿರುವ ಅಭಿಪ್ರಾಯವೇ ಅಂತಿಮ ಸತ್ಯವೆಂಬ ನಿರ್ಧಾರಕ್ಕೆ ಸಂಶೋಧನೆಯಲ್ಲಿ ಸ್ಥಾನವೇ ಇಲ್ಲ. ಯಾವುದೇ ವಿಷಯಕ್ಕಾಗಲೀ, ಘಟನೆಗಳಿಗಾಗಲಿ ಸಂಬಂಧಿಸಿದಂತಹ ಹೊಸ ಹೊಸ ಆಕಾರಗಳು ದೊರೆತಂತೆಲ್ಲಾ ಅಭಿಪ್ರಾಯಗಳು ಬದಲಾಗುವುದು ಅನಿವಾರ್ಯ.

ಸಂವಿಧಾನಬದ್ಧವಾದ ಅಭಿವ್ಯಕ್ತ ಸ್ವಾತಂತ್ರ ಇದ್ದರೂ ಸಹ ಸಂಶೋಧಕನು ತಾನು ಶೋಧಿಸಿದ ಚಾರಿತ್ರಿಕ ಸತ್ಯವನ್ನು ವ್ಯಕ್ತಪಡಿಸಿ ಪ್ರಚಾರಪಡಿಸಲು ಎಂಟೆದೆ ಬೇಕೆಂಬ ಪರಿಸ್ಥಿತಿ ಈಗ ಇದೆ ಎಂಬ ಮಾತನ್ನು ಬಹಳ ನೋವಿನಿಂದ ಹೇಳುವಂತಾಗಿದೆ. ಸತ್ಯದ ಆರಾದಕನಾದ ಸಂಶೋಧಕನದು ಜೀವ ಭಯದ ನೆರಳಲ್ಲಿ ನಡೆಯುವಂತಾಗಿದೆ. ಆದರೂ ಸಹ ಈ ವಿಚಾರದ ಬಗ್ಗೆ ವಿಚಾರಮಂಥನ ಹಾಗೂ ಆರೋಗ್ಯಪೂರ್ಣವಾದಂತಹ ಸಂವಾದ ಅಪೇಕ್ಷಣೀಯ ಹಾಗೂ ಅನಿವಾರ್ಯವೂ ಕೂಡಾ. ಸ್ವಲ್ಪ ಕಷ್ಟವಾದರೂ ಸಹ ಹಚ್ಚಡದ (ಬಟ್ಟೆಯ) ನೂಲನ್ನು ಎಳೆ ಎಳೆಯಾಗಿ ಬಿಡಿಸಿ ತೆಗೆದರೆ ಎಷ್ಟೇ ದೊಡ್ಡ ಹಚ್ಚಡವನ್ನಾದರೂ ಸಹ ಬಿಡಿಸಿ ತೆಗೆಯಬಹುದು ಎಂಬ ಅನುಭವೋಕ್ತಿಯ ಆಧಾರದ ಸೂತ್ರದ ನಂಬಿಕೆಯಂತೆ ಸತ್ಯ ಸಂಶೋಧನೆಯ ವಿಷಯದಲ್ಲಿ ಎಷ್ಟೇ ಕಗ್ಗಂಟ್ಟಿದ್ದರೂ ಹಾಗೂ ಎಡರು ತೊಡರುಗಳು ಎದುರಾದರೂ ಸಹ ಸಂಶೋಧಕರುಗಳು ಸತ್ಯಕ್ಕೆ ಅವಮಾನವಾಗಲು ಬಿಡಬಾರದೆಂಬ ಹಿರಿಯೋಕ್ತಿಯ ಹೆಬ್ಬಯಕೆಯನ್ನು ಶಿರೋಮುಡಿಯಲ್ಲಿ ಹೊತ್ತು ಮೇಲ್ಕಂಡ ತ್ರಿಲೋಕೇಶಾದಿ ಧ್ಯಾನೀ ಬುದ್ಧರ ಕರಸ್ಥಳದಲ್ಲಿನ ಲಿಂಗವನ್ನು ವಿಮರ್ಶಿಸಲೇಬೇಕಾದ ಅನಿವಾರ್ಯತೆಯೂ ಈ ಪ್ರಬಂಧಕ್ಕೆ ಒದಗಿಬಂದಿದೆ.

ಭಾರತೀಯ ಅಂತಃಶ್ಚೈತನ್ಯದ ಪರಮೌಧಾರ್ಯವು ಏಕೈಕವಾದ ಪರಮಸತ್ಯವನ್ನರಸಿಕೊಂಡು ಏಕೈಕನಾಗಿಯೇ ಯಾತ್ರೆ ಹೋಗುವುದರ ಬಗ್ಗೆ ಚರಿತ್ರೆಗೆ ಸಾಕಷ್ಟು ಪ್ರಮಾಣವನ್ನು ಒದಗಿಸಿಕೊಟ್ಟಿದೆ. ಈ ಅಜ್ಞಾತವಾದುದರತ್ತ ಅನ್ವೇಷಣೆಗೆ ಹಂಬಲಿಸುವಲ್ಲಿ ವಿಭಿನ್ನ ಮಾರ್ಗಗಳನ್ನು ಅನುಸರಿಸುವುದನ್ನು ಭಾರತ ಮಾತೆಯ ಅಂತಹಸತ್ವವು ನಾಥ ಸಂಪ್ರದಾಯದ ಆದ್ಯ ಪ್ರವರ್ತಕರುಗಳಾದ ಪಂಚಸಿದ್ದರುಗಳಿಗೂ ಈ ಕೆಳಕಂಡಂತೆ ಅವಕಾಶವನ್ನಿತ್ತಿದೆ.

೧) ಮತ್ಸೇಂದ್ರನಾಥ ಶಕ್ತಿ ವಿಶಿಷ್ಟಾದ್ವೈತ ಕೌಲ ಸಿದ್ಧಾಂತಿ.

೨) ಗೋರಕನಾಥ (ಮತ್ಸೇಂದ್ರನಾಥನ ಶಿಷ್ಯ) ಲಾಕುಳಶೈವವೆಂದೇ ಪ್ರಖ್ಯಾತವಾದ ಪಶುಪಥ ಸಿದ್ಧಾಂತಿ. ಇದರ ಬಿಳಲುಗಳೇ ಕಾಶ್ಮೀರಿ ಶೈವ ಹಾಗೂ ಕಾಳಮುಖ. ಇದರ ಉಪ ಶಾಖೆಗಳಾದ ಶಕ್ತಿಪರಿಶಿ, ಸಿಂಹಪರಿಶಿ, ಪರ್ವತಾಳಿಗಳು.

೩) ಬೌದ್ಧಯಾನಗಳಲ್ಲಿ ಹಾಡಿಪ ಎಂದೇ ಪ್ರಖ್ಯಾತನಾದ ಜ್ವಾಲಾಂದರನಾಥ ಶಾಕ್ತ ಸಿದ್ಧಾಂತಿ.

೪) ಬೌದ್ಧಯಾನಗಳಲ್ಲಿ ಕಾನ್‌ಪ ಎಂದೇ ಪ್ರಖ್ಯಾತನಾದ ಕಾನೀಪನಾಥ ಇವನು ಕಾಪಾಲಿಕ ಸಿದ್ಧಾಂತಿ.

೫) ಜ್ಞಾನ್ ಫರೂಕ್ ಸಿದ್ಧ್ ಎಂಬ ವಿಶೇಷಣಕ್ಕೆ ಭಾಗೀನರಾದ ಚೋರಂಗಿನಾಥ್, ಇವರದು ಚಾರ್ವಾಕ ಸಿದ್ಧಾಂತ.

ಹಾಗೆಯೇ ನಾಥಯತಿಗಳು ಹಾಗೂ ಅವರ ಇಷ್ಟ ದೈವ ಸ್ವರೂಪದ ನಡುವಿನ ಗಾಢವಾದ ವೈಯಕ್ತಿಕ ರೂಪ ಸಂಬಂಧವೂ ಸಹ ನಾಥ ಸಂಪ್ರದಾಯದ ಸಿದ್ಧರುಗಳ ವ್ಯಕ್ತಿಗತ ಅನುಕರಣಾ ಸ್ವರೂಪಗಳಾಗಿದ್ದವು. ಈ ವೈಯಕ್ತಕ ಅನುಕರಣಾ ಸಂಬಂಧವೇ ಭೈರವನ ಕಾಪಾಲಿಕ ಸ್ವರೂಪದ ಸಿದ್ಧಾಂತವನ್ನು ಅಂಗೀಕರಿಸಿಕೊಂಡಂತಹ ಕಾಪಾಲಿಕ ಯತಿಗಳ ಕರಸ್ಥಳದಲ್ಲಿನ ನರಕಪಾಲ ಮತ್ತು ಅವರುಗಳ ಸ್ಮಶಾನವಾಸವೇ ಸಾಕ್ಷಿಯಾಗಿದೆ.

ಇದೆ ಪರಿಯಲ್ಲಿ ಶಕ್ತಿವಿಶಿಷ್ಟಾದ್ವೈತಕೌಲ, ಕಾಪಾಲಿಕ, ಶಾಕ್ತ ಹಾಗೂ ಪಾಶುಪಥಾನುಯಾಯಿಗಳಾದ ಕಾಳಮುಖಿ ಸಿದ್ಧಿಸಾಧಕ ಯತಿಗಳಲ್ಲಿ ಮಾತ್ರ ತಮಗೆ ಗುರುಮುಖೇನ ದಕ್ಕಿದ ಶಂಭೋ ಮಹಾದೇವನ ಸಂಕೇತವಾದ ಕರಸ್ಥಳ ಸಿದ್ಧಲಿಂಗವನ್ನು ನಿಯಮಬದ್ಧವಾಗಿ ಪೂಜಿಸುತ್ತಾ ತಮ್ಮ ತಮ್ಮ ಶಿರೋಮುಡಿಯಲ್ಲಿ, ಕೊರಳಲ್ಲಿ, ತೋಳಲ್ಲಿ ಹಾಗೂ ಸೊಂಟದಲ್ಲಿಯೂ ಸಹ ಧಾರಣೆ ಮಾಡಿಕೊಂಡು ಸದಾ ಪರ್ಯಾಟನ ಮಾಡುತ್ತಿದ್ದಂತಹ ನಾಥಯತಿಗಳಲ್ಲಿ ಮಾತ್ರ ವೇದಕಾಲದಲ್ಲೆಲ್ಲೂ ಘೋಚರಿಸದ ಕರಸ್ಥಳ ಲಿಂಗಪೂಜಾ ಪದ್ಧತಿಯು ಕ್ರಿ.ಶ ಮೊದಲನೇ ಶತಮಾನದಿಂದೀಚೆಗೆ ಅಂದರೆ ನಾಥ ಸಂಪ್ರದಾಯದ ಆದ್ಯ ಪ್ರವರ್ತಕರುಗಳಾದ ಮತ್ಸೇಂದ್ರ ಗೋರಕಾದಿ ಪಂಚಸಿದ್ದರುಗಳು ಆವಿರ್ಭವಿಸಿ ಬಂದ ಕಾಲದಿಂದೀಚಗೆ (ಮತ್ಸೇಂದ್ರನಾಥ, ಗೋರಕನಾಥ ಕಾಲಮಾನ ಲೇ॥ ಸಿದ್ದರಗಿರಿ ಚಂದ್ರೇಗೌಡ) ಆಚರಣೆಗೆ ಬಂದಿರುವುದರಿಂದಾಗಿಯೇ ಈ ಪರಿಪಾಠದ ಹೆಗ್ಗುರುತಾದ ಕರಸ್ಥಲ ಲಿಂಗವನ್ನು ಈ ಸಂಪ್ರದಾಯದ ಆದ್ಯ ಪ್ರವರ್ತಕರುಗಳಾದ ಮತ್ಸೇಂದ್ರ ಗೋರಕಾದಿ ಚೌರಾಸೆ ಸಿದ್ದರುಗಳು ಕರಸ್ಥಲದಲ್ಲಿ ಸದಾ ಧಾರಣೆ ಮಾಡಿಕೊಂಡು ಇರುತ್ತಲಿದ್ದುದರಿಂದಲೇ ಈ ಪಂಚಸಿದ್ದರುಗಳ ಪ್ರತೀಕವಾಗಿ ಪಂಷಲಿಂಗ ದೇವಸಾನಿಧ್ಯಗಳನ್ನು ಇವರುಗಳ ಶಿಷ್ಯಪರಂಪರೆಯವರುಗಳು ದೇಶದಾದ್ಯಂತ ಸ್ಥಾಪಿಸಿಕೊಂಡಂತಹ ಸ್ಥಾವರ ಸಂಕೇತವೇ ಪಂಚಲಿಂಗ ಕ್ಷೇತ್ರಗಳು.

ಈ ನಾಥ ಸಂಪ್ರದಾಯದ ಆದ್ಯ ಪ್ರವರ್ತಕರುಗಳಾದ ಸಿದ್ದರುಗಳನ್ನೇ ಪಂಚದ್ಯಾನಿ ಬುದ್ಧರುಗಳೆಂದು ಮಹಾಯಾನಿ, ವಜ್ರಯಾನಾದಿಗಳು ಅಂಗೀಕರಿಸಿಕೊಂಡ ಪ್ರತೀಕವಾಗಿಯೇ ನಾಥ ಸಂಪ್ರದಾಯದ ಸುಪರ್ದಿಯಲ್ಲಿರುವ ಮಂಗಳೂರು ಕದ್ರಿ ಮಂಜುನಾಥ ದೇವಾಲಯದಲ್ಲಿದ್ದಂತೆಯೇ

೧) ಜಬಲ್‌ಪುರದ ಶಿವದೇವಾಲಯಾಗಳಲ್ಲಿ ಕರಸ್ತಲದಲ್ಲಿ ಲಿಂಗವಿರುವಂತಹ ಧ್ಯಾನೀ ಬುದ್ಧನ ವಿಗ್ರಹವನ್ನು ಮಹಾದೇವ ಎಂದು ಪೂಜಿಸುತ್ತಿದ್ದಾರೆ.

೨) ಒರಿಸ್ಸಾ ರಾಜ್ಯದ ಪ್ರದೀಪಘಡ ಎಂಬಲ್ಲಿನ ಶೈವದೇವಾಲಯದಲ್ಲಿಯೂ ಸಹ ಕರಸ್ತಲದಲ್ಲಿ ಲಿಂಗವಿರುವ ಧ್ಯಾನೀ ಬುದ್ಧನ ವಿಗ್ರಹವನ್ನು ಲೋಕನಾಥ ಎಂಬಂತೆ ಪೂಜಿಸುತ್ತಾರೆ.

೩) ಹಾಗೆಯೇ ಒರಿಸ್ಸಾ ರಾಜ್ಯದ ಕರಘಡದಲ್ಲಿನ ಜಗನ್ನಾಥ ದೇವಾಲಯದಲ್ಲಿಯೂ ಸಹ ಕರಸ್ತಲದಲ್ಲಿ ಲಿಂಗ ಹಿಡಿದಿರುವಂತಹ ಧ್ಯಾನೀ ಬುದ್ಧರಲ್ಲೊಬ್ಬರನ್ನು ಲೋಕನಾಥ ಎಂದು ಪೂಜಿಸುತ್ತಾರೆ.

ಮಂಗಳೂರು ಕರಾವಳಿಯ ಕದರಿ ಮಂಜುನಾಥ ದೇವಳದಲ್ಲಿರುವ ತ್ರಿಲೋಕೇಶನ ಕರಸ್ಥಲದಲ್ಲಿ ಹಾಗೂ ಚಿತ್ರದುರ್ಗ ಮುರುಗಾಶ್ರೀಗಳು ವಿಶ್ವಪರ್ಯಾಟನೆ ಸಮಯದಲ್ಲಿ ಚೀನಾ ದೇಶದಿಂದ ಸಂಪಾದಿಸಿ ತಂದಿರುವಂತಹ ಧ್ಯಾನೀಬುದ್ಧ ಯತಿಗಳ ಕರಸ್ಥಲದಲ್ಲಿ ಸ್ಪಷ್ಟವಾಗಿ ಘೋಚರಿಸುತ್ತಿರುವ ಶಿವನ ಸಂಕೇತವಾದ ಕರಸ್ಥಲ ಲಿಂಗವು ನಾಥ ಸಂಪ್ರದಾಯದ ಆದ್ಯ ಪ್ರವರ್ತಕ ಮತ್ಸೇಂದ್ರಾದಿ ಸಿದ್ದರುಗಳು ಆರಾಧಿಸುತ್ತಿದ್ದ ಆರಾಧನಾ ಪ್ರತೀಕ ಎಂಬುದಕ್ಕೆ ಜೀವಂತ ಸಾಕ್ಷಿಯಾಗಿ ಗುರುತಿಸಬಹುದು.

ಈ ತ್ರಿಕೋಕೇಶ ಧ್ಯಾನೀ ಬುದ್ಧ (ಮತ್ಸೇಂದ್ರನಾಥ) ನನ್ನು ಮಂಜುಶ್ರೀ ಕಲ್ಪ ಎಂಬ ವಜ್ರಾಯಾನಿ ಬೌದ್ದರ ತಾಂತ್ರಿಕ ಶಾಸ್ತ್ರದ ಆಧಾರರೀತ್ಯಾ ಲಿಂಗ ರೂಪಕ್ಕೆ ಆವಾಹಯಾಮಿಸಿಕೊಂಡು ಆರಾಧಿಸುತ್ತಿದ್ದಂತಹ ಮಂಜುನಾಥನ ಲಿಂಗವನ್ನು

೧೦ನೇ ಶತಮಾನದಲ್ಲಿ ಕರಾವಳಿಯ ಕನ್ನಡನಾಡನ್ನು ಆಳುತ್ತಿದ್ದ ಅಲೂಪ ಅರಸು ಕುಂದವರ್ಮನ (ಕ್ರಿ.ಶ. ೯೮೬) ಕಾಲಾವಧಿಯಲ್ಲಿ ವಾಡಿಕೆಯಂತೆ ಪ್ರತಿ ೧೨ ವರ್ಷಕ್ಕೊಮ್ಮೆ ನಾಥ ಸಂಪ್ರದಾಯದ ನಿಯಮದಂತೆ ಹರಿದ್ವಾರ, ಪ್ರಯಾಗ, ಉಜ್ಜಯಿನಿ ಕ್ಷೇತ್ರದಲ್ಲಿ ಜರುಗಿದಂತೆಯೇ ದಕ್ಷಿಣಾಂಚಲದ ತ್ರಯಂಬಕೇಶ್ವರದಲ್ಲಿಯೂ ನಿಯಮದಂತೆ ಸೇರಿದ ಕುಂಭಮೇಳದ ಯತಿಸಮೂಹದಿಂದ ಆರಿಸಿ ಕದರಿ ಪೀಠಕ್ಕೆ ನಿಯೋಜಿಸಲ್ಪಟ್ಟಂತ ಉತ್ತರ ಪಥದ ನೇಪಾಳಿ ಮೂಲದಿಂದ ಬಂದಂತಹ ಪೀಠಾಧೀಶರ ಅಭೀಷ್ಟದ ಮೇರೆಗೆ, ದೇವಳದ ಪೀಠದ ಮೇಲಿದ್ದಂತಹ ಲಿಂಗರೂಪಿ ಮಂಜುನಾಥನನ್ನು ಪೀಠದಿಂದ ತೆಗೆದು ದೇವಳದ ವಠಾರದಲ್ಲಿಯೇ ಇರುವ ತೀರ್ಥಕೊಳದಲ್ಲಿ ಜಲವಾಸದಲ್ಲಿ ಸ್ಥಾಪಿಸಿದ್ದರು. ಈ ಜಲವಾಸದಲ್ಲಿದ್ದ ಮಂಜುನಾಥ ಲಿಂಗವನ್ನು ಧರ್ಮಸ್ಥಳದ ಬರಮಯ್ಯ ಹೆಗ್ಡೆ ಎಂಬುವವರು ಧರ್ಮಸ್ಥಳಕ್ಕೆ ಕೊಂಡು ಹೋಗಿ ಉಡುಪಿಯ ಕೃಷ್ಣ ಮಠದ ವಾದಿರಾಜತೀರ್ಥರು (ಇವರ ಕಾಲಮಾನ ೧೬ನೇ ಶತಮಾನ) ಇವರ ಅಮೃತ ಹಸ್ತದಿಂದ ಪ್ರತಿಷ್ಠಾಪಿಸಿಕೊಂಡರೆಂಬ ಐತಿಹ್ಯದ ಸತ್ಯಸಂಗತಿಯು ದಕ್ಷಣಕನ್ನಡ ಜಿಲ್ಲೆಯ ಸ್ಥಳಿಯರ ಜನನಾಅಡಿಯಲ್ಲಿ ಇಂದೂ ಸಹ ಜೀವಂತವಾಗಿದೆ.

ನಾಥ ಸಂಪ್ರದಾಯದ ಆದ್ಯ ಪ್ರವರ್ತಕ ಮತ್ಸೇಂದ್ರನಾಥನೇ ತ್ರಿಲೋಕೇಶ ಧ್ಯಾನೀ ಬುದ್ಧ ಎಂದು ಆರಾಧಿಸುವ ನೇಪಾಳಿ ಮೂಲದ ಮಂಗಳೂರು ಕದ್ರಿಯ ಅಂದಿನ ಪೀಠಾಧೀಶರು ಈ ತ್ರೀಲೋಕೇಶನ ಕಂಚಿನ ವಿಗ್ರಹವನ್ನು ಕ್ರಿ.ಶ. ೯೬೮ರ ಸರಿಸುಮಾರಿನ ಕಾಲಾವದಿಯಲ್ಲಿ ಕರಾವಳಿಯ ಕನ್ನಡ ನಾಡನ್ನು ಆಳುತ್ತಿದ್ದಂತಹ ಕುಂದವರ್ಮ ಮಹಾರಾಜನಿಂದ ನಿರ್ಮಿಸಿ ಕೊಂಡು ಮಂಜುನಾಥನ ಮೂಲಪೀಠದ ಮೇಲೆ ಪ್ರತಿಷ್ಠಾಪಿಸಿಕೊಂಡು ಪೂಜಿಸುತ್ತಿದ್ದಂತ ತ್ರಿಲೋಕೇಶನ ವಿಗ್ರಹವನ್ನು ತದನಂತರದ ಕಾಲಗತಿಯಲ್ಲಿ ಅಂದರೆ ಸುಮಾರಾಗಿ ಲಿಂಗರೂಪಿ ಮಂಜುನಾಥನನ್ನು ಧರ್ಮಸ್ಥಳಕ್ಕೆ ಕೊಂಡು ಹೋಗಿ ವಾದಿರಾಜ ತೀರ್ಥರ ಅಮೃತಹಸ್ತದಿಂದ ಪ್ರತಿಸ್ಥಾಪಿಸಿಕೊಂಡ ನಂತರದ ಕಾಲಾವದಿಯಲ್ಲಿ ಅಂದರೆ ಸುಮಾರಾಗಿ ೧೬ನೇ ಶತಮಾನದಿಂದೀಚೆಗೆ ಮದ್ವಾನುಯಾಯಿ ಅರ್ಚಕರುಗಳು ಕದ್ರಿ ದೇವಾಳದ ಪೂಜೆಯನ್ನು ದಕ್ಕಿಸಿ ಕೊಂಡಂತೆ ತೋರುತ್ತದೆ. ಆ ನಂತರದ ಕಾಲಾವದಿಯಲ್ಲಿ ಪೀಠದ ಮೇಲಿದ್ದ ತ್ರಿಲೋಕೇಶ ದ್ಯಾನೀಬುದ್ದನ ಲೋಹಮಯ ಪ್ರತಿಮೆಯನ್ನು ಮಂಜುನಾಥನ ಮೂಲ ಪೀಠದಿಂದ ಕೆಳಕ್ಕಿಳಿಸಿ ಗರ್ಭಗುಡಿಯ ಮೂಲೆಯಲ್ಲಿ ತೆಗೆದಿರಿಸಿದ್ದರು. ಆದರೆ ಆ ಕಾಲಕ್ಕಾಗಲೇ ದೇವಾಳದ ಕಲ್ಯಾಣಿಯಲ್ಲಿ ಜಲವಾಸದಲ್ಲಿದ್ದಂತ ಲಿಂಗರೂಪಿ ಮಂಜುನಾಥನನ್ನು ಧರ್ಮಸ್ಥಳಕ್ಕೆ ತೆಗೆದುಕೊಂಡು ಹೋಗಿ ಪ್ರತಿಸ್ಥಾಪಿಸಿಕೊಂಡಿದ್ದರಿಂದ ತ್ರಿಲೊಕೇಶ ದ್ಯಾನಿಬುದ್ದನನ್ನು ಪಿಠದಿಂದ ಕೆಳಕ್ಕಿಳಿಸಿ ಗರ್ಭಗುಡಿಯ ಮೂಲೆಯಲ್ಲಿ ತೆಗೆದಿರಿಸಿದ್ದರು. ಆದರೆ ಆಕಾಲಕ್ಕಾಗಲೇ ದೇವಾಳದ ಕಲ್ಯಾಣಿಯಲ್ಲಿ ಜಲವಾಸದಲ್ಲಿದ್ದಂತ ಲಿಂಗರೂಪಿ ಮಂಜುನಾಥನನ್ನು ಧರ್ಮಸ್ಥಳಕ್ಕೆ ತಗೆದು ಕೊಂಡು ಹೋಗಿ ಪ್ರತಿಷ್ಠಾಪಿಸಿಕೊಂಡಿದ್ದರಿಂದ ಮೂಲಪೀಟಕ್ಕೆ ಬೇರೆ ಲಿಂಗಾಕಾರವನ್ನು ಪ್ರತಿಷ್ಠಾಪಿಸುವುದಕ್ಕೆ ದಾರ್ಮಿಕ ನಿಬಂಧನೆ ಅಡ್ಡಿಬರುವುದರಿಂದ ಮೂಲಪೀಠಕ್ಕೆ ಪ್ರಭಾವಳಿಯನ್ನಿಟ್ಟು ಅಲಂಕರಿಸಿ ಪೂಜಿಸಲು ಶುರುಮಾಡಿದ್ದೂ ಸಹ ಇತಿಹಾಸದ ದಾಖಲೆಗೆ ಸೇರಿದೆ. ಆದರೆ ಈ ದಾಖಲೆಗಳೇ ಗೋರಕಾನುಯಾಯಿಗಳು ತಮ್ಮ ಗುರುಗಳ ಗುರುವಾದ ಮತ್ಸೇಂದ್ರನಾಥನನ್ನು ಮಂಜುನಾಥ ತ್ರಿಲೋಕೇಶ ಎಂದು ಅಂಗೀಕರಿಸಿಕೊಂಡಿರುವುದಕ್ಕೆ ಜೀವಂತ ಚಾರಿತ್ರಿಕ ಸಾಕ್ಷಿಯಾಗಿ ನಮ್ಮಗಳಿಗೆ ದಕ್ಕಿದಂತಾಗಿದೆ.

ಹೀಗೆಯೇ ಮಂಜುಶ್ರೀಕಲ್ಪ ಎಂಬ ವಜ್ರಾಯಾನಿ ಸಿದ್ದಿಸಾದನಾ ಕೋಶದ ಆದಾರರೀತ್ಯ ಮತ್ಸೇಂದ್ರನಾಥನನ್ನು ವಜ್ರಾಯಾನಿಗಳು ತಂತ್ರಶಾಸ್ತ್ರದ ರೀತ್ಯ ದೈವೀಕರಿಸಿ ಕೊಂಡ ತ್ರಿಲೋಕೇಶ ಎಂಬ ರೂಪಾಕಾರವನ್ನು ಬೌದ್ಧಯಾನಿಗಳು ಹಾಗೂ ನಾತಸಂಪ್ರದಾಯದ ಗೋರಕನಾಥ ಅಖಾಡದ ಕುಂಡಲಧಾರಿ ಯತಿಗಳು ಸಹ ಅಂಗೀಕರಿಸಿ ಆರಾದಿಸುವುದರಿಂದ ಹಾಗೂ ಮಂಗಳೂರು ಕದ್ರಿಯು ಪ್ರಮುಖವಾದ ನಾಥಕ್ಷೇತ್ರ ವಾದುದರಿಂದ ಮಾತ್ರ ತ್ರಿಲೋಕೇಶನ ಮತ್ತು ಲೋಕೇಶನ ಪ್ರತಿಮೆಯ ಬಲ ಮುಂಗೈಯಲ್ಲಿರುವಂತಹ ಕರಸ್ಥಲ ಲಿಂಗವು ಹೊರ ಜಗತ್ತಿಗೆ ದಕ್ಕಲು ಸಾಧ್ಯವಾಗಿದೆ.

ಈ ಆಧಾರದ ಹಿನ್ನೆಲೆಯಿಂದ ನಾಥಸಂಪ್ರದಾಯದ ಬಿಳಲುಗಳಾದ ಶಕ್ತಿವಿಶಿಷ್ಟಾದ್ವೈತಕೌಲ, ಕಾಪಾಲಿಕ, ಶಾಕ್ತ, ಪಾಶುಪಥ ಇದರ ಇನ್ನೊಂದು ಮುಖವಾದ ಕಾಳಮುಖ- ಇದರ ಉಪ ಶಾಖೆಗಳಾದ ಶಕ್ತಿಪರಿಸಿ, ಸಿಂಹಪರಿಸಿ, ಪರ್ವತಾಳಿ ಸಿದ್ದರುಗಳು ಮತ್ರ ಧಾರಣೆ ಮಾಡಿಕೊಂಡು ಆರಾದಿಸುತ್ತಿದ್ದಂತ ಕರಸ್ಥಲಲಿಂಗದ ಪ್ರಾಚೀನತೆಯನ್ನು ದೃಡಪಡಿಸಲು ದಕ್ಕಿದ ಜೀವಂತ ಸಾಕ್ಷಿಯಾಗಿದೆ.

ಇದಕ್ಕೆ ಪೂರಕ ಸಾಕ್ಷಿಯಾಗಿ ಯಮಳಾಂತರ್ಗತ ಲಾಕುಳಶೈವ (ಪಾಶುಪತ) ಸಿದ್ಧಾಂತ ವೃತ್ತಿಯ ಸಾಧಕನ ಆದಿನಾಥ (ಶಿವ) ಸರ್ವಾರ್ಪಣ ಭಾವದ ಮನೋವೃತ್ತಿಯಲ್ಲೇನಾದರೂ ಲೋಪ ಮೂಡಿದರೆ ಹಾಗೂ ಧೀಕ್ಷಾ ಸಮಯದಲ್ಲಿ



**ಪಂಚಲೋಹದ ತ್ರೀಲೋಕೇಶ್ವರ**



**ಲೋಕೇಶ್ವರ, ಕದಿರಿ**

ಗುರು ನೀಡಿದ ವೈಯುಕ್ತಿಕ ಕರಸ್ಥಲದಲ್ಲಿನ ಆದಿನಾಥ ಸ್ವರೂಪ ಲಿಂಗವನ್ನು ಬೀಳಿಸಿಕೊಳ್ಳುವುದೂ ಸಹ ಅಪರಾಧ. ಈ ಪಾಪವನ್ನು ಪರಿಹರಿಸಿಕೊಳ್ಳಲು ವಿವಿಧ ಪ್ರಾಯಶ್ಚತ್ತ ಕರ್ಮಗಳನ್ನು ರುದ್ರ ಯಮಳಾಂತರ್ಗತ ತಂತ್ರಶಾಸ್ತ್ರವು ವಿವರವಾಗಿ ನಿರೂಪಿಸಿದೆ. ಹಾಗೆಯೇ ಪ್ರಮಾದವಶಾತ್ ಗುರು ನೀಡಿದ ಆದಿನಾಥ ಸ್ವರೂಪ ಕರಸ್ಥಳ ಲಿಂಗವು ಪತನವೇನಾದರೂ ಆದರೆ ಸಾಧಕನ ಗುರು ಜೀವಂತವಾಗಿರದಿದ್ದರೆ ಪತಭ್ರಷ್ಟ ಶಿಷ್ಯನಿಗೆ ದೇಹತ್ಯಾಗವೊಂದೇ ಪರಿಹಾರ ಮಾರ್ಗವೆಂಬ ಕಠೋರ ನಿಬಂಧವೂ ಸಹ ಇದೆ. ಈ ಆಧಾರರೀತ್ಯ ನಾಥ ಸಂಪ್ರದಾಯದ ಪಾಶುಪಥಾನುಯಾಯಿಗಳಾದ ಕಾಳಮುಖ





**ಮುರುಘಮಠ, ಚಿತ್ರದುರ್ಗ**

ಸಿದ್ದರುಗಳು ಗುರು ಕೊಟ್ಟ ವೈಯುಕ್ತಿಕ ಕರಸ್ಥಲ ಲಿಂಗವನ್ನು ಆರಾಧಿಸುತ್ತಿದ್ದರೂ ಹಾಗೂ ತಪ್ಪದೇ ತಮ್ಮ ತಮ್ಮ ದೇಹದ ಮೇಲೆ ಧರಿಸಿಕೊಳ್ಳುತ್ತಿದ್ದರು ಎಂಬುದಕ್ಕೆ ಯಮಳತಂತ್ರಶಾಸ್ತ್ರದ ಪಾಯಶ್ಚಿತ್ತ ಕರ್ಮಗಳೇ ಜೀವಂತ ಸಾಕ್ಷಿಯಾಗಿದೆ.

ಈ ಕರಸ್ಥಲ ಲಿಂಗಾದಾರಣ ಪ್ರತೀಕದಿಂದಾಗಿ ನಾಥ ಯತಿಗಳನ್ನು ಮಾತ್ರ ಸಿದ್ದೇಶ್ವರರು ಹಾಗೂ ಮಹೇಶ್ವರರು ಎಂದು ಸಂಭೋಧಿಸುತ್ತಿರುವುದು. ಇದನ್ನು ಶ್ರೀಪತಿ ಪಂಡಿತರು ಸುಮಾರು ೧೫-೧೬ನೇ ಶತಮಾನದಲ್ಲಿಯೇ ತಮ್ಮ "ಶ್ರೀಕರ ಭಾಷ್ಯದಲ್ಲಿ" ಹಾಗೂ ಶಯನ ಮಾದವರು "ಸರ್ವದರ್ಶಣ ಸಂಗ್ರಹ"ದಲ್ಲಿಯೂ ಖಚಿತಪಡಿಸಿದ್ದಾರೆ. ಹಾಗೆಯೇ ನಾಥ ಸಂಪ್ರದಾಯದ ಕರ್ನಾಟಕದಲ್ಲಿನ ಪಾಶುಪಥಾನುಯಾಯಿ ಕಾಲಮುಖ ಸಿದ್ದರುಗಳು ತಮ್ಮ ತಮ್ಮ ಶರೀರದ ವಿವಿಧ ಭಾಗದಲ್ಲಿ ಧರಿಸುತ್ತಿದ್ದ ಕರಸ್ಥಲ ಲಿಂಗವನ್ನು ಮುಂದೆ ಲಿಂಗಯಿತ, ವೀರಶೈವರು ತಮ್ಮದಾಗಿಸಿಕೊಂಡು ನಂತರ ಇಷ್ಟಲಿಂಗ ಎಂಬ ತತ್ವವನ್ನು ಸಾರಿದರು ಎಂಬುದನ್ನು ಮಾನ್ಯಶ್ರೀ ನಂದಿಕೋಲು ಮಠ, ಕರಸ್ಥಲ ಪರಂಪರೆ ಪು ೩೫೮ರಲ್ಲಿ ನಮೂದಿಸಿದ್ದಾರೆ.

ಶೈವಾಂಶ ಸಂಭೂತರಾದ ನಾಥ ಸಂಪ್ರದಾಯದ ಯತಿಗಳ ಕರಸ್ಥಲ ಲಿಂಗಪೂಜೆಯು ಮುಂದೆ ಲಿಂಗಾಯಿತ ವೀರಶೈವರುಗಳು ತಮ್ಮದಾಗಿಸಿಕೊಂಡಂತೆಯೇ ವೈದಿಕಲ್ಲೂ ವಿರಳವಾಗಿ ರಸ್ಥಲ ಲಿಂಗಪೂಜೆ ಮುಂದುವರಿದಿರುವ ಬಗ್ಗೆ ಇತಿಹಾಸದರ್ಶನ ಸಂಪುಟ ೨೮, ಪುಟ ೧೦೨ರಲ್ಲಿ ಡಾ. ಎಸ್.ಕೆ. ಶ್ರೀನಿವಾಸಮೂರ್ತಿಗಳು ಮಾನ್ಯ ಡಿ.ವಿ.ಜಿ.ಯವರ "ಜ್ಞಾಪಕ ಚಿತ್ರಶಾಲೆ" ಎಂಬ ಗ್ರಂಥದ ೮ನೇ ಪುಟದಲ್ಲಿ ವೇದಬ್ರಹ್ಮ ಶ್ರೀ ಶಿವಪೂಜೆ ನಾರಾಯನಪ್ಪನವರನ್ನು ಹಾಗೂ ಶೃಂಗೇರಿಯ ಸದ್ವಿಧ್ಯಾ ಸಂಜೀವಿನಿ ಪಾಠಶಾಲೆಯ ಅಧ್ಯಕ್ಷರೂ ಆಗಿದ್ದಂತಹ ಶೃಂಗೇರಿ ಮಹಾ ಸಂಸ್ಥಾನ ಮಠದ ಆಸ್ಥಾನ ಜ್ಯೋತಿಷ್ಯವಿದ್ವಾನ್ ವೇದಬ್ರಹ್ಮ ಶ್ರೀ ಶಂಕರನಾರಾಯಣ ಜೋಯಿಸರು (೧೯೦೩-೧೯೯೮) ಇವರು ಕರಸ್ಥಲದಲ್ಲಿ ಮೃತ್ತಿಕೆಯ ಲಿಂಗವನ್ನು ಅಂಗೈಯಲ್ಲಿ ಇರಿಸಿಕೊಂಡು ಪೂಜಿಸುತ್ತಿರುವ ೧೯೫೮ರಲ್ಲಿ ತೆಗೆದಂತಹ ಛಾಯಾಚಿತ್ರ ಸಹಿತ ದೃಢಿಕರಿಸಿದ್ದಾರೆ. ಯಾರಲ್ಲಿ ವಿಚಾರವೆಂಬ ದರ್ಪಣವಿದೆಯೋ ಯತಾರ್ಥಾನುಭವವೆಂಬ ದೃಷ್ಠಿ ಸಂಪಾದಿಸಿರುವರೋ ಅಂಥಹವರು ಯಾರೋದರೂ ನಾಥಸಂಪ್ರದಾಯವೆಂಬ ಮಹಾವೃಕ್ಷದ ರಂಬೆ, ಕೊಂಬೆ, ಬಿಳಲುಗಳನ್ನು ಇನ್ನೂ ಹೆಚ್ಚು ಹೆಚ್ಚು ಕೆದುಕುತ್ತಾ, ಬೆದಕುತ್ತಾ ಸತ್ಯವನ್ನರಸಿ ಸಾಗಿದರೆ ಅಂತಹ ಸಂಶೋಧಕರನ್ನು ಇಲ್ಲಿಯವರೆವಿಗೂ ಇನ್ನಾ ಕೆದಕದ ಬೆದಕದ ನಿಗೂಢ ಸತ್ಯದತ್ತ ಅವರನ್ನು ಅದೇದಾರಿ ತೋರಿಸುತ್ತಾ ಕೊಂಡುಹೋಗುವುದಂತೂ ಸತ್ಯ. ನನಗೆ ಮುಪ್ಪು ಅಡರುತ್ತಿರುವುದರಿಂದ ಯಾರಾದರೂ ಪಂಡಿತರು ಆ ದಿಕ್ಕಿನಲ್ಲಿ ಸಾಗುವ ಜವಾಬ್ದಾರಿ ವಹಿಸಿಕೊಳ್ಳಬೇಕಾಗಿ ಕೇಳಿಕೊಳ್ಳುತ್ತೇನೆ.

ಮೇಲ್ಕಂಡ ಕರಸ್ಥಲ ಲಿಂಗಪೂಜೆಯ ಪುರಾತತ್ವವನ್ನು ಹಾಗೂ ೨) ರಾಜ್ಯವೇನು ರಾಷ್ಟಕಂಡ ಪ್ರಖ್ಯಾತ ಚರಿತ್ರ್ಯಾಕಾರರ ಗ್ರಂಥಗಳಲ್ಲಿನ ಅಭಿಮತದಂತೆ ಬುದ್ಧ ಧರ್ಮವನ್ನು ಭಾರತದೇಶದಿಂದ ಹೊರತಳ್ಳಿ ಹಿಂದೂ ಧರ್ಮವನ್ನು ಪುನರ್‌ಸ್ಥಾಪಿಸಿದವರು ಆದಿಶಂಕರಚಾರ್ಯರು ಎಂಬ ಅಸಂಬದ್ಧ ದಾಖಲೆಯನ್ನು ಮತ್ತು ೩) ಬೌದ್ಧರ ಮಹಾಯಾನ, ವಜ್ರಾಯಾನ ಮುಂತಾದ ತಾಂತ್ರಿಕ ಮೂಲದಿಂದ ನಾಥ ಸಂಪ್ರದಾಯವು ಜನ್ಮತಾಳಿತು ಎಂಬ ರಾಜ್ಯ ಮತ್ತು ರಾಷ್ಟ್ರಮಟ್ಟದ ಚರಿತ್ರಾಕಾರರ ಸಮಂಜಸವಲ್ಲದ ಈ ಮೂರು ದಾಖಲೆಗಳನ್ನು ತೊಡೆದು ಹಾಕುವ ಉದ್ದೇಶದಿಂದ ಈ ಚಾರಿತ್ರಿಕ ಸತ್ಯವನ್ನು ನನಗೆ ದಕ್ಕಿದ ಆಕರದ ಹಿನ್ನೆಲೆಯಿಂದ ವ್ಯಕ್ತಪಡಿಸುತ್ತಿದ್ದೇನೆ.



# ತಮಟಕಲ್ಲು : ಚಿತ್ರದುರ್ಗ ಪರಿಸರದ ಪ್ರಾಗೈತಿಹಾಸಿಕ ನೆಲೆ

**ಲಕ್ಷ್ಮಣ್ ತೆಲಗಾವಿ***

**ಪ್ರಾಗೈತಿಹಾಸಿಕ** ನಿಗೂಢತೆಯನ್ನು ಮೈಗೂಡಿಸಿಕೊಂಡಿರುವಂಥಾದ್ದು ತಮಟಕಲ್ಲು ಪರಿಸರ. ಚಿತ್ರದುರ್ಗ–ಚಂದ್ರವಳ್ಳಿ ಪ್ರಾಚೀನ ನಿವೇಶನಗಳಿಗೆ ಉತ್ತರದಿಕ್ಕಿನಲ್ಲಿ ಕೇವಲ ಆರು ಕಿಲೋಮೀಟರ್ ಅಂತರದಲ್ಲಿದ್ದರೂ ಈತನಕ ಪುರಾತಾತ್ವಿಕ ಹಾಗೂ ಚಾರಿತ್ರಿಕ ಅಧ್ಯಯನಗಳಿಗೆ ಈ ನಿವೇಶನ ಅಷ್ಟಾಗಿ ಒಳಪಡದಿರುವುದು ವಾಸ್ತವ. ಇಲ್ಲಿ ಶೋಧಗೊಂಡ ಕೆಲವು ಪುರಾತಾತ್ವಿಕ ಅವಶೇಷಗಳ ಆಧಾರದಿಂದ, ತಮಟಕಲ್ಲು ಪರಿಸರದ ಹಿನ್ನೆಲೆಯು ಕ್ರಿಸ್ತಶಕಾರಂಭಕಾಲದಿಂದ, ಅಂದರೆ ಶಾತವಾಹನ ಮಹಾರಥಿಗಳ ಆಡಳಿತಾವಧಿಯಿಂದ ಆರಂಭಗೊಳ್ಳುವ ಎಲ್ಲ ಲಕ್ಷಣಗಳನ್ನು ಒಳಗೊಂಡಿದೆ. ಈ ಪರಿಸರದಲ್ಲಿ ದೊರೆತ ಎರಡು ಪ್ರಾಚೀನ ಶಾಸನಪಾಠಗಳನ್ನು ಬಿ.ಎಲ್. ರೈಸ್ ಅವರು ೧೯೦೩ರಲ್ಲಿ ಹೊರತಂದ ಚಿತ್ರದುರ್ಗಜಿಲ್ಲೆಯ ಶಾಸನಗಳುಳ್ಳ ೧೧ನೇ ಸಂಪುಟದಲ್ಲಿ ಸೇರಿಸಿದನಂತರ (ಚಿತ್ರದುರ್ಗ ೪೨ ಮತ್ತು ೪೩, ಕ್ರಿ.ಶ. ಸು. ೫೦೦) ಅದು ವಿದ್ವಾಂಸರ ಗಮನವನ್ನು ಅಪಾರವಾಗಿ ಸೆಳೆಯಿತು. ಆ ನಂತರ ಇತರ ಶಾಸನಾಧ್ಯಾಯಿಗಳಿಂದ ಈ ಶಾಸನಪಾಠದ ಪರಿಷ್ಕರಣೆ ಇತ್ಯಾದಿ ಕಾರ್ಯ ಮುಂದುವರೆದು ತಮಟಕಲ್ಲಿನ ಹೆಸರು ಇನ್ನಷ್ಟು ಪ್ರಚಾರಕ್ಕೆ ಬರುವಂತಾಯಿತು. ಈಚೆಗೆ ಇಲ್ಲಿಯ ಗುಡ್ಡದಲ್ಲಿ ಚಿತ್ರದುರ್ಗ ಸಂಶೋಧನ ತಂಡವು ಮೂರ್‍ನಾಲ್ಕು ಸಾಲುಗಳುಳ್ಳ ಇನ್ನೊಂದು ಪ್ರಾಚೀನ ಬಂಡೆಬರಹವನ್ನು ಪತ್ತೆಹಚ್ಚಿರುತ್ತದೆ.

**ತಮಟಕಲ್ಲು–ಸ್ಥಳನಾಮದ ಹಿನ್ನೆಲೆ:** 'ತಮಟಕಲ್ಲು' ಎಂಬುದು ತಾಮ್ರಲೋಹ ಸಂಬಂಧವಾದ (ತಾಮ್ರಿಕ) ಎಡೆ. ಇದು ತಾಮ್ರಕುಟ್ಟಕರು ನೆಲೆಸಿದ್ದ ತಾಮ್ರಸಾಲೆಯೆನಿಸಿದ್ದು, ತಾಮ್ರಭಸ್ಮತಯಾರಿಕೆಯ ಕೇಂದ್ರವಾಗಿದ್ದಿತೆನ್ನಲಾಗಿದೆ. ನಮ್ಮ ಪುರಾತನರು ಬಳಸಿಕೊಳ್ಳಲಾರಂಭಿಸಿದ ಲೋಹಗಳಲ್ಲಿ ತಾಮ್ರವೇ ಮೊದಲನೆಯದೆಂಬುದು ಗಮನಾರ್ಹ. ತಾಮ್ರದ ಅದಿರುಗಳಿಂದ ಲೋಹವನ್ನು ಬೇರ್ಪಡಿಸಿ ಪಡೆಯುವ ವಿಧಾನ ಸರಳವಾದುದು ಮಾತ್ರವಲ್ಲ, ಆ ಲೋಹದೊಡನೆ ತವರ, ಸತುವು, ನಿಕ್ಕಲ್ ಮೊದಲಾದ ಲೋಹಗಳನ್ನು ಬೆರೆಸಿ ಬಹೋಪಯೋಗಿ ಮಿಶ್ರಲೋಹವನ್ನು ತಯಾರಿಸಬಹುದೆನ್ನುತ್ತಾರೆ ಲೋಹಶಾಸ್ತ್ರಜ್ಞರು.

ತಮಟಕಲ್ಲು ಗುಡ್ಡದಲ್ಲಿ ಮಾಳನಾಯಕನ ಮಗ ಬುಸಿಯನಾಯಕನೆಂಬವನು ತಮಂಡಿಯಕಲ್ಲ ನರಸಿಂಹದೇವರ ಗುಹಾಲಯಕ್ಕೆ ಕಲ್ಲುಹಾದಿಯನ್ನು ಮಾಡಿಸಿದುದನ್ನು ಅರುಹುತ್ತದೆ ಅಲ್ಲಿಯೇ ದೊರೆತಿರುವ ಬಂಡೆಬರಹ. ಈ ಬರಹದ ಬುಡದಲ್ಲಿ ಬಿಲ್ಲು–ಬಾಣಸಹಿತವಿರುವ ಬುಸಿಯನಾಯಕನ ರೇಖಾಕೃತಿಯೂ ಇದೆ. ಈ ಬಂಡೆಬರಹದ ಕಾಲಮಾನ ೧೮ನೇ ಶತಮಾನ. ಇಲ್ಲಿನ ನರಸಿಂಹದೇವರು (ರಂಗಸ್ವಾಮಿ) ನೆಲೆಸಿರುವುದು ಈ ಗುಡ್ಡದ ಎರಡು ಬೃಹತ್‌ಬಂಡೆಗಳ ಮಧ್ಯದ ಇಕ್ಕಟ್ಟಾದ ಸೀಳಿನ ಆಳದಲ್ಲಿ. ಇಲ್ಲಿರುವ ಬಂಡೆಗಳ ಮೇಲೆ ಬೇರೆ ಕೆಲವು ಬರಹಗಳೂ ಮಂಡಲಾಕೃತಿ, ಜ್ಯಾಮಿತಿಯಾಕೃತಿ ಮತ್ತಿತರ ತಂತ್ರಸಂಬಂಧಿ ಸಂಕೇತಗಳುಳ್ಳ ರೇಖಾಕೃತಿಗಳೂ ಕಂಡುಬರುತ್ತವೆ. ಈ ಸಂಕೇತಗಳೊಡನೆ ಈ ದೇವನೆಲೆಯ ನಿಗೂಢತೆಯನ್ನು ಇನ್ನಷ್ಟು ಉದ್ದೀಪಿಸುವ ಪ್ರಯತ್ನ ಕೈಗೊಂಡಂತೆ ಕಾಣಿಸುತ್ತದೆ. ಇತರೆ ಬಂಡೆ ಚಾಚುಗಳಲ್ಲಿ ಸಾಕಷ್ಟು ಅಳಿಸಿಹೋದಂತಿರುವ ಕೆಲವು ಬಿಳಿವರ್ಣದ ರೇಖಾಚಿತ್ರಗಳ ಕುರುಹುಗಳೂ ಕಾಣಿಸುವುದುಂಟು.

ಇಂದಿನ ತಮಟಕಲ್ಲನ್ನು 'ತಮಂಡಿಯಕಲ್ಲು' ಎಂದು ಈ ಬಂಡೆಬರಹದಲ್ಲಿ ಉಲ್ಲೇಖಿಸಿರುವುದು ಗಮನಾರ್ಹ. ಇಲ್ಲಿ 'ತಮಂಡಿ' ಎಂಬುದು 'ತಮ್ಮಡಿ'ಯ ಆಡುರೂಪ. 'ತಮ್ಮಡಿ' ಎಂದರೆ ತಾಮ್ರಲೋಹ. 'ತಂಬಟ'ವೆಂದರೆ ತಾಮ್ರ [ತಂಬ(<ತಾಮ್ರ)]; 'ತಂಬಟಿಗ'ನೆಂದರೆ ತಾಮ್ರದ ಕೆಲಸ ಮಾಡುವವನು. ತಮಟಕಲ್ಲು ಸ್ಥಳನಾಮದ ಹಿನ್ನೆಲೆಯಲ್ಲಿ ತಾಮ್ರಲೋಹ ಉತ್ಪಾದನೆಯ, ಬಳಕೆಯ ಲಕ್ಷಣಗಳಿರುವುದು ಸ್ಪಷ್ಟ.

* # ೧೫, ಸೋಮಶೇಖರ ನಿಲಯ, ಯಲ್ಲಮ್ಮದೇವಿ ಹೌಸಿಂಗ್ ಸೊಸೈಟಿ, ರಜತಗಿರಿ, ಧಾರವಾಡ–೫೮೦೦೦೪, ಮೊ. ೯೪೪೯೧೦೬೬೫೩

ತಮಟಕಲ್ಲು ಸ್ಥಳನಾಮಕ್ಕೆ ಸಂಬಂಧಿಸಿದಂತೆ ಸ್ಥಳೀಯರು ಒದಗಿಸುವ ವಿವರಣೆ ಕುತೂಹಲಕಾರಿಯಾದುದಷ್ಟೆ ಅಲ್ಲ, ಜನಪದರ ಮನೋಧರ್ಮಕ್ಕೆ ತಕ್ಕ ಉದಾಹರಣೆಯೆನಿಸುತ್ತದೆ. ಈ ವಿವರಣೆ ಈ ಗುಡ್ಡದ ತುದಿಯಲ್ಲಿ ಬೋರಲುಹಾಕಿದಂತಿರುವ ಬಟ್ಟಲಾಕಾರದ ನೈಸರ್ಗಿಕ ಬಂಡೆಯನ್ನು ಕುರಿತದ್ದು. ಬೋರಲಾಕಾರದ ವಿಶಾಲಬಂಡೆಯ ಒಳಚಾಚು ಟೊಳ್ಳಾಗಿದ್ದು, ಅಲ್ಲಿ ಬೇರೆ ಬೇರೆ ಹಂತಗಳಲ್ಲಿ ಮೂಡಿಸಲಾಗಿರುವ ಕೆಲವು ಅಸ್ಪಷ್ಟ ಬಿಳಿವರ್ಣಚಿತ್ರಗಳಿರುವುದು ವಿಶೇಷ. ಈ ಬಂಡೆಯ ಬುಡದಲ್ಲಿ ಪುಟ್ಟ ಕಲ್ಲಿನ ವಿಗ್ರಹವನ್ನು ಸ್ಥಾಪಿಸಲಾಗಿದ್ದು, ಈ ನೆಲೆ ಪೂಜಾಎಡೆಯಂತೆ ಪರಿವರ್ತಿತವಾಗಿದೆ. ಈ ಜಾಗವನ್ನು ತಲುಪಲು ತೀರಾ ಅಪಾಯಕಾರಿಯಾದ ಕಡಿದಾದ ಬಂಡೆಯನ್ನು ಆಶ್ರಯಿಸಿ ಏರಬೇಕು. ಏನೇ ಇದ್ದರೂ ಸ್ಥಳೀಯರು ಈ ಬಟ್ಟಲಾಕಾರದ ಬಂಡೆಯನ್ನು 'ತಮಟೆಕಲ್ಲು' (ನಗಾರಿಕಲ್ಲು?) ಎಂತಲೇ ಗುರುತಿಸಿದ್ದು, ಅದರ ದೆಸೆಯಿಂದಲೇ ತಮಟಕಲ್ಲು ಎಂಬ ಹೆಸರು ನಿಷ್ಪನ್ನಗೊಂಡುದಾಗಿ ವ್ಯಾಖ್ಯಾನಿಸುತ್ತಾರೆ.

**ಇಂಗಳದಹಾಳು ಪರಿಸರ : ತಾಮ್ರ ಅದಿರಿನ ನಿಕ್ಷೇಪವುಳ್ಳ ಎಡೆ:** ಚಿತ್ರದುರ್ಗದ ಆಗ್ನೇಯಕ್ಕೆ ಎಂಟು ಕಿಲೋಮೀಟರ್ ಅಂತರದಲ್ಲಿರುವ ಇಂಗಳದಹಾಳುಗುಡ್ಡ ಪರಿಸರವು ತಾಮ್ರ ಅದಿರಿನ ನಿಕ್ಷೇಪವುಳ್ಳ ಬಹುಮುಖ್ಯ ಎಡೆಯೆಂದು ಭೂವಿಜ್ಞಾನಿಗಳು ಗುರುತಿಸಿರುತ್ತಾರೆ. ಹಾಗೆಯೇ, ಇಂಗಳದಹಾಳಿನ ದಕ್ಷಿಣಕ್ಕೆ ಬೆಳ್ಳಿಗುಡ್ಡವಿದ್ದು, ಇದರ ಪಶ್ಚಿಮದಲ್ಲಿ ತಾಮ್ರ ಅದಿರಿನ ನಿಕ್ಷೇಪಗಳು ಕಂಡುಬಂದಿವೆ. ಇಲ್ಲೆಲ್ಲ ತಾಮ್ರಲೋಹಕ್ಕೆಂದು ತೋಡಲಾಗಿರುವ ಗಣಿಗಳಿವೆ. ಬೆಳ್ಳಿಗುಡ್ಡವು ಸಲ್ಫೈಡ್‌ವಲಯವಾಗಿದ್ದು, ಇದು ಉತ್ತರ–ದಕ್ಷಿಣವಾಗಿ ಸುಮಾರು ೩೦ ಕಿ.ಮೀ. ಉದ್ದ ಹಾಗೂ ೩ ಕಿ.ಮೀ. ಅಗಲದವರೆಗೆ ಹಬ್ಬಿಕೊಂಡಿರುವಂಥಾದ್ದು. ಈ ಕ್ಷೇತ್ರದಲ್ಲಿ ದೊರೆಯುವ ಖನಿಜಗಳೆಂದರೆ ಕಬ್ಬಿಣ, ತಾಮ್ರ ಮತ್ತು ಸೀಸಗಳ ಸಲ್ಫೈಡ್ ಅದಿರುಗಳು. ತಮಟಕಲ್ಲು ಸಹಾ ಇದರ ವ್ಯಾಪ್ತಿಗೊಳಪಟ್ಟಿರುತ್ತದೆ. ಈ ಕ್ಷೇತ್ರದ ಮಧ್ಯಭಾಗದಲ್ಲಿ ಈ ಅದಿರುಗಳು ವಿಶೇಷವಾಗಿ ಸಂಗ್ರಹಗೊಂಡಿರುತ್ತವೆ. ಈ ಪ್ರದೇಶದಲ್ಲಿ ಸೀಸಲೋಹದ ವಿಪುಲತೆಯ ಕಾರಣವಾಗಿಯೂ ಚಂದ್ರವಳ್ಳಿಯ ಶಾತವಾಹನ ಮಹಾರಥಿಗಳು ತಮ್ಮ ನಾಣ್ಯಗಳನ್ನು ಸೀಸಲೋಹದಲ್ಲಿಯೇ ಠಂಕಿಸಿದುದು ಸಹಜವೇ ಆಗಿರುತ್ತದೆ. ಭೂವಿಜ್ಞಾನಿಗಳ ಪ್ರಕಾರ, ಇಂಗಳದಹಾಳುಗಣಿಯ ಕಾಲಮಾನವನ್ನು ಈ ಶಾತವಾಹನ ಮಹಾರಥಿಗಳ ಆಳ್ವಿಕೆಯ ಅವಧಿಗೆ (ಕ್ರಿ.ಶ. ೨ನೇ ಶತಮಾನ) ನಿಗದಿಪಡಿಸಬಹುದು.

ಇಂಗಳದಹಾಳಿನಲ್ಲಿ ತಾಮ್ರಸಾರವನ್ನು ಪಡೆಯುವ ಕೆಲಸವಾರಂಭವಾದುದು ೧೯೭೩–೭೪ರಲ್ಲಿ. ಈಚಿನ ಸಂಶೋಧನೆಯ ಪ್ರಕಾರ, ಇಂಗಳದಹಾಳು ಪ್ರದೇಶದಲ್ಲಿ ಒಂದು ಟನ್ನಿಗೆ ಶೇ. ೧೮ ತಾಮ್ರದ ಪ್ರಮಾಣವಿದೆ; ಹಾಗೂ ಇರಿಂದ ಸುಮಾರು ೧ ಲಕ್ಷ ಟನ್ ಅದಿರು ದೊರೆಯಬಹುದಾಗಿದೆ. ಇನ್ನೊಂದು ಸಮೀಕ್ಷೆಯ ಪ್ರಕಾರ, ಇಂಗಳದಹಾಳುಗಣಿಯಲ್ಲಿ ಈಗಾಗಲೇ ತೋಡಿ ತೆಗೆಯಲಾದ ತಾಮ್ರದ ಅದಿರು ೨೯೨ ಟನ್‌ಗಳು ಹಾಗೂ ಅದರ ಶೇಕಡ ತಾಮ್ರಾಂಶ ಅಥವಾ ದರ್ಜೆ ೦.೮೨; ಅನ್ವೇಷಣೆಯಿಂದ ಸಿದ್ಧಪಡಿಸಲಾದ ಅದಿರು ೩,೩೯೪ ಟನ್‌ಗಳು ಹಾಗೂ ಶೇಕಡ ತಾಮ್ರಾಂಶ ೦.೮೫; ಇನ್ನು ದೊರೆಯಬಹುದಾದ ಅದಿರು ೧,೪೧೩ ಟನ್‌ಗಳು ಹಾಗೂ ಶೇಕಡ ತಾಮ್ರಾಂಶ ೦.೭೩. ಒಟ್ಟು ಟನ್‌ಗಳು ೫,೦೯೯ ಹಾಗೂ ಒಟ್ಟು ಶೇಕಡ ತಾಮ್ರಾಂಶ ೦.೮೧. ಈ ನಿಟ್ಟಿನಲ್ಲಿ, ಕರ್ನಾಟಕ ಸರಕಾರವು ಸ್ಥಾಪಿಸಿದ 'ಚಿತ್ರದುರ್ಗ ಕಾಪರ್ ಕಂಪನಿ ಲಿಮಿಟೆಡ್' ಕಾರ್ಯಪ್ರವೃತ್ತವಾಗಿದ್ದಿತಲ್ಲದೆ, ೧೯೮೫ರಲ್ಲಿ 'ಹಟ್ಟಿ ಗೋಲ್ಡ್‌ಮೈನ್ಸ್ ಕಂಪನಿ'ಯಲ್ಲಿ ಸಂಪೂರ್ಣ ಅಂತರ್ಗತವಾಯಿತು. ಆ ನಂತರದಲ್ಲಿ ಇಂಗಳದಹಾಳು ಗಣಿಪ್ರದೇಶಕ್ಕೆ ಸಮೀಪವಿರುವ ಕುಂಚಿಗನಹಾಳು ಗಣಿಗಳಲ್ಲಿ ಬಂಗಾರದ ಅದಿರು ದೊರೆತುದನ್ನು ವರದಿಮಾಡಲಾಗಿರುತ್ತದೆ.

**ತಮಟಕಲ್ಲು ನಿವೇಶನ–ತಾಮ್ರೋತ್ಪಾದನ ಘಟಕದ ನೆಲೆ:** ಚಿತ್ರದುರ್ಗ ಪರಿಸರದ ಇಂಗಳದಹಾಳು, ಬೆಳ್ಳಿಗುಡ್ಡ ಮತ್ತು ಕುಂಚಿಗನಹಾಳುಗಳು ಮಾತ್ರವಲ್ಲದೆ, ಈ ಹೋಬಳಿ ವ್ಯಾಪ್ತಿಯಲ್ಲಿರುವ ಗೋನೂರು, ಗೊಲ್ಲರಹಟ್ಟಿ, ಚಿಕ್ಕೇನಹಳ್ಳಿ, ಗುಡ್ಡದರಂಗವ್ವನಹಳ್ಳಿಗಳ ಬಳಿಯಲ್ಲೂ ಪೂರ್ವಜರು ಗಣಿತೋಡಿ ತಾಮ್ರಲೋಹ ಸಂಗ್ರಹಿಸಿರುವುದು ಕಂಡುಬಂದಿರುತ್ತದೆ. ತಮಟಕಲ್ಲು ಸಹಾ ಇದೇ ಗಣಿವಲಯದಲ್ಲಿದ್ದರೂ ಇಲ್ಲಿ ಗಣಿಗಾರಿಕೆ ನಡೆದ ಯಾವ ಸೂಚನೆಗಳೂ ದೊರೆಯುವುದಿಲ್ಲ. ಆದರೆ ಇಲ್ಲಿ ಕುಲುಮೆದರ್ಜೆಯ ತಾಮ್ರವನ್ನು ಉತ್ಪಾದಿಸುವ ಘಟಕವಿದ್ದುದು ದೃಢಪಟ್ಟಿರುತ್ತದೆ. ಈ ಕಾರಣದಿಂದಲೇ, ತಮಟಕಲ್ಲು ನಿವೇಶನದಲ್ಲಿ ತಾಮ್ರಪಟ್ಟದ ತಯಾರಿಕೆಯಲ್ಲಿ ಅಗತ್ಯವಿರುವ ತಾಮ್ರಗರ್ಭ ಅಥವಾ ಮೈಲುತುತ್ತ (ಕಾಪರ್ ಸಲ್ಫೇಟ್) ವಿಪುಲವಾಗಿ ದೊರೆಯುವುದನ್ನು ಕಾಣಬಹುದು.

ತಮಟಕಲ್ಲುಗುಡ್ಡದ ಮಧ್ಯಭಾಗದ ವಿಶಾಲ ಹಾಗೂ ಸಮತಟ್ಟಾದ ಅಂಗಳದಲ್ಲಿ ತಾಮ್ರಸಂಸ್ಕರಣೆಗೆ ಸಂಬಂಧಿಸಿದ ಕುಲುಮೆಗಳ ಕುರುಹುಗಳು ಗೋಚರಿಸುತ್ತವೆ. ಈ ಪ್ರದೇಶವು ಕುಲುಮೆಗಳಿಂದ ಹೊರಹೊಮ್ಮಿದ ಕಿಟ್ಟ, ಬೂದಿ ಇತ್ಯಾದಿಗಳಿಂದ ತುಂಬಿಹೋಗಿದೆ. ಇಲ್ಲಿನ ತಾಮ್ರೋತ್ಪಾದನೆಯ ಕಾರ್ಯದಲ್ಲಿ ಅಥವಾ ಕುಲುಮೆ ಉದ್ಯಮದಲ್ಲಿ ತೊಡಗಿಸಿಕೊಂಡಿದ್ದವರು

ಬೃಹತ್‌ಶಿಲಾಯುಗ ಅಥವಾ ಕಬ್ಬಿಣಯುಗದ ಜನರೆಂಬುದು ಈಗಾಗಲೇ ನಿರ್ಣಯಿಸಲ್ಪಟ್ಟಿರುವ ಅಂಶ. ಈ ನಿವೇಶನದಲ್ಲಿ ದೊರೆತಿರುವ ವಸ್ತು-ವಿಶೇಷಗಳು ಇಲ್ಲಿ ನೆಲೆಸಿದ್ದ ಸಮುದಾಯದ ಸಂಸ್ಕೃತಿಯನ್ನು ಪ್ರತಿಬಿಂಬಿಸುವಂತಿವೆ.

**ಪ್ರಾಗೈತಿಹಾಸಿಕ ಕುರುಹುಗಳು**: ಬೃಹತ್‌ಶಿಲಾಯುಗ-ಆದಿಚಾರಿತ್ರಿಕಯುಗ-ಶಾತವಾಹನಕಾಲೀನ ನೆಲೆಗಳು ಚಿತ್ರದುರ್ಗ ತಾಲ್ಲೂಕಿನ ಚಿಪ್ಪಿನಕೆರೆ, ತುರುವನೂರು ಹೋಬಳಿಯ ಬೆಳಗಟ್ಟ, ಬಗ್ಗಲುರಂಗವ್ವನಹಳ್ಳಿ, ಕೂನಬೇವು, ಚಿನ್ನೂರುತಿಪ್ಪಯ್ಯನಹಟ್ಟಿ, ನರೇನಹಾಳು, ದೊಡ್ಡಮರಡಿ ಮೊದಲಾದೆಡೆಗಳಲ್ಲಿ ಶೋಧಗೊಂಡಿವೆ. ಈ ನಿವೇಶನಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಪ್ಪು-ಕೆಂಪು ಮಡಕೆಗಳ ಚೂರುಗಳು, ಕಬ್ಬಿಣದ ಬಳೆಗಳು, ಎಲುಬಿನಚೂರುಗಳು, ಮಣಿಗಳು, ಜಾಡಿಗಳು, ಕವಣೆಯಕಲ್ಲುಗಳು-ಹೀಗೆ ನಾನಾ ತೆರನಾದ ಅವಶೇಷಗಳು ಕಂಡುಬರುತ್ತವೆ. ಬಿಳಿವರ್ಣದ ರೇಖಾಚಿತ್ರಗಳಿಂದ ಅಲಂಕರಿಸಿರುವ ಮಡಕೆಗಳು ಇಲ್ಲೆಲ್ಲ ಹರಡಿಕೊಂಡಿವೆ. ಚಿಪ್ಪಿನಕೆರೆಯಿಂದ ದಕ್ಷಿಣಕ್ಕೆ ೧೫ ಕಿ.ಮೀ. ಹಾಗೂ ಬೆಳಗಟ್ಟದಿಂದ ಪೂರ್ವಕ್ಕೆ ೮ ಕಿ.ಮೀ. ಅಂತರದಲ್ಲಿರುವ ತಮಟಕಲ್ಲು ನಿವೇಶನವೂ ಈಗ ಇವುಗಳ ಸಾಲಿಗೆ ಸೇರುತ್ತಲಿದೆ.

ತಮಟಕಲ್ಲು ನಿವೇಶನದಲ್ಲಿ ದೊರೆತಿರುವ ಅವಶೇಷಗಳು ಈ ಮೇಲಿನ ಇತರೆ ನಿವೇಶನಗಳಲ್ಲಿ ಕಂಡುಬಂದಿರುವ ವಸ್ತುಗಳೊಡನೆ ನೇರವಾಗಿ ಹೋಲುತ್ತವೆ. ಈ ನಿವೇಶನದಲ್ಲಿಯೂ ಕೆಂಪುವರ್ಣದ ಮಡಕೆಚೂರುಗಳು ವಿಪುಲವಾಗಿ ದೊರೆಯುತ್ತವೆ. ಈ ಮೃತ್ಪಾತ್ರೆಗಳ ಮೂಲ ಆಕಾರದ ಸ್ಪಷ್ಟ ಚಿತ್ರಣ ದೊರೆಯುವುದಿಲ್ಲವಾದರೂ ಈ ಪಾತ್ರೆಗಳ ಹೊರಮೈಯನ್ನು ಬಿಳಿವರ್ಣದ ರೇಖಾಚಿತ್ರಗಳಿಂದ ಆಕರ್ಷಕವಾಗಿ ಅಲಂಕರಿಸುವ ಸಂಸ್ಕೃತಿಯನ್ನು ಇಲ್ಲಿಯೂ ಮುಂದುವರೆಸಲಾಗಿದೆ ಯೆನ್ನಬಹುದು; ಅಥವಾ ಈ ಸಂಸ್ಕೃತಿಯ ಪಾತ್ರೆಗಳು ಸನಿಹದ ಚಂದ್ರವಳ್ಳಿಪಟ್ಟಣದಿಂದ ತಂದಿದ್ದವಿರಬಹುದೆ? ಸಂಸ್ಕೃತಿ ಪ್ರಸಾರಕ್ಕೆ ಇದು ಒಳ್ಳೆಯ ಉದಾಹರಣೆಯೆನಿಸುತ್ತದೆ.

ತಮಟಕಲ್ಲು ನಿವೇಶನದಲ್ಲಿ ದೊರೆತಿರುವ ಇತರೆ ವಸ್ತು-ವಿಶೇಷಗಳಲ್ಲಿ ದಂತದಬಳೆ, ಕಬ್ಬಿಣದ ಮೊಳೆ, ಕಬ್ಬಿಣದ ಕುಣುಕು, ಮಣಿ, ಮಡಕೆಯ ಬಿಲ್ಲೆ, ಮಧ್ಯದಲ್ಲಿ ರಂಧ್ರವಿರುವ ಬಿಲ್ಲೆ, ತಾಮ್ರೋತ್ಪಾದನೆಯಲ್ಲಿ ವಿಶೇಷವಾಗಿ ಬಳಸಲಾಗುತ್ತಿದ್ದ ಮೈಲುತುತ್ತದ ಉಂಡೆಗಳು, ಚಿಲುಮೆ, ಮಣ್ಣಿನ ಹಣತೆ, ಶಿಲಾಯುಧಗಳ ತುಂಡುಗಳು, ದೊಡ್ಡಗಾತ್ರದ ಸುಟ್ಟಇಟ್ಟಿಗೆಗಳು, ಪ್ರಾಣಿಗಳ ದಂತಾವಶೇಷಗಳು, ನಂದಿ ಮತ್ತು ಕೈಜೋಡಿಸಿಕೊಂಡು ವಿಧೇಯನಾಗಿ ಬಾಗಿನಿಂತಿರುವ ವಾನರನನ್ನು ಹೋಲುವ ವ್ಯಕ್ತಿಯೋರ್ವನ ಶಿಲಾಮೂರ್ತಿಗಳು, ಗಣೇಶವಿಗ್ರಹ, ಬಳಪ ಮೊದಲಾದುವು ಪ್ರಮುಖವಾದುವು. ಅಲ್ಲದೆ, ಗುರುತಿಸಲಾಗದ ಇನ್ನು ಎಷ್ಟೋ ವಸ್ತುಗಳು ಈ ನಿವೇಶನದಲ್ಲಿ ಸಂಗ್ರಹಗೊಂಡಿವೆ.

ಪುರಾತಾತ್ವಿಕವಾಗಿ ಮಾತ್ರವಲ್ಲದೆ, ಚಾರಿತ್ರಿಕ ಮತ್ತು ಸಾಂಸ್ಕೃತಿಕನೆಲೆಯೂ ಆಗಿ ಮಹತ್ವ ಪಡೆದುಕೊಂಡಿರುವ ತಮಟಕಲ್ಲು ನಿವೇಶನವು ಪ್ರತ್ಯೇಕ ಹಾಗೂ ವೈಜ್ಞಾನಿಕ ಶೋಧಗಳಿಗೆ ಇದೀಗ ತನ್ನನ್ನು ತೆರೆದುಕೊಂಡಿದೆಯೆನ್ನಲಡ್ಡಿಯಿಲ್ಲ. ಈ ನಿವೇಶನದ ಪ್ರಾಚೀನ ಇತಿಹಾಸದ ಮೇಲೆ ಹೊಸಬೆಳಕು ಹಾಯಿಸಲು ಇಲ್ಲಿ ವ್ಯವಸ್ಥಿತ ಭೂಶೋಧನಕಾರ್ಯ ಕೈಗೊಳ್ಳುವ ಅಗತ್ಯವಿದೆ. ಚಿತ್ರದುರ್ಗ ಪರಿಸರದಲ್ಲಿ ಉತ್ಸಾಹದಿಂದ ಕೆಲಸ ಮಾಡುತ್ತಿರುವ ಯುವ ಸಂಶೋಧಕರು, ಇಂಥಾ ಹಲವಾರು ಅಲಕ್ಷಿತ ಹಾಗೂ ಸೀಮಿತಕ್ಷೇತ್ರಗಳುಳ್ಳ ನಿವೇಶನಗಳತ್ತಲೂ ಗಮನ ಹರಿಸುವುದು ಸೂಕ್ತ. ಇದರಿಂದ ಚಿತ್ರದುರ್ಗ-ಚಂದ್ರವಳ್ಳಿ-ಇಂಗಳದಹಾಳು-ತಮಟಕಲ್ಲು ಹಾಗೂ ನೆರೆಯ ಗತಸಂಸ್ಕೃತಿಗಳ ನಡುವಣ ಪರಸ್ಪರ ಸಂಬಂಧಗಳನ್ನು ನಿಖರವಾಗಿ ಗುರುತಿಸಿಕೊಡಲು ಹಾಗೂ ಚಿತ್ರದುರ್ಗ ಪರಿಸರದ ಪುರಾತಾತ್ವಿಕ ಅಧ್ಯಯನವನ್ನು ತಕ್ಕಮಟ್ಟಿಗಾದರೂ ಅಂತಿಮಗೊಳಿಸಲು ಸಾಧ್ಯವಾಗಬಹುದು.



## ಆಕರ ಗ್ರಂಥಗಳು


೧. B. Rama Rao, 1953, **Recollections of an Indian Geologist,** The Mysore Geologists' Association, Bangalore.

೨. B.N. Sri Sathyan (C.Ed.), 1967, **Chitradurga District Gazetteer**, Government of Mysore, Bangalore.

೩. R. Shankar, 'How Old are the Old Mine Workings of Ingaldhal (Karnataka)?', **The Journal of the Geological Society of India**, Vol. 33, No. 1, 1989.

೪. L.C. Curtis, B.P. Radhakrishna, 1995, **Hatti Gold Mine into the 21st Century**, Geological Society of India, Bangalore.

೫. ಟಿ.ವಿ. ಶಿವರುದ್ರಪ್ಪ, 'ಚಿತ್ರದುರ್ಗಜಿಲ್ಲೆಯ ಭೂ ಇತಿಹಾಸ', **ಹರತಿಸಿರಿ** (ಹೆಚ್.ವಿ. ವೀರನಾಯಕ 'ಹರತಿ' ನೆನಪಿನ ಸಂಪುಟ), ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭.

೬. ಕೆ. ಗವಿಶೆಟ್ಟಿ, ೧೯೯೫, **ಕರ್ನಾಟಕದ ಖನಿಜ ಸಂಪತ್ತು**, ದಿವ್ಯಜ್ಯೋತಿ ಪ್ರಕಾಶನ, ಬೆಂಗಳೂರು.

೭. ಎಸ್.ವೈ. ಸೋಮಶೇಖರ, 'ಚಿತ್ರದುರ್ಗ ತಾಲ್ಲೂಕು ಚೆಪ್ಪಿನಕೆರೆಯಲ್ಲಿ ಕಂಡುಬಂದಿರುವ ಪ್ರಾಕ್ಚಾರಿತ್ರಿಕ ಕುರುಹುಗಳು', **ಇತಿಹಾಸದರ್ಶನ**, ಸಂಪುಟ ೧೧, ೧೯೯೬.

೮. ಬಿ.ಪಿ. ರಾಧಾಕೃಷ್ಣ, ೨೦೦೩, **ಕರ್ನಾಟಕದ ಖನಿಜ ಸಂಪತ್ತು**, ಜಿಯಾಲಾಜಿಕಲ್ ಸೊಸೈಟಿ ಆಫ್ ಇಂಡಿಯಾ, ಬೆಂಗಳೂರು.

೯. ಲಕ್ಷ್ಮಣ್ ತೆಲಗಾವಿ, ೨೦೦೪, **ಮೌರ್ಯ ಮತ್ತು ಶಾತವಾಹನ ಯುಗ (ಕ್ರಿಪೂ. ೩– ಕ್ರಿಶ. ೩)**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಎಸ್. ತಿಪ್ಪೇಸ್ವಾಮಿ, 'ಚಿತ್ರದುರ್ಗ ತಾಲ್ಲೂಕಿನ ಮತ್ತಷ್ಟು ಪ್ರಾಗೈತಿಹಾಸಿಕ ನೆಲೆಗಳು', **ಇತಿಹಾಸದರ್ಶನ**, ಸಂಪುಟ ೨೨, ೨೦೦೭.

೧೧. ಎಸ್.ವೈ. ಸೋಮಶೇಖರ, ಎಸ್ ತಿಪ್ಪೇಸ್ವಾಮಿ, 'ಚಿತ್ರದುರ್ಗ ತಾಲ್ಲೂಕು ನರೇನಾಳು ಪರಿಸರದ ಬೃಹತ್‌ಶಿಲಾಯುಗ ಸಮಾಧಿನೆಲೆಗಳ ಶೋಧ', **ಇತಿಹಾಸದರ್ಶನ**, ಸಂಪುಟ ೨೩, ೨೦೦೮.

೧೨. ಎಸ್.ಜಿ. ರಾಮದಾಸರೆಡ್ಡಿ, ೨೦೦೯, **ಚಿತ್ರದುರ್ಗಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೩. ಎಸ್.ವೈ. ಸೋಮಶೇಖರ (ಸಂ.), ೨೦೧೦, **ಬ್ರಹ್ಮಗಿರಿ**, ಕನ್ನಡವಿಶ್ವವಿದ್ಯಾಲಯ, ಹಂಪಿ.

೧೪. ಲಕ್ಷ್ಮಣ್ ತೆಲಗಾವಿ, 'ತಮಟಕಲ್ಲು ಬುಸಿಯನಾಯಕನ ಬಂಡೆಬರಹ' (ಪ್ರಬಂಧ–ಅಪ್ರಕಟಿತ).

೧೫. ಕೆ.ಎಸ್. ಶರತ್‌ಬಾಬು, **ಚಿತ್ರದುರ್ಗ ಜಿಲ್ಲಾ ಪರಿಸರದ ಪ್ರಾಗಿತಿಹಾಸ** (ಪಿಎಚ್.ಡಿ. ಮಹಾಪ್ರಬಂಧ, ೨೦೧೮).

೬೯

# ಗಳಗೇಶ್ವರ ದೇವಾಲಯದ ಮಹಿಷಮರ್ಧಿನಿ ಶಿಲ್ಪ

ಕೆ. ವಸಂತಲಕ್ಷ್ಮಿ*

**ಅಷ್ಟೌ ಭುಜಾಂಗಿ ಮಹಿಷಸ್ಯ ಮರ್ದಿನೀಂ**
**ಸಾ ಶಂಖಚಕ್ರಂ ಗದಾಶೂಲ ಧಾರಿಣೀಂ ।**
**ತ್ವಾಂ ದಿವ್ಯಯೋನಿಂ ಸಹಜಾತ ವೇದಸೀಂ ।**
**ದುರ್ಗ್ಯಾ ಸದಾ ಶರಣಮಹಂ ಪ್ರಪದ್ಯೆ ॥**
**(ಚಂಡಿಧ್ವಜದಿವ್ಯಸ್ತೋತ್ರ–೩)**

ಹಾವೇರಿ ಜಿಲ್ಲೆಯ ಹಾವೇರಿ ಪಟ್ಟಣದಿಂದ ಸುಮಾರು ನಲವತ್ತು (೪೦) ಕಿ.ಮೀ. ದೂರದಲ್ಲಿ ಗಳಗನಾಥವೆಂಬ ಗ್ರಾಮವಿದೆ. ಈ ಗ್ರಾಮದ ವರದಾ ಮತ್ತು ತುಂಗಭದ್ರಾ ನದಿಗಳ ಸಂಗಮ ಸ್ಥಳದಲ್ಲಿ ನದೀ ದಂಡೆಯ ಮೇಲೆ ಗಳಗೇಶ್ವರ ದೇವಾಲಯವಿದೆ. ಗಳಗೇಶ್ವರ ದೇವಾಲಯವು ಒಂದು ದೇವಾಲಯ ಸಂಕೀರ್ಣವಾಗಿದ್ದು, ಸುತ್ತಲಿದ್ದ ಮೂರು ದೇವಾಲಯಗಳು ನಶಿಸಿವೆ. ಗಳಗೇಶ್ವರ ದೇವಾಲಯವು ನಶಿಸದಂತೆ ರಕ್ಷಿಸಲು ಈ ದೇವಾಲಯಕ್ಕೆ ಎತ್ತರವಾದ ಅಧಿಷ್ಠಾನವಿದ್ದು ಅದರ ಮೇಲೆ ಮತ್ತೊಂದು ಅಧಿಷ್ಠಾನವನ್ನು ರಚಿಸಿದೆ. ಹೀಗೆ ಎರಡು ಅಧಿಷ್ಠಾನಗಳಿರುವುದಲ್ಲದೆ, ಮೇಲಿನ ಅಧಿಷ್ಠಾನವನ್ನು ಇಳಿಜಾರಾಗಿ ರಚಿಸಿದೆ. ಈ ದೇವಾಲಯವು ಕಲ್ಯಾಣದ ಚಾಲುಕ್ಯರ ದೊರೆ ೨ನೇ ಜಯಸಿಂಹನ ಕಾಲದಲ್ಲಿ ನಿರ್ಮಿಸಿರುವ ದೇವಾಲಯವಾಗಿದೆ. ದೇವಾಲಯದ ಗರ್ಭಗೃಹದಲ್ಲಿ ಪ್ರಾಚೀನವಾದ (ಸು. ಕ್ರಿ.ಶ.೧೧) ಲಿಂಗವಿದೆ. ಅಂತರಾಳದಲ್ಲಿ ಜನಾರ್ದನ, ಸರಸ್ವತಿ ಮತ್ತು ಪಂಚಲಿಂಗಗಳಪಟ್ಟಿಕೆ ಇವೆ. ಈ ದೇವಾಲಯದ ಪ್ರಾಚೀನತೆಯ ಬಗೆಗೆ ಗಮನಿಸಿದರೆ, ಈ ದೇವಾಲಯಕ್ಕೆ ಸಂಬಂಧಿಸದಂತೆ ಐದು ಶಾಸನಗಳಿವೆ. ಈ ದೇವಾಲಯದ ಬಳಿಯ ಶಾಸನವೊಂದು (ಶಾ.ಸಂ. ೫೪ ಎಸ್.ಐ.ಐ.ಸಂ. XVIII), ಚಾಳುಕ್ಯ ದೊರೆ ಜಗದೇಕಮಲ್ಲನು ಆಳುತ್ತಿದ್ದನೆಂದು ತಿಳಿಸುತ್ತಾ ಬನವಾಸಿ ಪುರವರಾಧೀಶ್ವರನಾಗಿದ್ದ ಕುಂದಮರಸನನ್ನು ಉಲ್ಲೇಖಿಸಿದೆ. ಕುಂದಮರಸನು ೨ನೇ ಜಯಸಿಂಹನ ಮಾಂಡಳೀಕನಾಗಿದ್ದನು. ಇದರಂತೆ, ಈ ದೇವಾಲಯವು ೨ನೇ ಜಯಸಿಂಹನ ಕಾಲದ್ದೆಂದೂ(ಕ್ರಿ.ಶ. ೧೦೧೫–೧೦೪೪) ಸುಮಾರು ೧೦೪೦ಕ್ಕೆ ಮೊದಲೇ ಇಲ್ಲಿ ಗಳಗೇಶ್ವರ ದೇವಾಲಯ ರಚನೆಯಾಗಿತ್ತೆಂದೂ ತೋರುತ್ತದೆ. ಈ ದೇವಾಲಯದ ಮತ್ತೊಂದು ಶಾಸನವು (ಶಾ.ಸಂ.೬೪, ಅದೇ) ಚಾಳುಕ್ಯರ ದೊರೆ ೧ನೇ ಸೋಮೇಶ್ವರನ ಕಾಲದ್ದಾಗಿದ್ದು ಈ ಶಾಸನದಲ್ಲಿ ಶಕವರ್ಷ ೯೭೭ರ ಉಲ್ಲೇಖವಿದೆ. ಶಾಸನದಲ್ಲಿ ಹೆಚ್ಚಿನ ವಿವರ ಲಭ್ಯವಿರದಿದ್ದರೂ ದೇವಾಲಯ ಕ್ರಿ.ಶ. ೧೦೫೫–೫೬ರಲ್ಲಿದ್ದದ್ದನ್ನು ಖಚಿತಪಡಿಸಿದೆ.

ಈ ದೇವಾಲಯದ ಒಳಗಿರುವ ಶಾಸನವು (ಶಾ.ಸಂ.೮೬,ಅದೇ), ತ್ರಿಭುವನಮಲ್ಲದೇವನು ಆಳುತ್ತಿದ್ದಾಗ, ಅವನ ಅಧಿಕಾರಿಯಾದ ವೀರನೊಳಂಬ ಪಲ್ಲವ ಪೆರ್ಮ್ಮಾನಡಿ ಎನಿಸಿದ್ದ, ಯುವರಾಜನಾಗಿದ್ದ ಜಯಸಿಂಹದೇವನು ಎರಡರುನೂರನ್ನು, ಬನವಾಸಿ ಪನ್ನಿಚ್ಛಾಸಿರವನ್ನೂ, ಸಾಂತಳಿಗೆ ಸಾಸಿರ ಮುಂತಾದವನ್ನೂ ಆಳುತ್ತಿದ್ದನು. ಜಯಸಿಂಹದೇವನ ಅಧಿಕಾರಿಯಾಗಿದ್ದ ಶ್ರೀಮನ್ಮೊಖರಿ ಬೊಮ್ಮಯ್ಯನು ಗಳಿಗೇಶ್ವರ ದೇವರ ಮಂಡಪಕ್ಕೆಂದು, ಮೂವತ್ತು ಗದ್ಯಾಣಹೊನ್ನು ಕೊಟ್ಟದ್ದನ್ನು ಶಾಸನ ಉಲ್ಲೇಖಿಸುತ್ತಿದೆ. ಶಾಸನವು ಈ ದಾನವನ್ನು ಚಾಳುಕ್ಯವಿಕ್ರಮವರ್ಷ ೩ನೆಯ ಸಿದ್ಧಾರ್ಥ ಸಂವತ್ಸರ ಚೈತ್ರ ಸುದ್ಧ ಪುಣ್ಣಮೆಯಂದು ಅಂದರೆ ಕ್ರಿ.ಶ. ೧೦೭೯ರ ಮಾರ್ಚಿ ೨೪ರಲ್ಲಿ ನೀಡಿದಂತೆ ಹೇಳಿದೆ.

ಜಯಸಿಂಘದೇವರ ಪಾದಪದ್ಮೋಪಜೀವಿ ಮೊಖರಿ ಬೊಮ್ಮಯ್ಯನನ್ನು ಶಾಸನವು–"ಸಮಸ್ತ ಗೀತವಾದ್ಯ ನೃತ್ಯಾನೇಕ ಶಾಸ್ತ್ರಸಾಧಕನೂ, ವಂದಿಜನ ಕಲ್ಪವೃಕ್ಷ, ಭಾವನಂಕಕಾರ"ನೆಂದಿದೆ. ವಿಶೇಷವಾಗಿ ಇವನನ್ನು "ಬತ್ತೀಸರಾಗ ಬಹುಕಳಾಬ್ರಹ್ಮನೂ ವಾಗ್ದೇವಿ ಲಬ್ದವರಪ್ರಸಾದನೂ, ಮೂರುರಾಯ ಆಸ್ಥಾನ ಬಿರುದ ಬಗೆಕಾರಮುಖದರ್ಪಣನೂ ಡೆಂಕೆವಿಳಾಸನೂ, ದಾನವಿನೋದನೂ ಮೊದಲಾದ ಪ್ರಶಸ್ತಿ ಸಹಿತನಾದ ಶ್ರೀಮನ್ಮೊಕರಿ ಬೊಮ್ಮಯ್ಯ"ನೆಂದು ಬಣ್ಣಿಸಿದೆ. ಇವನು ಪುಲ್ಲಣಿಯ ತೀರ್ಥದಲ್ಲಿ ಮಿಂದು, ತಮ್ಮ ತಾಯಿ ಜೋಗಿಯಬ್ಬೆಗೆ ಪರೋಕ್ಷ ವಿನಯವೆಂದು ಗಳಗೇಶ್ವರ ದೇವರ ಮಂಡಪದ ಬೆಸಕೆ

* ನಂ.೧೬೪೮, ೧೭ನೇ ಮುಖ್ಯರಸ್ತೆ, ಬನಶಂಕರಿ ಮೊದಲನೇ ಹಂತ, ೨ನೇ ಬ್ಲಾಕ್, ಬೆಂಗಳೂರು–೫೬೦ ೦೫೦, ಮೊ. ೯೪೮೦೧೭೧೫೫೨

ಮೂವತ್ತು (೩೦) ಗದ್ಯಾಣ ಹೊನ್ನನ್ನು ಕೊಟ್ಟದ್ದನ್ನು ಶಾಸನ ತಿಳಿಸುತ್ತದೆ. ಈ ಶಾಸನದಲ್ಲಿ ತಿಳಿಸಿರುವ ತೇದಿ ವಿವರದಂತೆ ಕ್ರಿ.ಶ. ೧೦೭೯ರಲ್ಲಿ ಈ ದೇವಾಲಯದ ಮಂಟಪ ರಚಿಸಿದ್ದು, ಅದೇ ಕಾಲದಲ್ಲಿ ಮಹಿಷ ಮರ್ದಿನಿ ಶಿಲ್ಪವನ್ನು ಸ್ಥಾಪಿಸಲಾಗಿದೆ.

ಈ ದೇವಾಲಯದ ಮತ್ತೊಂದು ಶಾಸನವು(ಶಾ.ಸಂ.೮೮,ಅದೇ) ಚಾಳುಕ್ಯ ದೊರೆ ವಿಕ್ರಮಾದಿತ್ಯನ ಯುವರಾಜನಾಗಿದ್ದ ಜಯಸಿಂಹದೇವನ ಮಹಾಮಂಡಳೇಶ್ವರನಾಗಿದ್ದ ಚೆನ್ನರಸನು ಚಾಳುಕ್ಯ ವಿಕ್ರಮ ಕಾಲದ ಐದನೆಯ ರೌದ್ರ ಸಂವತ್ಸರದ ಜ್ಯೇಷ್ಠ ಅಮಾವಾಸ್ಯೆಯಂದು, ಪುಲ್ಲಣಿಯ ಗಳಿಗೇಸ್ವರ ದೇವರಿಗೆ ಪುನರ್ದತ್ತಿ ಬಿಟ್ಟು ದೇವರ ಅಂಗಭೋಗ, ಸ್ನಾನ, ನೈವೇದ್ಯ, ಖಂಡಸ್ಫುಟಿತ ಜೀರ್ಣೋದ್ಧಾರ, ಗೀತವಾದ್ಯ ನೃತ್ಯ, ಅತಿಥಿಅಭ್ಯಾಗತ, ತಪೋಧನರ, ವಿದ್ಯಾರ್ಥಿಗಳ ಆಹಾರದಾನ ಮೊದಲಾದ ಎಲ್ಲಾ ಕಾರ್ಯಗಳಿಗೆಂದು ಸರ್ವಬಾಧಾ ಪರಿಹಾರವಾಗಿ ಬಿಟ್ಟದ್ದನ್ನು ತಿಳಿಸಿದೆ. ಈ ಶಾಸನವು ಕ್ರಿ.ಶ. ೧೦೮೦ರಲ್ಲಿ ಈ ದೇವಾಲಯದಲ್ಲಿ ನಡೆಯುತ್ತಿದ್ದ ವೈಭವವಾದ ಪೂಜೋಪಚಾರಗಳ ಬಗೆಗೆ ತಿಳಿಸುತ್ತದೆ. ಹೀಗೆ ಕ್ರಿ.ಶ. ೧೧ನೇ ಶತಮಾನದಲ್ಲಿ ಪುಲ್ಲಣಿ ತೀರ್ಥದ ಗಳಗೇಶ್ವರ ದೇವಾಲಯವು ಪ್ರಸಿದ್ಧವಾಗಿತ್ತು.

ಗಳಗೇಶ್ವರ ದೇವಾಲಯದ ಮುಖಮಂಟಪದಲ್ಲಿರುವ ಕೋಷ್ಠದಲ್ಲಿ ಭವ್ಯವಾದ ಮಹಿಷಮರ್ದಿನಿಯ ಶಿಲ್ಪವಿದೆ. ಈ ಮಹಿಷಮರ್ದಿನಿ ಶಿಲ್ಪದ ಪ್ರಭಾವಳಿಯಲ್ಲಿಯೂ ಮೂರು ಸಾಲಿನ ಶಾಸನವಿದೆ. ಶಾಸನೋಕ್ತವಾಗಿರುವ ಈ ಶಿಲ್ಪವನ್ನು ಕ್ರಿ.ಶ. ೧೦೭೯ರಲ್ಲಿ ಪ್ರತಿಷ್ಠೆ ಮಾಡಲಾಗಿದೆ. ಇದರಂತೆ ಈ ಶಿಲ್ಪವು ಕ್ರಿ.ಶ. ೧೧ನೇ ಶತಮಾನದ ಕಲ್ಯಾಣದ ಚಾಳುಕ್ಯರ ಶೈಲಿಯ ಉದಾಹರಣೆಯಾಗಿದೆ.

ಮಹಿಷಾಸುರಮರ್ದಿನಿಯ ಸ್ವರೂಪದ ಬಗೆಗೆ, ಮಾರ್ಕಾಂಡೇಯ ಪುರಾಣದ ದೇವೀಮಹಾತ್ಮೆಯ ಭಾಗವು ಹೀಗೆ ತಿಳಿಸಿದೆ– ದಾನವೇಂದ್ರನಾಗಿದ್ದ ಮಹಿಷಾಸುರನು ದೇವಲೋಕವನ್ನು ಗೆದ್ದು ಇಂದ್ರಪದವಿಗೇರುತ್ತಾನೆ. ಆಗ ಪರಾಜಿತರಾದ ದೇವತೆಗಳು ಬ್ರಹ್ಮನಿಗೆ ಮೊರೆ ಇಡಲು ಬ್ರಹ್ಮನು ಎಲ್ಲರೊಂದಿಗೆ ಸರ್ವರಕ್ಷಕನಾದ ವಿಷ್ಣುವಿನ ಬಳಿಗೆ ಬರುವರು. ದೇವತೆಗಳ ಸಂಕಷ್ಟವನ್ನು ಕೇಳಿ ಅಲ್ಲಿಯೇ ಇದ್ದ ಹರಿ, ಹರರಿಗೆ ಅತಿಯಾದ ಕೋಪಬಂತು. ಬ್ರಹ್ಮ, ವಿಷ್ಣು, ಮಹೇಶ್ವರರ ಕೋಪೋದ್ವೇಗದ ಮುಖಗಳಿಂದ ದೇದೀಪ್ಯಮಾನವಾದ ತೇಜಃಪುಂಜವು ಹೊರಬಿದ್ದಿತು. ಇದರೊಂದಿಗೆ ಅಲ್ಲಿದ್ದ ಎಲ್ಲ ದೇವತೆಗಳ ಶರೀರದಿಂದಲೂ ಕಾಂತಿ ಕಿರಣಗಳು ಹೊರಹೊಮ್ಮಿ ಈ ತೇಜೋರಾಶಿಯಲ್ಲಿ ಲೀನವಾದವು. ಅತುಲವಾದ ಆ ತೇಜೋರಾಶಿಯು ನಾರೀರೂಪವನ್ನು ತಾಳಿತು. ಮಹಿಷಾಸುರನಾದರೋ ಉಗ್ರವಾದ ತಪಸ್ಸು ಮಾಡಿ ಬ್ರಹ್ಮನಿಂದ ತನಗೆ ಸ್ತ್ರೀಯಿಂದ ಮಾತ್ರ ಮರಣ ಬರಲೆಂದು ವರ ಪಡೆದಿದ್ದನು. ಅದರಂತೆ, ರಜೋಗುಣಪ್ರವರ್ತಕಳಾದ ಮಹಾಲಕ್ಷ್ಮಿಯೇ ಈ ರೂಪ ಧರಿಸಿದಳೆಂದು ತಿಳಿಸಿದೆ. ತಮ್ಮನ್ನು ರಕ್ಷಿಸಲು ಅವತರಿಸಿದ ಈ ಮಹಾದೇವಿಗೆ ದೇವತೆಗಳು ಆಯುಧಗಳನ್ನು, ಆಭರಣಗಳನ್ನಿತ್ತು ಆದರಿಸಿದರು. ಶಿವನು ತ್ರಿಶೂಲವನ್ನೂ, ವಿಷ್ಣುವು ಚಕ್ರವನ್ನೂ, ಅಗ್ನಿಯು ಭರ್ಜಿಯನ್ನು ವಾಯುವು, ಧನಸ್ಸು ಮತ್ತು ಬಾಣಗಳನ್ನೂ ಕೊಟ್ಟರು. ಇಂದ್ರನು ವಜ್ರ, ಗಂಟೆಯನ್ನೂ ಯಮನು ಖಡ್ಗ, ಖೇಟಕಗಳನ್ನು, ವರುಣನು ಪಾಶವನ್ನು ಕೊಟ್ಟರು. ಪ್ರಜಾಪತಿಯು ಪದಕದಹಾರವನ್ನೂ, ಬ್ರಹ್ಮದೇವನು ಕಳಶವನ್ನು ಸೂರ್ಯನು ಉಗ್ರ ತೇಜಸ್ಸನ್ನೂ ಕೊಟ್ಟರೆ ಹಿಮವಂತನು ಸಿಂಹವನ್ನು ಅವಳ ವಾಹನವಾಗಿ ಕಳಿಸಿದನು. ಕುಬೇರನು ಪಾನ ಪಾತ್ರೆಯನ್ನೂ, ಅನಂತನು ನಾಗಭರಣಗಳನ್ನು ಕೊಟ್ಟರೆಂದು ತಿಳಿಸಿದೆ. ಹೀಗೆ ಸರ್ವಾಭರಣ ಭೂಷಿತೆಯಾಗಿ, ಆಯುಧಗಳನ್ನು ಧರಿಸಿ ವಿಂಧ್ಯ ಪರ್ವತದೆಡೆಗೆ ತೆರಳಿದಳು.

ನಾರದ ಮುನಿಯು ದೇವಿಯ ಅನುಪಮ ಸೌಂದರ್ಯದ ಬಗೆಗೆ ಮಹಿಷಾಸುರನಿಗೆ ತಿಳಿಸಿ, ಅವಳನ್ನು ಪಡೆಯುವಂತೆ ಪ್ರೇರೇಪಿಸಿದರು. ಮಹಿಷಾಸುರನು ಮೊದಲು ದೂತರನ್ನು ಕಳಿಸಿ, ಅವಳನ್ನು ಕರೆತರಲು ಯತ್ನಿಸಿದನು. ಆದರೆ ದೇವಿಯು ತನ್ನನ್ನು ಯುದ್ಧದಲ್ಲಿ ವಿಜೇತನಾದ ವೀರನನ್ನು ವರಿಸುವುದಾಗಿ ಹೇಳಿಕಳಿಸಿದಳು. ಇದರಂತೆ ಅಪಾರ ಸೇನೆಯೊಂದಿಗೆ ಬಂದ ದಾನವೇಂದ್ರನ ಹಲವು ಜನ ರಕ್ಕಸರನ್ನು ಕೊಂದು, ಕೊನೆಗೆ ತನಗೆದುರಾಗಿ ಹೋರಾಡಿದ ಮಹಿಷಾಸುರನನ್ನು ದೇವಿಯು ತನ್ನ ಪಾದದಿಂದ ಮೆಟ್ಟಿ ಶೂಲದಿಂದ ಇರಿದು ಅವನ ಶಿರವನ್ನು ಕತ್ತರಿಸುವಳು. ಮಹಿಷನ ರೂಪದಿಂದ ಮುಕ್ತನಾದ ಅಸುರನು ಹೊರಹೊಮ್ಮಲು ಅವನ ರುಂಡವನ್ನು ಕತ್ತರಿಸಿ ಸಂಹರಿಸುವಳು. ಲೋಕ ಕಂಟಕನಾಗಿದ್ದ ಮಹಿಷಾಸುರನನ್ನು ಸಂಹರಿಸಿ ದೇವಿಯು ತನ್ನನ್ನು ಭಜಿಸುವ ಭಕ್ತರ ಸಕಲ ಕಷ್ಟಗಳನ್ನು ಪರಿಹರಿಸುವಳೆಂಬ ನಂಬಿಕೆ ಬೆಳೆದಿದ್ದು ಎಲ್ಲೆಡೆ ಮಹಿಷಮರ್ದಿನಿ ಆರಾಧನೆಯು ಪ್ರಾಚೀನ ಕಾಲದಿಂದ ನಡೆದುಬಂದಿದೆ. ಇದರಂತೆ ಮಹಿಷಮರ್ದಿನಿಯ ಹಲವು ವಿಧದ ಶಿಲ್ಪಗಳು ದೊರೆಯುತ್ತವೆ. ಒಟ್ಟಿನಲ್ಲಿ ಈ ಕಥೆಯು ಲೋಕದಲ್ಲಿ ಮಹಿಷಾಸುರನೆಂಬ ಘನ ಅಜ್ಞಾನವನ್ನು, ಜ್ಞಾನಶಕ್ತಿ ರೂಪಿಣಿಯಾದ ದೇವಿಯು ಪರಿಹರಿಸುತ್ತಾ ಲೋಕವನ್ನು ಸಂರಕ್ಷಿಸುವಳೆಂಬ ನಂಬಿಕೆಯನ್ನು ಪಡೆದು ವಿಶ್ವಮಾತೆಯಾಗಿದ್ದಾಳೆ.

ಮಹಿಷಾಸುರಮರ್ದಿನಿಯ ಶಿಲ್ಪದ ಲಕ್ಷಣಗಳ ಬಗೆಗೆ ಗಮನಿಸಿದರೆ, ಸುಪ್ರಭೇದಾಗಮ ಮತ್ತು ಪೂರ್ವಕರಣಾಗಮವು– "ದೇವಿಯ ಶಿಲ್ಪವು ಚತುರ್ಭುಜೆಯಾಗಿದ್ದು, ಕೈಗಳಲ್ಲಿ ಶಂಖ, ಚಕ್ರ, ಅಂಕುಶ ಮತ್ತು ಪಾಶವನ್ನು ಹಿಡಿದಿರುತ್ತಾಳೆ" ಎಂದಿದೆ. ಆದರೆ ಸಾಮಾನ್ಯವಾಗಿ ಅಷ್ಟಭುಜೆಯಾದ ದೇವಿಯ ಶಿಲ್ಪಗಳು ಎಲ್ಲೆಡೆ ಕಾಣಬರುತ್ತವೆ. ಶಾರದಾತಿಲಕತಂತ್ರ ಮತ್ತು ಪ್ರಪಂಚಸಾರ ತಂತ್ರಗಳು ವಿಶೇಷವಾಗಿ ಅಷ್ಟಭುಜೆಯಾದ ದೇವಿಯ ಶಿಲ್ಪ ಲಕ್ಷಣಗಳನ್ನು ತಿಳಿಸಿವೆ. ಈ ದೇವಿಯ ಕೈಗಳಲ್ಲಿ ಚಕ್ರ, ತ್ರಿಶೂಲ, ಚೂಪಾದ ಬಾಣ, ಖಡ್ಗ ತರ್ಜನೀ ಮುದ್ರೆಗಳಿದ್ದು, ಮತ್ತೊಂದು ಕೈ ರಕ್ಕಸನ ಶಿರವನ್ನು ಅದುಮಿ ಹಿಡಿದಿರುತ್ತದೆ. ಉಳಿದ ಕೈಗಳು ಗುರಾಣಿ ಮತ್ತು ಧನಸ್ಸನ್ನು ಹಿಡಿದಿರುತ್ತವೆ ಅಥವಾ ಕೈಗಳಲ್ಲಿ ಚಕ್ರ, ತ್ರಿಶೂಲ, ಚೂಪಾದ ಬಾಣ, ಖಡ್ಗಗಳಿದ್ದು, ಅಕ್ಷಮಾಲೆ, ಅಂಕುಶ ಮತ್ತು ನಾಗಪಾಶಗಳಿರುತ್ತವೆ ಎಂದಿವೆ. ಪ್ರಾಚೀನ ಶಿಲ್ಪಗಳಲ್ಲಿ ಇವಳೊಂದಿಗೆ ಸಿಂಹವನ್ನು ಬಿಡಿಸಿರುವುದಿಲ್ಲ. (Durga Kosha-SKR-P.79)

ಶಿಲ್ಪರತ್ನವು, ಮಹಿಷಮರ್ದಿನಿ ಶಿಲ್ಪವು ದಶಭುಜೆಯಾಗಿದ್ದು ಇವಳನ್ನು 'ಕಾತ್ಯಾಯಿನಿ' ಎಂದು ಕರೆದಿದೆ. ಇವಳು ಬಲಗೈಗಳಲ್ಲಿ ತ್ರಿಶೂಲ, ಖಡ್ಗ, ಶಕ್ತಿ, ಚಕ್ರ ಬಗ್ಗಿದ ಧನಸ್ಸನ್ನು ಹಿಡಿದಿರುತ್ತಾಳೆ ಮತ್ತು ಎಡಗೈಗಳಲ್ಲಿ ಪಾಶ, ಅಂಕುಶ, ಖೇಟಕ, ಪರಶು ಮತ್ತು ಘಂಟೆಯನ್ನು ಹಿಡಿದಿರುತ್ತಾಳೆ ಎಂದಿದೆ. ಇವಳು ಶಿವ ಮತ್ತು ವಿಷ್ಣುವಿನ ಅಂಶದಿಂದ ಕೂಡಿದ ರೂಪವಾಗಿದ್ದು ಇವಳಿಗೆ ಶಿರದಲ್ಲಿ ಚಂದ್ರಲೇಖೆಯುಳ್ಳ ಜಟಾಮಕುಟವಿರುತ್ತದೆ. ಇವಳನ್ನು "ತ್ರಿಭಂಗಿಸ್ಥಾನ ಸಂಸ್ಥಾನ ಮಹಿಷಾಸುರಮರ್ದಿನಿ" ಎಂದಿದೆ. ಅಂದರೆ, ಮಹಿಷಾಸುರನನ್ನು ಕೊಲ್ಲುವಾಗ ತ್ರಿಭಂಗಿಯಲ್ಲಿ ನಿಂತಿರುವಂತೆ ಬಿಡಿಸಬೇಕೆಂದಿದೆ. ಇವಳ ಬಲಗಾಲು ಸಿಂಹದ ಬೆನ್ನಿನ ಮೇಲಿದ್ದು ಎಡಗಾಲಿನಿಂದ ದೇವಿಯ ಮುಂದೆ ಬಿದ್ದಿದ್ದ ಮಹಿಷಾಸುರನನ್ನು ಮೆಟ್ಟಿರುತ್ತಾಳೆ (Ibid) ಎಂದು ತಿಳಿಸಿದೆ. ಅಲ್ಲದೆ, ಮಹಿಷಾಸುರನ ಕೊರಳನ್ನು ಛೇದಿಸಿದ್ದು, ಮುರಿದ ಗೋಣಿನಿಂದ ರಕ್ಕಸನು ಹೊರಬಂದಂತೆ ಬಿಡಿಸಬೇಕೆಂದಿದೆ. ಕ್ರೂರರೂಪದ ದಾನವನ ಕೈಗಳಲ್ಲಿ ಖಡ್ಗ ಖೇಟಕಗಳಿರುತ್ತವೆ. ಇವನನ್ನು ದೇವಿಯ ನಾಗಪಾಶವು ಬಂಧಿಸಿರುತ್ತದೆ. ಪಾಶದ ಮತ್ತೊಂದು ತುದಿಯು ದೇವಿಯ ಕೈಯಲ್ಲಿರುವಂತೆ ಬಿಡಿಸಬೇಕೆಂದು ತಿಳಿಸಿದೆ.

ಮತ್ಸ್ಯ ಪುರಾಣವು, ದೇವಿಯ ಶಿಲ್ಪ ಲಕ್ಷಣಗಳ ಬಗೆಗೆ ದೀರ್ಘವಾದ ವಿವರ ನೀಡಿದೆ. ದೇವಿಗೆ ಎತ್ತರವಾದ ಜಟಾಮಕುಟವಿದ್ದು ಚಂದ್ರಲೇಖೆಯನ್ನು ಬಿಡಿಸಿರಬೇಕು; ದೇವಿಯ ಮುಖವು ಕಮಲದಂತೆ/ಚಂದ್ರನಂತೆ ಸುಂದರವಾಗಿರಬೇಕು, ತ್ರಿನೇತ್ರೆಯಾದ ದೇವಿಯು ತರುಣಿಯಂತಿದ್ದು, ಸರ್ವಾಭರಣ ಸಂಯುಕ್ತಳಾಗಿರುತ್ತಾಳೆ. ತ್ರಿಭಂಗಿಯಲ್ಲಿ ನಿಂತಿರುವಂತೆ ಬಿಡಿಸಿದ್ದು ಅವಳ ಕೈಗಳಲ್ಲಿ ತ್ರಿಶೂಲ, ಖಡ್ಗ, ಚಕ್ರ, ಚೂಪಾದ ಬಾಣ ಮತ್ತು ಶಕ್ತಿಗಳನ್ನು ಹಿಡಿದಿರುತ್ತಾಳೆ. ಎಡಗೈಗಳಲ್ಲಿ ಗುರಾಣಿ, ಬಗ್ಗಿಸಿದ ಧನಸ್ಸು, ಪಾಶ, ಅಂಕುಶ/ಗಂಟೆ ಮತ್ತು ರಕ್ಕಸನಶಿರವನ್ನು ಹಿಡಿದಿರುತ್ತಾಳೆ ಎಂದು ತಿಳಿಸಿದೆ. ದೇವಿಯ ಪಾದದ ಬಳಿ ಶಿರ ಕಡಿದುಬಿದ್ದಿರುವ ಮಹಿಷನನ್ನು ಬಿಡಿಸಬೇಕು. ಮಹಿಷನ(ಕೋಣ) ತುಂಡಾದ ಕಂಠದಿಂದ ರಕ್ಕಸನು ಹೊರಹೊಮ್ಮುತ್ತಿದ್ದು ಅವನ ಕೈಯಲ್ಲಿ ಖಡ್ಗವಿರುತ್ತದೆ. ರಕ್ಕಸನ ಎದೆಗೆ ದೇವಿಯ ತ್ರಿಶೂಲವು ನಾಟಿರುತ್ತದೆ. ರಕ್ಕಸನ ಶರೀರ ರಕ್ತದಿಂದ ತೊಯ್ದಿರುತ್ತದೆ. ರಕ್ಕಸನನ್ನು ದೇವಿಯ ಪಾಶವು ಬಂಧಿಸಿರುತ್ತದೆ. ರಕ್ಕಸನ ಮುಖದಲ್ಲಿ ಕ್ರೌರ್ಯವಿದ್ದು ಹುಬ್ಬು ಗಂಟಿಕ್ಕಿರುತ್ತದೆ. ರಕ್ಕಸರ ಶಿಖೆಯನ್ನು (ಜುಟ್ಟನ್ನು) ದೇವಿಯು ಕೈಯಿಂದ ಬಲವಾಗಿ ಅದುಮಿ ಹಿಡಿದಿರುತ್ತಾಳೆ. ದೇವಿಯ ಪಕ್ಕದಲ್ಲಿ ರಕ್ತಸಿಕ್ತವಾದ ಸಿಂಹವು ನಿಂತಿರುತ್ತದೆ. ದೇವಿಯ ಬಲಪಾದವು ಸಿಂಹದ ಬೆನ್ನಿನ ಮೇಲಿರುತ್ತದೆ. ಎಡಪಾದವನ್ನು ಸ್ವಲ್ಪ ಮೇಲೆ ಮಹಿಷನ ದೇಹವನ್ನು ಮೆಟ್ಟಿ ನಿಂತಿರುತ್ತಾಳೆ ಎಂದು ಬಣ್ಣಿಸಿದೆ (Durgakosa-P. 82.)

'ಪ್ರಪಂಚಸಾರ ಸಂಗ್ರಹ' ಗ್ರಂಥವು ಮಹಿಷಮರ್ದಿನಿಯ ಮೂರು ಸ್ವರೂಪಗಳ ಬಗೆಗೆ ತಿಳಿಸಿದೆ. ದೇವಿಯು ಸಾತ್ವಿಕ ರೂಪದವಳಾದಾಗ, ಚತುರ್ಭುಜೆಯಾಗಿರುತ್ತಾಳೆ. ದೇವಿಯು ಹಿಂದಿನ ಕೈಗಳಲ್ಲಿ ಶಂಖ, ಚಕ್ರಗಳನ್ನು ಧರಿಸಿದ್ದು, ಮುಂದಿನ ಕೈಗಳು ವರದ ಮತ್ತು ಅಭಯ ಹಸ್ತಗಳಾಗಿರುತ್ತವೆ. ಇವಳು ಪದ್ಮಪೀಠದ ಮೇಲೆ ಪ್ರಸನ್ನವದನಳಾಗಿ ನಿಂತಿರುತ್ತಾಳೆ ಎಂದಿದೆ. ರಾಜರೂಪದ ಮಹಿಷಮರ್ದಿನಿಯ ಸ್ವರೂಪದಲ್ಲಿ ದೇವಿಯು ಅಷ್ಟಭುಜೆಯಾಗಿದ್ದು ಕೈಗಳಲ್ಲಿ ಚಕ್ರ, ಶಂಖ, ಖಡ್ಗ, ಖೇಟಕ, ಬಾಣ, ಧನಸ್ಸು ಶೂಲ ಮತ್ತು ತರ್ಜನಿ ಹಸ್ತಗಳಿರುತ್ತವೆ. ಇವಳು ಮಹಿಷನ ಶಿರದ ಮೇಲೆ ನಿಂತಿರುತ್ತಾಳೆ ಎಂದು ತಿಳಿಸಿದೆ.

ಶಿಲ್ಪಶಾಸ್ತ್ರ ಗ್ರಂಥಗಳು ತಿಳಿಸಿರುವ ಈ ಲಕ್ಷಣಗಳ ಹಿನ್ನೆಲೆಯಲ್ಲಿ ಗಳಗೇಶ್ವರ ದೇವಾಲಯದ ಮಹಿಷಮರ್ದಿನಿ ಶಿಲ್ಪವನ್ನು ಗಮನಿಸಿದರೆ, ಶಿಲ್ಪದ ಔಚಿತ್ಯವು ಹೆಚ್ಚು ಮನನವಾಗುತ್ತದೆ. ದೇವಾಲಯದ ಮುಖಮಂಟಪದ ಎಡಭಾಗದ ಕೋಷ್ಠದಲ್ಲಿ ಸುಮಾರು ಎರಡು ಅಡಿ ಎತ್ತರದ ಭದ್ರಪೀಠದ ಮೇಲೆ ಆರು ಅಡಿ ಎತ್ತರದ, ತ್ರಿಭಂಗಿಯಲ್ಲಿ ನಿಂತಿರುವ ಮಹಿಷಮರ್ದಿನಿಯ ಶಿಲ್ಪವಿದೆ. ಸರಳವಾದ ಅಗಲವಾದ ಪಟ್ಟಿಕೆಯಂತಹ ಪ್ರಭಾವಳಿಯು ದೇವಿಯ ಶಿಲ್ಪವನ್ನು ಸುತ್ತುವರೆದಿದೆ. ಈ ಪ್ರಭಾವಳಿಯ ಪಟ್ಟಿಕೆಯ ಮೇಲೆ ಮೂರು ಸಾಲಿನ ಶಾಸನವನ್ನು ಕೆತ್ತಲಾಗಿದೆ. ದೇವಿಯ ಶಿರದ ಮೇಲೆ ಎತ್ತರವಾದ



ಮಹಿಷಾಸುರಮರ್ಧಿನಿ
ಶಿಲ್ಪ ಗಳಗೇಶ್ವರ ದೇವಾಲಯ



ಪೀಠಸಹಿತ ಮಹಿಷಾಸುರ
ಮರ್ಧಿನಿ ಶಿಲ್ಪ ಗಳಗೇಶ್ವರ
ದೇವಾಲಯ

ರುಂಡಯುಕ್ತವಾದ ಕರಂಡಮಕುಟವನ್ನು ಕೆತ್ತಿದೆ. ಕಿವಿಗಳಲ್ಲಿ ಅಗಲವಾದ ಓಲೆಗಳನ್ನು ಧರಿಸಿರುವ ದೇವಿಯ ಮುಖದಲ್ಲಿ ರೌದ್ರಕಳೆಯದ್ದು ಕೋರೆಹಲ್ಲುಗಳನ್ನೂ ಬಿಡಿಸಿದೆ. ಕೊರಳಿಗೆ ಹತ್ತಿಕೊಂಡಂತೆ ಅಡ್ಡಿಕೆಯನ್ನು, ಪಟ್ಟಿಕೆಯಂತಿರುವ ಪದಕದ ಹಾರವನ್ನು ಧರಿಸಿರುವ ದೇವಿಯ ಕೈಗಳಲ್ಲಿ ಬಳೆಗಳನ್ನು ದಿಂಡಿನಂತೆ ಬಿಡಿಸಿದೆ. ಒಂದೆರಡು ಕೈಗಳಲ್ಲಿ ದಪ್ಪವಾದ ಕಡಗಗಳಿವೆ. ಅಷ್ಟಭುಜೆಯಾದ ದೇವಿಯ ಬೆನ್ನಿನ ಮೇಲೆ ಬಲಭಾಗದಲ್ಲಿ ಬತ್ತಳಿಕೆ ಇದೆ. ದೇವಿಯ ಬಲಗೈಗಳಲ್ಲಿ, ಮುಂದಿನ ಬಲಗೈಯಿಂದ ಬಳಿ ಇರುವ ದಾನವನನ್ನು ಸುರಗಿಯಿಂದ ಇರಿದು ಕೊಲ್ಲುತ್ತಿದ್ದಾಳೆ. ಎರಡನೇ ಬಲಗೈಯಲ್ಲಿ ಮೇಲ್ಮುಖವಾಗಿ ಹಿಡಿದಿರುವ ತ್ರಿಶೂಲವಿದೆ. ಮೇಲಿನ ಬಲಗೈ, ಬತ್ತಳಿಕೆಯಿಂದ ಬಾಣವನ್ನು ಹೊರ ತೆಗೆಯುತ್ತಿರುವಂತಿದೆ. ದೇವಿಯ ಎಡಗೈಗಳಲ್ಲಿ ಮೇಲಿನ ಎಡಗೈ ಕರ್ತರಿಮುದ್ರೆಯಲ್ಲಿ ಶಂಖವನ್ನು ಹಿಡಿದಿದೆ. ಎರಡನೇ ಕೈಯಲ್ಲಿ ಉದ್ದವಾದ ನೇರವಾಗಿರುವ ಧನಸ್ಸನ್ನು ಹಿಡಿದಿದೆ. ಮೂರನೇಎಡಗೈಯಲ್ಲಿ ಖೇಟಕವಿದ್ದು (ಗುರಾಣಿ), ಮುಂದಿನ ಎಡಗೈಯಿಂದ ರಕ್ಕಸನ ಶಿರವನ್ನು ಮೇಲೇಳಲಾಗದಂತೆ ಬಲವಾಗಿ ಅದುಮಿ ಹಿಡಿದಿದೆ. ನೀಳಕಾಯಳಾದ ಪ್ರೌಢೆಯಂತಿರುವ ದೇವಿಯು ಬಲಗಾಲನ್ನು ಸ್ಥಿರಪಾದವಾಗಿಸಿದ್ದು, ತ್ರಿಭಂಗಿಯಲ್ಲಿ ನಿಂತಿದ್ದಾಳೆ. ದೇವಿಯ ಬಲಭಾಗದಲ್ಲಿ ಕೆರಳಿದ ಸಿಂಹವನ್ನು ಬಿಡಿಸಿದೆ. ದೇವಿಯು ಎಡಗಾಲನ್ನು ವಕ್ರವಾಗಿ ಬಾಗಿಸಿದ್ದು, ರಕ್ಕಸನು ಮೇಲೇಳಲಾಗದಂತೆ, ರಕ್ಕಸನ ಪೃಷ್ಠವನ್ನು ಮೆಟ್ಟಿನಿಂತಿದ್ದಾಳೆ.

ಮಹಿಷಮರ್ದಿನಿಯ ಶಿಲ್ಪವನ್ನು ಕೆತ್ತುವಲ್ಲಿ ಶಿಲ್ಪಿಯು ತೋರಿರುವ ಕಲಾ ಕೌಶಲ್ಯವನ್ನು ಗಮನಿಸಿದರೆ, ದೇವಿಯ ಶಿಲ್ಪವನ್ನು ಶಿಲ್ಪಶಾಸ್ತ್ರ ಲಕ್ಷಣಗಳು ತಿಳಿಸಿರುವಂತೆ, ತರುಣಿಯಂತೆ ಬಿಡಿಸಿರುವ ದೇವಿಯ ಶರೀರವು ದಷ್ಟಪುಷ್ಟವಾದ ಅಂಗಾಂಗಳಿಂದ ಕೂಡಿದ ನೀಳಕಾಯವಾಗಿದೆ. ಬಲಿಷ್ಠವಾದ ಬಾಹುಗಳಲ್ಲಿ ಬಾಹುಪೂರಗಳಿವೆ. ಉಬ್ಬಿದಂತಿರುವ ತೋರಸ್ತನಗಳು, ಸಣ್ಣದಾದ ನಡು, ತುಸು ತೋರವೆನಿಸುವ ಪೃಷ್ಠ, ನೀಳವಾದ ತೊಡೆಗಳನ್ನು ಕೆತ್ತುವುದರ ಮೂಲಕ ದೇವಿಯ ಅತುಲಪರಾಕ್ರಮವನ್ನು, ಮಹಾಶಕ್ತಿಯನ್ನು ಸೂಚಿಸಿದ್ದಾನೆ. ದೇವಿಯ ದೇಹದ ನಡುವಿನಲ್ಲಿ ಕಟೀಸೂತ್ರವಿದ್ದು, ಕಟಿಯಿಂದ ಕೆಳಭಾಗದಲ್ಲಿ ನೆರಿಗೆಗಳುಳ್ಳ ಸೀರೆಯನ್ನು ವೀರಗಚ್ಚೆ ಹಾಕಿರುವಂತೆ ಬಿಡಿಸಿದೆ. ಸೀರೆಯ ಗಂಟಿನ ಭಾಗವು ಬಲಗಡೆ ಮಧ್ಯಭಾಗದಲ್ಲಿ ಕೆಳಮುಖವಾಗಿ ಇಳಿಬಿದ್ದಿದೆ. ಸೊಂಟದ ಎಡಗಡೆಯೂ ವಸ್ತ್ರದ ಗಂಟನ್ನು ಕುಚ್ಚಿನಂತೆ ಬಿಡಿಸಿದೆ. ಬಲಗಡೆ ಕೆಲಭಾಗದ ವಸ್ತ್ರ ಹರಡಿದಂತಿದೆ. ಮೊಣಕಾಲವರೆಗಿರುವ ಸೀರೆಯ ಮೇಲೆ ಕಾಲಂದಿಗೆಗಳು ಭದ್ರವಾಗಿ ಕುಳಿತಿವೆ.

ದೇವಿಯು ಎಡಮಂಡಿಯನ್ನು ಮೇಲೆತ್ತಿ ಬಾಗಿಸಿದ್ದು, ಮಹಿಷನಿಂದ ಹೊರಬರುತ್ತಿರುವ ರಕ್ಕಸನನ್ನು ತನ್ನ ಕಾಲುಗಳ ನಡುವೆ ಸಿಲುಕಿಸಿಕೊಂಡಿರುವಂತೆ ಬಿಡಿಸಿರುವುದು ಗಮನಾರ್ಹವಾಗಿದೆ. ಹೀಗೆ ಸಿಲುಕಿಕೊಂಡಿರುವ ರಕ್ಕಸನ ಶಿರವನ್ನು ಒಂದು ಕೈಯಿಂದ ಬಲವಾಗಿ ಹಿಡಿದಿರುವ ದೇವಿಯು ಎಡಗಾಲಿನಿಂದ ಅವನ ಸೊಂಟವನ್ನು ಮೆಟ್ಟಿದ್ದು ರಕ್ಕಸನ ಶೌರ್ಯ ಪರಾಕ್ರಮಗಳನ್ನುಡಗಿಸಿದ್ದಾಳೆ. ಈ ಶಿಲ್ಪದಲ್ಲಿ ಮಹಿಷಾಸುರನಿಗೆ ದೇವಿಯ ಆಯುಧಗಳು ನಾಟಿಲ್ಲವಾದರೂ ಅವಳ ಅಪಾರ ಶಕ್ತಿಯೇ ಅವನ ಹುಟ್ಟಡಗಿಸಿದೆ. ಬಲಭಾಗದಲ್ಲಿರುವ ರಕ್ಕಸನನ್ನು ದೇವಿಯ ಖಡ್ಗವು ಇರಿದು ಕೊಲ್ಲುತ್ತಿದೆ. ದೇವಿಯ ಕೈಯಲ್ಲಿರುವ ಆಯುಧಗಳಲ್ಲಿ ಬಾಣವನ್ನು ಹೊರತೆಗೆಯುತ್ತಿರುವುದು, ಬಲಗೈಯಿಂದ ಚಕ್ರ ಪ್ರಯೋಗಕ್ಕೆ ಸಿದ್ಧವಾಗಿರುವುದು, ಖಡ್ಗದಿಂದ ಇರಿಯುತ್ತಿರುವುದು, ಇವು ದೇವಿಯು ಸಂಹಾರ ಕ್ರಿಯೆಯಲ್ಲಿ ತೊಡಗಿರುವುದನ್ನು ಸೂಚಿಸುತ್ತಿದೆ.

ರಕ್ಕಸರ ಶಿಲ್ಪಗಳನ್ನು ಗಮನಿಸಿದರೆ, ದೇವಿಯ ಬಲಭಾಗದಲ್ಲಿರುವ ರಕ್ಕಸನ ಎದೆಗೆ ಖಡ್ಗದಿಂದ ಚುಚ್ಚಿಕೊಲ್ಲುತ್ತಿದ್ದಾಳೆ. ರಕ್ಕಸನ ಕೈಯಲ್ಲಿ ಖಡ್ಗ, ಗುರಾಣಿಗಳಿದ್ದರೂ, ಕೆಳಮುಖವಾಗಿದೆ. ನೋವಿನಿಂದ ನರಳುತ್ತಿರುವಂತೆ ಅಂಗಾತವಾಗಿ ಬಿದ್ದಿರುವ ರಕ್ಕಸನ ಮುಖದಲ್ಲಿ ಬಾಯಿ ಅರೆತೆರೆದಿದೆ. ಕೇಶ ಬಿಚ್ಚಿ ಕೆದರಿ ಹರಡಿದೆ. ಇವನ ಕೆಳಗಡೆ, ಮುನ್ನುಗ್ಗುತ್ತಿರುವಂತೆ ಬಿಡಿಸಿರುವ ಸಿಂಹಮುಖ ಕೋಪೋದ್ರಿಕ್ತವಾದಂತಿದೆ. ಕೇಸರಗಳು ಹರಡಿವೆ, ಕೊರಳಿನಲ್ಲಿ ಪದಕದಹಾರವನ್ನು ಬಿಡಿಸಿದೆ, ರಕ್ಕಸನಿಗೂ ಕಿವಿಯಲ್ಲಿ ಉಂಗುರಗಳಿವೆ.

ಮಹಿಷಾಸುರನನ್ನು ಕೆತ್ತುವಲ್ಲಿ ಶಿಲ್ಪಿಯು, ದೇವಿಯ ಎಡಭಾಗದಲ್ಲಿ ಕೆಳಗಡೆ ಮದಿಸಿದ ಮಹಿಷನನ್ನು(ಕೋಣವನ್ನು) ಬಿಡಿಸಿದ್ದು ಕೋಣನಿಗೂ ಮೂಗುದಾರವನ್ನೂ, ಬೆನ್ನಿನ ಮೇಲೆ ಮುತ್ತಿನ ಸರಪಳಿಯನ್ನೂ ಬಿಡಿಸಿದೆ. ಕೋಣನ ಶಿರವು ಶರಣಾದಂತೆ ಬಾಗಿದೆ. ಈ ಶಿಲ್ಪದಲ್ಲಿ ಕೋಣನ ಕೊರಳು ಛಿದ್ರವಾದಂತಿಲ್ಲವಾದರೂ ಬಲಿಷ್ಠವಾಗಿದ್ದ ಕೋಣ ಶರಣಾದಂತೆ ಬಿಡಿಸಿದೆ. ಕೋಣನ ಕೊರಳಿನಿಂದ ಹೊರಬಂದು ಜಿಗಿದಂತಿರುವ ರಕ್ಕಸನು ಮಾನವನಂತಿದ್ದಾನೆ. ಈ ನರರೂಪದ ರಕ್ಕಸನೇ ಮಹಿಷಾಸುರನೆಂದು ಸೂಚಿಸುವಂತೆ ಇವನ ಶಿರದ ಮೇಲೆ ಎರಡು ಚಿಕ್ಕದಾದ ಕೋಡುಗಳನ್ನು ಬಿಡಿಸಿದೆ. ದೇವಿಯ ಎಡಭಾಗದಲ್ಲಿ ಮತ್ತೊಬ್ಬ ವ್ಯಕ್ತಿಯನ್ನು ಬಿಡಿಸಿದ್ದು, ದೇವಿಯ ಭಕ್ತನಾದ ಇವನು ವಿಜಯವನ್ನು ಕಂಡು ಆನಂದದಿಂದ ಶಂಖ ಊದುತ್ತಿರುವಂತಿದೆ. ಹೀಗೆ ಈ ಮಹಿಷಮರ್ದಿನಿ ಶಿಲ್ಪವು ದೇವಿಮಹಾತ್ಮೆಯು ಬಣ್ಣಿಸುವ ಮಹಿಷಾಸುರ ಸಂಹಾರದ ಪ್ರಸಂಗವನ್ನು ಮನದಟ್ಟಾಗುವಂತೆ ಚಿತ್ರಿಸಿರುವ ಅತ್ಯುತ್ತಮ ಕಲಾಕೃತಿಯಾಗಿದೆ.

ಈ ದೇವಿಯ ಶಿಲ್ಪದ ಭಾವಭಣಿತಗಳನ್ನು ಗಮನಿಸಿದಾಗ, ದೇವಿಗೆ ಬಿಡಿಸಿರುವ ತೋರಸ್ತನಗಳು, ಚಿಕ್ಕದಾದ ನಡು, ಮೊಣಕಾಲವರೆಗೆ ದೇಹದ ಮೇಲೆ ಗೆರೆಗಳಂತೆ ಬಿಡಿಸಿರುವ ನೆರಿಗೆಯುಳ್ಳ, ಸೀರೆ, ಕೈ ಮತ್ತು ಕಾಲುಗಳಲ್ಲಿ ಬಿಡಿಸಿರುವ ಅಗಲವಾದ ಪಟ್ಟಿಕೆಯಂತಹ ಬಳೆಗಳು, ಪಟ್ಟಿಯಂತಹ ಕಟೀಸೂತ್ರ, ನೇರವಾಗಿ ಬಿಡಿಸಿರುವ ಧನಸ್ಸು ಮತ್ತು ಕೈಯ್ಯಲ್ಲಿರುವ ಪ್ರಯೋಗಚಕ್ರ–ಇವೆಲ್ಲವೂ ಶಿಲ್ಪದ ಪ್ರಾಚೀನತೆಯನ್ನು ಸೂಚಿಸುತ್ತಿದ್ದು, ಈ ಶಿಲ್ಪವು ಕ್ರಿ.ಶ. ೧೧ನೇ ಶತಮಾನದ್ದೆಂದು ದೃಢಪಡಿಸುತ್ತದೆ. ೧೦–೧೧ನೇ ಶತಮಾನದಲ್ಲಿ ಮಹಿಷಮರ್ದಿನಿಯ ಶಿಲ್ಪಗಳು ಸಾಮಾನ್ಯವಾಗಿ ಎಲ್ಲೆಡೆ ಅಷ್ಟಭುಜಗಳುಳ್ಳ ಶಿಲ್ಪವಾಗಿರುವುದು ಗಮನಾರ್ಹವಾಗಿದೆ.

ಈ ಮಹಿಷಮರ್ದಿನಿ ಶಿಲ್ಪದ ಪ್ರಭಾವಳಿಯ ಮೇಲೆ ಮೂರು ಸಾಲಿನಲ್ಲಿ ಶಾಸನ ಪಾಠವನ್ನು ಕೆತ್ತಲಾಗಿದೆ. ಈ ಶಾಸನ ಪಾಠವನ್ನು ಪ್ರೊ॥ ಶ್ರೀನಿವಾಸ್ ಪಾಡಿಗಾರ್ ಮತ್ತು ಎಸ್.ಎಸ್. ಅಂಗಡಿಯವರು ಮೊದಲಿಗೆ ಶೋಧಿಸಿ ಪ್ರಕಟಿಸಿದ್ದಾರೆ. ಅವರು ನೀಡಿರುವ ಪಾಠವು ಇಂತಿದೆ:

೧. ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಾಮಾತ್ಯ
೨. (ವಿ)ದಿಷಾಧಿಪತಿ ಸಹಸ್ರಾರ್ಜುನ ಕುಳತಿಳಕ ಅತ್ಯುಗ್ರನರಶಿರದರ್ಪಣಧ್ವಜವಿರಾಜಮಾನ
೩. ಮಾಹಿಷ್ಮಮತೀಪುರವರೇಶ್ವರ ಹೀಹಯಕುಳಾರ್ಣವ ಪೂರ್ಣರಾಜ
ನಾಳಮನ್ನಿಳಿವನಿಳಿವರ್ತಿಗಂಡಗಂಡರಾಭರಣ ಸುಭಟರಾತೀತ್ಯ
ಕೋಡಂಡ ಪಾರ್ಥಬಿರುದರಗಂಡನ್ ಅಸಹಾಯ ಸಾಹಸ ಆಂಜನೇಯ ವೀರಶ್ರೀಪವಿತ್ರ
ಗಂಡತ್ರಿನೇತ್ರನೇಕವಾಕ್ಯ ಶ್ರೀಮಾನ ಗಂಡರಾದಿತ್ಯರಸರ ಪ್ರತಿಷ್ಠೆ.

ಶಾಸನವು ಹೇಳುವಂತೆ, ಈ ಶಿಲ್ಪವನ್ನು ಪ್ರತಿಷ್ಠೆ ಮಾಡಿಸಿದ ಗಂಡರಾದಿತ್ಯರಸರ ಬಗೆಗೆ ಹೇಳುವುದಾದರೆ, ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನ ಮಾನ್ವಿ ಗ್ರಾಮದ ಬಲಕುಂಟದ ಶಾಸನವು–ಚಾಳುಕ್ಯದೊರೆ ಜಗದೇಕಮಲ್ಲನ ಮಹಾಸಾಮನ್ತನಾಗಿದ್ದ, ಮಧ್ಯದೇಶದ ಮಾಹಿಶ್ಮತೀಪುರವರೇಶ್ವರನೂ, ಏಕವಾಕ್ಯನೂ ಆದ ಮಹಾಸಾಮನ್ತ ಗಂಡರಾದಿತ್ಯನನ್ನು ಹೆಸರಿಸಿದೆ(ಕ.ವಿ.ಶಾ.ಸಂ.೨, ಮಾನ್ವಿ ೧೧). ಆದರೆ ಈ ಶಾಸನದಲ್ಲಿ ಗಂಡರಾದಿತ್ಯನ ಬಗೆಗೆ ಹೆಚ್ಚಿನ ವಿವರವಿಲ್ಲ. ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಹೊಳಲು ಗ್ರಾಮದ ಶಾಸನವೊಂದು–ಚಾಳುಕ್ಯದೊರೆ ಇಮ್ಮಡಿ ಸೋಮೇಶ್ವರ ದೇವರ ಆಳ್ವಿಕೆಯಲ್ಲಿನ ಗಂಡರಾದಿತ್ಯ ಪೊಳಲಿನ 'ನೂರಿಪ್ಪದಿಂಬರ್' (೧೨೦) ಮಹಾಜನರಿದ್ದುದನ್ನು ದಾಖಲಿಸಿದೆ. ಇಲ್ಲಿಯ ಮತ್ತೊಂದು ಶಾಸನವು ಗಂಡರಾದಿತ್ಯಪೊಳಲು ಅಗ್ರಹಾರವಾಗಿತ್ತೆಂದೂ ತಿಳಿಸಿದೆ. ಇದರಿಂದ ಚಾಳುಕ್ಯರ ಕಾಲದಲ್ಲಿದ್ದ ಮಹಾಸಾಮನ್ತನಾಗಿದ್ದ ಗಂಡರಾದಿತ್ಯನು ಹೊಳಲು ಅಗ್ರಹಾರವನ್ನು ನಿರ್ಮಿಸಿದ್ದನೆಂದು ತಿಳಿದುಬರುತ್ತದೆ. ಈ ಮಹಾಸಾಮನ್ತನೇ ಗಳಗೇಶ್ವರ ದೇವಾಲಯದಲ್ಲಿರುವ ಈ ಭವ್ಯವಾದ ಮಹಿಷಮರ್ದಿನಿ ಶಿಲ್ಪವನ್ನು ಪ್ರತಿಷ್ಠೆ ಮಾಡಿಸಿದನೆಂದು ಶಿಲ್ಪದೊಂದಿಗಿನ ಈ ಶಾಸನದಿಂದ ತಿಳಿಯುತ್ತದೆ. ಈ ಗಂಡರಾದಿತ್ಯರಸನ ಬಗೆಗೆ ಇನ್ನೂ ಹೆಚ್ಚಿನ ಅಧ್ಯಯನ ಆಗಬೇಕಾಗಿದೆ.



20

# ಚಿತ್ರದುರ್ಗ ಪಾಳೆಯಗಾರರ ಕಾಲದ ಆಂಜನೇಯ ಶಿಲ್ಪಗಳು

ಎನ್. ಶಕುಂತಲ*

ಒಂದು ಕಾಲಕ್ಕೆ ವಿಶೇಷವಾಗಿ ದಕ್ಷಿಣ ಭಾರತಕ್ಕೆ ಸೀಮಿತವಾಗಿದ್ದ ಹನುಮಂತನ ಆರಾಧನೆ ಪ್ರಸ್ತುತ ಭಾರತದಲ್ಲೆಲ್ಲಾ ಆಚರಣೆಯಲ್ಲಿದೆ. ಕನ್ನಡ ನಾಡಿನಲ್ಲಿ ವಿಶೇಷವಾಗಿ ಪೂಜೆಗೊಳ್ಳುತ್ತಿದೆ. ಕೋಟೆಕೊತ್ತಲಗಳಲ್ಲಿ ಹಾಗೂ ಬೇಟೆಗಾರರ ವಸತಿ ನೆಲೆಗಳಲ್ಲಿ ಪೂಜೆಗೊಳ್ಳುತ್ತಿದ್ದ ಈ ದೈವದ ಪ್ರಾಚೀನತೆ ಬಹಳವೇ ಇದೆ. ಜಾನಪದ ನೆಲೆಯಿಂದ ಬಂದ ಈ ದೇವತೆಯ ಆಕಾರ, ಇತಿಹಾಸ, ಸ್ವಭಾವ, ಪೂಜಾ ಪದ್ಧತಿ ಎಲ್ಲವೂ ಇದನ್ನೇ ಸೂಚಿಸುತ್ತದೆ. ನಾಡಿನ ಗುಡ್ಡಗಾಡುಗಳಲ್ಲಿ, ಕಾಡುಮೇಡುಗಳಲ್ಲಿ, ಮೂಲೆಮೂಲೆಯ ಹಳ್ಳಿಗಳಲ್ಲಿ ಹನುಮಂತನ ಸಣ್ಣಸಣ್ಣ ಗುಡಿಗಳು ಕಂಡುಬರುತ್ತವೆ. ಜೊತೆಗೆ ಗುಡಿಯಿಲ್ಲದೆ ಬಿಡಿಯಾಗಿಯೂ ಬಯಲಿನಲ್ಲಿ ನಿಂತ ಒರಟು ಮೂರ್ತಿಗಳೂ ಕಂಡುಬರುತ್ತವೆ. ಹಾಗೆಯೇ ಈ ದೇವತೆಯ ಗುಡಿಗಳು ಊರ ಹೊರಗೆ ನಿರ್ಮಿಸಿರುವುದು ಇನ್ನೂ ವಿಶೇಷ.[೧] ಸಾಮಾನ್ಯವಾಗಿ ಹನುಮಂತನ ಶಿಲ್ಪಗಳಲ್ಲಿ ಅಂಜಲಿಬದ್ಧನಾದ ಭಕ್ತವಿಗ್ರಹ ಮನೆಯಲ್ಲಿ ಪೂಜೆಗೆ ಶ್ರೇಷ್ಟವೆನ್ನಲಾಗಿದೆ. ಆದರೆ ಗುಡಿಗಳಲ್ಲಿ ವೀರಾಂಜನೆಯನ ಮೂರ್ತಿಗಳಿಗೆ ಆದರ ಹೆಚ್ಚು. ನಿಂತಿರುವ(ಸ್ಥಾನಕ), ಕುಳಿತಿರುವ(ಆಸನ), ನಡೆಯುತ್ತಿರುವ, ಓಡುತ್ತಿರುವ ಭಂಗಿಗಳಲ್ಲಿರುವಂತೆ ಮೂಡಿಸಿ, ಒಂದು ಕೈಯಲ್ಲಿ ಗಧೆ ಅಥವಾ ವೀರಾವೇಶದ ಮುದ್ರೆ, ಇನ್ನೊಂದರಲ್ಲಿ ಮರವನ್ನೋ, ಬೆಟ್ಟವನ್ನೋ ಹಿಡಿದಿರುವಂತೆ ತೋರಿಸಿರುವ ಮೂರ್ತಿಗಳು ಕಂಡುಬರುತ್ತವೆ.[೨]

ಪೂಜೆಗೊಳ್ಳುವ ಬಹುತೇಕ ಪ್ರಧಾನ ದೇವತೆಗಳಿಗಾಗಿ ದೇವಾಲಯಗಳನ್ನು ನಿರ್ಮಿಸುವುದು ವಾಡಿಕೆ. ಆದರೆ ಇಂತಹ ದೇವಾಲಯಗಳಲ್ಲಿ ಇತರ ದೇವತೆಗಳನ್ನೂ(ಪರಿವಾರ) ಆಗಮದ ವಿಧಿವಿಧಾನಗಳಿಗೆ ಅನುಸಾರವಾಗಿ ಪ್ರತಿಷ್ಠಾಪಿಸಲಾಗಿರುತ್ತದೆ. ಉದಾ: ಶಿವ ದೇವಾಲಯಗಳಲ್ಲಿ ಗರ್ಭಗುಡಿಯಲ್ಲಿ ಶಿವಲಿಂಗವಿದ್ದರೆ, ಆವರಣದಲ್ಲಿ ದೇವಿ, ಗಣೇಶ, ದಕ್ಷಿಣಾಮೂರ್ತಿ, ಭೈರವ, ಚಂಡೇಶ್ವರ, ನಾರಾಯಣ, ವೀರಭದ್ರ, ಸುಬ್ರಹ್ಮಣ್ಯ ಮುಂತಾದ ಪರಿವಾರ ದೇವತೆಗಳ ಗುಡಿಗಳನ್ನೂ ನಿರ್ಮಿಸಲಾಗಿರುತ್ತದೆ. ಹಾಗೆಯೇ ವಿಷ್ಣು ದೇವಾಲಯಗಳಾದರೆ ಹನುಮಂತ, ನವಗ್ರಹ, ಅಷ್ಟದಿಕ್ಪಾಲಕರು ಮುಂತಾದ ದೇವತೆಗಳ ಸಣ್ಣ ಆಲಯಗಳಿರುತ್ತವೆ. ಅಂದರೆ ಗರ್ಭಗುಡಿಯಲ್ಲಿರುವ ದೇವತೆ ಸ್ವಯಂ ಪ್ರಧಾನ ದೇವತೆಯೆನಿಸಿಕೊಂಡರೆ, ಪರಿವಾರ ದೇವತೆಗಳು ಪಾರ್ಶ್ವದೇವತೆಗಳೆನಿಸಿಕೊಳ್ಳುತ್ತವೆ.[೩]

ಆರ್ಯವೀರನಾದ ರಾಮನ ಪರಿವಾರದಲ್ಲಿ ಸೇರುವ ಮೊದಲೇ ಹನುಮಂತ ಸ್ವತಂತ್ರ ದೇವತೆಯಾಗಿ ಮೆರೆಯುತ್ತಿದ್ದುದುಂಟು. ಮಧ್ವಸಂಪ್ರದಾಯದಲ್ಲಿ ಹನುಮಂತನಿಗೆ ಹೆಚ್ಚಿನ ಪ್ರಾಶಸ್ತ್ಯವಿದೆ. ಪರಿಣಾಮವಾಗಿ ಹನುಮಂತನ ಪೂಜೆ ಪ್ರಚಲಿತವಾಗಿದ್ದಲ್ಲದೇ ಹನುಮಂತನ ಗುಡಿಗಳು ಕನ್ನಡ ನಾಡಿನಲ್ಲಿ ವಿಸ್ತಾರಗೊಂಡವು. ಅದರಲ್ಲೂ ಮಧ್ವಸಂಪ್ರದಾಯದಲ್ಲಿ ಬಂದ ವ್ಯಾಸರಾಯರು ತಾವು ಹೋದೆಡೆಗಳಲ್ಲೆಲ್ಲ ಹನುಮಂತನ ಮೂರ್ತಿಗಳನ್ನು ಪ್ರತಿಷ್ಠಾಪನೆ ಮಾಡಿರುವುದನ್ನು ಕಾಣಬಹುದಾಗಿದೆ. ಇವರು ವಿಜಯನಗರ ಅರಸರ ಕಾಲದಲ್ಲಿ ಅಪ್ರತಿಮ ಪಾತ್ರವನ್ನು ವಹಿಸಿದ್ದರು. ಆದರೆ ಇದರ ಪ್ರಖ್ಯಾತಿ, ಜನಪ್ರಿಯತೆಗೆ ಜಾನಪದ ನೆಲೆಯೂ ಪ್ರಮುಖ ಕಾರಣವಾಗಿದೆ ಎಂಬುದನ್ನು ಮರೆಯುವಂತಿಲ್ಲ. ಅಂದರೆ ದುಷ್ಟಶಕ್ತಿಗಳನ್ನು, ಶತ್ರುಗಳನ್ನು ದಮನ ಮಾಡುವುದು, ರೋಗ, ಪೀಡೆ, ಭಿತಿಗಳನ್ನು ಹೋಗಲಾಡಿಸುವುದು ಬೇಡಿಕೆಯನ್ನು ಈಡೇರಿಸಿ ಭಕ್ತರ ಬಯಕೆಗಳನ್ನು ತೀರಿಸುವುದು ಇದರ ಜನಪ್ರಿಯ ಆರಾಧನೆಗೆ ಕಾರಣವಾಗಿದೆ. ಹಳ್ಳಿಗಳಲ್ಲಿ ಇಂದಿಗೂ ಬೇನೆ, ಪೀಡೆ, ಕಾಟ ಮುಂತಾದವುಗಳ ಸಂಹಾರಕ್ಕೆ ಹನುಮಂತನನ್ನು ಪೂಜಿಸುವ ವಾಡಿಕೆ ಪ್ರಚಲಿತದಲ್ಲಿದೆ. ಆಲಯಗಳ ರಕ್ಷಣೆಗೆ ಯಕ್ಷರನ್ನು ನಿಲ್ಲಿಸುವ ಪದ್ಧತಿ ಮೂಡಿಬಂದಾಗ ದೇವಾಲಯದ ರಕ್ಷಣೆಗೆ ಹನುಮಂತನನ್ನು ಅಳವಡಿಸಿಕೊಂಡ ಪದ್ಧತಿ ರೂಢಿಗೆ ಬಂದಿದ್ದೆಂದು ತಿಳಿಯಲಾಗಿದೆ.[೪]

ಸಾಮಾನ್ಯವಾಗಿ ಈ ದೇವತೆ ದ್ವಿಭುಜಗಳನ್ನು ಹೊಂದಿದ್ದರೂ ಕೆಲವೊಮ್ಮೆ ಅದರ ಶೌರ್ಯ–ಸಾಹಸದ ಪ್ರತೀಕವಾಗಿ ಆರು–ಎಂಟು ಕೈಗಳನ್ನೂ ಅಳವಡಿಸಿರುವ ಶಿಲ್ಪಗಳನ್ನೂ ಕಾಣಬಹುದಾಗಿದೆ. ಪಂಚಮುಖಿ ಆಂಜನೇಯನ ಕಲ್ಪನೆ

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ದಾವಣಗೆರೆ, ಮೊ. ೯೦೩೬೨೦೮೪೯೬

ತುಂಬಾ ಪ್ರಮುಖವಾದುದು. ಈ ಶಿಲ್ಪ ಮುಂದೆ ವಾನರ ಮುಖ, ಹಿಂದೆ ಗರುಡ ಮುಖ, ಬಲಗಡೆ ಸಿಂಹ ಮುಖ, ಎಡಗಡೆ ವರಾಹ ಮುಖ, ಮೇಲುಗಡೆ ಹಯ ಮುಖಗಳನ್ನು ಹೊಂದಿರುತ್ತದೆ. ನಮಗೆ ವಿಜಯನಗರ ಪೂರ್ವದ ಹನುಮಂತನ ಶಿಲ್ಪಗಳು ಸಿಗುವುದು ವಿರಳ. ಅದರಲ್ಲೂ ಹನುಮಂತನಿಗೋಸ್ಕರವೇ ಕಟ್ಟಿದ ಗುಡಿಗಳಂತೂ ಇಲ್ಲವೆಂದೇ ಹೇಳಬಹುದು. ರಾಮಾಯಣಕ್ಕೆ ಸಂಬಂಧಿಸಿದ ಅಂಜನಾದ್ರಿ, ಮಾಲ್ಯವಂತ ಪರ್ವತ, ವಾಲಿಕಾಷ್ಟ, ಸುಗ್ರೀವನ ಗುಹೆ, ಮಾತಂಗ ಪರ್ವತ ಮುಂತಾದವುಗಳ ಹೆಸರುಗಳು ವಿಜಯನಗರದ ಕಾಲದಲ್ಲಿ ಕಂಡುಬಂದಿದ್ದು[೫] ಆಶ್ಚರ್ಯವೆನಿಸಿದರೂ, ವಾಸ್ತವವಾಗಿ ಅಧಿಕ ಸಂಖ್ಯೆಯ ಆಂಜನೇಯ ಶಿಲ್ಪಗಳು ವಿಜಯನಗರದ ಪರಿಸರದಲ್ಲಿ ಕಂಡು ಬಂದಿವೆ. ಈ ಸಾಮ್ರಾಜ್ಯಾವಧಿಯಲ್ಲಿ ಹನುಮಂತನ ಗುಡಿಗಳು ಜನಪ್ರಿಯವಾಗಿದ್ದರೂ ಸರಳವಾಗಿವೆ.

ಹನುಮಂತನನ್ನು ದೃಢಕಾಯದ ರಕ್ಷಣೆಯ ಅಭಿವ್ಯಕ್ತಿಯೆಂದು ಪರಿಗಣಿಸಿ ವಿಜಯನಗರ ಸಾಮ್ರಾಜ್ಯ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ನಿರ್ಮಿಸಿದ ಕೋಟೆಯ ಹೆಬ್ಬಾಗಿಲುಗಳ ಬಳಿಯಲ್ಲಿ ಪ್ರತಿಷ್ಠಾಪಿಸಿರುವುದನ್ನು ಕಾಣಬಹುದಾಗಿದೆ. ಆಸ್ತಿಕ ಜನರಿಗೆ ವಿಜಯನಗರ ಹನುಮಂತನು ಹುಟ್ಟಿದ ಸ್ಥಳವೆಂದೇ ಪ್ರಚಲಿತವಾಗಿದೆ.[೬] ಈ ಕಾಲದಲ್ಲಿ ಹನುಮಂತನ ಶಿಲ್ಪಗಳು ಜನಪರ ದೈವವಾಗಿ ಎಲ್ಲರನ್ನೂ ಆಕರ್ಷಿಸಿದ್ದವು. ಹಾಗಾಗಿ ಶೈವ, ವೈಷ್ಣವ, ಶಾಕ್ತಗಳ ಪಂಥದವರೆಲ್ಲರ ಆರಾಧ್ಯ ದೈವನಾಗಿದ್ದಾನೆ. ವ್ಯಾಸರಾಯರು ವಿಜಯನಗರ ಕಾಲದಲ್ಲಿ ರಾಜ್ಯಮಾನ್ಯತೆಯನ್ನು ಪಡೆದಿದ್ದರು. ಇವರು ೭೩೨ ಹನುಮಂತನ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ್ದಾರೆಂದು ತಿಳಿದುಬರುತ್ತದೆ.[೭] ಇವರು ವಿಜಯನಗರದಲ್ಲಿ ಪ್ರತಿಷ್ಠಾಪಿಸಿದ ಶಿಲ್ಪಗಳಲ್ಲಿ ಯಂತ್ರೋದ್ಧಾರಕ ಹನುಮಂತ ಪ್ರಮುಖವಾಗಿದ್ದು ಅತ್ಯಂತ ಶ್ರೇಷ್ಟ ಹಾಗೂ ವಿಶಿಷ್ಟ ಮೂರ್ತಿಯಾಗಿದೆ. ಮಾಧ್ವಯತಿ ಶ್ರೇಷ್ಟ ಹಾಗೂ ವಿಜಯನಗರ ಚಕ್ರಾಧಿಪತ್ಯದ ರಾಜಗುರುಗಳಾದ ಶ್ರೀ ವ್ಯಾಸರಾಯರು ಕ್ರಿ.ಶ. ೧೫೦೦ರ ರೌದ್ರಿ ಸಂವತ್ಸರದಲ್ಲಿ ಪ್ರತಿಷ್ಠಾಪಸಿದರು. ಆರು ಕೋನಗಳಿಂದ ಕೂಡಿದ ಇದು ಸುತ್ತ ವಲಯಾಕಾರ, ಅದರ ಸುತ್ತ ಪದ್ಮದಳ, ಮಧ್ಯೆ ಜಪಮಾಲೆ ಹಿಡಿದು ಯೋಗಾಸನಾರೂಢನಾಗಿ ಧ್ಯಾನಮಗ್ನ ಮುದ್ರೆಯಲ್ಲಿ ಆಸೀನನಾಗಿದ್ದಾನೆ. ಯಂತ್ರದ ಸುತ್ತಲೂ ಚಕ್ರಾಕಾರವಿದ್ದು, ಹೊರಬಾಗದಲ್ಲಿ ಒಂದಕ್ಕೊಂದು ಹೆಣೆದುಕೊಂಡಿರುವ ಹನ್ನೆರಡು ವಾನರ(ಕಪಿ)ಗಳನ್ನು ಚಿತ್ರಿಸಲಾಗಿದೆ. ಜೊತೆಗೆ ಯಂತ್ರದ ಮೂಲೆಗಳಲ್ಲಿ ಬೀಜಕ್ಷಾರಿ ಮಂತ್ರವಿದೆ.[೮]

ಹೀಗೆ ಕ್ರಿ.ಶ. ೧೬ನೆಯ ಶತಮಾನದಲ್ಲಿ ಪ್ರಚಲಿತದಲ್ಲಿದ್ದ ಹನುಮಂತನ ಶಿಲ್ಪಗಳನ್ನು ಕುರಿತು ವಿದೇಶಿ ಪ್ರವಾಸಿಗ ನ್ಯೂನಿಜ್‌ರವರು "ಪಗೋಡಗಳಲ್ಲಿ ಮಂಗನ ಶಿಲ್ಪಗಳಿವೆ" ಎಂದು ಅಭಿಪ್ರಾಯಪಟ್ಟಿದ್ದಾರೆ.[೯] ಹಿಂದೂ ಧಾರ್ಮಿಕ ಪದ್ಧತಿಯಲ್ಲಿ ಹನುಮಂತನನ್ನು ದೇವಾನುದೇವತೆಗಳ ರಕ್ಷಕನೆಂದು, ವಿಷ್ಣುರೂಪವಾದ ರಾಮನ ಬಂಟನೆಂದೂ ಚಿತ್ರಿಸಲಾಗಿದೆ. ಹಾಗೆಯೇ ಕುಸ್ತಿಪಟುಗಳ ದೇವನಾಗಿ, ಗ್ರಾಮದ ಸರಹದ್ದಿನ ದೈವವಾಗಿ, ಬೇಟೆಗಾರರ ಮತ್ತು ಸೈನಿಕರ ಶೌರ್ಯದ ಸಂಕೇತವಾಗಿ ಆರಾಧನೆಗೊಳ್ಳುತ್ತಿದ್ದಾನೆ. ತಮಿಳು ರಾಮಾಯಣದಲ್ಲಿ ವಾಯು ಮತ್ತು ರುದ್ರರ ಅಂಶವೆಂದು ಪರಿಗಣಿಸಿದರೆ, ವಾಲ್ಮೀಕಿ ರಾಮಾಯಣದಲ್ಲಿ ವಾಯುವಿನ ಒಂದಂಶವೆಂದು ಭಾವಿಸಲಾಗಿದೆ.[೧೦]

ವಿಜಯನಗರ ಪರಿಸರದಂತೆ ಅವರ ಆಡಳಿತಕ್ಕೆ ಒಳಪಟ್ಟ ಚಿತ್ರದುರ್ಗ ಪರಿಸರದಲ್ಲೂ ಆಂಜನೇಯ ಸ್ವಾಮಿಯ ಆರಾಧನೆ ಅತ್ಯಂತ ಜನಪ್ರಿಯವಾಗಿತ್ತು. ವಿಜಯನಗರದಲ್ಲಿ ಆಂಜನೇಯ ಶಿಲ್ಪಗಳು ಅಧಿಕ ಸಂಖ್ಯೆಯಲ್ಲಿ ದೊರೆತಿರುವಂತೆ ಇಲ್ಲಿಯೂ ಅಧಿಕ ಸಂಖ್ಯೆಯಲ್ಲಿ ಕಂಡುಬಂದಿವೆ. ಆದರೆ ರಾಜಧಾನಿ ವಿಜಯನಗರ ಪರಿಸರದಲ್ಲಿ ಆಂಜನೇಯ ಶಿಲ್ಪಗಳು ಹೆಚ್ಚಾಗಿ ಬಯಲುಗಳಲ್ಲಿ ಬಿಡಿಗುಂಡುಗಳಲ್ಲಿ ಕಂಡುಬಂದರೆ, ಚಿತ್ರದುರ್ಗ ಪರಿಸರದಲ್ಲಿ ಪ್ರತ್ಯೇಕ ಆಲಯಗಳನ್ನೇ ನಿರ್ಮಿಸಿರುವುದು ವಿಶೇಷವಾಗಿದೆ. ಇದೊಂದು ಈ ಭಾಗದ ಗುಣಾತ್ಮಕ ಬೆಳವಣಿಗೆಯಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಮುಖವಾಗಿ ತಾಳ್ಯ, ಹಿರಿಯೂರು, ಕಣಕುಪ್ಪೆ, ಭರಮಸಾಗರ, ರೆಡ್ಡಿಹಳ್ಳಿ, ಪಿಳ್ಳೇಕೇರನಹಳ್ಳಿ, ಹುಲ್ಲೂರು, ನೀರ್ಥಡಿ, ಚನ್ನಮ್ಮನಾಗತಿಹಳ್ಳಿ, ಬಿಳಿಚೋಡು, ಇಸಾಮುದ್ರ, ಕಡ್ಲೆಗುದ್ದು, ನೂಲೆನೂರು, ರಾಮೇನಹಳ್ಳಿ, ನಂದಿಹಳ್ಳಿ, ಗುಂಟೂರು, ಮಾನಂಗಿ, ಹರ್ತಿಕೋಟೆ, ಚಿತ್ರದುರ್ಗ ಬೆಟ್ಟ, ಚಿತ್ರದುರ್ಗ ನಗರ (ಪೇಟೆ ರಂಗಯ್ಯನ ಬಾಗಿಲ ಹತ್ತಿರ) ಮುಂತಾದೆಡೆಗಳಲ್ಲಿ ವಿಜಯನಗರ ಹಾಗೂ ವಿಜಯನಗರೋತ್ತರ ಕಾಲದ ಆಂಜನೇಯಸ್ವಾಮಿಯ ದೇವಾಲಯಗಳು ಕಂಡುಬರುತ್ತವೆ. ಇವುಗಳನ್ನು ಹೊರತಾಗಿಯೂ ಇನ್ನೂ ಅನೇಕ ಹಳ್ಳಿಗಳಲ್ಲಿ ಆಂಜನೇಯಸ್ವಾಮಿಯ ದೇವಾಲಯಗಳಿವೆ. ಈ ದೇವಾಲಯಗಳು ಕಲೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ ಪ್ರಮುಖವಾಗಿವೆ. ಇವುಗಳಲ್ಲಿ ಹೆಚ್ಚಿನ ದೇವಾಲಯಗಳು (ಹುಲ್ಲೂರು, ತಾಳ್ಯ, ಚಿತ್ರಹಳ್ಳಿ, ಗುಂಟೂರು, ನಂದಿಹಳ್ಳಿ, ಕಡ್ಲೆಗುದ್ದು, ಬಿಳಿಚೋಡು) ಗರ್ಭಗೃಹ, ಅಂತರಾಳ, ಸಭಾಮಂಟಪಗಳನ್ನು ಹೊಂದಿದ್ದರೆ, ಕೆಲವು ದೇವಾಲಯಗಳು ಮುಖ್ಯ ದೇವಾಲಯದ ಮುಂದೆ ಕೇವಲ ಗರ್ಭಗುಡಿಯನ್ನು ಮಾತ್ರ (ಹೊರಕೆರೆದೇವರಪುರ, ರಾಮೇನಹಳ್ಳಿ, ರೆಡ್ಡಿಹಳ್ಳಿ,

ನೀರ್ಥಡಿ, ಚನ್ನಮ್ಮನಾಗತಿಹಳ್ಳಿ) ಹೊಂದಿವೆ. ಇನ್ನೂ ಕೆಲವು ದೇವಾಲಯಗಳಲ್ಲಿ ಭಿತ್ತಿಗಳ ಹಾಗೂ ಸ್ತಂಭಗಳ ಮೇಲೆ ಉಬ್ಬುಶಿಲ್ಪಗಳಾಗಿ ನೋಡಬಹುದು.

ಚಿತ್ರದುರ್ಗ ಜಿಲ್ಲೆಯಲ್ಲಿ ದೇವಾಯಗಳಲ್ಲಿ ಕಂಡುಬರುವ ಆಂಜನೇಯನ ಶಿಲ್ಪಗಳೆಲ್ಲಾ ೪ ರಿಂದ ೭ ಅಡಿ ಎತ್ತರದವಾಗಿವೆ. ಸಾಮಾನ್ಯವಾಗಿ ಇವೆಲ್ಲಾ ವೀರಾಂಜನೇಯನ ಶಿಲ್ಪಗಳಾಗಿವೆ. ಇವು ವಕ್ರಭಂಗಿಯಲ್ಲಿ ಕಾಲುಗಳನ್ನು ಅಗಲಿಸಿ ನಿಂತಿದ್ದು, ಬಲಗೈ ಚಪೇಟ (ಹೊಡೆಯುವ ಭಂಗಿ) ಮುದ್ರೆಯಲ್ಲಿರುವ ಶಿಲ್ಪಗಳಾಗಿವೆ. ಇದು ಮುಳಬಾಗಿಲಿನಲ್ಲಿರುವ ವೀರಾಂಜನೇಯನ ಮೂರ್ತಿಯನ್ನು ನೆನಪಿಸುತ್ತದೆ. ಇದನ್ನು ವ್ಯಾಸರಾಯರು ಕ್ರಿ.ಶ. ೧೫ನೇ ಶತಮಾನದಲ್ಲಿ ಪ್ರತಿಷ್ಠಾಪಿಸಿದ್ದರೆಂದು ತಿಳಿದುಬರುತ್ತದೆ.[೧೧] ಇಂತಹ ಶಿಲ್ಪಗಳನ್ನು ರಾಮೇನಹಳ್ಳಿ, ರೆಡ್ಡಿಹಳ್ಳಿ, ಹುಲ್ಲೂರು, ಹೊಳಲ್ಕೆರೆ, ನೀರ್ಥಡಿ, ಕಣಕುಪ್ಪೆ, ಬಹದ್ದೂರ್‌ಘಟ್ಟ, ಹಿರಿಯೂರು, ಭರಮಸಾಗರ, ಚಿತ್ರಹಳ್ಳಿ, ತಾಳ್ಯ, ಹೊರಕೆರೆದೇವರಪುರಗಳಲ್ಲಿ ಕಾಣಬಹುದಾಗಿದೆ. ಎಡಗೈಯಲ್ಲಿ ಸೌಗಂಧಿಕ ಪುಷ್ಪ ಇಲ್ಲವೇ ಬೆಟ್ಟವನ್ನು ಹೊಂದಿರುತ್ತದೆ. ಇದು ವೀರತ್ವದ ಹಾಗೂ ಶೌರ್ಯದ ಸಂಕೇತವಾಗಿದ್ದು, ಈ ರೀತಿಯ ರಚನೆ ರಾಮರಾವಣರ ಯುದ್ಧದಲ್ಲಿ ಲಕ್ಷ್ಮಣ ಮೂರ್ಛೆಗೊಂಡಾಗ ಸಂಜೀವಿನಿ ಮಾಲಿಕೆಯನ್ನು ತರಲು ಹೊರಟ ಹನುಮಂತನಿಗೆ ಮೂಲಿಕೆಯನ್ನು ಗುರುತಿಸಲು ಸಾಧ್ಯವಾಗದೆ ಇಡೀ ಬೆಟ್ಟವನ್ನೇ ಬುಡಸಮೇತ ಕಿತ್ತು ಲಂಕೆಗೆ ತಂದ ಸಂದರ್ಭವನ್ನು ನೆನಪಿಸುತ್ತದೆ.[೧೨] ಇನ್ನೂ ಕೆಲವು ಶಿಲ್ಪಗಳು ಕಾಲಹತ್ತಿರ ಅಕ್ಷಯಕುಮಾರನ ಶಿಲ್ಪವನ್ನು (ರೆಡ್ಡಿಹಳ್ಳಿ, ಭರಮಸಾಗರ, ಬಹದ್ದೂರ್‌ಘಟ್ಟ) ಹೊಂದಿದ್ದರೆ, ಬಾಲವನ್ನು ತಲೆ ಮೇಲ್ಭಾಗದಲ್ಲಿ ಎತ್ತಿ ಹಿಡಿದಿರುವ (ಹೊರಕೆರೆದೇವರಪುರ), ತಲೆಯಕೂದಲನ್ನು ಹಿಂದಕ್ಕೆ ಬಾಚಿ ಜುಟ್ಟನ್ನು ಕಟ್ಟಿರುವ (ಹೊಳಲ್ಕೆರೆಯ ಬಯಲು ಗಣಪತಿ ದೇವಾಲಯದಲ್ಲಿರುವ ಶ್ರೀ ವ್ಯಾಸರಾಯರ ಆಂಜನೇಯ ಶಿಲ್ಪ) ವಿವಿಧ ಭಂಗಿಯ ಶಿಲ್ಪಗಳೂ ಇವೆ.

ಸಾಮಾನ್ಯವಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ದೊರೆತಿರುವ ಈ ಎಲ್ಲಾ ಶಿಲ್ಪಗಳು ಕೊರಳಹಾರ, ಭುಜಹಾರ, ತೋಳ್ಬಂದಿ, ಮುಂಗೈಕಡಗ, ಹಸ್ತದ ಮೇಲೆ ಹಸ್ತದ ಸರ, ಯಜ್ಞೋಪವೀತ, ಉಪವೀತ, ಕಟೀಬಂಧಿ, ವೈಜಯಂತಿಹಾರ, ಕಾಲ್ಗಡಗ ಹಾಗೂ ಪಾದಸರಗಳನ್ನು ಹೊಂದಿವೆ.[೧೩] ಸೊಂಟದಲ್ಲಿ ಲಂಗೋಟಿಯಿದ್ದು ಅದಕ್ಕೆ ಚೂರಿಯನ್ನು ಸಿಕ್ಕಿಸಲಾಗಿದೆ. ಇವು ಸಾಮಾನ್ಯ ಲಕ್ಷಣಗಳಾದರೆ ರೆಡ್ಡಿಹಳ್ಳಿಯಲ್ಲಿ ಲಂಗೋಟಿ ಬದಲಿಗೆ ದೋತಿಯನ್ನು ತೋರಿಸಿರುವುದು (ರಾಜಸ್ತಾನದ ದಾರು ಶಿಲ್ಪದಂತೆ)[೧೪] ಹೊರೆಕೆರೆದೇವರಪುರದಲ್ಲಿ ವೈಜಯಂತಿ ಹಾರವನ್ನು ವಸ್ತ್ರದಂತೆ ತೋರಿಸಿ ಅದಕ್ಕೆ ಅದರ ಎರಡೂ ತುದಿಗಳನ್ನು ಕೆಳಗೆ ಗಂಟು ಹಾಕಿರುವುದು, ಮತ್ತು ಪ್ರಭಾವಳಿಯಲ್ಲಿ ಆಂಜನೇಯನ ಸಾಹಸದ ದೃಶ್ಯಗಳನ್ನು ತೋರಿಸಿರುವುದು, ಬಹದ್ದೂರ್‌ಘಟ್ಟದಲ್ಲಿ ಆಂಜನೇಯನ ಎರಡೂ ಕಾಲುಗಳ ಮಧ್ಯ ಅಕ್ಷಯಕುಮಾರನನ್ನು ಧೀರ್ಘದಂಡ ನಮಸ್ಕಾರ ಮಾಡುವಂತೆ ತೋರಿಸಿರುವುದು, ವೈಜಯಂತಿಹಾರದ ಕೆಳಗೆ ದೊಡ್ಡ ಪದಕವನ್ನು ತೋರಿಸಿರುವುದು, ಹುಲ್ಲೂರಿನಲ್ಲಿ ಅಕ್ಷಯಕುಮಾರನನ್ನು ಖಡ್ಗ ಮತ್ತು ಡಾಲು ಹಿಡಿದಂತೆ ತೋರಿಸಿರುವುದು, ಚಿತ್ರಹಳ್ಳಿ, ನೀರ್ಥಡಿ, ರಾಮೇನಹಳ್ಳಿ, ಹೊರಕೆರೆದೇವರಪುರಗಳಲ್ಲಿ ಬಾಲದಲ್ಲಿ ಘಂಟೆ ತೋರಿಸಿರುವುದು, ತಾಳ್ಯದಲ್ಲಿ ಅವನ ಜೀವನದ ದೃಶ್ಯಗಳನ್ನು ಚಿತ್ರಿಸಿರುವುದು ಮುಂತಾದ ಲಕ್ಷಣಗಳು ಕಂಡುಬರುತ್ತವೆ. ವ್ಯಾಸರಾಯರ ಪ್ರತಿಷ್ಠಾಪನೆಯಲ್ಲಿ ಆಂಜನೇಯನಿಗೆ ಬಾಲದಲ್ಲಿ ಗಂಟೆ ಮತ್ತು ಹಿಂದೆ ಜುಟ್ಟು ಇರುತ್ತದೆ.[೧೫]

ಹೀಗೆ ವೀರಭದ್ರನ ಒಂದು ಅವತಾರವಾಗಿ ಹನುಮಂತನ ಪ್ರತಿಷ್ಠಾಪನೆ ರೂಢಿಗೆ ಬಂತು. ಇಬ್ಬರೂ ವೀರತ್ವದ ಪುರುಷರೆಂದು ಅಭಿಪ್ರಾಯಪಡಲಾಗಿದೆ. ಸ್ಕಂದಪುರಾಣದ ಪ್ರಕಾರ ಹನುಮಂತ ವೀರಭದ್ರನ ಭಕ್ತ, ಮೂಡಲಪಾಯ ಬಯಲಾಟದಲ್ಲಿ "ಹನುಮಂತನ ಲಿಂಗಧಾರಣ ಪ್ರಸಂಗ"ದಲ್ಲಿ ಹನುಮಂತ ವೀರಭದ್ರನಿಂದ ಲಿಂಗಧಾರಣ ಧೀಕ್ಷೆಯನ್ನು ಪಡೆದುಕೊಂಡನೆಂಬ ಉಲ್ಲೇಖವಿದೆ. ಈ ಕತೆಯ ಸಂಕೇತವಾಗಿ ಹನುಮಂತ ಶಿವ ಮತ್ತು ಶ್ರೀರಾಮನನ್ನು ತನ್ನ ಶಿವಭಕ್ತಿಯ ಶಕ್ತಿಯಿಂದ ಸೋಲಿಸಿದ ಎಂಬ ವಿಚಾರವಿದ್ದು, ಇದು ಮಹಾಭಾರತ, ಉತ್ತರ ರಾಮಾಯಣ, ಮಾರುತಿ ಭಕ್ತಿ ದರ್ಪಣ, ಲಿಂಗಧಾರಣ ಚಂದ್ರಿಕೆ, ವೀರಭದ್ರ ವಚನ ಮುಂತಾದ ಕೃತಿಗಳಲ್ಲಿ ಉಲ್ಲೇಖವಾಗಿದೆ.[೧೬]



## ಅಡಿಟಿಪ್ಪಣಿಗಳು

೧. ರಾಮಚಂದ್ರರಾವ್ ಎಸ್.ಕೆ., ೧೯೭೫; "ಮೂರ್ತಿಶಿಲ್ಪದ ನೆಲೆ–ಹಿನ್ನೆಲೆ", ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಪು. ೩೨೩.

೨. ಅದೇ ಪು. ೩೨೬.

೩. ಅದೇ, ಪು. ೧೮೯.

೪. ಅದೇ, ಪು. ೩೨೪.

೫. ಬಾಲಸುಬ್ರಮಣ್ಯ, ೨೦೦೦; "ವಿಜಯನಗರದ ಹನುಮಂತನ ಶಿಲ್ಪಗಳು", ವಿಜಯನಗರ ಅಧ್ಯಯನ, ಸಂ.೫, ಪ್ರೊ. ಎಂ.ವಿ. ಕೃಷ್ಣಪ್ಪ ಮತ್ತು ಚನ್ನಬಸಪ್ಪ ಎಸ್. ಪಾಟೀಲ (ಸಂ), ಪು. ೧೯.

೬. ಅದೇ ಪು. ೧೯.

೭. ಬಿ. ವೆಂಕೋಬರಾವ್ "ಇನ್‌ಟ್ರೊಡಕ್ಷನ್ ಟು ವ್ಯಾಯೋಗಿ ಚರಿತಮ್, ದಿ ಲೈಫ್ ಆಫ್ ವ್ಯಾಸರಾಯ", ಪು. ೧೪–೧೫.

೮. ಅದೇ, ಪು. ೧೯.

೯. ರಾಬರ್ಟ್‌ಸಿವೆಲ್ "ಎ ಫರ್‌ಗಟನ್ ಎಂಪೈರ್", ಪು. ೩೯೦.

೧೦. ಬಾಲಸುಬ್ರಮಣ್ಯ, ೨೦೦೦; "ವಿಜಯನಗರದ ಹನುಮಂತನ ಶಿಲ್ಪಗಳು", ಪೂರ್ವೋಕ್ತ, ಪು. ೧೯.

೧೧. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು. ೩೨೫.

೧೨. ಅದೇ, ಪು. ೩೨೬.

೧೩. ಡಾ.ಶಕುಂತಲ ಎನ್, ೨೦೦೯; "ಚಿತ್ರದುರ್ಗ ಪಾಳೆಯಗಾರರ ಕಾಲದ ಕಲೆ ಮತ್ತು ವಾಸ್ತುಶಿಲ್ಪ", ಪ್ರಕಟಿತ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪು. ೨೪೨.

೧೪. ಅದೇ ಪು. ೩೨೫.

೧೫. ಬಿ. ವೆಂಕೋಬರಾವ್ "ಇನ್‌ಟ್ರೊಡಕ್ಷನ್ ಟು ವ್ಯಾಯೋಗಿ ಚರಿತಮ್, ದಿ ಲೈಫ್ ಆಫ್ ವ್ಯಾಸರಾಯ", ಪು. ೧೪–೧೫.

೧೬. ಸೋಮಶೇಖರ ಇಮ್ರಾಪುರ, ೧೯೮೬; "ಹನುಮಂತನ ಲಿಂಗಧಾರಣ ಮಾಮಿಡಿ" ಭದ್ರಾಂಕ–೨, ಶ್ರೀ ಜಚನಿ ಅಧ್ಯಯನ.

# ಹೊಳಲು ಗ್ರಾಮದ ಅನಂತಶಯನ ಶಿಲ್ಪದ ವಿಶಿಷ್ಟತೆ

ಪಿ. ವೀಣಾ*

**ಕರ್ನಾಟಕದ** ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಹೊಳಲು ಗ್ರಾಮ ಇತಿಹಾಸದ ವಿವಿಧ ಕಾಲಘಟ್ಟಗಳಲ್ಲಿ ಕದಂಬ, ಚಾಲುಕ್ಯ, ಹೊಯ್ಸಳ, ಉಚ್ಚಂಗಿಯ ಪಾಂಡ್ಯ ಹಾಗೂ ವಿಜಯನಗರದ ಅರಸರ ಅಧೀನ ಪಾಳೆಯಗಾರರ ಆಳ್ವಿಕೆಗೊಳಪಟ್ಟ ಪ್ರದೇಶ. ಈ ಹೊಳಲು ಮುಖ್ಯ ಅಗ್ರಹಾರ ನೆಲೆಯಾಗಿದ್ದಿತೆಂಬುದಕ್ಕೆ ಶಾಸನಾಧಾರಗಳಿದ್ದು, 'ಗಂಡರಾದಿತ್ಯನ ಪೊಳಲು' ಎಂಬ ವಿಶೇಷಣದಿಂದಲೇ ಶಾಸನೋಕ್ತವಾಗಿದೆ. ಕಲ್ಯಾಣಿ ಚಾಲುಕ್ಯ ಮತ್ತು ಹೊಯ್ಸಳರ ಕಾಲೀನ ಮೂರ್ತಿ ಶಿಲ್ಪ ಮತ್ತು ಶಾಸನೀಯ ಕುರುಹುಗಳುಳ್ಳ ಈ ಹೊಳಲು ಗ್ರಾಮದಲ್ಲಿ ವಿಶೇಷವಾದ 'ಅನಂತಶಯನ ಮೂರ್ತಿ' ಶಿಲ್ಪವಿದ್ದು, ಅದರ ಭವ್ಯತೆಯ ಕಾರಣವಾಗಿ ಪ್ರಖ್ಯಾತವಾಗಿದೆ.

**ಅನಂತಶಯನ ಶಿಲ್ಪ:** ಹೊಳಲುವಿನಲ್ಲಿ ಪ್ರತಿಷ್ಠಾಪಿತ ಅನಂತಶಯನ ಶಿಲ್ಪವು ಶಯನಾವಸ್ಥೆಯಲ್ಲಿರುವ ವಿಷ್ಣುವಿನ ಏಕಶಿಲಾ ಶಿಲ್ಪವಾಗಿದ್ದು, ಸರಿಸುಮಾರು ೧೨ ಅಡಿ ಉದ್ದ, ೪ ಅಡಿ ಅಗಲ ಮತ್ತು ೨ ಅಡಿ ಎತ್ತರವಾಗಿದೆ. ಪ್ರಾಕೃತಿಕವಾಗಿ ಅಪರೂಪದ ಸಾಲಿಗ್ರಾಮ ಶಿಲೆಯೆಂದು ಕರೆಯಲಾಗುವ 'ಕ್ಲೋರೈಟ್ ಶಿಶ್ಟ್' ಅಥವಾ 'ಪಚ್ಚೆ ಪದರಶಿಲೆ'ಯಲ್ಲಿ ನಿರ್ಮಿಸಲಾಗಿದೆ. ಶಿಲ್ಪದ ಪೂರ್ಣ ಶರೀರವು ಆದಿಶೇಷನ ಮೇಲೆ ಅಂಗಾತವಾಗಿ ಪವಡಿಸಿದಂತೆ ರಚಿತವಾಗಿದೆ. ಕಿರೀಟ ಮುಕುಟಧಾರಿಯಾದ ಅನಂತಶಯನನ ಶಿರದ ಹಿಂಭಾಗದಲ್ಲಿ ಆದಿಶೇಷನ ಪಂಚ ಫಣಿಗಳನ್ನು ಪ್ರಭಾವಳಿಯಂತೆ ರಚಿಸಲಾಗಿದೆ. ಈ ಪಂಚ ಫಣಿಗಳ ಪ್ರಭಾವಳಿ ಮತ್ತು ಅನಂತಶಯನನ ಶಿರದ ನಡುವೆ ಫಣಿ ಪ್ರಭಾವಳಿಯ ಮಧ್ಯಭಾಗದಲ್ಲಿ ಕೆತ್ತಲ್ಪಟ್ಟ ವೃತ್ತಾಕಾರದ ಮೆತ್ತೆಯು ಶಯನಸ್ಥ ಅನಂತಶಯನನ ಶಿರವು ಎತ್ತಿ ತೋರುವಂತೆ ರಚಿಸಲ್ಪಟ್ಟಿದೆ. ಹಿಂದಿರುವ ಲಂಬಸಾಲಿನಿಂದ ಅನುಸರಿಸಲ್ಪಡುವಂತೆ ಪ್ರಧಾನ ಮೂರ್ತಿಯನ್ನು ಸುತ್ತುವರಿದಿರುವ ವಿಸ್ತಾರವಾದ ಪೀಠ ಪ್ರರೂಪವು ಮುಂಭಾಗದಿಂದ ಒಂದು ಸುತ್ತಿನ ಸರ್ಪದಿಂದ ಅನಂತನ ಶಯನಸ್ಥಲ ಆವೃತವಾಗಿರುವಂತೆ ಭಾಸವಾಗುವ ತೆರನಾಗಿ ಕೆತ್ತಲ್ಪಟ್ಟಿದೆ. ಚತುರ್ಭುಜಧಾರಿಯಾದ ಈ ಶಿಲ್ಪದ ಮೇಲಿನ ಬಲಗೈಯು ಶಯನಿತ ಶಿರಕ್ಕೆ ಆಸರೆಯಾಗಿರುವಂತೆಯೂ, ಕೆಳಗಿನ ಬಲಗೈ ಅಭಯ ಮುದ್ರೆಯಲ್ಲಿರುವಂತೆಯೂ, ಮೇಲಿನ ಎಡಗೈ ಶಂಖವನ್ನು ಹಿಡಿದಿರುವಂತೆಯೂ, ಕೆಳಗಿನ ಎಡಗೈ ಕಟೀಹಸ್ತವಾಗಿರುವಂತೆಯೂ ರಚಿತವಾಗಿದೆ. ಸರ್ವದಾ ವಿಶ್ವದ ಶ್ರೇಷ್ಠ ಸೌಂದರ್ಯ ಮತ್ತು ಸ್ಫೂರ್ತಿ ಅನಾವರಣಗೊಳ್ಳುವಂತೆಯೇ ರಚಿಸಲ್ಪಡುವ ವಿಷ್ಣುವಿನ ಲಕ್ಷಣಗಳು ಸ್ಫುರಿಸಲ್ಪಡುವಂತೆ ಈ ಅನಂತಶಯನ ಶಿಲ್ಪವು ಪೀತಾಂಬರಧಾರಿಯಾಗಿ, ಹರವು ಹೊಂದಿದ ಹೃನ್ಮಂಡಲವನ್ನೂ, ನೀಳ ಮತ್ತು ಬಲಿಷ್ಠ ತೋಳುಗಳನ್ನು, ಚಾಚಿದ ನೇರ ಭಂಗಿಯ ಕಾಲುಗಳನ್ನೂ ಹೊಂದಿದ್ದು, ಪಾದಗಳು ಪದ್ಮ ಪೀಠದಲ್ಲಿರುವಂತೆ ರಚಿತವಾಗಿವೆ. ಪ್ರಮಾಣಬದ್ಧ ಅಂಗಸೌಷ್ಠವ ಮತ್ತು ಮುಖಾರವಿಂದದ ಅದ್ವಿತೀಯ ಸೌಂದರ್ಯದೊಂದಿಗೆ ಆಕರ್ಷಕ ಹಾಗೂ ಸುಮನೋಹರವಾಗಿದೆ. ಈ ಶಿಲ್ಪವು ಸಕಲ ಸಮೃದ್ಧ ಸರ್ವಾಲಂಕಾರಭೂಷಿತವಾಗಿರುವಂತೆ ಕಿವಿಗಳಲ್ಲಿ ಮಕರ ಮಂಡಲವನ್ನೂ, ಕೊರಳಿನಲ್ಲಿ ಕಂಠಿಕೆ ಮತ್ತು ಕೊರಳ ಹಾರಗಳನ್ನೂ, ತೋಳು ಬಂಧಿ, ಮಣಿಕಟ್ಟು, ಕಟಿ ಬಂಧ ಮತ್ತು ಕಾಲಂದುಗೆಗಳ ಅಲಂಕರಣವನ್ನು ಹಾಗೂ ಮೂರು ಎಳೆಗಳುಳ್ಳ ಯಜ್ಞೋಪವೀತವನ್ನು ಹೊಂದಿ, ವಿನ್ಯಾಸದ ಉತ್ಕೃಷ್ಟತೆ ಮತ್ತು ಅಲಂಕರಣದ ಸಮೃದ್ಧತೆಯೊಂದಿಗೆ ಅದ್ಭುತವಾಗಿ ಒಡಮೂಡಿದ್ದು ವಿಶಿಷ್ಠ ಐತಿಹಾಸಿಕ ಮತ್ತು ಧಾರ್ಮಿಕ ಮಹತ್ವವನ್ನು ಹೊಂದಿದೆ. ಪರಿವಾರರಾಹಿತ್ಯವಾಗಿ ರಚಿತವಾಗಿರುವ ಈ ಶಿಲ್ಪದೊಟ್ಟಿಗೆ ನಾಭಿಯ ಬ್ರಹ್ಮನಾಗಲೀ, ಪತ್ನಿಯರಾದ ಶ್ರೀದೇವಿ ಇಲ್ಲವೇ ಭೂದೇವಿಯರ ಶಿಲ್ಪವಾಗಲೀ ಇಲ್ಲ. ಆದರೆ ಪ್ರತ್ಯೇಕವಾಗಿದ್ದ ಅನಂತಶಯನ, ಬ್ರಹ್ಮ ಮತ್ತು ಲಕ್ಷ್ಮೀದೇವಿಯರ ಮೂರ್ತಿಗಳನ್ನು ಒಂದೇ ದೇಗುಲದಲ್ಲಿರುವಂತೆ, ಈಗ ಅಧಿಸ್ಥಾಪಿಸಲ್ಪಟ್ಟಿರುವುದು ಔಚಿತ್ಯಪೂರ್ಣವೆನಿಸುತ್ತದೆ.

**ನಿರ್ಮಾಣದ ಕಾಲ ಮತ್ತು ಕರ್ತೃ:** ಈ ಅನಂತಶಯನ ಮೂರ್ತಿಯ ನಿರ್ಮಾಣದ ಕಾಲ ಮತ್ತು ಕರ್ತೃವಿನ ಕುರಿತಾಗಿ ವಿವಿಧಾಭಿಪ್ರಾಯಗಳು ಮತ್ತು ಕುತೂಹಲಕಾರಿ ಮಾಹಿತಿಗಳಿವೆ.

* ಸಂಶೋಧನಾರ್ಥಿ, ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನ ಸಹ್ಯಾದ್ರಿ, ಶಂಕರಘಟ್ಟ-೫೭೭೪೫೧, ಶಿವಮೊಗ್ಗ ಜಿಲ್ಲೆ, ಮೊ. ೯೪೪೬೦೩೩೬೧೪

‘ಹಂಪಿಯ ದೇವಾಲಯದಲ್ಲಿ ಪ್ರತಿಷ್ಠಾಪನೆಯಾಗಬೇಕಿದ್ದ ಬೃಹತ್ ಅನಂತಪದ್ಮನಾಭನ ಮೂರ್ತಿ ಪೂಜೆಗೊಳ್ಳುತ್ತಿರುವುದು ಹೊಳಲು ಕ್ಷೇತ್ರದಲ್ಲಿ’ ಎಂಬ ಮೌಖಿಕ ಪರಂಪರೆಯಿದೆ ಹಾಗೂ ಅನೇಕ ಆಕರ ಗ್ರಂಥಗಳಲ್ಲೂ ಈ ಉಲ್ಲೇಖವಿದೆ. “ಹೊಸಪೇಟೆ ಮಾರ್ಗದಲ್ಲಿ ವಿಜಯನಗರದ ಪ್ರತಿಷ್ಠಿತ ದೊರೆ ಕೃಷ್ಣದೇವರಾಯ ಅನಂತ ಪದ್ಮನಾಭ ದೇವಾಲಯ ನಿರ್ಮಿಸಿದ್ದು, ಅದರ ಗರ್ಭಗೃಹ ಬರಿದಾಗಿದೆ, ಅಲ್ಲಿದ್ದ ವಿಗ್ರಹ ಅಲ್ಲಿಂದ ದೂರದಲ್ಲಿರುವ ‘ಹೊಳಲು’ ಗ್ರಾಮದಲ್ಲಿದೆ”- ಎಂದು ಹಂಪಿಯ ಕುರಿತು ಕನ್ನಡದಲ್ಲಿ ಪ್ರಕಟವಾಗಿರುವ ಮೊದಲ ಮಾರ್ಗದರ್ಶಿ ‘ಜೀರ್ಣ ವಿಜಯನಗರ ದರ್ಶನಂ’ ಕೃತಿಯಲ್ಲಿ ಲೇಖಕ ರಾಮಸ್ವಾಮಿ ಅಯ್ಯಂಗಾರ್‌ರವರು ಉಲ್ಲೇಖಿಸಿದ್ದಾರೆ. ಈ ಉಲ್ಲೇಖ ಶ್ರೀಕೃಷ್ಣದೇವರಾಯನು ಸಣ್ಣ ಪ್ರಾಯದಲ್ಲೇ ತೀರಿಹೋದ ತನ್ನ ಮಗ ತಿರುಮಲನ ನೆನಪಿನಲ್ಲಿ ಸಾ.ಶ. ೧೫೨೪ರಲ್ಲಿ ನಿರ್ಮಿಸಿದ ತಿರುಮಲಾಪುರದ ಭವ್ಯ ಅನಂತಶಯನ ದೇಗುಲವನ್ನು ಕುರಿತುದಾಗಿದೆ. ಈ ದೇವಾಲಯದಲ್ಲಿ ಪ್ರತಿಷ್ಠಾಪಿಸಲು ಹೊಳಲಿನಲ್ಲಿ ನಿರ್ಮಿಸಲಾಗುತ್ತಿದ್ದ ಅನಂತ ಪದ್ಮನಾಭನ ಮೂರ್ತಿಯನ್ನು ಹಂಪೆಗೆ ತರಲಾಗದೇ ಹೊಳಲಿನಲ್ಲಿಯೇ ಉಳಿದಿದ್ದರಿಂದ ದೇವರ ಪ್ರತಿಷ್ಠಾಪನೆಯೇ ಆಗಲಿಲ್ಲವೆನ್ನುವುದು ಒಂದು ವಾದವಾದರೆ, ವಿಜಯನಗರದ ಪತನದ ವೇಳೆ ಈ ಅನಂತಶಯನ ದೇಗುಲದಲ್ಲಿದ್ದ ಅನಂತಶಯನ ಮೂರ್ತಿಯನ್ನು ಹೊಳಲು ಗ್ರಾಮದ ದೇವಾಲಯವೊಂದರಲ್ಲಿ ಸಾಗಿಸಿ ಸುರಕ್ಷಿತವಾಗಿ ಇರಿಸಲಾಗಿದ್ದಿತೆಂಬುದು ಇನ್ನೊಂದು ವಾದ. ಆದರೆ ಹಂಪೆಯಲ್ಲಿರಬೇಕಿದ್ದ ಅನಂತಶಯನ ಪ್ರತಿಮೆ ಮತ್ತು ಹೊಳಲಿನಲ್ಲಿರುವ ಅನಂತಶಯನ ಪ್ರತಿಮೆ ಎರಡೂ ಒಂದೆಯೇ?-ಎಂಬ ಬಗ್ಗೆ ಸಂದೇಹಗಳಿವೆ.

“ಹೊಳಲಿನ ಅನಂತ ಪದ್ಮನಾಭ ಹೊಯ್ಸಳ ಕಾಲದ ಶಿಲ್ಪವಾಗಿದ್ದು, ಆ ರಾಜ್ಯ ಅಳಿದ ಮೇಲೆ ವಿಜಯನಗರದ ರಾಜರು ತಂದು ಹಂಪಿಯಲ್ಲಿ ಸ್ಥಾಪಿಸಿದ್ದಿರಬಹುದು”- ಎಂಬುದು ಡಾ. ಅನಿಲಾ ವರ್ಗೀಸ್‌ರ ಅಭಿಪ್ರಾಯ.[೧] ಅಲ್ಲಿಂದ ಮತ್ತೆ ಹೊಳಲು ಗ್ರಾಮಕ್ಕೆ ಅನಂತಶಯನ ವರ್ಗಾವಣೆಗೊಂಡಿತೇ? ಎಂಬುದು ಜಿಜ್ಞಾಸೆಯ ಪ್ರಶ್ನೆಯಾಗಿದೆ.

ವಿಜಯನಗರ ಸಾಮ್ರಾಜ್ಯದ ವಿನಾಶ ಮತ್ತು ಮತಾಂಧ ಮುಸ್ಲಿಂ ಧಾಳಿಗಳ ಪ್ರಕ್ಷುಬ್ಧ ಪರಿವೇಶದಲ್ಲಿ ವಿಜಯನಗರ ಭಾಗದ ಅಘೋಷಿತ ಧಾರ್ಮಿಕ-ಸಾಮಾಜಿಕ ನಾಯಕನಾಗಿ ಹೊರಹೊಮ್ಮಿದ ಬಿಷ್ಟೇಶ್ವರ ಅಥವಾ ಬಿಷ್ಟಪ್ಪಯ್ಯನವರು ರಸವೈದ್ಯ ನಿಷ್ಣಾತರೂ, ಮಹಾತ್ಮರೂ, ಯೋಗ ಮತ್ತು ಆಧ್ಯಾತ್ಮ ಸಾಧಕರೂ, ತಪಸ್ವಿಗಳೂ ಆಗಿದ್ದು, ಸಾ.ಶ. ೧೬೬೦ರ ಸುಮಾರಿಗೆ ಉಳಿದ ಹಂಪೆಯ ಪುನರುತ್ಥಾನ ಕಾರ್ಯದಲ್ಲಿ ನಿರತರಾಗಿ, ಮುಖ್ಯದೈವ ವಿಜಯನಗರದ ವಿರೂಪಾಕ್ಷ ದೇವಾಲಯದ ಆವರಣ, ರಥಬೀದಿ ಹಾಗೂ ಗೋಪುರಗಳ ಜೀರ್ಣೋದ್ಧಾರ ಮಾಡಿದ್ದಲ್ಲದೇ, ತಮ್ಮ ಅವಿರತ ಶ್ರಮ ಸಾಧನೆಯಿಂದ ಹಂಪಿ ಮತ್ತು ಸುತ್ತಲಿನ ಪರಿಸರದ ಭಗ್ನವಾಗಿರದ ವಿಗ್ರಹಗಳನ್ನೆಲ್ಲಾ ತಂದು ತಮ್ಮ ನೆಲೆ ರಂಗಾಪುರದಲ್ಲಿ ಸಂರಕ್ಷಿಸಿಟ್ಟು, ಅವುಗಳಲ್ಲಿ ಕೆಲವನ್ನು ತಮ್ಮ ಸಮೀಪದ ಸ್ಥಳಗಳಲ್ಲಿನ ದೇಗುಲಗಳಲ್ಲಿ ಸ್ಥಾಪಿಸಿದರು ಮತ್ತು ಅಂತಹ ಸ್ಥಾಪಿತ ವಿಗ್ರಹಗಳಲ್ಲಿ ಹೊಳಲು ಗ್ರಾಮದ ಅನಂತಶಯನ ವಿಗ್ರವೂ ಒಂದು-ಎಂಬುದು ‘ಉಳಿದ ಹಂಪಿ ಮತ್ತು ಗುರು ಬಿಷ್ಟಪ್ಪಯ್ಯನವರು’ ಕೃತಿಯ ಲೇಖಕಿ ವಸುಂದರಾ ದೇಸಾಯಿಯವರ ಅಭಿಮತ. ಈ ಹೊಳಲು ಗ್ರಾಮವು ಬಿಷ್ಟಪ್ಪಯ್ಯನವರ ನೆಲೆಯಾದ ರಂಗಾಪುರದಿಂದ ಸ್ವಲ್ಪವೇ ಅಂತರದಲ್ಲಿರುವುದು ಇಲ್ಲಿ ಗಮನಾರ್ಹ. ಆದರೆ ಈ ಮಾಹಿತಿಯ ಸತ್ಯಾಸತ್ಯತೆಯನ್ನು ಹೊಳಲಿನಲ್ಲಿ ಲಭ್ಯ ಶಾಸನಾಧಾರಗಳ ಹಿನ್ನೆಲೆಯಲ್ಲಿ ತರ್ಕಿಸುವುದಾದರೆ ಹೊಸದೊಂದು ವಿಚಾರವೇ ಸ್ಫುಟಗೊಳ್ಳುತ್ತದೆ.

**ಹೊಳಲಿನಲ್ಲಿ ಲಭ್ಯ ಶಾಸನಗಳು:** ಈವರೆಗೆ ಹೊಳಲು ಗ್ರಾಮದಲ್ಲಿ ಸಾ.ಶ. ೧೦೭೨ರಿಂದ ೧೧೯೪ರ ಕಾಲಾವಧಿಯ ಒಂಭತ್ತು ಶಾಸನಗಳು ಲಭ್ಯವಾಗಿದ್ದು, ಅವು ಕಲ್ಯಾಣದ ಚಾಲುಕ್ಯರ, ಹಾಗೂ ಹೊಯ್ಸಳರ ಆಳ್ವಿಕೆಗೆ ಸಂಬಂಧಪಟ್ಟವುಗಳಾಗಿವೆ. ಬಹುತೇಕ ಶಾಸನಗಳಲ್ಲಿ ಕಲ್ಯಾಣದ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ (೬ನೇ ವಿಕ್ರಮಾದಿತ್ಯ ಹಾಗೂ ೩ನೇ ಸೋಮೇಶ್ವರರ ಬಿರುದು) ಹಾಗೂ ಜಗದೇಕಮಲ್ಲನ ಮಾಂಡಲೀಕರಾಗಿದ್ದ, ಮೀನು ಲಾಂಛನವುಳ್ಳ, ಯದುವಂಶಕ್ಕೆ ಸೇರಿದ ವಿಜಯಪಾಂಡ್ಯದೇವ ಮತ್ತು ವೀರ ಪಾಂಡ್ಯದೇವರ ಉಲ್ಲೇಖಗಳಿದ್ದು, ಹೊಳಲು ಉಚ್ಚಂಗಿಯ ಪಾಂಡ್ಯರಸರ ಅಧೀನದ ಅಗ್ರಹಾರವಾಗಿದ್ದು, ೧೨೦ ಮಹಾಜನರಿಂದ ಪೊರೆಯಲ್ಪಡುತ್ತಿತ್ತೆಂಬ ವಿವರಣೆಯಿದೆ. ಮತ್ತೊಂದು ವೀರಗಲ್ಲು ಶಾಸನವು ಬಸವೆಯನಾಯಕನನ್ನು ಕುರಿತದ್ದಾಗಿದ್ದು, ಹೊಯ್ಸಳ ದೊರೆ ಇಮ್ಮಡಿ ವೀರಬಲ್ಲಾಳನ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಹಾಗೆಯೇ ೧೨ನೇ ಶತಮಾನಕ್ಕೆ ಸೇರಿದ ಶಿಲ್ಪಶಾಸ್ತ್ರದ ಕುರಿತ ವಿವರವುಳ್ಳ ಶಾಸನವೊಂದರಲ್ಲಿ ಚೌಷಷ್ಠಿ ಕಲಾವಿದನಾದ ‘ನಾಗ’ ಎಂಬುವವನ ಹೆಸರು ಪರಿಚಯಿಸಲ್ಪಟ್ಟಿದೆ. ೬೪ ಬಗೆಯ ವಾಸ್ತು ನಿರ್ಮಾಣಕ್ಕೆ ಖ್ಯಾತನಾದ ನಾಗನು ನಾಗರ, ಕಳಿಂಗ, ಆಂಧ್ರ, ದ್ರಾವಿಡ, ವೇಸರ ಶೈಲಿಯ ನಿರ್ಮಿತಿಗಳಿಗೆ ಜೀವಕಳೆ ತುಂಬುವ ಸಾಮರ್ಥ್ಯವುಳ್ಳವನಾಗಿದ್ದನು ಮತ್ತು ಕಟೆದ ಒಂದೊಂದು ಕಂಬಕ್ಕೆ ೨೦ ಗದ್ಯಾಣ ಹೊನ್ನು ಪಡೆಯುತ್ತಿದ್ದನು.[೨] - ಎಂದು ಅವನ ಶಿಲ್ಪ ಕರ್ತೃತ್ವದ ಶ್ರೇಷ್ಠತೆಯನ್ನು ವಿವರಿಸಲಾಗಿದೆ. ಅನಂತಶಯನ

ಶಿಲ್ಪದ ಕಾಲಗಣನೆಗೆ ಅನಂತಶಯನ ದೇಗುಲದ ಬಳಿಯ ಶಾಸನ ಅತ್ಯಂತ ಪೂರಕವಾಗಿದ್ದು, ಈ ಶಾಸನದ ಪಾಠವು ಅನಂತಶಯನ ಶಿಲ್ಪದ ಕಾಲ ನಿರ್ಧರಣೆಗೆ ಅತ್ಯಂತ ನೆರವಾಗುತ್ತದೆ.

**ಹೊಳಲಿನ ಅನಂತಶಯನ ದೇಗುಲದ ಬಳಿಯ ಶಾಸನ:** "ಶ್ರೀ ಗಣಪತ್ಯಾಯ ನಮಃ" ಎಂದು ಆರಂಭವಾಗುವ ಹೊಳಲಿನ ಅನಂತಶಯನ ದೇಗುಲದ ಬಳಿಯ ಶಾಸನವು ದಾನ ಶಾಸನವಾಗಿದ್ದು, ನೊಳಂಬವಾಡಿ ೩೨೦೦೦ವನ್ನು ಆಳುತ್ತಿದ್ದ ಪಾಂಡ್ಯದೇವನ ಆಳ್ವಿಕೆಯ ಕಾಲದ್ದಾಗಿದ್ದು, ಈ ಪಾಂಡ್ಯರಾಜನ ಅಮಾತ್ಯರಾಗಿದ್ದ ಸೋಮೇಶ್ವರ ಭಟ್ಟರ ಮಗ ಪೋತ್ಯಣ್ಣ ಭಟ್ಟರು ತೆರಿಗೆ ಹಣವನ್ನು ಶ್ರೀಮನ್ನಾರಾಯಣ ದೇವರಿಗೆ ದಾನ ನೀಡಿದ ಹಾಗೂ ಮುಂದುವರೆದು ಶಂಕರಭಟ್ಟರು, ಕ್ರವಿಂತ ರಾಳ್ಕಾಡಭಟ್ಟರು, ಅವರ ಮಗ ನಾಳ ಭಟ್ಟರು ಇನ್ನಿತರರು ನೀಡಿದ ದಾನಗಳ ಮಾಹಿತಿ ಹೊಂದಿದೆ. ಈ ಹಿನ್ನೆಲೆಯಲ್ಲಿ ಅದಾಗಲೇ ಅಲ್ಲಿ ನಾರಾಯಣ ಅರ್ಥಾತ್ ವಿಷ್ಣು ದೇಗುಲವಿದ್ದ ಸಂಗತಿ ಸ್ಪಷ್ಟವಾಗುತ್ತದೆ ಮತ್ತು ೧೨ನೇ ಶತಮಾನದ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಈ ಅನಂತಶಯನ ಮೂರ್ತಿ ಕೆತ್ತಲ್ಪಟ್ಟಿರುವುದಾಗಿ ಸಮರ್ಥನೆಗೆ ಆಧಾರವೊದಗುತ್ತದೆ.

ಶಾಸನೋಕ್ತಿಗಳೊಂದಿಗೆ ಸಾಮಾನ್ಯ ತರ್ಕಗಳೂ ಕೂಡಾ ಅನಂತಶಯನ ಮೂರ್ತಿ ಹೊಳಲಿನದ್ದೇ ಎಂಬುದನ್ನು ಸಮರ್ಥಿಸಬಲ್ಲವಾಗಿವೆ. ಸಾ.ಶ. ೧೨ನೇ ಶತಮಾನದಲ್ಲಿ ಕಲ್ಯಾಣದ ಚಾಲುಕ್ಯರ ಅಧೀನದಲ್ಲಿ ಉಚ್ಚಂಗಿಯನ್ನಾಳಿದ್ದ ಪಾಂಡ್ಯ ದೊರೆಗಳ ಕಾಲದಲ್ಲಾಗಲೇ ಹೊಳಲಿನಲ್ಲಿ ವಿಷ್ಣು ದೇವಾಲಯವಿದ್ದಿತೆಂದು ಹೇಳುವುದಕ್ಕೂ, ಸಾ.ಶ. ೧೬ನೇ ಶತಮಾನದಲ್ಲಿ ಕೃಷ್ಣದೇವರಾಯನು ತನ್ನ ಮೃತ ಮಗನ ನೆನಪಿನಲ್ಲಿ ತಿರುಮಲಾಪುರದಲ್ಲಿ ಕಟ್ಟಿಸಿದ ಅನಂತಶಯನ ಗುಡಿಯಲ್ಲಿನ ದೇವರಿಲ್ಲದ ಪೀಠದಲ್ಲಿ ಇರಬೇಕಾಗಿದ್ದ ಮೂರ್ತಿ ಇದೆಂದು ಹೇಳುವುದಕ್ಕೂ ಎದ್ದು ತೋರುವ ಕಾಲಘಟ್ಟಗಳ ಅಸಮ ಹೊಂದಾಣಿಕೆ; ಹಾಗೂ ತಿರುಮಲಾಪುರದಲ್ಲಿ ಕೃಷ್ಣದೇವರಾಯ ನಿರ್ಮಿಸಿದ ಅನಂತಶಯನ ದೇಗುಲದ ಭವ್ಯ ಅಳತೆ ೧೧೭೫ ಚದರ ಮೀಟರ್ ವಿಸ್ತಾರದ ಕಟ್ಟಡ, ೧೪೭x೮೫ ಮೀಟರ್‌ನಷ್ಟು ದೊಡ್ಡ ಸುತ್ತುಗೋಡೆ, ಬೃಹತ್ತಾದ ಆವರಣ, ೪೬ ಕಂಬಗಳನ್ನೊಳಗೊಂಡ ದೊಡ್ಡ ಮಂಟಪ, ಮೂರು ಬಾಗಿಲುಗಳ ಗರ್ಭಗುಡಿ, ಆಯತಾಕಾರದ ಗರ್ಭಗುಡಿಯ ಮೇಲಕ್ಕೆ ಹತ್ತು ಮೀಟರ್ ಎತ್ತರದ ಕಮಾನಿನಾಕಾರದ ಛಾವಣಿಯುಳ್ಳದ್ದಾಗಿದೆ.[೩] ಈ ಕಾರಣದಿಂದಾಗಿ ಆ ದೇವಾಲಯದಲ್ಲಿ ಬಹುಶಃ ಹೊಳಲಿನಲ್ಲಿರುವ ಅನಂತಶಯನ ಮೂರ್ತಿಯ ಅಳತೆಯನ್ನೂ ಮೀರಿದ ಮೂರ್ತಿಯನ್ನು ಪ್ರತಿಷ್ಠಾಪಿಸಲು ಉದ್ದೇಶಿಸಲಾಗಿತ್ತೇನೋ..? ಎಂಬ ಜಿಜ್ಞಾಸೆಗಳು ಹೊಳಲಿನ ಅನಂತಶಯನ ಮೂರ್ತಿಯ ಕುರಿತಾಗಿ ಇರುವ ಮೌಖಿಕ ಪರಂಪರೆಗಳನ್ನು ಆಧಾರರಾಹಿತ್ಯವೆಂದು ತಿರಸ್ಕರಿಸಿ, ೧೨ನೇ ಶತಮಾನದ ಕಲ್ಯಾಣದ ಚಾಲುಕ್ಯರ ಕಾಲದಲ್ಲಿಯೇ ಈ ಅನಂತಶಯನ ಮೂರ್ತಿಯು ಕೆತ್ತಲ್ಪಟ್ಟಿರುವುದಾಗಿ ಸಮರ್ಥಿಸಲು ಇಂಬುಗೊಡುತ್ತವೆ. ಅವನತಿಯೋತ್ತರ ವಿಜಯನಗರ ಸಾಮ್ರಾಜ್ಯದ ಬಹುತೇಕ ದೇವಾಲಯಗಳ ಗರ್ಭಗುಡಿಗಳಲ್ಲಿ ಮತಾಂಧ ಮತ್ತು ಸಂಪತ್ತಿನ ಸೂರೆಯ ಉದ್ದೇಶದ ಮುಸ್ಲಿಂ ಧಾಳಿಗಳ ಪರಿಣಾಮದಿಂದಾಗಿ ಪೂಜಾ ಪ್ರತಿಮೆಗಳ ಅಲಭ್ಯತೆ ಇಲ್ಲವೇ ಭಗ್ನತೆ ಸಾಮಾನ್ಯವಾಗಿದ್ದು, ತಿರುಮಲಾಪುರ ದೇಗುಲದ ಅನಂತಶಯನ ಮೂರ್ತಿ ನಾಶದ ಸಾಧ್ಯತೆಯನ್ನೂ ಅಲ್ಲಗಳೆಯುವಂತಿಲ್ಲ. ಆದರೆ ಸ್ಥಾಪಿತ ಶಿಲ್ಪ ನಾಶಗೊಂಡಿರಬಹುದಾದರೆ ಲಭ್ಯವಿರಬೇಕಿದ್ದ ಭಗ್ನಾವಶೇಷಗಳ ಪ್ರಶ್ನೆಯು ಇಲ್ಲಿನ ಮೂರ್ತಿ ಮತ್ತೊಂದೆಡೆ ಇದ್ದಿರಬಹುದು ಎಂಬ ವಾದಕ್ಕೆ ಅವಕಾಶವನ್ನೀಯುತ್ತದೆ. ಆದರೆ ಈ ಅಭಿಪ್ರಾಯಗಳ ಸಮರ್ಥನೆಗೆ ಈವರೆಗೆ ಯಾವುದೇ ಲಭ್ಯ ಆಧಾರಗಳ ಬೆಂಬಲವಿಲ್ಲದಿರುವುದು ಸ್ಪಷ್ಟ.

**Alexr. Reaರ ನಿರೂಪಣೆಯಲ್ಲಿ ಹೊಳಲುವಿನ ಅನಂತಶಯನ:** ಹೊಳಲು ಗ್ರಾಮದ ಅನಂತಶಯನ ಶಿಲ್ಪದ ಅಳತೆ ಮತ್ತು ಕಲೆಯ ಮಾದರಿ ಕುರಿತು Alexr. Rea ರವರು Archeological Survey of IndiazÀ New Imperil Series £À Volume XXI: "Chalukyan Architecture; including examples from the Ballari District, Madras presidency", (1896) ಕೃತಿಯಲ್ಲಿ ನಿಖರ ಸ್ಕೇಲ್‌ನೊಂದಿಗೆ ಚಿತ್ರ ಸಮೇತ ನಿರೂಪಿಸಿದ್ದು, ಕಲಾ ಮಾದರಿ ಕಲ್ಯಾಣದ ಚಾಲುಕ್ಯರದ್ದೇ ಎಂದು ಸ್ಪಷ್ಟನೆ ನೀಡಿರುವುದು ಕೂಡಾ ಶಿಲ್ಪವು ಕಲ್ಯಾಣ ಚಾಲುಕ್ಯರ ಕಾಲದ್ದೇ ಎಂಬ ತರ್ಕಕ್ಕೆ ಬೆಂಬಲವನ್ನು ನೀಡುತ್ತದೆ.

**ಅನಂತಶಯನ ದೇಗುಲದ ಪುನರುಜ್ಜೀವನ:** ಅನಂತಶಯನ ಮೂರ್ತಿಯೊಂದಿಗೆ ಹೊಳಲುವಿನಲ್ಲಿ ಕಲ್ಯಾಣದ ಚಾಲುಕ್ಯರ ಕಾಲೋತ್ತರದಲ್ಲಿ ನಿರ್ಮಿಸಲ್ಪಟ್ಟಿದ್ದ ಬ್ರಹ್ಮ ಮತ್ತು ಲಕ್ಷ್ಮೀ ದೇವಿಯರ ಸುಂದರ ಶಿಲ್ಪಗಳನ್ನು ಹೊಂದಿದ್ದ ದೇವಾಲಯವು ಹದಿನೇಳನೇ ಶತಮಾನದ ವೇಳೆಗೆ ಮೂರ್ತಿಗಳ ಭಗ್ನತೆಯ ಕಾರಣವಾಗಿ ಪಾಳು ಬಿದ್ದಿದ್ದು, ಆ ಕಾಲೀನ ಧಾರ್ಮಿಕ ಗುರುವಾಗಿದ್ದ ಜಿಷ್ಟಪ್ಪಯ್ಯನವರ ಪ್ರಯತ್ನ ಇಲ್ಲವೇ ಪ್ರೇರಣೆಯಿಂದ ಪೂರ್ವಾಭಿಮುಖವಾಗಿದ್ದ ಏಕ ಕೂಟದ ದೇಗುಲವೊಂದರಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದ್ದು ಸತ್ಯ ಸಂಗತಿ. ಈ ದೇಗುಲದ ಗರ್ಭಗೃಹ ಅತ್ಯಂತ ಚಿಕ್ಕದಾಗಿದ್ದ ಕಾರಣವಾಗಿ



ಕಟಿ ಅಲಂಕರಣ ಮತ್ತು ಪಾದಪೀಠ



ಭಗ್ನ ಬ್ರಹ್ಮ ಶಿಲ್ಪ



ಭಗ್ನ ಲಕ್ಷ್ಮೀದೇವಿಯ ಶಿಲ್ಪ



ಪುನರ್ನಿರ್ಮಿತ ಅನಂತಶಯನ ದೇಗುಲ



ನವೀಕರಣ ಪೂರ್ವ ದೇಗುಲದ ಗರ್ಭಗೃಹದ ನೋಟ

ವಿಸ್ತೃತ ಗರ್ಭಗುಡಿಯುಳ್ಳ ದೇವಾಲಯವನ್ನು ಕರ್ನಾಟಕ ರಾಜ್ಯದ ಮಾಜಿ ಉಪ ಮುಖ್ಯಮಂತ್ರಿಗಳಾಗಿದ್ದ ದಿ॥ ಎಂ.ಪಿ. ಪ್ರಕಾಶ್ ಅವರ ಆಸಕ್ತಿ ಮತ್ತು ಕೊಲ್ಲೂರು ಮೂಕಾಂಬಿಕಾ ದೇವಾಲಯ ಸಮಿತಿ ಹಾಗೂ ಬೆಂಗಳೂರಿನ ಇಸ್ಕಾನ್‌ನ ಸಹಯೋಗದಿಂದ ೨೦೦೮ರಲ್ಲಿ ನವೀನ ವಿನ್ಯಾಸದಲ್ಲಿ ನಿರ್ಮಿಸಲಾಗಿದೆ.

**ಹೊಳಲು ಅನಂತಶಯನ ಶಿಲ್ಪದ ವೈಶಿಷ್ಟ್ಯಗಳು:** ಹೊಳಲುವಿನ ಅನಂತಶಯನ ಮೂರ್ತಿಯ ಕೆತ್ತನೆ ಶಿಲ್ಪ ಕೌಶಲ್ಯದ ಪರಾಕಾಷ್ಠತೆಯನ್ನು ಸೂಚಿಸುವಂತೆ ಪರಿಪೂರ್ಣ ಮತ್ತು ಸ್ಫೂರ್ತಿದಾಯಕವಾಗಿದ್ದು, ಶಿಲ್ಪ ರಚನೆಗೆ ಬಳಸಲ್ಪಟ್ಟಿರುವ ಫಲಕ ಮಾದರಿಯ, ಮೃದು ರೂಪಾಂತರ ಸ್ವರೂಪದ 'ಕ್ಲೋರೈಟ್ ಶಿಸ್ಟ್' ಪದರುಶಿಲೆಯು ೧೧ರಿಂದ ೧೪ನೇ ಶತಮಾನದವರೆಗಿನ ಕರ್ನಾಟಕದ ಕುಶಲಕರ್ಮಿಗಳ ಆಯ್ಕೆಯ ಮಾಧ್ಯಮವಾಗಿ ಮಾರ್ಪಟ್ಟು, ಶಿಲ್ಪಕಲೆ ಮತ್ತು ವಾಸ್ತುಕಲೆಯಲ್ಲಿ ಸೌಂದರ್ಯದ ಕ್ರಾಂತಿಗೆ ಕಾರಣವಾದುದನ್ನು ಈ ಅನಂತಶಯನ ಮೂರ್ತಿಯ ವಿನ್ಯಾಸದಲ್ಲಿ ಗುರುತಿಸಬಹುದಾಗಿದೆ.

ವೈಷ್ಣವ ಧರ್ಮದ ಪ್ರಖ್ಯಾತಿಯೊಂದಿಗೆ ಅಧಿಕಗೊಂಡ ವಿಷ್ಣು ಶಿಲ್ಪ ಸಂವರ್ಧನೆಯಲ್ಲಿನ ವೈವಿಧ್ಯಮಯ ಪ್ರರೂಪಗಳಲ್ಲಿ "ಅನಂತಶಯನ" ಮೂರ್ತಿಯು ವಿಶಿಷ್ಟವಾದುದಾಗಿದ್ದು, ಶಿಲ್ಪ ನಿರ್ಮಾಣ ಕಾಲದಲ್ಲಿನ ವೈಷ್ಣವ ಧರ್ಮದ ಪ್ರಖ್ಯಾತಿಯನ್ನು ಈ ಅನಂತಶಯನ ಶಿಲ್ಪವು ನಿರೂಪಿಸುತ್ತದೆ.

ಈ ಮೂರ್ತಿ ಶಿಲ್ಪವು ಪುರಾತನ ವೈದಿಕ ಪರಂಪರೆಯ ಅನುಸರಣೆ ಮತ್ತು ಪುರಾಣ ಕೃತಿಗಳಲ್ಲಿನ ಚಿಂತನೆಯ ಮಹತ್ತಮತೆಯ ಸ್ವೀಕೃತಿಯ ದ್ಯೋತಕವಾಗಿದೆ. ಸೃಷ್ಟಿ–ಸ್ಥಿತಿ–ಲಯಕಾರಕರಾಗಿ ಬ್ರಹ್ಮ–ವಿಷ್ಣು–ಮಹೇಶ್ವರರನ್ನು ಪೂಜಿಸುವ ಭಾರತೀಯ ತ್ರೈಪುರುಷಾರಾಧನೆಯ ಸನಾತನ ಪರಂಪರೆಯ ಹಿನ್ನೆಲೆಯಲ್ಲಿ ಕಲ್ಪಾಂತ್ಯದಲ್ಲಿ ಜಗತ್ ಪ್ರಳಯಗೊಳ್ಳುವ ಕಾಲದಲ್ಲಿ ವಿಷ್ಣುವು ಕ್ಷೀರಸಾಗರದ ನಡುವೆ ಭೂಮಿಗೆ ಆಧಾರ ಭೂತವಾಗಿರುವ ಆದಿಶೇಷನನ್ನು ಪರ್ಯಂಕವಾಗಿಸಿಕೊಂಡು ಪುನಃ ಜಗತ್ ಸೃಷ್ಟಿಕ್ರಿಯೆ ಆರಂಭಗೊಳ್ಳುವವರೆಗೆ ಯೋಗನಿದ್ರೆಗೆ ಒಳಪಡುವ ಜಲಶಾಯಿ ಹಾಗೂ ಶೇಷಶಾಯಿ ವಿಷ್ಣುವಿನ ವಿಶೇಷ ಪರಿಕಲ್ಪನೆಯ ಮೂರ್ತ ಸ್ವರೂಪವೇ ಆಗಿರುವ ಈ ಅನಂತಶಯನ ಶಿಲ್ಪಕ್ಕೆ ಪ್ರತೀ ವರ್ಷ ಭಾದ್ರಪದ ಮಾಸದ ಶುಕ್ಲಪಕ್ಷದ ಚತುರ್ದಶಿಯಂದು ವಿಶೇಷವಾದ 'ಅನಂತನ ಚತುರ್ದಶಿ' ವ್ರತವನ್ನು ಕಲ್ಪೋಕ್ತ ಪ್ರಕಾರ ಅನಾಚೂನವಾಗಿ ನೆರವೇರಿಸಲಾಗುತ್ತದೆ. ಈ ಎಲ್ಲಾ ಹಿನ್ನೆಲೆಯಲ್ಲಿ ಮಧ್ಯ ಕರ್ನಾಟಕ ಭಾಗದ ವೈಷ್ಣವಾಸಕ್ತ ಶ್ರದ್ಧಾ ಕೇಂದ್ರವಾಗಿ ಪ್ರಸಿದ್ಧವಾದ ಹೊಳಲು ಅನಂತಶಯನ ದೇಗುಲ ಧಾರ್ಮಿಕ ಹಾಗೂ ಐತಿಹಾಸಿಕ ಮೌಲ್ಯಿಕತೆಯನ್ನು ಹೊಂದಿದ್ದು ಆಧ್ಯಾತ್ಮಿಕರು ಹಾಗೂ ಇತಿಹಾಸಾಸಕ್ತರನ್ನು ತನ್ನತ್ತ ಸೆಳೆಯುವ ವಿಶಿಷ್ಠ ಕ್ಷೇತ್ರವಾಗಿದೆ.



## ಅಡಿಟಿಪ್ಪಣಿಗಳು

೧. ವಸುಂದರಾ ದೇಸಾಯಿ, "ಉಳಿದ ಹಂಪಿ ಮತ್ತು ಗುರು ಬಿಷ್ಟಪ್ಪಯ್ಯನವರು", ಸಾಹಿತ್ಯ ಪ್ರಕಾಶನ, ೨೦೧೫, ಪುಟ ಸಂಖ್ಯೆ: ೫೦.

೨. ಕರಣಂ ವಿರೂಪಾಕ್ಷಗೌಡ, "ಹೂವಿನ ಹಡಗಲಿ ತಾಲ್ಲೂಕು ಸಮಗ್ರ ಶಾಸನಗಳ ಅಧ್ಯಯನ", ಮಮತಾ ಎಂಟರ್ ಪ್ರೈಸಸ್, ಬೆಂಗಳೂರು, ಪುಟ ಸಂಖ್ಯೆ: ೫೨.

೩. ಟಿ.ಎಸ್. ಗೋಪಾಲ್, "ಹಂಪೆ: ಒಂದು ಸುಂದರ ದೃಶ್ಯ ಕಾವ್ಯ", ಭಾರತಿ ಪ್ರಕಾಶನ, ಮೈಸೂರು, ೨೦೧೫, ಪುಟ ಸಂಖ್ಯೆ: ೧೪.

೪. Alexr. Rea, "Chalukyan Architecture; including examples from the Ballari District, Madras presidency", Archeological Survey of India, (New Imperil Series), Volume XXI, 1896, Figure: 3.

## ಆಕರ ಗ್ರಂಥಗಳು


೧. Alexr. Rea, "Chalukyan Architecture; including examples from the Ballari District, Madras presidency", Archeological Survey of India, (New Imperil Series), Volume XXI, 1896.

೨. ಡಾ. ಕೆ. ವಸಂತಲಕ್ಷ್ಮಿ, "ಅನಂತಶಯನ ಶಿಲ್ಪಗಳು", ಇತಿಹಾಸ ದರ್ಶನ: ಸಂ. ೨೭/೨೦೧೨.

೩. ವಸುಂಧರಾ ದೇಸಾಯಿ, "ಉಳಿದ ಹಂಪಿ ಮತ್ತು ಗುರು ಬಿಷ್ಟಪ್ಪಯ್ಯನವರು", ಸಾಹಿತ್ಯ ಪ್ರಕಾಶನ, ೨೦೧೫.

೪. ಟಿ.ಎಸ್. ಗೋಪಾಲ್, "ಹಂಪೆ: ಒಂದು ಸುಂದರ ದೃಶ್ಯ ಕಾವ್ಯ", ಭಾರತಿ ಪ್ರಕಾಶನ, ಮೈಸೂರು, ೨೦೧೫.

೫. ಕರಣಂ ವಿರೂಪಾಕ್ಷಗೌಡ, "ಹೂವಿನ ಹಡಗಲಿ ತಾಲ್ಲೂಕು ಸಮಗ್ರ ಶಾಸನಗಳ ಅಧ್ಯಯನ", ಮಮತಾ ಎಂಟರ್ ಪ್ರೈಸಸ್, ಬೆಂಗಳೂರು.

೭೨

# ಸಂಗಾಪುರದಲ್ಲಿ ದೊರೆತ ಅಪರೂಪದ ಜಲಶಯನ ಶಿಲ್ಪ

**ಪದ್ಮಜಾ ದೇಸಾಯಿ***

ಹಿಂದೂ ಧರ್ಮದಲ್ಲಿ ಪ್ರಮುಖ ದೇವತೆಗಳಾದ ಬ್ರಹ್ಮ ವಿಷ್ಣು ಮತ್ತು ಮಹೇಶ್ವರ. ಈ ತ್ರಿಮೂರ್ತಿಗಳಲ್ಲಿ ವಿಷ್ಣುವು ರಕ್ಷಕ ದೇವತೆಯಾಗಿದ್ದಾನೆ. ವಿಷ್ಣು ಶಿಲ್ಪವನ್ನು ವಿವಿಧ ಭಂಗಿಯಲ್ಲಿ ರಚಿಸಿ, ದೇವಾಲಯದಲ್ಲಿ ಪ್ರತಿಷ್ಠಾಪಿಸಿರುವುದನ್ನು ಪ್ರಾಚೀನ ಕಾಲದಿಂದಲೂ ಕಾಣುತ್ತೇವೆ. ವಿಷ್ಣುವಿನ ಪ್ರಮುಖವಾದ ಭಂಗಿಯಲ್ಲಿರುವ ಶಿಲ್ಪವೆಂದರೆ ಶಯನ ಭಂಗಿಯಲ್ಲಿರುವ ಶಿಲ್ಪ. ಈ ಶಯನ ಭಂಗಿಯ ಶಿಲ್ಪಗಳನ್ನು ಅನಂತಶಯನ, ರಂಗನಾಥ, ಅನಂತಪದ್ಮನಾಭ, ನಾಗಶಯನ ಎಂಬ ಹಲವು ಹೆಸರುಗಳಿಂದ ಕರೆಯಲಾಗುತ್ತದೆ.[೧]

ಪ್ರಸ್ತುತ ಸಂಗಾಪುರದಲ್ಲಿ ದೊರೆತ ಜಲಶಯನ ಶಿಲ್ಪದ ಬಗ್ಗೆ ಲೇಖನವಿದ್ದು, ಈ ಶಿಲ್ಪವು ಆಗಮಗಳ ಹಿನ್ನೆಲೆಯಲ್ಲಿ ರಚನೆಯಾಗಿದೆಯೋ ಅಥವಾ ಆಗಮಗಳನ್ನು ಹೊರತುಪಡಿಸಿ ರಚನೆಯಾಗಿದೆಯೋ ಎಂಬುದನ್ನು ಕುರಿತು ಚರ್ಚಿಸುವುದು ಈ ಲೇಖನದ ಉದ್ದೇಶ. ಸಂಗಾಪುರವು ಕೊಪ್ಪಳ ಜಿಲ್ಲೆಯ ಗಂಗಾವತಿಗೆ ಸ್ವಲ್ಪ ದೂರದಲ್ಲಿದ್ದು ಗ್ರಾಮದ ಕೆರೆಯ ಹತ್ತಿರವಿರುವ ಚಿಕ್ಕ ಗುಡಿಯಲ್ಲಿದೆ.

**ಜಲಶಯನ ಶಿಲ್ಪದ ಪ್ರಾಚೀನತೆ:** ಸಾಮಾನ್ಯವಾಗಿ ವಿಷ್ಣು ಶಿಲ್ಪಗಳನ್ನು ಸ್ಥಾನಿಕ ಆಸೀನ, ಶಯನ ಶಿಲ್ಪಗಳೆಂದು ವಿಂಗಡಿಸಲಾಗುತ್ತದೆ. ನಂತರ ಈ ಮೂರು ಭಂಗಿಯ ಶಿಲ್ಪಗಳನ್ನು ಯೋಗ, ಭೋಗ, ವೀರ ಮತ್ತು ಅಭಿಚಾರಿಕಾ ಶಿಲ್ಪಗಳೆಂದು, ಅದರಲ್ಲಿ ಮತ್ತೆ ಉತ್ತಮ ಮಧ್ಯಮ ಮತ್ತು ಅಧಮ ಶಿಲ್ಪಗಳೆಂದು ವಿಂಗಡಿಸಲಾಗಿದೆ. ಆದರೆ ಶಯನ ಶಿಲ್ಪಗಳಲ್ಲಿ ಜಲಶಯನ ಶಿಲ್ಪ ಎಂಬುದು ವಿಶೇಷವಾಗಿದೆ. ಹತ್ತನೇ ಶತಮಾನದ ನಂತರ ಆಳ್ವಿಕೆಗೆ ಬಂದ ಕಲ್ಯಾಣ ಚಾಲುಕ್ಯರು ಮತ್ತು ಹೊಯ್ಸಳರ ಕಾಲದಲ್ಲಿ ಈ ಜಲಶಯನ ಶಿಲ್ಪಗಳನ್ನು ಹೆಚ್ಚಾಗಿ ಕಂಡರಿಸಿರುವುದು ಕಾಣಬಹುದು.[೨]

ವಿಷ್ಣುವಿನ ಇತರ ರೂಪಗಳಲ್ಲಿ ಬರುವ ಈ ಜಲಶಯನ ಶಿಲ್ಪದ ಪ್ರತಿಮಾಲಕ್ಷಣಗಳನ್ನು ಶಿಲ್ಪಶಾಸ್ತ್ರಗ್ರಂಥಗಳು ಈ ಕೆಳಗಿನಂತೆ ವಿವರಿಸಿವೆ.

ಹೇಮಾದ್ರಿಯ ಚತುರ್‌ವರ್ಗ ಚಿಂತಾಮಣಿಯ ಪ್ರಕಾರ ಜಲಶಯನ ಶಿಲ್ಪವನ್ನು ಕೆರೆಯ ದಂಡೆಯ ಹತ್ತಿರ ಪ್ರತಿಷ್ಠಾಪಿಸಬೇಕು. ಕೆಲವು ಅನಂತಶಯನ ಶಿಲ್ಪಗಳನ್ನು ನದಿದಂಡೆಯ ಹತ್ತಿರ, ನೀರಿನ ಸಂಗ್ರವಿರುವ ಸ್ಥಳದಲ್ಲಿ ಪ್ರತಿಷ್ಠಾಪಿಸಿರುವುದನ್ನು ಕಾಣುತ್ತೇವೆ. ಈ ಶಿಲ್ಪದ ಪ್ರಭಾವಳಿಯಲ್ಲಿ ದಶಾವತಾರಗಳ ಶಿಲ್ಪಗಳಿರುತ್ತವೆ. ಮತ್ಸ್ಯ ಮತ್ತು ಕೂರ್ಮ ಶಿಲ್ಪಗಳು ಪೂರ್ಣಪ್ರಾಣಿ ರೂಪದಲ್ಲಿರುತ್ತವೆ.

ನಾಲ್ಕು ಕೈಗಳುಳ್ಳ ಜಲಶಯನ ಶಿಲ್ಪವು ನೀರಿನ ಮಧ್ಯದಲ್ಲಿ ಶೇಷನ ಮೇಲೆ ಮಲಗಿರಬೇಕು. ಶಿಲ್ಪದ ೩/೪ ದೇಹದ ಭಾಗವು ಸಮಾಂತರವಾಗಿರಬೇಕು. ಉಳಿದ ೧/೪ ಅಂಶವು ಬಲಭಾಗದಲ್ಲಿ ಹೊರಳಿ ಮಲಗಿರುವಂತಿರಬೇಕು. ತಲೆಯನ್ನು ಸ್ವಲ್ಪ ಎತ್ತರಿಸಿರಬೇಕು ಎಡಗಾಲು ಭೂದೇವಿಯ ತೊಡೆಯ ಮೇಲೆ ಇಟ್ಟಿರಬೇಕು. ಬಲಗಾಲನ್ನು ಭೂದೇವಿಯ ತೊಡೆಯ ಮೇಲಿರುವ ಕಾಲಿನ ಮೇಲೆ ಅಡ್ಡವಾಗಿ ನಿಲ್ಲಿಸಿರಬೇಕು. ನಾಲ್ಕು ಕೈಗಳಲ್ಲಿ ಮೇಲಿನ ಬಲಗೈಯು ತಲೆಗೆ ಆಸರೆಯಾಗಿ ಇಟ್ಟಿರಬೇಕು. ಈ ಕೈಯ ಹತ್ತಿರ ಚಕ್ರವಿರಬೇಕು. ಎಡಗೈಯಲ್ಲಿ ಶಂಖವಿರಬೇಕು. ಕೆಳಗಿನ ಬಲಗೈಯ ಕಟಕ ಹಸ್ತ (ಸಿಂಹಕರ್ಣ) ಹಸ್ತವಾಗಿರಬೇಕು. ಸಂತಾನಮಂಜರಿಯನ್ನು ಹಿಡಿದಿರಬೇಕು. ಕೆಳಗಿನ ಎಡಗೈಯು ಬಲಕಾಲ ಮಂಡೆಯ ಮೇಲೆ ಇರಿಸಿರಬೇಕು, ನಾಭಿ ಬ್ರಹ್ಮನು ಚತುರ್ಮುಖವನ್ನು ಹೊಂದಿ ಕಮಲದಲ್ಲಿ ಕುಳಿತಿರಬೇಕು ಎಂಬ ನಿಯಮವನ್ನು ಹೊಂದಿರಬೇಕೆಂದು ಗ್ರಂಥವು ತಿಳಿಸುತ್ತದೆ.

ಜಲಶಯನ ಶಿಲ್ಪವು ಪ್ರತಿಮಾಲಕ್ಷಣಗಳನ್ನು ಶಿಲ್ಪಶಾಸ್ತ್ರಗ್ರಂಥಗಳು ಈ ಕೆಳಗಿನಂತೆ ವಿವರಿಸಿವೆ.

ವಿಷ್ಣು ಏಳು ಹೆಡೆಯ ಹಾವಿನ ಸುರುಳಿಯ ಮೇಲೆ ಮಲಗಿರಬೇಕು, ನಾಲ್ಕು ಕೈಗಳನ್ನು ಹೊಂದಿರಬೇಕು. ಮೇಲಿನ

* ಗುಮಗೇರಾ ಅಂಚೆ, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ–೫೮೪೧೨೧, ಮೊ. ೯೩೪೬೨೧೧೧೭



ಜಲಶಯನ ಶಿಲ್ಪ

ಬಲಕೈಯು ತಲೆಗೆ ಆಸರೆಯಾಗಿರಬೇಕು. ಮೇಲಿನ ಎಡಗೈಯಲ್ಲಿ ಶಂಖವಿರಬೇಕು ಕೆಳಗಿನ ಬಲಕೈಯು ನಾಭಿಯ ಬಳಿ ಕಟಕಹಸ್ತದಲ್ಲಿರಬೇಕು/ ಸಿಂಹಕರ್ಣ ಹಸ್ತದಲ್ಲಿರಬೇಕು, ಸಂತಾನಮಂಜರಿಯನ್ನು ಹಿಡಿದಿರಬೇಕು ನಾಭಿ ಬ್ರಹ್ಮನು ಕಮಲದಲ್ಲಿ ಕುಳಿತಿರಬೇಕು, ಕಮಲದ ದೇಟನ್ನು ರಾಕ್ಷಸರೂ ಮಧುಕೈಟಭರು ಹಿಡಿದಿರಬೇಕು. ಎಂಬ ನಿಯಮವಿದೆ. ಆದರೆ ವೈಖಾನಸಾಗಮದಲ್ಲಿ ಈ ಶಿಲ್ಪದ ಪ್ರತಿಮಾ ಲಕ್ಷಣದ ವಿವರಣೆ ಇಲ್ಲಾ. ಆದರೆ ಶಿಲ್ಪಶಾಸ್ತ್ರಗ್ರಂಥಗಳು ವಿವರಿಸುತ್ತದೆ. ಶಯನ ಶಿಲ್ಪಗಳ ಪ್ರತಿಮಾಲಕ್ಷಣಗಳಲ್ಲಿ ಸ್ವಲ್ಪ ಬದಲಾವಣೆಯನ್ನು ಈ ಜಲಶಯನ ಶಿಲ್ಪದಲ್ಲಿ ನಿರೂಪಿಸಲಾಗಿದೆ, ೯ನೇ ಶತಮಾನದ ನಂತರ ದೊರೆತ ಶಿಲ್ಪಗಳನ್ನು ಖಚಿತವಾಗಿ ಜಲಶಯನ ಶಿಲ್ಪವೆಂದು ಶಿಲ್ಪಶಾಸ್ತ್ರಗ್ರಂಥಗಳಲ್ಲಿರುವ ಚಿಕ್ಕ ಬದಲಾವಣೆಯನ್ನು ಶಿಲ್ಪಿಯು ತೋರಿಸಿ ಇದನ್ನು ಜಲಶಯನ ಶಿಲ್ಪದ ಪ್ರತಿಮಾಲಕ್ಷಣವನ್ನು ವಿವರಿಸಿದ್ದಾನೆ.[೩]

ಈ ಶಿಲ್ಪವು ಏಳು ಹೆಡೆಯ ಹಾವಿನ ಒಂದೇ ಸುರಳಿಯ ಮೇಲೆ ಶಯನ ಭಂಗಿಯಲ್ಲಿದೆ. ನಾಲ್ಕು ಕೈಗಳನ್ನು ಹೊಂದಿರುವ ವಿಷ್ಣುವು ಮೇಲಿನ ಬಲಗೈಯನ್ನು ತಲೆಗೆ ಆಸರೆಯಾಗಿಟ್ಟುಕೊಂಡಿದ್ದಾನೆ. ಮೇಲಿನ ಎಡಗೈಯಲ್ಲಿ ಶಂಖವನ್ನು ಹಿಡಿದಿದ್ದಾನೆ. ಕೆಳಗಿನ ಬಲಕೈಯು ಕಟಕಮುದ್ರೆಯಲ್ಲಿದ್ದು. ಸಂತಾನಮಂಜರಿಯನ್ನು (ಸಂತಾನ ಎಂದರೆ ಪೀಳಿಗೆ ಅಥವಾ ವಂಶೋತ್ಪತ್ತಿ ಎಂದು ಅರ್ಥ, ಮಂಜರಿ ಎಂದರೆ ಹೂವಿನ ಗೊಂಚಲು)ಹಿಡಿದಿದೆ ಇದು ವಿಷ್ಣುವಿನ ನಾಭಿಯಿಂದ ಬ್ರಹ್ಮನ ಜನನದ ಸೂಚನೆ ತೋರಿಸುತ್ತದೆ. ಕೆಳಗಿನ ಎಡಗೈಯು ಎತ್ತರಿಸಿದ ಎಡಮಂಡೆಯ ಮೇಲಿದೆ. ಜಲಶಯನ ಶಿಲ್ಪದ ಎಡ ಮತ್ತು ಬಲಕಾಲುಗಳ ಭಂಗಿಯು ಬೇರೆಯಾಗಿದೆ. ಬಲಗಾಲನ್ನು ಭೂದೇವಿಯ ತೊಡೆಯ ಮೇಲೆ ಇಟ್ಟಿದೆ. ಭೂದೇವಿಯು ಬಲಗಾಲನ್ನು ಒತ್ತುತ್ತಿರುವಂತೆ ತನ್ನ ಎರಡು ಕೈಗಳಿಂದ ಕಾಲನ್ನು ಮುಟ್ಟುವಂತೆ ತೋರಿಸಲಾಗಿದೆ. ಎಡಗಾಲನ್ನು ಬಲಗಾಲ ಮೇಲೆ ಅಡ್ಡವಾಗಿ ಹಾಕಿ ಎತ್ತರಿಸಿದಂತೆ. ಈ ಶಯನ ವಿಷ್ಣುವಿನ ಪ್ರಭಾವಳಿಯಲ್ಲಿ ದಶಾವತಾರಗಳನ್ನು ಕೆತ್ತಲಾಗಿದೆ. ಮತ್ಸ್ಯಾವತಾರವನ್ನು ಮೀನಿನ ರೂಪದಲ್ಲಿ, ಕೂರ್ಮವತಾರವನ್ನು ಆಮೆಯ ರೂಪದಲ್ಲಿ ತೋರಿಸಲಾಗಿದೆ. ವಾಮನನಿಂದ ಹಿಡಿದ, ಕಲ್ಕಿಯ ರೂಪವನ್ನು ಮಾನವಾತಾರದಲ್ಲಿ ತೋರಿಸಿದೆ.

ಈ ಶಿಲ್ಪವು ೧೫ನೇ ಶತಮಾನಕ್ಕೆ ಸೇರಿದ ಶಿಲ್ಪವಾಗಿದೆ. ಕೃಷ್ಣದೇವರಾಯನ ಕಾಲದಲ್ಲಿ ಶಯನ ಶಿಲ್ಪಗಳು ಹೆಚ್ಚಾಗಿ ಕಂಡುಬಂದಿದೆ. ಉದಾ: ಅನಂತಶಯನ ಗುಡಿ ಎಂಬ ಗ್ರಾಮದಲ್ಲಿ ಪ್ರಸಿದ್ಧವಾದ ವಿಶೇಷ ವಾಸ್ತುವಿನ್ಯಾಸ ಹೊಂದಿದ ಅನಂತಶಯನನ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ ಆದರೆ ಪ್ರಸ್ತುತ ಗರ್ಭಗೃಹದಲ್ಲಿ ಶಿಲ್ಪವಿಲ್ಲ. ನಾಗೇನ ಹಳ್ಳಿಯ ನಾಗಶಯನ ದೇವಾಲಯ ಹೀಗೆ ಹಲವು ದೇವಾಲಯಗಳಲ್ಲಿ ಶಿಲ್ಪಗಳು ರಚನೆಯಾದವು. ಹಂಪಿ ಪರಿಸರದಲ್ಲಿ ಹಲವು ಶಯನಭಂಗಿಯ ಉಬ್ಬು ಶಿಲ್ಪಗಳಿವೆ. ಈ ಶಿಲ್ಪವು ಹೇಮಾದ್ರಿಯ ಚತುರವರ್ಗ ಚಿಂತಾಮಣಿಯ ವಿವರಣೆಯಂತೆ ಕೆತ್ತಲಾಗಿದೆ. ವೈಖಾನಸಾಗಮವು ವಿಷ್ಣುವಿನ ಶಯನ ಶಿಲ್ಪಗಳ ಬಗ್ಗೆ ವಿವರಿಸಿದೆ ಆದರೆ ಜಲಶಯನ ಶಿಲ್ಪದ ಪ್ರತಿಮಾಲಕ್ಷಣದ ಬಗ್ಗೆ ವಿವರಿಸಿಲ್ಲ. ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ಈ ಶಿಲ್ಪದ ಪ್ರತಿಮಾ ಲಕ್ಷಣದ ವಿವರಣೆಯಿದೆ. ಈ ಶಿಲ್ಪವನ್ನು ಶಿಲ್ಪಶಾಸ್ತ್ರದ ಅನ್ವಯ ಶಿಲ್ಪಿಯು ಕೆತ್ತಿದ್ದಾನೆ. ಆದರೆ ದೇವಾಲಯವನ್ನು ಗಮನಿಸಿದಾಗ ಆ ಕೆರೆಯ ದಂಡೆಯಲ್ಲಿರುವ ಶಾಸನದ ಕಾಲವು ಈ ಶಿಲ್ಪದ ರಚನೆಯ ಕಾಲಕ್ಕೆ ಹೊಂದಾಣಿಕೆಯಾಗಿಲ್ಲ, ೧೯ನೇ ಶತಮಾನಕ್ಕೆ ಸೇರುತ್ತದೆ. ಆದರೆ ಗರ್ಭಗೃಹದಲ್ಲಿರುವ ಶಿಲ್ಪವು ಎಲ್ಲಿಂದ ಈ ದೇವಾಲಯಕ್ಕೆ ಬಂದಿದೆಯೋ ವಿವರ ತಿಳಿದಿಲ್ಲಾ. ಆದರೆ ನಾಗೇನಹಳ್ಳಿಯ ನಾಗಶಯನ ಶಿಲ್ಪದ ಲಕ್ಷಣವನ್ನು ಹೋಲುತ್ತದೆ. ಶಯನ ಶಿಲ್ಪಗಳನ್ನು ಕೆರೆಯ ದಂಡೆ, ಪುಷ್ಕರಣಿಯ ಹತ್ತಿರ ಮತ್ತು ನೀರು ಇರುವ ಸ್ಥಳಗಳಲ್ಲಿ ಈ ಶಿಲ್ಪಗಳು ಇರಬೇಕೆಂಬ ನಿಯಮವನ್ನು ಶಿಲ್ಪಶಾಸ್ತ್ರಗ್ರಂಥಗಳು ವಿವರಿಸುತ್ತವೆ. ಅದೇ ನಿಯಮದ ಪ್ರಕಾರ ಶಿಲ್ಪವು ಕೆರೆಯ ದಂಡೆಯ ಮೇಲಿರುವ ಚಿಕ್ಕ ದೇವಾಲಯದಲ್ಲಿ ಈ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.

ಶರಣಬಸಪ್ಪ ಕೋಲ್ಕಾರರವರು ವಿಜಯನಗರ ಅಧ್ಯಯನ ಸಂ.೧೭ರಲ್ಲಿ "ಗಂಗಾವತಿ ತಾಲ್ಲೂಕಿನಲ್ಲಿ ವಿಜಯನಗರ ಕಾಲದ ನೀರಾವರಿ ವ್ಯವಸ್ಥೆ", ಎಂಬ ಲೇಖನವನ್ನು ಪ್ರಕಟಿಸಿದ್ದಾರೆ. ಈ ಲೇಖನದಲ್ಲಿ ಅವರು ಈ ದೇವಾಲಯ ಮತ್ತು

ಶಿಲ್ಪಗಳು ೧೯ನೇ ಶತಮಾನಕ್ಕೆ ಸೇರಿವೆ ಎಂದು ವಿವರಿಸಿದ್ದಾರೆ. ಆದರೆ ದೇವಾಲಯ, ಶಿಲ್ಪ, ಬೇರೆ ಬೇರೆ ಕಾಲಕ್ಕೆ ಸೇರುತ್ತವೆ.

ಈ ದೇವಾಲಯ ಮತ್ತು ಶಿಲ್ಪವನ್ನು ಮರು ಪರಿಶೀಲಿಸಿದಾಗ, ದೇವಾಲಯ ಆನೆಗೊಂದಿ ಅರಸರ ಕಾಲದಲ್ಲಿ ನಿರ್ಮಾಣವಾಗಿದೆ. ಆದರೆ ಗರ್ಭಗೃಹದ ಶಿಲ್ಪ ಮಾತ್ರ ಪ್ರಾಚೀನವಾಗಿದೆ ಎಂದು ಶಿಲ್ಪದ ಲಕ್ಷಣಗಳನ್ನು ಗಮನಿಸಿ ಇದು ಕೃಷ್ಣದೇವರಾಯನ ಕಾಲದ್ದಾಗಿದೆ ಎಂದು ಗುರುತಿಸಬಹುದಾಗಿದೆ.

ಈ ಜಲಶಯನ ವಿಷ್ಣು ಶಿಲ್ಪವು ಕಿರೀಟಮಕುಟವನ್ನು ಧರಿಸಿದೆ. ಕಿವಿಗಳಲ್ಲಿ ಮಕರಕುಂಡಲಗಳಿವೆ, ಕೊರಳಲ್ಲಿ ಕಂಠಹಾರ ಇವೆ. ಈ ಶಿಲ್ಪದಲ್ಲಿ ಮುತ್ತಿನ ಅಲಂಕರಣೆಯ ಯಜ್ಞೋಪವಿತವಿರುವುದು ವಿಶೇಷ. ಬಾಹುವಲಯ, ಕೈಗಡಗಳು, ಕಂಕಣಗಳು, ಕಟಿಯ ಭಾಗದಲ್ಲಿ ಉರುದಾಮವು ಮುತ್ತಿನ ಸರ ಇದೆ. ಧೋತಿಯು ತೊಡೆಯವರೆಗೆ ಇದೆ. ಕಾಲುಗಳಲ್ಲಿ ಕಾಲುಗಡಗಗಳು ಗೆಜ್ಜೆಯ ಸರಗಳು ಇವೆ, ಪಾದಸರಗಳು ಸ್ಪಷ್ಟವಾಗಿ ಗೋಚರಿಸುತ್ತದೆ. ಭೂದೇವಿಯು ಬಲ ಪಾದದ ತುದಿಯಲ್ಲಿ ಕುಳಿತಿದ್ದಾಳೆ, ಕರಂಡಮಕುಟ, ಕಂಠಹಾರ, ತೋಳ್ಬಂದಿಗಳು, ಸೀರೆಯನ್ನು ಧರಿಸಿದ್ದಾಳೆ. ವಿಷ್ಣುವಿನ ಸೇವೆಯಲ್ಲಿ ನಿರತಳಾಗಿರುವಂತೆ ತೋರಿಸಲಾಗಿದೆ.

ಕೆಲವು ವಿದ್ವಾಂಸರು ತಮ್ಮ ಗ್ರಂಥಗಳಲ್ಲಿ ಈ ಶಿಲ್ಪದ ಬಗ್ಗೆ ಅಧ್ಯಯನಮಾಡಿ ವಿವರಣೆ ನೀಡಿದ್ದಾರೆ. ಆದರೆ ಜಲಶಯನ ಶಿಲ್ಪದ ಬಗ್ಗೆ ಪೂರ್ಣ ಮಾಹಿತಿ ಒಳಗೊಂಡಿಲ್ಲ.

ಒಟ್ಟಾರೆಯಾಗಿ ಹಂಪಿ ಪರಿಸರದಲ್ಲಿ ದೊರೆತ ಈ ಶಿಲ್ಪವು ವಿಶೇಷತೆಯಿಂದ ಕೂಡಿದೆ. ಜಲಶಯನ ಶಿಲ್ಪವು ವಿಶೇಷವಾದ ಪ್ರತಿಮಾಲಕ್ಷಣಗಳನ್ನು ಹೊಂದಿದೆ. ವೈಖಾನಸಾಗಮದಲ್ಲಿ ಈ ಶಿಲ್ಪದ ವಿವರಣೆ ಇಲ್ಲ ಆದರೆ ಶಿಲ್ಪ ಶಾಸ್ತ್ರಗ್ರಂಥವಾದ ಹೇಮಾದ್ರಿಯ ಚತುರವರ್ಗ ಚಿಂತಾಮಣಿ ಮತ್ತು ದೇವತಾ ಮೂರ್ತಿ ಪ್ರಕರಣದಲ್ಲಿ ಮಾತ್ರ ಈ ಜಲಶಯನ ಶಿಲ್ಪದ ಪ್ರತಿಮಾಲಕ್ಷಣದ ಬಗ್ಗೆ ವಿವರಣೆ ಇದೆ. ಅದೇ ವಿವರಣೆಯ ಹಿನ್ನೆಲೆಯಲ್ಲಿ ಸಂಗಾಪುರದಲ್ಲಿರುವ ಲಕ್ಷ್ಮೀನಾರಾಯಣ ಕೆರೆಯ ದಂಡೆಯಲ್ಲಿರುವ ದೇವಾಲಯದ ಈ ಶಿಲ್ಪವು ವಿಶೇಷವಾಗಿದೆ. ಹಂಪಿ ಪರಿಸರದಲ್ಲಿ ಒಟ್ಟು ೧೬ ಶಯನ ಶಿಲ್ಪಗಳು ದೊರೆತಿವೆ ಅದರಲ್ಲಿ ದುಂಡು ಶಿಲ್ಪಗಳ ಸಂಖ್ಯೆಯು ಕಡಿಮೆ ಇದ್ದು, ಉಬ್ಬು ಶಿಲ್ಪಗಳು ಹೆಚ್ಚಾಗಿ ದೊರೆತಿವೆ. ಆದರೆ ಜಲಶಯನ ಶಿಲ್ಪಗಳು ಇರುವುದು ವಿರಳ, ಆದರೆ ಈ ಜಲಶಯನ ಶಿಲ್ಪವು ವಿಶೇಷವಾಗಿದೆ ಎಂಬುದನ್ನು ಶಿಲ್ಪದ ಪ್ರತಿಮಾಲಕ್ಷಣಗಳ ಅಧ್ಯಯನದಿಂದ ತಿಳಿಯುತ್ತದೆ.



## ಅಡಿಟಿಪ್ಪಣಿಗಳು

೧. ಕೃಷ್ಣಶಾಸ್ತ್ರಿ ಹೆಚ್., "ಸೌತ್ ಇಂಡಿಯನ್ ಇಮೇಜಸ್ಸ್", ಪು. ೫೨.

೨. ಕಲ್ಪನಾ ದೇಸಾಯಿ, "ಐಕೋನೋಗ್ರಫಿ ಆಫ್ ವಿಷ್ಣು", ಪು.೨೬.

೩. ಟಿ.ಎ.ಗೋಪಿನಾಥರಾವ್, "ಎಲಿಮೆಂಟ್ಸ ಆಫ್ ಹಿಂದೂ ಐಕೋನೋಗ್ರಫಿ", ಸಂ. ೧. ಭಾಗ.೧, ಪು. ೨೬೩-೨೬೪.

## ಆಕರ ಗ್ರಂಥಗಳು


೧. ಶರಣಬಸಪ್ಪ ಕೋಲ್ಕಾರ, 'ಗಂಗಾವತಿ ತಾಲ್ಲೂಕಿನ ವಿಜಯನಗರ ಕಾಲದ ನೀರಾವರಿ ವ್ಯವಸ್ಥೆ', ವಿಜಯನಗರ ಅಧ್ಯಯನ. ಸಂ.೧೭ ಪು. ೧೪೦-೧೪೫.

೨. ಕೆ.ಎಂ.ಸುರೇಶ, "ಸ್ಕಲ್ಪಚರಲ್ ಆರ್ಟ ಆಫ್ ಹಂಪಿ", ಪು.೮೨-೮೩.

೩. ಶ್ರೀನಿವಾಸ ಪಾಡಿಗಾರ್, "ವಿಷ್ಣು ಕಲ್ಪ ಇನ್ ಕರ್ನಾಟಕ", ಪು. ೧೭೦-೧೭೧.

೪. ಟಿ.ಎ.ಗೋಪಿನಾಥರಾವ್, ಪೂರ್ವೋಕ್ತ, ಸಂ. ೧. ಭಾಗ.೧, ಪು. ೨೬೩-೨೬೫.

೫. ಎಸ್.ಕೆ.ರಾಮಚಂದ್ರರಾವ್, "ಮೂರ್ತಿಶಿಲ್ಪದ ನೆಲೆ-ಹಿನ್ನೆಲೆ", ಪು. ೧೫೬-೧೫೭.

೬ ಅನ್ನಾಡೆಲ್ಲಾ ಪಿಕ್ಕೊಲ್ಲಾ ಮತ್ತು ಅನಿಲಾವರ್ಗಿಸ್, "ಸ್ಕಲ್ಪಚರ್ ಆ್ಯಟ್ ವಿಜಯನಗರ ಐಕೋನೋಗ್ರಫಿ ಆ್ಯಂಡ್ ಸ್ಟೈಲ್" ಪು.೫೪-೫೫.

೭. ದೇವದತ್ತ ಪಟ್ನಾಯಕ್, ಕನ್ನಡಕ್ಕೆ ಅನುವಾದ ಜಿ.ಬಿ.ಹರೀಶ, "ವಿಷ್ಣುವಿನ ಏಳು ರಹಸ್ಯಗಳು", ಪು. ೧೨-೧೩.

೮. ಪದ್ಮಜಾ ದೇಸಾಯಿ, "ಹಂಪಿ ಪರಿಸರದ ವೈಷ್ಣವ ಶಿಲ್ಪಗಳು", ಪಿಎಚ್.ಡಿ. ಮಹಾಪ್ರಬಂಧ (ಅಪ್ರಕಟಿತ), ಪು.೨೭೮-೨೮೦.

೯. ಸಿ.ಎಸ್ ವಾಸುದೇವನ್, "ಹಂಪಿ ಪರಿಸರದ ಕೆರೆಗಳು", ಪು.೨೦-೨೨.

೧೦. ಸಿ.ಮಹಾದೇವ್, "ಹಂಪಿ ಪರಿಸರದ ಮತ್ತಷ್ಟು ಕೆರೆಗಳು", ವಿಜಯನಗರ ಅಧ್ಯಯನ, ಸಂ.೧೭ ಪು.೬೪-೬೮.

೭೩

# ಮಾಳೂರಿನಲ್ಲಿ ದೊರೆತ ಜೈನ ತೀರ್ಥಂಕರ ವಿಗ್ರಹ

ನಿಂಗನಗೌಡ ಹ. ದೇಸಾಯಿ*

**ಯಾ**ದಗಿರಿ ಜಿಲ್ಲೆಯ ತಾಲೂಕ ಕೇಂದ್ರವಾಗಿರುವ ಹುಣಸಗಿಯಿಂದ ಪಶ್ಚಿಮಕ್ಕೆ ೪ ಕಿ.ಮೀ. ಹೋದರೆ ಅಲ್ಲೊಂದು ಪುಟ್ಟ ಗ್ರಾಮ ಬರುತ್ತದೆ ಅದುವೇ ಮಾಳನೂರ ಗ್ರಾಮ. ಈ ಗ್ರಾಮವು ತಾಲೂಕಿನ ಕೊನೆಯ ಹಳ್ಳಿಯಾಗಿದೆ. ಮಾಳ ಎಂದರೆ ಎತ್ತರವಾದ ಭೂಪ್ರದೇಶ ಅಥವಾ ದಿಬ್ಬ ಎಂದು ಅರ್ಥ. ಈಗಲೂ ಈ ಊರಿನ ಹಿಂದೆ ಎತ್ತರವಾದ ದಿಬ್ಬವಿದೆ. ಅದಕ್ಕಾಗಿ ಈ ಊರಿಗೆ ಮಾಳನೂರು ಎಂಬ ಹೆಸರು ಬಂದಿರಬಹುದು. ಅಲ್ಲದೇ ನಿಜಾಮನ ಆಳ್ವಿಕೆಯ ಕಾಲದಲ್ಲಿ ಈ ಊರು ಗಡಿ ಪ್ರದೇಶದ ಗ್ರಾಮವಾಗಿತ್ತು. ಈ ಊರಲ್ಲಿ ಹಾಳಾದ ಕಾವಲುಗೋಪುರ ಇದೆ. ಹೀಗೆ ಗಡಿ ಭಾಗದ ಹಳ್ಳಿ ಮಾಳನೂರು ತನ್ನ ಆದ ಇತಿಹಾಸ ಹೊಂದಿದೆ. ಬರಿ ಇಷ್ಟೇ ಆಗಿದ್ದರೆ ಈ ಗ್ರಾಮದ ಬಗ್ಗೆ ಇಷ್ಟೊಂದು ಚರ್ಚಿಸುವ ಅಗತ್ಯವಿರಲಿಲ್ಲ. ಆದರೆ ಇತ್ತೀಚಿಗೆ ಒಂದು ಪುರಾತನ ಜೈನ ವಿಗ್ರಹ ಈ ಗ್ರಾಮದಲ್ಲಿ ಪತ್ತೆಯಾಗಿದ್ದರಿಂದ ಹೆಚ್ಚು ಮಹತ್ವ ಬಂದಿದೆ, ಅಂದರೆ ಮುದ್ದೇಬಿಹಾಳ ತಾಲೂಕಿನ ಬಂಡೇಪ್ಪನಳ್ಳಿ ಸಾಲಾವಾಡಗಿ ಗ್ರಾಮದ ಸಾಹೇಬಗೌಡ ಎಂಬುವವರು ಮನೆ ಕಟ್ಟಲು ಹಾಳು ಮಣ್ಣು ತರುವ ನಿಮಿತ್ತ ಮಾಳನೂರು ಗ್ರಾಮದ ಶಾಲೆಯ ಮುಂದಿನ ಭಾಗದಲ್ಲಿರುವ ಗುಡ್ಡದ ಬದಿಯಲ್ಲಿ ಅಣ್ಣಪ್ಪಗೌಡ ಭೀಮರಾಯ ಹದ್ದಿನಾಳ ಇವರ ಹೊಲದಲ್ಲಿ ಹಾಳು ಮಣ್ಣು ಅಗೆಯುವಾಗ ಈ ತೀರ್ಥಂಕರ ವಿಗ್ರಹ ದೊರೆಯುತ್ತದೆ ಅಣ್ಣಪ್ಪಗೌಡರ ಅನುಮತಿ ಪಡೆದು ಸಾಹೇಬಗೌಡರು ಈ ವಿಗ್ರಹವನ್ನು ಸಾಲಾವಾಡಗಿ ಗ್ರಾಮಕ್ಕೆ ತೆಗೆದುಕೊಂಡು ಹೋಗಿ ತಮ್ಮ ಮನೆ ಕಟ್ಟುವ ಜಾಗದಲ್ಲಿ ಇಟ್ಟು ಊರಿನ ನಾರಿಯರಿಂದ ಪೂಜೆ ಸಲ್ಲಿಸಿದ್ದು ನಂತರ ತಾಳಿಕೋಟಿಯ ಜೈನ ಸಮಾಜದವರು ಈ ವಿಗ್ರಹ ತಾಳಿಕೋಟಿಯ ಜೈನ ಮಂದಿರಕ್ಕೆ ತೆಗೆದುಕೊಂಡು ಹೋಗಲು ನಿರ್ಧರಿಸಿದರು. ಈ ವಿಷಯ ಅನಂತರರಾಜ್.ಬ.ಉಪಾಧ್ಯ ತಾಳಿಕೋಟಿ ಅವರ ಬರೆದ ದಿನಾಂಕ ೧೧/೦೨/೨೦೦೪ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ನೋಡಿ ಈ ವಿಗ್ರಹ ನಮ್ಮ ತಾಲೂಕಿನಲ್ಲಿ ಸಿಕ್ಕಿದ್ದರಿಂದ ನಮಗೆ ಸೇರಿದ್ದು ಎಂದು ಕಿಶೋರ್ ಚಂದ್ ಜೈನ್ ಅವರು ತಮ್ಮ ಜೈನ ಸಮಾಜದ ಎಲ್ಲರೊಂದಿಗೆ ಸಾಲವಾಡಗಿಗೆ ತೆರಳಿ ವಿಗ್ರಹವನ್ನು ಪಡೆಯುವಲ್ಲಿ ಯಶಸ್ವಿಯಾದರು. ಸದ್ಯ ಈ ವಿಗ್ರಹ ಸುರುಪುರ ಜೈನ ಮಂದಿರದಲ್ಲಿ ಇಡಲಾಗಿದೆ. ಈ ವಿಗ್ರಹವು ಹಸಿರು ಗ್ರಾನೈಟ್ ಕಲ್ಲಿನಿಂದ ಕೆತ್ತಲಾಗಿದೆ. ೨.೫ ಅಡಿ ಅಗಲ ೩.೫ ಅಡಿ ಎತ್ತರದಿಂದ ಕೂಡಿದೆ. ಮುಕ್ಕೊಡೆ, ಪ್ರಭಾವಳಿ, ಸಿಂಹಾಸನ, ದಿಂಬು, ದಿಂಬದ ಹಿಂದೆ ಮಕರ ಪಟ್ಟಿ ಬಿಡಿಸಿದ್ದಾರೆ. ಮಗ್ಗುಲಲ್ಲಿ ಎರಡು ಸಿಂಹಾಸನ, ಎರಡು ಕಾಲು ಮೇಲೆತ್ತಿ ನಿಂತ ಸಿಂಹಗಳ ಬಾಲ ಸುರುಳಿ ಆಕಾರದಲ್ಲಿದೆ. ಮಕರ ಪಟ್ಟಿಯ ಎರಡು ಬದಿಗೆ ಮಕರದ ಬಾಯಿ ಆನೆಯ ಸೊಂಡಿಯಿಂದ ಹಾರ ಎತ್ತುವಂತೆ ಕಾಣುತ್ತದೆ, ಅಲ್ಲದೆ ಎರಡು ಬದಿಗೆ ಚಾಮರಧಾರರು ಚಾಮರ ಬೀಸುತ್ತಾ ನಿಂತಿದ್ದಾರೆ. ಆ ಚಾಮರಧಾರಿಗಳ ಕಿವಿಯಲ್ಲಿ ಕಿವಿಯೋಲೆ, ಸೊಂಟಕ್ಕೆ ಸೊಂಟಪಟ್ಟಿ ಕೊರಳಲ್ಲಿ ಹಾರ, ತಲೆಯ ಮೇಲೆ ಕಿರೀಟ ಕೆತ್ತಲಾಗಿದೆ. ಈ ತೀರ್ಥಂಕರ ವಿಗ್ರಹ ಪದ್ಮಾಸನದಲ್ಲಿ ಧ್ಯಾನಾಸಕ್ತನಾಗಿ ಕುಳಿತ ಭಂಗಿಯಲ್ಲಿದೆ. ವಿಗ್ರಹದ ಬಲಗೈ ಹೆಬ್ಬೆರಳು ತೃಟಿತಗೊಂಡಿದೆ, ಕಣ್ಣು, ಮೂಗು ಕಾಲನ ಹೊಡೆತಕ್ಕೆ ಸವೆದಿದೆ. ಮೈಮೇಲೆ ಕಲ್ಲಿನಿಂದ ಹೊಡೆದ ಕಚ್ಚುಗಳು ಬಿದ್ದಿವೆ. ನೆತ್ತಿಯ ಮೇಲೆ ಜಡೆ ಕಟ್ಟಿದಂತೆ ಕಾಣುತ್ತದೆ. ಶೈಲಿಯ ದೃಷ್ಟಿಯಿಂದ ನೋಡಲಾಗಿ ಇದು ೯ನೇ ಶತಮಾನದ್ದಾಗಿರಬಹುದು ಎಂದು ಉಹಿಸಬಹುದಗಿದೆ. ಈ ಮಾಳನೂರಿನಲ್ಲಿ ಸ್ಥಳೀಯರು ಜಿನ ದೇವರ ಗುಡಿ ಅಥವಾ ಕತ್ತಲಗುಡಿ (ಹೊತ್ತಲಗುಡ್ಡ) ಎಂದು ಕರೆಯುವ ಬಾಗಿಲ ಮುಚ್ಚಿ ಒಳಗೆ ಹಾಳಾದಂತೆ ಕಾಣುವ ದಿಬ್ಬವಿದೆ. ಈ ವಿಗ್ರಹ ಮೂಲತಃ ಇಲ್ಲಿಯದೇ ಆಗಿರಬಹುದು ಎಂಬುವುದು ಸ್ಥಳೀಯರ ಅಭಿಪ್ರಾಯ. ಇದರ ಪಕ್ಕದಲ್ಲಿ ಕಾಳಿಕಾ ಮಂದಿರವಿದೆ. ಇಲ್ಲಿ ಕಾಳಿಕಾ ಪ್ರತಿಮೆ ಇದೆ. ಈ ತೀರ್ಥಂಕರ ವಿಗ್ರಹ ಸುಂದರ ಕೆತ್ತನೆಯಿಂದ ಕೂಡಿದ್ದು ಈ ತಾಲೂಕಿನಲ್ಲಿ ದೋರೆತಿರುವ ಒಂದು ಅಪೂರ್ವ ಜೈನ ತೀರ್ಥಂಕರ ಎಂದು ಹೇಳಬಹುದು. ಈ ಊರಿನಲ್ಲಿ ಇತ್ತೀಚಿನ ದೇವಾಲಯಗಳು ಬಿಟ್ಟರೆ ಬೇರೆ ಐತಿಹಾಸಿಕ ದೇವಾಲಯಗಳು ಕಾಣುವುದಿಲ್ಲ. ಇದಲ್ಲದೇ ಈ ಊರಿನಲ್ಲಿ ಇತ್ತೀಚಿನ ಪ್ರಸಿದ್ದ ಹನುಮಂತ ದೇವಾಲಯ ಇದೆ. ಮುಖ್ಯ ವಿಷಯ ಸುರುಪುರದ ಜೈನ

* ಪರಸರಹಳ್ಳಿ, ಶಿಕ್ಷಕರು, ಸರ್ಕಾರಿ ಬಾಲಕಿಯರ ಪ್ರೌಢಶಾಲೆ, ಕೆಂಭಾವಿ, ಮೊ. ೯೮೪೫೩೩೮೮೯೮



ಅಣ್ಣಪ್ಪಗೌಡರ ಹೊಲದಲ್ಲಿ ದೊರೆತಾಗ ಇದ್ದ ಮೂಲ ವಿಗ್ರಹದ ಚಿತ್ರ



ಅದೇ ವಿಗ್ರಹ ಸುರಪುರದ ಶ್ವೇತಾಂಬರ ಜೈನ ಮಂದಿರದಲ್ಲಿ ಅಲಂಕೃತಗೊಂಡ ನಂತರದ ಚಿತ್ರ

ಮಂದಿರಕ್ಕೆ ನಾನು ಇತ್ತಿಚೆಗೆ ಭೇಟಿ ನೀಡಿದಾಗ ಈ ವಿಗ್ರಹ ಜೈನ ಮಂದಿರದ ಪಡಶಾಲೆಯಲ್ಲಿ ಪಶ್ಚಿಮಕ್ಕೆ ಮುಖಮಾಡಿ ದೊಡ್ಡ ಪೀಠದ ಮೇಲೆ ಕೂರಿಸಿದ್ದಾರೆ. ಆದರೆ ದುರ್ದೈವಶಾತ್ ಮೂಲ ವಿಗ್ರಹಕ್ಕೆ ಭಂಗ ಬರುವಂತಹ ಬಣ್ಣದಿಂದ ಅಲಂಕಾರ ಮಾಡಿದ್ದಾರೆ. ವಿಗ್ರಹದ ಕೆಳಗೆ, ಎದೆಯ ಮೇಲೆ ಪಂಚಭುಜಾಕೃತಿ ಚಿತ್ರ ಬಿಡಿಸಿದ್ದಾರೆ. ಕಣ್ಣು, ಕಿವಿ ಬಾಯಿ ಎಲ್ಲಾ ಆಧುನೀಕರಣಗೊಳಿಸಲಾಗಿದೆ. ಹಣೆಗೆ ಹರಳು ಅಂಟಿಸಲಾಗಿದೆ. ಒಟ್ಟಾರೆ ವಿಗ್ರಹದ ಮೈಮೇಲೆ ಇಂದು ಯಾವುದೇ ಕಚ್ಚುಗಳು ಕಾಣುವುದಿಲ್ಲ, ಕಾರಣ ಎಲ್ಲಾ ಬಣ್ಣದಲ್ಲಿ ಮುಳುಗಿ ಹೋಗಿದೆ. ಒಟ್ಟಾರೆ ಈ ವಿಗ್ರಹವನ್ನು ಇಂದು ಶ್ವೇತಾಂಬರ ಸಂಪ್ರದಾಯದಂತೆ ಪೂಜೆ ಮಾಡುತ್ತಿದ್ದಾರೆ.



# ೭೪

# ಬಂಕಾಪುರದ ನಗರೇಶ್ವರ ದೇವಾಲಯದ ಕಥಾನಿರೂಪಕ ಶಿಲ್ಪಗಳು

**ದತ್ತಪ್ರಸನ್ನ ಪಾಟೀಲ***

ಕರ್ನಾಟಕದ ಪ್ರಾಚೀನ ಐತಿಹಾಸಿಕ ಕೇಂದ್ರಗಳಲ್ಲೊಂದಾದ ಬಂಕಾಪುರವು ಅನೇಕ ಅವಶೇಷಗಳನ್ನು ಹೊಂದಿದ್ದು, ಇತಿಹಾಸ ಪ್ರಿಯರ ನೆಚ್ಚಿನ ಕೇಂದ್ರವಾಗಿದೆ. ಬಂಕಾಪುರದ ಹೆದ್ದಾರಿಯ ಮೇಲಿನ ಕೋಟೆಯ ಒಳಭಾಗದಲ್ಲಿ ಈ ದೇವಸ್ಥಾನವಿದ್ದು, ಭೂಮಿಯ ಸಮಪಾತಳಿಯಿಂದ ಮೂರು ಮೀಟರ್ ತೆಗ್ಗಿನಲ್ಲಿ ನಿರ್ಮಾಣಗೊಂಡಿದೆ. ಈ ದೇವಸ್ಥಾನದ ವಿಶಾಲವಾದ ಸಭಾಮಂಟಪದಲ್ಲಿ ಅರವತ್ತು ಕಂಬಗಳಿರುವುದರಿಂದ ಸ್ಥಳೀಯರು ಇದಕ್ಕೆ ಅರವತ್ತು ಕಂಬದ ಗುಡಿ ಎಂದು ಕರೆಯುತ್ತಾರೆ. ಈ ದೇವಸ್ಥಾನವು ತನ್ನ ಕಥಾನಿರೂಪಕ ಶಿಲ್ಪಗಳಿಂದ ಕಲಾ ಪ್ರಿಯರ ಗಮನ ಸೆಳೆಯುತ್ತದೆ. ಕನ್ನಡದ ಕೆಲವು ಶಾಸನಗಳಲ್ಲಿ ವ್ಯಾಪಾರಸ್ಥರನ್ನು 'ನಖರು' ಎಂದು ಸಂಭೋಧಿಸಲಾಗಿದೆ. "ಬಂಕಾಪುರದ ನಗರೇಶ್ವರ ದೇವಸ್ಥಾನವು ಇಂತಹ ನಖರ ಸಹಾಯದಿಂದ ನಿರ್ಮಾಣಗೊಂಡಿದ್ದು, ದೇವಾಲಯಕ್ಕೆ ಸಂಬಂಧಿಸಿದ ಶಾಸನಗಳಲ್ಲಿ ನಕರೇಶ್ವರ ಎಂದು ಉಲ್ಲೇಖಗೊಂಡಿದ್ದು, ನಗರೇಶ್ವರ ದೇವಾಲಯ ಎಂದು ಹೆಸರುವಾಸಿಯಾಗಿದೆ"[೧].

"ನಗರೇಶ್ವರ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ, ಮತ್ತು ನವರಂಗಕ್ಕೆ ಪೂರ್ವ, ದಕ್ಷಿಣ, ಉತ್ತರ (ಸಧ್ಯ ಮುಚ್ಚಿದೆ) ದಿಕ್ಕುಗಳಲ್ಲಿ ಪ್ರವೇಶಮಂಟಪ, ಪೂರ್ವಪ್ರವೇಶ ಮಂಟಪಕ್ಕೆ (ಮುಖ ಮಂಟಪ) ಮುಂದೆ ಇನ್ನೊಂದು ತೆರೆದಸಭಾಮಂಟಪವಿದ್ದು, ಅದರ ಎಡ ಬಲಗಳಲ್ಲಿ ಪ್ರವೇಶದ್ವಾರದ ಮೇಲೆ ಕಿರು ಮಂಟಪಗಳಿವೆ"[೨]. ಗರ್ಭಗುಡಿಯ ಮೇಲಿನ ಶಿಖರ ಹಾಗೂ ಹಾರದ ಭಾಗಗಳು ಅಲ್ಲಲ್ಲಿ ಬಿದ್ದುಹೋಗಿವೆ. ನವರಂಗದ ದಕ್ಷಿಣ ಪ್ರವೇಶ ದ್ವಾರ ಮತ್ತು ಸಭಾಮಂಟಪದ ಕಕ್ಷಾಸನದ ಹೊರಮೈಗಳಲ್ಲಿ ವಿಷ್ಣುವಿನ ಅವತಾರ ಮತ್ತು ರಾಮಾಯಣಕ್ಕೆ ಸಂಬಂಧಿಸಿದ ಕಥಾನಿರೂಪಕ ಶಿಲ್ಪಗಳು ಕಂಡು ಬರುತ್ತವೆ. (ಛಾಯಾಚಿತ್ರ-೨) ಈ ದೇವಾಲಯಕ್ಕೆ ಸಂಬಂಧಿಸಿದ ನಾಲ್ಕು ಶಾಸನಗಳು ದೊರೆತಿದ್ದು, ಅತ್ಯಂತ ಪ್ರಾಚೀನವಾದುದರ ಕಾಲ ಶಕವರ್ಷ ೧೦೧೫ (ಕ್ರಿ.ಶ.-೧೦೯೩) ಕಲ್ಯಾಣ ಚಾಲುಕ್ಯರ ತ್ರಿಭುವನಮಲ್ಲನ ಕಾಲಕ್ಕೆ ಸೇರಿದ್ದಾಗಿದೆ. ಹೀಗಾಗಿ "ನಗರೇಶ್ವರ ದೇವಾಲಯವು ೧೦೯೩ರ ಮುಂಚೆಯೇ ನಿರ್ಮಾಣಗೊಂಡಿದ್ದು ನಂತರದಲ್ಲಿ ವಿಸ್ತರಿಸಲಾಗಿದೆ ಎಂದು ಅ. ಸುಂದರ ಅಭಿಪ್ರಾಯಪಡುತ್ತಾರೆ"[೩]. ಈ ಶಾಸನಗಳಲ್ಲಿ ನಗರೇಶ್ವರ ದೇವರಿಗೆ ನೀಡಿದ ಭೂದಾನ, ಗ್ರಾಮದಾನ, ಸುಂಕದಾನದ ವಿವರಗಳಿವೆ.[೪]

## ವಿಷ್ಣುವಿನ ಅವತಾರದ ದೃಶ್ಯಗಳು

### ಬಲಿ-ವಾಮನ ಪ್ರಸಂಗ

ಬಲಿ-ವಾಮನ ಪ್ರಸಂಗ ಈ ದೇವಾಲಯದಲ್ಲಿ ಬಹುದೃಶ್ಯಗಳಲ್ಲಿ ಮೂಡಿಬಂದಿದ್ದು, ಭಾಗವತದ ಅಷ್ಟಮ ಸ್ಕಂದದಲ್ಲಿ ಕಂಡುಬರುವ ಬಲಿ ಪ್ರಸಂಗದ ಕಥಾ ಸಾರಾಂಶ ಹೀಗಿದೆ.

"ವಿರೋಚನ ಅಸುರನ ಮಗನಾದ ಬಲಿ ಇಂದ್ರನಿಗಿಂತ ಬಲಶಾಲಿಯಾಗಿ ಇಂದ್ರ ಪದವಿಯನ್ನು ಪಡೆದು, ಅವನನ್ನು ದೇವಲೋಕದಿಂದ ಓಡಿಸಿ ತಾನೇ ಮೂರು ಲೋಕಗಳ ಒಡೆಯನಾಗುತ್ತಾನೆ. ಇಂದ್ರನ ಪತ್ನಿಯಾದ ಶಚಿಯು ಬಲಿಯನ್ನು ಸೇರುತ್ತಾಳೆ. ಆಗ ವಿಷ್ಣು ಇಂದ್ರನ ತಾಯಿಯಾದ ಅದಿತಿಯ ಅಪೇಕ್ಷೆಯಂತೆ ವಾಮನ ರೂಪದಲ್ಲಿ ಬಲಿ ಬಳಿಯ ಬಂದು ದಾನ ಕೇಳಿದಾಗ "ನೀನು ಏನು ಬಯಸುವೆಯೋ ಅದನ್ನು ಕೊಡುತ್ತೇನೆ" ಎಂದು ಮಾತು ಕೊಡುತ್ತಾನೆ. ವಾಮನನು "ನನಗೆ ಮೂರು ಹೆಜ್ಜೆಗಳಷ್ಟು ಭೂಮಿ ಬೇಕು" ಎಂದು ಕೇಳಿದಾಗ ತಕ್ಷಣ ವಾಮನ ಬಯಸಿದ್ದನ್ನು ನೀಡಲು ಬಲಿ ಸಮ್ಮತಿಸುತ್ತಾನೆ. ಆದರೆ ಬಲಿಯ ಗುರು ಶುಕ್ರಾಚಾರ್ಯರು ಈ ವಾಮನನು ವಿಷ್ಣುವಿನ ರೂಪವಾಗಿದ್ದು, ಕೂಡಲೇ ಕೊಟ್ಟ ಮಾತನ್ನು ಹಿಂಪಡೆ ಎಂದು ಹಿತವಚನ ಹೇಳುತ್ತಾನೆ. ಆಗ ಬಲಿ ಶುಕ್ರಾಚಾರ್ಯರ ಮಾತನ್ನು ನಿರಾಕರಿಸುತ್ತಾನೆ ಮತ್ತು ತನ್ನ ಬದ್ಧತೆಯನ್ನು ಆಚರಣೆ ಮೂಲಕ ತೋರಿಸಲು ದಾನ ಸಂಕಲ್ಪ ಮಾಡಿ ಅರ್ಘ್ಯ ಬಿಡುತ್ತಾನೆ.

* ಇತಿಹಾಸ ಉಪನ್ಯಾಸಕರು, ವಿದ್ಯಾದಾನ ಸಮಿತಿ ಬಾಲಕಿಯರ ಪದವಿಪೂರ್ವ ಕಾಲೇಜು, ಗದಗ, ಮೊ. ೯೪೪೮೬೪೦೮೩೩

ಬಲಿ–ವಾಮನ ಪ್ರಸಂಗವು ಈ ದೇವಾಲಯದ ನವರಂಗದ ದಕ್ಷಿಣ ಪ್ರವೇಶದ್ವಾರದ ಕಕ್ಷಾಸನದ ಹೊರಬದಿಯಲ್ಲಿ ಕಂಡು ಬರುತ್ತದೆ. ನಾಗರಶೈಲಿಯ ಕಿರು ಶಿಖರಗಳ ಸಾಲಿನ ಮೇಲ್ಭಾಗದಲ್ಲಿ ಎರಡು ಕಂಬಗಳ ನಡುವೆ ಬಹುದೃಶ್ಯಗಳಲ್ಲಿ, ಏಳು ಪಟ್ಟಿಕೆಗಳಲ್ಲಿ ನಿರೂಪಣೆಗೊಂಡಿದೆ. ಈ ಪಟ್ಟಿಕೆಗಳು ಏಕಪ್ರಕಾರದ ಸಾಲುಗಳಲ್ಲಿವೆ.

ವಾಮನ ಅವತಾರದ ಕಥೆಯು ಹರಿವಂಶ ಪುರಾಣ[೫], ಕೂರ್ಮ ಪುರಾಣ[೬], ಮತ್ಸ್ಯ ಪುರಾಣ[೭], ವಾಮನ ಪುರಾಣ[೮], ನಾರದ ಪುರಾಣ[೯], ಸ್ಕಂದ ಪುರಾಣ[೧೦]ಗಳಲ್ಲಿಯೂ ಕೆಲ ಕಿರು ಬದಲಾವಣೆಗಳೊಂದಿಗೆ ಕಂಡು ಬರುತ್ತದೆ. ಬಾದಾಮಿ ಚಾಲುಕ್ಯರ ಕಾಲದ ಕಥಾನಕ ಶಿಲ್ಪಗಳಲ್ಲಿ ಪಟ್ಟದಕಲ್ಲಿನ ವಿರೂಪಾಕ್ಷ, ಕಾಶಿವಿಶ್ವೇಶ್ವರ, ಐಹೊಳೆಯ ಚಕ್ರಿಗುಡಿಗಳಲ್ಲಿಯೂ ಕಂಡು ಬರುತ್ತದೆ. ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳಲ್ಲಿ ಗದುಗಿನ ತ್ರಿಕೂಟೇಶ್ವರ ಮತ್ತು ಲಕ್ಕುಂಡಿಯ ಕಾಶಿವಿಶ್ವೇಶ್ವರ ದೇವಾಲಯಗಳಲ್ಲಿಯೂ ಬಲಿ–ವಾಮನ ಪ್ರಸಂಗ ವಿವರಣಾತ್ಮಕವಾಗಿ ಮೂಡಿಬಂದಿದೆ. ಆದರೆ ಇವೆಲ್ಲವುಗಳಿಗಿಂತ ಹೊಯ್ಸಳರ ಕಾಲದ ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದಲ್ಲಿ ಈ ಕಥಾನಕ ಶಿಲ್ಪವು ಅತ್ಯಂತ ಮನಮೋಹಕವಾಗಿ ಕಂಡರಿಸಲ್ಪಟ್ಟಿದೆ.

ಬಲಿ ವಾಮನ ಪ್ರಸಂಗ ದಾನದ ಮಹತ್ವವನ್ನು ವಿವರಿಸುವ ಕಥಾನಕ ಶಿಲ್ಪವಾಗಿರುವುದರಿಂದ ಇದು ಕಲ್ಯಾಣ ಚಾಲುಕ್ಯರ ಕಾಲದ ಕಥಾನಿರೂಪಕ ಶಿಲ್ಪಗಳಲ್ಲಿ ಹೆಚ್ಚಿನ ಪ್ರಾತಿನಿಧ್ಯವನ್ನು ಪಡೆದಿದೆ. ನಾಂದೇಡ ಜಿಲ್ಲೆಯಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ಶಾಸನವೊಂದರಲ್ಲಿ ಕಲ್ಯಾಣ ಚಾಲುಕ್ಯರ ಪ್ರಸಿದ್ಧ ದೊರೆ ಆರನೇಯ ವಿಕ್ರಮಾದಿತ್ಯನನ್ನು 'ನಿತ್ಯ ಭೂಮಿ ದಾನಿ'[೧೧] ಎಂದು ವರ್ಣಿಸಲಾಗಿದೆ. ಈ ಶಾಸನವು ಕಲ್ಯಾಣ ಚಾಲುಕ್ಯರ ದಾನಕ್ಕೆ ನೀಡಿದ ಮಹತ್ವವನ್ನು ವರ್ಣಿಸುತ್ತದೆ ಮತ್ತು ಬಲಿ ವಾಮನ ಕಥಾನಿರೂಪಕ ಶಿಲ್ಪವು ಇದಕ್ಕೆ ಪೂರಕವಾಗಿ ಅನೇಕ ದೇವಾಲಯಗಳಲ್ಲಿ ಕಂಡರಿಸಲ್ಪಟ್ಟಿದೆ. ಬಲಿ ವಾಮನ ಪ್ರಸಂಗವು ಭಾಗವತದಲ್ಲಿ ಹೆಚ್ಚು ಸ್ಪಷ್ಟವಾಗಿ ಮತ್ತು ವಿವರವಾಗಿ ನಿರೂಪಿಸಲ್ಪಟಿದೆ. ಈ ಕಾಲದಲ್ಲಿ ಭಾಗವತವು ಪುರಾಣಗಳಲ್ಲಿ ಅತೀ ಜನಪ್ರಿಯ ಕಥಾನಕವಾಗಿ ಕಂಡು ಬಂದಿದ್ದು, ಈ ಕಾಲದ ಬಹುತೇಕ ಕಥಾನಿರೂಪಕ ಶಿಲ್ಪಗಳು ಭಾಗವತದ ಕಥಾಸ್ವರೂಪವನ್ನೇ ಅನುಸರಿಸುತ್ತವೆ.

**ಸಮುದ್ರ ಮಂಥನ**

ಸಮುದ್ರ ಮಂಥನ ಪ್ರಸಂಗವು ವಾಲ್ಮೀಕಿ ರಾಮಾಯಣದ ಬಾಲಕಾಂಡದ ೪೫ನೇ ಸರ್ಗದಲ್ಲಿ ಕಂಡು ಬರುತ್ತದೆ. ಈ ಪ್ರಸಂಗದ ಕಥಾಸಾರಂಶ ಈ ರೀತಿಯಾಗಿದೆ.

"ಕೃತಯುಗದಲ್ಲಿ ದಿತಿಯ ಮಕ್ಕಳಾದ ದೈತ್ಯರು ಮಹಾ ಬಲಶಾಲಿಗಳಾಗಿಯೂ, ಅದಿತಿಯ ಮಕ್ಕಳಾದ ದೇವತೆಗಳು ಧಾರ್ಮಿಕರಾಗಿಯೂ ಇದ್ದರು. ಕಾಲಕ್ರಮದಲ್ಲಿ ದೇವಾಸುರರಿಗೆ ಜರಾ–ಮರಣ ರಹಿತರಾಗಿ ಇರಬೇಕೆನ್ನುವ ಬುದ್ಧಿ ಉಂಟಾಗಿ ಸಮುದ್ರ ಮಂಥನದಿಂದ ಅಮೃತವನ್ನು ಪಡೆದುಕೊಳ್ಳಲು ನಿರ್ಧರಿಸಿದರು. ಸಮುದ್ರವನ್ನು ಕಡೆಯಲು ನಿಶ್ಚಯಿಸಿ, ವಾಸುಕಿಯನ್ನು ಹಗ್ಗವಾಗಿಸಿ ಮಂದಾರ ಪರ್ವತವನ್ನು ಕಡೆಗೋಲನ್ನಾಗಿ ಮಾಡಿಕೊಂಡು ದೇವತೆಗಳು ವಾಸುಕಿಯ ಬಾಲದ ಕಡೆ ದೈತ್ಯರು ತಲೆಯ ಕಡೆ ನಿಂತು, ಒಂದು ಸಾವಿರ ವರ್ಷಗಳ ಕಾಲ ಕ್ಷೀರಸಾಗರವನ್ನು ಕಡೆದರು. ಹಾಲಾಹಲ ವಿಷವು ಹೊರಹೊಮ್ಮಲು ಪರಶಿವನು ಅದನ್ನು ಸ್ವೀಕರಿಸಿದನು. ಪುನಃ ಸಮುದ್ರವನ್ನು ಕಡೆಯಲು ಪ್ರಾರಂಭಿಸಿದಾಗ ಮಂದಾರ ಪರ್ವತವು ಪಾತಾಳಕ್ಕೆ ಹೊರಟು ಹೋಯಿತು. ಮಂದಾರ ಪರ್ವತ ಉದ್ಧಾರಕ್ಕೆ ಮಹಾವಿಷ್ಣುವು ಕೂರ್ಮಾವತಾರ ತಾಳಿ, ಮಂದಾರಪರ್ವತವನ್ನು ಬೆನ್ನಮೇಲೆ ಹೊತ್ತುಕೊಂಡು, ಪರ್ವತದ ಒಂದು ತುದಿಯನ್ನು ಹಿಡಿದುಕೊಂಡು ದೇವತೆಗಳ ಮಧ್ಯದಲ್ಲಿ ನಿಂತು ಸಮುದ್ರವನ್ನು ಕಡೆದನು. ಮತ್ತೆ ಸಾವಿರ ವರ್ಷಗಳ ನಂತರ ಧನ್ವಂತರಿ, ಅಪ್ಸರೆಯರು, ವಾರುಣಿ, ಉಚ್ಚೈಶ್ರವಸ್ಸ, ಕೌಸ್ತುಭ ಮುಂತಾದವುಗಳು ಪ್ರಾಪ್ತವಾದವು. ನಂತರ ಅಮೃತದ ಪ್ರಾದುರ್ಭಾವವಾಯಿತು ಅದು ಯಾರಿಗೆ ಸೇರಬೇಕೆಂದು ದೇವದಾನವರಲ್ಲಿ ಕಲಹ ಪ್ರಾರಂಭವಾದಾಗ, ಶ್ರೀಹರಿಯು ಮಾಯೆಯಿಂದ ಜಗನ್ಮೋಹಕವಾದ ಮೋಹಿನಿ ರೂಪಧರಿಸಿ ಅಮೃತ ಕಲಶ ಪರಿಗ್ರಹಿಸಿ, ದೇವತೆಗಳಿಗೆ ಮಾತ್ರ ನೀಡಿದನು. ಅಮೃತ ಪ್ರಾಶನಗೈದ ದೇವತೆಗಳು ದೈತ್ಯರನ್ನು ಸಂಹರಿಸಿದರು. ಹೀಗೆ ದಿತಿಯ ಮಕ್ಕಳಾದ ದಾನವರು ನಾಶಹೊಂದಿದ ನಂತರ ದೇವೇಂದ್ರನು ತ್ರೈಲೋಕ್ಯಾಧಿಪತಿಯಾಗಿ ಆನಂದದಿಂದ ಮೂರು ಲೋಕಗಳನ್ನು ಧರ್ಮಪಾಲನೆ ಮಾಡತೊಡಗಿದನು"[೧೨].

ನಗರೇಶ್ವರ ದೇವಾಲಯದ ವಿಶಾಲವಾದ ಸಭಾಮಂಟಪದ ಬಲಬದಿಯ ಕಕ್ಷಾಸನದ ಹೊರಮೈಯಲ್ಲಿ ಸಮುದ್ರಮಂಥನಕ್ಕೆ ಸಂಬಂಧಿಸಿದ ಕಥಾನಿರೂಪಕ ಶಿಲ್ಪವನ್ನು ಕಂಡರಿಸಲಾಗಿದೆ. ಇದೊಂದು ಏಕದೃಶ್ಯ ನಿರೂಪಣೆಯಾಗಿದ್ದು, ಶಿಲ್ಪದ ಮಧ್ಯ ಭಾಗದಲ್ಲಿ ಕೂರ್ಮ ಹಾಗೂ ಅದರ ಮೇಲೆ ಮಂದಾರ ಪರ್ವತವನ್ನು ತೋರಿಸಲಾಗಿದೆ. ಅದರ ಎಡ ಹಾಗೂ ಬಲ

ಪಾರ್ಶ್ವಗಳಲ್ಲಿ ದೇವತೆಗಳು ವಾಸುಕಿಯ ಬಾಲವನ್ನು ಹಿಡಿದು ಮತ್ತು ಅವರ ಎದುರಿಗೆ ದಾನವರು ವಾಸುಕಿಯ ತಲೆಯನ್ನು ಹಿಡಿದು ಸಮುದ್ರ ಮಂಥನದಲ್ಲಿ ತೊಡಗಿದ್ದಾರೆ. ಮೇಲ್ಭಾಗದಲ್ಲಿ ಮಂದಾರ ಪರ್ವತದಮೇಲೆ ವಿಷ್ಣು ಕುಳಿತಿರುವಂತೆ ಚಿಕ್ಕ ಶಿಲ್ಪವನ್ನು ಕಂಡರಿಸಲಾಗಿದೆ. ಈ ಶಿಲ್ಪದಲ್ಲಿ ಆರು ದೇವತೆಗಳು ಹಾಗೂ ಆರು ದಾನವರನ್ನು ಕಂಡರಿಸಲಾಗಿದೆ. ಶಿಲ್ಪವು ತೃಟಿತವಾಗಿದ್ದು, ಹೆಚ್ಚಿನ ವಿವರಗಳು ತಿಳಿದುಬರುವುದಿಲ್ಲ.

ಸಮುದ್ರಮಂಥನ ಕಥೆಯು ಭಾರತೀಯ ಪುರಾಣ ಪ್ರಪಂಚದ ಜನಪ್ರಿಯ ಕಥಾನಕವಾಗಿದ್ದು, ಮಹಾಭಾರತ[೧೪], ಭಾಗವತ[೧೫], ಮತ್ಸ್ಯಪುರಾಣ[೧೬], ಸ್ಕಂದಪುರಾಣ[೧೭], ಪದ್ಮಪುರಾಣ[೧೮], ವಿಷ್ಣುಪುರಾಣ[೧೯], ಗಳಲ್ಲಿಯೂ ಕೆಲ ಕಿರು ಬದಲಾವಣೆ ಗಳೊಂದಿಗೆ ಕಂಡು ಬರುತ್ತದೆ. ಸಮುದ್ರಮಂಥನದ ಆರಂಭದ ಇಂದ್ರ–ದೂರ್ವಾಸ ಪ್ರಸಂಗ ಹಾಗೂ ಮಂಥನದ ನಂತರದ ಅಮೃತ ವಿತರಣೆ ಮತ್ತು ರಾಹು ಸಂಹಾರ ಪ್ರಕರಣಗಳು ಮೇಲಿನ ಕಥಾನಿರೂಪಕ ಶಿಲ್ಪದಲ್ಲಿ ಪ್ರತಿಪಾದಿತವಾಗಿಲ್ಲ. ಇಲ್ಲಿ ಸುರ–ಅಸುರರು ಸಮುದ್ರವನ್ನು ಕಡೆಯುತ್ತಿರುವ ಕಥಾನಕದ ಒಂದೇ ಪ್ರಮುಖ ಪ್ರಸಂಗವನ್ನು (Key Episode) ಏಕದೃಶ್ಯದಲ್ಲಿ ಕಂಡರಿಸಲಾಗಿದೆ.

ಸಮುದ್ರಮಂಥನ ಶಿಲ್ಪವು ಹಾವೇರಿ ಜಿಲ್ಲೆಯ ಅಬಲೂರಿನ ಬ್ರಹ್ಮಲಿಂಗೇಶ್ವರ ದೇವಸ್ಥಾನದಲ್ಲಿಯೂ ಕಂಡು ಬರುತ್ತಿದ್ದು, ಇಲ್ಲಿ ಮೂವರು ದೇವತೆ ಮತ್ತು ಮೂವರು ಅಸುರರನ್ನು ಮಾತ್ರ ಚಿತ್ರಿಸಲಾಗಿದೆ. ಪಟ್ಟಿಕೆಯ ಬಲಭಾಗದಲ್ಲಿ ಬ್ರಹ್ಮ, ಶಿವ ಗಣೇಶರ ಶಿಲ್ಪಗಳಿದ್ದು, ಅವರು ಸಮುದ್ರಮಂಥನಕ್ಕೆ ಮಾರ್ಗದರ್ಶನ ಮಾಡುತ್ತಿದ್ದಾರೆ. ಈ ಕಥಾನಕ ಶಿಲ್ಪವು ನಗರೇಶ್ವರ ದೇವಾಲಯದ ಸಮುದ್ರಮಂಥನ ಶಿಲ್ಪಕ್ಕಿಂತಲೂ ಉತ್ತಮವಾಗಿ ಮೂಡಿಬಂದಿದೆ. ಕಲಬುರಗಿ ಜಿಲ್ಲೆಯ ಚಿಂಚೋಳಿ ತಾಲೂಕಿನ ನಿಡಗುಂದ ಗ್ರಾಮದ ಕಾಳಿಕಾದೇವಿ ಗುಡಿಯ ಕಂಬದಲ್ಲಿ ಸಮುದ್ರಮಂಥನದ ಕಥಾನಕ ಶಿಲ್ಪ ಕಂಡು ಬಂದಿದ್ದು, ಕಲ್ಯಾಣ ಚಾಲುಕ್ಯರ ಆರಂಭಿಕ ಕಾಲದ ಶಿಲ್ಪವಾಗಿದ್ದು ಚಿಕ್ಕದಾಗಿದ್ದು, ಅಸ್ಪಷ್ಟವಾಗಿದೆ.

## ರಾಮಾಯಣದ ದೃಶ್ಯಗಳು

ಈ ದೇವಾಲಯದ ಸಭಾಮಂಟಪದ ಉತ್ತರ ಭಾಗದ ಕಕ್ಷಾಸನದ ಹೊರಮೈಯಲ್ಲಿ ರಾಮಾಯಣಕ್ಕೆ ಸಂಬಂಧಿಸಿದ ಮಾಯಾಜಿಂಕೆ ಮತ್ತು ಸೇತುಬಂಧಕ್ಕೆ ಸಂಬಂಧಿಸಿದ ಕಥಾನಿರೂಪಕ ಶಿಲ್ಪಗಳು ಕಂಡು ಬರುತ್ತವೆ. (ಛಾಯಾಚಿತ್ರ–೬) ಆದರೆ ಈ ಶಿಲ್ಪಗಳು ತೃಟಿತಗೊಂಡಿದ್ದು, ಉಬ್ಬು ಶಿಲ್ಪದ ಮುಂಭಾಗ ಬಿದ್ದುಹೋಗಿರುವುದರಿಂದ ಅವುಗಳು ಇದ್ದರಬಹುದು ಎಂಬ ಗುರುತುಗಳು ಮಾತ್ರ ಕಂಡು ಬರುತ್ತವೆ. ಇಂತಹ ಕಥಾನಿರೂಪಕ ಶಿಲ್ಪಗಳು ಹಾನಗಲ್ಲ ತಾರಕೇಶ್ವರ ದೇವಾಲಯದಲ್ಲಿಯೂ ಕಂಡು ಬರುತ್ತವೆ. ಖ್ಯಾತ ಕಲಾವಿದ್ವಾಂಸ ಹೆನ್ರಿ ಕಜಿನ್ಸರವರು ಹೇಳುವಹಾಗೆ "ಹಾನಗಲ್ಲಿನ ತಾರಕೇಶ್ವರ ದೇವಾಲಯದಂತೆಯೇ ಬಂಕಾಪುರದ ನಗರೇಶ್ವರ ದೇವಾಲಯವು ನಿರ್ಮಿಸಲ್ಪಟ್ಟಿದೆ"[೨೧]. ಎಂಬ ಮಾತನ್ನು ಇಲ್ಲಿ ಸ್ಮರಿಸಬಹುದು. ಅಲ್ಲಿ ಕಂಡು ಬಂದಿರುವ ರಾಮಾಯಣಕ್ಕೆ ಸಂಬಂಧಿಸಿದ ದೃಶ್ಯಗಳು ಇಲ್ಲಿಯೂ ಕಂಡು ಬರುತ್ತವೆ ಆದರೆ ಶಿಲ್ಪಗಳು ತೃಟಿತವಾಗಿರುವುದರಿಂದ ಶಿಲ್ಪಗಳ ಕುರಿತು ನಿಖರವಾಗಿ ವಿವರಿಸುವುದು ಕಷ್ಟಸಾಧ್ಯವಾಗಿದೆ.

## ತಂತ್ರ ಮತ್ತು ಶೈಲಿ

ಧಾರ್ಮಿಕ ದೃಷ್ಟಿಯಿಂದ ವಿಶ್ಲೇಷಿಸಿದರೆ ಬಂಕಾಪುರದ ನಗರೇಶ್ವರ ದೇವಾಲಯವು ಮೂಲತಃ ಶೈವ ದೇವಾಲಯವಾಗಿದ್ದರೂ, ಇಲ್ಲಿ ವಿಷ್ಣುವಿನ ಅವತಾರಗಳಾದ ಬಲಿ, ಕೂರ್ಮ ಮತ್ತು ರಾಮನ ಅವತಾರಕ್ಕೆ ಸಂಬಂಧಿಸಿದ ವೈಷ್ಣವ ಪಂಥ ಸಂಬಂಧಿಸಿದ ಕಥಾನಕ ಶಿಲ್ಪಗಳು ಹೆಚ್ಚಾಗಿ ಕಂಡು ಬರುತ್ತವೆ. ಇದು ಕಲ್ಯಾಣ ಚಾಲುಕ್ಯರ ಕಾಲದ ಕಥಾನಿರೂಪಕ ಶಿಲ್ಪಗಳು ಸಾಮಾನ್ಯ ಲಕ್ಷಣವಾಗಿದೆ. ಈ ದೇವಾಲಯವು ಕಾಳಾಮುಖ ಸಂಪ್ರದಾಯಕ್ಕೆ ಸೇರಿದ ದೇವಾಲಯವಾಗಿದ್ದು, ದೇವಾಲಯದ ಪೂರ್ವದಿಕ್ಕಿನ ಕಕ್ಷಾಸನದಲ್ಲಿ ಕಾಳಾಮುಖ ಯತಿಯು ಗಂಟೆ ಬಾರಿಸುತ್ತ ರುದ್ರಾಕ್ಷಿ ಮಾಲೆಗಳಿಂದ ಅಲಂಕೃತವಾದ ಶಿವಲಿಂಗವನ್ನು ಪೂಜಿಸುತ್ತಿರುವ ಶಿಲ್ಪ ಮತ್ತು ಯೋಗಪಟ್ಟ ಸಹಿತ ಕುಳಿತಿರುವ ಯತಿ ಮುಂತಾದ ಕಾಳಾಮುಖ ಶೈವ ಸಂಪ್ರದಾಯಕ್ಕೆ ಸಂಬಂಧಿಸಿದ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ. ಇದಕ್ಕೆ ಪೂರಕವೆನ್ನುವಂತೆ ಈ ದೇವಾಲಯದ ಸಮೀಪವಿರುವ ಪಶುಸಂಗೋಪನಾ ಕಛೇರಿಯ ಹತ್ತಿರವಿರುವ ೧೧೨೮ರ ಶಾಸನವು ಈ ದೇವಾಲಯವನ್ನು "ವಿಚಿತ್ರಕೂಟಪ್ರಾಸಾದವೆಂದು ವರ್ಣಿಸಿ, ಇದರ ಸೂತ್ರಧಾರನು ವಿಮಳಶಕ್ತಿ ಆಚಾರ್ಯರೆಂದು ಸೂಚಿಸುತ್ತದೆ"[೨೨]. ಈ ಅಂಶಗಳು ಇಲ್ಲಿನ ಕಥಾನಿರೂಪಕ ಶಿಲ್ಪಗಳಿಗೆ ಪೂರಕವಾಗಿವೆ. ಕಾಳಾಮುಖರು ಎಂದರೆ ಬಹಳಷ್ಟು ವಿದ್ವಾಂಸರು ಅರ್ಥೈಸಿದ ಹಾಗೆ ಮುಖಕ್ಕೆ ಕಪ್ಪುಮಸಿಯನ್ನು ಬಳಿದುಕೊಂಡ ಕರಿಯಮುಖದವರಲ್ಲ. ಅವರು ವಸುಂದರಾ ಫಿಲಿಯೋಜಾ ಹೇಳುವಂತೆ "ಕಾಳಾಮುಖರೆಂದರೆ ಕಲೆಗಳನ್ನು ಪ್ರತಿಷ್ಠಾಪಿಸಿ ಆರಾಧಿಸುವವರು. ಕಲಾಮುಖದೊಂದಿಗೆ ಸಂಬಂಧಹೊಂದಿ



ವಾಮನ–ತ್ರಿವಿಕ್ರಮ



ನಗರೇಶ್ವರ ದೇವಸ್ಥಾನ, ಬಂಕಾಪುರ



ಕಥಾನಕ ಶಿಲ್ಪಗಳಿರುವ ಪ್ರವೇಶ ಮಂಟಪಗಳು



ವಾಲಿ–ಸುಗ್ರೀವರ ಹೋರಾಟ



ಅಮೃತಕ್ಕೆ ಹಾರಿದ ಗರುಡ

ಈ ಸಿದ್ಧಾಂತ ಆಚರಿಸುವವರೇ ಕಾಳಾಮುಖರು"[೨೩]. ವಸುಂದರಾ ಫಿಲಿಯೋಜಿಯಾ ಅವರ ಈ ಸಿದ್ಧಾಂತವನ್ನು ಒಪ್ಪುವುದಾದರೆ ಕಳಚೂರಿಗಳ ಕಾಲದ ವೀರಶೈವ ಚಳುವಳಿಯ ಪೂರ್ವ ನಿರ್ಮಿತ ಬಹುತೇಕ ದೇವಾಲಯಗಳು ಕಾಳಾಮುಖ ಮತ್ತು ಪಾಶುಪತ ಸಂಪ್ರದಾಯಕ್ಕೆ ಸಂಬಂಧಿಸಿವೆ. ಈ ದೇವಾಲಯಗಳಲ್ಲಿ ನಾಟ್ಯ, ವಾದ್ಯ, ಸಂಗೀತಗಾರರ



**ಬಲಿ-ವಾಮನ ದೃಶ್ಯಗಳು**

ಉಬ್ಬು ಶಿಲ್ಪಗಳೊಂದಿಗೆ, ನೀತಿ ಪ್ರಬೋಧಕ ಮತ್ತು ಆಧ್ಯಾತ್ಮಿಕ ತತ್ವಗಳನ್ನು ಬಿಂಬಿಸುವ ಕಥಾನಿರೂಪಕ ಶಿಲ್ಪಗಳು ಕಂಡು ಬರುತ್ತವೆ. ಈ ಕಾಲದಲ್ಲಿ ಪಾಶುಪತ ಮತ್ತು ಕಾಳಾಮುಖ ಸಂಪ್ರದಾಯಕ್ಕೆ ಸಂಬಂಧಿಸಿದ ಅಬಲೂರಿನ ಬ್ರಹ್ಮಲಿಂಗೇಶ್ವರ, ಗದುಗಿನ ತ್ರಿಕೂಟೇಶ್ವರ, ಬಳ್ಳೀಗಾವಿಯ ತ್ರಿಪುರಾಂತಕೇಶ್ವರ ದೇವಾಲಯಗಳು ಈಶ್ವರನಿಗೆ ಅರ್ಪಿತವಾಗಿದ್ದರೂ ಅಲ್ಲಿಯೂ ವೈಷ್ಣವಪಂಥಕ್ಕೆ ಸಂಬಂಧಿಸಿದ ಕಥಾನಿರೂಪಕ ಶಿಲ್ಪಗಳು ಹೆಚ್ಚಾಗಿ ಕಂಡು ಬರುತ್ತಿದ್ದು ಇವು ಅಂದಿನ ಜನರಲ್ಲಿ ವಿಷ್ಣುವಿನ ಅವತಾರಗಳ ಬಗೆಗೆ ಗೌರವ ಮತ್ತು ಜನಪ್ರಿಯತೆಗೆ ಸಾಕ್ಷಿಯಾಗಿವೆ.

ಬಂಕಾಪುರದ ನಗರೇಶ್ವರ ದೇವಾಲಯದ ಕಥಾನಿರೂಪಕ ಶಿಲ್ಪಗಳು ಕಲಾ ದೃಷ್ಟಿಯಿಂದಲೂ ಗಮನೀಯವಾಗಿದೆ. ಈ ದೇವಾಲಯದ ಶಿಲ್ಪಿಗೆ ರಾಮಾಯಣ ಮತ್ತು ಭಾಗವತದ ಕಥೆಗಳ ಪರಿಚಯ ಚೆನ್ನಾಗಿತ್ತೆಂದು ತೋರುತ್ತದೆ. ಇಲ್ಲಿನ ಕಥಾನಿರೂಪಕ ಶಿಲ್ಪಗಳು ಏಕದೃಶ್ಯ ಹಾಗೂ ಬಹುದೃಶ್ಯ ಎರಡೂ ತಂತ್ರಗಳಲ್ಲಿ ಮೂಡಿ ಬಂದಿವೆ. ಬಲಿ ವಾಮನ ಪ್ರಸಂಗವು ಬಹುದೃಶ್ಯಗಳಲ್ಲಿ ಸರಳ ರೇಖಾ ಪ್ರಧಾನ ತಂತ್ರದಲ್ಲಿ (Horizantal Mode) ಮಾಯಾಜಿಂಕೆ ಪ್ರಸಂಗ ದ್ವಿದೃಶ್ಯಗಳಲ್ಲಿ ಮತ್ತು ಸಮುದ್ರಮಂಥನ ಪ್ರಸಂಗ ಏಕದೃಶ್ಯದಲ್ಲಿ ಮೂಡಿಬಂದಿದ್ದು, ಶಿಲ್ಪಿಯು ಕಥಾನಿರೂಪಕ ಶಿಲ್ಪಗಳನ್ನು ಕಂಡರಿಸುವಲ್ಲಿ ವೈವಿಧ್ಯಮಯ ತಂತ್ರಗಾರಿಕೆಯನ್ನು ಬಳಸುತ್ತಿದ್ದನೆಂದು ತಿಳಿದುಬರುತ್ತದೆ. ಇಲ್ಲಿನ ಕಥಾನಿರೂಪಕ ಶಿಲ್ಪಗಳು ಉತ್ತಮವಾಗಿ ಮೂಡಿಬಂದಿದ್ದು ಇಲ್ಲಿನ ಶಿಲ್ಪಗಳು ಬಳಸಿರುವ ತಂತ್ರ ಬಹುತೇಕ ಹಾನಗಲ್ಲಿನ ತಾರಕೇಶ್ವರ ಮತ್ತು ಬಳ್ಳಿಗಾವಿಯ ತ್ರಿಪುರಾಂತಕೇಶ್ವರ ದೇವಾಲಯದ ರೀತಿಯಲ್ಲಿಯೇ ಕಂಡರಿಸಲಾಗಿದೆ. ಪಟ್ಟಿಕೆಯಲ್ಲಿ ಕಂಡುಬರುವ ಬಿಡಿ ಶಿಲ್ಪಗಳ ಕೆತ್ತನೆಯಲ್ಲಿ ಸ್ಪಷ್ಟತೆ ಮತ್ತು ಅಂತಿಮ ಸ್ವರೂಪ (Finishing) ನೀಡುವಲ್ಲಿ ಶಿಲ್ಪಿಯ ಕೈಚಳಕ ಕಂಡು ಬರುತ್ತದೆ.

ಕಥಾ ನಿರೂಪಕ ಶಿಲ್ಪಗಳು ಪ್ರವಾಸಿಗರನ್ನು ತಮ್ಮ ಕಥೆಗಳ ಮೂಲಕ ಹೆಚ್ಚು ಆಕರ್ಷಿಸುವುದರಿಂದ ಅವುಗಳ ಅಧ್ಯಯನ ಹೆಚ್ಚು ಮಹತ್ವ ಪಡೆದುಕೊಳ್ಳುತ್ತವೆ. ಒಟ್ಟಿನಲ್ಲಿ ಬಂಕಾಪುರದ ನಗರೇಶ್ವರ ದೇವಾಲಯದ ಕಥಾನಿರೂಪಕ ಶಿಲ್ಪಗಳು ಶೈಲಿಯಲ್ಲಿ ಸರಳತೆ, ತಂತ್ರದಲ್ಲಿ ಸಂಕ್ಷಿಪ್ತತೆಯನ್ನು ಹೊಂದಿದ್ದು, ಕಲಾ ಪರಂಪರೆಗೆ ತಮ್ಮದೇ ಆದ ವಿಶಿಷ್ಟ ಕೊಡುಗೆಗಳನ್ನು ನೀಡುತ್ತವೆ.

[ಈ ಸಂಪ್ರಬಂಧವನ್ನು ಸಿದ್ಧಪಡಿಸುವಲ್ಲಿ ಮಾರ್ಗದರ್ಶನ ನೀಡಿದ ಮಾರ್ಗದರ್ಶಕರಾದ ಡಾ. ಸಿ.ಎಸ್. ವಾಸುದೇವನ್‌ರವರಿಗೆ ವಿಶೇಷ ಕೃತಜ್ಞತೆಗಳು].



## ಅಡಿಟಿಪ್ಪಣಿಗಳು


೧. ಚನ್ನಕ್ಕ ಎಲಿಗಾರ, 'ಪ್ರಾಚ್ಯವಸ್ತು ಶೋಧನ', ಚನ್ನಕ್ಕ ಎಲಿಗಾರ (ಸಂ), ೧೯೯೦, 'ಬಂಕಾಪುರ ಶೋಧನೆ', ಚನ್ನಗಂಗಾ ಪ್ರಕಾಶನ, ಧಾರವಾಡ, ಪು-೯೭.

೨. ಮಹದೇವ ಸಿ., ವಾಸುದೇವನ್ ಸಿ.ಎಸ್., ರಮೇಶ ನಾಯಕ, ೧೯೯೯, 'ಕರ್ನಾಟಕ ದೇವಾಲಯ ಕೋಶ, ಹಾವೇರಿ ಜಿಲ್ಲೆ' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೮೪.

೩. ಸುಂದರ.ಅ., ೧೯೯೦, 'ಬಂಕಾಪುರದ ವಾಸ್ತು ಮತ್ತು ಮೂರ್ತಿ ಶಿಲ್ಪ ಶೋಧನ', ಚನ್ನಕ್ಕ ಎಲಿಗಾರ, (ಸಂ), ಪೂರ್ವೋಕ್ತ, ಪು-೧೫೧.

೪. ಶ್ರೀಹರಿ, (ಅನು), ೧೯೯೩, 'ಶ್ರೀಮದ್ಭಾಗವತ', ಸಂ-೫, ಭಾರತದರ್ಶನ ಪ್ರಕಾಶನ ಸಮಿತಿ, ಬೆಂಗಳೂರು, ಪುಟ-೧೭೫೨-೧೭೬೩.

೫. ರಂಗಸ್ವಾಮಿ. ಎಚ್.ಎನ್., (ಅನು), ೨೦೦೪, 'ಹರಿವಂಶ ಪುರಾಣ' ಭಾಗ-೪, ಭಾರತದರ್ಶನ ಪ್ರಕಾಶನ ಸಮಿತಿ, ಬೆಂಗಳೂರು, ಪು-೧೯೨೧ ರಿಂದ ೧೯೩೯.

೬ ಪಂಢರಿನಾಥಾಚಾರ್ಯ ಗಲಗಲಿ, (ಅನು), 'ಕೂರ್ಮ ಮಹಾಪುರಾಣ', ಅಧ್ಯಾಯ-೧೭, ಖೋಡೆ ಫೌಂಡೇಶನ್, ಬೆಂಗಳೂರು, ಪು-೮೦-೮೪.

೭. ಪಂಢರಿನಾಥಾಚಾರ್ಯ ಗಲಗಲಿ, (ಅನು), 'ಮತ್ಸ್ಯ ಮಹಾಪುರಾಣ', ಭಾಗ-೨, ಅಧ್ಯಾಯ-೨೪೫-೨೪೭, ಖೋಡೆ ಫೌಂಡೇಶನ್, ಬೆಂಗಳೂರು, ಪು-೨೬೫-೨೮೧.

೮. ಪಂಢರಿನಾಥಾಚಾರ್ಯ ಗಲಗಲಿ, (ಅನು), 'ವಾಮನ ಮಹಾಪುರಾಣ', ಅಧ್ಯಾಯ-೩೦-೩೧, ಖೋಡೆ ಫೌಂಡೇಶನ್, ಬೆಂಗಳೂರು, ಪು-೧೬೧-೧೮೪.

೯. ಪಂಢರಿನಾಥಾಚಾರ್ಯ ಗಲಗಲಿ, (ಅನು), 'ನಾರದ ಮಹಾಪುರಾಣ', ಪ್ರಥಮಪಾದ, ಅಧ್ಯಾಯ-೧೦, ಖೋಡೆ ಫೌಂಡೇಶನ್, ಬೆಂಗಳೂರು, ಪು-೬೦-೬೩.

೧೦. ಪಂಢರಿನಾಥಾಚಾರ್ಯ ಗಲಗಲಿ, (ಅನು), 'ಸ್ಕಂದ ಮಹಾಪುರಾಣ', ಭಾಗ-೩, ಪ್ರಭಾಸಖಂಡ, ಅಧ್ಯಾಯ-೭೭, ಖೋಡೆ ಫೌಂಡೇಶನ್, ಬೆಂಗಳೂರು, ಪು-೨೭೩-೨೭೬.

೧೧. Ritti S. H. and Shelke G.C., 1979, 'Inscriptions from Nanded District', Yashavant Mahavidyalaya, Nanded, P-XXXI.

೧೨. ಶ್ರೀಹರಿ ಮತ್ತು ಶ್ರೀನಿವಾಸರಾಯರು ನ.ವೆಂ., ೧೯೮೬, 'ಶ್ರೀಮದ್ವಾಲ್ಮೀಕಿರಾಮಾಯಣ', ಬಾಲಕಾಂಡ, ಸಂಪುಟ-೧ ಭಾರತ ದರ್ಶನ ಪ್ರಕಾಶನ, ಬೆಂಗಳೂರು, ಪು-೨೬೭-೨೭೨.

೧೩. ಆಳಸಿಂಗಾಚಾರ್ಯ, ೨೦೦೦, 'ಮಹಾಭಾರತ', ಆದಿಪರ್ವ, ಪ್ರಥಮಭಾಗ, ಆಸ್ತಿಕಪರ್ವ, ಅಧ್ಯಾಯ-೧೭-೧೯, ಬಿರ್ಲಾಪ್ರತಿಷ್ಠಾನ, ಭಾರತೀಯ ವಿದ್ಯಾಭವನ, ಬೆಂಗಳೂರು, ಪು-೧೧೬-೧೨೭.

೧೪. ಶ್ರೀಹರಿ. (ಅನು), ೧೯೯೪, 'ಶ್ರೀಮದ್ಭಾಗವತ', ಅಷ್ಟಮಸ್ಕಂದ, ಸಂ-೫, ಭಾರತದರ್ಶನ ಪ್ರಕಾಶನ ಸಮಿತಿ, ಬೆಂಗಳೂರು, ಪುಟ-೧೬೫೭-೧೭೦೨.

೧೫. ಪಂಢರಿನಾಥಾಚಾರ್ಯ ಗಲಗಲಿ, (ಅನು), 'ಮತ್ಸ್ಯ ಮಹಾಪುರಾಣ', ಭಾಗ-೨, ಅಧ್ಯಾಯ-೨೫೦-೨೫೨, ಖೋಡೆ ಫೌಂಡೇಶನ್, ಬೆಂಗಳೂರು, ಪು-೨೮೬-೨೯೪.

೧೬. ಪಂಢರಿನಾಥಾಚಾರ್ಯ ಗಲಗಲಿ, (ಅನು), 'ಸ್ಕಂದ ಮಹಾಪುರಾಣ', ಭಾಗ-೧, ಅಧ್ಯಾಯ-೪, ಖೋಡೆ ಫೌಂಡೇಶನ್, ಬೆಂಗಳೂರು, ಪು-೩೫-೪೦.

೧೭. ಪಂಢರಿನಾಥಾಚಾರ್ಯ ಗಲಗಲಿ, (ಅನು), 'ಪದ್ಮ ಮಹಾಪುರಾಣ', ಭಾಗ-೨, ಬ್ರಹ್ಮಖಂಡ, ಅಧ್ಯಾಯ-೮, ಖೋಡೆ ಫೌಂಡೇಶನ್, ಬೆಂಗಳೂರು, ಪು-೨೮೯-೨೯೨.

೧೮. ಪಂಢರಿನಾಥಾಚಾರ್ಯ ಗಲಗಲಿ, (ಅನು), 'ವಿಷ್ಣು ಮಹಾಪುರಾಣ', ಪ್ರಥಮ ಅಂಶ, ಅಧ್ಯಾಯ-೧, ಖೋಡೆ ಫೌಂಡೇಶನ್, ಬೆಂಗಳೂರು, ಪು-೨೩-೨೮.

೧೯. ಜಿ.ಬಿ.ಹರೀಶ್, (ಅನು), ದೇವದತ್ತ ಪಟ್ನಾಯಕ್, ೨೦೧೫, 'ವಿಷ್ಣುವಿನ ಏಳು ರಹಸ್ಯಗಳು' ವಸಂತ ಪ್ರಕಾಶನ, ಬೆಂಗಳೂರು, ಪು-೭೧.

೨೦. ಚನ್ನಕ್ಕ ಎಲಿಗಾರ, (ಸಂ), ೧೯೯೦, ಪೂರ್ವೋಕ್ತ, ಪು-೯೯.

೨೧. SII, XVIII, ೨೯೦, ಬಂಕಾಪುರ ಕ್ರಿ.ಶ. ೧೧೭೮.

೨೨. ಹನುಮಾಕ್ಷಿ ಗೋಗಿ., (ಅನು), ವಸುಂದರಾ ಫಿಲಿಯೋಜಾ, ೨೦೦೭, 'ಧಾರವಾಡ ಜಿಲ್ಲೆಯ ಕಾಳಾಮುಖ ಮತ್ತು ಪಾಶುಪತ ದೇವಾಲಯಗಳು', ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಬೆಂಗಳೂರು, ಪು-೭.

# ಬಳಗಾನೂರ ಹಾಗೂ ತಮದೊಡ್ಡಿಯ ಶಿಲ್ಪಾವಶೇಷಗಳು

**ಶಿವಪ್ಪ.ಎನ್. ನೀರಲಗಿ***

ಇಂದಿನ ವಿಜಯಪೂರ ಜಿಲ್ಲೆಯ ತಾಳಿಕೋಟೆ ತಾಲೂಕಿನಿಂದ ಪಶ್ಚಿಮಕ್ಕೆ ೧೨ ಕಿ.ಮಿ ಅಂತರದಲ್ಲಿರುವ ಊರು ಬಳಗಾನೂರ. ಹಿಂದೊಮ್ಮೆ ಈ ಊರು ಜೈನ ಕೇಂದ್ರವಾಗಿತ್ತೆಂಬುವುದಕ್ಕೆ ಈ ಊರಿನ ಆಂಜನೇಯ ಗುಡಿಯಲ್ಲಿರುವ ಮುಕ್ಕೊಡೆ ಜಿನಬಿಂಬವೇ ಸಾಕ್ಷಿಯಾಗಿದೆ ಈ ಊರಿನಲ್ಲಿ ಸೂಮಾರು ೫-೬ ಜೈನ ಶ್ರಾವಕರ ಮನೆಗಳಿವೆ. ಈ ಮುಕ್ಕೊಡೆ ಜಿನಬಿಂಬವನ್ನು ಸ್ಥಳೀಯರು "ಬಾಣಂತಿಕಲ್ಲು" ಎಂದು ಕರೆಯುತ್ತಾರೆ.ಊರಿನ ಪಶ್ಚಿಮದಲ್ಲಿ ತಿಪ್ಪೆಯೊಂದರಲ್ಲಿ ಬಿದ್ದಿರುವ ಈ ಮುಕ್ಕೊಡೆ ಜಿನಬಿಂಬವನ್ನು ಹೆಣ್ಣು ಮಕ್ಕಳಿಗೆ ಪ್ರಸವವಾಗದಿದ್ದಾಗ ಈ ಮುಕ್ಕೊಡೆ ಜಿನಬಿಂಬವನ್ನು ಮೇಲಿನಿಂದ ಕೆಳಗೆ, ಕೆಳಗಿನಿಂದ ಮೇಲೆ ಬೀಳಿಸಿದಾಗ ಹೆಣ್ಣು ಮಕ್ಕಳ್ಳಿಗೆ ಪ್ರಸವವಾಗುವುದೆಂದು ಸ್ಥಳೀಯರ ನಂಬಿಕೆಯಾಗಿದೆ. ಹೀಗಾಗಿ ಮುಕ್ಕೊಡೆ ಜಿನಬಿಂಬದ ಮಂದಸ್ಮಿತ ಮುಖವು ಹಾಳಾಗಿದೆ ಕಪ್ಪು ಕಣಶಿಲೆಯಲ್ಲಿ ಕೆತ್ತಿರುವ ಈ ಮೂರ್ತಿಯು ಪದ್ಮಾಸನದಲ್ಲಿದ್ದು, ಮೂರ್ತಿಯ ತಲೆಯ ಮೇಲೆ ಹಂತಹಂತವಾಗಿ ಮೂರುಸ್ತರದ ಸುಂದರವಾದ ಮುಕ್ಕೊಡೆಯನ್ನು ಕೆತ್ತಲಾಗಿದೆ. ಮೂರ್ತಿಯು ನಿರಾಭರಣ ಸುಂದರವಾಗಿದೆ.ಮೂರ್ತಿಯ ಎಡ ಬಲಕ್ಕೆ ಇಬ್ಬರು ಚಾಮರಧಾರಿಗಳನ್ನು ಕೆತ್ತಲಾಗಿದ್ದು, ಅವರ ಕೈಯಲ್ಲಿ ಚೌರಿಗಳಿವೆ ಈ ಚಾಮರಧಾರಿಗಳು ಕರಂಡ ಮುಕೊಟವನ್ನು ಧರಿಸಿದ್ದು, ಮೈಮೇಲೆ ಅಲಂಕಾರಿಯುತ ಉಡುಪನ್ನು ಧರಿಸಿದ್ದಾರೆ. ಪ್ರತಿಮಾ ಲಕ್ಷಣಗಳಿಂದ ಈ ಮುಕ್ಕೊಡೆ ಜಿನಬಿಂಬವನ್ನು ೧೧-೧೨ನೇ ಶತಮಾನಕ್ಕೆ ಸೇರಿಸಬಹುದಾಗಿದೆ.

ತಮದೊಡ್ಡಿಯ ಊರ ಭಾವಿಯೊಂದರಲ್ಲಿ ಎರಡು ನಿಷಿಧಿಗಲ್ಲುಗಳಿವೆ.ಅದರಲ್ಲೊಂದು ಮುಕ್ಕೊಡೆ ಜಿನಬಿಂಬವಾಗಿದ್ದು ಮೂರ್ತಿಯ ತಲೆಯಲ್ಲಿ ಗುಂಗುರು ಕೂದಲನ್ನು ಬಿಡಿಸಲಾಗಿದೆ. ನಿಷಿಧಿಗಲ್ಲಿನ ಪಕ್ಕದಲ್ಲಿಯೇ ಪದ್ಮಾಸನದಲ್ಲಿರುವ ಬೆತ್ತಲೆ ಜಿನಬಿಂಬವನ್ನು ಕೆತ್ತಲಾಗಿದೆ. ಇನ್ನೊಂದು ನಿಷಿಧಿಗಲ್ಲಿನಲ್ಲಿ ನಿಷಿಧಿಯಾದ ವ್ಯಕ್ತಿಯನ್ನು ಮೇಣೆಯಲ್ಲಿ ಸಾಗಿಸುತ್ತಿದ್ದು ನಿಷಿಧಿಗಲ್ಲಿನ ಎಡಬಲದಲ್ಲಿ ಇಬ್ಬರು ಚಾಮರಧಾರಿಯರು ಚಾಮರವನ್ನು ಬೀಸುತ್ತಿದ್ದಾರೆ. ನಿಷಿಧಿಗಲ್ಲಿನ ಮೇಲ್ಭಾಗದಲ್ಲಿ ಪದ್ಮಾಸನದಲ್ಲಿರುವ ಜಿನಬಿಂಬವನ್ನು ಕೆತ್ತಲಾಗಿದೆ. ಈ ನಿಷಿಧಿಗಲ್ಲಿನಲ್ಲಿ ತೃಟಿತವಾದ ಶಾಸನವೂ ಸಹ ಇದೆ.

**ವೀರಗಲ್ಲು:** ವೀರನೊಬ್ಬನು ಬಿಲ್ಲು ಬಾಣಗಳೊಂದಿಗೆ ಕುದುರೆ ಮೇಲಿರುವ ವೀರನೊಂದಿಗೆ ಹೋರಾಡುತ್ತಿದ್ದು, ಕುದುರೆ ಮೇಲಿರುವ ವೀರನನ್ನು ಹೊಡೆದುರುಳಿಸಿದ್ದಾನೆ ಕುದುರೆಯ ಕೆಳಗಡೆ ಕುದುರೆಯ ಮೇಲಿರುವ ವೀರನ ಹೆಣವು ಬಿದ್ದಿದ್ದು ಕುದುರೆಯು ಸಹ ಎದುರಾಳಿ ವೀರನೊಡನೆ ಹೋರಾಡುವಂತೆ ಶಿಲ್ಪಿಯು ವೀರಗಲ್ಲನ್ನು ಕೆತ್ತಿದ್ದಾನೆ. ಇನ್ನೊಂದು ವೀರಗಲ್ಲಿನಲ್ಲಿ ಅಜಾನುಬಾಹು ವೀರನು ಕೈಯಲ್ಲಿ ಖಡ್ಗ ಹಿಡಿದಿದ್ದು, ವೀರಮುಡಿ ಕಟ್ಟಿದ್ದಾನೆ. ಕಿವಿಯಲ್ಲಿ ದೊಡ್ಡದಾದ ಕಿವಿಯೋಲೆ, ತೋಳ್ಬಂಧಿ ಹಾಗೂ ಕಾಲಲ್ಲಿ ಕಾಲ್ಗಡಗಗಳಿವೆ.

**ಸೂರ್ಯನ ವಿಗ್ರಹ:** ಅರಳಿ ಮರವೊಂದರ ಬೊಡ್ಡೆಗೆ ಆನಸಿ ಇಟ್ಟಿರುವ ಸೂರ್ಯನ ವಿಗ್ರಹವು ತುಂಬಾ ತೃಟಿತವಾಗಿದ್ದು, ಸೂರ್ಯನ ಎರಡು ಕೈಯಲ್ಲಿ ಅರಳಿದ ಕಮಲದ ಮೊಗ್ಗುಗಳಿವೆ.

ಆಂಜನೇಯ ದೇವಾಲಯದ ವರಾಂಡದೊಳಗೆ ದ್ವಿಬಾಹು ಗಣೇಶನ ವಿಗ್ರಹವನ್ನು ಇಡಲಾಗಿದೆ. ಗಣೇಶನ ವಿಗ್ರಹವನ್ನು ಕೆಂಪುಮರಳುಗಲ್ಲಿನಲ್ಲಿ ಕೆತ್ತಲಾಗಿದೆ. ಗಣೇಶನು ಸಣ್ಣದಾದ ಶಿರಶ್ಚಕ್ರವನ್ನು ಧರಿಸಿದ್ದು ಅಗಲವಾದ ಕಿವಿಗಳನ್ನು ಹೊಂದಿದ್ದಾನೆ. ಈ ಮೂರ್ತಿಯು ಲಲಿತಾಸನದಲ್ಲಿದ್ದು, ಬಲಗಾಲನ್ನು ಸ್ವಲ್ಪ ಮಡಿಚಿ ಎಡಗಾಲು ಅರ್ದ ಪದ್ಮಾಸನದ ತರಹವಿದೆ.

ಗಣೇಶನು ಜನಿವಾರ ಧರಿಸಿದ್ದು ಹೊಟ್ಟೆಗೆ ನಾಗಬಂಧವಿದೆ. ಗಣೇಶನ ಕಾಲಲ್ಲಿ ಕಾಲ್ಗಡಗಗಳಿವೆ ಗಣೇಶನು ತನ್ನ ಬಲಗೈಯನ್ನು ಕಾಲ ಮೇಲೆ ಇರಿಸಿದ್ದು ಎಡಗೈಯಿಂದ ಸೊಂಡಿಲನ್ನೂ ಸ್ವಲ್ಪ ಎತ್ತಿ ಹಿಡಿದಂತೆ ಶಿಲ್ಪಿಯು ಗಣೇಶನ ಶಿಲ್ಪವನ್ನು ಕತ್ತಿದ್ದಾನೆ ಶಿಲ್ಪಕಲಾ ಲಕ್ಷಣಗಳಿಂದ ಇದೊಂದು ಬದಾಮಿ ಚಾಲುಕ್ಯರ ಕಾಲಕ್ಕೆ ಸೇರಿದ್ದು: ಕ್ರಿ.ಶ. ೬೦೦ರ ಸುಮಾರಿಗೆ ಸೇರಿದ್ದಾಗಿದೆ.

* ತಾಳಿಕೋಟೆ-೫೮೬೨೧೪, ಮೊ. ೯೪೪೯೦೩೩೬೮೬





**ಭೈರವನ ಶಿಲ್ಪ:** ಚತುರ್ಭುಜ ಭೈರವನ ಶಿಲ್ಪವನ್ನು ಕಪ್ಪು ಕಣಶಿಲೆಯಲ್ಲಿ ಕೆತ್ತಲಾಗಿದೆ. ಒಂದು ಕೈಯಲ್ಲಿ ಡಮರು ಹಾಗೂ ಮತ್ತೊಂದು ಕೈಯಲ್ಲಿ ತ್ರಿಶೂಲವಿದೆ. ಇನ್ನೊಂದು ಕೈಯಲ್ಲಿ ಪಾಣಿಬಟ್ಟಲು ಇದ್ದರೆ ಮತ್ತೊಂದು ಕೈಯಲ್ಲಿ ಖಟ್ವಾಂಗವಿದೆ. ಮೂರ್ತಿಯು ತಲೆಗೆ ಗುಂಗುರು ಕೂದಲುಗಳಿದ್ದರೆ ಕಿವಿಯಲ್ಲಿ ಕರ್ಣಕುಂಡಲಗಳಿವೆ. ಮೂರ್ತಿಯು ಎದೆಗೆ ಕಂಠಿಹಾರವನ್ನು ಧರಿಸಿದ್ದು ಕೊರಳಲ್ಲಿ ರುಂಡಮಾಲೆ ಇದೆ. ಭೈರವನ ಕೆಳಗೆ ಬಲದಲ್ಲಿ ಪ್ರೇತವನ್ನು ಕೆತ್ತಲಾಗಿದೆ. ಮೂರ್ತಿಯ ಎಡಭಾಗಕ್ಕೆ ಭೈರವನ ವಾಹನವಾದ ನಾಯಿಯನ್ನು ಸುಂದರವಾಗಿ ಕೆತ್ತಲಾಗಿದೆ.

ಇದೆ ವರಾಂಡದಲ್ಲಿರುವ ಇನ್ನೊಂದು ಮೂರ್ತಿಯು ತುಂಬಾ ಹಾಳಾಗಿದ್ದು ಲಲಿತಾಸನದಲ್ಲಿದೆ. ಬಲಗೈಯಲ್ಲಿ ಡಮರು ಎಡಗೈಯಲ್ಲಿ ತ್ರಿಶುಲವಿದೆ. ತಲೆಗೆ ಕರಂಡ ಮುಕುಟವಿದ್ದು ಮೂರ್ತಿಯ ಕೊರಳಲ್ಲಿ ರುಂಡಮಾಲೆ ಇರುವದರಿಂದ ಇದೊಂದು ಶಿವ ಅಥವಾ ಬೈರವನ ಶಿಲ್ಪವಾಗಿರಬಹುದಾಗಿದೆ.

**ಸಪ್ತಮಾತೃಕೆಯರ ಶಿಲ್ಪ:** ತಮದೊಡ್ಡಿಯ ಬಾವಿಯಲ್ಲಿರುವ ಕಲ್ಯಾಣದ ಚಾಲುಕ್ಯರ ಕಾಲದ ಸಪ್ತಮಾತೃಕೆಯರ ಶಿಲ್ಪವು ತುಂಬಾ ಸುಂದರವಾಗಿದೆ. ಮೊದಲಿಗೆ ವೀರಭದ್ರ ಕೊನೆಯಲ್ಲಿ ಗಣೇಶನ ಶಿಲ್ಪಗಳಿವೆ. ಮದ್ಯದಲ್ಲಿ ಏಳುಜನ ಮಾತೃಕೆಯರ ಶಿಲ್ಪಗಳಿದ್ದು ಮೂರ್ತಿಗಳ ಕೆಳಗಡೆ ಅವರವರ ಲಾಂಛನಗಳನ್ನು  ಸುಂದರವಾಗಿ ಕೆತ್ತಲಾಗಿದೆ.

ಇದೇ ವರಾಂಡದಲ್ಲಿ ಸುಂದರವಾದ ನಂದಿಯ ಶಿಲ್ಪವಿದ್ದು, ನಂದಿಯ ಹಣೆಗೆ ಹಣೆಪಟ್ಟಿ ಇದೆ. ನಂದಿಯ ಕೊರಳಲ್ಲಿ ಸರಪಳಿ ಹಾಗೂ ಗೆಜ್ಜೆ ಸರವನ್ನು ಸುಂದರವಾಗಿ ಕೆತ್ತಲಾಗಿದೆ. ಊರಿನ ತೋಟವೊಂದರಲ್ಲಿ ಸುಂದರವಾದ ನಂದಿ ಮಂಟಪವಿದ್ದು ಅದರೊಳಗೆ ಸುಂದರವಾದ ನಂದಿ ಶಿಲ್ಪವಿದೆ.

[ಈ ಲೇಖನವನ್ನು ತಯಾರಿಸುವಲ್ಲಿ ಸಹಾಯವನ್ನು ನೀಡಿದ ಶ್ರೀಮತಿ ಸ್ಮಿತಾ ರೆಡ್ಡಿ ಬೆಂಗಳೂರು ಹಾಗೂ ಪ್ರೊ. ಟಿ.ಮುರುಗೇಶಿ ಶಿರ್ವಾ ಇವರಿಗೆ ಕೃತಜ್ಞತೆಗಳು.]






# ಕುಣಿಗಲ್ ನಾಡಿನ ಕಂಬದ ನರಸಿಂಹನ ಆರಾಧನೆ

**ಕೆ. ರೇವಣಸಿದ್ದಯ್ಯ***

**ಮ**ಹಾವಿಷ್ಣುವಿನ ದಶಾವತಾರಗಳು ಭಾರತೀಯ ಜನಸಾಮಾನ್ಯರಿಗೆ ಬಹಳ ಪ್ರಿಯವಾದವು. ಈ ದಶಾವತಾರಗಳಲ್ಲಿ ನಾಲ್ಕನೆಯದು ನರಸಿಂಹ. ಮಹಾಭಾರತ, ಭಾಗವತ, ಹರಿವಂಶ, ಮತ್ಸ್ಯ, ಕೂರ್ಮ, ವಿಷ್ಣು ಮತ್ತು ಪದ್ಮಪುರಾಣಗಳಲ್ಲಿ ನರಸಿಂಹ ಅವತಾರದ ಕಥೆಯನ್ನು ನಿರೂಪಿಸಲಾಗಿದೆ. ನರಸಿಂಹನ ರೂಪವು ಮನುಷ್ಯನ ದೇಹ ಹಾಗೂ ಸಿಂಹದ ಮುಖವನ್ನು ಧರಿಸಿ ಕಂಭದಿಂದ ಉದ್ಭವಿಸಿರುವುದರಿಂದ ಕಂಬದ ನರಸಿಂಹ ಎಂಬುದಾಗಿ ಪ್ರಚಲಿತಕ್ಕೆ ಬಂದಿದೆ.

ನರಸಿಂಹನಿಗೆ ೭೭ಕ್ಕೂ ಹೆಚ್ಚಿನ ರೂಪಗಳಿವೆ. ಅವುಗಳಲ್ಲಿ ಉಗ್ರ, ಘೋರ, ಅಟ್ಟಹಾಸ, ಆವೇಶ ಮೊದಲಾದ ರೂಪಗಳಲ್ಲೂ, ಧಾರಣಯೋಗ ಮುದ್ರೆಗಳಲ್ಲಿಯೂ ಹಾಗೂ ಲಕ್ಷ್ಮೀಸಹಿತನಾಗಿಯೂ ಈ ಪ್ರದೇಶದಲ್ಲಿ ಕಂಡುಬರುತ್ತವೆ. ವಿವಿಧ ವರ್ಗ, ಅಂತಸ್ತು, ಪಂಥ, ಪಂಗಡಗಳ ಜನರು ತಮ್ಮ ಆರಾಧ್ಯದೈವವಾಗಿ ನರಸಿಂಹಸ್ವಾಮಿಯನ್ನು ಆರಾಧಿಸಿಕೊಂಡು ಬಂದಿದ್ದಾರೆ.

ಕುಣಿಗಲ್ ನಾಡಿನಲ್ಲಿ ಕಂಡುಬಂದಿರುವಂತಹ ಕಂಬದ ನರಸಿಂಹನ ಆರಾಧನಾ ನೆಲೆಗಳು ಮತ್ತು ವಾಸ್ತುಶಿಲ್ಪದ ಬಗ್ಗೆ ಬೆಳಕು ಚೆಲ್ಲಲಾಗಿದೆ. ದೇವಾಲಯದ ಗರ್ಭಗೃಹದಲ್ಲಿ ಎತ್ತರವಾದ ಕಂಬವನ್ನು ಪ್ರತಿಷ್ಠಾಪಿಸಿ ಆ ಕಂಭದ ಒಂದು ಪಾರ್ಶ್ವದಲ್ಲಿ ನರಸಿಂಹನ ಶಿಲ್ಪವನ್ನು ಮೂಡಿಸಿ ಆರಾಧಿಸುವ ಪ್ರತೀತಿ ಕುಣಿಗಲ್ ನಾಡಿನ ಅನೇಕ ದೇವಾಲಯಗಳಲ್ಲಿ ಕಂಡುಬಂದಿದೆ.

**ಕುಣಿಗಲ್ ಪಟ್ಟಣದಲ್ಲಿರುವ ಕೋಟೆನರಸಿಂಹ:**– ಕುಣಿಗಲ್ ಪಟ್ಟಣದ ಕೋಟೆಯ ಆವರಣದಲ್ಲಿ ದೇವಾಲಯವಿರುವುರಿಂದ ಕೋಟೆನರಸಿಂಹನೆಂದು ಪ್ರಸಿದ್ದಿಯಾಗಿದೆ. ಪೂರ್ವಭಿಮುಖವಾಗಿರುವ ನರಸಿಂಹಸ್ವಾಮಿ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪಗಳಿಂದ ಕೂಡಿದ ಏಕಕೂಟ ವೈಷ್ಣವ ದೇವಾಲಯವಾಗಿದೆ. ಈ ದೇವಾಲಯದ ನಿರ್ಮಾಣಕ್ಕೆ ಸಂಬಂಧಿಸಿದಂತೆ ದೇವಾಲಯದ ಉತ್ತರ ದಿಕ್ಕಿನ ಪಂಚಾಂಗದ ಜಗತಿ ಕಲ್ಲಿನ ಮೇಲೆ ಕಾಲಮಾನವನ್ನು ನಮೂದಿಸಲಾಗಿದೆ. ಶಾಲಿವಾಹನ ಶಕವರುಷ ೧೪೧೫ ಎಂದು ಉಲ್ಲೇಖಿಸಲಾಗಿದೆ.[೧] ದೇವಾಲಯದ ವಾಸ್ತುಶೈಲಿಯನ್ನು ಗಮನಿಸಿದರೆ ಹೊಯ್ಸಳರ ಕಾಲದಲ್ಲಿ ಗರ್ಭಗೃಹ, ಅಂತರಾಳ ಹಾಗೂ ನವರಂಗದ ಅಂಕಣಗಳು ನಿರ್ಮಾಣಗೊಂಡಿದ್ದು, ವಿಜಯನಗರ ಕಾಲಾವಧಿಯಲ್ಲಿ ಮುಖಮಂಟಪದ ಕೆಲವು ಭಾಗಗಳು ಸೇರಿಕೊಂಡು ಜೀರ್ಣೋದ್ಧಾರಗೊಂಡಿದೆ. ಮೂಲಗರ್ಭಗೃಹದಲ್ಲಿ ನರಸಿಂಹನ ಬದಲು ಸುಮಾರು ೪ ಅಡಿ ಎತ್ತರದ ಜನಾರ್ದನಸ್ವಾಮಿಯ ಮೂರ್ತಿಶಿಲ್ಪವಿದೆ.[೨] ಸ್ಥಳೀಯರ ಹೇಳಿಕೆಯಂತೆ ದೇವಾಲಯದಲ್ಲಿದ್ದಂತಹ ನರಸಿಂಹನ ವಿಗ್ರಹವು ಕಳವಾದ ಕಾರಣ ಹುಲಿಯೂರುದುರ್ಗದಿಂದ ಚನ್ನಕೇಶವನ ವಿಗ್ರಹವನ್ನು ತಂದು ಪ್ರತಿಷ್ಠಾಪಿಸಲಾಗಿದೆಯಂತೆ. ಇತ್ತೀಚೆಗೆ ಕುಣಿಗಲ್ ಕೆರೆಯಲ್ಲಿ ಸುಮಾರು ೩ ಅಡಿಗೂ ಎತ್ತರವಾದ ಪುರಾತನ ನರಸಿಂಹನ ಮೂರ್ತಿಶಿಲ್ಪವು ದೊರೆತಿದ್ದು, ಆ ವಿಗ್ರಹವನ್ನೇ ದೇವಾಲಯದಲ್ಲಿಟ್ಟು ಪೂಜಿಸಲಾಗುತ್ತಿದೆ. ಈ ಮೇಲಿನ ಅಂಶಗಳನ್ನು ಗಮನಿಸಿದರೆ ಕುಣಿಗಲ್ ಪಟ್ಟಣದಲ್ಲಿ ಅನೇಕ ಶತಮಾನಗಳಿಂದಲೂ ನರಸಿಂಹನ ಆರಾಧನೆಯು ಪ್ರಚಲಿತದಲ್ಲಿತ್ತೆಂದು ಸ್ಪಷ್ಟವಾಗುತ್ತದೆ.

**ಕುಣಿಗಲ್ ಪಟ್ಟಣದ ಕಂಬದ ನರಸಿಂಹ :** ಕುಣಿಗಲ್ ಪಟ್ಟಣದ ಕುದುರೆ ಫಾರಂ ಆವರಣದಲ್ಲಿ ಕಂಬದ ನರಸಿಂಹನ ದೇವಾಲಯವಿದೆ. ರಾಷ್ಟ್ರಕೂಟರ ಕಾಲಾವಧಿಯಲ್ಲಿ ವೀರಕಂಬಳರಾಯ ಎಂಬ ಅಧಿಕಾರಿಯು ಕುಣಿಗಲ್ ಪಟ್ಟಣದಲ್ಲಿ ದೇವಾಲಯವನ್ನು ಕಟ್ಟಿಸಿದನೆಂಬ ಪ್ರತೀತಿ ಇದೆ. ಕಂಬದ ನರಸಿಂಹ ದೇವಾಲಯದ ನಿರ್ಮಾಣಕ್ಕೆ ಸಂಬಧಿಸಿದಂತೆ ಯಾವುದೇ ಶಾಸನ ಉಲ್ಲೇಖವಿಲ್ಲ. ಕುಣಿಗಲ್ ಪಟ್ಟಣದಲ್ಲಿರುವ ಕಂಬದ ನರಸಿಂಹ ದೇವಾಲಯವು ಸಾಧಾರಣ ಶೈಲಿಯಲ್ಲಿದೆ. ಪೂರ್ವಭಿಮುಖವಾಗಿ ನಿರ್ಮಾಣಗೊಂಡಿದ್ದು ತಲವಿನ್ಯಾಸದಲ್ಲಿ ಗರ್ಭಗೃಹ, ನವರಂಗ ಹಾಗೂ ಮುಖಮಂಟಪವನ್ನು

* ಪಿಹೆಚ್.ಡಿ ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿವಿ, ಹಂಪಿ, ಮೊ. ೮೯೭೧೭೩೪೨೦೦

ಹೊಂದಿದೆ. ಗರ್ಭಗೃಹದಲ್ಲಿನ ಕಂಬದಲ್ಲಿ ನರಸಿಂಹನ ಬಿಂಬವನ್ನು ಮೂಡಿಸಿರುವುದರಿಂದ "ಕಂಬದ ನರಸಿಂಹ" ಎಂದು ಹೆಸರು ಬಂದಿದೆ.

ಸುಮಾರು ೮ ಅಡಿ ಎತ್ತರದ ಶಿಲಾಸ್ತಂಭವನ್ನು ಕಂಬದ ನರಸಿಂಹನೆಂದು ಪೂಜಿಸಲಾಗುತ್ತಿದೆ. ಶಿಲಾಸ್ತಂಭದ ಪಾದದಲ್ಲಿ ಶಂಖ, ಚಕ್ರ, ತಿರುನಾಮವನ್ನು ಹಾಗೂ ಮೇಲ್ಭಾಗದಲ್ಲಿ ನರಸಿಂಹನನ್ನು ಕಂಡರಿಸಲಾಗಿದೆ. ಗರ್ಭಗೃಹದ ದ್ವಾರಬಾಗಿಲಿನ ಎಡ ಮತ್ತು ಬಲಭಾಗದಲ್ಲಿ ದ್ವಾರಪಾಲಕರನ್ನು ಕಂಡರಿಸಲಾಗಿದೆ. ದ್ರಾವಿಡ ಶೈಲಿಯ ಶಿಖರವನ್ನು ಒಳಗೊಂಡಿದ್ದು ಇತ್ತೀಚೆಗೆ ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಪ್ರತಿ ಶನಿವಾರ ಹಾಗೂ ಶ್ರಾವಣಮಾಸದಲ್ಲಿ ನರಸಿಂಹ ದೇವಾಲಯದಲ್ಲಿ ವಿಶೇಷ ಪೂಜೆ, ಪುನಸ್ಕಾರ, ಅನ್ನಸಂತರ್ಪಣೆ ಕಾರ್ಯಕ್ರಮಗಳು ಜರುಗುತ್ತವೆ.

**ಗುನ್ನಾಗರೆಯ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ:** ಕುಣಿಗಲ್ ತಾಲೂಕಿನ ಕೊತ್ತಗೆರೆ ಹೋಬಳಿಯ ಗುನ್ನಾಗರೆ ಗ್ರಾಮದಲ್ಲಿರುವ ನರಸಿಂಹಸ್ವಾಮಿ ದೇವಾಲಯವು ವಿಜಯನಗರ ಕಲಾಶೈಲಿಯಲ್ಲಿ ನಿರ್ಮಾಣವಾಗಿದೆ. ನಿರ್ಮಾಣದ ಬಗ್ಗೆ ಯಾವುದೇ ಶಾಸನ ಉಲ್ಲೇಖವಿಲ್ಲ. ದೇವಾಲಯದ ತಲವಿನ್ಯಾಸವು ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪಗಳಿಂದ ಕೂಡಿದೆ. ದೇವಾಲಯದ ಗರ್ಭಗೃಹದಲ್ಲಿ ಸುಮಾರು ೪ ಅಡಿ ಎತ್ತರದ ಶಿಲಾಸ್ತಂಭವನ್ನು ಪ್ರತಿಷ್ಠಾಪಿಸಲಾಗಿದ್ದು, ಶಂಖ, ಚಕ್ರ ಹಾಗೂ ತಿರುನಾಳದ ಕೆತ್ತನೆಯಿಂದ ಕೂಡಿದೆ. ಅಂತರಾಳದ ಎಡ ಮತ್ತು ಬಲಭಾಗದ ಕೋಣೆಯಲ್ಲಿ ಮುತ್ತುರಾಯಸ್ವಾಮಿ ಹಾಗೂ ಲಕ್ಷ್ಮೀನರಸಿಂಹನ ಉತ್ಸವ ಮೂರ್ತಿಗಳನ್ನು ಪೂಜಿಸಲಾಗಿದೆ. ಅಂತರಾಳದ ಪ್ರವೇಶದ್ವಾರದ ಎಡ ಮತ್ತು ಬಲಭಾಗದಲ್ಲಿ ವೈಷ್ಣವ ದ್ವಾರಪಾಲಕರಾದ ಜಯ-ವಿಜಯರ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗವು ನಾಲ್ಕು ಕಂಬಗಳಿಂದ ಕೂಡಿದ್ದು ಚಚ್ಚೌಕಾರವಾಗಿವೆ. ನವರಂಗದಲ್ಲಿನ ನಾಲ್ಕು ಕಂಬಗಳು ಸಹ ಕೆತ್ತನೆಯಿಂದ ಕೂಡಿದ್ದು ವಿಷ್ಣುವಿನ ದಶಾವತಾರಕ್ಕೆ ಸಂಬಂಧಿಸಿದ ಅನೇಕ ಕಥಾನಿರೂಪಣಾ ಶಿಲ್ಪಗಳನ್ನು ಕೆತ್ತಲಾಗಿದೆ. ಕೊದಂಡರಾಮ, ರಾಮ-ಲಕ್ಷ್ಮಣ-ಸೀತೆಯ ಶಿಲ್ಪ, ವಾಮನ ಶಿಲ್ಪ, ಮತ್ಸ್ಯಾವತಾರದ ಶಿಲ್ಪ, ನರಸಿಂಹ ಅವತಾರದ ಶಿಲ್ಪ, ಲಕ್ಷ್ಮಿವೆಂಕಟೇಶ್ವರ ಶಿಲ್ಪ, ಕಾಳಿಂಗ ಮರ್ದನದ ಶಿಲ್ಪ, ಕೂರ್ಮಾವತಾರದ ಶಿಲ್ಪ, ಚನ್ನಕೇಶವ, ಹನುಮಂತ, ಯಾಳಿಶಿಲ್ಪ, ಭಕ್ತನ ಶಿಲ್ಪ ಹಾಗೂ ನೃತ್ಯಗಾರನ ಶಿಲ್ಪಗಳನ್ನು ಕಂಡರಿಸಲಾಗಿದೆ. ನವರಂಗದ ಮೇಲ್ಛಾವಣೆಯಲ್ಲಿ ಭುವನೇಶ್ವರಿಯಲ್ಲಿ ಪದ್ಮದ ಕೆತ್ತನೆ ಕಂಡುಬರುತ್ತದೆ.

ದೇವಾಲಯದ ಮುಖ್ಯಪ್ರವೇಶದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಉಬ್ಬುಶಿಲ್ಪವಿದೆ. ತೆರೆದ ಮುಖಮಂಟಪವು ನಾಲ್ಕು ಕಂಬಗಳಿಂದ ಕೂಡಿದೆ. ಈ ಕಂಬಗಳು ಬಾಳೆಯ ಮೊಗ್ಗಿನಂತೆ ಬಾಗಿದ್ದು (ಪುಷ್ಪಬೋದಿಗೆ) ಅಲಂಕೃತಗೊಂಡಿವೆ. ದೇವಾಲಯದ ಮುಂಭಾಗದಲ್ಲಿ ಬಲಿ ಪೀಠವಿದೆ. ದೇವಾಲಯವನ್ನು ಸುತ್ತುವರಿದಂತೆ ಪ್ರಾಕಾರ ಗೋಡೆಯನ್ನು ನಿರ್ಮಿಸಿ ಒಳ ಆವರಣದಲ್ಲಿ ಸಾಲು ಮಂಟಪ/ಕಲ್ಯಾಣ ಮಂಟಪಗಳನ್ನು ರಚನೆ ಮಾಡಿ ವಿಶೇಷ ಜಾತ್ರೆ ಉತ್ಸವದಂತಹ ದಿನಗಳಲ್ಲಿ ಭಕ್ತಾದಿಗಳು ತಂಗಲು ಅನುಕೂಲವನ್ನು ಕಲ್ಪಿಸಲಾಗಿದೆ.

ದೇವಾಲಯದ ಮುಂಭಾಗ ಸುಮಾರು ೬೦ ಅಡಿ ಎತ್ತರದ ಗರುಡ ಸ್ತಂಭವಿದೆ. ಗರುಡಗಂಬದ ಪಾದದಲ್ಲಿ ಗರುಡನ ಉಬ್ಬುಶಿಲ್ಪವನ್ನು ಕಾಣಬಹುದಾಗಿದ್ದು, ನರಸಿಂಹಸ್ವಾಮಿಯ ಕಡೆ ಮುಖಮಾಡಿ ಕೈಮುಗಿದು ನಿಂತಿದ್ದಾನೆ. ದೇವಾಲಯವು ದ್ರಾವಿಡ ಶೈಲಿಯಲ್ಲಿ ರಚನೆಯಾಗಿದ್ದು ಅಧಿಷ್ಠಾನ, ಭಿತ್ತಿ, ಪ್ರಸ್ತರಾ, ಗ್ರೀವಾ, ಶಿಖರ, ಸ್ತೂಪಿಯಿಂದ ಕೂಡಿದೆ. ಗ್ರಾನೈಟ್ ಶಿಲೆ ಹಾಗೂ ಗಾರೆಗಚ್ಚನ್ನು ಬಳಸಿಕೊಂಡು ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ.

**ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ:** ಕುಣಿಗಲ್ ತಾಲೂಕಿನ ಹುತ್ರಿದುರ್ಗ ಹೋಬಳಿಯ ಸೊಂದಲಗೆರೆ ಗ್ರಾಮದ ಮಧ್ಯಭಾಗದಲ್ಲಿರುವ ಶ್ರೀಲಕ್ಷ್ಮಿನರಸಿಂಹ ದೇವಾಲಯವು ದಕ್ಷಿಣಾಭಿಮುಖವಾಗಿ ನಿರ್ಮಾಣಗೊಂಡಿದೆ. ದೇವಾಲಯದ ರಚನೆಯು ಮೇಲ್ನೋಟಕ್ಕೆ ಮೈಸೂರು ಒಡೆಯರ ಕಾಲಾವಧಿಯಲ್ಲಿ ನಿರ್ಮಾಣಗೊಂಡಂತೆ ಕಂಡುಬಂದರೂ ಸಹ ನಿರ್ಮಾಣಕ್ಕೆ ಸಂಬಂಧಿಸಿದಂತೆ ನಿರ್ದಿಷ್ಟವಾದ ಶಾಸನಗಳು ಕಂಡುಬರುವುದಿಲ್ಲ. ಆದರೂ ಸಹ ಈ ದೇವಾಲಯಕ್ಕೆ ಮೈಸೂರು ಒಡೆಯರು ಅನೇಕ ದಾನದತ್ತಿಗಳನ್ನು ಕೊಟ್ಟಿರುವ ಬಗ್ಗೆ ಅರ್ಚಕರು ಮಾಹಿತಿಯನ್ನು ತಿಳಿಸಿಕೊಟ್ಟರು.[೪] ಲಕ್ಷ್ಮೀನರಸಿಂಹಸ್ವಾಮಿ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಹಾಗೂ ತೆರೆದ ಮುಖಮಂಟಪದಿಂದ ಕೂಡಿದೆ. ಗರ್ಭಗೃಹದಲ್ಲಿ ಸುಮಾರು ೮ ಅಡಿ ಎತ್ತರದ ಶಿಲಾಸ್ತಂಭವಿದೆ. ಈ ಶಿಲಾಸ್ತಂಭದ ಪಾದದಲ್ಲಿ ನರಸಿಂಹಸ್ವಾಮಿಯ ಉಬ್ಬುಶಿಲ್ಪವಿದೆ. ಎಡ ಮತ್ತು ಬಲಭಾಗದಲ್ಲಿ ಶ್ರೀದೇವಿ-ಭೂದೇವಿಯರ ಶಿಲ್ಪಗಳಿವೆ. ನರಸಿಂಹನು ಸ್ಥಾನಿಕ ಬಂಗಿಯಲ್ಲಿ ಚತುರ್ಭುಜದಾರಿಯಾಗಿದ್ದು ಶಂಖ, ಚಕ್ರ, ಅಭಯಹಸ್ತ ಮತ್ತು ವರದ ಮುದ್ರೆಯಿಂದ ಕೂಡಿದೆ. ನವರಂಗವು ನಾಲ್ಕು ಕಂಬಗಳಿಂದ ರಚನೆಯಾಗಿದ್ದು, ಭಕ್ತನ ಶಿಲ್ಪ ಹಾಗೂ ಗಣಪತಿಯ ಶಿಲ್ಪವನ್ನು ಕಂಬಗಳ

ಮೇಲೆ ಕೆತ್ತಲಾಗಿದೆ. ನವರಂಗದ ಕೋಷ್ಠಕದಲ್ಲಿ ಆಳ್ವಾರರ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ಮೇಲ್ಛಾವಣಿಯಲ್ಲಿ ಭುವನೇಶ್ವರಿಯ ಕೆತ್ತನೆ ಇದೆ. ನವರಂಗದ ಆವರಣದಲ್ಲಿ ಗರುಡವಾಹನ, ಕುದುರೆ ವಾಹನದಂತಹ ಪಂಚಲೋಹದ ಉತ್ಸವ ಮೂರ್ತಿಗಳನ್ನು ಇಡಲಾಗಿದೆ. ವಿಶೇಷವಾಗಿ ಹಬ್ಬ-ಹರಿದಿನ, ಜಾತ್ರೆ-ಉತ್ಸವದಲ್ಲಿ ಮೆರವಣಿಗೆ ಮಾಡಲಾಗುತ್ತದೆ. ತೆರೆದ ಮುಖಮಂಟಪವನ್ನು ಒಳಗೊಂಡಿದ್ದು, ಕಂಬಗಳ ಮೇಲೆ ಅನೇಕ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ದೇವಾಲಯದ ಮುಂಭಾಗ ಸುಮಾರು ೨೫ ಅಡಿ ಎತ್ತರದ ಗರುಡಗಂಬವಿದೆ. ದೇವಾಲಯವನ್ನು ಸುತ್ತುವರೆದಂತೆ ಪ್ರಾಕಾರ ಗೋಡೆಯನ್ನು ಕಾಣಬಹುದು. ಪ್ರಾಕಾರ ಗೋಡೆಯ ಪ್ರವೇಶ ದ್ವಾರದ ಮೇಲೆ ಚಿಕ್ಕಗೋಪುರವನ್ನು ನಿರ್ಮಿಸಲಾಗಿದೆ. ಪ್ರವೇಶದ್ವಾರದ ಎಡ ಮತ್ತು ಬಲಭಾಗದಲ್ಲಿ ಆನೆಗಳು ಸ್ವಾಗತಿಸುವಂತೆ ಸೋಪಾನವನ್ನು ನಿರ್ಮಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ದಾನ ಶಾಸನವಿದೆ.

**ಯಲಿಯೂರಿನ ಕಂಬದ ನರಸಿಂಹಸ್ವಾಮಿ:** ಕುಣಿಗಲ್ ತಾಲೂಕಿನ ಹುತ್ರಿದುರ್ಗ ಹೋಬಳಿಯ ಯಲಿಯೂರು ಗ್ರಾಮದಲ್ಲಿ ಕಂಬದ ನರಸಿಂಹನ ದೇವಾಲಯವಿದೆ. ಈ ದೇವಾಲಯವು ಎಲ್ಲಮ್ಮ ದೇವಾಲಯದ ಮುಂಭಾಗದಲ್ಲಿ ಸಣ್ಣ ಗುಡಿಯೊಂದು ನಿರ್ಮಾಣವಾಗಿದೆ. ಗುಡಿಯ ಒಳಗೆ ಸುಮಾರು ೧೪ ಅಡಿ ಎತ್ತರದ ಕಂಬವನ್ನು ಕಾಣಬಹುದಾಗಿದ್ದು ಕಂಬದ ನರಸಿಂಹನೆಂದು ಪೂಜಿಸಲಾಗುತ್ತದೆ. ಕಂಬದ ಮೇಲೆ ಶಂಖ, ಚಕ್ರ ಹಾಗೂ ತಿರುನಾಳವನ್ನು ಬಿಂಬಿಸಲಾಗಿದೆ. ವೈಷ್ಣವ ಪಂಥದ ಅರ್ಚಕರು ಈ ದೇವಾಲಯದ ಪೂಜಾಕಾರ್ಯವನ್ನು ನೆರವೇರಿಸಿಕೊಂಡು ಬಂದಿದ್ದಾರೆ.

**ಜಿನ್ನಾಗರದ ಕಂಬದ ನರಸಿಂಹಸ್ವಾಮಿ:** ಕುಣಿಗಲ್ ತಾಲೂಕಿನ ಅಮೃತೂರು ಹೋಬಳಿಯ ಜಿನ್ನಾಗರ ಗ್ರಾಮದ ಲಕ್ಷ್ಮೀ ದೇವಾಲಯದ ಹಿಂಭಾಗದಲ್ಲಿ ಕಂಬದ ನರಸಿಂಹನ ಗುಡಿಯೊಂದು ಕಂಡುಬರುತ್ತದೆ. ಜಿನ್ನಾಗರ ಗ್ರಾಮದಲ್ಲಿ ದೇವಾಲಯಗಳು, ಶಿಲಾಶಾಸನಗಳು, ವೀರಗಲ್ಲುಗಳು, ಕೆರೆ-ಕಟ್ಟೆ ಮುಂತಾದ ಪ್ರಾಚ್ಯಾವಶೇಷಗಳು ಬೆಳಕಿಗೆ ಬಂದಿದ್ದು ಪುರಾತನ ಜನವಸತಿಯ ನೆಲೆಯಾಗಿದೆ. ಈ ಗ್ರಾಮದಲ್ಲಿರುವ ಕಂಬದ ನರಸಿಂಹನ ದೇವಾಲಯವು ವಿಜಯನಗರ ಕಾಲದ ನಿರ್ಮಾಣವಾಗಿದ್ದು ಸಾಧಾರಣ ಶೈಲಿಯಲ್ಲಿದೆ. ಗರ್ಭಗೃಹದಲ್ಲಿ ಸುಮಾರು ೫೦ ಅಡಿ ಎತ್ತರದ ಶಿಲಾಸ್ತಂಬವಿದೆ. ಈ ಶಿಲಾಸ್ತಂಬವನ್ನೆ ಕಂಬದ ನರಸಿಂಹನೆಂದು ಪೂಜಿಸಲಾಗುತ್ತಿದೆ.

**ನಿಟ್ಟೂರಿನ ಕಂಬದ ನರಸಿಂಹಸ್ವಾಮಿ:** ಕುಣಿಗಲ್ ತಾಲೂಕಿನ ಹುತ್ರಿದುರ್ಗ ಹೋಬಳಿಯ ನಿಟ್ಟೂರು ಗ್ರಾಮದ ಮಧ್ಯದಲ್ಲಿ ಕಂಬದ ನರಸಿಂಹನ ದೇವಾಲಯವನ್ನು ಕಾಣಬಹುದಾಗಿದೆ. ಈ ದೇವಾಲಯವು ಸಾದಾರಣ ಶೈಲಿಯಲ್ಲಿ ನಿರ್ಮಾಣವಾಗಿದ್ದು, ದೇವಾಲಯದ ನಿರ್ಮಾಣಕ್ಕೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳು ಕಂಡುಬರುವುದಿಲ್ಲ. ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪವನ್ನು ಒಳಗೊಂಡಿದ್ದು, ವಿಜಯನಗರೋತ್ತರ ಕಾಲದ ಸ್ಮಾರಕವೆಂದು ಗುರ್ತಿಸಬಹುದಾಗಿದೆ. ಗರ್ಭಗೃಹದಲ್ಲಿ ಸುಮಾರು ೧೦ ಅಡಿ ಎತ್ತರದ ಶಿಲಾಸ್ಥಂಬವಿದೆ. ಈ ಶಿಲಾಸ್ಥಂಬವು ವೃತ್ತಾಕಾರವಾಗಿದ್ದು ಶಂಖ, ಚಕ್ರ ಹಾಗೂ ತಿರುನಾಳದ ಕೆತ್ತನೆಯನ್ನು ಕಾಣಬಹುದಾಗಿದೆ. ಅಂತರಾಳದ ಪ್ರವೇಶ ದ್ವಾರದಲ್ಲಿ ದ್ವಾರಪಾಲಕರ ಶಿಲ್ಪಗಳನ್ನು ಮೂಡಿಸಲಾಗಿದೆ. ದೇವಾಲಯದ ಆವರಣದಲ್ಲಿ ಗರುಡಗಂಬವಿದೆ.

**ಚಲಮಸಂದ್ರದ ಕಂಬದ ನರಸಿಂಹಸ್ವಾಮಿ:** ಕುಣಿಗಲ್ ತಾಲೂಕಿನ ಹುಲಿಯೂರುದುರ್ಗ ಹೋಬಳಿಯ ಚಲಮಸಂದ್ರ ಗ್ರಾಮದಲ್ಲಿ ಕಂಬದ ನರಸಿಂಹನ ದೇವಾಲಯವು ಕಂಡುಬರುತ್ತದೆ. ಚಲಮಸಂದ್ರ ಗ್ರಾಮದ ದಕ್ಷಿಣದ ದಿಕ್ಕಿಗೆ ಸುಮಾರು ೧೦೦ ಅಡಿ ಎತ್ತರದ ಗುಡ್ಡದಲ್ಲಿ ಕಂಬದ ನರಸಿಂಹನು ನೆಲೆಯೂರಿದ್ದಾನೆ. ದೇವಾಲಯವು ಪೂರ್ವಭಿಮುಖವಾಗಿ ನಿರ್ಮಾಣವಾಗಿದ್ದು, ಪ್ರಾಚೀನ ದೇವಾಲಯವನ್ನ ಕೆಡವಿ ನವೀಕರಣ ಮಾಡಲಾಗಿದೆ. ಮೂಲಗರ್ಭಗೃಹದಲ್ಲಿರುವ ಕಂಬದಲ್ಲಿ ಶಂಖ, ಚಕ್ರ, ತಿರುನಾಳವನ್ನು ಕೆತ್ತಲಾಗಿದೆ. ಚಲಮಸಂದ್ರದ ಕಂಬದ ನರಸಿಂಹಸ್ವಾಮಿಗೆ ಮೊಸರು ಅನ್ನದ ತಳಿಗೆಯನ್ನು ಒಪ್ಪಿಸಿದ ನಂತರ ಬೆಟ್ಟದ ತಪ್ಪಲಿನಲ್ಲಿ ಮಾಂಸಹಾರದ ಹರಿಸೇವೆ ಮಾಡಿ ಬಂದಂತಹ ಭಕ್ತಾದಿಗಳಿಗೆ ಅನ್ನಸಂತರ್ಪಣೆ ಮಾಡುವುದು ವಾಡಿಕೆಯಲ್ಲಿದೆ.

**ಬೆಟ್ಟಳ್ಳಿಯ ಕಂಬದ ನರಸಿಂಹಸ್ವಾಮಿ:** ಕುಣಿಗಲ್ ಮತ್ತು ನಾಗಮಂಗಲ ತಾಲೂಕಿನ ಗಡಿಭಾಗದಲ್ಲಿ ಬೆಟ್ಟಹಳ್ಳಿ ಎಂಬ ಗ್ರಾಮವಿದೆ. ಮೂಲತಃ ಬೆಟ್ಟಹಳ್ಳಿಯು ಕುಣಿಗಲ್ ತಾಲೂಕಿನ ಅಮೃತೂರು ಹೋಬಳಿಯ ವ್ಯಾಪ್ತಿಗೆ ಸೇರಿದ್ದು, ಎತ್ತರವಾದ ಬೆಟ್ಟವು ಕಂಡುಬರುವುದರಿಂದ ಈ ಗ್ರಾಮಕ್ಕೆ ಬೆಟ್ಟದಹಳ್ಳಿ, ಬೆಟ್ಟಳ್ಳಿ ಎಂಬುದಾಗಿ ಕರೆಯುವುದು ರೂಡಿಗೆ ಬಂದಿದೆ. ಬೆಟ್ಟದ ತಪ್ಪಲಿನಲ್ಲಿ ಹಳ್ಳಿಯೊಂದು ನೆಲೆಯೂರಿದ್ದು ಸುಮಾರು ೮೦ ಕುಟುಂಬಗಳು ವಾಸಿಸುತ್ತಿವೆ. ಬೆಟ್ಟದ ತುತ್ತತುದಿಯಲ್ಲಿ ಕಂಬದ ನರಸಿಂಹನು ನೆಲೆಸಿದ್ದಾನೆ.



ಲಕ್ಷ್ಮೀನರಸಿಂಹಸ್ವಾಮಿಯ ಮೂಲವಿಗ್ರಹ, ಗುನ್ನಾಗರೆ



ಕಂಬದ ನರಸಿಂಹಸ್ವಾಮಿಯ ಮೂಲವಿಗ್ರಹ, ಮಾಗಡಿ

**ಮಾಗಡಿಯ ಕಂಬದ ನರಸಿಂಹಸ್ವಾಮಿ:** ಮಾಗಡಿ ಪಟ್ಟಣದ ಶ್ರೀರಂಗನಾಥಸ್ವಾಮಿ ದೇವಾಲಯದ ದಕ್ಷಿಣ ದಿಕ್ಕಿಗೆ ಕಲ್ಲುಬಂಡೆಯ ಮೇಲೆ ಕಂಬದ ನರಸಿಂಹನ ದೇವಾಲಯವು ನಿರ್ಮಾಣಗೊಂಡಿದೆ. ಈ ದೇವಾಲಯವು ಪುರಾತನವಾಗಿದ್ದು ವಿಜಯನಗರೋತ್ತರ ಕಾಲಮಾನಕ್ಕೆ ಅಂದರೆ ನಾಡಪ್ರಭು ಕೆಂಪೇಗೌಡರ ಆಡಳಿತ ಅವಧಿಗೆ ಸೇರಿರುತ್ತದೆ. ದೇವಾಲಯವು ಉತ್ತರಾಭಿಮುಖವಾಗಿ ನಿರ್ಮಾಣವಾಗಿದ್ದು, ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪದಿಂದ ಕೂಡಿದೆ. ಮೂಲ ಗರ್ಭಗೃಹದಲ್ಲಿ ಸುಮಾರು ೮ ಅಡಿ ಎತ್ತರದ ಶಿಲಾಸ್ತಂಭವಿದೆ. ಶಿಲಾಸ್ಥಂಭಲ್ಲಿ ನರಸಿಂಹಸ್ವಾಮಿಯ ಮೂರ್ತಿ ಶಿಲ್ಪವನ್ನು ಮೂಡಿಸಲಾಗಿದೆ. ಸ್ವಾಮಿಯು ದ್ಯಾನ ಮುದ್ರೆಯಲ್ಲಿ ಕುಳಿತಿದ್ದು, ಕೈಯಲ್ಲಿ ಶಂಖ ಮತ್ತು ಚಕ್ರವನ್ನು ಆಯುಧವಾಗಿ ಹಿಡಿಯಲಾಗಿದೆ.

ಕುಣಿಗಲ್ ನಾಡಿನಲ್ಲಿ ೧೦ಕ್ಕೂ ಹೆಚ್ಚಿನ ನರಸಿಂಹನ ಆರಾಧನಾ ನೆಲೆಗಳು ಬೆಳಕಿಗೆ ಬಂದಿದ್ದು, ಕಂಬರಾಯ, ಸ್ತಂಭರಾಯ, ಕಂಬದ ನರಸಿಂಹ, ಲಕ್ಷ್ಮೀನರಸಿಂಹ ಎಂಬುದಾಗಿ ವಿವಿಧ ನಾಮಾಂಕಿತಗಳಿಂದ ನರಸಿಂಹನನ್ನು ಆರಾಧಿಸುವ ಪರಿಪಾಠ ರೂಡಿಯಲ್ಲಿದೆ. ತುಮಕೂರು, ಕೋಲಾರ, ಬೆಂಗಳೂರು ಗ್ರಾಮಾಂತರ, ಮಂಡ್ಯ, ಚಿತ್ರದುರ್ಗ ಜಿಲ್ಲೆಗಳಲ್ಲಿ ಬೆಟ್ಟಗುಡ್ಡಗಳು ಯತೇಚ್ಚವಾಗಿ ಕಂಡುಬರುವುದರಿಂದ ಪಶುಪಾಲನಾ ಸಮುದಾಯಗಳು ನೆಲೆಸಿದ್ದು ರಂಗನಾಥ ಮತ್ತು ನರಸಿಂಹನ ಆರಾಧನೆಯು ಪ್ರಾಬಲ್ಯಕ್ಕೆ ಬಂದಿದೆ. ಒಟ್ಟಾರೆ ಹೇಳುವುದಾದರೆ ವಿಷ್ಣುವಿನ ದಶಾವತಾರದ ಲೀಲೆಗಳನ್ನು ಜನಸಾಮಾನ್ಯರಿಗೂ ಪ್ರಚಾರಪಡಿಸಿ ಶ್ರೀವೈಷ್ಣವ ಪಂಥವನ್ನು ಜನಪ್ರಿಯಗೊಳಿಸಿರುವುದು ಮೆಲ್ನೋಟಕ್ಕೆ ಕಂಡುಬರುತ್ತದೆ.

## ಅಡಿಟಿಪ್ಪಣಿಗಳು


೧. ರೈಸ್ ಬಿ.ಎಲ್ (ಸಂ)., ಎಪಿಗ್ರಾಫಿಯ ಕರ್ನಾಟಿಕ ಸಂಪುಟ ೧೨, ತುಮಕೂರು ಜಿಲ್ಲೆ, ಕುಣಿಗಲ್ ಶಾಸನ ಸಂಖ್ಯೆ ೧೧.

೨. ಕೆ.ಆರ್.ನರಸಿಂಹನ್., ನರಸಿಂಹ ಪದಾರ್ಥ-೨, ಕೋಲಾರ ಪತ್ರಿಕೆ ಪ್ರಕಾಶನ, ಕೋಲಾರ, ೨೦೦೧, ಪು. ೯೩.

೩. ಕೆ.ರೇವಣಸಿದ್ದಯ್ಯ., ಕುಣಿಗಲ್ ನಾಡು: ಇತಿಹಾಸ ಮತ್ತು ಪುರಾತತ್ವ ಅಧ್ಯಯನ, ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೯, ಪು. ೯೩.

# ಚಿತ್ತಾಪುರ ಜಗನ್ನಾಥರ ಮನೆಯಲ್ಲಿನ ಭಿತ್ತಿ ಪತ್ರಗಳು

**ಮಲ್ಲಿಕಾರ್ಜುನ ಸಿ. ಬಾಗೋಡಿ***

**ಚಿ**ತ್ತಾಪುರ ಕಲಬುರಗಿ ಜಿಲ್ಲೆಯ ತಾಲೂಕು ಕೇಂದ್ರ. ಒಂದೊಮ್ಮೆ ಈ ಪಟ್ಟಣ 'ನಾಗಾವಿ' ಹೆಸರಿನಿಂದಲೇ ಗುರುತಿಸಿಕೊಂಡಿತ್ತು. ಕ್ರಿ.ಶ. ೧೭೫೦ರ ಸುಮಾರಿಗೆ ಚಿತ್ತಾಷಾವಲಿ ಹೆಸರಿನ ಸೂಫಿಯು ತನ್ನ ಪವಾಡಗಳಿಂದಾಗಿ ಇಲ್ಲಿನ ಜನರ ಇಷ್ಟಾರ್ಥಗಳನ್ನು ಈಡೇರಿಸುವಲ್ಲಿ ಪ್ರಮುಖ ಪಾತ್ರವಹಿಸಿದನಲ್ಲದೇ ಇಲ್ಲಿಯೇ ನೆಲೆಯನ್ನು ಕಂಡುಕೊಳ್ಳುತ್ತಾನೆ. ಮುಂದೊಮ್ಮೆ ಇಲ್ಲಿಯೇ ಸಮಾಧಿಯನ್ನೂ[೧] ಹೊಂದುತ್ತಾನೆ. ಚಿತ್ತಾಷಾವಲಿ ಸೂಫಿಯ ಹೆಸರಿನಿಂದಾಗಿ ಈ ಪ್ರದೇಶವನ್ನು ಚಿತ್ತಾಪುರ ಎಂದು ಕರೆಯಲಾಯಿತು ಎನ್ನಲಾಗಿದೆ.[೨]

ಹೈದರಾಬಾದ ನಿಜಾಮನ ಆಡಳಿತಕ್ಕೂ ಒಳಪಟ್ಟ ಈ ಪ್ರದೇಶದಲ್ಲಿ ಆ ರಾಜ್ಯದ ಆಚರಣೆ, ಸಂಸ್ಕೃತಿ ನುಸುಳಿಕೊಳ್ಳುತ್ತವೆ. ನಿಜಾಮ್ ರಾಜ್ಯದ ಅಧಿಕಾರಿಗಳು ಇಲ್ಲಿಗೆ ಬಂದಾಗ ಇಳಿದುಕೊಳ್ಳಲು ಕಟ್ಟಡವೊಂದನ್ನು[೩] ನಿರ್ಮಿಸಲಾಗಿರುತ್ತದೆ. ಈ ವಾಸ್ತುಶೈಲಿಯು ಇಲ್ಲಿನ ಇತರ ಮನೆಗಳ ರಚನೆಗೂ[೪] ಕಾರಣವಾಗುತ್ತದೆ. ನೂರೈವತ್ತು ವರ್ಷಗಳ ಹಿಂದೆಯೇ ಬೇರೆ ಬೇರೆ ಓಣಿಗಳಲ್ಲಿ ಇಂಥ ಭವ್ಯ ಮನೆಗಳು ನಿರ್ಮಾಣಗೊಳ್ಳುತ್ತವೆ. ಈ ಮನೆಗಳ ವಿನ್ಯಾಸ ಸ್ಥಳೀಯ ಲಕ್ಷಣಗಳಿಂದ ಕೂಡಿದ್ದರೂ, ನಿಜಾಮ್ ರಾಜ್ಯದಲ್ಲಿ ಪ್ರಚಲಿತವಿದ್ದ ಗಾರೆನಿರ್ಮಿತಿ ಕಿಟಕಿ ಮುಚ್ಚಿಕೆಗಳು, ಗಾಜಿನ ತೂಗುದೀಪಗಳು, ಅಪೂರ್ವ ಕಲಾಕೃತಿಗಳು, ಅಲಂಕಾರಿಕ ವಸ್ತುಗಳು ಮನೆಗಳನ್ನು ಅಲಂಕರಿಸುತ್ತವೆ. ಈ ರೀತಿಯ ಸುಮಾರು ಎಂಟ್ಹತ್ತು ಮನೆಗಳು ಚಿತ್ತಾಪುರ ಪಟ್ಟಣದಲ್ಲೇ ಇವೆ. ಇವೆಲ್ಲವುಗಳಲ್ಲಿ ಜಗನ್ನಾಥರ ಮನೆ ಕಲಾತ್ಮಕ ದೃಷ್ಟಿಯಿಂದ ಮಾತ್ರವಲ್ಲ ಅಲಂಕಾರಿಕ ಭಿತ್ತಿ ಚಿತ್ರಗಳುಳ್ಳ ಏಕೈಕ ನೆಲೆಯಾಗಿ ಕಾಣಿಸಿಕೊಳ್ಳುತ್ತದೆ.

ಪ್ರಸ್ತುತ ಮನೆ ಜಗನ್ನಾಥ ನಾಗಪ್ಪನವರ ಒಡೆತನಕ್ಕೆ ಸೇರಿದೆ. ಈ ಮನೆಯಲ್ಲಿಂದು ಅವರ ಮಕ್ಕಳು, ಮೊಮ್ಮಕ್ಕಳು ನೆಲೆಸಿದ್ದಾರೆ. ಚಿತ್ತಾಪುರ ಪಟ್ಟಣದ ನಾಗಾವಿ ಪರಿಸರದಲ್ಲಿ ಅಪಾರ ಭೂಮಿಯನ್ನು ಹೊಂದಿದ್ದ ನಾಗಪ್ಪನವರು ಕೃಷಿ







**ಚಿತ್ತಾಪುರ ಜಗನ್ನಾಥರ ಮನೆಯಲ್ಲಿನ ಭಿತ್ತಿ ಚಿತ್ರಗಳು**

* ಅಧ್ಯಾಪಕರು, ದೃಶ್ಯಕಲಾ ಅಧ್ಯಯನ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರಗಿ, ಮೊ. ೯೪೪೮೭೫೨೧೫೭

ಕಾಯಕದೊಂದಿಗೆ ದಿನಸಿ ಅಂಗಡಿ ವ್ಯಾಪಾರ ಮಾಡಿಕೊಂಡು ಜೀವನ ನಡೆಸುತ್ತಿದ್ದರು. ದಿನಸಿ ಅಂಗಡಿಯ ಸಾಮಾನುಗಳನ್ನು ಒಟ್ಟಲಿಕ್ಕೆಂದೇ ಖಾಲಿ ಬಿದ್ದಿದ್ದ ಈ ಮನೆಯನ್ನು ಕ್ರಿ.ಶ. ೧೯೪೦ರ ಸುಮಾರಿಗೆ ಕೊಂಡುಕೊಳ್ಳುತ್ತಾರೆ. ಮುಂಚೆ ಈ ಬಂಗಲೆಯನ್ನು ಕೋಟಾ ಎಂದೇ ಕರೆಯಲಾಗುತ್ತಿತ್ತು. ನಾಗಪ್ಪನವರು ಖರೀದಿಸಿದ ಮೇಲೆ ಈ ಮನೆಗೆ ಜಗನ್ನಾಥ ನಾಗಪ್ಪನವರ ಬಂಗಲೆ ಎಂದು ಕರೆಯಲಾಯಿತು. ಭವ್ಯವಾದ ಈ ಮನೆಯನ್ನು ಕಟ್ಟಿಸಿದವರು ಜೈನ ಸಮುದಾಯದ ಓರ್ವ ಶ್ರೀಮಂತ ವ್ಯಕ್ತಿ ಎನ್ನಲಾಗಿದೆ. ಈ ಮನೆಗೆ ಹೊಂದಿಕೊಂಡೇ ಇನ್ನೆರಡು (ದಿ. ಚಂದ್ರಶೇಖರ ಬಾಗೋಡಿಯವರ ಮನೆ ಮತ್ತು ಶೇಷಗಿರಿರಾವ್ ಕುಲಕರ್ಣಿಯವರ ಮನೆ) ಮನೆಗಳಿವೆ. ಒಂದು ಮನೆಯಿಂದ ಇನ್ನೊಂದು ಮನೆಗೆ ತೆರಳಲು ಬಾಗಿಲುಗಳೂ ಇವೆ.

ನೂರೈವತ್ತು ವರ್ಷಗಳಷ್ಟು ಹಳೆಯದಾದ ಜಗನ್ನಾಥರ ಮನೆಯನ್ನು ೧೯೧೩ರ ಸುಮಾರಿಗೆ ಗಾರೆ ಅಲಂಕರಣೆಯಿಂದ ನವೀಕರಣಗೊಳಿಸಿದೆ. ಕಮಾನು ಮಾದರಿಯ ಗಾರೆ ರಚನೆಗಳ ಮೇಲೆ ಇಸ್ವಿಯನ್ನು ಬರೆದಿದೆ. ಎರಡು ಅಂತಸ್ತುಳ್ಳ ಜಗನ್ನಾಥರ ಮನೆ ಪೂರ್ವಾಭಿಮುಖವಾಗಿದ್ದು, ಎತ್ತರವಾದ ಜಗಲಿಯ ಮೇಲೆ ಕಟ್ಟಲ್ಪಟ್ಟಿದೆ. ಸ್ಥಳೀಯ ಬಿಳಿ ಶಿಲೆಯಲ್ಲಿ ನಿರ್ಮಾಣಗೊಂಡರೂ ಹೊರಭಾಗದ ಬಾಲ್ಕನಿ ವಿನ್ಯಾಸ ಮತ್ತು ಮೇಲಂತಸ್ತಿನ ಗಾರೆವಿನ್ಯಾಸ ನಿಜಾಮ ರಾಜ್ಯದ ವಾಸ್ತು ರಚನೆಗಳನ್ನು ಹೋಲುತ್ತದೆ. ಕಟ್ಟಡದ ಒಳವಿನ್ಯಾಸ ಸ್ಥಳೀಯ ಲಕ್ಷಣಗಳಿಂದ ಕೂಡಿದೆ. ಮನೆಯನ್ನು ಪ್ರವೇಶಿಸುತ್ತಿದ್ದಂತೆಯೇ ಇಕ್ಕೆಲಗಳಲ್ಲಿ ಎತ್ತರವಾದ ಝುಳಜಿಯಿದೆ. ಒಳಾವರಣ ಚೌಕಾಕಾರದ ವಿನ್ಯಾಸದಲ್ಲಿದ್ದು, ಎತ್ತರವಾದ ಜಗಲಿಯ ಮೇಲೆ ಸುತ್ತಲೂ ಇರುವ ಕಮಾನುಗಳನ್ನು ೧೨ ಕಂಬಗಳು ಹೊತ್ತು ನಿಂತಿವೆ. ಪ್ರತಿಯೊಂದು ಕಂಬ-ಬೋದಿಗೆಗಳ ಮೇಲಿನ ಕೆತ್ತನೆ ಭಿನ್ನವಾಗಿದೆ. ಕೆಳ ಅಂತಸ್ತಿಗೆ ಸಾಗುವಾನಿ ಮರದ ಕಟ್ಟಿಗೆಗಳನ್ನು ಬಳಸಲಾಗಿದ್ದರೆ, ಮೇಲಂತಸ್ತಿಗೆ ಮಾವು, ಬೇವಿನ ಮರದ ಕಟ್ಟಿಗೆಗಳನ್ನು ಬಳಸಿದೆ.

ತಲಬಾಗಿಲ ಮೇಲ್ಪದಿಯ ಕಿಟಕಿ ರಚನೆಗಳು ಕಾಷ್ಠ ಪಟ್ಟಿಕೆಗಳಲ್ಲಿವೆ. ಮೇಲಂತಸ್ತಿನ ಒಳಮಾಳಿಗೆಯಲ್ಲೂ ಕಾಷ್ಠ ಪಟ್ಟಿಕೆಗಳ ಜೋಡಣೆಯಿದ್ದು, ಇದರಲ್ಲಿ ವಿವಿಧ ವರ್ಣಗಳಿಂದ ಬಿಡಿಸಿದ ಹೂಬಳ್ಳಿಗಳ ವಿನ್ಯಾಸಗಳಿವೆ. ಕೆಂಪು, ನೀಲಿ, ಹಳದಿ, ಬಿಳಿ ವರ್ಣಗಳೊಂದಿಗೆ ಮಿಶ್ರವರ್ಣಗಳ ಬಳಕೆ ಈ ಚಿತ್ರಗಳಲ್ಲಾಗಿದೆ. ಹೂಬಳ್ಳಿಗಳಲ್ಲಿ ನೆರಳು ಬೆಳಕಿನ ವ್ಯತ್ಯಾಸವನ್ನು ಸೊಗಸಾಗಿ ತೋರಿಸಿದೆ. ಮನೆಯಲ್ಲಿ ಏನೇ ಶುಭಕಾರ್ಯಗಳು ನಡೆದರೆ ಸುಣ್ಣ-ಬಣ್ಣಗಳಿಂದ ಅಲಂಕರಿಸಲಾಗುತ್ತದೆ. ಆದರೆ, ಚಿತ್ರಿತ ವರ್ಣ ಪಟ್ಟಿಕೆಗಳನ್ನು ಹಾಗೆಯೇ ಉಳಿಸಿಕೊಂಡು ಬರಲಾಗಿದೆ ಎನ್ನುತ್ತಾರೆ ಮನೆಯ ಹಿರಿಯರು.

ಮನೆಯಲ್ಲಿ ನಿಜಾಮ್ ರಾಜ್ಯದಲ್ಲಿ ಪ್ರಚಲಿತವಿದ್ದ ಗಾಜಿನ ತೂಗುದೀಪಗಳು, ದೇವಾನು-ದೇವತೆಗಳ ವರ್ಣಚಿತ್ರಗಳು, ಸೇರಿದಂತೆ ಕೆಲ ಅಲಂಕಾರಿಕ ನಮೂನೆಗಳಿವೆ. ಮನೆಯನ್ನು ಕೊಂಡುಕೊಳ್ಳುವಾಗಲೇ ಹಿಂದಿನ ವಾರಸುದಾರರು ಈ ಕಲಾತ್ಮಕ ವಸ್ತುಗಳನ್ನು ಇಲ್ಲಿಯೇ ಬಿಟ್ಟು ಹೋಗಿದ್ದಾರೆನ್ನಲಾಗಿದೆ.



## ಅಡಿಟಿಪ್ಪಣಿಗಳು

೧. ಚಿತ್ತಾಪುರ ಪಟ್ಟಣದ ಬಹಾರಪೇಟ ಪ್ರದೇಶದಲ್ಲಿ ಚಿತ್ತಾಷಾವಲಿಯ ಸಮಾಧಿಯಿರುವುದನ್ನು ನಾವು ಈಗಲೂ ನೋಡಬಹುದು. ಪ್ರತಿವರ್ಷ ಈ ಸೂಫಿಯ ಹೆಸರಿನಲ್ಲಿ ಉರುಸ್ ನಡೆಯುತ್ತದೆ. ಖವ್ವಾಲಿ, ಗಂಧಲೇಪನ, ದೀಪಗಳ ಪ್ರದರ್ಶನ ಸೇರಿದಂತೆ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳು ಬಹು ವಿಜೃಂಭಣೆಯಿಂದ ಜರುಗುತ್ತವೆ. ಕರ್ನಾಟಕವಲ್ಲದೇ ನೆರೆಯ ಮಹಾರಾಷ್ಟ್ರ, ತೆಲಂಗಾಣ ರಾಜ್ಯಗಳಿಂದ ಅಸಂಖ್ಯಾತ ಭಕ್ತರು ಇದರಲ್ಲಿ ಭಾಗವಹಿಸುತ್ತಾರೆ. ಚಿತ್ತಾಪುರ ಪಟ್ಟಣದ ಬಳ್ಳಾನವರ ಮನೆಯಿಂದ ಗಂಧ ಹೊರಡುವ ಮುಂಚೆ ವಿಧಿ-ವಿಧಾನಗಳನ್ನು ನಡೆಸಲಾಗುತ್ತದೆ. ನಂತರದಲ್ಲಿ ಚಿಸ್ತಿ ಅವರ ಮನೆಯಿಂದ ಸಾಂಪ್ರದಾಯಿಕ ಮೆರವಣಿಗೆ ಹೊರಡುತ್ತದೆ. ಸರ್ವ ಧರ್ಮಿಯರೂ ಈ ಸಂದರ್ಭದಲ್ಲಿ ಅತ್ಯಂತ ಸಂತೋಷದಿಂದ ಭಾಗವಹಿಸುತ್ತಾರೆ. ನೂರಾರು ವರ್ಷಗಳಿಂದಲೂ ಈ ಕಾರ್ಯ ನಡೆಸಿಕೊಂಡು ಬರಲಾಗುತ್ತಿದೆ.

೨. ನೆರೆಯ ತೆಲಂಗಾಣ ರಾಜ್ಯದ ಪತ್ರಾಗಾರ ಇಲಾಖೆಯಲ್ಲಿನ ಕೆಲ ದಾಖಲುಗಳಲ್ಲಿ ಚಿತ್ತಾಪುರ ಹೆಸರಿನ ಉಲ್ಲೇಖಗಳಿವೆ.

೩. ಚಿತ್ತಾಪುರ ಪಟ್ಟಣದಲ್ಲಿನ ಕೆಳಗೇರಿ ಶಾಲೆ ಆವರಣದಲ್ಲಿ ಈ ಕಟ್ಟಡವನ್ನು ನಿರ್ಮಿಸಲಾಗಿತ್ತು. ಜೀರ್ಣಗೊಂಡಿದ್ದ ಹಳೆಯ ಕಟ್ಟಡವನ್ನು ಕೆಡವಿ ಇದೀಗ ಅಲ್ಲಿ ಸರ್ಕಾರಿ ಶಾಲೆಯೊಂದನ್ನು ಕಟ್ಟಲಾಗಿದೆ.

೪. ಸುಮಾರು ನೂರೈವತ್ತು ವರ್ಷಗಳ ಹಿಂದೆ ಚಂದೂಲಾಲ್ ಹೆಸರಿನ ವಾಸ್ತುಶಿಲ್ಪಿ ನಿಜಾಮ್ ರಾಜ್ಯದಲ್ಲಿ ನೆಲೆ ಕಂಡಿದ್ದ. ಚಿತ್ತಾಪುರದಲ್ಲಿನ ಕೆಲ ಶ್ರೀಮಂತ ವ್ಯಕ್ತಿಗಳು ಚಂದೂಲಾಲ್ ಸಹಿತ ನಿಜಾಮ್ ಅಧಿಕಾರಿ ವಲಯದೊಂದಿಗೆ ಸ್ನೇಹತ್ವ ಹೊಂದಿದ್ದರಿಂದ ಸಹಜವಾಗಿಯೇ ಇವರು ನಿಜಾಮ್ ರಾಜ್ಯದಲ್ಲಿನ ವಾಸ್ತುಶೈಲಿಯನ್ನು ಹೋಲುವ ಮನೆಗಳನ್ನು ನಿರ್ಮಿಸಿಕೊಂಡರು.

# ಹರಪನಹಳ್ಳಿ ತಾಲೂಕಿನ ರಕ್ಷಣಾ ವಾಸ್ತು

ಹೆಚ್. ವಿರುಪಾಕ್ಷಪ್ಪ*

**ಈ** ಮುಂಚೆ ಹರಪನಹಳ್ಳಿಯು ಬಳ್ಳಾರಿ ಜಿಲ್ಲೆಯಲ್ಲಿತ್ತು. ನಂತರ ನೂತನವಾಗಿ ರಚಿತವಾದ ದಾವಣಗೆರೆ ಜಿಲ್ಲೆಗೆ ಸೇರ್ಪಡೆಯಾಗಿದ್ದು, ದಾವಣಗೆರೆಯಿಂದ ಉತ್ತರಕ್ಕೆ ೫೦ ಕಿ.ಮೀ. ದೂರದಲ್ಲಿದೆ. ದಾವಣಗೆರೆ ಜಿಲ್ಲೆಯು ಒಂದು ತಾಲ್ಲೂಕು ಕೇಂದ್ರ ಈ ತಾಲೂಕನ್ನು ಉತ್ತರದಲ್ಲಿ ಹಡಗಲಿ, ಪೂರ್ವದಲ್ಲಿ ಕೂಡ್ಲಿಗಿ ಮತ್ತು ಚಿತ್ರದುರ್ಗ ಜಿಲ್ಲೆಯ ಜಗಳೂರು ತಾಲೂಕುಗಳು, ದಕ್ಷಿಣದಲ್ಲಿ ದಾವಣಗೆರೆ ಜಿಲ್ಲೆಯ ಹರಿಹರ ಮತ್ತು ದಾವಣಗೆರೆ ತಾಲೂಕುಗಳು ಪಶ್ಚಿಮದಲ್ಲಿ ಹಾವೇರಿ ಜಿಲ್ಲೆಯ ರಾಣಿಬೆನ್ನೂರು ತಾಲೂಕುಗಳು ಸುತ್ತುವರೆದಿವೆ.

ಹರಪನಹಳ್ಳಿಯು ಈ ಹಿಂದೆ ಒಂದು ಅಗ್ರಹಾರವಾಗಿದ್ದಿರಬೇಕು. ಅದರ ಮೂಲ ಹೆಸರು ಬ್ರಹ್ಮಪುರಿ ಹೊಮ್ಮನಹಳ್ಳಿ ಹರಿಯಣ್ಣ ಹರಿಯಪ್ಪ ಪರ್ಗಡೆಯ ಹೆಸರಿನಲ್ಲಿ ಬದಲಾವಣೆ ಹೊಂದಿ 'ಹರಪನಹಳ್ಳಿ' ಎಂದಾಯಿತು. ಕೊಟ್ಟೂರಿನ ಉಡುಕೇಶ್ವರ ದೇವಾಲಯದ ಶಾಸನದಲ್ಲಿ ಈ ಹರಿಯಪ್ಪನ ಪ್ರಸ್ತಾಪವಿದೆ. ಪ್ರಾಚೀನ ಕಾಲದ ಗ್ರಾಮಗಳ ಸ್ಥಳನಾಮಗಳು ಹೆಚ್ಚಾಗಿ ಆಳುವ ಅರಸರ, ಇಲ್ಲವೇ ದೇವ ದೇವತೆಗಳ ಹೆಸರುಗಳಿಂದ ಉಂಟಾಗಿರುವುವು. ಮುತ್ತಿಗೆ ಗ್ರಾಮದಲ್ಲಿ ದೊರೆತ ದಾಖಲೆಯಂತೆ ಮುತ್ತಿಗೆ ಗ್ರಾಮದ ಕಟ್ಟೆ ಮನೆಗೆ ಸಂಬಂಧಿಸಿದಂತೆ ಒಂದು ವಿವಾದವನ್ನು ಈ ಹರಿಯಪ್ಪ ಪೆರ್ಗಡೆ ವಂಶಕ್ಕೆ ಸೇರಿದವರು ವಿಚಾರಿಸಿ ತೀರ್ಮಾನ ಕೊಟ್ಟಿದ್ದು ಕಂಡುಬಂದಿದೆ. ಅದು ಈಗಲೂ ಮುತ್ತಿಗೆ ಗ್ರಾಮದಲ್ಲಿ ದೊರಕುವುದು. ಮುತ್ತಿಗೆ ಶಾನುಭೋಗರು ಹರಪನಹಳ್ಳಿ ಪಟ್ಟಣದವರೇ ಆಗಿರುವರು. ಹದಿಮೂರನೇ ಶತಮಾನದಲ್ಲಿ ಹರಪನಹಳ್ಳಿ ಮೂವತ್ತರ ಮುತ್ತಿಗೆ ರಾಜ್ಯದಿಂದ ಬಾಗಳಿ ರಾಜ್ಯಕ್ಕೆ ಸೇರಿದ್ದು ಎಂದು, ಒಂದು ಕಂಚಿನ ಪತ್ರದಿಂದ ತಿಳಿಯುತ್ತದೆ. ಹರಪನಹಳ್ಳಿಯ ಇತಿಹಾಸವು ನಮಗೆ ಸ್ಪಷ್ಟವಾಗಿ ತಿಳಿಯುವುದು ವಿಜಯನಗರೋತ್ತರ ಪಾಳೆಯಗಾರರ ಆಳ್ವಿಕೆಯಿಂದ. ಆದರೆ ಹರಪನಹಳ್ಳಿ ತಾಲ್ಲೂಕಿನಲ್ಲಿ ಬರುವ ಬಹುತೇಕ ಗ್ರಾಮಗಳು ತುಂಬಾ ಪ್ರಾಚೀನ ಇತಿಹಾಸವನ್ನು ಹೊಂದಿರುವುದು ಶಾಸನಗಳಿಂದ ದೃಢಪಡುತ್ತದೆ. ಆದರೆ ಈ ಯಾವ ಶಾಸನಗಳಲ್ಲಿಯೂ ಹರಪನಹಳ್ಳಿಯ ಉಲ್ಲೇಖ ಇರುವುದಿಲ್ಲ.

ಕ್ರಿ.ಶ. ೯೩೦ರ ರಾಷ್ಟ್ರಕೂಟರ ಶಾಸನವು ಗೋವಿಂದ ವಲ್ಲಭನ ಕಾಲದಲ್ಲಿ ಪಡಿಗನೊಂಬಾ ಎಂಬ ವೀರನು ಊರ ದಾಳಿಯಲ್ಲಿ ಸತ್ತಂತೆ ಉಲ್ಲೇಖಿಸುತ್ತದೆ. ಕ್ರಿ.ಶ. ೯೫೬, ಕ್ರಿ.ಶ. ೯೪೪, ಕ್ರಿ.ಶ. ೯೭೬, ಕ್ರಿ.ಶ. ೯೯೧ರ ರಾಷ್ಟ್ರಕೂಟರ ಶಾಸನಗಳು ಬಾಗಳಿಯಲ್ಲಿ ಕಂಡುಬರುತ್ತವೆ. ಇವು ರಾಷ್ಟ್ರಕೂಟರ ಕನ್ನರದೇವನ ದೊರೆಯ ದಾನ-ದತ್ತಿಗಳನ್ನು ತಿಳಿಸುತ್ತದೆ. ಬಾಗಳಿ ಮತ್ತು ಉಚ್ಚಂಗಿದುರ್ಗಗಳಲ್ಲಿ ರಾಷ್ಟ್ರಕೂಟರ ದೇವಾಲಯಗಳೂ ಕಂಡುಬಂದಿವೆ. ಕೋಟೆಗಳ ವಿಷಯವಾಗಿ ರಾಷ್ಟ್ರಕೂಟರ ಶಾಸನಗಳು ಮೌನವಾಗಿವೆ.

ಕಲ್ಯಾಣ ಚಾಳುಕ್ಯರ ಸಾಮಂತರಾದ ನೊಳಂಬರು, ನೊಳಂಬವಾಡಿ ೩೨೦೦ದ ಮಹಾಮಂಡಳೇಶ್ವರರಾಗಿ ಆಳ್ವಿಕೆ ಮಾಡಿದಂತೆ ಉಲ್ಲೇಖಿಸುವ ನೂರಾರು ಕಲ್ಯಾಣ ಚಾಲುಕ್ಯರ ಶಾಸನಗಳು ಈ ಭಾಗದಲ್ಲಿ ಕಂಡುಬರುತ್ತದೆ. ಹಿಂದೆ ಬಳ್ಳಾರಿ ಜಿಲ್ಲೆಯು ಸಮಗ್ರವಾಗಿ ನೊಳಂಬವಾಡಿ ೩೨೦೦೦ ವಿಭಾಗದಲ್ಲಿತ್ತು. ನೊಳಂಬವಾಡಿ ಎಂದರೆ ದೊಡ್ಡ ವಿಭಾಗ ಎನ್ನುವ ಅರ್ಥವುಂಟು. ಹಿಂದೆ ಈ ಪ್ರದೇಶವನ್ನು ಪಲ್ಲವರು ಆಳುತ್ತಿದ್ದರು. ಈ ನೊಳಂಬವಾಡಿ ೩೨೦೦೦ದಲ್ಲಿ ಕೋಗಳಿ ೫೦೦ ಬರುತ್ತದೆ. ಇದಕ್ಕೆ ಹಗರಿಬೊಮ್ಮನಹಳ್ಳಿ, ಹಡಗಲಿ, ಕೂಡ್ಲಿಗಿ, ಹರಪನಹಳ್ಳಿ ತಾಲ್ಲೂಕುಗಳ ಕೆಲವು ಗ್ರಾಮಗಳು ಒಳಗೊಂಡಿದ್ದವು. ಕೋಗಳಿ ೫೦೦ರ ಉಪವಿಭಾಗವಾಗಿ ಹಾಲ್ವೊಳೆ-೧೨, ಬಿಕ್ಕಿಗ-೭೦, ಹಲುವಾಗಿಲು-೧೨, ಬೆಣ್ಣೆವೂರು-೧೨, ಕಂಪಣ ಮೊಗೆ-೧೨, ಒರ್ವಾಯಿ-೧೨, ಮೊಳವಾಡ-೧೨, ಮುತ್ತಗಿ-೩೦, ಕೊಟ್ಟೂರು-೧೨, ಮುತ್ತುಗೆ-೩೦, ಇವು ಅಲ್ಲದೆ ಕದಂಬಗಳಿಗೆ ೧೦೦೦ರಲ್ಲಿ ಉಚ್ಚಂಗಿದುರ್ಗ ೩೦ ಕೂಡ ಸೇರುತ್ತದೆ. ಈ ಮೇಲಿನ ಆಡಳಿತ ಕೇಂದ್ರದಲ್ಲಿ ಉಚ್ಚಂಗಿದುರ್ಗ-೩೦ ಹಲುವಾಗಿಲು ೧೨, ಮುತ್ತುಗೆ ೩೦, ಬೆಣ್ಣೆಕಲ್ಲು ೧೨ ಇವು ಹರಪನಹಳ್ಳಿ ತಾಲ್ಲೂಕಿಗೆ ಒಳಪಡುತ್ತವೆ. ಹರಪನಹಳ್ಳಿ, ತಾಲ್ಲೂಕಿನ ದುಗ್ಗತ್ತಿ, ಮಾಡಲಗೇರಿ, ಬಾಗಳಿಗಳಲ್ಲಿ ಜೈನ ಬಸದಿಗಳು ಇದ್ದ ಉಲ್ಲೇಖವನ್ನು ಈ ಪ್ರದೇಶದ ಕಲ್ಯಾಣ

* ಮುಖ್ಯಸ್ಥರು, ಇತಿಹಾಸ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹರಿಹರ, ಮೊ. ೯೪೪೮೪೪೮೧೫೫೪೦

ಚಾಳುಕ್ಯರ ಶಾಸನಗಳಲ್ಲಿ ಕಾಣಬಹುದು. ಅರಸಿಕೇರಿಯನ್ನು ನೊಣಬನ ಅರಸಿಕೇರಿ ಎಂದು ಕೆರೆಗುಡಿಹಳ್ಳಿಯಲ್ಲಿರುವ ಕ್ರಿ.ಶ. ೧೫೨೭ರ ಶಾಸನವೊಂದು ತಿಳಿಸುತ್ತದೆ. ಪಾಂಡ್ಯರಂತು ಉಚ್ಚಂಗಿದುರ್ಗವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ಮಾಡಿದರು. ಹಾಗಾಗಿ ಇವರಿಗೆ ಉಚ್ಚಂಗಿಯ ಪಾಂಡ್ಯರೆಂದೇ ಗುರುತಿಸಲಾಗಿದೆ. ಕಲ್ಯಾಣ ಚಾಳುಕ್ಯರ ಅವಧಿಯ ಪೂರ್ವದಲ್ಲಿಯೇ ಉಚ್ಚಂಗಿದುರ್ಗದಲ್ಲಿ ಕೋಟೆಯೊಂದು ನಿರ್ಮಾಣವಾಗಿದ್ದ ಉಲ್ಲೇಖಗಳು ಅಂದಿನ ಶಾಸನಗಳಿಂದ ತಿಳಿದುಬರುತ್ತದೆ.

ಕಡತಿ, ಹಲುವಾಗಿಲು, ಕುಂಚೂರುಗಳಲ್ಲಿ ಯಾದವರ ಶಾಸನಗಳಿವೆ. ಉಚ್ಚಂಗಿದುರ್ಗ, ಅಲಗಿಲವಾಡ, ನೀಲಗುಂದದ ಶಾಸನವೊಂದು ೨ನೇ ನರಸಿಂಹನ ತಂದೆ ಬಲ್ಲಾಳನು ಸೇವುಣರ ಸೈನ್ಯವನ್ನು ಸೊರಟೂರಿನಿಂದ ಕೃಷ್ಣವೇಣಿ ನದಿಯವರೆಗೆ ಏಕಾಂಗಿಯಾಗಿ ತಳ್ಳಿದನೆಂದು ತಿಳಿಸುತ್ತದೆ. ಚಿರಸ್ತಹಳ್ಳಿ, ಉಚ್ಚಂಗಿದುರ್ಗ, ಹಲುವಾಗಿಲುಗಳಲ್ಲಿ ವಿಜಯನಗರದ ಶಾಸನಗಳು ಸಿಗುತ್ತವೆ. ಈ ಎಲ್ಲಾ ಶಾಸನಗಳಲ್ಲಿ ಉಚ್ಚಂಗಿದುರ್ಗ ಕೋಟೆಯ ಉಲ್ಲೇಖಗಳು ಕಂಡುಬರುತ್ತವೆ. ಈ ಯಾವುದೇ ಶಾಸನಗಳಲ್ಲಿ ಹರಪನಹಳ್ಳಿ ಎಂಬ ಹೆಸರು ಹರಪನಹಳ್ಳಿ ಪಾಳೆಯಗಾರರ ಕಾಲದ್ದು. ಹರಪನಹಳ್ಳಿ ಹಾಗೂ ಹರಿಹರ ತಾಲೂಕಿನ ಎಲ್ಲಾ ಶಾಸನಗಳನ್ನು ಗಮನಿಸಲಾಗಿ ಉಚ್ಚಂಗಿದುರ್ಗದ ಕೋಟೆಯ ಕ್ರಿ.ಶ. ೧೦ನೇ ಶತನಾಮಕ್ಕೆ ಮುಂಚಿನದೆಂದು ಅಂದಾಜಿಸಬಹುದು. ಹರಪನಹಳ್ಳಿ ಪಾಳೆಯಗಾರರ ಶಾಸನ, ಹಸ್ತಪ್ರತಿಗಳಲ್ಲಿ ಮತ್ತು ಕೆಳದಿನೃಪ ವಿಜಯದಲ್ಲಿ ಹರಪನಹಳ್ಳಿ, ಬಾಗಳಿ, ಹಲುವಾಗಿಲು, ಚಿಗಟೇರಿ ಮತ್ತು ಬಂಡ್ರಿ ಕೋಟೆಗಳ ಪ್ರಸ್ತಾಪಗಳಿವೆ.

**ಕೋಟೆಯ ಅರ್ಥ ವಿವರಣೆ:** "ಸೈನಿಕರುಗಳಿಂದ ಆವರಿಸಲ್ಪಟ್ಟ ರಕ್ಷಿತವಾದ ಮತ್ತು ರಕ್ಷಣೆಗೆ ಮುಡುಪಾಗಿರುವ ಗಟ್ಟಿಯಾದ ಸ್ಥಳವೇ ಕೋಟೆ ಎಂದೆನಿಸಿಕೊಳ್ಳುತ್ತದೆ." ಆಳುವ ಅರಸರು ತಮ್ಮ ರಾಜ್ಯಗಳನ್ನು ಸಂರಕ್ಷಿಸಿಕೊಳ್ಳಲು ರಾಜಧಾನಿಗಳಲ್ಲಿ ಹಾಗೂ ಗಡಿ ಪ್ರದೇಶಗಳಲ್ಲಿ ಬೃಹತ್ ಆಕಾರದ ಕೋಟೆಗಳನ್ನು ಕಟ್ಟಿಸಿದರು. ಹೀಗಾಗಿ ಮಾನವನ ರಕ್ಷಣೆಯ ಕಾರ್ಯದಲ್ಲಿ ಕೋಟೆ ಮಹತ್ತರ ಪಾತ್ರ ವಹಿಸಿದೆ.

ರಾಜ್ಯಾಡಳಿತದಲ್ಲಿ ಕೋಟೆಗಳ ಮಹತ್ವವನ್ನು ಈ ನಾಡಿನ ಪ್ರಾಚೀನ ರಾಜಮನೆತನಗಳಾದ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರಂತೆ ಇವರೂ ಸಹ ಅರಿತಿದ್ದರು. ವಿಶೇಷವಾಗಿ ವಿಜಯನಗರ ಪತನಾನಂತರ ಆ ಪರಂಪರೆಯಲ್ಲಿಯೇ ಸಾಗಿದ ಹರಪನಹಳ್ಳಿ ಪಾಳೆಯಗಾರರೂ ಸಹ ತಮ್ಮ ಪಾಳೆಯ ಪಟ್ಟು ಸಂರಕ್ಷಣೆ, ರಾಜ್ಯದ ವಿಸ್ತರಣೆಯಲ್ಲಿ ಸೇನೆ ಮತ್ತು ಕೋಟೆ ಹಾಗೂ ಇತರ ರಕ್ಷಣಾ ತಂತ್ರಗಾರಿಕೆಗೆ ಮಹತ್ವ ನೀಡಿದ್ದರು. ಈ ಹಿನ್ನೆಲೆಯಲ್ಲಿ ನೋಡಿದಾಗ ಕ್ರಿ.ಶ. ೧೫೦೦ರಿಂದ ೧೮೦೦ರವರೆಗಿನ ಕಾಲಾವಧಿಯಲ್ಲಿ ಆಳ್ವಿಕೆ ನಡೆಸಿದ ಹರಪನಹಳ್ಳಿ ಪಾಳೆಯಗಾರರು ತಮ್ಮ ಪ್ರದೇಶದಾದ್ಯಂತ ಸೂಕ್ತವಾದ ರಕ್ಷಣಾ ವ್ಯವಸ್ಥೆಯನ್ನು ಮಾಡಿಕೊಂಡಿದ್ದರು. ಇಂದಿನ ಬಳ್ಳಾರಿ ಹಾಗೂ ದಾವಣಗೆರೆ ಜಿಲ್ಲೆಯ ಸಾಂದರ್ಭಿಕ ದಾಖಲೆಗಳ ಮೂಲಕ ಈ ಕಾಲದಲ್ಲಿ ನಿರ್ಮಾಣಗೊಂಡ, ಜೀರ್ಣೋದ್ಧಾರಗೊಂಡ, ಸೇವಾ ಕಾರ್ಯಾಚರಣೆ ಮೂಲಕ ವಶಪಡಿಸಿಕೊಂಡ ಕೋಟೆಗಳ ಮತ್ತು ಇತರ ರಕ್ಷಣಾ ವ್ಯವಸ್ಥೆ ಕುರಿತಂತೆ ತಿಳಿಯುತ್ತದೆ. ಈ ವ್ಯವಸ್ಥೆಯಲ್ಲಿ ಕೋಟೆಗಳು, ಹೂಡೇವುಗಳು, ಆಯುಧಗಳಾದ ಖಡ್ಗ, ತುಪಾಕಿ, ಯುದ್ಧ ತಂತ್ರಗಳು, ಕುಸ್ತಿ ಮತ್ತು ಗರಡಿ ಮನೆಗಳು ಇತ್ಯಾದಿ ಪ್ರಮುಖ ಪಾತ್ರವಹಿಸಿದ್ದವು.

**ಹರಪನಹಳ್ಳಿ ತಾಲೂಕಿನಲ್ಲಿ ಕಂಡುಬರುವ ಪ್ರಮುಖ ಕೋಟೆಗಳು:** ಹರಪನಹಳ್ಳಿ ತಾಲೂಕಿನಾದ್ಯಂತ ವಿವಿಧ ಪ್ರಕಾರದ ಕೋಟೆಗಳು ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಉತ್ತಮ ಸ್ಥಿತಿಯಲ್ಲಿದ್ದರೆ, ಇನ್ನೂ ಕೆಲವು ವಿನಾಶದ ಅಂಚಿನಲ್ಲಿಲವೆ. ಬಹುತೇಕ ಕೋಟೆಗಳು ಇತರ ರಕ್ಷಣಾ ಸ್ಮಾರಕಗಳು ನೆಲಸಮವಾಗಿವೆ. ಸಾಂದರ್ಭಿಕ, ಆಧಾರಗಳನ್ನು ಲಕ್ಷಿಸಿ ಬಾಗಳಿ, ಕೂಲಹಳ್ಳಿ, ಉಚ್ಚಂಗಿದುರ್ಗ, ಹಪರನಹಳ್ಳಿ, ಕರಡೀದುರ್ಗ, ಅಣಜಿಗೆರೆ, ಕಡಬಗೇರಿ, ಕಸವನಹಳ್ಳಿ, ಹಿರೇಮ್ಯಾಗಳಗೇರಿ, ಚಿಕ್ಕಮ್ಯಾಗಳಗೇರಿ, ಮಾಗಾನಹಳ್ಳಿ, ಬಂಡ್ರಿ, ಕೊಟ್ಟೂರು, ಕಂಚಿಕೇರಿ ಮುಂತಾದವು ಇವರ ಪ್ರಮುಖ ಕೋಟೆ ಹಾಗೂ ರಕ್ಷಣಾ ಸ್ಮಾರಕಗಳ ಕೇಂದ್ರಗಳಾಗಿದ್ದವೆಂದು ಹೇಳಬಹುದು. ಇವುಗಳಲ್ಲಿ ಉಚ್ಚಂಗಿದುರ್ಗ, ಕರಡಿದುರ್ಗ, ಕಂಚಿಕೇರಿ, ತಂಬ್ರಹಳ್ಳಿ, ಚಿಗಟೇರಿ, ಬಂಡ್ರಿ, ಗಿರಿದುರ್ಗ ಸಾಲಿಗೆ ಸೇರುತ್ತವೆ. ಹರಪನಹಳ್ಳಿ, ಹಿರೇಮ್ಯಾಗಳಗೇರಿ ಮುಂತಾದವು ಬಯಲು ಪ್ರದೇಶದ ದುರ್ಗ ಪ್ರಕಾರಕ್ಕೆ ಸೇರುತ್ತವೆ. ಅಣಜಿಗೆರೆ, ಕಡಬಗೆರೆ, ಅಲಗಿಲವಾಡ, ಕಸವನಹಳ್ಳಿ, ಮಾಗಾನಹಳ್ಳಿ, ಚಿಕ್ಕಮ್ಯಾಗಳಗೇರಿ ಮುಂತಾದ ಕಡೆಯ ಕೋಟೆಗಳು ಸಂಪೂರ್ಣ ನೆಲಸಮಗೊಂಡಿವೆ. ಸ್ಥಳೀಯರು ಕೋಟೆ ಪ್ರದೇಶವನ್ನು ತೋರಿಸುತ್ತಾರೆ ಪಳೆಯುಳಿಕೆಗಳನ್ನು ಗುರ್ತಿಸಬಹುದಾಗಿದೆ.

**ಉಚ್ಚಂಗಿದುರ್ಗ:** ಉಚ್ಚಂಗಿದುರ್ಗ, ಗ್ರಾಮ ಪಂಚಾಯ್ತಿ ಹೊಂದಿರುವ ಹರಪನಹಳ್ಳಿ ತಾಲ್ಲೂಕಿನ ಒಂದು ಗ್ರಾಮ ದಾವಣಗೆರೆ ಜಿಲ್ಲೆಯಲ್ಲಿದೆ ೧೯೯೮ರ ಪೂರ್ವದಲ್ಲಿ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿತ್ತು. ಇದೊಂದು ಐತಿಹಾಸಿಕ ಮಹತ್ವದ

ಸ್ಥಳವಾಗಿದ್ದು ಸಾವಿರಾಗು ವರ್ಷಗಳ ಇತಿಹಾಸ ಹೊಂದಿದೆ. ಕದಂಬ, ಪಾಂಡ್ಯ, ನೊಳಂಬ, ವಿಜಯನಗರದ ಆಡಳಿತಕ್ಕೆ ಒಳಪಟ್ಟಿದ್ದು ವಿಜಯನಗರೋತ್ತರ ಕಾಲದಲ್ಲಿ ಪಾಳೆಯಗಾರರ ಪ್ರಮುಖ ಆಡಳಿತ ಕೇಂದ್ರವೂ, ರಾಜಧಾನಿಯೂ ಆಗಿತ್ತು. ಇದೊಂದು ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಕೇಂದ್ರವಾಗಿದ್ದು ಇತಿಹಾಸ ಪ್ರಸಿದ್ಧ ಉಚ್ಚಂಗಮ್ಮ ದೇವಿಯ ಶಕ್ತಿ ಕೇಂದ್ರವಾಗಿದೆ. ವಿಜಯನಗರ ಪತನಾನಂತರ ಹರಪನಹಳ್ಳಿ ಪಾಳೆಯಗಾರರ ರಾಜಕೀಯ, ಆಡಳಿತ ಕೇಂದ್ರವಾಯಿತು. ಇಲ್ಲಿರುವ ಕೋಟೆ ಪ್ರಾಚೀನವಾದದು, ಶ್ರೇಷ್ಠ ಗಿರಿದುರ್ಗಕ್ಕೆ ಅತ್ಯುತ್ತಮ ಉದಾಹರಣೆಯಾಗಿದೆ. ಹರಪನಹಳ್ಳಿ ಪಾಳೆಯಗಾರರ ಸ್ಥಾಪಕ ದಾದೇನಾಯಕ ಈ ಪ್ರಾಚೀನಕೋಟೆಯನ್ನು ಜೀರ್ಣೋದ್ಧಾರಗೊಳಿಸಿ ಭದ್ರಪಡಿಸಿಕೊಂಡು ಆಳಿದನು. ನಂತರ ಈತನ ಉತ್ತರಾಧಿಕಾರಿಗಳು ಇದನ್ನು ಮುಂದುವರೆಸಿದರು.

ದಕ್ಷಿಣ ಉತ್ತರವಾಗಿ ಹಬ್ಬಿರುವ ಬೆಟ್ಟಗಳನ್ನು ಬಳಸಿ ಕೋಟೆಯನ್ನು ನಿರ್ಮಿಸಲಾಗಿದೆ. ಕೋಟೆ ಗೋಡೆಯ ಸುಮಾರು ೧೦-೧೫ ಅಡಿ ಎತ್ತರ ಹಾಗೂ ೫-೬ ಅಡಿ ಅಗಲವಾಗಿದೆ. ಕೋಟೆ ಗೋಡೆಯ ಉದ್ದಕ್ಕೂ ರಕ್ಷಣೆಗಾಗಿ ವೀಕ್ಷಣಾಗೋಪುರ (ಭತೇರಿ) ಗಳಿವೆ ಇವುಗಳನ್ನು ದೊಡ್ಡ ಗಾತ್ರದ ಕಲ್ಲುಗಳಿಂದ ನಿರ್ಮಿಸಲಾಗಿದೆ. ಪ್ರಸ್ತುತ ಇಂತಹ ೨೫ಕ್ಕೂ ಹೆಚ್ಚು ಭತೇರಿಗಳನ್ನು ನೋಡಬಹುದು. ಕೋಟೆಯ ಒಳಭಾಗದಲ್ಲಿಯೇ ಜನವಸತಿಗಾಗಿ ವಸತಿ ಗೃಹಗಳು, ನೀರಿನ ಸೌಕರ್ಯ ಕಂಡುಬರುತ್ತದೆ. ಬೆಟ್ಟದ ತುದಿಯಲ್ಲಿ ಎರಡು ಅರಮನೆಗಳು, ಉಚ್ಚಂಗಮ್ಮನ ದೇವಾಲಯ ಕಂಡುಬರುತ್ತವೆ. ಕೋಟೆಯನ್ನು ಆಕ್ರಮಿಸಲು ಶತ್ರುಗಳು ಮಾಡಿದ ದಾಳಿಯ ಕಾಲದಲ್ಲಿ ಹಾರಿಸಲಾದ ಫಿರಂಗಿ ಗುಂಡುಗಳಿಂದಾದ ಗುರುತುಗಳನ್ನು ಅಲ್ಲಲ್ಲಿ ನೋಡಬಹುದಾಗಿದೆ. ಕೋಟೆಯ ಮೇಲಿನ ಹಿಡಿತ ಕುರಿತಂತೆ ಚಿತ್ರದುರ್ಗ ಮತ್ತು ಹರಪನಹಳ್ಳಿ ಪಾಳೆಯಗಾರರ ನಡುವೆ ಅನೇಕ ಕದನಗಳು ನಡೆದಿರುವುದು ಈ ಕೋಟೆಯ ಮಹತ್ವವನ್ನು ತಿಳಿಸುತ್ತದೆ. ಕೋಟೆಯ ಒಳಭಾಗದಲ್ಲಿ ಅನೇಕ ದೇವಾಲಯ ಮುಂತಾದ ಸ್ಮಾರಕಗಳು ಕಂಡುಬರುತ್ತವೆ. ಹರಪನಹಳ್ಳಿ ಪಾಳೆಯಗಾರರ ಕ್ರಿ.ಶ. ೧೬೫೫ರ ಗಂಟೆ ಶಾಸನ ಇಲ್ಲಿ ಕಂಡುಬಂದಿದ್ದು ದಾದೇನಾಯಕನಿಂದ ಮುಮ್ಮಡಿ ಬಸಪ್ಪನಾಯಕನವರೆಗಿನ ವಂಶಾವಳಿಯನ್ನು ಗುರ್ತಿಸಲು, ಸಹಾಯಕವಾಗುತ್ತದೆ. ಅಲ್ಲದೆ ಇವರ ಸಾಮಾಂತಾಧಿಕಾರಿ ಚಿಗಟೇರಿಯ ಶಿವಪ್ಪನಾಯಕನ ಉಲ್ಲೇಖ ಕಂಡುಬರುತ್ತದೆ.

**ಕರಡಿದುರ್ಗ:** ಉಚ್ಚಂಗಿದುರ್ಗದ ಬೆಟ್ಟ ಶ್ರೇಣಿಗೆ ಅಂಟಿಕೊಂಡಂತೆ ಸ್ವಲ್ಪ ಚಿಕ್ಕದಾದ ಬೆಟ್ಟ ಶ್ರೇಣಿ ಇದೆ ಇದನ್ನು ಕರಡಿದುರ್ಗ ಎಂದು ಕರೆಯಲಾಗುತ್ತದೆ. ಉಚ್ಚಂಗಿದುರ್ಗದ ಕೋಟೆಯ ಹರಿಹರ ಬಾಗಿಲು ಭಾಗದಿಂದ ಇಳಿದುಕೊಂಡು ಹೋದರೆ ಈ ಕರಡಿದುರ್ಗ ಸಿಗುತ್ತದೆ. ಪ್ರಸ್ತುತ ಇದೊಂದು ಸುಮಾರು ೮೦ ಮನೆಗಳನ್ನು ಕುಗ್ರಾಮವಾಗಿದ್ದು ಈ ಗ್ರಾಮದ ಉತ್ತರ ದಿಕ್ಕಿಗೆ ಚಿಕ್ಕ ಬೆಟ್ಟ ಶ್ರೇಣಿಯ ಮೇಲೆ ಹರಪನಹಳ್ಳಿ ಪಾಳೆಯಗಾರರಿಂದ ನಿರ್ಮಾಣಗೊಂಡ ವ್ಯವಸ್ಥಿತ ಕೋಟೆ ಇದೆ. ಇದೂ ಸಹ ಗಿರಿದುರ್ಗ ಕೋಟೆ ಪ್ರಕಾರಕ್ಕೆ ಈ ಕಾಲದ ಅತ್ಯುತ್ತಮ ನಿದರ್ಶನವಾಗಿದೆ. ಗಾತ್ರದಲ್ಲಿ ಚಿಕ್ಕಕೋಟೆಯಾದರೂ ಕೋಟೆಯ ಲಕ್ಷಣಗಳು, ಜನವಸತಿ ಸೌಕರ್ಯ ಮುಂತಾದ ದೃಷ್ಟಿಯಿಂದ ವ್ಯವಸ್ಥಿತವಾಗಿತ್ತೆಂದು ಗೊತ್ತಾಗುತ್ತದೆ.

ಬೆಟ್ಟವನ್ನು ಏರಿಕೊಂಡು ತುದಿ ಭಾಗವನ್ನು ತಲುಪಿದರೆ ಕೋಟೆಯ ಮುಖ್ಯ ಪ್ರವೇಶದ್ವಾರವಿದೆ. ಬೆಟ್ಟದ ತುದಿಯನ್ನು ಬಳಸಿಕೊಂಡು ಸುತ್ತಲೂ ಎತ್ತರವಾದ ಹಾಗೂ ಸುಮಾರು ೫-೬ ಅಡಿ ಅಗಲವಾದ ರಕ್ಷಣಾ ಗೋಡೆಯನ್ನು ಬೃಹತ್ ಗಾತ್ರದ ಶಿಲೆಗಳನ್ನು ಬಳಸಿ ನಿರ್ಮಿಸಲಾಗಿದೆ. ಪ್ರವೇಶದ್ವಾರದ ಎಡ ಬಲ ಬೃಹತ್ ಗಾತ್ರದ ಕೊತ್ತಳಗಳಿವೆ. ರಕ್ಷಣಾ ಗೋಡೆಯ ಉದ್ದಕ್ಕೂ ವೃತ್ತಾಕಾರದ ಸುಮಾರು ೨೫ ಅಡಿ ವ್ಯಾಸದ ಭತೇರಿಗಳಿವೆ ಕೋಟೆ ಮಧ್ಯಭಾಗದಲ್ಲಿ ಎತ್ತರವಾದ ವೃತ್ತಾಕಾರದ ವೀಕ್ಷಣಾಗೋಪುರದಂತಿರುವ ಕೊತ್ತಳವಿದೆ. ಕೋಟೆಯ ಒಳಭಾಗದಲ್ಲಿ ಸೈನಿಕರ, ಅಧಿಕಾರಿಗಳು, ಮುಂತಾದವರ ವಸತಿ ಗೃಹಗಳಿವೆ. ಇವರಿಗೆ ಆಹಾರ, ನೀರಿನ ವ್ಯವಸ್ಥೆಗಾಗಿ ಸೌಕರ್ಯಗಳಿವೆ. ವೃತ್ತಾಕಾರದ ಕಣಜಗಳನ್ನು (ವಾಡೇವು) ಶಿಲೆಗಳಿಂದ ನಿರ್ಮಿಸಿ ಒಳಭಾಗವನ್ನು ಗಾರೆಯಿಂದ ಲೇಪನ ಮಾಡಿ ದಾನ್ಯಗಳನ್ನು ಸುರಕ್ಷಿತವಾಗಿ ಸಂಗ್ರಹಿಸಲು ವ್ಯವಸ್ಥೆ ಮಾಡಿಕೊಂಡಿರುವುದು ಇವರ ತಂತ್ರಗಾರಿಕೆಗೆ ಸಾಕ್ಷಿಯಾಗಿದೆ.

ಕೋಟೆಯ ಒಳಗಡೆ ಪಾಳೆಯಗಾರರ ಕುಲದೈವ ಆಂಜನೇಯ ಗುಡಿಯನ್ನು ನಿರ್ಮಿಸಲಾಗಿದ್ದು ಸರಳವಾಸ್ತು ರಚನೆಯ ಸಭಾಮಂಟಪ ಮತ್ತು ಗರ್ಭಗೃಹ ಹೊಂದಿದ್ದು ಜೀರ್ಣೋದ್ಧಾರಗೊಂಡಿದೆ. ಸುಂದರವಾದ ಆಂಜನೇಯ ಉಬ್ಬುಶಿಲ್ಪ ಗರ್ಭಗೃಹದಲ್ಲಿದೆ· ದೇವಾಲಯದ ಪೂರ್ವಭಾಗದ ಗೋಡೆಗೆ ಅಂಟಿಕೊಂಡು ಮುಮ್ಮಡಿ ಬಸಪ್ಪ ನಾಯಕನ ಶಾಸನವೊಂದನ್ನು ಡಾ. ಎಂ. ಕೊಟ್ರೇಶ್‌ರವರು ಬೆಳಕಿಗೆ ತಂದಿದ್ದಾರೆ. ಈ ಶಾಸನ ಮತ್ತು ಸ್ಥಳೀಯರ ಹೇಳಿಕೆಗಳಿಂದ ಈ ಕೋಟೆಯನ್ನು ಮುಮ್ಮಡಿ ಬಸಪ್ಪ ನಾಯಕ ನಿರ್ಮಿಸಿರಬಹುದೆಂಬ ನಿಲುವಿಗೆ ಬರಲು ಸಾಧ್ಯವಿದೆ. ಇಂದು ಈ ಕೋಟೆ

ಮತ್ತು ಕೋಟೆ ಪ್ರದೇಶ ಸಂಪೂರ್ಣ ಶಿಥಿಲಗೊಂಡಿದ್ದು ಆಂಜನೇಯ ದೇವರ ಪೂಜೆ ಮಾತ್ರ ನಡೆಯುತ್ತದೆ. ಕರಡಿದುರ್ಗದಲ್ಲಿ ಏಕೆ ಇನ್ನೊಂದು ಕೋಟೆಯನ್ನು, ರಕ್ಷಣಾ ನೆಲೆಯನ್ನು ಹೊಂದಿದ್ದರು ಎಂಬ ಪ್ರಶ್ನೆ ಬರುತ್ತದೆ. ಬಹುಶಃ ಚಿತ್ರದುರ್ಗ ಮತ್ತು ಹರಪನಹಳ್ಳಿ ಪಾಳೆಯಗಾರರ ನಡುವೆ ಪದೇ ಪದೇ ಕದನಗಳು ಏರ್ಪಡುತ್ತಿದ್ದ ಇತಿಹಾಸ ಗಮನಿಸಿದರೆ ಈ ಕರಡಿದುರ್ಗ ರಕ್ಷಣಾ ನೆಲೆ ಇವರ ಒಂದು ಸ್ಥಾಯಿ ಸೈನಿಕ ನೆಲೆ ಆಗಿತ್ತೆಂದು ಅಭಿಪ್ರಾಯಪಡಬಹುದಾಗಿದೆ.

**ಬಂಡ್ರಿಕೋಟೆ:** ಬಂಡ್ರಿ ಇದೊಂದು ಶಿಲಾವಾಚಕ ಹೆಸರಾಗಿದ್ದು ಹರಪನಹಳ್ಳಿಯಿಂದ ಹಡಗಲಿ ಮಾರ್ಗದಲ್ಲಿ ಕಂಡು ಬರುವ ಪಾಳೆಯಗಾರರ ಕಾಲದ ಒಂದು ಸೈನಿಕ ನೆಲೆಯಾಗಿದೆ. ಈಗ ಇದೊಂದು ಕುಗ್ರಾಮ. ಇಲ್ಲಿಯ ಚಿಕ್ಕಬೆಟ್ಟದ ಮೇಲೆ ಪಾಳೆಯಗಾರರು ಒಂದು ಕೋಟೆಯನ್ನು ಸುಮಾರು ೫-೬ ಅಡಿ ದಪ್ಪವಾದ ಗೋಡೆಯಿಂದ ನಿರ್ಮಿಸಿದ್ದರು. ಕೋಟೆಯ ಗೋಡೆ ಉದ್ದಕ್ಕೂ ಸುಮಾರು ೨೦-೨೫ ಅಡಿ ಎತ್ತರದ ಕೊತ್ತಲಗಳಿದ್ದು ಇಂದು ಇಂತಹ ಮೂರ್‍ನಾಲ್ಕು ಕೊತ್ತಲಗಳು ಕಂಡುಬರುತ್ತವೆ. ಕೋಟೆಯ ಪ್ರವೇಶದ್ವಾರವನ್ನು ಮಧ್ಯಮ ಗಾತ್ರದ ಶಿಲೆಗಳಿಂದ ಸುಂದರವಾಗಿ ನಿರ್ಮಿಸಲಾಗಿದೆ. ಪ್ರವೇಶ ಬಾಗಿಲು ಒಳಭಾಗದ ಎಡ-ಬಲ ಜಗುಲಿಗಳಿವೆ. ಕೋಟೆಯ ಬಾಗಿಲನ್ನು ಮುಚ್ಚಿದಾಗ ಒಳಪ್ರವೇಶಿಸಲು ಸಣ್ಣದೊಂದು ಬಾಗಿಲನ್ನು ಇಟ್ಟಿದ್ದಾರೆ. ಪ್ರವೇಶ ಬಾಗಿಲು ಮೇಲ್ಭಾಗವನ್ನು ಗಾರೆಯಿಂದ ಮೆತ್ತಲಾಗಿದೆ ವೈರಿಗಳ ಚಲನವಲನ ಗುರ್ತಿಸಿ ಕೋಟೆ ರಕ್ಷಿಸಲು ಬಂದೂಕಿನ ಕಿಂಡಿಗಳಿವೆ. ಕೋಟೆಯ ಒಳಭಾಗದಲ್ಲಿ ದೇದಾನಾಯಕ ಮತ್ತು ರಂಗಾನಾಯಕ ಇವರ ಚಿಕ್ಕ ಚಿಕ್ಕ ಗುಡಿಗಳಿವೆ. ಇದನ್ನು ಆಧಾರವಾಗಿಟ್ಟುಕೊಂಡು ಈ ಕೋಟೆಯ ನಿರ್ಮಾಣ ಕಾಲದಲ್ಲಿ ಆಗಿರಬಹುದೆಂದು ಅಂದಾಜಿಸಬಹುದು. ಸ್ಥಳೀಯರು ಕೂಲಹಳ್ಳಿಯ ಗೋಣಿಬಸ್ಪ ಮತ್ತು ಚಿಗಟೇರಿಯ ಶಿವಪ್ಪ ನಾಯಕ ಇಬ್ಬರೂ ಸೇರಿ ಈ ಕೋಟೆಯನ್ನು ನಿರ್ಮಿಸಿದ್ದರೆಂದು ಹೇಳುತ್ತಾರೆ. ಕೋಟೆಯ ಭೌಗೋಳಿಕ ಪರಿಸರ ಮತ್ತು ಕೋಟೆ ಗೋಡೆಯ ಸುತ್ತಲೂ ನಿರ್ಮಿಸಲಾಗಿರುವ ಕೊತ್ತಲಗಳನ್ನು ಪರೀಕ್ಷಿಸಲಾಗಿ ಈ ಕೊತ್ತಲಗಳ ಮೇಲಿಂದ ಸುಮಾರು ೮-೧೦ ಕಿ.ಮೀ. ಗಳ ದೂರದಿಂದಲೇ ವೈರಿಗಳ ಆಗಮನವನ್ನು ಗುರ್ತಿಸಿ ಪಕ್ಕದ ಬಾಗಳಿ, ಕೂಲಹಳ್ಳಿ, ಹರಪನಹಳ್ಳಿಗಳನ್ನು ರಕ್ಷಿಸಿಕೊಳ್ಳಲು ಸಾಧ್ಯವಾಗುತ್ತಿದ್ದುರಿಂದಾಗಿ ಈ ಆಯಕಟ್ಟಿನ ಸ್ಥಳವನ್ನು ತಮ್ಮ ರಕ್ಷಣಾ ನೆಲೆಯನ್ನಾಗಿ ಮಾಡಿಕೊಂಡಿದ್ದರು.

**ಹರಪನಹಳ್ಳಿ ಕೋಟೆ:** ಪಾಳೆಯಗಾರರ ಬಲಿಷ್ಠ ಆಡಳಿತ ಕೇಂದ್ರವಾಗಿದ್ದ ಹರಪನಹಳ್ಳಿ ಈ ಕಾಲದ ಅನೇಕ ಸ್ಮಾರಕಗಳನ್ನು ಹೊಂದಿದೆ. ಬಾಗಳಿಯಿಂದ ಆರಂಭವಾದ ಇವರ ಆಳ್ವಿಕೆ ಹರಪನಹಳ್ಳಿ, ಉಚ್ಚಂಗಿದುರ್ಗ ಮುಂತಾದ ಪ್ರದೇಶಗಳಿಗೆ ವಿಸ್ತರಣೆಗೊಂಡಂತೆ ಇದನ್ನು ರಕ್ಷಿಸಿಕೊಳ್ಳುವ ಅವಶ್ಯಕತೆಯೂ ಹೆಚ್ಚಾಯಿತು. ಅಂತೆಯೇ ಇವರ ರಕ್ಷಣಾ ವ್ಯವಸ್ಥೆ, ಕೋಟೆಗಳ ನಿರ್ಮಾಣ ವಿಸ್ತಾರಗೊಂಡಿತು.

ಇಂದು ಹರಪನಹಳ್ಳಿಯಿಂದ ಹರಿಹರ ರಸ್ತೆಯಲ್ಲಿ ಹಿರೇಕೆರೆ ಏರಿಯಾ ಮೇಲೆ ಸಾಗುವಾಗ ಬಲಗಡೆ ವಿಶಾಲ ಪ್ರದೇಶ, ಕಂದಕ, ಕೊತ್ತಲಗಳ ಪಳೆಯುಳಿಕೆಗಳು ಕಂಡುಬರುತ್ತವೆ. ಈ ವಿಶಾಲ ಪ್ರದೇಶದಲ್ಲಿಯೇ ಪಾಳೆಯಗಾರರ ಬೃಹತ್ ಕೋಟೆ, ಅರಮನೆ, ಉದ್ಯಾನವನಗಳಿದ್ದವೆಂದು ಸ್ಥಳೀಯರು ಹೇಳುತ್ತಾರೆ.

ಯಾವುದೇ ನೈಸರ್ಗಿಕ ರಕ್ಷಣೆ ಇಲ್ಲದೆ ಬಯಲು ಪ್ರದೇಶದಲ್ಲಿ ಹರಪನಹಳ್ಳಿ ಪಾಳೆಯಗಾರರು ತಮ್ಮ ಸಂಸ್ಥಾನದಾದ್ಯಂತ ಅನೇಕ ಕೋಟೆ, ಕೊತ್ತಲಗಳನ್ನು ರಕ್ಷಣೆಗಾಗಿ ನಿರ್ಮಿಸಿದರು. ಇವುಗಳಲ್ಲಿ ಹರಪನಹಳ್ಳಿಯ ಕೋಟೆ, ಕೊತ್ತಲಗಳು ಬಹು ಪ್ರಸಿದ್ಧವಾಗಿವೆ. ಹಾಗೂ ಗಾತ್ರದಲ್ಲಿ ದೊಡ್ಡವಿವೆ. ಸುಮಾರು ನೂರಾರು ಎಕರೆ ಪ್ರದೇಶದಲ್ಲಿ ಕಂಡು ಬರುವ ಈ ಕೋಟೆ ಹಿರೇಕೆರೆ ಮತ್ತು ಅಯ್ಯನಕೆರೆ ಎಂಬ ಎರಡು ಕೆರೆಗಳ ಮಧ್ಯೆ ನಿರ್ಮಾಣಗೊಂಡಿದೆ. ಹಡಗಲಿ ಮತ್ತು ಹೊಳಲು ಮಾರ್ಗದಲ್ಲಿ ಸಾಗಿದರೆ ಕೋಟೆಯ ಪ್ರವೇಶದ್ವಾರ ಗೋಚರಿಸುತ್ತದೆ. ಕೋಟೆಯನ್ನು ಬೃಹತ್ ಗಾತ್ರದ ಕಣಶಿಲೆಗಳಿಂದ ನಿರ್ಮಿಸಲಾಗಿತ್ತು. ಗೋಡೆಯು ಸುಮಾರು ೫೦ ಅಡಿ ವ್ಯಾಸ ವಿಸ್ತೀರ್ಣದ ಹಾಗೂ ೩೦-೪೦ ಅಡಿ ಎತ್ತರದ ಕೊತ್ತಲಗಳನ್ನು ನಿರ್ಮಿಸಲಾಗಿತ್ತು. ಕೋಟೆಯ ಹೊರ ಗೋಡೆಯ ಪಕ್ಕದಲ್ಲಿ ಸುತ್ತಲೂ ಸುಮಾರು ೨೦ ಅಡಿ ಅಗಲವುಳ್ಳ ಹಾಗೂ ೧೦-೧೫ ಅಡಿ ಆಳವಾದ ಕಂದಕವನ್ನು ನಿರ್ಮಿಸಲಾಗಿದ್ದನ್ನು ಅವಶೇಷಗಳಿಂದ ಗುರ್ತಿಸಬಹುದು. ಕಂದಕವನ್ನು ವ್ಯವಸ್ಥಿತವಾಗಿ ದೊಡ್ಡ ಗಾತ್ರದ ಶಿಲೆಗಳಿಂದ ನಿರ್ಮಿಸಲಾಗಿದೆ. ಪಕ್ಕದ ಕೆರೆಯಿಂದ ನೀರು ತುಂಬಿಸಲಾಗುತ್ತಿತ್ತು.

ಕೋಟೆ ಆಂಜನೇಯ ದೇವಸ್ಥಾನ, ಕೋಟೆ ಕಾಳಿಕಾಂಬ ದೇವಸ್ಥಾನ, ಆಧುನಿಕ ಜೈನ ದೇವಸ್ಥಾನಗಳಿವೆ. ಕೋಟೆ ಆಂಜನೇಯ ದೇವಾಲಯ ಪಾಳೆಯಗಾರರ ಕುಲದೈವವಾಗಿದ್ದು ದಾದೇನಾಯಕನಿಂದ ನಿರ್ಮಾಣಗೊಂಡಿದೆ ಎಂದು ಈ ದೇವಾಲಯದ ಪೂಜಾರಿಗಳು ಹೇಳುತ್ತಾರೆ. ಈ ಕುರಿತಂತೆ ಐತಿಹ್ಯಗಳಿವೆ. ದೇವಾಲಯಗಳ ಮುಂದಿನ ದೀಪಸ್ತಂಭ, ಕಟ್ಟೆ ಮುಂತಾದೆಡೆ ದೊಡ್ಡ ಗಾತ್ರದ ದುಂಡನೆಯ ಶಿಲೆಕಲ್ಲುಗಳು (ಗುಂಡು ಕಲ್ಲು) ಕಂಡುಬರುತ್ತವೆ. ಸ್ಥಳೀಯರು ಇವುಗಳನ್ನು

ಭರಮಪ್ಪ ದೇವರು ಎನ್ನುತ್ತಾರೆ. ಬಹುತೇಕ ಇವು ರಕ್ಷಣಾ ಆಯುಧಗಳಾಗಿದ್ದು ಕೋಟೆಯ ಮೇಲೆ ದಾಳಿ ಮಾಡುವ ವೈರಿಗಳನ್ನು ನಿಯಂತ್ರಿಸಲು, ಹಿಮ್ಮೆಟ್ಟಿಸಲು, ಪಾಳೆಯಗಾರರ ಸೈನಿಕರು ಬಳಸಿರಬಹುದು ಅಥವಾ ವೈರಿ ಪಡೆ ಕೋಟೆಯನ್ನು ಆಕ್ರಮಿಸಲು ಕೋಟೆಯನ್ನು ಬೇಧಿಸಲು ಇವುಗಳನ್ನು ಉಪಯೋಗಿಸಿರಬಹುದು. ಬೃಹತ್ ಸಂಖ್ಯೆಯ ಭರಮಪ್ಪಗಳು ದೊರೆತಿರುವುದರಿಂದ ಹರಪನಹಳ್ಳಿಯ ಈ ಕೋಟೆ ಬಲಿಷ್ಠವಾಗಿದ್ದು ಬೇಧಿಸಲು ಅಸಾಧ್ಯವೆನ್ನುವಷ್ಟು ಬೃಹತ್ ಗಾತ್ರದಲ್ಲಿದ್ದಿರಬಹುದು.

**ನರಸಪ್ಪನ ಬೆಟ್ಟ:** ಹರಪನಹಳ್ಳಿ ತಾಲೂಕು ಅರಸೀಕೆರೆಯಿಂದ ಕಂಚಿಕೇರಿಗೆ ಹೋಗುವ ಮಾರ್ಗದಲ್ಲಿ ನರಸಪ್ಪನಬೆಟ್ಟ ಕಾಣಿಸುತ್ತದೆ. ವಿಜಯನಗರ ಕಾಲದ ಶಾಸನವೊಂದು ಇಲ್ಲಿ ಕಂಡುಬರುತ್ತದೆ. ಇಲ್ಲಿಂದ ಉಚ್ಚಂಗಿದುರ್ಗ ೧೦ ಕಿ.ಮೀ. ದೂರದಲ್ಲಿದೆ. ಈ ಹಿನ್ನೆಲೆಯಲ್ಲಿ ಹರಪನಹಳ್ಳಿ ಪಾಳೆಯಗಾರರು ಈ ಬೆಟ್ಟದ ತುದಿಯ ಮೇಲೆ ತಮ್ಮ ರಕ್ಷಣಾ ನೆಲೆಯೊಂದನ್ನು ಸ್ಥಾಪಿಸಿಕೊಂಡಿದ್ದರೆಂದು ಅವಶೇಷಗಳಿಂದ ಗೊತ್ತಾಗುತ್ತದೆ. ಬೆಟ್ಟದ ಕೆಳಭಾಗದಲ್ಲಿರುವ ಯರಬಳ್ಳಿ ಗ್ರಾಮ ದಾಟಿಕೊಂಡು ಸಾಗಿದಲ್ಲಿ ಬೆಟ್ಟವನ್ನೇರಬಹುದು. ಕಾಲುದಾರಿ ಬಳಸಿ ಬೆಟ್ಟದ ತುದಿಗೆ ತಲುಪುವಾಗ ಸುತ್ತಲೂ ರಕ್ಷಣಾ ಗೋಡೆ ಕೊತ್ತಲ ಹೊಂದಿರುವ ಪ್ರವೇಶವೊಂದು ಗೋಚರಿಸುತ್ತದೆ. ಇದೊಂದು ಸೀಮಿತ ಪ್ರದೇಶವಾಗಿದ್ದು ಸುಮಾರು ೧೦,೦೦೦ ಸಾವಿರ ಚದುರ ಅಡಿ ವಿಸ್ತೀರ್ಣವನ್ನು ಹೊಂದಿರಬಹುದು. ರಕ್ಷಣಾ ಗೋಡೆ ದಪ್ಪವಾಗಿದ್ದು ಅಲ್ಲಲ್ಲಿ ಬಂದೂಕಿನ ನಳಿಕೆಗಳನ್ನು ಇಡುವ ಕಿಂಡಿಗಳನ್ನು ಹೊಂದಿದೆ. ದೂರದಿಂದಲೇ ವೈರಿಗಳ ಆಗಮನವನ್ನು ಗುರ್ತಿಸಬಹುದು. ನೀರಿನ ವ್ಯವಸ್ಥೆಗಾಗಿ ನಿರ್ಮಿಸಿದ ಬಾವಿ ಕಟ್ಟಡ ಇದೆ. ಉಚ್ಚಂಗಿದುರ್ಗದ ಕಡೆಯಿಂದ ಬರುವ ವೈರಿಗಳನ್ನು ಗುರ್ತಿಸ ಹರಪನಹಳ್ಳಿ ರಕ್ಷಿಸಲು ಅಗತ್ಯ ಕ್ರಮ ಕೈಗೊಳ್ಳುವ ತಡೆಗೋಡೆ ರಕ್ಷಣಾ ಸ್ಥಳವಾಗಿರಬಹುದಾಗಿದೆ. ದೊಡ್ಡ ದೊಡ್ಡ ಒಲೆ, ಬೂದಿ, ಇದ್ದಿಲು, ಅದಿರು ಲೋಹದ ಕಿಟ್ಟ ಇತ್ಯಾದಿ ಕಂಡುಬರುತ್ತವೆ. ಬಹುತೇಕ ಇದೊಂದು ಸೈನಿಕ ಉದ್ದೇಶಕ್ಕೆ ಅಲ್ಲದೆ ಇತರ ಯಾವುದಾದರೂ ಉದ್ದೇಶಕ್ಕೆ ಮುಖ್ಯವಾಗಿರಬಹುದಾಗಿದೆ.

ಇದೇ ರೀತಿ ಹರಪನಹಳ್ಳಿ ತಾಲೂಕಿನಾದ್ಯಂತ ಕುಂಚೂರು, ಹ್ಯಾರಡ, ತಲವಾಗಲು, ಅಲಗಿಲವಾಡ, ಮಾಗಾನಹಳ್ಳಿ, ಕಂಚಿಕೇರಿ, ಅಣಜಿಗೆರಿ, ಕಡಬಗೆರಿ, ಹಿರೇಮ್ಯಾಳಗೇರಿ, ಚಿಕ್ಕಮ್ಯಾಗಳಗೇರಿ, ಮುಂತಾದೆಡೆ ರಕ್ಷಣಾ ಕೋಟೆಗಳು ಕಂಡುಬರುತ್ತವೆ. ಇವು ಸಂಪೂರ್ಣ ನೆಲಸಮಗೊಂಡಿದ್ದು ಸ್ಥಳೀಯರ ಹೇಳಿಕೆ ಹಾಗೂ ಕೆಲ ಪಳೆಯುಳಿಕೆಗಳಿಂದ ಸ್ಥಳ ಗುರ್ತಿಸಬಹುದಾಗಿದೆ.



## ಆಕರ ಗ್ರಂಥಗಳು


೧. ಕುಂ.ಬಾ. ಸದಾಶಿವಪ್ಪ, ಹರಪನಹಳ್ಳಿಯ ಪಾಳೆಗಾರರು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೬.
೨. ಎಂ. ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, ೧೯೬೬.
೩. ಟಿ. ಗಿರಿಜಾ, ಚಿತ್ರದುರ್ಗ ಜಿಲಾ ದರ್ಶಿನಿ, ನಿಹಾರಿಕ ಪ್ರಕಾಶನ, ಪಿ.ಜೆ. ಬಡಾವಣೆ, ದಾವಣಗೆರೆ, ೧೯೯೧.
೪. ಟಿ. ಗಿರಿಜಾ, ದಾವಣಗೆರೆ ಇದು ನಮ್ಮ ಜಿಲ್ಲೆ, ನಿಹಾರಿಕ ಪ್ರಕಾಶನ, ಪಿ.ಜೆ. ಬಡಾವಣೆ, ದಾವಣಗೆರೆ, ೨೦೦೧.
೫. ದವನಸಿರಿ–೬೧, ಸಾಹಿತ್ಯ ಸಮ್ಮೇಳನದ ವಿಶೇಷ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೨.
೬ ತರಳಬಾಳು ಹುಣ್ಣಿಮೆ ಸ್ಮರಣ ಸಂಚಿಕೆ–೯೯, ತರಳಬಾಳು ಪ್ರಕಾಶನ, ಸಿರಿಗೆರೆ ೨೦೦೦.
೭. ಕುಂ.ಬಾ. ಸದಾಶಿವಪ್ಪ, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ.
೮. ಡಾ. ಎಂ. ಕೊಟ್ರೇಶ್, ಹರಪನಹಳ್ಳಿ ತಾಲ್ಲೂಕಿನ ರಕ್ಷಣಾ ಸ್ಮಾರಕಗಳು.
೯. ತಿಪ್ಪೇಸ್ವಾಮಿ ಹೆಚ್., ದಾವಣಗೆರೆ ಜಿಲ್ಲೆಯ ದೇವಾಲಯಗಳು, ೨೦೦೧.
೧೦. ಜೋಸಿ ಎಸ್.ಕೆ. ಕರ್ನಾಟಕದ ಪ್ರಾಚೀನ ಕೋಟೆಗಳು, ೨೦೦೦.
೧೧. ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ೨೦೧೨.
೧೨. ಸುಮತೀಂದ್ರ ನಾಡಿಗರ್, ಸಂತೇಬೆನ್ನೂರು ನಾಯಕರು, ೨೦೧೦.
೧೩. ತರಳಬಾಳು ಹುಣ್ಣಿಮೆ ಸ್ಮರಣ ಸಂಚಿಕೆ–೯೯, ತರಳಬಾಳು ಪ್ರಕಾಶನ, ಸಿರಿಗೆರೆ ೨೦೦೯.
೧೪. ಡಾ. ರಾಜಶೇಖರಪ್ಪ ಬಿ., ಇತಿಹಾಸ ಕಥನ, ೨೦೦೧.
೧೫. ಸದಾಶಿವಪ್ಪ ಶ್ಯಾಗಲೆ ಬಿ.ಎಂ., ದಾವಣಗೆರೆ ಜಿಲ್ಲೆಯ ಒಂದು ಪಕ್ಷಿ ನಟಿಟ, ೨೦೧೦.
೧೬. ಡಾ. ಎಂ.ಜಿ. ಈಶ್ವರಪ್ಪ, ಶತಮಾನದ ದಾವಣಗೆರೆ.
೧೭. ಸುಂಕ ಗೋವರ್ಧನ, ಕನ್ನಡ ನಾಡಿನ ಪ್ರಮುಖ ಕೋಟೆಗಳು, ೨೦೧೨.
೧೮. ಎಂ. ಕೊಟ್ರೇಶ್, ಬಳ್ಳಾರಿ ಜಿಲ್ಲೆಯ ಕೋಟೆಗಳು, ೨೦೧೧.

# ೭೯

# ಪುರಾತನ ಐರಣಿ ಕ್ಷೇತ್ರದ ರಕ್ಷಣಾ ಕೋಟೆ

**ಐರಣಿ ಹನುಮಂತಪ್ಪ***

---

**ಹ**ಳೇ ಧಾರವಾಡ ಜಿಲ್ಲೆ, ನೂತನ ಹಾವೇರಿ ಜಿಲ್ಲಾ, ರಾಣೇಬೆನ್ನೂರು ತಾಲ್ಲೂಕಿನ ಐರಣಿ ಗ್ರಾಮ ಇದು ಹಾವೇರಿ ಜಿಲ್ಲಾ, ರಾಣೆಬೆನ್ನೂರು ತಾಲ್ಲೂಕ್ ಮತ್ತು ದಾವಣಗೇರೆ ಜಿಲ್ಲಾ ಹರಿಹರ, ಹರಪನಹಳ್ಳಿ ತಾಲ್ಲೂಕುಗಳನ್ನು ಸೇರಿಸುವ ತುಂಗಭದ್ರಾ ನದಿಯ ತಟದಲ್ಲಿಯ ಅರಣ್ಯವಾಗಿರುತ್ತದೆ. ಈ ಅರಣ್ಯ ಪೂರ್ವರೇಖಾಂಶ ೭೫.೪೫, ಉತ್ತರ ಅಕ್ಷಾಂಶ ೧೪.೩೫ ಮತ್ತು ಸಮುದ್ರದ ಪಾತಾಳಿಯಿಂದ ೭೬೨ ಮೀಟರ್ ಎತ್ತರದ ಪ್ರದೇಶದಲ್ಲಿಯ ಕೋಟೆಯು ನಿರ್ಲಕ್ಷಿಸಿದ ಸುಂದರವಾದ ಮತ್ತು ಭದ್ರವಾದ ಇಂಡೋ ಇಸ್ಲಾಮಿಕ್ ವಾಸ್ತುಶೈಲಿಯಲ್ಲಿ ಇರುವ ಕೋಟೆ.

**ಏಕಂ ಶತಂ ಯೋಧಮತಿ ಪ್ರಾಕಾರಸ್ಥೂ ಧನುರ್ಧರ**
**ಶತಂ ದಶ ಶಶ್ರಾಣಿ ತಸ್ಮಾದುರ್ಗ ವಿಧಿಯತೆ !!**

ಕೋಟೆಯಲ್ಲಿದ್ದ ಬಿಲ್ಲುಗಾರ ಹೊರಗಿನ ನೂರು ಯೋಧರೊಂದಿಗೆ ನೂರು ಧರ್ನುದಾರಿಗಳು ಹತ್ತು ಸಾವಿರ ಯೋಧರೊಂದಿಗೆ ಯುದ್ಧ ಮಾಡಬಲ್ಲರು. ಆದ್ದರಿಂದ ರಾಜನಿಗೆ ಸಪ್ತಾಂಗಗಳಲ್ಲಿ ನಾಲ್ಕನೆಯದು ಕೋಟೆ. ಪ್ರಾಚೀನ ಕೋಟೆ ವಾಸ್ತುಕೃತಿಗಳಾದ ಕೌಟಲ್ಯನ ಅರ್ಥಶಾಸ್ತ್ರ, ಕಾಮುಂದಕನ ನೀತಿಸಾರ, ಶುಕ್ರನೀತಿ, ಮನುಸ್ಮೃತಿ, ಮುಂತಾದ ಅನೇಕರು ತಮ್ಮ ಗ್ರಂಥಗಳಲ್ಲಿ ಕೋಟೆಯ ಮಹತ್ವವನ್ನು ವಾಸ್ತುಗಳನ್ನು ವರ್ಣಿಸಿದ್ದಾರೆ. ಕೋಟೆಯ ನಿರ್ಮಾಣ ವಾಸ್ತುಪ್ರಕಾರ ಸ್ಥಳದ ಆಯ್ಕೆ ಮುಖ್ಯ, ನೈಸರ್ಗಿಕ ರಕ್ಷಣೆ, ನದಿ, ಗುಡ್ಡ ಕಂದಕ, ಅರಣ್ಯ ಮುಂತಾದವುಗಳು ಪ್ರಮುಖವಾಗಿ ಪರಿಗಣಿಸಲ್ಪಡುತ್ತವೆ, ಸ್ಥಳದ ಆಧಾರದ ಮೇಲೆ ಔಧಕ, ಪಾರ್ವತ, ಧಾನ್ವನ, ಐರಿಣಿ, ಪರೀಘ, ಧನ್ವ, ಜಲ, ಸೈನ್ಯ, ಸಹಾಯ, ಇವುಗಳನ್ನು ಅನುಲಕ್ಷಿಸಿ ವೃತ್ತ, ದೀರ್ಘಚತುರಸ್ರ, ಚತುರಸ್ರ, ಹೀಗೆ ಕೋಟೆಗಳನ್ನು ಅಳವಡಿಸಿರುವುದು ಕಂಡುಬರುತ್ತದೆ. ಈ ಎಲ್ಲಾ ತಾಂತ್ರಿಕ ವಾಸ್ತುಗಳನ್ನು ಅಳವಡಿಸಿ ಗುಹಾರಣ್ಯದಲ್ಲಿ ಗಿರಿದುರ್ಗ, ಸಲಿಲದುರ್ಗ ಮತ್ತು ಅಶ್ವಿಕ ಮತ್ತು ಐರಿಣಿ ವಾಸ್ತು ಲಕ್ಷಣವುಳ್ಳ, ಕೋಟೆ ನಿರ್ಮಿಸಲಾಗಿದೆ. ದೊಡ್ಡದೊಡ್ಡ ಕಲ್ಲುಗಾರೆಗಳಿಂದ ಎತ್ತರವಾಗಿ ನಿರ್ಮಿಸಿದ ಗೋಡೆಗಳಿಂದ ನಿರ್ಮಿತ ಪರೀಖ, ಸುತ್ತಲೂ ನೀರಿನಿಂದ ಕೂಡಿರುವ ಜಲದುರ್ಗ ಗಿರಿದುರ್ಗ ಲಕ್ಷಣ ಹೊಂದಿ ಆಯತಾಕಾರದಲ್ಲಿ ಮೂರು ಸುತ್ತಿನ ೨೦ ರಿಂದ ೨೫ ಎಕರೆ ಪ್ರದೇಶದಲ್ಲಿ ಸುಮಾರು ೩೦೦೦ ಅಡಿ ಉದ್ದ ಕೋಟೆ ನಿರ್ಮಿಸಿರುತ್ತಾರೆ.

ಹೊರಸುತ್ತುಕೋಟೆ, ತುಂಗಭದ್ರೆ ಉತ್ತರಾಭಿಮುಖವಾಗಿ ಹರಿಯುವುದರಿಂದ ಕೋಟೆಯ ದಕ್ಷಿಣದಲ್ಲಿ ನದಿತಟದ ಕೊತ್ತಲದಿಂದ ಪ್ರಾರಂಭವಾಗಿ ಪುನಃ ಕೋಟೆಯು ಸುತ್ತುವರೆದು ಪುನಃ ಉತ್ತರದಲ್ಲಿ ಕೊತ್ತಲದ ಹತ್ತಿರ ನದಿ ತಟಕ್ಕೆ ನಿರ್ಮಿಸಲಾಗಿದೆ. ಅದು ದುಂಡನೆಯ ಬುರುಜುಗಳು ಮೇಲಟ್ಟಣೆಗೆ ವೀಕ್ಷಣಾ ಥಾಣ ಹೊಂದಿದೆ.

ಹೊರಸುತ್ತು ಅಳುವೇರಿಗುಂಟ ಒಳಮಗ್ಗುಲು ಕಂದಕದ ತಳದಲ್ಲಿ ಸುಮಾರ ೩೦ ಅಡಿ, ಮೇಲ್ಭಾಗದಲ್ಲಿ ೫೦-೬೦ ಅಡಿ ಅಗಲ ಮತ್ತು ೩೦ ಅಡಿ ಆಳ, ದಕ್ಷಿಣದಲ್ಲಿ ತುಂಗಭದ್ರೆಯಿಂದ ಪ್ರಾರಂಭವಾಗಿ ಕೋಟೆ ಸುತ್ತುವರೆದು ಪುನಃ ಉತ್ತರದಲ್ಲಿ ತುಂಗಭದ್ರಾ ನದಿಗೆ ಜೋಡಣೆಯಾಗಿದೆ.

**ತಡೆಗೋಡೆ:** ತುಂಗಭದ್ರಾ ನದಿಗೆ ಅಡ್ಡಲಾಗಿ ನದಿಯಲ್ಲಿ ಕೋಟೆಗೆ ಹೊಂದಿ ತಡೆಗೋಡೆ ಸುಮಾರು ೪೦-೫೦ ಅಡಿ ಉದ್ದ ಹತ್ತು ಅಡಿ ಅಗಲ, ೩೦ ಅಡಿ ಎತ್ತರವಾದ ಗೋಡೆ ಭಾರವಾದ ಕಲ್ಲುಗಳನ್ನು ಸಂಸ್ಕರಿಸಿ ಕಲ್ಲು ಮತ್ತು ಗಾರೆ ಗಚ್ಚುಗಳಿಂದ ನಿರ್ಮಿಸುತ್ತಾರೆ. ಇದರಿಂದ ತುಂಗಭದ್ರಾ ನದಿ ನೀರು ಸದಾಕಾಲ ಕಂದಕಕ್ಕೆ ಹರಿದು ಪುನಃ ಕೋಟೆ ಸುತ್ತುವರೆದು ನದಿಗೆ ತಲುಪುತ್ತದೆ.

ನದಿಯಿಂದ ಕೋಟೆ ದಕ್ಷಿಣ ಭಾಗದ ಕೊತ್ತಳದಿಂದ ಪ್ರಾರಂಭವಾಗಿ ಕಂದಕದ ಗುಂಟ ಮುಂದುವರೆದು ಪುನಃ ಉತ್ತರದಲ್ಲಿ ನದಿ ತಟದ ಕೊತ್ತಳಕ್ಕೆ ಬಂದು ತಲುಪುತ್ತದೆ. ಹೊರಸುತ್ತು ಹಾಗೂ ಮಧ್ಯಸುತ್ತು ಕೋಟೆಗಳನ್ನು ಸ್ಥಳೀಯ

---

* # ೩೦೦, 'ಬಿ' ಬ್ಲಾಕ್, ೧೦ನೇ ಕ್ರಾಸ್, ದೇವರಾಜ ಅರಸ್ ಬಡಾವಣೆ, ದಾವಣಗೆರೆ-೫೭೭೦೦೬, ಮೊ. ೯೪೪೮೭೦೫೪೩೫

ಪರಿಕರಗಳು ಹಾಗೂ ಕಂದಕ ದಿಂದ ಬಂದ ಕಲ್ಲು ಮಣ್ಣುಗಳಿಂದ ಕೋಟೆಗಳ ಪ್ರಕಾರ ಕಟ್ಟಿರುತ್ತಾರೆ. ಕಂದಕದ ಮೇಲ್ಭಾಗದಲ್ಲಿ ಸೇತುವೆ, ಸೇತುವೆಯ ಮಗ್ಗುಲ ಇಬ್ಬದಿಗಳಲ್ಲಿ ಉತ್ತರ ಮತ್ತು ದಕ್ಷಿಣ ದಿಡ್ಡಿಬಾಗಿಲುಗಳ ಮುಂಭಾಗದಲ್ಲಿ ರಕ್ಷಣಾ ಸಿಬ್ಬಂದಿಗಳ ಠಾಣೆಗಳು ನಿರ್ಮಿತವಾಗಿದೆ. ಎರಡೂ ಕೋಟೆಗಳ ಪ್ರಕಾರಗಳು ಹಾಳಾಗಿದ್ದು, ತಳದ ಅವಶೇಷಗಳು ಅಲ್ಲಲ್ಲಿ ಉಳಿದಿರುತ್ತವೆ.

**ಒಳಸುತ್ತುಕೋಟೆ:** ಈ ಕೋಟೆ ಪ್ರಕಾರ ಮತ್ತು ಹತ್ತು ಗೊಂಟುಗಳು ಅರ್ಧವೃತ್ತಾಕಾರ ಇವುಗಳ ಮೇಲೆ ದೀರ್ಘಾವೃತ್ತಾಕಾರದಲ್ಲಿ ಒತ್ತಾಗಿ ಕಟ್ಟಿರುವ ಬಟ್ಟದೆನೆಗಳ ಮಧ್ಯದಲ್ಲಿ ಮೆಲ್ಲಗೆ ಇಣುಕಿ ನೋಡಲು ಅಂಬುಗಂಡಿ ಮತ್ತು ವೃತ್ತಾಕಾರದ ಬಟ್ಟದೆನೆಗಳಲ್ಲಿ ವಿವಿಧೆಡೆ ವಿವಿಧ ದೆಸೆಯಲ್ಲಿ ಬಾಣ ಅಥವಾ ತುಬಾಕಿ ಗಿಂಡಿ ತೆನೆಗಳನ್ನುಹೊಂದಿ ಅಕ್ರಮಣಕಾರರತ್ತ ಉಪಯೋಗಿಸಲು ಗಿಂಡಿಗಳು ಇವೆ.

ನೀರಿಗಾಗಿ ನದಿ ಸಂಪರ್ಕ ದ್ವಾರಗಳು ಅಲ್ಲಿ ಕಲ್ಲು ಗಚ್ಚುಗಾರೆಗಳ ನಿರ್ಮಿತ, ನದಿ ತಟದ ಬಾವಿ ಸಹಿತ ಭದ್ರವಾಗಿವೆ. ಬಾವಿಯ ದಕ್ಷಿಣಕ್ಕೆ ನದಿಯಲ್ಲಿಯ ತಡೆಗೋಡೆ ನದಿಯ ಪ್ರವಾಹದ ಕೊರೆತ ಮತ್ತು ಕೋಟೆಯೊಳಗಿನ ಸೈನಿಕರಿಗು ಆಸಾಕುದುರೆಗಳಿಗೆ ರಕ್ಷಣೆ ಮತ್ತು ಜಲಮಾರ್ಗದಿಂದ ಬರಬಹುದಾದ ವೈರಿಗಳನ್ನು ತಡೆಯಲು ಹಾಗೂ ನೈಸರ್ಗಿಕವಾಗಿ ಕಂದಕಕ್ಕೆ ನೀರು ಹರಿಯದಂತೆ ತಡೆಗೋಡೆ ಸಹಕರಿಸುತ್ತದೆ.

ಕೋಟೆಯೊಳಗಡೆ ಎತ್ತರವಾದ ಪ್ರದೇಶದಲ್ಲಿ ಉತ್ತರ–ದಿಕ್ಕಿನತ್ತ ಮುಖಮಾಡಿರುವ ಪುಟ್ಟ ಎರಡಂತಸ್ತಿನ ಅರಮನೆ, ಸುಮಾರು ೫೦x೪೦ ಅಡಿ ಉದ್ದಗಳದ ನಿವೇಶನದಲ್ಲಿ ಕಟ್ಟಲಾಗಿದೆ. ಅರಮನೆ ಗೋಡೆಗಳನ್ನು, ಕಲ್ಲು ಗಾರೆಗಳಿಂದ ನಿರ್ಮಿಸಲಾಗಿದ್ದು, ಉಳಿದ ಕಿಟಕಿ ಬಾಗಿಲು ಕಂಬಗಳನ್ನು ಉತ್ತಮ ಮರದ ಮರಮುಟ್ಟುಗಳಿಂದ ನಿರ್ಮಿಸಿರುತ್ತಾರೆ. ಆದರೆ, ಆ ಮರಮುಟ್ಟುಗಳು ಉಳಿದಿಲ್ಲ. ಸ್ಮಾರಕ ಅರಮನೆ (ಮಹಲು) ಅದಕ್ಕೆ ಪಕ್ಕದಲ್ಲಿ ಮೇಲ್ಭಾಗಕ್ಕೆ ಏರಲು ಮೆಟ್ಟಿಲುಗಳುಳ್ಳ ಕೊಠಡಿ, ಇನ್ನೂ ಭದ್ರವಾಗಿ ಉಳಿದಿದೆ, ಮದ್ದು ಗುಂಡು ತಯಾರಿಸುವ ಕಾರ್ಯಾಗಾರದ ಕೊಠಡಿ, ಅರಮನೆಯಿಂದ ಪಶ್ಚಿಮಕ್ಕೆ ೧೫೦ ಅಡಿ ಅಂತರದಲ್ಲಿ ಇರುತ್ತದೆ. ಅರಮನೆಯ ಮುಂದೆ ಕಾಳಿನ ಕಣಜಗಳು ಕಲ್ಲುಗಾರೆಗಳಿಂದ ನಿರ್ಮಿಸಿದ್ದು ಅವಶೇಷಗಳಾಗಿ ಉಳಿದಿವೆ. ಕೋಟೆಯೊಳಗಡೆ ಒಂದು ದೊಡ್ಡ ಈಶ್ವರಲಿಂಗು ಬಯಲಲ್ಲಿ ಇತ್ತು, ಅದನ್ನು ಬೇರೆಡೆಗೆ ಸ್ಥಳಾಂತರಲಾಗಿದೆ. ಕೋಟೆಯಲ್ಲಿ ಕಾಲಮಾನವಿಲ್ಲದ ಶಿಲಾಸನವಿದೆ. ಮೇಲುಗಡೆಯಲ್ಲಿ ಸೂರ್ಯ, ಚಂದ್ರ ಹಾಗೂ ಮಧ್ಯದಲ್ಲಿ ಈಶ್ವರ ಚಿತ್ರಗಳನ್ನು ಕಂಡರಿಸಿದ್ದು, ಕೆಳಗೆ ದೇವಪ್ಪ, ನಾಯಕ, ಬಿಟ್ಟರು, ಸಿದ್ದಯುಗ, ಳಿಗೆ, ಕರುಗ, ಲಿಯರೆ [ಖಂಡು] ಹೊಲನು, ಯೋಗ್ರಾಮ, ನಾಡಸಾನಿ ಬರದುದು ಅರಳಪ್ರವ, ತಾಡಿದೊರೆ, ಬಹುಲಿ ಎಂದು ಬರೆದಿದೆ.

**ಬಂಕಾಪುರ ಕೋಟೆ:** ಸಂಹ್ಯಾದ್ರಿ ಪರ್ವತದ ಬೆಟ್ಟದ ತಪ್ಪಲು ಪ್ರದೇಶವಾಗಿದ್ದರಿಂದ ಮಳೆ ಹೆಚ್ಚಾಗಿ ಬೀಳುತ್ತಿತ್ತು. ಕೋಟೆಯ ಸುತ್ತಣ ಪ್ರದೇಶ ತಪ್ಪಲು ಪ್ರದೇಶವಾದ್ದರಿಂದ ಫಲವತ್ತಾದ ಭೂಮಿ ಹೊಂದಿದೆ, ಮಳೆಯಾಶ್ರಿತ ಬೆಳೆಗಳು, ಜೋಳ, ಹತ್ತಿ, ಗೋಧಿ ಅಕ್ಕಡಿಕಾಲು, ವಾಣಿಜ್ಯ ಬೆಳೆಗಳಿಗೆ ಪ್ರಸಿದ್ಧಿ ಪಡೆದಿದೆ.

ಸಹ್ಯಾದ್ರಿ ಬೆಟ್ಟದ ತಪ್ಪಲು ಪ್ರದೇಶ ಅಂದರೆ ಮಲೆನಾಡ ಸೆರಗು ಎಂದು ಹೆಸರಿದೆ. ಈ ಪ್ರದೇಶದಲ್ಲಿ ಮಳೆ ಹೆಚ್ಚು ಬೀಳುವ ಕಾರಣ ಕೆರೆಕಟ್ಟೆಗಳು ತುಂಬಿ ನೀರಾವರಿ ಬೆಳೆಗಳು ಮುಖ್ಯವಾಗಿ ಭತ್ತ, ಕಬ್ಬು, ತರಕಾರಿ ಪ್ರಮುಖ ಬೆಳೆಗಳು. ರಾಜಮಹಾರಾಜರು, ವರಿಷ್ಠರು, ವ್ಯಾಪಾರಸ್ಥರು, ಆಹಾರಕ್ಕಾಗಿ ಹೆಚ್ಚಾಗಿ ಅಕ್ಕಿಬಳಕೆ ಮಾಡುತ್ತಿದ್ದರು, ಆಂತರಿಕ ಪೂರೈಕೆ ಮತ್ತು ರಫ್ತು ವ್ಯಾಪಾರಕ್ಕಾಗಿ ಬಂಕಾಪುರ ಕೋಟೆಯು ಬಹಳಷ್ಟು ಪ್ರಾಮುಖ್ಯ ಪಡೆದಿತ್ತು.

ಪಶ್ಚಿಮ ಕರಾವಳಿಯ ಹೊನ್ನಾವರ, ಭಟ್ಕಳ, ಗೋವಾ, ಮುಂತಾದ ಸುಮಾರು ೩೦೦ ಬಂದರುಗಳು ದೇವರಾಯನ ಕಾಲಕ್ಕೆ ಇದ್ದವು ಎಂದು ವಿದೇಶಿ ಪ್ರವಾಸಿ ರಜಾಕ್ ಹೇಳುತ್ತಾನೆ. ಅವುಗಳಲ್ಲಿ ಭಟ್ಕಳ, ಹೊನ್ನಾವರ, ಗೋವಾ, ವ್ಯವಸ್ಥಿತ ಪ್ರಮುಖ ವ್ಯಾಪಾರಿ ಕೇಂದ್ರಗಳಾಗಿದ್ದವು. ಒಂದು ಪ್ರಮುಖಮಾರ್ಗ ವಿಜಯನಗರದಿಂದ ಬಂಕಾಪುರ ಮೂಲಕ ಹೊನ್ನಾವರ, ಭಟ್ಕಳ ಮತ್ತು ಗೋವಾಕ್ಕೆ ಸಾಗುತ್ತಿತ್ತು. ವ್ಯಾಪಾರ ಸರಕು, ಸರಂಜಾಮುಗಳು, ಎತ್ತಿನ ಗಾಡಿ ಹಾಗೂ ಹೇರುಪ್ರಾಣಿಗಳ ಮೂಲಕ ಸಾಗಾಟ ನಡೆಯುತ್ತಿತ್ತು.

ರಾಬರ್ಟ್ ಸೀವೆಲ್ ಮತ್ತು ದೋಆರ್ತೆ ಬಾರ್ಬೂಸಾ ಹೇಳುವಂತಹ ಕ್ರಿ.ಶ. ೧೫೪೪ರಷ್ಟು ಹಳೆಯ ಪ್ರಮುಖ ಮಾರ್ಗ, ಹೊನ್ನಾವರ, ಬಂಕಾಪುರ, ಬನವಾಸಿ ರಾಣೆಬೆನ್ನೂರು (ಗುಹಾರಣ್ಯ) ಮೂಲಕ ತುಂಗಭದ್ರಾ ನದಿ ದಾಟಿ, ದಿಗುಬಟೆ (ದಿಗುಬಟೆ ಎಂದರೆ ಹರಪನಹಳ್ಳಿ ತಾಲ್ಲೂಕ್ ದುಗ್ಗಾವತಿ ಗ್ರಾಮವೆಂದು ಸದಾನಂದ ಕನವಳ್ಳಿಯವರು ಗುರ್ತಿಸಿದ್ದಾರೆ). ಆ ಪ್ರದೇಶದಿಂದ ಕವಲೊಡೆಡ ಮಾರ್ಗಗಳು ಒಂದು ವಿಜಯನಗರದತ್ತ, ಮತ್ತೊಂದು ರಾಯದುರ್ಗದ ಹತ್ತಿರ ಹೋಗುತ್ತಿತ್ತು.

ತುಂಗಭದ್ರದ ಎಡದಂಡೆಯಲ್ಲಿ ಗುಹಾರಣ್ಯ, ಬಲದಂಡೆಯಲ್ಲಿ ದುಗ್ಗಾವತಿ ಹತ್ತಿರ, ಕಡತಿ ಎಂಬ ಗ್ರಾಮವಿದೆ. ಹಿಂದೆ ಈ ಕಡತಿ ಗ್ರಾಮವು ಕಡವು ಆಗಿತ್ತು. ಕಡವು ಎಂದರೆ ಸರಕು ಸರಂಜಾಮು, ಪ್ರಾಣಿ ಮತ್ತು ಜನರನ್ನು ಅತ್ತಿಂದಿತ್ತ, ಇತ್ತಿಂದತ್ತ ದೋಣಿ, ತೆಪ್ಪ, ಮಾಸಾಳುಗಳ ಮೂಲಕ ನದಿ ದಾಟಿಸುವ ಸ್ಥಳ. ಅದು ಇಂದು 'ಕಡವು' ಅಂತಾ ಇರುವುದು ತದ್ಭವವಾಗಿ 'ಕಡತಿ' ಎಂದಾಗಿದೆ.

ಸೀವೆಲ್‌ರವರು 'ದುರ್ಗಾಎಂ ದ್ರೂಗ್' ಎಂದು ಉಲ್ಲೇಖಿಸಿರುವುದು ಬೆಟ್ಟದ ಕೋಟೆಗೆ ಅನ್ವಯಿಸುತ್ತದೆ. ಮತ್ತೊಬ್ಬ ಪ್ರವಾಸಿ ಫರ್ನಾಓ ನ್ಯೂನೀಜ್ ತಮ್ಮ ಗ್ರಂಥದಲ್ಲಿ ದಾರ್ಗಎಂ ದ್ರೂಗ್ (ಕನ್ನಡ ಅನುವಾದ ಬೆಟ್ಟದ ಕೋಟೆ ಎಂದು ಹೇಳುತ್ತಾರೆ).

ರಾಬರ್ಟ್ ಸೀವೆಲ್‌ರವರು ಹೊಸನಗರದ ದಳವಾಯಿ ಒಂದೆಗೆಮಾನ ತನ್ನ ಆದಾಯದಲ್ಲಿ ಎರಡುನೂರು ಸಾವಿರ ರಾಜನಿಗೆ ಕೊಡುತ್ತಾನೆ. ಮಿಕ್ಕಿದ್ದನ್ನು ೧೨ ಸಾವಿರ ಕಾಲಾಳು ಸೈನಿಕರಿಗೂ, ೬೦೦ ಕುದುರೆಗಳಿಗೂ, ೨೦ ಆನೆಗಳನ್ನು ಸಲಹುವುದಕ್ಕೆ ಖರ್ಚು ಮಾಡಿರುತ್ತಾನೆ ಎಂದು ಹೇಳುವುದು ಅಂತಹ ಹೊಸನಗರ ಗುಹಾರಣ್ಯದಲ್ಲಿ ನಿರ್ಮಿಸಿದ ರಕ್ಷಣಾ ಕೋಟೆಯ ಸೈನಿಕರ ನಗರವಾಗಿರಬಹುದಾಗಿದೆ.

೨ನೇ ದೇವರಾಯ ಸೈನ್ಯ ಸುಧಾರಣೆಯಲ್ಲಿ ಅನೇಕ ಉತ್ತರದ ರಜಪೂತ, ಪಠಾಣ ಮತ್ತು ಮರಾಠ (ಆರೇರು) ಸೈನಿಕರನ್ನು ತನ್ನ ಸೈನ್ಯದಲ್ಲಿ ನೇಮಿಸಿಕೊಂಡಿರುವುದನ್ನು ಇತಿಹಾಸ ಮತ್ತು ಶಾಸನಗಳು ಹೇಳುತ್ತವೆ. ಇಂದಿನ ಐರಣಿ, ಅರೇಮಲ್ಲಾಪುರ, ೧೫ನೇ ಶತಮಾನದ ಆದಿಯಲ್ಲಿ ನೆಲೆಸಿವೆ ಆ ಮೊದಲು ಗ್ರಾಮಗಳು ಇರಲಿಲ್ಲ. ಗುಹಾರಣ್ಯದಲ್ಲಿ ೧೫ನೇ ಶತಮಾನದ ಆದಿಯಲ್ಲಿ ಇಂಡೋ ಇಸ್ಲಾಮಿಕ್ ಶೈಲಿಯ ರಕ್ಷಣಾ ಕೋಟೆ ನಿರ್ಮಿಸಿ ಕೋಟೆಯ ಪಕ್ಕದಲ್ಲಿ ರಜಪೂತ ಮತ್ತು ಮುಸ್ಲಿಂ ಪಠಾಣ, ಜನಾಂಗದವರ ವಸತಿಗಳು ನಿರ್ಮಿಸಿದ ಹಾಗೂ ಅದೇ ಕಾಲದ ಹಳೆಯ ಮಸೂತಿ ಇದೆ. ಅದೇ ಪರಿಸರದ ಅರಣ್ಯದ ಅಂಚಿನಲ್ಲಿ ಅರೇಮಲ್ಲಾಪುರ ಗ್ರಾಮ ಅಂದು ಆರೆ (ಮರಾಠ) ಸೈನಿಕ ವಸತಿ ಪ್ರದೇಶ ಇಂದು ಗ್ರಾಮವಾಗಿದೆ. ಈ ಗುಹಾರಣ್ಯ ಪ್ರದೇಶದಲ್ಲಿ ಆನೆಸಾಕಾಣಿಕೆಯ ಸ್ಥಳ ರಾಹುತನಕಟ್ಟೆ (ಇಂದು ಗ್ರಾಮವಾಗಿದೆ) ಕುದುರೆ ಸಾಕಾಣಿಕೆಯ ಠಾಣೆ ಕುದುರೆಹಾಳ್ ಅದೇ ಹೆಸರಿನ ಗ್ರಾಮಗಳಾಗಿವೆ.

**ರಾಜಕೀಯ ಅಂಶಗಳು:** ಕ್ರಿ.ಶ. ೧೩೪೬ರಲ್ಲಿ ಕಲ್ಬುರ್ಗಿಯಲ್ಲಿ ಬಹುಮನಿ ಸಾಮ್ರಾಜ್ಯ ಸ್ಥಾಪನೆಯಾದ ನಂತರ ಬಹುಮನಿ ಸುಲ್ತಾನರಿಗೂ, ವಿಜಯನಗರದ ಅರಸರಿಗೂ, ಕೃಷ್ಣ ಮತ್ತು ತುಂಗಭದ್ರಾ ನದಿಗಳ ನಡುವಣ ದೋಆಬ್ ಪ್ರದೇಶ ಒಡೆತನಕ್ಕಾಗಿ ನಿರಂತರ ಕಾದಾಟಗಳು ನಡೆದೇ ಇದ್ದವು. ಕ್ರಿಸ್ತಶಕ ೧೪೦೬ರಲ್ಲಿ ಬಹುಮನಿ ಸುಲ್ತಾನ ಫಿರೋದ್‌ಶಹ ಬಂಕಾಪುರ ಕೋಟೆಯ ಮೇಲೆ ಮುತ್ತಿಗೆ ಹಾಕಿದಾಗ ವಿಜಯನಗರದ ಅರಸ ೧ನೇ ದೇವರಾಯ ಉಳಿಸಿಕೊಳ್ಳುವುದು ಸಾಧ್ಯವಾಗದೆ ಹೀನಾಯವಾಗಿ ಸೋತು ಒಪ್ಪಂದ ಮಾಡಿಕೊಂಡು ಫಿರೋದ್ ಷಾನಿಗೆ ಬಂಕಾಪುರದ ಕೋಟೆಯನ್ನು ಬಿಟ್ಟುಕೊಟ್ಟ.

ಕ್ರಿ.ಶ. ೧೪೧೫-೧೪೧೮ರಲ್ಲಿ ಪುನಃ ದೇವರಾಯನಿಗೂ, ಬಹುಮನಿಯವರಿಗೂ ತುಂಗಭದ್ರಾ ನದಿ ದಂಡೆ ಗುಹಾರಣ್ಯದ ಪ್ರದೇಶದ ಪರಿಸರದಲ್ಲಿಯ ಮುದೇನೂರು ಮತ್ತು ಚಳಗೇರಿ ಹತ್ತಿರ ಯುದ್ಧ ನಡೆದು ಬಹುಮನಿಯವರ ಕೈಮೇಲಾಯಿತು. ಕ್ರಿ.ಶ. ೧೪೨೬ ಮತ್ತು ೧೪೪೩ರಲ್ಲಿ ಬಹುಮನಿಯವರೊಡನೆ ೨ನೇ ದೇವರಾಯ ಯುದ್ಧ ಮಾಡಿದರೂ ಅಲ್ಲಾವುದ್ದೀನನ ಮೇಲೆ ನಿರ್ಣಾಯಕ ವಿಜಯ ಸಾಧಿಸಲು ಸಾಧ್ಯವಾಗಲಿಲ್ಲ. ಧೃತಿಗೆಟ್ಟ ೨ನೇ ದೇವರಾಯ ತನ್ನ ಮಂತ್ರಿಮಂಡಲ, ದಂಡನಾಯಕ, ರಾಜಕೀಯ ಮುತ್ಸದ್ದಿಗಳ ಸಭೆ ಕರೆದು ಸೋಲಿನ ಕಾರಣ ಚರ್ಚಿಸಿ ಸೈನ್ಯದಲ್ಲಿ ಸುಧಾರಣೆ ತಂದ. ಬಹುಮನಿಯವರೊಂದಿಗೆ ಕಾದಾಡಲು ತನ್ನ ಸೈನ್ಯದಲ್ಲಿ ಮುಸ್ಲಿಂ ಪಠಾಣರನ್ನು ರಜಪೂತ, ಆರೇರು (ಮರಾಠ) ಸೈನಿಕರನ್ನು ನೇಮಿಸಿಕೊಂಡು ತನ್ನ ಸೈನ್ಯ ತರಬೇತಿಗೊಳಿಸಿ ಉತ್ತಮ ಕುದುರೆಗಳನ್ನು ಪರದೇಶದಿಂದ ತರಿಸಿದ ಹಾಗೂ ಅಂತಹ ಅಂತರ್ಯುದ್ಧಕ್ಕೆ ಅನುಗುಣವಾಗಿ ಕೋಟೆ ಕಟ್ಟಿಸಿದ. ಐರಣಿ ವಾಸ್ತು ಅಳವಡಿಸಿ ಕೋಟೆ ನಿರ್ಮಿಸಿದ್ದರಿಂದ ಕೋಟೆ ಹತ್ತಿರ ನಿರ್ಮಿಸಿದ್ದ ಸೈನಿಕರ ವಸತಿ-ನೆಲೆಗೆ ಹೊಸಪೂರು ದೇಹಾತ್‌ಖಿಲ್ಲಾ ಐರಿಣಿ ಎಂಬುದು ಐತಿಹಾಸಿಕ ಉಲ್ಲೇಖಗೊಂಡಿದ್ದು ನಂತರ ಐರಣಿ ಗ್ರಾಮವಾಗಿದೆ.

**ಹೊಸದೊಂದು ಕೋಟೆ ಗುಹಾರಣ್ಯದಲ್ಲಿ ನಿರ್ಮಾಣ:** ಸಾಮ್ರಾಜ್ಯದ ಭದ್ರತೆಗಾಗಿ ೨ನೇ ದೇವರಾಯ ಬಂಕಾಪುರ ಕೋಟೆಯಷ್ಟೇ ಸಮರ್ಥವಾದ ರಕ್ಷಣಾ ಸಾಮರ್ಥ್ಯವಿರುವ ಪರ್ಯಾಯ ಕೋಟೆ ತುಂಗಭದ್ರಾ ಎಡದಂಡೆ ಗುಹಾರಣ್ಯದಲ್ಲಿ ಕೋಟೆಯನ್ನು ನಿರ್ಮಿಸಿರಬಹುದಾಗಿದೆ.



ಕೋಟೆಯ ಪಾರ್ಶ್ವನೋಟ



ನದಿ ತಟ ಉತ್ತರ ಗೋಡೆ



ಶಾಸನ

ಲಕ್ಕಣ ದಂಡೇಶ ಗುಹಾರಣ್ಯ ಕ್ಷೇತ್ರದಲ್ಲಿ ಬೆಟ್ಟದ ಮೇಲೆ ವಸಂತ ಮಲ್ಲಿಕಾರ್ಜುನ ದೇವಸ್ಥಾನವನ್ನು ಕಟ್ಟಿಸಿದ. ಅಲ್ಲಿ ಒಂದು ವಿಶಾಲ ಕೆರೆ ಶ್ರೀರಾಮತಟಾಕ ಪುನರುಜ್ಜೀವನಗೊಳಿಸಿದ ಸಂಗತಿ ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ ಗ್ರಂಥದಲ್ಲಿ ಉಲ್ಲೇಖವಿದೆ.

ಪ್ರೌಢದೇವರಾಯನು ಇದುವರೆಗೂ ಪ್ರಕಟಗೊಂಡ ಕನ್ನಡದ ೨೨೦, ತೆಲುಗು ೧೫, ತಮಿಳು ೪೦ ಶಾಸನಗಳಲ್ಲಿ ಅವಿಭಜಿತ ಧಾರವಾಡ ಜಿಲ್ಲೆಯಲ್ಲಿ ಹಿರೇಕೆರೂರ ತಾಲ್ಲೂಕ್ ಕಡೂರು ೧೪೨೯ರ ವೀರಗಲ್ಲು ಶಾಸನ ಮತ್ತು ಕುಂದಗೋಳ ತಾಲ್ಲೂಕಿನ, ಕುಂದಗೋಳ ಗ್ರಾಮದ ಕ್ರಿ.ಶ. ೧೪೪೪ರ ಎರಡು ಶಾಸನಗಳನ್ನು ಹೊರತುಪಡಿಸಿದರೆ ಬೇರೆ ಯಾವ ಶಾಸನಗೂ ಕಂಡುಬರುವುದಿಲ್ಲ.



## ಆಕರ ಗ್ರಂಥಗಳು


೧. ಮುಂಬೈ ರಾಜ್ಯ ಗೆಜೆಟಿಯರ್ ಮತ್ತು ಕರ್ನಾಟಕ ರಾಜ್ಯ ಗೆಜೆಟಿಯರ್ ಉಲ್ಲೇಖ.

೨. 'ಸವಣೂರು ನವಾಬರು' ಗ್ರಂಥಕರ್ತರು: ಗೋವಿಂದಮೂರ್ತಿ ದೇಸಾಯಿ

೩. ಪ್ರವಾಸಿ ಕಂಡ ವಿಜಯನಗರ, ಅಬ್ದುಲ್ ರಜಾಕ್, ಸಂಪಾದಕ: ವಿವೇಕ್ ರೈ, ಪುಟ.

೪. ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ ಪುಸ್ತಕ, ಕುಂಭಾಸ ಮತ್ತು ಎಂ.ಎ.ಆರ್. ೧೯೨೦.

೫. ಮರೆತು ಹೋದ ಮಹಾಸಾಮ್ರಾಜ್ಯ, ಮೂಲ ರಾಬರ್ಟ್ ಸೀವೆಲ್, ಅನುವಾದ: ಸದಾನಂದ ಕನವಳ್ಳಿ.

೬. ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ ಪ್ರಸ್ತಾವನೆ ಮತ್ತು ಪದ್ಯ–೧೨೮ ರಿಂದ ೧೩೩, ಪುಟ–೪೧೪ ಮತ್ತು

೭. ಶಿವತತ್ವ ಚಿಂತಾಮಣಿ ಸಾಂಸ್ಕೃತಿಕ ನೆಲೆ ಡಾ. ಎಫ್.ಟಿ. ಹಳ್ಳಿಕೇರಿ, ಹಾಗೂ ಪ್ರೌಢದೇವರಾಯ ವಿಜಯಕಲ್ಯಾಣ, ಡಾ॥ ಬಿ.ವಿ. ಮಲ್ಲಾಪುರ, ಸಂಧಿ–೩೮, ನೂತನ ಗಣಂಗಳ ವಿವರ, ಪುಟ ೨೩.

# ೮೦

# ಶಿವಪ್ಪನಾಯಕ ಅರಮನೆಯಲ್ಲಿರುವ (ಬಿದನೂರು) ರಾಕೆಟ್‌ಗಳು

ಆರ್. ಶೇಜೇಶ್ವರ*

ಶಿವಮೊಗ್ಗ ಜಿಲ್ಲೆ ಹೊಸನಗರ ತಾಲ್ಲೂಕಿನ ನಗರದಲ್ಲಿ (ಬಿದನೂರು) ದೊರೆತ ರಾಕೆಟ್‌ಗಳನ್ನು ಸರ್ಕಾರಿ ವಸ್ತುಸಂಗ್ರಹಾಲಯ ಶಿವಪ್ಪನಾಯಕ ಅರಮನೆ ಶಿವಮೊಗ್ಗ ಇಲ್ಲಿ ಸಂಗ್ರಹಿಸಲಾಗಿದ್ದು ಇವುಗಳನ್ನು ಕುರಿತು ಮಾಡಿದ ಶೋಧ, ಲೋಹಶಾಸ್ತ್ರೀಯ ಹಾಗೂ ವೈಜ್ಞಾನಿಕ ಅಧ್ಯಯನವನ್ನು ಈ ಸಂಪ್ರಬಂಧದಲ್ಲಿ ವಿವರಿಸಲಾಗಿದೆ.

**ರಾಕೆಟ್‌ಗಳ ಇತಿಹಾಸ:** ಮೊದಲ ಬಾರಿಗೆ ರಾಕೆಟ್‌ಗಳನ್ನು ತಯಾರು ಮಾಡಿದ್ದು ಯಾರು ಎಂಬುದನ್ನು ತಿಳಿಯುವುದಾದರೆ ಕ್ರಿ.ಶ. ೧೦೪೪ರಲ್ಲಿ ಚೀನಾದ ವುಂ-ಚಿಂಗ್-ತ್ಸುಂಗ್-ಯೋ ಎಂಬಾತನು ಮೊದಲು ಸಿಡಿಮದ್ದಿನ ಪುಡಿಯನ್ನು ಕಂಡುಹಿಡಿದನು. ನಂತರ ಕ್ರಿ.ಶ. ೧೩ನೇ ಶತಮಾನದಲ್ಲಿ ಪೇಪರ್ ಹಾಗೂ ಬೊಂಬು ರಾಕೆಟ್‌ಗಳನ್ನು, ಪಟಾಕಿಗಳನ್ನು ಚೀನಾದವರು ಮಂಗೋಲಿಯನ್ನರ ವಿರುದ್ಧ ಬಳಸಿದರು.[೧] ನಂತರ ಕ್ರಿ.ಶ.೧೨೫೮ ರ ವೇಳೆಗೆ ಮಂಗೋಲಿಯನ್ನರಿಂದ ಮದ್ದು ತುಂಬಿದ ರಾಕೆಟ್‌ಗಳು ಯೂರೋಪಿನವರೆಗೂ ಹರಡಿದವು.[೨] ನಂತರ ಬಾರತಕ್ಕೂ ಹರಡಿ ಮೊಗಲರ ಭೂಸೇನೆಯ ಆಯುಧಗಾರದ ಒಂದು ಭಾಗವಾದವು. ಅಕ್ಬರನ ತೋಪುಖಾನೆಯಲ್ಲಿ ರಾಕೆಟ್‌ಗಳಿದ್ದವೆಂದು ಅಬ್ದುಲ್‌ಫಜಲ್‌ನ ಬರವಣಿಗೆಯಿಂದ ತಿಳಿದುಬರುತ್ತದೆ.[೩] ದಕ್ಷಿಣ ಹಾಗೂ ಉತ್ತರ ಭಾರತದ ಯುದ್ಧಗಳಲ್ಲಿ ೧೬ನೇ ಶತಮಾನದ ಹೊಸ್ತಿಲಿನಲ್ಲೇ ಜಹಂಗೀರನಿಂದ ಪ್ರಯೋಗಗೊಂಡ ಕ್ಷಿಪಣಿಗಳನ್ನು ಮೂಲ ಯುದ್ಧೋಪಕರಣವೆಂದು ಮೊಗಲರು ಒಪ್ಪಲಿಲ್ಲ, ಕ್ಷಿಪಣಿ, ಮದ್ದುಗುಂಡುಗಳ ಪ್ರಯೋಗಗಳು ಸರ್ವೇಸಾಮಾನ್ಯವಾಗಿ ಪಟಾಕಿಗಳಾಗಿ ಮಾತ್ರ ಕೆಲಸ ಮಾಡುತ್ತಿದ್ದವು, ಹೆಚ್ಚೆಂದರೂ ಶತ್ರುಗಳ ವಸ್ತುಗಳನ್ನು ಹಾನಿ ಮಾಡಲು ಹಾಗೂ ಪ್ರಾಣಿಗಳನ್ನು ಚದುರಿಸಲು ಉಪಯುಕ್ತವಾಗಿದ್ದವು.

**ಆಂಗ್ಲೋ-ಮೈಸೂರು ಯುದ್ಧದಲ್ಲಿ ಮೈಸೂರಿನ ಕ್ಷಿಪಣಿ (ರಾಕೆಟ್) (೧೭೬೭-೧೭೯೯):** ಕ್ರಿ.ಶ. ೧೮ನೇ ಶತಮಾನದಲ್ಲಿ ಮೈಸೂರಿನವರ ಬ್ರಿಟಿಷ್ ಅಳ್ವಿಕೆಯ ವಿರುದ್ಧ ಧಂಗೆ ಎದ್ದಾಗ ಟಿಪ್ಪು ಸುಲ್ತಾನನ ಸೈನ್ಯದಲ್ಲಿದ್ದ ಲೋಹ ಲೇಪಿತ (ಕಬ್ಬಿಣದ) ಕ್ಷಿಪಣಿಗಳನ್ನು ಎದುರಾಳಿಗಳ ಮೇಲೆ ಯಶಸ್ವಿಯಾಗಿ ಮೊದಲನೆಯ ಬಾರಿ ಪ್ರಯೋಗಿಸಲಾಯಿತು. ನಿಯಮಿತ ಬಲಗಳನ್ನು ಕಚೇರಿ, ಕುಶುನ್ಸ್ ಮತ್ತು ಜಾಕ್ಸ್ ಎಂದು ವಿಂಗಡಿಸಿ,[೪] ೧೭೯೩ರಲ್ಲಿ ಸುಗ್ರೀವಾಜ್ಞೆ ಹೊರಡಿಸಿದ ಟಿಪ್ಪು ೫ ಕಚೇರಿಗಳು, ೨೭ ಕುಶುನ್ಸ್ ಪ್ರತಿ ಕುಶುನ್‌ಗಳಲ್ಲಿ ೧೩೯೨ ಸಿಬ್ಬಂದಿಗಳಿದ್ದು ಪ್ರತೀ ಜಾಕ್‌ಗಳಲ್ಲಿ ೩೯ ಕ್ಷಿಪಣಿ ಸಿಬ್ಬಂದಿಗಳು ಎಂದು ಆಯೋಜಿಸಲಾಗಿತ್ತು,[೫] ಡೆಕ್ಕನ್ ಪ್ರಸ್ಥಭೂಮಿಯಿಂದ ಮಲಬಾರ್‌ವರೆಗೂ ಮೈಸೂರಿನವರು ದಕ್ಷಿಣ ಭಾರತದಲ್ಲಿ ತನ್ನ ಪ್ರಾಬಲ್ಯವನ್ನು ಸ್ಥಾಪಿಸಿದರು. ಇದನ್ನು ವಿರೋಧಿಸುವಲ್ಲಿ ಬ್ರಿಟಿಷರು ಯಶಸ್ವಿಯಾಗದೇ ಪ್ರಪಂಚದುದ್ದಗಲಕ್ಕೂ ಲೋಹ ಲೇಪಿತ (ಕಬ್ಬಿಣದ) ಯುದ್ಧೋಪಕರಣ ಯಶಸ್ವಿಯಾಗಿ ಪರಿಚಯವಾಯಿತು. ಹನ್ನೆರಡನೆಯ ರೆಜಿಮೆಂಟ್ ಆಗಿದ್ದ ಕರ್ನಲ್ ಬೈಲಿಯವರು ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದ ಭೀಕರ ದೃಶ್ಯವನ್ನು ೧೭೯೯ ಏಪ್ರಿಲ್ ೫ರಂದು ದಾಖಲಿಸಿದ್ದಾರೆ.



ಚಿತ್ರ-೧. ರಾಕೆಟ್‌ಗೆ ಬೆಂಕಿ ಹಚ್ಚುತ್ತಿರುವ ಮೈಸೂರು ಸೈನಿಕ
ರಾಬರ್ಟ್ ಹೋಮ್
ಚಿತ್ರ ಕೃಪೆ : ವಿಕ್ಟೋರಿಯಾ ಆಲ್ಬರ್ಟ್ ವಸ್ತುಸಂಗ್ರಹಾಲಯ, ಲಂಡನ್

ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಭಾಗವಹಿಸಿದ್ದ ಹಾಗೂ ನೇರವಾಗಿ ಸಾಕ್ಷಿಯಾಗಿದ್ದ ರಾಬರ್ಟ್‌ಹೋಮ್ ಚಿತ್ರಿಸಿರುವಂತೆ (ಚಿತ್ರ-೧) ಮೈಸೂರು ಸೈನ್ಯದ ಬುಬ್ರಿ (ಹುಲಿ) ಪಟ್ಟಿಯ ಸಮವಸ್ತ್ರ ಧರಿಸಿರುವ

* ಸಹಾಯಕ ನಿರ್ದೇಶಕರು, ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಶಿವಪ್ಪನಾಯಕ ಅರಮನೆ, ಶಿವಮೊಗ್ಗ, ಮೊ. ೯೧೭೪೫೭೦೫೦೨

ಸೈನಿಕ ರಾಕೆಟ್ ಒಂದಕ್ಕೆ ಬೆಂಕಿ ಹಚ್ಚುತ್ತಿರುವ ದೃಶ್ಯ ಹಾಗೂ ಸೊಂಟದ ಹತ್ತಿರವಿರುವ ಒಂದು ವಸ್ತುವು ರಾಕೆಟ್ ಉಡಾವಣೆ ಮಾಡಲು ಬಳಸಿರುವ ಲಾಂಚರ್ ಆಗಿದೆ. ಮೈಸೂರಿನಲ್ಲಿ ರಾಕೆಟ್‌ನ್ನು ಬಾಣ ಎಂದು ಕರೆಯಲಾಗುತ್ತಿತ್ತು. ರಾಕೆಟ್ ಬಿಡುವವರನ್ನು ಬಾಣದಾರ್ ಎಂದು ಕರೆಯಲಾಗುತ್ತಿತ್ತು. ೧೭೯೩ರ ಸುಮಾರಿಗೆ ಟಿಪ್ಪು ಬಾಣದ ಹೆಸರನ್ನು ಬದಲಿಸಿ ಶುಹಾಬ್ ಎಂದು ಮರುನಾಮಕರಣ ಮಾಡಿದ.[೬] ರಾಕೆಟ್ ತಂತ್ರಜ್ಞಾನದಲ್ಲಿ ಟಿಪ್ಪುವಿನ ಮರಣದೊಂದಿಗೆ ಭಾರತದಲ್ಲಿ ರಾಕೆಟ್ ಬಳಕೆ ಮುಗಿದಂತಾಯಿತು. ಆದರೆ ಯುರೋಪಿನಲ್ಲಿ ಹೊಸ ರಾಕೆಟ್ ಬಳಕೆಯ ಶಕೆ ಆರಂಭವಾಯಿತು ಎನ್ನಬಹುದು. ೧೭೯೯ರ ನಂತರ ಬ್ರಿಟಿಷರು ಮೈಸೂರು ರಾಕೆಟ್‌ಗಳನ್ನು ಹಾಗೂ ಇತರೆ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿಕೊಂಡು ವೂಲ್‌ವಿಚ್ ರಾಯಲ್ ಮಿಲಿಟರಿ ಉಗ್ರಾಣದಲ್ಲಿ ವಿಜಯದ ಸಂಕೇತವಾಗಿ ಇಟ್ಟರು. ಮುಂದೆ ವಿಲಿಯಮ್ ಕಾಂಗ್ರೀವ್ ಈ ರಾಕೆಟ್‌ಗಳನ್ನು ಪ್ರಯೋಗ ಶಾಲೆಯಲ್ಲಿ ಪರಿಶೀಲನೆ ಮಾಡಿ ಇವುಗಳನ್ನು ಅಭಿವೃದ್ಧಿಪಡಿಸಿದನು.[೭] ಈ ರಾಕೆಟ್‌ಗಳು ಮುಂದೆ ಬ್ರಿಟಿಷರಿಗೆ ಯುರೋಪಿಯನ್ ಮತ್ತು ಅಮೇರಿಕನ್ ವೈರಿಗಳ ವಿರುದ್ಧದ ಯುದ್ಧದಲ್ಲಿ ಹೊರಾಡಲು ಇವು ಪ್ರಮುಖ ಪಾತ್ರವಹಿಸಿದವು.[೮]

**ವಿಶ್ವದಲ್ಲಿ ಇಲ್ಲಿಯವರೆಗೆ ದೊರೆತಿರುವ ರಾಕೆಟ್‌ಗಳು:** ಇಂಗ್ಲೆಂಡ್‌ನ ವೂಲ್‌ವಿಚ್ ವಸ್ತುಸಂಗ್ರಹಾಲಯದಲ್ಲಿ ಎರಡು ರಾಕೆಟ್‌ಗಳು, ಬೆಂಗಳೂರಿನ ಸರ್ಕಾರಿ ವಸ್ತುಸಂಗ್ರಹಾಲಯದಲ್ಲಿ ಮೂರು ರಾಕೆಟ್‌ಗಳು. ಪಶ್ಚಿಮ ಬಂಗಾಳದ ಮುರ್ಷಿದಬಾದ್‌ನ ಹಜರ್‌ದ್ವಾರಿ ವಸ್ತುಸಂಗ್ರಹಾಲಯದಲ್ಲಿ ಒಂದು ರಾಕೆಟ್ ಕಾಣಬಹುದು. ಈ ಎರಡು ಶತಮಾನಗಳ ಕಾಲಾವಧಿಯಲ್ಲಿ ಇಡೀ ಪ್ರಪಂಚದಲ್ಲಿಯೇ ಪತ್ತೆ ಹಚ್ಚಲ್ಪಟ್ಟಿರುವ ರಾಕೆಟ್‌ಗಳು ಆರು ಮಾತ್ರ ಎನ್ನುವುದು ಇತಿಹಾಸ ತಜ್ಞರಿಗೆ ರಾಕೆಟ್ ಸಂಶೋಧನೆಯ ವಿದ್ವಾಂಸರಿಗೆ ಗೊಂದಲವನ್ನುಂಟು ಮಾಡಿದೆ. ಆದರೆ ವಸ್ತುಸಂಗ್ರಹಾಲಯದಲ್ಲಿ ಬೆರಳೆಣಿಕೆಯಷ್ಟು ರಾಕೆಟ್‌ಗಳಿರುವುದರಿಂದ ಇವುಗಳ ಬಗ್ಗೆ ಹೆಚ್ಚಿನ ಸಂಶೋಧನೆ ನಡೆಯದಿರುವುದು ಕಡಿಮೆಯೇ ಎನ್ನಬಹುದು.

**ನಗರ (ಬಿದನೂರು) ರಾಕೆಟ್‌ಗಳು ಪತ್ತೆ:** ಶಿವಮೊಗ್ಗ ಜಿಲ್ಲೆಯ ನಗರ (ಬಿದನೂರು) ಗ್ರಾಮದ ನಾಗರಾಜ್‌ರವರು ೨೦೦೨ರ ಏಪ್ರಿಲ್‌ನಲ್ಲಿ ತಮ್ಮ ತೋಟದ ಬಾವಿಯಲ್ಲಿ ನೀರು ಬತ್ತಿ ಹೋಗಿದ್ದರಿಂದ ೩೦ ಅಡಿ ಆಳದವರೆಗೆ ಬಾವಿಯನ್ನು ಹೂಳೆತ್ತಿಸಿದರು. ಆಗ ೩೦ ಅಡಿ ಆಳದಲ್ಲಿ ರಾಕೆಟ್‌ಗಳು ದೊರೆತವು. ಇವುಗಳನ್ನು ರಾಕಟ್‌ಗಳೆಂದು ಗುರುತಿಸಲಾಗಲಿಲ್ಲ ಇವುಗಳನ್ನು ಶೆಲ್‌ಗಳೆಂದು ತಿಳಿದು ಸರ್ಕಾರಿ ವಸ್ತುಸಂಗ್ರಹಾಲಯ, ಶಿಪ್ಪನಾಯಕ ಅರಮನೆ, ಶಿವಮೊಗ್ಗ ಇಲ್ಲಿ ಸಂಗ್ರಹಿಸಿಡಲಾಗಿತ್ತು. ನಂತರ ೨೦೦೭ರಲ್ಲಿ ಬೆಂಗಳೂರಿನ ವಸ್ತುಸಂಗ್ರಹಾಲಯದಲ್ಲಿರುವ ರಾಕೆಟ್‌ಗಳ ಆದಾರದ ಮೇಲೆ ಇವುಗಳನ್ನು ರಾಕೆಟ್‌ಗಳೆಂದು ಗುರುತಿಸಲಾಯಿತು. ನಂತರ ೨೦೧೮ರಲ್ಲಿ ಕ್ಷೇತ್ರಕಾರ್ಯ ಕೈಗೊಂಡು ದಿನಾಂಕ: ೨೫/೦೭/೨೦೧೮ ರಿಂದ ದಿನಾಂಕ: ೨೫/೦೭/೨೦೧೮ರವರೆಗೆ ಮೂರು ದಿನಗಳ ಕಾಲ ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯವತಿಯಿಂದ ೨೦೦೨ ರಲ್ಲಿ ಬಾವಿಯಿಂದ ತೆಗೆದು ಹಾಕಿದ ಮಣ್ಣಿನಲ್ಲಿ ಮೂರು ದಿನಗಳ ಕಾಲ ಉತ್ಖನನ ಮಾಡಿದಾಗ ೧೭೦೦ ರಾಕೆಟ್‌ಗಳು, ಕಠಾರಿ ಹಿಡಿ, ಇತರೆ ಪುರಾತತ್ವ ವಸ್ತುಗಳು ದೊರೆತವು ಇವುಗಳನ್ನು ಸರ್ಕಾರಿ ವಸ್ತುಸಂಗ್ರಹಾಲಯ, ಶಿವಪ್ಪನಾಯಕ ಅರಮನೆ. ಶಿವಮೊಗ್ಗ ಇಲ್ಲಿ ಸಂಗ್ರಹಿಸಿ ಹೆಚ್ಚಿನ ಅಧ್ಯಯನಕ್ಕೆ ಪ್ರಯೋಗಾಲಯಕ್ಕೆ ಕಳುಹಿಸಿ ಪರೀಕ್ಷಿಸಲಾಯಿತು.

**ನಗರದಲ್ಲಿಯೇ ರಾಕೆಟ್‌ಗಳು ಏಕೆ ದೊರೆತವು:** ಕೆಳದಿ ಅರಸರ ಕೊನೆಯ ರಾಜಧಾನಿ ಬಿದನೂರು. ಈ ಬಿದನೂರು ಕೋಟೆಯಿಂದ ಸುಮಾರು ೧ ಕಿ.ಮೀ ದೂರದಲ್ಲಿ ಮಠದ ಸ್ಥಳದಿಂದ ಮುಂದೇ ನೂರು ಮೀಟರ್ ಅಂತರದಲ್ಲಿ ಈ ರಾಕೆಟ್‌ಗಳು ಬಾವಿಯಲ್ಲಿ ದೊರೆತವು. ಇದು ಕೆಳದಿ ಅರಸರ ರಾಜಧಾನಿಯಾಗಿದ್ದರಿಂದ ಸುಮಾರು ಒಂದು ಲಕ್ಷಕ್ಕೂ ಅಧಿಕ ಮನೆಗಳಿದ್ದರಿಂದ ಈ ಗ್ರಾಮವನ್ನು ನಗರವೆಂದು ಕರೆಯಲಾಗುತ್ತಿತ್ತು. ಕ್ರಿ.ಶ. ೧೭೬೩ರಲ್ಲಿ ಮೈಸೂರು ಸೇನೆಯ ಅಧಿಪತಿಯಾದ ನವಾಬ ಹೈದರ್‌ಅಲಿ ಇದನ್ನು ವಶಪಡಿಸಿಕೊಂಡನು. ಇದರ ಬಗ್ಗೆ ಕೀರ್ಮಾನಿ ಎಂಬ ಇತಿಹಾಸಕಾರನು ಬಹಳ ಸುಂದರವಾಗಿ ವರ್ಣಿಸಿದ್ದಾನೆ.[೯] ಹೈದರನು ಬಿದನೂರನ್ನು ಗೆದ್ದು ಇದಕ್ಕೆ 'ಹೈದರ್ ನಗರ' ಎಂದು ಮರುನಾಮಕರಣ ಮಾಡುತ್ತಾನೆ.[೧೦] ಇಲ್ಲಿ ನಾಣ್ಯಗಳನ್ನು ಸಹಾ ಟಂಕಿಸಿದ್ದಾನೆ, ಕೆಳದಿನಾಯಕರ ಕಾಲದಲ್ಲಿ ನಗರದಲ್ಲಿ ಟಂಕಸಾಲೆಯಿದ್ದು ಇದನ್ನೇ ಹೈದರಲಿ ಮುಂದುವರೆಸಿಕೊಂಡು ಇಲ್ಲಿಯ ಪರಿಣಿತರನ್ನು ಬಳಸಿಕೊಂಡಿರುವ ಸಾಧ್ಯತೆ ಕಂಡುಬರುತ್ತದೆ. ಇದರಲ್ಲಿ ನಗರದಲ್ಲಿಯು ರಾಕೆಟ್‌ಗಳನ್ನು ತಯಾರು ಮಾಡಲು ಈ ಪರಣಿತರನ್ನು ಬಳಸಿಕೊಂಡಿರಬಹುದು. ಟಿಪ್ಪುವಿನ ನಾಲ್ಕು ತಾರಾಮಂಡಲಗಳಲ್ಲಿ ನಗರವು ಒಂದಾಗಿತ್ತು, ಉಳಿದವು ಬೆಂಗಳೂರು, ಶ್ರೀರಂಗಪಟ್ಟಣ ಹಾಗೂ ಚಿತ್ರದುರ್ಗ[೧೧] ಆದರೆ ಈಗಾಗಲೇ ಶ್ರೀರಂಗಪಟ್ಟಣದಲ್ಲಿ ರಾಕೆಟ್ ಸಂಗ್ರಹಣೆಯ ಉಗ್ರಾಹಣ ಸಿಕ್ಕಿದೆ, ನಗರದಲ್ಲಿ ರಾಕೆಟ್‌ಗಳು ದೊರೆತಿವೆ ಆದರೆ ತಯಾರಿಕಾ ಘಟಕ ದೊರೆತಿರುವುದಿಲ್ಲ ಅದರೆ ಇದು ಮುಂದಿನ ಹೆಚ್ಚಿನ ಅಧ್ಯಯನ ಅನ್ವೇಷಣೆ ಹಾಗೂ ಸಂಶೋಧನೆಯಲ್ಲಿ ಕಂಡುಹಿಡಿಯಬಹುದಾಗಿದೆ. ಈಗ ಬೆಂಗಳೂರು ಚಿತ್ರದುರ್ಗದಲ್ಲಿ ರಾಕೆಟ್‌ಗಳ ಬಗ್ಗೆ ಹೆಚ್ಚಿನ ಅನ್ವೇಷಣೆ

ಸಂಶೋಧನೆ ನಡೆಯಬೇಕಾಗಿರುತ್ತದೆ. ೨೦೦೫ರಲ್ಲಿ ಸೋತ್ಬಿಯವರು ನಡೆಸಿದ ರಾಬಿನ್ ವಿಗ್ಗಿನ್ಸ್‌ನ್ನಿನ ಟಿಪ್ಪು ಸುಲ್ತಾನನ ಹಾಗೂ ಸಂಗ್ರಹಣೆಗಳ ಮಾರಾಟದಲ್ಲಿ ಒಂದು ಬೆಳ್ಳಿಯ ಹಿಡಿಯಿರುವ ಫ್ಲಿಂಟ್ ಲಾಕ್ ಪಿಸ್ತೂಲ್[೧೨] ಹಾಗೂ ಮ್ಯಾಚ್ ಲಾಕ್ ಬಂದೂಕದ ನಳಿಕೆಯಿದ್ದವು[೧೩] ಇವೆರಡರ ಮೇಲೂ ಇವು ತಯಾರಾದ ಸ್ಥಳ 'ನಗರ' ಎಂದಿತ್ತು. ಕನ್ನಡದಲ್ಲಿ ಬಿದನೂರಿಗೆ ಇನ್ನೊಂದು ಹೆಸರು 'ಬಿದಿರೂರು' ಅಂದರೆ ಬಿದಿರಿನ ಊರು ಎಂದು. ದಟ್ಟಕಾಡಿರುವ ಈ ಪ್ರದೇಶವು ಈ ರಾಕೆಟ್‌ಗಳಲ್ಲಿ ಕಂಡುಬರುವ ಬಿದಿರಿನ ಕೋಲುಗಳ ಉಗಮಸ್ಥಾನವಾಗಿರಬಹುದು ಹಾಗೂ ರಾಕೆಟ್‌ಗಳಿಗೆ ತುಂಬುತಿದ್ದ ಮದ್ದಿಗೆ ಬೇಕಾದ ಇದ್ದಿಲು ಇತರೆ ವಸ್ತುಗಳು ಈ ಕಾಡು ಪ್ರದೇಶದಲ್ಲಿ ದೊರೆಯುತ್ತಿದ್ದವು ಎನ್ನಬಹುದು. ಒಟ್ಟಾರೆಯಾಗಿ ಈ ಎಲ್ಲಾ ಅಂಶಗಳು ನಗರದಲ್ಲಿ ರಾಕೆಟ್‌ಗಳು ಹೆಚ್ಚಿನ ಸಂಖ್ಯೆಯಲ್ಲಿ ಸಿಕ್ಕಿದ್ದಕ್ಕೆ ಕಾರಣಗಳಿರಬಹುದು ಎಂದು ತಿಳಿಯುತ್ತಾ ಇವು ಮೈಸೂರಿನ ರಾಕೆಟ್‌ಗಳೆಂದು ಹೈದರ್ ಮತ್ತು ಟಿಪ್ಪು ಸುಲ್ತಾನನ ಕಾಲದವುಗಳಿರಬಹುದು ಎಂದು ಈ ಮೇಲಿನ ಎಲ್ಲಾ ಅಂಶಗಳಿಂದ ಸಮರ್ಥಿಸಬಹುದಾಗಿದೆ.

**ರಾಕೆಟ್‌ಗಳ ಪರಿಶೀಲನೆ:** ರಾಕೆಟ್‌ಗಳು ಕಬ್ಬಿಣದಿಂದ ಕೂಡಿದ ಸಿಲೆಂಡರಿಕ್ (ಕೊಳವೆ) ಆಕಾರದಲ್ಲಿವೆ. ಇವುಗಳು ಎರಡೂ ತುದಿಗಳನ್ನು ಲೋಹದ ಬಿಲ್ಲೆಗಳಿಂದ ಮುಚ್ಚಲಾಗಿದೆ. ಸಿಲಿಂಡಾರಿಕ್ ಹಿಂಬಾಗದಲ್ಲಿ ದುಂಡಾಗಿನ ರಂಧ್ರವಿದ್ದು ಇಲ್ಲಿ ಬತ್ತಿ ಇರುವುದು ಕಂಡುಬರುತ್ತದೆ. ರಾಕೆಟ್‌ನ ಮುಂಭಾಗದಲ್ಲಿ ಸುಕ್ಕಗಳ ಸುತ್ತ ಕಂದುಬಣ್ಣದ ವಸ್ತುವಿರುವುದು ಕಂಡುಬರುತ್ತದೆ.

**ರಾಕೆಟ್‌ಗಳ ಅಳತೆ, ತೂಕ ಮತ್ತು ವ್ಯಾಸ:** ಹತ್ತು ರಾಕೆಟ್‌ಗಳ ಅಳತೆ, ತೂಕ ಮತ್ತು ವ್ಯಾಸವನ್ನು ಗುರುತಿಸಲಾಯಿತು. ರಾಕೆಟ್‌ಗಳ ಉದ್ದ ೨೦೭, ೧೯೦, ೨೦೦, ೧೯೫, ೧೧೧, ೧೯೫, ೨೪೦, ೨೫೦, ೨೫೨, ೨೬೦ ಮಿ.ಮೀ.ಗಳು, ವ್ಯಾಸ ೩೭, ೩೭, ೩೬, ೩೬, ೩೩, ೩೭, ೪೪, ೪೮, ೫೨, ೬೫ ಮಿ.ಮೀ.ಗಳು, ತೂಕ ೦.೪೮೬, ೦.೫೧೪, ೦.೫೯೮, ೦.೫೧೪, ೦.೩೭೨, ೦.೫೦೬, ೦.೮೭೨, ೧.೦೪೮, ೧.೩೦೦, ೧.೭೫೦ ಗ್ರಾಂಮ್‌ಗಳ ತೂಕವನ್ನು ಹೊಂದಿದ್ದವು.

**ರಾಕೆಟ್ ಲೋಹ ಹಾಗೂ ಮದ್ದಿನ ವೈಜ್ಞಾನಿಕ ವಿಶ್ಲೇಷಣೆ:** ಶಿವಮೊಗ್ಗದ ಪರ್ಫೆಕ್ಟ್ ಅಲಾಯ್ ಕಾಂಪೊನೆಂಟ್ಸ್ ಲಿಮಿಟೇಡ್‌ನ ಪ್ರಯೋಗಾಲಯದಲ್ಲಿ ರಾಕೆಟ್‌ಗಳನ್ನು ಪರೀಕ್ಷೆಗೆ ಒಳಪಡಿಸಲಾಯಿತು. ಪ್ರಯೋಗಾಲಯಕ್ಕೆ ಕೊಟ್ಟಂತಹ ರಾಕೆಟ್‌ಗಳನ್ನು ಸ್ಪೇಕ್ಟ್ರೋ ಎಂ–೧೦ರಲ್ಲಿ ಅಪ್ಟಿಕಲ್ ಎಮೀಷನ್ ಸ್ಪೇಕ್ಟ್ರೋ ಕಾಪಿಯ ಮೂಲಕ ಸ್ಟೆಷನರಿ ಮೆಟಲ್ಸ್ ಅನಾಲಿಸಿಸ್‌ಗೆ ಒಳಪಡಿಸಲಾಯಿತು. ಈ ವಿಶ್ಲೇಷಣೆಯ ನಂತರ ರಾಕೆಟ್‌ಗಳ ಒಳಗಿರುವ ಮದ್ದು (ಪುಡಿ) ಹಾಗೂ ಲೋಹದ ಬೋರಿಂಗುಗಳ (ಕಣಗಳ) ವೆಟ್ ಅನಾಲಿಸಿಸ್ ಮಾಡಲಾಯಿತು. ಆಗ ಬಂದಂತಹ ಫಲಿತಾಂಶ ಈ ಕೆಳಕಂಡಂತೆ ಇದೆ.

**ರಾಕೆಟ್‌ನ ವ್ಯಾಸದ ಸ್ಪಾರ್ಕಿಂಗ್ ಪರೀಕ್ಷೆ:** ರಾಕೆಟ್‌ನ ಹೊರ ವ್ಯಾಸದ ಮೇಲೆ ಎರಡು ಜಾಗದಲ್ಲಿ ಸ್ಪಾರ್ಕಿಂಗ್ ಅಂದರೆ ವಸ್ತುವಿನ ಸ್ಯಾಂಪ್ಲಿಂಗ್‌ನ್ನು ಮಾಡಲಾಯಿತು.

| ಧಾತು | C | Si | Mn | P | S | Cr | Mo | Ni | Al | Co | O |
|---|---|---|---|---|---|---|---|---|---|---|---|
| ಕಂಡುಬಂದ%(OD1) | ೦.೨೫೩೦ | ೦.೦೦೪೬ | ೦.೦೦೩೬ | ೦.೦೨೪೮ | ೦.೦೦೨೧ | ೦.೦೦೦೯ | ೦.೦೦೧೦ | ೦.೦೦೪೮ | ೦.೦೦೧೬ | ೦.೦೦೨೭ | <೦.೦೦೧ |
| ಕಂಡುಬಂದ%(OD2) | ೦.೩೩೦೦ | ೦.೦೦೬೪ | ೦.೦೦೯೬ | ೦.೦೧೨೨ | ೦.೦೦೩೬ | <೦.೦೦೦೧ | ೦.೦೦೦೮ | ೦.೦೦೪೪ | ೦.೦೦೬೪ | ೦.೦೦೨೮ | >೦.೦೨೪ |

| ಧಾತು | Cu | Nb | Ti | V | W | Pb | Sb | Ta | B | N | Fe |
|---|---|---|---|---|---|---|---|---|---|---|---|
| ಕಂಡುಬಂದ%(OD1) | ೦.೦೦೩೯ | ೦.೦೦೨ | <೦.೦೦೦ | ೦.೦೦೦೬ | ೦.೦೦೬೭ | ೦.೦೦೨೨ | ೦.೦೦೨೨ | <೦.೦೦೧ | <೦.೦೦೦೦ | ೦.೦೨೯ | ೯೯.೭೦ |
| ಕಂಡುಬಂದ%(OD2) | ೦.೦೦೪೮ | ೦.೦೦೨೦ | <೦.೦೦೦೧ | ೦.೦೦೦೬ | ೦.೦೦೬೯ | ೦.೦೦೨೮ | ೦.೦೦೨೭ | <೦.೦೦೧ | <೦.೦೦೦೦ | ೦.೦೦೩ | ೯೯.೪೦೦ |

ಈ ಮೇಲಿನ ಫಲಿತಾಂಶಗಳನ್ನು ದೃಢಿಪಡಿಸಿಕೊಳ್ಳಲು ಬೋರಿಂಗುಗಳ (ಕಣಗಳ) ಮೇಲೆ ವೇಟ್ ಅನಾಲಿಸಿಸ್ ಮಾಡಲಾಯಿತು. ಪ್ರತಿ ಬಾರಿಯೂ ಪರಿಶೀಲನೆಯಲ್ಲಿ ಭಿನ್ನವಾದ ಮಾದರಿಗಳನ್ನು ಒಳಗೊಂಡ ಪ್ರಯೋಗಗಳನ್ನು ಎರಡು ಬಾರಿ ಮಾಡಲಾಯಿತು. ಇವುಗಳ ಫಲಿತಾಂಶಗಳನ್ನು ಪಟ್ಟಿ ಮಾಡಲಾಗಿದೆ.

| ಧಾತು | C | Si | mn | P | S | Cr | Mo | Ni | Al | Co |
|---|---|---|---|---|---|---|---|---|---|---|
| ಕಂಡುಬಂದ %(ಬೋರಿಂಗ್-೧) | ೦.೨೮೯ | ೦.೦೦೮೯ | Nil | ೦.೦೩೨೧ | Nil | Nil | Nil | Nil | Nil | Nil |
| ಕಂಡುಬಂದ %(ಬೋರಿಂಗ್-೨) | ೦.೨೭೭ | ೦.೦೦೮೭ | Nil | ೦.೦೨೮೭ | Nil | Nil | Nil | Nil | Nil | Nil |

| ಧಾತು | Cu | Nb | V | W |
|---|---|---|---|---|
| ಕಂಡುಬಂದ %(ಬೋರಿಂಗ್-೧) | Nil | Nil | Nil | Nil |
| ಕಂಡುಬಂದ %(ಬೋರಿಂಗ್-೨) | Nil | Nil | Nil | Nil |

ಕೊನೆಯದಾಗಿ ರಾಕೆಟ್‌ನ ಒಳಗಿನ ಪುಡಿಯ (ಮದ್ದು) ವೆಟ್ ಅನಾಲಿಸಿಸ್ ಮಾಡಲಾಯಿತು. ಇದರಲ್ಲಿಯೂ ಸಹಾ ಒಂದೇ ರಾಕೆಟ್‌ನಿಂದ ಹೊರತೆಗೆದ ಪುಡಿಯ ಎರಡು ಗುಂಪುಗಳನ್ನು ಪ್ರತ್ಯೇಕವಾಗಿ ಪರೀಕ್ಷೆಗೆ ಒಳಪಡಿಸಲಾಯಿತು. ಆದರೆ ಈ ರಾಕೆಟ್‌ನ ಒಳಗಡೆ ಇದ್ದ ಮದ್ದಿನ ಪುಡಿಯನ್ನು ಹೊರತೆಗೆಯುವಾಗ ಕಣ್ಣಿಗೆ ಆಗಲಿ ಕೈಗೆ ಆಗಲಿ ಯಾವುದೇ ರೀತಿಯ ತೊಂದರೆಯಾಗಲಿಲ್ಲ. ಫಲಿತಾಂಶವನ್ನು ಪಟ್ಟಿ ಮಾಡಲಾಗಿದೆ.

| ಧಾತು | ಇದ್ದಲು/ಇಂಗಾಲ | S | ನೈಟ್ರೇಟ್ |
|---|---|---|---|
| ಪರೀಕ್ಷೆಯಲ್ಲಿ ಕಂಡುಬಂದ-೧ | ೧೧.೭೭೮೦ | ೯.೯೭೦ | ಉಳಿದದ್ದು |
| ಪರೀಕ್ಷೆಯಲ್ಲಿ ಕಂಡುಬಂದ-೨ | ೧೧.೩೨೪೦ | ೧೦.೩೨೦ | ಉಳಿದದ್ದು |

ರಾಕೆಟ್‌ನ ಮುಂಭಾಗ ಮತ್ತು ಹಿಂಭಾಗದ ಬಿಲ್ಲೆಗಳ (ಮುಚ್ಚಳ) ಮೇಲೆ ಸ್ಪಾರ್ಕಿಂಗ್ ಮಾಡಲಾಯಿತು ಫಲಿತಾಂಶ ಕೊಡಲಾಗಿದೆ.

| ಧಾತು | C | Si | Mn | P | S | Cr | Mo | Ni | Al | Co | O |
|---|---|---|---|---|---|---|---|---|---|---|---|
| ಕಂಡುಬಂದ %(ಮುಂಭಾಗ ಬಿಲ್ಲೆ) | ೦.೦೨೯೬ | ೦.೨೦೭೦ | ೦.೦೩೨೭ | ೦.೧೧೪೦ | ೦.೦೨೩೨ | ೦.೦೧೫೧ | ೦.೦೦೩೭ | ೦.೦೦೮೩ | ೦.೦೨೨೫ | ೦.೦೫೬ | >೦.೦೨೪ |
| ಕಂಡುಬಂದ % (ಹಿಂಭಾಗದ ಬಿಲ್ಲೆ) | ೦.೩೧೬೦ | ೦.೦೦೩೪ | ೦.೦೦೫೪ | ೦.೦೪೨೨ | ೦.೦೦೩೨ | <೦.೦೦೦ | ೦.೦೦೦೮ | ೦.೦೦೮೦ | ೦.೦೦೧೬ | ೦.೦೦೫೩ | >೦.೦೦೧ |

| ಧಾತು | Cu | Nb | Ti | V | W | Pb | Sb | TA | B | N | Fe |
|---|---|---|---|---|---|---|---|---|---|---|---|
| ಕಂಡುಬಂದ % (ಮುಂಭಾಗ) | ೦.೦೨೮೨ | ೦.೦೦೦೨ | ೦.೦೦೦೯ | ೦.೦೦೩೧ | ೦.೦೦೮೦ | ೦.೦೦೩೧ | ೦.೦೧೨೩ | ೦.೦೦೨೯ | <೦.೦೦೦ | ೦.೧೧೩ | ೯೯.೩೦೦ |
| ಕಂಡುಬಂದ % | ೦.೦೨೦೦ | <೦.೦೦೦ | <೦.೦೦೦ | ೦.೦೦೧೨ | ೦.೦೦೭೪ | ೦.೦೦೩೬ | ೦.೦೧೧೪ | ೦.೦೦೩೩ | <೦.೦೦೦ | <೦.೦೦೦ | ೯೯.೬೦೦ |

ಈ ಮೇಲಿನ ಫಲಿತಾಂಶಗಳನ್ನು ದೃಢಿಪಡಿಸಿಕೊಳ್ಳಲು ಬೋರಿಂಗ್‌ಗಳ (ಕಣಗಳ) ಮೇಲೆ ವೇಟ್ ಅನಾಲಿಸಿಸ್ ಮಾಡಲಾಯಿತು. ಪ್ರತಿ ಪರಿಶೀಲನೆಗೂ ಭಿನ್ನವಾದ ಮಾದರಿಗಳನ್ನು ಒಳಗೊಂಡ ಪ್ರಯೋಗಗಳನ್ನು ಎರಡು ಬಾರಿ ಮಾಡಲಾಯಿತು, ಫಲಿತಾಂಶ ನೀಡಲಾಗಿದೆ.

| ಧಾತು | C | Si | mn | P | S | Cr | Mo | Ni | Al | Co |
|---|---|---|---|---|---|---|---|---|---|---|
| ಬೋರಿಂಗ್ –೧ ಕಂಡುಬಂದ % | ೦.೦೬೮ | ೦.೦೧೭೭ | Nil | ೦.೦೮೭೦ | ೦.೦೨೭೦ | ೦.೩೨ | Nil | Nil | ೦.೦೧೭೦ | Nil |
| ಕಂಡುಬಂದ % ಬೋರಿಂಗ್ –೨ | ೦.೦೫೪ | ೦.೧೩೨ | Nil | ೦.೦೬೬೦ | ೦.೦೧೪೪ | ೦.೦೫೮ | Nil | Nil | ೦.೦೨೮೪ | Nil |

| ಧಾತು | Cu | Nb | V | W |
|---|---|---|---|---|
| ಕಂಡುಬಂದ % ಬೋರಿಂಗ್ –೧ | ೦.೦೯೩೦ | Nil | Nil | Nil |
| ಕಂಡುಬಂದ ಬೋರಿಂಗ್ –೨ | ೦.೦೮೭೦ | Nil | Nil | Nil |

ಒಂದೇ ರಾಕೆಟಿನಿಂದ ಹೊರತಗೆದ ಪುಡಿಯನ್ನು ಎರಡು ಗುಂಪುಗಳಾಗಿ ಪ್ರತ್ಯೇಕ ಮಾಡಿ ಪರೀಕ್ಷೆಗೆ ಒಳಪಡಿಸಲಾಯಿತು. ಇದರ ಫಲಿತಾಂಶವನ್ನು ನೀಡಲಾಗಿದೆ.

| ಧಾತು | ಇದ್ದಿಲು/ಇಂಗಾಲ | S | ನೈಟ್ರೇಟ್ |
|---|---|---|---|
| ಪರೀಕ್ಷೆ ಒಂದರಲ್ಲಿ ಕಂಡುಬಂದ % | ೧೨.೮೨೦೦ | ೮.೮೪೦ | ಉಳಿದದ್ದು |
| ಪರೀಕ್ಷೆ ಎರಡರಲ್ಲಿ ಕಂಡುಬಂದದ್ದು % | ೧೧.೮೭೦೦ | ೯.೩೨೦ | ಉಳಿದದ್ದು |

ರಾಕೆಟ್‌ನ ಮೈಕ್ರೋಸೆಕ್ಷನ್ ಮಾಡಿ ಅದರ ಅಚ್ಚೊತ್ತಿ ಚಿತ್ರೀಕರಿಸಲಾಯಿತು, ರಾಕೆಟ್‌ಗಳನ್ನು ಪ್ರಯೋಗ ಶಾಲೆಯಲ್ಲಿ ಪ್ರಯೋಗ ಮಾಡಿದಾಗ ಬಂದಂತಹ ಫಲಿತಾಂಶ ಎಮಿಶನ್, ಸ್ಪೆಕ್ಟ್ರೋಸ್ ಕಾಪಿ ಮತ್ತು ವೆಟ್ ಅನಾಲಿಸಿಸ್ ಪರೀಕ್ಷೆಗಳಿಂದ ಇಂಗಾಲವು ೦.೨೫% ರಿಂದ ೦.೩೩% ವರೆಗೂ ಇಂಗಾಲವು ೦.೨೯% ರಿಂದ ೦.೩೧೬% ವರೆಗೂ ಇರುವುದು ಕಂಡುಬರುತ್ತದೆ. ಇವುಗಳಲ್ಲಿ ಸ್ವಲ್ಪ ಭಿನ್ನತೆ ಕಂಡುಬಂದರೂ ಈ ರಾಕೆಟ್‌ಗಳು ಕಡಿಮೆ ಇಂಗಾಲ ಉಕ್ಕಿನವು ಎಂಬುದು ಸ್ಪಷ್ಟವಾಗಿದೆ. ಸಿಲಿಕಾನ್, ಮ್ಯಾಂಗನೀಸ್, ಗಂಧಕ, ರಂಜಕ ಇತ್ಯಾದಿಗಳು ತೀರಾ ಕಡಿಮೆ ಪ್ರಮಾಣದಲ್ಲಿವೆ. ಇಲ್ಲಿ ಕಾರ್ಬೈಡುಗಳಾಗಬಹುದಾದ ಬೇರೆ ಧಾತುಗಳು ಇಲ್ಲಿ ಕಂಡುಬರುವುದಿಲ್ಲ, ಇಂಗಾಲದ ಪ್ರಮಾಣವು ಬಹಳ ಕಡಿಮೆ ಪ್ರಮಾಣದಲ್ಲಿದ್ದು ಇಷ್ಟು ಕಡಿಮೆ ಪ್ರಮಾಣದ ಇಂಗಾಲವನ್ನು ಬಳಸಿ ಮಾಡುವುದು ಕಷ್ಟವೇ ಆಗಿದೆ. ಕಬ್ಬಿಣದಲ್ಲಿ ಇಂಗಾಲದ ಪ್ರಮಾಣ ಕಡಿಮೆ ಇದ್ದರೆ ಸಿಲೆಂಡಾರಿಕ್(ಕೊಳವೆ) ಆಕಾರದಲ್ಲಿ ಮಾಡಲು ಸಾಧ್ಯವಾಗುತ್ತದೆ. ಆದ್ದರಿಂದ ಇವರು ಕಾಸ್ಟಿಂಗ್ ಇಲ್ಲದೇ ಕಡಿಮೆ ಪ್ರಮಾಣದ ಇಂಗಾಲವನ್ನು ಬಳಸಿ ರಾಕೆಟಿನ ಹೊರ ಕವಚವನ್ನು ತಯಾರು ಮಾಡಿರುವುದು ಅದು ಇಂದಿನ ವಿಜ್ಞಾನಿಗಳಿಗೇ ಸವಾಲೇ ಎಂದು ಹೇಳಬಹುದು. ೧೮ನೇ ಶತಮಾನದ ಅರ್ಧಭಾಗದಲ್ಲಿಯೇ ಮೈಸೂರಿನ ಶಸ್ತ್ರಾಸ್ತ್ರಗಾರರೂ, ಕಮ್ಮಾರರು ಕಡಿಮೆ ಇಂಗಾಲವನ್ನು ಬಳಸಿ ಕಬ್ಬಿಣವನ್ನು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾತಿಸುತ್ತಿದ್ದುದು ಅವರ ತಂತ್ರಗಾರಿಕೆಗೆ ಹಿಡಿದ ಕನ್ನಡಿ ಎನ್ನಬಹುದು.

ರಾಕೆಟ್‌ನ ಮೈಕ್ರೋ ರಚನೆಯು ಫೆರಿಟಿಕ್ ರಚನೆ ಹೊಂದಿರುವುದನ್ನು ಕಾಣಬಹುದು.೧೪ ರಾಕೆಟ್‌ನ ಕವಚವು ಅಂದರೆ ಹೊರಮೈ ಮಿಶ್ರರೂಪದಾಗಿದ್ದು ೦.೩% ರವರೆಗೂ ಇಂಗಾಲದಿಂದ ಕೂಡಿದೆ. ಮೃದು ಕಬ್ಬಿಣದಿಂದ ಮೆತ್ತನೆಯ ಉಕ್ಕಿನವರೆಗಿನ ಸಂಯೋಜನೆಗಳು ಕಾಣಿಸುತ್ತವೆ. ಮೈಕ್ರೋ ರಚನೆಯಲ್ಲಿ ಪರ್ಲೈಟ್ ಇಲ್ಲದಿರುವುದರಿಂದ ಇದರಿಂದ ಖಚಿತವಾಗುತ್ತದೆ. ರಾಕೆಟ್ ಕವಚದ ಎರಡು ಕೊನೆಯಲ್ಲಿರುವ ಬಿಲ್ಲೆಗಳಲ್ಲಿ ಇಂಗಾಲದ ಪ್ರಮಾಣ ಶೇಕಾಡ ೦.೩% ರಷ್ಟು ಇದ್ದು ಮೃದುವಾದ ಉಕ್ಕಿನ (ಕಬ್ಬಿಣದ) ಸಂಯೋಜನೆ ಹೊಂದಿದೆ. ಇಂಗಾಲದ ಪ್ರಮಾಣವು ಕಡಿಮೆಯಿರುವುದು ಮ್ಯಾಟ್ರಿಕ್ಸಿನ್ ಅಂಚಿನಲ್ಲಿ ಅತಿವಿರಳವಾಗಿ ಪರ್ಲೈಟ್ ಇರುವುದರಿಂದಲೂ ಸ್ಪಷ್ಟವಾಗುತ್ತದೆ. ರಂಜಕವು ಶೇಕಾಡ ೦.೧

ರಕ್ಷಿರುವುದು ಪ್ರಮುಖವಾಗಿದ್ದು ಇದು ರಾಕೆಟ್‌ಗಳು ತುಕ್ಕು ಹಿಡಿಯುವುದನ್ನು ತಡೆಯುತ್ತದೆ. ಇದರಿಂದ ಸುಮಾರು ೨೫೦ ವರ್ಷಗಳ ಕಾಲ ನೀರಲ್ಲಿದ್ದರು ಸ್ವಲ್ಪ ತುಕ್ಕು ಹಿಡಿದಿರುವುದು ವಿಶೇಷವಾಗಿದೆ. ಈ ರಾಕೆಟ್‌ಗಳ ಮೈಕ್ರೋ ರಚನೆ ಹಾಗೂ ಸಂಯೋಜನೆಯನ್ನು ದೆಹಲಿಯ ಕಬ್ಬಿಣದ ಸ್ತಂಭದ ಸಂಯೋಜನೆಗೆ ಹೋಲಿಸಬಹುದಾಗಿದ್ದು೧೫ ತುಂಬಾ ಕುತೂಹಲಕಾರಿಯಾಗಿದೆ. ದಕ್ಷಿಣ ಭಾರತದ ಕುಲುಮೆಯ ಪರಂಪರೆಯು ರಾಕೆಟ್ಟಿನ ಕವಚ೧೬ ಅಂದರೆ ರಾಕೆಟಿನ ತಯಾರಿಕೆಯ ತಂತ್ರಜ್ಞಾನದಲ್ಲಿ ಕಂಡುಬರುತ್ತದೆ. ರಾಕೆಟ್‌ನ ಹೊರಮೈ ಕವಚದ ಮೈಕ್ರೋ ರಚನೆಯಿಂದ ಕಬ್ಬಿಣವನ್ನು ಕುಲುಮೆಯಿಂದ ಕಾಯಿಸಿ ಗಟ್ಟಿಗೊಳಿಸಿರುವುದು ಕಂಡುಬರುತ್ತದೆ. ರಾಕೆಟ್‌ನ ಹೊರಮೈ ಅಂದರೆ ಕವಚವನ್ನು ಕೊಳವೆಯಾಕಾರ ಅಂದರೆ ಸಿಲೆಂಡಾರಿಕ್ ಆಕಾರದಲ್ಲಿ ಮಾಡಲು ಅದನ್ನು ಅದೇ ಆಕಾರದ ಅಡಿಗಲ್ಲಿನ ಮೇಲಿಟ್ಟು ಹೊಡೆದು ಮಾಡಿರಬಹುದು ಎಂದು ಊಹಿಸಬಹುದಾಗಿದೆ. ಸಿಲೆಂಡರ್ (ಕೊಳವೆ) ಎರಡೂ ಕೊನೆಗಳಲ್ಲಿರುವ ಬಿಲ್ಲೆಗಳನ್ನು ಸುತ್ತಿಗೆಯಿಂದ ಹೊಡೆದು ಸೇರಿಸಿದೆಯೆಂದು ಅದರ ಕೊನೆಯಲ್ಲಿರುವ ತೆಳುವಾದ ಹಾಗೂ ಚಪ್ಪಟೆಯಗಿರುವ ಭಾಗಗಳನ್ನು ನೋಡಿ ಹೇಳಬಹುದು.೧೭ಐ–ಆಕಾರದ ಸಂಧಿಯಲ್ಲಿರುವ ಮೈಕ್ರೋರಚನೆಯಲ್ಲಿ ಯಾವುದೇ ಬದಲಾವಣೆಗಳು ಮೈಕ್ರೋಗ್ರಾಫಿನಲ್ಲಿ ಕಂಡುಬಂದಿಲ್ಲ. ಉರುಳೆಯ ತುದಿಯಲ್ಲಿ ಐ–ಆಕಾರದ ಸಂಧಿ ಉಂಟಾಗಲು ವೆಲ್ಡಿಂಗ್ ಮಾಡಿರುವುದಕ್ಕೆ ಯಾವ ಪುರಾವೆಯು ಇಲ್ಲ. ಈಗಾಗಿ ಮದ್ದಿನ ಪುಡಿಯನ್ನು ತುಂಬಿದ ನಂತರ ಶೀತಲ ಫೋರ್ಜಿಂಗ್ ಮಾಡಿ ಇದನ್ನು ಸಾಧಿಸಿರಬಹುದು.೧೮ ಮೈಸೂರು ರಾಕೆಟ್‌ಗಳ ಬಗ್ಗೆ ತಿಳಿದುಕೊಳ್ಳಲು ಇನ್ನೂ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ ಎನ್ನಬಹುದು.

**ರಾಕೆಟ್‌ನ ಮದ್ದಿನ ವಿಶ್ಲೇಷಣೆ:** ರಾಕೆಟ್‌ನ ಮದ್ದಿನ ವೇಟ್ ಅನಾಲಿಸಿಸ್ ಸಂಶೋಧನೆಯಿಂದ ಶೇಕಾಡ ೧೨% ಇದ್ದಿಲು ಅಂದರೆ ಇಂಗಾಲ, ಶೇಕಾಡ ೯% ಗಂಧಕ ಹಾಗೂ ಉಳಿದ ಅಂಶವು ೭೯% ನೈಟ್ರೇಟ್ ಇರುವುದು ಕಂಡುಬರುತ್ತದೆ. ನೀರಿನಲ್ಲಿ ಲೀಚಿಗ್ನಿಂದ ಆಗಿರಬಹುದಾದ ವಿಭಜನೆಯನ್ನು ಪರಿಗಣಿಸಿದರೆ ಇದು ಸಿಡಿಮದ್ದಿನ ಸಂಯೋಜನೆಯನ್ನೇ ಹೊಂದಿದೆ. ಗಂಧಕ ೧೦% ಇದ್ದಿಲು ೭೫% ಪೊಟೇಶಿಯಂ ನೈಟ್ರೇಟ್ ಅಥವಾ ಸಾಲ್ಟ್‌ಪೀಟರ್ ಇರುವುದು ಕಂಡುಬರುತ್ತದೆ, ಮೈಸೂರಿನಲ್ಲಿ ಸಾಲ್ಟ್‌ಪೀಟರ್ ಬೆಲೆಬಾಳುವ ಪದಾರ್ಥವಾಗಿತ್ತು. ಇದು ಒಂದು ತರಹ ಸ್ಪಟಿಕೀಯ ಉಪ್ಪು ಪದಾರ್ಥ ಟಿಪ್ಪು ಸುಲ್ತಾನನು ತನ್ನ ಜಿಲ್ಲಾಧಿಕಾರಿಗಳಿಗೆ ಸಾಲ್ಟ್‌ಪೀಟರನ್ನು ಸಂಪಾದಿಸುವ ಅವಶ್ಯಕತೆಯನ್ನು ಕಂದಾಯದ ಕಾಯಿದೆ ಮೂಲಕ ಒತ್ತಿ ಹೇಳುತ್ತಾನೆ ಹಾಗೂ ಯಾವ ದರದಲ್ಲಿ ಮತ್ತು ಎಷ್ಟು ಸಾಲ್ಟ್‌ಪೀಟರನ್ನು ಸಂಪಾದಿಸಬೇಕೆಂದು ತಿಳಿಸುತ್ತಾನೆ.೧೯

ರಾಕೆಟ್ ಒಳಭಾಗದ ಪರೀಕ್ಷೆಗಳು : ರಾಕೆಟ್‌ನ ಮೇಲ್ಮೈ ಪರೀಕ್ಷಿಸಿದ ನಂತರ ಒಳಭಾಗವನ್ನು ಪರೀಕ್ಷಿಸಲಾಯಿತು. ಮೊದಲು ರಾಕೆಟ್ಟಿನ ಎರಡೂ ಕೋಣೆಗಳಲ್ಲಿ ಸುಮಾರು ೧೫ ಮಿ, ಮೀ ರಷ್ಟು ಕತ್ತರಿಸಲಾಯಿತು, ನಂತರ ಉಳಿದ ಬಾಗವನ್ನು ಉದ್ದಕ್ಕೆ ಸೀಳಿ ಎರಡು ಸಮಭಾಗಗಳಾಗಿ ಮಾಡಲಾಯಿತು,

ಈ ಹಿಂದೆ ಹೇಳಿದ ಕಪ್ಪು ಬಣ್ಣದ ವಸ್ತುವು ರಾಕೆಟ್ಟಿನ ಒಳಭಾಗದಲ್ಲಿರುವುದನ್ನು ನೋಡಬಹುದು. ಇದು ಜೇಡಿಮಣ್ಣು ಎಂದು ದೃಢಪಟ್ಟಿದೆ. ಸಿಡಿಮದ್ದು ಹಾಗೂ ರಾಕೆಟ್‌ನ ಕವಚದ ನಡುವೆ ಉಷ್ಣ ನಿರೋಧಕವಾಗಿ ಹಾಗೂ ಒಳಗಿನ ಶಾಖದಿಂದ ಕವಚವನ್ನು ರಕ್ಷಿಸುತ್ತದೆ. ಇಲ್ಲಿ ಜೇಡಿಮಣ್ಣನ್ನು ಉಷ್ಣನಿರೋಧಕವಾಗಿ ಬಳಸಿರುವುದು ಗಮನಾರ್ಹ ಹಾಗೂ ಇದು ನಮ್ಮ ಮೈಸೂರು ರಾಕೆಟ್ ತಯಾರಿಕೆಗೆ ತಿಳಿದಿರುವುದು ಗಮನಾರ್ಹ ಜೇಡಿಮಣ್ಣ ನ್ನು ಉಷ್ಣ ನಿರೋಧಕವಾಗಿ ಬಳಸದಿದ್ದರೆ ರಾಕೆಟ್ ಉಡಾವಣೆ ಸಾಧ್ಯವಿಲ್ಲ ಅಲ್ಲೆ ಬಿಸಿಯನ್ನು ತಾಳಲಾರದೆ ಬಿಳುವ ಸಾಧ್ಯತೆಯುಂಟು. ರಾಕೆಟ್‌ನ ಕವಚವು ೨ ರಿಂದ ೪ ಮಿ, ಮೀ ರಷ್ಟು ದಪ್ಪವಿದೆ, ಕವಚದಲ್ಲಿ ಹಲವು ಪದರುಗಳಿರುವುದು ಕಂಡುಬರುತ್ತದೆ. ಲೋಹದ ಅಂದರೆ ಕಬ್ಬಿಣದ ಹಾಳೆಯನ್ನು ಒಂದರ ಮೇಲೊಂದು ಇಟ್ಟಿರುವುದು ಖಚಿತವಾಗುತ್ತದೆ. ಕವಚವನ್ನು ಬಿಡಿ ಫೋರ್ಜಿಂಗ್‌ನಿಂದ ಮಾಡಲಾಗಿದೆ ಎಂಬುದಕ್ಕೆ ಇದು ಇನ್ನೊಂದು ಪುರಾವೆ ಅಂದರೆ ಇದೊಂದು ಸಾಕ್ಷಿಯಾಗಿದೆ. ಮೈಕ್ರೋ ರಚನೆಗಳ ಲೋಹ ವೈಜ್ಞಾನಿಕ ಶೋಧನೆಯಲ್ಲಿ ಕೂಡ ಇದನ್ನೆ ಗಮನಿಸಲಾಗಿತ್ತು.

ಬಿಲ್ಲೆಗಳು (ಮುಚ್ಚಳಗಳು) : ರಾಕೆಟ್‌ನ ಎರಡೂ ತುದಿಗಳಲ್ಲಿರುವ ಬಿಲ್ಲೆಗಳು ಒಂದೇ ಸಮನಾಗಿದ್ದು ಅಂದರೆ ಒಂದೇ ದಪ್ಪಕ್ಕಿದ್ದು ರಾಕೆಟ್‌ನ ಕೊಳವೆಯನ್ನು ಬಿಸಿಮಾಡಿ ಫೋರ್ಜಿಂಗ್‌ನಿಂದ ಸೇರಿಸಿದಂತೆ ಕಾಣುತ್ತದೆ.

ಮದ್ದು : ರಾಕೆಟ್‌ನಲ್ಲಿದ್ದ ಮದ್ದು ಅತೀ ಸಣ್ಣನೆ ಪುಡಿಮಾಡಿದಂತಹ ಕಪ್ಪು ಪದಾರ್ಥವಾಗಿದ್ದು ಗಂಧಕದ ವಾಸನೆಯಿಂದ ಕೂಡಿದೆ. ರಾಕೆಟ್‌ನ ಕವಚದ ಒಳಗೆ ಸರಿಯಾಗಿ ತುಂಬಲು ಇದನ್ನು ಯಾವುದಾದರು ಬಂಧಕ (ಅಂಟು) ದೊಂದಿಗೆ ಸೇರಿಸಿರುವ ಸಾಧ್ಯತೆಯಿದೆ. ಆದರೆ ನಮಗೆ ದೊರೆತಿರುವ ರಾಕೆಟ್‌ಗಳಲ್ಲಿರುವ ಬಂಧಕ ಯಾವುದು ಅಥವಾ ಬಂಧಕವನ್ನು

ಬಳಸಲಾಗಿತ್ತೆ ಎಂದು ತಿಳಿಯಲು ಬೇರೆ ಪರೀಕ್ಷೆಗಳ ಅವಶ್ಯಕತೆಯಿದೆ. ಮದ್ದನ್ನು ಅನಿಮಿತವಾಗಿ ತುಂಬಲಾಗಿದೆ. ರಾಕೆಟ್‌ನ ಒಳಗಡೆ ಅಲ್ಲಲ್ಲಿ ಜಾಗಗಳು ಖಾಲಿ ಇವೆ ಅಥವಾ ನೀರಿನಲ್ಲಿ ಬಹಳ ಕಾಲ ಮುಳುಗಿದ್ದರಿಂದ ಹೀಗಾಗಿರಬಹುದು. ಅನಿಯಮಿತವಾದ ಮದ್ದು ಇದ್ದರೆ ಸುಡುವ ಪ್ರಕ್ರಿಯೆಯೂ ಅನಿಯಮಿತವಾಗಿದ್ದು ನೂಕುಬಲವೂ ಅವ್ಯವಸ್ಥಿತವಾಗುತ್ತದೆ. ಮದ್ದನ್ನು ಕ್ರಮಬದ್ಧವಾಗಿ ತುಂಬಿರುವುದು ಕಂಡುಬರುತ್ತದೆ. ಮದ್ದನ್ನು ತುಂಬಲು ಮಡಿಕೆಯನ್ನು ಲಾಳಿಕೆಯ ರೀತಿಯಲ್ಲಿ ಬಳಸಿರುವುದನ್ನು ಕಾಣಬಹುದು. ರಾಕೆಟ್‌ನಿಂದ ಹೊರತೆಗೆದ ಮದ್ದಿಗೆ ಸ್ವಲ್ಪ ಬೆಂಕಿ ತಗಿಸಲಾಯಿತು ಆಗ ಸ್ವಲ್ಪ ಬೆಂಕಿಯ ಕಿಡಿಕಾರಿತು. ಇದು ನೀರಿನಲ್ಲಿ ೨೦೦ ರಿಂದ ೨೫೦ ವರ್ಷಗಳ ಕಾಲವಿದ್ದರಿಂದ ಸ್ಫೋಟಿಸುವ ಸತ್ವವನ್ನು ಮದ್ದು ಕಳೆದುಕೊಂಡಿದೆ. ಪೊಟೇಶಿಯಂ ನೈಟ್ರೇಟ್ ನೀರಿನಲ್ಲಿ ಕರಗುವಂತಹ ಐಯಾನಿಕ್ ಸಂಯುಕ್ತವಾಗಿದ್ದರಿಂದ ಅದು ಬಾವಿಯ ನೀರಿನಲ್ಲಿ ಕರಗಿ ಹೋಗಿರಬಹುದು. ಇದರಿಂದ ಇಂದಿಗೂ ಸಹಾ ರಾಕೆಟ್ ದೊರೆತ ಬಾವಿಯಲ್ಲಿ ಮದ್ದಿನ ವಾಸನೆಯಿಂದ ನೀರು ಕುಡಿಯಲು ಸಾಧ್ಯವಾಗುತ್ತಿಲ್ಲ.

ಕೊಳವೆ ಮತ್ತು ಬತ್ತಿ : ಎಲ್ಲಾ ಬಗೆಯ ಸಾಧನಗಳಲ್ಲಿ ನೂಕುಬಲಕ್ಕೆ ಬೇಕಾದ ದಿಕ್ಕು ಕಲ್ಪಿಸಲು ಕೊಳವೆಯೇ ಸಹಕಾರಿ ಎಂಬುದು ಸರ್ವಸಿದ್ದವಾದದ್ದು, ಕೊಳವೆಯ ಸಾಧನಗಳು ಹಾರುವ ವೇಗಕ್ಕಿಂತ ಹೆಚ್ಚಿನ ವೇಗವನ್ನು ಸೃಷ್ಟಿಸಿ ಸತತವಾಗಿ ಸಕರಾತ್ಮಕ ಚಲನಾ ಪರಿಣಾಮದ ಹರಿವಿರುವಂತೆ ಮಾಡುತ್ತವೆ. ಇದರಿಂದ ನೂಕಬಲ ಉಂಟಾಗುತ್ತೆ.೨೦ ರಾಕೆಟ್‌ನ ಒಳಗಿನ ಬಿಸಿಯ ಅನಿಲಗಳು ಕೊಳವೆಯ ಮೂಲಕ ಹೊರಬರುವುದರಿಂದ ಇದು ಯಾವುದೇ ರಾಕೆಟ್ಟಿನ ಮುಖ್ಯ ಅಂಗವಾಗಿದೆ. ಬಿಸಿ ಅನಿಲಗಳು ವೇಗವಾಗಿ ಒಂದು ದಿಕ್ಕಿನಲ್ಲಿ ಹೊರಬಂದರೆ ರಾಕೆಟ್ ಅದರ ವಿರುದ್ಧ ದಿಕ್ಕಿನಲ್ಲಿ ಮುನ್ನುಗುತ್ತದೆ. ಹೀಗಾಗಿ ಮೈಸೂರಿನ ತಂತ್ರಜ್ಞರಿಗೆ ಕೊಳವೆಯ ವ್ಯಾಸದ ಮಹತ್ವ ಗೊತ್ತಿತ್ತು ಎಂದು ತಿಳಿಯಲು ಸಾಧ್ಯವಾಯಿತು. ವಿವಿಧ ಆಕಾರದ ರಾಕೆಟ್‌ಗಳ ಗಾತ್ರಗಳನ್ನು ಆರಿಸಿ ಅವುಗಳ ಕೊಳವೆಯ ವ್ಯಾಸವನ್ನು ಅಳತೆ ಮಾಡಲಾಯಿತು. ತುಂಬಾ ರಾಕೆಟ್‌ಗಳಲ್ಲಿ ಕೊಳವೆಯು ೬ ರಿಂದ ೮ ಮಿ.ಮೀ ರಷ್ಟಿದೆ. ತಂತ್ರಜ್ಞರು ಕೊಳವೆಯ ವ್ಯಾಸವನ್ನು ಪ್ರಮಾಣಿಕರಿಸುತ್ತಿದ್ದರೆಂದು ತಿಳಿಯಬಹುದಾಗಿದೆ. ಆದರೆ ಕೊಳವೆಯ ವ್ಯಾಸಕ್ಕೆ ರಾಕೆಟ್‌ನ ಉದ್ದಕ್ಕೂ ಯಾವುದೇ ಸಂಬಂಧ ಕಂಡುಬಂದಿರುವುದಿಲ್ಲ. ಬತ್ತಿಯನ್ನು ಪರೀಕ್ಷೆಗೆ ಒಳಪಡಿಸಲಾಯಿತು. ೫೦ಥ ರಷ್ಟು ಉತ್ಪ್ರೇಕ್ಷಿಸುವಿಕೆ ಇರುವಂತಹ ಸೂಕ್ಷ್ಮ ದರ್ಶಕದಿಂದ ನೋಡಿದಾಗ ಬತ್ತಿಯಲ್ಲಿ ೨೦ ಮೈಕ್ರಾನಿನ ನಾರಿನಂತಹ ಹಲವು ಎಳೆಗಳು ಕಂಡುಬಂದವು. ಬತ್ತಿಯ ಉದ್ದವನ್ನು ಅಳೆಯಲು ಅದರ ಕೊಳವೆಯ ತುದಿಯಿಂದ ಒಂದು ಸೂಜಿಯನ್ನು ತೂರಿಸಲಾಯಿತು. ಬತ್ತಿಯ ಉದ್ದವು ರಾಕೆಟ್‌ನ ಉದ್ದದ ೧/೩ ರಷ್ಟು ಇರುವುದು ತಿಳಿದುಬಂದಿತು. ಬತ್ತಿಯ ಉದ್ದವು ರಾಕೆಟ್‌ನ ಕೇವಲ ೧/೪ ರಷ್ಟಿದೆ, ಇದರರ್ಥ ಮೊದಲನೇ ೧/೪ ಅಥವಾ ೧/೩ ರಷ್ಟು ಮದ್ದು ಬಹಳ ವೇಗವಾಗಿ ಉರಿದು ಉಳಿದಿದ್ದು ನಿಧಾನವಾಗಿ ಉಳಿದ ದೂರ ಕ್ರಮಿಸುವ ತನಕ ಉರಿಯುತ್ತದೆ.೨೧ ಮದ್ದು ಉರಿಯುವ ಪ್ರಕ್ರಿಯೆ ರಾಕೆಟ್‌ನ ಹಾರಾಟದ ಮೇಲೆ ಅದರ ಪ್ರಭಾವ ಮೊದಲಾದವುಗಳನ್ನು ತಿಳಿಯಲು ಇನ್ನೂ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ.

**ಕ್ಷ-ಕಿರಣಗಳನ್ನು ಬಳಸಿ ರಾಕೆಟ್‌ನ ಶೋಧನೆ:** ಕ್ಷ ಕಿರಣಗಳನ್ನು ಬಳಸಿ ಮಾಡಿದ ಪರೀಕ್ಷೆಗಳಿಂದ ನಮ್ಮ ಹಿಂದಿನ ಶೋಧನೆಗಳ ಫಲಿತಾಂಶಗಳು ಖಚಿತ ಪಡಿಸುತ್ತದೆ. ಸಿಲಂಡಾರಿಕ್ ಆಕಾರದ ಕವಚದ ಅಂಚಿನಲ್ಲಿ ತುಕ್ಕು ಹಿಡಿದಿರುವುದು ಸ್ಪಷ್ಟವಾಗಿ ಕಾಣುತ್ತದೆ. ರಾಕೆಟ್‌ನ ಮುಂಭಾಗದ ಬಿಲ್ಲೆಯಡಿಯಲ್ಲಿ ಜೇಡಿ ಮಣ್ಣಿನ ಪದರವೊಂದು ಕಾಣುತ್ತದೆ. ಇನ್ನೊಂದು ಕೊನೆಯಲ್ಲಿ ಕೊಳವೆಯಲ್ಲಿ ತೂತು ಕಂಡುಬರುತ್ತದೆ.

**ರಾಕೆಟ್‌ನ ತಯಾರಿಕ ವಿಧಾನದ ಕಲ್ಪನೆ:** ಈ ಮೇಲಿನ ಎಲ್ಲಾ ಫಲಿತಾಂಶಗಳ ಆಧಾರದ ಮೆಲೆ ರಾಕೆಟ್‌ನ್ನು ಹೇಗೆ ತಯಾರು ಮಾಡುತ್ತಿದ್ದರು ಎಂಬುದನ್ನು ಇಲ್ಲಿ ನಮ್ಮ ಕಲ್ಪನೆಯ ಆಧಾರದಲ್ಲಿ ಹೇಳಲಾಗುತ್ತಿದೆ. ರಾಕೆಟ್‌ನ ತಯಾರಿಕೆಯು ಕಬ್ಬಿಣವನ್ನು ಬಿಸಿ ಮಾಡುವುದರಿಂದ ಆರಂಭವಾಗುತ್ತದೆ. ಕಡಿಮೆ ಇಂಗಾಲವಿರುವ ಕಬ್ಬಿಣದ ಹಾಳೆಗಳನ್ನು ಮೊದಲು ತಯಾರು ಮಾಡಿಕೊಂಡು ಅವುಗಳನ್ನು ಸರಿಯಾದ ಅಳತೆಗೆ ಕತ್ತರಿಸಿ ಇದಕ್ಕೆ ಕುಲುಮೆಯಿಂದ ಬೆಂಕಿಯಲ್ಲಿ ಕಾಯಿಸಿ ಸುತ್ತಿಗೆಯಿಂದ ಬಡಿದು ಉರುಳೆಯಕಾರಕ್ಕೆ (ಕೊಳವೆಯ) ತರಲಾಗುತ್ತದೆ. ನಂತರ ಈ ಉರುಳೆಯಾಕಾರಕ್ಕೆ ಎರಡು ಬಿಲ್ಲೆಗಳನ್ನು ಇದೇ ಕಬ್ಬಿಣದ ಹಾಳೆಯಿಂದ ಕೊಳವೆಯಾಕಾರಕ್ಕೆ ಕತ್ತರಿಸಿಕೊಂಡು ಒಂದು ಬಿಲ್ಲೆಗೆ ತೂತನ್ನು ಮಾಡುತ್ತಾರೆ. ಈ ಬಿಲ್ಲೆಯನ್ನು ಉರುಳೆಯ ಒಂದು ತುದಿಗೆ ಬಿಸಿಮಾಡಿ ಸೇರಿಸಲಾಗುತ್ತದೆ. ಅಂತಹದೊಂದು ಸಲಕರಣೆಯಾದ ಬೈರಿಗೆ ರಾಕೆಟ್‌ಗಳೊಡನೆ ದೊರಕಿತು.೨೨ ಹೆಚ್ಚಿನ ಜೇಡಿಮಣ್ಣನ್ನು ರಾಕೆಟ್‌ನ ಮುಂಭಾಗದಲ್ಲಿ ತುಂಬಿಸಿ ಬಿಲ್ಲೆ ಅಂದರೆ ಮುಚ್ಚಳದಿಂದ ಮುಚ್ಚಲಾಗುತ್ತದೆ. ಸಿಡಿಮದ್ದಿರುವ ಉರುಳೆಗೆ ಮೇಲಿನ ಬಿಲ್ಲೆಯನ್ನು ಜೋಡಿಸಲಾಗುತ್ತದೆ. ರಾಕೆಟ್‌ನ ಮುಂಭಾಗಕ್ಕೆ ಮತ್ತೆ

ಜೇಡಿಮಣ್ಣನ್ನು ಲೇಪನಮಾಡಲಾಗುತ್ತದೆ. ಸಾಕಷ್ಟು ಸಮಯದ ನಂತರ ಪುಡಿಯು ಸ್ಥಿರವಾದಾಗ ಬೈರಿಗೆಯಂತಹ ಸಲಕರಣೆಯನ್ನು ಬಳಸಿ ಬೇಕಾದ ಆಳಕ್ಕೆ ತೂತು ಮಾಡಿ ಬತ್ತಿಯನ್ನು ಕೂರಿಸಲಾಗುತ್ತದೆ. ಈ ರೀತಿಯಾಗಿ ರಾಕೆಟ್‌ನ್ನು ತಯಾರು ಮಾಡುತ್ತಿದ್ದರು ಎಂದು ಸಂಶೋಧನೆಯಿಂದ ತಿಳಿಯಬಹುದಾಗಿದೆ.

**ಸಂಶೋಧನೆಯಿಂದ ಉಂಟಾದ ಕೆಲವು ಪ್ರಶ್ನೆಗಳಿಗೆ ಕಂಡುಕೊಂಡ ಉತ್ತರ:** ನಗರದಲ್ಲಿ ಅಧಿಕ ಸಂಖ್ಯೆಯ ರಾಕೆಟ್‌ಗಳು ಕಂಡುಬಂದಿದ್ದರಿಂದ ಅವುಗಳಿಗೆ ಕಟ್ಟುತ್ತಿದ್ದ ಬಿದಿರಿನ ಕೋಲು ಅಥವಾ ಕತ್ತಿಗಳು ಏನಾದವು ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವವಾಗುತ್ತದೆ. ಆದರೆ ರಾಕೆಟ್‌ಗಳ ಜೊತೆಗೆ ಬಿದಿರಿನ ಕೋಲುಗಳಾಗಲಿ ಕತ್ತಿಗಳಾಗಲಿ ಪತ್ತೆಯಾಗಿಲ್ಲ, ಇದಕ್ಕೆ ಪ್ರಮುಖವಾಗಿ ಮೂರು ಕಾರಣಗಳಿರಬಹುದು ಒಂದು ನಗರದಲ್ಲಿ ನಡೆಯುತ್ತಿದ್ದ ಚಟುವಟಿಕೆಗಳೆಲ್ಲಾ ರಾಕೆಟ್ ಉತ್ಪಾದನೆಯ ಒಂದು ಹಂತದಷ್ಟೇ, ಟಿಪ್ಪು ಸುಲ್ತಾನನ ಹುಕುಂನಾಮಗಳೊಂದರಲ್ಲಿ (ಸರ್ಕಾರಿ ಆಸ್ತಿ ಹಾಗೂ ಸರಬರಾಜಿನ ಅಧಿಕಾರಿಗಳಿಗೆ ಆದೇಶಗಳ ನೀಡುವ ಪಟ್ಟಿ) ಶ್ರೀರಂಗಪಟ್ಟಣದ ತಾರಾಮಂಡಲಪೇಟೆಯಲ್ಲಿ ಮಂಜೂರಾಗಿರುವ ಖರ್ಚಿನ ದಾಖಲೆಯಿದೆ, ೧೬ ಎತ್ತುಗಳ ಆಹಾರಕ್ಕಾಗುವ ವೆಚ್ಚವನ್ನು ಮಂಜೂರು ಮಾಡಲಾಗಿದೆ.[೨೩] ಆಯುಧಗಳ ಕಾರ್ಖಾನೆಗೆ ೧೬ ಎತ್ತುಗಳು ಬೇಕಾದವು ಎಂದರೆ ತಾರಾಮಂಡಲಪೇಟೆಯ ಒಳಗೂ ಹೊರಗೂ ಸಾಕಷ್ಟು ಸಾಮಾಗ್ರಿಗಳು ಸಾಗಣೆಯಾಗುತ್ತಿದ್ದಿರಬೇಕು. ನಗರದಲ್ಲಿ ಆಯುಧಗಳ ಕಾರ್ಖಾನೆ ಇದ್ದಿದ್ದೇ ಆದರೆ ಅಲ್ಲಿ ತಯಾರಾದ ರಾಕೆಟ್ಟುಗಳನ್ನು ಎಲ್ಲಿಗೆ ಬೇಕೋ ಅಲ್ಲಿಗೆ ಸಾಗಿಸುತ್ತಿದ್ದಿರಬೇಕು. ಬೇರೊಂದು ಜಾಗದಲ್ಲಿ ಬಿದಿರಿನ ಕೋಲು ಕಟ್ಟುತ್ತಿದ್ದಿರಬೇಕು. ರಾಕೆಟ್‌ಗಳು ಸಿಕ್ಕ ಬಾವಿಯ ಬಳಿ ಹಾಳುಬಿದ್ದ ಗೋಡೆಗಳು, ಇಟ್ಟಿಗೆಯ ಅಡಿಪಾಯುಗಳು, ಕಲ್ಲಿನ ಕಿಟಕಿ, ಮಣ್ಣಿನ ದಿಬ್ಬಗಳು ಹಲವಾರು ಕಲ್ಲಿನ ಬಾವಿಗಳು ಪತ್ತೆಯಾಗಿವೆ. ನಗರದ ಕೋಟೆಯಿಂದ ಒಂದು ಕಿ. ಮೀ. ಅಂತರದಲ್ಲಿ ರಾಕೆಟ್‌ಗಳು ದೊರೆತ ಬಾವಿ ಇರುವುದರಿಂದ ಈ ಬಾವಿಯ ಅಕ್ಕಪಕ್ಕದಲ್ಲಿಯೇ ರಾಕೆಟ್ಟುಗಳ ಶೇಖರಣಾ ಕೇಂದ್ರ ಸ್ಥಳವಿರುವ ಸಾಧ್ಯತೆಯಿದೆ, ಈ ಎರಡು ಸಾಧ್ಯತೆಗಳನ್ನು ಓರೆ ಹಚ್ಚಿ ನೋಡಬೇಕಾಗಿದೆ. ಯಾವುದೋ ನಿರ್ದಿಷ್ಟ ಕಾರಣಗಳಿಂದ ಮೈಸೂರು ಸೈನ್ಯವು ರಾಕೆಟ್‌ಗಳನ್ನು ಬಾವಿಗೆ ಎಸದಿರಬಹುದು. ಆದರೆ ಯಾವ ಕಾರಣಕ್ಕೆ ಬಾವಿಗೆ ಎಸೆದರೊ ತಿಳಿಯುತಿಲ್ಲ ಆದರೆ ಯುದ್ಧದಲ್ಲಿ ಸೋತಾಗ ಶತ್ರುಗಳ ಕೈಗೆ ಸಿಗಬಾರದೆಂದು ಇಲ್ಲವೆ ಈ ತಂತ್ರಜ್ಞಾನ ಬೇರೆಯವರಿಗೆ ತಿಳಿಯಬಾರದೆಂದು ಅಥವಾ ಇವು ನಿರ್ಮಾಣ ಹಂತದಲ್ಲಿದ್ದು ಇವುಗಳಿಗೆ ಕೋಲುಗಳನ್ನು ಕಟ್ಟಿರುವುದಿಲ್ಲ ಆ ಸಂದರ್ಭದಲ್ಲಿ ದಾಳಿ ಮಾಡಿರಬಹುದು ಆಗ ಬಾವಿಯಲ್ಲಿ ಹಾಕಿರಬಹುದು ಆದರೆ ಇದಕ್ಕೆ ಸೂಕ್ತಕಾರಣ ತಿಳಿಯುತ್ತಿಲ್ಲ,

ಈ ಎಲ್ಲಾ ರಾಕೆಟ್‌ಗಳು ಅವುಗಳ ಕಾರ್ಖಾನೆ ಉಗ್ರಾಣಗಳು ಮೀರ್ ಸದ್ದಾರ್ (ದಂಡು ಹಾಗೂ ಆಯುಧ) ಕಛೇರಿಗೆ ಸೇರಿರುತ್ತವೆ. ಇದು ಟಿಪ್ಪುಸುಲ್ತಾನನ ನಂಬುಗೆಯ ಘುಲಾಮ್ ಅಲಿಖಾನನ ಅಧೀನದಲ್ಲಿತ್ತು. ಈತನ ಕೈಕೆಳಗೆ ೮ ಮಂದಿ ಅಧಿಕಾರಿಗಳು ಕೆಲಸ ಮಾಡುತ್ತಿದ್ದು ಅವನಿಗೆ ೮೪೦ ಚಿನ್ನದ ಪಗೋಡಾಗಳಷ್ಟು ಸಂಬಳ ಬರುತ್ತಿತ್ತು.[೨೪] ಡೆಕ್ಕನ್ ಹಾಗೂ ದಕ್ಷಿಣದ ಹಲವು ಭಾಗಗಳಲ್ಲಿ ಆಗಾಗ ಯುದ್ಧಕ್ಕೆ ತೆರಳುತ್ತಿದ್ದ ಮೈಸೂರಿನ ಸೇನೆಯ ಅವಶ್ಯಕತೆಯನ್ನು ಪೊರೈಸಲು ಈ ಬಗೆಯ ಕಾರ್ಖಾನೆಗಳು ರಾಕೆಟ್ಟುಗಳನ್ನು ತಯಾರು ಮಾಡುತ್ತಲೇ ಇರಬೇಕಿತ್ತು. ತನ್ನ ಒಂದು ಕಾಯಿದೆಯಲ್ಲಿ ಟಿಪ್ಪುಸುಲ್ತಾನನು ತನ್ನ ಅಧಿಕಾರಿಗಳಿಗೆ 'ದಾಬಸ್' ಅಂದರೆ ರಾಕೆಟ್ಟಿನ ಉರುಳೆಗಳ (ಕೊಳವೆ ಅಥವಾ ಕವಚ) ಸರಬರಾಜು ನಿರಂತರವಾಗಿಬೇಕೆಂದು ಮಾಡುತ್ತಾನೆ. ನಿಮ್ಮ ಕಛೇರಿಗೆ ದಾಬಸ್ಸಿಗಾಗಿ ಕೋರಿಕೆ ಬಂದರೆ ತಕ್ಷಣವೇ ಕಳಿಸತಕ್ಕದ್ದು' ಎಂದು ತಾಕೀತು ಮಾಡುತ್ತಾನೆ,[೨೫] ಮೈಸೂರು ರಾಜ್ಯದ ಕೆಲವು ಕಬ್ಬಿಣದ ಅದಿರುಗಳು ನಗರದ ಸಮೀಪದಲ್ಲಿದ್ದವು. ೧೭೮೩ರ ಜನವರಿಯ ಮಧ್ಯಭಾಗದಲ್ಲಿ ಬ್ರಿಟಿಷ್ ಬಾಂಬೆ ಸೈನ್ಯವು ಶಿವಮೊಗ್ಗವನ್ನು ವಶಪಡಿಸಿಕೊಂಡ ನಂತರ ತುರ್ಕನಹಳ್ಳಿ ಎಂಬ ಜಾಗಕ್ಕೆ ಬಂದು ತುಕಡಿಯನ್ನು ಕಳುಹಿಸಿದನು, ಈ ಜಾಗವು 'ರಾಕೆಟ್ ತಯಾರಿಕೆಗೆ ಪ್ರಸಿದ್ಧಿ' ಪಡೆದಿತ್ತು[೨೬] ಎಂದು ಇಂದಿನ ಧಾರವಾಡ ಕ್ರೇಟನ್‌ನ ತಡಕನಹಳ್ಳಿಯೇ ತೂರ್ಕಾನೆಹಳ್ಳಿ ಆಗಿತ್ತೆಂದು ಅಭಿಪ್ರಾಯ ಪಡಲಾಗಿದೆ. ಪ್ರಂಭಂಧಕಾರರು ನಿಧಿನ್ ಒಲಿಕಾರ ಹಾಗೂ ಅಜಯ್ ಕುಮಾರ್ ರವರು ಕ್ಷೇತ್ರಕಾರ್ಯ ಕೈಗೊಂಡಾಗ ಶಿವಮೊಗ್ಗ ತಾಲೂಕಿನ ಸಿರಿಗೆರೆ ಬಳಿ ಬೆಚಾರಕ್ ಗ್ರಾಮವಾಗಿರುವ ಚಟ್ಟನಹಳ್ಳಿಯಲ್ಲಿ ರಾಸಿಗಟ್ಟಲೆ ಕಬ್ಬಿಣದ ಕಿಟ್ಟ ಬಿದ್ದಿರುವುದು ಇದರ ಸುತ್ತ ಕೋಟೆ ಇರುವುದು ಕಂಡುಬಂದಿತು. ಅದೇ ರೀತಿ ಇದರ ಪಕ್ಕದಲ್ಲಿಯೇ ತಮ್ಮಡಿಹಳ್ಳಿ ಎಂಬ ಗ್ರಾಮ ಬರುತ್ತದೆ ಇಲ್ಲಿಯು ಸಹಾ ರಾಸಿಗಟ್ಟಲೆ ಕಬ್ಬಿಣದ ಕಿಟ್ಟ ಕುಲುಮೆಯ ಅವಶೇಷಗಳು ಕಂಡುಬಂದಿವೆ, ಇಲ್ಲಿಯ ಸ್ಥಳೀಯರು ವಿಚಾರಿಸಿದಾಗ ಇಲ್ಲಿ ರಾಕೆಟ್ ರೀತಿಯ ಕವಚಗಳನ್ನು ನೋಡಿರುವುದಾಗಿ ಇವುಗಳನ್ನು ಗ್ಯಾರೇಜ್‌ಗಳಿಗೆ ಹಾಕಿರುವುದಾಗಿ ತಿಳಿಸುತ್ತಾರೆ ಹಾಗೂ ಈ ಕಂಬಾರಿಕೆ ಮಾಡುವ ಅಂದರೆ ಕುಲಮೆ ಮಾಡುವ ಜನರ ಮನೆ ದೇವರು ಕಾಳಮ್ಮ ಆಗಿದ್ದು ಈ ಎರಡು ಊರಿನಲ್ಲಿಯು ಕಾಳಮ್ಮ ದೇವಸ್ಥಾನ ನೋಡಬಹುದು, ಆದ್ದರಿಂದ ಇಲ್ಲಿ ರಾಕೆಟ್‌ಗಳ ಕವಚ (ಕೊಳವೆ) ತಯಾರು ಮಾಡಿ ನಗರದಲ್ಲಿ ಇವುಗಳಿಗೆ



ನಗರದ ಶ್ರೀ ನಾಗರಾಜ್‌ರಾವ್ ಅವರ ತೋಟದಲ್ಲಿ ಪತ್ತೆಯಾದ ರಾಕಟ್ ಸ್ಥಳದ ನಕ್ಷೆ



ರಾಕೆಟ್‌ನ ಒಳಗಡೆ ಇರುವ ಬತ್ತಿಯ ಎಳೆ



ವಿವಿಧ ಅಳತೆಗಳುಳ್ಳ ರಾಕೆಟ್ಟುಗಳು



ರಾಕೆಟ್ಟಿನ (ಹೊರಮೈ), ಕೊಳವೆ ಮತ್ತು ಬತ್ತಿಯ ರಂಧ್ರ



ರಾಕೆಟ್‌ನ ಕವಚದ ಎಡಭಾಗದಲ್ಲಿ ಕಾಣುತ್ತಿರುವ ಬತ್ತಿನಮೂನೆ

ಮದ್ದು ತುಂಬಿರಬಹುದು. ಇಲ್ಲಿ ಕಬ್ಬಿಣ, ಮ್ಯಾಗ್ನಾಟೈಟ್, ಹಾಗೂ ಹೆಮಟೈಟುಗಳ ನಿಕ್ಷೇಪಗಳಿವೆ. ಇದರ ಸುತ್ತಮುತ್ತವಿರುವ ಹಲವು ಜಾಗಗಳಲ್ಲಿ ಕ್ರಿ.ಶ. ೧೦ನೇ ಶತಮಾನಕ್ಕೂ ಮುಂಚಿನಿಂದಲೇ ಕಬ್ಬಿಣದ ಗಣಿಗಾರಿಕೆ ನಡೆಯುತ್ತಿದುದು ದಾಖಲೆಯಾಗಿದೆ.[೨೭] ಪ್ರಾಯಶಃ ಇಲ್ಲಿ ರಾಕೆಟ್‌ಗಳನ್ನು ತಯಾರಿಸಿ ೬೦ ಮೈಲಿ ದೂರದಲ್ಲಿದ್ದ ನಗರಕ್ಕೆ ಸಾಗಿಸುತ್ತಿದ್ದರೇನೋ ಎಂದು ಅಭಿಪ್ರಾಯಪಡಲಾಗಿದೆ.

ಕ್ರಿ.ಶ. ೧೭೮೦ರ ಸುಮಾರಿಗೆ ಬ್ರಿಟಿಷರು ಮೈಸೂರಿನ ರಾಕೆಟ್‌ಗಳನ್ನು ಎದುರಿಸಿದರೂ ೧೯ನೇ ಶತಮಾನದ ಮೊದಲ ದಶಕದವರೆಗೆ ರಾಕೆಟ್‌ಗಳನ್ನು ಬಳಸಲು ಬ್ರಿಟಿಷರಿಗೆ ಸಾಧ್ಯವಾಗಲಿಲ್ಲ, ಇದು ಮೈಸೂರಿನ ತಂತ್ರಜ್ಞಾನ ಕೌಶಲ್ಯವೇ ಎಂದೇ ಹೇಳಬಹುದು. ಕ್ರಿ.ಶ. ೧೮೦೫ರಲ್ಲಿ ವಿಲಿಯಂ ಕಾಂಗ್ರಿವನು ತನ್ನ ರಾಕೆಟ್‌ಗಳ ವ್ಯಾಪ್ತಿ ಮತ್ತು ಸ್ಥಿರತೆಗಳನ್ನು ಸರಿಮಾಡಲು ಹೋಗುತ್ತಿದ್ದ, ಕಾಂಗ್ರಿವ್‌ನ ರಾಕೆಟ್‌ಗಳು ನಿಗದಿತ ಮೈಲಿಗಳನ್ನು ಕ್ರಮಿಸುತ್ತಿರಲಿಲ್ಲ, ಅವುಗಳನ್ನು ಹಾರಿಸಿಯೂ ಪ್ರಯೋಜನವಾಗುತ್ತಿರಲಿಲ್ಲ, ಕೆಲವೊಮ್ಮೆ ಈ ರಾಕೆಟ್‌ಗಳು ದೋಣಿಗಳಲ್ಲೆ ಸಿಡಿಯುತ್ತಿದ್ದವು ಹಾಗೂ ಬೇಕಾದ ದಿಕ್ಕಿನಲ್ಲಿ ಹೋಗುತ್ತಿರಲಿಲ್ಲ ಯಾವೇವೋ ದಿಕ್ಕಿನಲ್ಲಿ ಸಾಗುತ್ತಿದ್ದವು ಎಂದು ದಾಖಾಲಾಗಿರುವುದು ಕಂಡುಬರುತ್ತದೆ.೨೮ ಕಬ್ಬಿಣದ ಕವಚ (ಕೊಳವೆ) ಅಂದರೆ ಹೊರಮೈ ಹೊಂದಿರುವ ನಗರದ (ಮೈಸೂರು) ರಾಕೆಟ್‌ಗಳಿಗೆ ಸರಿಸಮನಾದವು ಪ್ರಪಂಚದಲ್ಲಿಯೇ ಎಲ್ಲೂ ಇರಲಿಲ್ಲ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ ಎನ್ನಬಹುದು. ಏಕೆಂದರೆ ಮೈಸೂರು ರಾಜ್ಯದ ನಗರದ ರಾಕೆಟ್‌ಗಳ ಪ್ರಾಯೋಗಿಕತೆ ಮತ್ತು ತಂತ್ರಗಾರಿಕೆ ತುಂಬಾ ಉತ್ತುಂಗದಲ್ಲಿತ್ತು ಎನ್ನುವುದಕ್ಕೆ ಈ ತಂತ್ರಗಾರಿಕೆಯೇ ಸಾಕ್ಷಿ, ರಾಕೆಟ್‌ಗಳನ್ನು ಕಾರ್ಖಾನೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತಯಾರಿಸಲು ಬೇಕಾದುದೆಲ್ಲವೂ ಮೈಸೂರುನಲ್ಲಿತ್ತು. ಈ ಕಾರಣಗಳಿಂದಾಗಿ ಭಾರತದ ಬೇರೆ ರಾಜ್ಯಗಳೆಲ್ಲಾ ಬ್ರಿಟಿಷರಿಗೆ ಶರಣಾಗುತ್ತಿದ್ದಾಗ, ಮೈಸೂರು ರಾಜ್ಯವು ೨೦ ವರ್ಷಗಳ ಕಾಲ ಬ್ರಿಟಿಷರನ್ನು ಹಿಮ್ಮೆಟ್ಟಿಸಿದ್ದು ಈ ರಾಕೆಟ್‌ನ ತಂತ್ರಜ್ಞಾನ ಹಾಗೂ ಉಪಯೋಗಿಸುವಿಕೆಯಿಂದಲೇ ಎನ್ನಬಹುದು. ಈ ವಿಷಯವಾಗಿ ಹೆಚ್ಚಿನ ಸಂಶೋಧನೆಗೆ ಅವಕಾಶವಿದೆ. ಉದಾಹರಣೆಗೆ ಕಾಗದದ ಹಾಗೂ ಮರದ ರಾಕೆಟ್‌ಗಳನ್ನು ಬಿಟ್ಟು ಕಬ್ಬಿಣದ ರಾಕೆಟ್‌ಗಳನ್ನು ಯಾವಾಗಿನಿಂದ ಬಳಸಲಾಯಿತು, ಯಾರು ಮೊದಲು ಬಳಸಲು ಶುರುಮಾಡಿದರು ಎಂದು ಇನ್ನು ತಳಮಟ್ಟದ ಅಧ್ಯಯನವಾಗಬೇಕಾಗಿದೆ. ವಿವಿಧ ಬಗೆಯ ರಾಕೆಟ್‌ಗಳು, ಅವುಗಳ ಬಳಕೆ ಹಾಗೂ ಪರಿಣಾಮಗಳ ಬಗ್ಗೆ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ, ರಾಕೆಟ್‌ಗಳ ತಯಾರಿಕೆಯ ಬಗ್ಗೆ ಇನ್ನೂ ಹೆಚ್ಚಿನ ಜ್ಞಾನವನ್ನು ಹೆಚ್ಚಿಸಿಕೊಳ್ಳುವ

ಅವಕಾಶವಿದೆ, ರಾಕೆಟ್‌ಗಳನ್ನು ಮಾಡುವುದಕ್ಕೆ ಬೇಕಾದ ಕಚ್ಚಾ ವಸ್ತುಗಳು, ವಿವಿಧ ಹಂತಗಳು, ರಾಕೆಟ್ ತಯಾರಿಕಾ ಕಾರ್ಖಾನೆಯ ಸ್ಥಳಗಳು, ರಾಕೆಟ್ ಉಡಾವಣೆಯ ಲಾಂಚರ್‌ಗಳು ರಾಕೆಟ್‌ಗಳನ್ನು ಯಾವಾಗ ಹೇಗೆ ಮುಚ್ಚಲಾಗುತ್ತಿತ್ತು ಎಂಬೆಲ್ಲದರ ಬಗ್ಗೆ ತಿಳಿಯುವ ಸಾಧ್ಯತೆಗಳಿವೆ.

[ಈ ಪ್ರಬಂಧವನ್ನು ಬರೆದು ಪ್ರಕಟಿಸಲು ಅನುಮತಿ ಕೊಟ್ಟ ಪುರಾತತ್ವ ಸಂಗ್ರಹಾಲಯಗಳು ಮತ್ತು ಪರಂಪರೆಯ ಇಲಾಖೆಯ ಆಯುಕ್ತರಾದ ಡಾ. ಟಿ. ವೆಂಕಟೇಶ್, ವಸ್ತುಸಂಗ್ರಹಾಲಯದ ನಿರ್ದೇಶಕರಾದ ಡಾ. ಆರ್. ಗೋಪಾಲ್ ಹಾಗೂ ಪುರಾತತ್ವ ನಿರ್ದೇಶಕರಾದ ಡಾ. ಗವಿಸಿದ್ದಯ್ಯ ರಾಕೆಟ್‌ಗಳ ಸಂಶೋಧನೆ ಮಾಡಲು ಹಾಗೂ ಈ ಪ್ರಬಂಧ ಬರೆಯಲು ಎಲ್ಲಾ ರೀತಿಯ ಸಹಕಾರ ನೀಡಿದ ನಿಧಿನ್ ಜಿ. ಓಲಿಕಾರ ರಾಕೆಟ್‌ಗಳನ್ನು ವಸ್ತುಸಂಗ್ರಹಾಲಯಕ್ಕೆ ನೀಡಿದ ನಗರದ ತೋಟದ ಮಾಲಿಕರಾದ ಶ್ರೀ ನಾಗರಾಜರಾವ್ ಮಗ ರಾಮಣ್ಣ. ಶ್ರೀ. ಟಿ.ಎಸ್. ಗಂಗಾಧರ್ ಹಾಗೂ ರಾಕೆಟ್‌ಗಳೆಂದು ಗುರುತಿಸಿದ ಡಾ. ಎಚ್.ಎಮ್. ಸಿದ್ದನಗೌಡರು ಶಿವಮೊಗ್ಗ ಸಮೀಪದ ಕಬ್ಬಿಣದ ಅದಿರುಗಳನ್ನು ಗುರುತಿಸಲು ಹಾಗೂ ಟಿಪ್ಪುಸುಲ್ತಾನನ ಹುಕುಂನಾಮವನ್ನು ಅನುವಾದಿಸಲು ನೆರವಾದ ಶ್ರೀ. ಬಿ.ಎಸ್. ಅಜಯ್‌ಕುಮಾರ್ ಹಾಗೂ ಡಾ. ಜಗದೀಶ್ ಟಿಪ್ಪು ನಂತರದ ಕಾಲದ ಕಾಂಗ್ರೀವ್ ರಾಕೆಟ್‌ಗಳ ಅಭಿವೃದ್ಧಿ ಬಗ್ಗೆ ಸಲಹೆ ನೀಡಿದ ರೋಜರ್ ಡೇವಿಸ್, ಟಿಪ್ಪು ಸುಲ್ತಾನನ ಗ್ರಂಥಾಲಯದಲ್ಲಿನ ಮಾಹಿತಿಯನ್ನು ಪಡೆಯಲು ಅನುಮತಿ ನೀಡಿದ ಕೋಲ್ಕತ್ತಾದ ದಿ ಏಷಿಯಾಟಿಕ್ ಸೊಸೈಟಿಯವರಿಗೂ, ವಿ.ಕೆ.ದಿವೆಕರ್. ಪ್ರಾಂಶುಪಾಲರು, ಪರ್ಫೆಕ್ಟ್ ಅಲಯ್ ಕಂಪನಿ ಶಿವಮೊಗ್ಗ, ಪ್ರೋ.ಮುಕುಂದ ಇಂಡಿಯನ್ ಇನ್ಸ್‌ಟ್ಯೂಟ್ ಆಫ್ ಸೈನ್ಸ್ ಬೆಂಗಳೂರು, ಪ್ರೊ. ಶಾರದ ಶ್ರೀನಿವಾಸನ್ ನ್ಯಾಷನಲ್ ಇನ್ಸ್‌ಟ್ಯೂಟ್ ಆಫ್ ಅಡ್ವಾನ್ಸ್ ಸ್ಟಡೀಸ್, ಬೆಂಗಳೂರು. ಯಶಸ್ವಿನಿ ಪ್ರಕಾಶ್, ಶ್ರೀಕಾಂತ್ ಚಕ್ರವರ್ತಿ, ಅವಿನಾಶ್.ಜಿ. ನಿತೇಶ್ ಕುಂತಾಡಿ, ಕಾವ್ಯಶ್ರೀ. ಎಂ. ಇವರುಗಳಿಗೆ ಹೃದಯಪೂರ್ವಕ ಧನ್ಯವಾದಗಳು.]



## ಅಡಿಟಿಪ್ಪಣಿಗಳು


೧. Alfred W. Crosby, Throwing Fire: Projectile Technology Through History, Cambridge, 2002, pp. 100–103.

೨. Roddam Narasimha, Rockets in Mysore and Britain, Bangalore ,1985, pp. 5.

೩. Andrew de la Garza, The Mughal Empire at War – Babur, Akbar and the Indian Military Revolution 1500 – 1605, New York, 2016, pp. 48.

೪. Nur-ud-din Muhammad Salim 'Jahangir' – Alexander Rogers (Trans.), Tuzuk-i-Jahangiri, London, 1914, pp. 219.

೫. M.H. Gopal, Tipu Sultan's Mysore – An Economic Study, Bombay, 1971, pp. 34.

೬. M.H.A. Khan Kirmani, History of Tipu Sultan trans. Col. W. Miles, Delhi, 1864, pp.113.

೭. East India Company, Copies and Extracts of advices to and from India, London, 1800, pp. 262–263.

೮. Simon Werrett, William Congreve's Rational Rockets, Notes & Records – The Royal Society Journal of the History of Science London, 2009.

೯. M.H.A. Khan Kirmani, The History of Haidar Naik, London, 1842, pp. 126.

೧೦. M.H.A. Khan Kirmani, The History of Haidar Naik, London, 1842, pp. 139.

೧೧. Md. Ilyas Nadvi, Tipu Sultan (A Life History), Karachi, 2004, pp. 356.

೧೨. Sotheby's, The Tipu Sultan Collection – Lot no. 14, London, 25 May 2005.

೧೩. Sotheby's, The Tipu Sultan Collection – Lot no. 31, London, 25 May 2005.

೧೪. V.K. Divekar, Old Rocket Shell Analysis, PAC/F/100108, 7 Apr 2018, pp. 3, 7.

೧೫. R. Balasubramaniam, Story of the Delhi Iron Pillar, Delhi, 2005.

೧೬. Prof. Sharada Srinivasan, Indian iron and steel, with special reference to Southern India, London, 2013, pp. 84.

೧೭. Prof. Sharada Subramaniam, Note – Insights from Preliminary Archaeomaterials Investigation of Tipu era Rocket, 29 April 2018, pp. 1.

೧೮. V.K. Divekar, Rocket Document, 14 Apr 2018, pp. 6.

೧೯. Burrish Crisp (Trans.), The Mysorean Revenue Regulations, Calcutta, 1792, pp. 49.

೨೦. Prof. H.S. Mukunda, Understanding Aerospace Chemical Propulsion, Bangalore, 2004. pp. 98.

೨೧. Prof. H.S. Mukunda, Personal Communication.

೨೨. A very helpful introduction to Chinese rocket technology and its transfer and use in India is given by Joseph Needham, Science and Civilisation in China, Volume 5, Chemistry and Chemical Technology, Part 7: Military Technology, The Gunpowder Epic, 1986, 477-518. Of particular interest is Needham's figure 195 which shows the use of a drill or "thorn" to make the cavity in the rocket tube for the fuse. The geometry of this tool is strikingly similar to the tool found with the Nagara rockets.

೨೩. Tipu Sultan (Trans. by Dr. Jagadish & Nidhin Olikara), Hukm-nama, Asiatic Society Calcutta, MS. 1686, Unpublished.

೨೪. Mohibbul Hasan, History of Tipu Sultan, Delhi, Aakar Books, 1971, pp. 334.

೨೫. Burrish Crisp (Trans.), The Mysorean Revenue Regulations, Calcutta, 1792, pp. 48. Interestingly the translator of Tipu's Regulations uses the word 'Dubas' in the translated work as well as he is unable to correlate it to Rocket Casings but points it out as 'Shells'.

೨೬ Edward Moor, A Narrative of the Operations of Captain Little's Detachment, London, 1794, pp.169.

೨೭. Major Dirom, A narrative of the Campaign in India which terminated the war with Tippoo Sultan in 1792, London, 1793, pp. 295.

೨೮. Keith to Barham, 'Operations off Boulogne', The Times, no. 6587 (25 November), p. 3 (1805); in Lloyd Christopher, Hardin Jnr Craig Congreve's Rockets, 1805–1806 Naval Miscell. at p. 457.

೮೧

# ಚಿತ್ರದುರ್ಗ ಕೋಟೆ ಪರಿಸರದಲ್ಲಿ ಮಳೆ ಕೊಯ್ಲು ವ್ಯವಸ್ಥೆ

**ಕೆ. ಮಂಜುನಾಥ***

**ಯಾ**ವುದೇ ನಾಗರಿಕತೆ ಮತ್ತು ಸಾಮ್ರಾಜ್ಯಗಳು ನೆಲೆ ನಿಂತಿರುವುದು ನೀರಿನ ಮೂಲಗಳ ಸಮೀಪದಲ್ಲಿ. ಆದ್ದರಿಂದ ಚರಿತ್ರೆಯು ಇದಕ್ಕೆ ಅನೇಕ ಪುರಾವೆಗಳನ್ನು ಒದಗಿಸುತ್ತದೆ. ಇದಕ್ಕೆ ಸಾಕ್ಷಿಯಾಗಿ ಪ್ರಾಚೀನ ನಾಗರೀಕತೆಗಳು ಮತ್ತು ಹಲವಾರು ಸಾಮ್ರಾಜ್ಯಗಳ ಸ್ಥಾಪನೆ ನದಿ ದಂಡೆಗಳ ಮೇಲೆ ನಿರ್ಮಾಣವಾಗಿರುವುದನ್ನು ಕಾಣಬಹುದು. ಅಂತೆಯೇ ಚಿತ್ರದುರ್ಗ ಕೋಟೆ ಪರಿಸರವು ಹಲವಾರು ರಾಜಮನೆತನಗಳ ಅರಸರ ಆಳ್ವಿಕೆಗೆ ಒಳಪಟ್ಟು ಆಡಳಿತ ನಡೆಸಿರುವುದನ್ನು ಕಾಣಬಹುದು. ಅವರಲ್ಲಿ ಪ್ರಮುಖವಾಗಿ ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ವಿಜಯನಗರದ ಅರಸರು, ಪಾಳೆಯಗಾರರು ಮೊದಲಾದವರ ಆಳ್ವಿಕೆಗೆ ಒಳಪಟ್ಟಿದೆ. ಈ ಕಾಲಾವದಿಯಲ್ಲಿ ಈ ಅರಸುಮನೆತನಗಳ ಅರಸರೆಲ್ಲರೂ ಕೋಟೆಯೊಳಗಡೆ ಸಿಗುವ ಸ್ವಾಭಾವಿಕ ನೀರಿನ ಮೂಲ ಮಳೆ ನೀರನ್ನು ಬಳಸಿಕೊಂಡು ಅದರ ಸಂರಕ್ಷಣೆಯನ್ನು ಸುವ್ಯವಸ್ಥಿತವಾಗಿ ಮಾಡಿಕೊಂಡು ಆಡಳಿತ ನಡೆಸಿರುವುದು ಕಂಡುಬರುತ್ತದೆ. ಕದಂಬರ ಕಾಲದಲ್ಲಿ ಕರ್ನಾಟಕದ ಪ್ರಥಮ ಪ್ರಾಚೀನ ಚಂದ್ರವಳ್ಳಿ ಕೆರೆಯನ್ನು ಚಿತ್ರದುರ್ಗದ ಕೋಟೆಯ ಸಮೀಪ ಮಯೂರವರ್ಮನು ದೃಢಪಡಿಸಿರುವುದನ್ನು ಶಾಸನದ ಉಲ್ಲೇಖದಿಂದ ತಿಳಿಯಬಹುದಾಗಿದೆ. ಮೇಲ್ಕಂಡ ಮನೆತನಗಳ ಆಳ್ವಿಕೆಯ ಸಂದರ್ಭದಲ್ಲಿ ಜಲಕ್ಷಾಮಗಳು ತಲೆದೋರದಂತೆ ಮಳೆನೀರು ಸಂರಕ್ಷಣೆ ಮಾಡಿರುವುದರ ಕುರುಹುಗಳು ಇಂದಿಗೂ ಹಾಳಾಗದೆ ಉಳಿದಿರುವುದು ಅಂದಿನ ಕಾಲದ ವೈಜ್ಞಾನಿಕ ತಂತ್ರಜ್ಞಾನಕ್ಕೆ ಹಿಡಿದ ಕೈಗನ್ನಡಿ ಎಂದರೆ ತಪ್ಪಾಗಲಾರದು.

**ಮಳೆಕೊಯ್ಲು ವ್ಯವಸ್ಥೆ:** ಮಳೆ ನೀರನ್ನು ಸಂಗ್ರಹಿಸುವ ನಿಟ್ಟಿನಲ್ಲಿ ಹಲವಾರು ಸಾಧನಗಳನ್ನ ಬಳಸಿಕೊಂಡು ಆ ಮೂಲಕ ನೀರಿನ ಸಂರಕ್ಷಣೆಯನ್ನು ಮಾಡುತ್ತಿದ್ದರು. ಅಂತಹ ಸಾಧನಗಳೆಂದರೆ ಮುಖ್ಯವಾಗಿ ಒಡ್ಡುಗಳು, ಕೊಳಗಳು, ಹೊಂಡಗಳು, ದೊಣೆಗಳು, ಕಾಲುವೆಗಳನ್ನು ಬಳಸಿಕೊಂಡು ಮಳೆನೀರನ್ನು ಸಂರಕ್ಷಿಸುತ್ತಿದ್ದರಿಂದಾಗಿ ಕೋಟೆ ಪರಿಸರದಲ್ಲಿ ಯಾವುದೇ ರೀತಿ ಜಲಕ್ಷಾಮ ತೋರದ ಹಾಗೆ ವ್ಯವಸ್ಥೆಯನ್ನು ಮಾಡಿಕೊಂಡಿದ್ದರು.

**ನೆಲ್ಲಿಕಾಯಿ ಸಿದ್ದೇಶ್ವರ ಬತೇರಿಯಲ್ಲಿನ ಕೊಳ:** ಕೊಳವೆಂದರೆ ಶಬ್ದಾರ್ಥದಲ್ಲಿ ಸರೋವರ, ಪುಷ್ಕರಣಿ, ಗೊತ್ತಾದ ಸ್ಥಳ ಎಂಬರ್ಥವಿದೆ: ಅವುಗಳಲ್ಲಿ ಮುಖ್ಯವಾಗಿ ನೆಲ್ಲಿಕಾಯಿ ಸಿದ್ಧಪ್ಪನ ಬತೇರಿಯ ಬಳಿಯಿರುವ ಸಿದ್ಧೇಶ್ವರನ ಮುಂದುಗಡೆ ಚಿಕ್ಕದಾದ ಕೊಳವನ್ನು ನಿರ್ಮಿಸಿರುವುದನ್ನು ಕಾಣಬಹುದಾಗಿದ್ದು. ಈ ಕೊಳದ ನೀರು ದೇವಸ್ಥಾನದ ಬಳಕೆ ಮತ್ತು ಆ ಬತೇರಿ ಬಳಿಯಿರುವ ಸೈನಿಕರ ಉಪಯೋಗಕ್ಕೆ ನಿರ್ಮಿಸಿರುವುದನ್ನು ಕಾಣಬಹುದಾಗಿದ್ದು, ಈ ಕೊಳವು ಇಂದಿಗೂ ಸುವ್ಯವಸ್ಥಿತವಾಗಿದ್ದು, ಕೊಳವು ೨೪ ಅಡಿ ಉದ್ದ ಇದ್ದು ೧೧ ಅಡಿ ಅಗಲವಿದೆ. ೧ ಅಡಿಯಷ್ಟು ಎತ್ತರದ ಕಲ್ಲನ್ನು ತಡೆಗೋಡೆಯಾಗಿ ಕಟ್ಟಿದ್ದು ಈ ಕೊಳದಲ್ಲಿ ಇಂದಿಗೂ ಸಹ ನೀರಿರುವುದನ್ನು ನೋಡಬಹುದಾಗಿದೆ.

**ನಾಗರಪಡೆ ಕೋಟೆ ಸಾಲುವಿನ ಕೊನೆಯಲ್ಲಿರುವ ಕೊಳ:** ನಾಗರಪಡೆ ಕೋಟೆಸಾಲು ಮುಗಿದ ನಂತರ ನೆಲ್ಲಿಕಾಯಿ ಸಿದ್ದಪ್ಪನ ದಿಟ್ಟಕ್ಕೆ ಹೋಗುವ ಪ್ರಾರಂಭದಲ್ಲಿ ಈ ಕೊಳವನ್ನು ನಿರ್ಮಾಣ ಮಾಡಿದ್ದು ಇದರ ಕೆಳಭಾಗದಲ್ಲಿ ಸೈನಿಕ ವಸತಿ ಗೃಹವಿದೆ, ಬಹುಶಃ ಅವರು ಬಳಕೆಗಾಗಿ ಈ ಕೊಳವನ್ನು ನಿರ್ಮಾಣ ಮಾಡಿದ್ದಾರೆ. ನೈಸರ್ಗಿಕವಾಗಿ ಬೃಹತ್ತಾದ ಇಳಿಜಾರು ಬಂಡೆಗಳ ಮಧ್ಯದಲ್ಲಿ ಕಲ್ಲಿನ ದ್ವಾರೆಯ ರೀತಿಯಾಗಿ ಕಲ್ಲನ್ನು ಕಡೆದು ನಿರ್ಮಿಸಿದ್ದಾರೆ. ಕೊಳವು ೩ ಅಡಿಯಷ್ಟು ಕಲ್ಲಿನ ತಳಪಾಯದ ಮೇಲೆ ೬ ಅಡಿಯ ಇಟ್ಟಿಗೆ, ಗಾರೆಯಿಂದ ಕೊಳಕ್ಕೆ ತಡೆಗೋಡೆಯನ್ನು ನಿರ್ಮಿಸಿದ್ದಾರೆ. ಈ ತಡೆಗೋಡೆಯ ೬೫ ಅಡಿ ಉದ್ದ ಇದ್ದು ಬಹುಶಃ ಇಳಿಜಾರು ಬಂಡೆಗಳ ಮೇಲಿನಿಂದ ಬಿದ್ದ ಮಳೆನೀರು ತಡೆಯಲು ಈ ರೀತಿಯಾಗಿ ನಿರ್ಮಾಣ ಮಾಡಿರುವುದನ್ನು ಕಾಣಬಹುದಾಗಿದೆ.

---

* ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬, ಮೊ. ೯೯೭೨೪೩೩೯೧೪

**ಕುದುರೆ ದೋಣೆ:** ದೋಣೆಯೆಂದರೆ ಬಂಡೆಗಳ ಮಧ್ಯದ ಸಣ್ಣ ಜಲಾಶಯ ಎಂಬುದಾಗಿದ್ದು ಮಳೆನೀರು ಸಂರಕ್ಷಣೆಯಲ್ಲಿ ಇದರ ಪಾತ್ರವೂ ಬಹು ಪ್ರಮುಖ. ಕುದುರೆಗಳಿಗೆ ನೀರು ಕುಡಿಸಲು ಈ ದೋಣೆಯನ್ನು ಬಳಸುತ್ತಿದ್ದ ಕಾರಣ ಕುದುರೆ ದೋಣೆ ಎಂದು ಕರೆಯುತ್ತಾರೆ. ಈ ರೀತಿ ನಿಸರ್ಗದತ್ತವಾದ ಇಳಿಜಾರು ಬಂಡೆಯ ಬುಡದಲ್ಲಿ ಮಳೆ ನೀರುಹರಿದು ಹೋಗುವ ಸ್ಥಳದಲ್ಲಿ ೯ಅಡಿ ಅಗಲ, ೩ಅಡಿ ಎತ್ತರ, ೩೨ಅಡಿ ಉದ್ದವಿರುವ ಕಲ್ಲಿನ ಕಟ್ಟಡದಿಂದ ಈ ದೋಣೆಯನ್ನು ನಿರ್ಮಾಣ ಮಾಡಿರುವುದನ್ನು ಕಾಣಬಹುದಾಗಿದೆ. ಈ ದೋಣೆಯು ನೆಲ್ಲಿಕಾಯಿ ಸಿದ್ದಪ್ಪನ ಬೆಟ್ಟಕ್ಕೆ ಹೋಗುವ ದಾರಿಯ ಮಧ್ಯದಲ್ಲಿದ್ದು ಕುದುರೆಗಳಿಗೆ ಬಾಯಾರಿಕೆ ಹೋಗಲಾಡಿಸುವ ನಿಟ್ಟಿನಲ್ಲಿ ಇದರ ನಿರ್ಮಾಣ ಮಾಡಿರುವುದೆಂದು ತಿಳಿದುಬರುತ್ತದೆ.

**ಕಾಲುವೆಗಳು:** ಚಿತ್ರದುರ್ಗ ಕೋಟೆ ಪರಿಸರದಲ್ಲಿ ಅವಶ್ಯಕತೆಗೆ ತಕ್ಕಂತೆ ಹಲವಾರು ಕಡೆಗಳಲ್ಲಿ ಕಾಲುವೆಗಳನ್ನು ನಿರ್ಮಿಸಿದ್ದು ಪ್ರಸ್ತುತ ಸಂದರ್ಭದಲ್ಲಿಯೂ ಈ ಕಾಲುವೆಗಳು ವ್ಯವಸ್ಥಿತವಾಗಿರುವುದನ್ನು ಕಾಣಬಹುದಾಗಿದೆ.

**ಅರಮನೆ ಪ್ರಾಂಗಣದಲ್ಲಿ ಕಂಡುಬರುವ ಕಾಲುವೆ:** ಈ ಪ್ರಾಂಗಣದಲ್ಲಿರುವ ಹಲವು ಮಣ್ಣಿನ ಮನೆಗಳನ್ನು ನಿರ್ಮಿಸಿದ್ದು ಈ ಗೃಹಗಳಲ್ಲಿ ಪಾಳೆಯಗಾರರು ವಾಸ ಮಾಡುತ್ತಿದ್ದರಿಂದ ಅರಮನೆ ಪ್ರಾಂಗಣವೆಂದು ಕರೆಯುತ್ತಾರೆ. ಈ ಕಾಲುವೆಯು ಬೆಟ್ಟಪರಿಸರದ ಪೂರ್ವ ಭಾಗದ ಮೇಲಿನಿಂದ ಬಂದ ಮಳೆನೀರು ಈ ಕಾಲುವೆ ಮೂಲಕವಾಗಿ ಗೋಪಾಲಸ್ವಾಮಿ ಹೊಂಡಕ್ಕೆ ಮಳೆನೀರನ್ನು ಹರಿಸುತ್ತಿದ್ದುದನ್ನು ಕಾಣಬಹುದು. ಕಾಲುವೆಯು ಒಂದು ಬದಿ ನೈಸರ್ಗಿಕ ಬಂಡೆಗಲ್ಲನ್ನು ಬಳಸಿಕೊಂಡು ಮತ್ತೊಂದು ಬದಿಯಲ್ಲಿ ಕಲ್ಲುಚಪ್ಪಡಿಗಳ ಮೂಲಕವಾಗಿ ಕಾಲುವೆಯನ್ನು ನಿರ್ಮಿಸಿರುವುದನ್ನು ಕಾಣಬಹುದು. ಕಾಲುವೆಯ ಎತ್ತರ ೪ಅಡಿಯಿದ್ದು ೨೦ಅಡಿಯಷ್ಟು ಉದ್ದವಿರುವ ಕಾಲುವೆಯನ್ನು ನಿರ್ಮಿಸಿದ್ದರ ಹಿಂದಿನ ಉದ್ದೇಶ ಬೆಟ್ಟದ ಮೇಲಿಂದ ಬಂದ ನೀರಿಗೆ ತಡೆಗೋಡೆಯನ್ನಾಗಿ ನಿರ್ಮಿಸಿ ಆ ನೀರನ್ನು ವ್ಯವಸ್ಥಿತವಾಗಿ ಮುಂದಿನ ಸಂಗ್ರಹಣಕ್ಕೆ ಸೇರಿಸುವುದಾಗಿದೆ.

**ಸುರಂಗ ಮಾರ್ಗದ ಕಾಲುವೆ:** ಗೋಪಾಲಸ್ವಾಮಿ ಹೊಂಡದ ಹಿಂಬದಿಯಲ್ಲಿ ನಿರ್ಮಿಸಿರುವ ಈ ಕಾಲುವೆಯು ಸುರಂಗ ಮಾರ್ಗದ ಮೂಲಕವಾಗಿ ನಿರ್ಮಿಸಲು ಕಾರಣ ಅರಮನೆ ಪ್ರಾಂಗಣ ಮತ್ತು ಕಛೇರಿಗಳ ಸಂಕೀರ್ಣ ಮಧ್ಯದಲ್ಲಿ ಈ ಕಾಲುವೆಯು ಹಾಯ್ದು ಹೋಗಿರುವುದರಿಂದ ಆ ಭಾಗದಲ್ಲಿ ತೆರೆದ ಕಾಲುವೆ ಮಾಡಿದಾಗ ಕಾರ್ಯ ಚಟುವಟಿಕೆಗಳಿಗೆ ತೊಂದರೆಯಾಗಬಾರದು ಎಂಬ ಉದ್ದೇಶದಿಂದ ಈ ರೀತಿಯಾಗಿ ನಿರ್ಮಾಣ ಮಾಡಿರುವುದನ್ನು ಕಾಣಬಹುದಾಗಿದೆ. ನೆಲ್ಲಿಕಾಯಿ ಸಿದ್ದಪ್ಪನ ಬೆಟ್ಟದ ಮೇಲಿಂದ ಬಂದ ಮಳೆನೀರನ್ನು ಕೆಳಭಾಗಕ್ಕೆ ವ್ಯವಸ್ಥಿತವಾಗಿ ನೈಸರ್ಗಿಕ ತಂತ್ರಜ್ಞಾನ ಬಳಸಿಕೊಂಡು ಕಲ್ಲು ಗಾರೆಯನ್ನು ಬಳಸಿ ಮೇಲ್ಭಾಗದಿಂದ ಬಂದ ಮಳೆ ನೀರನ್ನ ಬಸಿದು ಆ ಮೂಲಕವಾಗಿ ಸುರಂಗ ಮಾರ್ಗವಾಗಿ ಅಕ್ಕ–ತಂಗಿ ಹೊಂಡಕ್ಕೆ ಹಾಯಿಸಿರುವುದನ್ನು ಕಾಣಬಹುದು. ಈ ಕಾಲುವೆಯ ಒಟ್ಟು ಉದ್ದ ೧೩೦ ಅಡಿ ಇದ್ದು ಇದು ಗೋಪಾಲಸ್ವಾಮಿ ಹೊಂಡದವರೆಗೂ ಇದ್ದು, ತದನಂತರ ತೆರೆದ ಕಾಲುವೆಯ ಮೂಲಕವಾಗಿ ಅಕ್ಕ–ತಂಗಿ ಹೊಂಡಕ್ಕೆ ನೀರು ಹಾಯಿಸಿರುವುದರ ಕುರುಹು ಪ್ರಸ್ತುತ ಸುವ್ಯವಸ್ಥಿತವಾಗಿದೆ. ಕಾಲುವೆಯು ೫ ಅಡಿ ಎತ್ತರದಿಂದ ಇದ್ದು, ಕಾಲುವೆಯ ಮೇಲ್ಭಾಗದಲ್ಲಿ ೬ ಅಡಿಯ ಕಲ್ಲುಚಪ್ಪಡಿಯ ಛಾವಣಿಯನ್ನು ನಿರ್ಮಿಸಿ ಮೇಲ್ಭಾಗದಲ್ಲಿ ಗಾರೆಯಿಂದ ಮುಚ್ಚಿರುವುದರಿಂದಾಗಿ ಆ ಭಾಗದಲ್ಲಿ ಕಾರ್ಯಚಟುವಟಿಕೆಗಳಿಗೆ ಯಾವುದೇ ರೀತಿಯಾಗಿ ತೊಂದರೆಯಾಗದಂತೆ ಕಾಲುವೆಯ ನಿರ್ಮಾಣ ಮಾಡಲಾಗಿದೆ.

**ತಂತ್ರಜ್ಞಾನ:** ಮಳೆ ನೀರಿನ ಸಂರಕ್ಷಣೆಯಲ್ಲಿ ಚಿತ್ರದುರ್ಗ ಕೋಟೆ ಪರಿಸರದಲ್ಲಿ ಪ್ರಾಚೀನ ಕಾಲದಲ್ಲಿಯೆ ವೈಜ್ಞಾನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡಿದ್ದರಿಂದ ಪ್ರಸ್ತುತ ಸಂದರ್ಭದಲ್ಲಿಯೂ ಮಳೆನೀರು ಸಂರಕ್ಷಣೆಯ ಸಾಧನಗಳು ಇಂದಿಗೂ ಸುವ್ಯವಸ್ಥಿತವಾಗಿರಲು ಪ್ರಮುಖ ಕಾರಣ. ಬೆಟ್ಟದ ಮೇಲೆ ಬಿದ್ದಂತಹ ಪ್ರತಿಯೊಂದು ಹನಿಯೂ ವ್ಯರ್ಥವಾಗದ ರೀತಿಯಲ್ಲಿ ಬಳಸಿಕೊಂಡು ತದನಂತರವಾಗಿ ಮತ್ತೊಂದು ಕಡೆಗೆ ನೀರನ್ನು ಹಾಯಿಸಿರುವುದರ ಜೊತೆಗೆ ಸರಣಿಯಾಕಾರದಲ್ಲಿ ನಿರ್ಮಾಣ ಮಾಡಿರುವುದನ್ನು ಕಾಣಬಹುದು. ನೆಲ್ಲಿಕಾಯಿ ಸಿದ್ದಪ್ಪನ ಬೆಟ್ಟದಿಂದ ಬಂದ ಮಳೆನೀರು ಗೋಪಾಲಸ್ವಾಮಿ ಹೊಂಡದಲ್ಲಿ ತುಂಬಿ ಅಲ್ಲಿಂದ ತಣ್ಣೀರು ದೋಣೆಯ ಮೂಲಕ ಸಿಹಿನೀರು ಹೊಂಡಕ್ಕೆ ಹರಿದು ನಂತರ ಸಂತೆ ಹೊಂಡಕ್ಕೆ ತಲುಪಿ ಅಲ್ಲಿಂದ ಗೋನೂರು ಕೆರೆಗೆ ನೀರನ್ನು ವ್ಯವಸ್ಥಿತವಾಗಿ ಹರಿಸಿರುವುದನ್ನು ಕಂಡಾಗ ಮಳೆನೀರಿನ ಬಳಕೆಯನ್ನು ಸಮರ್ಥವಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ.

ಆಯಕಟ್ಟಿನ ಜಾಗದಲ್ಲಿ ಪ್ರತಿಯೊಂದು ಬೃಹತ್ ಕಲ್ಲುಬಂಡೆಗಳ ಕೆಳಭಾಗದಲ್ಲಿ ಸೈನಿಕ ವಸತಿಗೃಹಗಳಿದ್ದು ಮೇಲ್ಛಾವಣಿಯನ್ನಾಗಿ ಬೃಹತ್ ಕಲ್ಲುಬಂಡೆಗಳ ಸಹಾಯದಿಂದ ಅದರ ಸುತ್ತಲೂ ಪ್ರಕಾರ ಗೋಡೆಗಳನ್ನು ನಿರ್ಮಿಸಿಕೊಂಡು



ಸಿದ್ಧೇಶ್ವರ ದೊಣೆ



ತುಪ್ಪದ ಕೊಳ



ಒಡು



ಮಳೆ ಕೊಯ್ಲು ವ್ಯವಸ್ಥೆಯ ತಂತ್ರಜ್ಞಾನ





ಕಂದಕಗಳಿಗೆ ಮಳೆ ನೀರು ಹರಿಸುವ ರೀತಿ

ಮಳೆನೀರು ಒಳಬರದಂತೆ ಕಲ್ಲುಬಂಡೆಯ ಮೇಲೆ ಚಿಕ್ಕ ಕಾಲುವೆಯ ರೀತಿಯಾಗಿ ಮಾಡಿ ಮಳೆನೀರು ಪಕ್ಕದಲ್ಲಿರುವ ನೀರಿನ ಸಂಗ್ರಹಣಾ ವ್ಯವಸ್ಥೆಗೆ ಹೋಗುವಂತೆ ಮಾಡಿರುವುದನ್ನು ಕಾಣಬಹುದಾಗಿದೆ.

ಕೋಟೆ ಪರಿಸರದಲ್ಲಿ ಹಲವಾರು ಕಡೆಗಳಲ್ಲಿ ಕಾಲುವೆಗಳನ್ನು ಬಳಸಿಕೊಂಡು ಆ ಮೂಲಕವಾಗಿ ಮಳೆ ನೀರನ್ನು ವ್ಯವಸ್ಥಿತವಾಗಿ ಸಂಗ್ರಹಣಾ ಸಾಧನಗಳಿಗೆ ಹರಿಸಿರುವುದನ್ನು ನೋಡಬಹುದಾಗಿದೆ. ಅವುಗಳಲ್ಲಿ ಕಂದಕಗಳನ್ನಾಗಿ ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಮುಖ್ಯವಾಗಿ ಕೋಟೆ ಪರಿಸರದ ಪ್ರವೇಶ ದ್ವಾರದ ಮುಂಬದಿಯಲ್ಲಿರುವ ಕಾಲುವೆಯನ್ನು ರಕ್ಷಣಾ ತಂತ್ರವನ್ನಾಗಿ ಉಪಯೋಗಿಸಿಕೊಳ್ಳಲಾಗಿದೆ. ಆ ಕಂದಕಕ್ಕೆ ನೀರು ಹರಿಸಿರುವುದು ವಿಶೇಷವಾಗಿ ಕೋಟೆ ಪರಿಸರದ ಮೇಲ್ಭಾಗದಿಂದಲೇ ಮಳೆನೀರನ್ನು ಈ ಕಂದಕಕ್ಕೆ ಹರಿಸಿರುವುದನ್ನು ಹಲವು ನಿಸರ್ಗದತ್ತವಾದ ತಂತ್ರಜ್ಞಾನ ಬಳಸಿಕೊಂಡು ನೀರು ಹರಿಸಲಾಗಿದ್ದು ಬೆಟ್ಟದ ಮೇಲಿಂದ ಬಿದ್ದ ಮಳೆ ನೀರು ಕಂದಕ ಗೋಡೆಯ ಬಳಿ ಹರಿದು ಬಂದಾಗ ಆ ನೀರು ನೇರವಾಗಿ ಕಂದಕಕ್ಕೆ ಹೋಗುವ ರೀತಿಯಲ್ಲಿ ನಾಲ್ಕು ಭಾಗದಿಂದಲೂ ಕಲ್ಲುಚಪ್ಪಡಿಗಳನ್ನು ಇಳಿಜಾರು ರೀತಿಯಲ್ಲಿ ಹಾಸಿ ಮದ್ಯದಲ್ಲಿ ಚಿಕ್ಕ ಕಾಲುವೆಯಷ್ಟು ಅಂದರೆ ೧೫ ಅಡಿಯಷ್ಟು ಉದ್ದದ ಕಾಲುವೆ ರೀತಿಯಾಗಿ ನಿರ್ಮಿಸಿ ಅದರ ಮೂಲಕ ನೀರು ಸರಾಗವಾಗಿ ಕಂದಕಕ್ಕೆ ಹೋಗುವಂತೆ ಮಾಡಿರುವುದು ವಿಶೇಷವೆನಿಸುತ್ತದೆ.

ಒಡ್ಡುಗಳಿಗೆ ನೀರು ಹರಿಸುವ ರೀತಿಯು ತುಂಬಾ ವ್ಯವಸ್ಥಿತ ತಂತ್ರಜ್ಞಾನವನ್ನು ಅಳವಡಿಸಿದ್ದು ಸಣ್ಣ ಮತ್ತು ದೊಡ್ಡ ಒಡ್ಡುವಿಗೆ ನೀರು ಹರಿಸುವ ಮಧ್ಯದಲ್ಲಿ ತಡೆಗೋಡೆಯನ್ನು ನಿರ್ಮಿಸಿದ್ದು ಈ ತಡೆಗೋಡೆಯ ಮೂಲಕವಾಗಿ ನೀರು ಹರಿಸಿರುವ ರೀತಿ ವಿಶಿಷ್ಟವಾಗಿದೆ. ಸಾಮಾನ್ಯವಾಗಿ ಈ ರೀತಿಯಾದಂತಹ ತಡೆಗೋಡೆಯನ್ನು ಬಳಸಿದಾಗ ಗೋಡೆಯ ತಳಭಾಗದಲ್ಲಿಯೆ ನೀರು ಹರಿಸುವುದು ಸಾಮಾನ್ಯ. ಆದರೆ ಇಲ್ಲಿ ಆ ರೀತಿಯಾಗಿ ಬಳಸದೆ ಗೋಡೆಯ ಮೇಲ್ಭಾಗದಿಂದಲೆ ದೊಡ್ಡ ಒಡ್ಡುವಿಗೆ ನೀರು ಹರಿಸಲಾಗಿದೆಯಾದರು ಅಲ್ಲಿಯೆ ವಿಶೇಷ ತಂತ್ರಜ್ಞಾನ ಬಳಸಿರುವುದನ್ನು ನೋಡಬಹುದು ತಡೆಗೋಡೆಯು ಎರಡು ಹಂತದ ಪ್ರಕಾರ ಗೋಡೆಯಾಗಿ ನಿರ್ಮಿಸಲಾಗಿ ನೀರನ್ನು ಇಂಗಿಸುವ ರೀತಿಯಲ್ಲಿ ನಿರ್ಮಾಣ ಮಾಡಿದ್ದಾರೆ. ಮೊದಲ ಹಂತವಾಗಿ ನೀರು ಇಂಗಿಸುವ ವ್ಯವಸ್ಥೆ ಮಾಡಲಾಗಿದ್ದು ರಭಸದಿಂದ ಬರುವ ನೀರು ಎರಡನೇ ತಡೆಗೋಡೆಯಲ್ಲಿ ಸಂಪೂರ್ಣ ನೀರು ಇಂಗುವಂತೆ ಮಾಡಲಾಗಿದೆ.

ಚಿತ್ರದುರ್ಗ ಕೋಟೆಪರಿಸರದಲ್ಲಿ ಪ್ರಾಚೀನ ಕಾಲದಲ್ಲಿಯೇ ಆಧುನಿಕ ತಂತ್ರಜ್ಞಾನಕ್ಕೂ ಮಿಗಿಲಾಗಿ ಮಳೆಕೊಯ್ಲು ವ್ಯವಸ್ಥೆಯನ್ನು ಬಳಸಿಕೊಂಡು ಜಲಕ್ಷಾಮ, ಬರಗಾಲಗಳಂತಹ ಸಂಧರ್ಭವನ್ನು ಸಮರ್ಥವಾಗಿ ನಿಭಾಯಿಸಿರುವುದು ಸೋಜಿಗವೆ ಸರಿ. ಈ ಪರಿಸರದಲ್ಲಿ ಆಳ್ವಿಕೆನಡೆಸಿರುವ ಮನೆತನಗಳು ಈ ಪ್ರದೇಶದ ಭೌಗೋಳಿಕ ಹಿನ್ನೆಲೆಯಲ್ಲಿ ನೀರಿನ ಸಮಸ್ಯೆಯನ್ನು ಬಹುಬೇಗ ಬಲ್ಲವರಾಗಿದ್ದರಿಂದಲೆ ವೈಜ್ಞಾನಿಕ ತಂತ್ರಜ್ಞಾನದ ಜೊತೆಗೆ ಸ್ಥಳಿಯವಾಗಿ ಸಿಗುವಂತಹ ನೈಸರ್ಗಿಕವಾಗಿ ಸಿಗುವ ಉಪಕರಣಗಳಾದಂತಹ ಮರಳು, ಕಲ್ಲು, ಗಾರೆಗಳನ್ನು ಬಳಸಿಕೊಂಡು ಆ ಕಾಲದಲ್ಲಿಯೇ ನಿರ್ಮಾಣ ಮಾಡಿರುವುದು ಅವರ ವೈಜ್ಞಾನಿಕ ಬುದ್ಧಿಮತ್ತೆಗೆ ಹಿಡಿದ ಕೈಗನ್ನಡಿ ಎಂದರೆ ತಪ್ಪಾಗಲಾರದು, ಪ್ರಸ್ತುತ ಸಂದರ್ಭದಲ್ಲಿಯು ಚಿತ್ರದುರ್ಗ ಕೋಟೆ ಪರಿಸರದ ಮಳೆಕೊಯ್ಲು ವ್ಯವಸ್ಥೆಯು ಪ್ರಾಕೃತಿಕ ಪರಿಸರಕ್ಕೆ ತಕ್ಕಂತೆ ಮೂಲವಸ್ತುಗಳನ್ನು ಬಳಸಿಕೊಂಡು ನಿರ್ಮಾಣ ಮಾಡಿದ್ದು, ಈ ರೀತಿಯಾದ ಮಳೆನೀರು ಸಂಗ್ರಹಣೆ ತಂತ್ರಜ್ಞಾನವು ಆಧುನಿಕ ತಂತ್ರಜ್ಞಾನಕ್ಕೆ ಸವಾಲಿನ ರೀತಿಯಲ್ಲಿ ನಿರ್ಮಾಣ ಮಾಡಲಾಗಿದೆ.



## ಆಕರ ಗ್ರಂಥಗಳು


೧. ಕೊಟ್ರಯ್ಯ ಸಿ.ಎಂ., ೨೦೦೧, ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೨. ಇತಿಹಾಸ ದರ್ಶನ ಸಂಪುಟ ೬ ೧೯೯೨.

೩. ಕೆ. ಮಂಜುನಾಥ ನಾಯಕ್, ೨೦೦೫, ಚಿತ್ರದುರ್ಗ ಜಿಲ್ಲಾ ದರ್ಶನ, ಪುಟ ೩೪, ೩೫. ಪಾರ್ವತಿ ಪ್ರಕಾಶನ, ಚಿತ್ರದುರ್ಗ.

೪. ಅಂತರ್ವಾಣಿ ಸಂಪುಟ ೦೫, ಲೇಖಕರು ಮಂಜುನಾಥ ಕೆ. ಚಿತ್ರದುರ್ಗ ನಗರದಲ್ಲಿನ ಚೆನ್ನಕೇಶವಸ್ವಾಮಿ ಹೊಂಡ: ಒಂದು ಅಧ್ಯಯನ, ಪುಟ ೧೦೨. ಇಂದಣೀಲಮಣಿಂ ಪ್ರಕಾಶನ, ಚಿಕ್ಕೋಡಿ.

೫. ರಾಜರಾಮ ಹೆಗಡೆ ಸಂಪಾದಕರು, ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅದ್ಯಯನ. ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೬. ಐತಿಹಾಸಿಕ ಚಿತ್ರದುರ್ಗ, ಲೇಖಕರು ಎನ್. ಗಂಡುಗಲಿ ಚಿತ್ರದುರ್ಗದ ಜಲಾಶಯಗಳು.

# ವಿಜಯನಗರ ಪಟ್ಟಣದ ಕಿರುಗಾಲುವೆಗಳು

**ಪಿ. ಮಲ್ಲೇಶಪ್ಪ***

**ಮ**ಧ್ಯಕಾಲೀನ ಇತಿಹಾಸದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಪಡೆದಂತ ರಾಜವಂಶಗಳಲ್ಲಿ ವಿಜಯನಗರವೂ ಒಂದು. ಈ ಸಾಮ್ರಾಜ್ಯದ ರಾಜಧಾನಿಯಾದ ವಿಜಯನಗರವು ಇಂದು ಹಂಪಿ ಎಂದು ಪ್ರಚಲಿತದಲ್ಲಿದ್ದು, ಇದು ತುಂಗಭದ್ರಾ ನದಿಯ ದಕ್ಷಿಣ ದಂಡೆಯಲ್ಲಿದೆ. ಕ್ರಿ.ಶ. ೧೩೩೬ರಿಂದ ೧೫೬೫ರವರೆಗೆ ಆಳ್ವಿಕೆ ನಡೆಸಿದ ವಿಜಯನಗರದ ಸಂಗಮ, ಸಾಳುವ, ತುಳುವ ಮತ್ತು ಅರವೀಡು ಮನೆತನಗಳ ಕಾಲದಲ್ಲಿ ರಾಜಧಾನಿಯಾಗಿ ಪ್ರಸಿದ್ಧಿಯನ್ನು ಪಡೆಯಿತು. ವಿಜಯನಗರವು ಮಧ್ಯಯುಗೀನ ಭಾರತದ ಅತ್ಯಂತ ಪ್ರಸಿದ್ಧ ಹಾಗೂ ವ್ಯವಸ್ಥಿತವಾಗಿ ನಿರ್ಮಾಣಗೊಂಡ ನಗರ. ಅಂದು ಇಲ್ಲಿಗೆ ಭೇಟಿ ನೀಡಿದ್ದ ಪರ್ಶಿಯಾದ ರಾಯಭಾರಿ ಅಬ್ದುಲ್ ರಜಾಕ್ ಹೇಳುವಂತೆ "ವಿಜಯನಗರವು ಬಹಳ ಜನವಸತಿಯುಳ್ಳ ಊರು... ಬಿಜನಗರದಂಥ ನಗರವನ್ನು ಕಣ್ಣು ಕಂಡಿಲ್ಲ, ಕಿವಿ ಕೇಳಿಲ್ಲ, ಈ ನಗರವನ್ನು ಹೇಗೆ ನಿರ್ಮಿಸಿದ್ದಾರೆಂದರೆ ಏಳು ದುರ್ಗಗಳು, ಏಳು ಕೋಟೆಗಳು ಒಂದನೊಂದು ಆವರಿಸಿವೆ. ಮೂರನೆಯ ಕೋಟೆಯಿಂದ ಏಳನೆಯ ಕೋಟೆಯವರೆಗೆ ಅಸಂಖ್ಯಾತ ಜನಗಳನ್ನು ಅನೇಕ ಅಂಗಡಿ ಬೀದಿಯನ್ನು ನೋಡಬಹುದು ಎಂದಿದ್ದಾನೆ.[೧] ಈ ಪ್ರಖ್ಯಾತ ರಾಜಧಾನಿಯಲ್ಲಿ ನಾಗರಿಕ ವ್ಯವಸ್ಥೆ ಅದರಲ್ಲೂ ದಿನನಿತ್ಯ ಬಳಕೆಗೆ ಮೂಲ ಆಧಾರವಾದ ನೀರು ಸರಬರಾಜು ವ್ಯವಸ್ಥೆಯನ್ನು ಸೂಚಿಸುವ ಹಲವಾರು ಕಿರುಗಾಲುವೆಗಳು ಇಂದಿಗೂ ಕಂಡುಬರುತ್ತದೆಯಲ್ಲದೇ ಅಧ್ಯಯನದ ದೃಷ್ಟಿಯಿಂದ ಮಹತ್ವವನ್ನು ಪಡೆದುಕೊಂಡಿದೆ. ಪ್ರಸ್ತುತ ಪ್ರಬಂಧದಲ್ಲಿ ವಿಜಯನಗರ ಪಟ್ಟಣದ ಕಿರುಗಾಲುವೆಗಳನ್ನು ಕುರಿತು ಚರ್ಚಿಸುವ ಉದ್ದೇಶವನ್ನು ಹೊಂದಿದೆ. ಈಗಾಗಲೇ ವಿಜಯನಗರ ಪಟ್ಟಣದ ನೀರು ಸರಬರಾಜು ಮತ್ತು ನೀರಾವರಿಯನ್ನು ಕುರಿತಂತೆ ಜಂಕಿನ್ಸ್ ಡಿ.ಜೆ., ಕೊಟ್ರಯ್ಯ ಸಿ.ಟಿ.ಎಂ., ಬಾಲಸುಬ್ರಮಣ್ಯ, ಚನ್ನಬಸಪ್ಪ ಎಸ್. ಪಾಟೀಲ್, ಸಿ.ಎಸ್. ವಾಸುದೇವನ್, ಸಿ. ಮಹದೇವ, ಹರಿಹರ ಶ್ರೀನಿವಾಸರಾವ್, ಟಿ.ವಿ. ನಾಗರಾಜ, ಎಸ್.ವೈ. ಸೋಮಶೇಖರ್, ವಿರೂಪಾಕ್ಷಿ ಪೂಜಾರಹಳ್ಳಿ, ಮುಂತಾದ ವಿದ್ವಾಂಸರು ಅಧ್ಯಯನ ಮಾಡಿದ್ದಾರೆ.

ಕಾಲುವೆಗಳು ನೀರು ಸರಬರಾಜು ಮಾಡುವ ಅತಿ ಮಹತ್ವದ ಸಾಧನಗಳು. ರಾಜಧಾನಿಯಲ್ಲಿ ದಿನನಿತ್ಯ ಹಾಗೂ ಕೃಷಿಗೆ ಅನೂಕುಲವಾಗುವಂತೆ ಕಿರುಗಾಲುವೆಗಳನ್ನು ರಚಿಸಿಕೊಂಡಿರುವುದು ಕಾಣಬಹುದು. ಸಾಕಷ್ಟು ನೀರಿನ ಸರಬರಾಜಿಗೆ ತಗ್ಗು ಅಥವಾ ಸಮತಟ್ಟಾದ ಭೂ ಸ್ವರೂಪ ಮತ್ತು ವಿಸ್ತಾರವಾದ ಜಲಾನಯನ ಪ್ರದೇಶ ಇವು ಕಾಲುವೆಗಳಿಂದ ನೀರನ್ನು ವ್ಯರ್ಥವಾಗದಂತೆ ಉಪಯೋಗಿಸಿರುವುದನ್ನು ಕಾಣುತ್ತೇವೆ. ಇಲ್ಲಿನ ತುಂಗಭದ್ರಾ ನದಿಯ ನೀರನ್ನು ಸಮರ್ಪಕವಾಗಿ ಬಳಸಿಕೊಳ್ಳಲಾಗಿದೆ. ಕಾಲುವೆಗಳಲ್ಲಿ ಮುಖ್ಯವಾಗಿ ಎರಡು ವಿಧಗಳುಂಟು ಅವು ಮಹಾಪೂರ ಕಾಲುವೆಗಳು ಮತ್ತು ಸರ್ವಕಾಲಿಕ ಕಾಲುವೆಗಳು ಎಂದು, ನದಿಗಳಿಗೆ ಮಹಾಪೂರ ಕಾಲುವೆಗಳು ಇವುಗಳಿಂದ ನೀರಿನ ಸರಬರಾಜು ಬಹಳ ಅನಿಶ್ಚಿತ, ಮಳೆಗಾಲದಲ್ಲಿ ಮಾತ್ರ ಇವುಗಳ ನೀರು ಉಪಯೋಗಿಸಲು ಲಭ್ಯವಾಗುತ್ತದೆ. ಸದಾಕಾಲ ಹರಿಯುವ ನದಿಗಳಿಂದ ಅಥವಾ ಒಡ್ಡು ಕಟ್ಟೆ ನಿರ್ಮಿಸಿದ ಜಲಾಶಯಗಳಿಂದ ನೀರನ್ನು ಪಡೆಯುವ ಕಾಲುವೆಗಳಿಗೆ ಸರ್ವಕಾಲಿಕ ಕಾಲುವೆಗಳೆನ್ನುವರು.[೨]

ಕಿರುಗಾಲುವೆಗಳು ಎಂದರೇ ಸಣ್ಣಗಾಲುವೆ, ನೀರನ್ನು ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಉಪಯೋಗಿಸಲು ಬಳಸಿರುವುದನ್ನು ಕಾಣುತ್ತೇವೆ. ಜನರಿಗೆ, ಪ್ರಾಣಿಗಳಿಗೆ ಮತ್ತು ವ್ಯವಸಾಯಕ್ಕೆ ನೀರಿನ ವ್ಯವಸ್ಥೆಯನ್ನು ಒದಗಿಸುವುದು ಒಂದು ಸಾಮಾಜಿಕ ಜವಾಬ್ದಾರಿಯಾಗಿತ್ತೆಂಬುದು ಹಂಪೆಯ ಕಡಲೆಕಾಳು ಗಣೇಶನ ಗುಡಿಯ ಮುಂದಿರುವ ಅಗುಸೆಯಲ್ಲಿರುವ ಶಾಸನದಿಂದ ತಿಳಿದುಬರುತ್ತದೆ.೩ ನೀರು ದಿನನಿತ್ಯ ಬಳಸಲು ಬೇಕಾಗಿರುವ ಜೀವಜಲವಾಗಿದೆ. ನೀರಿಲ್ಲದ ಜೀವನವನ್ನು ಊಹಿಸುವುದು ಅಸಾಧ್ಯವಾದ ಮಾತಾಗಿದೆ. ನೀರಿನಿಂದಾಗುವ ಪ್ರಯೋಜನಗಳು ಅಪರಿಮಿತ. ತೊಳೆಯುವುದಕ್ಕೆ ವೈಯಕ್ತಿಕ ನೈರ್ಮಲ್ಯಕ್ಕೆ ನೀರು ಆಧಾರ. ನೀರು ದೇಹದಲ್ಲಿನ ಎಲ್ಲಾ ಕಲ್ಮಶಗಳನ್ನು ಮೂತ್ರ, ಮಲ, ಬೆವರಿನ ಮೂಲಕ ಹೊರಗೆ

* ಪಿಎಚ್‌ಡಿ ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿವಿ, ಹಂಪಿ, ಮೊ. ೯೯೮೬೦೭೯೧೦೫

ಹಾಕಲು ಸಹಾಯ ಮಾಡುವಂಥದ್ದು ತನ್ಮೂಲಕ ದೇಹ ಶುದ್ಧಗೊಳ್ಳುತ್ತದೆ. ದೇಹವು ರೋಗಗಳ ಗೂಡಾಗೂವುದು ತಪ್ಪುತ್ತದೆ. ಹಾಗೂ ನಗರಗಳು ನೈರ್ಮಲ್ಯದಿಂದ ಇರುವುದಕ್ಕೆ ಬೇಕಾದ ವ್ಯವಸ್ಥೆ ಎಂದರೆ ನೀರು ಸರಬರಾಜು ವ್ಯವಸ್ಥೆ, ಏಕೆಂದರೆ ನೀರು ಮಾನವನ ಜೀವನದ ಅವಿಭಾಜ್ಯ ಅಂಗವಾಗಿದ್ದು ಸ್ವಚ್ಛ, ನಿರ್ಮಲ, ನೀರು ಅತೀ ಅವಶ್ಯಕವಾಗಿರುತ್ತದೆ. ಇಂತಹ ನಿಷ್ಕಲ್ಮಶ ನೀರನ್ನು ಬಳಸುವ ಜನರು ಆರೋಗ್ಯವಂತರಾಗಿರಲು ಸಾಧ್ಯವಿರುತ್ತದೆ. ಇಂತಹ ಆರೋಗ್ಯವಂತ ಪ್ರಜೆಗಳು ದೇಶದ ಆರ್ಥಿಕಾಭಿವೃದ್ಧಿ ಮತ್ತು ರಕ್ಷಣೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಾರೆ. ಇದನ್ನು ಅರ್ಥಮಾಡಿಕೊಂಡ ಭಾರತೀಯ ರಾಜರುಗಳಲ್ಲಿ ವಿಜಯನಗರದ ಅರಸರು ಪ್ರಮುಖರು ಈ ದಿಸೆಯಲ್ಲಿ ಅವರು ಜನಸಾಮನ್ಯರ ಮತ್ತು ರಾಜ್ಯದ ಹಿತದೃಷ್ಠಿಯಿಂದ ಉತ್ತಮವಾದ ನೀರು ಸರಬರಾಜು ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದರು. ದೈನಂದಿನ ಬಳಕೆಗೆ ಕೆರೆ, ನದಿ, ಮತ್ತು ಮಳೆಯಿಂದ ಶೇಖರಿಸಿದ ನೀರನ್ನು ರಾಜಧಾನಿಯ ಎಲ್ಲಾ ಭಾಗಗಳಿಗೂ ವ್ಯವಸ್ಥಿತವಾಗಿ ಸಾಗಿಸುವ ಕಿರುಗಾಲುವೆಗಳ ಜಾಲವನ್ನು ಹೊಂದಿರುವುದು ಕಾಣುತ್ತೇವೆ. ಪ್ರಮುಖವಾಗಿ ಚಂದ್ರಶೇಖರ ದೇವಾಲಯದ ಸುತ್ತಮುತ್ತಲಿನ ಪ್ರದೇಶ, ಭೋಜನಶಾಲೆ ಮತ್ತು ನೀರಿನ ಅರವಟ್ಟಿಗೆ ಸಮೀಪ, ಮಹಾನವಮಿ ದಿಬ್ಬ ಸಮೀಪದ ರಾಜಾಂಗಣ, ಸುತ್ತಮುತ್ತಲಿನ ಪ್ರದೇಶದಲ್ಲಿ ತೆರೆದ ಮತ್ತು ಮುಚ್ಚಿದ ಕಿರುಗಾಲುವೆಗಳು ನಿರ್ಮಿಸಿದ್ದು ಅಲ್ಲಲ್ಲಿ ಪುಷ್ಕರಣಿ, ತೆರೆದ ದೊಡ್ಡ ತೊಟ್ಟಿಗಳು, ಕಲ್ಲಿನ ತೊಟ್ಟಿಗಳಿಗೆ ನೀರು ಸರಬರಾಜು ಮಾಡುವ ಕಿರುಗಾಲುವೆಗಳಿರುವುದನ್ನು ಕಾಣುತ್ತೇವೆ.

**ಚಂದ್ರಶೇಖರ ದೇವಾಯದ ಸುತ್ತಮುತ್ತಲಿನ ಪ್ರದೇಶ:** ಕಮಲಾಪುರದಿಂದ ಕೋಟೆಯನ್ನು ದಾಟಿ ರಾಣಿಯರ ಸ್ನಾನಗೃಹಕ್ಕೆ ಸಾಗುವಾಗ ಬಲಭಾಗದಲ್ಲಿರುವ ಚಂದ್ರಶೇಖರ ದೇವಾಲಯ ಹಿಂಭಾಗ ಅಂದರೆ ಪಶ್ಚಿಮ ದಿಕ್ಕಿನಿಂದ ಹಾದು ಉತ್ತರಕ್ಕೆ ಚಲಿಸಿರುವ ನೀರು ಸರಬರಾಜು ವ್ಯವಸ್ಥೆಯ ಕುರುಹುಗಳನ್ನು ಸೂಚಿಸುವ ಕಲ್ಲಿನ ಕಿರುಗಾಲುವೆ ಇರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗುರುತ್ತಿಸಲಾಗಿದೆ. ಈ ಒಂದು ಕಲ್ಲಿನ ಕಿರುಗಾಲುವೆಗೆ ಹಿಂದೆ ಕಮಲಾಪುರ ಕೆರೆಯಿಂದ ನೀರು ಸರಬರಾಜು ಆಗುತ್ತಿತ್ತು ಎಂಬುದು ಸ್ಥಳೀಯರ ಅಭಿಪ್ರಾಯವಾಗಿದೆ. ಕಿರುಗಾಲುವೆಯು ಭೂಮಿಯ ಮೇಲ್ಭಾಗದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಕಮಲಾಪುರದ ಕೆರೆಯಿಂದ ಇದು ಕೆಳಭಾಗದಲ್ಲಿರುವುದರಿಂದ ಸಹಜವಾಗಿ ನೀರು ಸರಬರಾಜು ಮಾಡಿರುವುದನ್ನು ಗುರುತಿಸಬಹುದು. ಚಂದ್ರಶೇಖರ ದೇವಾಲಯದ ಹಿಂಭಾಗದಲ್ಲಿರುವ ಕಲ್ಲಿನ ಕಿರುಗಾಲುವೆಯು ಗ್ರಾನೈಟ್ ಕಲ್ಲು, ಹಾಗೂ ಗಾರೆಯನ್ನು ನಿರ್ಮಿಸಲಾಗಿದೆ. ಪ್ರಸ್ತುತ ಕಿರುಗಾಲುವೆಯ ಕೆಳಗಿನ ಭಾಗ ೨ರಿಂದ ೩ ಮೀ. ಅಗಲವಾಗಿದೆ. ಅಲ್ಲದೇ ನೀರು ನೆಲದಲ್ಲಿ ಇಂಗದ ಹಾಗೇ ಗಾರೆಲೇಪನ ಮಾಡಿರುವುದು ಕಂಡುಬರುತ್ತದೆ. ದೇವಾಲಯದ ಪ್ರಕಾರ ಗೋಡೆಯ ನೈರುತ್ಯದಿಂದ ಮುಂದುವರೆಯುವ ಕಿರುಗಾಲುವೆಯು ಎಡ ಮತ್ತು ಬಲ ಭಾಗದ ಗ್ರಾನೈಟ್ ಕಲ್ಲುಗಳಿಂದ ಕಟ್ಟಿ ಗಾರೆಯಿಂದ ಭದ್ರಪಡಿಸಲಾಗಿದೆ. ಹೀಗೆ ೨೬ ಮೀ.ವರೆಗೂ ಉದ್ದ ಇರುವ ಇದು ಭೂಮಿಯ ಮೇಲ್ಭಾಗದಲ್ಲಿ ಇಂದಿಗೂ ಭದ್ರವಾಗಿದೆ. ಹಾಗೂ ಕೆಲವೊಂದು ಕಡೆ ಕಿರುಗಾಲುವೆಗೆ ಕಟ್ಟಿರುವ ಕಲ್ಲುಗಳು ಬಿಂದಿರುವುದನ್ನು ಕಾಣುತ್ತೇವೆ. ಕಿರುಗಾಲುವೆಯ ಬಲ ಮತ್ತು ಎಡ ಭಾಗದ ಕಲ್ಲುಗಳ ೫೦ ಸೆ.ಮೀ. ಎತ್ತರವಾಗಿವೆ. ಅಲ್ಲದೇ ಕಿರುಗಾಲುವೆಗಳ ಒಳ ಭಾಗವು ೬೦ ಸೆ.ಮೀ. ಅಗಲವಾಗಿದ್ದು ನೀರು ಸರಬರಾಜು ಆಗಲು ವ್ಯವಸ್ಥೆ ಮಾಡಲಾಗಿದೆ. ಕಿರುಗಾಲುವೆಯು ನೆರವಾಗಿರದೇ ಅಲಲ್ಲಿ ತಿರುವುಗಳ ಮಾಡಿರುವುದು ನೀರು ಸರಬರಾಜು ಆಗುವುದಕ್ಕೆ ಸುಗಮವಾಗುವಂತೆ ಮಾಡಿರುವುದನ್ನು ಕಾಣುತ್ತೇವೆ. ಕಿರುಗಾಲುವೆಯು ಮುಂದುವರೆದಂತೆ ಭೂಮಿಯ ತಗ್ಗು ದಿನ್ನೆಗಳನ್ನು ಗುರುತಿಸಿ ಭೂ ಭಾಗದಿಂದ ೫ ಮೀ ಎತ್ತರದಲ್ಲಿ ಕಿರುಗಾಲುವೆಯನ್ನು ಎತ್ತರಿಸಿರುವುದನ್ನು ಗಮನಿಸಿದರೆ ಭೂಮಿಯ ಗುರುತ್ವಕಾರ್ಷಣೆ ಅನುಗುಣವಾಗಿ ಈ ಕಿರುಗಾಲುವೆ ಕಟ್ಟಿರುವುದನ್ನು ಕಾಣಬಹುದು. ಈ ಕಿರುಗಾಲುವೆಯು ನೈರುತ್ಯದಿಂದ ೨೬ ಮೀ. ವರೆಗೂ ಉದ್ದವಾಗಿದೆ. ಕಿರುಗಾಲುವೆ ಭೂಮಿಯ ಮೇಲ್ಭಾಗದಲ್ಲಿ ಕಂಡುಬರುವುದಲ್ಲದೇ ಆನಂತರ ೮೪ ಮೀ. ವರೆಗೆ ಕಿರುಗಾಲುವೆ ಸಂಪೂರ್ಣ ಹಾಳಗಿದ್ದು. ಕೇವಲ ಪ್ರಾಚ್ಯಾವಶೇಷಗಳು ಮಾತ್ರ ಕಾಣುತ್ತೇವೆ. ಹಾಗೂ ಅಲ್ಲಿಂದ ಪಶ್ಚಿಮಕ್ಕೆ ತಿರುಗುವ ಕಿರುಗಾಲುವೆಯು ಸಹ ೧೩೮ ಮೀ. ಉದ್ದದ ವರೆಗೆ ಕಿರುಗಾಲುವೆಯ ಮುಂದುವರೆದಿರುವುದನ್ನು ಅಲ್ಲಿರುವ ಪ್ರಾಚ್ಯಾವಶೇಷಗಳಿಂದ ಗುರುತಿಸಲಾಗಿದೆ. ಈ ಕಿರುಗಾಲುವೆಯ ತಿರುವಿನ ಭಾಗದಲ್ಲಿ ಸ್ವಲ್ಪ ಮುಂದೆ ಕಿರುಗಾಲುವೆಗೆ ನಾಲ್ಕು ಸಣ್ಣ ಕಿಂಡಿಗಳು ಇದ್ದು ದಕ್ಷಿಣ ಮತ್ತು ಉತ್ತರ ಕಡೆ ನೀರು ಹರಿಯಲು ಮಾಡಿರುವ ಉಪ ಕಿರುಗಾಲುವೆಗಳು ಆಗಿರುವ ಸಾಧ್ಯತೆಯಿದೆ. ಅಲ್ಲಿಂದ ಮುಂದೆ ಕಾಣಿಸುವುದೇ ಕಮಲಮಹಲ್, ಗಜಶಾಲೆಯು ಇರುವುದನ್ನು ಕಾಣುತ್ತೇವೆ. ಆನಂತರ ಕಿರುಗಾಲುವೆ ಭಾಗ ಕಾಣಿಸದು ಭೂಮಿಯ ಒಳ ಭಾಗದಲ್ಲಿ ಹೂತುಹೋಗಿರಬಹುದು, ಹಾಗೂ ಅಲ್ಲಿಂದ ಮುಂದೆ ಮಹಾನವಮಿ ದಿಬ್ಬ, ಅಂಲಕೃತ ಪುಷ್ಕರಣಿಯ ಕಡೆಗೆ ಸಾಗಿರುವ ಸಾಧ್ಯತೆಯಿದೆ.

ತಿರುವೇಂಗಳನಾಥ (ಸರಸ್ವತಿ) ದೇವಾಲಯದಿಂದ ಎಡಕ್ಕೆ ಸ್ವಲ್ಪ ಮುಂದೆ ಸಾಗಿದರೆ ನಮಗೆ ಕೆಲವು ಕಟ್ಟಡವು ಸೇರಿದಂತೆ ಅನೇಕ ನೀರು ಸರಬರಾಜು ವ್ಯವಸ್ಥೆಯನ್ನು ನಿರೂಪಿಸುವ ಪ್ರಾಚ್ಯಾವಶೇಷಗಳ ಕುರುಹುಗಳು ಇರುವುದನ್ನು ಕಾಣುತ್ತೇವೆ. ಇಲ್ಲಿ ಪ್ರಮುಖವಾಗಿ ನಾಲ್ಕು ತೊಟ್ಟಿಗಳು ಇರುವುದು ಸ್ಪಷ್ಟವಾಗಿ ಕಾಣುತ್ತೇವೆ. ಅದರಲ್ಲಿ ಮೂರು ತೊಟ್ಟಿಗಳಿಗೆ ನೀರಿನ ಸರಬರಾಜು ಆಗಲು ಕಿರುಗಾಲುವೆಗಳ ವ್ಯವಸ್ಥೆಯನ್ನು ಗುರುತಿಸಬಹುದಾಗಿದೆ. ಅದರಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಸಾಗುವ ಕಿರುಗಾಲುವೆಯು ಉತ್ತರ ಮತ್ತು ದಕ್ಷಿಣವಾಗಿ ನಿರ್ಮಿಸಿರುವ ಕಿರುಗಾಲುವೆಯು ಪ್ರಾರಂಭವಾಗುವ ಭಾಗದಲ್ಲಿ ಅಂದರೆ ಉತ್ತರಕ್ಕೆ ಕೋಟೆಯ ಗೋಡೆಯ ೧೬ ಮೀ ಉದ್ದವಿದೆ. ಕೆಳಭಾಗದಲ್ಲಿ ಇರುವ ಕಿರುಗಾಲುವೆಯು ದಕ್ಷಿಣ ಭಾಗವು ೧೦ ಸೆ.ಮೀ. ದಪ್ಪದ ಗಚ್ಚು ಗಾರೆ ಲೇಪನ ಮಾಡಲಾಗಿದೆ. ೪೦ ಸೆ.ಮೀ. ಒಳ ಭಾಗವು ಅಗಲವಿದೆ ಹೀಗೆ ಸಾಗುವ ಕಾಲುವೆಯು ೭.೩೦ ಮೀ. ನಂತರ ಕಿರುಗಾಲುವೆಯ ಕೆಳಭಾಗದಲ್ಲಿ ೭೦ ಸೆ. ಮೀ. ಕೆಳ ಭಾಗದಲ್ಲಿ ಒಂದು ವಾಲು ಇದೆ.(ವಾಲ್ ಸಂಖ್ಯೆ ೧) ಉತ್ತರಕ್ಕೆ ಒಂದು ಕಿಂಡಿಯಿದೆ. ಇಲ್ಲಿಂದ ನೀರು ಸರಬರಾಜು ಆಗುತ್ತಿರುವುದನ್ನು ಕಾಣುತ್ತೇವೆ.  ಈ ಒಂದು ವಾಲು ೯೦ ಸೆ.ಮೀ. ಇದೆ, ಅಗಲ ೪೦ ಸೆ.ಮೀ., ಆಳ ೫೦ ಸೆ.ಮೀ. ಇದೆ. ನಂತರ ೮ ಮೀ ಗಚ್ಚುಗಾರೆ ಲೇಪಿತ ಉತ್ತಮವಾದ ಸ್ಥಿತಿಯಲ್ಲಿದೆ. ಆನಂತರ ಸ್ವಾಭಾವಿಕ ಕಲ್ಲಿನ ಭಾಗ ೬ ಮೀ. ಉದ್ದವಿದೆ, ೫ ಮೀ. ಸಣ್ಣ ತಿರುವು ಪಡೆದು ಮುಂದೆ ಸಾಗಿ, ೪ ಮೀ. ನಂತರ ತಿರುವು ಮುಕ್ತಾಯ, ೯ ಮೀ. ಗಚ್ಚುಗಾರೆ ಭಾಗವು ಭಗ್ನವಾಗಿದೆ, ನಂತರ ೨ಮೀ ಸ್ವಾಭಾವಿಕ ಕಲ್ಲು ತಿರುವು ಇದೆ. ೧೫ ಮೀ. ಪಶ್ಚಿಮದ ಕಡೆ ಸಾಗುತ್ತ ಒಂದು ವಾಲ್ ಇದೆ. (ವಾಲ್ ಸಂಖ್ಯೆ ೨) ಅದು ಭೂಮಿಯ ಒಳಭಾಗದಲ್ಲಿ ಮುಚ್ಚಿಹೋಗಿದೆ. ಈ ವಾಲ್ ಉತ್ತರ ಮತ್ತು ಪಶ್ಚಿಮಕ್ಕೆ ನೀರು ಚಲಿಸಲು ಸಹಾಯಕವಾಗಿದೆ. ಉತ್ತರಕ್ಕೆ ಒಂದು ತೊಟ್ಟಿಯಿದೆ. (ತೊಟ್ಟಿ ಸಂ.೧) ತೊಟ್ಟಿಯ ಚೌಕಕಾರವಾಗಿದ್ದು, ೫.೮ ಮೀ. ಉತ್ತರ ಮತ್ತು ದಕ್ಷಿಣವಾಗಿ ಅಗಲವಿದೆ, ಹಾಗೂ ಪೂರ್ವ ಮತ್ತು ಪಶ್ಚಿಮಕ್ಕೆ ೪ ಮೀ. ಉದ್ದವಿದೆ, ಮತ್ತು ೭೦ ಸೆ.ಮೀ ದಪ್ಪವಾದ ಗೋಡೆಯಿದೆ. ಕಿರುಗಾಲುವೆಯು ಪಶ್ಚಿಮಕ್ಕೆ ಸಾಗುವಲ್ಲಿ ೧೪೦ ಸೆ.ಮೀ. ಗೋಡೆಯು ಉತ್ತರ ದಕ್ಷಿಣಕ್ಕಿದೆ. ಇದರ ಕೆಳಭಾಗದಲ್ಲಿ ಒಂದು ವಾಲ್ ಇದೆ. (ವಾಲ್ ಸಂಖ್ಯೆ ೩) ಅದು ೭೦ ಸೆ.ಮೀ. ಪೂರ್ವ ಪಶ್ಚಿಮಕ್ಕೆ ಉದ್ದವಿದೆ, ಮತ್ತು ಉತ್ತರ ದಕ್ಷಿಣವಾಗಿ ೬೦ ಸೆ.ಮೀ. ಅಗಲವಿದೆ. ಹಾಗೂ ೫೦ ಸೆ.ಮೀ. ಆಳವಿದೆ ಒಳ ಭಾಗದಲ್ಲಿ ಉತ್ತರಕ್ಕೆ ಒಂದು ಕಿರುಗಾಲುವೆ ಮುಂದೆ ಸಾಗುತ್ತದೆ ಮತ್ತು ಪಶ್ಚಿಮಕ್ಕೆ ಈ ವಾಲ್‌ನಿಂದ ಸಾಗುವ ಕಿರುಗಾಲುವೆಯು ೭ ಮೀ. ನಿಂದ ಒಂದು ವಾಲ್‌ಗೆ ಸೇರುತ್ತದೆ. (ವಾಲ್ ಸಂಖ್ಯೆ ೪) ಅದು ಚೌಕಕಾರವಾಗಿದೆ ವಾಲ್ ಒಳ ಭಾಗದಲ್ಲಿ ಉತ್ತರಕ್ಕೆ ಒಂದು ತೊಟ್ಟಿಗೆ ನೀರು ಸರಬರಾಜು ಆಗುತ್ತದೆ.(ತೊಟ್ಟಿ ಸಂ. ೨) ತೊಟ್ಟಿಯು ಪೂರ್ವ ಮತ್ತು ಪಶ್ಚಿಮವಾಗಿ ೪ ಮೀ. ಉದ್ದವಿದೆ, ಉತ್ತರ ದಕ್ಷಿಣಕ್ಕೆ ೩.೪ ಮೀ. ಅಗಲವಿದೆ. ತೊಟ್ಟಿಯು ೫೦ ಸೆ.ಮೀ. ದಪ್ಪವಿದೆ. ತೊಟ್ಟಿಗೆ ಒಂದು ಕಡೆ ನೀರು ಬರುವ ಮಣ್ಣಿನ ಸುಟ್ಟ ಕೊಳವಿಯು ಇರುವುದನ್ನು ಕಾಣುತ್ತೇವೆ. ತೊಟ್ಟಿಯ ಉತ್ತರಕ್ಕೆ ಎರಡು ಕಡೆ ನೀರು ಹೊರಗೆ ಹೋಗಲು ವ್ಯವಸ್ಥೆಯಿದೆ. ವಾಲ್ ಸಂಖ್ಯೆ ೩ರಲ್ಲಿ ಇರುವ ವಾಲ್‌ನಿಂದ ಉತ್ತರಕ್ಕೆ ಚಲಿಸುವ ಕಿರುಗಾಲುವೆಯು ೧೫ ಮೀ. ಸಾಗಿದೆ. ಕಿರುಗಾಲುವೆ ಮೇಲ್ಭಾಗದಲ್ಲಿ ಕಲ್ಲುಗಳನ್ನು ಮುಚ್ಚಿರುವುದು ಕಾಣುತ್ತೇವೆ. ಹೀಗೆ ಸಾಗಿರುವ ಕಿರುಗಾಲುವೆಯು ಒಂದು ತೊಟ್ಟಿಯನ್ನು ಸೇರುತ್ತದೆ. (ತೊಟ್ಟಯ ಸಂ. ೩) ಈ ತೊಟ್ಟಿಯ ಪೂರ್ವಕ್ಕೆ ತೊಟ್ಟಿಗೆ ಇಳಿಯಲು ೩ ಮೆಟ್ಟಿಲುಗಳಿವೆ. ಪೂರ್ವ ಪಶ್ಚಿಮವಾಗಿ ೩.೧ ಮೀ. ಉದ್ದವಿದೆ. ಹಾಗೂ ೪ ಮೀ. ಉತ್ತರ ಮತ್ತು ದಕ್ಷಿಣಕ್ಕೆ ಅಗಲವಾಗಿದೆ. ತೊಟ್ಟಿಯು ಇಂದಿಗೂ ಉತ್ತಮವಾದ ಸ್ಥಿತಿಯಲ್ಲಿದೆ. ತೊಟ್ಟಿಯ ಕೆಳ ಭಾಗದಲ್ಲಿ ನೀರು ಹೊರ ಹೋಗಲು ವ್ಯವಸ್ಥೆಯಿದೆ. ೮೦ ಸೆ.ಮೀ. ದಪ್ಪವಾದ ಗೋಡೆಯಿರುವುದನ್ನು ಕಾಣುತ್ತೇವೆ. ಹಾಗೂ ಮೇಲ್ಭಾಗದ ತೊಟ್ಟಿ (ತೊಟ್ಟಿಯ ಸಂ ೪) ದಕ್ಷಿಣಕ್ಕೆ ಇದೆ. ಇದು ದೊಡ್ಡ ಸ್ವಾಭಾವಿಕ ಕಲ್ಲಿನ ಮೇಲ್ಭಾಗದಲ್ಲಿ ಕಟ್ಟಿದ್ದಾರೆ. ತೊಟ್ಟಿಯು ಪೂರ್ವ ಪಶ್ಚಿಮಕ್ಕೆ ೩.೩ ಮೀ. ಉದ್ದವಿದೆ. ಉತ್ತರ ಮತ್ತು ದಕ್ಷಿಣಕ್ಕೆ ೩.೧ ಮೀ. ಅಗಲವಿದೆ. ೫೦ ಸೆ.ಮೀ. ದಪ್ಪವಿದೆ ಮತ್ತು ೧೩೦ ಸೆ.ಮೀ. ಆಳವಿದೆ. ಈ ತೊಟ್ಟಿಗೆ ಕೆಳ ಭಾಗದಲ್ಲಿ ಸುಟ್ಟ ಇಟ್ಟಿಗೆ ಗಾರೆಯಿಂದ ಮುಚ್ಚಿರುವ ಮಣ್ಣಿನ ಕೊಳವೆಯು ಅಂಕು ಡೊಂಡಕಾಗಿ ಕೆಳ ಭಾಗಕ್ಕೆ ಸಾಗಿದೆ. ಕೆಳಭಾಗದಲ್ಲಿ ಒಂದು ಕಂದಕವಿದೆ.

ರಾಣಿಯರ ಸ್ನಾನಗೃಹ ಮುಂಭಾಗದಲ್ಲಿ ರಸ್ತೆಯ ಬಲಭಾಗದಲ್ಲಿವ ಕುಡಿಯುವ ನೀರಿನ ಅರವಟ್ಟಿಗೆ ಪಕ್ಕದಲ್ಲಿ ಇತ್ತಿಚಿಗೆ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯಿಂದ (ಎ.ಎಸ್.ಐ.) ಕೌಂಪೌಂಡ್ ನಿರ್ಮಿಸಲಾಗುತ್ತಿದೆ. ಇದಕ್ಕಾಗಿ ನೆಲ ಅಗೆಯುತ್ತಿದ್ದ ಸಂದರ್ಭದಲ್ಲಿ ಕುಡಿಯುವ ನೀರು ಪೂರೈಕೆಗಾಗಿ ವಿಜಯನಗರದ ಕಾಲದ ಅರಸರು ಅಳವಡಿಸಿದ್ದ ಪೈಪ್‌ಗಳು ಪತ್ತೆಯಾಗಿರುವುದನ್ನು ಕ್ಷೇತ್ರಕಾರ್ಯದ ವೇಳೆಯಲ್ಲಿ ಗಮನಿಸಲಾಗಿದೆ. ವಿಜಯನಗರ ಅರಸರ ಕಾಲದ ಕಡಿಯುವ ನೀರಿನ ಪೈಪ್‌ಲೈನ್ ಕುರುಹುಗಳು ರಾಜರ ಖಾಸಾ ಜಾಗದಿಂದ ತುಸು ದೂರದಲ್ಲಿ ಇದೆ. ಎರಡು ಹಂತದಲ್ಲಿ

ಪೈಪ್‌ಲೈನ್ ವ್ಯವಸ್ಥೆ ಕಾಣುತ್ತೇವೆ. ಎರಡೂವರೆಯಿಂದ ಮೂರು ಅಡಿ ನೆಲದಾಳದಲ್ಲಿ ಒಂದು ಹಾಗೂ ಅದರ ಮೇಲ್ಭಾಗದಲ್ಲಿ ಇನ್ನೊಂದು ಪೈಪ್‌ಲೈನ್ ಇದೆ. ೪*೪ ಅಡಿ ಆಳ, ಅಗಲದ ತೊಟ್ಟಿಗೆ ಒಂದು ಕಡೆ ನೀರಿನ ಸಂಪರ್ಕ ಕಲ್ಪಿಸಿದರೆ, ಅದರಿಂದ ಬೇರೆ ಬೇರೆ ಕಡೆ ನೀರು ಹರಿದು ಹೋಗಲು ಮೂರು ಕಡೆಗಳಲ್ಲಿ ಪೈಪ್‌ಲೈನ್ ಸಂಪರ್ಕ ಕಲ್ಪಿಸಿರುವುದನ್ನು ಕಾಣಬಹುದು. ಏಕೆಂದರೆ ಸುಟ್ಟ ಮಣ್ಣಿನ ಪೈಪುಗಳನ್ನು ಸುಣ್ಣದಕಲ್ಲಿನ ಕಾಂಕ್ರೀಟ್ ಮಧ್ಯದಲ್ಲಿ ಭದ್ರಗೊಳಿಸಿ ತಮಗೆ ಬೇಕಾದೆಡೆಗೆ ನೀರನ್ನು ಹರಿಸಿಕೊಂಡು ಹೋಗುತ್ತಿದ್ದರು. ಹಲವು ಬಾರಿ ಕೇವಲ ಒಂದೇ ಪೈಪಲ್ಲದೆ, ಅನೇಕ ಪೈಪುಗಳ ಮೂಲಕ ನೀರನ್ನು ಹರಿಸುತ್ತಿದ್ದರು. ಇದರ ಉದ್ದೇಶವೆಂದರೆ, ಒಂದು ಪೈಪು ಒಡೆದರೆ, ಇತರ ಪೈಪುಗಳ ಮೂಲಕ ನೀರಿನ ಸರಬರಾಜು ಯಾವ ಅಡೆ ತಡೆಯಿಲ್ಲದೆ ಮುಂದುವರಿಯುತ್ತಿತ್ತು. ಜೊತೆಗೆ ಮುಂದುವರೆದ ತಂತ್ರಜ್ಞಾನಕ್ಕೆ ಉತ್ತಮ ನಿದರ್ಶನವೆಂದರೆ ಸಮಾನಾಂತರವಾಗಿ ಮಣ್ಣಿನ ಕೊಳವೆ ಪೈಪುಗಳ ಮುಖಾಂತರ ನೀರು ಹರಿಸುತ್ತಿದ್ದರು. ಇದರ ಉದ್ದೇಶವೆಂದರೆ, ಒಂದೇ ಪೈಪಿನಲ್ಲಿ ನೀರು ಹರಿಸಿದರೆ ನೀರಿನ ಅಧಿಕ ಒತ್ತಡದಿಂದ ಪೈಪು ಒಡೆದು ಹೋಗಲೂಬಹುದು. ಹೀಗೆ ಅಧಿಕ ಒತ್ತಡವನ್ನು ನಿವಾರಿಸಲೆಂದೇ ಸಮಾನಾಂತರವಾಗಿ ಮತ್ತೊಂದು ಪೈಪಿನಲ್ಲಿ ನೀರನ್ನು ಹರಿಸಿಕೊಂಡು ಬರಲಾಗುತ್ತಿತ್ತು. ಈ ವಿಧಾನವು ಪೈಪುಗಳಿಗೆ ದಕ್ಕೆಯಾಗದಂತೆ ರಕ್ಷಣೆ ಒದಗಿಸುತ್ತಿತ್ತು. ಇದು ಅವರು ಹೊಂದಿದ ಉನ್ನತಮಟ್ಟದ ನೀರು ಸರಬರಾಜು ತಂತ್ರಕ್ಕೆ ಸಾಕ್ಷಿಯಾಗಿದೆ. ತೊಟ್ಟಿಯನ್ನು ಸಹ ಸುಟ್ಟ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ. ಆದರೆ ಮೇಲ್ನೋಟಕ್ಕೆ, ಈ ಪೈಪ್‌ಲೈನ್ ವ್ಯವಸ್ಥೆ ಅರವಟಿಗೆ ಸ್ಮಾರಕಕ್ಕೆ ಹೊಂದಿಕೊಂಡಂತೆ ಇರುವ ಡಾಂಬರು ರಸ್ತೆಯ ಕೆಳಗಡೆಯಿಂದ ಹಾದು ಹೋಗಿರುವ ಸಾಧ್ಯತೆ ಇದೆ, ಏಕೆಂದರೆ ರಾಜರ ಖಾಸಾ ಜಾಗ, ರಾಣಿ ಸ್ನಾನಗೃಹ, ಪುಷ್ಕರಣಿ ಹಾಗೂ ಭೋಜನ ಶಾಲೆ ಕೂಡ ಸಮೀಪದಲ್ಲೇ ಇದ್ದು, ಈ ಎಲ್ಲ ಸ್ಥಳಗಳಿಗೂ ಪ್ರತ್ಯೇಕವಾಗಿ ನೀರಿನ ಪೈಪ್‌ಲೈನ್ ವ್ಯವಸ್ಥೆ ಮಾಡಿದ್ದಾರೆ. ಆಧುನಿಕ ತಂತ್ರಜ್ಞಾನವನ್ನು ಮೀರಿಸುವಷ್ಟರ ಮಟ್ಟಿಗೆ ಆ ವ್ಯವಸ್ಥೆ ಇದೆ.೪ ಇಲ್ಲಿರುವ ನೀರಿನ ಅರವಟ್ಟಿಗೆ ಪಕ್ಕದಲ್ಲಿ ಇತ್ತೀಚಿಗೆ ನೀರಿನ ಸಣ್ಣ ತೊಟ್ಟಿಯು ಕಂಡು ಬಂದಿದ್ದು, ಈ ಅರವಟ್ಟಿಗೆ ನಿರ್ಮಿಸುವ ಸಂದರ್ಭದಲ್ಲಿ ನೀರಿನ ಶೇಖರಣೆಗೆಂದು ಕಟ್ಟಲಾಗಿರಬಹುದಾಗಿದೆ.

ಮಹಾನವಮಿ ದಿಬ್ಬದ ಸಮೀಪ ರಾಜಾಂಗಣದಲ್ಲಿ ಮುಖ್ಯವಾಗಿ ಮೂರು ಕಟ್ಟಡ ಸಮೂಹಗಳನ್ನು ಗುರುತಿಸಲಾಗಿದೆ. ಅವುಗಳೆಂದರೆ ೧. ಅರಮನೆ ಸಂಕೀರ್ಣ, ೨. ಧಾರ್ಮಿಕ ಚಟುಚಟಿಕೆಗಳು ನಡೆಯುತ್ತಿದ್ದ ಸ್ಥಳ ಮತ್ತು ೩. ಅಂಗರಕ್ಷಕರ, ಪರಿಚಾರಕರ ವಾಸಗೃಹಗಳು ಮತ್ತು ಉಗ್ರಾಣ. ರಾಜಾಂಗಣವು ೫೯,೦೦೦ ಚ.ಮೀ. (೧೪.೮೫ ಎಕರೆ) ವಿಸ್ತಾರವಾದ ಸ್ಥಳವನ್ನು ಆವರಿಸಿದೆ.[೫] ಈ ರಾಜಾಂಗಣದಲ್ಲಿ ನೀರಿನ ಸರಬರಾಜು ಮಾಡಿರುವ ಅನೇಕ ಕಿರುಗಾಲುವೆಗಳು ಕಾಣುತ್ತೇವೆ. ಇಲ್ಲಿರುವ ಕಿರುಗಾಲುವೆಗಳಿಗೆ ಕಮಲಾಪುರದ ಬಳಿಯಿರುವ ದೊಡ್ಡಕೆರೆಯಿಂದ ನೀರು ಬರುತ್ತಿತ್ತು. ರಾಜಾಂಗಣದ ಪೂರ್ವ ಪ್ರಾಕಾರದ ಬಳಿಯಿಂದ ಆರಂಭವಾಗುವ ಮುಖ್ಯ ಶಿಲಾಜಲವಾಹಕಕ್ಕೆ ಬಿಡಲಾಗುತ್ತಿತ್ತು. ಈ ಮುಖ್ಯ ಜಲವಾಹಕವು ಇತರ ಜಲವಾಹಕಗಳ ಜಾಲಬಂಧದ ಮೂಲಕ ಇಡೀ ರಾಜಾಂಗಣದೊಳಗೆಲ್ಲಾ ನೀರು ಸರಬರಾಜು ಸುಗಮವಾಗಿ ಸಾಗಿಸಲು ಕಿರುಗಾಲುವೆಗಳ ವ್ಯವಸ್ಥೆಯಿದೆ. ಇಲ್ಲಿರುವ ಮುಖ್ಯ ಕಿರುಗಾಲುವೆಯು ಮಹಾನವಮಿ ದಿಬ್ಬದ ರಕ್ಷಣಾ ಕೋಟೆಯ ಪೂರ್ವ ದಿಕ್ಕಿನಿಂದ ಪಶ್ಚಿಮಕ್ಕೆ ಸಾಗುವ ಈ ಕಿರುಗಾಲುವೆಯು ಮೇಲ್ಭಾಗದಲ್ಲಿ ಅಲಲ್ಲಿ ಕಲ್ಲುಗಳನ್ನು ಮುಚ್ಚಲಾಗಿದ್ದು ಕಲ್ಲು ಹಾಗೂ ಸುಣ್ಣಕಲ್ಲಿನ ಜಲ್ಲಿಗಾರೆಯಿಂದ ನಿರ್ಮಿಸಲಾಗಿದೆ. ಕಿರುಗಾಲುವೆಯ ಮೂಲಕ ದಕ್ಷಿಣದಲ್ಲಿರುವ ಸಾರ್ವಜನಿಕ ಸ್ನಾನದಕೊಳವೂ ಅನಂತರ ಅಲಂಕೃತ ಕಲ್ಯಾಣಿಯೂ ತುಂಬುತ್ತಿದ್ದವು. ಕಲ್ಯಾಣಿಯಿಂದ ಮುಂದೆ ಕವಲೊಡೆಯುವ ಈ ಮುಖ್ಯ ಕಿರುಗಾಲುವೆಯು ಒಂದು ಶಾಖೆ ಉತ್ತರಕ್ಕೂ ಇನ್ನೊಂದು ಶಾಖೆ ಪಶ್ಚಿಮಕ್ಕೂ ಮುಂದುವರೆಯುತ್ತದೆ. ಈ ಎರಡು ಶಾಖೆಗಳು ರಾಜಾಂಗಣದಲ್ಲಿರುವ ವಿವಿಧ ಗಾತ್ರದ ಹತ್ತೊಂಭತ್ತು ಕೊಳಗಳನ್ನು ತುಂಬಿಸುತ್ತವೆ. ಇಲ್ಲಿನ ಎಲ್ಲ ಕೊಳಗಳು ತುಂಬಿದ ನಂತರ ನೀರು ಪೋಲಾಗದೆ ನೆಲದೊಳಗಣ ಕಿರುಗಾಲುವೆಗಳ ಮೂಲಕ ಇತರೆ ಆವರಣಗಳಿಗೆ ಹೋಗುತ್ತದೆ. ಸಾಮಾನ್ಯವಾಗಿ ಈ ಕಿರುಗಾಲುವೆಗಳೆಲ್ಲ ಪ್ರಾಕಾರದ ಒಳಬದಿಯ ಮಗ್ಗುಲಲ್ಲಿ, ಇಲ್ಲವೆ ನೆಲದೊಳಗೆ ಹಾದು ಹೋಗುವುದಲ್ಲದೇ ಮೇಲ್ಭಾಗದಲ್ಲಿ ಕಲ್ಲುಗಳಿಗೆ ಸುಣ್ಣಕಲ್ಲಿನ ಜಲ್ಲಿಗಾರೆ ಹಾಕಿ ನೀರು ಸೋರದಂತೆ ಭದ್ರಪಡಿಸಲಾಗಿದೆ. ಇಲ್ಲಿರುವ ಇನ್ನೊಂದು ವಿಶೇಷವೆಂದರೆ ಕಿರುಗಾಲುವೆಯು ಕವಲೊಡೆಯುವ ಜಾಗದಲ್ಲಿ ತುರ್ತು ಸಂದರ್ಭದಲ್ಲಿ ಉಪಯೋಗಕ್ಕೆ ಬರುವಂತೆ ಆಳವಾದ ಬಾವಿಯೊಂದನ್ನೂ ತೋಡಲಾಗಿದೆ. ಮನುಷ್ಯನು ಈ ಬಾವಿಯಿಂದ ನೀರು ಸೇದಿ ಕಿರುಗಾಲುವೆಗಳು ಕವಲೊಡೆಯುವ ಜಾಗದಲ್ಲಿ ಸುರಿದರೆ ಎಲ್ಲ ಕಡೆಗೂ ನೀರು ಸಹಜವಾಗಿ ಸರಬರಾಜಾಗುತ್ತಿತ್ತು. ಹೀಗೆ ಹೊರಗಿನಿಂದ ಬರುವ ನೀರು ಯಾವುದೇ ಅಡಚಣೆಯಿಂದ ನಿಂತು ಹೋದರೆ ತಾತ್ಕಾಲಿಕವಾಗಿ ಅಲ್ಲಿರುವ ನೀರು ಸರಬರಾಜಾಗುವ ವ್ಯವಸ್ಥೆಯನ್ನೂ ಮಾಡಲಾಗಿತ್ತು. ಈ ವ್ಯವಸ್ಥೆಯ ಇನ್ನೊಂದು ವೈಶಿಷ್ಟ್ಯವೆಂದರೆ ರಾಜಾಂಗಣದೊಳಗಣ ಜಲಾಶಯಗಳೆಲ್ಲ

ಒಂದರ ನಂತರ ಒಂದು ತುಂಬುವುದಲ್ಲಿದೆ ಯಾವುದಾದರೊಂದು ಕೊಳದಲ್ಲಿ ನೀರಿನ ಮಟ್ಟ ಕಡಿಮೆಯಾದರೆ ಸ್ವಯಂಚಾಲಿತ ವ್ಯವಸ್ಥೆಯಿಂದ ನೀರು ಹರಿದು ಬಂದು ಮೊದಲ್ಲಿನ ಮಟ್ಟವನ್ನು ಮುಟ್ಟುತ್ತಿತ್ತು. ಏರಿಳಿತಗಳ ಆಧಾರದ ಮೇಲೆ ಭೂಮಿಯ ವರ್ಗೀಕರಣ ಮಾಡಿ ಇಳಿಜಾರು ಮತ್ತು ಗುರುತ್ವಾಕರ್ಷಣ ಶಕ್ತಿಗಳ ವಿಶಿಷ್ಟ ರೀತಿಯ ಸಮತೋಲನ ಸಾಧಿಸಿ ಈ ಸ್ವಯಂಚಾಲನ ವ್ಯವಸ್ಥೆಯನ್ನು ಮಾಡಿರುವುದನ್ನು ಕಾಣುತ್ತೇವೆ. ರಾಜಾಂಗಣದಲ್ಲಿ ಸಂಗ್ರಹವಾಗುವ ಮಳೆ ಹಾಗೂ ಕೊಳಚೆಯ ನೀರನ್ನು ಈ ಪ್ರದೇಶದಿಂದ ಆಚೆಗೆ ಸಾಗಿಸಲು ನೆಲದೊಳಗೆ ಕಿರುಗಾಲುವೆ, ಕೊಳವೆಗಳ ವ್ಯವಸ್ಥಿತ ಜಾಲಬಂಧವನ್ನು ರಚಿಸಲಾಗಿದೆ. ಕಿರುಗಾಲುವೆಗಳಿಂದ ಸಂಗ್ರಹಿಸಿದ ಕೊಳಚೆ ನೀರು ದೊಡ್ಡ ಕಾಲುವೆಯ ಮೂಲಕ ಹೊರಹೋಗುತ್ತಿದ್ದು ಇಂತಹ ದೊಡ್ಡ ಚರಂಡಿಯೊಂದು ರಾಜಾಂಗಣದ ದಕ್ಷಿಣ ಪ್ರಾಕಾರ ಮತ್ತು ಉದ್ಯಾನವನ್ನು ಸುತ್ತುವರೆದಿರುವ ಗೋಡೆಯ ನಡುವೆ ಪೂರ್ವಪಶ್ಚಿಮವಾಗಿ ಹರಿಯುತ್ತದೆ.[೬]

ಹಂಪೆಯಲ್ಲಿ ಈ ವಿಧವಾಗಿ ನೀರನ್ನು ಸಂಗ್ರಹಿಸಿಡುತ್ತಿದ್ದ ಸ್ಥಳಗಳನ್ನು ರಾಣಿಯರ ಸ್ನಾನಗೃಹ, ಅಷ್ಟಕೋನ ಸ್ನಾನಗೃಹ, ಸಾರ್ವಜನಿಕ ಸ್ನಾನಗೃಹ, ಪುಷ್ಕರಣಿ, ಜಲಮಂಟಪ, ಹೀಗೆ ಎಲ್ಲಾ ಸ್ಥಳಗಳಿಗೂ ಕಮಲಾಪುರದ ಕೆರೆಯಿಂದಲೇ ನೀರನ್ನು ಸರಬರಾಜು ಮಾಡಲಾಗುತ್ತಿತ್ತು. ಈ ಎಲ್ಲಾ ಸ್ನಾನ ಕುಂಡಗಳಿಗೆ ನೀರನ್ನು ಒಳಗೆ ಹರಿಸುವ ಹಾಗೂ ಹೊರಗಡೆ ಹೋಗುವ ಕಿಂಡಿ ಮಾರ್ಗಗಳನ್ನು ಬುದ್ಧಿವಂತಿಕೆಯಿಂದ ರಚಿಸಿದ್ದರು. ಇದರಿಂದ ನೀರಿನ ಕೊಳವೆ, ಕಾಲುವೆ, ಕಿರುಗಾಲುವೆಗಳ ಮೂಲಕ ವಸತಿ ಮಂದಿರ ಮತ್ತು ಅರಮನೆಗಳಿಗೆ ನೀರನ್ನೂ ಪೂರೈಸಲಾಗುತ್ತಿತ್ತು. ಇದು ಅಂದಿನವರ ಜಲತಂತ್ರಜ್ಞಾನ ಮತ್ತು ನಿರ್ವಹಣೆಯ ಕುಶಲತೆಗೆ ಸಾಕ್ಷಿಯಾಗಿದೆ.

[ಪ್ರಬಂಧವನ್ನು ಸಿದ್ಧಪಡಿಸಲು ಮಾರ್ಗದರ್ಶಿಸಿದ ಡಾ. ಎಸ್.ವೈ. ಸೋಮಶೇಖರ ಅವರಿಗೆ ಧನ್ಯವಾದಗಳು.]

## ಅಡಿಟಿಪ್ಪಣಿಗಳು

೧. ಡಾ. ದೇವರಕೊಂಡಾರೆಡ್ಡಿ (ಸಂ)., ಹಂಪಿ ಸಂಪುಟ ಕಲೆ, ಕ್ರೀಡೆ ಮತ್ತು ಕೌಶಲ, ೨೦೦೬, ಪುಟ ಸಂಖ್ಯೆ, ೩೭೪–೩೭೫.

೨. ಪಿ ಮಲ್ಲಪ್ಪ., ಭೂಗೋಳಶಾಸ್ತ್ರ, ೨೦೦೫, ಪುಟ ಸಂಖ್ಯೆ, ೬೫.

೩. ಡಾ. ದೇವರಕೊಂಡಾರೆಡ್ಡಿ (ಸಂ)., ಹಂಪಿ ಸಂಪುಟ ಕಲೆ, ಕ್ರೀಡೆ ಮತ್ತು ಕೌಶಲ, ೨೦೦೬, ಪುಟ ಸಂಖ್ಯೆ, ೩೯೪ .

೪. ಪ್ರಜಾವಾಣಿ ದಿನಪತ್ರಿಕೆ, ಬುಧವಾರ ಮಾರ್ಚ ೨೮, ೨೦೧೮.

೫. ಜಿ. ಎಸ್. ದೀಕ್ಷಿತ್ (ಸಂ), ಎಂ.ವಿ. ವಿಶ್ವೇಶ್ವರ (ಸಹ ಸಂ)., ಸಂಗಮರ ಕಾಲದ ವಿಜಯನಗರ ಅದರ ಇತಿಹಾಸ ಮತ್ತು ಸಂಸ್ಕೃತಿಗಳ ಅಧ್ಯಯನ, ೧೯೯೧, ಪುಟ ಸಂಖ್ಯೆ, ೨೧೯.

೬ ಅದೇ ಪುಟ, ಪುಟ, ೨೧೬.

೮೩

# ತುಂಗಭದ್ರಾ ಅಣೆಕಟ್ಟಿನ ಚಾರಿತ್ರಿಕ ವಿಶ್ಲೇಷಣೆ

**ಟಿ. ಓಂಕಾರಪ್ಪ***

"**ತು**ಂಗಭದ್ರಾ ಅಣೆಕಟ್ಟು" ಉತ್ತರ ಹಾಗೂ ಮಧ್ಯ ಕರ್ನಾಟಕ ಹಾಗೂ ಆಂಧ್ರಪ್ರದೇಶದ ಕೆಲವು ಜಿಲ್ಲೆಗಳ ಜೀವನಾಡಿಯಾಗಿದೆ. ಕನ್ನಡ ನಾಡಿನ ಜೀವನದಿ ಎಂದು ಕಾವೇರಿಯನ್ನು ಬಣ್ಣಿಸಿದರೆ, ಮಧ್ಯ ಕರ್ನಾಟಕ ಹಾಗೂ ಆಂಧ್ರದವರ ಪಾಲಿಗೆ ತುಂಗಭದ್ರಾ ನದಿಯೂ ಸಹ ಜೀವನದಿ ಎಂದೇ ಕರೆಸಿಕೊಳ್ಳುತ್ತದೆ. ಈ ನದಿಯ ಉಗಮವು ಚಿಕ್ಕಮಗಳೂರು ಜಿಲ್ಲೆಯ ವರಾಹಪರ್ವತವದರೂ ಶಿವಮೊಗ್ಗ, ಭದ್ರಾವತಿ, ದಾವಣಗೆರೆ, ಬಳ್ಳಾರಿ, ಕೊಪ್ಪಳ, ರಾಯಚೂರು ಹಾಗೂ ಆಂಧ್ರ ಪ್ರದೇಶದ ಕರ್ನೂಲು ಇತರ ಜಿಲ್ಲೆಗಳಲ್ಲಿ ತನ್ನ ವ್ಯಾಪ್ತಿಯನ್ನು ಬಳಸಿ ಈ ಭಾಗದ ಲಕ್ಷಾಂತರ ಕುಟುಂಬಗಳಿಗೆ ಬದುಕು ಕಟ್ಟಿಕೊಳ್ಳಲು ದಾರಿದೀವಿಗೆಯಾಗಿರುವುದು ನಿತ್ಯ ಸತ್ಯ ವಿಚಾರವಾಗಿದೆ.

ವಿಜಯನಗರದ ಅರಸರು ತಮ್ಮ ಕಾಲಾವಧಿಯಲ್ಲಿ ತುಂಗಭದ್ರಾ ನದಿಗೆ ದೊಡ್ಡದಾದಂತಹ ಜಲಾಶಯವನ್ನು ನಿರ್ಮಿಸಿದ್ದರು ಎಂದು 'ನ್ಯೂನಿಜ್' ತನ್ನ ಕೃತಿಯಲ್ಲಿ (ಮರೆತುಹೋದ ಮಹಾ ಸಾಮ್ರಾಜ್ಯ–The forgetton empire vijayanagara) ತಿಳಿಸುತ್ತಾನೆ. ಆತ ಹೇಳುವಂತೆ ಆ ಕಾಲದ ಕಾಲುವೆಗಳಾದ ಬಸವಣ್ಣ ಹಾಗೂ ರಾಯ ಕಾಲುವೆಗಳು ಇಂದೂ ಸಹ ಗಟ್ಟಿಯಾಗಿರುವುದನ್ನು ನಾವು ಕಾಣಬಹುದು. ಅಲ್ಲದೇ ತುರ್ತು ಕಾಲುವೆಯು ಸುಮಾರು ಹನ್ನೊಂದು ಮೈಲಿಗಳಷ್ಟು ನೀರುಣಿಸುತ್ತಿದ್ದ ಬಗ್ಗೆ ತಿಳಿಯುತ್ತದೆ.

ಹಲವು ಉಪನದಿಗಳನ್ನು ಒಡಲಿಗೆ ಸೇರಿಸಿಕೊಂಡು ಹರಿಯುವ ತುಂಗಭದ್ರೆಗೆ ಅಣಕೆಟ್ಟು ನಿರ್ಮಿಸುವ ಯೋಚನೆ ಸ್ವಾತಂತ್ರ್ಯ ಪೂರ್ವದಲ್ಲಿ ಬಂದಿತು. ಈ ಬಗ್ಗೆ ಹೈದರಾಬಾದ್ ಮತ್ತು ಮದ್ರಾಸ್ ಪ್ರಾಂತೀಯ ಸರ್ಕಾರಗಳು ಸೇರಿ ತುಂಗಭದ್ರಾ ಯೋಜನೆಯನ್ನು ಪ್ರಾರಂಭಿಸಿದವು. ಹೊಸಪೇಟೆಯ ಬಳಿ ೩ ಕಿಲೋಮೀಟರ್ ದೂರದಲ್ಲಿರುವ ಮಲ್ಲಾಪುರದಲ್ಲಿ ಅಣೆಕಟ್ಟು ನಿರ್ಮಾಣಗೊಂಡಿದೆ.

ಅನೇಕ ಕಾರಣಗಳಿಂದ ನೆನೆಗುದಿಗೆ ಬಿದ್ದಿದ್ದ ಈ ಬೃಹತ್ ಯೋಜನೆಯನ್ನು ಹೈದರಾಬಾದ್ ಮತ್ತು ಮದ್ರಾಸ್ ಪ್ರಾಂತೀಯ ಸರ್ಕಾರಗಳು ಜಂಟಿಯಾಗಿ ೧೯೪೫ರಲ್ಲಿ ತುಂಗಭದ್ರ ಯೋಜನೆಯನ್ನು ಪ್ರಾರಂಭಿಸಿದವು ಹೊಸಪೇಟೆಯಿಂದ ಮೂರು ಕಿಲೋಮೀಟರ್ ದೂರದ ಮಲ್ಲಾಪುರದ ಬಳಿ ತುಂಗಭದ್ರ ಅಣೆಕಟ್ಟು ಅನೇಕ ಎರಡು ತೊಡರುಗಳ ಮಧ್ಯೆ ಪ್ರಾರಂಭವಾಗಿ ಆಂಧ್ರ ಮತ್ತು ಕರ್ನಾಟಕ ಸರ್ಕಾರಗಳ ಜಂಟಿ ಯೋಜನೆಯಿಂದ ೧೯೫೩ರಲ್ಲಿ ಅಣೆಕಟ್ಟು ಕೆಲಸ ಮುಕ್ತಾಯವಾಯಿತು. ಸತತ ಎಂಟು ವರ್ಷಗಳ ಶ್ರಮದ ಫಲವಾಗಿ ಅನೇಕ ಏಳು ಬೀಳು, ಹೋರಾಟದ ನಡುವೆ ಈ ೧೩೩ ಟಿ.ಎಂ.ಸಿ. ಸಾಮರ್ಥ್ಯದ ಅಣೆಕಟ್ಟನ್ನು ನಿರ್ಮಾಣ ಮಾಡಲಾಯಿತು. ಎರಡು ರಾಜ್ಯಗಳ ಒಪ್ಪಂದದಂತೆ ಕರ್ನೂಲು ಜಿಲ್ಲೆಯಲ್ಲಿ ಬಲದಂಡೆ ಕಾಲುವೆ ನಿರ್ಮಾಣಗೊಂಡಿದ್ದು ಇದು ಸುಮಾರು ೩೪.೭ ಕಿಲೋಮೀಟರ್ ಉದ್ದವಿದೆ. ಹಾಗೂ ಕೊಪ್ಪಳ, ರಾಯಚೂರು ಜಿಲ್ಲೆಯಲ್ಲಿ ೨೨೬ ಕಿಲೋಮೀಟರ್ ಉದ್ದದ ಎಡದಂಡೆ ಕಾಲುವೆ ನಿರ್ಮಾಣವಾಗಿದೆ.

ಈ ಅಣೆಕಟ್ಟಿನ ಬಲ ಕೊನೆ ಮಲ್ಲಾಪುರದಿಂದ ಹಿಡಿದು ಕೊಪ್ಪಳ ಜಿಲ್ಲೆಯ ಮುನಿರಾಬಾದ್ ಹತ್ತಿರ ಪುಲಿಗೆರೆಯವರೆಗೆ ಎಡಕೊನೆ ಇದ್ದು ಒಟ್ಟು ಉದ್ದ ೨೪೪೦ ಮೀಟರ್ ಇದೆ. ಈ ಅಣೆಕಟ್ಟೆಯ ಎತ್ತರ ೫೨ ಮೀಟರ್ ಇದ್ದು ೧೩೩ ಸಾವಿರ ಮಿಲಿಯ ಘನ ಅಡಿ ನೀರು ನಿಲ್ಲುವ ಈ ತುಂಗಭದ್ರಾ ಜಲಾಶಯಕ್ಕೆ 'ಪಂಪಾಸಾಗರ' ಎಂದೂ ಕರೆಯಲಾಗುತ್ತದೆ. ಎಡದಂಡೆ ಕಾಲುವೆ ಸುಮಾರು ೩೦ ಕಿಲೋಮೀಟರ್‌ನಷ್ಟು ಗುಡ್ಡಗಾಡು ಮತ್ತು ವಿಜಯನಗರ ಅವಶೇಷ ಪ್ರದೇಶದಲ್ಲಿ ನಿರ್ಮಾಣವಾಗಿದೆ. ಸಣಪುರ ಮತ್ತು ಶಿವಪುರದ ಎರಡು ಉಪಜಲಾಶಯಗಳ ಮೂಲಕ ಹರಿದು ೧೦೮೪ ಮೀಟರ್ ಉದ್ದ ಸುರಂಗದ ಮೂಲಕ ಹೋಗುತ್ತದೆ. ವಿದ್ಯುತ್ ಶಕ್ತಿಗಾಗಿ ಈ ಕಾಲುವೆಯ ನೀರನ್ನು ೨೪ ಕಿಲೋಮೀಟರ್ ಎತ್ತರ ಪ್ರದೇಶಕ್ಕೆ ಒಯ್ದು ೧೯೮೮ ಕ್ಯೂಸೆಕ್ಸ್ ನೀರು ಬಿಡುಗಡೆ ಮಾಡುವಂತೆ ರಚಿಸಲಾಗಿದೆ ಹಾಗೆಯೇ ೮೮ ಕ್ಯೂಸೆಕ್ಸ್ ನೀರನ್ನು ನೀರಾವರಿಗಾಗಿ ಬಳಸಲಾಗುತ್ತಿದೆ. ೨.೪ ಲಕ್ಷ ಹೆಕ್ಟೇರ್ ಜಮೀನಿಗೆ ಉಪಯೋಗವಾಲು ಇದನ್ನು ನಿಯೋಜಿತವಾಗಿದೆ.

* ಸಂಶೋಧನಾ ವಿದ್ಯಾರ್ಥಿ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ–೫೮೩೨೭೬, ಮೊ. ೯೪೮೦೨೮೦೧೩೧೩



ಎಡದಂಡೆಯ ಉನ್ನತ ಮಟ್ಟದ ಕಾಲುವೆ ೧೨ ಕಿ.ಮೀ. ಉದ್ದವಾಗಿದೆ ಇದು ಕೊಪ್ಪಳ ಜಿಲ್ಲೆಯ ೩೨೦ ಹೆಕ್ಟೇರ್ ಭೂನೀರಾವರಿ ಪ್ರದೇಶವನ್ನು ಹೊಂದಿದೆ.

ಬಲದಂಡೆ ಕಾಲುವೆಗೆ ಮೊದಲು ೨೨ ಕಿಲೋಮೀಟರ್ ವಿದ್ಯುತ್ ಶಕ್ತಿ ಕಾಲುವೆ ಮಾಡಿದ್ದು, ೧೦ ಕಿ.ಮೀ. ಒರಟು ಭೂ ಪ್ರದೇಶದಲ್ಲಿ ಹಂಪಿ ಬಳಿ ೩೩ಳ ಮೀಟರ್ ಎತ್ತರದ ಜಲಪಾತದಲ್ಲಿ (ಎಚ್.ಪಿ.ಸಿ.) ವಿದ್ಯುತ್ ಉತ್ಪಾದಿಸಲಾಗುತ್ತಿದೆ. ೭೧ ಕ್ಯೂಸೆಕ್ಸ್ ನೀರಿನ ಹರಿವಿನಲ್ಲಿ ೩೦ ಕ್ಯೂಸೆಕ್ಸ್ ನೀರು ನದಿಗೆ ಬಿಡಲಾಗುತ್ತಿದೆ. ೫೧ ಕ್ಯೂಸೆಕ್ಸ್ ನೀರನ್ನು ಮಾತ್ರ ಸರಬರಾಜು ಮಾಡಲಾಗುತ್ತಿದೆ. ೨೨೭ ಕಿ.ಮೀ. ವರೆಗೆ ಕರ್ನಾಟಕದಲ್ಲಿ ಹರಿದು ಉಳಿದ ೯೮ ಕಿ.ಮೀ. ಕರ್ನೂಲು ಜಿಲ್ಲೆಯಲ್ಲಿ ಹರಿಯುತ್ತದೆ. ಕರ್ನಾಟಕದಲ್ಲಿ ೩೭೦೦೦ ಹೆಕ್ಟೇರ್‌ಗಳಷ್ಟು ಭೂಮಿಗೆ ನೀರುಣಿಸುತ್ತದೆ. ಮೇಲ್ಮಟ್ಟದ ಕಾಲುವೆ ೧೯೮ ಕಿ.ಮೀ. ಉದ್ದವಿದ್ದು ೧೧೯ ಕಿ.ಮೀ. ಕರ್ನಾಟಕದಲ್ಲಿ ಹರಿದು ಉಳಿದ ಭಾಗವು ಆಂಧ್ರದಲ್ಲಿ ಹರಿಯುತ್ತದೆ. ಇದು ೮೧ ಸಾವಿರ ಹೆಕ್ಟೇರ್ ಭೂಮಿಗೆ ಕರ್ನಾಟಕದಲ್ಲಿ ನೀರನ್ನು ಒದಗಿಸಿ ೧,೩೭,೫೦೦ ಕಿಲೋ ವ್ಯಾಟ್ ವಿದ್ಯುತ್ ಉತ್ಪಾದಿಸಲಾಗುತ್ತಿದೆ.

ಭಾರತ ಸರ್ಕಾರ ನೇಮಿಸಿರುವ ತುಂಗಭದ್ರಾ ಮಂಡಳಿಯ ಅಣೆಕಟ್ಟಿನ ಬಲಗಡೆಯ ಅರ್ಧ ಭಾಗದ ಆಡಳಿತ ಮತ್ತು ನಿಯಂತ್ರಣವನ್ನು ನೋಡಿಕೊಳ್ಳುತ್ತಿದೆ. ಈ ತುಂಗಭದ್ರ ಯೋಜನೆಯು ೧೯೪೫ರಲ್ಲಿ ರೂಪುಗೊಂಡು ಈ ಯೋಜನೆಗೆ ೧೫೩ ಕೋಟಿ ವೆಚ್ಚದೊಂದಿಗೆ ೧೯೫೩ರಲ್ಲಿ ಕಾಮಗಾರಿ ಪೂರ್ಣಗೊಂಡಿತು ಈ ಯೋಜನೆಯಿಂದ ಕರ್ನಾಟಕದ ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಯ ೩.೬೩ ಲಕ್ಷ ಹೆಕ್ಟೇರ್ ಭೂ ನೀರಾವರಿ ಅಳವಡಿಸಲಾಗಿದೆ. ಅಣೆಕಟ್ಟಿನ ಸರ್ವಾಂಗೀಣ ಅಭಿವೃದ್ಧಿ ಸಾಧಿಸಲು ೧೯೭೭ ಡಿಸೆಂಬರ್ ೧೧ರಂದು ತುಂಗಭದ್ರ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಅಸ್ತಿತ್ವಕ್ಕೆ ಬಂದಿದೆ. ಇದರಡಿಯಲ್ಲಿ ಅನೇಕ ಯೋಜನೆಗಳನ್ನು ರೂಪಿಸಲಾಗುತ್ತಿದೆ. ಈ ಜಲಾಶಯಕ್ಕಾಗಿ ಅನೇಕ ಚಳುವಳಿ, ಸತ್ಯಾಗ್ರಹ ನಡೆದು ಯೋಜನೆ ರೂಪುಗೊಂಡಿದ್ದು, ಅನೇಕ ಸಮಸ್ಯೆಗಳನ್ನು ಸಹ ಕಂಡಿದೆ ಮತ್ತು ಕಾಣುತ್ತಿದೆ. ತುಂಗಭದ್ರಾ ಅಣೆಕಟ್ಟು ಪೂರ್ವದಲ್ಲಿ ಇದ್ದಂತಹ ಸ್ಥಿತಿ ಈಗ ಇಲ್ಲವಾಗಿದೆ.

ಇದರ ಜೊತೆಗೆ ಕೃಷಿ ಚಟುವಟಿಕೆ, ನೀರಾವರಿ ಯೋಜನೆಗಳು ನಡೆಯುತ್ತಿವೆ. ಗಂಗಾವತಿಯಿಂದ ರಾಯಚೂರಿನವರೆಗೆ ಸುಮಾರು ೧೬೦ ಕಿ.ಮೀ. ನಷ್ಟು ಜಲ ಸಂಚಾರ ವ್ಯವಸ್ಥೆಯಿದೆ. ಈ ಜಲಾಶಯದಿಂದ ಸುಮಾರು ೨೩೭ ಕಿ.ಮೀ. ವಿಸ್ತಾರ ಪ್ರದೇಶದಲ್ಲಿ ಮತ್ಸ್ಯ ಪೋಷಣೆ ಮಾಡಲಾಗುತ್ತಿದೆ. ಅನೇಕ ಕೈಗಾರಿಕೆಗಳು ಬಂದಿವೆ. ಈ ಭಾಗದ ಜನರ ಸಾಮಾಜಿಕ ಆರ್ಥಿಕ ರಾಜಕೀಯ ಮತ್ತು ಶೈಕ್ಷಣಿಕ ಬದುಕಿನಲ್ಲಿ ಬದಲಾವಣೆಯಾಗಿದೆ ಮತ್ತು ಆಗುತ್ತಿದೆ.

ಇದರ ಜೊತೆಗೆ ಅನೇಕ ಸಮಸ್ಯೆಗಳು ಸಹ ಸೃಷ್ಟಿಯಾಗಿರುವುದನ್ನು ಸಹ ನಾವು ಕಾಣಬಹುದಾಗಿದೆ ಅದರಲ್ಲಿ ಪ್ರಮುಖವಾಗಿ ತುಂಗಭದ್ರಾ ಅಣೆಕಟ್ಟು ಹೂಳಿನ ಸಮಸ್ಯೆ, ಕಾಲುವೆಗಳ ಸೋರುವಿಕೆಯಿಂದ ನೀರು ಪೋಲಾಗುತ್ತಿರುವುದು, ನೀರಿನ ದುರ್ಬಳಕೆ, ಹೆಚ್ಚಿನ ಪ್ರಮಾಣದ ನೀರು ಕೈಗಾರಿಕೆಗಳಿಗೆ ಬಳಕೆಯಾಗುತ್ತಿರುವುದು ಹವಾಮಾನ ವೈಪರೀತ್ಯದಿಂದ ಮಳೆಯಾಗದೆ ಅತಿವೃಷ್ಟಿ ಅನಾವೃಷ್ಟಿ ಆಗುತ್ತಿರುವುದು. ನೀರಿನ ಮರುಬಳಕೆ ಮಾಡಿಕೊಳ್ಳದಿರುವುದು ಹೀಗೆ ಅನೇಕ ಸಮಸ್ಯೆ ಸವಾಲುಗಳ ಸುಳಿಯಲ್ಲಿ ತುಂಗಭದ್ರಾ ಅಣೆಕಟ್ಟು ಏಳು ಬೀಳುಗಳ ನಡುವೆ ಮಧ್ಯ ಕರ್ನಾಟಕ ಹಾಗೂ ಆಂಧ್ರ ಪ್ರದೇಶದ ಜನತೆಯ ಪಾಲಿಗೆ ಜೀವದಾಯಿನಿ ಆಗಿರುವುದಂತೂ ಸತ್ಯ.

## ಆಕರ ಗ್ರಂಥಗಳು


೧. ವಾಸುದೇವರಾವ್.ಎಂ., ೨೦೦೩, ಕರ್ನಾಟಕದ ನದಿಗಳು, ಪುಟ ಸಂಖ್ಯೆ ೫೭, ೫೮, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೨ ವಿರೂಪಾಕ್ಷಿ ಪೂಜಾರಹಳ್ಳಿ, ೧೯೯೯, ಜಲಸಂಬಂಧಿ ಚಳವಳಿಗಳು, ಏಕೀಕರಣೋತ್ತರ ಕರ್ನಾಟಕ ಚಳವಳಿ ಸಂ. ೨, ಪುಟ ಸಂಖ್ಯೆ ೨೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಸಂಡೂರು ತಾಲೂಕಿನ ಕೆರೆಗಳು : ಒಂದು ಅವಲೋಕನ

ತಿಪ್ಪೇರುದ್ರ*

ಜೀವಜಗತ್ತಿಗೆ ಮೂಲಾಧಾರವಾದ ನೀರು ಪ್ರಕೃತಿಯ ಕೊಡುಗೆಯಾಗಿದ್ದು, ಜಲಸಂಸ್ಕೃತಿಯ ಮೂಲ ಆಗರವಾದ ಕೆರೆಕಟ್ಟೆಗಳೇ ಹಳ್ಳಿಗರ ಜೀವನಾಡಿಯಾಗಿವೆ. ಕೆರೆ ಕಟ್ಟಿಸುವುದು ಜನಪರ ಕಾರ್ಯವಾಗಿದ್ದು, ಕೆರೆಗಳು ನೀರು ಸಂಗ್ರಹಣೆಯ ಪವಿತ್ರ ಸ್ಥಳಗಳಾಗಿವೆ. ಕರ್ನಾಟಕದಲ್ಲಿ ಸುಮಾರು ೩೦೦೦೦ಕ್ಕೂ ಹೆಚ್ಚು ಕೆರೆಗಳಿದ್ದು, ಬಳ್ಳಾರಿ ಜಿಲ್ಲೆಯು ಸಹ ಕೆರೆ ನೀರಾವರಿಗೆ ಪ್ರಸಿದ್ಧವಾಗಿದೆ. ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ಅರಸರು, ಆಡಳಿತಗಾರರು ಅನೇಕ ಕೆರೆಗಳನ್ನು ನಿರ್ಮಾಣ ಮಾಡಿ ವ್ಯವಸಾಯಕ್ಕೆ, ದಿನನಿತ್ಯ ನೀರಿನ ಬಳಕೆಗೆ, ಮೀನುಗಾರಿಕೆಗೆ ಮೊದಲಾದ ಉದ್ದೇಶಗಳಿಗಾಗಿ ಕೆರೆಗಳನ್ನು ಕಟ್ಟಿಸಿ ಜನಸಾಮಾನ್ಯರಿಗೆ ಅನುಕೂಲ ಮಾಡಿಕೊಟ್ಟಿದ್ದರು. ನದಿಗಳು ಹರಿಯದೆ ಇರುವ ಪ್ರದೇಶಗಳಲ್ಲಿನ ಕೃಷಿಕರು ಕೆರೆ, ಬಾವಿಗಳನ್ನು ನೀರಾವರಿಗಾಗಿ ಅವಲಂಬಿಸಬೇಕಾಗಿತ್ತು. ಕೆರೆಗಳಲ್ಲಿನ ನೀರನ್ನು ಸಂಗ್ರಹಿಸಲಾಗುತ್ತಿತ್ತು. ಕೆರೆಗಳನ್ನು ಅರಸರು ಹಾಗೂ ಖಾಸಗಿ ವ್ಯಕ್ತಿಗಳು ಸರಕಾರದೊಡನೆ ತಮ್ಮ ಖರ್ಚಿನಲ್ಲಿ ಕಟ್ಟಿಸಿ ಕೆರೆಗಳ ನಿರ್ಮಾಣ ಕಾರ್ಯದಲ್ಲಿ ಪಾಲ್ಗೊಳ್ಳುತ್ತಿದ್ದರು. ಪ್ರತಿಯೊಂದು ಹಳ್ಳಿಯಲ್ಲಿಯೂ ಅಲ್ಲಿನ ಬೇಸಾಯ ಭೂಮಿಯ ವಿಸ್ತಾರ ಹಾಗೂ ಬೆಳೆಯುವ ಬೆಳೆ ಇವುಗಳನ್ನು ಅವಲಂಬಿಸಿಕೊಂಡು ಕೆರೆಗಳಿರುತ್ತಿದ್ದವು.

ಬಳ್ಳಾರಿ ಜಿಲ್ಲೆಯಲ್ಲಿ ಪ್ರಾಕೃತಿಕ ಸೊಬಗಿಗೆ ಪ್ರಖ್ಯಾತಿ ಪಡೆದಿರುವ ಸಂಡೂರು ಬೆಟ್ಟ-ಗುಡ್ಡಗಳಿಂದ ಕೂಡಿದ ಪ್ರದೇಶವಾಗಿದೆ. ಬಿರು ಬಿಸಿಲಿನ ಜಿಲ್ಲೆಯಲ್ಲಿ ಹಚ್ಚಹಸಿರಿನ ಪ್ರದೇಶವಾಗಿದೆ. ಜಿಲ್ಲೆಯ ಉಳಿದ ತಾಲೂಕುಗಳಿಗಿಂತ ವೈಶಿಷ್ಟ್ಯಪೂರ್ಣವಾದುದಾಗಿದ್ದು, ಎತ್ತರವಾದ ಬೆಟ್ಟಪ್ರದೇಶ, ಗಿರಿಕಂದರಗಳ ಸುಂದರ ತಾಣ ಸಂಡೂರು ತನ್ನದೇ ಆದ ಪೌರಾಣಿಕ, ಐತಿಹಾಸಿಕ ಪರಂಪರೆಯನ್ನು ಹೊಂದಿದೆ. ಕೆರೆ ನಿರ್ಮಾಣಕ್ಕೆ ಹೇಳಿಮಾಡಿಸಿದ ಸ್ಥಳವಾಗಿದ್ದು, ಈ ಪ್ರದೇಶದಲ್ಲಿ ನೀರಾವರಿ ವ್ಯವಸ್ಥೆಯಲ್ಲಿ ಪ್ರಮುಖವಾಗಿ ಕೆರೆ ನೀರಾವರಿ ಪದ್ಧತಿಯನ್ನು ನಾವು ಕಾಣುತ್ತೇವೆ. ಮಳೆನೀರು ಬೆಟ್ಟ-ಗುಡ್ಡಗಳ ನಡುವೆ, ಕಣಿವೆ-ಇಳಿಜಾರಿನಲ್ಲಿ ಹರಿದು ಎಲ್ಲೂ ಸಂಗ್ರಹಗೊಳ್ಳದೇ ಹರಿದು ಹೋಗುವ ನೀರನ್ನು ಒಡ್ಡುಹಾಕಿ, ಅಣೆಕಟ್ಟು ಕಟ್ಟಿ ಕೆರೆಗಳನ್ನು ನಿರ್ಮಿಸಲಾಗಿದೆ. ಮಳೆ ಆಧಾರಿತ ಪ್ರದೇಶವಾದ ಸಂಡೂರು ತಾಲೂಕಿನಲ್ಲಿ ಜಲಸಂಪನ್ಮೂಲವನ್ನು ಸಂರಕ್ಷಿಸಿ ಸಮರ್ಪಕವಾಗಿ ಬಳಸುವ ಕಾರ್ಯವನ್ನು ಹಿಂದಿನ ಕಾಲದಿಂದಲೂ ಮಾಡುತ್ತಾ ಬಂದಿರುವುದು ಕಂಡು ಬಂದಿದೆ.

ಸಂಡೂರು ತಾಲೂಕಿನಲ್ಲಿ ಚೋರನೂರು, ತೋರಣಗಲ್ಲು, ಸಂಡೂರು ಎನ್ನುವ ಮೂರು ಹೋಬಳಿಗಳಿದ್ದು ಸಣ್ಣ ನೀರಾವರಿ ಇಲಾಖೆ ವ್ಯಾಪ್ತಿಗೆಗೆ ಸೇರಿದ ೧೮ ದೊಡ್ಡ ಕೆರೆಗಳು ಹಾಗೂ ಜಿಲ್ಲಾ ಪಂಚಾಯತ್ ಎಂಜಿನಿಯರಿಂಗ್ ಉಪ ವಿಭಾಗಕ್ಕೆ ಸೇರಿದ ೨೧ ಸಣ್ಣ ಕೆರೆಗಳಿದ್ದು ಒಟ್ಟು ೩೯ ಕೆರೆಗಳಿವೆ.

ಚಿಕ್ಕಕೆರೆಯಾಗಿನಹಳ್ಳಿ, ಕೆ.ಹುಲಿಕುಂಟೆ, ಸೋವೇನಹಳ್ಳಿ ದೊಡ್ಡ ಕೆರೆ, ವಡ್ಡಿನಕಟ್ಟೆ, ಜಿಗೇನಹಳ್ಳಿ, ಓಬಳಾಪುರ, ಆವಿನಮಡಗು, ಚೋರನೂರು, ಅಂಕಮ್ಮನಾಳ್, ಎಸ್.ಹುಲಿಕುಂಟೆ, ಯು.ರಾಜಾಪುರ, ಜೋಗ, ದೊಡ್ಡ ಅಂತಾಪುರ, ಲಕ್ಕಲಹಳ್ಳಿ, ಉಬ್ಬಲಗಂಡಿ, ರಾಘವಪುರ, ಮೆಟ್ರಿಕಿ, ಕೊಡಾಲು ಗ್ರಾಮಗಳ ಒಟ್ಟು ೧೮ ಕೆರೆಗಳ ನಿರ್ವಹಣೆಯನ್ನು ಸಣ್ಣ ನೀರಾವರಿ ಇಲಾಖೆ ನೋಡಿಕೊಳ್ಳುತ್ತದೆ. ಈ ಇಲಾಖೆಗೆ ಸೇರಿದ ೧೮ ಕೆರೆಗಳ ಒಟ್ಟು ವಿಸ್ತೀರ್ಣ ೭೪೬.೫೨ ಹೆಕ್ಟೇರ್‌ಗಳಾಗಿದ್ದು, ೪೬೬.೮ ಹೆಕ್ಟೇರ್‌ಗಳಷ್ಟು ಕೆರೆಯ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯನ್ನು ಹೊಂದಿದೆ.

ಬಂಡ್ರಿ ದೊಡ್ಡ ಕೆರೆ, ಸೋವೇನಹಳ್ಳಿ ಸಣ್ಣಕೆರೆ, ಅಂಕಮ್ಮನಾಳ ತಿಮ್ಮರಸನ ಕೆರೆ, ಅಂಕಮ್ಮನಾಳ ಸಣ್ಣಕೆರೆ, ಬೊಮ್ಮಗಟ್ಟದ ಹುಲಿಕುಂಟೆ ಕೆರೆ, ಬೊಮ್ಮಗಟ್ಟ ಕೆರೆ, ತಿಪ್ಪನಮರಡಿ ಕೆರೆ , ಅಗ್ರಹಾರ ಕೆರೆ, ನಿಡಗುರ್ತಿ ದೊಡ್ಡ ಕೆರೆ, ನಿಡಗುರ್ತಿ ಸಣ್ಣಕೆರೆ, ಬಂಡ್ರಿ ಸಣ್ಣ ಕೆರೆ, ತುಂಬರಗುದ್ದಿ ಹಿರೇಕೆರೆ, ನಾರಾಯಣಪುರ, ಮೊದಲಾದ ೨೧ ಕೆರೆಗಳ ನಿರ್ವಹಣೆಯನ್ನು ಜಿಲ್ಲಾ

* ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ, ಸ.ಪ್ರ. ದರ್ಜೆ ಕಾಲೇಜು, ಪರಶುರಾಮಪುರ, ಚಳ್ಳಕೆರೆ ತಾ., ಚಿತ್ರದುರ್ಗ ಜಿ., ಮೊ. ೯೪೪೫೫೮೮೪೫೭

ಪಂಚಾಯತ್ ಎಂಜನಿಯರಿಂಗ್ ಉಪ ವಿಭಾಗವು ನೋಡಿಕೊಳ್ಳುತ್ತದೆ. ಈ ೨೧ ಕೆರೆಗಳ ಒಟ್ಟು ವಿಸ್ತೀರ್ಣ ೮೪೦.೬೯ ಹೆಕ್ಟೇರ್‌ಗಳಾಗಿದ್ದು, ೨೮೩.೫೩ ಹೆಕ್ಟೇರ್‌ಗಳಷ್ಟು ಕೆರೆಯ ಅಚ್ಚುಕಟ್ಟು ಪ್ರದೇಶದ ವ್ಯಾಪ್ತಿಯನ್ನು ಹೊಂದಿದೆ.

೨೦೧೧-೧೨ನೇ ಸಾಲಿನ ವರದಿಯ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಉಳಿದ ತಾಲೂಕುಗಳಿಗಿಂತ ಸಂಡೂರು ಅತಿಹೆಚ್ಚು ಕೆರೆ ನೀರಾವರಿ ಪದ್ಧತಿಯನ್ನು ಅಳವಡಿಸಿಕೊಂಡ ತಾಲೂಕಾಗಿದ್ದು, ಭೌಗೋಳಿಕವಾಗಿ ೯೪೩೯೪ ಹೆಕ್ಟೇರ್ ವಿಸ್ತಾರವನ್ನು ಹೊಂದಿದೆ. ೨೪೧೧೮ ಹೆಕ್ಟೇರ್ ವಿಸ್ತಾರದಲ್ಲಿ ಅರಣ್ಯವಿದ್ದು ಹಾಗೂ ಕೃಷಿಗೆ ಯೋಗ್ಯವಾದ ಭೂಮಿ ಕೇವಲ ೩೯.೭೯%ರಷ್ಟು ಇದ್ದು, ಒಟ್ಟು ೩೭೦೩೮ ಹೆಕ್ಟೇರ್ ಭೂಮಿಯು ಉಳುಮೆಯ ಭೂಮಿಯಾಗಿದೆ. ಇದರಲ್ಲಿ ೪.೮೨%ರಷ್ಟು ಭೂಮಿಯು ಕೆರೆ ನೀರಾವರಿ ಪದ್ಧತಿಗೆ ಒಳಪಟ್ಟಿದೆ.

ಸಂಡೂರು ತಾಲೂಕು ಹಲವು ಮಾದರಿಯ ಐತಿಹಾಸಿಕವಾದ ಕೆರೆಗಳನ್ನು ಹೊಂದಿದ ಪ್ರದೇಶವಾಗಿದೆ. ಇಂತಹ ಕೆರೆಗಳಲ್ಲಿ ದರೋಜಿ ಕೆರೆಯು ಒಂದು. ರಾಜ್ಯದಲ್ಲಿಯೇ ಎರಡನೇ ಅತಿ ದೊಡ್ಡ ಕೆರೆ, ಬಳ್ಳಾರಿ ಜಿಲ್ಲೆಯ ಅತಿದೊಡ್ಡ ಕೆರೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ತಾಲೂಕಿನ ದರೋಜಿ ಗ್ರಾಮದ ಬಳಿಯಿರುವ ಐತಿಹಾಸಿಕ ನೀರಾವರಿ ಕೆರೆಯು ಸಂಡೂರು ಮತ್ತು ಹೊಸಪೇಟೆ ತಾಲೂಕಿನ ಸುಮಾರು ೧೦ಕ್ಕೂ ಹೆಚ್ಚು ಹಳ್ಳಿಯ ಜನರಿಗೆ ಆಸರೆಯಾಗಿದೆ.

ನೀರಾವರಿಗೆ ಆದ್ಯತೆ ನೀಡುವ ಸಲುವಾಗಿ ದರೋಜಿ ಕೆರೆಯನ್ನು ಕ್ರಿ.ಶ.೧೭೯೭ರ ಅಸುಪಾಸಿನಲ್ಲಿ ಟಿಪ್ಪುಸುಲ್ತಾನ್ ನಿರ್ಮಿಸಿದ ಎಂದು ಹೇಳಲಾಗುತ್ತಿದೆ. ೧೮೫೧ರಲ್ಲಿ ದರೋಜಿ ಕೆರೆ ನೀರಿನ ಪ್ರವಾಹಕ್ಕೆ ಸಿಲುಕಿ ಒಡೆದು ಅಪಾರ ಪ್ರಮಾಣದ ನಷ್ಟ ಉಂಟಾಗಿತ್ತು. ಈ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆಯ ಕಲೆಕ್ಟರ್ ಎ. ಹ್ಯಾಥವೇ ಅವರು ೧೮೫೩ರಲ್ಲಿ ಹೊಸ ದರೋಜಿ ಗ್ರಾಮ ನಿರ್ಮಾಣಕ್ಕೆ ಮುಂದಾಗಿದ್ದರು ಎಂದು ಇತಿಹಾಸದಿಂದ ತಿಳಿಯುತ್ತದೆ. ೨೦೦೯ರಲ್ಲಿ ಸುರಿದ ಕುಂಭದ್ರೋಣ ಮಳೆ, ನೆರೆಹಾವಳಿಗೆ ಕೆರೆಯ ಕೋಡಿ ಕೊಚ್ಚಿ ಹೋಗಿತ್ತು. ನಂತರ ಸರ್ಕಾರ ಪುನರ್ನಿರ್ಮಿಸಿ ರೈತರಿಗೆ ಅನುಕೂಲ ಮಾಡಿಕೊಟ್ಟಿತ್ತು.

ದರೋಜಿ ಕೆರೆಯ ಏರಿಯ ಒಟ್ಟು ಉದ್ದ ೩.೬ ಕಿ.ಮೀ. ಇದ್ದು, ೪.೫೭ ಮೀ. ಕೆರೆ ಏರಿ ಅಗಲವಾಗಿದೆ. ಕೆರೆಯ ಕೋಡಿಯ ಉದ್ದವಾಗಿದ್ದು, ೧೩೬.೨೦ ಮೀ ಕೆರೆ ೬೧೦.೧೫ ಎಂ.ಸಿ.ಎಫ್.ಟಿ. ಕೆರೆ ನೀರಿನ ಪರಿಮಿತಿಯನ್ನು ಹೊಂದಿದೆ. ವಿಶಾಲವಾದ ಕೆರೆಯ ಅಂಗಳವನ್ನು ಹೊಂದಿದ ಈ ಕೆರೆಯು ತಳಮಟ್ಟದಿಂದ ೧೫೧೧ ಅಡಿ ಎತ್ತರವನ್ನು ಒಳಗೊಂಡಿದೆ. ತುಂಬಿದ ಕೆರೆಯ ನೀರಿನ ಮಟ್ಟ ೧೫೦೭.೩೫ ಇದ್ದು, ೭ ವಡ್ಡುಕಟ್ಟೆಗಳಿವೆ. ಒಟ್ಟು ಕೆರೆಯ ಜಲಾಯನ ಅಚ್ಚುಕಟ್ಟು ಪ್ರದೇಶವು ೩೨೨೨ ಎಕರೆಯ ವಿಸ್ತಾರವಾದ ವ್ಯಾಪ್ತಿಯನ್ನು ಒಳಗೊಂಡಿದ್ದು, ಸಂಡೂರು ಮತ್ತು ಹೊಸಪೇಟೆ ತಾಲೂಕಿನ ೧೦ ಗ್ರಾಮಗಳು ಕೆರೆಯ ವ್ಯಾಪ್ತಿಗೆ ಬರುತ್ತವೆ. ಸಣ್ಣ ನೀರಾವರಿ ಇಲಾಖೆ ಹಾಗೂ ಜಿಲ್ಲಾ ಪಂಚಾಯತ್ ಇಂಜನಿಯರಿಂಗ್ ಉಪವಿಭಾಗವು ಜಂಟಿಯಾಗಿ ಇದರ ನಿರ್ವಹಣೆಯನ್ನು ನೋಡಿಕೊಳ್ಳುತ್ತವೆ.

ಆವಿನಮಡುಗು ಕೆರೆಯು ತೋರಣಗಲ್ಲು ಹೋಬಳಿ ವ್ಯಾಪ್ತಿಗೆ ಬರುತ್ತದೆ. ಇದು ತಾಲೂಕಿನ ಎರಡನೇ ಅತಿ ದೊಡ್ಡ ಕೆರೆಯಾಗಿದ್ದು, ೫೫೦ ಎಕರೆ ವಿಸ್ತೀರ್ಣ ಹೊಂದಿದೆ. ಸಣ್ಣ ನೀರಾವರಿ ಇಲಾಖೆಯ ನಿರ್ವಹಣೆಯಲ್ಲಿರುವ ಇದು ಮೂಲದಲ್ಲಿ ೧೧೨.೯೯ ಎಂಸಿಎಫ್‌ಟಿ ನೀರಿನ ಸಂಗ್ರಹಣೆ ಸಾಮರ್ಥ್ಯ ಹೊಂದಿದೆ. ಕೆರೆ ಹೂಳಿನಿಂದಾಗಿ ನೀರಿನ ಸಂಗ್ರಹಣೆ ಸಾಮರ್ಥ್ಯ ಪೂರ್ಣ ಕುಸಿದಿದ್ದು, ಈ ಕೆರೆಯ ಅಂಗಳದಲ್ಲಿ ಜಾಲಿ ಗಿಡಗಳು ಬೆಳೆದು ಕಾಡಿನ ರೂಪ ತಾಳಿದೆ.

ಚೋರನೂರು ಹೋಬಳಿ ವ್ಯಾಪ್ತಿಯಲ್ಲಿ ಬರುವ ಅತಿದೊಡ್ಡ ಕೆರೆಗಳಲ್ಲಿ ಬಂಡ್ರಿ ಕೆರೆಯು ಒಂದಾಗಿದ್ದು, ಕೃಷಿ ಮತ್ತು ದನಕರುಗಳಿಗೆ ಹೆಚ್ಚು ಅನುಕೂಲವಾಗಿದೆ. ಗ್ರಾಮದ ಎರಡು ಕೆರೆಗಳಲ್ಲಿ ಅತಿ ಹೆಚ್ಚು ನೀರಿನ ಸಂಗ್ರಹಣೆಯಿಂದ ನೀರಾವರಿ ಪ್ರದೇಶಕ್ಕೆ ನೀರುಣಿಸುತ್ತಿವೆ. ೨೦೧೫ರಲ್ಲಿ ಬಂಡ್ರಿ ಗ್ರಾಮದ ದೊಡ್ಡ ಕೆರೆ ಮಳೆಯ ಕಾರಣದಿಂದ ಒಡೆದುಹೋಗಿತ್ತು. ಕೆರೆಯ ಏರಿ, ತೂಬು, ಕೋಡಿಯನ್ನು ಕೂಡ ಅಭಿವೃದ್ಧಿ ಪಡಿಸಲಾಗಿದೆ.

ಚೋರನೂರಿನ ಕೆರೆಯು ವಿಶೇಷವಾಗಿದ್ದು, ೧೦೦ ಮೀ. ಉದ್ದ, ೧೦೦ ಮೀ ಅಗಲ, ೨.೫ ಮೀ ಆಲಕ್ಕೆ ತೆಗೆದ ಹೊಂಡದಲ್ಲಿ ನೀರಿನ ಸಂಗ್ರಹಣೆಯಾಗಿದೆ.

ಇತ್ತೀಚೆಗೆ ಅತಿವೃಷ್ಠಿಯಿಂದಾಗಿ ಬಂಡ್ರಿ ಕೆರೆ, ವಿಠಲಾಪುರ ಕೆರೆ, ಅಂಕಮ್ಮನಾಳ್ ಕೆರೆಗಳು ಒಡೆದು ಹೋಗಿದ್ದು, ಕೆರೆ ಸಂಜೀವಿನಿ ಯೋಜನೆ, ಸ್ಥಳೀಯ ಶಾಸಕರ ಅನುದಾನದಡಿಯಲ್ಲಿ ಇವುಗಳ ದುರಸ್ಥಿಯನ್ನು ಮಾಡಲಾಗಿದ್ದು, ರೈತರು ಪ್ರಯೋಜನ ಪಡೆಯುತ್ತಿದ್ದಾರೆ.

ಕೆರೆಗಳ ನೀರಿನ ಸಂಗ್ರಹಣೆಯಿಂದ, ಬಾವಿಗಳ ಅಂತರ್ಜಲ ಹೆಚ್ಚಾಗುತ್ತದೆ, ಮಣ್ಣಿನ ಸವಕಳಿ ಕಡಿಮೆಯಾಗಿ ವಾತಾವರಣ ತಂಪಾಗುತ್ತದೆ. ನೀರಾವರಿಯಿಂದ ಜನರು ಬೆಳೆಗಳನ್ನು ಬೆಳೆಯಲು ಸಾಧ್ಯವಾಗುತ್ತದೆ ಹಾಗೂ ಪ್ರಾಣಿ ಪಕ್ಷಿಗಳಿಗೆ ಅನುಕೂಲವಾಗುತ್ತದೆ. ಇಲ್ಲದಿದ್ದಲ್ಲಿ "ಹಳೆಯ ಕೆರೆಗಳ ನಿರ್ಲಕ್ಷ, ತಂದಿತೆಮಗೆ ದುರ್ಭಿಕ್ಷ" ಎನ್ನುವ ಮಾತಿನಂತೆ ಸಂಡೂರು ತಾಲೂಕಿನಲ್ಲಿರುವ ಕೆರೆಗಳನ್ನು ನಿರ್ಲಕ್ಷಿಸದೆ ಸಂರಕ್ಷಣೆ ಮಾಡಬೇಕಾದ ಅಗತ್ಯವಿದೆ. ಹೂಳು, ಒತ್ತುವರಿ, ಕಾರ್ಖಾನೆಗಳ ತ್ಯಾಜ್ಯ, ಜೊಂಡು ಬೆಳೆದಿರುವುದು, ನಿರ್ವಹಣೆಯ ಕೊರತೆ ಮೊದಲಾದ ಸಮಸ್ಯೆಗಳಿಂದ ಬಳಲುತ್ತಿರುವ ಸಂಡೂರು ತಾಲೂಕಿನ ಕೆರೆಗಳನ್ನು ಪುನಶ್ಚೇತನಗೊಳಿಸಿ ಜಲಸಂಸ್ಕೃತಿಯನ್ನು ಕಾಪಾಡಬೇಕಿದೆ.



## ಆಕರ ಗ್ರಂಥಗಳು


೧. ನೀಲತ್ತಹಳ್ಳಿ ಕಸ್ತೂರಿ (ಅನು), ಮೂಲ : ದೀಕ್ಷಿತ್ ಜಿ.ಎಸ್., ಕುಪ್ಪುಸ್ವಾಮಿ ಜಿ.ಆರ್. ಮತ್ತು ಮೋಹನ್ ಎಸ್.ಕೆ. , ೨೦೦೦, ಕರ್ನಾಟಕದಲ್ಲಿ ಕೆರೆ ನೀರಾವರಿ, ಕ.ವಿ.ವಿ, ಹಂಪಿ.

೨. ರಾಮದಾಸರೆಡ್ಡಿ ಎಸ್.ಜಿ., ೨೦೦೯, ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩. ರಾಜು ಎಲ್.ಪಿ., ೨೦೧೨, ಚರಿತ್ರೆ ಮತ್ತು ಸಂಸ್ಕೃತಿ, ಶ್ರೀ ಅನ್ನಪೂರ್ಣ ಪ್ರಕಾಶನ, ಬೆಂಗಳೂರು.

೪. ಸೋಮೇಶ ಎಂ., ೨೦೧೧, ಡಣಾಯನಕೆರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫. ವಾಸುದೇವನ್ ಸಿ.ಎನ್., ೨೦೦೧, ಹಂಪಿ ಪರಿಸರದ ಕೆರೆಗಳು, ಧ್ರುವನಾರಾಯಣ (ಕನ್ನಡಕ್ಕೆ), ಕೊಟ್ರಯ್ಯ ಸಿ.ಟಿ.ಎಂ. (ಆಂಗ್ಲಮೂಲ), ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ.

೬ ಚಿತ್ರದುರ್ಗ ಜಿಲ್ಲೆಯ ಶಾಸನೋಕ್ತ ಕೆರೆ ನೀರಾವರಿ, ಡಾ॥ ಟಿ. ವಿ. ನಾಗರಾಜ, ಇತಿಹಾಸ ದರ್ಶನ ಸಂಪುಟ –೨೨, ೨೦೦೭

೭. ದಾವಣಗೆರೆ ಜಿಲ್ಲೆಯಲ್ಲಿ ವಿಜಯನಗರ ಮತ್ತು ನಾಯಕರ ಕಾಲದ ಕೆರೆ ನೀರಾವರಿ ವ್ಯವಸ್ಥೆ (ಕ್ರಿ.ಶ. ೧೩೩೬ ರಿಂದ ೧೮೦೦) ಡಾ. ಎನ್.ಜಿ. ಸಂತೋಷ ಮತ್ತು ಜೆ.ಬಿ. ನಾಗವೇಣಿ  ಇತಿಹಾಸ ದರ್ಶನ ಸಂಪುಟ–೨೮, ೨೦೧೩

೮. ವಾಗೀಶ್ ಶಿವಾಚಾರ್ಯ ಎಸ್.ಎಂ., ೨೦೧೭, ಬಳ್ಳಾರಿ ಜಿಲ್ಲಾ ಅಂಕಿ–ಅಂಶಗಳ ನೋಟ, ಜಿಲ್ಲಾ ಸಾಂಖ್ಯಿಕ ಅಧಿಕಾರಿ, ಬಳ್ಳಾರಿ

೯. ಬರಿದಾದ ಕೆರೆ : ಸಂಕಷ್ಟದಲ್ಲಿ ಅನ್ನದಾತರು, ಪಂಡಿತಾರಾಧ್ಯ ಎಚ್.ಎಂ., ಮೆಟ್ರಿ, ಪ್ರಜಾವಾಣಿ ದಿನಪತ್ರಿಕೆ, ಗುರುವಾರ, ಆಗಸ್ಟ್ ೧೦, ೨೦೧೭

೧೦. ಬೇಸಿಗೆ ಮುನ್ನವೇ ಬರ, ವಿಜಯ ಕರ್ನಾಟಕ ದಿನಪತ್ರಿಕೆ, ಫೆಬ್ರವರಿ ೭, ೨೦೧೮

# ಚಿಕ್ಕ ಕೆರೆಯ ಮಧ್ಯದಲ್ಲಿರುವ ಕಲ್ಲು ಕಟ್ಟಡ

ಸಿ. ರಾಣಿ*

ಒಂದು ದೇಶದ ಒಂದು ಜಿಲ್ಲೆಯ ಒಂದು ಗ್ರಾಮದ ಬಗ್ಗೆ ತಿಳಿಯಬೇಕಾದರೆ ಅಲ್ಲಿನ ಸಾಕ್ಷ್ಯಾಧಾರಗಳು ನಮಗೆ ಮಾಹಿತಿ ನೀಡುತ್ತವೆ. ಸಾಕ್ಷ್ಯಧಾರಗಳು ಎಂದರೆ ಕೆರೆ, ಕಟ್ಟೆ, ದೇವಾಲಯ, ಕೋಟೆ, ಕೊತ್ತಲು ಬಾವಿ, ಹೊಂಡ, ಅಲ್ಲಿನ ಶಾಸನಗಳು, ವೀರಗಲ್ಲು ಇನ್ನೂ ಮುಂತಾದವುಗಳು ಆ ಪರಿಸರದ ಇತಿಹಾಸವನ್ನು ಸಾರಿ ಹೇಳುತ್ತಿವೆ, ಹಾಗೆಯೇ ಚಿತ್ರದುರ್ಗ ಕೋಟೆ ಪರಿಸರದಲ್ಲಿನ ಚಿಕ್ಕ ಕೆರೆಯು ಒಂದಾಗಿದೆ. ಹಾಗೆಯೇ ಜಲ ಸಂಗ್ರಹ ಮನುಷ್ಯನಿಗೆ ಎಷ್ಟು ಮುಖ್ಯವಾದದ್ದು, ಎಂಬುದು ಇತಿಹಾಸದ ಅಧ್ಯಯನದಿಂದ ತಿಳಿದುಬರುತ್ತದೆ. ಮೊದಲು ಮಾನವನ ಬದುಕಿನ ಕುರುಹುಗಳು ಲಭ್ಯವಾಗುವುದು ನದಿ ಹಾಗೂ ನೀರಿನ ಪ್ರದೇಶದ ಸಮೀಪದಲ್ಲಿಯೇ ಎಂಬುದು ಇಲ್ಲಿ ತಿಳಿಯಬೇಕಾಗಿದೆ.

ವ್ಯವಸಾಯಕ್ಕೆ ಹೆಚ್ಚು ಮಹತ್ವ ನೀಡಿ ವ್ಯವಸಾಯ ಅಭಿವೃದ್ಧಿಯಾದಲ್ಲಿ ಮಾತ್ರ ಅಭಿವೃದ್ಧಿ ಸಾಧ್ಯವೆಂಬುದುನ್ನು ತಿಳಿದು ಸ್ಥಳೀಯ ಅರಸರು ಕೆರೆ, ಕುಂಟೆ, ಬಾವಿ, ದೋಣಿಗಳು, ಕಲ್ಯಾಣಿಗಳನ್ನು ತೆಗಿಸಿ. ಜನರಿಗೆ, ಧನಕರುಗಳಿಗೆ, ವ್ಯವಸಾಯಕ್ಕೆ ಸಹಕಾರ ನೀಡುತ್ತಿದ್ದರು, "ಎಲ್ಲಿ ಜಲ ಸಮೃದ್ಧಿ ಇದೆಯೇ ಅಲ್ಲಿ ಜನ ಸಮೃದ್ದಿಯನ್ನು ಕಾಣಬಹುದು.

ರಾಜರುಗಳು, ಪಾಳೆಗಾರರು, ತಮ್ಮ ರಾಜ್ಯ ವಿಸ್ತರಣೆಯಷ್ಟು ತಮ್ಮ ರಾಜ್ಯದ ಜಲ ಸಂವರ್ಧನೆಯ ಕಾರ್ಯವೂ ಮುಖ್ಯವೆಂದು ಭಾವಿಸಿದ್ದರು ಹಾಗೆ ಜಲಸಂಗ್ರಹ ಕಾರ್ಯದಲ್ಲಿ ತೊಡಿಗಿದಾಗ ಅವರ ಮನಸ್ಸಿಗೆ ಬಂದಿದ್ದು ಹರಿಯುವ ನೀರನ್ನು ತಡೆಗಟ್ಟುವುದು ಹಾಗೂ ತಡೆಗಟ್ಟಿದ ನೀರನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳುವುದು. ಇದನ್ನು ಅಯಾಕಾಲದ ರಾಜರುಗಳು ದೊರೆಗಳ, ಪಾಳೆಯಗಾರರು, ಅನೇಕ ಶಾಸನಗಳು ಸಾರಿ ಹೇಳುತ್ತಿವೆ, ಕೆರೆಗಳನ್ನು ನಿರ್ಮಿಸುವುದಷ್ಟೇ ಅವರ ಕಾರ್ಯವಾಗಿರದೆ ಅದರ ಜೀರ್ಣೋದ್ದಾರ ಅದಕ್ಕೆ ಸಂಬಂಧಿಸಿದಂತೆ ದಾನ ದತ್ತಿಗಳನ್ನು ಕೊಡುತ್ತಿದ್ದ ಪದ್ಧತಿ ಬಹಳ ಹಿಂದಿನಿಂದಲೂ ಕಂಡುಬಂದಿದೆ. ಅಂಥ ಕೆರೆಗಳ ನಿರ್ಮಾಣದಿಂದ ಎಷ್ಟು ಘನಕಾರ್ಯ ವ್ಯವಸಾಯಕ್ಕೆ ಬೇಕಾದ ನೀರಿನ ಸೌಲಭ್ಯವನ್ನು ಹೆಚ್ಚಿಸುವ ಮುಖಾಂತರ ಆ ರಾಜ್ಯದ ಆಹಾರ ಸ್ವಾವಲಂಬನೆ ಮತ್ತು ರಾಜ್ಯ ಅಭಿವೃದ್ದಿಯತ್ತ ಗಮನ ಹರಿಸುತ್ತಿದ್ದರು.

ಜಗತ್ತಿನ ಎಲ್ಲೆಡಯಿಂದ ಚಿತ್ರದುರ್ಗ ಪ್ರದೇಶದಲ್ಲಿಯೂ ಹಿಂದಿನಿಂದಲೂ ಮನುಷ್ಯ ಕೆರೆ ಕುಂಟೆ, ಕಾಲುವೆ, ಹೊಂಡ, ಬಾವಿ ಮುಂತಾದವುಗಳನ್ನು ನಿರ್ಮಾಣ ಮಾಡಿಕೊಂಡು ತನ್ನ ಅವಶ್ಯಕತೆಗಳಿಗನುಣವಾಗಿ ಅವುಗಳನ್ನು ಬಳಕೆ ಮಾಡಿ ಕೊಂಡಿದ್ದಾನೆ. ಚಿತ್ರದುರ್ಗ ಜಿಲ್ಲೆಯೂ ತೀವ್ರ ಅನಾವೃಷ್ಠಿಗೆ ತುತ್ತಾಗುವ ಪ್ರದೇಶಗಳಲ್ಲಿ ಒಂದಾಗಿದೆ. ಈ ಹಿನ್ನೆಲೆಯಲ್ಲಿ ಬಿದ್ದ ಮಳೆಯು ನೀರಿನ ಸಂಗ್ರಹಿಸುವ ಹಾಗೂ ವ್ಯವಸ್ಥಿತವಾಗಿ ಬಳಸಿಕೊಳ್ಳುವ ಕಾರ್ಯ ಮಹತ್ವ ಪಡದಿದೆ. ಇಲ್ಲಿ ಆಳ್ವಿಕೆ ಮಾಡಿದ ಪ್ರಭುಗಳು ಕಾಲಕಾಲಕ್ಕೆ ಅನೇಕ ಕೆರೆಗಳನ್ನು ನಿರ್ಮಿಸಿದ್ದಾರೆ. ಹಿಂದೆ ಅವರು ಕಲ್ಪಿಸಿದ ನೀರಾವರಿ ವ್ಯವಸ್ಥೆ ಇಂದಿಗೂ ಸಹ ಎಷ್ಟೋ ಕಡೆ ಉಳಿದು ಬಂದಿದ್ದು, ಈಗಲೂ ಪ್ರಯೋಜನಕಾರಿಯಾಗಿದೆ. ಪ್ರಸ್ತುತ ಚಿತ್ರದುರ್ಗ ಜಿಲ್ಲೆಯಲ್ಲಿ ಹಿಂದಿನ ಕಾಲದ ಕೆರೆಗಳ ಮೂಲಕ ರೂಪಿಸಲಾದ ನೀರಾವರಿ ವ್ಯವಸ್ಥೆ ಇಂದಿಗೂ ಇದೆ.

ವೇದಾವತಿ, ಚಿನ್ನಹಗರಿ, ಸುವರ್ಣಮುಖಿ ನದಿಗಳು ಜಿಲ್ಲೆಯ ನೀರಾವರಿ ಚೌಕಟ್ಟಿನಲ್ಲಿ ಪ್ರವಹಿಸುತ್ತಿದ್ದು. ಇವುಗಳೊಂದಿಗೆ ಹಳ್ಳಗಳು ಇಲ್ಲಿ ಪ್ರಮುವಾಗಿ ಹರಿಯುತ್ತವೆ. ಇವುಗಳಲ್ಲಿ ವೇದಾವತಿ ನದಿಯೂ ಜಿಲ್ಲೆಯ ಆಗ್ನೇಯ ಭಾಗದಲ್ಲಿ ಸುಮಾರು ೧೨೯ ಮೈಲಿ ಹರಿಯುತ್ತದೆ. ಇವುಗಳೊಂದಿಗೆ ಸರಣಿಯೋಪಾದಿಯಲ್ಲಿ ನಿರ್ಮಾಣಗೊಂಡಿರುವ ಕೆರೆಗಳು ಜಿಲ್ಲೆಯ ಕೃಷಿ ಚಟುವಟಿಕೆಗಳಿಗೆ ಪೂರಕ ಕೊಡುಗೆಗಳನ್ನು ನೀಡಿದೆ. ಈ ಜಿಲ್ಲೆಯಲ್ಲಿ ಕ್ರಿ.ಪೂ ೩ನೇ ಶತಮಾನದಿಂದ ೧೯ ಶತಮಾನದವರೆಗೆ ಆಳ್ವಿಕೆ ನಡೆಸಿದ ವಿವಿಧ ರಾಜಮನೆತನಗಳು ಇಲ್ಲಿ ಕೆರೆ ನೀರಾವರಿಯನ್ನು ಪ್ರೋತ್ಸಾಹಿಸಿದೆ ಮತ್ತು ಹಿನ್ನೆಲೆಯಲ್ಲಿ ಜಿಲ್ಲೆಯಾದ್ಯಂತ ೧೧೮ ದೊಡ್ಡಕೆರೆಗಳು ಹಾಗೂ ೧೩೨ ಸಣ್ಣ ಕೆರೆಗಳಿವೆ, ಒಟ್ಟಿರೆ ಸುಮಾರು ೨೮೦ ಕೆರೆಗಳು ನಿರ್ಮಾಣಗೊಂಡಿರುವುದನ್ನು ಶಾಸನಗಳು ಉಲ್ಲೇಖಿಸಿವೆ.

---

* ಪಿಎಚ್‌ಡಿ ಸಂಶೋಧನಾ ವಿದ್ಯಾರ್ಥಿನಿ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ–೫೮೩೨೭೬, ಮೊ. ೯೭೪೧೯೨೧೭೬೩

ಚಿತ್ರದುರ್ಗ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ವಿವಿಧ ರಜ ಮನೆತನಗಳಲ್ಲಿ ಹಾಗೂ ಪಾಳೆಯಗಾರರು ಮತ್ತು ಅಧಿಕಾರಿಗಳು, ನೀರಾವರಿಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ಹಲವು ಕೆರೆಗಳನ್ನು ನಿರ್ಮಿಸಿದ್ದು ಅವುಗಳ ಸಹಾಯದಿಂದ ಜಿಲ್ಲೆಯ ಚಾರಿತ್ರಿಕ ಕೆರೆಗಳ ನಿರ್ಮಾಣದ ಕಾಲನುಕ್ರಮ ಬೆಳವಣಿಗೆಯನ್ನು ಗುರುತಿಸಲು ಸಾಧ್ಯವಿದೆ. ಹಾಗೆಯೇ ಚಿತ್ರದುರ್ಗದಲ್ಲಿ ಪಾಳೆಯಗಾರರು ಕೇವಲ ಆಡಳಿತ ಮತ್ತು ಯುದ್ಧಗಳಿಗಷ್ಟೆ ತಮ್ಮ ಸಮಯವನ್ನು ವ್ಯರ್ಥ ಮಾಡಿದೇ ಅನೇಕ ಜನೋಪಯೋಗಿ ಕಾರ್ಯಗಳನ್ನು ಕೈಗೊಂಡರು.

ಚಿತ್ರದುರ್ಗ ನಗರದ ದಕ್ಷಿಣ ಭಾಗದಲ್ಲಿ ಬೆಟ್ಟದ ಪ್ರದೇಶದಲ್ಲಿರುವ ಸಣ್ಣಕೆರೆಯು ಚಿತ್ರದುರ್ಗ ಪಾಳೆಯಗಾರನಾಗಿದ್ದ ತಿಮ್ಮಣ್ಣನಾಯಕನಿಂದ ನಿರ್ಮಿತವಾಗಿದೆ. ಈ ಪ್ರದೇಶದ ಪ್ರಾಚೀನ ಕೆರೆಗಳಲ್ಲಿ ಈ ಕೆರೆಯು ಒಂದು. ಈ ಕೆರೆಯೂ ಮೂರು ನಾಲ್ಕು ಕೆರೆಗಳ ಸಮೀಪದಲ್ಲಿಯೇ ಒಂದಕ್ಕೊಂದು ಹೊಂದಿಕೊಂಡಂತೆ (ಒಂದೇ ಮಾರ್ಗ) ನಿರ್ಮಿಸಲಾಗಿದೆ. ಇದರಿಂದಾಗುವ ಪ್ರಯೋಜನವೆಂದರೆ ಕೆರೆ ತುಂಬಿದಾಗ ಹೆಚ್ಚುವರಿ ನೀರು ಮತ್ತೊಂದು ಕೆರೆಗೆ ಹರಿದು ಬರುತ್ತದೆ. ಈ ಕೆರೆಯು ಮಧ್ಯಭಾಗದಲ್ಲಿ ಕಲ್ಲು ಗುಡ್ಡೆಯು ವೃತ್ತಾಕಾರದಿಂದ ಇರುವುದನ್ನು ನೋಡಬಹುದು. ಅಲ್ಲಿನ ಈ ಕಟ್ಟಡವನ್ನು ಕಲ್ಲಿನಿಂದ ನಿರ್ಮಿಸಲಾಗಿದೆ. ಕಟ್ಟಡದ ಮಧ್ಯ ಗಿಡ ಮರಗಳು ಇವೆ. ಈ ರೀತಿಯಾಗಿ ನಿರ್ಮಿಸಿದ್ದರಿಂದ ಮೂರು ರೀತಿಯಲ್ಲಿ ಉಪಯೋಗವಾಗಲೆಂದು ನಿರ್ಮಿಸಲಾಗಿದೆ.

೧. ಕೆರೆ ತುಂಬಿದಾಗ ಕಲ್ಲು ಕಟ್ಟಡದ ಮೇಲೆ ಬಂದು ನೀರನ್ನು ಪಕ್ಷಿಗಳು ನೀರು ಕುಡಿಯಲೆಂದು
೨. ಈ ಚಿಕ್ಕ ಕೆರೆಯ ಮಧ್ಯ ಭಾಗದಲ್ಲಿ ವಿಶಾಲ ಮಂಟಪವೊಂದಿದ್ದು, ಅದು ನೋಡಲು ದ್ವೀಪದಂತೆ ಕಂಡು ಬರುತ್ತದೆ. ಇಲ್ಲಿಗೆ ಅರಮನೆ ಪರಿವಾರದವರು ನಿಸರ್ಗದ ರಮಣೀಯತೆಯನ್ನು ನೋಡಲು ಮತ್ತು ಅಗಿದಾಂಗ್ಗೆ ತಮ್ಮ ಬೇಸರ ಕಳೆದುಕೊಳ್ಳಲು ಬರುತ್ತಿದ್ದರೆಂದು ಹೇಳಬಹುದು.
೩. ಮತ್ತು ಕೋಟೆ ಪರಿಸರದಲ್ಲಿ ಈ ಕೆರೆ ಇರುವುದರಿಂದ ಬೆಟ್ಟ ಪ್ರದೇಶದಿಂದ ರಭಸವಗಿ ಬರುವ ನೀರಿನ ದಿಕ್ಕನ್ನು ಹಾಗೂ ಒತ್ತಡವನ್ನು ಬದಲಿಸುವುದಕ್ಕಾಗಿ ಈ ರೀತಿ ಕಲ್ಲು ಗುಡ್ಡೆಯನ್ನು ನಿರ್ಮಿಸಿದ್ದಾರೆ. ಹೀಗೆ ಈ ಒಂದು ಚಿಕ್ಕ ಕೆರೆಯಿಂದ ಈ ರೀತಿ ಉಪಯೋಗಗಳನ್ನು ನಾವು ನೋಡಬಹುದು.

ಈ ಕೆರೆಯನ್ನು ಚಿತ್ರದುರ್ಗದ ಪಾಳೆಯಗಾರನಾದ ತಿಮ್ಮಣ್ಣನಾಯಕನು ಕಟ್ಟಿಸಿದ್ದು ಅವರ ವಂಶಾವಳಿಗಳು ಹೇಳುವುದರಿಂದ ಇದು ಅವನ ಕಾಲದ್ದೇ ಎನ್ನಬಹುದು, ಸಹಜ. ಆದರೆ ತಿಮ್ಮಣ್ಣ ನಾಯಕನ ಕಾಲ ಕ್ರಿ.ಶ. ೧೭ನೇ ಶತಮಾನದ ಒಂದು ಶಾಸನದಲ್ಲಿ ಇದಕ್ಕೆ ಪೂರಕ ಉಲ್ಲೇಖವಿದೆ. "ಚಿಮ್ಮತ್ತನೂರಿನ ನಖರ ಮುಂಮುರಿದಂಡಗಳು ಆ ಅರಕೆಯ ಮೂಡಗೋಡಿಯ ಕಲ್ಲು ಕಡಿಸಿ ಕೋಡಿಯು ಮಾಡಿಸಿದರು" ಎನ್ನುವ ವಿವರವಿದೆ. ಇದರಿಂದ ಇಲ್ಲಿಯ ವರ್ತಕ ವರ್ಗದವರು ಈ ಕೆರೆಗಳ ಅಂದರೆ ತಿಮ್ಮಣ್ಣನಾಯಕನ ಕೆರೆ ಮತ್ತು ಚಿಕ್ಕಕೆರೆಗೆ ಒಂದೇ ಕೋಡಿಯ ನಿರ್ಮಾಣಮಾಡಿದ್ದಾರೆ. ಈ ಶಾಸನ ತಿಮ್ಮಣ್ಣನಾಯಕನ ಕೆರೆಯಲ್ಲಿ ಬಂಡೆಯ ಮೇಲೆ ಇದೆ, ಈ ಕೆರೆಯನ್ನು ವಿವಿಧ ವಿಶೇಷ ತಾಂತ್ರಿಕ ಕೌಶಲ್ಯಗಳನ್ನು ಅಳವಡಿಸಿಕೊಂಡು ನಿರ್ಮಿಸಲಾಗಿದೆ. ಕೆರೆಯ ಅರ್ಧಭಾಗ ಮಾತ್ರ ಕಗ್ಗಲ್ಲು ಮತ್ತು ಬೃಹತ್ ಗ್ರಾನೈಟ್ ಕಲ್ಲನ್ನು ಹಾಗೂ ಹೊರ ಭಾಗವನ್ನು ಗಟ್ಟಿ ಕಲಸುಮಣ್ಣನ್ನು (ಗ್ರಾವೆಲ್ಸ್) ಬಳಸಿ ಇಲ್ಲಿನ ಕೆರೆಯ ಏರಿಯನ್ನು ನಿರ್ಮಿಸಿದ್ದಾರೆ. ಇನ್ನು ಅರ್ಧಭಾಗ ಗುಡ್ಡದಿಂದ ಸುತ್ತುವರೆದಿದೆ. ಈ ಎರಡು ಜೋಡಿ ಕೆರೆಯ ಕೆಳಭಾಗದಲ್ಲಿ ವಿಶಾಲವಾದ ಕಣಿವೆಯ ಬಯಲಲ್ಲಿ ಮರದ ಒಂದು ತೋಪು ಇದೆ. ಈಗ ಅಲ್ಲಿ ಕೆಲವೇ ಮರಗಳಿವೆ, ಬಹುಶಃ ಇಲ್ಲಿ ಪೂರ್ವಕಾಲದಲ್ಲಿ ತೋಟಗಳಿದ್ದು ಅವುಗಳ ಕೃಷಿಗೆ ಈ ನೀರನ್ನು ಬಳಕೆಯಾಗಿರುವಂತೆ ಕಾಣುತ್ತದೆ. ಇದಷ್ಟೇ ಅಲ್ಲದೇ, ಮೊನ್ನೆ ಮೊನ್ನೆಯವರೆಗೂ ಚಿತ್ರದುರ್ಗ ನಗರಕ್ಕೆ ಕುಡಯುವ ನೀರು ಸಹ ಪೂರೈಕೆಯಾಗಯುತ್ತಿದ್ದದ್ದು ಈ ಕೆರೆಗಳಿಂದಲೇ ಈ ಕೆರೆಯೂ ವಿಶಾಲವಾದ ಅಂಗಳವನ್ನು ಹೊಂದಿದ್ದು ಅಗಲವಾದ ಏರಿಯನ್ನು ಹೊಂದಿದೆ. ನಾಲ್ಕು ಕಾಲಿನ ತೂಬನ್ನು ಹೊಂದಿದೆ. ಈ ಕೆರೆಯೂ ಬಹಳಷ್ಟು ಊಳು ತುಂಬಿದೆ. ಇದನ್ನು ಊಳು ತೆಗೆಸುವ ಕಾರ್ಯ ಆಗಬೇಕಾಗಿದೆ. ಈ ಕೆರೆಯು ಸ್ವಲ್ಪ ಪ್ರಮಾಣದಲ್ಲಿ ನೀರು ಇದೆ. ಕೆರೆ ಏರಿಯ ಮೇಲೆ ಚೌಡೇಶ್ವರಿ ದೇವಾಲಯ, ಅಂಜನೇಯ ದೇವಾಲಯ ಇದೆ.



## ಅಡಿಟಿಪ್ಪಣಿಗಳು


೧. ಸತ್ಯನ್ ಬಿ.ಎನ್. (ಸಂ), ೧೯೬೭, ಚಿತ್ರದುರ್ಗಜಿಲ್ಲೆಯ ಗೆಜೆಟಿಯರ್, ಪುಟ ಸಂ. ೧೧೭.
೨. ಸತ್ಯನ್ ಬಿ.ಎನ್. (ಸಂ), ೧೯೬೭, ಚಿತ್ರದುರ್ಗ ಜಿಲ್ಲೆಯ ಗೆಜೆಟಿಯರ್ ಪುಟ ಸಂ. ೧೨೧.
೩. ಸಣ್ಣ ನೀರಾವರಿ ಇಲಾಖೆ, ಚಿತ್ರದುರ್ಗ, ಇವರು ನೀಡಿದ ಮಾಹಿತಿ.
೪. ನಾಗರಾಜ, ಟಿ.ಬಿ. ಚಿತ್ರದುರ್ಗ ಜಿಲ್ಲೆಯ ಶಾಸನೋಕ್ತ ಕೆರೆ ನೀರಾವರಿ, ಇತಿಹಾಸ ದರ್ಶನ, ಸಂ ೧೭, ಪುಟ ೨೮೯, ೨೭೨.

೮೬

# ವಿದ್ವಾಂಸರ ಬೆಳವಣಿಗೆಯಲ್ಲಿ ಶಿವಯೋಗ ಮಂದಿರದ ಪಾತ್ರ

ಕೆ. ರವೀಂದ್ರನಾಥ*

೧೮ನೇ ಶತಮಾನದ ಕೊನೆಯ ಭಾಗ ಹಾಗೂ ೧೯ನೇ ಶತಮಾನದ ಆದಿಭಾಗದಲ್ಲಿ ಕರ್ನಾಟಕದ ಇತಿಹಾಸದಲ್ಲಿ ಬದಲಾವಣೆಯನ್ನು ಕಂಡಕಾಲ. ಒಂದು ಕಡೆ ವಿದೇಶಿ ವಿದ್ವಾಂಸರ ಆಗಮನದಿಂದ ಆಧುನಿಕತೆಯ ಬಯಕೆ. ಇನ್ನೊಂದು ಕಡೆ ದೇಶೀ ವಿದ್ವಾಂಸರ ಪಾರಂಪರಿಕ ಪ್ರಜ್ಞೆಯ ಹುಡುಕಾಟ ಮತ್ತು ಅದರ ಹಂಬಲ. ಅದರಲ್ಲೂ ಸಮುದಾಯದ ದೃಷ್ಟಿಯಿಂದ ಲಿಂಗಾಯತ ಸಮಾಜದ ಸ್ಥಿತಿಯಂತೂ ಈ ಕಾಲಾವಧಿಯಲ್ಲಿ ಬಹುಮೂಲದ ಸವಾಲನ್ನು ಎದುರಿಸಿತ್ತು. ಪರಳಿ ವ್ಯಾಜ್ಯದಂಥ ಒಂದು ಪ್ರಕರಣದಲ್ಲಿ ಲಿಂಗಾಯತ ಸಮುದಾಯ ಶೂದ್ರರೆಂಬ ಹೇಳಿಕೆ ವಿವಾದಕ್ಕೆ ಎಡೆಮಾಡಿಕೊಟ್ಟಂತೆ ಉತ್ತಂಗಿ ಚನ್ನಬಸಪ್ಪ ಗೌಡರಂಥ ಪಂಚಮಸಾಲಿ ಲಿಂಗಾಯತರು ಕ್ರೈಸ್ತರ ಬೈಬಲ್ಲಿಗೆ ಮಾರುಹೋಗಿ ಮತಾಂತರಗೊಂಡ ಘಟನೆಗಳೂ, ಲಿಂಗಾಯತ ಆಚಾರ-ವಿಚಾರ, ಲಿಂಗಧಾರಣೆ, ಸಂಸ್ಕಾರ ಇತ್ಯಾದಿ ಅಂಶಗಳಲ್ಲಿ ತೋರಿದ ಸಮಸ್ಯೆಗಳು ಆ ಕಾಲಕ್ಕೆ ಈ ಸಮುದಾಯವನ್ನು ನಾಲ್ಕೈದು ದಶಕಗಳ ಕಾಲ ತಲ್ಲಣಗೊಳಿಸಿರಬೇಕು. ಇಂಥ ಉಲ್ಬಣ ಸ್ಥಿತಿಯಲ್ಲಿದ್ದ ಸಮುದಾಯವನ್ನು ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಸಾಹಿತ್ಯಿಕವಾಗಿ ರಹದಾರಿಗೆ ತರುವ ಉದ್ದೇಶದಿಂದ ದಿನಾಂಕ ೦೭-೦೨-೧೯೦೯ರಲ್ಲಿ ಸ್ಥಾಪನೆಯಾದ ಸಂಸ್ಥೆ; "ಶಿವಯೋಗ ಮಂದಿರ".

ಈ ಸಂಸ್ಥೆಯ ಸ್ಥಾಪನೆಯ ಹಿಂದೆ ಪೂಜ್ಯ ಹಾನಗಲ್ಲ ಕುಮಾರ ಸ್ವಾಮಿಗಳ ಜೊತೆಗೆ ಅತಿರತ ಮಹಾರಥರಂಥ ಶ್ರೀಮಂತ ಲಖಿಮಗೌಡ ಬಸವಪ್ರಭು, ಶ್ರೀ ಚಂದ್ರಶೇಖರಶಾಸ್ತ್ರಿ ತೆಲಗಿಮಠ, ವಾರದ ಮಲ್ಲಪ್ಪನವರು ಸೊಲ್ಲಾಪುರ, ಕೊಲ್ಲಾಪುರದ ಶ್ರೀ ವೀರಭದ್ರಪ್ಪ ಶಿವಲಿಂಗಶ್ರೇಷ್ಠಿ, ಶ್ರೀ ಸಿದ್ಧರಾಮಪ್ಪ ದುಂಡಪ್ಪ ಪಾವಟೆ, ಹೊಸದುರ್ಗದ ಶ್ರೀ ಜಿ.ಮುರಿಗೆಪ್ಪನವರು, ಗದುಗಿನ ಶ್ರೀ ಕಲಿನಾಥಯ್ಯ ಪಂಚಾಕ್ಷರಿ ಶಾಸ್ತ್ರಿಗಳಂಥವರು ೧೯೦೪ ರಿಂದ ೧೯೦೮ ರ ವರೆಗೆ ಮೂರ್‍ನಾಲ್ಕು ಸಭೆಗಳಲ್ಲಿ ಶಿವಯೋಗ ಮಂದಿರದ ಸ್ಥಾಪೆನಯ ಉದ್ದೇಶ-ಗುರಿ-ಅಗತ್ಯವನ್ನು ಕುರಿತು ಚರ್ಚಿಸಿದ್ದಾರೆ.

ಅದೇನೇ ಇರಲಿ ಶಿಕ್ಷಣ-ಧರ್ಮ-ಸಮಾಜ ಇವುಗಳಂತೆ ಸಾಹಿತ್ಯ ಕ್ಷೇತ್ರದಲ್ಲಿ ಅನುಪಮವಾದ ಸೇವೆಯನ್ನು ಸಲ್ಲಿಸುವಂಥ ವಿದ್ವಾಂಸರ ಪಡೆಯನ್ನು ಬರಮಾಡಿಕೊಂಡಿದ್ದು, ಸಾಹಿತ್ಯಿಕ ವಾತಾವರಣವನ್ನು ಸೃಷ್ಟಿಸಿದ್ದು ಶಿವಯೋಗಮಂದಿರದ ಬಹುದೊಡ್ಡ ಸಾಧನೆಯಾಗಿದೆ. ಈ ಹೊತ್ತಿನ ವಿಶ್ವವಿದ್ಯಾಲಯಗಳಂತೆ ಬೋಧನಾಂಗ, ಶೋಧನಾಂಗ ಮತ್ತು ಪ್ರಸಾರಾಂಗ ಮಾದರಿಯಲ್ಲಿ ಆ ಕಾಲಕ್ಕೆ ಧಾರ್ಮಿಕ ಶಿಕ್ಷಣದ ಜೊತೆಗೆ ಸಾಮಾನ್ಯ ಜ್ಞಾನದ ಬೋಧನೆ, ಹಸ್ತಪ್ರತಿಗಳಂಥ ಆಕರ ಸಾಮಗ್ರಿಗಳ ಶೋಧನೆ, ವಿದ್ವಾಂಸರಿಂದ ಗ್ರಂಥ ರಚಿಸಿ-ಸಂಪಾದಿಸಿ-ಮುದ್ರಿಸಿ ಪ್ರಸಾರಿಸುವ ಕೆಲಸವನ್ನು ಅತ್ಯಂತ ನಿಷ್ಠೆಯಿಂದ ನೆಡೆಸಿಕೊಂಡು ಬಂದದ್ದು ಈಗ ಇತಿಹಾಸ.

ಶಿವಯೋಗ ಮಂದಿರ ಪರಿಸರಕ್ಕೆ ಬಂದ ವಿದ್ವಾಂಸರು ಶಿಕ್ಷಣತಜ್ಞರಾಗಿದ್ದರು, ಸಂಶೋಧಕರಾಗಿದ್ದರು, ಪ್ರವಚನಕಾರರಾಗಿದ್ದರು ಮತ್ತು ಸಾಮಾಜಿಕ ಸಂವೇದನಾಶೀಲರಾಗಿದ್ದರು. ಬದಲಾದ ಕಾಲಕ್ಕೆ ತಕ್ಕಂತೆ ಶೈಕ್ಷಣಿಕವಾಗಿ ಹೊಸ ಹೆಜ್ಜೆಯನ್ನಿಡುವಲ್ಲಿ ಶಿಕ್ಷಣ ತಜ್ಞರಾದ ಶಿ.ಶಿ. ಬಸವನಾಳರು, ಎಸ್.ಸಿ. ನಂದೀಮಠರು, ಪಂ. ಬಸವರಾಜ ಶಾಸ್ತ್ರಿಗಳು ಪಗಡದಿನ್ನಿ, ಪ್ರೊ. ಗೌ.ಮ. ಉಮಾಪತಿಶಾಸ್ತ್ರಿಗಳಂಥ ವಿದ್ವಾಂಸರನ್ನು ಬರಮಾಡಿಕೊಂಡು ಇಲ್ಲಿ ಕಲಿಯಬೇಕಾದ ಪಠ್ಯಕ್ರಮವನ್ನು ಸಿದ್ಧಪಡಿಸುವಲ್ಲಿ ನಿರತರಾದರು. ಪ್ರಾಥಮಿಕ ಶಿಕ್ಷಣ, ಮಾಧ್ಯಮಿಕ ಶಿಕ್ಷಣ, ವಿಶಾರದ ಶಿಕ್ಷಣ, ಕೋವಿದ ಶಿಕ್ಷಣ ಹಾಗೂ ಆಚಾರ್ಯ ಶಿಕ್ಷಣ ಕೋರ್ಸುಗಳನ್ನು ಈ ವಿದ್ವಾಂಸರು ರೂಪಿಸಿಕೊಟ್ಟರಲ್ಲದೆ ಈ ಎಲ್ಲ ಕೋರ್ಸುಗಳಲ್ಲಿ ಕನ್ನಡ ಪ್ರಥಮ ಭಾಷೆಯಾಗಿ, ಸಂಸ್ಕೃತ ದ್ವಿತೀಯ ಭಾಷೆಯಾಗಿ, ಇಂಗ್ಲೀಷ್ ತೃತೀಯ ಭಾಷೆಯಾಗಿ ಕಡ್ಡಾಯ ಪತ್ರಿಕೆಗಳನ್ನಾಗಿ ಪರಿಗಣಿಸಲಾಯಿತು. ಉಳಿದಂತೆ ಆಯಾ ವಯೋಮಾನಕ್ಕೆ ಭಾರತದ ಇತಿಹಾಸ, ಜಾಗತಿಕ ಇತಿಹಾಸ, ಶಾಸ್ತ್ರಸಾಹಿತ್ಯ, ಧರ್ಮ ಜಿಜ್ಞಾಸೆ, ಅಧ್ಯಾತ್ಮ ಇತ್ಯಾದಿ ಪಠ್ಯಗಳು ಇಲ್ಲಿಯ ಕಲಿಕೆಯ ವಿಷಯಗಳಾಗಿದ್ದವು.

* ಪ್ರಾಧ್ಯಾಪಕರು, ಹಸ್ತಪ್ರತಿ ಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸಂಶೋಧನೆ ಎನ್ನುವುದು ಸಾರ್ವಜನಿಕ ಹೊಣೆಗಾರಿಕೆ ಎಂಬುದನ್ನು ಅನುಷ್ಠಾನಕ್ಕೆ ತಂದ ಮೊದಲ ಸಂಸ್ಥೆ "ಶಿವಯೋಗ ಮಂದಿರ" ಹೀಗಾಗಿ ಹಸ್ತಪ್ರತಿಗಳ ಸರ್ವೇಕ್ಷಣೆ, ಸಂಗ್ರಹ, ಪರಿಷ್ಕರಣೆ ಹಾಗೂ ಪ್ರಕಟಣೆಗಳನ್ನು ಸಂಶೋಧನೆಯ ಭಾಗವಾಗಿ ಇಲ್ಲಿ ಜಾರಿಗೊಳಿಸಲಾಯಿತು. ಶ್ರೀ ವೀರಭದ್ರಪ್ಪ ಶಿವಲಿಂಗಪ್ಪ ಶ್ರೇಷ್ಠಿ, ಬುದ್ಧಯ್ಯ ಪುರಾಣಿಕ ತೇರದಾಳ, ಪಂ.ಮಹಾಲಿಂಗಯ್ಯ ಹಿರೇಮಠ ದ್ಯಾಂಪೂರ, ಗುರುಮೂರ್ತಿ ಶಾಸ್ತ್ರಿಗಳು ಕಜ್ಜರಿ, ಪಂ.ಚಂದ್ರಶೇಖರಶಾಸ್ತ್ರಿ ಮಾಗಳ, ಚೆನ್ನಮಲ್ಲಿಕಾರ್ಜುನ ಮಾಸ್ತರ ಶಿರಾಳಕೊಪ್ಪ, ಹರ್ಡೇಕರ ಮಂಜಪ್ಪ ಬನವಾಸಿ, ಫ.ಗು.ಹಳಕಟ್ಟಿ ಬೆಳಗಾವಿ, ಪಂ.ಶಂಕರಶಾಸ್ತ್ರಿಗಳು ಉಮಚಗಿ, ಗೌ.ಮ.ಉಮಾಪತಿಶಾಸ್ತ್ರಿ ಗೌರಾಪುರ ಮುಂತಾದ ನೂರಾರು ವಿದ್ವಾಂಸರ ತಂಡವೇ ಸಂಶೋಧನ ಕ್ಷೇತ್ರದಲ್ಲಿ ಸಾಮಾಜಿಕವಾಗಿ ದುಡಿಯುವಂತೆ ಶಿವಯೋಗಮಂದಿರ ಪ್ರೇರೇಪಿಸಿತು.

ಸ್ವತಃ ಹಾನಗಲ್ಲ ಕುಮಾರಸ್ವಾಮಿಗಳೇ ವಿದ್ವಾಂಸರಾಗಿದ್ದು ಭಕ್ತರ ಮನೆಗೆ ಹೋದಲ್ಲೆಲ್ಲ ಭಕ್ತರು ಕೊಟ್ಟ ಹಣರೂಪದ ಕಾಣಿಕೆಯನ್ನು ಹಿಂತಿರುಗಿಸಿ ಅವರಲ್ಲಿದ್ದ ತಾಡೋಲೆ ಪ್ರತಿಗಳನ್ನು ದೇವರ ಜಗಲಿಯಿಂದ ಹೊರತೆಗೆಸಿ ತಮ್ಮ ಜೋಳಿಗೆಗ ದಾನವಾಗಿ ಪಡೆದು ಅವುಗಳನ್ನು ಶಿವಯೋಗಮಂದಿರದಲ್ಲಿ ಸಂರಕ್ಷಿಸುವ ಕಾರ್ಯವನ್ನು ಮಾಡಿದ್ದಾರೆ. ಶ್ರೀ ಬುದ್ಧಯ್ಯ ಪುರಾಣಿಕರು ಜಮಖಂಡಿ ತಾಲೂಕಿನ ತೇರದಾಳ ಗ್ರಾಮದಲ್ಲಿ ಅಲ್ಲಮಪ್ರಭು ಎಂಬ ಕೃತಿಯನ್ನು ೧೯೩೬ರಲ್ಲಿ, ಯಳಂಧೂರು ಹರೀಶ್ವರನ ಪ್ರಭುದೇವರ ಪುರಾಣವನ್ನು ೧೯೪೦ರಲ್ಲಿ ಶೋಧಿಸಿ ಪ್ರಕಟಿಸಿದರು. ಪ್ರಾಯಶಃ ೧೯೩೬ರಲ್ಲಿ ಪ್ರಕಟಗೊಂಡ "ಅಲ್ಲಮಪ್ರಭು" ಎಂಬುದು ೧೨ನೇ ಶತಮಾನದ ಅಲ್ಲಮಪ್ರಭುವಾಗಿರದೆ ಬಸವೋತ್ತರ ಕಾಲದ ತೇರದಾಳದ ಅಲ್ಲಮರಾಯನಾಗಿರಬೇಕು. ಈ ಕೃತಿ ಲಭ್ಯವಾದಲ್ಲಿ ಈ ಅಭಿಪ್ರಾಯಕ್ಕೆ ಮಾನ್ಯತೆಯುಂಟು. ಪಂಡಿತ ಮಹಾಲಿಂಗಯ್ಯ ಹಿರೇಮಠರು ನಿಜಗುಣಶಿವಯೋಗಿಗಳ ಪಾರಮಾರ್ಥ ಪ್ರಕಾಶಿಕೆ, ವಿವೇಕ ಚಿಂತಾಮಣಿ, ಕೈವಲ್ಯ ಪದ್ಧತಿಗಳನ್ನು ಓಲೆಪ್ರತಿಗಳ ಆಧಾರದಿಂದ ಶುದ್ಧವಾಗಿ ಬರೆದರು. ಚನ್ನಮಲ್ಲಿಕಾರ್ಜುನ ಶಿರಾಳಕೊಪ್ಪ ಅವರು ಸದ್ಧರ್ಮದೀಪಿಕೆ ಹೆಸರಿನ ಮಾಸಪತ್ರಿಕೆಯನ್ನು ಆರಂಭಿಸಿ ಅದರ ಮೂಲಕ ಅನೇಕ ಸಾಹಿತಿಗಳ, ಲೇಖಕರ, ವಿದ್ವಾಂಸರ ಪರಿಚಯವನ್ನು ನಾಡಿಗೆ ಪರಿಚಯಿಸಿದರು. ಸಾಹಿತ್ಯಿಕವಾಗಿ ಜಂಗಮಾಧಿಕ್ಯ, ನೀಲಮ್ಮನ ತ್ರಿವಿಧಿ, ಬಸವೇಶ್ವರ ವಚನಗೀತೆ, ಇತ್ಯಾದಿ ೫೦ಕ್ಕೂ ಹೆಚ್ಚು ಲಘು ಕೃತಿಗಳನ್ನು ಸಮಾಜಕ್ಕೆ ಸಂವಹನಗೊಳಿಸಿದರು. ಶಿವಯೋಗಮಂದಿರದ ವಟುವಾಗಿದ್ದ ಗೌ.ಮ.ಉಮಾಪತಿಶಾಸ್ತ್ರಿಗಳಿಗೆ ಹಸ್ತಪ್ರತಿಗಳನ್ನು ಓದಲು ಕಲಿಸಿದವರು ಇದೇ ಚನ್ನಮಲ್ಲಿಕಾರ್ಜುನ ಮಾಸ್ತರೆಂಬುದಾಗಿ ಸ್ವತಃ ಉಮಾಪತಿಶಾಸ್ತ್ರಿಗಳೇ ಒಂದುಕಡೆ ಬರೆದುಕೊಂಡಿದ್ದಾರೆ. ಪಂ.ಕಲಿಗಣನಾಥ ಶಾಸ್ತ್ರಿಗಳು ಪಗಡದಿನ್ನಿ ಅವರು "ಶ್ರೀ ಬಸವಾದಿ ಪ್ರಮಥರ ನಿಜತತ್ವ ದರ್ಪಣ" ಹೆಸರಿನ ಗ್ರಂಥ ಬರೆದು ಬಸವರಾಜ ಶಾಸ್ತ್ರಿಗಳ ಹೆಸರಿನಲ್ಲಿ ಪ್ರಕಟಿಸಿದ ಉಲ್ಲೇಖವನ್ನು ಕಾಣುತ್ತೇವೆ. ೧೯೧೧ ರಲ್ಲಿ 'ವೀರಶೈವಧರ್ಮ ತರಂಗಿಣಿ' ಎಂಬ ಮಾಸ ಪತ್ರಿಕೆಯನ್ನು ಆರಂಭಿಸಿದ ಪಂ.ಎಚ್.ಎಸ್.ಶಿವಲಿಂಗಸ್ವಾಮಿಗಳು ೧೦-೧೨ ವರ್ಷ ಪತ್ರಿಕೆಯಮೂಲಕ ಸುಪ್ರಸಿದ್ಧ ಲೇಖಕರನ್ನು ಅವರ ಸಾಧನೆಯನ್ನು ಸಮಾಜಕ್ಕೆ ಮುಟ್ಟಿಸಿದರು. ೧೯೩೩ ರಲ್ಲಿ ಚಂದ್ರೇಖರಶಾಸ್ತ್ರಿ ಛತ್ರದಹಳ್ಳಿ ಅವರು ಚನ್ನಬಸವಣ್ಣನವರ ಹಿರಿಯ ಮಂತ್ರಗೋಪ್ಯವನ್ನು ಶೋಧಿಸಿ ಪ್ರಕಟಿಸಿದರು. ಲಿಂಗಧಾರಣ ಚಂದ್ರಿಕೆ ಕೃತಿಗೆ ತಿಳಿಯಾದ ಅನುವಾದ ರಚಿಸಿದ ಅನುವಾದಕರು.

ವಚನಪಿತಾಮಹ ಫ.ಗು. ಹಳಕಟ್ಟಿ ಅವರು ಹಾನಗಲ್ಲ ಶ್ರೀಗಳ ಸಾಧನೆಯನ್ನು ಹೀಗೆ ಸ್ಮರಿಸಿದ್ದಾರೆ. "ಹಾನಗಲ್ಲ ಸ್ವಾಮಿಗಳು ಮಂದಿರದ ಒಂದು ದೊಡ್ಡ ನಿಧಿಯನ್ನು ಕೂಡಿಸಿದ್ದು, ಅಲ್ಲಿ ಕಟ್ಟಡ ಮಾಡಿದ್ದು ಮಹತ್ತರ ಕಾರ್ಯವೆಂಬುದು ನಿಃಸಂದೇಹವಾದದ್ದು. ಆದರೆ, ಹಣಕ್ಕಿಂತಲೂ ಮಹತ್ವವೆನಿಸಿಕೊಳ್ಳುವ ಗ್ರಂಥಗಳ ಸಂಗ್ರಹ ಮಾಡುವುದು ಅಷ್ಟೇ ಶ್ರೇಯಸ್ಕರವಾದದ್ದು ಇರುತ್ತದೆ. ಇಂಥ ಗ್ರಂಥಗಳು ಸಮಾಜದಲ್ಲಿ ಇರದಿದ್ದರೆ ಸಂಸ್ಕೃತಿಯು ಬಾಳುವ ಸಂಭವವೇ ಇಲ್ಲ" ಎಂದಿದ್ದಾರೆ. ಅಂದರೆ ಫ.ಗು.ಹಳಕಟ್ಟಿ, ಹರ್ಡೇಕರ ಮಂಜಪ್ಪನವರಂಥ ಪ್ರಾತಃಸ್ಮರಣೀಯ ಸಂಶೋಧಕರು ಶಿವಯೋಗಮಂದಿರದ ಪರಿಸರದಲ್ಲಿ ಇದ್ದರೆಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಆ ಕಾಲಕ್ಕೆ ಸಂಗ್ರಹಗೊಂಡ ಹಸ್ತಪ್ರತಿಗಳಲ್ಲಿ ಬಹುತೇಕ ಅಪ್ರಕಟಿತ ಕೃತಿಗಳೇ ಹೆಚ್ಚು. ದಾನರೂಪದಲ್ಲಿ ಕೂಡಿದ ಹಸ್ತಪ್ರತಿಗಳೇ ಅಧಿಕ. ಉದಾಹರಣೆಗೆ ಮೈಸೂರು ರಾಜ್ಯದ ಕಂಚುಗಲ್ಲು, ಬಿದಿರೆ ದೊಡ್ಡಮಠದ ಘನಲಿಂಗ ಶಿವಾಚಾರ್ಯರಿಂದ ಬಂದ ಹಸ್ತಪ್ರತಿಗಳು, ಹಾವೇರಿಯ ಹುಕ್ಕೇರಿ ಮಠದ ಶಿವಬಸವಸ್ವಾಮಿಗಳು ತಮ್ಮ ಮಠದ ಪ್ರತಿಗಳನ್ನು ದಾನವಾಗಿ ನೀಡಿದ್ದಾರೆ. ಇನ್ನು ನಿಜಾಂ ಪ್ರಾಂತದ ಕಲಬುರ್ಗಿ ಜಿಲ್ಲೆಯ ಮಾದನ ಹಿಪ್ಪರಗಿ ಶಿವಲಿಂಗೇಶ್ವರ ವಿರಕ್ತಮಠ, ಬಾಗಲಕೋಟೆಯ ಟೀಕಿನಮಠ, ಆನಂದಪುರಂನ ಮುರುಘಾಮಠ, ಸಖರಾಯ ಪಟ್ಟಣದ ಹಾಲಸ್ವಾಮಿ ಶಿಲಾಮಠದಿಂದ ಹಸ್ತಪ್ರತಿಗಳು ಸಂಗ್ರಹಗೊಂಡಿರುವುದು ದಾಖಲೆಗಳಿಂದ ತಿಳಿದುಬರುತ್ತದೆ.

ಹೀಗೆ ಕನ್ನಡ ನಾಡಿನ ಮೂಲೆ ಮೂಲೆಗಳಿಂದ ವಿದ್ವಾಂಸರನ್ನು, ಸಂಶೋಧಕರನ್ನು ಸೂಜಿಗಲ್ಲಿನಂತೆ ಆಕರ್ಷಿಸಿದ ಶಿವಯೋಗಮಂದಿರದ ಸಾಧನೆ ಕಡಿಮೆಯೇನಲ್ಲ. ಆದರೆ ೨೩-೧೦-೧೯೪೮ರ ಕರ್ಮವೀರ ಪತ್ರಿಕೆಯ ಪುಟ ೧೭

ಹಾಗೂ ೧೮ರಲ್ಲಿ ಉಲ್ಲೇಖವಾದ ಮಾತನ್ನು ಇತಿಹಾಸ ಪ್ರಿಯರಿಗೆ ಕೇಳಿಸುವುದು ಈ ಹೊತ್ತು ಅಗತ್ಯ ಹಾಗೂ ಅನಿವಾರ್ಯವಾಗಿದೆ. "ಜ್ಞಾನಭಂಡಾರದ ಅತ್ಯಮೂಲ್ಯ ಹೆಬ್ಬಾಗಿಲಾಗಿರುವ ಶಿವಯೋಗಮಂದಿರದ ಗ್ರಂಥಭಂಡಾರವನ್ನು ಸೂರೆಗಿಸಿದವರೇ ಬಹಳಷ್ಟುಮಂದಿ, ಓದಲು ಒಯ್ದವರು ಅನೇಕ ಗ್ರಂಥಗಳನ್ನು ಮರಳಿ ಕೊಡದೇ ಇರುವ ಬಗ್ಗೆ ಇಲ್ಲಿಯ ಮೂಕ ಹಾಳೆಗಳು ಸಾಕ್ಷಿಹೇಳುತ್ತವೆ. ಗ್ರಂಥಾಲಯದ ಕಾರ್ಯದರ್ಶಿಗಳು, ಸಾಧಕರು ಕೆಲವು ಪುಸ್ತಕಗಳನ್ನು ತಮ್ಮೊಡನೆ ಒಯ್ದ ಬಗ್ಗೆ ಇಲ್ಲಿಯ ಕಟ್ಟಿಗೆಯ ಕಪಾಟುಗಳು ಕಥೆ ಹೇಳುತ್ತವೆ" ಎಂಬುದನ್ನು ಗಮನಿಸಿದರೆ ತಮ್ಮ ಅನೇಕ ಕಷ್ಟಗಳನ್ನು, ತಾಪತ್ರಯಗಳನ್ನು ಬದಿಗಿರಿಸಿ ಶಿಕ್ಷಣ-ಸಾಹಿತ್ಯ-ಸಮಾಜ-ಧರ್ಮ-ಸಂಸ್ಕೃತಿ ಎಂಬ ಪಂಚಾಂಗಗಳನ್ನು ಸಶಕ್ತವಾಗಿ ಬೆಳೆಸಲು ಯಾವುದೇ ಸೌಲಭ್ಯವಿಲ್ಲದ ಆ ದಿನಮಾನಗಳಲ್ಲಿ ಮಾಡಿದ ಕೆಲಸವನ್ನು ಅರ್ಥ ಮಾಡಿಕೊಂಡು ಶಿವಯೋಗಮಂದಿರದ ಮೂಲ ಕ್ರಿಯಾಯೋಜನೆಗಳಿಗೆ ಪುನರುಜ್ಜೀವನ ನೀಡುವ ಜವಾಬ್ದಾರಿ ಅದರ ನೇತೃತ್ವವನ್ನು ವಹಿಸಿಕೊಂಡಿರುವ ಪೂಜ್ಯರ ಮೇಲಿದೆ. ಮುಖ್ಯವಾಗಿ ಇನ್ನೊಂದು ಸಂಗತಿ ಇತ್ತೀಚಿನ ವಿದ್ವಾಂಸರು ಒಂದೂ ಹಸ್ತಪ್ರತಿಯನ್ನು ಸಂಗ್ರಹಿಸದೆ, ಸಂಗ್ರಹಗೊಂಡ ಹಸ್ತಪ್ರತಿಗಳನ್ನು ದುರಸ್ತಿಗೊಳಿಸುವ ಯೋಜನೆ ಹಾಕದೆ, ಶಿವಯೋಗಮಂದಿರದ ಉದ್ದೇಶವನ್ನು ತಿಳಿದುಕೊಳ್ಳದೆ, ಅಭ್ಯಾಸಮಾಡದೆ ಪೂಜ್ಯರ-ಅಧಿಕಾರಿಗಳ ಮುಖಸ್ತುತಿ ಪರವಾದ ಭಾಷಣ ಮಾಡುವುದನ್ನು ಬಿಟ್ಟು ಅವರ ಮಾರ್ಗದರ್ಶನದಲ್ಲಿ ಬೆವರು ಸುರಿಸಿ ಆ ಸಂಸ್ಥೆಯ ಏಳಿಗೆಗಾಗಿ ಅಧ್ಯಯನಶೀಲರಾಗುವುದು ಅಗತ್ಯವಿದೆ. ಇದರಿಂದ ನಮ್ಮ ಹಿರಿಯರ ಆಶೋತ್ತರಗಳನ್ನು ಪುನರುಜ್ಜೀವನಗೊಳಿಸುವ ಜವಾಬ್ದಾರಿ ಮತ್ತು ಮುಂದಿನ ತಲೆಮಾರಿಗೆ ತಲುಪಿಸುವ ಕೆಲಸ ನಮ್ಮೆಲ್ಲರ ಮೇಲಿದೆ.



# ಬಿಲ್ಲವರ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಯಲ್ಲಿ ನಾರಾಯಣ ಗುರುಗಳ ಚಳುವಳಿಯ ಪ್ರಭಾವ

ಬಿ. ಮೀರಾದೇವಿ*

೧೯ನೆಯ ಶತಮಾನದ ಅಂತ್ಯ ಹಾಗೂ ೨೦ನೇ ಶತಮಾನದ ಆದಿಭಾಗದಲ್ಲಿ ಬ್ರಹ್ಮಶ್ರೀ ನಾರಾಯಣ ಗುರುಗಳು ಕೇರಳದಲ್ಲಿ ಮಾಡಿದ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ರಾಂತಿಗಳ ಪ್ರಸ್ತುತತೆಯು ದಕ್ಷಿಣ ಭಾರತದ ಧಾರ್ಮಿಕ ಮತ್ತು ಸಾಮಾಜಿಕ ಚಳುವಳಿಗಳ ಇತಿಹಾಸದಲ್ಲಿ ಬಹಳ ಪ್ರಮುಖ ವಿಷಯವಾಗಿದೆ. ನಾರಾಯಣ ಗುರುಗಳ ಸಮಾಜೋತ್ಥಾನ ಕ್ರಾಂತಿಗಳಲ್ಲಿ ದೇವಸ್ಥಾನಗಳ ಚಳುವಳಿಯು ಪ್ರಮುಖವಾಗಿದೆ. ಸಂಘರ್ಷ ರಹಿತವಾಗಿ ಸವರ್ಣರ ದೇವಾಲಯಗಳನ್ನು ಅವರ್ಣರು ಬಹಿಷ್ಕರಿಸುವಂತೆ ಮಾಡಿದ್ದು ಒಂದು ಕ್ರಾಂತಿಕಾರಿ ಘಟನೆ ಎಂದು ಪರಿಗಣಿಸಬಹುದು.[೧] ಸವರ್ಣರ ದೇವಾಲಯಗಳು ಹಿಂದೂ ಧರ್ಮದ ಮೂಲ ತತ್ವಗಳಿಂದ ದೂರ ಸರಿದಿದ್ದ ಅಂದಿನ ದಿನಗಳಲ್ಲಿ ನಾರಾಯಣ ಗುರುಗಳು ಪ್ರತಿಷ್ಠಾಪಿಸಿದ ದೇವಾಲಯಗಳು. ಹಿಂದೂ ಧಾರ್ಮಿಕ ತತ್ವಗಳ ಮುಹೂರ್ತ ರೂಪಗಳೇ ಆಗಿ ಮೈದಳೆದಿದ್ದವು.[೨] ನಿರ್ಮಾಣಗೊಂಡ ದೇವಸ್ಥಾನಗಳು ಭಾರತ ಕಂಡ ಅದ್ಭುತವಾದ ರಚನಾತ್ಮಕ ಮಹಾಕ್ರಾಂತಿಯಾಗಿತ್ತು. ರೂಢಿ, ಸಂಪ್ರದಾಯ, ಮತಾಚಾರ, ಕಟ್ಟುಕಟ್ಟಲೆ, ಸಂಸ್ಕೃತಿ, ಸಭ್ಯತೆಗಳ ನೆಲೆ ಹಿನ್ನಲೆಗಳಿಗೆ ದೇವಸ್ಥಾನಗಳು ಆಕರ, ಆಶ್ರಯ, ಜೀವಾಳ ಕೇಂದ್ರಗಳು, ಮಾನಸಿಕ ತುಡಿತದ ಸೂಕ್ಷ್ಮ, ಸೀಮಾತೀತ ಶಕ್ತಿಯನ್ನು ಮಾನದನ ಪುರೋಗತಿಗೆ ಉಪಯೋಗಿಸಿಕೊಳ್ಳಲು ದೇವಳಗಳು ಬಲಾಢ್ಯ ಮಾಧ್ಯಮಗಳು ಜನ ಸಾಮಾನ್ಯರ ಮಾನಸಿಕ, ಧಾರ್ಮಿಕ, ಆರ್ಥಿಕ, ಔದ್ಯೋಗಿಕ ಶೈಕ್ಷಣಿಕ ಮತ್ತು ಸಾಂಸ್ಕೃತಿಕವಾಗಿ ಶಕ್ತಿ ಸಂಪನ್ನರಾದರೆ ಅವರ ಜೀವನ ಮೌಲ್ಲೋತ್ಮಾನವಾಗುವುದು ಎನ್ನುವ ಸತ್ಯವನ್ನು ಮನಗೊಂಡ ನಾರಾಯಣ ಗುರುಗಳು ಅರುವಿಪ್ಪುರದಲ್ಲಿ ಶಿವಾಲಯವನ್ನು ಪ್ರತಿಷ್ಠಾಪಿಸುವ ಮೂಲಕ ಅಮೋಘವಾದ ಮಾನಸಿಕ ಶಕ್ತಿಯನ್ನು ಸಂಘಟಿಸಿ ಅದನ್ನು ಜನಸಾಮಾನ್ಯರೆಡೆಗೆ ಪ್ರವಹಿಸಿ ನವ ಚೈತನ್ಯವನ್ನು ಪ್ರಚೋದಿಸುವಲ್ಲಿ ಸಫಲರಾದರು. ೧೮೮೮ರ ಬ್ರಹ್ಮ ಮುಹೂರ್ತದಲ್ಲಿ ಅರುವಿಪ್ಪುರದಲ್ಲಿ ಶಿವಲಿಂಗ ಪ್ರತಿಷ್ಠೆಯನ್ನು ಆರಂಭಿಸುವುದರ ಮೂಲಕ ಕೇರಳದಲ್ಲಿ ಜನಸಾಮಾನ್ಯರಿಗೆ ಮುಕ್ತ ಪ್ರವೇಶಕ್ಕೆ ಆಜ್ಞೆ ಮಾಡಿದರು. ಸಮಾಜೋತ್ಸವಕ್ಕೆ ಸುವರ್ಣರ ದೇವಸ್ಥಾನಕ್ಕಿಂತ ಭಿನ್ನವಾದ ಪರಿಸರ ಮತ್ತು ಸರಳ ಪೂಜಾವಿಧಿ ವಿಧಾನಗಳನ್ನು ಒಳಗೊಂಡಿತ್ತು.[೩] ಅಂತೆಯೇ ಕರ್ನಾಟಕ ಕರಾವಳಿಯ ತುಳುನಾಡಿನಲ್ಲಿ ಅವರ್ಣಿಯರಿಗೆ ದೇವಸ್ಥಾನಗಳಲ್ಲಿ ಪ್ರವೇಶ ನಿರಾಕರಿಸಲ್ಪಟ್ಟಿತ್ತು. ಅವರಲ್ಲಿ ತುಳುನಾಡಿನ ಬಿಲ್ಲವರು ಸಹ ಸೇರಿದ್ದ. ತಮ್ಮ ಸಮುದಾಯದ ಹೀನ ಗತಿಯನ್ನು ಸಹಿಸಲಾರದ ಬಿಲ್ಲವ ಮುಖಂಡರು ಶ್ರೀ ನಾರಾಯಣ ಗುರುಗಳ ದೇವಸ್ಥಾನ ಚಳುವಳಿಯಿಂದ ಪ್ರಭಾವಿತರಾಗಿ ಮಂಗಳೂರಿನಲ್ಲಿರುವ ಕುದ್ರೋಳಿಯ ಶ್ರೀ ಗೋಕರ್ಣನಾಥೇಶ್ವರ ದೇವಸ್ಥಾನ ಸ್ಥಾಪನೆಯನ್ನು ಶ್ರೀ ನಾರಾಯಣ ಗುರುಗಳಿಂದ ನೆರವೇರಿಸುವುದರಲ್ಲಿ ಯಶಸ್ವಿಯಾದರು. ಈ ಹಿನ್ನಲೆಯಲ್ಲಿ ಶ್ರೀ ನಾರಾಯಣ ಗುರುಗಳ ದೇವಸ್ಥಾನ ಚಳುವಳಿ ತುಳುನಾಡಿನ ಬಿಲ್ಲವರು ಮತ್ತು ಕರಾವಳಿ ಕರ್ನಾಟಕದ ಮೇಲೆ ಬೀರಿದ ಪ್ರಭಾವವನ್ನು ಅವಲೋಕಿಸುವುದು ಈ ಲೇಖನದ ಉದ್ದೇಶವಾಗಿದೆ.

**ತುಳುನಾಡಿನ ಇತಿಹಾಸ ಮತ್ತು ಸಂಸ್ಕೃತಿಯಲ್ಲಿ ಬಿಲ್ಲವರು:** ಒಂದು ನಾಡಿನ ಸಂಸ್ಕೃತಿ ಎಂದರೆ ಆ ನೆಲದಲ್ಲಿ ಬೀಡು ಬಿಟ್ಟ ಜನರ ಬದುಕೇ ಆಗಿದೆ. ಕಾಲಕ್ರಮೇಣ ಆ ಬದುಕಿನ ಬಹುಮುಖವಾದ ನಿರಂತತೆಯೇ ಆ ನಾಡಿನ, ಆ ಜನಾಂಗದ ಸಂಸ್ಕೃತಿಯಾಗಿ ರೂಪುಗೊಳ್ಳುವುದು. ಜನಾಂಗದ, ನಾಡಿನ ಜೀವಾಳವೆನಿಸುವ ಸಂಸ್ಕೃತಿ, ಸಭ್ಯತೆಗಳು ಬದುಕಿನ ನಿರಂತತೆಯಲ್ಲಿ ಬದಲಾವಣೆಗಳು ಆಗುವುದು ಸ್ವಾಭಾವಿಕ ಮತ್ತು ಹಲವೊಮ್ಮೆ ಅನಿವಾರ್ಯವೂ ಹೌದು. ಇಂತಹ ಬದಲಾವಣೆ ಅಥವಾ ಸಾಂಸ್ಕೃತಿಕ ಪಲ್ಲಟ ಪ್ರಪಂಚದ ಎಲ್ಲ ಜನಾಂಗಗಳಲ್ಲಿ ನಡೆದಿರುವುದು ಐತಿಹಾಸಿಕ ಸತ್ಯ. ಬಿಲ್ಲವರು ತುಳುನಾಡಿನ ಮೂಲನಿವಾಸಿಗಳು ಹಾಗೂ ಬಹುಸಂಖ್ಯಾತ ಜನವರ್ಗದವರು. ಸಾಮಾನ್ಯ ಅಭಿಪ್ರಾಯದಂತೆ 'ಬಿಲ್ಲವ' ಎಂಬ ಪದವು ಬಿಲ್ಲುಗಾರ ಎಂಬುದರಿಂದ ಬಂದಿದೆ.[೪] ಬಿಲ್ಲವರು ತುಳುನಾಡನ್ನು ಆಳಿದ ಅಳುಪ ಅರಸರ ಹಾಗೂ ಜೈನ ಅರಸರ ಆಳ್ವಿಕೆಯ ಕಾಲದಲ್ಲಿ ಸೈನ್ಯದಲ್ಲಿ ಬಿಲ್ಲುಗಾರರಾಗಿ.[೫] ಯೋಧರಾಗಿ, ಮಂತ್ರಿಗಳಾಗಿ, ಸೇನಾನಾಯಕರಾಗಿ ಪ್ರಮುಖ ಸ್ಥಾನವನ್ನು

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸೈಂಟ್ ಆಗ್ನೆಸ್ ಕಾಲೇಜು (ಸ್ವಾಯತ್ತ) ಮಂಗಳೂರು, ಮೊ. ೯೪೪೯೮೩೩೧೦೩

ಪಡೆದಿದ್ದರು.[೬] ಕೇರಳದಲ್ಲಿ ಇವರನ್ನು 'ತೀವರು' (ದ್ವೀಪ ಪ್ರದೇಶದವರು) ಎಂಬುದಾಗಿ ಮುಂದೆ 'ತಿಯರು' ಅಥವಾ 'ಈಳವರು' ಎಂಬುದಾಗಿ ಕರೆಯಲಾಗುತ್ತಿತ್ತು. ಉತ್ತರ ಕನ್ನಡ ಜಿಲ್ಲೆಯಲ್ಲಿ ಇವರನ್ನು 'ದೀವರು' 'ಹಳೆಪೈಕದೀವರು' ಎಂದು ಕರೆಯುವರು (ದೀವರು=ದೇವರ ಮಕ್ಕಳು).[೭] ಬಿಲ್ಲವರ ಮೂಲವೃತ್ತಿ ಕೃಷಿ. ಮೂರ್ತೆದಾರಿಕೆಯು ಉಪವೃತ್ತಿಯಾಗಿರುವುದು. ಬಿಲ್ಲವರು ಬೈದ್ಯ ಎಂಬ ಉಪನಾಮವನ್ನು, ಕೆಲವರು ಪೂಜಾರಿ ಎಂಬ ಉಪನಾಮವನ್ನು ಸಹ ತಮ್ಮ ಹೆಸರಿನ ಜೊತೆಯಲ್ಲಿ ಬಳಸುತ್ತಾರೆ. ಇವರು ದೈವಸ್ಥಾನ ಹಾಗೂ ಭೂತಸ್ಥಾನಗಳಲ್ಲಿ, ಗರಡಿಗಳಲ್ಲಿ ಪೂಜಾರಿಗಳಾಗಿ (ಅರ್ಚಕರಾಗಿ) ಅನುವಂಶೀಯವಾಗಿ ಸೇವೆ ಸಲ್ಲಿಸುತ್ತಾ ಬಂದವರು.[೮] ಈ ಬಿಲ್ಲವರು ಬಹಳ ಪುರಾತನ ಕಾಲದಿಂದಲೂ ನಾಟಿ ವೈದ್ಯರಾಗಿ (ಗಿಡಮೂಲಿಕೆಯ ಔಷಧಿ ಚಿಕಿತ್ಸೆ) ಹೆಸರು ಪಡೆದವರು. ಇದರಿಂದಾಗಿ ಇವರಿಗೆ 'ಬೈದ್ಯ' ಎಂಬ ಉಪನಾಮ ಬಂದಿರುವುದು. ತುಳುನಾಡಿನ ಇತರ ಮೂಲನಿವಾಸಿಗಳಂತೆ ಬಿಲ್ಲವರು ಮಾತೃ ಪ್ರಧಾನ ಕುಟುಂಬ ಪದ್ಧತಿಯನ್ನು ಅನುಸರಿಸಿಕೊಂಡು ಬಂದವರು. ಭೂಮಿಯ ಒಡೆತನ ಮಹಿಳೆಯರದ್ದಾಗಿತ್ತು. ಅಳಿಯಕಟ್ಟಿನ ಈ ಪದ್ಧತಿಯಲ್ಲಿ ತಾಯಿಗೆ ಹಾಗೂ ಸೋದರ ಮಾವನಿಗೆ ಪ್ರಮುಖ ಪಾತ್ರವಿದೆ.[೯]

ತುಳುನಾಡಿನ ಸಮೃದ್ಧ ಸಾಂಸ್ಕೃತಿಕ ಮತ್ತು ರಾಜಕೀಯ ಆಧ್ಯ ರಂಗಗಳನ್ನು ಉಳಿಸಿ ಬೆಳೆಸಿದಂತಹ ಜನಾಂಗಗಳಲ್ಲಿ ಬಿಲ್ಲವರು ಮತ್ತು ಮೊಗವೀರರು ಪ್ರಥಮರು ಮತ್ತು ಪ್ರಮುಖರು ಎಂದು ಇತಿಹಾಸಕಾರರಾದ ಡಾ. ಗುರುರಾಜ ಭಟ್ಟರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಪುರಾತನ ತುಳುನಾಡಿನಲ್ಲಿ ಈ ಎರಡೂ ಜನಾಂಗಗಳೂ ಒಂದೇ ಗುಂಪಿಗೆ ಸೇರಿದ್ದವರಾಗಿರಬಹುದು ಎನ್ನುವುದು ಅವರ ಅಭಿಪ್ರಾಯವಾಗಿದೆ. ಈ ಜನಾಂಗ ಬಹುಸಂಖ್ಯಾತರಾಗಿದ್ದರೂ ಕೂಡ ತುಳುನಾಡ ಶಾಸನಗಳು ಇವರ ವಿಷಯದಲ್ಲಿ ಅತ್ಯಲ್ಪವಾಗಿ ಕೇವಲ ಕೆಲವೇ ಶಾಸನಗಳನ್ನು ಬಿಟ್ಟರೆ ಈ ಬಹುಸಂಖ್ಯಾತ ಜನಾಂಗದ ಬಗೆಗೆ ಏಕೆ ಮೌನ ವಹಿಸಿವೆ ಎಂದು ಡಾ. ಗುರುರಾಜ ಭಟ್ಟರು ಆಶ್ಚರ್ಯ ವ್ಯಕ್ತಪಡಿಸಿದ್ದಾರೆ. ತುಳುನಾಡಿನ ಪಾಡ್ದನಗಳಲ್ಲಿ ಬಿಲ್ಲವರನ್ನು ಹೆಚ್ಚಾಗಿ ಬೈದ್ಯರೆನ್ನುವ ಅನ್ವರ್ಥನಾಮದಿಂದ ಕರೆಯಲಾಗಿದೆ. ಬಿಲ್ಲವ ಎನ್ನುವ ಪದವು ಜಾತಿಸೂಚಕ ವೃತ್ತಿ ನಾಮಧ್ಯೇಯ. ಈ ಜನಾಂಗಕ್ಕೆ ಯಾವಾಗ ಬಂತು ಎನ್ನುವುದು ನಿಶ್ಚಿತವಿಲ್ಲ. ಒಂಬತ್ತನೆಯ ಶತಮಾನದ ಪೂರ್ವಾರ್ಧದ್ದೆಂದು ಅಂದಾಜಿಸಲಾದ ಶ್ವೇತವಾಹನನ ಉದಿಯಾವರದ ಶಾಸನದಲ್ಲಿ ಮೊತ್ತ ಮೊದಲು ಪಾಂಡ್ಯವಿಲ್ಲರಸರಾ ಮಗ ದೇವು ಎನ್ನುವ ಬಿಲ್ಲವ ಜಾತಿ ಸೂಚಕ ಶಬ್ದ ಪ್ರಯೋಗವಾಗಿದೆ.[೧೦] ಕ್ರಿ.ಶ. ೧೪೪೪ರ ಹೇರೂರು ಶಾಸನವೊಂದರಲ್ಲಿ ಬಿಲ್ಲ ಬಿರುವ ಎಂದು ಉಲ್ಲೇಖಿಸಲಾಗಿದೆ. ಹಾಗೆಯೇ ಉಡುಪಿ ತಾಲೂಕಿನ ಚೊಕ್ಕಾಡಿಯ ಶಾಸನವೊಂದರಲ್ಲಿ ಬಿಲ್ಲವರು ಮತ್ತು ಬಿಲ್ಲಗುಡ್ಡೆ ಎಂದು ಉಲ್ಲೇಖಿಸಲಾಗಿದೆ. ಬಿಲ್ಲು ಬಾಣಗಳನ್ನು ಧರಿಸಿ ಯುದ್ಧ ಮಾಡುವುದರಲ್ಲಿ ಪ್ರವೀಣರಿದ್ದ ಸೈನಿಕ ವೃತ್ತಿಯವರನ್ನು ಬಿಲ್ಲವರೆಂದು ಕರೆಯುತ್ತಿದ್ದರೆಂದು ಬಲೀಂದ್ರ ಪಾಡ್ದನದಿಂದ ತಿಳಿದು ಬರುವುದು. ಬಿಲ್ಲವರಲ್ಲಿ ನಾಯ್ಗ ಎನ್ನುವುದು ಒಂದು ಉಪನಾಮವಾಗಿದೆ. ತುಳುನಾಡಿನ ಅನೇಕ ಪಾಡ್ದನಗಳು ಬಿಲ್ಲವರನ್ನು ನಾಯ್ಗರೆಂದು ಉಲ್ಲೇಖಿಸಿವೆ.[೧೧] ಇದನ್ನು ಜಾನಪದ ವಿದ್ವಾಂಸರು ಗುರುತಿಸಿ, ಪಾಡ್ದನಗಳಲ್ಲಿ ಉಲ್ಲೇಖಗೊಂಡ ನಾಯ್ಗರು ಬಿಲ್ಲವರೆಂದು ನಿರ್ವಿವಾದವಾಗಿ ಒಪ್ಪಿದ್ದಾರೆ. ಪೀಟರ್ ಜೆ. ಕ್ಲಾಸ್ ಅವರೂ ಕೂಡ ನಾಯ್ಗರನ್ನು ಬಿಲ್ಲವರೆಂದು ದಾಖಲಿಸಿದ್ದಾರೆ.

ಆಳುಪರ ಶಿಲಾಶಾಸನಗಳಲ್ಲಿ ನಾಯ್ಗರ ಪ್ರಸ್ತಾಪವಿದೆ. ಆಳುಪರ ಆಡಳಿತವು ಕ್ರಿ.ಶ.೧೩೯ರ ಸುಮಾರಿಗೆ ಕೊನೆಯ ರಾಜನಾದ ಎರಡನೆಯ ವೀರಪಾಂಡ್ಯನ ಮರಣದೊಂದಿಗೆ ಕೊನೆಗೊಂಡಿತ್ತು. ಅನಂತರ ಆಳುಪರು ತುಳುನಾಡಿನ ರಾಜಕೀಯ ರಂಗದಿಂದ ಮರೆಯಾದರು. ಆ ಸಮಯದಲ್ಲಿ ವಿಜಯನಗರದ ಆಶ್ರಿತವಾಗಿದ್ದ ತುಳುನಾಡಿನ ಅಧಿಕಾರವು ಜೈನ ತುಂಡರಸರ ಆಡಳಿತಕ್ಕೊಳಪಟ್ಟಿತ್ತು.[೧೨] ಅಲ್ಲಿಂದ ಮುಂದೆ ನಾಯ್ಗರ/ಬಿಲ್ಲವರ ಸಾಮಾಜಿಕ ಸ್ಥಿತ್ಯಂತರಗಳು ನಡೆದವು. ಇದೇ ಸಮಯದಲ್ಲಿ ತುಳುನಾಡಿನಲ್ಲಿ ಸಾಮಾನ್ಯ ಧರ್ಮ ಮತ್ತು ಕೌಟುಂಬಿಕ ಹಿನ್ನಲೆಯ ಕಟ್ಟು ಪಾಡುಗಳನ್ನು ಇಲ್ಲಿಯ ಜೈನ ಅರಸರ ಅಭಿಮತಕ್ಕನುಗುಣವಾಗಿ ಪರಿವರ್ತನೆ ಮಾಡಲಾಯಿತು. ಈ ಸಮಯದಲ್ಲಿ ತುಳುನಾಡ ದೈವ ದೇವರುಗಳ ಪಾಡ್ದನಗಳಲ್ಲಿಯೂ ವ್ಯತ್ಯಾಸಗಳಾಗಿರುವ ಸಂಭವವನ್ನು ತಳ್ಳಿ ಹಾಕುವಂತಿಲ್ಲ. ಅನೇಕ ದೈವ ದೇವರುಗಳ ಹೆಸರುಗಳು ಬದಲಿಸಲಾಗಿದ್ದು ಅವುಗಳ ಅಧಿಕಾರಗಳು ಸ್ಥಾನಮಾನಗಳು ಪಲ್ಲಟಗೊಂಡವು.[೧೩] ತುಳುನಾಡಿನ ಬಿಲ್ಲವರು ಹಿಂದಿನಿಂದಲೂ ತಾಳೆಮರದಿಂದ ಶೇಂದಿ ಇಳಿಸುತ್ತಿದ್ದು, ಇದರಿಂದ ಔಷಧ ಹಾಗೂ ಬೆಲ್ಲವನ್ನು ತಯಾರಿಸುತ್ತಿದ್ದರು. ನಂತರದ ಕಾಲಘಟ್ಟದಲ್ಲಿ ಕೇರಳದ ಮಲೆಯಾಳಿಗಳ ಪ್ರಭಾವದಿಂದ ಇಲ್ಲಿ ತೆಂಗಿನ ಮರದಿಂದ ಶೇಂದಿ ಇಳಿಸುವ ಕಾಯಕವು ಆರಂಭಗೊಂಡಿತ್ತು. ಹದಿನಾಲ್ಕನೆಯ ಶತಮಾನದ ಅನಂತರ ತುಳುನಾಡಿನ ಅಧಿಕಾರಗಳು ಜೈನ ರಾಜರ ವಶವಾಗತೊಡಗಿದವು.[೧೪] ಜೈನಾಡಳಿತ ಕಾಲದಲ್ಲಿ ಬಿಲ್ಲವರ ಸಾಮಾಜಿಕ ಸ್ಥಾನಮಾನಗಳು ಸ್ಥಿತ್ಯಂತರಗೊಂಡವು. ಬ್ರಾಹ್ಮಣ ಮತ್ತು ಜೈನರು ಸೇರಿ ತುಳುನಾಡಿನ ಇತರ ಜನಾಂಗದವರನ್ನು ಶೂದ್ರರೆಂದು ತಿರಸ್ಕಾರ ಮಾಡಿದರು. ಇದೇ ಸಮಯದಲ್ಲೇ ತುಳುನಾಡಿನ ಅನೇಕ ದೇವರು

ಮತ್ತು ದೈವಗಳ ಹೆಸರು ಮತ್ತು ಸ್ಥಾನಮಾನಗಳು ಪಲ್ಲಟವಾದುವು. ಭೂಮಿಯ ಮತ್ತು ವ್ಯಾಪಾರದ ಬಲ್ಲಾಳ್ತನ ಬ್ರಾಹ್ಮಣ ಮತ್ತು ಜೈನರ ವಶವಾಯಿತು.೧೫

ತುಳುನಾಡಿಗೆ ಆಗಮಿಸಿದ ಕ್ರೈಸ್ತ ಮಿಷನರಿಗಳು ಸಾಮಾಜಿಕ ಶೋಷಣೆಯ ವಿರುದ್ಧ ಜನಜಾಗೃತಿಯನ್ನು ಶಿಕ್ಷಣದ ಮೂಲಕ ಕೈಗೊಂಡರು.. ಶಿಕ್ಷಣಕ್ಕೆ ಸ್ಪಷ್ಟ ರೂಪುರೇಷೆಗಳನ್ನು ನೀಡಿ ಪಠ್ಯಕ್ರಮ, ಪರೀಕ್ಷೆ ಮುಂತಾದ ಕ್ರಮಗಳನ್ನು ಅಳವಡಿಸಿ ಶಾಲೆಗಳ ಮೂಲಕ ಶಿಕ್ಷಣವನ್ನು ಒದಗಿಸಿದ ಕೀರ್ತಿ ಮಿಷನರಿಗಳಿಗೆ ಸಲ್ಲುತ್ತದೆ. ಬ್ರಿಟಿಷ್ ಸರಕಾರದ ಪ್ರೋತ್ಸಾಹದಿಂದ ಮಿಷನರಿಗಳು ತುಳುನಾಡಿನಾದ್ಯಂತ ಶಾಲೆಗಳನ್ನು ಪ್ರಾರಂಭಿಸಿ ಶಿಕ್ಷಣವು ಎಲ್ಲಾ ವರ್ಗದ ಜನರಿಗೆ ಮುಕ್ತವಾಗಿ ಒದಗುವಂತೆ ಅವಕಾಶ ಕಲ್ಪಿಸಿದರು. ಮಹಿಳೆಯರಿಗೆ ಶಿಕ್ಷಣವನ್ನು ಒದಗಿಸುವ ಮಹತ್ತರ ಕ್ರಾಂತಿಯನ್ನು ಸಾಧಿಸಿದವರು ಮಿಷನರಿಗಳು.[೧೬] ಇದರಿಂದ ಪ್ರಭಾವಿತರಾದ ಶ್ರೀ ನಾರಾಯಣ ಗುರುಗಳು ಸಮಾಜದ ಯೋಗ್ಯ ತರುಣರನ್ನು ಆರಿಸಿ, ಅವರಿಗೆ ತರಬೇತಿಕೊಡಿಸಿ ಸಮಾಜ ಸುಧಾರಣೆಯ ಕ್ರಾಂತಿಕಾರಿ ಕಹಳೆಯನ್ನು ಊದಿದರು. ಮೂರ್ತೆಗಾರಿಕೆ ಈಳವ ಸಮಾಜಕ್ಕೆ ಅಭಿಶಾಪವಾಗಿತ್ತು. ಈಳವರು ದೇವಸ್ಥಾನದಿಂದ ಬಹಿಷ್ಕೃತರಾಗಲು ಮತ್ತು ಅಸ್ಪೃಶ್ಯರಾಗಲು ಅವರ ಈ ಉಪವೃತ್ತಿ ಒಂದು ಪ್ರಬಲ ಕಾರಣವಾಗಿತ್ತು. ಅಲ್ಲದೆ ಈ ವೃತ್ತಿ ಈಳವರ ಮೂಲಭೂತ ಸಂಸ್ಕಾರಗಳ ಅಧಪತನಕ್ಕೂ ಕಾರಣವಾಗಿತ್ತು. ಮದ್ಯವ್ಯಸನದಿಂದ ಮುಕ್ತಿಪಡೆಯದೇ ಸಮಾಜದ ಮುನ್ನಡೆ ಕಷ್ಟವೆಂದು ಮನಗಂಡ ಗುರುಗಳು ಈ ವೃತ್ತಿಯನ್ನು ತ್ಯಜಿಸಲು ಕರೆಕೊಟ್ಟರು. ತೊಟ್ಟಿಲ ಮದುವೆ, ಬಾಲ್ಯವಿವಾಹ, ಬಹುಪತ್ನಿತ್ವ, ವರದಕ್ಷಿಣೆ, ದುಂದುವೆಚ್ಚಗಳಿಂದ ಕೂಡಿದ ವಿವಾಹ ಕ್ರಮಗಳು ಸಮಾಜದ ಆರ್ಥಿಕ ಮತ್ತು ನೈತಿಕ ದಿವಾಳಿತನಕ್ಕೆ ಸಾಕಷ್ಟು ಕಾರಣಗಳಾಗಿದ್ದವು.[೧೭] ನಾರಾಯಣ ಗುರುಗಳು ಭೂತ, ಪ್ರೇತ, ದೈವಗಳಿಗೆ ಪ್ರಾಣಿ ಬಲಿ, ಕಳ್ಳು ಸಾರಾಯಿಗಳನ್ನು ನಿಷೇಧಿಸಿದ್ದು ಮಾತ್ರವಲ್ಲದೆ ಅವುಗಳು ಪೂಜೆಗೆ ಯೋಗ್ಯವಲ್ಲವೆಂದು ಹೇಳಿದರು. ತಿರಂಡುಕುಳಿ, ಪುಳಿಕುಟಿ ನಿಷೇಧ, ಹೆಣ್ಣು ಋತುಮತಿಯರಾದಾಗ ಮಾಡುವ ವಿಧಿಯಾದ ಅವರ ಫಲವಂತಿಕೆಯ ಸೌಭಾಗ್ಯ ಅಕ್ಷಯವಾಗಲೆಂದು ತಿರಂಡುಕುಳಿ ಒಂದು ಆಶಯವಾದರೆ ಹೆಣ್ಣು ದೈಹಿಕವಾಗಿ ಮದುವೆಗೆ ಸಿದ್ಧಳಾಗಿದ್ದಾಳೆ ಎನ್ನುವುದನ್ನು ಸಾರ್ವತ್ರಿಕ ಜಾಹೀರುಗೊಳಿಸುವ ಔತಣ.[೧೮] ಕೂಟ ತುಳುನಾಡಿನಲ್ಲಿ ಬಿಲ್ಲವರು ಇದನ್ನು ತಲೆನೀರು ಮದುವೆ ಎನ್ನುತ್ತಿದ್ದರು.[೧೯] ಅರ್ಥರಹಿತ ಅನಗತ್ಯ ಸಂಪ್ರದಾಯಗಳು ಜನಸಾಮಾನ್ಯರನ್ನು ಆರ್ಥಿಕ ದಿವಾಳಿತನಕ್ಕೆ ತಳ್ಳುತ್ತಿದ್ದವು. ಕೆಲವೊಮ್ಮೆ ತಾಳಿಕೆಟ್ಟು ಕಲ್ಯಾಣಗಳು ಕನ್ಯೆಯರ ಮಾನಕ್ಕೆ ಮಾರಕವಾಗುತ್ತಿದ್ದವು. ಅನಾಗರಿಕ ಎನಿಸುವ ಸಂಪ್ರದಾಯಗಳಿಂದ ಸಮಾಜಕ್ಕೆ ಹಾನಿಯಲ್ಲದೇ ಪ್ರಯೋಜನಗಳಿರಲಿಲ್ಲ. ಆದ್ದರಿಂದ ಬ್ರಹ್ಮ ಗುರುಗಳು ಅಂತವುಗಳನ್ನು ನಿಲ್ಲಿಸಲು ಪ್ರಯತ್ನ 'ತಾಳಿಕೆಟ್ಟು ಕಲ್ಯಾಣ' [ತಾಳಿ ಕೆಟ್ಟು=ತಾಳಿ ಕಟ್ಟು] ಎನ್ನುವ ಬಹು ಖರ್ಚಿನ ಪರಂಪರಾಗತ ವಿಧಿಯನ್ನು ಮಾಡುವುದು ಕಡ್ಡಾಯವಾಗಿತ್ತು. ತಾಳಿಕೆಟ್ಟು ಕಲ್ಯಾಣವಾಗದೇ ಕನ್ಯೆಯರಿಗೆ ಮದುವೆ ಮಾಡುವುದು ಸಂಪ್ರದಾಯ ನಿಷೇಧವಾಗಿತ್ತು.[೨೦] ತಾಳಿ ಕಟ್ಟುವ ಪದ್ಧತಿ ನಿಲ್ಲಿಸಲಾಗಿದೆ. ಇನ್ನು ಮುಂದೆ ಯಾರೂ ಇದನ್ನು ಆಚರಿಸಬಾರದು ಎಂದು ಆಜ್ಞೆ ಮಾಡಿದರು. ನಾರಾಯಣ ಗುರುಗಳು ವಿವಾಹ ಪದ್ಧತಿಯನ್ನು ಸರಳಗೊಳಿಸಿದರು. ಮದುವೆಯ ದುಂದು ವೆಚ್ಚದ ಅಡಂಭರಗಳನ್ನು ಬಿಟ್ಟು, ಸರಳ ಧಾರ್ಮಿಕ ವಿಧಿ ಮತ್ತು ವಿಧಾನಗಳಿಂದ ಆಚರಿಸಲು ಕರೆಕೊಟ್ಟರು. ವರದಕ್ಷಿಣೆ ಕೊಡುವುದು ಮತ್ತು ಪಡೆಯುವುದು ಎರಡೂ ನಿಷೇಧ. ವರದಕ್ಷಿಣೆ ಪಡೆಯುವ ಅಥವಾ ಕೊಡುವ ಮೂಲಕ ತಮ್ಮ ಸಂತತಿಯನ್ನು ಕೊಡು ಕೊಳ್ಳುವ ವ್ಯಾಪಾರ ಮಾಡದಂತೆ ನಿರ್ದೇಶನ ಮಾಡಿದರು. ೧೯೨೭ರಲ್ಲಿ ಜರ್ಮನಿಯ ಕ್ರೈಸ್ತ ಹುಡುಗಿಯೊಂದಿಗೆ ಕೆ.ಸಿ. ಕರುಣಾಕರನ್ ಎನ್ನುವ ಈಳವ ಹುಡುಗನ ಅಂತರ್ಧರ್ಮ ವಿವಾಹವು ಗುರುಗಳ ಸಮ್ಮುಖದಲ್ಲಿ ನಡೆಯಿತು.[೨೧]

"ವಿದ್ಯೆಯಿಂದ ಸ್ವತಂತ್ರರಾಗಿರಿ. ಸಂಘಟನೆಗಳಿಂದ ಬಲಯುತರಾಗಿರಿ" ಎಂಬ ಧ್ಯೇಯ್ಯದೊಂದಿಗೆ ಶೈಕ್ಷಣಿಕ ಕ್ರಾಂತಿಗೆ ನಾಂದಿ ಹಾಡಿದ ಬ್ರಹ್ಮಶ್ರೀಯವರು "ಸಮಾಜದ ಉನ್ನತಿಗೆ ಶಿಕ್ಷಣ ಅನಿವಾರ್ಯವಾಗಿದೆ. ದೇವಸ್ಥಾನದ ನಿರ್ಮಾಣದಲ್ಲಿ ಹೇಗೆ ಉತ್ಸುಕರಾಗಿದ್ದಿರೋ ಅದೇ ರೀತಿಯ ಉತ್ಸಾಹ ಮತ್ತು ಸ್ಫೂರ್ತಿಯಿಂದ ವಿದ್ಯಾಲಯಗಳ ನಿರ್ಮಾಣ ಕಾರ್ಯದಲ್ಲಿ ತತ್ಪರರಾಗಬೇಕಾಗಿದೆ. ಸಮಾಜದಲ್ಲಿ ಶಿಕ್ಷಣದ ಸರ್ವಾಂಗೀಣವಾದ ವಿಕಾಸವಾಗುವಂತೆ ಪ್ರಯತ್ನಿಸಬೇಕಾಗಿದೆ" "ವಿದ್ಯೆಯಿಂದ ಸ್ವತಂತ್ರರಾಗಿರಿ. ಸಂಘಟನೆಗಳಿಂದ ಬಲಯುತರಾಗಿರಿ" ಎಂದು ತಿಳಿ ಹೇಳಿದರು. ಈ ಮಹಾವಾಕ್ಯಗಳನ್ನು ಎಸ್‌ಎನ್‌ಡಿಪಿ ಯೋಗವು ತನ್ನ ಕಾರ್ಯ ಪ್ರಣಾಳಿಯಲ್ಲಿ ಸೇರಿಸಿಕೊಂಡಿತು.[೨೨] ಸಮಾಜದ ಪ್ರಬಲ ವರ್ಗಗಳವರು ಮಾತ್ರ ಶಿಕ್ಷಣವನ್ನು ಪಡೆಯಬಹುದಾಗಿದ್ದ ದಿನಗಳವು. ಶೂದ್ರರು, ಅವರ್ಣರು ವಿದ್ಯಾವಂತರಾಗುವುದನ್ನು ಮೇಲ್ವರ್ಗಗಳವರು ಸಹಿಸುತ್ತಿರಲಿಲ್ಲ. ಮೇಲ್ವರ್ಗಗಳು ಸಂಘಟಿತರಾಗಿ ಶೂದ್ರಾದಿ ಅವರ್ಣರು ವಿದ್ಯಾವಂತರಾಗುವುದನ್ನು ವಿರೋಧಿಸುತ್ತಿದ್ದವು.[೨೩] ಆದ್ದರಿಂದಲೇ ಗುರುಗಳು ವಿದ್ಯೆಯ ಜೊತೆಗೆ ಸಂಘಟನೆಯ ಶಕ್ತಿಯನ್ನೂ ಬೋಧಿಸಿದರು. ಶೋಷಿತರು ಸಂಘಟಿತರಾದಾಗ ಶಕ್ತಿವಂತರಾಗುತ್ತಾರೆ. ಸಂಘಟನೆಯಿಂದ ಕೇಂದ್ರೀಕೃತವಾದ ಶಕ್ತಿಯನ್ನು ಮೊದಲು ಶಿಕ್ಷಣಕ್ಕೆ ಉಪಯೋಗಿಸಿಕೊಳ್ಳಬೇಕು ಎನ್ನುವುದು ಗುರುಗಳ

ನಿಲುವಾಗಿತ್ತು. ಸರ್ವರಿಗೂ ಶಿಕ್ಷಣ ಬೇಕೆಂಬ ನೆಲೆಯಲ್ಲಿ ಅವರು ಶಿವಗಿರಿಯಲ್ಲಿ ವಿದ್ಯೆಗೆ ಅಧಿದೇವತೆಯಾದ ಶಾರದ ದೇವಿಯನ್ನು ಪ್ರತಿಷ್ಠಾಪಿಸಿದರು. ದೇವಸ್ಥಾನಗಳ ಸುತ್ತಮುತ್ತ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲು ಕರೆಕೊಟ್ಟರು.[೨೪] ನಾರಾಯಣ ಗುರುಗಳ ಶಿಕ್ಷಣ ಕ್ರಾಂತಿಯ ಹರವು ಬಹುಮುಖವಾದದ್ದು. ವೃತ್ತಿಪರ ಶಿಕ್ಷಣವನ್ನು ಆರಂಭಿಸಿದವರಲ್ಲಿ ನಾರಾಯಣ ಗುರುಗಳು ಪ್ರಮುಖರು. ಈಳವರು ಬೇಸಾಯ, ತೋಟಗಾರಿಕೆ, ಮೂರ್ತಗಾರಿಕೆ ಮುಂತಾದ ಕಸುಬುಗಳೊಂದಿಗೆ, ತಲಾತಲಾಂತರಗಳಿಂದ ನೇಯ್ಗೆಯನ್ನು ಕುಲ ಕೆಲಸವಾಗಿ ಮಾಡಿಕೊಂಡವರು ಶಿಕ್ಷಣದೊಂದಿಗೆ ವೃತ್ತಿಪರ ಶಿಕ್ಷಣಕ್ಕೆ ಹೊಸ ತಿರುವನ್ನು ಕೊಟ್ಟಿತು. ತೆಂಗಿನ ನಾರಿನ ಕೈಗಾರಿಕೆ, ವೈಜ್ಞಾನಿಕ ಕೃಷಿಗಾರಿಕೆ, ಗುಡಿ ಕೈಗಾರಿಕೆಗಳ ತರಬೇತಿಗಳನ್ನು, ವೃತ್ತಿಪರ ಶಿಕ್ಷಣಗಳನ್ನಾಗಿ ಅಳವಡಿಸಿಕೊಂಡರು.[೨೫] ಇದರಿಂದಾಗಿ ಶಿಕ್ಷಣವು ಬಹುಮುಖವಾದ ನೆಲೆಗಳನ್ನು ಕಂಡುಕೊಳ್ಳುವಲ್ಲಿ ಸಫಲವಾಯಿತು. ನಾರಾಯಣ ಗುರುಗಳ ದೇವಸ್ಥಾನಗಳ ಪ್ರಮುಖ ಉದ್ದೇಶಗಳು ಶಿಕ್ಷಣ, ಸಮಾಜೋತ್ಥಾನ ಮತ್ತು ಸಾಮಾಜಿಕ ಸಮಾನತೆಗಳನ್ನು ಸಾಧಿಸುವುದೇ ಆಗಿತ್ತು. ದೇವಸ್ಥಾನವನ್ನು ಕಟ್ಟಿದಾಗ ಅದರ ಮುಖಾಂತರ ಶಾಲೆಯನ್ನು ತೆರೆಯಲು ಮತ್ತು ಅದಕ್ಕೆ ಅನುಕೂಲಗಳನ್ನು ಕಲ್ಪಿಸಿಕೊಳ್ಳಲು ಸುಲಭವಾಗುತ್ತಿತ್ತು.[೨೬] ಅವರು ಪ್ರತಿಷ್ಠಾಪಿಸಿದ ಬಹುತೇಕ ಎಲ್ಲ ದೇವಸ್ಥಾನಗಳು ಆಧುನಿಕ ಶಿಕ್ಷಣದ ವ್ಯವಸ್ಥೆಗಳುಳ್ಳ ಶಾಲೆಗಳನ್ನು ಹೊಂದಿರುವುದನ್ನು ಗಮನಿಸಿದಾಗ ಶಿಕ್ಷಣದ ಬಗೆಗೆ ಅವರ ನಿಲುವು, ಒಲುವು, ಸ್ಪಷ್ಟವಾಗುವುದು. "ಪ್ರತಿ ಗ್ರಾಮಗಳಲ್ಲೂ, ದೇವಸ್ಥಾನಗಳಲ್ಲೂ ಸಾಹಿತ್ಯ ಸಂಘ ಮತ್ತು ವಾಚನಾಲಯಗಳು ಇರಬೇಕು. ಅವು ಜನರಿಗೆ ವಿದ್ಯೆಯ ಅಗತ್ಯತೆಯ ಪ್ರಚಾರಗಳನ್ನು ಮಾಡಬೇಕು. ಅವುಗಳಿಗಾಗಿ ಸಂಘಟನೆಗಳನ್ನು ಕಟ್ಟಿಕೊಂಡು ಅವುಗಳ ಮುಖಾಂತರ ಕೆಲಸ ಮಾಡಬಹುದು. ಹಣವಂತರು ಇದಕ್ಕೆ ದೇಣಿಗೆಯನ್ನು ಕೊಟ್ಟು ಪುರಸ್ಕರಿಸಬೇಕು"[೨೭] ಎಂದು ಗುರುಗಳು ಸಮಾಜಕ್ಕೆ ಕರೆ ಕೊಟ್ಟರು.

ದೇವಸ್ಥಾನ ಚಳವಳಿಗಳು ಬಿಲ್ಲವ ಸಮಾಜವು ಪರಿವರ್ತನೆ ಕಡೆಗೆ ಹೆಜ್ಜೆ ಹಾಕಲು ಪ್ರೇರಕ ಶಕ್ತಿಯಾಗಿದ್ದು,

ನಾರಾಯಣ ಗುರುಗಳ ಸಮಾಜೋತ್ಥಾನ ಕ್ರಾಂತಿಗಳಲ್ಲಿ ದೇವಸ್ಥಾನಗಳ ಚಳವಳಿಯು ಪ್ರಥಮ ಮತ್ತು ಪ್ರಮುಖವಾದದ್ದು. "ಸವರ್ಣರು ಅವರ ದೇವಸ್ಥಾನಗಳಲ್ಲಿ ನಿಮಗೆ ಪ್ರವೇಶ ಕೊಡದಿದ್ದರೆ ನಿಮ್ಮದೇ ದೇವಸ್ಥಾನಗಳನ್ನು ಕಟ್ಟಿಕೊಳ್ಳಿ" ಎನ್ನುವುದು ಮಾತ್ರ ಗುರುಗಳ ಹೇಳಿಕೆ ಆಗಿತ್ತು. ನಾರಾಯಣ ಗುರುಗಳದ್ದು ಸಂಘರ್ಷರಹಿತ ಸಕಾರಾತ್ಮಕ ಚಳವಳಿ. ಸವರ್ಣರು ಅವರ ದೇವಸ್ಥಾನದಲ್ಲಿ ಅವರ್ಣೀಯರಿಗೆ ಪ್ರವೇಶ ಬಹಿಷ್ಕರಿಸಿದ್ದನ್ನೇ ಪ್ರತಿ ಅಸ್ತ್ರವಾಗಿ ಉಪಯೋಗಿಸಿ, ಆ ದೇವಸ್ಥಾನಗಳನ್ನೇ ಅವರ್ಣರು ಮೌನದಿಂದ ಬಹಿಷ್ಕರಿಸುವಂತೆ ಮಾಡಿದ್ದು ಗುರುಗಳ ಚಾಣಕ್ಷತನವಾಗಿತ್ತು. ಸಮಾಜದ ಕ್ರಾಂತಿಕಾರಿ ಬದಲಾವಣೆಗೆ ಅತೀಂದ್ರಿಯ ಮತ್ತು ಮಾನಸಿಕ ಶಕ್ತಿಯ ಅಗತ್ಯವಿತ್ತು. ಗುರುಗಳು ಅತೀಂದ್ರಿಯ ಶಕ್ತಿಸಂಪನ್ನರು ಎಂದು ಬ್ರಾಹ್ಮಣರಾದಿಯಾಗಿ ಸವರ್ಣರು ಹಾಗೂ ಶೂದ್ರಾದಿ ಅವರ್ಣರು ನಂಬಿದ ಮೇಲೆ ದೇವಸ್ಥಾನಗಳನ್ನು ಪ್ರತಿಷ್ಠಾಪಿಸಲು ಮುಂದಾದರು. ಅಂದಿನ ಕಾಲದಲ್ಲಿ ಶೂದ್ರರಿಗೆ ದೇವಸ್ಥಾನವನ್ನು ಪ್ರತಿಷ್ಠೆ ಮಾಡುವ ಅಧಿಕಾರವಿರಲಿಲ್ಲ. ಆದ್ದರಿಂದ ನಾರಾಯಣಗುರುಗಳು ಈ ಶಿವಾಲಯುವನ್ನು ಅಂದಿನ ಪ್ರಚಲಿತ ಶಾಸ್ತ್ರದ ಚೌಕಟ್ಟಿನಿಂದ ಭಿನ್ನವಾಗಿ ಪ್ರತಿಷ್ಠಾಪಿಸಿದ್ದರು.[೨೮] ಇದು ಒಂದು ಪ್ರಯೋಗವಾಗಿತ್ತು. ತಳವರ್ಗದ ಜನ ಮತ್ತು ಮೇಲ್ವರ್ಗದ ಜನ ಹೇಗೆ ಈ ಪ್ರತಿಷ್ಠೆಯನ್ನು ಸ್ವೀಕರಿಸುತ್ತಾರೆ ಎಂದು ಸೂಕ್ಷ್ಮವಾಗಿ ಗಮನಿಸುವುದೇ ಗುರುಗಳ ಉದ್ದೇಶವಾಗಿತ್ತು. ೧೮೮೮ರ ಮಹಾಶಿವರಾತ್ರಿಯಂದು ಅರುವಿಪ್ಪುರದಲ್ಲಿ ಶಿವಲಿಂಗ ಪ್ರತಿಷ್ಠೆ ಮಾಡಿದರು. ಅರುವಿಪ್ಪುರ ಸ್ವಾಮಿಗಳ ಆದ್ಯ ಪ್ರವರ್ತನ ರಂಗ. ಅರುವಿಪ್ಪುರದಲ್ಲಿ ಸ್ವಾಮಿಗಳು ನದಿಯ ಕಲ್ಲನ್ನೇ ಶಿವಲಿಂಗವಾಗಿ ಪ್ರತಿಷ್ಠಾಪಿಸಿದರು. ಪ್ರತಿಷ್ಠಾಪನೆಯ ಅನಂತರ ಬರಬಹುದಾದ ಧಾರ್ಮಿಕ ಬಿಕ್ಕಟ್ಟು ಮತ್ತು ಸಾಮಾಜಿಕ ಅವಾಂತರಗಳ ಬಗೆಗೆ ಮೊದಲೇ ಸೂಕ್ಷ್ಮವಾಗಿ ಯೋಚಿಸಿದ್ದರು. ಇದೊಂದು ಆರಂಭದ ಪ್ರಯೋಗವಾಗಿತ್ತು. ಈ ಶಿವಲಿಂಗ ಪ್ರತಿಷ್ಠೆ ಧಾರ್ಮಿಕ ಮತ್ತು ಸಾಮಾಜಿಕವಾಗಿ, ಜನಾಂಗೀಯ ಘರ್ಷಣೆಗೆ ಎಡೆಯಾಗುವ ಸಂಭವವಿತ್ತು. ಅದನ್ನರಿತು ಸ್ವಾಮಿಗಳು ಸೂಕ್ಷ್ಮ ಮತಿತ್ವದಿಂದ ಜಾಗ್ರತೆ ವಹಿಸಿದ್ದರು. ಆದ್ದರಿಂದಲೇ ಸ್ವಾಮಿಗಳು ಅಂದು ಸಮುದಾಯಗಳು ಮರೆತಿದ್ದ ಪುರಾತನ ಪದ್ಧತಿಯಿಂದ, ತತ್ಕಾಲ ಸಮಾಜದ ಶಾಸ್ತ್ರ, ವಾಸ್ತುಗಳ ಚೌಕಟ್ಟಿಗೆ ಒಳಪಡದ, ಶಿವಾಲಯ ಮತ್ತು ಶಿವಲಿಂಗದ ಪ್ರತಿಷ್ಠೆಯನ್ನು ಮಾಡಿದ್ದರು.[೨೯] "ನಾವೇನು ಪ್ರತಿಷ್ಠಾಪಿಸಿದ್ದೇವೋ ಅದು ಬ್ರಾಹ್ಮಣ ಶಿವನಲ್ಲ. ಇದು ಕೇವಲ ನಮ್ಮ ಶಿವ"ಅರುವಿಪ್ಪುರದ ಶಿವಲಿಂಗ ಪ್ರತಿಷ್ಠೆಯ ನಂತರ ಸ್ವಾಮಿಗಳನ್ನು ಗುರುಗಳೆಂದು ಜನರು ಸಂಬೋಧಿಸ ತೊಡಗಿದರು. ಅರುವಿಪ್ಪುರದಲ್ಲಿ ಶೂದ್ರನಿಂದ ಶಿವಲಿಂಗ ಪ್ರತಿಷ್ಠೆಯಾದುದು ಮಾಹಾಪಾಪ, ಶಾಸ್ತ್ರ ವಿರೋಧವಾದುದು. ಇದರಿಂದ ದೈವ ಕೋಪವಾಗಿ ಊರೇ ನಾಶವಾಗುವುದೆಂದು ಕೇರಳದಾದ್ಯಂತವೂ ಮೂಲಭೂತವಾದಿಗಳು ಮಾಡಿದ ಅಬ್ಬರದ ಅಪಪ್ರಚಾರಕ್ಕೆ ಜನಸಾಮಾನ್ಯರು ಹೆದರಿದರು. ಮೂಲಭೂತವಾದಿಗಳು ನುಡಿದ ಭವಿಷ್ಯದ ಅನಾಹುತಗಳಲ್ಲಿ ಯಾವೊಂದೂ ಆಗದೇ ಇದ್ದಾಗ ಸಾಮಾನ್ಯರಿಗೂ, ಧರ್ಮ ಬೀರುಗಳಿಗೂ, ಗುರು ಸಾಮಾನ್ಯರಲ್ಲ ದೈವಾಂಶ ಸಂಭೂತರೇ ಆಗಿರಬೇಕು ಎಂದು ಅನಿಸತೊಡಗಿತು[೩೦].

ಗುರುವಿನ ಮೇಲಿನ ವಿಶ್ವಾಸ ಮತ್ತೂ ಹೆಚ್ಚಾಯಿತು. ಅರುವಿಪ್ಪುರದತ್ತ ಕೇರಳದ ಸರ್ವ ಜಾತಿ, ಮತ, ಪಂಗಡಗಳ ಜನರು ಗುರುಗಳೆಡೆಗೆ ಆಕರ್ಷಿಸಲ್ಪಟ್ಟರು.

ಕರಾವಳಿ ಕರ್ನಾಟಕದ ಬಿಲ್ಲವ ಸಮಾಜದವರು ಪರಿವರ್ತನೆಯ ಕಡೆಗೆ ಹೆಜ್ಜೆ ಹಾಕಲಾರಂಭಿಸಿದರು. ನಾರಾಯಣ ಗುರುಗಳ ಕಾರ್ಯಕ್ಷೇತ್ರದ ಕೇಂದ್ರಸ್ಥಾನ ಕೇರಳವಾಗಿದ್ದರೂ ಅದರ ಪರಿಣಾಮ ತಮಿಳುನಾಡು, ಕರ್ನಾಟಕ ರಾಜ್ಯಗಳಿಗೂ ಹಬ್ಬಿತ್ತು. ಮಂಗಳೂರಿನ ಕುದ್ರೋಳಿಲ್ಲಿರುವ ಗೋಕರ್ಣನಾಥೇಶ್ವರ ದೇವಸ್ಥಾನ ಸ್ಥಾಪನೆಯೇ ಇವರ ಮಂಗಳೂರು ಭೇಟಿಯ ಉದ್ದೇಶವಾಗಿತ್ತು. ಅಂದಿನ ಮೈಸೂರು ಸಂಸ್ಥಾನ, ಮದರಾಸು ಸಂಸ್ಥಾನ, ಮುಂಬೈ ಕರ್ನಾಟಕ, ಕಾಸರಗೋಡು ಪ್ರದೇಶಗಳಲ್ಲಿ ಬಿಲ್ಲವರು, ಈಡಿಗರು, ನಾಮಧಾರಿಗಳು, ಹಳೇಪೈಕರು, ನಾಯಕರು, ದೀವರ ಮಕ್ಕ, ಬೈದ್ಯರು, ಪೂಜಾರಿಗಳು, ಬೆಳ್ಚಡರು, ತೀವರ್, ಇರಾವರ್, ದೇವರಮಕ್ಕು ಈ ರೀತಿಯಾಗಿ ಸುಮಾರು ೨೪ ನಾಮ ಉಪನಾಮಗಳು[೩೧] ಈ ಸಮುದಾಯ ಕೂಡ, ಅಸ್ಪೃಶ್ಯರಾಗಿ, ವಿವಿಧ ರೀತಿಯ ಸಾಮಾಜಿಕ ಶೋಷಣೆಗೊಳಗಾಗಿತ್ತು. ವರ್ಣೀಯರ ಅಧೀನದಲ್ಲಿದ್ದ ಯಾವ ದೇವಸ್ಥಾನದಲ್ಲೂ ಇವರಿಗೆ ಪ್ರವೇಶವಿರಲಿಲ್ಲ. ಸಮಾಜದಲ್ಲಿನ ಶ್ರೀಮಂತ ಕುಳಗಳಾಗಿದ್ದರು, ಆನೇಕರು, ಸರ್ಕಾರಿ ಉದ್ಯೋಗದಲ್ಲಿದ್ದರು. ಆದರೂ ಒಟ್ಟಾರೆಯಾಗಿ ಹೇಳಿಕೊಳ್ಳುವಂತ ಗೌರವಯುತ ಬದುಕು ಈ ಸಮುದಾಯದ ಜನರಿಗೆ ಇರಲಿಲ್ಲ. ನಾರಾಯಣ ಗುರುಗಳು ಶೋಷಿತ ಜನಾಂಗಕ್ಕೆ ನಾನಾ ರೂಪಗಳಿಂದ ಶಕ್ತಿಯನ್ನು ಪ್ರಧಾನ ಮಾಡುತ್ತಿದ್ದ ಕಾಲ. ೧೯೦೭ರಲ್ಲಿ ಮಂಗಳೂರಿನಲ್ಲಿ ಜಾರ ಮನೆತನದ ಜಾರಪ್ಪ ನಾಯಕ ಎಂಬವರು ತಮ್ಮ ಕುಟುಂಬ ವರ್ಗದವರ ಜತೆ ಗೋಕರ್ಣಕ್ಕೆ ಹೋಗಿದ್ದರು. ಗೋಕರ್ಣದಲ್ಲಿ ಇವರು ಬಂದಿಳಿದಾಗ ಅಲ್ಲಿನ ಬ್ರಾಹ್ಮಣರೆಲ್ಲ ಇವರನ್ನು ಮಂಗಳೂರಿನ ಶ್ರೀಮಂತ ಬ್ರಾಹ್ಮಣರೆಂದೇ ಭಾವಿಸಿ, ದೇವಸ್ಥಾನದ ಒಳಗೆ ಸ್ವಾಗತಿಸಿ, ಬಹಳ ಗೌರವಾದರಗಳೊಂದಿಗೆ ಸತ್ಕರಿಸಿದರು. ಸ್ವತಃ ಇವರ ಕೈಯಲ್ಲಿಯೇ ಶಿವಲಿಂಗ (ಗೋಕರ್ಣನಾಥನಿಗೆ) ಪೂಜೆಯನ್ನು ಮಾಡಿಸಿದರು. ಆ ದಿನ ರಾತ್ರಿ ಅಲ್ಲಿಯೇ ತಂಗುವ ವ್ಯವಸ್ಥೆಯನ್ನೂ ಮಾಡಿ ಮರುದಿನ ಇವರನ್ನು ಬೀಳ್ಕೊಟ್ಟರು. ಜಾರಪ್ಪ ನಾಯಕ ಮತ್ತು ಅವರ ಕುಟುಂಬ ವರ್ಗದವರು ಮಂಗಳೂರಿಗೆ ಹಿಂತಿರುಗಿದ ಕೆಲವು ತಿಂಗಳುಗಳ ಬಳಿಕ ಗೋಕರ್ಣ ಕ್ಷೇತ್ರದ ಪ್ರಧಾನ ಅರ್ಚಕರು ಕಾರ್ಯಾರ್ಥ ಮಂಗಳೂರಿಗೆ ಬಂದವರು ಅವರ ಸಂಬಂಧಿಗಳೊಬ್ಬರ ಮನೆಯಲ್ಲಿ ತಂಗಿದ್ದರು. ಈ ಸಂದರ್ಭ ಜಾರಪ್ಪ ನಾಯಕರ ಬಗ್ಗೆ, ಅವರು ಗೋಕರ್ಣಕ್ಕೆ ಬಂದ ಬಗ್ಗೆ ವಿವರವಾಗಿ ತಮ್ಮ ಸಂಬಂಧಿಕರಿಗೆ ತಿಳಿಸಿದಾಗ ಅವರಿಗೆ ಜಾರಪ್ಪ ನಾಯಕರು ಮಂಗಳೂರಿನ ಶ್ರೀಮಂತ ಬಿಲ್ಲವರಲ್ಲಿ ಒಬ್ಬರು, ಆದರೆ ಅವರು ಅಸ್ಪೃಶ್ಯರು, ಬಿಲ್ಲವ ಜನಾಂಗದವರಿಗೆ ದೇವಸ್ಥಾನ ಪ್ರವೇಶ ನಿಷಿದ್ಧ ಎಂಬ ವಿಷಯ ತಿಳಿಯಿತು. ಇದರಿಂದ ಸ್ವಾಭಾವಿಕವಾಗಿ ದಿಗಿಲುಗೊಂಡ ಅರ್ಚಕರು ಜಾರಪ್ಪ ನಾಯಕರ ಮನೆಗೆ ಬಂದು ನೀವುಗಳು ಬ್ರಾಹ್ಮಣರೆಂದು ಭಾವಿಸಿ ದೇವಸ್ಥಾನ ಪ್ರವೇಶಕ್ಕೆ ಅವಕಾಶ ಮಾಡಿದೆವು, ನನಗೆ ನೀವುಗಳು ಅಸ್ಪೃಶ್ಯರು ಹಾಗೂ ನಿಮ್ಮ ಜನಾಂಗಕ್ಕೆ ದೇವಸ್ಥಾನ ಪ್ರವೇಶ ನಿಷಿದ್ಧ ಎಂಬುದು ಈಗ ತಿಳಿದು ಬಂತು. ನಿಮ್ಮ ಪ್ರವೇಶದಿಂದ ಗೋಕರ್ಣಕ್ಷೇತ್ರ ಅಶುದ್ಧಿಯಾಗಿದೆ. ನೀವು ನಿಮ್ಮ ಸ್ವಂತ ಖರ್ಚಿನಲ್ಲಿ ದೇವಸ್ಥಾನದ ಶುದ್ಧೀಕರಣ ಇತ್ಯಾದಿ. ಧಾರ್ಮಿಕ ವಿಧಿಗಳನ್ನು ಮಾಡಿಸಬೇಕು. ಇದಕ್ಕೆ ತಪ್ಪಿದರೆ ನಿಮಗೆ ಹಾಗೂ ನಿಮ್ಮ ಸಂಸಾರಕ್ಕೆ ಧರ್ಮದ್ರೋಹ ಹಾಗೂ ದೈವದ್ರೋಹದ ಶಾಪ ತಟ್ಟುತ್ತದೆ. ಸಾಮಾಜಿಕ ಬಹಿಷ್ಕಾರಕ್ಕೂ ಸಾಧ್ಯತೆಗಳಿಗೆ ಎಂದು ಅಪ್ಪಣೆ ಕೊಡಿಸಿದರು. ಆಗಿನ ಕಾಲದಲ್ಲಿ ಎಷ್ಟೇ ಶ್ರೀಮಂತರಿದ್ದರೂ, ಮೂಢ ನಂಬಿಕೆಗಳ ನೆರಳಿನಲ್ಲಿಯೇ ಬದುಕುತ್ತಿದ್ದವರಿಗೆ ದೈವ ಭಯ, ಸಮಾಜದ ಭಯ ಎರಡೂ ಇರುತ್ತಿದ್ದುದು ಸ್ವಾಭಾವಿಕ. ಇದಕ್ಕೆ ಒಂದು ಪರಿಹಾರ ಹುಡುಕಲೇಬೇಕು ಎಂದು ಅವರ ಜಾತಿ ಬಾಂಧವ ಹಾಗೂ ಅವರಂತೆ ಶ್ರೀಮಂತರಾಗಿದ್ದ ಸಾಹುಕಾರ್ ಕೊರಗಪ್ಪನವರಲ್ಲಿ ನಡೆದ ವಿಷಯಗಳನ್ನು ಸವಿವರವಾಗಿ ಹೇಳಿದರು.[೩೨] ಕೇರಳದಲ್ಲಿ ಸಮಾಜ ಸುಧಾರಣೆ ಮತ್ತು ಆಧ್ಯಾತ್ಮಿಕ ಕ್ರಾಂತಿಯನ್ನು ಮಾಡುತ್ತಿದ್ದ ನಾರಾಯಣ ಗುರುಗಳ ಬಗ್ಗೆ ಇವರಿಗೆ ತಿಳಿದಿತ್ತು. ಅವರು ಅರವೀಪುರಂನಲ್ಲಿ ಪ್ರಥಮವಾಗಿ ದೇವಸ್ಥಾನ ನಿರ್ಮಾಣ ಮಾಡಿ ಅಸ್ಪೃಶ್ಯರಿಗೆ ದೀನದಲಿತರಿಗೆ ಆ ದೇವಸ್ಥಾನದಲ್ಲಿ ಮುಕ್ತ ಪ್ರವೇಶ ಕಲ್ಪಿಸಿದ ಬಗ್ಗೆಯೂ ತಿಳಿದಿತ್ತು. ಆದರೆ ಅವರ ಸಂಪರ್ಕ ಇವರಿಗೆ ಇರಲಿಲ್ಲ. ಜಾರಪ್ಪ ನಾಯಕರಿಗೆ ಗೋಕರ್ಣದಲ್ಲಿ ಆದ ಘಟನೆಯಿಂದಾಗಿ ಇವರೆಲ್ಲರ ಆತ್ಮಾಭಿಮಾನಕ್ಕೆ ಚುರುಕು ಮುಟ್ಟಿ ಇದಕ್ಕೆ ಸರಿಯಾದ ಸಲಹೆಯನ್ನು ನಾರಾಯಣಗುರುಗಳಿಂದಲೇ ಪಡೆಯುವುದು ಸೂಕ್ತವೆಂದು ತೀರ್ಮಾನಿಸಿ, ಕೇರಳದ ಶಿವಗಿರಿಗೆ ತೆರಳಿದರು. ಶಿವಗಿರಿಯಲ್ಲಿ ನಾರಾಯಣಗುರುಗಳನ್ನು ಭೇಟಿಯಾದ, ಸಾಹುಕಾರ್ ಕೊರಗಪ್ಪನವರ ತಂಡ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಬಿಲ್ಲವರ ಪರಿಸ್ಥಿತಿ ಇತ್ಯಾದಿಗಳನ್ನು ವಿವರಿಸಿ, ತಮ್ಮ ಜನಾಂಗದ ಜಾರಪ್ಪ ನಾಯಕರಿಗೆ ಗೋಕರ್ಣದಲ್ಲಿ ಆದ ಅನುಭವ ಹಾಗೂ ಗೋಕರ್ಣ ಕ್ಷೇತ್ರದ ಪ್ರಧಾನ ಆರ್ಚರು ಹೇಳಿದ ದೇವಸ್ಥಾನ ಶುದ್ಧೀಕರಣ ಇತ್ಯಾದಿಗಳನ್ನು ವಿವರಿಸಿ ಇದಕ್ಕೆ ಪರಿಹಾರವನ್ನು ಯಾಚಿಸಿತು.[೩೩] "ನಿಮಗೆ ಪ್ರವೇಶವಿಲ್ಲದ ದೇವಸ್ಥಾನಗಳಿಗೆ ನೀವು ಹೋಗುವುದೂ ಬೇಡ, ಅಲ್ಲಿಗೆ ಹರಕೆ

ಕಾಣಿಕೆಗಳನ್ನು ಸಲ್ಲಿಸುವುದೂ ಬೇಡ. ಜಾರಪ್ಪ ನಾಯಕರು, ಗೋಕರ್ಣ ದೇವಸ್ಥಾನದಲ್ಲಿ ಶುದ್ಧೀಕರಣ, ಕಲಶ, ಹೋಮ ಯಾವುದೂ ಮಾಡುವುದು ಬೇಡ. ಜಾರಪ್ಪ ನಾಯಕರಿಂದ ಯಾವ ಗೋಕರ್ಣನಾಥಸ್ವಾಮಿ ಶುದ್ಧೀಕರಣವನ್ನು ಬಯಸುತ್ತಾನೆ ಎಂದು ಆ ದೇವಸ್ಥಾನದ ಅರ್ಚಕರು ಹೇಳಿದರೋ ಅದೇ ಗೋಕರ್ಣನಾಥನನ್ನು ನಾನೇ ನಿಮಗೆ ತಂದು ಒಪ್ಪಿಸುತ್ತೇನೆ. ಆತನಿಗೆ ನೀವೇ ನಿಮ್ಮದೇ ಆದ ಒಂದು ದೇವಸ್ಥಾನ ನಿರ್ಮಾಣ ಮಾಡಿ ಅನನ್ಯ ಭಕ್ತಿಯಿಂದ ಆರಾಧಿಸಿ. ಈ ಕೆಲಸವನ್ನು ನಾನೇ ಸ್ವತಃ ಬಂದು ನೆರವೇರಿಸುತ್ತೇನೆ ಎಂದು ಭರವಸೆ ಕೊಟ್ಟರು.[೩೪]

೧೯೦೮ರಲ್ಲಿ ನಾರಾಯಣ ಗುರುಗಳು ಮಂಗಳೂರಿಗೆ ಆಗಮಿಸಿದರು. ರೈಲ್ವೇ ನಿಲ್ದಾಣದಿಂದ ಗುರುಗಳನ್ನು ಸಂಭ್ರಮದ ಗೌರವಪೂರ್ಣ ಸ್ವಾಗತದೊಂದಿಗೆ ಅಪಾರ ಸಂಖ್ಯೆಯಲ್ಲಿ ಸೇರಿದ ಜನಸ್ತೋಮ ಬರಮಾಡಿಕೊಂಡರು. ಮಂಗಳೂರು ಪೇಟೆಯ ಹಲವಾರು ಕಡೆ ದೇವಸ್ಥಾನದ ನಿರ್ಮಾಣಕ್ಕಾಗಿ ಸ್ಥಳ ಶೋಧನೆ ಮಾಡಿದ ಬಳಿಕ ಕುದುರೋಳಿ ಎಂಬಲ್ಲಿನ ಸ್ಥಳವೆ ಅತ್ಯಂತ ಸೂಕ್ತವೆಂದು ಗುರುಗಳು ಹೇಳಿದರು. ಈ ಸ್ಥಳ ನಿರ್ಜನ ಪ್ರದೇಶವಾಗಿದ್ದು ಟಿಪ್ಪು ಸುಲ್ತಾನನ ಸೈನಿಕರು ತಮ್ಮ ಕುದುರೆಗಳನ್ನು ಮೇಯಿಸುತ್ತಿದ್ದ ಸ್ಥಳವಾಗಿತ್ತು. ಈ ರೀತಿ ಸ್ಥಳ ಶೋಧನೆ ನಡೆಸಿದ ಬಳಿಕ ಗುರುಗಳು ಕೇರಳಕ್ಕೆ ಹಿಂತಿರುಗಿದರು. ನಂತರ ೧೯೦೯ರಲ್ಲಿ ನಾರಾಯಣಗುರುಗಳು ತಮ್ಮ ಶಿಷ್ಯ ಚೈತನ್ಯಸ್ವಾಮಿಗಳ ಜತೆ ಮತ್ತೆ ಮಂಗಳೂರಿಗೆ ಆಗಮಿಸಿ, ದೇವಸ್ಥಾನ ನಿರ್ಮಾಣಕ್ಕೆ ಅಡಿಗಲ್ಲು ಹಾಕಿದರು. ಚೈತನ್ಯ ಸ್ವಾಮಿಗಳ ಉಸ್ತುವಾರಿಯಲ್ಲಿ ಕೇರಳ ವಾಸ್ತುಶಿಲ್ಪ ಮಾದರಿಯಲ್ಲಿ ದೇವಸ್ಥಾನ ನಿರ್ಮಾಣದ ಕಾಮಗಾರಿ ಪ್ರಾರಂಭವಾಗಿ[೩೫] ೧೯೧೨ರಲ್ಲಿ ಪೂರ್ಣಗೊಂಡಿತು. ನಾರಾಯಣ ಗುರುಗಳು ೩ನೇ ಬಾರಿಗೆ ಮಂಗಳೂರಿಗೆ ಆಗಮಿಸಿದರು. ೨೧.೨.೧೯೧೨ರ ಮಹಾಶಿವರಾತ್ರಿಯಂದು ಗುರುಗಳು ದೇವಸ್ಥಾನದಲ್ಲಿ ಪಂಚಾಯತನ ಮೂರ್ತಿಗಳ ಪ್ರತಿಷ್ಠೆ ಮಾಡಿದರು. ಪ್ರತಿಷ್ಠಾಪನೆ ಮಾಡಿದ ಶಿವಲಿಂಗವನ್ನು ಗುರುಗಳು ಕೇರಳದಿಂದ ತಂದಿದ್ದರೆಂದೂ ಒಂದು ಪ್ರತೀತಿ, ಕಾಶಿಯಿಂದ ತರಿಸಿದ್ದೆಂದು ಇನ್ನೊಂದು ಪ್ರತೀತಿಯಿದೆ. ಇಲ್ಲಿನ ಶಿವಲಿಂಗ ಪ್ರತಿಷ್ಠೆ ಗುರುಗಳು ಪ್ರತಿಷ್ಠಾಪಿಸಿದ ಇತರ ಪ್ರತಿಷ್ಠೆಗಳಿಗಿಂತ ಭಿನ್ನವಾಗಿದೆ. ಇಲ್ಲಿರುವ ಸಾಲಿಗ್ರಾಮವು ಹೆಚ್ಚು ಎತ್ತರವಿಲ್ಲ. ಕೆಂಪು ಕಪ್ಪು ಮಿಶ್ರಿತ ವರ್ಣ ಹೊಂದಿದ್ದು, ನದಿಯಲ್ಲಿ ಸವೆದು ನೈಸರ್ಗಿಕವಾಗಿ ವೃತ್ತಾಕಾರ ಪಡೆದಿದೆ. ಯಾವ ಗೋಕರ್ಣದಲ್ಲಿ ಜಾತಿ, ಜನಾಂಗದ ವೈರುಧ್ಯದ ಕಾರಣದಿಂದ ಒಂದು ವರ್ಗದ ವ್ಯಕ್ತಿಗೆ ಅವಮಾನವಾಗುವ ಮೂಲಕ ಆ ಜನಾಂಗವೇ ಆಧ್ಯಾತ್ಮಿಕ ಜಾಗೃತಿ ಪಡೆಯಿತೋ, ಅದೇ ಗೋಕರ್ಣನನ್ನು ಗುರುಗಳು ಈ ಜನಾಂಗದವರು ಕುಲದೇವರನ್ನಾಗಿ ಆರಾಧಿಸಲಿ ಎಂಬ ಸಂಕಲ್ಪದಿಂದ ದೇವಸ್ಥಾನವನ್ನು ಗೋಕರ್ಣನಾಥೇಶ್ವರ ದೇವಸ್ಥಾನವೆಂದು ಕರೆದರು. ಪ್ರತಿಷ್ಠಾನ ನಂತರ ಕೇರಳೀಯ ಮಾದರಿಯ ವಿಧಿ ವಿಧಾನ (ನಾರಾಯಣ ಧರ್ಮ) ಅನುಸರಿಸುವಂತೆ ಸೂಚಿಸಿದರು. ಸರಳವಾದ ಪೂಜಾ ಪದ್ಧತಿಗಳನ್ನು ವಿಧಿ ವಿಧಾನಗಳನ್ನು ಚೈತನ್ಯ ಸ್ವಾಮಿಗಳು ನಿರ್ಣಯಿಸಿದರು. ಅಂದಿನಿಂದ ಇಂದಿನವರೆಗೂ, ಶಿವಗಿರಿಯಲ್ಲಿಯೇ ತರಬೇತು ಪಡೆದ ಅರ್ಚಕರ ಮೂಲಕವೇ ಇಲ್ಲಿ ನಿತ್ಯಪೂಜೆ ಇತ್ಯಾದಿ ವೈದಿಕ ಆಚರಣೆಗಳನ್ನು ನಡೆಯುತ್ತಾ ಬಂದಿದೆ.[೩೬] ಕುದ್ರೋಳಿಯಲ್ಲಿ ಸ್ಥಾಪನೆಯಾದ ದೇವಸ್ಥಾನ ಯಾವುದೇ ಜಾತಿಯ ಧರ್ಮದ ಅಥವಾ ವರ್ಗದ ವಿರುದ್ಧ ಸ್ಪರ್ಧೆ, ದ್ವೇಷ, ಅಸೂಯೆಯಿಂದಲ್ಲ, ಕೇವಲ ಇತರ ವರ್ಗದವರ ಮನಸ್ಸಿಗೆ ನೋವು ನೀಡದೆ ಒಂದು ವರ್ಗ ಅಭಿವೃದ್ಧಿಯತ್ತ ಮುಂದುವರಿಯಲು ಈ ದೇವಸ್ಥಾನ ಕೇಂದ್ರವಾಗಲಿ ಎಂಬ ಉದ್ದೇಶ ಈ ದೇವಸ್ಥಾನ ಪ್ರತಿಷ್ಠಾಪನೆಯ ಸಂದರ್ಭದಲ್ಲಿ ಅಂದಿನ ಮೈಸೂರು ರಾಜ್ಯದ ಇತರ ಭಾಗಗಳಿಂದಲೂ, ಈಡಿಗ ನಾಮಧಾರಿ, ಹಳೇಪೈಕ ಇತ್ಯಾದಿ ಬಿಲ್ಲವ ಸಮಾಜದ ಬಂಧುಗಳು ಆಗಮಿಸಿದರು. ಹಲವಾರು ಹೆಸರುಗಳಿಂದ ಗುರುತಿಸಲ್ಪಡುತ್ತಿದ್ದ ಈ ವರ್ಗ ನಾರಾಯಣ ಗುರುಗಳನ್ನು ತಮ್ಮೆಲ್ಲರ ಕುಲಗುರುಗಳೆಂದು ಸ್ವೀಕರಿಸಿತು. ಅರವೀಪುರಂನಲ್ಲಿ ಪ್ರಥಮವಾಗಿ ದೇವಸ್ಥಾನ ಪ್ರತಿಷ್ಠಾಪನೆ ಮಾಡಿದ ೨೪ ವರ್ಷಗಳ ಬಳಿಕ ಗುರುಗಳ ಕೃಪಾಕಟಾಕ್ಷ ಕರ್ನಾಟಕದ ಜನತೆಗೂ ತಲುಪಿತು. ಕುದ್ರೋಳಿಯ ಗೋಕರ್ಣ ನಾಥೇಶ್ವರ ಸ್ವಾಮಿ, ಕರ್ನಾಟಕದ ಲಕ್ಷಾಂತರ ಮಂದಿ ಬಿಲ್ಲವ, ಈಡಿಗ, ನಾಮಧಾರಿ ಮಾತ್ರವಲ್ಲ ಇತರ ಹಿಂದುಳಿದ ಶೋಷಿತ ವರ್ಗದವರ ಆರಾಧ್ಯದೇವನಾದ. ಕುದ್ರೋಳಿ ಕ್ಷೇತ್ರದಿಂದ ಆಧ್ಯಾತ್ಮಿಕವಾಗಿ ಶತ ಶತಮಾನದಿಂದ ಒಂದು ವರ್ಗದ ಜನರಿಗೆ ಆವರಿಸಿದ್ದ ಮೂಢನಂಬಿಕೆ, ಅನಿಷ್ಟ ಸಂಪ್ರದಾಯಗಳ ಗುಲಾಮಗಿರಿಯಿಂದ ಬಿಡುಗಡೆಯಾಯಿತು. ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ರಾಜಕೀಯ ಅಭಿವೃದ್ಧಿ ಗುರುಗಳ ಆಗಮನ ಅಂಕುರಾರ್ಪಣೆಯಾಯಿತು.[೩೭] ೧೯೨೦ರಲ್ಲಿ ಬಿಲ್ಲವರ ಯೂನಿಯನ್ ರೂಪುಗೊಳ್ಳುವ ತನಕ ಶಿವಭಕ್ತಿಯೋಗ ದೇವಸ್ಥಾನದ ಕಾರ್ಯಕಲಾಪಗಳನ್ನು ನಡೆಸಿತು. ಎಚ್. ಕೊರಗಪ್ಪನವರು ತನ್ನ ಹೆಸರಿನಲ್ಲಿದ್ದ ದೇವಸ್ಥಾನದ ಮೂಲಗೇಣಿ ಪಟ್ಟ ಮತ್ತಿನ್ನಿತರ ಸ್ಥಿರ–ಚರ ಸೊತ್ತುಗಳನ್ನು ಬಿಲ್ಲವ ಯೂನಿಯನ್‌ನ ಹೆಸರಿಗೆ ವರ್ಗಾಯಿಸಿದರು. ೧೯೪೬ರಲ್ಲಿ ದೇವಸ್ಥಾನವು ಎಂಡೋಮೆಂಟ್ ಬೋರ್ಡಿನ ಅಧೀನವಾಯಿತು.

ನಾರಾಯಣ ಗುರುಗಳು ಪ್ರತಿಷ್ಠಾಪಿಸಿದ ದೇವಾಲಯಗಳು ಹಿಂದೂ ಧಾರ್ಮಿಕ ತತ್ವಗಳ ಮುಹೂರ್ತ ರೂಪಗಳೇ

ಆಗಿ ಮೈದಳೆದಿದ್ದವು. ನಾರಾಯಣ ಗುರುಗಳಿಂದ ನಿರ್ಮಾಣಗೊಂಡ ದೇವಸ್ಥಾನಗಳು ಭಾರತವು ಕಂಡ ಅದ್ಭುತವಾದ ರಚನಾತ್ಮಕ ಮಹಾ ಕ್ರಾಂತಿಯಾಗಿತ್ತು. ಈ ಶೋಷಿತ ಜನಾಂಗಕ್ಕೆ ಅವರು ಕಳೆದುಕೊಂಡ ಶೈಕ್ಷಣಿಕ ಶಕ್ತಿಯನ್ನು, ಆತ್ಮಶಕ್ತಿಯನ್ನು, ಜ್ಞಾನಶಕ್ತಿಯನ್ನು, ಆರ್ಥಿಕ ಶಕ್ತಿಯನ್ನು, ಮಾನಸಿಕ ಸ್ಥಿರತೆಯನ್ನು ಕೊಡಿಸಲು ಸಾಧ್ಯ ಎಂದು ಗುರುಗಳು ಚೆನ್ನಾಗಿ ಬಲ್ಲವರಾಗಿದ್ದರು. ಕೇರಳ, ತಮಿಳ್ನಾಡು, ಶ್ರೀಲಂಕ ಮತ್ತು ಕರ್ನಾಟಕಗಳಲ್ಲಿ ದೇವಸ್ಥಾನಗಳ ಪ್ರತಿಷ್ಠೆಯು ಗುರುಗಳಿಂದ ಸತತವಾಗಿ ನಲ್ವತ್ತು ವರ್ಷಗಳ ತನಕ ನಡೆಯಿತು. ಗುರುಗಳು ಪ್ರತಿಷ್ಠಾಪಿಸಿದ ಬಹುತೇಕ ಮಂದಿರಗಳು ಜನಸಾಮಾನ್ಯರೇ ಒಟ್ಟಾಗಿ ಕಟ್ಟಿಕೊಂಡವುಗಳು. ಗುರುಗಳಿಂದ ದೇವರ ಪ್ರತಿಷ್ಠೆಯಾದ ನಂತರ ವರ್ಣದ್ವೇಷದ ಭಾವನೆಗಳು ಮಾಯವಾಗಿ ಅಲ್ಲಿ ಸರ್ವಜಾತಿಗಳ ಸಮನ್ವಯ ಮೈತ್ರಿ ಉಂಟಾಗುತ್ತಿದ್ದುದೇ ಆ ಪ್ರತಿಷ್ಠೆಗಳ ವಿಶೇಷವಾಗಿರುತ್ತಿತ್ತು. ಅವುಗಳು ಜನಸಾಮಾನ್ಯರಿಗೆ ಮಾನಸಿಕ, ಧಾರ್ಮಿಕ, ಸಾಂಘಿಕ, ಆರ್ಥಿಕ, ಶೈಕ್ಷಣಿಕ, ಔದ್ಯೋಗಿಕ ಶಕ್ತಿಪ್ರದಾನ ಮಾಡಿದವು. ಯಾವುದೇ ಸಮಾಜವು ಹಳೆಯ ಅನಗತ್ಯ ಜಾಡ್ಯಗಳನ್ನು ಬಿಟ್ಟು ಕೊಡಲು ಮತ್ತು ಹೊಸತನವನ್ನು ರೂಢಿಸಿಕೊಳ್ಳಲು ಶಿಕ್ಷಣವೇ ಏಕಮಾತ್ರ ಮಾಧ್ಯಮ ಎನ್ನುವುದು ನಾರಾಯಣ ಗುರುಗಳ ಖಚಿತ ಅಭಿಪ್ರಾಯವಾಗಿತ್ತು. ಅಂತೆಯೇ ಹಿಂದೂ ಧರ್ಮ ಮತ್ತು ಸಮಾಜಕ್ಕೆ ಹೊಸ ಚೇತನ ಮತ್ತು ಆಯಾಮಗಳನ್ನು ಒದಗಿಸಿದವು. ನನಗೆ ಜಾತಿಯಿಲ್ಲ. ನನಗೆ ಮತವಿಲ್ಲ ನಾನು ಯಾವುದೇ ಒಂದು ನಿರ್ದಿಷ್ಟ ಕೋಮಿಗೆ ಸೇರಿದವನಲ್ಲ ಬದಲಾಗಿ ತಾನೊಬ್ಬ ಮನುಷ್ಯ ಮಾತ್ರ ನನ್ನದೇನಿದ್ದರೂ ಮನುಕುಲವೆನ್ನುವ ಮೌಲ್ಯ ಹೊತ್ತ ಮಾತು ಅವರನ್ನು ಸಂತ ಶ್ರೇಷ್ಠರನ್ನಾಗಿಸಿದೆ.[೩೮] ಜಾತಿ ಮತಗಳಿಗಾಗಿ ಸಂಕೀರ್ಣತೆಯ ಭಾವ ತುಂಬಿ ಹೋಗುವ ಸಂದರ್ಭಗಳಲ್ಲೆಲ್ಲಾ ಗುರುವರ್ಯರ ಈ ತತ್ವ ದಾರಿದೀಪವಾಗಬೇಕಾಗಿದೆ.

ನಾರಾಯಣ ಗುರುಗಳು ಸಂಘರ್ಷಕ್ಕೆ ಎಡೆಮಾಡಿಕೊಡದ ರೀತಿಯ ಶಾಂತಿಯುತ ಕ್ರಾಂತಿಯನ್ನು ಆರಂಭಿಸಿದರು. ಸಮಾಜ ಪರಿವರ್ತನೆಯ ಅವರ ಪರಿಶ್ರಮದಲ್ಲಿ ಮಾನವೀಯ ಮೌಲ್ಯಗಳು, ಹಾಗೂ ಮಾನವ ಪ್ರೀತಿ ಆಗಾಧವಾಗಿತ್ತು. ಎಲ್ಲೂ ದ್ವೇಷಾಸೂಯೆಗಳಿಗೆ ಅವಕಾಶವಿಲ್ಲವಾಗಿತ್ತು.ಒಂದೇ ಜಾತಿ, ಒಂದೇ ದೇವರು, ಒಂದೇ ಧರ್ಮವೆನ್ನುವ ಸಾರ್ವಕಾಲಿಕ ಸತ್ಯತತ್ವ ಸಂದೇಶ ಮತ್ತು ಅನುಷ್ಠಾನ ಅವರಿಗೆ ವಿಶ್ವಮಾನ್ಯತೆಯನ್ನು ತಂದುಕೊಟ್ಟಿತ್ತು. ನಾರಾಯಣಗುರುಗಳು ಊರೂರು ಸುತ್ತಿದರು. ದಕ್ಷಿಣದ ರಾಜ್ಯಗಳನ್ನೆಲ್ಲಾ ಸಂದರ್ಶಿಸಿದರು. ಅವರು ಕಾಲಿಟ್ಟಲ್ಲೆಲ್ಲಾ ಬದಲಾವಣೆಯ ಗಾಳಿ ಬೀಸ ಹತ್ತಿತು. ಜನ ಅವರನ್ನು ಭಕ್ತಿಭಾವದಿಂದ ಕಂಡರು, ಭಕ್ತ ಸಮೂಹವಾಗಿ ಮಾರ್ಪಟ್ಟರು. ಹೋದಲ್ಲೆಲ್ಲಾ ಒಂದೇ ಜಾತಿ ಅದುವೆ ಮಾನವ ಜಾತಿಯೆನ್ನುವ ತತ್ವವನ್ನು ಪ್ರಚಾರ ಮಾಡಿದರು. ಆಧ್ಯಾತ್ಮಿಕ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ಇವರ ಕೊಡುಗೆ ಅಸಾದೃಶ್ಯವೂ ಅಗಣಿತವೂ ಆಗಿದೆ. ಜಾತಿ ಮತಗಳೊಳಗೆ ಬಂಧಿಯಾಗದೆ ಸಂಕೀರ್ಣತೆಯ ಲೇಪವಿಲ್ಲದೆ ವೈಶಾಲ್ಯತೆಯ ಲೇಪವನ್ನು ಅವರ ಬೋಧನೆಯಲ್ಲಿ ಕಾಣಬಹುದು. ಶ್ರೀ ನಾರಾಯಣ ಗುರುಗಳ ಸಮಾಜ ಪರಿವರಿವರ್ತನೆಯಲ್ಲಿನ ಹೋರಾಟವೆನ್ನುವುದು ಯಾವುದೇ ಒಂದು ಜಾತಿ ನಿರ್ದಿಷ್ಟ ಜಾತಿ ವರ್ಗ ಮತ ಧರ್ಮಗಳನ್ನು ಗುರಿಯಾಗಿಸಿಕೊಂಡದ್ದು ಅಲ್ಲವಾಗಿತ್ತು. ಹೊರತಾಗಿ ಪಾಲಿಸಿಕೊಂಡು ಮತ್ತು ನಿರ್ದೇಶಿಸಿಕೊಂಡು ಬಂದ ವ್ಯವಸ್ಥೆಯೊಂದನ್ನು ಬದಲಾಯಿಸುವುದಾಗಿತ್ತು.



## ಅಡಿಟಿಪ್ಪಣಿಗಳು

೧. ಬಾಬು ಶಿವ ಪೂಜಾರಿ, ಶ್ರೀ ನಾರಾಯಣ ಗುರು ವಿಜಯ ದರ್ಶನ್, ಬಿಲ್ಲವ ಜಾಗೃತಿ ಬಳಗ, ಮುಂಬಯಿ ೨೦೦೮, ಪು ೧೬೦.

೨. Sathya Bai Sivadas, P.Prabhakar Rao, Narayana Guru-The Social Philosopher of Kerala,Mumbai, 2007, p.11.12.

೩. ಬಾಬು ಶಿವ ಪೂಜಾರಿ, ಶ್ರೀ ನಾರಾಯಣ ಗುರು ವಿಜಯ ದರ್ಶನ್, ಬಿಲ್ಲವ ಜಾಗೃತಿ ಬಳಗ, ಮುಂಬಯಿ, ೨೦೦೮, ಪು ೧೬೪.

೪. Edgar Thurston, castes and tribes of Southern India, Vol. I, p. 243.

೫. Mysore tribes and castes, Vol II p. 290.

೬ ಶೀನಪ್ಪ ಹೆಗ್ಗಡೆ, ಪ್ರಾಚೀನ ತುಳುನಾಡು, ಪು ೧೭೪.

೭. Gururaj Bhat.P, Dakshina Kannadadha Tuluvaru, Tuluva Samskrith Mattu Parivartane, Bangalore, 2012, p. 59.

೮. ಭೂತಾರಾಧನೆಯ ಕತೆಗಳು, ನಮಿರಾಜಮಲ್ಲ ಕನ್ನಡ ಅಧ್ಯಯನ ಸಂಸ್ಥೆ, ಜಾನಪದ ಮಾಲೆ, ಪ್ರಧಾನ ಸಂಪಾದಕ ಡಾ.ಹಾ.ಮಾ. ನಾಯಕ, ೧೯೭೦ ಮೈಸೂರು ವಿಶ್ವವಿದ್ಯಾಲಯ. ಪುಟ ೩೪.

೯. ನಂದೊಳ್ಗೆ ಅಮುಣೆಂಜೆ ಗುತ್ತು ಶೀನಪ್ಪ ಹೆಗ್ದೆ, ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯರಾಯನ ಅಳಿಯ ಕಟ್ಟು, ಪುಟ ೯೬.

೧೦. ಕೆ.ವಿ. ರಮೇಶ, ತುಳುನಾಡ ಇತಿಹಾಸ, ಪುಟ ೬೫.

೧೧. 'ಪಾಡ್ದಮೊಳು', ರ. ಮ್ಯಾನರ್, ಬಾಸೆಲ್ ಮಿಷನ್, ಮಂಗಳೂರು, ಪುಟ ೧೮೮.

೧೨. ಕೆ.ವಿ. ರಮೇಶ, ತುಳುನಾಡ ಇತಿಹಾಸ, ಪುಟ ೬೮.

೧೩. ಶೀನಪ್ಪ ಹೆಗ್ಗಡೆ, ಪ್ರಾಚೀನ ತುಳುನಾಡು, ಪು. ೧೭೯.

೧೪. ತುಳುನಾಡ ಇತಿಹಾಸ, ಪುಟ, ೭೬.

೧೫. ಶೀನಪ್ಪ ಹೆಗ್ಗಡೆ ಸ.ಸಾಹಿತ್ಯ ಪುಟ ೧೬೦ & ಕಿಲ್ಲೆ ಕೃತಿ ಸಂಚಯ, ಪುಟ ೨೪೩.

೧೬. A.C.Burnell, The Devil Worship of the Tuluvas ed (from the papers of late A.C.Burnell, Mangalore, 1894-97.p.54.

೧೭. The Report of the German Evangelical Mission in South Western India, Mangalore, 1841, p. 15.

೧೮. Moorkkothu Kumaran, The Biogragphy of Sree Narayana Guru, (English) Varkala, 2008.p. 49.

೧೯. Lakshman, M.K, Sree Narayana Guru, Vishakapatnam, 2009.p. 56.

೨೦. Ramanath kotekar.Tulunadina Billavaru, Mangalore, 2012, p. 201.

೨೧. Sathya Bai Sivadas, P.Prabhakar Rao, Narayana Guru-The Social Philosopher of Kerala,Mumbai, 2007, p.p 25-27.

೨೨. Nataraja Guru Sree Narayana Guru, One Hundred Verses of Self Instruction (English), Varkala, 2006, p. 57.

೨೩. Sachidananda Swamy, Sree NarayanaGuru- The Universal Guru, Varkala, 2001.p. 4.

೨೪. Ketkar, Shridhar Venkatesh, History of caste in India, Delhi, 1990.

೨೫. Nataraja Guru, Dialectics, New Delhi, 2010, p. 78.

೨೬. Murkot Kunhappa, Sree Narayana Guru, New Delhi, 1982.

೨೭. Ramachandran,N., The Life History of Sree Narayana Guru at a glance,Chennai,1999.

೨೮. Omana,S., Philosophy of Sree Narayana Guru, ( published Ph.D Thesis) Varkala, 1984.

೨೯. Moorkkothu Kumaran, The Biogragphy of Sree Narayana Guru, (English) Varkala, 2008.

೩೦. Sathya Bai Sivadas, P.Prabhakar Rao, Narayana Guru-The Social Philosopher of Kerala,Mumbai, 2007, p.p25-27.

೩೧. Ramachandran,N., The Life History of Sree Narayana Guru at a glance,Chennai, 1999.

೩೨. ಬಿಲ್ಲವರ ಬರಿಗಳು ಎಂ.ಕೆ. ಕುಕ್ಕಾಜೆ, 'ಆಶಯ' ಸ್ಮರಣಾ ಸಂಚಿಕೆ, ಬ್ರಹ್ಮ ಶ್ರೀ ನಾರಾಯಣ ಗುರು ಮಂದಿರ ಬಂಟ್ವಾಳ, ೨೦೦೩.

೩೩. Mohan Kotian, Gurugala Padarpaneyeeendha Punyavaeethu Tulunadu, article published in Atmashaki magazine, Mangalore, 2008.

೩೪. ಬಾಬು ಶಿವ ಪೂಜಾರಿ, ಶ್ರೀ ನಾರಾಯಣ ಗುರು ವಿಜಯ ದರ್ಶನ್, ಬಿಲ್ಲವ ಜಾಗೃತಿ ಬಳಗ ಮುಂಬಯಿ ೨೦೦೮, ಪುಟ ೭೬.

೩೫. Murkot Kunhappa, Sree Narayana Guru, New Delhi, 1982.

೩೬. 'ಬಿಲ್ಲವರು ಅಂದು ಇಂದು' ಆತ್ಮಶಕ್ತಿ ಕನ್ನಡ ತ್ರೈಮಾಸಿಕ, ೨೦೦೫.

೩೭. Gopalkrishna N. Asprasshara Bhalalli Suryodayavayethu, article published in Atmashakthi magazine, Mangalore, 2008.

೩೮. Ramanath kotekar.Tulunadina Billavaru, Mangalore, 2012, p. 201.

೮೮

# ಬಳ್ಳಾರಿ ನಗರ ಪ್ರದೇಶದ ಮುಸ್ಲಿಂ ದರ್ಗಾಗಳ ಚಾರಿತ್ರಿಕ ಅಧ್ಯಯನ

ಮಕ್ಬೂಲ್ ಬೇಗಂ*

ಮಧ್ಯಕಾಲಿನ ಭಾರತ ಇತಿಹಾಸ ಪರಂಪರೆಯಲ್ಲಿ ಎಲ್ಲಾ ಧರ್ಮಗಳಿಂದ ಕೂಡಿದ್ದು ಅವುಗಳು ತಮ್ಮದೆ ಆದ ಆಚರಣೆ ಸಂಪ್ರದಾಯಗಳು ರೂಢಿಸಿಕೂಂಡಿದ್ದು ಇದಕ್ಕೆ ಉತ್ತಮ ಸಾಕ್ಷಿಯಾಗಿ ದೇವಾಲಯ ಇಗರ್ಜಿ ದರ್ಗಾಗಳು. ಕರ್ನಾಟಕವು ೩೦ ಜಿಲ್ಲೆಗಳ ಪೈಕಿ ಬಳ್ಳಾರಿಯೂ ಒಂದು. ಇದು ರಾಜ್ಯದ ಮಧ್ಯಭಾಗದ[೧] ಪೂರ್ವಕ್ಕಿದೆ. ಬಳ್ಳಾರಿ ಜಿಲ್ಲೆಯ ಮೇರೆಗಳೆಂದರೆ ಪೂರ್ವಕ್ಕೆ ಆಂಧ್ರಪ್ರದೇಶ, ಪಶ್ಚಿಮಕ್ಕೆ ಕೊಪ್ಪಳ, ಉತ್ತರಕ್ಕೆ ರಾಯಚೂರು, ದಕ್ಷಿಣಕ್ಕೆ ಚಿತ್ರದುರ್ಗವಿದೆ. ಈ ಜಿಲ್ಲೆಯು ಮೌರ್ಯರು, ಕದಂಬರ ಕಾಲದಿಂದ ಪ್ರಖ್ಯಾತಿ ಪಡೆದಿದ್ದು. ಇಲ್ಲಿ ಅನೇಕ ರಾಜಮನೆತನಗಳು ಆಳ್ವಿಕೆ ನಡೆಸಿದ್ದಕ್ಕೆ ಅನೇಕ ಶಾಸನಗಳು ಸಾಕ್ಷಿಯಾಗಿವೆ. ಬಳ್ಳಾರಿ ಜಿಲ್ಲೆಯು ಮತ್ತಷ್ಟು ಪ್ರಚಲಿತಗೊಳ್ಳಲು ವಿಜಯನಗರ ಸಾಮ್ರಾಜ್ಯವೇ ಕಾರಣ. ಹಂಪಿ ಇದರ ರಾಜಧಾನಿಯಾಗಿದ್ದು, ಇದು ಧರ್ಮಸಹಿಷ್ಣುತೆಯಿಂದ ಮೆರೆದ ಸಾಮ್ರಾಜ್ಯ. ಇಲ್ಲಿ ಎಲ್ಲಾ ಧರ್ಮ, ಜಾತಿಗಳ ಸಮಕ್ಯತೆಯನ್ನು ಕಾಣಬಹುದಾಗಿದೆ. ಇಲ್ಲಿ ಮುಸ್ಲಿಂರು ವಾಸವಾಗಿದ್ದರೆಂದು ದೃಢಪಡಿಸುವ ಆಧಾರಗಳೆಂದರೆ ಅವರ ಅಸಂಖ್ಯಾತ ಸಮಾಧಿಗಳು. ಸುಮಾರು ೧೩ನೇ ಶತಮಾನದಲ್ಲಿ ಮುಸ್ಲಿಂರು ಬಳ್ಳಾರಿ ನಗರ ಪ್ರವೇಶದಲ್ಲಿ ಸುತ್ತಮುತ್ತಲಿನ ಕಡ್ಡಿರಾಂಪುರ, ಕಮಲಾಪುರ, ಹಂಪಿಗಳಲ್ಲಿ ಮುಸ್ಲಿಂರು ವಾಸಿಸಿದ್ದರು. ಅಲ್ಲದೆ ಅವರ ಸಮಾಧಿಗಳ ದರ್ಗಾ ಪ್ರತ್ಯಕ್ಷ ಸಾಕ್ಷಿಯಾಗಿವೆ.

ಹಂಪಿಯ ಹತ್ತಿರದಲ್ಲಿರುವ "ಪೆಹಾಡ್‌ವಲಿ ದರ್ಗಾ"[೨] ಇದು ಅಹಮ್ಮದ್‌ಖಾನ್ ಇವರ ಧರ್ಮಶಾಲೆಯ ಹಿಂಭಾಗದಲ್ಲಿದೆ. ಹಜರತ್ ಸೇಲ್‌ಷಾ ಕರಾಮತ್ ಅಲ್ಲಾಹ ಷಾ ಖಾದ್‌ರಿ ಎಂಬ ಮುಸ್ಲಿಂ ಸಂತನಿದ್ದುದು ಅವನ ಸಮಾಧಿಯಿಂದ ಖಚಿತಪಡಿಸಿಕೊಳ್ಳಲಾಗಿದೆ. ಮತ್ತೊಂದು ಪ್ರಮುಖ ದಾಖಲೆ ಎಂದರೆ ತುಂಗಭದ್ರಾ ನದಿಯ ಬಲದಂಡೆಯ ಮೇಲೆ ವಿಜಯ ವಿಠಲ ದೇವಸ್ಥಾನದ ಹಿಂಭಾಗದಲ್ಲಿರುವ ಹೊಳೆ ಹೊನ್ನೂರು ಸ್ವಾಮಿ ದರ್ಗಾ. ಈ ಸಂತರು ತಮ್ಮ ಧಾರ್ಮಿಕ ಪ್ರಚಾರ ಮಾಡುತ್ತ ಕಂಪ್ಲಿ, ಬಳ್ಳಾರಿ, ಹೊನ್ನೂರು ಎಂಬ ಪ್ರದೇಶಗಳಿಗೆ ಭೇಟಿಕೊಟ್ಟಿದ್ದನ್ನು ಇವರ ಗದ್ದುಗೆಯ ಮೂಲಕ ತಿಳಿಯಬಹುದಾಗಿದೆ.

## ಬಳ್ಳಾರಿ ಜಿಲ್ಲೆಯ ದರ್ಗಾಗಳು

೧. ಹಜರತ್ ಸೈಯ್ಯದ್‌ಶಾಹ ಸದ್ರುದ್ದೀನ್ ಬಾಬಾ ಹುಸೇನಿ ಚಿಸ್ತಿವುಲ್ ಖಾದ್ರಿ

೨. ಹಜರತ್ ಖ್ವಾಜಾ ಸೈಯ್ಯದ್‌ಶಹ ಸೂಫಿ ಸರ್‌ಮಸ್ತ್ ಹಸನಿ ಚಿಸ್ತಿವುಲ್[೩] ಖಾದ್ರಿ

೩. ಹಜರತ್ ಸೈಯ್ಯದ್ ಷಾಹ ಮಕ್ದೂಮ್ ಜಾನಿ

೪. ಹಜರತ್ (ಇರಾರ್ಶಾದ್) ಇರ್ಷಾದ್ ಅಲಿ ಬಾಬಾ

೫. ಹಜರತ್ ದಿವಾನೇ ಮಸ್ತಾತಾನೆ ಬಾಬ

**ದರ್ಗಾಗಳ ಪರಂಪರೆ:** ಭಾರತದಲ್ಲಿನ ಹಿಂದೂ-ಮುಸ್ಲಿಂ ಸಾಂಸ್ಕೃತಿಕ, ಧಾರ್ಮಿಕ ನೆಲೆಯಲ್ಲಿ ದರ್ಗಾ ಪರಂಪರೆಯು ತನ್ನದೆ ಚಾಪು ಮೂಡಿಸಿವೆ. ದರ್ಗಾ ಎಂದರೆ ಪವಿತ್ರವಾದ ಧಾರ್ಮಿಕ ಸ್ಥಳ. ಜನರು ಭಕ್ತಿಯಿಂದ ತಮಗೆ ಬಂದ ಕಷ್ಟವನ್ನು ಸೂಫಿಯವರ ಬಳಿಯಲ್ಲಿ ವ್ಯಕ್ತಪಡಿಸುವ ಸ್ಥಳವೇ ದರ್ಗಾ[೪]. ಇಲ್ಲಿ ಎಲ್ಲಾ ಧರ್ಮದವರು ಮುಸ್ಲಿಂರು ಮುಸ್ಲಿಂಯೇತರರು ಬಂದು ಪ್ರಾರ್ಥನೆ, ಪೂಜೆ ಸಲ್ಲಿಸುತ್ತಾರೆ. ಅಲ್ಲದೆ ಭಾವೈಕ್ಯತೆಯ ಧಾರ್ಮಿಕ ತಾಣವಾಗಿದೆ. ಈ ದರ್ಗಾಗಳಿಗೆ ಸುಭದ್ರ ನೆಲೆಯನ್ನೊದಗಿಸಿದವರು ಸೂಫಿ ಸಂತರು. ಸಮಾಜಮುಖಿಗಳಾದ ಸೂಫಿ ಸಂತರ ತಮ್ಮ ತತ್ವಜ್ಞಾನವನ್ನು ಜನಸಾಮಾನ್ಯ,

* ಪಿಎಚ್‌ಡಿ ಸಂಶೋಧನಾ ವಿದ್ಯಾರ್ಥಿನಿ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬, ಮೊ. ೯೯೮೬೧೩೪೬೭೩

ದೀನದಲಿತರಿಗೆ ಧಾರೆಯೆರೆದರು. ಸಮಸ್ಯೆಗಳಿಂದ ಕೂಡಿದ ಜೀವನದಲ್ಲಿ ದಿಕ್ಕು ಕಾಣದೆ ನಿಂತಿರುವವರನ್ನು ಭಕ್ತಿಯ ಮಾರ್ಗದ ಮೂಲಕ ದಾರಿಯನ್ನು ತೋರಿಸುವ ಪ್ರಯತ್ನ ಸೂಫಿ ಸಂತರು ಕೈಗೊಂಡರು. ಇವರ ತಾತ್ವಿಕ ವಿಚಾರಕ್ಕೆ ಮುಗ್ಧ ಜನರು ಮಾರು ಹೋದರು. ಹೀಗೆ ಜನ ಸಮುದಾಯಗಳು ಸೂಫಿ ದರ್ಗಾಗಳಿಗೆ ಶರಣಾದರು. ಇಂತಹ ದರ್ಗಾಗಳು ಮುಸ್ಲಿಂ ಜನಾಂಗಕ್ಕೆ ಮಾತ್ರವಲ್ಲ ಭಾರತದಲ್ಲಿನ ತಳಸಮುದಾಯ ಜನರ ಐಕ್ಯತೆಯ ಕೇಂದ್ರವಾಯಿತು. ಈ ದರ್ಗಾಗಳು ಧರ್ಮ ಪ್ರಚಾರ ಮಾಡುವ ಧಾರ್ಮಿಕ ಕೇಂದ್ರಗಳಾದವು. ಇದರ ಜೊತೆಗೆ ಮುಸ್ಲಿಂ ಧರ್ಮದ ಆರಾಧನ ಕೇಂದ್ರಗಳಾದ ಅಶ್ರುಖಾನ, ಮಸೀದಿ, ಈದ್ಗಾ ಹಾಗೂ ದರ್ಗಾಗಳು, ಮುಸ್ಲಿಂ ಜನವಸತಿ ಇರುವ ನೆಲೆಗಳಿಗೆ ಸಾಕ್ಷಿಗಳಾಗಿವೆ. ಇಂತಹ ಹಲವಾರು ಸ್ಮಾರಕಗಳು ಬಳ್ಳಾರಿ ಪ್ರದೇಶದಲ್ಲಿ ಹೆಚ್ಚಾಗಿ ಕಾಣುತ್ತವೆ.

ಬಳ್ಳಾರಿಯ ಸುತ್ತಮುತ್ತಲಿನಲ್ಲಿ ಮುಸ್ಲಿಂ ಧರ್ಮ ಕಾಲಿಟ್ಟಿದ್ದು ಅರಬ್ ಹಾಗೂ ಪರ್ಶಿಯನ್ ವ್ಯಾಪಾರಗಳಿಂದ. ಮಹ್ಮದ್‌ಬಿನ್ ತುಗಲಕ್, ದಕ್ಷಿಣ ಭಾರತದ ಮೇಲೆ ದಂಡೆತ್ತಿ ಬಂದಾಗ ೧೩ನೇ ಶತಮಾನ ಪೂರ್ವದಲ್ಲಿ ಸಾವಿರಾರು ಜನರು ಮುಸ್ಲಿಂ ಸೂಫಿ ಸಂತರು ದಕ್ಷಿಣಕ್ಕೆ ಬಂದರು. ಬಿಜಾಪುರ, ಬೆಳಗಾವಿ, ಬಳ್ಳಾರಿ, ಹಂಪಿ ಮುಂತಾದ ಕಡೆ ಬಂದು ನೆಲೆಸಿದರು. ನಂತರ ತಮ್ಮ ಧರ್ಮ ಪ್ರಚಾರ ಮಾಡುತ್ತ ಇಲ್ಲಿಯೇ ಮರಣ ಹೊಂದಿದರು. ಅಲ್ಲಿಯೇ ಅವರ ಸಮಾಧಿಯನ್ನು ಮಾಡಲ್ಪಟ್ಟಿತು. ಈ ಸಂತರ ಆರಾಧನೆಗಾಗಿ ಇವರ ಅನುಯಾಯಿಗಳು ದರ್ಗಾವನ್ನು ನಿರ್ಮಿಸಿದರು. ಅವರ ಆದರ್ಶ ವಿಚಾರಗಳನ್ನು ತಮ್ಮ ಜೀವನದಲ್ಲಿ ಇಂದಿಗೂ ಪಾಲಿಸುತ್ತಿದ್ದಾರೆ.

ಸೂಫಿ ಪಂಥವು ಭಕ್ತಿಯ ಮೂಲಕ ದೇವರೊಂದಿಗೆ ಐಕ್ಯತೆಯನ್ನು ಸಾಧಿಸುತ್ತಾರೆ. ಇವರು ಅನುಭಾವಿ ತತ್ವಜ್ಞಾನಿಗಳಾಗಿದ್ದು ಸಮಾಜದ ಶಾಂತಿ ಮತ್ತು ಸ್ಥಿರತೆಯನ್ನು ಕಾಪಾಡಿ ಜನರಲ್ಲಿ ಉದ್ಭವಿಸುವ ತುಮಲಗಳಿಗೆ ಭಕ್ತಿಮಾರ್ಗವನ್ನು ಸೂಚಿಸಿ, ಅವರ ಸಮಸ್ಯೆಯನ್ನು ಪರಿಹರಿಸುತ್ತಾರೆ. ಇವರು ಆರಾಧನೆಯನ್ನು ಒಂದು ಪವಿತ್ರ ಸ್ಥಳದಲ್ಲಿ ಒಂದುಗೂಡುತ್ತ, ಬ್ರಾತೃತ್ವದ ಭಾವನೆಯನ್ನು ಬೆಳೆಸುವ ಧ್ಯೇಯವಾಗಿರಿಸಿಕೊಂಡು ತನ್ನ ಆಧ್ಯಾತ್ಮಿಕ ವಿಚಾರಗಳನ್ನು ಧಾರೆ ಎರೆಯುತ್ತಾರೆ. ಜನರ ಮೇಲೆ ಪ್ರಭಾವ ಬಿರಿ ಅವರ ಮನದಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದ್ದಾರೆ. ೧೩ನೇ ಶತಮಾನದಿಂದ ೧೫ನೇ ಶತಮಾನದವರೆಗೆ ಸೂಫಿ ಪ್ರಭಾವ ಭಾರತದಲ್ಲಿ ಹೆಚ್ಚಾಗಿತ್ತು.

ಭಾರತೀಯ ಸಮಾಜದಲ್ಲಿ ಧರ್ಮಸಹಿಷ್ಣುತೆ ಬಿಂಬಿಸುವ ಹಿನ್ನೆಲೆಯಲ್ಲಿ ಧರ್ಮವು ವ್ಯಕ್ತಿ ಒಂದು ಕಡೆ, ತತ್ವ ಇನ್ನೊಂದು ಕಡೆ. ಈ ಎರಡರ ನಡುವೆ ಸಂಪರ್ಕ ಬಿಂದುವೇ ಧರ್ಮ. ಭಾರತದ ಧಾರ್ಮಿಕ ಇತಿಹಾಸದಲ್ಲಿ ಇತಿಹಾಸದಲ್ಲಿ ಬಹಮನಿಗಳ ಮತ್ತು ಬಿಜಾಪುರಿಗಳ ಯುಗ ೨ನೇ ಇಬ್ರಾಹಿಂನ[೨] ಕಾಲವು ಮಹತ್ವಪೂರ್ಣವಾದ ಕಾಲ, ಜಾತಿ ಮತಗಳ ತಡೆಗೋಡೆಯನ್ನು ಕೆಡವಿದ ಹೊಸ ಜಾಗೃತಿಯ ಕಾಲ ಹಿಂದೂ-ಮುಸ್ಲಿಂ ಧರ್ಮಗಳು ಬೆರೆತು ಮಾನವ ಜನಾಂಗಕ್ಕೆ ಭಕ್ತಿಪಂಥ, ಸೂಫಿ ಸಿದ್ಧಾಂತ ಎಂದು ಎರಡು ಚಳುವಳಿಗಳು ಕೊಡುಗೆಯಾಗಿ ನೀಡಿದವು. ಹೀಗೆ ಹಂತಹಂತವಾಗಿ ಧಾರ್ಮಿಕ ಐಕ್ಯತೆಯ ಧ್ಯಾನದ ಕೇಂದ್ರವಾಗಿ ದರ್ಗಾಗಳು ಸೃಷ್ಟಿಯಾದವು.

ಬಳ್ಳಾರಿ ನಗರಕ್ಕೆ ೧೩ನೇ ಶತಮಾನದಲ್ಲಿ ಮೊದಲ ಭಾಗದಿಂದ ಹೈದರ್-ಟಿಪ್ಪು ಕಾಲದಲ್ಲಿಯು ಸೂಫಿ ಸಂತರು ಹೆಚ್ಚಾಗಿ ಬರಲು ಪ್ರಾರಂಭಿಸಿದರು. ಅವರಲ್ಲಿ ನಾಲ್ಕು ಸಿಲ್‌ಸಿಲೇ ಸಂಪ್ರದಾಯಗಳಿವೆ.

೧. ಸಹವರ್ದಿ ಸಂಪ್ರದಾಯ – ಬಾಗ್ದಾದ್ ಸಹಬುದ್ದಿನ್ ಸೌರೇವರ್ದಿಯ
೨. ಚಿಸ್ತಿಯ ಸಂಪ್ರದಾಯ – ಮನೆತನ ಅಜ್ಮೀರ್-ಚಿಸ್ತಿಯ ಉತ್ತರ ಭಾರತ
೩. ಖಾದ್ರಿಯಾ ಸಂಪ್ರದಾಯ – ಗೌಸೆಪಾಕ್ ತಿರುಚುನಪಲ್ಲಿಯಲ್ಲಿರುವ ನತ್ತರವಲಿ ದಕ್ಷಿಣದ ಕಡೆಯವರು
೪. ನಕ್ಷಾಬಂದಿ ಮನೆತನದವರು – ಬಾಗ್ದಾದಿನಿಂದ ಬಂದವರು

ಈ ನಾಲ್ಕು ಸಂಪ್ರದಾಯದ ಸೂಫಿಗಳಿದ್ದು ಬಳ್ಳಾರಿ ನಗರದಲ್ಲಿ ಕಂಡುಬರುವ ಹಜರತ್ ಮಕ್ತಮ್‌ಜಾನಿ, ೩೦೦ ವರ್ಷ ಹಿಂದೆ ಬಾಗ್ದಾದಿನಿಂದ ಬಂದು ನೆಲೆಸಿದವರು. ಇವರು ಬಳ್ಳಾರಿ ಗುಡ್ಡಗಳಲ್ಲಿನ ಸಣ್ಣ ಗುಹೆಯೊಂದರಲ್ಲಿ[೬] ಜೀವನಸಾಗಿಸಿದ್ದು, ಇವರು ತಮ್ಮ ಧಾರ್ಮಿಕ ತತ್ವವನ್ನು, ಜನರಿಗೆ ಬೋಧಿಸುತ್ತ ಅಲ್ಲೇ ಮರಣಹೊಂದಿದರು. ಅಲ್ಲಿಯೇ ಸಮಾಧಿಯನ್ನು ಮಾಡಿ ಈಗ ದರ್ಗಾವಾಗಿ ಮಾರ್ಪಟ್ಟಿದೆ. ಎಲ್ಲಾ ಭಕ್ತಾದಿಗಳು ಹಿಂದೂ, ಮುಸ್ಲಿಂ ಎಲ್ಲಾ ಧರ್ಮದವರು ಹೋಗಿ ಪೂಜಿಸುತ್ತಾರೆ.

ಜನರು ತನ್ನಲ್ಲಿರುವ ಭಾವನೆಗಳನ್ನು ತನ್ನ ಸಮಸ್ಯೆಗಳನ್ನು ಮುಕ್ತವಾಗಿ ಹೇಳಿಕೊಳ್ಳುವಂತ ಸ್ಥಳವೇ ಈ ದರ್ಗಾಗಳು. ಇಲ್ಲಿ ಯಾವುದೇ ರೀತಿಯ ಅಸ್ಪೃಶ್ಯತೆ, ಅಸಮಾನತೆಗೆ ಅವಕಾಶವಿಲ್ಲ. ಸರ್ವರಿಗೂ ಸ್ವಾಗತಿಸುವ ಸ್ಥಳ, ಭಕ್ತಿಯ ಸ್ಥಳ ತನ್ನ




ಭಕ್ತಿಯ ಮೂಲಕ ತನಗೆ ಬಂದ ಕಷ್ಟ ನಷ್ಟ ಅಶಾಂತಿಗೆ ಪರಿಹಾರವನ್ನು ಆಧ್ಯಾತ್ಮಿಕವಾಗಿ ಹುಡುಕಿಕೊಳ್ಳುವ ಸ್ಥಳವೇ ದರ್ಗಾಗಳು. ಇದು ತನ್ನದೇ ಔಪಚಾರಿಕ ವಿನ್ಯಾಸವನ್ನು ಹೊಂದಿರುತ್ತದೆ. ದರ್ಗಾಗಳು ಇರುವ ಕಡೆ ಮಸೀದಿಗಳು ಇರುತ್ತವೆ. ಇದನ್ನು 'ರೋಜ' ಎನ್ನುತ್ತೇವೆ.

೧. ಸಹರ್‌ವರ್ದಿಯ: ಬಾಗ್ದಾದ್‌ನ ಮನೆತದವರು ಈ ಸಂಪ್ರದಾಯಸ್ತರು ಬಾಬಾ ಫಕೃದ್ಧಿನ್ ಪೆನುಗೊಂಡ (ಆಂಧ್ರ) ಮತ್ತು ತಿರುಚಿನಪಲ್ಲಿಯಲ್ಲಿರುವ ನತ್ತರ್‌ವಲಿ ಈ ಕುಟುಂಬಕ್ಕೆ ಸೇರಿದವರು. ಸಹರ್‌ವರ್ದಿಯ ಸಂಪ್ರದಾಯದಲ್ಲಿ ಬಹಳಷ್ಟು ಜನರು ಪ್ರೀತಿಯಿಂದ ತನ್ನ ಬೌದ್ಧಿಕ ಸಾಮರ್ಥ್ಯದ ಆಕರ್ಷಣೆಯಿಂದ ಅವರಿಗೆ ಶಿಷ್ಯರನ್ನಾಗಿ ಮಾಡಿಕೊಳ್ಳಬಹುದು.

೨. ಚಿಸ್ತಿಯ ಮನೆತನ (ಸಂಪ್ರದಾಯ): ಬಳ್ಳಾರಿಯಲ್ಲಿನ ಕಮಲ್‌ಪಾಶ ಸಾಹೇಬರು ಹೇಳಿದ ಪ್ರಕಾರ ಚಿಸ್ತಿಯ ಮನೆತನವು ಅರಬ್‌ನಲ್ಲಿರುವ ಒಂದು ಪ್ರದೇಶ. ಅವರು ತನ್ನ ಧಾರ್ಮಿಕ ವಿಚಾರ ಪ್ರಚಾರ ಮಾಡುತ್ತಾ, ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಬಂದರು. ಅಜ್ಮೀರ್, ಬಿಜಾಪುರ, ಬಳ್ಳಾರಿ, ಹಂಪಿ, ಹೊಸಪೇಟೆಗೆ ಬಂದರು. ಈ ಪ್ರದೇಶಗಳಲ್ಲಿ ಹಲವು ಕಡೆ ಇವರ ಪ್ರಭಾವವನ್ನು ಕಾಣಬಹುದು.

**ಬಳ್ಳಾರಿಯಲ್ಲಿರುವ ಚಿಸ್ತಿ ಸಂಪ್ರದಾಯಕ್ಕೆ ಸೇರಿದ ದರ್ಗಾಗಳು ಎಂದರೆ**

೧. ಹಜರತ್ ಸೈಯ್ಯದ್ ಶಾಹ ಸದ್ರುದ್ದೀನ್ ಬಾಬಾ ಹುಸ್ಸೇನಿ ಚಿಸ್ತಿ–ಉಲ್–ಖಾದ್ರಿ

೨. ಹಜರತ್ ಖ್ವಾಜಾ ಸೈಯ್ಯದ್‌ಶಹ ಸೂಫಿ ಸರ್‌ಮಸ್ತ್ ಹಸ್ಸನಿ ಚಿಸ್ತಿ ಉಲ್ ಖಾದರಿ

ಹಜರತ್ ಸೈಯ್ಯದ್ ಶಾಹ ಸದ್ರುದ್ದೀನ್ ಬಾಬಾ ಹುಸ್ಸೇನಿ ಚಿಸ್ತಿ–ಉಲ್–ಖಾದ್ರಿ ಇವರು ಆದೋನಿಯಂದ ಬಂದವರು. ಇವರು ಸೈಯ್ಯದ್ ಶಾಹ ಮೀರಾಂಜಿ ಖುದಾನಮ ಹುಸ್ಸೇನಿ ಚಿಸ್ತಿಯಾ ಇವರು ಬಳ್ಳಾರಿಯಿಂದ ರೂಪನಗುಡಿಗೆ ಹೋಗುವ ದಾರಿಯಲ್ಲಿ ಅಲ್ಲಿ ಸುತ್ತಮುತ್ತಲ ಹತ್ತಿಮಿಲ್‌ಗಳಿದ್ದು ಸುಮಾರು ೩೦೦ ವರ್ಷದ ಹಿಂದೆ ಬಂದಿದ್ದರು. ಮುಜವರ್ ಆದ ಅನ್ಸರ್ ಬೇಗ್ ತಿಳಿಸಿದ್ದು ಹೈದರ್ ಅಲಿಯ ಕಾಲದ ಪೂರ್ವಕ್ಕೆ ಸಂಬಂಧಿಸಿದ್ದು ಎಂದು ಮಾಹಿತಿ ನೀಡಿರುತ್ತಾರೆ.

ಹಜರತ್ ಖ್ವಾಜಾ ಸೈಯ್ಯದ್ ಶಹ ಸೂಫಿ ಸರ್‌ಮಸ್ತ್ ಹಸ್ಸನಿ ಚಿಸ್ತಿ ಉಲ್–ಖಾದರಿ ಇವರು ದರ್ಗಾ ಹೊನ್ನೂರು,[೭] ಕನಕಲ್ ಹತ್ತಿರದಲ್ಲಿರುವ ಸೂಫಿಸಂತ. ಇವರು ಚಿಸ್ತಿಯಾ ಸಂಪ್ರದಾಯದವರಾದ ಇವರು ಬಿಜಾಪುರದ ಇಬ್ರಾಹಿಂ ಆದಿಲ್‌ಷಾನ ಕಾಲಕ್ಕೆ ಸೇರಿದ್ದು ಅಲ್ಲಿನ ಮುಜಾವರ್ ಅದ ಕಮಾಲ್ ಬಾದಶಹ ವಿಶ್ಲೇಷಿಸಿದರು. ಖ್ವಾಜಾ ಸೈಯ್ಯದ್ ಷಾಹ ಸೂಫಿ ಸರಮಸ್ತ್ ಹುಸೇನಿ ಚಿಸ್ತಿಲ್‌ಖಾದರಿ ಶಹರಲ್ ಬಿಜಾಪುರ ಮುಖಾಮ್ ಷಾಹಪುರ್ ಇಬ್ರಾಹಿಂ ಆದಿಲ್ ಷಾಹ ಮಹ್ಮದ್ ಕಾಲದವರಾಗಿದ್ದು ಇವರ ಖಲಿಫನಾಗಿ ಮುಂದೆ ಖ್ವಾಜಾ ಸೈಯ್ಯದ್‌ಷಾಹ ಅಮೀನುದ್ದೀನ್ ಅಲಿ ಅಲ್ಲಾ ಎಂಬುವರು ಹೊನ್ನೂರುನಲ್ಲಿ ವಾಸವಾದರು. ಇಲ್ಲಿ ಎಲ್ಲಾ ಜನವರ್ಗಗಳು ಹೋಗಿ ಭಕ್ತಿಯಿಂದ ತನ್ನ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವರು. ಇದು ದರ್ಗಾ ಹೊನ್ನೂರು ಎಂದು ಪ್ರಸಿದ್ಧಿಯಾಗಿದ್ದು ಇವರ ಸ್ವಲ್ಪ ಹತ್ತಿರದಲ್ಲಿ ಮಾಲಾದಲ್ಲಿ ಇಮಾಮ್‌ಸಾಹೇಬ್ ಎಂಬ ದರ್ಗಾವಿದೆ. ಆದರೆ ಅದರ ಬಗ್ಗೆ ಸಂಪೂರ್ಣ ಮಾಹಿತಿ ಸಿಗದ ಕಾರಣ ಇನ್ನು ಅದು ಮರೀಚಿಕೆಯಾಗಿದೆ.

ಹಜರತ್ ಖ್ವಾಜಾ ಸೈಯ್ಯದ್ ಶಹ ಸೂಫಿ ಸರ್‌ಮಸ್ತ್ ಹಸನಿ ಚಿಸ್ತಿ ಹೊನ್ನೂರಿಗೆ ಬಂದು ಐಕ್ಯಯಾಗುವುದಕ್ಕಿಂತ ಪೂರ್ವದಲ್ಲಿ ಖ್ವಾಜಾ ಸೈಯ್ಯದ್ ಷಾ ಅಮೀನುದ್ದೀನ್ ಅಲಿ ಅಲಾ ಇವರಿಗೆ ಇಬ್ಬರು ಶಿಷ್ಯರು. ಒಬ್ಬ ಶಿರಹಟ್ಟಿ ಪಕೀರೇಶ, ಮತ್ತೊಬ್ಬ ಹೊನ್ನುರುವಲಿ ಸ್ವಾಮಿ. ಇವರು ಹುಲಿಗಿ, ಹಂಪಿಯ ತುಂಗಭದ್ರಾ ನದಿ ಸಮೀಪ ಇರುವ ವಿಜಯ ವಿಠಲ

ದೇವಸ್ಥಾನದ ಹತ್ತಿರ ತಂಗಿದ್ದರು. ಇಲ್ಲಿ ಇವರ ತೋರುಗದ್ದುಗೆಯೊಂದು ಇದ್ದು ದರ್ಗಾ ಇದ್ದಿತ್ತು. ಆದರೆ ಈಗ ಅದು ಸರ್ಕಾರದ ಅಧೀನವಾದ್ದರಿಂದ ಈಗ ಪ್ರವೇಶಕ್ಕೆ ಅವಕಾಶವಿಲ್ಲ. ಇವರನ್ನು ಹಿಂದೂಗಳು ಪೂಜಿಸುತ್ತಿದ್ದರು. ಇವರು ಬಳ್ಳಾರಿ ಗಡಿ ಭಾಗದ ಹೊನ್ನುರು ಗ್ರಾಮದಲ್ಲಿ ಐಕ್ಯವಾಗುತ್ತಾರೆ. ಇದರ ಸುತ್ತಲು ಹಗರಿ ನದಿ ಹರಿಯುತ್ತಿದ್ದು ಇಲ್ಲಿ ಇವರ ಮೂಲ ಗದ್ದುಗೆ ಇದೆ. ಎಲ್ಲಾ ಭಕ್ತಾದಿಗಳು ಸೇರಿ ಸೂಫಿ ಸಂತನ ಮರಣ ಹೊಂದಿದ ದಿನ ಅಥವಾ ಜನ್ಮದಿನವನ್ನು ಉರುಸ್ ಎಂದು ಆಚರಿಸುತ್ತಾರೆ. ಇವರು ಉರುಸ್ ಜಮಾದಿಲ್ ಔವಲ್‌ನಲ್ಲಿ ಇವರ ಉರುಸು ನಡೆಯುತ್ತದೆ. ಮುಸ್ಲಿಂ ಕ್ಯಾಲೆಂಡರಿನ ೫ ತಿಂಗಳು ಅಂದರೆ ಜನವರಿಯಲ್ಲಿ ಆಚರಣೆ ಮಾಡಲಾಗುತ್ತದೆ. ಈ ದರ್ಗಾದ ವಿಶೇಷ ಇಲ್ಲಿ, ಹಸುವನ್ನು(ಆಕಳು) ಪೂಜಿಸಲಾಗುತ್ತದೆ, ಈ ಸಂತರಿಗೆ ಹಾಲುಕೂಟ್ಟ ಗೋವಿನ ಸಮಾಧಿ ಇರುವುದು ಇದಕ್ಕೆ ಸಾಕ್ಷೀಯಾಗಿದೆ. ಅಲ್ಲದೆ ಈ ಸೂಫಿ ಸಂತರನ್ನು ಪೂಜಿಸುವವರು ಗೋಮಾಂಸವನ್ನು ಸೆವಿಸುವುದಿಲ್ಲಾ, ನಂತರದ ದಿನಗಳಲ್ಲಿ ಮುಸ್ಲೀಂಮತಸ್ವಿಕರಿಸಿದ ಜನಸಮುದಾಯಗಳು ಗೋಮಾಂಸವನ್ನು ಸೇವಿಸಿದರು.

**ಮಕ್ದೂಮ್‌ಜಾನಿ ದರ್ಗಾ:** ಹಜರತ್ ಸೈಯ್ಯದ್ ಷಾಹ ಮಕ್ದೂಮ್ ಜಾನಿ ಇವರು ಖಾದ್ರಿಯ ಮತ್ತು ಸಹರ್‌ವರ್ದಿಯ ಸಿಲ್‌ಸಿಲೆಗೆ ಸೇರಿದವರು. ಇವರು (ಇರಾನ್) ಬಾಗ್ದಾದ್‌ನಿಂದ ಧರ್ಮ ಪ್ರಚಾರ ಮಾಡುತ್ತ ಕಾಲಾಂತರಗಳಲ್ಲಿ ಬಂದು ನೆಲೆಸಿದವರು ಹಜರತ್ ಸೈಯ್ಯದ್‌ಷಾಹ ಮಕ್ದೂಮ್ ಜಾಹನಿಯವರು, ಇವರು ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ಬಂದು ಬಳ್ಳಾರಿಯಲ್ಲಿರುವ ಮಿಲ್ಲರ್‌ಪೇಟ್ ಎಂಬಲ್ಲಿ ಗುಡ್ಡಗಾಡು ಪ್ರದೇಶವಾಗಿದ್ದ ಈ ಪ್ರದೇಶದಲ್ಲಿ ಒಂದು ಗುಹೆಯಲ್ಲಿ ವಾಸವಾಗಿದ್ದರು. ಆ ಗುಹೆಯನ್ನು ನಾವು ಈಗಲು ಅಲ್ಲಿ ಕಾಣಬಹುದಾಗಿದೆ. ಹೀಗೆ ಹಲವು ಜನವರ್ಗಗಳು ಜಾತಿ, ಧರ್ಮ ಭೇದವಿಲ್ಲದೆ ಎಲ್ಲರೂ ಬಂದು ಪ್ರಾರ್ಥಿಸಿಕೊಳ್ಳುವ ದರ್ಗಾವಿದೆ. ಇವರ ಉರುಸು ಉರ್ದು ದಿನಮಾನದಂತೆ ಜಮದುಲ್ ಅಖೀರ್ ಅಂದರೆ ೬ನೇ ತಿಂಗಳಿನಲ್ಲಿ ಅವರ ಉರುಸನ್ನು ಆಚರಣೆ ಮಾಡಲಾಗುತ್ತದೆ.

ಮುಸ್ಲಿಂ ಮಹಿಳೆಯರಿಗೆ ದರ್ಗಾದ ಒಳಪ್ರಾಂಗಣಕ್ಕೆ ಪ್ರವೇಶವಿಲ್ಲ. ಏಕೆಂದರೆ ಅವರಲ್ಲಿ ನೈಸರ್ಗಿಕವಾದ ದೈಹಿಕ,ಆಂತರಿಕ ಬದಲಾವಣೆಗಳೆ ಕಾರಣ ಎನ್ನಲಾಗಿದೆ. ಈ ನಿಯಮ ಸಣ್ಣಮಕ್ಕಳಿಗೆ ಹಿರಿಯ ಮಹಿಳೆಯರಿಗೆ ಅನ್ವಯಿಸುವುದಿಲ್ಲ ಹಾಗಾಗಿ ಇವರಿಗೆ ಮುಕ್ತ ಪ್ರವೇಶವಿದೆ. ಹೀಗೆ ಹಲವು ಧಾರ್ಮಿಕ ಆಚರಣೆ, ಸಂಪ್ರದಾಯಗಳು ದರ್ಗಾಗಳಲ್ಲಿ ಆಚರಿಸಲಾಗುತ್ತದೆ. ಮುಸ್ಲಿಂ ಮತ್ತು ಮುಸ್ಲಿಂಯೇತರ ಬಂಧುಗಳಲ್ಲಿ ಈಗಿನ ದಿನಮಾನಗಳಲ್ಲಿಯೂ ಧಾರ್ಮಿಕ ಭ್ರಾತೃತ್ವ ಕಾಣಬಹುದು. ಹೀಗೆ ಕಾಲಾಂತರದಿಂದ ಹಲವು ಸ್ಥಿತ್ಯಂತರದಿಂದ ಕೆಲವರು ಆಚರಣೆ ಸ್ಥಗಿತಗೊಳಿಸಿದರು. ಕೆಲವರು ಬಹಳ ಭಕ್ತಿಯಿಂದ ಈ ಸಂಪ್ರದಾಯವನ್ನು ಮುಂದುವರೆಸಿಕೊಂಡು ಹೋಗುತ್ತಿರುವುದನ್ನು ಕಾಣಬಹುದಾಗಿದೆ. ಭಕ್ತಿಯಿಂದ ತನ್ನ ಆಧ್ಯಾತ್ಮಿಕ ಚಿತ್ತವನ್ನು ಕೇಂದ್ರೀಕರಿಸಿ ಮನುಷ್ಯನು ತನ್ನ ಜೀವನವನ್ನು ಸತ್ಯದ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತದೆ. ಇಂತಹ ಮಾರ್ಗವನ್ನು ಸೂಫಿ ಸಂತರ ದರ್ಗಾಗಳ ಸಾಂಸ್ಕೃತಿಕ ಆಚರಣೆಗಳ ಮೂಲಕ ತಿಳಿಯಪಡಿಸುತ್ತಾರೆ.



## ಆಕರ ಗ್ರಂಥಗಳು


೧. ಪ್ರೊ. ವೈ. ಹನುಮಂತರೆಡ್ಡಿ, ಬಳ್ಳಾರಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ೨೦೦೮, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ಪು. ೬.

೨. ಅಕ್ತರ್‌ಖಾನ್ ಹೆಚ್.ಎಸ್., ವಿಜಯನಗರ ಪಟ್ಟಣದಲ್ಲಿ ಮುಸ್ಲಿಂ ಸಂಸ್ಕೃತಿ, ೨೦೧೭, ಅನಿಕೇತನ ಪುಸ್ತಕ, ಬೆಂಗಳೂರು, ಪು. ೫೫.

೩. Gazetteer of India Government Govt of Karnataka W. Farncis, John Kelsall (Bellary Manuval 1872, Chapter XV, Page 296 (3395 Index).

೪. ವಿಶ್ವ ಭ್ರಾತೃತ್ವದ ಸೂಫಿ ದೂದಫೀರಾಂ, ಎ.ಎಸ್. ಮಕಾನದಾರ, ಎಂ.ಆಯ್. ಕಣಕೆ, ೨೦೦೫, ದೂದಪೀರಾಂ ಪ್ರಕಾಶನ, ಲಕ್ಷ್ಮೇಶ್ವರ, ಪು. ೨೭.

೫. ಕರ್ನಾಟಕ ಚರಿತ್ರೆ, ಸಂಪಾದಕರು ಪ್ರೊ.ಬಿ. ಷೇಕ್‌ಅಲಿ, ೨೦೧೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೩೬೧.

೬. Gazetteer of India Government Govt of Karnataka W. Farncis, John Kelsall (Bellary Manuval 1872, Lowernce asylum Press, Madras, Chapter XV, Page 222.

೭. ಹಜರತ್ ಖ್ವಾಜಾ ಸೈಯ್ಯದ್ ಷಾಹ ಸೂಫಿ ಸರ್‌ಮಸ್ತ್ ಹಸನಿ ಚಿಸ್ತಿ ಖಾದ್ರಿ ರಹಮತುಲ್ಲಾ, ೨೦೦೭, ಅಲ್‌ಹಜ್ ಖ್ವಾಜಾ ಸೈಯ್ಯದ್ ಚಿಸ್ತಿ ಹೊನ್ನೂರು ಖಾದ್ರಿ ಅಲ್ ಬಾಗ್ದದೀ ಸಾಬ್‌ರಿ, ಲಕ್ಕಿ ಪ್ರಿಂಟಿಂಗ್ ಪ್ರೆಸ್, ಹೈದ್ರಾಬಾದ್, ಪು. ೧.

೮೯

# ಕೊಪ್ಪಳದ ಸಿರಸಪ್ಪಯ್ಯನ ಮಠ

ಜೆ. ಶಿವಪ್ಪ*

**ಭಾ**ರತ ಬಹು ಧರ್ಮಗಳ, ಸಮುದಾಯಗಳ, ಸಂಸ್ಕೃತಿಗಳ ದೇಶ. ಬಹು ಮತ –ಧರ್ಮಗಳಿರುವುದರ ಹಿನ್ನೆಲೆಯಲ್ಲಿ ನೂರಾರು ಸಂಪ್ರದಾಯ, ಆಚರಣೆ, ನಂಬಿಕೆ, ನಿಷೇಧಗಳು ಅನಾದಿಕಾಲದಿಂದಲೂ ಮುಂದುವರಿದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಪ್ರತಿಯೊಂದು ಧರ್ಮಾನುಸಾರವಾಗಿ ವಿಭಿನ್ನ ಮಂದಿರ–ಮಠಗಳ ನಿರ್ಮಾಣವಾದವು. ಆ ಮೂಲಕ ತಮ್ಮ ಧಾರ್ಮಿಕ ಸಂಪ್ರದಾಯಾಚರಣೆಗಳನ್ನು ನೆರವೇರಿಸುವ ಮೂಲಕ ಮುಂದಿನ ತಲೆಮಾರಿಗೆ ಹಸ್ತಾಂತರಿಸುವ ಕಾರ್ಯ ಸಾವಿರಾರು ವರ್ಷಗಳಿಂದ ನಡೆದುಕೊಂಡು ಬಂದಿರುವುದನ್ನು ಕಾಣಬಹುದು. ಆಯಾ ಧರ್ಮದವರು ಅವರದೇ ಆದ ಅನನ್ಯತೆ – ಅಸ್ಮಿತೆಯನ್ನು ಉಳಿಸಿ ಬೆಳೆಸುವ ಸಂಬಂಧ ತಮ್ಮ ಧಾರ್ಮಿಕ ಕೇಂದ್ರಗಳನ್ನು ಸ್ಥಾಪಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಕಾಲಾಂತರದಲ್ಲಿ ಧರ್ಮ – ಧರ್ಮಗಳ ಮಧ್ಯೆ ಕಲಹಗಳುಂಟಾದಂತೆ ಸೌಹಾರ್ದತೆಯಿಂದಲೂ ಜೀವಿಸುತ್ತ ಬಂದಿರುವುದಕ್ಕೆ ಅನೇಕ ಉದಾಹರಣೆಗಳನ್ನು ನೀಡಬಹುದು. ವಿವಿಧ ಧರ್ಮಗಳು ಒಂದೇ ಧಾರ್ಮಿಕ ಕೇಂದ್ರದಲ್ಲಿ ತಮ್ಮಿಷ್ಟದಂತೆ ಪೂಜೆ ಸಲ್ಲಿಸಿ ಕೃತಾರ್ಥರಾಗುವುದನ್ನು ನಾಡಿನಾದ್ಯಂತ ಕಾಣುತ್ತೇವೆ. ಅಂತಹ ಭಾವೈಕ್ಯತೆಯ ಕೇಂದ್ರಗಳಲ್ಲಿ ಕೊಪ್ಪಳದ ಸಿರಸಪ್ಪಯ್ಯನ ಮಠ ಒಂದು.

ಕೊಪ್ಪಳದ ದಕ್ಷಿಣ ದಿಕ್ಕಿನಲ್ಲಿ ಹಿಂದೂ ಮುಸ್ಲಿಮರ ಭಾವೈಕ್ಯತೆಯ ಸಂಕೇತದಂತೆ ಸಿರಸಪ್ಪಯ್ಯನ ಮಠವಿದೆ. ಶಿರಹಟ್ಟಿಯ ಫಕೀರೇಶ್ವರ ಮಠ, ನವಲಗುಂದ ನಾಗಲಿಂಗಪ್ಪನ ಮಠ, ಸಾವಳಗಿಯ ಶಿವಲಿಂಗೇಶ್ವರ ಮಠಗಳ ಹಾಗೇ ಇದೂ ಕೂಡ ಹಿಂದೂ ಮುಸ್ಲಿಂ ಶಿಲ್ಪಕಲೆಯಿಂದ ಕೂಡಿದೆ. ಇಲ್ಲಿಯ 'ವಂಶಾವಳಿ'ಯಲ್ಲಿ ಇದನ್ನು 'ದರಗಾಮಠ'ವೆಂದೇ ಕರೆಯಲಾಗಿದೆ. ಮಠದ ಒಳಭಾಗವು ವಿಶಾಲವಾಗಿ, ಆಕರ್ಷಕವಾಗಿದೆ. ಅದನ್ನು ಕಟ್ಟಲು ಹೊಯ್ಸಳ ಮಾದರಿಯ ದೇವಾಲಯದ, ಸಾಣೆ ಹಿಡಿದ, ಕಪ್ಪು ಶಿಲೆಯ ಎರಡು ಕಂಬಗಳನ್ನು ಬಳಸಿಕೊಂಡು ಮುಸ್ಲಿಂ ಮಾದರಿಯಲ್ಲಿ ಈ ಕಟ್ಟಡವನ್ನು ಕಟ್ಟಲಾಗಿದೆ. ಅದರ ಪ್ರವೇಶ ದ್ವಾರವೂ ಭವ್ಯವಾದ ಮುಸ್ಲಿಂ ಕಲಾಮಾದರಿಯನ್ನು ಹೊಂದಿದೆ.

ಮಂದಿರದ ಒಳಗಡೆ ಒಟ್ಟು ಮೂರು ಗರ್ಭಗುಡಿಗಳಿದ್ದು ಮಧ್ಯದ ಗರ್ಭಗುಡಿಯಲ್ಲಿ ಸಿರಸಪ್ಪಯ್ಯನವರು ಸಜೀವ ಸಮಾಧಿ ಹೊಂದಿದರೆಂದು ಹೇಳಲಾಗುತ್ತಿದೆ. ಸಮಾಧಿಯ ಮೇಲೆಯೇ ಗದ್ದುಗೆಯನ್ನು ಗೋರಿ ರೂಪದಲ್ಲಿ ಕಟ್ಟಿ ಹಸಿರು ಹೊದಿಕೆ ಹಾಕಿರುವುದು ಇಲ್ಲಿಯ ವಿಶೇಷ. ದಿನಂಪ್ರತಿ ಈ ಗದ್ದುಗೆಗೆ ಅಭಿಷೇಕ ಮಾಡಿ, ಲೋಬಾನ ಹಾಕಿ, ಮಂಗಳಾರತಿ ಮಾಡಲಾಗುತ್ತದೆ. ಶ್ರಾವಣ ಮಾಸದಲ್ಲಿ ಇಡೀ ತಿಂಗಳು ರುದ್ರಾಭಿಷೇಕ ಮಾಡುವರು. ಎಡಬದಿಯ ಗರ್ಭಗುಡಿ ಖಾಲಿ ಇದ್ದು, ಬಲಬದಿ ಗರ್ಭಗುಡಿಯಲ್ಲಿ ಸಿರಸಪ್ಪಯ್ಯನ ಮನೆತನದ ಮನೆದೇವರಾದ ಹಳಕಟ್ಟಿ ವೀರಭದ್ರನ ದೊಡ್ಡ ತಾಮ್ರಫಲಕವನ್ನಿಟ್ಟು ಪೂಜಿಸಲಾಗುತ್ತದೆ. ಅಲ್ಲದೆ ವರ್ಷಕ್ಕೊಮ್ಮೆ ಈ ವಂಶದವರ ಇನ್ನೊಂದು ಮನೆದೇವರಾದ ಶ್ರೀಶೈಲ ಮಲ್ಲಿಕಾರ್ಜುನನಲ್ಲಿಗೆ ಹೋಗಿ ಬರುವ ಸಂಪ್ರದಾಯ ಈಗಲೂ ಇದೆ. ದೊರೆತಿರುವ 'ವಂಶಾವಳಿ'ಯ ಮೇಲ್ಭಾಗದಲ್ಲಿ 'ಶ್ರೀಶೈಲಗುರುವರ ಪ್ರಸನ್ನ' ಎಂದಿರುವುದು ಆ ಸ್ಥಳದೊಂದಿಗೆ ಇವರು ಹೊಂದಿರುವ ಸಂಬಂಧವನ್ನು ದೃಢಪಡಿಸುತ್ತದೆ.

ಮಠದ ಮುಂದಿನ ಆವರಣ ಬಯಲಾಗಿದ್ದು ಅದರ ಮುಂಭಾಗದಲ್ಲಿ ಕಲ್ಲಿನಲ್ಲಿ ಕಟ್ಟಲಾದ ಮಹಾದ್ವಾರವೂ ಮುಸ್ಲಿಂ ಕಲಾ ಮಾದರಿ ಹೊಂದಿದೆ. ಮಠದ ಆವರಣದಲ್ಲಿ ಒಂದು ಹಳೆಯ ಶಿವ ದೇವಾಲಯವಿದ್ದು ಒಳಗೆ ಲಿಂಗ, ಎದುರು ಬಸವಣ್ಣನ ವಿಗ್ರಹಗಳಿವೆ. ಮಠದ ಆವರಣದಲ್ಲಿ ಸಿರಸಪ್ಪಯ್ಯನ ಗದ್ದುಗೆಯ ಹಾಗೆಯೇ ಇರುವ ಎರಡು ಮೂರು ಗದ್ದುಗೆಗಳಿವೆ. ಸಿರಸಪ್ಪಯ್ಯನ ಮಠದ ಸಮೀಪದಲ್ಲಿಯೇ ಇತ್ತೀಚೆಗೆ ಕಟ್ಟಲಾದ ಶ್ರೀ ಕಾಳಿಕಾದೇವಿಯ ಗುಡಿಯಿದ್ದು ಅಲ್ಲಿ ಪೂಜೆಗೊಳ್ಳುತ್ತಿದ್ದಾಳೆ.

ಅಕ್ಕಸಾಲಿಗ ಮನೆತನಕ್ಕೆ ಸೇರಿದ ತಿಂಥಿಣಿಯ ಮೋನಪ್ಪಯ್ಯನ ವಂಶಸ್ಥರಾದ ಸಿರಸಪ್ಪಯ್ಯನವರನ್ನು 'ವಂಶಾವಳಿ'ಯಲ್ಲಿ

* ಪೋಸ್ಟ್ ಡಾಕ್ಟರಲ್ ಫೆಲೋ, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಮೊ. ೯೪೮೨೯೮೮೩೫



ಸಿರಸಪ್ಪಯ್ಯನ ದೇವಸ್ಥಾನದ ಮುಂಭಾಗ



ಸಿರಸಪ್ಪಯ್ಯನ ಮಠ



ಸಿರಸಪ್ಪಯ್ಯನ ಗದ್ದುಗೆ



ಸಿರಸಪ್ಪಯ್ಯನ ಮುಂಭಾಗದಲ್ಲಿರುವ ಸಮಾಧಿಗಳು

'ಶ್ರೀ ವಿಶ್ವಕರ್ಮ ಪಂಚಾಲ ಬ್ರಾಹ್ಮಣ'ರು ಎಂದು ಕರೆಯಲಾಗಿದೆ. ಇವರು ಮೂಲತಃ ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನ ಲೆಕ್ಕಿಹಾಳ ಗ್ರಾಮದವರು. ಇವರು ಬಾಲ್ಯದಲ್ಲಿಯೇ ವೈರಾಗ್ಯ ತಾಳಿ, ೧೨ನೆಯ ವರ್ಷಕ್ಕೆ ಮೋನಪ್ಪಯ್ಯನವರಿಂದ ಉಪನಯನ ಹೊಂದಿ ಕಾಲ್ನಡಿಗೆಯಲ್ಲಿ ಸಂಚಾರ ಹೊರಟು ಶ್ರೀಶೈಲ, ಹಂಪಿ ಮೊದಲಾದ ಕ್ಷೇತ್ರಗಳಿಗೆ ಸಂದರ್ಶನವಿತ್ತರು. ಹೈದರಾಬಾದ್ ಮುಂತಾದ ಸ್ಥಳಗಳನ್ನೆಲ್ಲ ಸುತ್ತಿ ಅಲ್ಲಿಯ ಮುಸ್ಲಿಂ ಅರಸರ ಮೆಚ್ಚುಗೆ ಪಡೆದು ಕೊಪ್ಪಳಕ್ಕೆ ಬಂದರು. ಇದೇ ಇವರು ಮುಸ್ಲಿಂ ಆಚರಣೆಗಳ ಪ್ರಭಾವಕ್ಕೆ ಒಳಗಾಗಲು ಮತ್ತು ಮುಸ್ಲಿಂ ಶೈಲಿಯ ದೇವಾಲಯ ನಿರ್ಮಾಣವಾಗಲು ಕಾರಣವಾಗಿರಬೇಕು.

ಒಮ್ಮೆ ಸಿರಸಪ್ಪಯ್ಯನ ಮಠದ ಬಾವಿಯಲ್ಲಿ ಎರಡು ಅಲೈದೇವರು ಸಿಗಲು ಅವನ್ನು ಸಿರಸಪ್ಪಯ್ಯನ ಗದ್ದುಗೆಯ ಹಿಂದಿನ ಮಾಡದಲ್ಲಿಟ್ಟು ದಿನಂಪ್ರತಿ ಪೂಜಿಸಿದರಲ್ಲದೆ ಮೊಹರಂ ಹಬ್ಬ ಬಂದಾಗ ದೇವರನ್ನು ಕೂಡಿಸುವ ಪದ್ಧತಿಯೂ ಪ್ರಾರಂಭವಾಯಿತು. ರಜಾಕಾರರ ಹಾವಳಿಯ ತರುವಾಯ ಈ ಸಂಪ್ರದಾಯ ನಿಂತುಹೋಗಿದೆ. ಆದರೆ ಕತಲ್‌ರಾತ್ರಿ ದಿನ ಸಿರಸಪ್ಪಯ್ಯನ ಕಾರ್ಣಿಕ ನಡೆಯುತ್ತದೆ. ಮೊಹರಂ ಹಬ್ಬದ ಸಂದರ್ಭದಲ್ಲಿ ಹಿಂದೂ ಮುಸ್ಲಿಂ ಎಂಬ ಭೇದಭಾವವಿಲ್ಲದೆ ಈ ಮಠಕ್ಕೆ ರಾಜ್ಯದ ಎಲ್ಲಾ ಭಾಗಗಳಿಂದಲೂ ಜನರು ಆಗಮಿಸಿ ಸಕ್ಕರೆ ಓದಿಸಿ, ಕಾಯಿ-ಕರ್ಪೂರ ಮಾಡಿಸಿ, ಭಕ್ತಿಯ ಸೇವೆ ಸಲ್ಲಿಸಿ ಪುನೀತರಾಗುತ್ತಾರೆ. ಉಳಿದ ದಿನಗಳಲ್ಲೂ ಭಕ್ತರ ಸಮೂಹ ಈ ಮಠಕ್ಕೆ ಆಗಮಿಸಿ ತಮ್ಮ ಭಕ್ತಿಯ ಸೇವೆ ಸಲ್ಲಿಸುತ್ತಿರುವುದನ್ನು ನಿರಂತರ ಕಾಣಬಹುದಾಗಿದೆ.

ಈ ಕಾಲಮಾನದಲ್ಲಿ ಏನೋ ದೋಷವಿದ್ದಂತಿದೆ. ಏಕೆಂದರೆ ಸಿರಸಪ್ಪಯ್ಯನ ಗುರು ಮೋನಪ್ಪಯ್ಯನ ಕಾಲ ಸು. ೧೫೨೦ ಎಂದು ನಿರ್ಧಾರಿತವಾಗಿದೆ. ಹೀಗಾಗಿ ಇದು ೧೬ನೇ ಶತಮಾನದ ತರುವಾಯದ್ದು; ಮಠದ ಕಟ್ಟಡವೂ ಇದಕ್ಕೆ ಪುಷ್ಟಿಯನ್ನೀಯುತ್ತದೆ.



## ಆಕರ ಗ್ರಂಥಗಳು


೧. ಸಿದ್ಧಲಿಂಗಪ್ಪ ಕೊಟ್ನೇಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ, ಮೇಘನಾ ಪ್ರಕಾಶನ, ಕೊಪ್ಪಳ, ೨೦೧೦.

೨. ಅಲ್ಲಮಪ್ರಭು ಬೆಟ್ಟದೂರು ಮತ್ತು ಎಚ್.ಎಸ್. ಪಾಟೀಲ(ಸಂ), ಕೊಪ್ಪಳ ಜಿಲ್ಲೆಯ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫.

೩. ಎಚ್.ಎಸ್. ಪಾಟೀಲ(ಸಂ), ಕೋಪಣಸಿರಿ (ಕೊಪ್ಪಳ ಜಿಲ್ಲಾ ಅಧ್ಯಯನ), ಅಖಿಲ ಭಾರತದ ೭೮ನೇ ಕನ್ನಡ ಸಾಹಿತ್ಯ ಸಮ್ಮೇಳನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧.

# ಮೂಡುಬಿದಿರೆಯ ಚೌಟರ ಅರಮನೆ

**ಸನ್ಮತಿಕುಮಾರ್**[*]

**ಪ್ರಾ**ಚೀನ ತುಳುನಾಡಿನ ಐತಿಹಾಸಿಕ, ಸಾಂಸ್ಕೃತಿಕ ಕೇಂದ್ರಗಳ ಪೈಕಿ ಮೂಡುಬಿದಿರೆಗೊಂದು ವಿಶಿಷ್ಠ ಸ್ಥಾನವಿದೆ. 'ತುಳು ದೇಶಕ್ಕೆ ವಿಶಿಷ್ಟ ನಗರವಾಗಿ' 'ಜಿನಧರ್ಮದಾಗರವಾಗಿ' ಮೂಡುಬಿದಿರೆಯು ಅವಿಭಜಿತ ದಕ್ಷಿಣ ಕನ್ನಡಜಿಲ್ಲೆಯ, ಕರಾವಳಿ ಕರ್ನಾಟಕದ ಇತಿಹಾಸ, ಸಂಸ್ಕೃತಿ, ಸಾಹಿತ್ಯ, ಕಲೆ, ವಾಸ್ತು ಶಿಲ್ಪಗಳಿಗಿತ್ತ ಕೊಡುಗೆ ಅಪಾರವಾದದ್ದು. ಇಲ್ಲಿ ಕಂಡುಬರುವ ನೂರಾರು ಶಿಲಾಶಾಸನಗಳು, ದೇವಾಲಯಗಳು, ಬಸದಿಗಳು, ಕೆರೆಗಳು, ನಿಶಿಧಿಗಳು, ಅರಮನೆ, ಸಮಾಧಿಗಳು ಹಾಗೂ ಅನೇಕ ಸ್ಮಾರಕಗಳು ಈ ನಗರವನ್ನುಕಂಡು ಸಾಂಸ್ಕೃತಿಕ ಸಮೃದ್ಧಿಯ ಕಥೆಯನ್ನು ನಮ್ಮ ಮುಂದೆತೆರೆದಿಡುತ್ತವೆ.

ಮೂಡುಬಿದರೆಯಲ್ಲಿರುವ ಪ್ರಮುಖ ಸ್ಮಾರಕಚೌಟರಅರಮನೆ.ಈ ಅರಮನೆಯು ವಾಸ್ತುಶಿಲ್ಪದ ದೃಷ್ಟಿಯಿಂದ ಮಹತ್ವವಾದದ್ದು. ಮೊದಲಿಗೆ ಪುತ್ತಿಗೆಯನ್ನು ರಾಜಧಾನಿಯನ್ನಾಗಿಸಿಕೊಂಡು ಆಳ್ವಿಕೆ ನಡೆಸುತ್ತಿದ್ದ ಚೌಟರಸರು ಕಾಲಾಂತರದಲ್ಲಿ ತಮ್ಮ ನೆಲೆಯನ್ನು ಮೂಡುಬಿದಿರೆಗೆ ಸ್ಥಳಾಂತರಿಸಿದಾಗ ಈಗಿರುವ ಚೌಟರ ಅರಮನೆ ನಿರ್ಮಾಣವಾಯಿತು. ಕ್ರಿ.ಶ. ೧೬೪೩ರಲ್ಲಿ ಈ ಅರಮನೆಯನ್ನು ನಿರ್ಮಿಸಲಾಗಿದೆ. ಕಾಷ್ಠಶಿಲ್ಪಕ್ಕೆ ಹೆಸರುವಾಸಿಯಾದ ಈ ಭವ್ಯ ಸೌಧದಲ್ಲಿ ಕಂಡುಬರುವ 'ಪಂಚನಾರೀತುರಗ' ಮತ್ತು 'ನವನಾರೀಕುಂಜರ' ದರಚನಾಚಾತುರ್ಯ ನೋಡುಗರನ್ನು ಮಂತ್ರಮುಗ್ಧಗೊಳಿಸುತ್ತದೆ. ಇದೇ ಕೆತ್ತನೆಯನ್ನು ಸಾವಿರಕಂಬದ ಬಸದಿಯ ಭವ್ಯವಾದ ಪ್ರವೇಶದ್ವಾರದಎಡ ಮತ್ತು ಬಲ ಬಾಗಿಲುಗಳ ಮೇಲೆಯೂ ಗಮನಿಸಬಹುದು. ಹುಲಿಮುಖದಚಾವಡಿ, ಹೊರಗಿನಚಾವಡಿ, ಪಟ್ಟದಚಾವಡಿ, ಒಡ್ಡೋಲಗ, ಅಂತಃಪುರ, ಸ್ನಾನದ ಕೊಳ, ಮಹಾದ್ವಾರ, ಅರಮನೆ ಬಾಗಿಲು, ಆನೆಬಾಗಿಲು ಮುಂತಾದ ವಿಭಾಗಗಳನ್ನು ಹೊಂದಿದ್ದ ಚೌಟರ ಅರಮನೆ ಮೂಡುಬಿದಿರೆಯ ಐತಿಹಾಸದ ಪ್ರತ್ಯಕ್ಷ ಸಾಕ್ಷಿಯು ಹೌದು.

ವಿಜಯನಗರದ ಆಳ್ವಿಕೆಯ ಕಾಲದಲ್ಲಿ ತುಳುನಾಡಿನಲ್ಲಿ ತಲೆಯೆತ್ತಿದ ಹಲವಾರು ಸ್ಥಳಿಕ ರಾಜಮನೆತನಗಳಲ್ಲಿ ಚೌಟಅರಸು ಮನೆತನವೂ ಒಂದು. ಲಭ್ಯ ಶಾಸನಾಧಾರದಂತೆ ಕ್ರಿ.ಶ. ಸುಮಾರು ೧೪ನೇ ಶತಮಾನದಿಂದ ೧೭ ನೇ ಶತಮಾನದ ತನಕ ಮೂಡುಬಿದಿರೆಯ ಸಮೀಪದ ಪುತ್ತಿಗೆಯನ್ನು ರಾಜಧಾನಿಯನ್ನಾಗಿ ರಾಜ್ಯಭಾರ ನಡೆಸಿದ ಚೌಟ ಅರಸರು ಜೈನಧರ್ಮೀಯರು. ಆದರೆ ಇವರ ಕುಲದೇವರು ಸೋಮನಾಥ. ಕಾಲಕ್ರಮೇಣದಲ್ಲಿ ಚೌಟರು ಉಳ್ಳಾಲದಿಂದಲೂ ಆಳ್ವಿಕೆ ನಡೆಸಿದರು. ನಂತರ ತಮ್ಮ ನೆಲೆಯನ್ನು ಮೂಡುಬಿದಿರೆಗೆ ಸ್ಥಳಾಂತರಿಸಿದರು.

ವಿಜಯನಗರ ಸಾಮ್ರಾಜ್ಯದ ಪತನದ ನಂತರ ಮೂಡುಬಿದಿರೆಯಲ್ಲಿ ರಾಜಕೀಯ ಸ್ಥಿತ್ಯಂತರಗಳು ಬಹಳ ವೇಗವಾಗಿ ನಡೆದವು. ಸ್ಥಾನೀಯ ರಾಜರುಗಳು ಪ್ರಾಬಲ್ಯವನ್ನು ಹೊಂದಿದ್ದರು. ಇದರ ಲಾಭವನ್ನು ಪೋರ್ಚುಗೀಸರು ಪಡೆದರು. ಇದೇ ಸಮಯದಲ್ಲಿ ದಕ್ಷಿಣಕರ್ನಾಟಕದಲ್ಲಿ ಕೆಳದಿ ಅರಸರ ಪ್ರಭಾವ ಮತ್ತು ಅಧಿಕಾರ ಕಾಣಿಸಿಕೊಂಡಿತು. ಕೆಳದಿ ಅರಸರು ವೀರಶೈವ ಮತಾವಲಂಬಿಗಳಾದ ಕಾರಣ ಜೈನಧರ್ಮ ರಾಜಕೀಯವಾಗಿ ಅನಾದರಣೆಗೆ ಒಳಗಾಯಿತು. ತುಳುನಾಡಿನ ಹತ್ತಾರುಜೈನ ಅರಸು ಮನೆತನಗಳು ತಮ್ಮರಾಜಕೀಯ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವಂತಾಯಿತು. ಜೈನ ಸಂಸ್ಕೃತಿ, ಕಲೆ, ವಾಸ್ತುಶಿಲ್ಪದ ಬೆಳವಣಿಗೆ ಕುಂಠಿತವಾಯಿತು. ೧೮ ನೇ ಶತಮಾನದಲ್ಲಿ ಕೆಳದಿ ಅರಸರ ಆಳ್ವಿಕೆ ಕೊನೆಗೊಳ್ಳಲು ನಂತರ ಮೂಡುಬಿದಿರೆಯು ಹೈದರಾಲಿ, ಟಿಪ್ಪುಸುಲ್ತಾನ ಹಾಗೂ ಬ್ರಿಟೀಷ್ ಸಾಮ್ರಾಜ್ಯದ ಆಡಳಿತಕ್ಕೆ ಒಳಪಟ್ಟಿತ್ತು. ಚೌಟ ಅರಸರು ದಕ್ಷಿಣ ಕರಾವಳಿಯ ಅರಸು ಮನೆತನಗಳಾದ ಕಾರ್ಕಳದ ಭೈರವ ಅರಸರು, ಮೂಲ್ಕಿಯ ಸಾಮಂತರು, ಬಂಗವಾಡಿಯ ಬಂಗರು, ಪಣಂಬೂರಿನ ಹೆಗ್ಗಡೆಯವರು, ಹಾಗೂ ಅನೇಕ ಸಾಮಂತರೊಂದಿಗೆ ಯುದ್ಧದಲ್ಲಿ ತೊಡಗಿಸಿಕೊಂಡು ಸೋಲನ್ನು ಅನುಭವಿಸಿದ್ದರು.

* ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಶ್ರೀ ಧ. ಮಂ. ಕಾಲೇಜು, ಉಜಿರೆ–೫೭೪೨೪೦, ಮೊ. ೯೪೮೦೪೮೦೧೩೦೫



ಚೌಟರ ಅರಮನೆ



ನವನಾರೀ ಕುಂಜರ



ಕಾಷ್ಠಶಿಲ್ಪ



ರಾಜನಕಾಷ್ಠ ಶಿಲ್ಪ



ದೇವಿಯರ ಕಾಷ್ಠಶಿಲ್ಪ

ಎಂ. ಗಣಪತಿರಾವ್ ಐಗಳ್‌ರವರು **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ** ಎಂಬ ಗ್ರಂಥದಲ್ಲಿ ಚನ್ನರಾಯ ಚೌಟನೆಂಬ ಎರಡನೆಯ ಅರಸನು ರಾಜಧಾನಿಯನ್ನು ಉಳ್ಳಾಲದಿಂದ ಪುತ್ತಿಗೆಗೆ ವರ್ಗಾಯಿಸಿದನು. ಚನ್ನರಾಯ ಚೌಟನ ಉತ್ತರಾಧಿಕಾರಿಯಾದ ಭೋಜರಾಜ ಚೌಟನು ಮೂಲ್ಕಿ ಸಾಮಂತರೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಿದ್ದು, ಆ ಮೂಲಕ ತನ್ನ ರಾಜಕೀಯ ಶಕ್ತಿ ಸಾರ್ಮಥ್ಯ, ಘನತೆ ಗೌರವಾದರಗಳನ್ನು ಹೆಚ್ಚಿಸಿಕೊಂಡನು. ಇಮ್ಮಡಿ ಚೆನ್ನರಾಯ ಚೌಟನು ಕ್ರಿ.ಶ. ೧೪೦೩ರಿಂದ ೧೪೭೦ ರವರೆಗೆ ರಾಜ್ಯವಾಳಿ ತನ್ನಕಾಲದಲ್ಲಿ ಸಾವಿರ ಕಂಬದ ಬಸದಿಯ ನಿರ್ಮಾಣಕ್ಕೆ ಸಹಾಯವನ್ನೊದಗಿಸಿದನು. ನಂತರ ಎರಡನೇ ಭೋಜರಾಜ ಚೌಟನು ವಿಜಯನಗರದ ಸಾಮ್ರಾಟ ಕೃಷ್ಣದೇವ ರಾಯನಿಂದ ರಾಜಮುದ್ರೆ ಲಾಂಛನಗಳನ್ನು ಪಡೆದಿದ್ದನೆಂದು ಹೇಳಲಾಗಿದೆ. ಈತನ ನಂತರ ಆಳಿದ ರಾಣಿ ಅಬ್ಬಕ್ಕದೇವಿಯು, ನಾಡಿನ ಜನರಿಗೆ ನಾನಾ ಪೀಡೆಗಳನ್ನು ಕೊಡುತ್ತಿದ್ದ

ಪೋರ್ಚುಗೀಸರೊಡನೆ ಕಾದಾಡಿ ಕರ್ನಾಟಕ ಇತಿಹಾಸದಲ್ಲಿ ಬಹಳ ಪ್ರಸಿದ್ಧಳಾಗಿದ್ದಾಳೆ. ಈಕೆಯ ಜೀವನ ಚರಿತ್ರೆಯಿಂದ ಚೌಟಅರಸರು ಬಂಗಾಡಿಯ ಬಂಗರಸರೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಿದ್ದರೆಂದು ತಿಳಿದು ಬರುತ್ತದೆ. ಮುಂದಿನ ಚೌಟ ಅರಸರು ಕೆಳದಿಯ ನಾಯಕರಿಗೆ ವಿಧೇಯರಾದ ಮಾಂಡಳೀಕ ಅರಸರಾಗಿ ರಾಜ್ಯವಾಳುತ್ತಿದ್ದರು. ಈ ಸಮಯದಲಿ ಅವರು ಪುತ್ತಿಗೆಯಿಂದ ಮೂಡಬಿದ್ರೆಗೆ ತಮ್ಮ ರಾಜಧಾನಿಯನ್ನು ವರ್ಗಾಯಿಸಿಕೊಂಡರು. ಕ್ರಿ.ಶ, ೧೭೬೩ರಲ್ಲಿ ಹೈದರಾಲಿಯು ಕೆಳದಿ ನಾಯಕರನ್ನು ಸೋಲಿಸಿದ್ದರಿಂದ ಚೌಟರು ಸ್ವತಂತ್ರರಾದರೂ ಹೈದರಾಲಿ ಮತ್ತುಟಿಪ್ಪು ಸುಲ್ತಾನನ ಅಧಿಕಾರಿಗಳಿಗೆ ಒಪ್ಪುವ ರೀತಿಯಲ್ಲಿ ನಡೆದುಕೊಳ್ಳಲಾಯಿತು. ಟಿಪ್ಪುವಿನ ಮರಣಾನಂತರ ದಕ್ಷಿಣಕನ್ನಡಜಿಲ್ಲೆಯ ಮೇಲೆ ಬ್ರಿಟಿಷರು ತಮ್ಮ ಅಧಿಕಾರವನ್ನು ಸ್ಥಾಪಿಸಿದ್ದರಿಂದ ಜಿಲ್ಲೆಯ ಮೇಲೆ ಎಲ್ಲಾ ಅರಸು ಮನೆತನಗಳಂತೆ ತಾವೂ ಸ್ವಾತಂತ್ರದ ಅಧಿಕಾರವನ್ನು ಕಳೆದುಕೊಂಡು ಹೆಸರಿಗೆ ಮಾತ್ರ ಅರಸರಾಗಿ ಉಳಿಯಬೇಕಾಯಿತು. ಚೌಟ ಅರಸರಂತೆ ಈ ವಂಶದ ಕೆಲವು ಸ್ತ್ರೀಯರು ಆಡಳಿತ, ಸಾಮಾಜಿಕ ಹಾಗೂ ಧಾರ್ಮಿಕಜೀವನದಲ್ಲಿ ವಿಶೇಷವಾದ ಪಾತ್ರವಹಿಸಿದ್ದರು. ಅವರ ಪೈಕಿ ಅಬ್ಬಕ್ಕದೇವಿ, ಲೋಕಾದೇವಿ ಪಡುಮಲದೇವಿ ಪ್ರಸಿದ್ಧರಾಣಿಯರಾಗಿದ್ದರು.

ಚೌಟರ ಅರಮನೆಯು ಸಂಪೂರ್ಣವಾಗಿ ಕೆಂಪು ಕಲ್ಲಿನಿಂದ ನಿರ್ಮಿತವಾಗಿದ್ದು, ಆನೆ ಬಾಗಿಲು, ಮಹಾದ್ವಾರ, ವೀಕ್ಷಣಗೋಪುರ, ಅಂಗಳ, ವರಾಂಡವನ್ನು ಹೊಂದಿದ್ದು, ಇದನ್ನು ಆಡಳಿತ ಕಛೇರಿಯಾಗಿ ಬಳಸಿ ಕೊಳ್ಳಲಾಗುತ್ತಿತ್ತು. ಅರಮನೆಯನ್ನು ನಾಲ್ಕು ಸ್ತಂಭಗಳು ಆಧರಿಸಿದ್ದು, ಇತರ ಹನ್ನೆರಡು ಸ್ತಂಭಗಳು ಅರಮನೆಗೆ ನೆರವಾಗಿ ನಿಂತಿವೆ. ಅರಮನೆಯಲ್ಲಿ ಏಳು ಕೋಣೆಗಳಿದ್ದು, ಎರಡು ದೇವತಾ ಕೋಣೆಗಳಿವೆ. ದೇವತಾ ಆರಾಧನೆ ಮತ್ತು ಭೂತಾರಾಧನೆ ಸಂಬಂಧಪಟ್ಟ ವಿಗ್ರಹಗಳು ಈಗಲೂ ಇವೆ. ಇಲ್ಲಿರುವ ಶಿವಲಿಂಗಕ್ಕೆ ನಿತ್ಯಪೂಜೆ ನಡೆಯುತ್ತಿದೆ. ಉಗ್ರಾಣ, ಅಂತಪುರ, ಅಡುಗೆಮನೆ, ಸಂಗ್ರಹದಕೋಣೆ ಮತ್ತು ಸಭಾಮಂಟಪವನ್ನು ಒಳಗೊಂಡಿದೆ. ನಂತರ ೧೮೮೦ರಲ್ಲಿ ಮೇಲ್ಛಾವಣಿಗೆ ಮಂಗಳೂರು ಹಂಚನ್ನು ಹಾಕಲಾಗಿದೆ. ಈ ಹಂಚನ್ನು ಮಂಗಳೂರಿನ ಜೆ.ಎಚ್. ಮೊರ್ಗನ್ಎಂಡ್ ಸನ್ಸ್ ಮಂಗಳೂರು ಹಂಚು ಕಂಪನಿಯು ತಯಾರಿಸಿದೆ. ಕ್ರಿ.ಶ. ೧೫ನೇ ಶತಮಾನದಿಂದ ೨೦ನೇ ಶತಮಾನದವರೆಗೆ ಚೌಟರ ವಂಶದಲ್ಲಿ ೪೩ ಜನ ಅರಸರು ಆಳಿದರು. ಈಗಲೂ ಈ ಮನೆತನದ ವಂಶಜರೂ ಅರಮನೆಯ ಪಕ್ಕದಲ್ಲೇ ವಾಸವಾಗಿದ್ದಾರೆ. ಕುಲದೀಪ್. ಎಂ ಈಗ ಚೌಟ ಅರಸರಾಗಿದ್ದು, ಊರಿನ ಎಲ್ಲಾ ಧಾರ್ಮಿಕ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ. ಈಗ ಚೌಟರ ಅರಮನೆಯು ಪುರಾತತ್ವ ಇಲಾಖೆಯ ಅಧೀನದಲ್ಲಿದ್ದು, ಉತ್ತಮ ರೀತಿಯಲ್ಲಿ ಸಂರಕ್ಷಿಸಲ್ಪಟ್ಟಿದೆ.

ಜಿನಧರ್ಮದಾಗರವಾಗಿ, ಜೈನ ವಾಸ್ತುಶಿಲ್ಪದ ಕೇಂದ್ರವಾಗಿ, ಸಾಂಸ್ಕೃತಿಕ ನೆಲೆವೀಡಾಗಿ ಬೆಳಗಿದ ಮೂಡುಬಿದಿರೆಯ ಕೀರ್ತಿ ನಾಡಿನ ಜನಮನದಲ್ಲಿ ಶಾಶ್ವತವಾಗಿ ಉಳಿವಂಥದು. ತುಳುನಾಡಿನ ಧರ್ಮ, ಸಂಸ್ಕೃತಿ, ಕಲೆ ಹಾಗೂ ಸಾಹಿತ್ಯದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದ ಈ ನಗರದ ವೈಭವವನ್ನು ಶಾಸನಕವಿಯೋರ್ವ 'ನಾಲಿಗೆ ಯಾರಿಗುಂಟು ಪೊಗಳಲ್ ನೆರೆ ವೇಣುಪುರ ಪ್ರಭಾವಮಂ' ಎಂದು ವರ್ಣಿಸಿರುವುದು ಉಚಿತವೂ, ಔಚಿತ್ಯಪೂರ್ಣವೂ ಆಗಿದೆ. ಪ್ರಾಚೀನತೆಯನ್ನು ಉಳಿಸಿಕೊಂಡೆ ಆಧುನಿಕ ವೇಷ ತೊಟ್ಟಿರುವ ಮೂಡುಬಿದಿರೆ ಬದುಕಿನಲ್ಲಿ ಒಮ್ಮೆಯಾದರೂ ಮರೆಯದೆ ಸಂದರ್ಶಿಸಬೇಕಾದ ಪ್ರೇಕ್ಷಣೀಯ ಸ್ಥಳ ಎಂಬುದರ ಬಗ್ಗೆ ಎರಡು ಮಾತಿಲ್ಲ. ಮೂಡುಬಿದಿರೆಯ ಐತಿಹಾಸಿಕ ವಾಸ್ತುಶಿಲ್ಪ ಸ್ಮಾರಕ ಚೌಟರ ಅರಮನೆ ಕರ್ನಾಟಕದ ಮಾತ್ರವಲ್ಲದೆ ಭಾರತದೇಶದ ಸಾಂಸ್ಕೃತಿಕ ಇತಿಹಾಸದ ಅನರ್ಘ್ಯರತ್ನವಾಗಿದೆ.



## ಆಕರ ಗ್ರಂಥಗಳು


೧. ಡಾ। ಪುಂಡಿಕ್ಯಾಗಣಪಯ್ಯ ಭಟ್– ತೌಳವ – ತುಳುನಾಡಿನ ಇತಿಹಾಸ, ಸಂಸ್ಕೃತಿಗೆ ಸಂಬಂಧಿಸಿದ ಲೇಖನಗಳ ಸಂಕಲನ – ಸಿಂಧೂರ ಪ್ರಕಾಶನ ಮೂಡುಬಿದಿರೆ. ೧೯೯೭.

೨. ಎಂ.ಗಣಪತಿರಾವ್ ಐಗಳ್ –ದಕ್ಷಿಣಕನ್ನಡಜಿಲ್ಲೆಯ ಪ್ರಾಚೀನಇತಿಹಾಸ,ಗೋವಿಂದ ಪೈ ಸಂಶೋಧನಕೇಂದ್ರ, ಉಡುಪಿ. ೨೦೦೪.

೩. ಶಾಮಶಾಸ್ತ್ರಿ (ಸಂ) – ಲಿಂಗಣ್ಣಕವಿಯ ಕೆಳದಿ ನೃಪವಿಜಯ. ಮೈಸೂರು, ೧೯೨೧.

೪. ಡಾ. ಪಿ. ಗುರುರಾಜ್ ಭಟ್ – ತುಳುನಾಡು – ಸಾಮಾಜಿಕಚರಿತ್ರೆಯಲ್ಲಿಒಂದು ಸಂಶೋಧನಾ ವಿವೇಚನೆ – ಉಡುಪಿ, ೨೦೦೯.

೫. ಕೆ.ಜಿ. ವಸಂತ ಮಾಧವ– Political History of Kanara, ಮೂಲ್ಕಿ, ೧೯೯೮.

೬. Dr. P. Gururaja Bhatt – Studies in Tuluva History and Culture, Manipal, 1975.

೮. ದಿ. ಪಂ. ದೇವಕುಮಾರಜೈನ್– ಮೂಡುಬಿದಿರೆ, ಅಂದು–ಇಂದು, ಮೂಡುಬಿದಿರೆ, ೧೯೯೮.

೯. South Indian Inscriptions, Vol. VII.196-220.

೧೦. Field Work.

# ಶತಮಾನ ಕಂಡ ಬಾಗಲಕೋಟೆಯ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘ

ಸುಮಂಗಲಾ ಮೇಟಿ*

**ಬಾಂ**ಬೆ ಕರ್ನಾಟಕಕ್ಕೆ ವಿಜಾಪೂರ, ಧಾರವಾಡ, ಬೆಳಗಾವಿ ಮತ್ತು ಉತ್ತರ ಕನ್ನಡ ಜಿಲ್ಲೆಗಳು ಸೇರ್ಪಡೆಗೊಂಡಿದ್ದು ಎಲ್ಲರಿಗೂ ತಿಳಿದ ಸಂಗತಿ. ಅಂದು ಮುಂಬೈ ಪ್ರಾಂತ್ಯವು ಉತ್ತರಕರ್ನಾಟಕವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿತ್ತು. ಒಂದೆಡೆಗೆ ಬಾಂಬೆ ಮರಾಠಿ ಭಾಷೆಗೆ ಪ್ರಾಶಸ್ತ್ಯವನ್ನು ನೀಡಿದ್ದು, ಮರಾಠಿಯಲ್ಲಿಯೇ ವ್ಯವಹರಿಸಬೇಕಿತ್ತು.ಇನ್ನೊಂದೆಡೆಗೆ ಹೈದ್ರಾಬಾದ ಕರ್ನಾಟಕದಲ್ಲಿ ನಿಜಾಮರು ಒತ್ತಾಯ ಪೂರ್ವಕವಾಗಿ ಉರ್ದುವನ್ನು ಹೇರುತ್ತಿದ್ದರು. ಮತ್ತೊಂದೆಡೆ ಕರಾವಳಿ ಕನ್ನಡಿಗರು ಮದ್ರಾಸ ಪ್ರೆಸಿಡೆನ್ಸಿ ಮೂಲಕ ತಮಿಳಿನ ತುಳಿತಕ್ಕೆ ಒಳಗಾಗಿದ್ದರು. ಇಂಥ ಸಂದಿಗ್ಧ ವಾತಾವರಣದಲ್ಲಿ ಉತ್ತರಕರ್ನಾಟಕದ ಕನ್ನಡಿಗರು ಶಿಕ್ಷಣಕ್ಕಾಗಿ ದೂರದ ಬಾಂಬೆಗೆ ಹೋಗಬೇಕಾಗುತ್ತಿತ್ತು. ಉತ್ತರಕರ್ನಾಟಕದವರು ಉನ್ನತ ವ್ಯಾಸಾಂಗಕ್ಕೆ ೧೮೫೭ರಲ್ಲಿ ಪ್ರಾರಂಭವಾದ ಮುಂಬೈವಿಶ್ವವಿದ್ಯಾಲಯಕ್ಕೆ ಹೋಗುವುದು ಅನಿವಾರ್ಯವಾಗಿತ್ತು.

೧೯೦೩ರ ಡಿಸೆಂಬರ್ ತಿಂಗಳಿನಲ್ಲಿ ಮೊದಲ ವೀರಶೈವಮಹಾಸಭೆ ಕೂಡಿಸುವ ನಿಶ್ಚಯವನ್ನು ಶಿವಯೋಗ ಮಂದಿರದ ಹಾನಗಲ್ ಕುಮಾರಸ್ವಾಮಿಗಳ ದಿವ್ಯಸಮ್ಮುಖದಲ್ಲಿ ಮಾಡಲಾಗಿತ್ತು. ನಂತರ ಸಿರಸಂಗಿ ಲಿಂಗರಾಜರ ಅಧ್ಯಕ್ಷತೆಯಲ್ಲಿ ೧೯೦೪ರ ಮೇ ೧೩ ಶುಕ್ರವಾರ, ೧೪ ಶನಿವಾರ ಮತ್ತು ೧೫ ರವಿವಾರದಂದು ಧಾರವಾಡದ 'ದರ್ಬಾರ್ ಹಾಲ್'ನಲ್ಲಿ 'ಅಖಿಲಭಾರತ ವೀರಶೈವ ಮಹಾಸಭೆ'ಯನ್ನು ನಡೆಸಿದರು. ಈ ಐತಿಹಾಸಿಕ ಮಹಾಸಭಾದಲ್ಲಿ ಬಾಗಲಕೋಟೆ, ಬಿಜಾಪುರ, ಬೆಳಗಾವಿ, ಬಳ್ಳಾರಿಗಳಲ್ಲಿ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸುವ ಐತಿಹಾಸಿಕ ಠರಾವು ಪಾಸಾಯಿತು. ವಿಜಯಪೂರ, ಬೆಳಗಾವಿ, ಬಳ್ಳಾರಿಗಳು ಜಿಲ್ಲಾಕೇಂದ್ರಗಳಾಗಿದ್ದವು. ಆದರೆ ಬಾಗಲಕೋಟೆಯು ತಾಲ್ಲೂಕಾ ಕೇಂದ್ರವಾಗಿದ್ದರೂ ಕೂಡಾ ಮೊಟ್ಟಮೊದಲಿಗೆ ಅಂದು ಶ್ರೀ ಬೀಳೂರು ಗುರುಬಸವ ಮಹಾಸ್ವಾಮಿಗಳ ತಮ್ಮ ಜೋಳಿಗೆಯ ಮುಖಾಂತರ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಲು ಮುಂದಾದ ಸಂದರ್ಭದಲ್ಲಿ ಬಾಗಲಕೋಟೆಯ ಸ್ಥಳೀಯ ವ್ಯಾಪಾರಸ್ಥರು ತಮ್ಮ ನಿಸ್ವಾರ್ಥ ಸಹಾಯವನ್ನು ನೀಡಿ ಸ್ವತಂತ್ರಪೂರ್ವದಲ್ಲಿಯೇ ಅಂದರೆ ಅಕ್ಟೋಬರ್ ೧೮, ೧೯೦೬ರಲ್ಲಿ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘವನ್ನು ಹುಟ್ಟುಹಾಕಿದರು. ಈ ಸಂಸ್ಥೆಯ ಅಡಿಯಲ್ಲಿ ಪ್ರಪ್ರಥಮವಾಗಿ ೧೯೦೭ರಲ್ಲಿ ಸಂಸ್ಕೃತ ಪಾಠಶಾಲೆ ಬಾಗಲಕೋಟೆ ಹೊರವಲಯದ ಘಟಪ್ರಭೆಯ ನದಿ ದಂಡೆಯ ಅಡವಿ ಸ್ವಾಮಿ ಮಠದಲ್ಲಿ ಪ್ರಾರಂಭವಾಯಿತು. ಈ ಶಾಲೆಯು ಸಂಪೂರ್ಣಕಲ್ಲಿನಿಂದ ನಿರ್ಮಿಸಿದ ಸುಂದರ ಕಟ್ಟಡವಾಗಿತ್ತು. ಆದರೆಅದು ಇಂದು ನೆನಪು ಮಾತ್ರ. ಆಲಮಟ್ಟಿ ಹಿನ್ನೀರಿನಿಂದ ಸಂಪೂರ್ಣ ಮುಳುಗಿಹೋಗಿದೆ. ಸಾಂಪ್ರದಾಯಿಕ ಶಿಕ್ಷಣದ ತೊಟ್ಟಿಲಾದ ಈ ಶಾಲೆಯಲ್ಲಿ ಶ್ರೀ ಪಗಡದಿನ್ನಿ ರೇವಣಸಿದ್ಧ ಶಾಸ್ತ್ರಿಗಳು, ಕಲ್ಲಿನಾಥ ಶಾಸ್ತ್ರಿಗಳು ಆರಂಭಿಕ ಶಿಕ್ಷಕರಾಗಿದ್ದರು.

ಮುಂಬೈ ಪ್ರಾಂತ್ಯದಲ್ಲಿ ಹಲವಾರು ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿದ ಶ್ರೇಯಸ್ಸು ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘಕ್ಕೆ ಸಲ್ಲುತ್ತದೆ. ೧೯೧೧ರಲ್ಲಿ ರಾವ ಬಹಾದ್ದೂರ ವಾರದ ಉಚಿತ ಪ್ರಸಾದ ನಿಲಯ. ಸೊಲ್ಲಾಪುರದಿಂದ ಸುಪ್ರಸಿದ್ಧ ವರ್ತಕರೂ, ದಾನಿಗಳೂ ಆಗಿದ್ದರಾವ್ ಬಹದ್ದೂರ್ ಶ್ರೀ ವಾರದ ಮಲ್ಲಪ್ಪನವರಿಂದ ಉದ್ಘಾಟನೆಗೊಂಡಿತು. ೧೯೧೨ರಲ್ಲಿ ಶ್ರೀ ಗುರುಬಸವ ವಾಚನಾಲಯ, ೧೯೧೭ರಲ್ಲಿ ಮಾಧ್ಯಮಿಕ ಶಾಲೆ, ೧೯೩೭ರಲ್ಲಿ ಪ್ರಾಥಮಿಕ ಶಾಲೆ, ೧೯೪೨ ಶಿಕ್ಷಕರ ತರಬೇತಿಸಂಸ್ಥೆ, ೧೯೪೪ರಲ್ಲಿ ಪದವಿ ಕಾಲೇಜು ಸ್ಥಾಪನೆ. ಮುಂಬೈ ಪ್ರಾಂತ್ಯದ ತಾಲ್ಲೂಕಾ ಸ್ಥಳವೊಂದರಲ್ಲಿ ಸ್ಥಾಪಿಸಲ್ಪಟ್ಟ ಪ್ರಥಮ ಪದವಿಕಾಲೇಜು ಇದಾಗಿದ್ದು, ಇಂದಿಗೂ ಈ ಭಾಗದ ಗ್ರಾಮೀಣ ವಿದ್ಯಾರ್ಥಿಗಳ ಬಾಳಿಗೆ ಬೆಳಕಾಗಿದೆ.

* ಶ್ರೀ.ವಿಜಯ ಮಹಾಂತೇಶ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಮಹಾವಿದ್ಯಾಲಯ, ಇಳಕಲ್ಲ ಮೊ. ೯೫೯೧೦೬೦೧೧೫

೧೯೪೫ರಲ್ಲಿ ವಿಜ್ಞಾನತರಗತಿ ಪ್ರಾರಂಭ. ೧೯೫೮ರಲ್ಲಿ ಪಾಲಿಟೆಕ್ನಿಕ್ ಕಾಲೇಜು, ೧೯೬೩ರಲ್ಲಿ ಬಸವೇಶ್ವರ ಇಂಜಿನಿಯರಿಂಗ್ ಕಾಲೇಜು, ೧೯೬೫ ರಲ್ಲಿ ಕಲೆ ಮತ್ತು ವಿಜ್ಞಾನ ವಿಭಾಗ, ೧೯೬೫-೬೬ ಜ್ಯೂನಿಯರ್ ಟೆಕ್ನಿಕಲ್ ಕಾಲೇಜು, ೧೯೭೦ರಲ್ಲಿ ವಾಣಿಜ್ಯ ಮಹಾವಿದ್ಯಾಲಯ, ೧೯೮೧ರಲ್ಲಿ ದೈಹಿಕಕಾಲೇಜು, ೧೯೮೨ ಮುಧೋಳ ಕಲಾ, ವಾಣಿಜ್ಯಕಾಲೇಜು, ೧೯೮೫ರಲ್ಲಿ ಬಸವೇಶ್ವರ ಶಿಶುವಿಹಾರ, ೧೯೮೬ರಲ್ಲಿ ಪ್ರಾಥಮಿಕ ಸಂಘ, ಪಿ.ಎಂ.ನಾಡಗೌಡ ಡೆಂಟಲ್ ಕಾಲೇಜ್ ಹಾಗೂ ಎಸ್.ಸಿ.ನಂದಿಮಠ ಕಾನೂನು ಕಾಲೇಜು, ೧೯೮೭ರಲ್ಲಿ ಪಿ.ಎಂ ನಾಡಗೌಡ ವೈದ್ಯಕೀಯ ಮಹಾವಿದ್ಯಾಲಯ, ೧೯೯೦ ಹಾನಗಲ್ ಶ್ರೀ ಕುಮಾರೇಶ್ವರ ಫಾರ್ಮಸಿ ಕಾಲೇಜು ಸ್ಥಾಪನೆ. ೧೯೯೮ರಲ್ಲಿ ಆಯುರ್ವೆದಿಕ ಕಾಲೇಜು, ೧೯೯೯ ರಲ್ಲಿ ಸಜ್ಜಲಶ್ರೀ ಪಾಲಿಟೆಕ್ನಿಕ್ ಕಾಲೇಜು, ಎಸ್.ಆರ್. ರೂರಲ್ ಪಾಲಿಟೆಕ್ನಿಕ್ ಕಾಲೇಜನ್ನು ಪ್ರೋಗ್ರೆಸಿವ್ ಎಜುಕೇಶನ್ ಸೊಸೈಟಿ ಸಂಘಕ್ಕೆ ಹಸ್ತಾಂತರ ಮಾಡಲಾಯಿತು.

೨೦೦೦ರಲ್ಲಿ ಅಕ್ಕಮಹಾದೇವಿ ಮಹಿಳಾ, ಕಲಾ, ವಿಜ್ಞಾನ ಮಹಾವಿದ್ಯಾಲಯ,೨೦೦೨ರಲ್ಲಿ ನಿಜಲಿಂಗಪ್ಪ ಮೆಡಿಕಲ್ ಕಾಲೇಜು ಸ್ಥಾಪನೆ, ೨೦೦೪ ರಲ್ಲಿ ಶಿಕ್ಷಣ ಮಹಾವಿದ್ಯಾಲಯ ಸ್ಥಾಪನೆ. ಸಂಗೀತಾಸಕ್ತರ ಹಸಿವನ್ನು ನೀಗಿಸಲು 'ಡಾ.ಪುಟ್ಟರಾಜ ಗವಾಯಿ ಸ್ಕೂಲ್ ಆಫ್ ಮ್ಯೂಜಿಕ' ಸ್ಥಾಪನೆಯಾಯಿತು. ೨೦೧೭ರಲ್ಲಿ ಬೆಂಗಳೂರಿನ ಬಿಡದಿಯಲ್ಲಿ ಅಮೃತಾ ಇಂಜನೀಯರಿಂಗ್ ಕಾಲೇಜು, ಎಂ.ಬಿ.ಎ ಕಾಲೇಜು, ಪಾಲಿಟೆಕ್ನಿಕ್ ಕಾಲೇಜುಗಳು ಸ್ಥಾಪನೆಯಾಗಿವೆ.

ಬಾಗಲಕೋಟೆ ನಗರಕ್ಕೆ ಸೀಮಿತವಾಗಿದ್ದ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘದಶಿಕ್ಷಣ ಪ್ರಸಾರವು ಮುಧೋಳ, ರಾಮದುರ್ಗ, ಕೂಡಲಸಂಗಮ, ಸಾಲಹಳ್ಳಿ, ಕಿರಸೂರ, ಲೋಕಾಪೂರ, ಗುಳೇದಗುಡ್ಡ, ಬರಗಿ, ಕೆಲೂರ, ಬೇಲೂರ, ಕಕನೂರ, ಮುದೇನೂರ, ಮುಳ್ಳೂರ, ಅನಗವಾಡಿ, ಹಂಚಿನಾಳ, ಕ.ಸ.ಬಾ ಜಂಬಗಿ, ಬೆಂಗಳೂರು ಅಲ್ಲದೇ ಮಹಾರಾಷ್ಟ್ರ ಸೇರಿದಂತೆ ಇಂದು ೧೫೩ಕ್ಕಿಂತ ಅಧಿಕ ಶಾಖೆಯನ್ನು ಹೊಂದಿ ಹೆಮ್ಮರವಾಗಿ ಬೆಳೆದು ನಿಂತಿದೆ.

ಈ ಪ್ರದೇಶದಲ್ಲಿ ಶೈಕ್ಷಣಿಕ ವಲಯದ ಅಭಿವೃದ್ಧಿಗೆ ಕಾರಣವಾದ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘದಲ್ಲಿಸೇವೆ ಸಲ್ಲಿಸಿದ ಪ್ರಾಧ್ಯಾಪಕ ಡಾ. ಕೆ.ಆರ್. ಶ್ರೀನಿವಾಸ ಅಯ್ಯಂಗಾರ ಅವರು ಆಂಧ್ರ ಪ್ರದೇಶದ ವಾಲ್ಟರ ವಿಶ್ವವಿದ್ಯಾಲಯದ ಕುಲಪತಿಗಳಾಗಿ, ಡಾ. ಎಸ್.ಸಿ ನಂದಿಮಠರು ಕರ್ನಾಟಕ ವಿಶ್ವವಿದ್ಯಾಲಯದ ಹಂಗಾಮಿ ಕುಲಪತಿಗಳಾಗಿ, ಡಾ.ಆರ್.ಸಿ ಹಿರೇಮಠರು ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾಗಿ, ಡಾ. ರಾಜಶೇಖರಯ್ಯರು ವಿಶ್ವೇಶ್ವರಯ್ಯಾತಾಂತ್ರಿಕ ವಿಶ್ವವಿದ್ಯಾಲಯದ ಪ್ರಥಮ ಕುಲಪತಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಅಲ್ಲದೇ ಡಾ.ಗೋವಿಂದ (ವಿಂದಾ)ಕರಂದಿಕರ ೨೦೦೫ರ ಜ್ಞಾನಪೀಠ ಪ್ರಶಸ್ತಿ ಪುರಸ್ಕಾರ ಪಡೆದದ್ದು ಹೆಮ್ಮೆಯ ಸಂಗತಿ. ಡಾ. ಗುರುಲಿಂಗ ಕಾಪ್ಸೆಯವರು ಕರ್ನಾಟಕ ಸಾಹಿತ್ಯ ಅಕ್ಯಾಡೆಮಿಯ ಅಧ್ಯಕ್ಷರಾಗಿದ್ದರು. ಅಲ್ಲದೇ

ಇಲ್ಲಿ ಶಿಕ್ಷಣವನ್ನು ಪಡೆದ ವಿದ್ಯಾರ್ಥಿ ಡಾ.ಎಸ್.ಪಿ.ಹಿರೇಮಠ ಕುವೆಂಪು ವಿಶ್ವವಿದ್ಯಾಲಯದ ಕುಲಪತಿಗಳಾಗಿ, ಡಾ. ಮಲ್ಲಿಕಾಘಂಟಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಸಂಘವು ಕನ್ನಡ ವಿಶ್ವವಿದ್ಯಾಲಯ ಹಂಪಿಯ ಚರಿತ್ರೆ ವಿಭಾಗಕ್ಕೆ ೫೦ ಸಾವಿರರೂ. ದತ್ತಿಯನ್ನು ನೀಡಿದ್ದು ಪ್ರತಿವರ್ಷ ದತ್ತಿ ಏರ್ಪಡಿಸುತ್ತಾರೆ. ಚಾಮರಾಜ ನಗರದ ದೀನಬಂಧು ಟ್ರಸ್ಟಗೆ ೧ ಲಕ್ಷರೂ.ಗಳನ್ನು, ಧಾರವಾಡದಲ್ಲಿ ನಡೆಯುವ ಸಾಹಿತ್ಯ ಸಂಭ್ರಮಕ್ಕೆ ೫೦ ಸಾವಿರ ರೂ.ಗಳಲ್ಲದೇ ಇನ್ನು ಅನೇಕ ಸಮಾಜಪರಕಾರ್ಯ ಚಟುವಟಿಕೆಗಳಲ್ಲಿ ಕ್ರೀಯಾಶೀಲವಾಗಿ ತೊಡಗಿಸಿಕೊಂಡ ಈ ಸಂಘವು ೧೧೩ ವರ್ಷ ಹಾಗೂ ಬಸವೇಶ್ವರ ಕಲಾ ಮಹಾವಿದ್ಯಾಲಯವು ೭೫ ವರ್ಷಗಳ ಸಂಭ್ರಮದಲ್ಲಿದೆ. ಕೇವಲ ಶೈಕ್ಷಣಿಕ ರಂಗವಲ್ಲದೇ ಸಾಹಿತ್ಯಕ, ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕರಂಗಕ್ಕೂ ಅಮೋಘವಾದ ಕೊಡುಗೆ ನೀಡಿದೆ.



# ಶಿವಯೋಗ ಮಂದಿರ : ವೃತ್ತಿ ನಿರತ ಶಿಕ್ಷಣ ಕೇಂದ್ರ

ಮಲ್ಲಿಕಾರ್ಜುನ ಕುಂಬಾರ*

ಇಂದಿನ ಶಿಕ್ಷಣದಲ್ಲಿರುವ ವೃತ್ತಿ ಶಿಕ್ಷಣ ಪದ್ಧತಿಯನ್ನು ಹಲವಾರು ದಶಕಗಳ ಹಿಂದೆ ಆರಂಭಿಸಿದ ಶ್ರೇಯಸ್ಸು ಶಿವಯೋಗ ಮಂದಿರಕ್ಕೆ ಸಲ್ಲುತ್ತದೆ. ದೂರದೃಷ್ಟಿಯ ಫಲವಾಗಿ ಇಂದು ಅನೇಕರು ಬದುಕನ್ನು ಕಟ್ಟಿಕೊಂಡಿದ್ದಾರೆ. ಸ್ವಾತಂತ್ರ್ಯ ಸಿಕ್ಕು ಹಲವು ದಶಕಗಳನ್ನು ಕಳೆದರೂ ಬಸವಣ್ಣನವರು ಕಂಡ ಕಾಯಕ ಪ್ರಜ್ಞೆ, ಗಾಂಧೀಜಿಯವರು ಕಂಡ ಪ್ರಾಮಾಣಿಕವಾಗಿ, ದುಡಿಯುವ ವರ್ಗದವರ ಕಾಳಜಿ ನಮ್ಮಲ್ಲಿ ಇನ್ನೂ ಒಡಮೂಡದ ಸಂದರ್ಭದಲ್ಲಿ ಶಿವಯೋಗಮಂದಿರವು ಕ್ರಿ.ಶ ೧೯೦೯ರಲ್ಲಿ ಸಾಕಾರಗೊಳಿಸಿ ಆ ದಿಸೆಯಲ್ಲಿ ಅನೇಕರನ್ನು ಇಂತಹ ಕೆಲಸಕ್ಕೆ ಸ್ವಯಂಪ್ರೇರಣೆಯಿಂದ ಅಣಿಯಾಗಿಸುವ ಮಣಿಹವನ್ನು ಆರಂಭಿಸಿತು. ಪ್ರಾಮಾಣಿಕವಾಗಿ ದುಡಿದರೆ ಮಾತ್ರ ಬಸವಣ್ಣನವರ ಕಾಯಕ ತತ್ವನ್ನು ಅಳವಡಿಸಿಕೊಳ್ಳಬಹುದು. ಕೇವಲ ವೇದಾಂತ ಹೇಳುವದರಿಂದ ಅದು ಸಾಕಾರಗೊಳ್ಳುವದಿಲ್ಲ. ಅದು ಸಾಕಾರಗೊಂಡಾಗ ನಾಡಿನ ಪ್ರಗತಿ ಸಾಧ್ಯವೆಂಬ ದೂರದೃಷ್ಟಿಯನ್ನು ಶಿವಯೋಗ ಮಂದಿರವು ಹೊಂದಿತ್ತು. ಗಾಂಧೀಜಿಯವರ ಮೂಲ ಶಿಕ್ಷಣದ ಪರಿಕಲ್ಪನೆಯನ್ನು ಸ್ಥಾಪಿಸಿದ ಕೀರ್ತಿ ಹಾನಗಲ್ಲ ಕುಮಾರ ಸ್ವಾಮಿಗಳಿಗೆ ಸಲ್ಲುತ್ತದೆ. ತಮ್ಮ ಗುರುಗಳಾದ ಎಳಂದೂರ ಸ್ವಾಮಿಗಳಿಂದ ಕಲಿತ ಸ್ವಾವಲಂಬನೆಯ ಪಾಠವನ್ನು ಇಲ್ಲಿ ಚಾಚೂ ತಪ್ಪದಂತೆ ಅಳವಡಿಸಿದರು. ಅವರು ಅರಂಭಿಸಿದ ಗುಡಿಕೈಗಾರಿಕೆ ಅಪ್ಪಟ ಆರ್ಥಿಕ ಸ್ವಾವಲಂಬನೆಯದ್ದಾಗಿತ್ತು. ದುಡಿಯುವ ಕೈಗಳಿಗೆ ನಿರಂತರ ಉದ್ಯೋಗವನ್ನು ಕಲ್ಪಿಸುವುದು, ಅದರಿಂದ ಶಿವಯೋಗಮಂದಿರದ ಆರ್ಥಿಕ ಬಲವನ್ನು ಹೆಚ್ಚಿಸುವ ಗುರಿಯನ್ನು ಹೊಂದಿ, ಆ ಮೂಲಕ ದಿನದಲಿತ, ದುರ್ಬಲರಿಗೆ ನವಚೇತನವನ್ನು ತುಂಬಿ, ಬಸವಣ್ಣನವರ ಕಾಯಕದ ಪರಿಕಲ್ಪನೆಯನ್ನು ಸಾಕಾರಗೊಳಿಸಿದರು. ಅದರ ಫಲವಾಗಿ ಭೌತಿಕ, ಬೌದ್ಧಿಕ, ವೃತ್ತಿಶಿಕ್ಷಣ ತರಬೇತಿ ಕೇಂದ್ರಗಳನ್ನು ಆರಂಭಿಸಲಾಯಿತು.

ಶರಣರ ಸಿದ್ಧಾಂತಗಳು ಬರಿ ಭಾಷಣದ ವಸ್ತುಗಳಾಗಿ, ಸಮಾಜದಲ್ಲಿ ಸರಿಯಾದ ಶಿಕ್ಷಣ, ಧರ್ಮಜ್ಞಾನಗಳು ಇಲ್ಲದ ಸಂದರ್ಭದಲ್ಲಿ, ಮಠಗಳು ಮತ್ತು ಅದರ ಚುಕ್ಕಾಣಿ ಹಿಡಿದ ಮಠಾಧಿಪತಿಗಳು ತಮ್ಮ ಕರ್ತವ್ಯಗಳನ್ನು ಮರೆತು ಹೋಗಿದ್ದರು. ಇದನ್ನು ಪುನರುತ್ಥಾನಗೊಳಿಸಿ ಕಾಯಕ, ಅದರಲ್ಲೂ ಒಕ್ಕಲುತನ, ವ್ಯಾಪಾರ, ವ್ಯವಹಾರಿಕವಾದ ಹಾದಿಯಲ್ಲಿ ಸಾಗಿ, ಸಂಪತ್ತನ್ನು ಸಮಾಜಕ್ಕೆ ವಿನಿಯೋಗಿಸುವ ಸಂಕಲ್ಪವನ್ನು ಹೊಂದಿ, ಆಲದ ಮರದಂತೆ ತನ್ನ ಬೀಳಲನ್ನು ಚಾಚಿ ಅನೇಕರಿಗೆ ಆಶ್ರಯ ನೀಡಿತು. ದೇಶಿಯ ಸಂಪನ್ಮೂಲವನ್ನು ಬಂಡವಾಳವಾಗಿಸಿಕೊಂಡು ಗುಡಿಕೈಗಾರಿಕೆಗಳನ್ನು ಸ್ಥಾಪಿಸಿದ್ದರಿಂದ ಹಲವಾರು ಉದ್ಯೋಗ ಸೃಷ್ಠಿಯಾದವು. ಸಂಪತ್ತಿನ ಮೂಲವಾಗಿ ಉದ್ಯೋಗ ಸೃಷ್ಠಿಗಾಗಿ,ಸ್ವಾವಲಂಬನೆಯ ಬದುಕಿಗಾಗಿ ಎರಡು ರೀತಿಯ ವೃತ್ತಿಗಳನ್ನು ಹಾನಗಲ್ಲ ಸ್ವಾಮಿಗಳು ಆರಂಭಿಸಿದರು.

೧. ಭೌತಿಕ ವೃತ್ತಿ, ಇದರಲ್ಲಿ ವಿಭೂತಿ ತಯಾರಿಕೆ, ಜಿನ್ನಿಂಗ ಫ್ಯಾಕ್ಟರಿ, ಚಿತ್ರಕಲಾ ಮಂದಿರ, ಕೃಷಿ, ಪಶು ಸಂಗೋಪನೆ, ಬ್ಯಾಂಕ್, ಸಹಕಾರಿ ಸಂಘಗಳು, ಮಾರಾಟ ಮಳಿಗೆಗಳು, ಲಿಂಗ, ಲಿಂಗವಿರಿಸುವ ಕರಡಿಗೆ, ಶಿವದಾರಗಳ ತಯಾರಿಕೆಗಳು ಇದರಲ್ಲಿ ಸೇರಿವೆ.

೨. ಬೌದ್ಧಿಕ ವೃತ್ತಿ, ಇದರ ಮೂಲಕ ಮಾನವರಲ್ಲಿ ಹುದುಗಿರುವ ಬುದ್ಧಿವಂತಿಕೆಯನ್ನು ವೃತ್ತಿಯಾಗಿಸಿದರು. ಕೀರ್ತನಕಾರರು, ಸಂಗೀತಗಾರರು, ನಾಟಕಕಾರರು, ಸಂಶೋಧಕರು ಹೀಗೆ ಅವರಲ್ಲಿನ ಬೌದ್ಧಿಕತೆಯು ಅವರ ಸಂಪಾದನೆಗೆ ದಾರಿಯಾಯಿತು..

'ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು' ಎಂದು ಹೇಳುತ್ತೇವೆ ನಿಜ. ಅದನ್ನು ಶಿವಯೋಗ ಮಂದಿರವು ಸಾಕಾರಗೊಳಿಸಿ ಕೃಷಿ ವಿಜ್ಞಾನವನ್ನು ಹೊಸ ದೃಷ್ಠಿಕೋನದಿಂದ ಬಳಸಿಕೊಂಡು ಹಲವಾರು ದೂರದೃಷ್ಠಿಯ ಯೋಜನೆಗಳನ್ನು ಅನುಷ್ಠಾನಗೊಳಿಸಿದರು. ಇದರಿಂದ ಶಿವಯೋಗ ಮಂದಿರವು ಸಮಾಜದ ಏಳ್ಗೆಗೆ ಕೃಷಿ ಕಾಯಕದಿಂದ ಮಾತ್ರ ಸಾಧ್ಯವೆಂದು

* 'ವಚನ', ಅಂಚೆ, ರಾಜೂರ-೫೮೨೧೧೪, ತಾಲ್ಲೂಕು ಗಜೇಂದ್ರಗಡ (ಗದಗ), ಮೊ. ೯೪೪೯೨೨೦೭೨೨

ಬಗೆದು, ಸ್ಥಳೀಯರ ನೆರವಿನಿಂದ ಬರಡು ಭೂಮಿಯಲ್ಲಿ ಹಸಿರು ಕೊನರುವಂತೆ ಮಾಡಿದರು. ಮೇಟಿ ವಿದ್ಯೆಗೆ ಬಹಳಷ್ಟು ಆದ್ಯತೆಯನ್ನು ನೀಡಿದ ಸ್ವಾಮಿಗಳು ಶಿವಯೋಗ ಮಂದಿರದ ಆಧೀನದಲ್ಲಿರುವ ಜಮೀನುಗಳನ್ನು ಹದಗೊಳಿಸಿ, ಮಣ್ಣು ಸವೆಯದಂತೆ ಒಡ್ಡು ಹಾಕಿ ಸುಮಾರು ೪೦ ಎಕರೆ ಭೂಮಿಯನ್ನು ಪ್ರಯೋಗಕ್ಕೆ ಒಳಪಡಿಸಿದರು. ಅದರೊಂದಿಗೆ ನೂರಾರು ಎಕರೆ ಭೂಮಿಯನ್ನು ಭಕ್ತರಿಂದ ದಾನವಾಗಿ ಪಡೆದುಕೊಂಡು ಒಕ್ಕಲುತನದ ವೇದಿಕೆಯನ್ನಾಗಿಸಿಕೊಂಡರು. ಸನಿಹದ ಕೆಂದೂರ ಗ್ರಾಮದ ಕೆರೆಯಿಂದ ನೀರನ್ನು ಹರಿಸಿಕೊಂಡು ಭತ್ತ, ಕಬ್ಬು, ಬಾಳೆ, ತೆಂಗು, ಕಾಯಿಪಲ್ಲೆ, ಹಣ್ಣು ಹಂಪಲಗಳನ್ನು ಬೆಳೆದು ಪ್ರಗತಿಯನ್ನು ತೋರಿದರು. ಈ ಭಾಗದಲ್ಲಿ ಮೊದಲನೆಯದಾಗಿ 'ರಸ್ಟನ್' ಎಂಬ ಆಯಿಲ್ ಇಂಜನ್ ತರಿಸಿ ಆ ಮೂಲಕ ಮಲಪ್ರಭೆಯಿಂದ ಕೃಷಿ ಭೂಮಿಗೆ ನೀರನ್ನು ಹರಿಸಿ, ಈ ನೆಲವು ಹಸಿರು ಮಾಡಿ, ಸ್ವಾವಲಂಬನೆಗೆ ದಾರಿದೀಪವಾದರು. ಕೃಷಿ ಭೂಮಿಗೆ ಬೇಕಾದ ಗೊಬ್ಬರಕ್ಕಾಗಿ ಪಶುಸಂಗೋಪನೆಗಾಗಿ ನೂರಾರು ದನಗಳನ್ನು, ಉಳುಮೆ ಮಾಡಲು ಎತ್ತುಗಳನ್ನು ಶಿವಯೋಗಮಂದಿರಕ್ಕೆ ತರಲಾಯಿತು. ಜೊತೆಗೆ ನೂರಾರು ತಳಿಯ ಆಕಳುಗಳ ಸಾಕಾಣಿಕೆ ಮಾಡುತ್ತಾ, ಅವುಗಳ ಹಾಲನ್ನು ವಟುಗಳಿಗೆ, ಸಗಣಿಯನ್ನು ಭಸ್ಮ ತಯಾರಿಕೆಗೆ ಮತ್ತು ಭೂಮಿಗೆ ಗೊಬ್ಬರವಾಗಿ ಉಪಯೋಗಿಸಲಾಯಿತು. ಬನಶಂಕರಿ ದೇವಸ್ಥಾನದ ದಾರಿಯಲ್ಲಿ ಸುಮಾರು ೩೦ ಎಕರೆ ಭೂಮಿಯಲ್ಲಿ ನೀರಾವರಿಯನ್ನು ಕಲ್ಪಿಸಲಾಯಿತು. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಕುಮದ್ವತಿ ಮತ್ತು ವೃಷಭಾ ನದಿಗಳ ಸಂಗಮ ಸ್ಥಳದ ಕಪ್ಪನಹಳ್ಳಿಯಲ್ಲಿ ಹಾಲಪ್ಪ ಎಂಬವರು ನೀಡಿದ ೬೯ ಎಕರೆ ಭೂಮಿಯಲ್ಲಿ ಸುಮಾರು ೨೦೦ ಆಕಳುಗಳ ಸಾಕಾಣಿಕೆಯನ್ನು ಮಾಡುತ್ತಾ, ಈ ಭೂಮಿಯಲ್ಲಿ ಸಾಕಷ್ಟು ಭತ್ತವನ್ನು ಬೆಳೆಯಲಾಗುತ್ತಿದೆ. ಇದೆಲ್ಲಾ ನಿತ್ಯ ದಾಸೋಹಕ್ಕಾಗಿ ವಿನಿಯೋಗವಾಗುತ್ತಿದೆ. 'ಹಸಿದ ಹೊಟ್ಟೆಗೆ ಆಧ್ಯಾತ್ಮ ಹಿಡಿಸದು', ಆದರೆ ಕಾಯಕ ಶೀಲನಾದವನು ಮಾತ್ರ ಆಧ್ಯಾತ್ಮ ಕೃಷಿಯನ್ನು ಚೆನ್ನಾಗಿ ಸಾಧಿಸಬಲ್ಲನು' ಎಂಬುದನ್ನು ಸ್ವಾಮಿಗಳು ಮನಗಂಡಿದ್ದರು. ಅದರ ದ್ಯೋತಕವಾಗಿ ವ್ಯವಸ್ಥಿತ ಮಾರುಕಟ್ಟೆಯನ್ನು ಒದಗಿಸಿದರು. ಹಸಿರು ಕ್ರಾಂತಿಗೆ ನಾಂದಿ ಹಾಡಿದ ಹಾನಗಲ್ಲ ಕುಮಾರಸ್ವಾಮಿಗಳು ಅದರ ಮೊದಲ ಹರಿಕಾರರು. ಅವರಿಗೆ ಯೋಗ ಮತ್ತು ಭೋಗಗಳ ಸಮನ್ವಯ ದೃಷ್ಟಿ ಇತ್ತು. ಒಕ್ಕಲಿಗರು ಆರ್ಥಿಕವಾಗಿ ಸಬಲರಾಗಬೇಕು ಎಂಬ ಚಿಕಿತ್ಸಕ ಬುದ್ಧಿಯುಳ್ಳ ಸ್ವಾಮಿಗಳು ೧೯೧೯ರಲ್ಲಿ 'ಸಿದ್ದೇಶ್ವರ ಬ್ಯಾಂಕ್' ನ್ನು ಬಾಗಲಕೋಟಿಯಲ್ಲಿ ಆರಂಭಿಸಿದರು. ಇದರೊಂದಿಗೆ ಅಲ್ಲಿಯೇ (ಬಾಗಲಕೋಟ)ನಡೆದ ೪ ನೆಯ ವೀರಶೈವ ಮಹಾಸಭೆಯ ವಾರದ ಮಲ್ಲಪ್ಪನವರ ಸಲಹೆಯಂತೆ 'ಮುಂಬೈ ಚೆಂಬರ್ ಆಫ್ ಕಾಮರ್ಸ್' ಮಾದರಿಯಲ್ಲಿ ವೀರಶೈವ ವ್ಯಾಪಾರಿ ಸಂಘ ಸ್ಥಾಪಿಸಿ ಆ ಮೂಲಕ ಶಿವಯೋಗಮಂದಿರಕ್ಕೆ ಆರ್ಥಿಕ ಮೂಲದಿಂದ ಆದಾಯ ನಿರಂತರವಾಗಿ ಹರಿದುಬರುವಂತೆ ಮಾರ್ಗೋಪಾಯಗಳನ್ನು ರೂಪಿಸಿ, ನಿರಂತರ ಕ್ರಿಯಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡರು.

ಕೈಗಾರಿಕಾ ಕ್ರಾಂತಿಯ ನಂತರ ಗುಡಿಕೈಗಾರಿಕೆಗಳಿಗೆ ಕೊಡಲಿ ಪೆಟ್ಟು ಬಿದ್ದಿತ್ತು. ಜನರು ಕೆಲಸವನ್ನರಸಿ ಅಲೆಮಾರಿಗಳಾಗಿ ಅಲೆದಾಡುತ್ತಿದ್ದರು. ಸಮಾಜದಲ್ಲಿದ್ದ ಕರಕುಶಲ ಕಲೆಗಳು ಅವನತಿ ಹಾದಿಯನ್ನು ಹಿಡಿದವು. ಇದರಿಂದ ಅವುಗಳ ಪುನರಚನೆಗಾಗಿ ಶ್ರಮಿಸಲು ಸಾಧ್ಯವಾಯಿತು. ಇದನ್ನು ನಿಲ್ಲಿಸಲು ಕೃಷಿ ಮತ್ತು ವ್ಯಾಪಾರೋದ್ಯಮದಲ್ಲಿ ಮನಸ್ಸು ತೊಡಗಿಸಿ, ಅವರು ಆರ್ಥಿಕ ಕ್ಷೇತ್ರದಲ್ಲಿ ದೊಡ್ಡ ಹೆಜ್ಜೆ ಇಡುವಂತೆ ಪ್ರೇರೇಪಿಸಿದರು. ಒಕ್ಕಲಿಗರು, ಕುಂಬಾರರು, ಹಡಪಿಗರು, ಮಡಿವಾಳರು, ಹೂಗಾರರು, ಗೌಳಿಗರು, ನೇಕಾರಿಕೆ ವೃತ್ತಿಯುಳ್ಳ ಜನರು ವೀರಶೈವ ಜನಾಂಗದ ಬೆನ್ನೆಲುಬಾಗಿದ್ದಾರೆ. ಕೇವಲ ಧರ್ಮದಿಂದ ಅವರ ಆರ್ಥಿಕ ಸ್ಥಿತಿ ಬದಲಾಗದು. ಇವರಲ್ಲಿ ವೃತ್ತಿ ಕೌಶಲ್ಯ ಬೆಳೆಯಬೇಕು ಎಂದರಿತ ಸ್ವಾಮಿಗಳು ಅವರ ಗುಡಿ ಕೈಗಾರಿಕೆಗಳೊಂದಿಗೆ ಒಕ್ಕಲುತನವೂ ಸುಗಮಗಾಗಿಸಲು ಸಾಕಷ್ಟು ಶ್ರಮಿಸಿದರು. ಈ ವಿಷಯವನ್ನು ದಾನಶೂರ ಸಿರಸಂಗಿ ಲಿಂಗರಾಜರ ಅಧ್ಯಕ್ಷತೆಯಲ್ಲಿ ನಡೆದ ಮೊದಲ ಅಖಿಲ ಭಾರತ ವೀರಶೈವ ಮಹಾಸಭೆಯಲ್ಲಿ ಪ್ರಸ್ತಾಪಿಸಿದರು. ಗಾಧೀಜಿಯವರ 'ಖಾದಿ ಸ್ವರ್ಗದ ಹಾದಿ' ಪರಿಕಲ್ಪನೆಯನ್ನು ಹಾನಗಲ್ಲ ಕುಮಾರ ಸ್ವಾಮಿಗಳು ಅನುಸರಿಸಿ, ತಮ್ಮ ಜೀವನಪರ್ಯಂತರ ಸರಳವಾದ ಖಾದಿ ಬಟ್ಟೆಯನ್ನು ಧರಿಸಿ ಮಾದರಿಯಾಗಿ, ಇತರರಿಗೆ ಅದನ್ನು ಪ್ರೇರೇಪಿಸಿ, ಅದನ್ನು ಶಿವಯೋಗ ಮಂದಿರದ ಸಾಧಕರು ಅದನ್ನು ಅನುಕರಿಸುವಂತೆ ಮಾಡಿದರು. ಯಾಂತ್ರಿಕ ಉದ್ಯೋಗ ಮತ್ತು ವ್ಯಾಪಾರವನ್ನು ಕೈಗೊಳ್ಳಲು, ಸಾಧಕರ ಜೀವನ ನಿರ್ವಹಣೆಗಾಗಿ ಗುಡಿ ಕೈಗಾರಿಕೆಯಾಗಿ ವಿಭೂತಿ ತಯಾರಿಕಾ ಕೇಂದ್ರವನ್ನು, ಪಂಚಸೂತ್ರ ಲಿಂಗಪೀಠಿಕೆಗಳನ್ನು, ಕಬ್ಬಿಣ ವ್ಯಾಪಾರಿ ಘಟಕವನ್ನು, ಬಾಗಲಕೋಟಿಯಲ್ಲಿ ಶಿವಾನಂದ ಜಿನ್ನಿಂಗ ಮತ್ತು ಪ್ರೆಸ್ಸಿಂಗ್ ಫ್ಯಾಕ್ಟರಿಯನ್ನು, ಗುರುಸಿದ್ದೇಶ್ವರ ಚಲನಚಿತ್ರ ಮಂದಿರ ಸ್ಥಾಪನೆ, ಸಾವಯವ ಕೃಷಿ, ಒಕ್ಕಲುತನ, ಜಾನುವಾರು ಪ್ರದರ್ಶನ, ಭೂ ಅಭಿವೃದ್ದಿ ಕಾರ್ಯಾಗಾರಗಳನ್ನು ಆರ್ಥಿಕ ಮೂಲಕ್ಕಾಗಿ ಆರಂಭಿಸಿದರು.

ಸಮಾಜದಲ್ಲಿ ವೀರಶೈವ ಲಿಂಗಾಯತ ಸಂಸ್ಕೃತಿಯು ಅವನತಿಯ ಹಾದಿಯಲ್ಲಿ ಸಾಗುತ್ತಿರುವಾಗ, ಅಷ್ಟಾವರಣ ತಾತ್ವಿಕ ರೂಪವಾದ ಲಿಂಗ ತಯಾರಿಕೆ, ಶಾಸ್ತ್ರೀಯ ವಿಧಾನದಲ್ಲಿ ಸಾದಾ ಮತ್ತು ಕ್ರೀಯಾ ವಿಭೂತಿ ಘಟ್ಟಿಗಳನ್ನು ತಯಾರಿಸುವ ಘಟಕವನ್ನು ಆರಂಭಿಸಿದರು. ಅದು ಇಂದಿನವರೆಗೂ ತಡೆಯಿಲ್ಲದೇ ನಡೆದುಬಂದಿದೆ. ಇದರೊಂದಿಗೆ ಲಿಂಗವನ್ನಿರಿಸುವ ಕರಡಿಗೆಗಳು, ೬೩ ಪುರಾತನರನ್ನು ಸ್ಮರಿಸುವ ಗಟ್ಟಿ ಶಿವದಾರಗಳನ್ನು ನಿರ್ಮಿಸಲಾರಂಭಿಸಿದರು. ಈ ಉತ್ಪಾದನೆಗೆ ಧಾರ್ಮಿಕ ಚೌಕಟ್ಟಿನ ಮೂಲಕ ಶರಣರ ಕಾಯಕ ಸಿದ್ಧಾಂತಕ್ಕೆ ವೃತ್ತಿ ಗೌರವವನ್ನು ಕಲ್ಪಿಸಿ, ಇಲ್ಲಿನ ವಟುಗಳೊಂದಿಗೆ ಸುತ್ತಲಿನ ಪರಿಸರದ ಅನೇಕರ ಕೈಗಳಿಗೆ ಕೆಲಸವನ್ನು ನೀಡಿದರು. ಸಾಕಿದ ಹಸುಗಳಿಂದ ದೊರಕುವ ಸಗಣಿಯಿಂದ ವಿಭೂತಿಯನ್ನು, ಅವುಗಳಿಂದ ಹೈನುಗಾರಿಕೆಯನ್ನು ಹೆಚ್ಚಿಸಿದರೆ, ಅದರ ತುಪ್ಪದಿಂದ ಲಿಂಗದ ಕಂತೆಯನ್ನು ತಯಾರಿಸುವುದರೊಂದಿಗೆ, ಸುತ್ತಲಿನ ಪರಿಸರದಲ್ಲಿ ಬೆಳೆದ ಜಾನುವಾರುಗಳನ್ನು ಪ್ರದರ್ಶಿಸುವದರೊಂದಿಗೆ ರೈತರರಲ್ಲಿ ಜಾನುವಾರು ಸಾಕಾಣಿಕೆಗೆ ಪ್ರೇರಣೆ ನೀಡಿದರು. ಜಾನುವಾರು ಸಾಕಾಣಿಕೆಯನ್ನು ಬಹುಪಯೋಗಿಯಾಗಿ ಬಳಸಿಕೊಂಡು, ಉತ್ಪಾದನೆ ಮತ್ತು ಬೇಡಿಕೆಯಲ್ಲಿ ಸಮನ್ವಯತೆಯನ್ನು ಸಾಧಿಸಿದರು. ಇದನ್ನು ನಿರ್ವಹಿಸುವ ಕಾಯಕ ಜೀವಿಗಳಿಗೆ ವೃತ್ತಿ ಗೌರವ ದೊರಕಿಸಿಕೊಟ್ಟರು.

ಶಿವಯೋಗ ಮಂದಿರವು ಕೇವಲ, ಭಿಕ್ಷೆ, ಮತ್ತು ಜಮೀನಿನ ಉತ್ಪನ್ನಗಳಿಂದ ನಡೆಯುತ್ತಿತ್ತು. ಇದು ಶಿವಯೋಗಮಂದಿರದ ನಿರ್ವಹಣೆಗಾಗಿ ಸಾಕಾಗುತ್ತಿರಲಿಲ್ಲ. ಇದರಿಂದ ೨೦ಸಾವಿರ ರೂಗಳ ಬಂಡವಾಳದಲ್ಲಿ ಬಾಗಲಕೋಟಿಯಲ್ಲಿ ೧೯೧೧–೧೨ರಲ್ಲಿ ಶಿವಾನಂದ ಜಿನ್ನಿಂಗ್ ಫ್ಯಾಕ್ಟರಿಯನ್ನು ಸ್ಥಾಪಿಸಿದರು. ನಂತರ ಇದನ್ನು ಪ್ರಗತಿಗೊಳಿಸಲು ೧೯೧೬ರಲ್ಲಿ ೩೦ ಸಾವಿರ ರೂಗಳ ಬಂಡವಾಳವನ್ನು ತೊಡಗಿಸಿ ಅರಳಿಗಂಟು ಕಟ್ಟುವ ಪ್ರೆಸ್ಸನ್ನು ಆರಂಭಿಸದ ಫಲವಾಗಿ ಪ್ರತಿ ವರ್ಷ ಇದರಿಂದ ೪ ಸಾವಿರ ರೂಗಳು ಆದಾಯ ಬರುವಂತಾಯಿತು. ಇದರ ಹಿಂದಿನ ಶಕ್ತಿಗಳಾಗಿ ಹಾಲಕೇರಿ, ನವಲಗುಂದ, ಗುಳೇದಗುಡ್ಡ, ನಿಡಗುಂದಿಕೊಪ್ಪ, ರೋಣ ಸ್ವಾಮಿಗಳು ಪ್ರೇರಣೆ ನೀಡಿದರು. ಇದರಿಂದ ಆರ್ಥಿಕ ಪ್ರಗತಿಯು ಉತ್ತಂಗಕ್ಕೇರಿತು. ಅಂದಿನ ಸ್ವಾಮಿಗಳ ಬುದ್ಧಿ, ಅಪರಿಮಿತ ದೂರದೃಷ್ಟಿಯ ಫಲವಾಗಿ ಸುಮಾರು ೨೫೦ ಬಡಕುಟುಂಬಗಳಿಗೆ ಉದ್ಯೋಗ ದೊರಕಿತು.

ಈ ಜಿನ್ನಿಂಗ ಫ್ಯಾಕ್ಟರಿಯ ಪಕ್ಕದಲ್ಲಿ ೧೯೨೪ ರಲ್ಲಿ ಗುರುಸಿದ್ದೇಶ್ವರ ಚಿತ್ರಮಂದಿರವನ್ನು ನಿರ್ಮಿಸಲಾಯಿತು. ಇದರ ಮೂಲಕ ಚಿತ್ರೋದ್ಯಮಕ್ಕೆ, ಮನರಂಜನೆಗೆ ಮತ್ತು ಕಲಾಕಾರರಿಗೆ ಪ್ರೋತ್ಸಾಹದ ಹಿನ್ನೆಲೆಯೊಂದಿಗೆ ಶಿವಯೋಗಮಂದಿರಕ್ಕೆ ಆರ್ಥಿಕ ಭದ್ರತೆಯನ್ನು ಒದಗಿಸಿಕೊಂಡರು. ಇದೂ ಕೂಡಾ ಅನೇಕ ಏಳು ಬೀಳಿನೊಂದಿಗೆ ಮುಗ್ಗರಿಸಿದರೂ ನಿರಂತರ ಆದಾಯ ಮೂಲವಾಯಿತು. ಇವರು ಸ್ಥಾಪಿಸಿದ ಘಟಕಗಳ ಲಾಭಕ್ಕಿಂತ ಜನಸಮುದಾಯವು ವಲಸೆ ಹೋಗುವದನ್ನು ತಡೆದು ವೃತ್ತಿಯ ಬಗ್ಗೆ, ಸ್ವಾವಲಂಬನೆಗೆ ಶ್ರೀಕಾರ ಹಾಕಿದರು. ಇದೊಂದು ದೊಡ್ಡ ಇತಿಹಾಸ ಎಂದರೆ ತಪ್ಪಾಗಲಾರದು. ಏಕೆಂದರೆ ಸನಿಹದಲ್ಲಿ ಐಹೊಳೆ ಇದೆ. ಅಲ್ಲಿ ಪ್ರಾಚೀನ ಐಯ್ಯಾಹೊಳೆ. ೫೦೦ ವರ್ತಕರ ಸಂಘವು ಇವರ ಕಲ್ಪನೆಗೆ ಇಂಬು ನೀಡಿರಬೇಕು.

ಕಾಯಕದ ಎರಡನೆಯ ರೂಪವೆ ಬೌದ್ದಿಕ ವೃತ್ತಿಯದ್ದು. ಓದು ಬರಹದ ಮೂಲಕ ಕಾಯಕವನ್ನು ನಿರ್ವಹಿಸಬಹುದೆಂಬ ಕಲ್ಪನೆಯನ್ನು ಹಾನಗಲ್ಲ ಕುಮಾರಸ್ವಾಮಿಗಳು ಸಮಾಜಕ್ಕೆ ಮನವರಿಕೆ ಮಾಡಿಕೊಟ್ಟರಲ್ಲದೇ ಅದನ್ನು ಅನುಷ್ಠಾನಗೊಳಿಸಿದರು. ದೈಹಿಕ ಶ್ರಮದೊಂದಿಗೆ ಮಾನಸಿಕ ಬಲದಿಂದ ಬದುಕಬಹುದೆಂದು ತೋರಿಸಿಕೊಟ್ಟರು. ಇಲ್ಲಿ ಕಲಾ ಜಗತ್ತಿನ ಆಚಾರ್ಯಪುರುಷರು ಸಿದ್ದಗೊಂಡರು. ಸಂಗೀತಗಾರರು, ಕವಿಗಳು, ಕೀರ್ತನಕಾರರು, ಸಂಶೋಧಕರು, ಆಯುರ್ವೇದ ಪಂಡಿತರು, ಪತಂಜಲಿ ಯೋಗ ಸೂತ್ರದ ವಟುಗಳು ಇಲ್ಲಿ ಅವಿಷ್ಕಾರಗೊಂಡರು. ಧಾರ್ಮಿಕ ವಿಚಾರಗಳನ್ನು ಜನಮಾನಸದಲ್ಲಿ ಪರಿಣಾಮಕಾರಿಯಾಗಿ ಪ್ರಸಾರ ಮಾಡಲು ಸಾಕಷ್ಟು ಪುರಾಣ ಪ್ರವಚನಕಾರರು, ಸಂಗೀತಗಾರರು ಸಿದ್ದಿಯನ್ನು ಗಳಿಸಿಕೊಂಡರು. ಕೀರ್ತನೆಗೆ ಮಹತ್ವ ನೀಡಿದರೆ ಅದರಿಂದ ಸಂಗೀತ ಸಾಹಿತ್ಯಗಳೆರಡೂ ಬೆಳೆಯುತ್ತವೆ.ಅದನ್ನು ಅವಲಂಬಿಸಿ ಸಂಗೀತ ಪರಂಪರೆ ಹುಟ್ಟಿಕೊಂಡಿತು. ಇದಕ್ಕೆ ಅಗತ್ಯವಾದ ಸಾಹಿತ್ಯ ಸೃಷ್ಟಿಸುವ ಕವಿಗಳು ಹುಟ್ಟಿಕೊಂಡರು. ಸಂಗೀತ ಸಾಹಿತ್ಯದೊಂದಿಗೆ ಜನತೆಯನ್ನು ಸೆಳೆಯಲು ಮನರಂಜನೆಗಾಗಿ ನಾಟ್ಯ ಸಂಘವನ್ನು ಆರಂಭಿಸಲು ಪ್ರೇರಣೆಯಾಯಿತು. ಈ ಪರಂಪರೆಯಲ್ಲಿ ಇದನ್ನು ಬಳುವಳಿಯಾಗಿ ನೀಡಿದ ಫಲವಾಗಿ ಪಂಚಾಕ್ಷರಿ ಗವಾಯಿಗಳ ಶಿಷ್ಯರಾದ ಗದುಗಿನ ಪುಟ್ಟರಾಜ ಗವಾಯಿಗಳು ಜನಪ್ರೀಯತೆಯನ್ನು ಗಳಿಸಿದರು. ಆ ಮೂಲಕ ಗದಗಿನ ಅಜ್ಜಾರ ಕಂಪನಿ ಎಂದು ಹೆಸರಾದ ಕುಮಾರೇಶ್ವರ ಕೃಪಾಪೋಷಿತ ನಾಟ್ಯ ಸಂಘವು ಸ್ಥಾಪನೆಯಾಯಿತು. ಶಿವಯೋಗಮಂದಿರದಲ್ಲಿ ಸಾಧಕರು ಮಾತ್ರ ರೂಪಗೊಳ್ಳದೇ ಬೌದ್ದಿಕ, ಭೌತಿಕ ಸಾಧಕರು ನಿರ್ಮಾಣಗೊಂಡರು. ಇದರ ಜನಕರಾದ ಹಾನಗಲ್ಲ ಕುಮಾರಸ್ವಾಮಿಗಳು ಪ್ರಚಾರ ಪ್ರಿಯರಲ್ಲ. ತಮ್ಮ ಕಾರ್ಯ

ಚಟುವಟಿಕೆಗಳನ್ನು ಅವರು ಎಂದೂ ಹೇಳಿಕೊಳ್ಳಲಿಲ್ಲ. ಶಿವಯೋಗ ಮಂದಿರ ಕೇವಲ ವಟುಗಳ ಪಾಠ ಶಾಲೆಯಾಗದೇ ಅದು ಬೌದ್ಧಿಕ ಮತ್ತು ಭೌತಿಕ ವೃತ್ತಿಗಳ ಪ್ರಯೋಗ ಶಾಲೆಯಾಗಿತ್ತು. ಈ ಪರಿಸರದಲ್ಲಿ ಉಳಿದಿದೆ ಎಂದರೆ ಅದು ಶ್ರೀಗಳ ಪ್ರಯತ್ನದ ಫಲ. ಈ ಹೊತ್ತು ಇದನ್ನು ಪ್ರಚುರಪಡಿಸುವ ಅಕಾದೆಮಿಗಳಿವೆ, ಬಸವ ಅಧ್ಯಯನ ಕೇಂದ್ರ, ವಚನ ಕೇಂದ್ರ, ಶರಣ ಸಾಹಿತ್ಯ ಪರಿಷತ್‌ಗಳಿವೆ. ಇದನ್ನು ಸಾಕಷ್ಟು ಪ್ರಚಾರ ಮಾಡುವ ಮಾಧ್ಯಮಗಳಿವೆ. ಆದರೆ ಆ ಕಾಲಕ್ಕೆ ಬಸವ ತತ್ವವನ್ನು, ವೀರಶೈವ ಸಿದ್ಧಾಂತವನ್ನು ಹಳ್ಳಿ ಹಳ್ಳಿಗೆ ಮುಟ್ಟಿಸಿದ ಕೀರ್ತಿ ಶಿವಯೋಗ ಮಂದಿರದಲ್ಲಿ ತಯಾರಾದ ಸಾಧಕರು, ಪ್ರವಚನಕಾರರು ಮತ್ತು ಕೀರ್ತನಕಾರರಿಗೆ ಸಲ್ಲುತ್ತದೆ. ಅದೊಂದು ಅದ್ವಿತೀಯ ಸಾಧನೆ.



# ಹುತ್ರಿದುರ್ಗ: ಒಂದು ಚಾರಿತ್ರಿಕ ಅಧ್ಯಯನ

**ಹಂ.ಗು. ರಾಜೇಶ್***

**ಪೀಠಿಕೆ:** ಹುತ್ರಿದುರ್ಗವು ವಿಶಿಷ್ಟವಾದ ಭೌಗೋಳಿಕ ಚಹರೆಗಳಿಂದ ಕೂಡಿರುವ ಒಂದು ಗಿರಿದುರ್ಗವಾಗಿದೆ. ಇದು ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವಾಗಿದೆ. ಕುಣಿಗಲ್‌ನಿಂದ ರಾಮನಗರಕ್ಕೆ ಹೋಗುವ ಮಾರ್ಗದಲ್ಲಿ ೧೬ ಕಿ.ಮೀ. ದೂರದಲ್ಲಿ ಸಂತೇಪೇಟೆ ಎಂಬ ಗ್ರಾಮವಿದೆ. ಆ ಗ್ರಾಮದ ಪೂರ್ವಕ್ಕಿರುವ ಬೆಟ್ಟವೇ ಹುತ್ರಿದುರ್ಗ.

**ಭೌಗೋಳಿಕ ಲಕ್ಷಣ:** ಹುತ್ರಿದುರ್ಗಬೆಟ್ಟ (ಚಿತ್ರ-೧) ಮತ್ತು ಬಸವನದುರ್ಗಗಳ (ಚಿತ್ರ-೨) ನಡುವಿನ ಕಿಬ್ಬರಿಯಲ್ಲಿ 'ಹುತ್ರಿ' ಗ್ರಾಮವಿದೆ. ಸರಿಯಾಗಿ ಹೇಳಬೇಕೆಂದರೆ ಭೂಮಟ್ಟದಿಂದ ಸುಮಾರು ೨೦೦ ಅಡಿಗಳಷ್ಟು ಎತ್ತರದ ಮೈದಾನದಲ್ಲಿ ೫೦ ಮನೆಗಳ 'ಹುತ್ರಿ' ಗ್ರಾಮವಿದೆ. ಹುತ್ರಿದುರ್ಗಬೆಟ್ಟ ಮತ್ತು ಬಸವನಬೆಟ್ಟಗಳನ್ನು ಬಂಧಿಸಿರುವ ಮೊದಲ ಸುತ್ತಿನ ಕೋಟೆಯನ್ನು ಪ್ರವೇಶಿಸಿದರೆ ಈ ಗ್ರಾಮ ಸಿಗುತ್ತದೆ. ಗ್ರಾಮದ ಉತ್ತರಕ್ಕೆ ಹುತ್ರಿದುರ್ಗಬೆಟ್ಟವಿದೆ. ಇದು ಗ್ರಾಮದ ದಕ್ಷಿಣಕ್ಕಿರುವ 'ಬಸವನಬೆಟ್ಟ'ಕ್ಕಿಂತಲೂ ಎತ್ತರವಾಗಿದೆ. ಇದರ ಶಿಖರವನ್ನು 'ಶಂಕರಕುಂಬಿ' ಎನ್ನುತ್ತಾರೆ. ಈ ಬೆಟ್ಟವನ್ನೇರಲು ಏಳುಸುತ್ತಿನ ಕೋಟೆಯನ್ನು, ಒಂಬತ್ತು ದ್ವಾರಗಳನ್ನು ದಾಟಬೇಕಾಗಿದೆ. ಗ್ರಾಮದ ದಕ್ಷಿಣಕ್ಕಿರುವ ಚಿಕ್ಕಬೆಟ್ಟವನ್ನು ಸಂತೇಪೇಟೆಯಿಂದ ನೋಡಿದರೆ ಬಸವನಮುಖದಂತೆ ಕಾಣುವುದು. ಆದ್ದರಿಂದ ಅದಕ್ಕೆ ಬಸವನ ಬೆಟ್ಟ ಎಂದು ಹೆಸರು ಬಂದಿದೆ. ಇದರಲ್ಲಿ ಮೂರು ಸುತ್ತಿನ ಕೋಟೆಯನ್ನು ಕಾಣಬಹುದು. ಹುತ್ರಿದುರ್ಗ ಬೆಟ್ಟವು ಸಮುದ್ರಮಟ್ಟದಿಂದ ೩೭೦೮ ಅಡಿಗಳು ಎತ್ತರವಿದೆ.[೧] ಹುತ್ರಿ ಗ್ರಾಮದ ಪೂರ್ವಕ್ಕಿರುವ ಶಿಥಿಲವಾದ ಮಾಗಡಿ ದ್ವಾರದ ಮೂಲಕ ಸಾಗಿದರೆ ಒಂದು ಕಿರು ಕಣಿವೆ ಪ್ರದೇಶ ಸಿಗುತ್ತದೆ. ಈ ಕಣಿವೆಯಲ್ಲಿ ದೊಡ್ಡಬೆಟ್ಟದಿಂದ ಹರಿದು ಬರುವ ಜೌಗುನೀರಿಗೆ ಸ್ಥಳೀಯರು ಒಂದು ಒಡ್ಡು ಹಾಕಿ ಕೃತಕ ಕುಂಟೆಯೊಂದನ್ನು ನಿರ್ಮಿಸಿಕೊಂಡಿದ್ದಾರೆ. ಇದನ್ನು ದಾಟಿ ಮುಂದೆ ದಿಣ್ಣೆಯನ್ನು ಹತ್ತಿದರೆ ಆ ಮಾರ್ಗದ ಪಕ್ಕದಲ್ಲಿಯೇ ಕಬ್ಬಿಣದ ಅದಿರಿನ (ಹೆಮಟೈಟ್) ಸಾಲು ಸಾಗಿರುವುದನ್ನು ಗುರುತಿಸಬಹುದು. ಒಟ್ಟಾರೆ ಈ ಭೌಗೋಳಿಕ ಪರಿಸರ ಪ್ರಾಗಿತಿಹಾಸ ಅಧ್ಯಯನಕಾರರ ದೃಷ್ಟಿಯಿಂದ ಅತ್ಯಂತ ಕುತೂಹಲಕಾರಿಯಾಗಿದೆ.

**ಸ್ಥಳನಾಮ:** 'ಹುತ್ತರಿ' ಎಂಬುದಕ್ಕೆ 'ಹೊಸ ಅಕ್ಕಿ' ಎಂಬ ಅರ್ಥವನ್ನು ಸಂಕ್ಷಿಪ್ತ ಕನ್ನಡ ನಿಘಂಟು ನೀಡುತ್ತದೆ. ಈ ಪರಿಸರದಲ್ಲಿಯೇ ಮೊದಲು ಭತ್ತವನ್ನು ಇಲ್ಲಿನ ಜೌಗು ಪ್ರದೇಶದಲ್ಲಿ ಉತ್ಪಾದಿಸುತ್ತಿದ್ದಿರಬೇಕು. ಹಾಗೆ ಹೊಸದಾಗಿ ಉತ್ಪಾದಿಸಲ್ಪಟ್ಟ ಅಕ್ಕಿಗೆ 'ಹುತ್ತರಿ' ಎಂದು ಕರೆದಿರಬಹುದೇ? ಎಂಬುದು ನನ್ನ ಪ್ರಶ್ನೆ. ಇದಕ್ಕೂ ಇತ್ತೀಚೆಗೆ ಈ ಪ್ರದೇಶದಲ್ಲಿ ಸಿಕ್ಕಿರುವ ನವಶಿಲಾಯುಗದ ಕೊಡಲಿಯ ಅವಶೇಷಕ್ಕೂ ಏನಾದರೂ ಸಂಬಂಧವಿರಬಹುದೇ? ಇದು ತಜ್ಞರ ಮತ್ತಷ್ಟು ಅಧ್ಯಯನವನ್ನು ಬೇಡುತ್ತದೆ.

'ಹುತ್ತರಿ' ಹೆಸರಿನ ಹಿನ್ನೆಲೆಯು ಸ್ಥಳೀಯವಾಗಿ ಬೆಳೆಯುವ 'ಉತ್ತರಿ' ಅಥವಾ 'ಉತ್ರಾಣಿ' ಎಂಬ ಒಂದು ಬಗೆಯ ಔಷಧಿ ಸಸ್ಯದ ಮೂಲದಿಂದಲೂ ಬಂದಿರುವ ಸಾಧ್ಯತೆಗಳಿವೆ. ಅದೇ ರೀತಿ ಹುತ್ತರಿ ಹೆಸರಿನ ಮೂಲದ ಇನ್ನೊಂದು ಸಾಧ್ಯತೆ ಇದೆ. ಬಸವನಬೆಟ್ಟವು ಬಸವನ ಮುಖದಂತೆ ಕಾಣುವಂತೆ; ಹುತ್ರಿದುರ್ಗ ಬೆಟ್ಟವು ದಕ್ಷಿಣದಿಕ್ಕಿನಿಂದ ದೂರದಲ್ಲಿ ನಿಂತು ನೋಡುವವರಿಗೆ ಹುತ್ತದಂತೆ ಕಾಣುತ್ತದೆ. ಬಹುಶಃ ಈ ಕಾರಣದಿಂದ ಆ ಹೆಸರು ಬಂದಿರುವ ಸಾಧ್ಯತೆ ಹೆಚ್ಚಿದೆ.

**ಪ್ರಾಗಿತಿಹಾಸ:** ಹುತ್ರಿದುರ್ಗದ ಪರಿಸರದಲ್ಲಿ ಮೊಟ್ಟಮೊದಲಬಾರಿಗೆ ಪ್ರಸ್ತುತ ಕಬ್ಬಿಣಯುಗ/ಬೃಹತ್ ಶಿಲಾಯುಗದ ಸಮಾಧಿಗಳನ್ನು ಗುರುತಿಸಿರುತ್ತಾರೆ.[೨] ನಂತರ ರೇವಣ್ಣ ಸಿದ್ಧಯ್ಯ ಕೆ. ಎಂಬ ಯುವ ಸಂಶೋಧಕರು ಕೂಡ ಹುತ್ರಿದುರ್ಗದ ಪರಿಸರದಲ್ಲಿ ಮತ್ತಷ್ಟು ಬೃಹತ್ ಶಿಲಾಯುಗದ ಸಮಾಧಿಗಳು ಮತ್ತು ನಿಲುಸುಗಲ್ಲುಗಳನ್ನು ಪತ್ತೆ ಮಾಡಿರುತ್ತಾರೆ.[೩] ಪ್ರಸ್ತುತ ಲೇಖಕ ೨೦೧೪ರಲ್ಲಿ ಹುತ್ರಿದುರ್ಗದ ಮಾಗಡಿ ದ್ವಾರದಿಂದ ಪೂರ್ವಕ್ಕೆ ಸಾಗಿದರೆ ಸಿಗುವ ಮುಚ್ಚಾಲಮ್ಮನ ಗುಡಿ

* # ೩೩/ಎ, ಐಟಿಐ ಕಾಲೇಜು ಹತ್ತಿರ, ಕೆಂಪೇಗೌಡನಗರ, ವಿಶ್ವನೀಡಂ ಅಂಚೆ, ಬೆಂಗಳೂರು-೯೧, ಮೊ. ೭೮೨೯೪೦೪೦೬೩

ಪರಿಸರದಲ್ಲಿ ಹತ್ತಕ್ಕೂ ಹೆಚ್ಚು ಬೃಹತ್ ಶಿಲಾಯುಗದ ಕಲ್ಲುವೃತ್ತದ ಸಮಾಧಿಗಳನ್ನು ಗುರುತಿಸಿರುತ್ತಾರೆ (ಚಿತ್ರ–೩). ಅಲ್ಲಿಯೇ ಕಪ್ಪು ಮತ್ತು ಕೆಂಪು ದ್ವಿವರ್ಣದ ಮಡಕೆ ಚೂರುಗಳನ್ನು ಸಂಗ್ರಹಿಸಿದ್ದರು. ಅಲ್ಲದೆ 'ಕಲ್ಲುಸೇವೆ' ಎಂಬ ವಿಶಿಷ್ಟ ಆಚರಣೆ ಪದ್ಧತಿಯೊಂದು ಹುತ್ರಿದುರ್ಗ ಪರಿಸರದಲ್ಲಿ ಕೆಲವು ವರ್ಷಗಳ ಹಿಂದಿನವರೆಗೆ ನಡೆದುಕೊಂಡು ಬಂದಿರುವುದನ್ನು ಗುರುತಿಸಬಹುದು.

**ಕಲ್ಲುಸೇವೆ ಪದ್ಧತಿ:** ಇಲ್ಲಿನ ಪದ್ಧತಿಯ ಪ್ರಕಾರ ತೊನ್ನು ಇದ್ದವರು ಸತ್ತಾಗ ಅವರ ಶವಗಳನ್ನು ತೆಗೆದುಕೊಂಡು ತಲೆಬುರುಡೆ ಗುಡ್ಡದಲ್ಲಿ ಬಂಡೆಗಳ ನಡುವೆ ಇಟ್ಟು, ಮಡಕೆಯೊಂದರಲ್ಲಿ ನೀರನ್ನು ಇಟ್ಟು ಬರುತ್ತಿದ್ದರು. ಈ ಶವವನ್ನು ಪ್ರಾಣಿ ಮತ್ತು ಪಕ್ಷಿಗಳಿಗೆ  ಆಹಾರವಾಗಿ ಇಡುತ್ತಿದ್ದರು. ಪ್ರಾಣಿ–ಪಕ್ಷಿಗಳು ತಿಂದು ಉಳಿದ ಮೂಳೆಗಳನ್ನು ಸಂಗ್ರಹಿಸಿ ನಂತರ ಹೂಳುತ್ತಿದ್ದರು. ಈ ರೀತಿಯ ಶವಸಂಸ್ಕಾರ ವಿಧಾನವೊಂದನ್ನು ಬೃಹತ್ ಶಿಲಾಯುಗದ ಕಾಲದಲ್ಲಿಯೂ ಕಾಣಬಹುದು.[೪] ಆದ್ದರಿಂದ ಪ್ರಾಗೈತಿಹಾಸಿಕ ಕಾಲದ ಪದ್ಧತಿಯು ಇಂದಿಗೂ ಅನೂಚಾನವಾಗಿ ಇಲ್ಲಿನ ಸಮಾಜದಲ್ಲಿ ಉಳಿದು ಬಂದಿರುವಂತೆ ಕಾಣುತ್ತದೆ. ಈ ಪದ್ಧತಿಯು ಇಲ್ಲಿಗೆ ಸಮೀಪದ ಮಾಗಡಿ ಪರಿಸರದಲ್ಲಿಯೂ ಮಾತ್ರವಲ್ಲದೆ, ಮಂಡ್ಯ ಜಿಲ್ಲೆಯ ಸಂತೆಬಾಚಳ್ಳಿಯ ಪರಿಸರದಲ್ಲಿ, ಆನೇಕಲ್ಲು ತಾಲ್ಲೂಕಿನ ಸಮಂದೂರು, ಮಾರನಾಯಕನಹಳ್ಳಿಗಳಲ್ಲಿ ಮತ್ತು ಮಹಾದೇಶ್ವರ ಬೆಟ್ಟದ ಪರಿಸರದಲ್ಲಿಯೂ ಸ್ವಲ್ಪ ಭಿನ್ನವಾಗಿ ಇದ್ದ ಬಗ್ಗೆ ತಿಳಿದುಬರುತ್ತದೆ.[೫]

ಒಟ್ಟಾರೆ, ಎರಡು ಸಾವಿರ ವರ್ಷಗಳಿಗೂ ಪೂರ್ವದಲ್ಲಿ ಇಲ್ಲಿ ಜನರು ಜೀವಿಸುತ್ತಿದ್ದರೆಂದು ಅರ್ಥೈಸಬಹುದು. ಕಬ್ಬಿಣ ಯುಗದ ಜನರಿಗೆ ಅಗತ್ಯವಾಗಿದ್ದ ಕಬ್ಬಿಣದ ಅದಿರಿನ ಹೆಮಟೈಟ್ ನಿಕ್ಷೇಪದ ಸಾಲು ಸಮೀಪವೇ ಇದ್ದದ್ದು ಅವರಿಗೆ ಅನುಕೂಲಕರವಾಗಿ ಪರಿಣಮಿಸಿತ್ತು. ಇಂದು ಹುತ್ರಿದುರ್ಗದ ಸಮೀಪದಲ್ಲಿಯೇ ಕುಲುಮೆಪಾಳ್ಯ ಎಂಬ ಗ್ರಾಮವಿದೆ. ಹೆಸರೇ ಹೇಳುವಂತೆ ಕಬ್ಬಿಣವನ್ನು ಸ್ಥಳೀಯವಾಗಿ ಉತ್ಪಾದಿಸುವ ಕುಲುಮೆಗಳು ಕೆಲವು ವರ್ಷಗಳ ಹಿಂದಿನವರೆಗೆ ಅಸ್ತಿತ್ವದಲ್ಲಿದ್ದವು. ಅಂದಮಾತ್ರಕ್ಕೆ ಕುಲುಮೆಪಾಳ್ಯಕ್ಕೂ ಕಬ್ಬಿಣಶಿಲಾಯುಗಕ್ಕೂ ನೇರ ಸಂಬಂಧವಿಲ್ಲ. ಆದರೆ, ಕಬ್ಬಿಣ ಉತ್ಪಾದಿಸುವ ಪರಿಪಾಠ ಹುತ್ರಿದುರ್ಗದ ಪರಿಸರದಲ್ಲಿತ್ತು ಎಂಬುದಕ್ಕೆ ಇದನ್ನು ಪುರಾವೆಯಾಗಿ ಪರಿಗಣಿಸಬಹುದಾದ ಸಾಧ್ಯತೆಗಳಿವೆ.

ಹುತ್ರಿದುರ್ಗದ ಪರಿಸರದ ಕಣಿವೆ, ಜೌಗುಪ್ರದೇಶಗಳನ್ನು ಗಮನಿಸಿದರೆ, ಕೃಷಿಯ ಆರಂಭಕಾಲವಾದ ನವಶಿಲಾಯುಗದ ನೆಲೆ ಇದಾಗಿರಬಹುದೆಂಬ ಸಂಶಯ ಮೂಡುವುದು ಸಹಜ. ಈ ರೀತಿಯ ಸಂಶಯ ಕೇವಲ ಪ್ರಸ್ತುತ ಲೇಖಕ ಮಾತ್ರವಲ್ಲ, ಎಸ್.ಕೆ.ಅರುಣಿ ಅವರಂತಹ ಪುರಾತತ್ವತಜ್ಞರು, ರೇವಣಸಿದ್ಧಯ್ಯ ಕೆ. ಅವರಂತಹ ಯುವ ಸಂಶೋಧಕರು ಕೂಡ ವ್ಯಕ್ತಪಡಿಸಿದ್ದಾರೆ.[೬] ಆದ್ದರಿಂದ ಇತ್ತೀಚೆಗೆ ಎಸ್.ಕೆ. ಅರುಣಿ ಅವರ ಜೊತೆಗೆ ಪ್ರಸ್ತುತ ಲೇಖಕ ನಡೆಸಿದ ಕ್ಷೇತ್ರಕಾರ್ಯದ ವೇಳೆ ಅರುಣಿ ಅವರು ನವಶಿಲಾಯುಗದ ಶಿಲಾ ಕೊಡಲಿಯ ತುಣುಕೊಂದನ್ನು ಪತ್ತೆ ಮಾಡಿದರು[೭] (ಚಿತ್ರ–೪). ಆದರೆ, ಈ ಬಗ್ಗೆ ಮತ್ತಷ್ಟು ವ್ಯಾಪಕ ಕ್ಷೇತ್ರಕಾರ್ಯದ ಅಗತ್ಯವಿದೆ.

**ಹುತ್ರಿದುರ್ಗದ ಕೋಟೆ:** ಪ್ರಸ್ತುತ ಹುತ್ರಿದುರ್ಗವು ಏಳುಸುತ್ತಿನ ಕೋಟೆಯಿಂದಾಗಿ ಪ್ರಸಿದ್ಧವಾಗಿದೆ. ಯಲಹಂಕ ನಾಡಪ್ರಭುಗಳು ಈ ಕೋಟೆಯನ್ನು ನಿರ್ಮಿಸಿದರೆಂದು ಕೆಲವು ಇತಿಹಾಸಕಾರರು ಹೇಳುತ್ತಾರೆ.[೮] ಕೋಟೆಯ ಮೊದಲ ದ್ವಾರದಿಂದ ಬೆಟ್ಟದ ತುದಿಯವರೆಗೂ ೯ ಹೆಬ್ಬಾಗಿಲುಗಳು, ಎರಡು ದಿಡ್ಡಿ ಬಾಗಿಲುಗಳಿವೆ. ಬೆಟ್ಟದ ಮೊದಲನೆಯ ದ್ವಾರವು ದೊಡ್ಡದಾಗಿದ್ದರೆ ಕೊನೆಯ ದ್ವಾರವು ಅತ್ಯಂತ ಕಿರಿದಾಗಿದೆ. ಈ ಕೋಟೆಯ ಬಾಗಿಲುಗಳು ಒಂದಕ್ಕೊಂದು ನೇರವಾಗಿರದೆ ಅಂಕುಡೊಂಕಾಗಿವೆ. ಒಂದೊಂದು ಬಾಗಿಲಿಗೂ ಅಂತರವನ್ನು ಇರಿಸಲಾಗಿದೆ. ಇದರ ಉದ್ದೇಶ ಕೋಟೆಯು ಶತ್ರುಗಳಿಗೆ ಸುಲಭವಾಗಿ ವಶವಾಗದೆ, ಅವರು ಒಳಗೆ ಬರಲು ಸುಲಭಸಾಧ್ಯವಾಗದಿರಲೆಂದು ಕೋಟೆಯ ಬಾಗಿಲುಗಳ ರಚನೆ ಚಕ್ರವ್ಯೂಹದಂತೆ ಒಂದು ವಿಶಿಷ್ಟ ಚಿಂತನೆಯ ವೈಜ್ಞಾನಿಕ ವಿದ್ವತ್ತನ್ನು ಅಳವಡಿಸಿಕೊಂಡಂತೆ ಕಾಣಿಸುತ್ತದೆ ಎಂದು ಎಸ್.ಎ. ಮಂಜುಳ ಅವರು ಅಭಿಪ್ರಾಯ ಪಡುತ್ತಾರೆ.[೯] ಹೊರ ಕೋಟೆಯು ಮೂರು ಬಾಗಿಲುಗಳನ್ನು ಹೊಂದಿದೆ. ಅವುಗಳಲ್ಲಿ ಒಂದು ಎಲಿಯೂರು ಬಾಗಿಲು, ಇನ್ನೊಂದು ಮಾಗಡಿ ಬಾಗಿಲು, ಮತ್ತೊಂದು ಬಾಳೆಕಟ್ಟೆ ಬಾಗಿಲು. ಇವುಗಳು ಆಯಾ ಊರಿನ ದಿಕ್ಕಿಗೆ ಇರುವುದರಿಂದ ಆಯಾ ಹೆಸರಿನಿಂದ ಕರೆಯಲಾಗಿದೆ. ಕೋಟೆಯ ಬಗೆಗೆ ಅಧ್ಯಯನ ನಡೆಸಲು ನಮಗೆ ಒಂದೇ ಒಂದು ಶಾಸನ ಬಿಟ್ಟರೆ ಬೇರೆ ಆಧಾರಗಳಿಲ್ಲ. ಇದು ಎರಡನೇ ಸುತ್ತಿನ ಕೋಟೆಗೆ ನಿರ್ಮಿಸಿರುವ ಎರಡನೇ ದ್ವಾರವಾದ ಎಲಿಯೂರು ದ್ವಾರದ ತೊಲೆಯ ಮೇಲಿದೆ. ಅದರಲ್ಲಿ ಹೀಗಿದೆ:[೧೦]

೧. ಹೇವಳಂಬಿ ಸಂವತ್ಸರದ ಪಾಲ್ಗುಣ ಶುದ ೫ ಚೆಂನ

೨. ಮನಾಯಕಅಯನವರು ಮುತನಯಕ ಶಿಸ್ಯ ಜಂಗಮಯ

೩. ನ ಕೈಯ ಯೆಲಯೂರ ಬಾಗಿಲನು ನಿಜಸ್ತಂಭವಾಗಿ ಗೆಇಸಿದರು.

ಅಂದರೆ, ಚೆನ್ನಮನಾಯಕ ಎಂಬ ಅಧಿಕಾರಿಯು ಮುತ್ತನಾಯಕನ ಶಿಷ್ಯನಾದ ಜಂಗಮಯ್ಯನಿಂದ ಯೆಲಯೂರು ದ್ವಾರವನ್ನು ಸೂಕ್ತ ಸ್ತಂಭಗಳಿಂದ ನಿರ್ಮಿಸಿದನು (ಚಿತ್ರ–೫).

ಈ ಶಾಸನದಲ್ಲಿ ವರ್ಷದ ಉಲ್ಲೇಖವಿಲ್ಲ. ಬಿ.ಎಲ್.ರೈಸ್ ಅವರು ಸಂವತ್ಸರವನ್ನು ಆಧರಿಸಿ ಲಿಪಿಯ ಸ್ವರೂಪದ ಹಿನ್ನೆಲೆಯಲ್ಲಿ ಕ್ರಿ.ಶ. ೧೫೩೮ ಎಂದು ಊಹಿಸಿರುತ್ತಾರೆ. ಅಂದರೆ, ಹಿರಿಯ ಕೆಂಪೇಗೌಡನು ಯಲಹಂಕ ನಾಡನ್ನು ಆಳುತ್ತಿದ್ದ ಕಾಲವಾದ್ದರಿಂದ ಹುತ್ರಿದುರ್ಗದ ಎಲಿಯೂರು ದ್ವಾರವನ್ನು ನಿರ್ಮಾಣ ಮಾಡಿಸಿದ ಚೆನ್ನಮನಾಯಕ ಕೂಡ ಕೆಂಪೇಗೌಡನ ಅಧೀನ ಅಧಿಕಾರಿ ಇರಬಹುದೇ ಎಂಬ ಅನುಮಾನವನ್ನು ಉಂಟು ಮಾಡುತ್ತದೆ.

ಆದರೆ, ಚೆನ್ನಮನಾಯಕನ ಶಾಸನದ ಕಾಲವನ್ನು ರೈಸ್ ಅವರು ಸರಿಯಾಗಿ ಊಹಿಸಿರುವಂತೆ ತೋರುವುದಿಲ್ಲ. ಸಂವತ್ಸರವನ್ನು ಅವಲಂಭಿಸಿ ಊಹಿಸುವುದರಿಂದ ಕೆಲವೊಮ್ಮೆ ೬೦ ವರ್ಷಗಳ ವ್ಯತ್ಯಾಸಗಳು ಆಗುವ ಸಂಭವವಿರುತ್ತದೆ. ಇಲ್ಲಿ ಇದೇ ತರಹದ ವ್ಯತ್ಯಾಸವಾಗಿರುವಂತೆ ತೋರುತ್ತದೆ. ಏಕೆಂದರೆ ಚೆನ್ನಮನಾಯಕ ಹೆಸರಿನ ವ್ಯಕ್ತಿಯೊಬ್ಬ ಬೆಂಗಳೂರಿನ ಸುಲ್ತಾನಪಾಳ್ಯದ ಶಾಸನದಲ್ಲಿ ಕಂಡುಬರುತ್ತಾನೆ. ಆ ಶಾಸನದ ಚೆನ್ನಮನಾಯಕ ಮತ್ತು ಎಲಿಯೂರು ಶಾಸನದ ಚೆನ್ನಮನಾಯಕ ಒಬ್ಬನೇ ಅಥವಾ ಬೇರೆ ಬೇರೆಯೇ ಎಂಬುದನ್ನು ಗುರುತಿಸುವುದು ಮುಖ್ಯವಾಗಿದೆ. ಸುಲ್ತಾನ ಪಾಳ್ಯದ ಶಾಸನ ಪಾಠ ಈ ರೀತಿ ಇದೆ:[೧೧]

"ಸ್ವಸ್ತಿಶ್ರೀ ಜಯಭ್ಯುದಯವಾದ ಕಲಿಯುಗ ೪೦೦೦೦೦ ಸಂದ ಸಕವರುಷ ೧೪೩೯ನೆಯ ವಿರೋಧಿ ಸಂವತ್ಸರದ ಪುಷ್ಯ ಶು ೧ ಲೂ ಪುಂಣ್ಯಕಾಲದಲಿ ನರಸನಾಯಕರಿಗೆ ಸಲುವ ಯೆಲಹಕ್ಕನಾಡ ಸೀಮೆಯೊಳಗಣ ಅಣಿಲಕುಜೆಕೆಯು ಈಸ್ವರ ಪುರವೆಂದು ನರಸಪನಾಯಕರಿಗೆ ಪುಣ್ಯವಾಗಬೇಕೆಂದು ಚೆಂನಮನಾಯಕರು ಚೊಕೆಯ ಚಯಣ ಒಡೆಯರಿಗೆ ಕೊಟ್ಟ ಧರ್ಮ ಸಾಸನಕ್ರಮವೆಂತೆಂದರೆ ಈ ಪುರಕೆ ಸಲುವ ಚತುಸೀಮೆಯೊಳಗಾದ ಗದೆಬೆದಲು ಒಳಗಾದ ಸರ್ವಸ್ವಾಂಮ್ಯವನು ಅನುಭವಿಸುವದೆಂದು ಕೊಟ್ಟಧರ್ಮ್ಮ ಇದಕೆ ತಪ್ಪಿದವರು ಗಂಗೆಯಲಿ ಕಪಿಲೆ(ಯ) ಲಿ ಕೊಂದ ಪಾಪಕೆ ಹೋಹರು. (ಎಡಪಾರ್ಶ್ವದಲ್ಲಿ) ಇದಕೆ ತಪ್ಪಿದವರ ಹೆಂಡತಿಯ ಕುದುರೆ"

ಈ ಶಾಸನವು ಕೃಷ್ಣದೇವರಾಯನ ತಂದೆ ತುಳುವ ನರಸನಾಯಕನಿಗೆ ಸಂಬಂಧಿಸಿದ್ದೆಂದು ಹೇಳುವ ಆಧಾರವಿದೆ. ನರಸನಾಯಕನ ತಂದೆಯ ಹೆಸರು ಈಶ್ವರನಾಯಕನೆನ್ನುವುದು ಎಲ್ಲರಿಗೂ ತಿಳಿದ ವಿಷಯ. ದಾನಗ್ರಾಮಕ್ಕೆ 'ಈಶ್ವರಪುರ'ವೆಂದು ಹೆಸರಿಡಲಾಗಿದೆಯಾದ್ದರಿಂದ ಇದು ತುಳುವ ಈಶ್ವರನಾಯಕನ ಮಗನಾದ ನರಸನಾಯಕನು ಯಲಹಂಕನಾಡನ್ನು ೧೪೪೯ರಲ್ಲಿ ಆಳುತ್ತಿದ್ದಾಗಿನ ಶಾಸನವೆಂದು ಕೆ.ಜಿ.ಗೋಪಾಲಕೃಷ್ಣರಾವ್ ಅವರು ಅಭಿಪ್ರಾಯ ಪಟ್ಟಿದ್ದಾರೆ.[೧೨]

ಸುಲ್ತಾನಪಾಳ್ಯದ ೧೪೪೯ರ ಶಾಸನದಲ್ಲಿ ಬರುವ ಚೆನ್ನಮನಾಯಕನು ಎಲಿಯೂರು ದ್ವಾರವನ್ನು ನಿರ್ಮಿಸಿದ ಚೆನ್ನಮನಾಯಕನೇ ಆಗಿದ್ದಾನೆ ಎಂಬುದು ನನ್ನ ವಾದ. ಇದಕ್ಕೆ ಪೂರಕ ವಿಚಾರಗಳು ಹೀಗಿದೆ.

* ರೈಸ್ ಅವರು ಎಲಿಯೂರ ಶಾಸನದ ಕಾಲವನ್ನು ಸಂವತ್ಸರದ ಆಧಾರದ ಮೇಲೆ ಕ್ರಿ.ಶ. ೧೫೩೮ ಎಂದು ನಿರ್ಧರಿಸಿದ್ದಾರೆ. ಆದರೆ, ಮೊದಲೇ ಹೇಳಿದಂತೆ ಹಾಗೆ ನಿರ್ಧರಿಸುವ ಸಂದರ್ಭಗಳಲ್ಲಿ ಶಾಸನದ ಕಾಲ ೬೦ ವರ್ಷ ಹಿಂದೆ ಮುಂದೆ ಆಗುವ ಸಾಧ್ಯತೆಗಳಿರುತ್ತವೆ. ಆದ್ದರಿಂದ ಈ ಶಾಸನದ ಕಾಲವನ್ನು ೬೦ ವರ್ಷಗಳು ಹಿಂದಕ್ಕೆ ಹಾಕಿಕೊಂಡಾಗ ಕ್ರಿ.ಶ. ೧೪೭೮ಕ್ಕೆ ಸರಿ ಹೊಂದುತ್ತದೆ. ಈ ಹಿನ್ನೆಲೆಯಲ್ಲಿ ೧೪೪೯ರಲ್ಲಿ ಬೆಂಗಳೂರು ಪರಿಸರದಲ್ಲಿ ತುಳುವ ನರಸನಾಯಕನ ಅಧೀನದಲ್ಲಿದ್ದ ಅಧಿಕಾರಿ ಚೆನ್ನಮನಾಯಕನು ೧೪೭೮ರ ಹೊತ್ತಿಗೆ ಹುತ್ರಿದುರ್ಗಕ್ಕೆ ಸ್ಥಳಾಂತರಗೊಂಡಿರಬೇಕು ಎಂಬುದು ನನ್ನ ಊಹೆ. ಅದಕ್ಕೆ ಪುಷ್ಟಿನೀಡುವ ಅಂಶವನ್ನು ಗಮನಿಸಬಹುದು.

* ತೆಲುಗು ಕೃತಿ ವರಾಹ ಪುರಾಣದಲ್ಲಿ ನರಸನಾಯಕನ ತಂದೆ ಈಶ್ವರನಾಯಕನು ಸಾಳ್ವನರಸಿಂಹನ ದಂಡನಾಯಕನಾಗಿ ಅಡಗಿಸಿದ ದಂಗೆಗಳ ಉದ್ದನೆಯ ಯಾದಿಯೇ ಇದೆ. ಆ ಯಾದಿಯಲ್ಲಿ ಹುತ್ತರಿ, ಬೆಂಗಳೂರುಗಳೂ ಇವೆ.[೧೩] ಈಶ್ವರನಾಯಕನು ಬೆಂಗಳೂರು ಮತ್ತು ಹುತ್ರಿದುರ್ಗದ ದಂಗೆಗಳನ್ನು ಅಡಗಿಸಿದನಂತರ ಈ ಪ್ರದೇಶಗಳನ್ನು ಅವನ ಮಗನಾದ ನರಸನಾಯಕನು ನೋಡಿಕೊಳ್ಳಲಾರಂಭಿಸಿರಬೇಕು. ಅವನ ಅಧೀನದಲ್ಲಿದ್ದ ಚೆನ್ನಮನಾಯಕನನ್ನು ನರಸನಾಯಕನು ಬೆಂಗಳೂರು ಪರಿಸರದಿಂದ ಹುತ್ರಿದುರ್ಗಕ್ಕೆ ಕೋಟೆಯ ದುರಸ್ಥಿ ಕಾರ್ಯಕ್ಕೆ ನಿಯೋಜಿಸಿರಬಹುದು. ಆ ಸಂದರ್ಭದಲ್ಲಿ ಎಲಿಯೂರು ಬಾಗಿಲನ್ನು ಆತ ಮಾಡಿಸಿ ಹುತ್ರಿದುರ್ಗದ ಕೋಟೆಯನ್ನು ಬಲಪಡಿಸಿರಬಹುದೆಂದು ಊಹಿಸಬಹುದು.

**ಯಲಹಂಕ ನಾಡಪ್ರಭುಗಳು:** ಕೆಂಪೇಗೌಡನ ಮನೆತನದವರ ಶಾಸನಗಳು ನಮಗೆ ಹುತ್ರಿದುರ್ಗದ ಪರಿಸರದಲ್ಲಿ ಅಂದರೆ ಮಾಗಡಿ ಮತ್ತು ಕುಣಿಗಲ್ ತಾಲ್ಲೂಕುಗಳಲ್ಲಿ ಬಹಳ ತಡವಾಗಿ ಸಿಗುತ್ತವೆ. ಯಲಹಂಕ ನಾಡಪ್ರಭುಗಳ ಅಂದರೆ ಕೆಂಪೇಗೌಡನ ಮನೆತನದವರ ಮೊದಲ ಶಾಸನ ಮಾಗಡಿ ತಾಲ್ಲೂಕಿನಲ್ಲಿ ದೊರಕುವುದು ಕ್ರಿ.ಶ. ೧೬೨೧ರಲ್ಲಿ.[೧೪] ಕುಣಿಗಲ್ ತಾಲ್ಲೂಕಿನಲ್ಲಿ ದೊರಕುವ ಮೊದಲ ಶಾಸನದ ಕಾಲವನ್ನು ರೈಸ್ ಅನುಮಾನದಿಂದಲೇ ೧೫೮೮ ಎಂದಿದ್ದಾರೆ.[೧೫] ಆದರೆ ಈ ಶಾಸನದಲ್ಲಿ ಕೆಂಪಯ್ಯಗೌಡ ಎಂದು ಉಕ್ತವಾಗಿರುವ ವ್ಯಕ್ತಿ ಕುಣಿಗಲ್ಲನ್ನು ಆಳುತ್ತಿದ್ದ ಇಮ್ಮಡಿ ಕೆಂಪೇಗೌಡನ ಮಗನಾದ ಇಮ್ಮಡಿ ಹಿರಿಯ ಕೆಂಪೇಗೌಡ ಆಗಿರುವ ಸಾಧ್ಯತೆಗಳಿವೆ.[೧೬] ಈ ಶಾಸನದ ಕಾಲವನ್ನು ಸಹ ರೈಸರು ಸಂವತ್ಸರದ ಆಧಾರದ ಮೇಲೆ ಊಹಿಸಿರುವುದರಿಂದ ತಪ್ಪಾಗಿರುವಂತೆ ತೋರುತ್ತದೆ. ಆದ್ದರಿಂದ ಅವರು ನಿಶ್ಚಯಿಸಿರುವ ಕಾಲಕ್ಕೆ ೬೦ ವರ್ಷಗಳನ್ನು ಸೇರಿಸಿದಲ್ಲಿ ಕ್ರಿ.ಶ. ೧೬೪೮ ಆಗುತ್ತದೆ. ಇದು ಕುಣಿಗಲ್ ಸೀಮೆಯನ್ನು ಆಳುತ್ತಿದ್ದ ಇಮ್ಮಡಿ ಹಿರಿಯ ಕೆಂಪೇಗೌಡನ ಕಾಲಕ್ಕೆ ಸರಿ ಹೊಂದುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ, ೧೭ನೆಯ ಶತಮಾನದ ಆರಂಭಿಕ ದಶಕಗಳವರೆಗೆ ಹುತ್ರಿದುರ್ಗದ ಮೇಲೆ ಯಾವುದೇ ನಿಯಂತ್ರಣವನ್ನು ಯಲಹಂಕ ನಾಡಪ್ರಭುಗಳು ಹೊಂದಿರುವಂತೆ ಕಾಣುವುದಿಲ್ಲ. ಇವರ ಮೊದಲ ಶಾಸನ ಸಿಗುವುದೇ ಹುತ್ರಿದುರ್ಗಕ್ಕೆ ಸಮೀಪವಿರುವ ಕಲ್ಯಾದಲ್ಲಿ. ಅದರ ಕಾಲ ಕ್ರಿ.ಶ. ೧೬೨೧. ಅಂದರೆ, ಹುತ್ರಿದುರ್ಗದ ಕೋಟೆಯು ಯಲಹಂಕ ನಾಡಪ್ರಭುಗಳಿಗೂ ಪೂರ್ವದಲ್ಲಿಯೇ ನಿರ್ಮಾಣವಾಗಿತ್ತು. ಹುತ್ರಿದುರ್ಗವು ೧೬೬೩ರ ಹೊತ್ತಿಗೆ ಮೈಸೂರು ಒಡೆಯರ ಅಧೀನಕ್ಕೆ ಹೋಗುವುದರಿಂದ[೧೭] ಅರ್ಧಶತಮಾನಕ್ಕೂ ಹೆಚ್ಚು ಕಾಲ ಹುತ್ರಿದುರ್ಗ ಯಲಹಂಕ ನಾಡಪ್ರಭುಗಳ ಅಧೀನದಲ್ಲಿ ಇತ್ತೆಂದು ಹೇಳಲಾಗದು. ಈ ಅವಧಿಯಲ್ಲಿ ಯಲಹಂಕ ನಾಡಪ್ರಭುಗಳು ಕೆಲವು ಹಂತದ ಕೋಟೆಯನ್ನಾದರೂ ನಿರ್ಮಾಣ ಮಾಡಿಸಿರಬಹುದು. ಆದರೆ, ಯಾವ ಸುತ್ತಿನ ಕೋಟೆಗಳನ್ನು ನಿರ್ಮಿಸಿದರೆಂಬುದನ್ನು ಅರಿಯಲು ವಿಶೇಷ ಅಧ್ಯಯನದ ಅಗತ್ಯವಿದೆ.

**ಮೈಸೂರು ಒಡೆಯರ ಕಾಲ:** ಸುಮಾರು ಒಂದು ಶತಮಾನಗಳ ಕಾಲ ಮೈಸೂರು ಒಡೆಯರ ನಿಯಂತ್ರಣದಲ್ಲಿದ್ದ ಸಂದರ್ಭದಲ್ಲಿ ಹುತ್ರಿದುರ್ಗದ ಕೆಲವು ಸುತ್ತು ಕೋಟೆ ನಿರ್ಮಾಣವಾಗಿರಬಹುದು. ಸಾಂಸ್ಕೃತಿಕವಾಗಿ ಗಮನಿಸಿದಾಗ ಮುಚ್ಚಾಲಮ್ಮನ ಗುಡಿ ಮತ್ತು ಬಿಸಿಲು ಬಸವಣ್ಣನ ಮಂಟಪದ ನಡುವೆ ಇರುವ ಬನ್ನಿಮಂಟಪವು ಮೈಸೂರು ಒಡೆಯರ ಕಾಲದ ಮಹಾನವಮಿ ಆಚರಣೆಯ ಕುರುಹಾಗಿರಬಹುದಾದ ಸಾಧ್ಯತೆಗಳಿವೆ. ಒಡೆಯರ ನಂತರ ಹುತ್ರಿದುರ್ಗವು ಹೈದರಾಲಿ ಮತ್ತು ಅವನ ಮಗ ಟಿಪ್ಪುಸುಲ್ತಾನನ ಅಧೀನಕ್ಕೆ ಒಳಪಡುತ್ತವೆ.

**ಹೈದರಾಲಿ ಮತ್ತು ಟಿಪ್ಪು ಕಾಲ:** ಇವರ ಕಾಲದಲ್ಲಿ ಹುತ್ರಿದುರ್ಗದ ಕೋಟೆಯು ತಾಂತ್ರಿಕವಾಗಿ ಹಲವು ಮಾರ್ಪಾಟು ಹೊಂದಿರುವುದನ್ನು ಗಮನಿಸಬಹುದು. ಮುಖ್ಯವಾಗಿ ಬಸವನದುರ್ಗದಲ್ಲಿದ್ದ ತೆರೆದ ದ್ವಾರಗಳನ್ನು ಮಾರ್ಪಡಿಸಿ, ಬಾಗಿಲು ದ್ವಾರಗಳನ್ನಾಗಿ ಮಾಡಿರುವ ಕುರುಹುಗಳನ್ನು ಕಾಣಬಹುದು (ಚಿತ್ರ–೬). ಅದೇ ರೀತಿಯ ಪರಿವರ್ತನೆಗಳು ಹುತ್ರಿದುರ್ಗದ ಕೋಟೆಗಳಲ್ಲಿಯೂ ಗುರುತಿಸಬಹುದು. ಟಿಪ್ಪುಸುಲ್ತಾನನ ಕಾಲದ ಕೋಟೆಯಲ್ಲಿ ಆಗಿರುವ ಬಹುಮುಖ್ಯವಾದ ಬದಲಾವಣೆಗಳೆಂದರೆ, ಚೌಕಾಕಾರದ ಕೊತ್ತಲಗಳನ್ನು ವೃತ್ತಾಕಾರದ ಕೊತ್ತಲಗಳಾಗಿ ಪರಿವರ್ತಿಸಿರುವುದು.[೧೮] ವೃತ್ತಾಕಾರದ ಕೊತ್ತಲಗಳಲ್ಲಿ ಫಿರಂಗಿಗಳನ್ನು ೩೬೦ ಕೋನಗಳಲ್ಲಿ ತಿರುಗಿಸಿ ಉಡಾಯಿಸಬಹುದಾಗಿರುತ್ತದೆ (ಚಿತ್ರ–೭). ಇದರ ಜೊತೆಗೆ ಕೋಟೆಯ ಮೇಲ್ಭಾಗದ ಕೈಪಿಡಿಗೋಡೆಯನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿರುವುದನ್ನು ಗುರುತಿಸಬಹುದು. ಇವನ್ನು ಆರು ಮತ್ತು ಏಳನೆ ಸುತ್ತಿನ ಕೋಟೆಗಳಲ್ಲಿ ಕಾಣಬಹುದು. ಅಲ್ಲದೆ, 'ಶಂಕರಕುಂಬಿ'ಯ ಮೇಲೆ ಮದ್ದಿನ ಮನೆಯ ಅವಶೇಷವನ್ನು ಗುರುತಿಸಬಹುದು. ಇದೂ ಕೂಡ ಟಿಪ್ಪು ಸುಲ್ತಾನನ ಕಾಲದ ಕುರುಹಾಗಿದೆ.

ಟಿಪ್ಪು ಕಾಲದಲ್ಲಿ ಯುದ್ಧ ಖೈದಿಗಳನ್ನು ಸೆರೆ ಹಿಡಿದು ತಂದು ಹುತ್ರಿದುರ್ಗದ ಕೋಟೆಯಲ್ಲಿ ಬಂದಿಸಿಡುತ್ತಿದ್ದ ಬಗ್ಗೆ ವಿವರಗಳಿವೆ. ಮುಖ್ಯವಾಗಿ ಜೇಮ್ಸ್ ಬ್ರಿಸ್ಟವ್ ಎಂಬ ಖೈದಿಯ ವರದಿಗಳು ಟಿಪ್ಪು ಕಾಲದ ಹುತ್ರಿದುರ್ಗದ ಬಗೆಗೆ ಕೆಲವು ವಿವರಗಳನ್ನು ಕೊಡುತ್ತದೆ. "ಹುತ್ರಿದುರ್ಗವು ಶ್ರೀರಂಗಪಟ್ಟಣದಿಂದ ೫೦ ಮೈಲಿ ದೂರದಲ್ಲಿತ್ತು. ಐದು ದಿನದ ದಾರಿ. ಬೆಟ್ಟಕ್ಕೆ ಹೋಗುವ ದಾರಿ ತುಂಬಾ ಕಡಿದಾಗಿತ್ತು. ಕಾಡು ಕಡಿದು ಕಿರುದಾರಿ ಮಾಡಿದ್ದರು. ನಮಗೆ ಹಾಕಿದ ಕಾಲ್ಬೇಡಿಗಳಲ್ಲಿ ಕಲ್ಲಿನ ದಾರಿಯಲ್ಲಿ ಬರಿಗಾಲಿನಿಂದ ಬೆಟ್ಟ ಹತ್ತುವುದಕ್ಕೆ ಸಾಕಾಗಿ ಹೋಯಿತು. ಕೋಟೆಯ ರಕ್ಷಣೆಗೆ ಕೆಲವು ಮಲಬಾರಿ ಮತ್ತು ಇಬ್ಬರು ಇಂಗ್ಲಿಷ್ ಗೋಲಂದಾಜರಷ್ಟೆ ಇದ್ದದ್ದು... ಈ ದುರ್ಗಕ್ಕೆ ಬಂದವರೆಲ್ಲಾ ಮರಣ ಶಿಕ್ಷೆ ಪಡೆದಿದ್ದಾರೆ"[೧೯]

"ಇಲ್ಲಿ (ಹುತ್ರಿದುರ್ಗ) ಹಿಂದೂಗಳು ಯೂರೋಪಿಯನರ ಬಗ್ಗೆ ತೋರಿಸುತ್ತಿದ್ದ ದಯಾದಾಕ್ಷಿಣ್ಯಗಳ ಬಗ್ಗೆ ಹೇಳದೆ ಇರಲಾರೆ. ಹೊಟ್ಟೆಗಿಲ್ಲದೆ ಸಾಯುತ್ತಿದ್ದವರಿಗೆ ಅನ್ನ ಕೊಟ್ಟು ಕಾಪಾಡಿದ್ದಾರೆ. ಸುಲ್ತಾನನ ಸೇವೆಯಲ್ಲಿದ್ದುಕೊಂಡು ಅವನಿಗೆ



(ಚಿತ್ರ-೧) ಹುತ್ರಿದುರ್ಗಬೆಟ್ಟದ ನೋಟ (ಬಸವನದುರ್ಗದಿಂದ)



(ಚಿತ್ರ-೨) ಬಸವನದುರ್ಗ ನೋಟ (ಹುತ್ರಿದುರ್ಗದ ಮೇಲಿನಿಂದ)



(ಚಿತ್ರ-೩) ಬೃಹತ್ ಶಿಲಾಯುಗ ಸಮಾಧಿ (ಮುಚ್ಚಾಲಮ್ಮನಗುಡಿ ಮುಂಭಾಗ, ಹುತ್ರಿದುರ್ಗ)



(ಚಿತ್ರ-೫) ಚೆನ್ನಮನಾಯಕ ಮಾಡಿಸಿದ ಎಲಿಯೂರು ದ್ವಾರ




(ಚಿತ್ರ-೪) ಹುತ್ರಿದುರ್ಗದ ಪರಿಸರದಲ್ಲಿ ಎಸ್.ಕೆ. ಅರುಣಿ ಅವರು ಶೋಧಿಸಿದ ಶಿಲಾಉಪಕರಣದ ತುಣುಕು



(ಚಿತ್ರ-೬) ಪುನರ್ರಚಿಸಲ್ಪಟ್ಟಿರುವ ದ್ವಾರ (ಬಸವನದುರ್ಗ)



(ಚಿತ್ರ-೭) ಟಿಪ್ಪು ಕಾಲದಲ್ಲಿ ಪುನರ್ರಚಿಸಲ್ಪಟ್ಟಿರುವ ವೃತ್ತಾಕಾರದ ಕೊತ್ತಲಗಳು.

ಹೆದರಿ ಏನೂ ಮಾಡಲಾರದವರನ್ನು ಬಿಟ್ಟರೆ ಉಳಿದ ಕೆನ್ನೆರೀಸ್ (ಕನ್ನಡಿಗರು) ತುಂಬಾ ಸಭ್ಯರು. ಶಾಂತಿ ಸಮಾಧಾನದಿಂದ ನಡೆದುಕೊಳ್ಳುತ್ತಾರೆ. ಅನೇಕರಿಗೆ ತಮ್ಮನ್ನು ಆಳುವ ರಾಜನ ಹೆಸರೇ ಗೊತ್ತಿಲ್ಲ. ಉತ್ತುಬಿತ್ತಿ ಬೆಳೆ ತೆಗೆದು ಕೊಡಬೇಕಾದ ಕಂದಾಯ ಕವಳಿಗೆಗಳನ್ನು ಕೊಟ್ಟು ದನಕರ ಸಾಕಿಕೊಂಡು ನಿಶ್ಚಿಂತರಾಗಿ ಬಾಳು ಸಾಗಿಸುತ್ತಾರೆ. ಇಂತಾ ಬಡಪಾಯಿಗಳನ್ನು ಟಿಪ್ಪು ತನ್ನ ಮತಕ್ಕೆ ಸೇರಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಾನೆ."[೨೦]

"...ಐದು ವಾರಗಳು ನಮಗೆ ಅನ್ನ ಕೊಟ್ಟು ಕಾಪಾಡಿದವರು ದುರ್ಗದ ಮೇಲೆ ವಾಸವಾಗಿದ್ದ ಜನ. ಕಾವಲು ಪಡೆಯವರೂ ನಮ್ಮ ಮೇಲೆ ಕೊಂಚ ದಯೆ ತೋರಿಸಿ ಅನ್ನ ಕೊಡುತ್ತಿದ್ದರು... ದುರ್ಗದ ಮೇಲಿದ್ದ ಫಿರಂಗಿಗಳು ತುಕ್ಕು ಹಿಡಿದು ಉಪಯೋಗಕ್ಕೆ ಬಾರದಂತಾಗಿದ್ದವು. ಅವುಗಳನ್ನು ರಿಪೇರಿ ಮಾಡುವ ಕೆಲಸವನ್ನು ಹಿಂದೆ ಫಿರಂಗಿ ದಳದಲ್ಲಿದ್ದು ಅನುಭವ ಪಡೆದ ನನಗೆ ವಹಿಸಲಾಯಿತು. ಇದು ದೇವರ ಕೃಪೆ ಎನ್ನಬೇಕು. ಅಲ್ಲಲ್ಲಿ ದುರ್ಗದ ನಾನಾ ಕಡೆ ಏರಿಸಲಾಗಿದ್ದ ಆ ಫಿರಂಗಿಗಳನ್ನು ರಿಪೇರಿ ಪರೀಕ್ಷೆ ಮಾಡುವ ನೆಪದಲ್ಲಿ ನಾನು ದುರ್ಗದ ಸಂದಿಗೊಂದಿಗಳನ್ನೂ ಅಲ್ಲಿಂದ ಕಾಣುವ ಕಾಡನ್ನೂ, ದಾರಿಗಳನ್ನೂ ಸೂಕ್ಷ್ಮವಾಗಿ ಯಾರಿಗೂ ಅನುಮಾನ ಬಾರದಂತೆ ನೋಡಿಕೊಂಡೆ"[೨೧]

ಹೀಗೆ ಜೇಮ್ಸ್ ಬ್ರಿಸ್ಟವ್ ಹುತ್ರಿದುರ್ಗದ ಕೋಟೆ, ಅಲ್ಲಿನ ಫಿರಂಗಿಗಳ ಸ್ಥಿತಿ, ಜನರ ಮುಗ್ಧತೆ, ದಯೆಯಂತಹ ಸ್ವಭಾವಗಳನ್ನೆಲ್ಲ ದಾಖಲಿಸಿದ್ದಾನೆ. ಮುಂದುವರೆದು ಹುತ್ರಿದುರ್ಗದ ಕೋಟೆಯಿಂದ ಒಂದು ರಾತ್ರಿ ತಪ್ಪಿಸಿಕೊಂಡು ಹೋದ ಬ್ರಿಸ್ಟವ್‌ಗೆ ಜನರು ಹೇಗೆ ಸ್ಪಂದಿಸಿದರು ಎಂಬುದನ್ನು ಅಂತಃಕರಣದಿಂದ ಹೀಗೆ ಸ್ಮರಿಸಿದ್ದಾನೆ: "ಹಳ್ಳಿಯನ್ನು ಸಮೀಪಿಸಿದಾಗ ನನಗೆ ಮೊಟ್ಟ ಮೊದಲು ಸಿಕ್ಕಿದವರಳು ಒಬ್ಬ ಮುದುಕಿ. ಆಕೆ ನನ್ನನ್ನು ಮಾತಾಡಿಸಿದಳು. ನಮ್ಮಿಬ್ಬರ ಮಾತು ಕೇಳಿ ಬೇರೆ ಹೆಂಗಸರು ಅವರ ಮನೆಯಿಂದ ಹೊರಗೆ ಬಂದರು. ನನ್ನ ಸ್ಥಿತಿ ನೋಡಿ ಅಯ್ಯೋ ಪಾಪ ಎನ್ನುತ್ತಾ ಅವರವರ ಮನೆಗೆ ಹೋಗಿ ಆ ಪುಣ್ಯಾತಗಿತ್ತಿಯರು ರಾಗಿಮುದ್ದೆ ಹುಳ್ಳಿಕಾಳು ಸಾರು ತಂದುಕೊಟ್ಟರು. ಅದನ್ನು ಉಂಡಾಗ ಅನ್ನಿಸಿತು, ಇಡೀ ನನ್ನ ಜೀವಮಾನದಲ್ಲಿ ಅಂಥ ರುಚಿಯಾದ ಊಟ ಉಣ್ಣಲಿಲ್ಲ ಎಂದು... ನನ್ನ ಕಾಲಿನ ಗಾಯ ನೋಡಿದ ಆ ಹೆಂಗಸರು ಬಿಸಿ ನೀರು ತಂದು ಗಾಯ ತೊಳೆದರು. ನನ್ನ ಮುಂದಿನ ಪ್ರಯಾಣಕ್ಕೆ ರಾಗಿ ರೊಟ್ಟಿ ತಟ್ಟಿಕೊಟ್ಟರು. ಹೊರಟಾಗ ಒಂದು ದಾರಿ ತೋರಿಸಿ ಆ ದಾರಿಯಲ್ಲಿ ಹೋಗಬೇಡ. ಅಲ್ಲೊಬ್ಬ ಪಾಳೆಗಾರ ಇದ್ದಾನೆ, ಬೇರೆ ದಾರಿಯಲ್ಲಿ ಹೋಗು ಎಂದು ತಿಳಿಸಿ ನನಗೆ ಉಪಕಾರ ಮಾಡಿದರು. ಆ ದಯಾಳು ಹಳ್ಳಿಯ ತಾಯಂದಿರಿಗೆ ನನ್ನ ಕೃತಜ್ಞತೆ ಹೇಳಿ ಮುಂದೆ ಸಾಗಿದೆ"೨೨ ಹೀಗೆ ಹುತ್ರಿದುರ್ಗ ಮತ್ತು ಅದರ ಪರಿಸರದ ಜನತೆಯ ಬಗೆಗೆ ಜೇಮ್ಸ್ ಬ್ರಿಸ್ಟವ್ ಒಳ್ಳೆಯ ಮಾತುಗಳನ್ನು ದಾಖಲಿಸಿದ್ದಾನೆ.

**ಉಪಸಂಹಾರ:** ಪ್ರಸ್ತುತ ಅಧ್ಯಯನದಿಂದ ಹುತ್ರಿದುರ್ಗದ ಪರಿಸರವು ಬೃಹತ್‌ಶಿಲಾಯುಗದ ಕಾಲದಿಂದಲೂ ನಿರಂತರ ಜನವಸತಿಯನ್ನು ಹೊಂದಿರುವ ನೆಲೆಯಾಗಿರುವ ಸಾಧ್ಯತೆಗಳಿವೆ. ಕಬ್ಬಿಣ ಯುಗದಲ್ಲಿ ಆಚರಣೆಯಲ್ಲಿದ್ದ 'ಕಲ್ಸೇವೆ'ಯಂತಹ ಶವಸಂಸ್ಕಾರ ಪದ್ಧತಿಯು ಇತ್ತೀಚಿನ ವರ್ಷಗಳವರೆಗೆ ರೂಢಿಯಲ್ಲಿತ್ತು ಎಂಬುದೂ ಕೂಡ ಇದನ್ನು ಪುಷ್ಟೀಕರಿಸುವಂತೆ ತೋರುತ್ತದೆ.

ಮುಖ್ಯವಾಗಿ, ಹುತ್ರಿದುರ್ಗದ ಕೋಟೆಯನ್ನು ಕಟ್ಟಿದ್ದು ಯಲಹಂಕ ನಾಡಪ್ರಭು ಕೆಂಪೇಗೌಡ ಎಂಬ ವಿದ್ವಾಂಸರ ಅಭಿಪ್ರಾಯವಿದೆ. ಪ್ರಸ್ತುತ ಅಧ್ಯಯನದಿಂದ ಹುತ್ರಿದುರ್ಗದ ಕೋಟೆಯು ಯಲಹಂಕ ನಾಡಪ್ರಭುಗಳಿಗೂ ಪೂರ್ವದಲ್ಲಿಯೇ ರಚನೆಯಾಗಿತ್ತು. ಈ ಕೋಟೆಯು ಯಲಹಂಕ ನಾಡಪ್ರಭುಗಳ ನಿಯಂತ್ರಣದಲ್ಲಿ ಅರ್ಧ ಶತಮಾನಗಳಿಗೂ ಹೆಚ್ಚು ಕಾಲ ಇದ್ದಂತೆ ತೋರುವುದಿಲ್ಲ. ಆದ್ದರಿಂದಲೇ ಇವರಿಗೆ ಸಂಬಂಧಿಸಿದ ಲಿಖಿತ ಆಕರಗಳು ದೊರಕುವುದಿಲ್ಲ. ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಕೋಟೆ ಮತ್ತು ಕೊತ್ತಲಗಳ ಪುನರ್ರಚನೆಯಾಗಿದೆ. ಪಶ್ಚಿಮದ ದಿಕ್ಕಿನ ಕೊತ್ತಲಗಳನ್ನು ವೃತ್ತಾಕಾರದಲ್ಲಿ ನಿರ್ಮಿಸಲು ಪ್ರಯತ್ನಿಸಿರುವ ಅಪೂರ್ಣ ಕೆಲಸವನ್ನು ಗಮನಿಸಬಹುದು. ಕೋಟೆಯ ಗೋಡೆಗಳಲ್ಲಿ ಬಂದೂಕು ಕಿಂಡಿಗಳನ್ನು ನಿರ್ಮಿಸಿರುವುದನ್ನು ಕಾಣಬಹುದು. ಶಂಕರಕುಂಬಿಯಲ್ಲಿ ಟಿಪ್ಪು ಕಾಲದ ಮದ್ದಿನಮನೆಯ ಅವಶೇಷವನ್ನು ಗುರುತಿಸಬಹುದು. ತೆರೆದ ದ್ವಾರಗಳನ್ನು ಬದಲಿಸಿ, ಬಾಗಿಲುಗಳುಳ್ಳ ದ್ವಾರವನ್ನಾಗಿ ಪರಿವರ್ತಿಸಿರುವುದನ್ನು ವಾಸ್ತುಶಿಲ್ಪದ ಅಧ್ಯಯನದಿಂದ ಅರ್ಥಮಾಡಿಕೊಳ್ಳಬಹುದು. ಟಿಪ್ಪು ಕಾಲದಲ್ಲಿ ಹುತ್ರಿದುರ್ಗದ ಕೋಟೆಯಲ್ಲಿನ ಫಿರಂಗಿಗಳ ಗುಣಮಟ್ಟ ಮತ್ತು ಹುತ್ರಿದುರ್ಗದ ನಿವಾಸಿಗಳಲ್ಲಿದ್ದ ಮುಗ್ದತೆ, ದಯೆ, ಅಂತಃಕರಣವನ್ನು ಜೇಮ್ಸ್ ಬ್ರಿಸ್ಟವ್‌ನ ಬರವಣಿಗೆಗಳಿಂದ ತಿಳಿಯಬಹುದು.

[ಈ ಲೇಖನ ರಚನೆಗೂ ಮೊದಲು ನಡೆಸಿದ ಕ್ಷೇತ್ರಕಾರ್ಯದಲ್ಲಿ ಮತ್ತು ಆನಂತರದ ಚರ್ಚೆಗಳಲ್ಲಿ ನನ್ನ ಅರಿವನ್ನು ವಿಸ್ತರಿಸಿದ ಆತ್ಮೀಯರಾದ ಎಸ್.ಕೆ. ಅರುಣಿ ಅವರಿಗೂ ಮತ್ತು ಕ್ರಿಯಾಶೀಲ ಗೆಳೆಯ ಎಂ.ಪ್ರಕಾಶಮೂರ್ತಿ ಅವರಿಗೂ ನನ್ನ ಕೃತಜ್ಞತೆಗಳು.]



## ಅಡಿಟಿಪ್ಪಣಿಗಳು

೧. ತುಮಕೂರು ಜಿಲ್ಲಾ ಗ್ಯಾಸೆಟಿಯರ್, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು. ೨೦೧೭: ೧೧.

೨. ರಾಜೇಶ್ ಹಂ.ಗು., 'ಹುತ್ರಿದುರ್ಗದಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳು: ಹೊಸಹುಡುಕಾಟ', ಇತಿಹಾಸ ದರ್ಪಣ, ಪುಸ್ತಕ:೨೧–೨೨, ೨೦೧೪:೯–೧೬.

೩. ರೇವಣಸಿದ್ಧಯ್ಯ ಕೆ., 'ಹುತ್ತರಿದುರ್ಗ ಪರಿಸರದ ನವಶೋಧಿತ ಬೃಹತ್ ಶಿಲಾಯುಗ ಸಂಸ್ಕೃತಿಯ ಸಮಾಧಿ ನೆಲೆಗಳು', ಇತಿಹಾಸ ದರ್ಶನ, ಸಂಪುಟ–೩೧, ೨೦೧೬:೧೨–೧೪.

೪. ಸುಂದರ.ಅ. (ಸಂ.) ಕರ್ನಾಟಕ ಚರಿತ್ರೆ ಸಂಪುಟ–೧, ಕನ್ನಡ ವಿ.ವಿ. ಹಂಪಿ, ೧೯೯೭ :೧೮೦.

೫. ಕೃಷ್ಣಮೂರ್ತಿ ಎಂ.ಎಸ್., ಮಹದೇವಯ್ಯ ಎಂ.ಪಿ., 'ಕಲ್ಲುಸೇವೆ/ಕಲ್ಸೇವೆ (ಕಲ್ಲು+ಸೇವೆ)–ಬೃಹತ್ ಶಿಲಾ ಸಮಾಧಿ ಸಂಸ್ಕೃತಿಯ ಪರಂಪರೆಯೇ?', ಇತಿಹಾಸ ದರ್ಶನ, ಸಂಪುಟ–೧೪, ೧೯೯೯:೧–೪.

೬ ರೇವಣಸಿದ್ಧಯ್ಯ ಕೆ., ಪೂರ್ವೋಕ್ತ.

೭. '೪೦೦೦ ವರ್ಷದ ಶಿಲಾ ಕೊಡಲಿ ಪತ್ತೆ', ವರದಿಗಾಗಿ ನೋಡಿ ವಿಜಯವಾಣಿ (ತುಮಕೂರು ಮತ್ತು ರಾಮನಗರ ಆವೃತ್ತಿ) ದಿನಾಂಕ೧೬೦೭೨೦೧೮.

೮. ಹುತ್ರಿದುರ್ಗ ಕೋಟೆಯನ್ನು ನಿರ್ಮಿಸಿದವರು ಯಲಹಂಕ ನಾಡಪ್ರಭುಗಳು / ಕೆಂಪೇಗೌಡ ಎಂದು ಹಲವು ವಿದ್ವಾಂಸರು ಹೇಳಿದ್ದಾರೆ. ಮುಖ್ಯವಾಗಿ ಎಫ್.ಗುಡ್‌ವಿಲ್, ೨, ೧೯೨೪:೭೩–೭೪.; ಎಸ್.ಎ. ಮಂಜುಳ, ಉತ್ತರಿದುರ್ಗ, ಇತಿಹಾಸ ಕಥಾ ಸಂಗ್ರಹಕಾರರು, ಬೆಂಗಳೂರು, ೧೯೮೬:೩೪; ಜೆ.ಟಿ.ಜಯರಾಮಯ್ಯ, 'ಕೆಂಪೇಗೌಡರ ಕಾಲದ ಕೋಟೆ ಕೊತ್ತಲಗಳು', (ಸಂ.) ಎಂ.ಹೆಚ್.ಕೃಷ್ಣಯ್ಯ ಮತ್ತು ದೇವರಕೊಂಡಾರೆಡ್ಡಿ, ಬೆಂಗಳೂರು ಕೆಂಪೇಗೌಡರ ವಂಶಸ್ಥರು, ಜನತಾ ಶಿಕ್ಷಣ ಸಂಸ್ಥೆ, ಬೆಂಗಳೂರು, ೧೯೯೬:೬೧–೬೩; ಎಸ್.ಕೆ.ಅರುಣಿ, ಯಲಹಂಕ ನಾಡ ಪ್ರಭುಗಳ ವಾಸ್ತುಶಿಲ್ಪ–ಶಿಲ್ಪಕಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೨೦೦೬:೨೭೨.

೯. ಮಂಜುಳ ಎಸ್.ಎ., ಉತ್ತರೀದುರ್ಗ, ಇತಿಹಾಸ ಕಥಾ ಸಂಗ್ರಹಾಕರು: ಬೆಂಗಳೂರು. ೧೯೮೬:೩೬–೩೭.

೧೦. ರೈಸ್ ಬಿ.ಎಲ್., ೧೯೦೪, ಎಪಿಗ್ರಾಫಿಯ ಕರ್ನಾಟಿಕ ಸಂಪುಟ–೧೨, ಕುಣಿಗಲ್ ಶಾಸನ ಸಂಖ್ಯೆ–೨೦.

೧೧. ಗೋಪಾಲಕೃಷ್ಣರಾವ್ ಕೆ.ಜಿ., 'ಯಲಹಂಕ ನಾಡಿನ ದಂಗೆಗಳು – ಕೆಲವು ಹೊಸ ವಿಚಾರಗಳು', (ಸಂ.) ಗೋಪಾಲ್ ಆರ್., ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆಗಳು, ೨೦೧೦:೧೩೧.

೧೨. ಅದೇ.

೧೩. ಅದೇ.

೧೪. ರೈಸ್ ಬಿ.ಎಲ್., ೧೯೦೫, ಎಪಿಗ್ರಾಫಿಯ ಕರ್ನಾಟಿಕ ಸಂಪುಟ–೯, ಮಾಗಡಿ–೨೫.

೧೫. ರೈಸ್ ಬಿ.ಎಲ್., ೧೯೦೪, ಪೂರ್ವೋಕ್ತ: ಕುಣಿಗಲ್ ಶಾಸನ ಸಂಖ್ಯೆ–೨೩.

೧೬. ರಾಜೇಶ್ ಹಂ.ಗು., 'ಕೆಂಪಾಪುರ ಸಮಾಧಿಯ ಕೆಂಪೇಗೌಡ ಯಾರು?', ಇತಿಹಾಸ ದರ್ಪಣ, ಪುಸ್ತಕ–೨೮, ೨೦೧೬:೬೩–೮೨.

೧೭. ಅದೇ. ಪು. ೭೨–೭೫.

೧೮. ಎಫ್.ಗುಡ್‌ವಿಲ್, ಪೂವೋಕ್ತ, ೧೯೨೪:೭೪.

೧೯. ನಾಗೇಗೌಡ ಎಚ್.ಎಲ್., ಪ್ರವಾಸಿಕಂಡ ಇಂಡಿಯಾ ಸಂಪುಟ–೮, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೯೮:೧೨೨–೧೨೩.

೨೦. ಅದೇ. ೧೨೩.

೨೧. ಅದೇ.

೨೨. ಅದೇ. ೧೨೭.

## ೯೪

# ಮಂಡ್ಯ ಜಿಲ್ಲೆಯ ನಾರಾಯಣದುರ್ಗ ಪ್ರದೇಶದ ಇತಿಹಾಸ

ಲಿಂಗರಾಜು*

**ಜಿಲ್ಲಾ** ಕೇಂದ್ರ ಮಂಡ್ಯದಿಂದ ಮೇಲುಕೋಟೆ ಮಾರ್ಗವಾಗಿ ವಸಂತಪುರ, ರಾಯಸಮುದ್ರ, ಮಾರ್ಗವಾಗಿ ಹಾದು ಬಂದರೆ ನೀತಿಮಂಗಲದ ಬಳಿಯಿರುವ, ಮತ್ತು ತಾಲ್ಲೂಕು ಕೇಂದ್ರ ಕೃಷ್ಣರಾಜ ಪೇಟೆಯಿಂದ ಎಂಟು ಕಿ.ಮೀ ಈಶಾನ್ಯಕ್ಕಿರುವ ಸಿಂಧಘಟ್ಟದ ಕೆರೆಯಾಚೆ ಇರುವ ಗಿರಿಶ್ರೇಣಿಯೇ ನಾರಾಯಣ ದುರ್ಗವಾಗಿದೆ. ಸ್ಥಳಿಯರು ಇದನ್ನು ಕಲ್ಲೇಶ್ವರ ಬೆಟ್ಟವೆಂದು ಕರೆಯುತ್ತಾರೆ.

ನಾರಾಯಣ ದುರ್ಗದಂತೆ ಮಾದಿಗಿತ್ತಿಬೆಟ್ಟ, ಹಂದಿ ಬೆಟ್ಟ ಹಾಗೂ ಮುದಿಬೆಟ್ಟಗಳು ದುರ್ಗಮವಾಗಿದ್ದು ಇಲ್ಲಿರುವ ಕಲ್ಲಾಸರೆಯ ಬಂಡೆಗಳ ಕುರುಹುಗಳು, ಗವಿಗಳ ನಿರ್ಮಾಣ ರಚನೆ, ಬೆಟ್ಟಗಳ ಹಾಸು ಪಾಸಿನಲ್ಲಿ ಕಲ್ಲಿನ ಬಂಡೆಯಲ್ಲಿ ನಿರ್ಮಿಸಿರುವ ಹೊಳಕಲ್ಲು ಮಾದರಿಯ ರಚನೆಯ ಕುರುಹುಗಳು ಈ ಪ್ರದೇಶ ಶಿಲಾಯುಗದ ಮಾನವನ ಕಾಲಕ್ಕೆ ಸಂಬಂಧಿಸಿದ ನೆಲಗಳಾಗಿರುದ್ದುದರ ಕುರುಹುಗಳಾಗಿವೆ.

**ಬೆಟ್ಟಸಾಲುಗಳ ವೈಶಿಷ್ಟ್ಯತೆ:** ಸ್ಥಳೀಯರು ಪ್ರಾದೇಶಿಕ ನೆಲಗಟ್ಟಿನ ಮೇಲೆ ಊರುಗಳಿಗೆ ಹೆಸರುಕಟ್ಟಿದ್ದಾರೆ. ಸಿಂಧು-ಸಮುದ್ರ ಊರಿನ ದೊಡ್ಡ ಕೆರೆ. ಕೆರೆಗೆ ಒತ್ತಿಕೊಂಡಂತಿರುವ ಘಟ್ಟಗಳು ಎರಡೂ ಸೇರಿ ಸಿಂಧುಘಟ್ಟ> ಸಿಂದಘಟ್ಟ ಆಗಿದೆ. ಇಲ್ಲಿ ಇನ್ನೂ ಒಂದು ಪ್ರಾಕೃತಿಕ ಸನ್ನಿವೇಶವೆಂದರೆ ಮುದಿಬೆಟ್ಟ, ಮತ್ತು ಕಲ್ಲೇಶ್ವರ ಬೆಟ್ಟ ಎಂಬ ಎರಡು ಬೆಟ್ಟ ಅಥವಾ ಘಟ್ಟಗಳು ಸಂಧಿಸುತ್ತವೆ. ಈ ಸಂಧಿ-ಸಿಂದ ಆಗಿ ಸಿಂಧಘಟ್ಟವಾಗಿದೆ ಎಂಬುದು ಸ್ಥಳಿಯರ ಅಭಿಪ್ರಾಯವಾಗಿದೆ. (ಪುಟ ೧೭೯) 'ಅನಾದಿ ಅಗ್ರಹಾರ ಸಂಗಮೇಶ್ವರಪುರ' ಎಂಬ ಅಭಿದಾನದೊಂದಿಗೆ ವಿದ್ಯಾಕೇಂದ್ರವಾಗಿ ಹೊಯ್ಸಳ ಶಾಸನಗಳಲ್ಲಿ ಇದು ಉಲ್ಲೇಖಿತಗೊಂಡಿದ್ದು, ನೆರೆಯ ತೊಣ್ಣೂರಿನ (ಕ್ರಿ.ಶ. ೧೧೫೭ರ) ಶಾಸನದಲ್ಲಿ ಎರಡು ಸಿಂಧಘಟ್ಟಗಳು ಮೊದಲಿಗೆ ನಮೂದಿತವಾಗಿದ್ದು ಹಿಂದೆ ಇಲ್ಲಿ ದೊಡ್ಡ ಮತ್ತು ಚಿಕ್ಕ ಸಿಂದಘಟ್ಟಗಳಿದ್ದು, ಕಾಲಾನಂತರ ಎರಡು ಸೇರಿ ಒಂದಾದಂತೆ ತೋರುತ್ತದೆ.

ನಾರಾಯಣ ದುರ್ಗಕ್ಕೆ ಹೊಂದಿಕೊಂಡಂತಿರುವ ಮಾದಗಿತ್ತಿಬೆಟ್ಟ, ಹಂದಿಬೆಟ್ಟ, ಮುದಿಬೆಟ್ಟಗಳಲ್ಲಿ ಕಂಡುಬರುವ ಗವಿಗಳನ್ನು ಸಿದ್ದ ಪುರುಷರು ತಪ್ಪಸ್ಸು ಮಾಡಿದ ಸ್ಥಳವೆನ್ನುತ್ತಾರೆ. ಸಿದ್ದರು ತಪಸ್ಸು ಮಾಡಿದ್ದರಿಂದ ಸಿದ್ಧರ ಘಟ್ಟ ಎಂಬ ಹೆಸರು ಬಂದು ಅದೇ ಸಿಂಧಘಟ್ಟವಾಯಿತ್ತೆಂಬ ಅಭಿಪ್ರಾಯವಿದೆ.

ಊರ ಕೆರೆಯಾಚೆ ಇರುವ ಗಿರಿ ಶ್ರೇಣಿಯೇ ನಾರಾಯಣ ದುರ್ಗವಾಗಿದ್ದು, ಅದಕ್ಕೆ ಹೊಂದಿಕೊಂಡಂತೆ ಮಾದಗಿತ್ತಿಬೆಟ್ಟ, ಹಂದಿ ಬೆಟ್ಟ, ಹಾಗೂ ಮುದಿಬೆಟ್ಟಗಳಿವೆ. ಮುದಿಬೆಟ್ಟದಲ್ಲಿರುವ ಗವಿಗಳು ಶಿಲಾಯುಗ ಮಾನವನ ನೆಲೆಯಾಗಿರುವ ಸಾಧ್ಯತೆಗಳಿವೆ.



ನಾರಾಯಣ ದುರ್ಗದ ಕಲ್ಲಾಸರೆ ನೆಲೆಗಳು







ವಿವಿಧ ಕಾಲಘಟ್ಟ ಸಂಬಂಧಿಸಿದ ಒಳಕಲ್ಲು ಕುಲಿಗಳ ದೃಶ್ಯ.

* ಇತಿಹಾಸ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಮಹಾವಿದ್ಯಾಲಯ (ಸ್ವಾಯತ್ತ), ಮಂಡ್ಯ-೫೭೧೪೦೩, ಮೊ. ೯೮೪೪೮೯೭೪೧೭

**ಸಿದ್ದರ ಗವಿಗಳು:** ನಾರಾಯಣ ಬೆಟ್ಟದಲ್ಲಿನ ತೀರ ಕಡಿದಾಗಿರುವ ಬುಡದಲ್ಲಿ 'ಸಿದ್ದರ ಗವಿ'ಗಳಿವೆ. ಜನರ ಆಡು ಭಾಷೆಯಲ್ಲಿ 'ಚಿದರ ಗವಿ' ಎಂದು ಕರೆಯಲ್ಪಟ್ಟಿದೆ. ಇದು ವಿಶಾಲವಾಗಿದ್ದು, ಒಳಭಾಗದಲ್ಲಿ ಕುಂಡನ ಚೌಡಿ, ಶಿವನ ಲಿಂಗ, ಕಲ್ಲಿನ ಬಂಡೆಯ ಮೇಲೆ ಕೆತ್ತಲ್ಪಟ್ಟಿರುವ ಆಂಜನೇಯನ ಶಿಲ್ಪಾಕೃತಿಗಳಿರುವ ಮಾಹಿತಿಯನ್ನು ಸ್ಥಳಿಯರಿಂದ ಸಂಗ್ರಹಿಸಲಾಗಿದೆ. ಇಲ್ಲಿಂದ ಮೇಲೆ ಇರುವ ಕಲ್ಲೇಶ್ವರ ದೇವಾಲಯಕ್ಕೆ ಹೋಗಲು ಗುಪ್ತ ಸುರಂಗ ಮಾರ್ಗವಿದೆ ಎಂದು ಸ್ಥಳಿಯರ ನಂಬಿಕೆಯಾಗಿದೆ.

ನಾರಾಯಣ ದುರ್ಗಕ್ಕೆ ಹೊಂದಿಕೊಂಡಂತ್ತಿರುವ ಮಾದಗಿತ್ತಿಬೆಟ್ಟ, ಹಂದಿಬೆಟ್ಟ, ಮುದಿಬೆಟ್ಟಗಳಿವೆ. ಇಲ್ಲಿನ ಗವಿಗಳು ಸಿದ್ದಪುರುಷರ ತಪಸ್ಸಿನ ಸ್ಥಳವೆನ್ನುತ್ತಾರೆ. ಸ್ಥಳಿಯ ನಿವಾಸಿಗಳು ಈ ಬೆಟ್ಟಗಳ ಗವಿಗಳಲ್ಲಿ ಸಿದ್ದ ಪುರುಷರು ತಪ್ಪಸ್ಸನ್ನು ಮಾಡಿದ್ದರಿಂದ ಇವುಗಳು ಸಿದ್ದರ ಗವಿಗಳೆಂದು ಪ್ರಸಿದ್ದಿಯಾಗಿವೆ ಎನ್ನುತ್ತಾರೆ. ಕೆಲವು ವಿದ್ವಾಂಸರ ಪ್ರಕಾರ ಶಿಲಾಯುಗದ ಮಾನವನ ನೆಲೆಯಾಗಿರುವ ಸಾಧ್ಯತೆಗಳಿವೆ. ಮಂಡ್ಯ ಜಿಲ್ಲೆಯ ಸುತ್ತಮುತ್ತಲಿನ ಅನೇಕ ಬೆಟ್ಟಗಳಲ್ಲಿ ಈ ರೀತಿಯ ಸಿದ್ದರ ಗವಿಗಳಿರುವ ಪ್ರತೀತಿಯಿದೆ. ಇದಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ.

**ನಾರಾಯಣ ದುರ್ಗದ ಕೋಟೆಯ ನಿರ್ಮಾಣ ರಚನೆ:** ನಾರಾಯಣ ದುರ್ಗದ ಬೆಟ್ಟದ ಒಂದು ಪಾರ್ಶ್ವ ತೀರಾ ಕಡಿದಾಗಿದ್ದು, ಮಾದಗಿತ್ತಿಬೆಟ್ಟದ ಪಾರ್ಶ್ವದಿಂದ ಬೆಟ್ಟದ ಮೇಲಕ್ಕೆ ಹಾದು ಹೋಗುವ ಮಾರ್ಗವಿದೆ. ಬೆಟ್ಟದ ಮೇಲ್ಭಾಗಕ್ಕೆ ಈ ಎರಡು ಬೆಟ್ಟಗಳ ಬುಡದಲ್ಲಿ ಇಟ್ಟಿಗೆಯಿಂದ ನಿರ್ಮಿಸಿದ ಕೋಟೆಯ ಪ್ರವೇಶ ದ್ವಾರದ ಅವಶೇಷಗಳು ಮೊದಲ ಸುತ್ತಿನಲ್ಲಿ ಕಂಡುಬರುತ್ತವೆ. ಚಪ್ಪಡಿ ಕಲ್ಲುಗಳಿಂದ ನಿರ್ಮಿಸಿರುವ ಮೆಟ್ಟಿಲುಗಳನ್ನು ಹಾದು ಹೋದಂತೆ ಬೆಟ್ಟದ ಮೇಲೆ ಎರಡು ಕಡೆಗಳಲ್ಲಿ ಇಟ್ಟಿಗೆಗಳಿಂದ ನಿರ್ಮಿಸಿರುವ ಆಕರ್ಷಕವಾದ ಕಮಾನಿನಾಕೃತಿಯ ಕೋಟೆಯ ಪ್ರವೇಶ ದ್ವಾರ ಕಂಡುಬರುತ್ತದೆ. ಇಟ್ಟಿಗೆಗಳಿಂದ ಕಟ್ಟಿರುವ ಕಮಾನಿನಾಕೃತಿಯ ಪ್ರವೇಶ ದ್ವಾರಗಳು ಸಹ ಶಿಥಿಲಾವಸ್ಥೆಯಲ್ಲಿದೆ. ಒಂದೊಂದು ಸುತ್ತಿಗೂ ಇರುವ ಕಮಾನಿನಾಕೃತಿಯ ಪ್ರವೇಶ ದ್ವಾರಗಳಲ್ಲಿ ಜಾಲಾಂದ್ರಗಳು, ಪ್ರಾಕೃತಿಕ ಹೂ-ಬಳ್ಳಿಗಳ ಮತ್ತು ಪಕ್ಷಿಗಳ ಕಲಾತ್ಮಕ ಚಿತ್ರಗಳನ್ನು ಬಿಡಿಸಲಾಗಿದೆ.

ಮುಂದೆ ಬೆಟ್ಟದ ಮೇಲೆ ಹಾದುಹೋಗುವುದಕ್ಕೆ ಯಾವುದೇ ರೀತಿಯ ಕಾಲು ಹಾದಿಯ ಮಾರ್ಗವಿರುವುದು ಕಂಡುಬರುವುದಿಲ್ಲ. ಕಡಿದಾದ ಬೆಟ್ಟವನ್ನು ಅತ್ಯಂತ ಎಚ್ಚರಿಕೆಯಿಂದ ಒಂದೊಂದೇ ಹೆಜ್ಜೆಯನ್ನು ಎಚ್ಚರಿಕೆಯಿಂದ ಹಾಕುತ್ತ ಬೆಟ್ಟವನ್ನು ಸುತ್ತುವರಿದಿರುವ ಕಲ್ಲಿನ ಕೋಟೆಯನ್ನು ಹಾದು ಮುಂದೆ ಸಾಗಬೇಕಾಗುತ್ತದೆ. ಎಚ್ಚರ ತಪ್ಪಿದರೆ ಪ್ರಾಣಪಾಯ ತಪ್ಪಿದ್ದಲ್ಲ. ಕೆಳಗಿನ ಆರು ಸುತ್ತು ಬೆಟ್ಟದ ಬಂಡೆಗಳ ನಡುವಣ ಜಾಗವನ್ನು ಅಡ್ಡಗೋಡೆಗಳಂತೆ ಕಟ್ಟಲಾಗಿದೆ. ಹೀಗೆ ಒಂದೊಂದು ಸುತ್ತಿಗೂ ಇರುವ ಹೆಬ್ಬಾಗಿಲುಗಳಲ್ಲಿ ಕೆಲವು ಶಿಥಿಲಾವಸ್ಥೆಯಲ್ಲಿದ್ದರೂ ಕಲಾತ್ಮಕವಾಗಿವೆ. ಇವು ಏಕ ರೇಖೆಯಲ್ಲಿರದೆ ಅಂಕುಡೊಂಕಾಗಿದ್ದು ಒಳ ನುಸುಳುವವರನ್ನು ದಾರಿ ತಪ್ಪಿಸುತ್ತವೆ.

ಆರನೇ ಸುತ್ತಿನ ಕೋಟೆಯ ಆವರಣದಲ್ಲಿ ಆಳೆತ್ತರದ ನಂದಿ ಸ್ಥಂಭವಿದೆ. ಇದನ್ನು ಬೆಣಚು ಕಲ್ಲಿನಿಂದ ಕೆತ್ತಲಾಗಿದೆ. ಹೀಗೆ ಕೆಳಗಿನ ಆರು ಸುತ್ತಿನ ಕೋಟೆ ಬೆಟ್ಟದ ಬಂಡೆಗಳ ನಡುವಣ ಬಯಲನ್ನು ಮುಚ್ಚುವ ಅಡ್ಡ ಗೋಡೆಗಳಂತೆ ನಿರ್ಮಾಣವಾಗಿದ್ದರೆ.

ಏಳನೆಯ ಸುತ್ತಿನ ಕೋಟೆ ಪೂರ್ಣ ಕಲ್ಲಿನ ಕೋಟೆಯಿಂದ ನಿರ್ಮಾಣವಾಗಿದೆ. ಕೋಟೆಯ ಆವರಣವನ್ನು ಪ್ರವೇಶಿಸುವುದಕ್ಕೆ ಕಲ್ಲಿನ ಚಪ್ಪಡಿಗಳ ಮೆಟ್ಟಿಲುಗಳಿಂದ ಕೂಡಿರುವ ಮತ್ತು ಬೃಹದಾಕಾರದ ಕಲ್ಲಿನ ಚಪ್ಪಡಿಗಳಿಂದ ಆವೃತವಾಗಿರುವ ಎರಡು ಪ್ರವೇಶ ದ್ವಾರಗಳನ್ನು ನಿರ್ಮಿಸಲಾಗಿದೆ. ಏಳನೆಯದು ಪೂರ್ಣ ಕೋಟೆಂಯಿಂದ ಕೂಡಿದೆ. ಕೋಟೆಯ ನಿರ್ಮಾಣ ರಚನೆ, ಹೊಳೆ ನರಸೀಪುರದ ಸ್ಥಳಿಯ ಪಾಳೆಯಗಾರರಲ್ಲಿ ಒಬ್ಬನಾದ ದೇವರಾಜನು ನಿರ್ಮಿಸಿರುವ ಸಾಧ್ಯತೆಗಳಿದ್ದು, ನಿಖರ ದಾಖಲೆಗಳು ಲಭ್ಯವಿರುವುದಿಲ್ಲವಾದ್ದರಿಂದ ಕೋಟೆಯ ನಿರ್ಮಾಣ ರಚನೆ ಯಾವ ಕಾಲಘಟ್ಟದಲ್ಲಿ ಆಗಿದೆ ಎಂಬುದರ ಬಗ್ಗೆ ಹೆಚ್ಚಿನ ಅಧ್ಯಯನದ ಅಗತ್ಯವಿದೆ. ಹೀಗೆ ನಾರಾಯಣ ದುರ್ಗದಲ್ಲಿ ಏಳು ಸುತ್ತಿನ ಕೋಟೆಯ ಅವಶೇಷಗಳಿರುವುದು ಕಂಡುಬರುತ್ತದೆ. ಈ ಏಳು ಸುತ್ತಿನ ಕೋಟೆಯ ನಿರ್ಮಾಣ ರಚನೆ ಅನೇಕ ವೈಶಿಷ್ಟ್ಯತೆಗಳಿಂದ ಕೂಡಿದೆ.

ನಾರಾಯಣ ದುರ್ಗದ ತೀರಾ ಕಡಿದಾಗಿರುವ ಪಾರ್ಶ್ವದ ಕಲ್ಲಿನ ಬಂಡೆಯನ್ನು 'ಒಕ್ಕರಸಿ ಕಲ್ಲು' ಎಂದು ಕರೆಯುತ್ತಾರೆ. ಹಿಂದೆ ಪಾಳೆಯಗಾರರು ಕಡಿದಾದ ಭಾಗದ ಕಲ್ಲಿನ ಬಂಡೆಯ ಮೇಲಿನಿಂದ ಶತ್ರುಗಳನ್ನು ಆಳವಾದ ಪ್ರಪಾತಕ್ಕೆ ತಳ್ಳಿಸುತ್ತಿದ್ದರೆಂಬ ಪ್ರತೀತಿಯಿದೆ.

**ದುರ್ಗದ ಮೇಲ್ಭಾಗದಲ್ಲಿರುವ ದೇವಾಲಯದ ನಿರ್ಮಾಣ ರಚನೆ:** ಬೆಟ್ಟದ ತುದಿಯಲ್ಲಿ ಪೂರ್ಣ ಕಲ್ಲಿನಿಂದ ನಿರ್ಮಿಸಿರುವ ಏಳನೇ ಸುತ್ತಿನ ಕೋಟೆಯ ರಚನೆ ಮತ್ತು ಕಲ್ಲಿನ ಚಪ್ಪಡಿಯಿಂದ ನಿರ್ಮಿಸಿರುವ ಕೋಟೆಯ ಪ್ರವೇಶ ದ್ವಾರದ ರಚನೆ ಸರಳವಾಗಿದೆ. ಆವರಣದಲ್ಲಿ ವಿವಿಧ ಕಾಲಘಟ್ಟಕ್ಕೆ ಸಂಬಧಿಸಿದ ಅನೇಕ ಸ್ಮಾರಕಗಳಿರುವುದು ಕ್ಷೇತ್ರಕಾರ್ಯದ ಅಧ್ಯಯನದಿಂದ ತಿಳಿದುಬರುತ್ತದೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ: ಕಲ್ಲೇಶ್ವರ ದೇವಾಲಯ, ಅದರ ಮುಂಬಾಗ ಧ್ವಜ ಸ್ಥಂಭಗಳಿರುವ ಸ್ಮಾರಕಗಳು ಪ್ರಮುಖವಾದವು. ದೇವಾಲಯದ ಆವರಣದಲ್ಲಿ ಪೌರಾಣಿಕ ಮತ್ತು ಐತಿಹಾಸಿಕ ಮಾಹಿತಿಗಳನ್ನು ಒದಗಿಸುವ ಅನೇಕ ಸ್ಮಾರಕಗಳಿವೆ.

ನಾರಾಯಣದುರ್ಗದ ಪ್ರಮುಖ ದೇವಾಲಯ ಕಲ್ಲೇಶ್ವರ ದೇವಾಲಯದ ಕಲಾತ್ಮಕ ರಚನೆ ನಮ್ಮನ್ನು ಆಕರ್ಷಿಸುತ್ತದೆ. ಈ ದೇವಾಲಯವನ್ನು ಸಂಪೂರ್ಣವಾಗಿ ಒರಟಾದ ಬಾಕ್ಸ್ ಮಾದರಿಯ ಬೆಣಚುಕಲ್ಲನ್ನು ಬಳಸಿ ನಾಲ್ಕು ಅಂಕಣದಲ್ಲಿ ನಿರ್ಮಿಸಲಾಗಿದೆ. ದೇವಾಲಯದ ಮುಂಬಾಗ ಮತ್ತು ಹಿಂಬಾಗದ ಎರಡು ಕಡೆಯಿಂದಲೂ ಪ್ರವೇಶಿಸಲು ಕಲ್ಲಿನ ಚಪ್ಪಡಿಗಳಿಂದ ನಿರ್ಮಿಸಲಾದ ಪ್ರವೇಶ ದ್ವಾರಗಳಿವೆ.

ಕಲ್ಲೇಶ್ವರ ದೇವಾಲಯದ ನಿರ್ಮಾಣ ರಚನೆ ನಿರ್ಧಿಷ್ಟವಾಗಿ ಒಂದು ಕಾಲಘಟ್ಟದಲ್ಲಾಗಿರುವುದು ಕಂಡುಬರುವುದಿಲ್ಲ. ದೇವಾಲಯವನ್ನು ಪ್ರವೇಶಿಸುತ್ತಿದ್ದಂತೆ ನಮಗೆ ನಾಲ್ಕು ಕಂಬಳಿಂದ ಕೂಡಿದ ವಿಶಾಲವಾದ ಪ್ರಾಂಗಣವನ್ನು ಒಳಗೊಂಡಿರವ ಸಭಾ ಮಂಟಪ ಕಂಡು ಬರುತ್ತದೆ. ಈ ಸಭಾಂಗಣದ ಒಂದು ಪಾರ್ಶ್ವದಲ್ಲಿ ಹೊರ ಹೋಗಲು ಮತ್ತೊಂದು ಪ್ರವೇಶ ದ್ವಾರವಿದೆ. ಈ ಪ್ರವೇಶ ದ್ವಾರದ ಪಕ್ಕದಲ್ಲಿ ಸಭಾಂಗಣಕ್ಕೆ ಹೊಂದಿಕೊಂಡಂತೆ ಇಟ್ಟಿಗೆಯಿಂದ ನಿರ್ಮಿಸಿರುವ ಚಿಕ್ಕ ಕೊಠಡಿಯ ರಚನೆಯಿದೆ. ಧಾನ್ಯಗಳನ್ನು ಸಂಗ್ರಹಿಸಿಡುವ ಉಗ್ರಾಣದ ಮಾದರಿಯ ಕೊಠಡಿಯಾಗಿರಬಹುದು.

ಸಭಾ ಮಂಟಪದಿಂದ ಮುಂದೆ ಪ್ರವೇಶಿಸಿದಂತೆ ಮತ್ತೊಂದು ಪ್ರವೇಶ ದ್ವಾರದ ಎರಡು ಬದಿಯಲ್ಲಿ ಕಂಡುಬರುವ ದ್ವಾರಪಾಲಕ ಶಿಲ್ಪಾಕೃತಿಗಳ ನಿರ್ಮಾಣ ರಚನೆ ನಮ್ಮನ್ನು ಆಕರ್ಷಿಸುತ್ತವೆ. ಪ್ರವೇಶ ದ್ವಾರವನ್ನು ದಾಟಿ ಹೋದರೆ ಎರಡು ಕಂಬಗಳ ರಚನೆಯಿಂದ ಕೂಡಿರುವ ನವರಂಗದ ಸಭಾಂಗಣ ಕಂಡುಬರುತ್ತದೆ.

ಎರಡನೇ ಸಭಾಂಗಣದಲ್ಲಿ ಗರ್ಭಗೃಹದಲ್ಲಿರುವ ಶಿವಲಿಂಗಕ್ಕೆ ಅಭಿಮುಖವಾಗಿ ನಂದಿಯ ಶಿಲ್ಪಕೃತಿಯಿದೆ. ನಂದಿಯ ಶಿಲ್ಪಾಕೃತಿ ಸಾಮಾನ್ಯ ರಚನೆಯಿಂದ ಕೂಡಿದೆ. (ಇದು ಬಹುಶ: ೭-೮ನೇ ಶತಮಾನಕ್ಕೆ ಸೇರಿದ್ದಿರಬಹುದು.)

ಎರಡನೇ ಸಭಾಂಗಣವನ್ನು ಹಾದು ಮುಂದಿನ ಅಂಕಣಕ್ಕೆ ಹೋಗುವ ಪ್ರವೇಶ ದ್ವಾರದಲ್ಲಿ ಒಂದು ಬದಿಯಲ್ಲಿ ಗಣೇಶನ ಶಿಲ್ಪಾಕೃತಿ, ಮತ್ತೊಂದು ಬದಿಯಲ್ಲಿ ಭೈರವನ ಶಿಲ್ಪಾಕೃತಿ ಅದರ ಮುಂಬಾಗ ಮತ್ತೊಂದು ಶಿಲ್ಪಾಕೃತಿಯ ರಚನೆಯಿದೆ.

ಪ್ರವೇಶ ದ್ವಾರವನ್ನು ಹಾದು ಮುಂದೆ ಹೋದಂತೆ ಚಿಕ್ಕದಾದ ಪ್ರಾಂಗಣ ಅಥವಾ ಸುಖನಾಸಿ (ಅಂತರಾಳ) ನಿರ್ಮಾಣ ರಚನೆಯಿದೆ. ಈ ಪ್ರಾಂಗಣವನ್ನು ಹಾದು ಮುಂದೆ ಹೋದರೆ ಕಪ್ಪು ಶಿಲೆಯಿಂದ ಅತ್ಯಂತ ಸರಳವಾಗಿ ಕೆತ್ತಿರುವ ಶಿವಲಿಂಗದ ಪ್ರತಿಷ್ಠಾಪನೆಯಾಗಿರುವ ಗರ್ಭಗೃಹ ಕಂಡು ಬರುತ್ತದೆ.

ಶಿವಲಿಂಗದ ಪೀಠ ಭಾಗ ಸಮತಟ್ಟಾಗಿದ್ದು ಎತ್ತರವಿಲ್ಲದಿರುವುದು ವಿಶೇಷವಾಗಿದೆ. ಈ ಶಿವಲಿಂಗದ ರಚನೆಯ ಕಾಲ ಕ್ರಿ.ಶ.೭-೮ ಶತಮಾನಕ್ಕೆ ಸಂಬಂಧಿಸಿದ್ದರಬಹುದು. ಗರ್ಭಗೃಹದ ಗೋಡೆಯ ಭಾಗ ಬಾಕ್ಸ್ ಮಾದರಿಯ ಚಪ್ಪಡಿ ಕಲ್ಲಿನ ನಿರ್ಮಾಣ ರಚನೆಯಿಂದ ಕೂಡಿದೆ. ಇಂದಿಗೂ ಈ ದೇವಾಲಯದಲ್ಲಿ ವಾರಕ್ಕೊಮ್ಮೆ ಪೂಜಾ ಕಾರ್ಯಗಳನ್ನು ಸಿಂಧಘಟ್ಟದಲ್ಲಿ ನೆಲೆಸಿರುವ ಅರ್ಚಕ ಮನೆತನದರು ನೆರೆವೇರಿಸಿಕೊಂಡು ಬರುತ್ತಿದ್ದಾರೆ. ಶಿವರಾತ್ರಿಯ ದಿನದಂದು ಈ ದುರ್ಗಮವಾದ ಬೆಟ್ಟದ ಮೇಲೆ ಜಾಗರಣೆ ಮಾಡುವುದಕ್ಕಾಗಿ ಸುತ್ತಮುತ್ತಲಿ ಗ್ರಾಮಸ್ಥರು ಸಾವಿರಾರು ಸಂಖ್ಯೆಯಲ್ಲಿ ಭಾಗವಹಿಸುತ್ತಾರೆ.

ಗರ್ಭ ಗೃಹದ ಮೇಲ್ಭಾಗದಲ್ಲಿರುವ ಗೋಪುರ ವಿಶಿಷ್ಟತೆಯಿಂದ ಕೂಡಿದೆ. ಗೋಪುರದ ನಾಲ್ಕು ಕಡೆಯಲ್ಲೂ ಸಾಮಾನ್ಯ ರಚನೆಯಿಂದ ಕೂಡಿರುವ ಶಿಥಿಲಾವಸ್ಥೆಯಲ್ಲಿರುವ ವಿವಿಧ ಮಾದರಿಯ ಶಿಲ್ಪಾಕೃತಿಗಳ ನಿರ್ಮಾಣ ರಚನೆ ಕಲಾಭಿಮಾನಿಗಳನ್ನು ಆಕರ್ಷಿಸುತ್ತವೆ. ಗೋಪುರದ ನಾಲ್ಕು ಮೂಲೆಗಳಲ್ಲಿ ನಂದಿಯ ಶಿಲ್ಪಾಕೃತಿಗಳ ರಚನೆ ವಿಶೇಷವಾಗಿದೆ. ಅಲ್ಲದೆ ಶಾರ್ದೂಲ ಶಿಲ್ಪಾಕೃತಿಗಳ ನಿರ್ಮಾಣ ರಚನೆಯು ಅಲ್ಲಲ್ಲಿ ಕಂಡುಬರುತ್ತವೆ.

ದೇವಾಲಯದ ಮುಂಬಾಗದಲ್ಲಿ ಎತ್ತರವಾದ ಕಲ್ಲಿನ ಸ್ತಂಭವಿದೆ. ಸ್ತಂಭದ ಸುತ್ತ ಪೊದೆ ಬೆಳೆದುಕೊಂಡಿರುವುದರಿಂದ ಸುಲಭವಾಗಿ ಸ್ತಂಭದ ಬಳಿ ಪ್ರವೇಶಿಸುವುದಕ್ಕೆ ಸಾಧ್ಯವಾಗುವುದಿಲ್ಲ.



ಮೊದಲನೇ ಸುತ್ತಿನ ಕೋಟೆಯ ಪ್ರವೇಶ ದ್ವಾರ ಮತ್ತು ಕೋಟೆಯ ನಿರ್ಮಾಣಕ್ಕೆ ಬಳಸಿರುವ ಇಟ್ಟಿಗೆ



ಎರಡನೇ ಸುತ್ತಿನ ಕೋಟೆಯ ಪ್ರವೇಶ ದ್ವಾರ ಮತ್ತು ಶಿಥಿಲಾವಸ್ಥೆಯಲ್ಲಿರುವ ಕೋಟೆಯ ದೃಶ್ಯ



ನಂದಿ ಸ್ಥಂಭದ ದೃಶ್ಯ





ಏಳನೇ ಸುತ್ತಿನ ಕೋಟೆಯ ಎರಡು ಕಡೆಗಳಲ್ಲಿರುವ ಪ್ರವೇಶ ದ್ವಾರಗಳು



'ಒಕ್ಕರಸಿ ಕಲ್ಲು' ಎಂದು ಕರೆಯುವ ತೀರ ಕಡಿದಾದ ಬೆಟ್ಟದ ಪಾರ್ಶ್ವ



ನಾರಾಯಣ ದುರ್ಗದ ಮೇಲ್ಭಾಗದಲ್ಲಿರುವ ಕಲ್ಲೇಶ್ವರ ದೇವಾಲಯದ ಬಾಹ್ಯ ನೋಟ





ದೇವಾಲಯದ ಗರ್ಭ ಗೃಹದಲ್ಲಿರುವ ಶಿವಲಿಂಗ ದೃಶ್ಯ.

ಸ್ತಂಭದ ನಾಲ್ಕು ಬದಿಯಲ್ಲಿ ವಿವಿಧ ಮಾದರಿಯ ಶಿಲ್ಪಾಕೃತಿಗಳ ರಚನೆ ಆಕರ್ಷಣೀಯವಾಗಿದೆ. ಸೂರ್ಯಕಾಂತಿ, ಕಮಲದ ಗೂಳಿ ಮತ್ತು ಪದ್ಮಾಸನ ರೂಢನಾಗಿ ಯೋಗ ಮುದ್ರೆಯಲ್ಲಿ ಕೈಮುಗಿಯುತ್ತಿರುವ ಶಿಲ್ಪಾಕೃತಿಯ ರಚನೆಯ ವಿಶೇಷವಾಗಿದೆ.

ಮೇಲಿನ ಚಿತ್ರಗಳಲ್ಲಿ ಕಲ್ಲೇಶ್ವರ ದೇವಾಲಯದ ಮುಂಬಾಗದ ಬಲಭಾಗದಲ್ಲಿ ಬಾಕ್ಸ್ ಮಾದರಿಯ ಬೆಣಚು ಕಲ್ಲಿನಿಂದ ನಿರ್ಮಿಸಿರುವ ಮದ್ದಿನ ಮನೆ, ಧಾನ್ಯಗಳನ್ನು ಸಂಗ್ರಹಿಸಿಡುವ ಕಣಜಗಳ ನಿರ್ಮಾಣ ರಚನೆಗಳು ಕಂಡುಬರುತ್ತವೆ.

ಕಲ್ಲೇಶ್ವರ ದೇವಾಲಯದ ಆವರಣದಲ್ಲಿ ನೀರಿನ ಅನೇಕ ಡೋಣಿಗಳಿದ್ದು ಇವುಗಳನ್ನು ಮಹಾಭಾರತ ಕಾಲದ ಪುರಾಣ ಪುರುಷರು ಇಲ್ಲಿಗೆ ಬಂದಿದ್ದರೆಂದು ಪೌರಾಣಿಕ ಸಂಬಂಧ ಕಲ್ಪಿಸುವ ಐತಿಹ್ಯಗಳಿವೆ. ಉದಾ: ಭೀಮನ ಕೊಳ, ಅರ್ಜುನನ ಕೊಳಗಳನ್ನು ನಿರ್ಮಿಸಲಾಗಿದೆ ಎಂಬ ಪ್ರತೀತಿಯಿದೆ.

ಮೇಲಿನ ಎಡ ಬದಿಯ ಚಿತ್ರದಲ್ಲಿ ಭೀಮ ತನ್ನ ಮಂಡಿಯನ್ನು ತಿರುಗಿಸಿ ತೋಡಿರುವ ೧೦-೧೫ ಅಡಿ ಆಳದ ಭೀಮನ ಕೊಳ, ಬಲ ಬದಿಯ ಚಿತ್ರದಲ್ಲಿ ಅರ್ಜುನ ಬಾಣ ಬಿಟ್ಟು ತೋಡಿರುವ ಸಿಹಿನೀರಿನ ಅರ್ಜುನನ ಕೊಳಗಳಿವೆ. ಅರ್ಜುನನ ಕೊಳಕ್ಕೆ ಇಳಿಯಲು ನೆರವಾಗುವಂತೆ ಕಬ್ಬಿಣದ ಸರಪಳಿಯ ಸ್ವಲ್ಪದೂರದವರೆಗೆ ಬಿಡಲಾಗಿದೆ. ಈ ಕೊಳದ ನೀರು ಸಿಹಿ ನೀರಿನಿಂದ ಕೂಡಿದ್ದು ಕುಡಿಯಲು ಯೋಗ್ಯವಾಗಿದೆ.

ದೇವಾಲಯದ ಪ್ರಮುಖ ವೈಶಿಷ್ಟ್ಯವೆಂದರೆ: ಸಭಾ ಮಂಟಪವನ್ನು ಹಾದು ಅಂತರಂಗ ಪ್ರವೇಶಿಸುವ ಪ್ರವೇಶ ದ್ವಾರದ ಎರಡು ಬದಿಯಲ್ಲಿರುವ ದ್ವಾರಪಾಲಕ ಶಿಲ್ಪಾಕೃತಿಗಳು ಮತ್ತು ದೇವಾಲಯದ ಮುಂಭಾಗದ ಸ್ಥಂಭದ ಒಂದು ಬದಿಯಲ್ಲಿರುವ ಯೋಗ ಮುದ್ರೆಯಲ್ಲಿರುವ ಪದ್ಮಾಸನಾ ರೂಢನಾಗಿ ಕೈಮುಗಿಯುತ್ತಿರುವ ಶಿಲ್ಪಾಕೃತಿಗಳು ಮಂಡ್ಯ ಜಿಲ್ಲೆಯಲ್ಲಿ ನಾಥ ಸಂಪ್ರದಾಯದ ಆರಾಧನೆಗೆ ಹೆಸರಾಗಿರುವ ಆದಿ ಚುಂಚನಗಿರಿಯ ಧಾರ್ಮಿಕ ಆಚರಣೆಯ ಸ್ವರೂಪವನ್ನು ಹೋಲುತ್ತದೆ.

ಈ ಕಲ್ಲೇಶ್ವರ ದೇವಾಲಯದ ರಚನೆ ವಿಜಯನಗರ ಕಾಲದಲ್ಲಿ ನಿರ್ಮಾಣವಾದಂತಿದೆ. ಇದನ್ನು ಸಮೀಪದ ಸಿಂದಘಟ್ಟದ ಅಥವಾ ಬೆಟ್ಟದ ಕೆಳಗಿನ ರಾಯಸಮುದ್ರದ ಪಾಳೆಗಾರ ಕಟ್ಟಿರಬಹುದೆಂದು ಸ್ಥಳಿಯರ ಅನಿಸಿಕೆಯಾಗಿದೆ. ಒಟ್ಟಾರೆ ದೇವಾಲಯದ ಸುತ್ತಮುತ್ತಲಿನ ಬಾಹ್ಯ ನೋಟವನ್ನು ನೋಡಿದಾಗ ಅಲ್ಲಲ್ಲಿ ಗಿಡ-ಮರ-ಪೊದೆಗಳು ಬೆಳೆದುಕೊಂಡು ರಕ್ಷಣೆಯಿಲ್ಲದೆ ನಶಿಸಿಹೋಗುವ ಸ್ಥಿತಿಯಲ್ಲಿರುವುದನ್ನು ಕಾಣಬಹುದು. ಆದ್ದರಿಂದ ಈ ದೇವಾಲಯವನ್ನು ಸಂರಕ್ಷಿಸುವ ಜರೂರು ಕಾರ್ಯ ಆಗಬೇಕಾಗಿದೆ. ದುರ್ಗದ ತುದಿಗೆ ಪ್ರವಾಸಿಗರು ಹತ್ತುವುದಕ್ಕೆ ಸಂಬಂಧಿಸಿದಂತೆ ಮೆಟ್ಟಿಲುಗಳ ನಿರ್ಮಾಣವಾಗಬೇಕಾಗಿದೆ.

ವಿವಿಧ ಕಾಲ ಘಟ್ಟದ ಕುರುಹುಗಳು ದೊರೆಯುವಂತೆ, ಕಲ್ಲೇಶ್ವರ ಬೆಟ್ಟದಲ್ಲಿ ಕೋಟೆ ಕಟ್ಟಿಕೊಂಡು ಆಳಿದ ವಿಜಯನಗರ ಕಾಲದ ಪಾಳೆಯಗಾರರ ಕುರುಹುಗಳು ಕಂಡು ಬರುವುದು ಈ ನಾರಾಯಣ ದುರ್ಗದ ವಿಶೇಷವಾಗಿದೆ. ಇದಕ್ಕೆ ಸಂಬಂಧಿಸಿದಂತೆ ಆಸಕ್ತರಿಂದ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ.

ನಾರಾಯಣ ದುರ್ಗದ ಮೇಲ್ಭಾಗದಿಂದ ನಿಂತು ನೋಡಿದಾಗ ದುರ್ಗದ ಎರಡು ಬದಿಯಲ್ಲಿ ಕೆರೆಕಟ್ಟೆಗಳನ್ನು ಕಟ್ಟಿಸಿರುವುದನ್ನು ಕಾಣಬರುತ್ತದೆ. ಒಂದು ಕೆರೆಯನ್ನು ವಿಜಯನಗರದ ರಾಯರು (ರಾಜರು) ಕಟ್ಟಿಸಿದ್ದರಿಂದ ಈ ಕೆರೆಯ ಬಳಿಯಿರುವ ಗ್ರಾಮಕ್ಕೆ ರಾಯಸಮುದ್ರ ಎಂಬ ಹೆಸರು ಬಂದಿದೆ. ಇದನ್ನು ಇಂದು ಸ್ಥಳಿಯರು ಇದನ್ನು ತಾವರೆ ಕಟ್ಟೆ, (ತಾವರೆಗೆರೆ) ಎಂದು ಕರೆಯುತ್ತಾರೆ. ಬೆಟ್ಟದ ಮತ್ತೊಂದು ಬದಿಯಲ್ಲಿ ಸಿಂಧಘಟ್ಟದ ನಡುವೆ ಮತ್ತೊಂದು ಕೆರಯನ್ನು ಕಟ್ಟಿಸಲಾಗಿದೆ.

ನಾರಾಯಣದುರ್ಗದ ತಳಭಾಗದಲ್ಲಿ ಮೂಲ ಚೌಡೇಶ್ವರಿ ದೇವಸ್ಥಾನವನ್ನು ಪುನರುಜ್ಜೀವನಗೊಳಿಸಿದ್ದಾರೆ. ದೇವಸ್ಥಾನಕ್ಕೆ ಹೊಂದಿಕೊಂಡಂತೆ ಒಂದು ಕೊಳವಿದೆ.



## ಆಕರ ಗ್ರಂಥಗಳು


೧. ಕ್ಷೇತ್ರ ಕಾರ್ಯ ಅಧ್ಯಯನ.
೨. ಸ್ಥಳೀಯರ ಮೌಖಿಕ ಸಂದರ್ಶನ.
೩. ಮಂಡ್ಯ ಜಿಲ್ಲಾ ಗ್ಯಾಝೆಟಿಯರ್ .
೪. ಸುವರ್ಣ ಮಂಡ್ಯ.

# ೬೫

# ಕೆಲೂಡಿ ಗ್ರಾಮ : ಒಂದು ವಿವೇಚನೆ

ಕಲ್ಲಯ್ಯ ಎಸ್. ಹಿರೇಮಠ್*

**ಬಾ**ಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ಉತ್ತರ ದಿಕ್ಕಿಗೆ ಇರುವ ೧೨ ಕಿ.ಮೀ. ದೂರದಲ್ಲಿರುವ ಐತಿಹಾಸಿಕ ಪ್ರಸಿದ್ಧ ಗ್ರಾಮವೇ ಕೆಲವಡಿ. ಗತಕಾಲದಿಂದ ತನ್ನ ವೈಭವದ ಪರಾಕಾಷ್ಠೆಯಂತಿರುವ ಗ್ರಾಮ. ೧೨ನೆ ಶತಮಾನದಲ್ಲಿ ಆಳ್ವಿಕೆ ನೆಡಿಸಿದ ಸಿಂಧನಾಯಕನ ಆಡಳಿತಕ್ಕೆ ಒಳಪಟ್ಟ ಗ್ರಾಮ. ಇಲ್ಲಿಯ ಆರಾಧ್ಯ ದೈವ ರಂಗನಾಥ ಸ್ವಾಮಿ ಸಾಕ್ಷಾತ್ ವಿಷ್ಣುವೆಂದೂ ಶ್ರೀ ರಂಗನಾಥ ಸ್ವಾಮಿ ಆಂಧ್ರದ ಸುಪ್ರಸಿದ್ಧ ತಿರುಪತಿ (ವೆಂಕಟೇಶ) ತಿಮ್ಮಪ್ಪನ ಅವತಾರವೆಂದು ಕರೆಯುತ್ತಾರೆ.

ಚಾಲುಕ್ಯರ ಪ್ರಸಿದ್ಧ ದೊರೆಯಾದ ಮಂಗಳೇಶನು ಈ ದೇವಾಲಯವನ್ನು ಕಟ್ಟಿಸಿದನೆಂದು ಹೇಳಲಾಗುತ್ತದೆ. ದೇವಾಲಯದಲ್ಲಿನ ಶಿಲಾಶಾಸನ ಪ್ರಕಾರ ಕೆಲವಡಿ ಪ್ರದೇಶವು ಸಿಂಧ ನಾಯಕನ ಆಳ್ವಿಕೆಯಲ್ಲಿ (೧೨೧೦–೧೨೮೦) ಕೆಲವಡಿಯ ೨೦೦೦ ಕೇಂದ್ರ ಸ್ಥಳವಾಗಿತ್ತೆಂದು ತಿಳಿದು ಬರುತ್ತದೆ.

ಗ್ರಾಮದ ಪಶ್ಚಿಮದಲ್ಲಿರುವ ಕೆರೆಯು ೪೨ ಎಕರೆ ಭೂಮಿ ಹೊಂದಿದ ವಿಶಾಲವಾದ ಪ್ರದೇಶದಲ್ಲಿ ವಿಸ್ತೃತವಾಗಿದೆ. ಅಂಗಳ ಸೂಸು ಕೆಂಪು ಮಣ್ಣಿನಿಂದ ಆವೃತವಾಗಿದೆ. ನಾಲ್ಕು ಕಡೆಯ ಏರಿಯು ಬೃಹತ ಕಲ್ಲುಗಳಿಂದ ನಿರ್ಮಾಣ ಮಾಡಿದ್ದಾರೆ. ದಕ್ಷಿಣದಲ್ಲಿನ ತೂಬಿನ ಮೂಲಕ ಕೆರೆಯು ತುಂಬಿದಾಗ ೪–೫ ತಿಂಗಳುಗಳ ಕಾಲ ಗದ್ದೆಗಳಿಗೆ ನೀರನ್ನು ಪೂರೈಸುತ್ತಾರೆ. ಶಾಸನೋಕ್ತ ಐತಿಹಾಸಿಕ ಕೆರೆಯಾಗಿದೆ.

ಕೆಲವಡಿ ಗ್ರಾಮದ ರಂಗನಾಥ ಸ್ವಾಮಿಯ ದೇವಾಲಯದ ಮುಂದಿನ ಕೌಂಪೌಂಡಿಗೆ ಸೇರಿಕೊಂಡಿರುವ ಕಲ್ಲಿನ ಕಲ್ಯಾಣ ಚಾಲುಕ್ಯ ಅರಸ ತ್ರೈಲೋಕ್ಯ ಮಲ್ಲದೇವನ ಸಕವರ್ಷ ೯೭೫, ವಿಜಯ ಉತ್ತರಾಯಣ ಸಂಕ್ರಾಂತಿ ಇದ್ದು ಕ್ರಿ.ಶ. ೧೦೫೩ ಕ್ಕೆ ಸರಿಹೊಂದುವ ಶಾಸನದಲ್ಲಿ ತೈಲೋಕ್ಯಮಲ್ಲದೇವನ ಮಹಾಸಾಮಂತಾಧಿಪತಿ ಭೋಗದೇವರಸನು ಪಂಗರಗಿ ಹನ್ನೆರಡನ್ನು ಆಳುತ್ತಿದ್ದ ಸಂದರ್ಭದಲ್ಲಿ ಇವನ ಮೈದುನ ಸುಪ್ಪರಸನು ಕೆಳವಾಡಿಯ ಕೆರೆಗೆ ೨೦ ಮತ್ತರು ಭೂಮಿಯನ್ನು ಜೊತೆಗೆ ಒಂದು ಮನೆಯ ನಿವೇಶನವನ್ನು ದಾನ ನೀಡಿದ ವಿಷಯ ಈ ಶಾಸನದಲ್ಲಿದೆ.

ಸಪ್ಪರಸನನ್ನು ಶಾಸನದಲ್ಲಿ ಸರಸ್ವತಿ ಕರ್ಣಾವತಂಸಂ ಕರ್ಣಾಟಕ ನಾಟ್ಯಕರ್ನಾಪೂರಂ, ವಾಚಕಾಭರಣಂ, ವಿದಗ್ಧ, ಮುಗ್ಧ ಯುವತೀಜನ ಸ್ನಿಗ್ಧನೇತ್ರಾಂಜನಂ, ಸುಕವಿಜನ ಮನೋರಂಜನಂ, ಬಂಧು ಚಿಂತಾಮಣಿ, ಶಿಷ್ಟ ರಕ್ಷಾಮಣಿ ಮುಂತಾಗಿ ಹೊಗಳಲಾಗಿದೆ. ಒಂದು ಕೆರೆಯ ದಾನಕ್ಕಾಗಿಯೇ ಹಾಕಿಸಿರುವಂತಹ ವಿಶೇಷವಾದ ಶಾಸನವಿದಾಗಿದ್ದು ಈ ಶಾಸನವನ್ನು ಹೇಳಿದವನು ಸೈವೋಜ ಬರೆದವನು ಚಟ್ಟಪಯ್ಯ ಎಂದು ಉಲ್ಲೇಖಿಸಲಾಗಿದೆ.

ಕೆಲವಡಿ ಗ್ರಾಮದ ಸ್ಥಳನಾಮಕ್ಕೆ ಐತಿಹಾಸಿಕ ಹಿನ್ನಲೆಯಿದ್ದು ಇಲ್ಲಿಯ ಆರಾಧ್ಯದೈವ ರಂಗನಾಥಸ್ವಾಮಿ ಜೊತೆಗೆ ತಳಕು ಹಾಕಿಕೊಂಡಿದೆ. ಐತಿಹ್ಯದ ಪ್ರಕಾರ ತಿರುಪತಿಯ ತಿಮ್ಮಪ್ಪನು ಕನಕ ಮುನಿಯ ಭಕ್ತಿಗೆ ಮೆಚ್ಚಿ ಕೆಲವು ಅಡಿಯ ಮೇಲೆ ಇಲ್ಲಿ ನೆಲೆಸಿದ್ದರಿಂದ ಈ ಸ್ಥಳಕ್ಕೆ ಕೆಲವು + ಅಡಿ = ಕೆಲವಡಿ ಎಂಬುದಾಗಿಯೂ ಕಲ್ಯಾಣದ ಚಾಲುಕ್ಯ ಅರಸ ಒಂದನೆಯ ಸೋಮೇಶ್ವರನು (ತ್ರೈಲೋಕ್ಯಮಲ್ಲದೇವನು) ಮಹಾಮಂಡಲಾಧಿಪತಿ ಭೋಗ ದೇವರಸನು ಪಂಗರಗಿ – ಹಂಗರಗಿ ಹನ್ನೆರಡರ ಪ್ರದೇಶವನ್ನು ಆಳುತ್ತಿದ್ದಾಗ ಪೂರ್ವಕ್ಕೆ ಒಂದು ವಾಡೆ ನಿರ್ಮಿಸಿದ್ದು, ಇದು ಹಂಗರಗಿ ಗ್ರಾಮದ ಕೆಳಭಾಗದಲ್ಲಿ ಇರುವುದರಿಂದ 'ಕೆಳಗಿನವಾಡೆ'–ಕೆಳವಾಡೆ–ಕೆಳವಾಡಿ–ಕೆಲವಡಿ ಎಂದಾಗಿರಬೇಕು. ಈ ಊರು ಕಟ್ಟಿದ ಸ್ಥಳವು ಕಲ್ಲಿನ ಪಡಿಗಳ ಹಾಸುಗೆಯಿಂದ ಆವೃತವಾಗಿದ್ದು, ಕಲ್ಲುಪಡೆ–ಕಲ್ಲುಪಡಿ–ಕಲ್ಪಡಿ–ಕೆಳ್ಪಡಿ–ಕೆಲವಡಿ ಆಗಿರುವುದು ಸ್ಪಷ್ಟತೆಯನ್ನು ಸೂಚಿಸುತ್ತದೆ. ಬಹುತೇಕ ಬಾದಾಮಿ ಪರಿಸರದಲ್ಲಿ ಪ್ರಮುಖ ಪ್ರದೇಶಗಳಲ್ಲಿ ಅಗಾಧ ಪ್ರಮಾಣದ ಕಲ್ಲಿನಪಡಿಗಳ ಗ್ರಾಮಗಳಿದ್ದು ಉದಾ – ಪಟ್ಟದಕಲ್ಲು, ಐಹೊಳೆ, ಮಹಾಕೂಟ, ಬಾದಾಮಿ, ನಂದಿಕೇಶ್ವರ, ಜಾಲಿಹಾಳ, ಗುಳೇದಗುಡ್ಡ ಇತ್ಯಾದಿಗಳನ್ನು ಉಲ್ಲೇಖಿಸಬಹುದು.

* ಸಹಾಯ ಪ್ರಾಧ್ಯಾಪಕರು, ಎಸ್.ಎ. ಕಾಲೇಜು, ನರೇಗಲ್ಲ, ಮೊ. ೯೪೮೦೦೩೭೮೦೮

ಕೆಲವಡಿ ಒಂದು ಕಾಲದಲ್ಲಿ ಆಡಳಿತ ಕೇಂದ್ರವಾಗಿದ್ದು, ಕೊಪ್ಪಳ ಜಿಲ್ಲೆಯ ಕನಕಗಿರಿಯ ಶ್ರೀ ಕನಕರಾಯನ ಚರಿತ್ರೆಯಲ್ಲಿ ಕೆಲವಡಿ ನಬಾಬ ನಾಯಕನು ಕೆಲವಡಿಯಿಂದ ಬಂದವನು ಅಲ್ಲಿಯ ಪ್ರಾಂತಾಧಿಕಾರಿಯಾಗಿದ್ದನೆಂಬುದರ ಉಲ್ಲೇಖಗಳು ಈ ವಿಷಯದ ಕುರಿತು ಮಾಹಿತಿಯನ್ನು ಸ್ಪಷ್ಟೀಕರಿಸುತ್ತವೆ. ಬಾಗಲಕೋಟ, ಜಮಖಂಡಿ, ವಿಜಯಪುರ ಭಾಗದ ಬಹುತೇಕ ಮನೆತನಗಳು ತಿರುಪತಿ ತಿಮ್ಮಪ್ಪನ ಆರಾಧಕರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ತುಳಸಿಗಿರಿಯ ಆಂಜನೇಯ, ಕೆಲವಡಿ ರಂಗನಾಥಸ್ವಾಮಿಯ ಜೊತೆಗೆ ತಿಮ್ಮಪ್ಪನ ಪ್ರತಿರೂಪವೆಂದೆ ಸಾಕ್ಷೀಕರಿಸಿ ಆರಾಧಿಸುತ್ತಾರೆ. ಕಾರಣ ದೂರದ ಆಂಧ್ರಪ್ರದೇಶದ ತಿಮ್ಮಪ್ಪನ ದರ್ಶನ ದೊರೆಯುವುದು ಮಕ್ಕಳಿಗೆ, ವಯೋವೃದ್ಧರಿಗೆ ಅಸಾಧ್ಯವೆಂದು ಅರಿತ ಪರಿಣಾಮವೋ, ಧಾರ್ಮಿಕ ವೈಭವವೋ ಕಾರಣವಾಗಿರಬೇಕು.

ಜನಮಾನಸದಲ್ಲಿ ಧಾರ್ಮಿಕ ಅಭಿಪ್ರಾಯವೊಂದಿದ್ದು ಅದರ ಪ್ರಕಾರ ತುಳಸಿಗಿರಿ, ಕೆಲುಡಿ, ಕನಕಗಿರಿ, ತಿರುಪತಿ, ಅನಂತಪದ್ಮನಾಭ ಇವರುಗಳು ಅಣ್ಣತಮ್ಮಂದಿರು ಬಹಳ ದೂರ ಹಾಗೂ ಸಿರಿವಂತರಲ್ಲಿ ತಿರುಪತಿ ತಿಮ್ಮಪ್ಪ ಹಾಗೂ ಅನಂತಪದ್ಮನಾಭ ಕೇರಳ ಸಿರಿ ಒಡೆಯರಾಗಿದ್ದು ಅವರ ಪ್ರತಿರೂಪದಂತಿರುವ ರಂಗನಾಥಸ್ವಾಮಿ–ತುಳಸಿಗಿರಿನಾಥನನ್ನು ಇಲ್ಲಿ ಭಕ್ತರು ಆರಾಧಿಸುವ ವಾಡಿಕೆಯಿದೆ.

ಕೆಲವಡಿಯ ಹಳ್ಳದ ನಿರ್ಜನ ಪ್ರದೇಶದಲ್ಲಿ ಕನಕ–ಮುನಿಯೆಂಬ ಋಷಿಯು ವಾಸವಾಗಿದ್ದನು ಅವನು ಶ್ರೀ ವಿಷ್ಣುವಿನ ಸ್ವರೂಪನಾದ ಶ್ರೀನಿವಾಸನನ್ನು ತಿಮ್ಮಪ್ಪನು ಕುರಿತು ತಪಸ್ಸು ಮಾಡಿ ಜನರಿಗೆ ನಿತ್ಯ ದರ್ಶನವಾಗುವಂತಹ ವರವನ್ನು ಪಂಚಮಹಾಭೂತಗಳಲ್ಲಿ ಬೇಡುತ್ತಾನೆ. ಶ್ರೀನಿವಾಸನು ಕನಕ–ಮುನಿಯ ತಪಸ್ಸಿಗೆ ಮೆಚ್ಚಿ ವರವನ್ನು ದಯಪಾಲಿಸಿ ನನ್ನ ಜಾತ್ರೆಯ ಜೊತೆಗೆ ನಿನ್ನ ಜಾತ್ರೆಯು ನಡೆಯಲೆಂದು ಆಶೀರ್ವದಿಸುತ್ತಾನೆ. ಶ್ರೀನಿವಾಸನು ಜಾತ್ರೆಯ ಮುನ್ನಾದಿನವೇ ಕನಕಮುನಿಯ ಜಾತ್ರೆ ನೆರವೆರುತ್ತದೆ. ಕನಕ ಮುನಿಯ ವಾಸಿಸುತ್ತಿದ್ದ ಸ್ಥಳಕ್ಕೆ ಕನಕಾಪುರವೆಂದು ಹೆಸರು. ಕೆಲವಡಿಯ ಪಕ್ಕದಲ್ಲಿ ತಿಮ್ಮಸಾಗರವೆಂಬ ಗ್ರಾಮವಿದ್ದು ತಿಮ್ಮಪ್ಪನ ಆರಾಧನ ದ್ಯೋತಕವೆಂದು ಕರೆಯುತ್ತಾರೆ. ಈ ಗ್ರಾಮದಲ್ಲಿ ತೊಟ್ಟಿಲ ತೀರ್ಥವೆಂಬ ಪುಣ್ಯಕ್ಷೇತ್ರವಿದ್ದು. ದೇವಸ್ಥಾನ ದಕ್ಷಿಣಾಭಿಮುಖವಾಗಿದ್ದು ಪೂರ್ವಾಚಾರ್ಯರು ನಿರ್ಮಿಸಿದ ಭಾವಿ ಇದ್ದು ಆರು ಮಾರ್ಗಗಳಿವೆ. ಈ ಪುಣ್ಯಕ್ಷೇತ್ರದಲ್ಲಿ ತ್ರಿಕರಣ ಪೂರ್ವಕವಾಗಿ ಭಕ್ತಿ–ಭಾವದಿಂದ ನಡೆದುಕೊಂಡರೆ ಮಕ್ಕಳಾಗುತ್ತವೆ ಎಂಬ ಪ್ರತೀತಿ ಇದ್ದು, ಇಷ್ಟಾರ್ಥಗಳ ಸೇವೆಗಾಗಿ ಸಲ್ಲಿಸುವ ಹರಕೆಯಿಂದಾಗಿ ತೊಟ್ಟಿಲತೀರ್ಥ ಎಂದು ಪ್ರಸಿದ್ಧಿ ಪಡೆದಿದೆ. ಅಮವಾಸ್ಯೆ, ಹುಣ್ಣಿಮೆ, ಗ್ರಹಣ ಹಾಗೂ ಪರ್ವ ಕಾಲಗಳಲ್ಲಿ ಮಿಂದು ಪವಿತ್ರ ಬಿಲವೆಂದು ಪ್ರಾಶನ ಮಾಡುತ್ತಾರೆ. ಕೆಲವಡಿ ರಂಗನಾಥಸ್ವಾಮಿಯ ದೇವಾಲಯದಲ್ಲಿ ಸುರಪಾನವನ್ನು ನೈವೇದ್ಯ ರೂಪದಲ್ಲಿ ಭಕ್ತರಿಗೆ ವಿತರಿಸುವುದು ವಿಶೇಷ.



## ಆಕರ ಗ್ರಂಥಗಳು


೧. ಮುನಿಸ್ವಾಮಿ ಆರ್. (ಸಂ), ಕರ್ನಾಟಕ ಗೆಜೆಟಿಯರ್ ಬಿಜಾಪೂರ ಜಿಲ್ಲೆ ೧೯೯೯, ಪೂರ್ವೋಕ್ತ, ಪು ೧೧೨೯.

೨. ಅದೇ ಪುಟ ೧೧೩೦–೧೧೩೨.

೩. ಕನ್ನಡ ವಿ.ವಿ.ಯ ಶಾಸನ ಸಂಪುಟ ೯, ಬಾಗಲಕೋಟ ಜಿಲ್ಲೆ (ಸಂ) ಡಾ. ದೇವರ ಕೊಂಡಾರೆಡ್ಡಿ, ಪು. ೧೫೫–೧೫೬.

೪. ಕೆಲವಡಿ ರಂಗನಾಥಸ್ವಾಮಿಯ ದೇವಸ್ಥಾನದ ಅರ್ಚಕ ಶ್ರೀ ದ್ಯಾವಪ್ಪ ಪೂಜಾರ ಅವರ ಸಂದರ್ಶನ.

೫. ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಡಾ. ಶೀಲಾಕಾಂತ ಪತ್ತಾರ ಪ್ರಸಾರಾಂಗ ಕನ್ನಡ ವಿ.ವಿ. ೨೦೦೪.

## ೯೩

# ಚೇಳೂರಿನ ಐತಿಹಾಸಿಕ ಸ್ಮಾರಕಗಳ ಅಧ್ಯಯನ

ಎಸ್.ಆರ್. ಪ್ರಸನ್ನಕುಮಾರ್*

**ಚೇ**ಳೂರು ಗ್ರಾಮವು ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೋಕಿನಲ್ಲಿರುವ ಒಂದು ಅರೆನಗರ ಪ್ರದೇಶವಾಗಿದೆ. ಈ ಗ್ರಾಮವು ಪ್ರಸ್ತುತ ಗ್ರಾಮ ಪಂಚಾಯಿತಿ ಕೇಂದ್ರವಾಗಿ ಕಾರ್ಯನಿರ್ವಯಿಸುತ್ತಿದೆ. ಈ ಭಾಗದ ಅತಿ ದೊಡ್ಡ ವಾಣಿಜ್ಯ ಕೇಂದ್ರವಾಗಿದೆ. ಈ ಗ್ರಾಮದಲ್ಲಿ ಸುಮಾರು ೨೦ಕ್ಕೂ ಹೆಚ್ಚು ದೇವಾಲಯಗಳು, ಒಂದು ಮಸೀದಿ, ಒಂದು ಐತಿಹಾಸಿಕ ಬಾವಿಯು, ಹೆಬ್ಬಾಗಿಲು ಹೊಂದಿದ್ದು, ಇವು ಈ ಗ್ರಾಮದ ಐತಿಹಾಸಿಕ ಕುರುಹುಗಳಾಗಿವೆ. ಚೇಳೂರು ಗ್ರಾಮವು ಈ ಭಾಗದ ಜನಪ್ರಿಯ ಜನಪದ ನಾಯಕ ಜುಂಜಪ್ಪನ ಕಥನಕಾವ್ಯದಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸುವ ಮೂಲಕ ಚೇಳೂರಿನ ಇತಿಹಾಸ ಸಾಂಸ್ಕೃತಿಕ ನೆಲೆಗಟ್ಟಿನಲ್ಲೂ ಚಿರಸ್ಥಾಯಿಯಾಗಿದೆ.

ಚೇಳೂರಿನ ಐತಿಹಾಸಿಕ ಹಿನ್ನೆಲೆಯನ್ನು ಗುರುತಿಸುವುದಾದರೆ, ಈ ಗ್ರಾಮದಲ್ಲಿ ದೊರೆತ ಪ್ರಸ್ತುತ ರಾಮನಗರದ ಜಾನಪದ ಲೋಕದಲ್ಲಿರುವ ವೀರಗಲ್ಲು ಗಂಗರ ಕಾಲಕ್ಕೆ ಸೇರಿದ್ದಾಗಿದ್ದು, ಸು. ಕ್ರಿ.ಶ. ೯–೧೦ನೇ ಶತಮಾನಕ್ಕೆ ಸೇರಿದ್ದೆಂದು ಎಂ.ಜಿ. ನಾಗರಾಜು ಹಾಗೂ ಡಿ.ವಿ. ದೇವರಾಜು ಅಭಿಪ್ರಾಯಪಟ್ಟಿದ್ದಾರೆ. ಈ ಐತಿಹಾಸಿಕ ಕುರುಹು ಇಲ್ಲಿ ದೊರೆತ ಅತ್ಯಂತ ಪ್ರಾಚೀನ ಕುರುಹಾಗಿದೆ. ಈ ವೀರಗಲ್ಲಿನ ಮೂರ್ತಿ ಶಿಲ್ಪಗಳನ್ನು ಗಮನಿಸಿ ಇದು ಗಂಗ ಅರಸ ಹಾಗು ಸ್ಥಳೀಯ ದೊರೆಯೊಬ್ಬ ಯುದ್ಧಮಾಡಿದ ಪ್ರತೀಕವನ್ನು ಹೇಳುವಂತಿದೆ ಎಂಬುದು ತಜ್ಞರ ಅಭಿಪ್ರಾಯವಾಗಿದೆ. ಈ ಶಿಲ್ಪದಲ್ಲಿ ಬರುವ ಒಬ್ಬ ವ್ಯಕ್ತಿ ಗಂಗರ ಜೈನದೊರೆಯಾಗಿರಬಹುದು ಎಂದು, ಇದಕ್ಕೆ ಪೂರಕವಾಗಿ ಈ ಗ್ರಾಮದ ನೆರೆಯ ಗ್ರಾಮ ಬಿದರೆಯಲ್ಲಿ ಕ್ರಿ.ಶ. ೯೭೬ರ ಒಂದು ಜೈನ ಶಾಸನ ದೊರೆತಿದ್ದು, ಈ ಪ್ರದೇಶವು ೧೦ನೇ ಶತಮಾನದ ಸಂದರ್ಭದಲ್ಲಿ ಪ್ರಮುಖ ಜೈನ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ.

ಈ ಗ್ರಾಮದಲ್ಲಿ ದೊರೆತ ಮತ್ತೊಂದು ಪ್ರಮುಖ ಐತಿಹಾಸಿಕ ದಾಖಲೆಯೆಂದರೆ, ಹೊಯ್ಸಳರ ವೀರಬಲ್ಲಾಳ (ಇಮ್ಮಡಿ ವೀರಬಲ್ಲಾಳ)ನ ಕ್ರಿ.ಶ. ಸುಮಾರು ೧೧೮೬ರ ಶಾಸನ. ಇದು ಗ್ರಾಮದ ಹೊನ್ನಾದೇವಿ ದೇವಾಲಯದ ಬಳಿ ಲಭ್ಯವಾಗಿದ್ದು, ಪ್ರಸ್ತುತ ತುಮಕೂರು ವಿಶ್ವವಿದ್ಯಾನಿಲಯದ ಆವರಣದಲ್ಲಿದ್ದು, ಇದರ ಕೆಳಭಾಗ ಹಾಗೂ ಬಲಭಾಗದ ಮೇಲ್ತುದಿಯು ಮುರಿದು ಹೋಗಿದ್ದು ಈ ಶಾಸನವು ಚೇಳೂರಿನ ದೃಷ್ಟೇಶ್ವರ ದೇವಾಲಯದಲ್ಲಿದ್ದ ಶೈವ ಸಂತ ನಂದಿದೇವನಿಗೆ ದೇಗುಲ ನಿರ್ವಹಣೆ ಹಾಗೂ ಪೂಜಾಕಾರ್ಯ ನಡೆಸಿಕೊಂಡು ಹೋಗಲು ಕೆರೆ ಸಹಿತ ಭೂ ದಾನ ಕೊಟ್ಟ ವಿಷಯವನ್ನು ಈ ಶಾಸನವು ನೀಡುತ್ತದೆ. ಈ ಶಾಸನದಲ್ಲಿ ಶಕ ೧೧೦೮ ಎಂದಿದ್ದು ಇದು ಕ್ರಿ.ಶ. ೧೧೮೬ ಇರಬಹುದೆಂದು, ಎಂ.ಜಿ. ನಾಗರಾಜು ಹಾಗೂ ಡಾ. ಡಿ.ವಿ. ದೇವರಾಜುರವರು ತಮ್ಮ ಸಂಶೋಧನ ಲೇಖನದಲ್ಲಿ ವಿವರಿಸಿದ್ದಾರೆ.

ಈ ಗ್ರಾಮದ ಪ್ರಮುಖ ಇತಿಹಾಸಕ ಸ್ಮಾರಕಗಳನ್ನು ನೋಡುವುದಾದರೆ, ಅವುಗಳಲ್ಲಿ ಬಹಳ ಮುಖ್ಯವಾದುದೆಂದರೆ, ದೃಷ್ಟೇಶ್ವರ ದೇವಾಲಯ, ಈ ದೇವಾಲಯದ ಬಗ್ಗೆ ಹೊಯ್ಸಳರ ಶಾಸನದಲ್ಲಿ ಉಲ್ಲೇಖವಾಗಿದ್ದು, ೧೧೮೬ರಲ್ಲಿ ನಂದಿದೇವನೆಂಬ ತಪಸ್ವಿ, ಸಂತ ಬಿಡಾರ ಹೂಡಿದ್ದನೆಂದು, ಅವನಿಗೆ ದೇವಾಲಯದ ಕಾರ್ಯಗಳಿಗೆ ಅಗತ್ಯ ನೆರವು ನೀಡಿದದ್ದರ ಬಗ್ಗೆ ಉಲ್ಲೇಖಿಸಲಾಗಿದ್ದು, ಪ್ರಸ್ತುತ ದೊರೆತಿರುವ ಆಧಾರಗಳ ಮೂಲಕ ಪುರಾತನ ದೇವಾಲಯವಾಗಿದೆ. ಪ್ರಸ್ತುತ ಸನ್ನಿವೇಶದಲ್ಲಿ ದೇವಾಲಯವನ್ನು ಗಮನಿಸಿದರೆ, ಈ ದೇವಾಲಯವು ವಿಜಯನಗರ ಹಾಗು ವಿಜಯನಗರೋತ್ತರ ಶೈಲಿಯಿಂದ ಕೂಡಿದ್ದು, ಬಹುಶಃ ಈ ದೇವಾಲಯ ಇವರುಗಳ ಕಾಲದಲ್ಲಿ ಪುನರ್ ನಿರ್ಮಾಣವಾಗಿರಬಹುದೆಂದು ಊಹಿಸಬಹುದಾಗಿದೆ, ಇದಕ್ಕೆ ಪೂರಕವಾಗಿ ಈ ಭಾಗದ ಆಡಳಿತಗಾರರಾಗಿದ್ದ ಚೇಳೂರಿನ ಗೌಡರುಗಳಿಗೆ ಬ್ಯಾಡನಕಟ್ಟೆ ಗ್ರಾಮ ಹಾಗೂ ಚಂನಸಮುದ್ರಗಳನ್ನು ನೀಡಿದ್ದರ ಬಗ್ಗೆ ಕ್ರಿ.ಶ. ೧೫೪೧ರ ಅಚ್ಯುತರಾಯನ ಶಾಸನ ಹಾಗೂ ಕ್ರಿ.ಶ. ೧೫೬೦ರ ಅಳಿಯರಾಮರಾಯನ ಶಾಸನಗಳು ಮಾಹಿತಿ ನೀಡುತ್ತವೆ. ಈ ಅಂಶಗಳ ಆಧಾರಿತವಾಗಿ ಈ ಪ್ರದೇಶ ವಿಜಯನಗರ ಅರಸರ ಜೊತೆಗೆ ಉತ್ತಮ ಸಂಬಂಧ ಹೊಂದಿರುವುದು ತಿಳಿದುಬರುತ್ತದೆ.

* ಪಿಎಚ್.ಡಿ ಸಂಶೋಧನಾ ವಿದ್ಯಾರ್ಥಿ, ಇತಿಹಾಸ–ಪುರಾತತ್ವ ಅಧ್ಯಯನ–ಸಂಶೋಧನಾ ವಿಭಾಗ, ತುಮಕೂರು ವಿವಿ, ಮೊ. ೯೪೮೨೭೨೭೫೯೧

ಈ ದೇವಾಲಯವು ಗರ್ಭಗೃಹ, ಸುಖನಾಸಿ, ನವರಂಗ ಮಂಟಪ ಹಾಗು ಮುಖಮಂಟಪ ಹೊಂದಿದ್ದು, ಮುಖ ಮಂಟಪ ಬಿದ್ದುಹೋಗಿದ್ದ ಕಾರಣ ಮುಖಮಂಟಪವನ್ನು ಪುನಃ ನಿರ್ಮಿಸಲಾಗಿದೆ. ಈ ದೇವಾಲಯವು ಕದಂಬನಾಗರ ಶೈಲಿಯಿಂದ ಕೂಡಿದ್ದು ಐದು ಅಂತಸ್ತಿನ ಶಿಖರವಾಗಿದೆ, ಮೊದಲಿನ ಅಂತಸ್ತು ೪.೨೬ ಮೀ. ಮತ್ತು ೪.೧೬ ಮೀ. ಉದ್ದಗಲ ಹೊಂದಿದ್ದರೆ, ಐದನೆಯ ಅಂತಸ್ತು ೨.೯೫ ಮೀ. ಮತ್ತು ೨.೫೯ ಮೀ. ಉದ್ದಗಲ ಹೊಂದಿದೆ. ವಿಮಾನದ ಶಿಖರವು ೧.೨೧ ಮೀ. ಎತ್ತರವಾಗಿದ್ದು ಶಿಖರದ ಮೇಲಿನ ಕಲ್ಲಿನ ಕಳಶವು ೯೧ ಸೆ.ಮೀ. ಎತ್ತರವಾಗಿದೆ. ದೇವಾಲಯದ ಮುಂಭಾಗದಲ್ಲಿ ನಾಲ್ಕು ಸ್ವತಂತ್ರ ಸ್ಥಂಭಗಳಿದ್ದು, ಇವುಗಳಲ್ಲಿ ಎರಡು ಧ್ವಜಸ್ಥಂಭಗಳಿದ್ದು ಒಂದು ಸ್ಥಂಭವು ೫.೫೬ ಮೀ ಎತ್ತರವಾಗಿದ್ದು ೫೩*೫೩ ಸೆ.ಮೀ. ದಪ್ಪವಾಗಿದ್ದು ತಳಬಾಗದಿಂದ ೪, ೮, ೧೬ ಕೋನಗಳಿಂದ ಕೆತ್ತಲ್ಪಟ್ಟಿವೆ ಅಲ್ಲದೆ ಮೇಲ್ಬಾಗದಲ್ಲಿನ ಶಿರಭಾಗವು ಅತ್ಯಂತ ಸುಂದರ ಪುಷ್ಪಪೋತಿಕ ಶೈಲಿಯಲ್ಲಿ ಕೆತ್ತಲ್ಪಟ್ಟಿವೆ ಇವುಗಳ ಜೋತೆಗೆ ದೀಪಸ್ಥಂಭ ಹಾಗು ಬಲಿಪೀಠಸ್ಥಂಭಗಳು ಇವೆ.

ನವರಂಗದ ಕಂಭಗಳು ಪ್ರಸ್ತುತ ೧.೧೪ ಮೀ. ಎತ್ತರ ೪೩*೪೩ ಸೆ.ಮೀ. ದಪ್ಪವಾಗಿವೆ. ಕೇಂದ್ರ ಭಾಗದಲ್ಲಿ ವಿಜಯನಗರ ಶೈಲಿಯ ಸಾಮಾನ್ಯ ಲಕ್ಷಣವಾದ ತಿರುಗು ಚೌಕ ಮಾದರಿಯ ಭುವನೇಶ್ವರವನ್ನು ಕಾಣಬಹುದಾಗಿದೆ ಅಲ್ಲದೆ ಈ ದೇವಾಲಯದಲ್ಲಿನ ಕಂಭಗಳು ಸಾಮಾನ್ಯವಾದ ಪ್ರಾಣಿ ಮತ್ತು ಸಸ್ಯವರ್ಗದ ಅಲಂಕಾರಿಕೆಯಿಂದ ಕೂಡಿವೆ.

ಈ ಗ್ರಾಮದ ಮತ್ತೊಂದು ಪ್ರಮುಖ ಸ್ಮಾರಕವೆಂದರೆ ಇತಿಹಾಸ ಪ್ರಸಿದ್ದ ಚೇಳೂರು ಬಾವಿ ಈ ಸ್ಮಾರಕವು ಸಂಪೂರ್ಣವಾಗಿ ವಿಜಯನಗರ ಶೈಲಿಯಿಂದ ಕೂಡಿದ್ದು ಅತ್ಯಂತ ಬೃಹತ್ ಸ್ಮರಕವಾಗಿದೆ ಸ್ಥಳೀಯ ಜನರ ಐತಿಹ್ಯದ ಆದರಿತವಾಗಿ ನೋಡುವುದಾದರೆ ಈ ಬಾವಿಯು ಒಬ್ಬ ವೇಶ್ಯೆಯಿಂದ ನಿರ್ಮಿಸಲ್ಪಟ್ಟಿದ್ದು ಎಂದು ಹೇಳಲಾಗುತ್ತಿದೆ. ಆದರೆ ಈ ಅಂಶಕ್ಕೆ ಯಾವುದೆ ಲಿಖಿತ ಆಧಾರಗಳಿಲ್ಲ ಈ ಬಾವಿಗೆ ಪ್ರವೇಶ ಕಲ್ಪಿಸುವ ಮೆಟ್ಟಿಲುಗಳು ಭೂಗತವಾಗಿದ್ದು ವಿಜಯನಗರದ ಮಹಾನವಮಿ ದಿಬ್ಬ ಮೇಲೇರಲು ಇರುವ ಹಿಂಭಾಗದ ಮೆಟ್ಟಲುಗಳ ಮಾದರಿಯಲ್ಲಿವೆ ಈ ಬಾವಿಯು  ಮೇಲ್ಬಾಗದಲ್ಲಿ ಸುತ್ತಲು ವೇದಿಕೆಯನ್ನು ಹೊಂದಿದ್ದು ಈ ವೇದಿಕೆಯು ೨೮ ಇಂಚು ಎತ್ತರ ಹಾಗು ೩೧ ಇಂಚು ಅಗಲವಾಗಿದ್ದು ಅಲ್ಲದೆ ಬಾವಿಯ ಉದ್ದಗಲವು ೧೧.೫೩ ಮೀ. ಹಾಗೂ ೧೧.೫೩ ಮೀ. ಇದ್ದು ಬಾವಿಯು ಸುಮಾರು ೧೨.೧೯ ಮೀ. ಆಳವಾಗಿದೆ ಬಾವಿಯ ಮೊದಲ ಪ್ರವೇಶ ದ್ವಾರದ ಮೆಟ್ಟಲುಗಳು ಅಂತ್ಯದಲ್ಲಿ ಎರಡು ಕಡೆಯಿಂದ ಬಂದು ಎರಡನೇ ಹಂತದ ಪ್ರವೇಶದ್ವಾರ ಬಳಿ ಸಂದಿಸುತ್ತವೆ ಈ ಬಾಗದಲ್ಲಿ ಒಂದು ೧.೧೬*೧.೧೬ ಮೀ. ವಿಸ್ತೀರ್ಣದ ಸಂಣ್ಣ ಕೊಣೆಯನ್ನು ನೋಡಬಹುದು ಈ ಬಾವಿಯ ತಳಬಾಗಕ್ಕೆ ಪ್ರವೇಶ ಕಲ್ಪಿಸುವ ಎರಡನೇ ಹಂತದ ಭೂಗತ ಮೆಟ್ಟಿಲುಗಳ ಮೇಲಿನ ಛಾವಣಿಯಲ್ಲಿ ತಿರುಗು ಚೌಕಗಳು ಹಾಗು ಕೇಂದ್ರೀಯ ವೃತ್ತಗಳ ಮಾದರಿಯ ಕಾಣಬಹುದು ಇವುಗಳು ಈ ಸ್ಮಾರಕವು ವಿಜಯನಗರ ಕಾಲಕ್ಕೆ ಸೇರಿದ್ದೆಂದು ಹೇಳಲು ದೊರಕಿರುವ ಅತಿ ಪ್ರಮುಖ ಸ್ಮಾರಕ ಲಕ್ಷಣಗಳಾಗಿವೆ.

ಪ್ರಮುಖ ಐತಿಹಾಸಿಕ ಸ್ಮಾರಕವೆಂದರೆ ಊರುಬಾಗಿಲು ಅಥವಾ ಹೆಬ್ಬಾಗಿಲು ಇದು ಈ ಗ್ರಾಮಕ್ಕೆ ಪ್ರವೇಶ ಕಲ್ಪಿಸಿಕೂಡುವ ದ್ವಾರವಾಗಿದಿತು ಈ ಹೆಬ್ಬಾಗಿಲ ಬಗ್ಗೆ ಒಂದು ಜನಪದ ಕಥೆಯು ಸೇರಿಕೊಂಡು ಸಂಶೋಧನಾರ್ಥಿಗಳನ್ನು ಆಕರ್ಷಿಸುತ್ತದೆ ಈ ದ್ವಾರದಲ್ಲಿರುವ ಕಲ್ಲು ಕೋಳಿಯ ಕೆತ್ತನೆಯು ಜನಪದ ಕಥೆಯ ಮೂಲ. ಈ ಕಲ್ಲು ಕೋಳಿ ಕೂಗಿದಾಗ ಚೇಳೂರು ಬಾವಿಯು ತುಂಬಿ ಮರಳು ಬಸವನು ಹೂಂಕರಿಸಿದಾಗ ಪ್ರಳಯ ಸಂಭವಿಸುತ್ತದೆ ಎಂಬುದು ಇಂದಿನ ಆಗುಹೋಗುಗಳನ್ನು ಗಮನಿಸಿದಾಗ ತರ್ಕಬದ್ದವಾಗಿಯೆ ಇದೆ. ಈ ಊರ ಬಾಗಿಲು ೩.೯೧ ಮೀ. ಎತ್ತರ, ಹಾಗು ೨.೭೪ ಮೀ. ಅಗಲವಾಗಿದೆ, ಈ ಸ್ಮಾರಕದ ಒಟ್ಟು ಉದ್ದ ೧೦ ಮೀ.ಗಳು. ಇದರಲ್ಲಿ ಒಟ್ಟು ೧೯ ಗೋಡೆಗಂಭಗಳು ಕಾಣಿಸುತ್ತಿದ್ದು ಹೆಬ್ಬಾಗಿಲಿನ ಒಳಭಾಗದ ಎರಡು ಪಾರ್ಶ್ವಗಳಲ್ಲಿ ಎತ್ತರವಾದ ವೇದಿಕೆಗಳನ್ನು ಕಾಣಬಹುದು, ಅಲ್ಲದೆ ಹೆಬ್ಬಾಗಿಲಿನ ಪ್ರವೇಶ ದ್ವಾರದ ಬಲ ಮೂಲೆಯಲ್ಲಿ ಒಂದು ಕಿರು ಕೋಣೆಯನ್ನು ಕಾಣಬಹುದಾಗಿದೆ. ಈ ಹೆಬ್ಬಾಗಿಲಿನ ಪ್ರವೇಶದ ಕಲ್ಲಿನ ಜಂತೆಯ ಮೇಲೆ ಇತಿಹಾಸ ಪ್ರಸಿದ್ಧ ಕಲ್ಲಿನ ಕೋಳಿಯನ್ನು ಕೆತ್ತಿದ್ದು ಇದು ಮೂಲತಃ ಹಂಸದ ರೂಪದಲ್ಲಿದ್ದು ಜನರ ವಾಡಿಕೆಯಲ್ಲಿ ಕೋಳಿಯೆಂದು ಹೆಸರಾಗಿದೆ. ಈ ಸ್ಮಾರಕದ ಕಂಭಗಳು ಪ್ರಾಣಿ ಮತ್ತು ಸಸ್ಯ ವರ್ಗದ ಅಲಂಕಾರಿಕೆಯಿಂದ ಕೂಡಿದ್ದು ರಕ್ಷಣಾ ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತಹ ಈ ಭಾಗದ ಅತಿ ಪ್ರಮುಖ ಕುರುಹಾಗಿದ್ದು ಈ ಹೆಬ್ಬಾಗಿಲಿಗೆ ಮರದ ಬಾಗಿಲು ಅಳವಡಿಸಿದ್ದರ ಕುರುಹಾಗಿ ಬಾಗಿಲು ಕಿಂಡಿಗಳನ್ನು ಕಾಣಬಹುದಾಗಿದೆ. ಪ್ರಸ್ತುತ ಇದು ಯಾವುದೆ ನಿರ್ವಹಣೆ ಇಲ್ಲದೆ ಸ್ಥಳೀಯರಿಂದ ಅತಿಕ್ರಮಣಕ್ಕೆ ಒಳಪಟ್ಟು ದಿನೇ ದಿನೇ ತನ್ನ ವೈಭವ ಕಳೆದುಕೊಳ್ಳುತ್ತಿದೆ.

ಭೈರವೇಶ್ವರ ದೇವಾಲಯ ಈ ಗ್ರಾಮದಲ್ಲಿರುವ ಮತ್ತೊಂದು ಐತಿಹಾಸಿಕ ಸ್ಮಾರಕ. ಇದು ಚೇಳೂರು ಬಾವಿಯ ಹತ್ತಿರವೇ ಇದ್ದು ದೇವಾಲಯದ ಹಲವು ಭಾಗಗಳು ಬಿದ್ದು ಹೋಗಿದ್ದು, ಗರ್ಭಗೃಹ ಮತ್ತು ಒಂದು ಮಂಟಪ ಉಳಿದಿದ್ದು

ದೇವಾಲಯದ ಶಿಖರ ಭಾಗವು ಅತ್ಯಂತ ಪ್ರಮುಖ ಆಕರ್ಷಣೀಯವಾಗಿದ್ದು ಈ ಶಿಖರವು ಕಲ್ಲಿನ ಕಳಶವನ್ನು ಹೊಂದಿದೆ, ಚೌಕಾಕಾರದ ವೇದಿಕೆಯ ಮೇಲೆ ಅರಳಿದ ಪದ್ಮವನ್ನು ಕೆತ್ತಿದ್ದು ಅದರ ಮೇಲೆ ಪೂರ್ಣ ಕುಂಭವನ್ನು ಇರಿಸಲಾಗಿದೆ. ಪೂರ್ಣ ಕುಂಭವು ಗಂಟೆಯಾಕಾರದ ಕಲ್ಲಿನ ಕೆತ್ತನೆಯಿಂದ ಮುಂದುವರಿದು ಅದರ ಮೇಲೆ ಕಳಶಕ್ಕೆ ತೆಂಗಿನಕಾಯಿ ಇಡುವ ರೀತಿಯಲ್ಲೆ ಮಾವಿನ ಪತ್ರೆ ಸಮೇತ ತೆಂಗಿನ ಕಾಯಿಯ ಶಿಲ್ಪ ಕೆತ್ತಿರುವುದು ಅತ್ಯಂತ ವಿಶಿಷ್ಟವಾಗಿದೆ. ದೇವಾಲಯದ ಹೊರಗೋಡೆಯು ಸಂಪೂರ್ಣ ಕಲ್ಲಿನ ದಿಮ್ಮಿಗಳಿಂದ ಕಟ್ಟಲ್ಪಟ್ಟಿದ್ದು ಯಾವುದೆ ಅಲಂಕಾರಿಕೆ ಅಂಶಗಳು ಇರುವುದಿಲ್ಲ, ಶಿಖರ ಭಾಗ ನಿರ್ಮಾಣಕ್ಕೆ ಬಳಸಲ್ಪಟ್ಟಿರುವ ಸುಟ್ಟ ಇಟ್ಟಿಗೆಗಳು ನಾಯಕರ ಕಾಲದ ಇಟ್ಟಿಗೆ ಮಾದರಿಯವಾಗಿವೆ. ಚೇಳೂರಿನ ಇತಿಹಾಸವು ಕೇವಲ ಐತಿಹಾಸಿಕ ದಾಖಲೆಗಳಿಗಷ್ಟೆ ಸೀಮಿತವಾಗಿರದೆ ಅದು ಜನಪದರ ಮೌಖಿಕ ಇತಿಹಾಸದಿಂದಲು ಸಂಮೃದ್ದವಾಗಿದೆ ಚೇಳೂರು ಜುಂಜಪ್ಪನ ಕಥೆಯಲ್ಲಿ ಬರುವಂತಹ ಅತಿ ಪ್ರಮುಖ ಪ್ರದೇಶ ಜುಂಜಪ್ಪನ ಹುಟ್ಟೂರು ಹಾಗಲವಾಡಿಯು ಚೇಳೂರಿನಿಂದ ಕೇವಲ ೨೦ ಕಿ.ಮೀ. ಗಳು ಮಾತ್ರ ಜನಪದ ಕಥೆಯ ಪ್ರಕಾರ ಚೇಳೂರಿನ ಗೌಡರುಗಳು ಜುಂಜಪ್ಪನ ಸೋದರ ಮಾವಂದಿರ ಮಾತುಕೇಳಿ ಜುಂಜಪ್ಪನ ಒಂದು ಹೋರಿಯನ್ನು ಬಲವಂತವಾಗಿ ಎಳೆದುತಂದು ಚೇಳೂರಿನಲ್ಲಿ ಕಟ್ಟಿರಲು ಜಂಜಪ್ಪ ತನ್ನ ಕೊಳಲಿನ ವಾದನ ಮಾಡಿ ಹೋರಿಯನ್ನು ಕರೆದಾಗ ಆಹೋರಿ ಕಬ್ಬಿಣದ ಸರಪಳಿ ಹಾಗು ಕಲ್ಲಿನ ಕಂಭವನ್ನು ಮುರಿದು ಇಲ್ಲಿಂದ ಹಾರಿತೆಂದು ಹೇಳುತ್ತಾರೆ ಅಲ್ಲದೆ ಜಂಜಪ್ಪ ಚೇಳೂರಿನ ಗೌಡರುಗಳಿಗೆ ಶಾಪನೀಡಿದನೆಂಬ ಪ್ರತೀತಿಯಿದೆ.

ಗ್ರಾಮದಲ್ಲಿ ನೆಲೆಸಿದ್ದರು ಇಲ್ಲಿ ಒಂದು ಮಠವು ಇದ್ದು ಪ್ರಸ್ಥುತ ಸರಿಯಾದ ನಿರ್ವಹಣೆ ಇಲ್ಲದೆ ಈ ಶರಣ ನೆಲೆಯು ತನ್ನ ಅಸ್ಥಿತ್ವವನ್ನು ಕಳೆದುಕೊಳ್ಳುತ್ತಿದೆ ಈ ಪ್ರದೇಶದಲ್ಲಿ ಶರಣರ ಪವಾಡಕ್ಕೆ ಸಂಬಂಧಿಸಿದಂತೆ ಒಮ್ಮೆ ಸಂಗಮೇಶ್ವರರು ಮೂರು ಹಿಡಿಮರಳನ್ನು ಹಾಕಿ ಅದರಮೇಲೆ ೧೦೧ ಕುಂಭ ನೀರನ್ನು ಸುರಿದ ನಂತರ ಉಳಿದ ಮರಳಿನಿಂದ ಅವರು ಅಪೇಕ್ಷಯಂತೆ ಮರಳಿನ ಬಸವ ಬೆಳೆಯುತ್ತಿದೆ ಎಂಬ ಪ್ರತೀತಿ ಇದ್ದು ಇಂದಿಗೂ ಈ ಮರಳುಬಸವೇಶ್ವರ ಮೂರ್ತಿಯನ್ನು ಕಾಣಬಹುದಾಗಿದೆ.

ಈ ಭಾಗದ ಜನರ ನಂಬಿಕೆಯಂತೆ ಚೇಳೂರಿಗೆ ಈ ಹೆಸರು ಬರಲು ಕಾರಣ ಈ ಭಾಗದಲ್ಲಿ ಚೇಳರು ಆಳ್ವಿಕೆ ನಡೆಸಿದ್ದರು ಎಂಬುದೆ ಕಾರಣ ಇದಕ್ಕೆ ಪೂರಕವಾಗಿ ಈ ಗ್ರಾಮದಲ್ಲಿ ದೊರೆತಿರುವ ಹೊಯ್ಸಳರ ಶಾಸನದಲ್ಲಿ ಉಲ್ಲೇಖಿಸಿರುವಂತೆ ಷೋಳೂರು ಎಂಬುದು ತಮಿಳು ಭಾಷೆಯ ಪ್ರಯೋಗವೆಂದು ಎಂ.ಜಿ. ನಾಗರಾಜು ಮತ್ತು ಡಿ.ವಿ. ದೇವರಾಜು ಅಭಿಪ್ರಾಯಪಟ್ಟಿರುವುದು ಈ ವಾದಕ್ಕೆ ಪುಷ್ಠಿ ನೀಡಿದೆ. ಅಲ್ಲದೆ ಈ ಪ್ರದೇಶ ನೊಳಂಬರ ಆಳ್ವಿಕೆಗೆ ಒಳಪಟ್ಟಿದ್ದು ನಿಡುಗಲ್‌ನಲ್ಲಿ ಆಳುತ್ತಿದ್ದು ನೀಡುಗಲ್ ಚೋಳರು ಈ ಪ್ರದೇಶದಮೇಲೆ ಪ್ರಭಾವ ಬೀರಿರುವ ಸಾಧ್ಯತೆ ಇದೆ. ಆಗಾಗಿ ಈ ಮೌಖಿಕ ಇತಿಹಾಸವನ್ನು ಅಲ್ಲಗಳೆಯುವಂತಿಲ್ಲ ಎಂಬುದು ಈ ಅಧ್ಯಯನದಿಂದ ತಿಳಿದು ಬರುತ್ತದೆ.

ಇದಕ್ಕೆ ಪೂರಕವಾಗಿ ವಿಜಯನಗರ ಸಾಮ್ರಾಜ್ಯದ ರಾಯರುಗಳು ಇಲ್ಲಿನ ಗೌಡರುಗಳ ಅನುಭೋಗಕ್ಕೆ ಕೆರೆ ಹಾಗು ಗ್ರಾಮಗಳನ್ನು ನೀಡಿರುವುದನ್ನು ಶಾಸನಗಳಿಂದ ತಿಳಿಯುವಾಗ ಈ ಪ್ರದೇಶವು ವಿಜಯನಗರ ಕಾಲದಲ್ಲಿ ರಾಯರೊಂದಿಗೆ ಉತ್ತಮ ಬಾಂದವ್ಯ ಹೊಂದಿತ್ತೆಂದು ಊಹಿಸಬಹುದು.

ಈ ಎಲ್ಲಾ ಶಾಸನಾತ್ಮಕ ಹಾಗು ಭೌತಿಕ ವಸ್ತುಗಳ ಆಧಾರಿತವಾಗಿ ಈ ನೆಲೆಯು ಕ್ರಿ. ಶ. ೯ನೇ ಶತಮಾನಕ್ಕಿಂತಲು ಮುಂಚಿನಿಂದ ಅಸ್ಥಿತ್ವದಲ್ಲಿದ್ದು, ಇದು ಗಂಗ, ಹೊಯ್ಸಳ, ವಿಜಯನಗರ, ನಾಯಕರು, ಮೈಸೂರು ಅರಸರು ಹಾಗು ಬ್ರಿಟೀಷರ ಆಳ್ವಿಕೆಗೆ ಒಳಪಟ್ಟಿದ್ದಂತಹ ಪ್ರದೇಶವಾಗಿದ್ದು ಇದರ ಮೇಲೆ ಶೈವ, ವೈಷ್ಣವ ಹಾಗು ಜೈನ ಧರ್ಮಗಳ ಪ್ರಭಾವ ಇದ್ದದ್ದನ್ನು ಗಮನಿಸಬಹುದಾಗಿದೆ, ಹಾಗಾಗಿ ಚೇಳೂರು ದಕ್ಷಿಣ ಕರ್ನಾಟಕ ಮಧ್ಯಕಾಲೀನ ಪ್ರಮುಖ ನೆಲೆಗಳಲ್ಲಿ ಇದು ಒಂದು ಎಂಬುದಾಗಿ ಹೇಳಬಹುದು.

## ಆಕರ ಗ್ರಂಥಗಳು


೧. ಚಂದ್ರಶೇಖರ ಕಂಬಾರ (ಪ್ರ. ಸಂ.), ಚಲುವರಾಜು (ಸಂ) ೧೯೯೭, ಬುಡಕಟ್ಟು ಮಹಾಕಾವ್ಯ ಮಾಲೆ 'ಜುಂಜಪ್ಪ', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ, ಪುಟ ಸಂಖ್ಯೆ ೨೧೨-೩೩೮.

೨. ರೈಸ್, ಬಿ.ಎಲ್. ೧೯೦೪, ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ XII, ಮೈಸೂರು ಗೌರ್ನಮೆಂಟ್ ಸೆಂಟ್ರಲ್ ಪ್ರೆಸ್, ಬೆಂಗಳೂರು, ಪುಟ ಸಂಖ್ಯೆ ೪೬-೪೯, ೮೦.

೩. ಶೇಷಶಾಸ್ತ್ರಿ ಆರ್. ೨೦೦೪, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪. ಆರ್ಥರ್, ವಿಲಿಯಂ, ೧೮೫೦, 'ಎ ಮಿಷನ್ ಟು ದಿ ಮೈಸೂರ್', ಲಂಡನ್, ಪುಟ ಸಂಖ್ಯೆ ೧೬೮-೧೬೯.

# ೯೭

# ಮಂಟೂರು ಗ್ರಾಮದ ಪ್ರಾಚ್ಯಾವಶೇಷಗಳು

ಸುನೀಲ ಕುಸ್ತಿ*

**ಮಂ**ಟೂರು ಗ್ರಾಮವು ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲೂಕಿನಲ್ಲಿದ್ದು, ಹಲವು ರಾಜಮನೆತನಗಳ ಆಳ್ವಿಕೆಯಿಂದ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡ ಗ್ರಾಮವಾಗಿದೆ. ಈ ಗ್ರಾಮವು ಮುಧೋಳ ತಾಲ್ಲೂಕು ಕೇಂದ್ರದಿಂದ ಪೂರ್ವದಿಕ್ಕಿಗೆ ಸುಮಾರು ೧೧ ಕಿ.ಮೀ. ಅಂತರದಲ್ಲಿ ನೆಲೆಗೊಂಡಿದೆ. ವಿಶ್ಲೇಷಣಾತ್ಮಕ ಅಧ್ಯಯನದ ಮೂಲಕ ಮಂಟೂರು ಗ್ರಾಮದ ಇತಿಹಾಸವನ್ನು ಕಟ್ಟಿಕೊಡುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಈ ರೀತಿಯ ಐತಿಹಾಸಿಕ ಮಹತ್ವವುಳ್ಳ ಪ್ರಾಚ್ಯಾವಶೇಷಗಳೆಂದರೆ :

**ಶಾಸನ :** ಮುಧೋಳ ತಾಲ್ಲೂಕಿನ ಮಂಟೂರು ಗ್ರಾಮದಲ್ಲಿ ರಾಮಲಿಂಗ ದೇವಾಲಯದ ಹತ್ತಿರದ ಕಲ್ಲಿನ ಮೇಲಿರುವ ಕ್ರಿ.ಶ. ೧೦೪೧ರ ಶಾಸನವು ಈ ಗ್ರಾಮದ ಇತಿಹಾಸವನ್ನು ಕಟ್ಟಿಕೊಡುವ ಪ್ರಾಚೀನ ಅವಶೇಷವಾಗಿದೆ. ಇದು ಈಗ ಇದೇ ಗ್ರಾಮದ ಲಕ್ಷ್ಮಿದೇವಿ ದೇವಾಲಯದ ಆವರಣದಲ್ಲಿದೆ. ಈ ಶಾಸನವು ಕಲ್ಯಾಣ ಚಾಲುಕ್ಯರ ಅರಸ ಒಂದನೆಯ ಜಗದೇಕಮಲ್ಲನ ಕಾಲದ್ದಾಗಿದ್ದು[೧], ಸವದತ್ತಿಯ ರಟ್ಟರಿಗೂ ಸಂಬಂಧಿಸಿದ ಶಾಸನ ಇದಾಗಿದೆ. ಸವದತ್ತಿಯ ರಟ್ಟರ ಅರಸರಲ್ಲಿ ಪ್ರಮುಖ ಅರಸನಾದ 'ಎರಗ'ನು ಕಲ್ಯಾಣ ಚಾಲುಕ್ಯರ ಮಹಾಸಾಮಂತನಾಗಿದ್ದನಲ್ಲದೇ ಈತನಿಗೆ 'ಎರೆಯಮ್ಮ' ಎಂಬ ಹೆಸರನಿಂದಲೂ ಕೆಯಲಾಗುತ್ತಿತ್ತು ಎಂಬುದು ಈ ಶಾಸನದಿಂದ ತಿಳಿದುಬರುತ್ತದೆ ಮತ್ತು ಈತನು 'ರಟ್ಟನಾರಾಯಣ', 'ರಟ್ಟಮಾರ್ತಾಂಡ'[೨] ಎಂಬ ಬಿರುದಾಂಕಿತನಾಗಿದ್ದನೆಂಬುದನ್ನೂ ಕೂಡ ಇದೇ ಶಾಸನ ತಿಳಿಸುತ್ತದೆ.

ಮಂಟೂರು ಗ್ರಾಮದ ಈ ಶಾಸನವು ಸವದತ್ತಿಯ ರಟ್ಟರಸ ಎರೆಯಮ್ಮನು ದಂಡದಿಂದ ಬಂದ ಆದಾಯವನ್ನು ದೇವದ ಮಂಟೂರು ಮಹಾಜನರಿಗೆ ಬಿಡುತ್ತಾನೆ. ಇದರಿಂದ ಮಂಟೂರು ಗ್ರಾಮದೊಡೆಯನ ಮಧುಸೂಧಣಯ್ಯನೇ ಮೊದಲಾದ ಮಹಾಜನರು ಮಂಟೂರಿನಲ್ಲಿ ಒಂದು ಕೆರೆಯನ್ನು ತೋಡಿಸಿದರು ಮತ್ತು ಈ ಕೆರೆಗೆ 'ರಟ್ಟಸಮುದ್ರ ಕೆರೆ'[೩] ಎಂದು ಕರೆದಿರುವ ವಿಷಯವು ಈ ಶಾಸನವು ನೀಡುವ ಪ್ರಮುಖ ಮಾಹಿತಿಯಾಗಿದೆ. ಹೀಗಾಗಿ ಈ ಶಾಸನದಿಂದ ಈ ಗ್ರಾಮವು ೧೧ನೇ ಶತಮಾನದ ಅವಧಿಯಲ್ಲಿ ಕಲ್ಯಾಣ ಚಾಲುಕ್ಯ ಮತ್ತು ಸವದತ್ತಿ ರಟ್ಟರಸರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ಗೊತ್ತಾಗುತ್ತದೆ.

### ೨. ಶೈವ ದೇವಾಲಯ ಅಥವಾ ಸೂಳೆ ದೇವಾಲಯ

ಮಂಟೂರು ಗ್ರಾಮದ ಉತ್ತರ ದಿಕ್ಕಿಗೆ ೧.೫ ಕಿ.ಮೀ. ದೂರದಲ್ಲಿ ನೆಲೆಗೊಂಡಿರುವ ಪ್ರಾಚೀನ ದೇವಾಲಯವಿದ್ದು, ಉತ್ತರಾಭಿಮುಖವಾಗಿ ನಿರ್ಮಾಣವಾದ ಶೈವ ದೇವಾಲಯವಾಗಿದೆ. ಈ ದೇವಾಲಯದ ವಾಸ್ತುಶೈಲಿಯನ್ನು ಗಮನಿಸಿದಾಗ ಇದು ಕಲ್ಯಾಣ ಚಾಲುಕ್ಯರ ದೇವಾಲಯವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಆದರೆ ಈ ದೇವಾಲಯವು ಸದ್ಯ ಸಂಪೂರ್ಣವಾಗಿ ಅವನತಿಯ ಹಂತವನ್ನು ತಲುಪಿದೆ. ಈ ದೇವಾಲಯವನ್ನು ಗ್ರಾಮಸ್ಥರು 'ಮಲ್ಲಯ್ಯನ ದೇವಸ್ಥಾನ', 'ಶಿವನ ದೇವಸ್ಥಾನ', 'ಸೂಳೆ ದೇವಾಲಯ', 'ಸೂಳೆಗುಡಿ' ಎಂದು ಕರೆಯುತ್ತಾರೆ. ಇದೊಂದು ಶೈವ ದೇವಾಲಯವಾಗಿರುವುದರಿಂದ ಇದನ್ನು 'ಮಲ್ಲಯ್ಯನ ದೇವಸ್ಥಾನ' ಮತ್ತು 'ಶಿವನ ದೇವಸ್ಥಾನ' ಎಂದು ಕರೆಯುವುದು ಸಮಂಜಸವೆನಿಸುವುದು.

ಪ್ರಸ್ತುತ ದೇವಾಲಯವು 'ಸೂಳೆಕೆರೆ' ಎಂದು ಕರೆಯಲ್ಪಡುವ ಒಂದು ಪ್ರಾಚೀನ ಕೆರೆಯ ದಂಡೆಯ ಮೇಲಿದೆ. ಇಂದಿಗೂ ಕೂಡಾ ಆ ಕೆರೆಯನ್ನು ಕಾಣಬಹುದಾಗಿದೆ. ದೇವಾಲಯವು ಅವನತಿಯ ಹಂತದಲ್ಲಿದ್ದು, ಗರ್ಭಗೃಹ, ಅಂತರಾಳ ಮತ್ತು ನವರಂಗ ಭಾಗಗಳನ್ನು ಹೊಂದಿದೆ. ಗರ್ಭಗೃಹವೂ ಕೂಡಾ ವಿನಾಶದ ಅಂಚಿನಲ್ಲಿದ್ದು, ನಿಧಿಗಳ್ಳರು ದೇವಾಲಯದ ಮೂಲಪೀಠವನ್ನು ಅಗೆದು ತೆಗೆದಿದ್ದಾರೆ. ಈ ದೇವಾಲಯದ ಗರ್ಭಗೃಹದ ದ್ವಾರವು ಒಂದೇ ಶಾಖೆಯಿಂದ ಕೂಡಿದ್ದು, ಅದು ಸ್ಥಂಭಶಾಖೆಯಾಗಿದೆ. ದ್ವಾರದ ಲಲಾಟದಲ್ಲಿ 'ಗಣೇಶ'ನ ಶಿಲ್ಪವಿದೆ.

* ಸಂಶೋಧನಾ ವಿದ್ಯಾರ್ಥಿ, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩೨೭೬, ಮೊ. ನಂ : ೯೭೪೩೪೫೫೦೭೯

ದೇವಾಲಯದ ಅಂತರಾಳ ಭಾಗವು ಸಂಪೂರ್ಣವಾಗಿ ನಾಶವಾಗಿದ್ದು, ಬಿದ್ದಿರುವ 'ಮಕರತೋರಣ' ಕಂಡುಬರುತ್ತಿದ್ದು, ಅದರ ಅರ್ಧಭಾಗ ನೆಲದಲ್ಲಿ ಹೂತುಕೊಂಡಿದೆ. ಹೀಗಾಗಿ ಇದರಲ್ಲಿ ಮಕರಶಿಲ್ಪ ಮಾತ್ರ ಕಾಣಿಸಿಕೊಳ್ಳುವುದು.

ಈ ದೇವಾಲಯದ ನವರಂಗ ಭಾಗವೂ ಕೂಡಾ ಸಂಪೂರ್ಣವಾಗಿ ನಾಶವಾಗಿದೆ. ಈ ಭಾಗದ ಅವಶೇಷಗಳನ್ನು ನೋಡಿದಾಗ ದೇವಾಲಯಕ್ಕೆ ಹೊಂದಿಕೊಂಡು ಅಂತರಾಳದ ಇಕ್ಕೆಲಗಳಲ್ಲಿ ಎರಡರಂತೆ ಒಟ್ಟು ನಾಲ್ಕು ದೇವಕೋಷ್ಠಕಗಳು ಕಂಡುಬರುತ್ತವೆ. ನವರಂಗದ ಸ್ಥಂಭಗಳು ಪೀಠ, ದಂಡ, ತಡಿ, ಫಲಕ ಮತ್ತು ಬೋದಿಗೆಗಳನ್ನು ಹೊಂದಿದೆ. ಸ್ಥಂಭದಲ್ಲಿರುವ ದಂಡ ಭಾಗವು ಮಧ್ಯದಲ್ಲಿ ಎಂಟು ವಜ್ರಾಕಾರದ ಪಟ್ಟಿಕೆಗಳ ಕೆತ್ತನೆ ಮತ್ತು ಮೇಲ್ಭಾಗದಲ್ಲಿ ಕುಂಭದಾಕಾರದ ರಚನೆಯನ್ನು ಹೊಂದಿದೆ.

## ೩. ಕಲ್ಮೇಶ್ವರ ದೇವಾಲಯ

ಮಂಟೂರು ಗ್ರಾಮದ ಉತ್ತರ ದಿಕ್ಕಿಗೆ ಕಂಡುಬರುವ ಕಲ್ಮೇಶ್ವರ ದೇವಾಲಯವು ಪೂರ್ವಾಭಿಮುಖವಾಗಿ ನಿರ್ಮಾಣಗೊಂಡ ಪ್ರಾಚೀನ ದೇವಾಲಯವಾಗಿದ್ದು, ಪ್ರಸ್ತುತ ಶಿಥಿಲಾವಸ್ಥೆಯಲ್ಲಿದೆ.

ದೇವಾಲಯದ ಪ್ರಾಚೀನ ಗರ್ಭಗೃಹವು ಸಂಪೂರ್ಣವಾಗಿ ಹಾಳಾಗಿದ್ದು, ನಂತರದ ಕಾಲಘಟ್ಟದಲ್ಲಿ ಇದನ್ನು ಜೀರ್ಣೋದ್ಧಾರಗೊಳಿಸಲಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಗರ್ಭಗೃಹದಲ್ಲಿರುವ ಒಡೆದುಹೋದ ಶಿವಲಿಂಗದ ಪಾಣಿಪೀಠ ಮಾತ್ರ ಇಲ್ಲಿ ಕಂಡುಬರುತ್ತದೆ.

ಅಂತರಾಳದ ಭಾಗದ ಮೇಲ್ಭಾಗದಲ್ಲಿ ನಾಭಿಚಂದವಿರುವುದನ್ನು ಇಲ್ಲಿ ಕಾಣುತ್ತೇವೆ. ಜೊತೆಗೆ ಅಂತರಾಳದ ದ್ವಾರಶಾಖೆಯು ಅಷ್ಟೊಂದು ಅಲಂಕರಣೆಯಿಂದ ಕೂಡಿರದೇ ವಜ್ರಾಕಾರದ ಪಟ್ಟಿಕೆಗಳು ಮಾತ್ರ ಕಂಡುಬರುತ್ತವೆ. ದೇವಾಲಯದ ಮತ್ತೊಂದು ಪ್ರಮುಖ ಭಾಗವಾದ ನವರಂಗದಲ್ಲಿ ನಾಲ್ಕು ಪೂರ್ಣಸ್ಥಂಭಗಳು, ನಾಲ್ಕು ಭದ್ರತಾ ಸ್ಥಂಭಗಳು ಮತ್ತು ಆರು ಅರ್ಧಸ್ಥಂಭಗಳು ಕಂಡುಬರುತ್ತವೆ. ಈ ಸ್ಥಂಭಗಳು ಪೀಠ, ದಂಡ, ತಡಿ, ಫಲಕ ಮತ್ತು ಬೊದಿಗೆಗಳಿಂದ ಕೂಡಿವೆ. ಈ ಸ್ಥಂಭಗಳ ತಡಿ, ಫಲಕ ಮತ್ತು ಬೋದಿಗೆಗಳು ಪ್ರಾಚೀನ ಕಾಲದ್ದಾಗಿದ್ದು, ಸ್ಥಂಭದ ದಂಡಭಾಗ ಮಾತ್ರ ನಂತರದ ಕಾಲದಲ್ಲಿ ಅಥವಾ ದೇವಾಲಯವನ್ನು ಜೀರ್ಣೋದ್ಧಾರಗೊಳಿಸುವ ಸಂದರ್ಭದಲ್ಲಿ ಸೇರಿಸಲ್ಪಟ್ಟವುಗಳಾಗಿವೆ. ಇನ್ನೊಂದು ಮುಖ್ಯವಾದ ಅಂಶವೆಂದರೆ ದೇವಾಲಯದ ವಿತಾನ ಭಾಗವನ್ನು ನಂತರ ಕಾಲಘಟ್ಟದಲ್ಲಿ ಒರಟಾದ ಭಾವಣಿ ಕಲ್ಲುಗಳನ್ನು ಬಳಸಿ ನಿರ್ಮಿಸಿಲಾಗಿದೆ. ಆದರೆ ಅಲ್ಲಿ ಮೂಲ ವಿತಾನಭಾಗ ಕಂಡುಬರುವುದಿಲ್ಲ. ಜೊತೆಗೆ ದೇವಾಲಯದ ಹೊರಭಿತ್ತಿ ನಂತರದ ಕಾಲಘಟ್ಟದಲ್ಲಿ ಜೀರ್ಣೋದ್ಧಾರಗೊಂಡರೂ ಕೂಡಾ ಪ್ರಸ್ತುತ ಶಿಥಿಲಾವಸ್ಥೆಯಲ್ಲಿದೆ. ಹೀಗಾಗಿ ದೇವಾಲಯವು ಜೀರ್ಣೋದ್ಧಾರಗೊಂಡಿರುವುದನ್ನು ಸುಲಭವಾಗಿ ಗುರುತಿಸುಬಹುದು. ಈ ದೇವಾಲಯದ ಮುಂದೆ ಪುಷ್ಕರಣಿಯು ನಿರ್ಮಾಣವಾಗಿದ್ದು, ಇದು ವೃತ್ತಾಕಾರವಾದ ರಚನೆಯನ್ನು ಹೊಂದಿದೆ. ಇದಕ್ಕೆ ಸ್ಥಳೀಯರು 'ತುಂಬುಬಾವಿ', 'ಊರಭಾವಿ'[೫] ಎಂದು ಕರೆಯುತ್ತಾರೆ.

## ೪. ರಾಮಲಿಂಗೇಶ್ವರ ದೇವಾಲಯ ಮತ್ತು ಪ್ರಾಚೀನ ಶಿವಲಿಂಗ

ಮಂಟೂರು ಗ್ರಾಮದ ಪಶ್ಚಿಮಕ್ಕೆ ಕಂಡುಬರುವ ರಾಮಲಿಂಗ ದೇವಾಲಯವು ಪ್ರಾಚೀನ ದೇವಾಲಯವಾಗಿದೆ. ಪೂರ್ವಾಭಿಮುಖವಾಗಿ ನಿರ್ಮಾಣಗೊಂಡಿರುವ ಈ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪವನ್ನು ಹೊಂದಿದೆ. ಪ್ರಸ್ತುತವಾಗಿ ಈ ದೇವಾಲಯವು ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದೆ.

ದೇವಾಲಯದ ಗರ್ಭಗೃಹದಲ್ಲಿ ಪ್ರಾಚೀನ ಶಿವಲಿಂಗವಿದ್ದು, ಇದು ಕಲ್ಯಾಣ ಚಾಲುಕ್ಯರ ಕಾಲಘಟ್ಟಕ್ಕೆ ಸಂಬಂಧಿಸಿದ ಶಿವಲಿಂಗವೆಂದು ಗುರುತಿಸಬಹುದಾಗಿದೆ. ಇದರ ಪಾಣಿಪೀಠವು ಭೂಮಿಯಲ್ಲಿ ಹೂತುಹೋಗಿದ್ದು, ಮೇಲಿನ ಶಿವಲಿಂಗದ ಭಾಗ ಮಾತ್ರ ಕಂಡುಬರುತ್ತದೆ. ಗರ್ಭಗೃಹ ಮತ್ತು ಅಂತರಾಳದ ದ್ವಾರವು ನಂತರದ ಕಾಲದ್ದಾಗಿದ್ದು, ಯಾವುದೇ ಅಲಂಕಾರವಿಲ್ಲ. ಆದರೆ ಎರಡೂ ದ್ವಾರಗಳ ಲಲಾಟದಲ್ಲಿ ಗಣೇಶನ ಉಬ್ಬುಶಿಲ್ಪವಿದೆ. ಪ್ರಸ್ತುತವಾಗಿ ಇರುವ ಸಭಾಮಂಟಪದ ಇಕ್ಕೆಲದ ಗೋಡೆಗಳಲ್ಲೂ ಪ್ರಾಚೀನ ದ್ವಾರದ ಪಟ್ಟಿಕೆಗಳನ್ನು ಸೇರಿಸಲಾಗಿದ್ದು, ಇದು ವಜ್ರ ಮತ್ತು ವಲ್ಲಿಶಾಖೆಗಳನ್ನು ಹೊಂದಿದೆ. ಜೊತೆಗೆ ಇವುಗಳ ಕೆಳಗೆ ದ್ವಾರಪಾಲಕರ ಶಿಲ್ಪಗಳಿವೆ.

ದೇವಾಲಯದ ಸಭಾಮಂಟಪದ ಎಡಭಾಗದ ಗೋಡೆಯಲ್ಲಿರುವ ದ್ವಾರಪಟ್ಟಿಕೆಯಲ್ಲಿ ವಜ್ರ ಮತ್ತು ವಲ್ಲಿಪಟ್ಟಿಕೆಯ ಶಾಖೆಗಳನ್ನು ಗುರುತಿಸಬಹುದಾಗಿದ್ದು, ಪೆದ್ಯಾಭಾಗದಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಚಾಮರಧಾರಿ ಮತ್ತು ಗದೆಯನ್ನು

ಹಿಡಿದು ನಿಂತಿರುವ ದ್ವಾರಪಾಲಕ ಶಿಲ್ಪಗಳನ್ನು ಕಾಣಬಹುದು. ಬಲಭಾಗದ ಗೋಡೆಯಲ್ಲಿರುವ ದ್ವಾರಪಟ್ಟಿಕೆಗಳು ಸಹ ವಜ್ರ ಮತ್ತು ವಲ್ಲೀಪಟ್ಟಿಕೆಗಳನ್ನು ಹೊಂದಿದ್ದು, ಪೆದ್ಯಾಭಾಗದಲ್ಲಿ ಕುಬೇರರ ಶಿಲ್ಪಗಳಿರುವುದು ಕಂಡುಬರುತ್ತದೆ.

### ೫. ಶಾಸನೋಕ್ತ ರಟ್ಟಸಮುದ್ರ ಕೆರೆ ಅಥವಾ ಕುಂಬಾರ ಕೆರೆ

ಮಂಟೂರು ಗ್ರಾಮದಲ್ಲಿ ಮೂರು ಕೆರೆಗಳಿವೆ. ಅವುಗಳಲ್ಲಿ ಎರಡು ಕೆರೆಗಳು ಪ್ರಾಚೀನ ಕಾಲದ ಕೆರೆಗಳಾಗಿದ್ದು, ಒಂದು ಕೆರೆ ಮಾತ್ರ ಸುಮಾರು ೨೦೦ ರಿಂದ ೩೦೦ ವರ್ಷಗಳಷ್ಟು ಹಿಂದಿನದ್ದಾಗಿದೆ. ಮಂಟೂರು ಗ್ರಾಮದಲ್ಲಿನ ಲಕ್ಷ್ಮೀದೇವಿಯ ದೇವಾಲಯದ ಆವರಣದಲ್ಲಿರುವ ಕ್ರಿ.ಶ. ೧೦೪೧ರ ಶಾಸನವು 'ರಟ್ಟಸಮುದ್ರ ಕೆರೆ'ಯನ್ನು ನಿರ್ಮಿಸಿದ್ದರ ಅಂಶವನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಉಲ್ಲೇಖಿತವಾದ 'ರಟ್ಟಸಮುದ್ರ ಕೆರೆ' ಯಾವುದೆಂಬುದು ಇಲ್ಲಿಯವರೆಗೆ ತಿಳಿದಿಲ್ಲ. ಇದನ್ನು ಗುರುತಿಸುವ ಕಾರ್ಯವನ್ನು ಈ ಲೇಖನದಲ್ಲಿ ಮಾಡಲಾಗಿದೆ.

ಕ್ಷೇತ್ರಕಾರ್ಯದ ಮೂಲಕ ಮತ್ತು ಸ್ಥಳೀಕರ ಮೌಖಿಕ ಮಾಹಿತಿಗಳ ಲಭ್ಯತೆಯ ಆಧಾರದ ಮೇಲೆ ಈ ರಟ್ಟಸಮುದ್ರ ಕೆರೆಯು ಮಂಟೂರು ಗ್ರಾಮದ ಉತ್ತರ ದಿಕ್ಕಿನ ಹೊರವಲಯಕ್ಕೆ ಹೊಂದಿಕೊಂಡಂತೆ ನಿರ್ಮಾಣವಾದ ಕೆರೆಯಾಗಿದೆ. ಈ ಕೆರೆಯು ಸುಮಾರು ೧೦ ಎಕರೆ ೩೧ ಗುಂಟೆ ವಿಸ್ತೀರ್ಣದಲ್ಲಿ ನಿರ್ಮಾಣವಾದ ಪ್ರಾಚೀನ ಕೆರೆ. ಪ್ರಾಚೀನ ಕಾಲದ ಕೆರೆಯ ಒಡ್ಡುಗಳ ನಿರ್ಮಾಣ ವ್ಯವಸ್ಥೆಯನ್ನು ಈ ಕೆರೆಯು ಹೊಂದಿದೆ. ಈ ಕೆರೆಯೇ ಶಾಸನೋಕ್ತ ಕೆರೆ ಎಂಬುದನ್ನು ದೃಢೀಕರಿಸಲು ಅಂಶಗಳೆಂದರೆ ಕೆರೆಯ ಬಲದಂಡೆಯ ಮೇಲೆ ಕಲ್ಯಾಣ ಚಾಲುಕ್ಯರ ಕಾಲಘಟ್ಟಕ್ಕೆ ಸಂಬಂಧಿಸಿದ ಒಂದು ದೇವಾಲಯವಿದೆ. ಈ ದೇವಾಲಯವನ್ನು ಸ್ಥಳೀಕರು 'ಕಲ್ಲೇಶ್ವರ ದೇವಾಲಯ', 'ಕಲ್ಮೇಶ್ವರ ದೇವಾಲಯ' ಮತ್ತು 'ಕಲ್ಲಾಲಿಂಗ ದೇವಾಲಯ'[೫]ವೆಂದು ಕರೆಯುತ್ತಾರೆ. ಪ್ರಾಚೀನ ದೇವಾಲಯಗಳು ನಿರ್ಮಾಣವಾಗಿರುವ ವ್ಯವಸ್ಥೆಯನ್ನು ಗಮನಿಸಿದಾಗ ಬಹುತೇಕ ಕಡೆಗಳಲ್ಲಿ ಒಂದು ದೇವಾಲಯ, ಒಂದು ಪುಸ್ಕರಣಿ ಮತ್ತು ಒಂದು ಕೆರೆಯನ್ನು ಒಟ್ಟಾಗಿಯೇ ನಿರ್ಮಾಣಗೊಂಡಿರುವುದು ನಮಗೆ ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ. ಹೀಗಾಗಿ ಈ ಕೆರೆ, ಕಲ್ಲೇಶ್ವರ ಅಥವಾ ಕಲ್ಮೇಶ್ವರ ದೇವಾಲಯ ಮತ್ತು ಕಲ್ಯಾಣ ಚಾಲುಕ್ಯರ ಶಾಸನಗಳನ್ನು ಗಮನಿಸಿದಾಗ ಶಾಸನದಲ್ಲಿ ಉಲ್ಲೇಖಗೊಂಡ ರಟ್ಟಸಮುದ್ರ ಎಂದು ಸ್ಪಷ್ಟವಾಗುತ್ತದೆ.

ಕಲ್ಯಾಣ ಚಾಲುಕ್ಯರ ಮಹಾಸಾಮಂತ ಅರಸರಾದ ಸವದತ್ತಿ ರಟ್ಟರಿಂದ ನಿರ್ಮಾಣವಾದ ಈ ಕೆರೆಗೆ ಪ್ರಸ್ತುತದಲ್ಲಿ ಸ್ಥಳೀಯ 'ಕುಂಬಾರ ಕೆರೆ' ಎಂದು ಕರೆಯುವುದನ್ನು ಕಾಣಬಹುದಾಗಿದೆ. ಈ ಕೆರೆಯು ತನ್ನ ಉತ್ತರ ಮತ್ತು ಈಶಾನ್ಯ ದಿಕ್ಕುಗಳಲ್ಲಿ ಎತ್ತರದ ಗುಡ್ಡಗಾಡು ಪ್ರದೇಶವನ್ನು ಹೊಂದಿದೆ. ಈ ಎರಡು ದಿಕ್ಕುಗಳಿಗೆ ಹೊಂದಿಕೊಂಡ ಎತ್ತರದ ಗುಡ್ಡಗಾಡುಗಳ ಮಧ್ಯದಲ್ಲಿ ಮಳೆಯ ನೀರು ಹರಿದುಬಂದು ಈ ಕೆರೆಗೆ ಸೀರುವಂತೆ ಒಂದು ಸೀಳು ಮಾರ್ಗವಿದೆ. ಹೀಗಾಗಿ ಈ ಸೀಳುಮಾರ್ಗದಲ್ಲಿ ಹರಿದು ಬರುವ ಮಳೆಯ ನೀರಿನ ಮೂಲಕ ಅರಣ್ಯ ಪ್ರದೇಶದ ಮಣ್ಣು ಈ ಕೆರೆಯಲ್ಲಿ ಸಂಗ್ರಹವಾಗುತ್ತದೆ. ಗ್ರಾಮದ ಈಶಾನ್ಯ ದಿಕ್ಕಿಗೆ ಹೊಂದಿಕೊಂಡಂತೆ ನೆಲೆಗೊಂಡಿರುವ ಜಮಖಂಡಿ ತಾಲ್ಲೂಕಿನ 'ಗಣಿ' ಎಂಬ ಹಳ್ಳಿಯಲ್ಲಿನ ಕುಂಬಾರ ವೃತ್ತಿಯ ಜನರು, ಮಡಿಕೆ-ಕುಡಿಕೆಗಳು ಮತ್ತು ಇನ್ನಿತರ ಮಣ್ಣಿನ ಪಾತ್ರೆಗಳನ್ನು ನಿರ್ಮಾಣ ಮಾಡಲು ಈ ಕೆರೆಯ ಮಣ್ಣನ್ನು ತೆಗೆದುಕೊಂಡು ಹೋಗುತ್ತಿದ್ದರಂತೆ. ಹೀಗಾಗಿ ಈ ಕೆರೆಗೆ 'ಕುಂಬಾರ ಕೆರೆ' ಎಂದು ಕರೆಯುತ್ತಾರೆಂದು[೬] ಸ್ಥಳೀಯರು ಹೇಳುತ್ತಾರೆ.

ಪ್ರಸ್ತುತದಲ್ಲಿ ಈ ಕೆರೆಯು ಒತ್ತುವರಿಯಾಗಿ ಸುಮಾರು ೦೫ ಎಕರೆಯಷ್ಟು ಮಾತ್ರ ವಿಸ್ತಾರವನ್ನು ಹೊಂದಿದೆ. ಇದರ ಸರ್ವೆ ನಂ. ೭೪/೨ ಆಗಿದ್ದು, ವೃತ್ತಾಕಾರದಲ್ಲಿ ನಿರ್ಮಾಣವಾಗಿ ಕಂಡುಬರುತ್ತದೆ. ಈಗ ಈ ಕೆರೆಯು ಸುಮಾರು ೧೫ ಅಡಿಯಷ್ಟು ಆಳವನ್ನು ಹೊಂದಿದ್ದು, ಕೆರೆಯನ್ನು ಜಿಲ್ಲಾ ಪಂಚಾಯತಿ ವತಿಯಿಂದ ಅಭಿವೃದ್ಧಿಗೊಳಿಸಲಾಗಿದೆ ಮತ್ತು ಕೆರೆಯ ದಂಡೆಯ ಮೇಲೆ ಸುತ್ತಲೂ ಕಾಲ್ನಡಿಗೆಯ ದಾರಿಯನ್ನು ವ್ಯವಸ್ಥಿತವಾಗಿ ನಿರ್ಮಾಣ ಮಾಡಲಾಗಿದೆ.

### ೬. ಪ್ರಾಚೀನ ಸೂಳೆಕೆರೆ

ಮಂಟೂರು ಗ್ರಾಮದ ಉತ್ತರ ದಿಕ್ಕಿಗೆ ಗ್ರಾಮದಿಂದ ಸುಮಾರು ೧.೫ ಕಿ.ಮೀ. ದೂರದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಒಂದು ಶೈವ ದೇವಾಲಯವಿದ್ದು, ಇದನ್ನು 'ಸೂಳೆ ದೇವಾಲಯ' ಎಂದು ಕರೆಯುತ್ತಾರೆ. ಈ ಸೂಳೆ ದೇವಾಲಯದ ಪಕ್ಕದಲ್ಲಿಯೇ ಈ ಕೆರೆಯು ಇರುವುದರಿಂದ ಈ ಕೆರೆಗೆ 'ಸೂಳೆಕೆರೆ' ಎಂದು ಕರೆಯುತ್ತಾರೆ. ಈ ಕೆರೆಯು ಪ್ರಾಚೀನ ಕಾಲದ ಕೆರೆ ಎಂಬುದರಲ್ಲಿ ಯಾವುದೇ ಸಂಶಯವಿಲ್ಲ. ಏಕೆಂದರೆ ಕೆರೆಯ ಉತ್ತರ ದಿಕ್ಕಿನ ಒಡ್ಡು ಪ್ರಾಚೀನ ಕಾಲದ ಕೆರೆಯ ಒಡ್ಡಾಗಿದೆ. ಇದನ್ನು ಇಂದಿಗೂ ಇಲ್ಲಿ ಗುರುತಿಸಬಹುದಾಗಿದೆ. ಕೆರೆಯ ಉಳಿದ ಎಲ್ಲಾ ದಂಡೆಗಳು ಒತ್ತುವರಿಯಾಗಿ ಪಕ್ಕದ



ಕ್ರಿ.ಶ. ೧೦೪೧ರ ಅವಧಿಯ ಶಾಸನ



ಭೂಮಿಯಲ್ಲಿ ಹೂತುಕೊಂಡಿರುವ ಶೈವ ದೇವಾಲಯ
ಅಥವಾ ಸೂಳೆ ದೇವಾಲಯ



ರಾಮಲಿಂಗೇಶ್ವರ ದೇವಾಲಯ







ಕಲ್ಮೇಶ್ವರ ದೇವಾಲಯದ ಕಂಬಗಳು
ಮತ್ತು ಒಳಭಿತ್ತಿ ಭಾಗ



ಜೀರ್ಣೋದ್ಧಾರಗೊಂಡ ರಟ್ಟಸಮುದ್ರ ಕೆರೆಯ ಪ್ರಸ್ತುತ ಛಾಯಾಚಿತ್ರ



ಸೂಳೆಕೆರೆ ಎಂದು ಕರೆಯಲ್ಪಡುವ ಪ್ರಾಚೀನ ಕೆರೆ

ಜಮೀನಿನ ಮಾಲಿಕರು ಅದನ್ನು ಒತ್ತುವರಿ ಮಾಡಿರಬಹುದಾಗಿದೆ. ಈ ಕೆರೆಯು ಇವತ್ತಿಗೂ ನೀರಿನಿಂದ ಆವೃತವಾಗಿದೆ. ಇದರ ಒಡ್ಡು ಒಂದು ಕಡೆ ಮಾತ್ರ ಪ್ರಾಚೀನ ಕಾಲದ ರಚನೆಯನ್ನು ಹೊಂದಿದೆ. ಇದು ಈ ಕೆರೆಯ ಪ್ರಾಚೀನತೆಯನ್ನು ತೋರಿಸುತ್ತದೆ. ಬಹುಶಃ ಈ ಕೆರೆಯೂ ಕೂಡಾ ಪಕ್ಕದಲ್ಲಿಯ ಶೈವ ದೇವಾಲಯದ ಜೊತೆಗೆ ನಿರ್ಮಾಣವಾಗಿರಬಹುದಾದ ಸಾಧ್ಯತೆಗಳಿವೆ.

## ೭. ವೀರಗಲ್ಲು

ಮಂಟೂರು ಗ್ರಾಮದ ಪಶ್ಚಿಮಕ್ಕೆ ಕಂಡುಬರುವ ರಾಮಲಿಂಗ ದೇವಾಲಯವು ಪ್ರಾಚೀನ ದೇವಾಲಯವಾಗಿದೆ. ಈ ದೇವಾಲಯದ ಸಮೀಪದಲ್ಲಿ ಒಂದು ವೀರಗಲ್ಲು ಇತ್ತು. ಈ ವೀರಗಲ್ಲು ಕನ್ನಡ ವಿಶ್ವವಿದ್ಯಾಲಯದ ಬಾಗಲಕೋಟೆ ಜಿಲ್ಲೆಯ ಶಾಸನ ಸಂಪುಟದಲ್ಲಿ ದಾಖಲಾಗಿದೆ. ಆದರೆ ಇವತ್ತು ಈ ವೀರಗಲ್ಲು ಇಲ್ಲಿ ಕಾಣಬರುವುದಿಲ್ಲ. ಇದನ್ನು ದೇವರಮೂರ್ತಿಯೆಂದು ಪರಿಗಣಿಸಿದ ಗ್ರಾಮಸ್ಥರು ಇದು ಒಡೆದು ಹೋಗಿರುವ ದೇವರಮೂರ್ತಿಯೆಂದು ಇದನ್ನು ಸಮೀಪದ ಕೃಷ್ಣಾ ನದಿಯಲ್ಲಿ ಎಸೆದಿದ್ದಾರೆ ಎಂದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸ್ಥಳೀಕರು ತಿಳಿಸುತ್ತಾರೆ.

ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟದ ಪ್ರಕಾರ ಈ ವೀರಗಲ್ಲು ಶಾಸನದ ಕಾಲವು ಕ್ರಿ.ಶ. ೧೧ನೆಯ ಶತಮಾನದ್ದಾಗಿದೆ. ಯೋಧನೊಬ್ಬನು ಕಾದಾಡಿ ಮರಣವನ್ನಪ್ಪಿದ್ದನ್ನು[೭] ಈ ಶಾಸನ ಉಲ್ಲೇಖಿಸುತ್ತದೆ. ಹೀಗಾಗಿ ಮಂಟೂರ ಗ್ರಾಮದಲ್ಲಿ ದೊರೆತಿರುವ ಈ ವೀರಗಲ್ಲು ಶಾಸನವು ಗ್ರಾಮದ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಸಹಾಯಕವಾಗುವ ಒಂದು ಪ್ರಾಚ್ಯಾವಶೇಷವಾಗಿದೆ. ಆದರೆ ಇಂಥ ಐತಿಹಾಸಿಕ ಮಹತ್ವವನ್ನು ಹೊಂದಿದ ವೀರಗಲ್ಲನ್ನು ಗ್ರಾಮಸ್ಥರು ನದಿಗೆ ಎಸೆದಿರುವುದರ ಕುರಿತು ಅವರಿಗೆ ತಿಳುವಳಿಕೆಯನ್ನು ಹೇಳಿ, ಇನ್ನು ಮುಂದೆ ಇಂಥವುಗಳು ಸಿಕ್ಕರೆ ಅವುಗಳನ್ನು ಕಾಯ್ದಿಡಲು ತಿಳಿಸಿದೆ.

ಈ ಪ್ರಬಂಧವನ್ನು ರಚಿಸುವಲ್ಲಿ ಸಹಕರಿಸಿದ ಗ್ರಾಮಸ್ಥರಿಗೆ, ದೇಸಾಯಿ ಮನೆತನದ ವಂಶಸ್ಥರಿಗೆ, ಡಾ. ಮಂಜುನಾಥ ಪಾಟೀಲ್ ಉಪನ್ಯಾಸಕರು ಮತ್ತು ಡಾ. ಅಮರೇಶ ಯತಗಲ್, ಪ್ರಾಧ್ಯಾಪಕರಿಗೂ ನನ್ನ ಕರತಜ್ಞತೆಗಳು



### ಅಡಿಟಿಪ್ಪಣಿಗಳು

೧. ದೇವರಕೊಂಡಾರೆಡ್ಡಿ ಮತ್ತು ಇತರರು (ಸಂ.), **ಬಾಗಲಕೋಟೆ ಜಿಲೆಯ ಶಾಸನ ಸಂಪುಟ-೦೯**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪುಟ ೧೫೯.

೨. **ಅದೇ,** ಪುಟ ೧೫೯.

೩. **ಅದೇ,** ಪುಟ ೧೫೯.

೪. ಮಲ್ಲಪ್ಪ ಸಿಧಗೊಂಡ, ಸಾ : ಮಂಟೂರ, ಇವರ ಹೇಳಿಕೆಯಿಂದ. (ದಿನಾಂಕ. ೦೩.೧೦.೨೦೧೮).

೫. ಬಸಪ್ಪ ಅರಳಿಮಟ್ಟಿ, ಸಾ : ಮಂಟೂರ, ಇವರ ಹೇಳಿಕೆಯಿಂದ. (ದಿನಾಂಕ. ೧೩.೦೯.೨೦೧೮).

೬ ಸುರೇಂದ್ರಬಾಬು ಗೋಲಶೆಟ್ಟಿ, ಸಾ : ಮಂಟೂರ ಇವರ ಹೇಳಿಕೆಯಿಂದ. (ದಿನಾಂಕ. ೧೩.೦೯.೨೦೧೮).

೭. ದೇವರಕೊಂಡಾರೆಡ್ಡಿ ಮತ್ತು ಇತರರು (ಸಂ.), **ಪೂರ್ವೋಕ್ತ,** ಪುಟ ೧೪೦.

# ಮಂಚೇನಹಳ್ಳಿ ಪರಿಸರದ ಪ್ರಾಚ್ಯಾವಶೇಷಗಳು

**ಕೆ. ಧನಪಾಲ್***

"ಮಂಚೇನಹಳ್ಳಿಯು ಇಂದಿನ ಚಿಕ್ಕಬಳ್ಳಾಪುರ ಜಿಲ್ಲೆ ಗೌರಿಬಿದನೂರು ತಾಲೂಕಿನಲ್ಲಿದೆ. ಚಿಕ್ಕಬಳ್ಳಾಪುರ-ಗೌರಿಬಿದನೂರು ಮಾರ್ಗ ಮಧ್ಯದಲ್ಲಿ ಇದು ತಾಲೂಕಿನ ಮೊದಲ ಪಟ್ಟಣವಾಗಿದೆ. ಇದೊಂದು ಹೋಬಳಿ ಕೇಂದ್ರವೂ ಹೌದು.

ಮಂಚೇನಹಳ್ಳಿಯಲ್ಲಿ ಲಭ್ಯವಾದ ತಾಮ್ರಪಟದ (ಕಾಲ ಕ್ರಿ.ಶ.೧೪೦೨) ಆಧಾರದ ಮೇಲೆ ಇದಕ್ಕೆ ಆರುನೂರು ವರ್ಷಗಳ ಇತಿಹಾಸವಿರುವುದು ಸಾಧ್ಯವಾಗಿದೆ. ಮಂಚೇನಹಳ್ಳಿಯನ್ನು "ಶ್ರೀಮತ್‌ಸ್ವರ್ನ ಗಿರಿಯೇಕೇ ಪಿನಾಕಿನಾಶ್ಚಪೂರ್ವಕೆ' ಎಂದು ಗುರುತಿಸಲಾಗಿರುವುದು ಇದರ ಪ್ರಾಚೀನತೆಯನ್ನು ತಿಳಿಸುವಂತಿದೆ. "ಮಂಚೇಪಲ್ಲಿ" ಎಂಬುದು ಕನ್ನಡೀಕರಣವಾಗಿ ಮಂಚೇನಹಳ್ಳಿಯಾಗಿದೆ. ಇದರ ಸುತ್ತಲಿನ ಪರಿಸರದಲ್ಲಿ ಲಭ್ಯವಾಗುತ್ತಿರುವ ವೀರಗಲ್ಲು, ಶಾಸನ, ಆಲಯ ಹಾಗೂ ಇನ್ನಿತರೆ ಪ್ರಾಚೀನ ಅವಶೇಷಗಳ ಹಿನ್ನೆಲೆಯಲ್ಲಿ ಇಲ್ಲಿನ ವಿಷಯವನ್ನು ಮಂಡಿಸಲಾಗಿದೆ. ಇದು ಮಂಚೇನಹಳ್ಳಿಯ ನಾಲ್ಕು ದಿಕ್ಕುಗಳ ಹತ್ತಾರು ಹಳ್ಳಿಗಳ ನಡುವಿನಲ್ಲಿ ಗಮನೀಯವಾದದ್ದೆನ್ನಬಹುದು.

ತಾಮ್ರಪಟದಲ್ಲಿ ತಿಳಿಸಿರುವ ಮೇರೆಗಳಿಗನುಸಾರವಾಗಿ ಒಂದೆರಡು ಗ್ರಾಮಗಳನ್ನು ಗುರುತಿಸಬಹುದಾಗಿದ್ದು, ಇದರ ಹೊರತಾಗಿ ನಾಲ್ಕಾರು ಸ್ಥಳಗಳಲ್ಲಿ ಲಭ್ಯವಾದ ವೀರಗಲ್ಲು-ಶಾಸನ-ಆಲಯಗಳ ನೆರವಿನಿಂದ ವಿವೇಚನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ಇವುಗಳಲ್ಲಿ ಉಪ್ಪರಹಳ್ಳಿಯ ವೀರಗಲ್ಲು ಶಾಸನಗಳು ಮೊದಲ ಸ್ಥಾನದಲ್ಲಿವೆ. ತದನಂತರದಲ್ಲಿ ಇಲ್ಲಿಯೇ ಲಭ್ಯವಾದ ಎರಡು ಶಾಸನಗಳು ಇಲ್ಲಿ ಗಮನಾರ್ಹವೆನ್ನಬಹುದು. ಹಳೇಹಳ್ಳಿಗೆ ಎರಡು ಕಿ.ಮೀ. ದೂರದಲ್ಲಿರುವ ದ್ಯಾವರಕೊಂಡವೆಂಬ ಮಜರಾ ಗ್ರಾಮದಲ್ಲಿ ದೊರೆತ ಹದಿಮೂರನೇ ಶತಮಾನದ ಶಾಸನ, ಮಿಣಕನಗುರ್ಕಿಯ ಹೊಲವೊಂದರಲ್ಲಿ ಲಭ್ಯವಿರುವ ಶಾಸನಗಳನ್ನು ಗಮನಿಸಬೇಕಾಗಿದೆ. ಮತ್ತೊಂದು ಭಾಗದಲ್ಲಿ ಮಂಚೇನಹಳ್ಳಿಯಲ್ಲಿರುವ ವೆಂಕಟೇಶ್ವರ ಆಲಯ ರಾಯನಕಲ್ಲು ಸಮೀಪವಿರುವ ಕೋಡಿಬ್ರಹ್ಮದೇವರ ಆಲಯ, ಉಪ್ಪರಹಳ್ಳಿಯ ವಿಷ್ಣುದೇವಾಲಯದ ಭಗ್ನಾವಶೇಷಗಳು ಹಾಗೂ ಬಸವಣ್ಣನ ದೇವಾಲಯ ಮತ್ತು ಇಲ್ಲಿಗೆ ಸಮೀಪದ ನರಸಿಂಹ ದೇವಾಲಯಗಳನ್ನು ಗಮನಿಸಬಹುದಾಗಿದೆ.

ಮಂಚೇನಹಳ್ಳಿ ಸುತ್ತಮುತ್ತಲಿನ ಪರಿಸರ ಗಂಗ-ರಾಷ್ಟ್ರಕೂಟ-ನೊಳಂಬ ಮೊದಲಾದ ಪ್ರಾಚೀನ ವಂಶಗಳ ಸಂಬಂಧ ಹೊಂದಿರುವುದು. ಇತ್ತೀಚೀಗೆ ಉಪ್ಪರಹಳ್ಳಿಯಲ್ಲಿ ಲಭ್ಯವಾದ ಹೊಸ ಶಾಸನ-ವೀರಗಲ್ಲುಗಳ ಆಧಾರದಿಂದ ತಿಳಿಯಬಹುದಾಗಿದೆ. ಇದೊಂದು ಶಾಸನ ಸಹಿತ 'ವೀರಗಲ್ಲು'. ಆದರೆ ಕಾಲಾನಂತರದಲ್ಲಿ ಇದು ಬಿದ್ದು ಎರಡು ಹೋಳಾಗಿ ಹೋಗಿದ್ದು, ಇದರ ಹೊರಭಾಗವನ್ನು ಭೂಮಿಯನ್ನು ಪುನಃ ನೆಟ್ಟಿರುತ್ತಾರೆ.



ಉಪ್ಪರಹಳ್ಳಿಯ ವೀರಗಲ್ಲು



ಉಪ್ಪರಹಳ್ಳಿಯ ವಿಷ್ಣುದೇವಾಲಯದ ಅವಶೇಷಗಳು-ದ್ವಾರಪಾಲಕರು

* ನಂ. ೧೧/೧೨, ಕೊಂಡಪ್ಪ ಬಡಾವಣೆ, (ಮಾರುತಿ ಆಸ್ಪತ್ರೆ ಹಿಂಭಾಗ), ಮಾರುತಿ ನಗರ, ಯಲಹಂಕ, ಬೆಂಗಳೂರು-೫೬೦೦೬೪.



ಉಪ್ಪರಹಳ್ಳಿಯ ತುರುಗೋಳ್ ಕಲ್ಲು



ಉಪ್ಪರಹಳ್ಳಿಯ ವಿಷ್ಣುದೇವಾಲಯದ ಬಾಗಿಲುವಾಡದ ಗಜಲಕ್ಷ್ಮಿ ಶಿಲ್ಪ

ಶಾಸನಗಳ ವಿವೇಚನೆಯತ್ತ ಗಮನಿಸುವುದಾದರೆ, ಇದು ಹೊಯ್ಸಳರ ಕಾಲದಿಂದ ವಿಜಯನಗರದ ವಿಭಿನ್ನ ಅರಸು ಮನೆತನಗಳವರೆಗೆ ಸೇರಿದ್ದಾಗಿದೆ. ಹಳೇಹಳ್ಳಿಯ ಮಜರಾ ಗ್ರಾಮ ದೇವರಕೊಂಡಪಲ್ಲಿ ಗ್ರಾಮವಿರುವ ಶಾಸನವು ಹುಟ್ಟುಬಂಡೆಯ ಮೇಲಿದ್ದು, ಇದರಲ್ಲಿ ಇಮ್ಮಡಿ ನರಸಿಂಗರಾಯಪುರದ ಉಲ್ಲೇಖವಿದೆ. ಹಳೇಹಳ್ಳಿಯನ್ನು ಇಮ್ಮಡಿ ನರಸಿಂಗರಾಯಪುರ ಎಂದು ಕರೆಯಲಾಗಿತ್ತು. ಹೀಗಾಗಿ ಇದರ ಕಾಲವನ್ನು ಹದಿಮೂರನೇ ಶತಮಾನವೆಂದು ಊಹಿಸಬಹುದು. ಇದರ 'ಕಾಲುವಳಿ' ಎಂದರೆ ಉಪಗ್ರಾಮ ವರದನಹಳ್ಳಿಯು ಪಾರಂಪರಿಕೆ ಗ್ರಾಮವೆಂದು ಆಲೋಚಿಸಬಹುದು.

ಉಪ್ಪರಹಳ್ಳಿಯಲ್ಲಿ ನೂತನವಾಗಿ ಶೋಧಿತವಾಗಿರುವ ವೀರಗಲ್ಲು-ಶಾಸನ ಇಲ್ಲಿ ಲಭ್ಯವಾದ ಎರಡು ಶಾಸನಗಳಲ್ಲಿ ಒಂದು ಸ್ಪಷ್ಟವಾದ ಸಂವತ್ಸರ, ಮಾಸ, ತಿಥಿಗಳನ್ನು ತಿಳಿಸುತ್ತದೆ. ಮತ್ತೊಂದನ್ನು ಮೊದಲ ಶಾಸನದ ಆಧಾರದ ಮೇರೆಗೆ ಅದೇ ಕಾಲದ್ದೆಂದು ತಿಳಿಯಬಹುದು. ಇವೆರಡೂ ಸಹ ಉಪ್ಪರಹಳ್ಳಿಯ ಗ್ರಾಮಕ್ಕೆ ಅಗ್ರಹಾರ ಮಾನ್ಯವಾದ ಸ್ಥಾಪಿಸಿದ್ದನ್ನು ನಮಗೆ ಸ್ಪಷ್ಟಪಡಿಸುತ್ತದೆ. ತಿರುಮಲನ ಮಗನಾದ ಶ್ರೀರಂಗರಾಯರ ಆಳ್ವಿಕೆಯ ಕಾಲಕ್ಕೆ ಸೇರಿದ್ದಾಗಿರುವ ಶಾಸನದಲ್ಲಿ ಹಲವೊಂದು ಅಕ್ಷರಗಳು ತ್ರುಟಿತವಾದ ಕಾರಣ ದಾನ ನೀಡಿರುವ ವ್ಯಕ್ತಿಯ ಹೆಸರನ್ನು ತಿಳಿಯಲಾಗದು. ಡಾ. ಬಿ.ಎಲ್. ರೈಸ್ ಅವರ ಕಾಲಕ್ಕೆ ಇಲ್ಲಿದ್ದ ಇವೆರಡೂ ಶಾಸನಗಳು ಈಗ ಕಾಣೆಯಾಗಿದೆ.



ಉಪ್ಪರಹಳ್ಳಿಯ ವಿಷ್ಣುದೇವಾಲಯದ ಅವಶೇಷಗಳು

ಮಿಣಕನಗುರ್ಕಿ ಗ್ರಾಮವು ಇತ್ತೀಚಿನ ದಶಕಗಳಲ್ಲಿ ಪ್ರವಾಸಿಕ್ಷೇತ್ರವಾಗಿ ಹೆಸರು ಪಡೆದಿದೆ. ಇಲ್ಲಿ ಪಟೇಲರ ಹೊಲದಲ್ಲಿ ಈಗಾಗಲೇ ಲಭ್ಯವಿದ್ದು ದಾಖಲಾಗಿರುವ ಶಾಸನವು ಶ್ರೀಕೃಷ್ಣದೇವರಾಯನ ಆಳ್ವಿಕೆಯ ಕಾಲಕ್ಕೆ ಸೇರಿದ್ದಾಗಿದೆ. ಇದರ ಕಾಲದ ಖಚಿತತೆ ಅಸ್ಪಷ್ಟವೇ ಆದರೂ ಸದ್ಯಕ್ಕೆ ಇದರ ಕಾಲವನ್ನು ಪ್ರಜೋತ್ಪತ್ತಿ ಸಂವತ್ಸರ ಎಂದರೆ ಕ್ರಿ.ಶ. ೧೫೧೧ ಎಂದು ಹೇಳಬಹುದಾಗಿದೆ. ಶಾಸನದ ವಿಷಯಭಾಗ ಅಲಭ್ಯ. ಆದರೆ ಇದೊಂದು ಮಾನ್ಯ ನೀಡಿದ ಶಾಸನವಾಗಿದೆ.

ಇವೆಲ್ಲ ವಿಷಯಗಳಿಂದಾಗಿ ಮಂಚೇನಹಳಿಯ ಸುತ್ತಲಿನ ಪರಿಸರವು ಇತಿಹಾಸ ಪರಂಪರೆಗಳು ಪ್ರಾಚೀನತೆಯನ್ನು ಸಾರುವಂತಿದ್ದು ಚಾರಿತ್ರಿಕ ಹಿರಿಮೆಯನ್ನು ದೊರಕಿಸಿದೆಯೆಂದು ಪರಿಭಾವಿಸಹುದಾಗಿದೆ.

[ಲೇಖನವನ್ನು ಸಿದ್ಧಪಡಿಸುವಲ್ಲಿ ನೆರವಾದ ಡಾ. ಪಿ.ವಿ. ಕೃಷ್ಣಮೂರ್ತಿ, ಪ್ರೊ. ಕೆ.ಆರ್. ನರಸಿಂಹನ್, ಹಳೇಹಳ್ಳಿಯ ಕಿರಣ್, ಮಂಚೇನಹಳ್ಳಿಯ ಸಾ.ನ. ಲಕ್ಷ್ಮಣಗೌಡ ಹಾಗೂ ಗ್ರಾಮಸ್ಥರಿಗೆ ಧನ್ಯವಾದಗಳನ್ನು ತಿಳಿಸುತ್ತೇವೆ.]

## ಆಕರ ಗ್ರಂಥಗಳು

೧. ಎಪಿಗ್ರಾಫಿಯಾ ಕರ್ನಾಟಕ, ಸಂಪುಟ X, (B.L. Rice Vol).

## ೯೯

# ಅಡವಿಮಲ್ಲಾಪುರ ಪರಿಸರದ ಪ್ರಾಚ್ಯಾವಶೇಷಗಳು

**ಕಂಚಿಕೆರೆ ಷಮೀವುಲ್ಲ* ಹೆಚ್. ರಮೇಶ****

ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಅಡವಿಮಲ್ಲಾಪುರ ಗ್ರಾಮವು ತಾಲೂಕಿನಿಂದ ೨೧ ಕಿ.ಮೀ. ದಕ್ಷಿಣಕ್ಕೆ ಹಾಗೂ ಅರಸೀಕೆರೆ ಗ್ರಾಮದಿಂದ ಪಶ್ಚಿಮಕ್ಕೆ ೫ ಕಿ.ಮೀ. ದೂರವಿದೆ. ಹೆಸರೆ ಸೂಚಿಸುವಂತೆ ಅರಣ್ಯದ ಪಕ್ಕದಲ್ಲಿ ಅಥವಾ ಅರಣ್ಯಕ್ಕೆ ಹೊಂದಿಕೊಂಡಂತಿರುವ ಈ ಗ್ರಾಮಕ್ಕೆ ಅಡವಿಮಲ್ಲಾಪುರ ಎಂಬ ಹೆಸರು ಬಂದಿದೆ. ಮಲ್ಲಾಪುರ ಎನ್ನುವ ಹೆಸರು ಬಹುಶಃ ಗ್ರಾಮದ ದೈವವಾದ ಮೈಲಾರಲಿಂಗನ ಆರಾಧನೆಯಿಂದ ಬಂದಿರಬಹುದು ಎಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ. ಗ್ರಾಮದ ಪೂರ್ವಕ್ಕೆ ಮೈಲಾರಲಿಂಗನ ದೇವಾಲಯವಿದ್ದು ದೇವಾಲಯ ವಿಜಯನಗರೋತ್ತರ ಕಾಲದ್ದಾಗಿದೆ. ಗ್ರಾಮದ ಪೂರ್ವಕ್ಕೆ ನರಸಿಂಹ ದೇವರ ಬೆಟ್ಟವಿದೆ ಮೈಲಾರ ದೇವಾಲಯದ ಅವರಣದಲ್ಲಿ ಗಂಗೆ ಮಾಳವ್ವ ಮತ್ತು ಅನೇಕ ನಾಗರ ಶಿಲ್ಪಗಳು, ಮುಖ್ಯಪರಿವಾರ ದೇವತೆಗಳ ಚಿಕ್ಕ ಚಿಕ್ಕ ದೇವಾಲಯಗಳ ಜೊತೆಗೆ ಸುತ್ತಲೂ ಮಂಟಪಗಳಿವೆ.

**ಮೈಲಾರಲಿಂಗನ ದೇವಾಲಯ:** ಮುಖ್ಯ ದೇವಾಲಯವು ಮೈಲಾರಲಿಂಗನಿಗೆ ಸಂಬಂಧಿಸಿದ್ದು ಪ್ರಾಚೀನ ಅವಶೇಷಗಳಲ್ಲಿ ಇದು ಬಹುಮುಖ್ಯವಾದ ದೇವಾಲಯವಾಗಿದೆ. ದೇವಾಲಯ ಪೂರ್ವಾಭಿಮುಖವಾಗಿದ್ದು ಗರ್ಭಗೃಹ, ಅಂತರಾಳ, ನವರಂಗ ಹಾಗೂ ತೆರೆದ ಮುಖಮಂಟಪವನ್ನು ಹೊಂದಿದೆ ಗರ್ಭಗೃಹದ ಬಾಗಿಲುವಾಡದಲ್ಲಿ ಗಜಲಕ್ಷ್ಮಿ ಶಿಲ್ಪವಿದ್ದು ನವರಂಗದ ಕಂಬಗಳಲ್ಲಿ ಯಾಳಿ, ಕೋತಿ ಹಾಗೂ ಮಿಥುನ ಶಿಲ್ಪಗಳಿವೆ. ಗರ್ಭಗೃಹದ ಮೇಲ್ಭಾಗದಲ್ಲಿ ಸಾಧಾರಣವಾದ ಗೋಪುರವಿದೆ. ದೇವಾಲಯದ ಅವರಣಕ್ಕೆ ಪೂರ್ವ ಹಾಗೂ ಉತ್ತರಕ್ಕೆ ದ್ವಾರಗಳಿವೆ. ಪೂರ್ವದ್ವಾರದ ಮುಂಭಾಗದಲ್ಲಿ ಸಿಬಾರವಿದೆ ದೇವಾಲಯದ ಸುತ್ತಲೂ ಸಾಧಾರಣವಾದ ಮಂಟಪಗಳಿವೆ. ಕೆಲವು ಮಂಟಪಗಳಲ್ಲಿ ಶಿವಲಿಂಗ ಹಾಗೂ ನಂದಿಶಿಲ್ಪಗಳಿವೆ.

**ಗಂಗೆಮಾಳವ್ವ ದೇವಾಲಯ:** ಗಂಗೆಮಾಳವ್ವ ದೇವಾಲಯ ಸಾಧಾರಣವಾಗಿದ್ದು ದೇವಾಲಯದ ಗರ್ಭಗೃಹದಲ್ಲಿ ಶೈವ ಶಿಲ್ಪಗಳಾದ ಭೈರವಿ ಹಾಗೂ ಶಿವನ ಅಂಶಗಳಿರುವ ಇನ್ನೊಂದು ಶಿಲ್ಪವಿದೆ. ದೇವಾಲಯದ ಅವರಣದಲ್ಲಿನ ಒಂದು ಮಂಟಪದ ಮೇಲೆ ಸುಮಾರು ೫೦ಕ್ಕೂ ಹೆಚ್ಚು ನಾಗರ ಶಿಲ್ಪಗಳಿದ್ದು ಇವು ಮಕ್ಕಳಾಗದ ಮಹಿಳೆಯರು ಶಿಲ್ಪಗಳನ್ನ ಕೆತ್ತಿಸಿಟ್ಟಿದ್ದಾರೆ. ಎಂದು ದೇವಾಲಯದ ಅಡಳಿತಕ್ಕೆ ಸಂಬಂಧಿಸಿದವರಿಂದ ಮಾಹಿತಿ ತಿಳಿದುಬಂದಿದೆ.[೧] ಗಂಗೆ ಮಾಳವ್ವ ದೇವಾಲಯದ ಮಂಭಾಗದಲ್ಲಿ ದೀಪಸ್ತಂಭವಿದ್ದು ಅದರ ಬುಡದಲ್ಲಿ ಕಲ್ಲುಗುಂಡುಗಳಿವೆ.[೨] ಈ ರೀತಿಯ ಕಲ್ಲುಗುಂಡುಗಳು ಅಕ್ಕಪಕ್ಕದ ಗ್ರಾಮಗಳಲ್ಲಿದ್ದು ಅವುಗಳನ್ನು ಗುಂಡುಭರಮಪ್ಪ ಎಂಬ ಹೆಸರಿನಿಂದ ಕರೆಯುತ್ತಾರೆ.

**ಯೋಗನರಸಿಂಹ ದೇವಾಲಯ:** ಗ್ರಾಮದ ಪೂರ್ವ ದಿಕ್ಕಿಗೆ ಸುಮಾರು ಒಂದು ಕಿ.ಮೀ. ದೂರದಲ್ಲಿ ನರಸಪ್ಪನ ಬೆಟ್ಟವಿದೆ. ಈ ಬೆಟ್ಟದ ನಡುವೆ ಇರುವ ದೇವಾಲಯವೇ ಶ್ರೀಯೋಗನರಸಿಂಹ ದೇವಾಲಯ. ಈ ಬೆಟ್ಟದಲ್ಲಿ ಗುಹೆ, ಕೋಟೆಯ ಅವಶೇಷಗಳು, ಶಾಸನಗಳು, ಕಂಡುಬರುತ್ತವೆ. ದೇವಾಲಯ ಕಲ್ಲಿನಿಂದ ಆವೃತವಾಗಿರುವ ಗುಹೆಯಲ್ಲಿದೆ. ಅದಕ್ಕೆ ರಕ್ಷಣಾ ಗೋಡೆಯನ್ನು ಕಟ್ಟಿ, ಒಂದು ದೇವಾಲಯವಾಗಿ ನಿರ್ಮಿಸಿದ್ದಾರೆ.[೩] ಗರ್ಭಗೃಹ ಗುಹೆಯಲ್ಲಿದೆ. ಗರ್ಭಗೃಹಕ್ಕೆ ಹೋಗುವ ಮುಂದೆ ಬಲಕ್ಕೆ ಆಂಜನೇಯ ಮೂರ್ತಿಯಿದೆ. ನಂತರ ಜಗುಲಿಯ ಮೇಲೆ ಮತ್ತೊಂದು ಯೋಗನರಸಿಂಹ ಮೂರ್ತಿಯಿದೆ. ದೇವಾಲಯದ ಮುಂದೆ ದೀಪಸ್ತಂಭವಿದೆ. ಈ ದೇವಾಲಯಕ್ಕೆ ಯಾವುದೇ ಶಿಖರವಿಲ್ಲ. ದೇವಾಲಯದ ದ್ವಾರಬಾಗಿಲಿನಲ್ಲಿ ಎರಡು ಕಡೆ ಕಂಬಗಳ ಚಿತ್ರವಿದೆ. ಬಳ್ಳಿಯಾಕಾರದ ಹೂಗಳಿವೆ. ದೇವಾಲಯದ ಒಳಗೆ ಟೈಲ್ಸ್‌ನ್ನು ಹಾಕಿದ್ದಾರೆ. ಬೆಟ್ಟದ ಮೇಲೆ ಕೋಟೆಯ ಹುಡೇವು ಅಥವಾ ಬತೇರಿಗಳಿವೆ.

---

* ೧ನೇ ವಾರ್ಡ್. ಅರಸೀಕೆರೆ ಅಂಚೆ, ಹರಪನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ-೫೮೩೧೨೫, ಮೊ. ೯೬೮೬೭೦೬೨೨೨

** ಅರಸೀಕೆರೆ ಅಂಚೆ, ಹರಪನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ-೫೮೩೧೨೫, ಮೊ. ೯೯೦೨೮೩೧೮೯೩



ದೇವಾಲಯದ ದ್ವಾರಬಾಗಿಲು, ಅಡವಿಮಲ್ಲಾಪುರ



ಮೈಲಾರಲಿಂಗೇಶ್ವರ ದೇವಾಲಯ, ಅಡವಿ ಮಲ್ಲಾಪುರ



ದೇವಾಲಯದ ಗರ್ಭಗೃಹದಲ್ಲಿರುವ ಮೂರ್ತಿ



ಗಂಗಮಾಳೆವ್ವ ದೇವಾಲಯದ ಮುಂದಿರುವ ತೃಟಿತ ಶಿಲ್ಪ



ದೇವಾಲಯದ ಅವರಣದಲ್ಲಿರುವ ನಾಗರ ಶಿಲ್ಪಗಳು



ಭೈರವಿ ಶಿಲ್ಪ



ದೇವಾಲಯದ ಮುಂಭಾಗದಲ್ಲಿರುವ ದೀಪಸ್ಥಂಭದ
ಕೆಳಭಾಗದಲ್ಲಿ ಕಲ್ಲುಗುಂಡುಗಳು

ಮುಖ್ಯವಾಗಿ ಈ ಗ್ರಾಮದ ಮೈಲಾರಲಿಂಗನ ಪರಂಪರೆ ಕುರಿತು ಸ್ಪಷ್ಟವಾಗಿ ತಿಳಿಯದು ಆದರೆ ಹಿರೇ ಮೈಲಾರನ ಕುರಿತಂತೆಯೇ ಇಲ್ಲಿಯೂ ಸಹ ಅದೇ ಪರಂಪರೆ ಮುಂದುವರೆಯುತ್ತದೆ. ಬನದ ಹುಣ್ಣಿಮೆಗೆ ಹಿರೇ ಮೈಲಾರದಲ್ಲಿ ನಡೆಯುವ ಆಚರಣೆಗಳೆಲ್ಲವೂ ಅದಕ್ಕೂ ಪೂರ್ವದಲ್ಲಿ ಆಗುವ ಭರತ ಹುಣ್ಣಿಮೆಗೆ ಎಲ್ಲಾ ಆಚರಣೆಗಳು ಇಲ್ಲಿ ನಡೆಯುತ್ತವೆ. ಈ ಜಾತ್ರೆಯು ಫೆಬ್ರುವರಿ–ಮಾರ್ಚ್ ತಿಂಗಳಿನಲ್ಲಿ ನಡೆಯುತ್ತದೆ ಇದು ಭರತ ಹುಣ್ಣಿಮೆಯ ಮಾಘ ಮಾಸವಾಗಿದ್ದು ಮುಖ್ಯವಾಗಿ ಕಾರಣಿಕ, ಕಾಲುಶಸ್ತ್ರ, ಕೈಶಾಸ್ತ್ರ, ಕಾಲಿಗೆ ಗೂಟ ಹೊಡೆದುಕೊಳ್ಳುವುದು, ಸರಪಳಿ ಹರಿಯುವ ಆಚರಣೆಗಳು ನಡೆಯುತ್ತವೆ. ಭರತ ಹುಣ್ಣಿಮೆಯಾಗಿ ಐದನೇ ದಿನದಲ್ಲಿ ಉತ್ಸವವು ನಡೆಯುತ್ತದೆ. ಮೇಲಿನ ಆಚರಣೆಗಳು ಉತ್ಸವ ಮುಗಿದ ನಂತರ ನಡೆಯುವ ಆಚರಣೆಗಳು, ಈ ಆಚರಣೆಗಳು ನಡೆದ ಮಾರನೆ ದಿನ ಮಣಿ ಆಡುವುದು ನಡೆಯುತ್ತದೆ ಈ ಎಲ್ಲಾ ಆಚರಣೆಗಳು ಗ್ರಾಮದ ಮೈಲಾರಲಿಂಗೇಶ್ವರ ದೇವಾಲಯದಲ್ಲಿ ನಡೆಯುತ್ತವೆ. ಈ ದೇವಾಲಯಕ್ಕೆ ಸಂಬಂಧಿಸಿದಂತೆ ಗೊರವರು ಗ್ರಾಮದ ಸುತ್ತಮುತ್ತಲು ಇರುವಂತಹ ಗ್ರಾಮಗಳಾದ ಅರಸೀಕೆರೆ, ಕನಕನಬಸಾಪುರ, ಯರಬಳ್ಳಿ ಮತ್ತು ನಿಚ್ಚವ್ವನಹಳ್ಳಿ ಗ್ರಾಮಗಳಲ್ಲಿ ಕಂಡುಬರುತ್ತವೆ.

ಒಟ್ಟಾರೆಯಾಗಿ ಹೇಳುವುದಾದರೆ ಅಡವಿಮಲ್ಲಾಪುರ ಗ್ರಾಮವು ಒಂದು ಮೈಲಾರ ಪರಂಪರೆಯ ಧಾರ್ಮಿಕ ಕ್ಷೇತ್ರವಾಗಿದ್ದು ಮೈಲಾರನ ಪರಿವಾರ ದೇವತೆಗಳು, ಮೈಲಾರನ ಪಾದುಕೆಗಳು, ತುಪ್ಪದ ಮಾಳವ್ವ ಹಾಗೂ ಇನ್ನಿತರೆ ಭೌತಿಕ ಆಕರಗಳ ಹಿನ್ನಲೆಯಲ್ಲಿ ಮೈಲಾರನ ಕುರಿತು ಸ್ಪಷ್ಟವಾದ ಚಿತ್ರಣಕ್ಕಾಗಿ ಅನೇಕ ಅಧ್ಯಯನದ ಅವಶ್ಯಕತೆ ಇದೆ. ಈಗಾಗಲೆ ಕರ್ನಾಟಕದಾದ್ಯಂತ ಅನೇಕ ಮೈಲಾರ ಕ್ಷೇತ್ರಗಳಿವೆ ಆ ಕ್ಷೇತ್ರಗಳ ಸಾಲಿನಲ್ಲಿ ಈ ಮಲ್ಲಾಪುರದ ಮೈಲಾರಲಿಂಗ ನಿಲ್ಲಬಹುದೆಂಬ ಪ್ರಶಂಸೆ ಇಲ್ಲಿನ ಪಾರಂಪರಿಕ ಸಂಪ್ರಾದಾಯ ಆಚರಣೆಗಳಿಂದ ತಿಳಿದುಬರುತ್ತದೆ. ಜೊತೆಗೆ ಮೈಲಾರ, ಯೋಗನರಸಿಂಹ ದೈವಗಳ ಹಿನ್ನೆಲೆಯಲ್ಲಿ ಈ ಪರಿಸರ ಶೈವ–ವೈಷ್ಣವ ಧರ್ಮಗಳ ಸಮ್ಮಿಲನ ಸ್ಥಳವಾಗಿದೆ ಪಕ್ಕದ ಅರಸೀಕೆರೆಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಹರಿಹರ ದೇವಾಲಯವಿದ್ದು ಈ ಪರಿಸರವನ್ನು ಹರಿಹರ ಕ್ಷೇತ್ರವೆಂದು[೪] ಬಾಡದ ಶಾಸನ ತಿಳಿಸುತ್ತದೆ ಹಾಗಾಗಿ ಹರಿಹರ ನಾಡೆಂದು ತಿಳಿಯಬಹುದು.

(ಈ ಲೇಖನ ಸಿದ್ಧಪಡಿಸಲು ಸಹಾಯಕರಾದ ಶ್ರೀ ಮಡಿವಾಳರ ಮಂಜಪ್ಪ, ಕಂಡೆಪ್ಪರ ಅಜ್ಜಪ್ಪ, ಅರಸೀಕೆರೆ ಗ್ರಾಮಸ್ಥರು ಹಾಗೂ ಅಡವಿ ಮಲ್ಲಾಪುರ ಗ್ರಾಮಸ್ಥರಿಗೆ ಕೃತಜ್ಞತೆಗಳು.]



## ಅಡಿಟಿಪ್ಪಣಿಗಳು

೧. ಮಡಿವಾಳರ ಮಂಜಪ್ಪ ಅವರಿಂದ ತಿಳಿದು ಬಂದ ಮಾಹಿತಿ.

೨. ಮೂಲತಃ ಇವು ಹರಪನಹಳ್ಳಿ ಪಾಳೆಗಾರರ ಕಾಲದ ಮದ್ದು ಗುಂಡುಗಳಗಿವೆ.

೩. ಹೆಚ್.ರಮೇಶ, ೨೦೧೩, ಅರಸೀಕೆರೆ ಚರಿತ್ರೆ ಮತ್ತು ಸಂಸ್ಕೃತಿ, ಪು. ೧೧೪.

೪. ದೇವರಕೊಂಡಾರೆಡ್ಡಿ, ಕವಿವಿ ಶಾ.ಸಂ. ೧, ಬಳ್ಳಾರಿ ಜಿಲ್ಲೆ, ಬಾಡ ಗ್ರಾಮ, ಹರಪನಹಳ್ಳಿ ತಾಲೂಕು, ಪು. ೬೦.

# ೧೦೦

# ಸಂಗಮೇಶ್ವರ ಗ್ರಾಮದ ಪ್ರಾಚ್ಯಾವಶೇಷಗಳು

**ಕೆ.ಸಿ. ಮಲ್ಲಿಗವಾಡ***

**ಧಾ**ರವಾಡ ಜಿಲ್ಲೆ ಕಲಘಟಗಿ ತಾಲೂಕಿನ ಕೊನೆಯ ಹಳ್ಳಿ ಸಂಗಮೇಶ್ವರ ಗ್ರಾಮವು ಪ್ರಸಿದ್ಧ ಕಲ್ಯಾಣಿ ಕಾಲುಕ್ಯರ ಕಾಲದ ಆಡಳಿತ ಕೇಂದ್ರ ಅಲ್ಲಲ್ಲಿ ಚದುರಿದಂತೆ ಹಲವಾರು ಅವಶೇಷಗಳು ತೃಟಿತಗೊಂಡು ಅನಾಥವಾಗಿ ಬಿದ್ದಿವೆ. ಇಲ್ಲಿ ಗ್ರಾಮದೇವಿ ದ್ಯಾಮಮ್ಮ, ದುರ್ಗಮ್ಮಾ,ಕರೆಮ್ಮಾ, ಶ್ರೀ ಹನುಮಂತ ದೇವರುಗಳ ದೇಗುಲಗಳಿವೆ. ಇಲ್ಲಿಂದ ಸುಮಾರು ೩ ಕಿ,ಮಿ ದೂರದಲ್ಲಿ ನೆಲೆಗೊಂಡ ಸ್ಥಳ ಕೂಡಲ ಸಂಗಮವಾಗಿರುವುದು. ಅಂದರೆ ತಟ್ಟಿ ಹಳ್ಳ, ಮಂಗ್ಯಾನ ಹಳ್ಳ, ಇವುಗಳ ಸಂಗಮ ಕ್ಷೇತ್ರದಲ್ಲಿ ನೆಲೆಗೊಂಡ ಈಶ್ವರ ಬಸವಣ್ಣ ಸಂಗಮನಾಥ ವಿಗ್ರಹಗಳಿವೆ ಕಾರಣ ಈ ಗ್ರಾಮಕ್ಕೆ ಸಂಗಮನಾಥ ದೇವರಿಂದ ಸಂಗಮೇಶ್ವರ ಎಂದು ಗ್ರಾಮನಾಮ ಬಂದಿತು.

ಎರಡು ನದಿಗಳ ಸಂಗಮ ಸ್ಥಳವೇ ಮುಂದೆ ಶ್ರೀ ಸಂಗಮನಾಥ ದೇವರ ಹೆಸರನ್ನು ಬಳಸಿ ಗ್ರಾಮಕ್ಕೆ ಸಂಗಮೇಶ್ವರ ಎಂದು ನಾಮಕರಣ ಮಾಡಿದ ಉದಾಹರಣೆಗಳಿವೆ. ಇಲ್ಲಿ ಸಂಗಮವಾಗಿರುವ ತಟ್ಟಿ ಹಳ್ಳ ತುಮರಿಕೊಪ್ಪ ಉತ್ತರ ಭಾಗದಿಂದ ಹರಿದು ಬಂದಿದೆ ಮತ್ತು ಮಂಗ್ಯಾನ ಹಳ್ಳ ಅಂದರೆ ಈ ನದಿ ಹಳ್ಳದ ದಂಡೆಯ ಮೇಲೆ ಅಪಾರ ಸಂಖ್ಯೆಯ ವಾನರ ಸೇನೆ (ಮಂಗನ ಹಿಂಡುಗಳು) ಪ್ರಾಚೀನ ಕಾಲದಿಂದಲು ಇಲ್ಲಿ ವಾಸವಾಗಿದ್ದ ಕಾರಣ ಇಂದಿಗೂ ಸಹ ಮಂಗ್ಯಾನ ಹಳ್ಳ ಎಂದು ಕರೆಯಲ್ಪಟ್ಟಿದೆ ಇಂದು ಪ್ರಸಿದ್ಧವಾದ ಸಂಗಮೇಶ್ವರ ಗ್ರಾಮಕ್ಕೆ ಅನತಿ ದೂರದಲ್ಲಿ ಇರುವ ಸಂಗಮದೇವರ ಪ್ರಭಾವದಿಂದ ಈ ಹೆಸರು ಬರಲು ಸಾಕಷ್ಟು ಪುರಾವೇಗಳು ಲಭ್ಯ ಹೀಗೆ ಹತ್ತು ಹಲವಾರು ಐತಿಹ್ಯ ಹೊಂದಿದ ಈ ಗ್ರಾಮವು ಮಲೆನಾಡಿನಲ್ಲಿ ಇದ್ದ ಕಾರಣ ಇದನ್ನು ಭತ್ತದ ಕಣಜವೆಂದೆ ಕರೆಯಲ್ಪಟ್ಟಿದೆ. ದೇವಾಲಯದ ಸುತ್ತ-ಮುತ್ತಲು ಭತ್ತ, ಕಬ್ಬು, ಗೋವಿನಜೋಳ, ಹತ್ತಿ, ಜೋಳಗಳು ಬೆಳೆಯುತ್ತಿವೆ. ಊರ ಸುತ್ತಲೂ ಅರಣ್ಯದಿಂದ ಆವೃತ್ತವಾದ ಗುಡ್ಡಗಳ ಸಾಲುಗಳಿವೆ.

ಈ ಗ್ರಾಮವು ಕ್ರಿ.ಶ ೧೦-೧೨ನೇ ಶತಮಾನದಲ್ಲಿಯೇ ಪ್ರಚಲಿತವಾದ ಗ್ರಾಮವಾಗಿದೆ ಇಲ್ಲಿರುವ ಕಲಾಸ್ಮಾರಕಗಳು, ದೇವಾಲಯಗಳು, ಅಂದಿನ ಕಾಲದ ವೈಭವವನ್ನು ಸಾರಿ ಸಾರಿ ಹೇಳುತ್ತ ನಿಂತಿವೆ ಇಲ್ಲಿರುವ ಬಸವಣ್ಣ ದೇವಸ್ಥಾನ ಗ್ರಾಮದ ಆರಾಧ್ಯ ದೇವನಾಗಿರುತ್ತಾನೆ. ಇದೇ ರೀತಿಯಾಗಿದ್ದ ತಂಬೂರು ಬಸವಣ್ಣ ದೇವಸ್ಥಾನದಂತೆ ಇದು ಸಹ ಪ್ರಸಿದ್ಧವಾದ ದೇವಸ್ಥಾನವಾಗಿದೆ. ಆ ದೇವಾಲಯದ ಸಮಕಾಲೀನ ದೇಗುಲವು ಹೌದು ಎರಡು ದೇಗುಲಗಳ ಶೈಲಿಗಳು ಒಂದೇ ತೆರನಾಗಿದ್ದು ಅಭೂತ ಪೂರ್ವವಾದ ಕಲಾಕೃತಿಗಳನ್ನು ಹೊಂದಿದೆ ಗ್ರಾಮದಿಂದ ದಕ್ಷಿಣ ಭಾಗಕ್ಕೆ ಬರುವ ಗುಡಿಯೇ ಸಂಗಮೇಶ್ವರ.

ಸಂಗಮೇಶ್ವರದ ಶ್ರೀ ಬಸವಣ್ಣ ದೇವಸ್ಥಾನವು ಪೂರ್ವಾಭಿಮುಖವಾಗಿದೆ. ಪ್ರವೇಶ ದ್ವಾರಗಳನ್ನು ಹೊಂದಿದ್ದಾಗಿತ್ತು, ಪ್ರವೇಶದ್ವಾರ, ಸಭಾಂಗಣ, ನಾಟ್ಯಗೃಹ, ಅಂತರಾಳ, ಗರ್ಭಗೃಹ ಮೊದಲಾದವುಗಳನ್ನು ಹೊಂದಿದೆ ಆದರೆ ಸುಮಾರು ೫ ವರ್ಷಗಳ ಹಿಂದೆ ಭಕ್ತರು ಜೀರ್ಣೋದ್ಧಾರಗೊಳಿಸಿ ನೂತನ ದೇವಾಲಯ ನಿರ್ಮಿಸಿ ಭಕ್ತರ ದರ್ಶನಕ್ಕೆ ಸಮರ್ಪಿಸಿದ್ದಾರೆ. ಮೂಲ ದೇಗುಲದ ಪುರಾತನ ವಿಗ್ರಹ ಅವಶೇಷಗಳನ್ನು ದೇವಾಲಯದ ಸುತ್ತಲೂ ಪ್ರತಿಷ್ಠಾಪಿಸಿ ದೇಗುಲಕ್ಕೆ ವಿಶೇಷ ಮೆರುಗು ನೀಡಿದ್ದಾರೆ. ಪ್ರವೇಶ ದ್ವಾರಗಳಲ್ಲಿ ಇತ್ತೀಚೆಗೆ ನಿರ್ಮಿಸಿದ ಭಾರೀ ಪ್ರಮಾಣದ ಬೃಹತ್ ಕಟ್ಟಿಗೆಯ ಹೆಬ್ಬಾಗಿಲನ್ನು ಅಳವಡಿಸಿದ್ದು ಇದರಲ್ಲಿ ಸರಳಿಗೆತ್ತನೆ, ಲತೆ, ಪುಷ್ಪಗಳನ್ನು ಸುಂದರವಾಗಿ ಅಲಂಕರಿಸಿ ದೇವಾಲಯವನ್ನು ಶ್ರೀಮಂತಗೊಳಿಸಿದ್ದಾರೆ. ಒಳ ಪ್ರವೇಶಿಸಿದರೆ ಸಭಾಮಂಟಪ ಹಾಗೂ ರಂಗಮಂಟಪ ಸುತ್ತಲೂ ಪ್ರದಕ್ಷಿಣಾಪಥ ಹೊಂದಿದೆ.

ಸಭಾಂಗಣದಲ್ಲಿ ಬೃಹದಾಕಾರವಾದ ನಂದಿ ವಿಗ್ರಹವಿದ್ದು ಈ ದೇಗುಲದ ಮೂಲ ದೇವರಾಗಿದ್ದಾನೆ. ಶ್ರೀ ನಂದಿಯು ಸುಮಾರು ಆರು(೬) ಅಡಿ ಉದ್ದ, ನಾಲ್ಕು ಅಡಿ ಅಗಲ ನಾಲ್ಕು ಅಡಿ ಎತ್ತರವಾಗಿದ್ದಾನೆ. ಹಾಯಲು ಬಂದ ಹೋರಿಯಂತೆ

* ಸಂಶೋಧಕರು, ನಿವೃತ್ತ ಪ್ರಾಚಾರ್ಯರು, ರೊಟ್ಟಿಗವಾಡ ಕಾಲೇಜು, ಮೊ. ೯೯೭೨೯೫೫೯೯೬

ಮುಸುಗುಡುವ ಭಂಗಿಯಲ್ಲಿ ವಾರೆಗೊರಳು ಮಾಡಿ ಭುಸುಗುಡುತ್ತ ಭಕ್ತರಿಗೆ ಆಶೀರ್ವದಿಸುವಂತೆ ಮನಮೋಹಕವಾಗಿದೆ. ಎಡಗಾಲು ಮುಂದೆ ಮಾಡಿ ಮಲಗಿದ ಭಂಗಿಯಲ್ಲಿದ್ದು, ಕಾಲಲ್ಲಿ ಸರಪಳಿ, ಸುಂದರವಾದ ಮುಖ, ಮುಖವಾಡ, ಹರವಾದ ಹಣೆ, ಹಣೆಕಟ್ಟು ಕೊರಳಲ್ಲಿ ಗೆಜ್ಜೆಸರ, ಹಂಗಡ, ಗಂಟೆ, ಗಮರಿ, ಕಾಲ್ಗೆಜ್ಜೆ ಹಾಗೂ ಕೋಡಿನ ಮಧ್ಯದಲ್ಲಿ ಸುಂದರವಾದ ಸಣ್ಣ ಗೆಜ್ಜೆ ಸರಗಳಿಂದ ಅಲಂಕೃತವಾಗಿದೆ. ಶ್ರೀ ನಂದಿಯ ಬೆನ್ನಿನ ಮೇಲೆ ಹಗ್ಗದ ಹುರಿಯ ಹಂಗಡ ಸರಪಳಿಗಳಿಂದ ಸುಂದರವಾಗಿ ಜೂಲ ಹಾಕಿದಂತೆ ನಂದಿಗೆ ಅಲಂಕರಿಸಿದ್ದಾರೆ. ಕೊರಳಿನಿಂದ ಇಣಿಯ ಮುಖಾಂತರ ಬೆನ್ನಿಗೆ ಗೆಜ್ಜೆ ಸರ, ಹಂಗಡಗಳನ್ನು ಜೋಡಿಸಿ ಬೆನ್ನಿನ ಮೇಲೆ ಇಣಿಯ (ಮೇಲೆ) ಹಿಂಭಾಗದಲ್ಲಿ ಸುಂದರವಾದ ಹಗ್ಗದಿಂದ ಸರಳ ಗಂಟನ್ನು ಹಾಕಿ ಪ್ರೇಕ್ಷಕರಿಗೆ ಅಚ್ಚರಿಯ ಸಂಗತಿಯನ್ನು ಒದಗಿಸಿದೆ. ಶ್ರೀ ಬಸವಣ್ಣನಿಗೆ ಅಭಿಷೇಕ ಮಾಡಿದ ನೀರು ಜಲಹರಿಯ ಮೂಲಕ ಹೊರ ಹೋಗಲು ಸುತ್ತಲೂ ಅವಕಾಶ ಕಲ್ಪಿಸಿ ಕೊಟ್ಟಿದ್ದಾರೆ. ಹಿಂಬಾಗದಲ್ಲಿ ಬಾಲವು ಕಾಲಿನ ಕೆಳಗಡೆಯಿಂದ ಹಾಯ್ದು ಹೊಟ್ಟೆ ಹತ್ತಿರ ಬಂದ ಬಾಲದ ಜಡಿ, ಕೇಶಗಳು ಅತೀ ಸುಂದರವಾಗಿ ಕೆತ್ತಲ್ಪಟ್ಟಿದೆ.

ಸಭಾಮಂಟಪದ ದಾಟಿ ಮುಂದೆ ಹೋದರೆ ವಿಶಾಲವಾದ ಗರ್ಭಗೃಹವಿದೆ. ಇದು ಶಿಥಿಲ ಗೊಂಡರೂ ಸಹ, ಹಳೆಯ ಬಾಗಿಲ್ಲನೇ ಅಳವಡಿಸಿ ಕಳೇ ತಂದಿದ್ದಾರೆ. ಈಗಿದ್ದ ಗರ್ಭಗೃಹವು ಪ್ರಾಚೀನಕಾಲದ್ದಾಗಿದೆ. ಕ್ರಿ.ಶ. ೧೦–೧೧ನೇ ಶತಮಾನದ ಕಾಲದ್ದಾಗಿದ್ದು, ಇದೊಂದು ಸುಂದರ ಕಲಾಕೃತಿಗಳನ್ನೊಳಗೊಂಡಿದೆ. ದೇವಾಲಯದ ಅವಶೇಷಗಳನ್ನು ಸುತ್ತಲಿನ ಗೋಡೆ ಹೊರಗೆ ರಾಶಿ ರಾಶಿಯಾಗಿ ಅಲ್ಲಲ್ಲಿ ಚದುರಿದಂತೆ ಚೆಲ್ಲಾಪಿಲ್ಲಿಯಾಗಿ ಒಗೆಯಲಾಗಿದೆ. ಆದರೆ ಗರ್ಭಗೃಹ ಒಂದೇ ಈ ದೇಗುಲದ ಮೂಲ ಅವಶೇಷವಾಗಿದೆ. ಬಾಗಿಲು ವಾಡೆ ಸುರಳಿಗೆತ್ತನೆಯಿಂದ ಕೂಡಿದೆ. ಗುಂಡುಗಳು ಬಳ್ಳಿ ಲತೆಗಳಿಂದ ಅಲಂಕೃತವಾಗಿದೆ. ಬಾಗಿಲು ವಾಡೆಯ ಹಣೆ ಪಟ್ಟಿಯ ಮಧ್ಯದಲ್ಲಿ ಗಜಲಕ್ಷ್ಮಿ ವಿಗ್ರಹ ಬಿಡಿಸಲಾಗಿದೆ. ಎಡ ಬಲ ಪಟ್ಟಿಕೆಗಳಲ್ಲಿ ದ್ವಾರ ಪಾಲಕರ ವಿಗ್ರಹಗಳನ್ನು ಬಿಡಿಸಲಾಗಿದ್ದು ಚಿತ್ತಾಕರ್ಷವಾಗಿದೆ. ಒಳಗಡೆ ಪ್ರವೇಶಿಸಿದರೆ, ಜೀರ್ಣೋದ್ದಾರಗೊಂಡಿರುವ ಶ್ರೀ ಈಶ್ವರ ಲಿಂಗವಿದೆ. ನೂತನವಾಗಿ ನಿರ್ಮಿಸಿರಲಾಗಿದೆ. ದೇಗುಲದ ವಿಗ್ರಹದ ಹಿಂದಿನ ಗೋಡೆಯ ಮಧ್ಯದಲ್ಲಿ ಶಿವನ ವಿಗ್ರಹವು ಪ್ರತಿಸ್ಥಾಪಸಿಲ್ಪಟ್ಟಿದೆ. ಎಡ ಬಲಗಳಲ್ಲಿ ಗಾಳಿ, ಬೆಳಕಿಗೆ ಜಾಲಾಂದರಗಳನ್ನು ಅಳವಡಿಸಲಾಗಿದೆ. ಗರ್ಭಗೃಹ ದೇಗುಲದ ಎಡಬಲಗಳಲ್ಲಿ ಬೃಹದಾಕಾರವಾದ ಶಿಲೆ (ಬಂಡೆ) ಯ ಕಂಬಗಳಿದ್ದು ಇವು ಪೂರ್ತಿಯಾಗಿ ಅಲಂಕರಿಸಲ್ಪಟ್ಟಿವೆ. ಇಲ್ಲಿ ಶಿವ ಪಾರ್ವತಿ ಪ್ರಣಯ, ಗಿರಿಜಾ ಕಲ್ಯಾಣ ಮಹೋತ್ಸವ ಕೆಳಗಡೆ ನಿಂತ ಭಂಗಿಯಲ್ಲಿರುವ ಶಿವ ಚತುರ್ಭುಜಗಳನ್ನು ಹೊಂದಿ ಡಮರ, ತ್ರಿಶೂಲ, ಅಭಯ ಹಸ್ತ ಪಾದಗಳನ್ನು ಹೊಂದಿದ್ದಾನೆ. ವಿಗ್ರಹ ತೃಟಿತವಾಗಿದೆ. ಎಡಬಲಗಳಲ್ಲಿ ಕಂಡು ಬರುವ ಸ್ಥಂಬಗಳು ಒಂದೇ ತೆರನಾಗಿ ಅಲಂಕೃತಗೊಂಡಿದೆ.

ಎಡಗಡೆ ಕಂಬದಲ್ಲಿ ವಾಮನ ವಿಗ್ರಹವಿದ್ದು ಮೇಲ್ಭಾಗದಲ್ಲಿ ಶಿವಲಿಂಗವಿದ್ದು ಬಲಭಾಗದಲ್ಲಿ ಹನುಮಂತದೇವರು ಶ್ರೀ ಲಿಂಗವನ್ನು ಹಿಡಿದಿದ್ದಾನೆ.

ಇನ್ನೊಂದು ಕಂಬದಲ್ಲಿ ಶ್ರೀ ವಾಮ ಸೇನೆ ಇದ್ದು ಶ್ರೀ ಆಂಜನೇಯ ಸ್ವಾಮಿ, ಶ್ರೀ ವೀರಭದ್ರ ಸೇವಕರು ಪಾಲ್ಗೊಂಡಿದ್ದಾರೆ. ಕಂಬದಲ್ಲಿ ೩ ಪಟಿಕೆಗಳಿದ್ದು ಶ್ರೀ ವೀರಭದ್ರ ಶ್ರೀ ಗಜಲಕ್ಷ್ಮೀ ಶಿವಪಾರ್ವತಿ ನಂದಿ ವಿಗ್ರಹಗಳಿವೆ.

ಗರ್ಭಗೃಹ ಕಲ್ಯಾಣಿ ಚಾಲುಕ್ಯ ಕಾಲದ ಶಿಲ್ಪ ಕಲಾ ಮಾದರಿಯವಾಗಿದ್ದು ಅತ್ಯಮೂಲ್ಯವಾದ ಕಲಾ ಪ್ರತಿಮೆಯನ್ನು ಹೊಂದಿದೆ. ಚೌಕಾಕಾರವಾದ ಕಂಬಗಳಲ್ಲಿ ಮೇಲ್ಭಾಗದಲ್ಲಿ ಗಗ್ಗರಿ ಇದೆ. ಇದರ ಕಂಬದ ಮೇಲೆ ಬೋದುಗೆ ತೊಲೆಗಳಿದ್ದು ಇವುಗಳು ಅಲಂಕೃತಗೊಂಡಿವೆ. ಚತುರ್ ಕಂಬಗಳು ಸಹ ಒಂದೇ ತೆರನಾಗಿ ಅಲಂಕೃತಗೊಂಡಿವೆ.

ಇಲ್ಲಿ ಪ್ರತಿಷ್ಠಾಪಿಸಿರುವ ಮಹಿಷಾಸುರ ಮರ್ಧಿನಿ ವಿಗ್ರಹ ಸುಮಾರು ೨ ೪' ಎತ್ತರ ಒಂದು ಕಡೆ ಅಗಲವಿರುವದು. ಶ್ರೀ ದೇವಿ ರಾಕ್ಷಸರನ್ನು ಸಂಹಾರ ಮಾಡುತ್ತಿದ್ದ ಭಂಗಿ ಮಹಿಷಾಸುರ ಹೋರಾಡುವಾಗ ಅವರ ವಾಹನ ಕೋಣ ಹಾಗೂ ರಾಕ್ಷಸನನ್ನು ತ್ರಿಶೂಲದಿಂದ ತಿವಿದು ಕೊಲ್ಲುತ್ತಿರುವ ಚಿತ್ರ ಕಂಡುಬರುತ್ತದೆ. ಅಷ್ಟಭುಜಗಳನ್ನು ಹೊಂದಿದ್ದಾಳೆ. ಖಡ್ಗ, ಖಡಾರಿ, ಡಾಲು, ಕತ್ತಿ ಮೊದಲಾದ ಆಯುಧಗಳುಳನ್ನು ಧರಿಸಿದ್ದಾಳೆ. ಕಂದಹಾರ, ಕಿರೀಟ, ಪ್ರಭಾವಳಿಗಳಿಂದ ಬಹು ಸುಂದರವಾಗಿ ಅಲಂಕೃತಗೊಂಡಿದೆ.

ಸರಸ್ವತಿ ವಿಗ್ರಹ ನೂತನವಾಗಿ ನಿರ್ಮಿಸಲಾಗಿದೆ. ಚತುರ್ಭುಜ, ಪಾಶ, ಅಂಕುಶ, ಪ್ರಭಾವಳಿ ನವಿಲುಗಳನ್ನು ಹೊಂದಿದೆ. ಸಪ್ತಮಾತೃಕೆಯರ ವಿಗ್ರಹಗಳು ಒಂದೇ ಕಲ್ಲಿನಲ್ಲಿ ನಿರ್ಮಾಣವಾಗಿವೆ.

ನಾಟ್ಯ ಭಂಗಿಯ ಶಿವ ನಟರಾಜ : ಶಿವನು ನಾಟ್ಯ ಮಾಡುವ ಭಂಗಿಯಲ್ಲಿದ್ದು ಚತುರ್ಭುಜಗಳನ್ನು ಹೊಂದಿದ್ದಾನೆ. ಅಭಯಹಸ್ತ, ತ್ರಿಶೂಲ, ಡಮರುಗ ನಾಟ್ಯಮಾಡುವ ಕೈ ಇವೆ. ಕೆಳಗಡೆ ಎಡ ಬಲಗಳಲ್ಲಿ ಬಲಕ್ಕೆ ಗಣಪತಿ ಎಡಗಡೆ

ಪಾರ್ವತಿ ಮೇಲ್ಭಾಗದಲ್ಲಿ ಕಾರ್ತಿಕೆಯ ವಿಗ್ರಹಗಳಿವೆ. ಕಾರ್ತಿಕೇಯ ಶಿಲ್ಪವಿದೆ. ತ್ರಿಮುಖ ಹೊಂದಿದ್ದು ಅಲಂಕೃತ ನವಿಲಿನ ಮೇಲೆ ಆಸೀನನಾಗಿದ್ದಾನೆ. ೨' ಎತ್ತರವಾದ ೨' ಅಗಲ ೬" ಶಿಲಾದಪ್ಪವಾದ ವಿಗ್ರಹವು ಚತುರ್ಭುಜ ಹೊಂದಿದ್ದು ಪಾಶ ಅಭಯ ಹಸ್ತ, ನವಿಲಿನ ಹಗ್ಗ ಹಿಡಿದಿದ್ದು ತ್ರಿವಿಗಳಿವೆ. ಆರಾಮಾಸನವನ್ನು ನವಿಲಿನ ಮೇಲೆ ಇಟ್ಟುಕೊಂಡು ಕೊರಳಲ್ಲಿ ಕಂಠಾಭರಣ, ಜನಿವಾರ ಹೊಂದಿದಾನೆ. ಸುತ್ತಲೂ ನವಿಲಿನ ಗರಿಗಳು ಸುಂದರವಾಗಿ ಅರಳಿದಂತೆ ಶಿಲ್ಪಿ ಬಿಡಿಸಿದ್ದಾನೆ.

**ಆಶೀನ ಬ್ರಹ್ಮ:** ಸುಮಾರು ೩' ಎತ್ತರ ೨' ಅಗಲ ೪" ದಪ್ಪವಾದ ಶಿಲೆಯಲ್ಲಿ ಕುಳಿತ ಭಂಗಿಯಲ್ಲಿರುವ ಬ್ರಹ್ಮನನ್ನು ಬಿಡಿಸಲಾಗಿದೆ. ಕಪ್ಪು ಮಿಶ್ರಿತ ಬಿರುಸು ಕಲ್ಲಿನಲ್ಲಿ ನಯನ ಮನೋಹರವಾಗಿ ಉಬ್ಬು ಚಿತ್ರಣವಾಗಿದ್ದು ವಿಶಾಲವಾದ ಕಮಲದಾಕಾರವಾದ ಪೀಠದ ಮೇಲೆ ಕುಳಿತಿದ್ದು ಪೀಠಪಾದದಲ್ಲಿ ೩ ಹೂಗಳ ಮೇಲೆ ನಿಂತಂತೆ ಕಾಣುತ್ತದೆ. ಸುತ್ತಲೂ ಅಲಂಕೃತಗೊಂಡ ಪ್ರಭಾವಳಿ ಇದ್ದು ವಿಗ್ರಹವು ಚತುರ್ಭುಜಗಳನ್ನು ಹೊಂದಿದೆ. ಅಂಕುಶ ಪಾದ, ಮಣಿಸರ, ಲೆಕ್ಕಣಿಕೆಗಳನ್ನು ಹೊಂದಿದ್ದಾನೆ. ಕಾಲಲ್ಲಿ ಸರಪಳಿ ಕೊರಳಲ್ಲಿ ಕಂಠಹಾರ, ಮಣಿಸರ, ಕಿವಿವೋಲೆ ಅಲಂಕೃತ ಮಣಿಮುಕುಟಗಳಿವೆ. ಬಲಗಾಲು ಮುಂದೆ ಮಾಡಿ ಎಡಗಾಲು ಮಡಿಚಿ ಅರ್ಧ ಪದ್ಮಾಸನದ ಭಂಗಿಯಲ್ಲಿದ್ದಾನೆ. ಕೈಗಡಗ, ಕಾಲ್ಗಡಗ, ಭುಜ ಕವಚ ಅಲಂಕೃತ ನಡಪಟ್ಟಿ ಜನಿವಾರಗಳಿಂದ ಅಲಂಕೃತಗೊಂಡಿದೆ.

**ಸಹಸ್ರದಳದ ಕಮಲ:** ದೇವಾಲಯದ ಗರ್ಭಗುಡಿ ಹಾಗೂ ನಂದಿ ಮಂಟಪದ ಮೇಲ್ಛತ್ತಿನಲ್ಲಿ ಜೋಡಿಸಿಡಲಾಗಿದೆ. ದೇವಾಲಯ ಜೀರ್ಣೋದ್ದಾರಗೊಳಿಸುವಾಗ ಬೇರ್ಪಡಿಸಿ ದೇವಾಲಯದಲ್ಲಿ ರಕ್ಷಿಸಿಡಲಾಗಿದೆ. ಸಹಸ್ರದಳ ಕಮಲವು ನೋಡಲು ತಾವರೆ ಹೂವಿನಂತೆ ಗೋಚರಿಸುತ್ತಿದೆ. ಎಡ ಬಲಗಳಲ್ಲಿ ಪುಷ್ಪ ಗುಚ್ಚಗಳನ್ನು ಬಿಡಿಸಿ ಸುಂದರಗೊಳಿಸಿದ್ದಾರೆ. ಪುಷ್ಪಗಳ ಮೇಲ್ಭಾಗದಲ್ಲಿ ನಾಲ್ಕು ಮೊಗ್ಗುಗಳನ್ನು ಬಿಡಿಸಿದ್ದು ಎಡಬಲಗಳಲ್ಲಿ ಒಂದೇ ದೇಟಿನಲ್ಲಿ ಹಲವು ಪುಷ್ಪಗಳು ಅರಳಿದಂತೆ ಕಂಡು ಬರುತ್ತವೆ.

ಸಂಗಮೇಶ್ವರದಿಂದ ಅರ್ಧ ಕಿ.ಮೀ. ಅಂತರದಲ್ಲಿರುವ ಶ್ರೀ ನಂದಿ ಸಂಗಮನಾಥನ ವಿಗ್ರಹಗಳಿವೆ. ಕ್ರಿ.ಶ.೧೦ ನೇ ಶತಮಾನಕ್ಕೆ ಸಂಬಂಧಿಸಿದ ಕಲ್ಯಾಣದ ಚಾಲುಕ್ಯರ ಕಾಲದ ವಿಗ್ರಹಗಳು ನಯನ ಮನೋರವಾದ ಅಲಂಕೃತವಾಗಿವೆ. ಪ್ರತಿ ಸಂಕ್ರಮಣದಂದು ಜಾತ್ರೆಯು ನಡೆಯುತ್ತದೆ.

[ಬಸವರಾಜ ಹೊನ್ನಹಳ್ಳಿ, ಜಮಾಲಖಾನವರ ಪೋಲೀಸ ಇಲಾಖೆ ಶ್ರೀ ಸುಭಾಸ ಬೋರ, ಶ್ರೀ ವಸಂತ ಜಮದಡಕರ, ಶ್ರೀ ಬಾಳಪ್ಪ ಕಲ್ಯಾಣಕರ, ಶ್ರೀ ಮಂಜು ಬಳಿಗೇರ, ಪ್ರೋ.ಜಯಣ್ಣ ಆರಿಕಟ್ಟಿ, ಶ್ರೀಮತಿ ಅಶ್ವಿನಿ ಕಡ್ಲಿ, ಶ್ರೀಮತಿ ಪಾರವ್ವ ಹೊನ್ನಳ್ಳಿ ಇವರಿಗೆ ಕೃತಜ್ಞತೆಗಳು.]



# ಯಾದವಾಡ ಗ್ರಾಮದ ಪ್ರಾಚ್ಯಾವಶೇಷಗಳು

ಮಂಜುಳಾ ಯಲಿಗಾರ*

ಯಾದವಾಡ ಗ್ರಾಮವು ಧಾರವಾಡ ಜಿಲ್ಲೆಯ ಧಾರವಾಡ ತಾಲೂಕು ಕೇಂದ್ರದಿಂದ ದಕ್ಷಿಣಕ್ಕೆ ೯ ಕಿ.ಮೀ. ದೂರದಲ್ಲಿದೆ. ಯಾದವ+ವಾಡ-ಯಾದವಾಡೆ-ಯಾದವಾಡ ಎಂದು ನಿಷ್ಪತ್ತಿ ಹೊಂದಿದೆ. ಯಾದವರಿಗೆ ಸಂಬಂಧಿಸಿದ ಕೋಟೆಯನ್ನೊಳಗೊಂಡ ಗ್ರಾಮಕ್ಕೆ ಈ ಹೆಸರು ಬಂದಿದೆ. ಈ ಗ್ರಾಮದ ದತ್ತಾತ್ತೇಯ ಮಂದಿರದ ಎದುರಿಗೆ ಒಂದು ಶಾಸನವಿದೆ. ಇದರ ಕುರಿತು ಇನ್ನೂ ವರದಿಯಾಗಿಲ್ಲ. ಈ ಗ್ರಾಮದ ಪರಿಸರವು ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿಯ ಸ್ಥಳವಾಗಿದ್ದಿತ್ತು ಎಂಬುದಕ್ಕೆ ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿಯ ನೆಲೆಯೆಂಬುದಕ್ಕೆ ಉಜ್ಜಿ ನಯಗೊಳಿಸಿರುವ ಕೊಡಲಿಗಳು ಇಲ್ಲಿ ದೊರೆತಿದೆ.

ಈ ಗ್ರಾಮದಲ್ಲಿ ಶಾತವಾಹನರ, ರಾಷ್ಟ್ರಕೂಟರ ಹಾಗೂ ಕಲ್ಯಾಣಿ ಚಾಲುಕ್ಯರ ಆಳ್ವಿಕೆ ಕಾಲದ ಮಹತ್ವದ ಪುರಾತತ್ವ ಅವಶೇಷಗಳು ಬೆಳಕಿಗೆ ಬಂದಿವೆ. ಇತ್ತೀಚೆಗೆ ಈ ಗ್ರಾಮದ ವಿಠಲ ಡಿಂಡಲಕೊಪ್ಪ ಎಂಬುವವರ ಹೊಲದಲ್ಲಿ ದೇವಸ್ಥಾನ ನಿರ್ಮಾಣಕ್ಕಾಗಿ ಅಡಿಪಾಯವನ್ನು ತೆಗೆಯುವಾಗ ನಾಲ್ಕು ಅಡಿ ಎತ್ತರದ ೪ ಗೋಪಾಸ ಕಲ್ಲುಗಳು ಪತ್ತೆಯಾಗಿವೆ. ಇದರೊಂದಿಗೆ ೧ ಮಹಿಷಾಸುರ ಮರ್ದಿನಿ ವಿಗ್ರಹ, ೨ ಶಿವಲಿಂಗ, ೧ ಸಪ್ತಮಾತೃಕೆಯ ಶಿಲ್ಪಗಳು ಪತ್ತೆಯಾಗಿವೆ. ಈ ಎಲ್ಲಾ ಪುರಾವೆಗಳು ೯ನೇ ಶತಮಾನದಿಂದ ೧೩ನೇ ಶತಮಾನದ ಅವಧಿಯಲ್ಲಿ ಯಾದವಾಡ ಗ್ರಾಮದಲ್ಲಿ ಜನವಸತಿ ಇದ್ದ ಕುರಿತು ಮಾಹಿತಿ ನೀಡುತ್ತದೆ ಎಂದು ಪ್ರೊ. ಆರ್.ಎಂ. ಷಡಕ್ಷರಯ್ಯ, ಸರ್‌ರವರು ಅಭಿಪ್ರಾಯಿಸಿದ್ದಾರೆ.

ಈ ಸ್ಥಳದಲ್ಲಿಯೇ ಈ ಮೊದಲು ಭಿನ್ನವಾದ ಬಸವಣ್ಣ ಹಾಗೂ ಶಿವಲಿಂಗ ಮೂರ್ತಿಗಳು ಕೂಡಾ ದೊರೆತಿವೆ. ಅಲ್ಲದೇ ಇಲ್ಲಿ ದೊರೆತ ಕೆಂಪು ಗಡಿಗೆ, ಮಡಿಕೆಗಳು ಕ್ರಿ.ಶ. ೨ನೇ ಶತಮಾನದ ಶಾತವಾಹನರ ಕಾಲದವು ಎಂದು ಅಂದಾಜು ಮಾಡಲಾಗಿದೆ. ನಾಲ್ಕು ಗೋಸಾಸ ಶಾಸನಗಳಲ್ಲಿ ೨ ಪೂರ್ಣ ಪ್ರಮಾಣದಲ್ಲಿದ್ದು, ಇನ್ನೆರಡು ತುಂಡಾಗಿವೆ. ಎರಡೂ ಶಾಸನಗಳು ಹಳೆಗನ್ನಡದ ಶಾಸನಗಳಿವೆ. ಅದರಲ್ಲಿ "ಸ್ವಸ್ತಿಶ್ರೀ ರಟ್ಟರ ಅಣ್ಣ ರಾಜ್ಯವನ್ನೋಳ್' ಬುಧಮ್ವರಾಶಿ ಕೇಶಿ ಕೊಟ್ಟೋನ್" (ರಾಷ್ಟ್ರಕೂಟರು ರಾಜ್ಯ ಆಳುವಾಗ ಬುಧಮ್ವರಾಸಿ ಕೇಶಿ ಎಂಬುವವನು ಇದ್ದನು ಕೊಟ್ಟನೆಂದು ತಿಳಿಸುತ್ತದೆ) ಎಂಬ ಹಳೆಗನ್ನಡದ ಲಿಪಿ ಇದೆ. 'ಕೊಟ್ಟೋನ್' ಎಂಬ ಶಬ್ದ ಪ್ರಾಚೀನ ರಾಷ್ಟ್ರಕೂಟರ ಕಾಲದಲ್ಲಿಯ ಉಲ್ಲೇಖವಾಗಿದೆ. ಶಾಸನ ಶೈಲಿಯಿಂದ ಇದರ ಕಾಲ ಕ್ರಿ.ಶ. ೧೦ನೇ ಶತಮಾನದ ಆರಂಭದ ಕಾಲವೆಂದೇಳಬಹುದು.

ಕಂಬಗಳು ಉದ್ದವಾಗಿದ್ದು, ಲಂಬವಾಗಿ ಉದ್ದನೆಯ ಪಟ್ಟಿಕೆ ಮಧ್ಯದಲ್ಲಿದೆ. ಅದಕ್ಕೆ ಮೇಲೆ ಅಡ್ಡ ಪಟ್ಟಿಗಳಿದ್ದು, ಅದರಲ್ಲಿ ಅರ್ಧವೃತ್ತಾಕಾರದ ಕಮಲದ ಅಲಂಕಾರ ಇದೆ. ಕಂಬದ ತುದಿ ಅರ್ಧವೃತ್ತಾಕಾರದ್ದಲ್ಲಿದ್ದು, ಅದು ಅಷ್ಟ ಮುಖಗಳನ್ನು ಹೊಂದಿದೆ. ಅದರ ಕೆಳಗಿನ ಭಾಗ ಚೌಕಾಕಾರದಲ್ಲಿದೆ. ಒಂದು ೧೧೦ ಸೆಂ.ಮೀ. ಮತ್ತೊಂದು ೧೭೫ ಸೆಂ.ಮೀ. ಉದ್ದವಿದೆ.

೧೦ನೇ ಶತಮಾನದ ಸಪ್ತಮಾತೃಕೆಯ ಮೂರ್ತಿ ಪತ್ತೆಯಾಗಿದೆ. ಮಹಿಷಾಸುರ ಮರ್ಧಿನಿ ವಿಗ್ರಹ, ೧೨ನೇ ಶತಮಾನದ ವೃತ್ತಪೀಠವುಳ್ಳ ಬೃಹತ್ ಲಿಂಗಗಳು ದೊರೆತಿವೆ. ಗ್ರಾಮದ ಹನುಮಂತ ದೇವಸ್ಥಾನದ ಮುಂಭಾಗದಲ್ಲಿ ೨ ಶಾಸನಗಳಿವೆ ಅದರಲ್ಲಿ ಒಂದು ಶಾಸನ ಶೈವ ಶಾಸನವಾಗಿದೆ ಇನ್ನೊಂದು ಶಾಸನದ ಅಕ್ಷರಗಳು ತುಂಬಾ ತ್ರುಟಿತವಾಗಿದೆ.

ಕರ್ನಾಟಕ ಹಾಗೂ ಮಹಾರಾಷ್ಟ್ರದಲ್ಲಿ ಎಲ್ಲಿಯೂ ಇಲ್ಲದ ಪುರಾತನ ಅಶ್ವಾರೂಢ ಶಿವಾಜಿ ಮೂರ್ತಿ ಈ ಗ್ರಾಮದಲ್ಲಿದೆ. ಸುಮಾರು ಕ್ರಿ.ಶ. ೧೯ನೇ ಶತಮಾನದ ಶಿವಾಜಿ ವಿಗ್ರಹ ಅಪರೂಪವಾಗಿದ್ದು ಕಿರೀಟ ಧರಿಸಿ ಕತ್ತಿ ಹಿಡಿದು ಕುದುರೆ ಸವಾರಿ ಮಾಡಿರುವ ಶಿವಾಜಿಯನ್ನು ಸುಂದರವಾಗಿ ಉಬ್ಬು ಶಿಲ್ಪಗಳ ಮಾದರಿಯಲ್ಲಿ ಕೆತ್ತಲಾಗಿದೆ. ಕುದುರೆಯು ತನ್ನ ಮುಂದಿನ ಬಲಗಾಲನ್ನು ವೈರಿಪಡೆಯ ಅಧಿಕಾರಿಯೊಬ್ಬನ ತಲೆಯ ಮೇಲಿಟ್ಟಿದೆ. ಕುದುರೆಯ ಬಲಗಾಲಿನ ಬದಿ ಕತ್ತಿ ಹಿಡಿದು ನಿಂತಿದ್ದಾನೆ. ಪೀಠಗಳಲ್ಲಿ ಕೆಲವರ ಚಿತ್ರಗಳಿವೆ. ತೋರಣ ಪಟ್ಟಿಕೆಯನ್ನು ಅಲಂಕರಿಸಲಾಗಿದೆ.

* ಪತ್ರಪಾಲಕರು (ಪ್ರ), ಪ್ರಾದೇಶಿಕ ಪತ್ರಾಗಾರ ಕಚೇರಿ, ಕ.ವಿ.ವಿ. ಧಾರವಾಡ, ಮೊ. ೯೯೦೧೭೦೧೮೦೮



**ಉಬ್ಬುಶಿಲ್ಪ (ಲಜ್ಜಾಗೌರಿ) ದೇವಿ**



**ಗೋಶಾಸನ (ಸ್ತಂಭ ಶಾಸನ)**

ಪ್ರಸ್ತುತ ಯಾದವಾಡ ಗ್ರಾಮವು ವಿವಿಧ ಭಾಷೆ, ಧರ್ಮ, ಜಾತಿಗಳುಳ್ಳ ಜನರು ವಾಸಿಸುತ್ತಿದ್ದಾರೆ. ಕೃಷಿ, ನೀರಾವರಿ, ತೋಟಗಾರಿಕೆ, ಪಶುಪಾಲನೆ, ಹೈನುಗಾರಿಕೆ, ಕುಂಬಾರರು, ಒಕ್ಕಲಿಗರು, ಬಣಜಿಗರು, ಬಡಿಗರು, ಗುಡಿಕಾರರು, ಹರಿಜನರು ಮತ್ತು ತಳವಾರರಿದ್ದಾರೆ.

ಈ ಗ್ರಾಮದಲ್ಲಿ ರಾಮಲಿಂಗಪ್ಪ, ಕಲ್ಲಪ್ಪ, ಮಾರುತಿ, ಬಸವಣ್ಣ, ನಾರಾಯಣ, ದತ್ತಾತ್ರೇಯ, ಗ್ರಾಮದೇವತೆ, ಕೊರಮ್ಮ, ದುರ್ಗಾದೇವಿ ದೇವಸ್ಥಾನಗಳಿವೆ. ಶಾಪೂರ, ಶಿವಾನಂದ, ಹಂಚಿನಾಳ, ರಾಚಯ್ಯಸ್ವಾಮಿ ಮಠಗಳು ಇವೆ. ಮಸೀದಿ, ದರ್ಗಾಗಳನ್ನೊಳಗೊಂಡ ಈ ಗ್ರಾಮದ ಜನತೆಯು ಶ್ರಮಿಕರಾಗಿದ್ದು, ಭಜನೆ-ಡೊಳ್ಳು, ಡೋಲು ಮುಂತಾದ ಕಲಾವಿದರನ್ನೊಳಗೊಂಡಿದೆ.

ಹೀಗೆ ಪುರಾತನ ಕಾಲದಿಂದಲೂ ಜನವಸತಿ ಗ್ರಾಮವಾದ ಯಾದವಾಡದ ಪ್ರಾಚ್ಯಾವಶೇಷಗಳು ಇಲ್ಲಿಯ ಸಾಂಸ್ಕೃತಿಕ, ಐತಿಹಾಸಿಕ ಹಿರಿಮೆಯನ್ನು ಎತ್ತಿ ಹಿಡಿದಿವೆ.



## ಆಕರ ಗ್ರಂಥಗಳು


೧. ಸೂರ್ಯನಾಥ ಕಾಮತ್ (ಸಮ) ೧೯೯೫, "ಧಾರವಾಡ ಜಿಲ್ಲೆ ಗ್ಯಾಸೆಟಿಯರ್", ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆ, ಬೆಂಗಳೂರು.

೨. ಷಡಕ್ಷರಯ್ಯ ರು.ಮ. ಮತ್ತು ಜಯಮ್ಮ ಬಿ., ೨೦೦೭, "ಧಾರವಾಡ ಜಿಲ್ಲೆಯ ಐತಿಹಾಸಿಕ ಸ್ಮಾರಕಗಳು ಮತ್ತು ಶಿಲ್ಪಗಳು", ಧಾರವಾಡ ಉತ್ಸವ ಸಮಿತಿ ಜಿಲ್ಲಾ ಆಡಳಿತ ಧಾರವಾಡ.

೩. ಕರ್ನಾಟಕ ಗ್ರಾಮ ಚರಿತ್ರೆ ಕೋಶ, ೨೦೦೯, "ಧಾರವಾಡ ಜಿಲ್ಲೆ", ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ.

## ೧೦೨

# ಸಿಂಧನೂರಿನ ಪ್ರಾಚ್ಯಾವಶೇಷಗಳು

**ರಡ್ಡಪ್ಪಹಳ್ಳಿ ಬಳಗಾನೂರು***

ಸಿಂಧನೂರು ರಾಯಚೂರು ಜಿಲ್ಲೆಯ ತಾಲೂಕುಗಳಲ್ಲೊಂದು. ತುಂಗಭದ್ರಾ ನೀರಿನ ಅನುಕೂಲತೆಯಿಂದ ಈ ಭಾಗವು ಭತ್ತದ ಕಣಜ ಎಂದು ಹೆಸರಾಗಿದೆ. ಅಂತೆಯೇ ಇದು ಒಕ್ಕಲುತನ, ವ್ಯಾಪಾರ-ವಹಿವಾಟುಗಳಲ್ಲಿಯೂ ಮುಂದಿದೆ. ತಾಲೂಕಿನ ಕೇಂದ್ರಸ್ಥಳವಾಗಿರುವ ಸಿಂಧನೂರು ನಗರವು ಕೆಲವು ಐತಿಹಾಸಿಕ ಅವಶೇಷಗಳನ್ನು ಒಳಗೊಂಡಿದೆ. ೧೧ನೇ ಶತಮಾನದ ಸಾಲಗುಂದಿ ಶಾಸನದಲ್ಲಿ ಸಿಂಧನೂರು ಎಂಬ ಹೆಸರು ಮೊಟ್ಟಮೊದಲಬಾರಿಗೆ ಕಂಡುಬರುತ್ತದೆ. ಈ ಊರಿಗೆ ಚಿನ್ನೂರು, ಸಿನ್ನೂರು ಎಂಬ ನಾಮಾಂತರದ ಭಿನ್ನರೂಪಗಳು ಬಳಕೆಯಲ್ಲಿವೆ. ಗ್ರಾಮೀಣ ಜನರು ಇದನ್ನು ಹೀಗೆಯೇ ಕರೆಯುತ್ತಾರೆ

ಸಿಂಧನೂರು ತಾಲೂಕಿನಲ್ಲಿ ಬಳಗಾನೂರು ರವುಡಕುಂದಿ ಸೋಮಲಾಪುರ ಮುಕ್ಕುಂದಿ ಮೊದಲಾದ ಕಡೆಗಳಲ್ಲಿ ಶಾಸನ, ದೇವಾಲಯ ಮೂರ್ತಿಶಿಲ್ಪ ಮೊದಲಾದವುಗಳು ಕಂಡುಬಂದಿದ್ದು ದಾಖಲಾಗಿವೆ. ಆದರೆ ಸಿಂಧನೂರು ನಗರದಲ್ಲಿ ಹಳೆಯಕಾಲದ ವಸ್ತುಗಳ ಶೋಧ ಮತ್ತು ಸರ್ವೆಕ್ಷಣೆ ನಡೆದಂತೆ ಕಾಣುವದಿಲ್ಲ. ಪರಸ್ಥಳದ ಶಾಸನಗಳು ಸಿಂಧನೂರನ್ನು ಉಲ್ಲೇಖಿಸಿವೆ. ಆದರೆ ಸಿಂಧನೂರಿನ ಒಂದು ಶಾಸನವು ದಾಖಲಾಗಿಲ್ಲ.

ಈ ನಗರದ ಕೋಟೆಪ್ರದೇಶ, ಬ್ರಾಹ್ಮಣರ ಓಣಿ, ದೇವಾಲಯಗಳ ಬಳಿ ಕೆಲವು ಮೂರ್ತಿಶಿಲ್ಪಗಳು ಕಂಡುಬಂದಿವೆ. ಇವುಗಳನ್ನು ಕಪ್ಪುಕಲ್ಲು, ಕಣಶಿಲೆಗಳಲ್ಲಿ ಕೆತ್ತಲಾಗಿದೆ ಕೆಲವುಗಳ ಕೆತ್ತನೆ ಉತ್ತಮವಾಗಿದ್ದರೆ ಇನ್ನುಕೆಲವು ಒರಟಾಗಿವೆ. ಕಲ್ಯಾಣಿ ಚಾಳುಕ್ಯರ ಕಾಲದಿಂದ ವಿಜಯನಗರದ ಕಾಲದವರೆಗೆ ಸೇರಿದ ಇವುಗಳ ಸಹಾಯದಿಂದ ಸ್ಥಳಿಯ ಇತಿಹಾಸ ಸಂಸ್ಕೃತಿ ಧಾರ್ಮಿಕ ಸ್ಥಿತಿಗತಿಗಳನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ.

ಸಾಮಾನ್ಯವಾಗಿ ಎಲ್ಲಾ ಪ್ರಾಚೀನ ಗ್ರಾಮಗಳು ಕೋಟೆಯನ್ನು ಹೊಂದಿರುವಂತೆಯೇ ಸಿಂಧನೂರು ಕೂಡ ಕೋಟೆಯನ್ನು ಹೊಂದಿತ್ತು. ನಗರದ ಮುಖ್ಯರಸ್ತೆಯಿಂದ ಪೂರ್ವಕ್ಕೆ ಸ್ವಲ್ಪದೂರದಲ್ಲಿ ಕೋಟೆ ಪ್ರದೇಶವಿದೆ. ಇದು ಸರಿಸುಮಾರು ಹಳ್ಳದಿಂದ ಸುಕಾಲಪೇಟೆ ರಸ್ತೆಯವರೆಗೆ ಹರಡಿದೆ. ಉತ್ತರ-ದಕ್ಷಿಣವಾಗಿ ಉದ್ದವಾಗಿರುವ, ಪೂರ್ವ-ಪಶ್ಚಿಮವಾಗಿ ಕಡಿಮೆ ಅಗಲವಾಗಿರುವ ಇದು ಮೂಲಸ್ವರೂಪದಲ್ಲಿ ಉಳಿದುಕೊಂಡಿಲ್ಲ. ಬಹುತೇಕವಾಗಿ ನಾಶಗೊಂಡಿದೆ. ಕಲ್ಲು-ಮಣ್ಣಿನಿಂದ ಈಕೋಟೆಯನ್ನು ಕಟ್ಟಲಾಗಿತ್ತು. ಕೋಟೆಗೋಡೆಗುಂಟ ಅಲ್ಲಲ್ಲಿ ಹುಡೆವು[ಕೊತ್ತಳ]ಗಳಿರಬೇಕು. ಹುಡೆವುಗಳಿದ್ದಲ್ಲಿ ಈರಣ್ಣ, ತಾಯಮ್ಮ ದೇವತೆಗಳಿರುತ್ತಾರೆ ಎಂಬ ನಂಬಿಕೆ ಜನಪದರಲ್ಲಿದೆ. ಅಂಥ ಈರಣ್ಣನ ಗುಡಿಗಳು ಇಲ್ಲಿವೆ. ಕೋಟೆಯ ದ್ವಾರದ ಅವಶೇಷಗಳು ಕಂಡುಬರುವದಿಲ್ಲ. ಮತ್ತು ಎಷ್ಟು ದ್ವಾರಗಳಿದ್ದವೆಂಬುದು ಸ್ಪಷ್ಟವಿಲ್ಲ. ಸ್ಥಳಿಯ ಸಂಶೋಧಕರಾದ ಶ್ರೀ ಶಾಶ್ವತಯ್ಯಮುಕ್ಕುಂದಿಮಠರು ಕೋಟೆಯಿಂದ ಹೊರಬಂದ ಜನರು ತಮ್ಮ ಮೂಲಸ್ಥಳದ ಹೆಸರನ್ನೇ ತಾವು ವಾಸಿಸಿದ ಪ್ರದೇಶಕ್ಕೆ ಇಟ್ಟರು. ಹೀಗಾಗಿ ಕಾಟಬೇಸ್ ಬಡೆಬೇಸ್ ಎಂಬ ಹೆಸರುಗಳು ಬಂದಿವೆ ಎಂಬುದಾಗಿ ಅಭಿಪ್ರಾಯಪಡುವದರಿಂದ ಈ ಕೋಟೆಗೆ ಈ ಹೆಸರಿನ ಎರಡು ದ್ವಾರಗಳಿದ್ದವೆಂದು ಊಹಿಸಬಹುದು.

ಈ ಕೋಟೆ ಪ್ರದೇಶದಲ್ಲಿ ಜನವಸತಿಯಿರುವದರಿಂದ ಪ್ರಾಚೀನ ಅವಶೇಷಗಳು ಕಾಣುವದು ಅಪರೂಪವಾಗಿದೆ. ಇಲ್ಲಿ ಒಂದು ಹಳೆಯಮಸೀದಿಯಿದ್ದು ಅದನ್ನು ಮುಸ್ಲೀಮರು ಪ್ರಾರ್ಥನೆಗಾಗಿ ಬಳಸುತಿದ್ದು, ಅದನ್ನು ಜುಮ್ಮಾಮಸೀದಿ ಎಂದು ಕರೆಯುತ್ತಾರೆ. ಇದು ಪೂರ್ವಕ್ಕೆ ಮುಖಮಾಡಿದೆ. ಮಧ್ಯಮಗಾತ್ರದ ಕಲ್ಲುಗಳನ್ನು ಇದಕ್ಕಾಗಿ ಬಳಸಲಾಗಿದೆ. ಇದನ್ನು ಬಿಜಾಪುರದ ಅಲಿಆದಿಲ್‌ಷಾನ ಕಾಲದಲ್ಲಿ ನಿರ್ಮಿಸಲಾಯಿತೆಂದು ಹೇಳುತ್ತಾರೆ. ಇದರ ಪೂರ್ವಕ್ಕೆ ಒಂದು ಚೌಕಕಾರದ ಹಳೆಯ ಬಾವಿಯಿದೆ. ಇದು ವಕ್ತುಂಬಾವಿಯಾಗಿದ್ದು, ಉತ್ತರದಿಕ್ಕಿನಲ್ಲಿ ಮೆಟ್ಟಲುಗಳಿದ್ದು ನಂತರದಲ್ಲಿ ಅವು ಪಶ್ಚಿಮಕ್ಕೆ ಹೊರಳಿವೆ. ತದನಂತರದಲ್ಲಿ ಇದರ ಮೇಲ್ಗಡೆ ಕಟ್ಟಡಕಟ್ಟಿ ಗಿರಕಿಯಂತ್ರಗಳನ್ನು ಅಳವಡಿಸಲಾಗಿತ್ತಂತೆ. ಇದು ಅಂದು

* ಬಳಗಾನೂರು, ಸಿಂಧನೂರು ತಾಲೂಕು, ರಾಯಚೂರು ಜಿಲ್ಲೆ.

ಊರಿಗೆಲ್ಲ ಕುಡಿಯುವ ನೀರಿನ ಬಾವಿಯಾಗಿತ್ತಂತೆ. ಆದರೆ ಇಂದು ಸಂಪೂರ್ಣವಾಗಿ ಹಾಳುಬಿದ್ದಿದೆ. ಇದರಲ್ಲಿ ಸುರಂಗಮಾರ್ಗವಿತ್ತೆಂದು ಬಲ್ಲವರು ಹೇಳುತ್ತಾರೆ. ಈ ಕೋಟೆಗೋಡೆಗೆ ಹೊಂದಿಕೊಂಡಂತೆ ಈಶಾನ್ಯಭಾಗದಲ್ಲಿ ಮಣ್ಣಿನಲ್ಲಿ ಹೂತುಹೋದ, ನಿಂತಸ್ಥಿತಿಯಲ್ಲಿರುವ ಸ್ಥಂಬವೊಂದು ಕಂಡುಬರುತ್ತದೆ. ಅದು ಕಪ್ಪುಕಲ್ಲಿನ ರಚನೆಯಾಗಿದ್ದು ಕಂಬದಮೇಲ್ಭಾಗದ ಮಣಿಯಾಗಿರಬಹುದಾಗಿದೆ. ಇದು ೧೨-೧೩ನೇ ಶತಮಾನಕ್ಕೆ ಸೇರಿರಬಹುದಾಗಿದೆ. ಆ ಸ್ಥಳದಲ್ಲಿ ಉತ್ಖನನ ನಡೆದರೆ ಆಗಿನ ದೇವಾಲಯದ ಅವಶೇಷಗಳು ಬೆಳಕಿಗೆ ಬರಬಹುದಾಗಿವೆ.

೧೬- ೧೭ನೇ ಶತಮಾನದ ಹೊತ್ತಿಗೆ ಕೋಟೆಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಳ್ಳತೊಡಗಿದವು. ಜನರು ಧೈರ್ಯ ವಹಿಸಿ ಕೋಟೆಯ ಹೊರಗೆಬಂದು ನೆಲೆಸತೊಡಗಿದರು. ಆದರೂ ತಮ್ಮ ವಾಸಸ್ಥಳಕ್ಕೊಂದು ಚೌಕಟ್ಟನ್ನು ರಚಿಸಿಕೊಳ್ಳತೊಡಗಿದರು. ಅದು ಅವರ ನಂಬಿಕೆಯಾಗಿತ್ತು. ಇದರಂತೆ ತಮ್ಮ ವಾಸಸ್ಥಳದ ಎರಡು ತುದಿಗೆ ಎರಡು ಅಗಸಿಗಳೇರ್ಪಟ್ಟವು. ಅವುಗಳಿಗೆ ಬಡೆಬೇಸ್, ಕಾಟೆಬೇಸ್ ಎಂದು ತಮ್ಮ ಮೂಲನೆಲೆಯ ಹೆಸರನ್ನಿಟ್ಟರು. ಇದರ ಪೂರ್ವ ಅಗಸಿ [ಕಾಟೆಬೇಸ್] ಆಂಜನೇಯ ದೇವಾಲಯದ ಬಳಿ ಇತ್ತೆಂದು ಕಾರಹುಣ್ಣಿಮೆಯಂದು ಅಲ್ಲಿ ಎತ್ತುಗಳ ಕರಿಹರಿಯಲಾಗುತಿತ್ತೆಂದು ಹಿರಿಯರು ಹೇಳುತ್ತಾರೆ. ಬಡೆಬೇಸ್ ಪಶ್ಚಿಮಕ್ಕೆ ಮುಖಮಾಡಿತ್ತೆಂದು, ಅಲ್ಲಿಯೇ ಒಂದು ಶಿಲಾಲಿಪಿ ಅಥವ ವೀರಗಲ್ಲು, ಅದರಪಕ್ಕದಲ್ಲಿ ಬಾವಿ ಇತ್ತು. ಇದೇ ಪರಿಸರದಲ್ಲಿ ಬಾವಜಿ [ಜೈನದಿಗಂಬರ] ಮಠ ಇತ್ತೆಂದು ಹಿರಿಯರು ಹೇಳುತ್ತಾರೆ. ಇಂದಿನ ಹಳೆಬಜಾರವೇ ಅಂದಿನ ಮುಖ್ಯಬೀದಿ. ಉಪ್ಪಾರವಾಡಿ, ಪಟೇಲ್ ವಾಡಿ, ಬ್ರಾಹ್ಮಣರ ಓಣಿ, ಸಿಂಪಿಗೇರ ಓಣಿ, ಚಿಗಟೇರ ಓಣಿ, ಧನಗರ್ ವಾಡಿ ಇವೆಲ್ಲವೂ ಈವ್ಯಾಪ್ತಿಯಲ್ಲಿವೆ. ಸುಕಾಲ್‌ಪೇಟೆ ಸಿಂಧನೂರಿನ ಮೊದಲ ವಿಸ್ತರಣಾ ಬಡಾವಣೆಯಿರಬೇಕು.

ಬಡೇಬೇಸ್ ಭಾಗದಲ್ಲಿ ಒಂದು ಆಂಜನೇಯ ದೇವಾಲಯವಿದೆ. ಸಾಕಷ್ಟು ಎತ್ತರದಲ್ಲಿರುವ ಇದು ಕಲ್ಲು ಮಣ್ಣು ಕಟ್ಟಿಗೆಯಕಟ್ಟಡ. ಗರ್ಭಗೃಹ ಸುಕನಾಸಿ ನವರಂಗವನ್ನು ಹೊಂದಿದೆ. ಇದನ್ನು ಉಮಲೂಟಿಯ ನಾಡಗೌಡರು ನಿರ್ಮಿಸಿದರೆಂದು ಹೇಳುತ್ತಾರೆ. ಈ ದೇವಾಲಯದ ಪಕ್ಕದಲ್ಲಿ ಒಂದು ಶಿಲ್ಪಪಟ್ಟಿಯಿದ್ದು ಅದರ ಮುರಿದಭಾಗವು ೨೭ ಇಂಚು ಉದ್ದ ೨೧ ಇಂಚು ಎತ್ತರವಿದೆ. ಇಲ್ಲಿ ಕೃಷ್ಣನು ದ್ವಿಭಂಗಿಯಲಿನ್ನದ್ದು ಕೊಳಲನ್ನೂದುತ್ತಾ ನಿಂತಿದ್ದಾನೆ. ಅವನ ಅಕ್ಕ-ಪಕ್ಕದಲ್ಲಿ ಗೋಪಿಕಾಸ್ತ್ರೀಯರಿದ್ದಾರೆ. ಮೇಲ್ಗಡೆ ಅಲಂಕಾರವಿದೆ. ಕೆಳಗಿನ ಸಾಲಿನಲ್ಲಿ ಆಕಳುಗಳು ಕೊಳಲಿನ ಧ್ವನಿಯನ್ನಾಲಿಸುವಂತೆ ನಿಂತಿವೆ. ಇದರ ಪಕ್ಕದಲ್ಲಿರುವ ಮತ್ತೊಂದು ಆಕೃತಿಯು ಸುರುಳಿಸುತ್ತಿ ಹೆಡೆಯೆತ್ತಿ ನಿಂತಿರುವ ಹಾವಿನ ಹೆಡೆಯಮೇಲೆ ಕೈಯಿಟ್ಟು ನಿಂತಿರುವಂತಿದೆ. ಬಹುಶಃ ಕಾಳಿಂಗಮರ್ಧನ ಎನಿಸುತ್ತದೆ.

ಬ್ರಾಹ್ಮಣರ ಓಣಿಯಲ್ಲಿ ಗ್ರಾಮದೇವತೆ ದ್ಯಾವಮ್ಮನ ಗುಡಿಯಿದ್ದು, ಅದರ ಹಿಂಬದಿಯಲ್ಲಿ ಕಾಳಮ್ಮನ ಗುಡಿಯಿದೆ. ಅದರ ಬಲಗಡೆ ಒಂದು ಪಾಳುಬಿದ್ದಪೌಳಿಯಿದ್ದು ಅಲ್ಲಿ ಅನೇಕ ಮೂರ್ತಿಶಿಲ್ಪಗಳಿವೆ. ಅವುಗಳೆಂದರೆ:

**ಗಣಪತಿ:** ಇಲ್ಲಿ ಎರಡು ಗಣಪತಿಮೂರ್ತಿಗಳಿವೆ. ಅವುಗಳಲ್ಲಿ ಒಂದು ಶಿಲ್ಪವು ಚಿಕ್ಕದಾಗಿದ್ದು ಕಪ್ಪುಕಲ್ಲಿನಲ್ಲಿ ರಚಿತವಾಗಿದೆ. ಇದು ೧೬ ಇಂಚು ಅಗಲ, ೨೦ ಇಂಚು ಎತ್ತರವಿದೆ. ಗಣಪತಿಯು ದೊಡ್ಡದಾದ ಕಿವಿ ಹೊಟ್ಟೆಯನ್ನು ಹೊಂದಿದ್ದಾನೆ. ಅವನು ಕಾಲ್ಗಡಗ, ಯಜ್ಞೋಪವೀತವನ್ನು ಧರಿಸಿದ್ದು, ತಲೆಯ ಮೇಲೆ ಕಿರೀಟವಿದೆ. ತಲೆಯ ಹಿಂಭಾಗದ ಫಲಕದ ಮೇಲೆ ಅಲಂಕಾರವಿದೆ. ಇವನಿಗೆ ನಾಲ್ಕು ಕೈಗಳಿದ್ದು ಮೇಲಿನ ಕೈಗಳಲ್ಲಿ ಅಂಕುಶ, ಕಮಲ ಹಿಡಿದಿರುವಂತಿದೆ. ಕೆಳಗಿನ ಒಂದು ಕೈ ಒಡೆದುಹೋಗಿದೆ, ಇನ್ನೊಂದು ಕೈ ಮೋದಕವನ್ನು ಹಿಡಿದಿದ್ದು, ಸೊಂಡಿಲು ಅದನ್ನು ತಗೆದುಕೊಳ್ಳುತ್ತಿರುವಂತಿದೆ. ಇದು ಕಲ್ಯಾಣಿ ಚಾಳುಕ್ಯರ ಕಾಲದಶಿಲ್ಪ.

ಇನ್ನೊಂದು ಗಣಪತಿಮೂರ್ತಿಯು ದೊಡ್ಡದಾಗಿದೆ. ಕಣಶಿಲೆಯಲ್ಲಿ ಕೆತ್ತಲಾಗಿರುವ ಅದು, ೩ ಅಡಿ ೪ ಅಂಗುಲ ಅಗಲ, ೫ ಅಡಿ ೧೦ ಅಂಗುಲ ಎತ್ತರವಿದೆ. ಎತ್ತರವಾದ ಹಣೆ, ಅಗಲವಾದ ಕಿವಿ, ಕಿರಿದಾದ ಕಣ್ಣು, ಹೊಂದಿರುವ ಇದರ ತಲೆಯ ಮೇಲೆ ಕಿರೀಟವಿದೆ. ಕೊರಳು ಭುಜ ತೋಳುಗಳಮೇಲೆ ಮುತ್ತಿನಪಟ್ಟಿಯ ಅಲಂಕಾರವಿದೆ. ಕೈ ಕಾಲುಗಳಲ್ಲಿ ಕಡಗಗಳಿವೆ. ದೊಡ್ಡದಾದ ಹೊಟ್ಟೆಗೆ ಹಾವನ್ನು ಬಿಗಿಯಲಾಗಿದೆ. ಇದಕ್ಕೆ ಯಜ್ಞೋಪವಿತ ನಾಲ್ಕು ಕೈಗಳಿದ್ದು, ಮೇಲಿನ ಎಡಗೈಯಲ್ಲಿ ದಂಡ [ಅಂಕುಶ] ವಿದೆ. ಬಲಗೈಲ್ಲಿ ಜಪಮಣಿ ಹಿಡಿದಿರುವಂತಿದ್ದು, ಎಣಿಸುವ ರೀತಿಯಲ್ಲಿದೆ. ಕೆಳಗಿನ ಎರಡು ಕೈ ಒಡೆದಿವೆ. ಸೊಂಡಿಲು ಮೊದಕವನ್ನು ಸ್ವೀಕರಿಸುವಂತಿದೆ. ವಿಜಯನಗರ ಕಾಲದ ಶಿಲ್ಪವಾಗಿದೆ.

**ಈಶ್ವರ:** ಇಲ್ಲಿ ಚೌಕಾಕಾರದ ಪಾಣಿಪೀಠದ ಮೇಲೆ ದೊಡ್ಡದಾದ ಶಿವಲಿಂಗವಿದೆ. ಇಲ್ಲಿಯೇ ಕಿತ್ತಿಹಾಕಲಾದ ಒಂದು ದೊಡ್ಡ ಪಾಣಿಪೀಠವಿದೆ ಇದನ್ನು ಕಣಶಿಲೆಯಲ್ಲಿ ತಯಾರಿಸಲಾಗಿದ್ದು ಹೂ ವಜ್ರಾಲಂಕಾರಗಳಿಂದ ಅದನ್ನು ಅಲಂಕರಿಸಲಾಗಿದೆ

ಮಹಿಷಾಸುರಮರ್ಧಿನಿ: ಮಹಿಷಾಸುರನನ್ನು ವಧಿಸುತ್ತಿರುವ ಮೂರ್ತಿಯೊಂದು ಇಲ್ಲಿದೆ. ಮಹಿಷಾಸುರಮರ್ಧಿನಿಗೆ ನಾಲ್ಕು ಕೈಗಳಿದ್ದು ಮೇಲಿನ ಎರಡು ಕೈಗಳಲ್ಲಿ ಶಂಖ, ಚಕ್ರವನ್ನು ಹಿಡಿದಿದ್ದರೆ, ಕೆಳಗಿನ ಬಲಗೈಯಲ್ಲಿ ತ್ರಿಶೂಲವನ್ನು ಹಿಡಿದು ಅದನ್ನು ಮಹಿಶನ ಮೇಲೆ ಪ್ರಯೋಗಿಸುತಿದ್ದಾಳೆ. ಎಡಗೈಯು ಮಹಿಶನ ಮುಖವನ್ನು ಹಿಡಿದು ಮುರಿದಿಕ್ಕುವರೀತಿಯಲ್ಲಿದೆ. ದೇವಿಯು ಕರ್ಣಕುಂಡಲ ಕಿರೀಟದಿಂದ ಅಲಂಕೃತಳಾಗಿದ್ದಾಳೆ. ಆದರೆ ಮುಖವು ಅಸ್ಪಷ್ಟವಾಗಿದೆ. ಶಿಲ್ಪವು ಕಪ್ಪುಕಲ್ಲಿನಲ್ಲಿ ಕೆತ್ತಲಾಗಿದ್ದು ೧೫ ಇಂಚು ಅಗಲ, ೨೪ ಇಂಚು ಎತ್ತರವಿದೆ. ಇದು ಕಲ್ಯಾಣಿಚಾಳುಕ್ಯರ ಕಾಲದ ಶಿಲ್ಪ.

ಕೆಲವು ನಾಗಶಿಲ್ಪಗಳಿವೆ. ಅವುಗಳಲ್ಲಿ ೧೩ ಇಂಚು ಅಗಲ ಮತ್ತು ೪೫ ಇಂಚು ಎತ್ತರವಿರುವ ಕಪ್ಪುಕಲ್ಲಿನ ನಾಗಶಿಲ್ಪವು ಮುಖ್ಯವಾಗಿದೆ. ಅಂಕುಡೊಂಕಾಗಿ ಚಲಿಸಿ ಮೇಲೆ ಅಗಲವಾದ ಹೆಡೆಯನ್ನು ಹೊಂದಿರುವ ಇದು ಆಕರ್ಷಕವಾಗಿ ಕೆತ್ತಲ್ಪಟ್ಟಿದೆ. ಅದರ ಮೇಲೆ ಅಲ್ಲಲ್ಲಿ ರೇಖೆಕೆತ್ತಿರುವದು ಅದರ ಆಕರ್ಷಣೆಯನ್ನು ಹೆಚ್ಚಿಸಿದೆ. ಇಲ್ಲಿ ಕೆಲವು ಭಗ್ನಮೂರ್ತಿಶಿಲ್ಪಗಳಿವೆ. ೨೦ ಇಂಚು ಅಗಲ, ೨೧ ಇಂಚು ಎತ್ತರವಿರುವ ಒಂದು ಶಿಲ್ಪವಿದೆ. ಅದನ್ನು ಉಜ್ಜಿ ಬಹಳಷ್ಟು ಹಾಳುಮಾಡಲಾಗಿದೆ. ನಿಂತಭಂಗಿಯಲ್ಲಿರುವ ಇದರ ಮೇಲ್ಮುಖವಾಗಿರುವ ಎರಡು ಕೈಗಳಲ್ಲಿ ದಂಡ {ಕತ್ತಿ} ಇರುವಂತಿದೆ. ತಲೆಯಮೇಲೆ ಕಿರೀಟವಿದೆ. ಇದು ವೀರಭದ್ರಶಿಲ್ಪವಿರಬಹುದಾಗಿದೆ. ಇಲ್ಲಿ ಎರಡು ನಂದಿಶಿಲ್ಪಗಳಿವೆ. ಚಿಕ್ಕನಂದಿಯು ಹಣೆಕಟ್ಟು, ಕೊರಳಲ್ಲಿ ಗಂಟೆಯನ್ನು ಹೊಂದಿದ್ದು ಸುಂದರವಾಗಿದೆ. ಇನ್ನೊಂದು ನಂದಿಯು ಸ್ವಲ್ಪ ದೊಡ್ಡದಿದ್ದು, ಕಾಲು ಗೊರಸು ಕೊರಳಗೆಜ್ಜೆಯನ್ನು ಅಕರ್ಷಕವಾಗಿ ಕೆತ್ತಲಾಗಿದೆ. ಇದು ಪಲ್ಲವ-ನೊಳಂಬಶೈಲಿಯನ್ನು ಬಹುತೇಕವಾಗಿ ಹೋಲುತ್ತದೆ. ಇವೆಲ್ಲವು ಕಪ್ಪುಕಲ್ಲಿನ ರಚನೆಗಳು.

ಕಾಳಮ್ಮನಗುಡಿಯ ಆವರಣದಲ್ಲಿ ಒಂದು ಭಗ್ನದೇವತಾಶಿಲ್ಪವಿದೆ. ಮೂರ್ತಿಯು ಕೊರಳಹಾರ, ಬಳೆ, ಕೈಡಗ, ನಡುಬಂಧ, ಸೀರೆ, ಕಾಲ್ಗಡಗ ಧರಿಸಿದೆ. ಇದಕ್ಕೆ ರುಂಡವನ್ನು ಪ್ರತ್ಯೇಕವಾಗಿ ತಯಾರಿಸಿ ಜೋಡಿಸಲಾಗಿತ್ತೆಂದು ಕಾಣುತ್ತಿದೆ. ಇದಕ್ಕಾಗಿ ವ್ಯವಸ್ಥೆಗೊಳಿಸಲಾದ ರಂದ್ರವಿದೆ. ಇದಕ್ಕೆ ಎರಡು ಕೈಗಳಿದ್ದು, ಬಲಗೈ ಮೇಲ್ಮುಖವಾದ ಕತ್ತಿಯನ್ನು ಹಿಡಿದಿದ್ದರೆ, ಮುರಿದ ಬಲಗೈಯಲ್ಲಿ ಪಾನಬಟ್ಟಲು ಇರುವಂತಿದೆ. ಇದರ ಪೀಠದಮೇಲೆ ಆನೆ, ಎತ್ತು ಅಥವ ಕುದುರೆ, ರುಂಡಗಳನ್ನು ಕೆತ್ತಲಾಗಿದೆ. ೧೫ ಇಂಚು ಅಗಲ ೧೫ ಇಂಚು ಎತ್ತರವಿರುವ ಈ ಶಿಲ್ಪವು ಕಪ್ಪು ಕಲ್ಲಿನ ರಚನೆಯಾಗಿದೆ. ಇದು ಕಲ್ಯಾಣಿಚಾಳುಕ್ಯರ ಕಾಲದ ಕಾಳಿಕಾಮೂರ್ತಿಯಾಗಿರಬಹುದಾಗಿದೆ.

ಇಲ್ಲಿಯೇ ೧೮ ಇಂಚು ಅಗಲ ೧೫ ಇಂಚು ಎತ್ತರವಿರುವ ಚೌಕಾಕಾರದ ಫಲಕದ ಮೇಲೆ ಇನ್ನೊಂದು ವೀರಗಲ್ಲು ಇರುವಂತಿದೆ. ವೀರನ ಅಕ್ಕಪಕ್ಕದಲ್ಲಿ ಸೂರ್ಯ, ಚಂದ್ರ, ಹೂಗಳ ಕೆತ್ತನೆಯಿದೆ. ವೀರನ ಮುಖ, ಕಣ್ಣು, ಮೀಸೆ, ಹಣೆಯಮೇಲೆನಾಮ ಎದ್ದುಕಾಣುವಂತಿವೆ. ಅವನು ಕೈಗಡಗ, ನಡುಬಂಧ, ಪಂಜೆ, ಕಾಲ್ಗಡಗ ಧರಿಸಿದ್ದಾನೆ. ಕೈಯಲ್ಲಿ ದೊಡ್ಡದಾದ ಬಾಕುವನ್ನು ಹಿಡಿದು ನಿಂತಿದ್ದಾನೆ. ಇವನ ಅಕ್ಕಪಕ್ಕದಲ್ಲಿ ಇಬ್ಬರು ಕೈ ಮುಗಿದು ನಿಂತಿದ್ದಾರೆ. ಕೈ ಮುಗಿದು ನಿಂತವರು ಇವನ ಮಕ್ಕಳಿರಬೇಕು.

ಹಳೆಬಜಾರದ ಮಸೀದಿಯ ಮುಂದುಗಡೆ ಬಹುಶಃ ಕಣಶಿಲೆಯಂತೆ ಕಾಣುವ ಅಲ್ಲಲ್ಲಿ ಹೂತುಹಾಕಿದ ಮುರಿದ ಕಂಬಗಳಿವೆ. ಇವುಗಳಲ್ಲಿ ಎರಡು ಚೌಕಭಾಗಗಳ ಮಧ್ಯೆ ಎಂಟು ಹದಿನಾರು ಎಂಟು ಮುಖಗಳ ಪಟ್ಟಿ ಕಂಡುಬರುತ್ತಿದ್ದು, ಅವುಗಳ ಮೇಲೆ ವಜ್ರಾಲಂಕಾರ ಪುಷ್ಪಗಳು ಕಂಡುಬರುತ್ತದೆ. ಮೌಲಾಲಿ ಕಟ್ಟೆಯ ಮೇಲೆಯೂ ಇಂಥ ಹಲವು ಪ್ರಾಚೀನ ಕಂಬಗಳಿವೆ.

ಮುಖ್ಯರಸ್ತೆಗೆ ಹೊಂದಿಕೊಂಡು ಆದಿಶೇಷನ ದೇವಸ್ಥಾನವಿದೆ. ಇಲ್ಲಿರುವ ಆಧುನಿಕ ಶಿಲಾಲೇಖದಿಂದ ಇದು ೧೯೬೮ರಲ್ಲಿ ಜೀರ್ಣೋದ್ಧಾರಗೊಂಡು ೨೦೧೭ರಲ್ಲಿ ಹೊಸಕಟ್ಟಡವನ್ನು ಹೊಂದಿತು ಎಂದುತಿಳಿದುಬರುತ್ತದೆ. ಅಂದರೆ ಇದೊಂದು ಆಧುನಿಕ ದೇವಾಲಯ. ಇಲ್ಲಿ ಯಾವುದೇ ಪ್ರಾಚ್ಯಾವಶೇಷಗಳಿಲ್ಲ. ಇದರ ಪಕ್ಕದಲ್ಲಿಯೇ ಸುಂಕಲಮ್ಮನಗುಡಿಯಿದೆ. ಸುಂಕಲಮ್ಮನನ್ನು ಕುಂಭವೊಂದರಲ್ಲಿ ಸ್ಥಾಪಿಸಲಾಗಿದೆ. ಈಗುಡಿಯಲ್ಲಿ ಹಿಂದಿನ ಗೋಡೆಗೆ ಸಪ್ತಮಾತೃಕೆ ಶಿಲ್ಪವೊಂದಿದೆ. ಇದರ ತುದಿಯಲ್ಲಿ ಗಣಪತಿ, ವೀರಭದ್ರರಿದ್ದಾರೆ. ಇದು ಕಲ್ಯಾಣಿಚಾಳುಕ್ಯರ ಕಾಲದ ಶಿಲ್ಪ. ಇದರ ಮುಂದಿರುವ ಕಟ್ಟೆಯ ಮೇಲೆ ಕೆಲವು ಹಳೆಯ ಕಾಲದ ಶಿಲ್ಪಗಳಿವೆ.

ಇಲ್ಲಿ ಕಣಶಿಲೆಯ ಫಲಕದ ಮೇಲೆ ಶಿಲ್ಪವೊಂದಿದ್ದು ತಲೆಯಮೇಲೆ ಎತ್ತರವಾದ ಕಿರೀಟವಿದೆ. ಮುಖ ಸ್ಪಷ್ಟವಿಲ್ಲ. ಇದಕ್ಕೆ ಎರಡು ಕೈಗಳಿದ್ದು, ಅವು ಕಮಲದ ಮೊಗ್ಗು ಹಿಡಿದಿರುವಂತಿದೆ. ಮೂರ್ತಿಗೆ ಕೊರಳಹಾರ ನಡುಬಂಧದ ಅಲಂಕಾರವಿದೆ. ಇದು ಸೂರ್ಯಶಿಲ್ಪವಿರಬೇಕು.

ಇಲ್ಲಿಯ ಒಂದು ಶಿಲಾಫಲಕದ ಮೇಲೆ ದಂಪತಿಗಳಿಬ್ಬರು ಬಿಲ್ಲು-ಬಾಣ ಹಿಡಿದು ನಿಂತಿದ್ದಾರೆ. ಅವರಲ್ಲಿ ಪುರುಷನು ಎತ್ತರವಾದ ಹಣೆ, ತಲೆಗೆ ಪೇಟಾ ಹೊಂದಿರುವಂತಿದ್ದು, ತುರಾಯಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಅವರ ವೇಷಭೂಷಣಗಳು ನೋಡಲು ಬೇಟೆ ತಂಡದ ಮುಖ್ಯಸ್ಥರಂತಿದ್ದು, ಜಾನಪದೀಯ ಹಿನ್ನೆಲೆಯಲ್ಲಿ ಕೆತ್ತಲಾದ ಶಿಲ್ಪವಾಗಿದ್ದು, ಜನಾಂಗೀಯ ಅಧ್ಯಯನಕ್ಕೆ ವಿಷಯ ವಸ್ತುವಾಗಬಲ್ಲದು.

ಚೌಕಾಕಾರದ ಮತ್ತೊಂದು ಕಣಶಿಲೆಯಮೇಲೆ ಶಿಲ್ಪವಿದೆ. ಇದು ಕುದುರೆಯ ಮೇಲೆ ಕುಳಿತ ವ್ಯಕ್ತಿಯ ಶಿಲ್ಪ. ಅವನು ಎಡಗೈಯಲ್ಲಿ ಕುದುರೆಯ ಲಗಾಮನ್ನುಹಿಡಿದಿದ್ದು. ಮೇಲೆತ್ತಿದ ಬಲಗೈಯಲ್ಲಿ ಬಹುಶಃ ಚಬಕ ಇರುವಂತಿದೆ. ಅವನು ಕೊರಳಹಾರ ತೋಳ್ಬಂಧಿಗಳನ್ನು ಧರಿಸಿದ್ದಾನೆ. ತಲೆಯಹಿಂದೆ ಕೂದಲನ್ನು ಎತ್ತಿಕಟ್ಟಲಾಗಿದೆ. ಬಹುಶಃ ಇದೊಂದು ವೀರಗಲ್ಲು. ವಿಜಯನಗರೋತ್ತರ ಕಾಲಕ್ಕೆ ಸೇರಿರಬಹುದಾಗಿದೆ.

ಇನ್ನೊಂದು ಚೌಕಾಕಾರದ ಫಲಕದ ಮೇಲೆ ಯುದ್ಧದ ಸನ್ನಿವೇಶವಿದೆ. ಇಲ್ಲಿಯೂ ವೀರನು ಕುದುರೆಯ ಮೇಲೆ ಕುಳಿತಿದ್ದು, ಎಡಗೈಯಲ್ಲಿ ಲಗಾಮನ್ನು, ಮೇಲೆತ್ತಿದ ಬಲಗೈಯಲ್ಲಿ ಭರ್ಚಿಯನ್ನು ಹಿಡಿದಿರುವಂತಿದೆ. ಇವನನ್ನು ಕಾಲಾಳುವೊಬ್ಬನು ಎದುರಿಸುತಿದ್ದಾನೆ. ಅವನು ಒಂದು ಕೈಯಲ್ಲಿ ಎದುರಾಗಿರುವ ಕುದುರೆಯ ಮಗಡವನ್ನು ಹಿಡಿದಿದ್ದು, ಇನ್ನೊಂದು ಕೈಯಲ್ಲಿ ಉದ್ದವಾದ ಕತ್ತಿಯಿಂದ ಕುದುರೆಯ ಎದೆಗೆ ಚುಚ್ಚುತ್ತಿದ್ದಾನೆ. ಶಿಲ್ಪವಾದರೋ ಜೀವಕಳೆಯಿಂದ ತುಂಬಿದೆ. ಕುದುರೆಯ ಹಿಂಗಾಲು ನೆಲದಮೇಲಿದ್ದು ಮುಂದಿನಕಾಲು ವೀರಾವೇಶದಿಂದ ಮೇಲೆತ್ತಿದೆ. ಕಾಲಾಳು ಶಿವಾಜಿ ಮದರಿಯ ಟೊಪ್ಪಿಗೆಯನ್ನು ಧರಿಸಿದ್ದು ಬಹುಶಃ ಅವನು ಮರಾಠಿ ಸೈನಿಕನೇನೋ? ಎನಿಸುತ್ತದೆ.

ಇನ್ನೊಂದು ಶಿಲೆಯಮೇಲೆ ಶಿಖರಮಾದರಿಯನ್ನು ತೋರಿಸಲಾಗಿದ್ದು, ಅದು ೧೩ನೇ ಶತಮಾನಕ್ಕೆ ಸೇರಿರಬಹುದು. ಇದು ಬಹುಶಃ ದೇವಾಲಯವೊಂದರ ಭಿತ್ತಿಶಿಲ್ಪ. ಇದರ ಮುಂದುಗಡೆ ಪಾ{ಪೋ}ತಪ್ಪ ಎಂದು ಪೂಜಿಸಲಾಗುವ ಸ್ವಯಂಭೂ ಲಿಂಗವೊಂದಿದೆ. ಮತ್ತೊಂದು ಫಲಕದ ಮೇಲೆ ಆಂಜನೇಯನು ವಿನೀತನಾಗಿ ಕೈಮುಗಿದು ನಿಂತಿರುವ ಚಿತ್ರವಿದೆ. ಇದು ಭಕ್ತಾಂಜನೇಯ ಶಿಲ್ಪವಾಗಿರಬೇಕು. ಇಲ್ಲಿ ಒಟ್ಟು ೩ ನಾಗಶಿಲ್ಪಗಳಿದ್ದು, ಅವುಗಳಲ್ಲಿ ಎರಡು ಚಿಕ್ಕವು, ಒಂದು ದೊಡ್ಡದಾಗಿದೆ. ದೊಡ್ಡದಾದ ನಾಗಶಿಲ್ಪವನ್ನು ಚಲಿಸುವ ರೀತಿಯಲ್ಲಿ ಅಂಕುಡೊಂಕಾಗಿಸಿ ಮೇಲ್ಗಡೆ ಹೆಡೆಬಿಚ್ಚಿ ನಿಂತಿರುವಂತೆ ತೋರಿಸಲಾಗಿದೆ. ಇದು ಮೂಲತಃ ಆದಿಶೇಷ ದೇವಸ್ಥಾನದ ಮೂಲಪ್ರತಿಮೆ. ಇತ್ತೀಚೀಗೆ ಧೇವಸ್ಥಾನ ಹೊಸದಾಗಿ ನಿರ್ಮಾಣಗೊಂಡ ಕಾಲದಲ್ಲಿ ಇದನ್ನು ತಗೆದಿಟ್ಟು ಹೊಸ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.

ಅರಳಹಳ್ಳಿ ಕಡೆಯಿಂದ ಹರಿಯುವ ಹಳ್ಳವನ್ನು ಚಿಗಿಹಳ್ಳವೆಂದು, ದೇವರಗುಡಿ, ಮಲ್ಲಾಪುರ ಕಡೆಯಿಂದ ಹರಿಯುವ ಹಳ್ಳವನ್ನು ಹಿರೆಹಳ್ಳವೆಂದು ಕರೆಯಲಾಗುತ್ತದೆ. ಹಿರೆಹಳ್ಳವು ತನ್ನ ಹರಿವಿನ ವೇಳೆಯಲ್ಲಿ ಅಲ್ಲಿರುವ ಕಲ್ಲು-ಬಂಡೆಗಳನ್ನು ಕೊರೆಯುತ್ತಾ ಸಾಗಿದೆ. ಇದರ ಎಡಬದಿಯ ಹುಟ್ಟುಕಲ್ಲುಬಂಡೆಯಲ್ಲಿ ಈಶ್ವರ ಮತ್ತು ಆಂಜನೇಯ ಮೂರ್ತಿಗಳನ್ನು ಒಂದೆಡೆ ಕೆತ್ತಲಾಗಿದೆ. ಇವು ಬಹಳ ಪ್ರಾಚೀನವಿರಲಿಕ್ಕಿಲ್ಲ.

ಸಿದ್ದರಾಂಪುರದ ಮರಿಬಸ್ಸಣ್ಣತಾತನ ಗದ್ದುಗೆಯ ಹತ್ತಿರ ಕೆಲವು ಶಿಲ್ಪಗಳಿವೆ. ಇಲ್ಲಿ ವಿಷ್ಣುಶಿಲ್ಪವೊಂದಿದ್ದು ಅದು ಸಮಭಂಗಿಯಲ್ಲಿದೆ. ಮೇಲಿನ ಕೈಗಳಲ್ಲಿ ಶಂಖ, ಚಕ್ರಗಳಿದ್ದರೆ, ಕೆಳಗಿನ ಒಂದು ಕೈಯಲ್ಲಿ ಗದೆಯಿದ್ದು, ಮತ್ತೊಂದು ಭಗ್ನವಾಗಿದೆ. ತಲೆಯ ಮೇಲೆ ಕಿರಿಟವಿದ್ದು, ಕಂಠಹಾರ, ಕೊರಳಹಾರ, ಕಾಲ್ಗಡಗಗಳಿಂದ ಅಲಂಕೃತಗೊಂಡಿದೆ. ಆದರೆ ಮುಖ ಮತ್ತು ಕರ್ಣಕುಂಡಲ ಅಸ್ಪಷ್ಟವಾಗಿವೆ. ಇಲ್ಲಿ ಮುರಿದ ದ್ವಾರಪಟ್ಟಿಕೆಯ ಭಾಗವಾದ ದ್ವಾರಪಾಲಕ ಶಿಲ್ಪವೊಂದಿದೆ. ಇದು ದ್ವಿಭಂಗಿಯಲ್ಲಿದ್ದು, ಮುಖ ಅಸ್ಪಷ್ಟವಾಗಿದೆ. ಅದು ಕಂಠಹಾರ, ಕೊರಳಹಾರ, ಕೈಗಡಗ, ಕಾಲ್ಗಡಗ, ಪಂಜೆ, ಮುತ್ತಿನ ನಡುಬಂಧ, ಹಾರಗಳಿಂದ ಅಲಂಕೃತಗೊಂಡಿದೆ. ಇದರ ಮೇಲಿನ ಕೈಗಳಲ್ಲಿ ಡಮರುಗ, ತ್ರಿಶೂಲಗಳಿದ್ದರೆ, ಕೆಳಗಿನ ಬಲಗೈಯಲ್ಲಿ ಗದೆಯಿದ್ದು, ಎಡಗೈ ವರದಮುದ್ರೆಯಾಗಿದೆ. ಇದು ಶೈವದೇವಾಲಯದ ದ್ವಾರಪಾಲಕಶಿಲ್ಪ. ಇಲ್ಲಿ ಶಿಲ್ಪದ ಪಟ್ಟಿಕೆಯೊಂದಿದ್ದು ಅಲ್ಲಿ ಮಂಟಪವೊಂದರಲ್ಲಿ ಮೂರ್ತಿಯೊಂದು ನಿಂತಿದೆ. ಮಂಟಪದ ಎರಡು ಕಂಬಗಳು, ಅವುಗಳ ಕೆಳಗಿನ ಪೀಠ, ಮೇಲಿನ ಶಿಖರ ಸುಂದರವಾಗಿ ಕೆತ್ತಲ್ಪಟ್ಟಿದೆ. ಇದು ದೇವಾಲಯವೊಂದರ ಭಿತ್ತಿಶಿಲ್ಪವಾಗಿರಬೇಕು. ಇದು ಕಲ್ಯಾಣಿಚಾಳುಕ್ಯರ ಕಾಲದ ಶಿಲ್ಪವಾಗಿರಬೇಕು. ಇಲ್ಲಿ ಕಂಬದ ಮುರಿದ ತುಡೊಂದು ಇದ್ದು, ಅದು ಕಪ್ಪು ಕಲ್ಲಿನ ದುಂಡಾಕಾರದ ಕಂಬವಾಗಿದೆ. ಅದು ಇಳಿಬಿದ್ದಮುತ್ತಿನಹಾರ ಮತ್ತು ಪಟ್ಟಿಗಳಿಂದ ಕೂಡಿದೆ. ಅದು ಬಹುಶಃ ಕಲ್ಯಾಣಿ ಚಾಳುಕ್ಯರ ಕಾಲದಕಂಬವಾಗಿರಬಹುದು. ಇಲ್ಲಿ ಒಂಟಿಫಲಕದ ವೀರಗಲ್ಲೊಂದಿದೆ. ಇಲ್ಲಿ ವೀರನು ಭರ್ಚಿಯಂತಿರುವ ಆಯುಧವೊಂದನ್ನು ಎರಡು ಕೈಗಳಿಂದ ಹಿಡಿದು ನಿಂತಿದ್ದು, ಪ್ರಯೋಗಿಸುವ ಭಂಗಿಯಲ್ಲಿದ್ದಾನೆ. ದೋತರವನ್ನುಟ್ಟು, ಕಾಲ್ಗಡಗವನ್ನು ಧರಿಸಿರುವ

ಆತನ ಕಣ್ಣು, ಮೂಗು, ಬಾಯಿ, ಮೀಸೆಯನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ತಲೆಗೂದಲನ್ನು ಹಿಂದೆ ಕಟ್ಟಲಾಗಿದೆ. ಇದು ವಿಜಯನಗರ ಕಾಲಕ್ಕೆ ಸೇರಿರಬಹುದಾಗಿದೆ.

ಇಲ್ಲಿಂದ ಮುಂದೆ ವೀರಭದ್ರಯ್ಯಸ್ವಾಮಿಯವರ ಹೊಲಕ್ಕೆ ಹೋಗುವ ದಾರಿಯಲ್ಲಿ ಎರಡು ಗ್ರ್ಯಾನೈಟ್ ಕಂಬಗಳನ್ನು ನಿಲ್ಲಿಸಲಾಗಿದ್ದು, ಅವು ಎರಡು ಚೌಕಾಕಾರದ ಘನಗಳ ಮಧ್ಯೆ ಎಂಟು-ಹದಿನಾರು-ಎಂಟು ಮುಖಗಳನ್ನು ಒಳಗೊಂಡಿವೆ. ಇವು ೧೨-೧೩ನೇ ಶತಮಾನಕ್ಕೆ ಸೇರಿದ ಕಂಬಗಳು. ಇಲ್ಲಿಯೆ ದೇವಾಲಯವೊಂದರ ಕಕ್ಷಾಸನವಾಗಿದ್ದ ಶಿಲಾಫಲಕವೊಂದು ಬಿದ್ದಿದೆ. ಇದು ಕೂಡ ಗ್ರ್ಯಾನೈಟ್ ಶಿಲೆಯಾಗಿದ್ದು, ಇಲ್ಲಿ ಆನೆ, ವಜ್ರಾಲಂಕಾರದ ಕೆತ್ತನೆಯಿದೆ. ಇದು ಕೂಡ ಅದೆ ಕಾಲಕ್ಕೆ ಸೇರಿದೆ.

ವೀರಭದ್ರಯ್ಯಸ್ವಾಮಿಯವರ ಹೋಲದಲ್ಲಿ ಅವರ ಪೂರ್ವಿಕರಾದ ದೊಡ್ಡಯ್ಯತಾತನ ಗದ್ದುಗೆಯಿದೆ. ಅಲ್ಲಿ ದೇವಾಲಯದ ಕೆಲವು ಅವಶೇಷಗಳಿವೆ. ಇಲ್ಲಿ ಮೂಲತಃ ಚೌಕಾಕಾರದ ಗ್ರ್ಯಾನೈಟಿನ ಒಂದು ಗೋಡೆಗಂಬವಿದ್ದು, ಮಧ್ಯದ ಸ್ವಲ್ಪ ಭಾಗವನ್ನು ಕತ್ತರಿಸುವ ಮೂಲಕ ಎರಡು ಆಯತಾಕಾರದ ಭಾಗಗಳೇರ್ಪಟ್ಟಿವೆ. ಮಧ್ಯದ ಸ್ವಲ್ಪಭಾಗವು ಎಂಟುಮುಖದಿಂದ ಕೂಡಿದೆ. ಇದು ೧೪-೧೫ನೇ ಶತಮಾನಕ್ಕೆ ಸೇರಿದೆ. ಇನ್ನೊಂದು ಕಪ್ಪುಕಲ್ಲಿನ ಚೌಕಾಕಾರದ ಮುರಿದ ಕಂಬವಿದೆ. ಮತ್ತೊಂದು ಮುರಿದುಹೊದ ಫಲಕವು ಎರಡು ಶಿಖರಗಳನ್ನು ತೋರಿಸುತ್ತದೆ. ಇದು ದ್ವಾರದ ಮೇಲಿನ ಉತ್ತರಾಂಗವಾಗಿರಬೇಕು. ಮತ್ತೊಂದು ಸ್ವಲ್ಪ ಹಸಿರು ಬಣ್ಣದ ಸೇದಿಕಲ್ಲಿನ ಸೂರ್ಯನ ಪಾಣಿಪೀಠವಿದೆ. ಇದರ ಕಿರಿದಾದ ಪಟ್ಟಿಯ ಮೇಲೆ ಏಳು ಕುದುರೆಗಳನ್ನು ತೋರಿಸಲಾಗಿದ್ದು, ಅವುಗಳ ಲಗಾಮನ್ನು ಹಿಡಿದು, ಬಾರುಕೋಲನ್ನು ಎತ್ತಿರುವ ಸಾರಥಿಯ ಸುಂದರ ಶಿಲ್ಪವಿದೆ. ಅದರೆ ಇದರ ಮೇಲೆ ಸ್ಥಾಪಿತವಾದ ಮೂರ್ತಿ ಇಲ್ಲ. ಇವುಗಳನ್ನು ಹಳ್ಳದ ಇನ್ನೊಂದು ಬದಿಯಿಂದ ತಂದಿಡಲಾಗಿದೆ ಎಂದು ಹೇಳುತ್ತಾರೆ.

ಹಳ್ಳದಾಚೆಗೆ ಸೇತುವೆಯ ಬದಿಯಲ್ಲಿ ಯಲ್ಲಮ್ಮನ ಗುಡಿಯಿದೆ. ಇಲ್ಲಿಯ ಗರ್ಭಗುಡಿಯಲ್ಲಿ ಯಲ್ಲಮ್ಮ ಮತ್ತು ಹುಲಿಗೆಮ್ಮರನ್ನು ಕುಂಭ ಮತ್ತು ಅಡ್ಡಲಗಿಯಲ್ಲಿ ಸ್ಥಾಪಿಸಲಾಗಿದೆ. ಇಲ್ಲಿಯ ಗರ್ಭಗೃಹದಲ್ಲಿ ಚಾಮುಂಡಿ, ನರಸಿಂಹ, ಶೇಷಶಯನ, ವೆಂಕಟೇಶ, ಋಷಿ ಮೂರ್ತಿಗಳಿವೆ. ಗರ್ಭಗೃಹದ ಮುಂದಿನ ಗೂಡಿನಲ್ಲಿ ಸರಸ್ವತಿ, ಲಕ್ಷ್ಮಿಯರ ಮೂರ್ತಿಗಳಿವೆ. ಇವುಗಳೇನೂ ಪ್ರಾಚೀನ ಮೂರ್ತಿಗಳಲ್ಲ. ಇದರ ಹತ್ತಿರದಲ್ಲಿ ಸೂಚಿಪರ್ಣಿ ಮರದಮಧ್ಯೆ ಕಪ್ಪುಕಲ್ಲಿನ ಮುರಿದ ದ್ವಾರಪಟ್ಟಿಯೊಂದಿದೆ. ಇದರಲ್ಲಿ ಕಲ್ಯಾಣಿಚಾಳುಕ್ಯ ಕಂಬಮಾದರಿಯು ಸುಂದರವಾಗಿ ಎದ್ದುಕಾಣುವಂತಿದೆ. ದ್ವಾರಪಾಲಕ ಶಿಲ್ಪವು ಸಮಭಂಗಿಯಲ್ಲಿದ್ದು. ಕಿರೀಟ, ಕರ್ಣಕುಂಡಲ, ಕೊರಳಹಾರ, ಯಜ್ಞೋಪವಿತಗಳನ್ನು ಧರಿಸಿದೆ. ಅವನ ಕಣ್ಣು, ಮೂಗು, ಬಾಯಿಯನ್ನು ಚನ್ನಾಗಿ ತೋರಿಸಲಾಗಿದೆ. ಆದರೆ ಕೈಯಲ್ಲಿನ ಆಯುಧಗಳು ಸ್ಪಷ್ಟವಾಗಿ ಕಾಣುತ್ತಿಲ್ಲ. ಇದು ಸೇತುವೆ ನಿರ್ಮಿಸುವಾಗ ಹಳ್ಳದಲ್ಲಿ ದೊರೆತ ಪ್ರಾಚ್ಯಾವಶೇಷವಾಗಿದೆ. ಬಹುಶಃ ಹಳ್ಳದಲ್ಲಿ ವಿಷ್ಣು ದೇವಾಲಯವು ಭೂಗತವಾಗಿರಬಹುದಾಗಿದೆ.

ಜಾಲಿಹಾಳದಿಂದ ತುಂಗಭದ್ರಾ ನದಿಯವರೆಗೆ ದೊರೆತಿರುವ ಶಾಸನಗಳು ಕೆಳವಡಿ-೭೦, ಸಾಲಗುಂದಿ-೭೦ ಪ್ರಾಂತ್ಯವನ್ನು ಉಲ್ಲೇಖಿಸುತ್ತವೆ. ಸಿಂಧನೂರು ಇದೇ ಪರಿಸರದಲ್ಲಿರುವುದರಿಂದ ಇದೂ ಕೂಡ ಆ ಆಡಳಿತ ಭಾಗಕ್ಕೆ ಸೇರಿತ್ತೆನ್ನಬಹುದು.



# ಫತ್ತೇಪೂರದ ಪ್ರಾಚ್ಯಾವಶೇಷಗಳು

ಬಿ.ಕೆ. ದೇವರಾಜ ಜೆ. ಬಾಗೇವಾಡಿ*

ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನ ತಾಳಿಕೋಟ ಹೋಬಳಿಯಲ್ಲಿ ಫತ್ತೇಪೂರ ಗ್ರಾಮವಿದೆ. ಇದು ತಾಳಿಕೋಟೆಯಿಂದ ದೇವರ ಹಿಪ್ಪರಗಿ ಮಾರ್ಗವಾಗಿ ೯ ಕಿ.ಮೀ ದೂರ ದಾರಿ ಕ್ರಮಿಸಿದರೆ ಸಿಗುವದು. ಪ್ರಾಚೀನ ಕಾಲದಿಂದಲೂ ಈ ಗ್ರಾಮವು ಶುದ್ಧ ಕುಡಿಯುವ ನೀರಿಗೆ ಪ್ರಸಿದ್ಧಿಯಾಗಿದೆ. ಇದೇ ಕಾರಣದಿಂದ ಆದಿಮಾನವನು ಈ ಸ್ಥಳವನ್ನು ತನ್ನ ವಾಸಿಸುವ ಸ್ಥಳವನ್ನಾಗಿ ಮಾಡಿಕೊಂಡಿದ್ದಾನೆ. ಸುಮಾರು ೨೦೦ ಮನೆಯ ಕುಟುಂಬಗಳನ್ನು ಹೊಂದಿದ ಈ ಗ್ರಾಮವು ಹಿಂದು-ಮುಸ್ಲಿಮರು ಸಮಾನವಾಗಿದ್ದಾರೆ. ಗೊಲ್ಲಪ್ಪಗೌಡ. ಬಿ. ಪಾಟೀಲ, ದಶವಂತ ಬಸವಂತ್ರಾಯ ಶಿರೂರ, ಮಾಸು ಮಶ್ಯಾ ಮಕಾಂದಾರ ಇವರುಗಳ ಹೊಲದ ಸುಮಾರು ೫೦ ಎಕರೆ ಜಮೀನು ಪ್ರದೇಶವು ಕಪ್ಪು ಜಮೀನು ಆಗಿದ್ದರೂ ಸಂಪೂರ್ಣ ಬೂದಿಯ ಮಿಶ್ರಿತ ಮಣ್ಣು ಹಾಗೂ ಜೇಡಿ ಮಣ್ಣಿನ ಕೆಂಪು ಮಡಿಕೆ ತುಕುಡಿಗಳು, ಅರೆಯುವ ವಿವಿಧ ಕಲ್ಲುಗಳು, ಚಿಕ್ಕೆಕಲ್ಲುಗಳಿಂದ ತುಂಬಿದ ಕಲ್ಲು ವೃತ್ತಗಳು ಕಾಣಬಹುದು.







ಈಗಿರುವ ಊರಿನ ನೈರುತ್ಯ ದಿಕ್ಕಿಗೆ ಅರ್ಧ ಕಿ.ಮೀ. ಸಾಗಿದರೆ ಜಿ.ಬಿ. ಪಾಟೀಲರ ಹೊಲದಲ್ಲಿ ಸಂಪೂರ್ಣ ೧೮ ಎಕರೆ ಜಮೀನಿನಲ್ಲಿ ಮೃತ್ ಪಾತ್ರೆಗಳ ತುಂಡುಗಳು ದೊರೆತಿದ್ದು, ಅವು ಸೂಕ್ಷ್ಮವಾಗಿ ಅವಲೋಕಿಸಿದಾಗ ಇದು ಬೃಹತ್ ಶಿಲಾಯುಗದ ನೆಲೆಯಾಗಿದೆ.

Well Polished Weals Pots ಮಣ್ಣಿನ ಪಾತ್ರೆಯ ತುಕುಡಿಗಳನ್ನು ಮೇಲೆ ಚೆನ್ನಾಗಿ ವಿವಿಧ ಗೆರೆಗಳು ಇದ್ದು ಕೈಯಿಂದ ನಿರ್ಮಿಸಿದಂತೆ ಅಚ್ಚು ಇದೆ. ಮಡಿಕೆ ತಯಾರಿಸಲು ಆಸ್ಟ್ರೇಲಿಯಾದ ಕೆಂಪು ಮಿಶ್ರಿತ ಜೇಡಿ ಮಣ್ಣನ್ನು ಬಳಸಲಾಗಿದೆ. ಹೆಸರಾಂತ ವರ್ಣರೇಖಾ ಚಿತ್ರ ವಿದ್ವಾಂಸರಾದ ರಾಬರ್ಟ ಜಿ. ಬೆಡ್ನರಿಕ್ ಅವರು ಅವುಗಳ ಗುಣ ವಿಶೇಷತೆಯನ್ನು ಸಮಗ್ರವಾಗಿ ವಿವರಿಸಿದ್ದಾರೆ. ಅವರು ವಿವರಿಸಿದಂತೆಯೆ ಈ ಮಡಿಕೆ ತುಕುಡಿಗಳ ಮೇಲ್ಮೈ ಸುಂದರವಾಗಿ ನಿರ್ಮಿಸಿದ್ದಾರೆ. ಕರ್ನಾಟಕದಲ್ಲಿ ಶವ ಸಂಸ್ಕಾರದ ೬ ಶಿಲಾ ಸಮಾಧಿ ಪದ್ಧತಿಗಳಿವೆ.

೧. ಹಾದಿ ಕೋಣೆ ಸಮಾಧಿ, ೨. ಕಂಡಿ ಕೋಣೆ ಸಮಾಧಿ, ೩. ನಿಲ್ಲಿಸು ಕಲ್ಲು ಸಮಾಧಿ, ೪. ಚಿಕ್ಕೆ ಕಲ್ಲುಗಳಿಂದ ತುಂಬಿದ ಕಲ್ಲು ವೃತ್ತ ಸಮಾಧಿ, ೫. ವರ್ತುಲ ಗಡ್ಡೆಗಳು, ೬. ಶವ ಕೋಣೆಗಳು.

ಸದರಿ ಬೃಹತ್ ಶಿಲಾಯುಗದ ಸಂಸ್ಕೃತಿಯ ನೆಲೆಯು ಚಿಕ್ಕೆ ಕಲ್ಲುಗಳಿಂದ ತುಂಬಿದ ಕಲ್ಲು ವೃತ್ತಗಳ ಸಮಾಧಿ ವರ್ಗಕ್ಕೆ ಸೇರಿದೆ ಆದರೆ ಚಿಕ್ಕೆ ಕಲ್ಲು ವೃತ್ತಗಳನ್ನು ನಿಧಿ ಸಂಶೋಧಕರು

* ಮು.ಗು.ಹೆಚ್.ಪಿ.ಎಸ್. ಫತ್ತೇಪೂರ, ಮೊ. ೯೭೩೯೧೯೭೬೫೧೩





ಸಮಾಧಿಗಳನ್ನು ಅಗೆದು ಹಾಳು ಮಾಡಿದ್ದಾರೆ ಮತ್ತು ರೈತರು ಚಕ್ಕೆ ಕಲ್ಲುವೃತ್ತಗಳನ್ನು ತಮ್ಮ ಹೊಲಗಳಿಗೆ ಬದುವು ನಿರ್ಮಿಸಿಕೊಂಡಿದ್ದಾರೆ.



ಈ ಬೃಹತ್ ಶಿಲಾಯುಗದ ಸಮಕಾಲೀನ ನೆಲೆಗಳು ಎಂದರೆ ಯಾದಗಿರಿ ಜಿಲ್ಲೆಯ ಸುರುಪುರ ತಾಲೂಕಿನ ರಾಜನಕೋಳೂರಿನ (ಬುಡ್ಡರ ಮನೆ) (Dolmates) ಆದಿಮಾನವನ ನೆಲೆ ಎನ್ನುವ ಸಂಗತಿಯನ್ನು ೧೮೫೩ರ ರಾಯಲ್ ಏಶಿಯಾಟಿಕ್ ಸೊಸೈಟಿ ಬಾಂಬೆ ಶಾಖೆಯ ಜರ್ನಲ್ ಸಂಪುಟ ನಾಲ್ಕರಲ್ಲಿ ಕರ್ನಲ್ ಮೆಡೋಸ್ ಟೈಲರ್ ಪ್ರಕಟಿಸುವುದರೊಂದಿಗೆ ಕರ್ನಾಟಕದಲ್ಲಿ ಬೃಹತ್ ಶಿಲಾ ಯುಗದ ನೆಲೆಗಳ ಅಧ್ಯಯನ ಪ್ರಾರಂಭವಾಯಿತೆನ್ನಬಹುದು, ಆದಿಮಾನವನ ನೆಲೆಗಳಾದ ಮಾಳನೂರು, ಗುಳಬಾಳ, ಮಾರಲಬಾವಿ, ಬಂಡೆಪ್ಪನಹಳ್ಳಿ ಈ ಎಲ್ಲ ನೆಲಗಳು ಈ ಸಂಸ್ಕೃತಿಗೆ ಸೇರಿದವುಗಳಾಗಿವೆ. ಇತ್ತೀಚಿಗೆ ತಾಳಿಕೋಟೆಯು ಕೂಡಾ ಬೃಹತ್ ಶಿಲಾಯುಗದ ನೆಲೆಯಾಗಿದೆ ಎಂದು ಎಸ್. ಎನ್. ನೀರಲಗಿಯವರು ಸಂಶೋದಿಸಿದ್ದಾರೆ. ಈ ಮೃತ್ ಪಾತ್ರೆಗಳು ಮಹಾರಾಷ್ಟ್ರದ ದೌಲತಾಬಾದ್ (ದೇವಗಿರಿ)ನಲ್ಲಿ ಹೇರಳವಾಗಿ ದೊರೆತಿವೆ ಎಂದು ಹೇಳಿ ಅದೇ ಸಂಸ್ಕೃತಿ ಸಮಕಾಲೀನ ಸಂಸ್ಕೃತಿ ಎಂದು ಪ್ರಸಿದ್ಧ ಇತಿಹಾಸಕಾರರಾದ ಡಾ. ಎಸ್. ಕೆ. ಜೋಶಿಯವರು ಅಭಿಪ್ರಾಯ ಪಟ್ಟಿದ್ದಾರೆ.

**ಚಿಕ್ಕೆ ಕಲ್ಲುಗಳಿಂದ ತುಂಬಿದ ಕಲ್ಲುವೃತ್ತಗಳ ಸಮಾಧಿ:** ಜಿ.ಬಿ ಪಾಟೀಲರ ಹೊಲ ಮತ್ತು ಹನಿಪಶ್ಯಾ ಮಕಾಂದಾಯ ಅವರ ಹೊಲಗಳಲ್ಲಿ ಸುಮಾರು ಮನುಷ್ಯ ತೆಕ್ಕೆ ಅಡಕುವಂತಹ ಗುಂಡುಗಳು ಹೇರಳವಾಗಿ ಸಿಗುತ್ತವೆ. ಸಮಾಧಿಗಳನ್ನು ನಿಧಿ ಶೋಧಕರು ಹಾಳು ಮಾಡಿದ್ದಾರೆ ಮತ್ತು ರೈತರು ಚಕ್ಕೆ ಕಲ್ಲುಗಳಿಂದ ತುಂಬಿದ ಕಲ್ಲುವೃತ್ತಗಳ ಸಮಾಧಿಗಳ ಕಲ್ಲುಗಳನ್ನು ತಮ್ಮ ಹೊಲದ ಬದುವಿಗೆ ಹಾಕಿಕೊಂಡಿದ್ದಾರೆ, ಕೆಲವು ಚಕ್ಕೆ ಕಲ್ಲುಗಳು ಜಟ್ಟಿಂಗೇಶ್ವರ ದೇವಾಲಯದ ಸುತ್ತಲು ಆಶ್ರಯ ಕಲ್ಲುಗಳಾಗಿ ಇಟ್ಟಿದ್ದಾರೆ.

ಬೃಹತ್ ಶಿಲಾಯುಗದ ಮಾನವನು ವಿವಿಧ ರೀತಿಯ ಗ್ರಾನೈಟ್ ಕಲ್ಲುಗಳನ್ನು ಉಪಯೋಗಿಸುತ್ತಿದ್ದನು ಎಂಬುದಕ್ಕೆ ಈ ಕ್ಷೇತ್ರದಲ್ಲಿ ದೊರೆತಿರುವ ವಿವಿಧ ರೀತಿಯ ಅರೆಯುವ ಕಲ್ಲುಗಳು ಸಾಕ್ಷಿಯಾಗಿವೆ. ಚಿಕ್ಕ ಗಾತ್ರದಿಂದ ದೊಡ್ಡ ಗಾತ್ರದಲ್ಲಿಯೂ ಇವೆ. ಅರೆಯುವ ಕಲ್ಲುಗಳನ್ನು ಪರಿಶೀಲಿಸಿದರೆ ಅದು ಕೆಂಪು ಮಿಶ್ರಿತ ವರ್ಣದಿಂದ ಕೂಡಿದೆ. ಹೆಚ್ಚು ಸಮೀಪದ ಇಲಕಲ್ ಗ್ರೈನೇಟ್‌ನ್ನು ಹೋಲುತ್ತದೆ.

ಸುಮಾರು ೨,೦೦೦ ಜನಸಂಖ್ಯೆಯನ್ನು ಹೊಂದಿದ ಈ ಗ್ರಾಮ ಉತ್ತರ ಭಾಗದಲ್ಲಿ ಮಾರುತಿ ದೇವಾಲಯ, ಪಶ್ಚಿಮದಲ್ಲಿ ಜಟ್ಟಿಂಗೇಶ್ವರ ದೇವಾಲಯ, ವಾಯುವ್ಯದಲ್ಲಿ ಮಾಸುಮ ಅಲೀ ದರ್ಗಾ ಇರುವುದು. ಪಕ್ಕದಲ್ಲಿ ಯಮನೂರಪ್ಪನ ದರ್ಗಾ ಇದೆ.

ಮಾರುತಿ ಮಂದಿರದ ಪಕ್ಕದಲ್ಲಿ ಉನ್ನತೀಕರಿಸಿದ ಸ.ಹಿ.ಪ್ರಾ.ಶಾಲೆಯ ಮೈದಾನದಲ್ಲಿ ಕಟ್ಟೆಯ ಮೇಲೆ ಇಟ್ಟಿರುವ ಈ ಯೋಗಿ ಶಿಲ್ಪವು ಸುಮಾರು ೨.೫ ಅಡಿ ಎತ್ತರದ ಕರಿಕಲ್ಲಿನಲ್ಲಿ ಕೆತ್ತಲಾಗಿದೆ. ಈ ಶಿಲ್ಪವು ಕ್ರಿ.ಶ ೧೨ನೇ ಶತಮಾನದ ಕಲ್ಯಾಣ ಚಾಲುಕ್ಯರ ಕಾಲದಲ್ಲಿರುವ ಶಿಲ್ಪವಾಗಿದೆ. ಈ ಶಿಲ್ಪದ ಬಲಭಾಗದಲ್ಲಿ ಯೋಗಿಯು ಯೋಗದ ಮುದ್ರಯಲ್ಲಿದ್ದು ಎರಡು ಕೈಗಳು ಜೋಡಿಸಿರುತ್ತವೆ. ಪದ್ಮಾಸನದಲ್ಲಿ ಕುಳಿತಿರುವ ಯೋಗಿ ಅರೆಮುಚ್ಚಿದ ನೇತ್ರಗಳಿವೆ.

ತಲೆಯ ಮೇಲೆ ಶಿಖೆ (ಜುಟ್ಟ) ಇರುವುದು ಮುಂಗೈಯಲ್ಲಿ, ರಟ್ಟೆಯಲ್ಲಿ ರುದ್ರಾಕ್ಷಿ ಮಣಿಗಳಿವೆ. ಯೋಗಿಯ ಎಡಭಾಗದ ಭುಜಕ್ಕೆ ಸಮಾನವಾಗಿ ಎತ್ತರದಲ್ಲಿ ಕೆತ್ತಲಾದ ಪೀಠದ ಮೇಲೆ ಲಿಂಗವಿರುತ್ತದೆ, ನೋಡಲು ಮನೋಹರವಾಗಿದೆ. ಶಿಲ್ಪದ ಮೇಲ್ಭಾಗದಲ್ಲಿ ಸೂರ್ಯ, ಚಂದ್ರರ ಚಿತ್ರಗಳಿವೆ. ಮೇಲೆ ಲಿಂಗ ಇದೆ. ಮೂರ್ತಿಯ ಸುತ್ತಲೂ ಚೌಕಟ್ಟಿನ ಕಟ್ಟು ಇರುತ್ತದೆ. ಕೆಳಗಿನ ಭಾಗವು ನಾಶವಾಗಿದೆ.

**ಗಜಲಕ್ಷ್ಮೀ ಲಾಂಚನ:** ಈ ಶಿಲ್ಪವು ಊರಿನ ಮಾರುತೇಶ್ವರ ದೇವಾಲಯದ ಪೌಳಿಯಲ್ಲಿದೆ. ಇದು ಕರಿ ಕಲ್ಲಿನಿಂದ ಕೆತ್ತಲಾಗಿದೆ. ಯಾವುದೋ ದೇವಾಲಯದ ಗರ್ಭಗುಡಿಯ ತೋರಣವಾಗಿರುತ್ತದೆ.

ಜಟ್ಟಂಗೇಶ್ವರ ದೇವಾಲಯವು ಊರಿನ ನೈರುತ್ಯ ಭಾಗದಲ್ಲಿದೆ. ಗುಡಿಯ ಸುತ್ತಲು ಸಮಾಧಿಕಲ್ಲುಗಳು ಅಡಿಪಾಯದಿಂದ ಕೂಡಿದೆ, ಗರ್ಭಗುಡಿಯಲ್ಲಿ ಜಟ್ಟಂಗೇಶ್ವರ ದೇವರ ಗದ್ದುಗೆ ಇದೆ ಎದುರುಗಡೆ ಪಾದುಕೆಗಳು ಇವೆ. ಈ ದೇವಾಲಯವು ಕುರುಬ ಸಮುದಾಯಕ್ಕೆ ಸಂಬಂಧಿಸಿದೆ.

**ಬ್ರಿಟೀಷ್ ನಿರ್ಮಿಸಿದ ಬಾವಿ:** ಈ ಬಾವಿಯು ಉತ್ತರ ಈಶಾನ್ಯ ದಿಕ್ಕಿನ ನಡುವೆ ಇದೆ ೧೯೩೨ರಲ್ಲಿ ಬ್ರಿಟೀಷ್ ಅಧಿಕಾರಿಗಳು ಈ ಊರಿನ Mineral Water ಗುರುತಿಸಿ ಈ ಬಾವಿಯನ್ನು ನಿರ್ಮಿಸಿದ್ದಾರೆ. ಇದರ ಮೇಲೆ ಅವರ ಲಿಪಿಯು ಸಹ ಇದೆ. ಅದರಲ್ಲಿ ಈ ರೀತಿ ಬರೆದಿದ್ದಾರೆ ಅಸ್ಪೃಷ್ಯರು ಸಹಿತ ಸರ್ವ ಜಾತಿಯ ಜನರು ಈ ಬಾವಿಯ ನೀರನ್ನು ಉಪಯೋಗಿಸಬೇಕೆಂದು ಬರೆದಿದ್ದಾರೆ.

[ಕ್ಷೇತ್ರ ಕಾರ್ಯದಲ್ಲಿ ಸಹಕರಿಸಿದ ರಮೇಶ. ಲ. ಹೊನ್ನಳ್ಳಿ, ಬಸಲಿಂಗಯ್ಯ. ಹಿರೇಮಠ, ನಿ.ಶಿ., ಆರ್.ವೈ. ಸಾಗರ, ಗೋಲಪ್ಪಗೌಡ. ಪಾಟೀಲ್, ದಶವಂತ ಹನಮಂತರಾಯ ಶಿರೂರ, ಎ.ಡಿ. ಗೋನಾಳ ಹಾಗೂ ಶಿಕ್ಷಕ ವೃಂದ ಮತ್ತು ಮಕ್ಕಳು ಇವರಿಗೆ ಕೃತಜ್ಞತೆಗಳು.]



೧೦೪

# ಸುರಪುರ ಸಂಸ್ಥಾನದ ಸೇವಾವರ್ಗದವರು

**ಅಮರೇಶ ಯತಗಲ್***

**ಯಾ**ದಗಿರಿ ಜಿಲ್ಲೆಯ ಸುರಪುರ ಸಂಸ್ಥಾನವು ಕೃಷ್ಣಾ ಹಾಗೂ ಭೀಮಾನದಿಯ ಮಧ್ಯದಲ್ಲಿದೆ. ಇಲ್ಲಿ ಕ್ರಿ.ಶ. ೧೬೩೬ರಿಂದ ೧೯೪೮ರವರೆಗೆ ೧೨ ಜನ ನಾಯಕ ಅರಸರು ಆಳ್ವಿಕೆಯನ್ನು ಮಾಡಿದ್ದಾರೆ. ಇಲ್ಲಿಯವರೆಗೆ ಈ ಸಂಸ್ಥಾನದ ರಾಜಕೀಯ ಇತಿಹಾಸದ ಕುರಿತು ಒಂದಿಷ್ಟು ಅಧ್ಯಯನಗಳು ನಡೆದಿವೆ. ಸಂಶೋಧನ ಕೃತಿಗಳೂ ಹೊರಬಂದಿವೆ. ಬಹುತೇಕ ಕೃತಿಗಳು ಈ ಸಂಸ್ಥಾನವನ್ನಾಳಿದ ಅರಸರು ಹಾಗೂ ಅವರ ಕುಟುಂಬವರ್ಗದ ಕುರಿತಾಗಿಯೇ ವಿವರಣೆಯನ್ನು ನೀಡುತ್ತವೆ. ಆದರೆ ಈ ಮನೆತನದ ಏಳಿಗೆಗಾಗಿ ಹಗಲಿರುಳು ಶ್ರಮಿಸಿದ ಸೇವಾವರ್ಗದವರ ಚರಿತ್ರೆಯ ಕೊರತೆಯು ಎದ್ದುಕಾಣುತ್ತದೆ.

ಹೀಗಾಗಿ ಸುರಪುರ ಸಂಸ್ಥಾನದ ಸೇವಾವರ್ಗದವರ ಕುರಿತಾದ ಸಂಶೋಧನೆಯ ಅಗತ್ಯತೆ ಇದೆ. ಈ ಸಂಸ್ಥಾನಕ್ಕೆ ಸಂಬಂಧಿಸಿದ ಕೆಲವು ಕೃತಿಗಳನ್ನು ಗಮನಿಸಿದಾಗ, ಸೇವಾವರ್ಗದವರ ಹೆಸರುಗಳು ಅಲ್ಲಲ್ಲಿ ಪ್ರಸ್ತಾಪಿಸಲ್ಪಟ್ಟಿವೆ. ಆದರೆ ಇವರ ಕಾರ್ಯಗಳ ಕುರಿತಾಗಿ ವಿವರಣೆಯಾಗಲಿ, ಈ ಮನೆತನದ ಏಳಿಗೆಯಲ್ಲಿ ಇವರ ಪಾತ್ರ ಗೌಣವಾಗಿರುವುದನ್ನು ಕಾಣಬಹುದು. ಈ ಕುರಿತಾಗಿ ಕ್ಷೇತ್ರಕಾರ್ಯದ ಮೂಲಕ ಸೇವಾವರ್ಗದ ಕುಟುಂಬಗಳ ವಂಶಸ್ಥರನ್ನು ಗುರುತಿಸಿ, ಸಂದರ್ಶಿಸಲಾಗಿದೆ. ಅಲ್ಲದೆ ಕೆಲವು ಸೇವಾವರ್ಗದವರಿಗೆ ಭೂಮಿಯನ್ನು ಉಂಬಳಿಯಾಗಿ ನೀಡಿರುವ ದಾಖಲೆಗಳ ಮೂಲಕವೂ ಮಾಹಿತಿಗಳನ್ನು ಸಂಗ್ರಹಿಸಿ ವಸ್ತುನಿಷ್ಠವಾಗಿ ವಿಶ್ಲೇಷಣೆಗೊಳಪಡಿಸಲಾಗಿದೆ.

ಸುರಪುರ ಸಂಸ್ಥಾನದ ಸೇವಾವರ್ಗದಲ್ಲಿ ಉನ್ನತ ಹುದ್ದೆಗಳಲ್ಲಿರುವ ಸೇವಾವರ್ಗದವರು ಮತ್ತು ಕೆಳಹಂತದ ಸೇವಾವರ್ಗದವರೆಂದು ವರ್ಗೀಕರಿಸಬಹುದು. ಅರಸರು ಅರಮನೆಯಲ್ಲಿ ಅನೇಕ ಸಲ ಸಭೆ ಸೇರುವ ಸಂದರ್ಭಗಳಿರುತ್ತಿದ್ದವು. ಆಗ ಅಲ್ಲಿಯ ವತನದಾರರೂ ಭಾಗವಹಿಸಿರುತ್ತಿದ್ದರು. ಇವರು ಈ ಸಂಸ್ಥಾನದ ಸೇವಾರ್ಗದವರೇ ಆಗಿದ್ದರು. ಸಭೆ ನಡೆದ ಸಂದರ್ಭದಲ್ಲಿ ಇವರು ಅರಸನ ಬಲಭಾಗದಲ್ಲಿ ಆಸೀನರಾಗಿರಬೇಕಾಗಿತ್ತು. ಅವರುಗಳಲ್ಲಿ ದಖನಿಯರು (ಗಲ್ಫಾಡ), ಅಂದರೆ ಇವರು ಮುಸಲ್ಮಾನ ಸರದಾರರಾಗಿದ್ದರು. ಸದರಬಾರಗೀರ ಎನ್ನುವವರು ಪೇಶ್ವೆಗಳ ಅರಸು ವಂಶಸ್ಥರನ್ನು ರಕ್ಷಿಸುತ್ತಿದ್ದರು. ಹಾವಿನಹಾಳ ಮತ್ತು ವಾಗಿಣಗೇರಿಯ ಇಂದೋಕಾರ, ಸ್ಥಳೀಯ ನ್ಯಾಯಗಳನ್ನು ಬಗೆಹರಿಸುತ್ತಿದ್ದ ಗುರಿಕಾರರು ಹೆಚ್ಚಿನ ಪ್ರಮಾಣದಲ್ಲಿ ಬೇಡ ಜಾತಿಯವರೇ ಆಗಿದ್ದರು. ನಿಷ್ಠಿಗಳು ಎಂಬ ಮಂತ್ರಿಗಳ ಮನೆತನ ಇತ್ತು. ಈ ಮನೆತನದಲ್ಲಿ ನಿಷ್ಠಿ ಕಡ್ಲಪ್ಪ ಮತ್ತು ನಿಷ್ಠಿ ವೀರಪ್ಪ ಎಂಬುವವರು ಪ್ರಮುಖರಾಗಿದ್ದರು. ಸೇನೆಯ ಉನ್ನತ ಹುದ್ದೆಯಲ್ಲಿದ್ದ ಸರ್‌ನೌಬತ್, ಸರಹವಾಲ್ದಾರ, ತೋಪಿನ ಸಿಬ್ಬಂದಿಯ ಅಧಿಕಾರಿಗಳಾದ ಗಾರ್‌ದೇರು, ಇವರಲ್ಲಿ ಹೊಲೆಯರು, ಮಾದಿಗರು ಹಾಗೂ ಕೋಟಗಾರ ಜಾತಿಯವರು ಅಧಿಕ ಸಂಖ್ಯೆಯಲ್ಲಿದ್ದರು. ಅಲ್ಲದೇ ಎಲ್ಲಾ ಸಮತುಗಳ ದೇಸಾಯಿಯರು ಅದರಲ್ಲಿ ಕ್ರಮವಾಗಿ ದೇಸಾಯಿ, ನಾಡಗೌಡ ಮತ್ತು ದೇಶಪಾಂಡೆಯರಿದ್ದರು. ಇವರು ಕಂದಾಯ ಇಲಾಖೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು. ಈ ಸಮತುಗಳಲ್ಲಿ ದೇವಪುರ, ಕಕ್ಕೇರಿ, ಸಗರ, ಕೊಡೇಕಲ್ಲು, ಅಂದೇರಿ, ಜೇವರಗಿ, ಹಿರೇಒಡಗೇರಿ, ಹುಣಸಗಿ, ಮಾಲಗಿತ್ತಿ, ಬೈಚಬಾಳ, ಕೆಂಭಾವಿ, ಮುದ್ರಿಕಿ, ರಸ್ತಾಪುರ, ಸಿರವಾಳ, ಮಳ್ಳಿ ಮತ್ತು ಹೇಮನೂರುಗಳು ಪ್ರಮುಖವಾದವುಗಳಾಗಿದ್ದವು.

ಲೆಕ್ಕಪತ್ರಗಳನ್ನು ನಿರ್ವಹಿಸುವ ಸಬ್‌ನವೀಸ್, ಕುದುರೆಗಳ ತರಬೇತಿ ಮತ್ತು ಮಾರಾಟ ಮಾಡುವ ಹುದ್ದಾರ, ಕೆಲವು ಸುಭಾಗಳ ಅಧಿಕಾರಿಗಳಾದ ಕೋಳಿಹಾಳ ಸುಬೇದಾರ, ಅಮಲಿಹಾಳ ಸುಬೇದಾರ, ತಳ್ಳಳ್ಳಿ ಸುಬೇದಾರ, ದೇವಪುರ ಸುಬೇದಾರ, ಗೋಗಿ ಸುಬೇದಾರ, ಅವರಾದಿ ಸುಬೇದಾರ, ಗೋಫಣಿ ಸುಬೇದಾರ, ತಿಂಥಣಿ ಸುಬೇದಾರ, ದೋರನಹಳ್ಳಿ ಸುಬೇದಾರ, ಕಕ್ಕೇರಿ ಸುಬೇದಾರ ಪ್ರಮುಖವಾದವರು. ಸೈನ್ಯದ ಜವಾಬ್ದಾರಿಯಲ್ಲಿರುವ ಕಕ್ಕೇರಿ ಹವಾಲ್ದಾರ, ಪೊಲೀಸ್ ಹುದ್ದೆಯಲ್ಲಿರುವ ಕಕ್ಕೆರಿ ನಾಯ್ಕೋಡಿ, ಜಟ್ಟಿಯವರು, ಅಲ್ಲದೇ ಕೋಟೆಗಳ ಮುಖ್ಯಸ್ಥರಾದ ವಾಗಿಣಗೇರಿ ಪಡೆಕೋಟೆ

* ಮುಖ್ಯಸ್ಥರು, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬, ಮೊ. ೯೯೭೨೮೪೧೨೫೬

ಕಿಲ್ಲೇದಾರ್, ಪಡಕೋಟೆ ಮರಾಠೆ, ರಾಯಣಪಾಳ್ಳೆಯ ಕಿಲ್ಲೇದಾರ್, ನರಬೋಳಿ ಕಿಲ್ಲೇದಾರ್, ಜಝಾಲಿ ಮಹಲ್ದಾರ್ ಮುಂತಾದವರು ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು.[೧]

ಅರಸನ ಎಡಭಾಗದಲ್ಲಿ ಮಂತ್ರಿಗಳಾದ ಮುಜುಮದಾರ, ದಫ್ತರದಾರ (ಯಾರಾದಿ), ಡಬೇರ್ (ಬ್ರಾಹ್ಮಣ), ಹೇಜೀಬ್ (ಬ್ರಾಹ್ಮಣ), ದಾಖಲೆಗಳನ್ನು ನೋಡಿಕೊಳ್ಳುವ ದಫ್ತರ್‌ಬಂದ್, ಪ್ರಕಾಶವಂಡ, ಹಣಕಾಸು ನೋಡಿಕೊಳ್ಳುವ ಥಾಕಥೋಡಿ, ವಕೀಲ, ಶೆಟ್ಟಿ, ವಸ್ತ್ರಗಳ ಉಸ್ತುವಾರಿ ನೋಡಿಕೊಳ್ಳುವ ಕಪ್ಪಡಮಹಾಲ್, ಧಾನ್ಯ ಇಡುವವರಾದ ತಟ್ಟಿಮಹಾಲ್, ನೀರು ಪೂರೈಸುವವರಾದ ಅಡ್ಡಮಹಾಲ್, ಅಡುಗೆ ಮಾಡುವವರಾದ ಮುಡಬಾಕು, ಅರಮನೆಗೆ ಆಹಾರ ಪೂರೈಕೆ ಮಾಡುವ ಜಮದರಖಾನಿ, ತೋಪಖಾನಿ, ಪಾಗಾ ಖೋಶಿಬಾನಿ, ಎಲ್ಲಾ ಸಮತುಗಳ ಮಾಮಲೆದಾರರು ಪ್ರಮುಖರಾಗಿದ್ದರು. ಅಲ್ಲದೆ ಸುರಪುರದಲ್ಲಿ ೧೪ ಕೇರಿಗಳಿದ್ದವು. ಈ ಕೇರಿಗಳ ಕಾವಲಿಗಾಗಿ ಕಾವಲುಗಾರರಿರುತ್ತಿದ್ದರು. ಅಂದರೆ ನಡುಗೇರಿಯಲ್ಲಿ ३೦೦ ಬೇಡರು, ಗುರಿಕಾರನ ಕೇರಿಯಲ್ಲಿ ೬೦೦ ಬೇಡರು, ಗಂಟಿನಾಯಕನ ಕೇರಿಯಲ್ಲಿ ३೦೦ ಬೇಡರು ಮತ್ತು ३೦೦ ಕೋಟಗಾರರು, ಕರಿಗುಡ್ಡದ ಕೇರಿ, ಹುಲ್ಲಕಲ್ಗೇರಿಯಲ್ಲಿ ೬೦೦ ಕೋಟಗಾರರು, ಡೊಣ್ಣೆಗೌಡನ ಕೇರಿಯಲ್ಲಿ ३೦೦ ಬೇಡರು ಮತ್ತು ೧೦೦ ಕೋಟಗಾರರು (ಹರಿಜನ), ಗುಡಿಹಾಳ ಕೇರಿ, ಹಂಡೇ ವಜೀರರ ಕೇರಿಯಲ್ಲಿ ೫೦೦ ಕುರುಬರು, ಚಿಕ್ಕಗುಡ್ಡದ ಕೇರಿ, ಸರನೌಬತ್ತು ಕೇರಿಯಲ್ಲಿ ೯೦೦ ಬೇಡರು, ರಾಮಪುರ ಕೇರಿಯಲ್ಲಿ ೮೦೦ ಜನ ಬೇಡರು ಮತ್ತು ೬೦೦ ಜನ ಕೋಟಗಾರರು, ಗೋನಾಲ ಕೇರಿಯಲ್ಲಿ ೪೫೦ ಬೇಡರು, ಗಿರಿತಮ್ಮಪ್ಪನ ಕೇರಿ ಮತ್ತು ಹುದ್ದಾರ ಕೇರಿಗಳ ಅಧಿಕಾರಿಗಳು ಹರನೂರು ನಾಯಕ, ಹುಜರೇ ಸೇವಕರು, ಹುಜರತಿಗಳು, ಚೋಪದಾರರು[೨] ಮುಂತಾದವರು ಕಾರ್ಯನಿರ್ವಹಿಸುತ್ತಿದ್ದರು.

ಕೆಲವು ಸೇವೆಯನ್ನು ಮಾಡುವವರು ಹಾಗೂ ಅವರ ಕೆಲಸಗಳ ವಿವರಗಳು ಈ ಕೆಳಗಿನಂತಿವೆ.

**ಚೋಪ(ಬ)ದಾರರು:** ಬಿಳಿಯ ನಿಲುವಂಗಿ, ಬಿಳಿದ ಚೂಡಿದಾರ, ಬಿಳಿಯ ರುಮಾಲುಧರಿಸಿ ಧನುರ್ಧಾರಿಯಂತೆ ಮೈಮೇಲೆ ದಟ್ಟವಾದ ಕೆಂಪು ಬಟ್ಟೆಯನ್ನು ಬಿಗಿದುಕೊಂಡು, ಬೆಳ್ಳಿ ಬೆತ್ತವನ್ನು ಹಿಡಿದುಕೊಂಡು ಬಿರುದಾವಳಿಯನ್ನು ಹೊಗಳುತ್ತಿದ್ದರು. ಈ ಚೋಪದಾರರ ವಂಶಸ್ಥರು ಇಂದು ಸಿರಿವಾಳ, ಸುರಪುರ ಹಾಗೂ ಮುಡಬಾಳ ಗ್ರಾಮದಲ್ಲಿ ವಾಸವಾಗಿದ್ದಾರೆ.[३]

**ಪಾಗಾದವರು:** ಇವರು ಅರಮನೆಯ ಕುದುರೆಲಾಯಗಳನ್ನು ನೋಡಿಕೊಂಡು ಹೋಗುವವರಾಗಿದ್ದಾರೆ. ಅಂದರೆ ಕುದುರೆಗಳ ಲೆಕ್ಕ ವ್ಯವಹಾರ, ಅವುಗಳ ಔಷಧೋಪಚಾರ, ಆಹಾರ, ಕುದುರೆ ಸವಾರಿಯ ಎಲ್ಲಾ ರೀತಿಯ ವ್ಯವಸ್ಥೆ, ಅಲ್ಲದೆ ಅಶ್ವಾರೋಹಿಗಳ ಉಸ್ತುವಾರಿಯನ್ನು ನೋಡಿಕೊಂಡು ಹೋಗುತ್ತಿದ್ದರು. ಇವರ ವಂಶಸ್ಥರುಗಳು ಹುಣಸಗಿ, ರಸ್ತಾಪುರ ಮುಂತಾದೆಡೆಗಳಲ್ಲಿ ವಾಸವಾಗಿದ್ದಾರೆ.[೪]

**ದಂಡಿನವರು:** ಆನೆ, ಕುದುರೆಗಳಿಗೆ ವಿವಿಧ ರೀತಿಯ ತರಬೇತಿಯನ್ನು ನೀಡುವುದಲ್ಲದೆ, ಸವಾರರಿಗೂ ತರಬೇತಿ ನೀಡುವವರಾಗಿದ್ದಾರೆ. ಇವರ ವಂಶಸ್ಥರು ಕೆಂಭಾವಿ, ಸುರಪುರ ಮುಂತಾದೆಡೆಗಳಲ್ಲಿ ವಾಸವಾಗಿದ್ದಾರೆ.[೫]

**ಜಟ್ಟಿಯವರು:** ಸುರಪುರ ಕೆಲವು ಓಣಿಗಳಲ್ಲಿ ಗರಡಿಮನೆಗಳನ್ನು ಆರಂಭಿಸಿ, ತರುಣರಿಗೆ, ಆಸಕ್ತರಿಗೆ ಕುಸ್ತಿ, ಈಜು, ಓಟ, ಗಿಡ–ಮರಗಳನ್ನು ಹತ್ತುವುದು ಮುಂತಾದ ವಿದ್ಯೆಗಳನ್ನು ಕಲಿಸುತ್ತಿದ್ದರು. ಅವರು ಯೋಧರಾಗಲಿಕ್ಕೆ ಬೇಕಾದ ತರಬೇತಿಯನ್ನು ನೀಡುತ್ತಿದ್ದರು.[೬]

**ಹವಾಲ್ದಾರರು:** ಸುರಪುರ ಸಂಸ್ಥಾನದ ವ್ಯಾಪ್ತಿಯಲ್ಲಿ ಅನೇಕ ಕಿಲ್ಲೆಗಳಿದ್ದವು. ಈ ಕಿಲ್ಲೆಗಳಿಗೆ ಸಂಬಂಧಿಸಿದ ಅಧಿಕಾರಿಗಳಲ್ಲಿ ಹವಾಲ್ದಾರರು, ಠಾಣೆದಾರರು, ಕಾರಕೂನರು, ನಾಯಕೋಡಿಗಳು ಪ್ರಮುಖರಾದವರಾಗಿದ್ದರು.[೭] ಕಿಲ್ಲೆಯನ್ನು ರಕ್ಷಿಸುವುದು ಹವಾಲ್ದಾರನದಾಗಿತ್ತು. ಅಲ್ಲದೆ ಸರದೇಸಾಯಿ, ಸರ ಸರದೇಸಾಯಿಗಳೂ ಇರುತ್ತಿದ್ದರು. ಖಾಯಂ ಸೈನ್ಯವು ಕಿಲ್ಲೇದಾರನಲ್ಲಿರುತ್ತಿತ್ತು. ಕರೆದಾಗ ಬರುವ ಸೈನಿಕರು ಸರದೇಸಾಯಿ ಮತ್ತು ಸರ ಸರದೇಸಾಯಿಯಲ್ಲಿರುತ್ತಿದ್ದರು. ಇವರಿಗೆ ಅನೇಕ ಇನಾಮು ಭೂಮಿಗಳನ್ನು, ಅಲ್ಲದೆ ಪ್ರತಿ ಊರಲ್ಲಿ ಚಾವುರಾತಿ ಇನಾಮು ಭೂಮಿಯನ್ನು ನೀಡುತ್ತಿದ್ದರು. ದೇಸಾಯಿ, ಸರದೇಸಾಯಿ. ಸರನಾಡಗೌಡ, ಸರನಾಡ ಕುಲಕರ್ಣಿ ಇವರಿಗೆ ಕೆಲವು ಹಕ್ಕು ಬಾಧ್ಯತೆಯ ಬಾಬುಗಳು ಇರುತ್ತಿದ್ದವು.[೮] ಇವರು ಕಿಲ್ಲೆಯಲ್ಲಿಯ ಯೋಧರುಗಳ ಹಾಗೂ ಅವರ ಕುಟುಂಬದವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು. ಅಲ್ಲದೆ ಅವರಿಗೆ ವಿದ್ಯಾಭ್ಯಾಸದ ವ್ಯವಸ್ಥೆಯನ್ನು ಕಲ್ಪಿಸುತ್ತಿದ್ದರು. ಸುರಪುರ, ಬೈಚಬಾಳ ಮತ್ತು ವಾಗಿಣಗೇರಿಗಳಲ್ಲಿ ಇವರ ವಂಶಸ್ಥರಿದ್ದಾರೆ.[೯]

**ಕಟ್ಟೆಮನೆಯವರು:** ಸುರಪುರ ಸಂಸ್ಥಾನದ ವಿವಿಧ ಹಳ್ಳಿಗಳಲ್ಲಿ ವಾಸವಾಗಿರುವ ಇವರು, ತಮ್ಮ ತಮ್ಮ ಜನಾಂಗದ ವ್ಯಾಜ್ಯಗಳನ್ನು ಬಗೆಹರಿಸಿ ನ್ಯಾಯದಾನವನ್ನು ಮಾಡುತ್ತಿದ್ದರು. ಇವರಲ್ಲಿ ಬೋವಿ, ಮೇದಾರ, ಬೇಡ, ಹರಿಜನ ಮತ್ತು ಗೊಲ್ಲ ಜಾತಿಯವರೂ ಇದ್ದರು. ಕಟ್ಟೆಮನೆಯವರಲ್ಲಿ ವ್ಯಾಜ್ಯ ಬಗೆಹರಿಯದಿದ್ದರೆ ಗುರಿಕಾರನ ಹತ್ತಿರ, ಇಲ್ಲವೆ ಅರಸನ ನೇತೃತ್ವದಲ್ಲಿ ಅರಸನ ಸಿಬ್ಬಂದಿಗಳು ಹಾಗೂ ಅರಸನು ನ್ಯಾಯವನ್ನು ಬಗೆಹರಿಸುತ್ತಿದ್ದನು. ಅರಸನ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತಿತ್ತು.

**ಕೋಠಿಖಾನಿಯವರು:** ಇವರು ಅರಮನೆಯಲ್ಲಿಯ ದವಸ-ಧಾನ್ಯಗಳ ಲೆಕ್ಕಪತ್ರಗಳನ್ನಿಡುವ ಕಾರ್ಯಮಾಡುತ್ತಿದ್ದರು. ಅಲ್ಲದೆ ಈ ದವಸ-ಧಾನ್ಯಗಳನ್ನು ಹಗೆಗಳಲ್ಲಿ ಸುರಕ್ಷಿತವಾಗಿಡುತ್ತಿದ್ದರು. ಹಗೆಗಳೇ ಅಂದಿನ ಗೋದಾಮುಗಳಾಗಿದ್ದವು. ಹಗೆಗಳಲ್ಲಿಯ ದವಸ-ಧಾನ್ಯಗಳನ್ನು ಎರಡು ವರ್ಷಗಳಿಗೊಮ್ಮೆ ಇಲ್ಲವೆ ಕ್ಷಾಮದ ಸಂದರ್ಭದಲ್ಲಿ ಪ್ರಜೆಗಳಿಗೆ ಒದಗಿಸುತ್ತಿದ್ದರು.[೧೦] ಇವರ ವಂಶಸ್ಥರು ಸುರಪುರ ಸುತ್ತಲಿನ ಹಳ್ಳಿಗಳಲ್ಲಿ ವಾಸವಾಗಿದ್ದಾರೆ.

**ಸರ್‌ನೌಬತ್ತಿನವರು:** ಇವರನ್ನು 'ನೌಬತ್‌ಖಾನರು', 'ನೌಬತ್ತು' ಎಂತಲೂ ಕರೆಯುತ್ತಿದ್ದರು. ಸಂಸ್ಥಾನದಲ್ಲಿಯ ಹಬ್ಬ-ಜಾತ್ರೆ-ಉತ್ಸವ ಹಾಗೂ ಇತರೆ ದಿನಗಳಲ್ಲಿ ಮಂಗಲವಾದ್ಯದವರ ಮತ್ತು ವಿವಿಧ ವಾದನಕಾರರ ಜವಾಬ್ದಾರಿ ಇವರದಾಗಿತ್ತು. ಅಂದರೆ ಹಲಗಿ, ಶಹನಾಯಿ, ಡೋಲು, ಕೊಳಲು, ತಬಲಾ, ಹಾರ್ಮೋನಿಯಂ, ಏಕತಾರಿ, ಪುಂಗಿ, ಢಕ್ಕೆ, ಸೀತಾರ, ತಂಬೂರಿ ಮುಂತಾದ ವಾದ್ಯಗಳನ್ನು ನುಡಿಸುವವರ ಉಸ್ತುವಾರಿಯನ್ನು ನಿರ್ವಹಿಸುತ್ತಿದ್ದರು. ಅಲ್ಲದೆ ಸಂಸ್ಥಾನದಲ್ಲಿ ನಡೆಯುವ ಮೆರವಣಿಗೆ, ಜಾತ್ರೆ, ಉತ್ಸವಗಳ ಎಲ್ಲಾ ವ್ಯವಸ್ಥೆಯನ್ನು ಮಾಡುತ್ತಿದ್ದರು. ಸಂಸ್ಥಾನದ ಮಹತ್ವದ ವಿಷಯಗಳನ್ನು ಸಾರ್ವಜನಿಕರಿಗೆ ತಿಳಿಯಪಡಿಸಬೇಕಾದಾಗ ಕಹಳೆ, ಹಲಗಿ ಬಡಿಯುವವರು ಓಣಿಗಳಲ್ಲಿ, ಊರುಗಳಲ್ಲಿ ತಿರುಗಾಡಿ ಕಹಳೆ ಊದುತ್ತ, ಹಲಗಿ ಬಡಿಯುತ್ತ ಸಂಚರಿಸುತ್ತಿದ್ದರು.

**ಗೌಡರು:** ಇದರಲ್ಲಿ ಮಾಲೀಗೌಡರು, ಪೋಲೀಸಗೌಡ, ನಾಡಗೌಡರು ಮತ್ತು ಸರ್‌ನಾಡಗೌಡರು ಪ್ರಮುಖರಾದವರಾಗಿದ್ದರು. ಇವರುಗಳು ಸುರಪುರ ಸಂಸ್ಥಾನದ ಅಧೀನದ ಗ್ರಾಮಗಳ ಮತ್ತು ಹೋಬಳಿಗಳ ಆಡಳಿತ ವ್ಯವಸ್ಥೆಯ ಜೊತೆಗೆ ಜಾತ್ರೆ-ಹಬ್ಬಗಳ ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ಮಾಡುತ್ತಿದ್ದರು. ಊರಲ್ಲಿ ಹೊಡೆದಾಟ, ಬಡಿದಾಟ, ಕಾದಾಟಗಳು ಜರುಗದಂತೆ ನೋಡಿಕೊಳ್ಳುತ್ತಿದ್ದರು. ಶಾಂತಿ-ಸುವ್ಯವಸ್ಥೆಯನ್ನು ಕಾಪಾಡುವುದಲ್ಲದೆ ಜನರಲ್ಲಿ ಜಾಗೃತಿಯನ್ನು ಮೂಡಿಸುತ್ತಿದ್ದರು. ಸುರಪುರ ಸಂಸ್ಥಾನದ ಅನೇಕ ಊರುಗಳಲ್ಲಿ ಇವರು ಇಂದಿಗೂ ವಾಸವಾಗಿದ್ದಾರೆ.

**ಡಬೀರ್-ಹೇಜಿಬ್:** ಇವರು ರಾಯಭಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಸಂಸ್ಥಾನದ ರಾಜಕೀಯ ವ್ಯವಹಾರಗಳು ಇವರಿಗೆ ಸಂಬಂಧಿಸಿದವುಗಳಾಗಿದ್ದವು. ಒಂದು ಮನೆತನದಿಂದ ಇನ್ನೊಂದು ಮನೆತನಕ್ಕೆ ಹಾಗೂ ಸಂಸ್ಥಾನದಲ್ಲಿಯ ವತನದಾರರಿಗೆ ಸಂಸ್ಥಾನದ ಸಂದೇಶಗಳನ್ನು ತಿಳಿಸುತ್ತಾ, ಪ್ರಜೆಗಳನ್ನು ಸಂಸ್ಥಾನದ ಶ್ರೇಯೋಭಿವೃದ್ಧಿಗಾಗಿ ಕೆಲಸ ಮಾಡಿಸುತ್ತಿದ್ದರು.

**ಭೂಕಂದಾಯ ಅಧಿಕಾರಿಗಳು:** ಸುರಪುರ ಸಂಸ್ಥಾನದಲ್ಲಿ ದೇಸಾಯಿ, ಸರ್‌ದೇಸಾಯಿ, ದೇಶಪಾಂಡೆ ಹಾಗೂ ಜಹಗೀರುದಾರರುಗಳು ತಮಗೆ ಒಪ್ಪಿಸಿದ ಕ್ಷೇತ್ರಗಳಲ್ಲಿ ಭೂಕಂದಾಯಗಳನ್ನು ರೈತರಿಂದ ವಸೂಲಿ ಮಾಡಿ ಸಂಸ್ಥಾನದ ಭಂಡಾರಕ್ಕೆ ಸಲ್ಲಿಸುತ್ತಿದ್ದರು. ಸುರಪುರ ಆಡಳಿತದಲ್ಲಿ ಪ್ರತಿಯೊಂದು ಪರಗಣೆ, ಸಮತುಗಳಿಗೆ ದೇಸಾಯಿಗಳು, ನಾಡಗೇರರು (ದೇಶಪಾಂಡೆ), ಮುಲ್ಕಿ ಅಧಿಕಾರಿಗಳು ಇರುತ್ತಿದ್ದರು. ಇವರು ಪರಗಣೆಗೆ ಸಂಬಂಧಿಸಿದ ಭೂಕಂದಾಯವನ್ನು ವಸೂಲಿ ಮಾಡುತ್ತಿದ್ದರು.

**ಚಿತ್ರಗಾರರು:** ಗುಡಿ-ಗೋಪು, ಮಠ-ಮಂದಿರಗಳಲ್ಲಿ ತಮ್ಮ ಕಲೆಯನ್ನು ಪ್ರದರ್ಶಿಸಿ ಜನರಿಂದ ಮತ್ತು ಅರಸರಿಂದ ಅವರ ಅಧೀನದ ಅಧಿಕಾರಿಗಳಿಂದ ಸನ್ಮಾನ-ಬಹುಮಾನಗಳನ್ನು ಪಡೆಯುತ್ತಿದ್ದರು. ಈ ಮನೆತನದವರು ಇಂದು ಸುರಪುರ, ಶಹಪುರ, ಕಲಬುರಗಿ ಹಾಗೂ ಹೈದರಾಬಾದ್‌ಗಳಲ್ಲಿ ನೆಲೆಸಿದ್ದಾರೆ.[೧೧]

**ಗೊಂದಲಿಗರು:** ಇವರು ಸಂಸ್ಥಾನದಲ್ಲಿ ನಡೆಯುವ ಹಬ್ಬ-ಹರಿದಿನ, ಮದುವೆ ಸಮಾರಂಭ ಮತ್ತು ವಿಶೇಷ ದಿನಗಳಲ್ಲಿ ಸಾರ್ವಜನಿಕ ಸ್ಥಳಗಳಲ್ಲಿ ಅಥವಾ ವೈಯಕ್ತಿಕವಾಗಿ ಬೇರೆ ಬೇರೆ ಅಧಿಕಾರಿಗಳ ಮನೆಗೆ ತೆರಳಿ ನೀತಿಕಥೆಗಳನ್ನು ಹೇಳುತ್ತಾ, ಹಾಡುತ್ತ, ಕುಣಿಯುತ್ತ ಪ್ರಜೆಗಳಲ್ಲಿ ತಿಳುವಳಿಕೆಯನ್ನು ಮೂಡಿಸುತ್ತಿದ್ದರು.

**ಬಾಳಸಂತರು:** ಸುರಪುರ ಸಂಸ್ಥಾನದಲ್ಲಿ ಪ್ರತಿದಿನ ಬೆಳಗ್ಗೆ ನಾಲ್ಕು ಗಂಟೆಯಿಂದ ನಿಲುವಂಗಿ ಧರಿಸಿ, ಭುಜದ ಮೇಲೆ ಕೋಲನ್ನಿರಿಸಿ, ಒಂದು ತುದಿಯಲ್ಲಿ ಜೋಳಿಗೆಯನ್ನು ಹಾಕಿಕೊಂಡು ಇನ್ನೊಂದು ತುದಿಯಲ್ಲಿ ಕೈಯನ್ನು ಇಟ್ಟುಕೊಂಡು, ಎರಡನೇ ಕೈಯಿಂದ ಶಂಖವನ್ನು ಊದುತ್ತ ಬೆಳಗಿನ ಏಳರಿಂದ ರಾತ್ರಿ ಎಂಟು ಗಂಟೆಯವರೆಗೆ ಮನೆ-ಮನೆಗೆ ತಿರುಗುತ್ತ

ಪ್ರಜೆಗಳಿಗೆ ಬೇಗನೆ ಏಳಲು ಸೂಚನೆ ಕೊಡುತ್ತಿದ್ದರು. ಅವರ ಮನೆದೇವರ ಹೆಸರಿನಿಂದ 'ಪಾದಕುಂ-ಪಾದಕುಂ' ಎಂದು ದೇವರನಾಮವನ್ನು ಹೇಳಿದ ಮೇಲೆ, ದೀರ್ಘವಾಗಿ ಶಂಖ ಊದುತ್ತಿದ್ದರು. ಇವತ್ತಿಗೂ ಈ ಮನೆತನದ ವಂಶಸ್ಥರು ಶಹಪುರ, ಸುರಪುರ ಭಾಗದಲ್ಲಿ ನೆಲೆಸಿದ್ದಾರೆ.[೧೨]

**ವೇಷಗಾರರು:** ಬಣ್ಣವನ್ನು ಬಡಿದುಕೊಂಡು, ವಿವಿಧ ವೇಷಧಾರಿಗಳಾಗಿ ಒಂದೊಂದು ಗುಂಪಾಗಿಕೊಂಡು ಊರುಗಳಲ್ಲಿ, ಪಟ್ಟಣ, ನಗರಗಳಲ್ಲಿ ದೇವಿಕಥೆ, ರಾಮಾಯಣ, ಮಹಾಭಾರತ ಹಾಗೂ ಕೆಲವು ಐತಿಹಾಸಿಕ ಪ್ರಸಂಗಗಳನ್ನು ಕಿರುನಾಟಕದ ರೂಪದಲ್ಲಿ ಪ್ರದರ್ಶಿಸುತ್ತಿದ್ದರು. ಗಾಯನವಾದನ ಮತ್ತು ನರ್ತನವನ್ನು ಮಾಡಿ ಜನರಿಂದ ಧನ, ಧಾನ್ಯ, ವಸ್ತ್ರಾದಿಗಳನ್ನು ಪಡೆದು ಜೀವನ ಸಾಗಿಸುತ್ತಿದ್ದರು. ಅಲ್ಲದೇ ರಾತ್ರಿ ಸಮಯದಲ್ಲಿ ಗಸ್ತಿ ತಿರುಗುತ್ತಿದ್ದರು. ನಗರಗಳಲ್ಲಿ ತಿರುಗಾಡಿ ಕಳವು, ದರೋಡೆಗಳು ನಡೆಯದಂತೆ ರಕ್ಷಣಾ ಕಾರ್ಯವನ್ನು ನಿರ್ವಹಿಸುತ್ತಿದ್ದರು. ತಮ್ಮ ರಕ್ಷಣೆಗಾಗಿ ಪಿಸ್ತೂಲು, ಬಂದೂಕು, ದೊಣ್ಣೆ-ಜಂಬೆಗಳನ್ನು ಇಟ್ಟುಕೊಳ್ಳುತ್ತಿದ್ದರು. ಆಯುಧಗಳನ್ನು ಇಟ್ಟುಕೊಳ್ಳಲು ಸಂಸ್ಥಾನದಿಂದ ಇವರಿಗೆ ಅನುಮತಿಯನ್ನು ನೀಡಲಾಗಿತ್ತು. ಇವರು ಕೆಲವು ಸಲ ಸಂಸ್ಥಾನದ ಸುದ್ಧಿ ಸಂಗ್ರಹಗಾರರಾಗಿಯೂ ಕೆಲಸ ಮಾಡುತ್ತಿದ್ದರು.

**ನಾಮ ಸೇವಾದವರು:** ಇವರು ಶ್ರೀ ವೈಷ್ಣವ ಬ್ರಾಹ್ಮಣರು. ಪ್ರತಿದಿನವೂ ಅರಮನೆಯಲ್ಲಿ ಅರಸನ ಹಾಗೂ ಅರಸರ ಪರಿವಾರದವರಿಗೆಲ್ಲಾ ನಾಮಗಳನ್ನು ಹಾಕುತ್ತಿದ್ದರು. ಇವರು ನಾಮವನ್ನು ಹಾಕಿದ ಮೇಲೆಯೇ ಅರಸರ ಪರಿವಾದವರು ದೇವರ ಪೂಜೆಮಾಡಿ ನೈವೇದ್ಯ ಅರ್ಪಿಸಿ, ತೀರ್ಥ-ಪ್ರಸಾದ ಸ್ವೀಕರಿಸುತ್ತಿದ್ದರು. ಸಂಸ್ಥಾನದಿಂದ ನಿರ್ಮಿಸಿದ ಸುರಪುರ ನಗರದಲ್ಲಿರುವ ದೇವಸ್ಥಾನಗಳಾದ ಶ್ರೀ ವೇಣುಗೋಪಾಲ, ಶ್ರೀನರಸಿಂಹ ದೇವಸ್ಥಾನ, ಶ್ರೀರಾಮ ದೇವಸ್ಥಾನದ ಅರ್ಚಕರಿಗಾಗಿ ಇವರು ಸೇವೆಸಲ್ಲಿಸುತ್ತಿದ್ದರು. ಹೀಗಾಗಿ ಇವರಿಗೆ ಸುರಪುರ, ಶಹಪುರ ಮತ್ತು ಜೇವರಗಿ ತಾಲ್ಲೂಕಿನ ಜಮೀನುಗಳನ್ನು ಉಂಬಳಿ ಹಾಕಿಕೊಟ್ಟಿದ್ದಾರೆ. ಇಂದಿಗೂ ಈ ಮನೆತನದವರು ಆ ಭೂಮಿಗಳನ್ನು ಉಪಭೋಗಿಸುತ್ತಾರೆ.

**ಶಿಲ್ಪಿಗಳು:** ಕಾಷ್ಠ, ಶಿಲ್ಪ ಮುಂತಾದವುಗಳನ್ನು ತಯಾರಿಸುತ್ತಿದ್ದರಲ್ಲದೇ ಹಬ್ಬ-ಜಾತ್ರೆಗಳಿಗೆ ಉಪಯೋಗಿಸುವ ಆಟಿಕೆಗಳನ್ನೂ, ದೇವಾಲಯಗಳಿಗೆ ಬೇಕಾಗುವ ರಥಗಳನ್ನೂ ನಿರ್ಮಿಸುತ್ತಿದ್ದರು. ಅರಮನೆಯಲ್ಲಿಯ ವಿವಿಧ ಬಗೆಯ ಕಾಷ್ಠ ಮತ್ತು ಶಿಲ್ಪಗಾರಿಕೆಯ ಕೆಲಸಗಳನ್ನೂ ಇವರು ನಿರ್ವಹಿಸುತ್ತಿದ್ದರು.

**ಸಂಗೀತಗಾರರು:** ಸುರಪುರ ಸಂಸ್ಥಾನದ ಮನೆತನದವರಿಗೆ 'ಕಂಠವೀಣೆ' ಮನೆತನದವರೆಂದು ಕರೆಯುತ್ತಾರೆ. ಪ್ರತಿ ಶನಿವಾರ ರಾತ್ರಿ ೯ ರಿಂದ ಬೆಳಗ್ಗೆ ೩ ಗಂಟೆಯುವರೆಗೆ ಹಿಂದೂಸ್ಥಾನಿ ಕರ್ನಾಟಕ ಸಂಗೀತ ಕಾರ್ಯಕ್ರಮವನ್ನು ಅರಮನೆಯ ಎರಡನೆಯ ಮಹಡಿಯಲ್ಲಿ ನೆರವೇರಿಸುತ್ತಿದ್ದರು. ಈ ಮನೆತನದವರು ಇಂದು ಬೇರೆ ಬೇರೆ ರಾಜ್ಯಗಳಲ್ಲಿ ನೆಲೆಸಿದ್ದಾರೆ.

**ದಫ್ತರ್‌ದಾರರು:** ಮುಜುಮದಾರ ಮತ್ತು ಯಾರಾದಿ ಇವರುಗಳು ದಫ್ತರ್‌ದಾರರನ್ನು ನೇಮಕ ಮಾಡುತ್ತಿದ್ದರು. ದಫ್ತರ್‌ದಾರರು ಸಂಸ್ಥಾನದ ಹೊಲ-ಗದ್ದೆ, ತೋಟಗಳಿಗೆ ಸಂಬಂಧಿಸಿದ ಕಾಗದಪತ್ರಗಳನ್ನು ಕಾಯ್ದಿರಿಸುವ ಕಾರ್ಯವನ್ನು ಮಾಡುತ್ತಿದ್ದರು.

**ಸಾತಾನಿಯರು:** ಪೂಜಾರಿಗಳ ಕೈಕೆಗಳಗೆ ಸೇವೆಯನ್ನು ಸಲ್ಲಿಸುತ್ತಿದ್ದರು. ಈ ಮನೆತನದವರು ಇಂದಿಗೂ ಸುರಪುರದಲ್ಲಿ ವಾಸವಾಗಿದ್ದಾರೆ.

**ಸೈನಿಕರು:** ಸಂಸ್ಥಾನದ ಸೈನ್ಯದಲ್ಲಿ ಬೇಡರು, ಕುರುಬರು, ಹೊಲೆಯರು, ರೋಹಿಲರು, ಮಾದಿಗರು, ಮರಾಠರು, ದಖನಿಯರು, ಸಿದ್ದಿಯರು, ಅರಬ್‌ರು ಮತ್ತು ಡೊಣ್ಣೇಗೌಡ್ರು ಮುಂತಾದ ಜಾತಿಜನಾಂಗದವರು ಸೈನ್ಯದ ಸೇವೆಯಲ್ಲಿದ್ದರು. ಸಂಸ್ಥಾನದಲ್ಲಿ ೧೨,೦೦೦ ಸೈನಿಕರು ಯಾವತ್ತು ಯುದ್ಧಕ್ಕೆ ಸನ್ನದ್ಧರಾಗಿರುತ್ತಿದ್ದರು. ಇವರು ಖಾಯಂ ಸೈನಿಕ ವೃತ್ತಿಯಲ್ಲಿದ್ದರು. ಉಳಿದವರು ಸಂಸ್ಥಾನದಿಂದ ಕರೆ ಬಂದಾಗ ಮಾತ್ರ ಯುದ್ಧಕ್ಕೆ ಬರುತ್ತಿದ್ದರು. ಕೋಟಗಾರರು ಎಂಬ ಸೈನಿಕರು ಅರಸನ ಕಮ್ಯಾಂಡೊಗಳಾಗಿದ್ದರು. ಇದೊಂದು ವಿಶಿಷ್ಟವಾದ ಪಡೆಯಾಗಿತ್ತು.[೧೩]

**ಸೇನಾಪತಿಗಳು:** ಇವರ ಮುಖ್ಯವಾದ ಕಾರ್ಯವೆಂದರೆ ಸೈನ್ಯವನ್ನು ಸಂಘಟಿಸುವುದು, ಸೈನಿಕರಿಗೆ ಯುದ್ಧ ತರಬೇತಿ ನೀಡುವುದಾಗಿತ್ತು. ಅಲ್ಲದೆ ಆನೆಸವಾರಿ, ಕುದುರೆಸವಾರಿ, ಕತ್ತಿವರಸೆ, ಉಡಗಳನ್ನು ಬಳಸಿ ಕೋಟೆಯನ್ನು ಹತ್ತುವುದು , ಕವಣಿಗಲ್ಲುಗಳನ್ನು ಬೀಸುವುದು, ಗುಲೇರಿಯಿಂದ ಕಲ್ಲುಗಳನ್ನು ತೂರುವುದು, ಕಠಾರಿ ತಿರುಗಿಸುವುದು, ಪಟೆ ತಿರುಗಿಸುವುದು ಮುಂತಾದ ಯುದ್ಧ ಕೌಶಲ್ಯದ ತರಬೇತಿಯನ್ನು ನೀಡುತ್ತಿದ್ದರು. ಅಲ್ಲದೆ ಸೈನಿಕರ ವಸತಿಯ ವ್ಯವಸ್ಥೆ, ಸೈನಿಕ ಕುಟುಂಬದವರಿಗೆ ದವಸ-ಧಾನ್ಯ ಒದಗಿಸುವುದು, ಸೈನಿಕರ ಕ್ಷೇಮಾಭಿವೃದ್ಧಿ ಕೆಲಸಗಳನ್ನು ಈ ಸೇನಾಪತಿಗಳು ನೋಡಿಕೊಂಡು ಹೋಗುತ್ತಿದ್ದರು.

**ಆಯಗಾರರು:** ಸಮಾಜಕ್ಕೆ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವ ಉತ್ಪನ್ನ ವೃತ್ತಿಯವರಾಗಿದ್ದರು. ನಂತರದಲ್ಲಿ ಇವರ ಕಸುಬು ಕುಲವಾಗಿ ಪರಿಣಮಿಸಿತು. ಇವರುಗಳಲ್ಲಿ ಕಂಬಾರ, ಕುಂಬಾರ, ಬಡಿಗ, ಅಗಸ, ನಾಯ್ಡು, ಬಳೆಗಾರ, ಚಿನಿವಾರ, ಹೂಗಾರ, ಅಕ್ಕಸಾಲಿಗ, ಗಂಧಗಾರ, ಜೋಯಿಸ, ಮಠಪತಿ, ಹೊಲೆಯ, ಮಾದಿಗ, ದಾಸ, ಬ್ರಾಹ್ಮಣ ಮುಂತಾದವರಿದ್ದರು. ಇವರೆಲ್ಲಾ ಪಾರಂಪರ್ಯ ಕುಲವೃತ್ತಿಯವರಾಗಿದ್ದರು. ಸಂಸ್ಥಾನದಾದ್ಯಂತ ಇವರು ನೆಲೆಸಿದ್ದಾರೆ.[೧೪]

**ರಾಜವೈದ್ಯರು:** ಸಂಸ್ಥಾನದಲ್ಲಿ ರಾಜವೈದ್ಯರಿದ್ದರು. ರಾಜವೈದ್ಯರು ರಾಜಪರಿವಾರದವರ ಆರೋಗ್ಯವನ್ನು ನೋಡಿಕೊಳ್ಳುತ್ತಿದ್ದರು. ಇವರಿಗೆ 'ವಾಗಣಗೇರಿ' ಗ್ರಾಮವನ್ನು ಜಹಗೀರಾಗಿ ನೀಡಲಾಗಿದೆ. ಅಲ್ಲದೇ ಪ್ರತಿ ತಿಂಗಳು ಸಂಬಳ ಪಡೆಯುವ ವೈದ್ಯರೂ ಇದ್ದರು. ಇವರುಗಳು ಸೈನಿಕರ ಶುಶ್ರೂಷೆಯನ್ನು ನೋಡಿಕೊಳ್ಳುತ್ತಿದ್ದರು. ನಾಟಿವೈದ್ಯರೂ ಇದ್ದರು. ಇವರು ಗಿಡಮೂಲಿಕೆ ಕೊಡುವವರಾಗಿದ್ದರು. ಈ ರಾಜವೈದ್ಯರುಗಳ ವಂಶಸ್ಥರುಗಳು ಇಂದು ಹೈದರಾಬಾದಿನಲ್ಲಿ ನೆಲೆಸಿದ್ದಾರೆ.

ಸುರಪುರ ಸಂಸ್ಥಾನಿಕರ ಆರಾಧ್ಯದೇವರು ಸುರಪುರದ ಶ್ರೀವೇಣುಗೋಪಾಲಸ್ವಾಮಿ. ಈ ದೇವರ ನಿತ್ಯಸೇವೆಯು ಪ್ರತಿನಿತ್ಯ ಮೂರು ಬಾರಿ ನಡೆಯುತ್ತಿತ್ತು. ಮಧ್ಯಾಹ್ನದ ಸಂದರ್ಭದಲ್ಲಿ ನಡೆಯುವ ಇಜ್ಯಾ ಕಾಲಾರಾಧನೆಯಲ್ಲಿ ಅರ್ಚಕರಿಗೆ ಪರಿಚಾರಕರು ಅಭಿಷೇಕ, ಅರ್ಚನೆ, ಧೂಪದೀಪಾದಿಗಳು, ನೈವೇದ್ಯಗಳು ಮತ್ತು ಬಲಿಹರಣಕ್ಕೆ ನೆರವಾಗುತ್ತಿದ್ದರು. ಅಲ್ಲದೆ ಮಧ್ಯಾಹ್ನ ಮತ್ತು ಸಾಯಂಕಾಲದ ಸಂದರ್ಭದಲ್ಲಿ, ಪೂಜೆಯ ಸಂದರ್ಭದಲ್ಲಿ ನಗಾರಿಯವರು, ನೌಬತ್ತಿನವರು, ತುತ್ತೂರಿಯವರು, ಗೌರಿಗಾಳು, ಸನಾದಿಯವರು ಮತ್ತು ದೀವಟಿಗೆಯವರು ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು. ಜಾಗಟೆ ಬಾರಿಸುವ ಮತ್ತು ಉಸ್ತುವಾರಿ ನೋಡಿಕೊಳ್ಳುವವರು ದೇವರಿಗೆ ತುಲಸಿ ಹಾಗೂ ಉತ್ಸವದ ಸಂದರ್ಭದಲ್ಲಿ ತುಲಸಿಮಾಲೆಗಳನ್ನು ಒದಗಿಸಬೇಕಾಗಿತ್ತು. ಅಲ್ಲದೆ ಇನ್ನೂ ಹದಿನಾರು ಜನ ಸೇವಕರು ಇವರಿಗೆ ಸಹಾಯಕರಾಗಿರುತ್ತಿದ್ದರು.

ಶ್ರೀವೇಣುಗೋಪಾಲಸ್ವಾಮಿ ದೇವಾಲಯದ ಆಡಳಿತ ವ್ಯವಸ್ಥೆಯಲ್ಲಿ ಅನೇಕ ಸೇವಾವರ್ಗದವರಿದ್ದರು. ಮುಜುಮದಾರನು ದೇವಾಲಯದ ಎಲ್ಲಾ ಜಮಾ-ಖರ್ಚುಗಳನ್ನು ನೋಡಿಕೊಳ್ಳುತ್ತಿದ್ದನು. ಸೂರ್ಯಚಂದ್ರ ಪ್ರಭಾವಳಿ ಸೇವಕರು ನಿತ್ಯ ಪ್ರದಕ್ಷಿಣೆ ಕಾಲದಲ್ಲಿ ಪ್ರಭಾವಳಿಗಳನ್ನು ಹಿಡಿದುಕೊಂಡು ಮುಂಭಾಗದಲ್ಲಿರುತ್ತಿದ್ದರು. ನಗಾರಿ ಬಾರಿಸುವವರು, ಜಾಗಟೆ ಹೊಡೆಯುವವರು, ಪಾಳೆಯಂತೆ ತಾಸು ಬಡಿಯುವವರು, ಬೆಳ್ಳಿ ಬೆತ್ತ ಹಿಡಿಯುವವರು, ಚಾಮರ ಹಾಕುವವರು, ಭಜಂತ್ರಿಗಳು, ಕೋಶಿಖಾನಿಯ ಹವಾಲ್ದಾರರು, ಏಕಾಂತ ಸೇವೆ ಮಾಡುವವರು, ತುಲಸಿ ಒದಗಿಸುವವರು, ತೋಮಾಲೆ ಸೇವೆ ಮಾಡುವವರು ಮುಂತಾದವರು ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು. ಶ್ರೀವೇಣುಗೋಪಾಲಸ್ವಾಮಿಯ ಮೆರವಣಿಗೆ ಹೊರಡುವಾಗ ದೊಡ್ಡ ಲಕ್ಷ್ಮಸಾನಿ ಎಂಬ ನೃತ್ಯಗಾರ್ತಿ ಮೆರವಣಿಗೆ ಮುಂದೆ ಇರುತ್ತಿದ್ದಳು. ಈಕೆಗೆ ಕೊಳ್ಳೂರು ಮತ್ತು ಸಿರಿವಾಳದಲ್ಲಿ ೬೦ ಬಿಘೆ ಜಮೀನನ್ನು ಸುರಪುರದ ಅರಸರು ದಾನವಾಗಿ ನೀಡುವುದರೊಂದಿಗೆ ಪ್ರತಿವರ್ಷವೂ ಮಹಾನವಮಿ ಸಂದರ್ಭದಲ್ಲಿ ಎರಡೆರಡು ಸೀರೆ ಕುಪ್ಪಸಗಳನ್ನು ನೀಡುತ್ತಿದ್ದರು. ಅಲ್ಲದೆ ಈಕೆಗೆ ಅರಸನಿಂದಲೇ ಆಮಂತ್ರಣ ಹೋಗುತ್ತಿತ್ತು.[೧೫]

ಅರಸ ಮತ್ತು ಅರಸರ ಪರಿವಾರದವರಿಗಾಗಿ ಜಹಗೀರುದಾರರು, ಪಂಡಿತರು, ವಿವಿಧ ರೀತಿಯ ಸೇವೆಗೈಯ್ಯುವವರೂ ಇರುತ್ತಿದ್ದರು. ರಾಜಪುರೋಹಿತರು, ರಾಜ ಜೋಯಿಸ, ರಾಜಗುರು-ಬುಕ್ಕಪಟ್ಟಣಂ, ರಾಜ್ಯವೈದ್ಯ-ಸಾತಾನಿ ಗುರುಗಳು, ಆಸ್ಥಾನ ಪಂಡಿತರು-ಪೆರುಮಾಳ್, ಕಂಠವೀಣೆ, ಅಷ್ಟಾವಧಾನಿ, ವಿದ್ಯಾಗುರು, ವಿದೂಷಕರು, ಜ್ಯೋತಿಷಿಗಳು, ದೇವಸ್ಥಾನಗಳ ಅರ್ಚಕರು ಮುಂತಾದವರು ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು.

ಅಲ್ಲದೆ ಕೊಡೆಯವರು, ಬಿಜಲಿಯವರು, ನಗಾರಿಯವರು, ಕೊಂಬಿನವರು, ದೀವಟಿಗೆಯವರು, ಕಂಬ ಹರಿಯುವವರು ಇನ್ನೂ ಮುಂತಾದವರು ಸುರಪುರ ಸಂಸ್ಥಾನದಲ್ಲಿ ವಿವಿಧ ರೀತಿಯ ವೃತ್ತಿಗಳನ್ನು ಮಾಡುವುದರ ಮೂಲಕ ಸಂಸ್ಥಾನದ ಏಳಿಗೆಗಾಗಿ ಶ್ರಮಿಸಿದ ಸೇವಾವರ್ಗದವರಾಗಿದ್ದಾರೆ. ಸುರಪುರದ ಅರಸರು ಈ ಸೇವಾವರ್ಗದವರಿಗೆ ಭೂಮಿಯನ್ನು ದಾನವಾಗಿ ನೀಡಿರುವ ಉದಾಹರಣೆಗಳಿವೆ. ಆ ಹೊಲಗಳಿಗೆ ಕೊಡೆಬೋವಿಯ ಹೊಲ, ಲಾವಕ್ಕಿಯ ಹೊಲ, ನಗಾರಿಯ ಹೊಲ, ಕೊಂಬಿನವರ ಹೊಲ, ಕುದುರೆ ಹೊಲ, ಗುಡಿ ಹೊಲ, ಗಿರೆಮ್ಮನ ಹೊಲ, ಅಂಬಲಿ ಹೊಲ, ಪುಂಡಿಪಲ್ಯ ಹೊಲ, ಗರುಡಾದ್ರಿ ಹೊಲ, ಬುಡಬುಡಕೇರ ಹೊಲ, ಚಿಕ್ಕಬೆಂಚಿಯವರ ಹೊಲ, ಕುಂಬಾರಗುಡಿ ಹೊಲ, ಬೆಳ್ಳಿಮರದ ಹೊಲ, ಒಳಕಲ್ಲಿನ ಹೊಲ, ಬೆತ್ತದ ಹೊಲ, ಹಾಡಿನ ಹೊಲ, ತಿರುಪತಿ ಹೊಲ, ದಂಡಿನ ಹೊಲ, ಪಾಗಾದ ಹೊಲ, ಜಟ್ಟಿ ಹೊಲ, ತೋಪಖಾನೆ ಹೊಲ ಮುಂತಾದ ಹೆಸರುಗಳಿಂದ ಕರೆಯುತ್ತಿದ್ದರು. ಈ ಹೆಸರುಗಳ ಹಿಂದೆ ಒಂದೊಂದು ಐತಿಹ್ಯವಿರುವುದನ್ನು ಗಮನಿಸಬಹುದು. ಈ ಕುರಿತಾಗಿ ಸಂಶೋಧನೆಯ ಅಗತ್ಯತೆ ಇದೆ.

ಅಲ್ಲದೆ ಕೆಲವು ಗುರುಗಳಿಗೆ, ಅಧಿಕಾರಿಗಳಿಗೆ, ವಿವಿಧ ಸೇವೆಯಲ್ಲಿದ್ದವರಿಗೆ ನೀಡಿದ ಜಾಗೀರುಗಳು ಇಂತಿವೆ : ಶಂಖವಾರ ಗುರುಗಳಿಗೆ ಭೋಸಗಿ, ಹೊರಟೂರು, ಬುಕ್ಕಪಟ್ಟಣದ ಗುರುಗಳಿಗೆ ಚಿಕ್ಕಹಯ್ಯಾಳ ಮತ್ತು ಹೆಮ್ಮವಡಗಿ, ಪುರುಷಕಾರಿಯವರಿಗೆ ಚಿಕ್ಕನಹಳ್ಳಿ, ರಾಜಪುರೋಹಿತರಿಗೆ ಸಾಂತಪೂರು, ರಾಜಪುರೋಹಿತರ ಕೈಕೆಳಗಿರುವ ಆಶ್ರಿತರಿಗೆ ಶಾರದಹಳ್ಳಿ, ಶ್ರೀಗೋಪಾಲಸ್ವಾಮಿಯ ಪೂಜಾರಿಗೆ ಮಂಡಗಿಹಳ್ಳಿ, ಹದಿನಾಲ್ಕು ಸಮತುಗಳ ನಾಡಗೌಡ, ದೇಸಾಯಿ, ದೇಶಪಾಂಡೆಯವರಿಗೆ ತಲಾ ಒಂದರಂತೆ ೪೨ ಜಾಗೀರಿ ಗ್ರಾಮಗಳನ್ನು ನೀಡಲಾಗಿತ್ತು. ಮುಜುಮದಾರನಿಗೆ ಮರದಕಲ್ಲು, ಕಲ್ಲ ಹಂಗರಗಿ, ಬಸವಂತಪೂರ, ದಫ್ತರದಾರರಿಗೆ ಎಂಕಂಚಿ, ದರಯಾಪುರ, ನೀಲಕೋಡ, ನಿಷ್ಮಿಮಂತ್ರಿಗಳಿಗೆ–ಮುತ್ತುಕೋಡ, ಸರನೌಬತನಿಗೆ–ಎರಡು ಗ್ರಾಮಗಳು, ರಾಜವೈದ್ಯರಿಗೆ ಮಾಗಣಗೇರಿಗಳನ್ನು[೧೬] ನೀಡಲಾಗಿತ್ತು.

ಹೀಗೆ ಸುರಪುರದ ಅರಸರು ದಾನದ ರೂಪದಲ್ಲಿ ಹೊಲಗಳನ್ನು ನೀಡುವುದರ ಮೂಲಕ ವಿವಿಧ ಸೇವಾವರ್ಗದವರಿಗೆ ಸಹಾಯವನ್ನು ಮಾಡಿದ್ದಾರೆ. ಇಂದಿಗೂ ಈ ಹೊಲಗಳನ್ನು ಅನುಭೋಗಿಸುವ ಸೇವಾವರ್ಗದವರು ಸುರಪುರ ಹಾಗೂ ಸುತ್ತಮುತ್ತಲಿನ ಹಳ್ಳಿಗಳಲ್ಲಿ ವಾಸವಾಗಿದ್ದಾರೆ. ಇಂದಿಗೂ ಸಂಸ್ಥಾನದಲ್ಲಿ ಹಾಗೂ ಸುರಪುರದ ಅರಸರ ಮನೆಯಲ್ಲಿ ನಡೆಯುವ ಹಬ್ಬ–ಹರಿದಿನ ಮತ್ತು ಇತರ ಆಚರಣೆಗಳಲ್ಲಿ ಭಾಗವಹಿಸಿ ತಮ್ಮ ಸೇವೆಯನ್ನು ಸಲ್ಲಿಸುತ್ತಿರುವುದು ವಿಶೇಷವಾಗಿದೆ.

ಹೀಗೆ ಇಂಥ ಸೇವಾವರ್ಗದವರ ಕುರಿತಾಗಿಯೇ ಪ್ರತ್ಯೇಕವಾದ ಅಧ್ಯಯನಗಳಾಗುವ ಅಗತ್ಯತೆ ಇದೆ. ಇದು ಇಂದಿನ ಜನ ಇತಿಹಾಸದ ಕುರಿತಾದ ಸಂಶೋಧನೆಗೆ ಯೋಗ್ಯವಾದ ವಿಷಯವಾಗಿದೆ. ಇಂಥವರ ಕುರಿತಾದ ದಾಖಲೆಯಾಗದ, ಬೆಳಕಿಗೆಬಾರದ ಅದೆಷ್ಟೋ ಕಾಗದಪತ್ರಗಳು, ಹಸ್ತಪ್ರತಿಗಳು, ದಾಖಲೆಗಳು ಮೂಲೆಸೇರಿವೆ. ಲಾವಣಿ, ರಿವಾಯತ್ ಪದಗಳು, ಕಥೆಗಳು, ಹೇಳಿಕೆಗಳು, ಜಾನಪದ ಹಾಡುಗಳು ಜನರ ಬಾಯಲ್ಲಿವೆ.[೧೭] ಅವುಗಳನ್ನು ಸಂಗ್ರಹಿಸುವ, ಪ್ರಕಟಿಸುವ ಹಾಗೂ ವಿಶ್ಲೇಷಿಸುವ ಕಾರ್ಯವಾಗಬೇಕಿದೆ. ಹೀಗೆ ಇಂಥ ನಿರ್ಲಕ್ಷ್ಯಿತ ವಿಷಯಗಳ ಕುರಿತು ಸಂಶೋಧನೆಗಳಾಗುವ ಅವಶ್ಯಕತೆಯೂ ಇದೆ.



## ಅಡಿಟಿಪ್ಪಣಿಗಳು

೧. ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನ ಇತಿಹಾಸ, ಆರ್. ಸಿದ್ಧಯ್ಯ, ಬೆಂಗಳೂರು, ೧೯೭೭, ಪುಟ–೧೨೨ ಮತ್ತು ೧೨೩.
೨. ಅದೇ, ಪುಟ ೧೨೩.
೩. ಹರಿರಾವ ಆದವಾನಿ ಕುಲಕರ್ಣಿ, ಸುರಪುರ ಇವರ ಹೇಳಿಕೆಯಿಂದ.
೪. ಜೆ. ಅಗಸ್ಟೀನ್, ಖ್ಯಾತ ನ್ಯಾಯವಾದಿಗಳು ಹಾಗೂ ಬರಹಗಾರರು, ಸುರಪುರ ಇವರ ಹೇಳಿಕೆಯಿಂದ.
೫. ರಾಜಾ ಮದನಗೋಪಾಲನಾಯಕ, ಅರಸು ವಂಶಸ್ಥರು, ಸುರಪುರ ಇವರ ಹೇಳಿಕೆಯಿಂದ.
೬. ಎ. ಕೃಷ್ಣ, ಸಾಹಿತಿಗಳು, ಸುರಪುರ ಇವರ ಹೇಳಿಕೆಯಿಂದ.
೭. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪುಟ ೩೫.
೮. ಅದೇ, ಪುಟ ೩೫ ಮತ್ತು ೩೬.
೯. ಪ್ರಕಾಶಚಂದ ತಾರಾಚಂದ ಜೈನ್, ಸುರಪುರ ಇವರ ಹೇಳಿಕೆಯಿಂದ.
೧೦. ಹರಿರಾವ ಆದವಾನಿ ಕುಲಕರ್ಣಿ, ಸುರಪುರ ಇವರ ಹೇಳಿಕೆಯಿಂದ.
೧೧. ಭಾಸ್ಕರ್‌ರಾವ್ ಮುಡಬೂಳ, ಖ್ಯಾತ ನ್ಯಾಯವಾದಿಗಳು ಹಾಗೂ ಸಂಶೋಧಕರು, ಶಹಪುರ ಇವರ ಹೇಳಿಕೆಯಿಂದ.
೧೨. ರಾಜಾ ವಾಸವನಾಯಕ, ಅರಸುವಂಶಸ್ಥರು, ಸುರಪುರ ಇವರ ಹೇಳಿಕೆಯಿಂದ.
೧೩. ಡಾ. ಅಮರೇಶ ಯತಗಲ್, ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು, ಪಲ್ಲವಿ ಪಬ್ಲಿಕೇಷನ್, ಕಸಬಾ ಲಿಂಗಸೂಗೂರು, ೨೦೧೮, ಪುಟ ೧೬೮
೧೪. ಪಾಂಡುರಂಗ ಚಿನ್ನಾಕಾರ, ವಿಶ್ರಾಂತ ಶಿಕ್ಷಕರು, ಸುರಪುರ ಇವರ ಹೇಳಿಕೆಯಿಂದ.
೧೫. ಬಿ. ಕೃಷ್ಣಮಾಚಾರ್ಯ, ಮರೆಯಲಾಗದ ಸುರಪುರ ರಾಜರ ಚರಿತ್ರೆ, ಶ್ರೀಮತಿ ಆರ್. ಪಿ. ಜೈನ್ ಪ್ರಕಾಶನ, ಸುರಪುರ, ೨೦೦೩, ಪುಟ ೫೮ ಮತ್ತು ೫೯.
೧೬. ಕಪಟರಾಳ ಕೃಷ್ಣರಾವ್, ಪೂರ್ವೋಕ್ತ, ಪುಟ ೧೦೭.
೧೭. ಡಾ. ಅಮರೇಶ ಯತಗಲ್ (ಸಂ.), ಸುರಪುರ ಸಂಸ್ಥಾನದ ದಾಖಲೆಗಳು–ಸಂಪುಟ : ಒಂದು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೧೧, ಪುಟ XLVI.

# ಚಿತ್ರದುರ್ಗದಲ್ಲಿ ಟಿಪ್ಪುಸುಲ್ತಾನರ ಕಾಲದ ಭೂಹಿಡುವಳಿ

ಎಚ್.ಈ. ಬಸವರಾಜಪ್ಪ*

**ಚಿ**ತ್ರದುರ್ಗ ಪ್ರದೇಶದಲ್ಲಿ ಪಾಳೆಯಗಾರರ ಕಾಲದ ಭೂಹಿಡುವಳಿ ವ್ಯವಸ್ಥೆ ಹೈದರಾಲಿಯ ಕಾಲದಲ್ಲಿಯೂ ಮುಂದುವರೆಯುತ್ತದೆ. ಆದರೆ ಟಿಪ್ಪುಸುಲ್ತಾನನ ಕಾಲದಲ್ಲಿ ಈ ಪ್ರದೇಶದಲ್ಲಿ ಕೆಲವು ಬದಲಾವಣೆಗಳು ಆಗುತ್ತವೆ. ಟಿಪ್ಪುವಿನ ಆಡಳಿತಾವಧಿಯಲ್ಲಿಯೂ ಈ ಪ್ರದೇಶದಲ್ಲಿ ತರಿ, ಖುಷ್ಕಿ, ಭಾಗಾಯ್ತು ಭೂಹಿಡುವಳಿಗಳಿದ್ದವು. ಟಿಪ್ಪುಸುಲ್ತಾನ ಮೈಸೂರು ಸಂಸ್ಥಾನದಾದ್ಯಂತ ಒಂದೇ ರೀತಿಯಾದ ಕಂದಾಯ ವ್ಯವಸ್ಥೆಯನ್ನು ಜಾರಿಗೆ ತಂದನು. ಆದರಿಂದ ಚಿತ್ರದುರ್ಗ ಪ್ರದೇಶದಲ್ಲಿಯೂ ಕೆಲವು ಬದಲಾವಣೆಗಳನ್ನು ಮಾಡಲಾಯಿತು. ಕಂದಾಯ ಭೂಹಿಡುವಳಿಗಳನ್ನು ಅಳತೆ ಮಾಡುವುದರೊಂದಿಗೆ ನೀರಾವರಿಗೊಳಪಟ್ಟ ಭೂ ಹಿಡುವಳಿಗಳಿಗೆ ೧೦ರಿಂದ ೩೦ ಪಗೋಡ ಕಂದಾಯವನ್ನು ಏರಲಾಗಿತ್ತು. ಕ್ಷಾಮ, ಬರಗಾಲದಂತಹ ಪ್ರಾಕೃತಿಕ ವಿಕೋಪ ಸಂದರ್ಭಗಳಲ್ಲಿ ಒಂದು ನೇಗಿಲು ಹಿಡುವಳಿದಾರರುಗಳಿಗೆ ಕಂದಾಯ ರಿಯಾಯಿತಿ ನೀಡುವ ವ್ಯವಸ್ಥೆ ಜಾರಿಯಲ್ಲಿತ್ತು.[೧]

ಇದೇ ರೀತಿಯಾಗಿ ಟಿಪ್ಪುಸುಲ್ತಾನನು ಕಂದಾಯ ಆಡಳಿತವನ್ನು ಸುಧಾರಣೆ ಮಾಡಲು ಹಳೆಯ ಕಾಯ್ದೆಗಳನ್ನು ತಿರಸ್ಕರಿಸಿದನು. ಹೊಸ ವ್ಯವಸ್ಥೆಯನ್ನು ತನ್ನ ರಾಜ್ಯದಾದ್ಯಂತ ಜಾರಿಗೆ ತಂದನು. ಅವನು ಮೊಗಲ್ ಆಡಳಿತ ಹಾಗೂ ಪಾಶ್ಚಿಮಾತ್ಯ ರಾಜಕೀಯದಿಂದ ಪ್ರಭಾವಿತನಾಗಿದ್ದನು. ದೊಡ್‌ವೆಲ್ ಹೇಳುವಂತೆ ಭಾರತೀಯರಲ್ಲಿಯೇ ಪ್ರಥಮವಾಗಿ ಪಾಶ್ಚಿಮಾತ್ಯ ಆಡಳಿತ ವ್ಯವಸ್ಥೆಯನ್ನು ಟಿಪ್ಪು ಅನುಸರಿಸಿದನು ಎಂದಿದ್ದಾನೆ.[೨]

ಟಿಪ್ಪುಸುಲ್ತಾನ್ ತನ್ನ ರಾಜ್ಯವನ್ನು ಏಳು ಅಸಫಿ ತುಕ್ರಿಗಳಾಗಿ ವಿಂಗಡಿಸಿದ್ದನು. ಅದರಲ್ಲಿ ಚಿತ್ರದುರ್ಗವೂ ಒಂದು ಅಸಫಿ ತುಕ್ರಿಯಾಗಿತ್ತು. ಅವು ವಿಶಾಲವಾದ ಪ್ರದೇಶಗಳಾಗಿದ್ದರಿಂದ ಆಡಳಿತ ನಡೆಸಲು ನೆರವಾಗಲೆಂದು ಭಾವಿಸಿ ೧೭೮೪ರಲ್ಲಿ ಅವುಗಳನ್ನು ಒಂಭತ್ತಕ್ಕೆ ಹೆಚ್ಚಿಸಿದನು. ಎರಡು ವರ್ಷಗಳ ನಂತರ ಅವುಗಳನ್ನು ಪದಿನೇಳಕ್ಕೇರಿಸಿದನು. ೧೭೯೪ರಲ್ಲಿ ಇಂಗ್ಲೀಷರೊಡನೆ ಯುದ್ಧ ಕೊನೆಗೊಳಿಸಿದ ಮೇಲೆ ತನ್ನ ರಾಜ್ಯದ ಪ್ರಾಂತ್ಯ ಗಡಿಗಳನ್ನು ಪುನರ್ ವಿಂಗಡಿಸಿದಾಗ, ಅವು ೩೭ ಅಸಫಿ ತುಕ್ರಿಗಳಾಗಿಯು ಮತ್ತು ೧೦೩೪ ಅಮಲ್ದಾರಿ ತುಕ್ರಿಗಳಾಗಿಯೂ ವಿಭಾಗಿಸಿದ್ದನು.[೩] ಹೀಗಾಗಿ ಈ ಬದಲಾವಣೆಯಿಂದ ಸುಗಮವಾದ ಆಡಳಿತಕ್ಕೆ ಹಲವು ಸಂದರ್ಭದಲ್ಲಿ ಅಡ್ಡಿಯಾಗುತ್ತಿತ್ತು. ಆದರೆ ಚಿತ್ರದುರ್ಗ ಪ್ರದೇಶವು ಹೈದರ ಮತ್ತು ಟಿಪ್ಪು ಕಾಲದಲ್ಲಿ ಒಂದೇ ಆಡಳಿತ ಘಟಕವಾಗಿತ್ತು.

ಟಿಪ್ಪು ಕಾಲದಲ್ಲಿ ಕಂದಾಯ ಸಂಗ್ರಹಿಸುವ ದೃಷ್ಟಿಯಿಂದ ಇಡೀ ರಾಜ್ಯವನ್ನು ಐದು ಸಾವಿರ ಪಗೋಡ ವರಮಾನ ಕೊಡುವ ಸಣ್ಣ ಘಟಕಗಳನ್ನಾಗಿ ವಿಭಾಗಿಸಲಾಗಿತ್ತು. ಅವುಗಳನ್ನು ತುಕಡಿ ಎಂದು ಕರೆಯಲಾಗಿತ್ತು. ಪ್ರತಿಯೊಂದು ತುಕಡಿಯೂ ಒಬ್ಬ ಅಮೀಲನ ಕೈಕೆಗಿತ್ತು. ಒಬ್ಬ ಶಿರಸ್ತೇದಾರ, ಮೂವರು ಗುಮಾಸ್ತರು, ಒಬ್ಬ ತರಫ್‌ದಾರ, ಒಬ್ಬ ಸರಫ್, ಒಬ್ಬ ಮುನ್ಷಿ, ಒಬ್ಬ ಗೊಲ್ಲ, ಆರು ಜನ ಸಹಾಯಕರು ಪ್ರತಿಯೊಂದು ತುಕಡಿಯಲ್ಲಿಯೂ ಇರುತ್ತಿದ್ದರು.[೪] ಇಪ್ಪತ್ತು ಅಥವಾ ಮೂವತ್ತು ತುಕಡಿಗಳಿಗೆ ಆಸಫ್ ಕಛೇರಿಯನ್ನು ಸೂಕ್ತ ಸಿಬ್ಬಂದಿಯೊಂದಿಗೆ ಸ್ಥಾಪಿಸಲಾಗಿತ್ತು. ಇದು ಇಂದಿನ ಜಿಲ್ಲೆಯನ್ನು ಹೋಲುತ್ತಿತ್ತು. ಮೊದಲ ಮತ್ತು ಎರಡನೇ ಅಸಿಫ್ ಕಛೇರಿಯಲ್ಲಿ ಎರಡು ಜನ ಶಿರಸ್ತೇದಾರ ಎರಡು ಜನ ಗುಮಾಸ್ತರು, ಇವರ ಜೊತೆಗೆ ನಲವತ್ತು ಜನ ಸೇವಕರು, ಒಬ್ಬ ಸಿರಾಫ್ ಒಬ್ಬ ಮುನ್ಷಿ ಕಛೇರಿಯಲ್ಲಿರುತ್ತಿದ್ದರು. ಇವರ ಜೊತೆಗೆ ಒಬ್ಬ ಪರ್ಷಿಯನ್ ಶಿರಸ್ತೆದಾರ ಮತ್ತು ಕೆಲವು ಗುಮಾಸ್ತರು ಪರ್ಶಿಯನ್ ಭಾಷೆಯಲ್ಲಿ ಲೆಕ್ಕ ಪತ್ರವನ್ನಿಡುತ್ತಿದ್ದರು. ಸಾದಿಕ್ ಆಸಫ್ ಕಛೇರಿಯ ಅಧ್ಯಕ್ಷನಾಗಿದ್ದನು. ಯಾವುದೇ ಅವಶ್ಯವಾದ ಕಾಯ್ದೆ ಜಾರಿಗೆ ಬಂದಾಗ ಅದರ ಕೆಳಗೆ ಟಿಪ್ಪುವಿನ ಸಹಿ ಮತ್ತು ಮುದ್ರೆ ಇರುತ್ತಿತ್ತು. ಟಿಪ್ಪುಕಾಲದ ಕಂದಾಯ ಇಲಾಖೆಯ ಮುಖ್ಯಸ್ಥನನ್ನು ದಿವಾನ್, ಸಾಹೇಬ ದಿವಾನ್, ಹುಜರ್ ದಿವಾನ್ ಅಥವಾ ಮೀರ್ ಅಸಫ್ ಎಂದು ಕರೆಯುತ್ತಿದ್ದರು. ಇವನು ಟಿಪ್ಪು ಕಾಲದ ಬಹುಮುಖ್ಯವಾದ ಅಧಿಕಾರಿಯಾಗಿದ್ದನು.[೫]

---

* ಕೆ.ಎಲ್.ಇ. ಸಂಸ್ಥೆಯ ಬಸವಪ್ರಭು ಕೋರೆ ಮಹಾವಿದ್ಯಾಲಯ, ಚಿಕ್ಕೋಡಿ, ಮೊ. ೯೪೪೮೦೫೯೯೨೦೪

ಇವನ ಜೊತೆಗೆ ಇತರ ಐದು ಜನ ಅಧಿಕಾರಿಗಳಿದ್ದರು. ಇವರನ್ನೊಳಗೊಂಡ ವ್ಯವಸ್ಥೆಗೆ ಮೀರ್ ಆಸಫ್ ಕಛೇರಿ ಎಂದು ಕರೆಯುತ್ತಿದ್ದರು. ಈ ಇಲಾಖೆಯಲ್ಲಿ ಪ್ರತಿಯೊಬ್ಬ ಅಧಿಕಾರಿಯ ಕೆಳಗೆ ಶಿರಸ್ತೇದಾರರಿದ್ದರು. ಕಂದಾಯದ ಲೆಕ್ಕವನ್ನು ಪರ್ಶಿಯನ್, ಕನ್ನಡ ಮತ್ತು ಮರಾಠಿ ಭಾಷೆಯಲ್ಲಿ ಬರೆಯುತ್ತಿದ್ದರು.

ಟಿಪ್ಪು ಕಾಲದ ಕಂದಾಯ ವ್ಯವಸ್ಥೆಯಲ್ಲಿ ಸುಭೇದಾರ್ ಮತ್ತು ಅಮೀಲರು ತಾಲೂಕಿನ ಕಂದಾಯ ವ್ಯವಸ್ಥೆಯ ಮೇಲ್ವಿಚಾರಣೆಯನ್ನು ವೈಯಕ್ತಿಕವಾಗಿ ನೋಡಿಕೊಳ್ಳುತ್ತಿದ್ದರು. ಹೋಬಳಿಯ ಮುಖ್ಯಸ್ಥನಿಗೆ ಪಾರುಪತ್ತೆ ಎಂದು ಕರೆಯಲಾಗುತ್ತಿತ್ತು. ಸಾಮಾನ್ಯವಾಗಿ ಇವರು ಮುಸ್ಲಿಂ ಸಮುದಾಯದವರಾಗಿದ್ದರು.[೬] ಅವರು ಪ್ರತಿಯೊಂದು ಹಳ್ಳಿಗೂ ಭೇಟ್ಟಿ ನೀಡಿ ಸಾಗುವಳಿಯಾದ ಭೂ ಹಿಡುವಳಿಗಳ ಮತ್ತು ಕೆರೆಗಳ ಬಗ್ಗೆ ಸಮೀಕ್ಷೆ ಮಾಡುತ್ತಿದ್ದರು. ಪಾರುಪತ್ತೆದಾರನು ಗ್ರಾಮದ ಗೌಡ, ಶಾನುಭೋಗರಿಂದ ಕಂದಾಯ ಸಂಗ್ರಹಿಸಿ ಅಮೀಲರ ಕಛೇರಿಗೆ ಸಲ್ಲಿಸುತ್ತಿದ್ದರು. ಟಿಪ್ಪು ಕಾಲದವರೆಗೂ ಈ ಅಧಿಕಾರಿಗಳು ಅನುವಂಶಿಕವಾಗಿ ನೇಮಕಗೊಳ್ಳುತ್ತಿದ್ದರು. ಸಾಮಾನ್ಯವಾಗಿ ಗ್ರಾಮದ ಶಾನುಭೋಗರು ಬ್ರಾಹ್ಮಣರಾಗಿದ್ದರು. ಟಿಪ್ಪು ಈ ಅಧಿಕಾರಿಗಳಿಗೆ ಹಣದ ರೂಪದಲ್ಲಿ ವೇತನ ನೀಡುತ್ತಿದ್ದರು. ಟಿಪ್ಪುವಿನ ಕಾಲದಲ್ಲಿ ಅಮೀಲರು ಮುಸ್ಲಿಂರಾಗಿರುತ್ತಿದ್ದರು.

ಮೊಹಬ್ಬುಲ್ ಹಸನ್ ಅವರು ಟಿಪ್ಪು ಕಾಲದ ಭೂಹಿಡುವಳಿ ಕುರಿತು ವಿವರವಾಗಿ ಅಧ್ಯಯನ ನಡೆಸಿದ್ದಾರೆ. ಅವರು ಗುರುತಿಸಿರುವಂತೆ ಅಮೀಲನು ಜಿಲ್ಲೆಯಲ್ಲಿ ಪ್ರವಾಸ ಮಾಡಿ ಭೂ ಹಿಡುವಳಿದಾರರೊಡನೆ ಮಾಡಿಕೊಂಡಿದ್ದ ತೀರ್ಮಾನಕ್ಕನುಗುಣವಾಗಿ ಕಂದಾಯವನ್ನು ಮೊದಲ ವರ್ಷದಲ್ಲಿ ಇರಲಿಲ್ಲ. ಎರಡನೆಯ ವರುಷ ಸಾಮಾನ್ಯವಾಗಿ ವಿಧಿಸುತ್ತಿದ್ದ ಕಂದಾಯದ ಕಾಲುಭಾಗವನ್ನು ವಸೂಲು ಮಾಡುತ್ತಿದ್ದರು. ಅನಂತರದ ವರುಷದಲ್ಲಿ ನಿರ್ದಿಷ್ಟಪಡಿಸಿದ ಕಂದಾಯವನ್ನು ಕಟ್ಟಬೇಕಾಗಿತ್ತು. ಬೆಳೆಯಾಗದಿದ್ದರೆ ಅಥವಾ ಬೇರೆ ಕಾರಣಗಳಿಂದ ಭೂಹಿಡುವಳಿದಾರರು ಕಂದಾಯವನ್ನು ಕಟ್ಟಬೇಕಾಗಿತ್ತು. ಬೆಳೆಯಾಗದಿದ್ದರೆ ಅಥವಾ ಬೇರೆ ಕಾರಣಗಳಿಂದ ಭೂಹಿಡುವಳಿದಾರರು ಕಂದಾಯವನ್ನು ಕೊಡಲು ಸಾಧ್ಯವಾಗದಿದ್ದರೆ ಅಮೀಲನು ಈ ವಿಷಯವನ್ನು ಟಿಪ್ಪುವಿಗೆ ತಿಳಿಸಬೇಕಾಗಿತ್ತು. ಅಮೀಲರು ಶಿರಸ್ತೆದಾರರು ಮತ್ತು ತರಫ್‌ದಾರರು ಭೂ ಹಿಡುವಳಿದಾರರಿಂದ ಸರಕಾರಕ್ಕೆ ಬರಬೇಕಾದ ಕಂದಾಯವನ್ನಲ್ಲದೇ ಅವರು ಬೇರೆ ಇನ್ನಾವುದೇ ರೀತಿಯಾದ ಆದಾಯವನ್ನು ಪಡೆಯುವಂತಿರಲಿಲ್ಲ. ಗ್ರಾಮಸ್ಥರು ಅಧಿಕಾರಿಗಳ ಬಗ್ಗೆ ದೂರು ಸಲ್ಲಿಸಿದರೆ ಅದನ್ನು ವಿಚಾರಿಸಲಾಗುತ್ತಿತ್ತು.[೭]

ಟಿಪ್ಪು ಗುತ್ತಿಗೆ ನೀಡುವ ಹಳೆಯ ಕೃಷಿ ಪದ್ಧತಿಯನ್ನು ಕೆಲವು ಸಂದರ್ಭಗಳಲ್ಲಿ ಅನುಸರಿಸಿದ್ದನು. ಈ ವೇಳೆಯಲ್ಲಿ ಸರಕಾರಿ ಅಧಿಕಾರಿಗಳು ತಮ್ಮ ಭೂ ಹಿಡುವಳಿಗಳನ್ನು ಸಾಗುವಳಿ ಮಾಡಲು ಗುತ್ತಿಗೆ ಕೊಡುತ್ತಿದ್ದರು.[೮] ಈ ವ್ಯವಸ್ಥೆಯು ಹೆಚ್ಚು ಪ್ರಚಲಿತವಾಗಿರಲಿಲ್ಲ. ಈ ವ್ಯವಸ್ಥೆಯ ಲೋಪದೋಷಗಳನ್ನು ಕಡಿಮೆ ಮಾಡಲು ಆವನು ಕೆಲವು ನಿರ್ಧಾರಗಳನ್ನು ತೆಗೆದುಕೊಂಡನು. ಮುಖ್ಯವಾಗಿ ಸರಕಾರಿ ಅಧಿಕಾರಿಗಳಿಗೆ ಸಾಗುವಳಿ ಹಕ್ಕನ್ನು ಕೊಟ್ಟಿರಲಿಲ್ಲ. ಹಾಗೆಯೇ ಒಬ್ಬ ವ್ಯಕ್ತಿಯ ಸ್ವಂತ ಭೂಮಿ ಒಂದು ಮೌಜ್‌ಗಿಂತ ಹೆಚ್ಚಿಗೆ ಹೊಂದಿರಲು ಅವಕಾಶವಿರಲಿಲ್ಲ. ಈ ಭೂಮಿ ಹಿಡುವಳಿಯನ್ನು ಸಾಗುವಳಿ ಮಾಡುವುದಕ್ಕಿಂತ ಮೊದಲು ಅಲ್ಲಿದ್ದ ಹಳೆಯ ಹಾಗೂ ಹೊಸ ನಿವಾಸಿಗಳ ವಾರ್ಷಿಕ ವರಮಾನದ ವರದಿಯನ್ನು ಸಲ್ಲಿಸಬೇಕಾಗಿತ್ತು. ಅದಕ್ಕನುಗುಣವಾಗಿ ಗುತ್ತಿಗೆಯನ್ನು ನುಗದಿಪಡಿಸಲಾಯಿತು. ರೈತರು ಮತ್ತು ಕಂದಾಯ ಅಧಿಕಾರಿಗಳು ತಮ್ಮ ಕರ್ತವ್ಯದ ಪರಿಮಿತಿಯಲ್ಲಿಯೇ ಕಾರ್ಯನಿರ್ವಹಿಸಬೇಕಾಗಿತ್ತು. ಸುಧಾರಿತ ಸಾಗುವಳಿದಾರರಿಗೆ ಸರಕಾರಿದಿಂದ ಬೆಂಬಲವಿತ್ತು. ಉತ್ತಮ ಸಾಗುವಳಿದಾರರಾಗುವಂತೆ ಅವರಿಗೆ ಬೆಂಬಲ ನೀಡಲಾಗುತ್ತಿತ್ತು.[೯] ಸಾಗುವಳಿ ಪ್ರದೇಶವು ಬೀಳಾಗಿದ್ದರೆ ಉತ್ತಮ ಬೆಳೆ ಬೆಳೆಯುವವರೆಗೂ ಕಂದಾಯ ಸಂಗ್ರಹಿಸುತ್ತಿರಲಿಲ್ಲ. ಆ ಸಾಗುವಳಿ ಭೂಮಿಯ ನಾಲ್ಕನೆಯ ವರ್ಷದಿಂದ ಬರುವ ಬೆಳೆಯನ್ನು ಅನುಸರಿಸಿ ಕಂದಾಯ ಸಂಗ್ರಹಿಸಲಾಗುತ್ತಿತ್ತು.

ಟಿಪ್ಪುವಿನ ಆಡಳಿತದ ಸ್ವಲ್ಪ ಸಮಯದ ನಂತರವೇ ಚಿತ್ರದುರ್ಗ ಪ್ರದೇಶದಲ್ಲಿ ಪ್ರವಾಸ ಮಾಡಿದ ಬುಕಾನನ್ ಭೂಹಿಡುವಳಿ ವ್ಯವಸ್ಥೆ ಮತ್ತು ಕೃಷಿಗೆ ಸಂಬಂಧಿಸಿದ ಅಮೂಲ್ಯವಾದ ಮಾಹಿತಿಯನ್ನು ಸಂಗ್ರಹಿಸಿದ್ದಾನೆ. ಬುಕಾನನ್ ಚಿತ್ರದುರ್ಗ ಪ್ರದೇಶದಲ್ಲಿ ಹೆಚ್ಚಾಗಿ ಕಪ್ಪು ಭೂಮಿಯಿದೆ ಎಂದು ಗುರುತಿಸಿದ್ದಾನೆ. ಆದುದರಿಂದ ಇಲ್ಲಿ ಜೋಳ ಹಾಗೂ ನವಣೆಯನ್ನು ಭಾರಿ ಪ್ರಮಾಣದಲ್ಲಿ ಬೆಳೆಯುತ್ತಿದ್ದರು. ಇವುಗಳ ನಂತರ ಸಜ್ಜೆ ಮತ್ತು ಹತ್ತಿ ಮುಖ್ಯ ಬೆಳೆಗಳಾಗಿದ್ದವು. ಇಂತಹ ಕಪ್ಪು ಭೂಮಿಯೂ ಚಿತ್ರದುರ್ಗ ಪ್ರದೇಶದ ಪೂರ್ವ ಮೈದಾನದಲ್ಲಿ ಹೆಚ್ಚು ಪ್ರದೇಶವನ್ನು ಆಕ್ರಮಿಸಿತು. ಈ ಭಾಗದಲ್ಲಿ ಕಪ್ಪುಮಣ್ಣನ್ನು ಒಳಗೊಂಡ ಎರೆಭೂಮಿಯಿದೆ.[೧೦] ಚಿತ್ರದುರ್ಗ ಪ್ರದೇಶದಲ್ಲಿ ಬಹುತೇಕ ಎಲ್ಲಾ ಭಾಗದಲ್ಲಿಯೂ ಖುಷ್ಕಿ ಸಾಗುವಳಿಯನ್ನು ಹೊಂದಿತ್ತು. ಈ ಭೂಹಿಡುವಳಿಗಳ ವಿಸ್ತಾರವನ್ನು ಉಳುಮೆ ಮಾಡುವ ನೇಗಿಲುಗಳಿಂದ ಗುರುತಿಸಿದ್ದಾನೆ. ರೈತರು ಹೊಂದಿರುವ ಭೂಹಿಡುವಳಿಗಳಲ್ಲಿ ಒಂದು ತುಂಡು ಭೂಮಿಯನ್ನು ಕೃಷಿಗೊಳಪಡಿಸದೆ

ಇದ್ದರೂ ರೆವಿನ್ಯೂ ಅಧಿಕಾರಿಗಳು ಪ್ರಶ್ನಿಸುತ್ತಿದ್ದರು. ಆ ಸಂದರ್ಭದಲ್ಲಿ ಭೂಹಿಡುವಳಿದಾರರು ಸಮರ್ಥನೆ ನೀಡಬೇಕಾಗಿತ್ತು.

ಭೂಹಿಡುವಳಿದಾರರು ಬಳಸುವ ಕಬ್ಬಿಣದ ನೇಗಿಲುಗಳು ಎರಡು ಎತ್ತುಗಳಿಂದ ಹದಿನಾರು ಎತ್ತುಗಳು ಎಳೆಯಬಹುದಾದ ದೊಡ್ಡ ನೇಗಿಲುಗಳಾಗಿದ್ದವು. ಇಂತಹ ನೇಗಿಲಿನ ಕಬ್ಬಿಣದ ಭಾಗಗಳು ಸುಮಾರು ೭೧/೪ ಪೌಂಡ ತೂಕದವು. ಈ ಪ್ರದೇಶದಲ್ಲಿದ್ದ ಮತ್ತೊಂದು ಭಾರಿ ನೇಗಿಲಿನ ಕಬ್ಬಿಣದ ಭಾಗವು ಮೇಲಿನದಕ್ಕಿಂತಲೂ ಅದರ ಎರಡರಷ್ಟು ತೂಕದಾಗಿತ್ತು. ನೇಗಿಲನ್ನು ಎಳೆಯಲು ಇಷ್ಟೊಂದು ಎತ್ತುಗಳನ್ನು ಬಳಸಲು ಇಲ್ಲಿನ ಕಪ್ಪು ಭೂಮಿಯೂ ಕಾರಣವಾಗಿತ್ತು. ಈ ಪ್ರದೇಶದಲ್ಲಿ ಜನರು ಹೆಚ್ಚು ದನಗಳನ್ನು ಸಾಕುತ್ತಿದ್ದರು.[೧೧] ಹಾಗೆಯೇ ಭೂಹಿಡುವಳಿಗಳ ವಿಸ್ತೀರ್ಣದ ಬಗ್ಗೆ ಬುಕಾನನ್ ವಿವರಿಸುತ್ತ ಈ ಪ್ರದೇಶದಲ್ಲಿ ಬಹುಸಾಂಖ್ಯಾತ ರೈತರು ಒಂದೇ ನೇಗಿಲನ್ನು ಹೊಂದಿದ್ದರು. ಮಾಧ್ಯಮ ಮತ್ತು ಶ್ರೀಮಂತ ರೈತರು ಸಾಮಾನ್ಯವಾಗಿ ನಾಲ್ಕು, ಐದು ಅಥವ ಆರು ನೇಗಿಲುಗಳನ್ನು ಹೊಂದಿದ್ದರು. ಇಂತಹ ಭೂಹಿಡುವಳಿದಾರರು ಸ್ಥಳೀಯವಾಗಿ ಶ್ರೀಮಂತರಾಗಿದ್ದರು. ಪ್ರತಿಯೊಂದು ನೇಗಿಲಿನಿಂದ ಒಬ್ಬ ವ್ಯಕ್ತಿ ಎರಡು ಎತ್ತುಗಳ ಸಹಾಯದಿಂದ ಎರಡು ಮಾರು ಪ್ರದೇಶವನ್ನು ಅಥವಾ ಸುಮಾರು ೧೭ ಎಕರೆ ಭೂ ಪ್ರದೇಶವನ್ನು ಕೃಷಿಗೊಳಪಡಿಸುತ್ತಿದ್ದರು ಎಂದಿದ್ದಾನೆ. ಇಂತಹ ರೈತರು ಬಾಡಿಗೆ ಕೂಲಿದಾರರನ್ನು ಬಿತ್ತನೆ ಹಾಗೂ ಸುಗ್ಗಿಯ ಕಾಲದಲ್ಲಿ ಹೊಂದಿರುತ್ತಿದ್ದರು. ಬುಕಾನನ್ ಚಿತ್ರದುರ್ಗ ಜಿಲ್ಲೆಯ ಹಿರಿಯೂರಿನಲ್ಲಿ ಪ್ರವಾಸ ಕೈಗೊಂಡು ಈ ಪ್ರದೇಶದಲ್ಲಿ ಬಿಟ್ಟಿ ದುಡಿಯುವವರು ಅಥವಾ ಗುಲಾಮಗಿರಿಯಾಗಿ ದುಡಿಯುವವರು ಇರಲಿಲ್ಲ, ಆದರೆ ಕೃಷಿ ಕೆಲಸವನ್ನು ಕೂಲಿಯಂತೆ ಮಾಡುತ್ತಿದ್ದರು ಎಂದಿದ್ದಾನೆ.

ಇಲ್ಲಿ ಭೂಹಿಡುವಳಿಯನ್ನು ಮಾರು ಎಂಬ ಪದದ ಮೂಲಕ ಸ್ಥಳೀಯರು ಕರೆಯುತ್ತಿದ್ದರು. ಭೂಹಿಡುವಳಿಯ ವಿಸ್ತಾರವನ್ನು ಗುರುತಿಸಲು ಸಾಮಾನ್ಯವಾಗಿ ಮಾರು ಪದದ ಬಳಕೆ ಇತ್ತು. ಒಂದು ಮಾರುಭೂಮಿಯಲ್ಲಿ ೨೧ ೧/೨ ಗದ್ಯಾಣ ಜೋಳವನ್ನು ಬಿತ್ತುತ್ತಿದ್ದರು. ಮತ್ತೊಂದು ಪದ್ಧತಿಯ ಪ್ರಕಾರ ಮಾರು ಭೂಮಿ ಅಳತೆಯನ್ನು ೧೨೦ ಅಕ್ಕಡಿಗಳಿಂದ ಗುರುತಿಸುತ್ತಿದ್ದರು. ಈ ವ್ಯವಸ್ಥೆ ಚಿತ್ರದುರ್ಗ ಪ್ರದೇಶದ ಹರಿಹರದ ಸುತ್ತಮುತ್ತ ಇದ್ದಿತ್ತು. ಒಂದು ಅಕ್ಕಡಿಯ ಅಂತರ ನಾಲ್ಕು ಸಾಲುಗಳ ನಡುವಿನ ಅಂತರವಾಗಿತ್ತು. ಚಿತ್ರದುರ್ಗ ಪ್ರದೇಶದ ಕೃಷಿ ಭೂಮಿಯನ್ನು ಮೂರು ವಿಧವಾಗಿ ವಿಂಗಡಿಸಲಾಗಿತ್ತು. ಮೊದನೆಯ ಕೃಷಿ ಭೂಮಿಯನ್ನು ಎರೆ ಎಂದು ಕರೆಯುತ್ತಿದ್ದರು.[೧೨] ಎರೆ ಎಂದರೆ ಕಪ್ಪು ಪ್ರದೇಶವನ್ನೊಳಗೊಂಡ ಫಲವತ್ತಾದ ಭೂಮಿ. ಈ ಪ್ರದೇಶದ ಅಂದಿನ ಸ್ಥಳೀಯ ಬೆಲೆ ಒಂದು ಪಗೋಡಕ್ಕೆ ಒಂದು ಮಾರು ಭೂಮಿಯಾಗಿತ್ತು. ಅಥವಾ ಒಂದು ಪೆನ್ನಿಗೆ ಎಂದು ಎಕರೆಯಾಗಿತ್ತು. ಎರಡನೇ ಬಗೆಯ ಭೂಮಿಯನ್ನು ಕೆಂಗಲು ಅಥವಾ ಕೆಂಪು ಭೂಮಿ ಎಂದು ಕರೆಯುತ್ತಿದ್ದರು. ಇದರ ಅಂದಿನ ಒಂದು ಮಾರು ಭೂಮಿಯ ಬೆಲೆ ೩/೪ ಪಗೋಡವಾಗಿತ್ತು ಅಥವಾ ಒಂದು ಎಕರೆಗೆ ೮೧/೨ ಪೆನ್ಸ್ ಆಗಿತ್ತು.[೧೩] ಮೂರನೇ ವಿಧದ ಭೂಮಿಯನ್ನು ಕಲ್ಮರಡಿ ಅಥವಾ ಸಣ್ಣಕಲ್ಲುಗಳಿರುವ ಭೂಮಿಯಾಗಿತ್ತು. ಈ ಭೂಮಿಯ ಅಂದಿನ ಬೆಲೆ ಅರ್ಧ ಪಗೋಡಕ್ಕೆ ಒಂದು ಮಾರು ಭೂಮಿಯಾಗಿತ್ತು. ಅಥವಾ ಐದು ಮೂಕ್ಕಾಲು ಪೆನ್ಸಿಗೆ ಒಂದು ಎಕರೆ ಭೂಮಿಯಾಗಿತ್ತು. ಈ ಮೇಲಿನ ವಿವರಣೆಯನ್ನು ಬುಕಾನನ್ ಸ್ಥಳೀಯ ಗೇಣಿದಾರರಿಂದಲೇ ಪಡೆದಿದ್ದೇನೆ ಎಂದು ವಿವರಿಸಿದ್ದಾನೆ. ಅವನು ಭೂ ಹಿಡುವಳಿಗಳ ಅಧ್ಯಯನ ಮಾಡುತ್ತಿದ್ದಾಗ ಅವನ ಜೊತೆಯಲ್ಲಿ ರೈತರು, ಅಮಲ್ದಾರರು ಮತ್ತು ಶಾನುಭೋಗರು ಇರುತ್ತಿದ್ದರು ಎಂಬುದನ್ನು ತಿಳಿಸುತ್ತಾನೆ. ಈ ತೆರನಾದ ಭೂಮಿಯ ವರ್ಗೀಕರಣದಿಂದ ಅವುಗಳ ಮೇಲೆ ತೆರಿಗೆ ವಿಧಿಸುವುದು ಸುಲಭವಾಗಿತ್ತು.

ಈ ಪ್ರದೇಶದಲ್ಲಿ ಮಳೆ ಬಂದ ಮೇಲೆ ಮಣ್ಣು ಜಿಗುಟಾಗಿ ಗಟ್ಟಿಯಾಗಿರುತ್ತಿತ್ತು. ಇಲ್ಲಿ ಗೊಬ್ಬರವಿಲ್ಲದೆ ಜೋಳ ಅಥವಾ ನವಣೆಯ ಒಂದೊಂದು ಬೆಳೆ ತೆಗೆಯಬಹುದಾಗಿತ್ತು. ಬುಕಾನನ್ ಪ್ರಕಾರ ಈ ಪ್ರದೇಶದಲ್ಲಿ ಭತ್ತ ಬೆಳೆಯುವ ಭೂಮಿಯು ಕಡಿಮೆಯಿತ್ತು. ಈ ಪ್ರದೇಶದಲ್ಲಿ ದಕ್ಷಿಣ ಭಾಗದಲ್ಲಿ ಖುಷ್ಕಿ ಬೆಳೆಯನ್ನು ಬೆಳೆಯಲಾಗುತ್ತಿತ್ತು. ಪೂರ್ವದಲ್ಲಿ ತರಿ ಹಾಗೂ ಖುಷ್ಕಿ ಭೂಮಿಯಿತ್ತು. ಈ ಭೂಮಿಯಲ್ಲಿ ಗೋಧಿ ಹಾಗೂ ಕಬ್ಬು ಬೆಳೆಯುವ ಪ್ರದೇಶಗಳಿದ್ದವು. ನವಣೆ ಬೆಳೆಯುವ ಭೂಮಿಯಲ್ಲಿ ಅದರ ಮಧ್ಯದಲ್ಲಿ ಅಕ್ಕಡಿಯಾಗಿ ಹತ್ತಿ ಬೆಳೆಯುತ್ತಿದ್ದರು. ದೊಡ್ಡ ನೇಗಿಲುಗಳಿಂದ ಉಳುಮೆ ಮಾಡಿದ ಮಾರನೇ ವರುಷ ಬೆಳೆ ತುಂಬಾ ಚೆನ್ನಾಗಿ ಬರುತ್ತಿತ್ತು. ಎಂದಿದ್ದಾನೆ. ಈ ಪ್ರದೇಶದ ಸಾಗುವಳಿಯಾದ ಭೂಮಿಯ ಒಡೆತನವನ್ನು ಎರಡು ರೀತಿಯಲ್ಲಿ ಗುರುತಿಸಿದ್ದಾನೆ. ಅವುಗಳನ್ನು ಇನಾಂ ಭೂಮಿ ಮತ್ತು ಸಾಮಾನ್ಯ ಭೂಮಿ ಎಂಬುದಾಗಿ ಕರೆಯಲಾಗಿತ್ತು. ಸಾಮಾನ್ಯ ಭೂಮಿಯೂ ಮಾರಾಟ ಮಾಡಬಹುದಾದ ಹಕ್ಕನ್ನು ಪಡೆದ್ದಿತ್ತು. ಇನಾಂ ಭೂಮಿಯನ್ನು ಮಾರಾಟ ಮಾಡುವ ಹಕ್ಕು ಇರಲಿಲ್ಲ. ಅದರ ಅನುಭವದಾರರು ಯಾರೂ ಇಲ್ಲದಿದ್ದರೆ ಆ ಭೂಮಿಯು ಸರಕಾರಕ್ಕೆ ಸೇರುತ್ತಿತ್ತು.

**ಟಿಪ್ಪುಕಾಲದ ಕೃಷಿ ಉತ್ಪಾದನೆಯ ಹಂಚಿಕೆ ವಿಧಾನ**

ಬುಕಾನನ್ ಟಿಪ್ಪುವಿನ ಕಾಲದಲ್ಲಿ ಕೃಷಿ ಉತ್ಪನ್ನ ವಿತರಣೆಯ ಕುರಿತು ವಿವರವಾಗಿ ನಿರೂಪಣೆ ನೀಡಿದ್ದಾನೆ. ಸುಗ್ಗಿಯ ವೇಳೆಯಲ್ಲಿ ಸಾಮಾನ್ಯವಾಗಿ ಧಾನ್ಯವನ್ನು ಒಂದು ಖಂಡುಗ ಅಥವಾ ೧೯೨೦ ಸೇರುಗಳ ಒಂದು ರಾಶಿಯನ್ನು ಸುಮಾರಾಗಿ ಹೀಗೆ ಹಂಚಿಕೊಳ್ಳಲಾಗುತ್ತಿತ್ತು ಎನ್ನುವುದನ್ನು ಕೆಳಗಿನಂತೆ ತಿಳಿಸಿದ್ದಾನೆ.[೧೪]

| | |
|---|---|
| ೧ ಸರಕಾರದ ಮಾಪನಕ್ಕೆ | ೧೯೨ ಸೇರುಗಳು |
| ೨ ಅಮೀಲ್‌ರ ಕಛೇರಿ (ಎಣ್ಣೆ ಮತ್ತು ಸಾದಿಲ್ವಾರು ವೆಚ್ಚ) | ೨೪ ಸೇರುಗಳು |
| ೩ ಬ್ರಾಹ್ಮಣರು, ಫಕೀರರು, ಭಿಕ್ಷುಕರು ಇತ್ಯಾದಿ | ೨೪ ಸೇರುಗಳು |
| ೪ ಕಾವಲುಗಾರ | ೬ ಸೇರುಗಳು |
| ೫ ಅಳತೆ ಮಾಡುವವನು | ೬ ಸೇರುಗಳು |
| ೬ ದೇವಾಲಯದ ಪೂಜಾರಿ | ೨೪ ಸೇರುಗಳು |
| **ಗ್ರಾಮದ ಅಧಿಕಾರಿಗಳು** | |
| ೭ ಪಟೇಲ | ೨೪ ಸೇರುಗಳು |
| ೮ ಶ್ಯಾನುಭೋಗ | ೨೪ ಸೇರುಗಳು |
| ೯ ತಳವಾರ | ೨೪ ಸೇರುಗಳು |
| ೧೦ ನೀರಗಂಟಿ | ೨೪ ಸೇರುಗಳು |
| ೧೧ ಕ್ಷೌರಿಕ | ೧೨ ಸೇರುಗಳು |
| ೧೨ ಕಮ್ಮಾರ | ೧೨ ಸೇರುಗಳು |
| ೧೩ ಸರಕಾರದ ಪಾಲು | ೭೬೮ ಸೇರುಗಳು |
| ೧೪ ರೈತನ ಪಾಲು | ೭೬೮ ಸೇರುಗಳು |
| **ಒಟ್ಟು** | **೧೯೨೦ ಸೇರುಗಳು** |

ಈ ವಿಭಾಗ ಕ್ರಮವನ್ನು ಗಮನಿಸಿದರೆ ರೈತನ ಶ್ರಮಕ್ಕೆ ಪ್ರತಿಯಾಗಿ ಉತ್ಪನ್ನದ ಅರ್ಧಕ್ಕಿಂತಲೂ ಕಡಿಮೆ ದೊರೆಯುತ್ತಿತ್ತು. ಸಮಾಜದ ಎಲ್ಲಾ ಸಮುದಾಯಕ್ಕೆ ಆಹಾರ ಒದಗಿಸುವ ಹೊಣೆ ರೈತರದ್ದಾಗಿತ್ತು ಹಾಗೂ ರೈತರನ್ನು ಇತರ ಸಮುದಾಯಗಳು ಅವಲಂಬಿತರಾಗಿ ಬದುಕುತ್ತಿದ್ದರು. ಕೃಷಿ ವ್ಯವಸ್ಥೆಯ ಬೆನ್ನೆಲುಬಾದ ರೈತರ ಪಾತ್ರವು ಬಹುಮಹತ್ವದ್ದಾಗಿತ್ತು ಎಂಬುದನ್ನು ಬುಕಾನನ್ ಗಮನಿಸಿದ್ದಾನೆ.[೧೫]

ಬುಕಾನನ್ ಟಿಪ್ಪು ಕಾಲದ ಕಂದಾಯ ವ್ಯವಸ್ಥೆಯನ್ನು ಕುರಿತು ಬರೆಯುತ್ತ ಭೂಹಿಡುವಳಿದಾರರ ಮೇಲೆ ಟಿಪ್ಪು ಬಹಳ ಕಡಿಮೆ ಕಂದಾಯವನ್ನು ಏರಿದ್ದನು. ಆದರೂ ಅವನ ಅಧಿಕಾರಿಗಳು ಅತ್ಯಂತ ಬಲವಂತದಿಂದ ಕಂದಾಯ ವಸೂಲಿ ಮಾಡುತ್ತಿದ್ದರೆಂದು ದೂರಿದ್ದಾನೆ. ಟಿಪ್ಪು ೧೭೯೨ರ ಮೂರನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಲಾರ್ಡ್‌ಕಾರನ್ವಾಲೀಸನಿಗೆ ಸೋತು ಶ್ರೀರಂಗಪಟ್ಟಣದ ಒಪ್ಪಂದದ ಪ್ರಕಾರ ಮೂರು ಕೋಟಿ ರೂಪಾಯಿಗಳನ್ನು ಕೊಡಬೇಕಾಗುತ್ತದೆ. ಇದಕ್ಕೋಸ್ಕರ ಟಿಪ್ಪು ತನ್ನ ಅಧಿಕಾರಿಗಳಿಗೆ ಕಂದಾಯ ಸಂಗ್ರಹಿಸುವಂತೆ ಆಜ್ಞೆ ಮಾಡುತ್ತಾನೆ.[೧೬] ಈ ವೇಳೆಯನ್ನು ಅವನ ಅಧಿಕಾರಿಗಳು ತಮಗೋಸ್ಕರ ದುರುಪಯೋಗಪಡಿಸಿಕೊಳ್ಳುತ್ತಾರೆ. ಅವನ ಅಧಿಕಾರಿಗಳು ಲಂಚ ಪಡೆಯುವುದರಲ್ಲಿ ಪ್ರಜೆಗಳನ್ನು ಪೀಡಿಸುತ್ತಿದ್ದರೆಂಬ ವಿವರ ನೀಡಿದ್ದಾನೆ. ಟಿಪ್ಪು ಇಂತಹ ಅಧಿಕಾರಿಗಳು ಯಾವುದೇ ರೀತಿಯಾದ ಶಿಕ್ಷೆ ನೀಡುತ್ತಿರಲಿಲ್ಲ ಎಂದಿದ್ದಾನೆ. ಈ ಮೇಲಿನ ವಿಚಾರವನ್ನು ತಾನು ಸ್ಥಳೀಯರಿಂದಲೇ ಪಡೆದಿದ್ದಾಗಿ ಸಮರ್ಥಿಸಿಕೊಂಡಿದ್ದಾನೆ.

ಥಾಮಸ್ ಮನ್ರೋ ಟಿಪ್ಪು ಕಾಲದ ಕಂದಾಯ ವ್ಯವಸ್ಥೆಯನ್ನು ಕುರಿತು ಬರೆಯುತ್ತಾ ಶೇ. ೩೦ ರಷ್ಟು ಭೂಕಂದಾಯ ದುರುಪಯೋಗವಾಗುತ್ತಿತ್ತು. ಎಂದಿದ್ದಾನೆ. ಟಿಪ್ಪುವಿನ ಅಧಿಕಾರಿಗಳಾದ ಅಸಫ್, ಖಿಲ್ಲೇದಾರ್, ಅಮೀಲರು ಇನ್ನು ಇತರ ಅಧಿಕ ಸಂಖ್ಯೆಯ ಕಂದಾಯ ಅಧಿಕಾರಿಗಳ ಗುಂಪು ತಮ್ಮಲ್ಲೇ ಹಂಚಿಕೊಳ್ಳುತ್ತಿದ್ದರು. ಅದರೂ ಟಿಪ್ಪುವು ಪ್ರತಿಯೊಬ್ಬ

ಅಧಿಕಾರಿಯನ್ನು ಪರಿಶೀಲಿಸುತ್ತಿದ್ದನು. ಅವನ ಯೋಜನೆಯಂತೆ ವಿಶಾಲವಾದ ಜಿಲ್ಲೆಗಳು ಅಮೀಲನ ಅಧೀನದಲ್ಲಿದ್ದುದರಿಂದ ರಾಜ್ಯದಲ್ಲಿ ಏನು ನಡೆಯುತ್ತದೆ ಎಂಬುದು ತಿಳಿಯುತ್ತಿರಲಿಲ್ಲ. ಪಶುಸಂಗೋಪಕರು, ಸಾರ್ವಜನಿಕ ಸೇವಕರು, ಸಣ್ಣ ರೈತರು ಕಂದಾಯ ಸಲ್ಲಿಸುತ್ತಿದ್ದರು. ಆದರೆ ಗೌಡರು, ಶ್ರೀಮಂತ ಭೂಮಾಲಿಕರು ಹಾಗೂ ಅವರ ಸ್ನೇಹಿತರು ಕಂದಾಯವನ್ನು ಸಲ್ಲಿಸುತ್ತಿರಲಿಲ್ಲ. ಜಿಲ್ಲೆಯ ಅಧಿಕಾರಿಗಳಾದ ಅಮೀಲರು ಶ್ರೀಮಂತ ಮಧ್ಯವರ್ತಿ ಭೂಹಿಡುವಳಿದಾರರಿಂದ ಬಾಡಿಗೆ ಪಡೆಯುದುದರಲ್ಲೇ ಕಾಲ ಕಳೆಯುತ್ತಿದ್ದರು. ಹೀಗಾಗಿ ಹಳ್ಳಿಗಳ ಆಡಳಿತವನ್ನು ಸರಿಯಾಗಿ ನಿರ್ವಹಿಸುತ್ತಿರಲಿಲ್ಲ ಎಂದು ಟೀಕಿಸಿದ್ದಾನೆ. ಕಂದಾಯದ ಬಗ್ಗೆ ಬರೆಯುತ್ತ ೧೭೮೨ರ ಪರಿಶಿಷ್ಟದನ್ವಯ ಲೆಕ್ಕಪತ್ರಗಳನ್ನು ಸಿದ್ಧಗೊಳಿಸಲು ಅವಕಾಶವಿದ್ದಾಗಿಯೂ ೧೭೯೯ರವರೆಗೆ ಆ ಕಾರ್ಯನಿರ್ವಹಣೆಗೆ ಸಂಬಂಧಿಸಿದಂತೆ ಯಾವುದೇ ವ್ಯಕ್ತಿಯನ್ನು ನೇಮಿಸಿರಲಿಲ್ಲ.[೧೭] ಅವರಿಗೆ ಲೆಕ್ಕಪತ್ರಗಳನ್ನು ಸಿದ್ಧಗೊಳಿಸುವುದರ ಬಗ್ಗೆ ಜ್ಞಾನವಿದ್ದರೂ ಅದರ ವ್ಯಾಪ್ತಿಯ ಬಗ್ಗೆ ಅರಿವಿರಲಿಲ್ಲ. ಹಾಗಾಗಿ ಈ ಅಧಿಕಾರಿಗಳು ತಮ್ಮ ಪಾಲುದಾರಿಕೆಯಲ್ಲಿಯೇ ಕಾಲಕಳೆಯುತ್ತಿದ್ದರೆಂದು ದೂರಿದ್ದಾನೆ.

ಟಿಪ್ಪು ಕಾಲದ ಭೂಹಿಡುವಳಿಗಳನ್ನು ಅಧ್ಯಯನ ಮಾಡಿದ ಷೇಕ್ ಅಲಿ ಅವರು ಮೇಲಿನ ಎರಡು ವಾದಗಳನ್ನು ಅಲ್ಲಗಳೆದು ಟಿಪ್ಪು ಕಾಲದ ಭೂ ಹಿಡುವಳಿ ವ್ಯವಸ್ಥೆಯನ್ನು ಕುರಿತಂತೆ ಕೆಲವು ವಿವರಗಳನ್ನು ಹೀಗೆ ನೀಡಿದ್ದಾರೆ. ಟಿಪ್ಪು ಕಾಲದಲ್ಲಿ ಜಿಲ್ಲಾಧಿಕಾರಿಗಳಾದ್ದ ಅಮೀಲರು ಪ್ರತಿಯೊಂದು ಹಳ್ಳಿಯ ಆರ್ಥಿಕ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ಸಮೀಕ್ಷೆ ಮಾಡುತ್ತಿದ್ದರು. ಆ ಸಮೀಕ್ಷೆ ಮಾಡುವ ವಿಧಾನ ಈ ಕೆಳಗಿನಂತಿತ್ತು. ನಿಮ್ಮ ಜಿಲ್ಲೆಯಲ್ಲಿರುವ ಎಲ್ಲಾ ಜಾತಿಗಳ ವಿವರವಾದ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು. ಗ್ರಾಮದ ಹೆಸರು, ನೇಗಿಲುಗಳ ಸಂಖ್ಯೆ, ಬಿತ್ತಿದ ಬೀಜದ ಗುಣಮಟ್ಟ, ಸಾಗುವಳಿಯಾದ ಭೂಮಿಯ ಗುಣಮಟ್ಟ, ಕೃಷಿ ಕೆಲಸಗಾರರು ಮತ್ತು ಅವರ ಕುಟುಂಬದ ಸದಸ್ಯರ ಸಂಖ್ಯೆ ಅವರ ವಿವಿಧ ಜಾತಿಗಳ ಮತ್ತು ವೃತ್ತಿಗಳು ಈ ಎಲ್ಲಾ ವಿವರಗಳು ಅದರಲ್ಲಿ ಇರತಕ್ಕದ್ದು. ಈ ವರದಿಯನ್ನು ಸಿದ್ಧಪಡಿಸುವಾಗ ರೈತರಿಗೆ ಅದು ಯಾವುದೇ ರೀತಿಯಲ್ಲಿ ಕಳವಳವನ್ನು ಉಂಟುಮಾಡುವಂತೆ ಜಾಗರೂಕತೆ ವಹಿಸತಕ್ಕದ್ದು. ಪ್ರತಿವರ್ಷವು ಬೇಸಾಯ ಮತು ಜನಸಂಖ್ಯೆಯಲ್ಲಿ ಆಗುವ ಏರಿಳಿತಗಳನ್ನು ಈ ಕೆಳಕಂಡ ವಿಧಾನದಿಂದ ದಾಖಲುಪಡಿಸಬೇಕು. ಗ್ರಾಮದ ಶ್ಯಾನುಭೋಗರು ವರದಿಯನ್ನು ತಯಾರಿಸಿ ಸಿಂಪ್‌ಗೆ ಕಳುಹಿಸಬೇಕು ಶ್ಯಾನಭೋಗರಿಂದ ಸಿಂಪಗೆ ಬಂದು ಪೂರ್ಣರೂಪ ಪಡೆದ ವರದಿಯನ್ನು ಜಿಲ್ಲೆಯ ಅಮೀಲ್‌ಗೆ ಕಳುಹಿಸಬೇಕು. ಅವನು ವರದಿಗಳನ್ನು ಸಿದ್ದಪಡಿಸಿ ತನ್ನ ಕಛೇರಿಯಲ್ಲಿಡಬೇಕು. ಅಲ್ಲಿಂದ ಮುಂದೆ ಅದನ್ನು ಹುಜೂರ್ ಅವರ ಸನ್ನಿಧಾನಕ್ಕೆ ಒಪ್ಪಿಸಬೇಕು. ಹುಜೂರ್ ಸನ್ನಿಧಾನದಲ್ಲಿ ಬೇಹುಬಾ ತಿಂಗಳನ್ನು ಈ ವರದಿಯ ಪರಿಶೀಲನೆಗೆ ನಿಗದಿಪಡಿಸುವುದರಿಂದ ಅವುಗಳನ್ನು ರಂಜಾನ್ ತಿಂಗಳಲ್ಲೇ ಕಛೇರಿಗೆ ಒಪ್ಪಿಸಬೇಕು. ಮನೆಗಳ ಮತ್ತು ಅಲ್ಲಿನ ನಿವಾಸಿಗಳ ಲೆಕ್ಕ ತೆಗೆದುಕೊಳ್ಳಲು ಹೋದಾಗಲೇ ನಾವು ಏತಕ್ಕಾಗಿ ಈ ಕೆಲಸ ಮಾಡುತ್ತಿದ್ದೇವೆ ಎಂಬುದನ್ನು ಗ್ರಾಮಸ್ಥರಿಗೆ ವಿವರಿಸಿ ಹೇಳಬೇಕು. ಯಾರ ವೆಚ್ಚವು ವರಮಾನಕ್ಕಿಂತ ಹೆಚ್ಚಾಗಿದೆ. ಎಂಬುದನ್ನು ಕಂಡುಹಿಡಿದು ಅವರಿಗೆ ತಕ್ಕವಿ ಸಾಲವನ್ನು ನೀಡುವ ಉದ್ದೇಶವಿದೆ ಎಂದು ತಿಳಿಸಬೇಕು. ತಕ್ಕವಿ ಸಾಲವೆಂದರೆ ಬಡತನದ ಅಂಚಿನಲ್ಲಿರುವ ರೈತರಿಗೆ ಸಾಲ ನೀಡುವ ವ್ಯವಸ್ಥೆಯಾಗಿತ್ತು. ಈ ಕ್ರಮದಲ್ಲಿ ನೀವು ಸರ್ವೇಕ್ಷಣವನ್ನು ಕೈಗೊಳ್ಳತಕ್ಕದ್ದು ಟಿಪ್ಪುವು ವರದಿಗಾಗಿ ಸಂಗ್ರಹಿಸಿದ ಅತಿ ಸೂಕ್ಷ್ಮ ವಿವರದಲ್ಲಿ ನೇಗಿಲುಗಳ ಸಂಖ್ಯೆ ಬಿತ್ತಿದ ಬೀಜದ ಪ್ರಮಾಣ, ಶ್ರಮಜೀವಿಗಳ ಬಲಾಬಲ, ಅವರ ಜಾತಿ ಮತ್ತು ವೃತ್ತಿಗಳಿಗನುಗುಣವಾಗಿ ಟಿಪ್ಪುವಿಗೆ ತನ್ನ ಪ್ರಜೆಗಳ ಸಮಾಜಿಕ, ಆರ್ಥಿಕ ಪರಿಸ್ಥಿತಿಯ ಚಿತ್ರಣವನ್ನು ನೀಡುತ್ತಿದ್ದವು. ಇದರಿಂದ ಅವನಿಗೆ ತನ್ನ ಪ್ರಜೆಗಳೆಲ್ಲರನ್ನು ಒಂದೇ ಬೃಹತ್ ಕುಟುಂಬದ ಸದಸ್ಯರೆಂಬುಂತೆ ಪರಿಗಣಿಸಿದ್ದನೆಂಬುದು ಷೇಕ್ ಅಲಿ ಅವರ ಅಭಿಪ್ರಾಯವಾಗಿದೆ.

ಮೇಕಿಂಗ್ ಹಿಸ್ಟರಿಯಲ್ಲಿ ಸಾಕಿಯವರು ಟಿಪ್ಪುವಿನ ಕಾಲದಲ್ಲಿ ಕರ್ನಾಟಕದಲ್ಲಿ ಆಧಾರವಾಗಿದ್ದ ಭೂಮಿಯ ಒಡೆತನ ಊಳಿಗಮಾನ್ಯ ವರ್ಗಗಳ ಸಂಪೂರ್ಣ ಏಕಸ್ವಾಮ್ಯ ಮುರಿಯಿತು ಎಂದು ಅಭಿಪ್ರಾಯಪಟ್ಟಿದ್ದಾರೆ. ಅವರು ಆ ಕಾಲದ ಭೂಹಿಡುವಳಿಗಳ ಕುರಿತು ವಿಶ್ಲೇಷಸಿದ ವಿವರಗಳು ಹೀಗಿವೆ. ಭೂಮಾಲೀಕರ ಬದಲಿಗೆ ಸಾಗುವಳಿ ಮಾಡುವ ರೈತರೇ ಭೂಹಿಡುವಳಿಗಳನ್ನು ಕೃಷಿ ಮಾಡುವ ವ್ಯವಸ್ಥೆ ಹುಟ್ಟಿಕೊಂಡಿತು. ಇದರಿಂದ ಕೃಷಿ ಸರಕು ಆರ್ಥಿಕತೆ ತೀವ್ರಗತಿ ಪಡೆದುಕೊಂಡಿತು. ಇತಿಹಾಸದಲ್ಲಿ ಮೊಟ್ಟ ಮೊದಲ ಬಾರಿಗೆ ಭೂಮಿಯನ್ನು ತಮ್ಮ ಹೆಸರಿನಲ್ಲಿ ರೈತರು ಪಡೆದುಕೊಂಡರು. ಅವರು ಬೇಕಾದವರಿಗೆ ಭೂಮಿಯನ್ನು ಹಸ್ತಾಂತರ ಮಾಡಬಹುದಿತ್ತು. ಟಿಪ್ಪುವಿನ ಕಾನೂನಿನಂತೆ ಆ ಭೂಮಿಯಿಂದ ಯಾವ ರೈತರನ್ನು ಸ್ಥಳಾಂತರಿಸುವಂತಿಲ್ಲ. ಹೀಗಾಗಿ ಸಾಗುವಳಿ ಮಾಡುವವನೇ ಭೂ ಒಡೆಯನಾದನು. ಇದರಿಂದ ಪ್ರಬಲ ಭೂಮಾಲೀಕರು ಕಡಿಮೆಯಾದರು. ಈ ಬಗೆಯ ಊಳಿಗಮಾನ್ಯ ಪದ್ಧತಿಯು ಖಾಸಗಿ ಆಸ್ತಿಯ ಸ್ವರೂಪಕ್ಕಿಂತ ಸಂಪೂರ್ಣ ಭಿನ್ನವಾಗಿತ್ತು. ಇದು ಕೃಷಿಯಲ್ಲಿ ಊಳಿಗಮಾನ್ಯ ಸಂಬಂಧಗಳು ಅರೆ ಊಳಿಗಮಾನ್ಯ ಸಂಬಂಧಗಳಾಗಿ

ಪರಿವರ್ತನೆಗೊಳ್ಳುತ್ತಿದ್ದುದನ್ನು ಸೂಚಿಸುತ್ತದೆ. ಸಾಕಿಯವರು ಬಹಳ ದೀರ್ಘ ಹಾಗೂ ಸಮಗ್ರ ಅಧ್ಯಯನದಿಂದ ಸ್ಪಷ್ಟಪಡಿಸಿರುವಂತೆ ಈ ಬಗೆಯ ಹೊಸ ಆಸ್ತಿ ಸಂಬಂಧಗಳು ಕೃಷಿಯಲ್ಲಿ ಹೊಸ ಉತ್ಪಾದನಾ ಸಂಬಂಧಗಳಿಗೆ ದಾರಿ ಮಾಡಿಕೊಟ್ಟವು. ಇದರಿಂದಾಗಿ ಕೃಷಿ ರಂಗದಲ್ಲಿ ಊಳಿಗಮಾನ್ಯ ವ್ಯವಸ್ಥೆಗೆ ಹೊರತಾದ ಹೊಸ ವರ್ಗಗಳು ಹುಟ್ಟಿಕೊಂಡವು. ಜೀತಗಾರ ಪದ್ಧತಿ ಕ್ರಮೇಣ ಬದಲಾಗುತ್ತಾ ವಾರದ ಅಥವಾ ದಿನಗೂಲಿಯ ಮೇಲೆ ದುಡಿಯುವ ಕೃಷಿ ಕಾರ್ಮಿಕ ವರ್ಗ ಅಸ್ತಿತ್ವಕ್ಕೆ ಬಂದಿತು. ಇದರೊಡನೆ ಜೀತಗಾರರನ್ನು ತಿಂಗಳ ಅಥವಾ ವಾರ್ಷಿಕ ಲೆಕ್ಕದಲ್ಲಿ ಇಟ್ಟುಕೊಳ್ಳುವ ವ್ಯವಸ್ಥೆ ಬಂದಿತು. ಇದು ಜೀವನಪರ್ಯಂತ ಭೂಮಾಲೀಕರ ಸೇವೆಯಲ್ಲಿ ಜೀವನ ನಡೆಸಬೇಕಾಗಿದ್ದ ಜೀತಗರರ ಬದುಕಿಗೆ ಒಂದಿಷ್ಟು ಬಿಡುಗಡೆಯನ್ನು ತಂದುಕೊಟ್ಟಿತು. ಸಾಕಿಯು ಹೇಳುವಂತೆ ಹಳ್ಳಿಗಳಲ್ಲಿ ರಾಜಪ್ರಭುತ್ವದ ಪರವಾಗಿ ಕೊನೆಯ ಕೊಂಡಿಯಾಗಿದ್ದ ಗ್ರಾಮದ ಪಟೇಲರು ಮತ್ತು ಶ್ಯಾನಭೋಗರು. ಇದೊಂದು ವಂಶಾಪಾರಂಪರ್ಯ ಅಧಿಕಾರಿ ವ್ಯವಸ್ಥೆಯಾಗಿತ್ತು. ಈ ವ್ಯವಸ್ಥೆಯು ಉಳ್ಳವರಿಗೆ ಮತ್ತು ಮೇಲ್ಜಾತಿಗಳಿಗೆ ದೊರಕುತ್ತಿತ್ತು. ಟಿಪ್ಪು ಜಾರಿಗೆ ತಂದ ಕಾಯಿದೆಗಳಿಂದಾಗಿ ಪಟೇಲರು ಮತ್ತು ಶ್ಯಾನುಭೋಗರಲ್ಲಿ ಯಾರು ಅರ್ಹರಾಗಿಲ್ಲವೋ ಅವರನ್ನು ತೆಗೆದು ಹಾಕಿ ಆ ಸ್ಥಾನಕ್ಕೆ ರೈತರಿಂದಲೇ ಸಮರ್ಥರಾದವರನ್ನು ನೇಮಕ ಮಾಡಲಾಗುತ್ತಿತ್ತು. ಹಳ್ಳಿಯಲ್ಲಿದ್ದ ಶ್ಯಾನುಭೋಗರಿಗೆ ಕರಣಿಕರಂತೆ ವೇತನವನ್ನು ಕೊಡಲು ಪ್ರಾರಂಭಿಸಿದನು. ಒಂದು ವೇಳೆ ಶ್ಯಾನಭೋಗರು ತಮ್ಮ ವೇತನದ ಬದಲಿಗೆ ಸರಿಸಮಾನದ ಭೂಮಿ ಕೇಳಿದರೆ ಅವರಿಗೆ ಉಳುಮೆ ಮಾಡಿರದ ಬೆದ್ದಲ ಭೂಮಿ ನೀಡುತ್ತಿದ್ದನು.

ಈ ಮೇಲಿನ ಅಧ್ಯಯನದಿಂದ ಟಿಪ್ಪುಸುಲ್ತಾನ್ ತನ್ನ ಆಡಳಿತಕ್ಕೆ ಸೇರಿದ ಎಲ್ಲಾ ಪ್ರದೇಶದಲ್ಲಿ ಒಂದೇ ರೀತಿಯಾದ ಭೂಹಿಡುವಳಿ ವ್ಯವಸ್ಥೆಯನ್ನು ಜಾರಿಗೆ ತಂದಿದ್ದನು. ಭೂಹಿಡುವಳಿಯ ಗುಣಮಟ್ಟಕ್ಕನುಗುಣವಾಗಿ ಕಂದಾಯ ವಿಧಿಸುವ ವ್ಯವಸ್ಥೆಯನ್ನು ಅನುಸರಿಸಿದ್ದನು. ಹಾಗೆಯೇ ಸಮಾಜದ ಎಲ್ಲಾ ಸಮುದಾಯಗಳಿಗೂ ಭೂಒಡೆತನ ಹೊಂದಲು ಅವಕಾಶ ಕಲ್ಪಿಸಿದನು. ಜೊತೆಗೆ ಭೂಹಿಡುವಳಿಯ ಒಡೆತನದ ಮೇಲೆ ಮಿತಿ ಏರಿ ಪ್ರಬಲ ಭೂಹಿಡುವಳಿದಾರರನ್ನು ತನ್ನ ನೇರ ಹಿಡಿತದಲ್ಲಿ ಇಟ್ಟುಕೊಂಡಿದ್ದನು. ಉಳುವವನಿಗೆ ಭೂಮಿ ಸೇರಿತು ಎಂಬ ವಿಚಾರವನ್ನು ತನ್ನ ರಾಜ್ಯದಾದ್ಯಂತ ಜಾರಿಗೆ ತಂದನು. ಹೀಗಾಗಿ ಟಿಪ್ಪು ಕಾಲದಲ್ಲಿ ನಿಜವಾದ ಸಾಗುವಳಿದಾರನೇ ಭೂ ಒಡೆಯನಾದನು ಎಂಬ ವಿವರಗಳನ್ನು ಗುರುತಿಸಬಹುದು.



## ಅಡಿಟಿಪ್ಪಣಿಗಳು

೧. ಬಿ.ಷೇಕ್ ಆಲಿ (ಸಂ)., ಕರ್ನಾಟಕ ಚರಿತ್ರೆ ಸಂಪುಟ-೫ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭ ಪು. ೪೫೨.
೨. ಮೊಹಬುಲ್ ಹಸನ್, ಹಿಸ್ಟರಿ ಆಫ್ ಟಿಪ್ಪುಸುಲ್ತಾನ್, ಪು. ೩೩೫.
೩. ಬರ್ರಿಷ್ ಕ್ರಿಸ್ಪ್ ದಿ. ಮೈಸೂರಿಯನ್ ರೆವೆನ್ಯೂ ರೆಗುಲೇಷನ್ಸ್, ಕಲ್ಕತ್ತಾ, ೧೭೯೨.ಪು. ೨೮.
೪. ಮೊಹಬುಲ್ ಹಸನ್, ಹಿಸ್ಟರಿ ಆಫ್ ಟಿಪ್ಪುಸುಲ್ತಾನ್, ಪು. ೩೩೫.
೫. ಬರ್ರಿಷ್ ಕ್ರಿಸ್ಪ್ ದಿ. ಮೈಸೂರಿಯನ್ ರೆವೆನ್ಯೂ ರೆಗ್ಯುಲೇಷನ್ಸ್ ಪು. ೧೭-೨೬.
೬ ಫ್ರಾನ್ಸಿಸ್ ಬುಕಾನನ್ ಜರ್ನಿ ಫ್ರಂ ಮದ್ರಾಸ್ ಥ್ರೂ ದೀ ಕಂಟ್ರಿಸ್ ಆಫ್ ಮೈಸೂರು ಕೆನರಾ ಅಂಡ್ ಮಲಬಾರ ಸಂಪುಟ-೩ ಪು. ೨೯೮.
೭. ಕೆ.ಎನ್. ವೆಂಕಟಸುಬ್ಬಶಾಸ್ತ್ರೀ, ದಿ ಮನ್ರೋ ಸಿಸ್ಟಂ ಆಫ್ ಬ್ರಿಟಿಷ್ ಸ್ಟೇಟ್ಸ್ ಮೆನಶಿಫ್ ಇನ್ ಇಂಡಿಯಾ, ದಿ. ಯುನಿವರಸಿಟಿ ಆಫ್ ಮೈಸೂರು, ಮೈಸೂರು ೧೯೫೯, ಪು. ೭೬, ೮೦.
೮. ಎಂ. ಎಚ್. ಗೋಪಾಲ್, ಟಿಪ್ಪುಸುಲ್ತಾನ್ಸ್ ಮೈಸೂರು ಯಾನ್ ಎಕನಾಮಿಕಸ್ಟಡಿ, ಪಾಪ್ಯೂಲರ್ ಪ್ರಕಾಶನ್ಮ ಬಾಂಬೆ, ೧೯೭೬, ಪು. ೧-೨.
೯. ಬಿ. ಷೇಕ್ ಆಲಿ (ಸಂ), ಕರ್ನಾಟಕ ಚರಿತ್ರೆ ಸಂಪುಟ-೫ ಪು. ೪೫೫.
೧೦. ಸಾಕಿ, ಮೇಕಿಂಗ್ ಹಿಸ್ಟರಿ, ಕರ್ನಾಟಕ್ಸ್ ಫೀಪಲ್ ಅಂಡ್ ದೇರ್ ಫಾಸ್ಟ್, ಸಂಪುಟ-೧ ವಿಮುಕ್ತಿ ಪ್ರಕಾಶ ಬೆಂಗಳೂರು, ೧೯೯೮, ಪು. ೪೧೭.
೧೧. ಮಹೀಶೂರ ಶ್ರೀ ಮನ್ಮಮಹಾರಾಜು ಚಾಮರಾಜೇಂದ್ರ ಒಡೆಯರ್ ಅವರ ವಂಶರತ್ನಾಕರ ಮೈಸೂರು ಮುದ್ರಾಕ್ಷರ ಶಾಲೆ, ಮಿಥಿಕ್ ಸೊಸೈಟಿ, ಬೆಂಗಳೂರು, ೧೮೮೭, ಪು.೩೪೦-೪೧.
೧೨. ಎಂ. ಶಾಮರಾಯರು, ಮೈಸೂರು ಸಂಸ್ಥಾನದ ಚರಿತ್ರಾಸಾರ, ಸರಕಾರಿ ಮುದ್ರಣಾಲಯ, ಮೈಸೂರು, ೧೮೮೩, ಪು. ೭೦.
೧೩. ಸಿ. ಹಯವದನ ರಾವ್, ಮೈಸೂರು ಗೆಜೆಟಿಯರ್, ಸಂಪುಟ-೪ ಮೈಸೂರು ಸರಕಾರ ಮೈಸೂರು, ೧೯೩೦, ಪು.೪೫.
೧೪. ಬಿ.ಎಲ್. ರೈಸ್, ಮೈಸೂರು ಗೆಜೆಟಿಯರ್, ಸಂಪುಟ ೧, ಪು. ೬೧೬.
೧೫. ಕೆ.ಕೆ.ಎನ್. ಕುರುಪ್, ಭೂಸ್ವಾಮ್ಯ ಮತ್ತು ಸಾಮಾಜಿಕ ಬದಲಾವಣೆ, ವಸಾಹತುಶಾಹಿ ಸಂದರ್ಭದಲ್ಲಿ ದಕ್ಷಿಣ ಕನ್ನಡ, ಸೆಬಾಸ್ಟಿಯನ್ ಜೋಸೆಫ್, ಸಂಪುಟ ಸಂಪಾದಕರು, ಕರ್ನಾಟಕ ಚರಿತ್ರೆ ಸಂಪುಟ-೬ ಕನ್ನಡ ಸೆಬಾಸ್ಟಿಯನ್ ಜೋಸೆಫ್, ಸಂಪುಟ ಸಂಪಾದಕರು, ಕರ್ನಾಟಕ ಚರಿತ್ರೆ ಸಂಪುಟ-೬ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು. ೧೩೨.
೧೬. ಬಿ.ಎಲ್.ರೈಸ್, ಮೈಸೂರು ಗೆಜೆಟಿಯರ್, ಸಂಪುಟ-೧ ಲಂಡನ್, ೧೮೯೭, ಪು. ೬೧೭-೬೨೦.
೧೭. ಎಂ. ಶಾಮರಾವ್, ಮೈಸೂರು ಸಂಸ್ಥಾನದ ಚರಿತ್ರೆ, ಸರಕಾರಿ ಮುದ್ರಣಾಲಯ, ಬೆಂಗಳೂರು, ೧೮೯೩, ಪು. ೧೭೯.

# ಮೈಸೂರು ಒಡೆಯರ ಕಾಲದಲ್ಲಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ಸಂಗ್ರಹಿಸಿದ ಕೃಷಿ ತೆರಿಗೆ

ಸಿ.ಎಸ್. ನಾಗರಾಜ*

**ಮೈ**ಸೂರು ಸಂಸ್ಥಾನದ ಒಂದು ಪ್ರಮುಖ ಜಿಲ್ಲೆಯಾದ ಚಿಕ್ಕಮಗಳೂರು (ಸ್ವಲ್ಪಕಾಲ ಕಡೂರು ಜಿಲ್ಲೆಯಾಗಿದ್ದು), ಮೈಸೂರು ಸಂಸ್ಥಾನದ ಆದಾಯ ಸಂಗ್ರಹದಲ್ಲಿ ಪ್ರಮುಖ ಪಾತ್ರವಹಿಸಿತ್ತು. ಪ್ರಮುಖವಾಗಿ ಕೃಷಿ ಉತ್ಪನ್ನದ ಮೂಲಕ ಸಂಗ್ರಹಿದ ತೆರಿಗೆ, ಅದರ ಪ್ರಮಾಣ, ವಿವಿಧ ಕಾಲಘಟ್ಟದಲ್ಲಿ ಅದರಲ್ಲದ ಬದಲಾವಣೆಗಳು, ಅದಕ್ಕೆ ಕಾರಣಗಳು, ಅದರಿಂದಾದ ಪರಿಣಾಮಗಳು ರೈತನ ಹಿನ್ನಲೆಯಲ್ಲಿ ವಿಶ್ಲೇಷಣಗೆ ಒಳಪಡಿಸುವುದು ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ಟಿಪ್ಪು ಸುಲ್ತಾನ್ ಮರಣ ನಂತರ ಬ್ರಿಟೀಷರು ಮೈಸೂರು ರಾಜ್ಯದ ಅಧಿಕಾರವನ್ನು ೧೭೯೯ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಹಿಂತಿರುಗಿಸಿದ ನಂತರ ಮೈಸೂರಿನ ದಿವಾನರಾಗಿ ಅಧಿಕಾರ ವಹಿಸಿಕೊಂಡ ಪೂರ್ಣಯ್ಯನವರು ರಾಜ್ಯದ ಆದಾಯವನ್ನು ಹೆಚ್ಚಿಸುವ ಉದ್ದೇಶದಿಂದ 'ಕಂದಾಯ ಸುಧಾರಣಾ' ಕ್ರಮಗಳನ್ನು ಜಾರಿಗೆ ತಂದರು. ಇದರಿಂದ ಅಧಿಕಾರ ವರ್ಗಗಳಾದ ಜಮೀನ್ದಾರರು, ಇನಾಮ್ದಾರರು, ಶಾನುಭೋಗರು, ಪಟೇಲರು ಮತ್ತು ಸರ್ಕಾರದ ಬೊಕ್ಕಸಕ್ಕೆ ಅನುಕೂಲವಾದರೆ ಅದೇ ವೇಳೆಯಲ್ಲಿ ಕಂದಾಯ ಪದ್ಧತಿಯಲ್ಲಿನ ದೋಷಗಳಾದ ಅತಿಯಾದ ಕಂದಾಯ, ಜಮೀನ್ದಾರರ ದಬ್ಬಾಳಿಕೆ, ಬಲವಂತದ ಕಂದಾಯ ವಸೂಲಿ ಜಮೀನುಗಳ ಮುಟ್ಟಗೋಲು, ಭ್ರಷ್ಟಾಚಾರ, ಮುಂತಾದ ಕಾರಣಗಳಿಂದ ರೈತವರ್ಗದಲ್ಲಿ ಉದ್ಭವಿಸಿದ್ದ ಅಸಮದಾನ ಅಂತಿಮವಾಗಿ ಆಗಸ್ಟ್ ೧೮೩೦ರಂದು ರೈತರ ದಂಗೆಯ ಮೂಲಕ ಸ್ಫೋಟಿಸಿತು.[೧] ಆದರೆ ಕ್ರಿ.ಶ. ೧೮೩೦-೩೧ರಲ್ಲಿ ಬ್ರಿಟಿಷ್ ಸೈನಿಕರು ನಿರ್ಧಯವಾಗಿ ಈ ದಂಗೆಯನ್ನು ಹತ್ತಿಕ್ಕಿದರು. ಇದರಿಂದಾಗಿ ಅನೇಕ ರೈತರು ಪ್ರಾಣ ಕಳೆದುಕೊಂಡರೆ ಮತ್ತೆ ಅನೇಕರು ಮರಣ ದಂಡನೆ ಶಿಕ್ಷೆಗೆ ಗುರಿಯಾದರು ಮತ್ತು ಅನೇಕರು ತಮ್ಮ ಜಮೀನುಗಳನ್ನು, ಮನೆ ಮಠಗಳನ್ನು ಕಳೆದುಕೊಂಡರು. ಅಷ್ಟೆ ಅಲ್ಲದೆ ಮೈಸೂರು ಒಡೆಯರ ಅಧಿಕಾರವನ್ನು ಕಳೆದುಕೊಂಡು ರಾಜ್ಯವು ನೇರ ವಸಾಹತುಶಾಹಿ ಆಳ್ವಿಕೆಗೆ ಕ್ರಿ.ಶ. ೧೮೩೧ರಲ್ಲಿ ಒಳಗಾಗಬೇಕಾಯಿತು. ಪ್ರಾರಂಭದಲ್ಲಿ ತಮ್ಮ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವ ಸಲುವಾಗಿ ಕಂದಾಯ ಪದ್ಧತಿಯಲ್ಲಿ ಹೆಚ್ಚಿನ ಬದಲಾವಣೆಗೆ ವಸಾಹತುಶಾಹಿ ಆಡಳಿತ ಒಲವು ತೋರಲಿಲ್ಲ. ಜಮೀನ್ಧಾರರು, ಜಾಹಗೀರ್ದಾರರು ಮತ್ತು ಜೋಡಿದಾರರು ದಬ್ಬಾಳಿಕೆ ಹಾಗೆಯೆ ಮುಂದುವರಿಯಿತು. ಬ್ರಿಟಿಷರು ಕಮಿಷನ್ನರ ಆಳ್ವಿಕೆ ಕಾಲದಲ್ಲಿ ರೈತವಾರಿ ಭೂಕಂದಾಯ ವ್ಯವಸ್ಥೆಯನ್ನು ಮೈಸೂರು ಸಂಸ್ಥಾನದಲ್ಲಿ ಅಳವಡಿಸಲಾಯಿತು. ಸರ್ಕಾರ ನಿಗದಿತ ಕಂದಾಯ ವಿಧಿಸಿ ನಗದು ರೂಪದಲ್ಲಿ ಪಡೆಯುತ್ತಿತ್ತು. ಆದರೆ ಸರ್ಕಾರಿ ಭೂಮಿಯ ವ್ಯಾಪ್ತಿಯಲ್ಲೇ ಬರುವ ಮತ್ತೊಂದು ಬಗೆಯ ಭೂಮಿಯಿದ್ದು ಅದು ಧಾನ್ಯರೂಪದಲ್ಲಿ ಸಲ್ಲಿಸುವ ಪಾಲಿನ ಕಂದಾಯ ಬಟಾಯಿ ಭೂಮಿಯಾಗಿತ್ತು.[೨] ವಸಹತುಶಾಹಿಯ ನೇರ ಮತ್ತು ಪರೋಕ್ಷ ಆಳ್ವಿಕೆಯಲ್ಲಿ ರೈತರ ಮೇಲಿನ ಶೋಷಣೆ ಹಿಂದಿನ ಜಮಿನ್ಧಾರಿ ಪದ್ಧತಿಯಂತೆಯೇ ಮುಂದುವರಿಯಿತು. ರೈತರಿಗೆ ಅತಿಯಾದ ತೆರಿಗೆಯನ್ನು ವಿಧಿಸುವಂಥ ರೈತವಾರಿ ವ್ಯವಸ್ಥೆಯನ್ನು ಜಾರಿಗೊಳಿಸಿದಾಗ ಕೃಷಿ ವ್ಯವಸ್ಥೆಯ ಸಧೃಡತೆಯ ಮೇಲೆ ದೊಡ್ಡ ಆಘಾತವಾಗಿತ್ತು.[೩] ರೈತವಾರಿ ಪದ್ಧತಿಯಿಂದಾಗಿ ರೈತರ ಬದುಕಿನಲ್ಲಿ ಧನಾತ್ಮಕ ಬದಲಾಣೆಗೆ ಹೊರತಾಗಿ ಮಧ್ಯವರ್ತಿಗಳ ಒಂದು ಹೊಸ ವರ್ಗದ ಮೂಲಕ ಶೋಷಣೆ ಮುಂದುವರಿಯಿತು. ವಾಣಿಜ್ಯ ಬೆಳೆಗಳಾದ ಕಾಫಿ, ಅಡಿಕೆ, ಕಾಳುಮೆಣಸು ಮುಂತಾದವುಗಳಿಗೆ ಉತ್ತೇಜನ ನೀಡಲು ಉದ್ದೇಶದಿಂದ ಬಟಾಯಿ ಭೂ ಹಿಡುವಳಿ ವ್ಯವಸ್ಥೆಯಲ್ಲಿ ಭೂ ಮುಂಜೂರು ಮಾಡಿ ಉತ್ತೇಜಿಸಲಾಯಿತು. ಮಲೆನಾಡು ಭಾಗದಲ್ಲಿ ತರೀ, ಬಾಗಾಯ್ತು ಭೂಕಂದಾಯದಲ್ಲಿ ಸಮಸ್ಯೆಗಳಿದ್ದವು. ವಾಣಿಜ್ಯ ಬೆಳೆಗೆ ನೀಡಿದ ಪ್ರೋತ್ಸಾಹ ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಗಣನೀಯ ಪ್ರಮಾಣದಲ್ಲಿ ಇಳಿಕೆ ಕಂಡುಬಂದು ಆಹಾರದ ಧಾನ್ಯಗಳ ಅಭಾವ ಉಂಟಾಯಿತು. ವಾಣಿಜ್ಯ ಬೆಳೆ ಹೆಚ್ಚಾದಂತೆ ಮಾರುಕಟ್ಟೆ ಪೂರೈಕೆಗೆ ಅನುಗುಣವಾಗಿ ಬೆಳೆ ಬೆಳೆಯುವ ಒತ್ತಡ ರೈತರ ಮೇಲಾಯಿತು. ಮಧ್ಯವರ್ತಿಗಳು ಆಹಾರ

* ಸಂಶೋಧನಾ ವಿದ್ಯಾರ್ಥಿ, ಇತಿಹಾಸ ವಿಭಾಗ, ಮಂಗಳ ಗಂಗೋತ್ರಿ, ಮಂಗಳೂರು ವಿಶ್ವವಿದ್ಯಾನಿಲಯ, ಕೊಣಾಜೆ, ಮೊ. ೯೪೮೧೮೩೭೩೭೮

ಧಾನ್ಯಗಳ ಮೇಲೆ ಹೂಡಿಕೆ ಮಾಡುವುದರ ಜೊತೆಗೆ ಅಕ್ರಮ ದಾಸ್ತಾನು ಮಾಡಲು ತೊಡಗಿಕೊಂಡರು. ಇದರಿಂದ ಕೃತಕ ಆಹಾರ ಧಾನ್ಯಗಳ ಅಭಾವ ಸೃಷ್ಟಿಸಿತು. ೧೯ ಮತ್ತು೨೦ನೇ ಶತಮಾನದಲ್ಲಿ ಈ ಕಾರಣದಿಂದಾಗಿ ಸ್ವತಃ ರೈತರಿಗೆ ಆಹಾರ ಧಾನ್ಯಗಳ ಕೊರತೆ ಉಂಟಾಗಿ ಅಸಿವಿನಿಂದ ಪ್ರಾಣ ಹಾನಿ ಸಂಭವಿಸಿತು. ಅನೇಕ ರೈತರು ಹಳ್ಳಿಗಳಿಂದ ಪಟ್ಟಣಗಳಿಗೆ ಗುಳೆ ಹೊಗುವ ಪರಿಸ್ಥಿತಿ ನಿರ್ಮಾಣವಾಯಿತು.

ಈ ಕಾಲದಲ್ಲಿ ಚಿಕ್ಕಮಗಳೂರು ಜಿಲ್ಲೆಯ ರೈತರ ಪರಿಸ್ಥಿತಿ ಏನು ಭಿನ್ನವಾಗಿರಲ್ಲಿಲ್ಲ. ಪ್ರಧಾನವಾಗಿ ಜಮೀನ್ದಾರಿ ಮತ್ತು ರೈತವಾರಿ ಪದ್ಧತಿಯಲ್ಲಿ ರಾಜ್ಯದ ಆದಾಯದ ಬಹುದೊಡ್ಡ ಮೂಲ ಭೂಕಂದಾಯವಾಗಿತ್ತು. ಇದನ್ನು ರೈತರಿಂದ ಪಡೆಯಲಾಗುತ್ತಿತ್ತು. ಸ್ಥಳೀಯ ಸಂಸ್ಥೆಗಳ ಆದಾಯದಲ್ಲಿ ಶೇಕಡ ೯೦% ಭಾಗದ ಪಾಲು ಅದರದ್ದೆ ಆಗಿತ್ತು.[೪] ಕಡೂರು ಜಿಲ್ಲೆಯಲ್ಲಿ ೧೮೯೧-೯೨ರಿಂದ ೧೮೯೫-೯೬ರ ಅವಧಿಯಲ್ಲಿ ಸಂಗ್ರಹವಾದ ಭೂಕಂದಾಯು ಈ ರೀತಿಯಲ್ಲಿದೆ ೧೮೯೧-೯೨ ೭,೮೦,೬೫೨ ರೂಪಾಯಿಗಳು, ೧೮೯೨-೯೩ ರಲ್ಲಿ ೮,೦೮,೯೭೯ ರೂಪಾಯಿಗಳು ೧೮೯೩-೯೪ರಲ್ಲಿ ೮,೬೭,೯೮೪ ರೂಗಳು ೧೮೯೪-೯೫ರಲ್ಲಿ ೮,೬೪,೬೭೯ ರೂಗಳು ೧೮೯೫-೯೬ ರಲ್ಲಿ ೯,೨೩,೭೫೦ ರೂಗಳನ್ನು ಭೂಕಂದಾಯವಾಗಿ ಸಂಗ್ರಹಿಸಲಾಗಿತ್ತು, ಇದು ಇತರೆ ಕಂದಾಯಗಳಿಗಿಂತ ಕೃಷಿ ಕಂದಾಯ ಸಂಗ್ರಹ ಶೇಕಡ ೯೦ರಷ್ಟು ಅಧಿಕವಾಗಿತ್ತು ಮತ್ತು ರಾಜ್ಯಕ್ಕೆ ಆದಾಯದ ಮುಖ್ಯಮೂಲವಾಗಿತ್ತು ಎಂಬುದನ್ನು ಈ ಮೇಲಿನ ಅಂಕಿ-ಅಂಶಗಳು ತಿಳಿಸುತ್ತದೆ. ಆದರೆ ಗಮನಿಸಬೇಕಾದ ಅಂಶವೆಂದರೆ ಮೈಸೂರು ಸಂಸ್ಥಾನದಲ್ಲಿನ ಸರಾಸರಿ ಮಳೆಯ ಪ್ರಮಾಣ ೨೦ ವರ್ಷಗಳಲ್ಲಿ ಶೇಕಡವಾರು ೩೬.೨೦ ಇದ್ದರೆ, ಕಡೂರು ಜಿಲ್ಲೆಯಲ್ಲಿ ಸರಾಸರಿ ಮಳೆಯ ಪ್ರಮಾಣ ೫೯.೭೨ರಷ್ಟಿತ್ತು. ಮತ್ತು ೧೮೯೦-೯೧ರ ನಂತರದ ಅವಧಿಯಲ್ಲಿ ಮಳೆಯು ಸರಾಸರಿ ಶೇಕಡ ೫೧.೭೯ಕ್ಕೆ ಇಳಿಕೆ ಕಡೂರು ಜಿಲ್ಲೆಯಲ್ಲಿ ದಾಖಲಾಗಿತ್ತು.[೫] ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಮಳೆಯ ಪ್ರಮಾಣ ಕಡಿಮೆಯಾದಂತೆ ಕೃಷಿ ಉತ್ಪಾದನೆ ಪ್ರಮಾಣವೂ ಕಡಿಮೆಯಾಗಿರುತ್ತದೆ. ೧೮೬೬ ಮತ್ತು ೧೮೭೫-೭೭ರಲ್ಲಿ ಬ್ರಿಟಿಷರನೇರಾಧಿಪತ್ಯದಲ್ಲಿ ಘಟಿಸಿದ ಭೀಕರ ಕ್ಷಾಮಗಳ ಪರಚಯವಿದ್ದ ಮೈಸೂರಿನ ರೈತಾಪಿಗೆ ೧೮೯೧-೯೨, ೧೯೦೮-೦೯, ೧೯೨೩-೨೪, ೧೯೩೪-೩೫ ಮತ್ತು ೧೯೩೮-೩೯ರಲ್ಲಿ ಮಳೆಬೆಳೆ ವೈಫಲ್ಯ ಮತ್ತು ಆರ್ಥಿಕ ಮುಗ್ಗಟ್ಟಿನ ಪರಿಣಾಮಗಳಿಂದ ರೈತನ ಬದುಕು ತತ್ತರಿಸುವಂತೆ ಮಾಡಿತು.[೬] ಅಂದರೆ ಭೂಕಂದಾಯದ ಪ್ರಮಾಣವು ೧೮೯೧-೯೨ರಲ್ಲಿ ೭,೮೦,೬೫೨ ಇದ್ದದ್ದು ೧೮೯೫-೯೬ರಲ್ಲಿ ರೂ. ೯,೨೩,೭೫೦ ಏರಿಕೆಯಾಗಿರುವುದು ಕಾಣಬಹುದು. ಕಡೂರು ಜಿಲ್ಲೆಯ ಮುಖ್ಯಬೆಳೆ ಭತ್ತ, ರಾಗಿ ಆಗಿದ್ದರು ಆ ಕಾಲದಲ್ಲಿ ಗೋಧಿಯನ್ನು ಬೆಳೆಯಲಾಗುತ್ತಿತ್ತು. ೧೮೮೮-೮೯, ೧೮೮೯-೯೦ರಲ್ಲಿ ಅಕ್ಕಿ ಮತ್ತು ರಾಗಿ ಉತ್ಪಾದನೆ ಕ್ರಮವಾಗಿ ೫೬೮,೪೦೭ ಟನ್ ಇದ್ದದ್ದು ೧೮೯೦-೯೧ರಲ್ಲಿ ಅಕ್ಕಿ ೪೬೭ ಟನ್ ಮತ್ತು ರಾಗಿ ೩೩೪ಟನ್‌ಗೆ ಉತ್ಪಾದನೆ ಇಳಿಕೆಯಾಗಿರುವುದು ಕಂಡುಬರುತ್ತದೆ.[೭]

ದುಬಾರಿ ಭೂಕಂದಾಯ ಮತ್ತು ಹವಾಮಾನ ವೈಪರಿತ್ಯಗಳು, ಬೆಲೆ ಕುಸಿತ, ರೈತರ ಸಾಲ, ಸಾಲದ ಮೇಲಿನ ಬಡ್ಡಿ ರೈತರನ್ನು ಮತ್ತಷ್ಟು ಸಂಕಷ್ಟಗಳಿಗೆ ನೂಕಿತು. ತರೀ ಮತ್ತು ಬಾಗಾಯ್ತು ಜಮೀನಿಗಳನ್ನು ಖುಷ್ಕಿ ಪರಿಗಣಿಸುವ ಅಥವಾ ಭೂಕಂದಾಯ ದರ ಇಳಿಸುವ ಮೂಲಕ ಪರಿಹಾರ ನೀಡುವಂತೆ ಮನವಿ ಬರತೊಡಗಿತು.[೮] ಕಂದಾಯ ಹೆಚ್ಚೆಚ್ಚು ಬಾಕಿ ಬೀಳತೊಡಗಿದ್ದು, ಸರ್ಕಾರ ಜಮೀನುಗಳನ್ನು ಮುಟ್ಟುಗೋಲು ಹಾಕಿಕೊಂಡಿತು. ಜೊತೆಗೆ ರೈತ ಸುಸ್ತಿದರನಾಗಲು ಇದ್ದ ಇನ್ನೊಂದು ಕಾರಣ ಕಂದಾಯ ನೀಡುವ ಅವನ ಅಸಮರ್ಥತೆ.[೯] ಆದರೆ ಸರ್ಕಾರದಿಂದ ಸೂಕ್ತ ಪ್ರತಿಕ್ರಿಯೆ ದೊರೆಯಲ್ಲಿಲ್ಲ. ಭೂಕಂದಾಯದ ಬಲತ್ಕಾರದ ವಸೂಲಿ ಹಾಗೆಯೆ ಮುಂದುವರಿಯಿತು. ಸಾಗುವಳಿಯ ವೆಚ್ಚ ವಿಪರೀತ ಹೆಚ್ಚಳ, ರೈತರ ಸಾಲ, ಸಾಲದ ಮೇಲಿನ ಬಡ್ಡಿ, ಮಾರುಕಟ್ಟೆಯ ಏರುಪೇರು ಮುಂತಾದ ಕಾರಣಗಳಿಂದಾಗಿ ರೈತನು ನಾನಾ ರೀತಿಯಲ್ಲಿ ಸಂಕಷ್ಟಕ್ಕಿಡಾದನು. ೧೮೭೯-೮೦ರಿಂದ ೧೮೮೬-೮೭ರ ಅವಧಿಯಲ್ಲಿ ಕಂದಾಯ ಹಿಂಬಾಕಿ ಕಡೂರು ಜಿಲ್ಲೆಯಲ್ಲಿ ಇರಲ್ಲಿಲ್ಲ. ಎಂದರೆ ಭೂಕಂದಾಯ ಪೂರ್ಣಪ್ರಮಾಣದಲ್ಲಿ ಸಲ್ಲಿಕೆಯಾಗಿರುವುದು ತಿಳಿಯುತ್ತದೆ.[೧೦] ಆದರೆ ೧೮೮೭-೮೮ ರಿಂದ ೧೮೯೦-೯೧ರ ಅವಧಿಯಲ್ಲಿ ಕಂದಾಯ ಬಾಕಿ ಪ್ರಮಾಣ ಏರಿಕೆಯಾಗಿರುವುದು ಅಂಕಿ-ಅಂಶಗಳಿಂದ ತಿಳಿಯುತ್ತದೆ. ೧೮೮೭-೮೮ರಲ್ಲಿ ೫೮೨ ಇದ್ದುದ್ದು ೧೮೯೦-೯೧ರಲ್ಲಿ ೬೬,೧೮೭ ರೂಗಳಾಯಿತು. ಒಟ್ಟು ತೆರಿಗೆ ಹಿಂಬಾಕಿ ೯೭,೮೪೮ ರೂಪಾಯಿಗಳಿಗೆ ಏರಿಕೆಯಾಯಿತು.[೧೧] ಭೂಕಂದಾಯ ಮಾಫಿಯ ಬಗ್ಗೆ ರೈತರಿಂದ ಬೇಡಿಕೆ ಹೆಚ್ಚುತ್ತಾ ಹೊದಂತೆ ಸರ್ಕಾರ ಮಾಫಿಯ ಬದಲು ಭೂಕಂದಾಯ ಮುಂದೂಡುವುದು ಪ್ರಸ್ತಾಪಿಸಿತ್ತು. ಹೀಗೆ ಭೂಕಂದಾಯ ಮುಂದೂಡಿದ ನಂತರದವರ್ಷವೂ ಬೆಳೆ ವಿಫಲವಾದರೆ ಮಾತ್ರ ಅದನ್ನು ಮಾಫಿ ಮಾಡಲಾಗುತ್ತಿತ್ತು.[೧೨] ಆದರೆ ಸಾಗುವಳಿಗೊಳ್ಳದ ಬೀಳುಬಿಟ್ಟ ಅರ್ಧಕ್ಕಿಂತ ಹೆಚ್ಚು ಜಮೀನಿನ ಬಗೆಗೆ ವಿಶೇಷ ರಿಯಾಯ್ತಿ ತೋರಿಸಲಿಲ್ಲ.

ಮುಂದೆ ೨೦ನೇ ಶತಮಾನದಲ್ಲಿ ಭೂಕಂದಾಯ ನೀತಿ ವಿರುದ್ಧ ರೈತರು ಮತ್ತು ರಾಷ್ಟ್ರೀಯ ಹೋರಟಗಾರರ ಸಹಕಾರದಿಂದ ೧೯೩೭ರಲ್ಲಿ ಖುಷ್ಕಿ ಕಂದಾಯದ ಪರಮಾವಧಿ ದರವನ್ನು ರೂಪಾಯಿ ೩-೮-೦ಯಿಂದ ರೂಪಾಯಿ ೨ -೧೨-೦ಕ್ಕೆ ಇಳಿಸಿತು. ಇದರಿಂದ ಮಲೆನಾಡಿನ ಭಾಗದ ಪ್ರದೇಶ ಗಳಿಗೆ ಸ್ಥಳಿಯ ಕರಗಳಲ್ಲಿ ಇಳಿಕೆಯಾಯಿತು. ಆದರೆ ರೈತರ ಜೀವನ ಮಟ್ಟದಲ್ಲಿ ಹೆಚ್ಚಿನ ಬದಲಾಣೆಗಳು ಕಂಡುಬರಲಿಲ್ಲ. ಇದರ ಜೊತೆಗೆ ಬಂಡವಾಳಶಾಹಿ ವಾತಾವರಣದ ನಿರ್ಮಾಣ ಭೂಮಿಯ ವರ್ಗಾವಣೆ ಅಥವಾ ಪರಭಾರೆ ಮತ್ತು ಕೃಷಿ ಕಾರ್ಮಿಕರ ಹೆಚ್ಚಳವು ಕಂಡುಬಂದಿತು.

ಈ ಮೇಲಿನ ಅಂಶಗಳಿಂದ ಕೃಷಿಯನ್ನೇ ಅವಲಂಬಿಸಿದ ರೈತವರ್ಗ ವಿವಿಧ ಕಾಲಘಟ್ಟಗಳಲ್ಲಿ ವಿಭಿನ್ನವಾದ ಭೂಕಂದಾಯ ನೀತಿಗಳನ್ನು ಅಳವಡಿಸಿಕೊಂಡರೂ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿಯೂ ಕೂಡ ವ್ಯತಿರಿಕ್ತ ಪರಿಣಾಮಗಳನ್ನೇ ರೈತರ ಮೇಲೆ ಉಂಟುಮಾಡಿತೆಂದು ತಿಳಿದುಬರುತ್ತದೆ. ಮಳೆ ಕೊರತೆ, ಭೀಕರವಾದ ಕ್ಷಾಮಗಳಿಂದಾಗಿ ರೈತರ ಆದಾಯದಲ್ಲಿನ ಇಳಿಕೆ ಯಿಂದ ಬಡತನ, ಅನಾರೋಗ್ಯ, ಸಾವು-ನೋವುಗಳ ಸಂಭವಿಸಿದವು. ಕೃಷಿಯ ಪರ್ಯಾಯ ಆದಾಯಮೂಲಗಳಾದ ಪಶುಪಾಲನೆ ಹಾಗೂ ಗುಡಿಕೈಗಾರಿಕೆಯಲ್ಲಿ ತೀವ್ರತರವಾದ ನಾಶ ಜಿಲ್ಲೆಯಲ್ಲಿ ಕಂಡುಬಂದಿತು.



## ಅಡಿಟಿಪ್ಪಣಿಗಳು

೧. ಬರ್ಟನ್ ಸ್ಟೈನ್, ನೋಟ್ ಆನ್ ಪೀಸೆಂಟ್ ಇನ್ಸರ್ಜೆನ್ಸಿ, ಕೊಲೊನಿಯಲ್ ಮೈಸೂರ್: ಇವೆಂಟ್ ಅಂಡ್ ಪ್ರೊಸೆಸ್.
೨. ತಿಮ್ಮನಹಳ್ಳಿ, ರೈತರು ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳುವಳಿ ಪುಟ ೨೩.
೩. ಚಂದ್ರಶೇಖರ್ ಎಸ್., ದಕ್ಷಿಣ ಭಾರತ (ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ).
೪. ತಿಮ್ಮನಹಳ್ಳಿ, ರೈತರು ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳುವಳಿ, ಪುಟ ೫೭.
೫. Proceedings of the govt., Maharaja of Mysore, 20th may 1893. Page no. 9.
೬ ತಿಮ್ಮನಹಳ್ಳಿ, ರೈತರು ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳುವಳಿ, ಪುಟ ೮೦.
೭. Proceedings of the govt., Maharaja of Mysore, 20th may 1893. Page no. 11.
೮. ತಿಮ್ಮನಹಳ್ಳಿ, ರೈತರು ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳುವ, ಪುಟ ೭೦.
೯. ತಿಮ್ಮನಹಳ್ಳಿ, ರೈತರು ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳುವಳಿ ಪುಟ ೧೧೧.
೧೦. Proceedings of the govt., Maharaja of Mysore, 20th may 1893. Page no. 22.
೧೧. Proceedings of the govt., Maharaja of Mysore, 20th may 1893. Page no. 23.
೧೨. ತಿಮ್ಮನಹಳ್ಳಿ ವೇಣುಗೋಪಾಲ್, ರೈತರು ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳುವಳಿ ಪುಟ ೮೧.

## ಆಕರ ಗ್ರಂಥಗಳು


೧. ತಿಮ್ಮನಹಳ್ಳಿ, ರೈತರು ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳುವಳಿ(೧೮೮೧-೧೯೪೭) ಧಾತ್ರಿ ಪುಸ್ತಕ.
೨. Proceedings of the govt., Maharaja of Mysore, 20th may 1893.
೩. ಮೈಸೂರು ಗೆಜೆಟಿಯರ್, ಸಂಪುಟ ೨, ೨೦೦೪ ಬೆಂಗಳೂರು.
೪. ದಿ ಕೆಂಬ್ರಿಡ್ಜ್ ಎಕನಾಮಿಕ್ ಹಿಸ್ಟರಿ ಆಫ್ ಇಂಡಿಯಾ ೧೭೫೭-೧೯೭೦, ಸಂಪುಟ ೨.
೫. ಮೈಸೂರು ಅಡ್ಮಿನಿಸ್ಟ್ರೇಷನ್ ರಿಪೋರ್ಟ, ಪತ್ರಗಾರ ಇಲಾಖೆ, ಮೈಸೂರು.
೬ ಬರ್ಟನ್ ಸ್ಟೈನ್, ನೋಟ್ ಆನ್ ಪೀಸೆಂಟ್ ಇನ್ಸರ್ಜೆನ್ಸಿ, ಕೊಲೊನಿಯಲ್ ಮೈಸೂರ್: ಈವೆಂಟ್ ಅಂಡ್ ಪ್ರೋಸೆಸ್, ಸೌತ್ ಏಷಿಯಾ ರಿಸರ್ಚ್; ಸಂಪುಟ ೫. ನಂ. ೧, ಮೇ ೧೯೮೫.
೭. ಎಸ್. ಚಂದ್ರಶೇಖರ್, ದಕ್ಷಿಣ ಭಾರತ (ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

# ವಸಾಹತುಷಾಹಿ ಕಾಲದಲ್ಲಿ ಚಿಕ್ಕಮಗಳೂರಿನ ತೋಟಗಾರರ ಸಮಸ್ಯೆಗಳು

ಬಿ.ವಿ. ರವಿರಾಜ್*

೧೮೩೦ರಿಂದ ಯುರೋಪಿಯನ್ನರಿಂದ ಪರಿಚಿತಗೊಂಡ ವಾಣಿಜ್ಯ ತೋಟಗಾರಿಕಾ ಉದ್ಯಮವು ಚಿಕ್ಕಮಗಳೂರು ಜಿಲ್ಲೆಯ ಆರ್ಥಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗೆ ಕಾರಣವಾಗಿದೆ ಎಂದರೆ ತಪ್ಪಾಗಲಾರದು. ಆದರೆ ಬ್ರಿಟಿಷರು ಭಾರತವನ್ನು ಬಿಟ್ಟು ಹೋಗುವವರೆಗೂ ಹಾಗೂ ನಂತರವೂ ತೋಟಗಾರಿಕೆಯನ್ನೇ ತಮ್ಮ ಜೀವನ ಆಧಾರಿತ ಉದ್ಯಮವೆಂದು ನಂಬಿಕೊಂಡು ಬಂದ ಸ್ಥಳೀಯ ಬೆಳೆಗಾರರು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಆಧುನಿಕ ತಂತ್ರಜ್ಞಾನಗಳು ಇನ್ನೂ ಬೆಳಕಿಗೆ ಬಂದಿರದ ಸಂದರ್ಭದಲ್ಲಿ ಬೆಳೆಗಾರರು ಹಲವಾರು ಸವಾಲುಗಳನ್ನು ಎದುರಿಸಿದರು. ಅವುಗಳಲ್ಲಿ ಮುಖ್ಯವಾದುವೆಂದರೆ ಎಡೆಬಿಡದೆ ಸುರಿಯುತ್ತಿದ್ದ ಮಳೆ, ಅಪಾಯಕಾರಿ ಕಾಡು ಪ್ರಾಣಿಗಳಾದ ಹುಲಿ, ಚಿರತೆ, ಕಾಡುಕೋಣಗಳ ಹಾವಳಿ, ದಟ್ಟ ಅರಣ್ಯ ಪ್ರದೇಶಗಳು, ತಂತ್ರಜ್ಞಾನದ ಕೊರತೆ, ಸಂವಹನ ಮಾಧ್ಯಮದ ಕೊರತೆ, ಸಾರಿಗೆ ಸಂಪರ್ಕಕ್ಕೆ ಯೋಗ್ಯವಾಗಿಲ್ಲದ ರಸ್ತೆಗಳು ಹೀಗೆ ಹತ್ತು ಹಲವಾರು ಸಮಸ್ಯೆಗಳನ್ನು ಆರಂಭಿಕ ಹಂತದಲ್ಲಿ ಎದುರಿಸಬೇಕಾಯಿತು.

೧೯ನೇ ಶತಮಾನದಲ್ಲಿ ಆರಂಭವಾಗಿ ಇಂದಿಗೂ ಜನರ ಜೀವನಾಧಾರಿತ ಉದ್ಯಮವಾಗಿರುವ ಈ ಪ್ಲಾಂಟೇಷನ್ ಉದ್ಯಮದಲ್ಲಿ ಕೆಲವೊಂದು ಭಿನ್ನತೆಗಳು ಕೂಡಿದ್ದವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಬಂಡವಾಳಷಾಹಿಗಳು, ಬಂಡವಾಳಷಾಹಿಗಳಲ್ಲದವರು ಎಂಬ ಭಿನ್ನತೆ ಸಾಮಾನ್ಯವಾಗಿತ್ತು, ಬಗೆಹರಿಸಲು ಸಾಧ್ಯವಾಗದ ಸಮಾಸ್ಯಾತ್ಮಕ ಸಿದ್ಧಾಂತಗಳು ಮತ್ತು ಸಾಮಾಜಿಕ ಸಂಬಂಧಗಳು ತೋಟಗಾರಿಕಾ ಆರ್ಥಿಕ ವಲಯಗಳಲ್ಲಿ ಏರ್ಪಟ್ಟಿತ್ತು. ಹಾಗೆಯೇ ರೈತವರ್ಗಗಳು ಕೆಲವೊಮ್ಮೆ ಮಾಲಿಕರಾದರು ಕೆಲವೊಮ್ಮೆ ವಸಾಹತುಷಾಹಿ ಪ್ರಭಾವದಿಂದಾಗಿ ರೈತರಾಗಿ ಕಾರ್ಮಿಕರಾಗುವ ಪರಿಸ್ಥಿತಿ ಎದುರಾಗುತಿತ್ತು. ವಸಾಹತುಷಾಹಿ ಕಾಲದಲ್ಲಿ ತೋಟಗಾರಿಕಾ ಉದ್ಯಮವು ಸ್ವಾತಂತ್ರ್ಯಕ್ಕೆ ಪ್ರಚೋದನಾ ಶಕ್ತಿಯಾಗಿ ಅಥವಾ ಪ್ರೇರಕ ಶಕ್ತಿಯಾಗಿ, ಅಸ್ವಾತಂತ್ರ್ಯ ಶಕ್ತಿಯಾಗಿ ಕಾರ್ಮಿಕರನ್ನು ಪುನಃ ನೇಮಿಸಿಕೊಳ್ಳುವ ವ್ಯವಸ್ಥೆಯಾಗಿ ರೂಪುಗೊಂಡು ಕೂಲಿಕಾರ ವರ್ಗದ, ರೈತವರ್ಗದ ಮೂಲವಾಗಿ ಈ ಎಲ್ಲಾ ವರ್ಗಗಳು ಸೇರಿ ತೋಟಗಳಲ್ಲಿ ದುಡಿಯುತ್ತಿದ್ದಾಗ ಕೆಲವೊಮ್ಮೆ ಆ ವರ್ಗಗಳ ಮೇಲೆ ದೌರ್ಜನ್ಯಗಳು, ದಬ್ಬಾಳಿಕೆಗಳು, ಒತ್ತಡಗಳು ಮೇಲಿನ ವರ್ಗದ ಮಾಲಿಕರಿಂದ ನಡೆಯುತ್ತಿತ್ತು. ಇದರ ವಿರುದ್ಧವಾಗಿ ಈ ರೈತಾಪಿ ಚಳುವಳಿಗಳು ಬೇರೆ ಬೇರೆ ಕಾಲ ಘಟ್ಟದಲ್ಲಿ ನಾನಾ ರೀತಿಯಲ್ಲಿ ನಡೆದವು.[೧]

ಅಂದಿನ ಮೈಸೂರು ರಾಜ್ಯದಲ್ಲಿ ಮುಖ್ಯವಾಗಿ ಭೂಮಿಗಳು ಇಂಗ್ಲೀಷರ ಜಮೀನುದಾರರ ಒಡೆತನದಲ್ಲಿ ಹೆಚ್ಚಾಗಿದ್ದವು ಇಂಗ್ಲಿಷರು ಆರಂಭಿಸಿದ ತೋಟಗಾರಿಕಾ ಉದ್ಯಮಗಳ ಕುರಿತು ಸ್ಥಳೀಯ ಜನ ಸಮುದಾಯಕ್ಕೆ ಆರಂಭಿಕ ಹಂತದಲ್ಲಿ ಉತ್ತಮ ಒಲವು ಕಂಡುಬರುವುದಿಲ್ಲ ಇದೊಂದು ಬ್ರಿಟಿಷರ ದಂದೆಯೆಂದೇ ಪರಿಗಣಿಸಲಾಗುತ್ತಿತ್ತು. ಆದರೆ ಕೆಲವು ಐರೋಪ್ಯ ಪ್ಲಾಂಟರ್‌ಗಳು ಸ್ಥಳೀಯ ಜನರ ಮೆಚ್ಚುಗೆಗೆ ಪಾತ್ರರಾಗಿ ಕಾರ್ಮಿಕವರ್ಗಕ್ಕೆ ಅನೇಕ ಉದ್ಯೋಗವಕಾಶವನ್ನು ಒದಗಿಸಿ ರಾಜ್ಯದ ಆರ್ಥಿಕ ಮಟ್ಟವು ಸುಧಾರಣೆಗೊಳ್ಳಲು ಕಾರಣರಾದರು. ಜೀವನ ವಿಧಾನದಲ್ಲಿ ಹಲವಾರು ಸುಧಾರಣೆಗಳು ಕಂಡವು ಇದರಿಂದಾಗಿ ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗಳಾಗುವುದರ ಜೊತೆಗೆ ಬಡ ರೈತಾಪಿ ವರ್ಗಗಳ ಸಾಲದ ಬದುಕಿಗೆ ಮುಕ್ತಿಯನ್ನು ಈ ಉದ್ಯಮವು ನೀಡಿತು. ಕ್ರಮೇಣ ಬಡವರ್ಗದ ರೈತಾಪಿ ವರ್ಗಗಳು ಯುರೋಪಿಯನ್ನರು ಆರಂಭಿಸಿದ ತೋಟಗಾರಿಕಾ ಉಧ್ಯಮವನ್ನು ಅನುಸರಿಸುತ್ತಾ ಸಾಗಿ ಸ್ವಂತ ಕೃಷಿಯಲ್ಲಿ ತೊಡಗಿಕೊಳ್ಳುವಂತಾಯಿತು. ಇದರಿಂದಾಗಿ ತಮ್ಮ ಜೀವನ ಮಟ್ಟದಲ್ಲಿ ಬದಲಾವಣೆಗಳಾಯಿತಲ್ಲದೆ, ಆರ್ಥಿಕ ಅಭಿವೃದ್ಧಿಗೂ ಪ್ರೇರಕವಾಯಿತು.

* ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು-೫೭೪೧೯೯, ಮೊ. ೯೬೧೧೮೭೩೩೮೫

ಕೊಡಗು ಹಾಗೂ ಮೈಸೂರಿನಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುವಲ್ಲಿ ಯುರೋಪಿಯನ್ನರು ವಹಿಸಿದ ಶ್ರಮ ಅಪಾರ. ತೋಟದ ಕೆಲಸವನ್ನು ನಿರ್ವಹಿಸುವ ಕೂಲಿಗಳಿಗೆ ಮುಂಗಡವಾಗಿ ಹಣವನ್ನು ಪಾವತಿ ಮಾಡುತ್ತಿದ್ದರಲ್ಲದೆ ಆನಂತರ ಕೂಲಿಗಳನ್ನು ಕುಟುಂಬ ಸಮೇತ ಕರೆಯಿಸಿ ತೋಟಗಳಲ್ಲಿ ಕೆಲಸವನ್ನು ನೀಡುತ್ತಿದ್ದರು. ಕೊಡಗಿನಲ್ಲಿ "ವೇಸ್ಟ್ ಲ್ಯಾಂಡ್ ನಿಯಮ"ಗಳನ್ನು ಜಾರಿಗೆ ತಂದು ಅದರ ಪ್ರಕಾರ ೨ ರೂ. ಪ್ರತಿ ಎಕರೆಗೆ ನಿಗದಿ ಮಾಡಿದರೆ, ಮೈಸೂರಿನಲ್ಲಿ ಎಕರೆಯ ಬೆಲೆ ೧೦ರೂ ನಿಗದಿಪಡಿಸಲಾಯಿತು. ಮೈಸೂರಿನಲ್ಲಿ ಕಾಫಿ ಭೂಮಿಗೆ ಸಂಬಂಧಿಸಿದಂತೆ ಬೆಳೆಯಲು ಸೂಕ್ತವಾದ ಎಲ್ಲಾ ಭೂಮಿಯನ್ನು ಬಳಸತೊಡಗಿದರು, ಅಲ್ಲದೆ ಖಾಸಗಿ ವ್ಯಕ್ತಿಗಳ ಒಡೆತನದಲ್ಲೂ ಭೂಮಿ ಇದ್ದು ೧೮೬೫ರಲ್ಲಿ ಮೈಸೂರು ಕಾಫಿ ಲ್ಯಾಂಡ್ ನಿಯಮವನ್ನು ಔಪಚಾರಿಕವಾಗಿ ಸಾರ್ವಜನಿಕರ ಗಮನಕ್ಕೆ ತರಲಾಯಿತು, ಆಪ್ರಕಾರ ಒಂದೂವರೆ ಎಕರೆಯ ಬೆಲೆಯ ಭೂಮಿಗೆ ರೂ. ೧ ದರ ನಿಗದಿ ಮಾಡಲಾಯಿತು, ಪ್ರತಿ ೩೦ ವರ್ಷಕ್ಕೆ ಒಮ್ಮೆ ಪರಿಷ್ಕರಣೆ ಮಾಡಬೇಕಿತ್ತು.[೨]

ಎಸ್ಟೇಟುಗಳಿಗೆ ಬೇಕಾಗುವ ಕೂಲಿ ಕಾರ್ಮಿಕರನ್ನು ಸರಬರಾಜು ಮಾಡುವ ಜವಾಬ್ದಾರಿಯನ್ನು ಗುತ್ತಿಗೆದಾರರು ವಹಿಸಿಕೊಳ್ಳುತ್ತಿದ್ದರು. ಇದರಿಂದಾಗಿ ಗುತ್ತಿಗೆದಾರರೂ ಸಹ ಹೆಚ್ಚು ಲಾಭಗಳಿಸುತ್ತಿದ್ದಲ್ಲದೆ ಕಾರ್ಮಿಕರಿಗೆ ಜೀವನಕ್ಕಾಗಿ ಉದ್ಯೋಗವಕಾಶಗಳನ್ನು ನೀಡುವ ಭರವಸೆಗಳನ್ನು ನೀಡುತ್ತಿದ್ದರು. ಇವರು ಪ್ಲಾಂಟರುಗಳಿಂದ ಮುಂಗಡ ಹಣವನ್ನು ಪಡೆದು ತೋಟದ ಕೆಲಸಕಾರ್ಯಗಳಿಗೆ ಬೇಕಾಗುವ ನಿಗದಿತ ಕೂಲಿಗಳನ್ನು ಸರಬರಾಜು ಮಾಡುವ ಭರವಸೆಗಳನ್ನು ನೀಡಿ ಹಣ ಮತ್ತಿತರ ಸೌಲಭ್ಯ ಪಡೆಯುತ್ತಿದ್ದರು. ಆದರೆ ನಿಗದಿತ ಸಮಯದಲ್ಲಿ ಕೂಲಿಯಾಳುಗಳನ್ನು ಸರಬರಾಜು ಮಾಡದೆ ಮೋಸ, ವಂಚನೆಯನ್ನೆಸಗುತ್ತಿದ್ದರು. ಇದರಿಂದಾಗಿ ತೋಟದ ಮಾಲೀಕ ವರ್ಗಕ್ಕೆ ಅಪಾರ ನಷ್ಟವಾಗುತ್ತಿತ್ತಲ್ಲದೆ ಗುತ್ತಿಗೆದಾರರು ಎಸಗುತ್ತಿದ್ದ ಮೋಸ ವಂಚನೆ ಮುಂತಾದ ಕೃತ್ಯಗಳಿಗೆ ಕಡಿವಾಣ ಹಾಕಲು ಸರ್ಕಾರವು ೧೮೫೯ರ XIII ಕಾಯ್ದೆಯನ್ನು ಜಾರಿಗೊಳಿಸಿತು. ಈ ಕಾಯ್ದೆಯ ಪ್ರಕಾರ ವಂಚನೆ ಮತ್ತು ಗುತ್ತಿಗೆದಾರರ ಲೋಪಗಳನ್ನು ತಡೆಗಟ್ಟಲು ದಂಡನಾತ್ಮಕ ಶಾಸನವನ್ನು ಹೊಂದಿದ್ದು ಈ ಕಾಯ್ದೆಯಡಿ ತನಿಖೆ ನಡೆಸಿ ಶಿಕ್ಷಿಸುವ ಅಂಶಗಳನ್ನೊಳಗೊಂಡಿತ್ತು. ವಂಚನೆ, ಕರ್ತವ್ಯ ಲೋಪ ಮುಂತಾದ ಪ್ರಕರಣಗಳು ಸಂಭವಿಸಿದಲ್ಲಿ ಈ ಕಾಯ್ದೆಯಡಿಯಲ್ಲಿಯೇ ಶಿಕ್ಷೆ ವಿಧಿಸುವ ಪದ್ಧತಿ ಜಾರಿಗೆ ಬಂದಿತು.[೩] ಹೀಗೆ ರೂಪಿತವಾದ ಕಾಯ್ದೆಯು ಪ್ಲಾಂಟರನಿಗೆ ಸಹಾಯಕವಾಗಿತ್ತು. ಆದರೆ, ಕಾರ್ಮಿಕರಿಗೆ ಸಿಗಬಹುದಾದ ಸವಲತ್ತು ಮತ್ತು ವೇತನದ ದೃಷ್ಟಿಯಿಂದ ಕಠಿಣವಾಗಿತ್ತು.

ಲಾಭದಾಯಕ ಉದ್ದಿಮೆಯಾದ ತೋಟಗಾರಿಕೆಯನ್ನು ಸ್ಥಳೀಯರು ಏಕಕಾಲದಲ್ಲಿ ಬೆಳೆಯಲು ಒಪ್ಪಲಿಲ್ಲ. ಬದಲಾಗಿ ಐರೋಪ್ಯರ ಕೃಷಿ ನೀತಿಗಳನ್ನು ತಮ್ಮ ಹಿಡುವಳಿ ಭೂಮಿಗಳಲ್ಲಿಯೂ ಅಳವಡಿಸುವ ನಿರ್ಧಾರಕ್ಕೆ ಬಂದರು. ಈ ಬದಲಾವಣೆಯನ್ನು ಆರ್ಥಿಕ ಹಿನ್ನಲೆಯಲ್ಲಿ ನೋಡುವುದಾದರೆ, ಜಿಲ್ಲೆಯ ರೈತರು ವಾಣಿಜ್ಯ ಬೆಳೆಗಳ ಆಗಮನಕ್ಕೂ ಪೂರ್ವದಲ್ಲಿ ಬೆಳೆಯುತ್ತಿದ್ದ ಆಹಾರ ಬೆಳೆಗಳಿಗೆ ಉತ್ತಮ ಬೇಡಿಕೆ, ಮಾರುಕಟ್ಟೆ ಸಿಗದೆ, ಜೀವನವನ್ನು ನಿರ್ವಹಿಸುವುದು ಕಷ್ಟವಾದಾಗ ಅನಿವಾರ್ಯವಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯಬೇಕಾಯಿತು. ಅಲ್ಲದೆ, ಸರ್ಕಾರವೂ ತೋಟಗಾರಿಕಾ ಕೃಷಿಗೆ ಕಡಿಮೆ ದರದಲ್ಲಿ ಭೂಮಿಯನ್ನು ನೀಡುವ ಯೋಜನೆಗಳನ್ನು ಜಾರಿಗೆ ತಂದದ್ದರಿಂದ, ಹಾಗೆಯೇ, ರಾಜಕೀಯ ಪ್ರಭಾವದಿಂದಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಒಪ್ಪಬೇಕಾಯಿತು. ಹೀಗೆ, ಜಿಲ್ಲೆಯಲ್ಲಿ ಹಂತಹಂತವಾಗಿ ಸ್ಥಳೀಯ ಬೆಳೆಗಾರರ ಅಭ್ಯುದಯವಾಯಿತು. ಸ್ಥಳೀಯ ಬೆಳೆಗಾರರಲ್ಲಿ ಪ್ರಮುಖರೆಂದರೆ ಮುಡುಬ ರಾಮಣ್ಣ ಹೆಗ್ಗಡೆ, ಹಾಜಿ ಮಹಮ್ಮದ್ ಹುಸೇನ್ ಸಾಹೇಬ್ ಮತ್ತು ಹಾಜಿ ಮಹಮ್ಮದ್ ಇಮಾಂ ಸಾಹೇಬ್, ಕೆಂದಲ್‌ಹಕ್ಲು ಕೆ. ಮಹಮ್ಮದಾಲಿ ಸಾಹೇಬರು, ಎಂ. ಎಲ್. ಲಚ್ಚಯ್ಯ ಶೆಟ್ಟಿ ಹಾಗೂ ಎಂ.ಎಲ್. ನಾಗಪ್ಪ ಶೆಟ್ಟಿ, ಎಂ.ಎಸ್. ದೇವೇಗೌಡರು, ತೊಗರಿಹಂಕಲ್ ಮಲ್ಲೇಗೌಡರು ೧೮೯೧-೧೯೬೫, ಸಂಗಮೇಶ್ವರಪೇಟೆಯ ಕೆ.ಪಿ. ರಾಮಣ್ಣ ಶೆಟ್ಟಿ, ಅರಳಗುಪ್ಪೆ ಚಂದ್ರೇಗೌಡರು, ಉರ್ವಿನ್‌ಖಾನ್ ಯು.ಕೆ. ಲಕ್ಷ್ಮಣಗೌಡರು, ಬಾಗ್‌ಮನೆ-ಅತ್ತಿಕೊಂಡ ಚಿನ್ನೇಗೌಡರು ಮುಂತಾದವರು.

ಮುಡುಬ ರಾಮಣ್ಣ ಹೆಗ್ಗಡೆಯವರು ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ ತಾಲೂಕಿನ ಮುಡುಬ ಗ್ರಾಮದವರು. ಇವರು ಕೆಳಗೂರು ಎಸ್.ಎಲ್. ಮಥಾಯಿಸ್‌ರವರಿಂದ ೮೫,೦೦೦ರೂಗಳಿಗೆ ೧೯೧೪ರಲ್ಲಿ ಹೆಗ್ಗಾನು ತೋಟವನ್ನು ಕೊಂಡುಕೊಂಡರು. ಇವರು ೧೯೨೦ರಲ್ಲಿ ನಿದನರಾಗುವುದಕ್ಕೂ ಪೂರ್ವದಲ್ಲಿ ಹಾವೇರಿಯಲ್ಲಿ ಏಲಕ್ಕಿ ಮಂಡಿಯನ್ನು ಸ್ಥಾಪನೆ ಮಾಡಿದ್ದರಲ್ಲದೆ, ಶಿವಮೊಗ್ಗದ ರತನ್‌ಮಲ್, ಪಂಚಮಲ್ ಮತ್ತು ಹೀರಾಮುಲ್ ಎಂಬುವವರನ್ನು ತನ್ನ ಪಾಲುದಾರರನ್ನಾಗಿ ಮಾಡಿಕೊಂಡಿದ್ದರು. ಇವರ ಏಲಕ್ಕಿ ಮಂಡಿಯಿಂದ ವರ್ಷದಲ್ಲಿ ೫೦,೦೦೦ ಮಣದಷ್ಟು ಏಲಕ್ಕಿಯು ಇಂಗ್ಲೆಂಡಿಗೆ ರಫ್ತಾಗುತ್ತಿತ್ತು. ಆದರೆ, ದ್ವಿತೀಯ ಮಹಾಯುದ್ಧದ ಸಂದರ್ಭದಲ್ಲಿ ಜಾಗತಿಕ ಮಾರುಕಟ್ಟೆಯಲ್ಲಿ ತೀವ್ರ

ಕುಸಿತವುಂಟಾಗಿದ್ದುದರಿಂದ ಕ್ರಮೇಣ ಮಂಡಿಯು ಮುಚ್ಚಲ್ಪಟ್ಟಿತು.[೪] ಇದರಿಂದಾಗಿ ಅವರು ಹೂಡಿದ ಬಂಡವಾಳ ನಷ್ಟವಾಯಿತು. ಹಾಗೆಯೇ ಮೂಲತಃ ತಮಿಳುನಾಡಿನವರಾದ ವೈದ್ಯನಾಥನ್‌ರವರು ೧೯೫೭ರ ನಂತರ ಜಿ. ವಿ. ಆರ್. ಫ್ರಂಡ್ ಎಂಬ ಆಂಗ್ಲೇಯನಿಂದ ಕರಡಿಖಾನ್, ಕೊಂಡದಖಾನ್ ತೋಟಗಳನ್ನು ಹಾಗೂ ಅಲೆಗ್ಸಾಂಡರ್ ಎಂಬಾತನಿಂದ ಗಂಗೆಗಿರಿ ಕಾಫಿ ತೋಟವನ್ನು ಕೊಂಡುಕೊಂಡರು. ಇವರು ೧೯೭೨-೭೫ರಲ್ಲಿ ಉಪಾಸಿಯ ಅಧ್ಯಕ್ಷರೂ ಆಗಿ ನೇಮಕವಾಗಿ ಸ್ಥಳೀಯ ಕಾಫಿ ಬೆಳೆಗಾರರ ಸಮಸ್ಯೆಗಳನ್ನು ಅರಿತು ಪರಿಹಾರಕ್ಕಾಗಿ ಸರ್ಕಾರಕ್ಕೆ ಆಗಾಗ ಒತ್ತಾಯಿಸುತ್ತಿದ್ದರು.[೫] ಅಂತೆಯೇ ಹಾಜಿ ಮಹಮ್ಮದ್ ಹುಸೇನ್ ಸಾಹೇಬ್ ಮತ್ತು ಹಾಜಿ ಮಹಮ್ಮದ್ ಇಮಾಂ ಸಾಹೇಬ್ ಇವರು ಮೂಲತಃ ಬಿಜಾಪುರದವರಾಗಿದ್ದು, ೧೯೨೫ಕ್ಕೂ ಪೂರ್ವದಲ್ಲಿ ಮಲೆನಾಡಿಗೆ ಬಂದು ಸುಮಾರು ೧೦೦೦ ಎಕರೆಗಳಷ್ಟು ಕರಡಿ ಬೆಟ್ಟ ಗ್ರೂಫ್ ಮತ್ತು ಕೊಪ್ಪ ಗ್ರೂಫ್ ತೋಟಗಳನ್ನು ಕರಡಿ ಬೆಟ್ಟ, ಐಗೂರು ಮತ್ತು ಮುಲ್ಲಾಪುರಗಳಲ್ಲಿ ಮಾಡಿದರೆ, ೨೦೦೦ ಎಕರೆಗಳಷ್ಟು ಕಾಫಿ ತೋಟವನ್ನು ಕೊಪ್ಪ ಗ್ರೂಫಿಗೆ ಸೇರುವ ಸಿದ್ದರಬನ, ಗುಬ್ಬೂರು ಮತ್ತು ಕೋಡಿಹಿತ್ಲುಗಳಲ್ಲಿ ಮಾಡಿದ್ದರು.[೬]

೧೯೩೬ರಲ್ಲಿ ಹುಸೇನ್ ಸಾಹೇಬರು ತಮ್ಮ ಒಡೆತನದಲ್ಲಿದ್ದ ಕರಡಿಬೆಟ್ಟ ತೋಟವನ್ನು ವಾಲ್ಕಾಟ್ ಬ್ರದರ್ಸ್‌ಗೆ ಮಾರಾಟ ಮಾಡಬೇಕಾಯಿತು. ತೋಟದ ನಿರ್ವಹಣೆಗಾಗಿ ಅಗತ್ಯವಿದ್ದ ವೆಚ್ಚವನ್ನು ವಾಲ್ಕಾಟ್ ಬ್ರದರ್ಸ್‌ರಿಂದಲೇ ಪಡೆಯಬೇಕಾಯಿತು. ಅಲ್ಲದೆ ಅವರಿಂದ ಪಡೆದ ಸಾಲದ ಮೊತ್ತವೂ ಅಧಿಕವಾಗಿತ್ತು. ಹೀಗೆ ಮರುಪಾವತಿಸಲಾಗದೆ ಪ್ರತಿ ಎಕರೆಯನ್ನು ನೂರು ರೂ.ಗಳಿಗೆ ಮಾರಾಟ ಮಾಡಬೇಕಾಯಿತು. ಹಾಗೆಯೇ, ಇವರ ಸಿದ್ದರಬನ, ಗುಬ್ಬೂರು, ಕೋಡಿಹಿತ್ಲು ತೋಟಗಳ ಖರ್ಚುವೆಚ್ಚಗಳನ್ನು ಭರಿಸಲಾಗದೆ ಮಾರಾಟ ಮಾಡಬೇಕಾಯಿತು.[೭]

ಇನ್ನು ಕಂದಾಯ ಪದ್ಧತಿಯಲ್ಲಿ ಸ್ಥಳೀಯರು ಎದುರಿಸಿದ ಸಮಸ್ಯೆಗಳನ್ನು ನೋಡುವುದಾದರೆ ಭೂಮಿಯನ್ನು ಉಳುಮೆ ಮತ್ತು ಉತ್ಪಾದಕತೆಯ ಆಧಾರಕ್ಕನುಗುಣವಾಗಿ ವಿಂಗಡನೆ ಮಾಡಲಾಗಿತ್ತು. ಅವುಗಳೆಂದರೆ ಬಟಾಯಿ, ಗೇಣಿಮುಕ್ತ ಹಿಡುವಳಿ, ಕೊಡಿಗೆ ಭೂಮಿಗಳು ಹಾಗೂ ಖಾಯಾಂ ಗುತ್ತಾ ಹಿಡುವಳಿಗಳು ಪ್ರಮುಖವಾದವುಗಳು. ಮುಂದೆ ಬ್ರಿಟಿಷರ ಕಾಲಾವಧಿಯಲ್ಲಿ ಈ ಎಲ್ಲಾ ಕಂದಾಯ ಪದ್ಧತಿಗಳಲ್ಲಿ ಮಾರ್ಪಾಡು ಮಾಡಲಾಯಿತು. ಬಟಾಯಿ ಕಂದಾಯ ಪದ್ಧತಿಯಲ್ಲಿ ಬೆಳೆಯುವ ಬೆಳೆಗೆ ಅನುಗುಣವಾಗಿ ಭೂಮಿಯನ್ನು ವಿಭಾಗಿಸಿ ಬಟಾಯಿ ಭೂಮಿಗಳನ್ನು ನೀಡಲಾಗುತ್ತಿತ್ತು. ಇಂತಹ ಭೂಮಿಯಲ್ಲಿ ಯಾವುದೇ ವಿತ್ತೀಯ ನಿರ್ಧಾರವಿಲ್ಲದೆ ಬೆಳೆಯ ಪ್ರಮಾಣದ ಆಧಾರದಲ್ಲಿ ಕಂದಾಯವನ್ನು ನಿರ್ಧರಿಸಲಾಗುತ್ತಿತ್ತು. ಇಂತಹ ಭೂಮಿಯನ್ನು ಪಡೆದ ರೈತರು ಹಲವಾರು ವರ್ಷಗಳವರೆಗೆ ಕೃಷಿಯನ್ನು ನಡೆಸುವ ಅವಕಾಶವನ್ನು ಹೊಂದಿದ್ದರು. ರೈತರು, ಭೂ ಒಡೆಯರು ಮತ್ತು ಸರ್ಕಾರಗಳು ಪದ್ಧತಿಯನುಸಾರ ಉತ್ಪಾಧಿಸಿದ ಬೆಳೆಯನ್ನು ಸಮವಾಗಿ ಹಂಚಿಕೊಳ್ಳುತ್ತಿದ್ದರು. ಕೆಲವೊಮ್ಮೆ ರೈತನಿಗೆ ೨/೩ರಷ್ಟು ಅಥವಾ ಅದಕ್ಕಿಂತ ಹೆಚ್ಚು ಬೆಳೆಯು ಲಾಭವಾಗುತ್ತಿತ್ತು. ಅಡಿಕೆ ಬೆಳೆಯನ್ನು ಬೆಳೆಯುತ್ತಿದ್ದ ಬಟಾಯಿ ಭೂಮಿಯನ್ನು ಹೊಂದಿದ್ದ ರೈತರು ತಾವು ಪಡೆದ ಭೂಮಿಯಲ್ಲಿ ವಂಶಪಾರಂಪರ್ಯವಾಗಿ ಕೃಷಿ ಚಟುವಟಿಕೆಗಳನ್ನು ನಡೆಸಬಹುದಿತ್ತು. ಸರ್ಕಾರಕ್ಕೆ ಕಂದಾಯವನ್ನು ಸಲ್ಲಿಸಲು ವಿಫಲನಾದರೆ, ಸರ್ಕಾರವು ನೀಡುತ್ತಿದ್ದ ಬಾಕಿಯನ್ನು ಧೀರ್ಘಕಾಲದವರೆಗೆ ಮುಂದುವರೆಸುತ್ತಿರಲಿಲ್ಲ. ಈ ಮಾದರಿಯ ಬಟಾಯಿ ಕಂದಾಯ ವ್ಯವಸ್ಥೆಯು ಜಿಲ್ಲೆಯ ಬೀರೂರಿನ ಭಾಗದಲ್ಲಿದ್ದ ಅಡಿಕೆ ತೋಟಗಳಿಗೆ ಹೆಚ್ಚು ಅನ್ವಯ ಮಾಡಲಾಗಿತ್ತು.[೮] ಬಟಾಯಿ ಭೂಮಿಯಿಂದ ಪಡೆದ ಉತ್ಪಾದನೆಯಲ್ಲಿ ೧ ಗೋಣಿ (ಚೀಲ)ದಷ್ಟು ಸರ್ಕಾರಕ್ಕೆ ಸಲ್ಲಿಸಬೇಕಿತ್ತು. ರಾಜ್ಯದ ಇತರೆ ಜಿಲ್ಲೆಗಳಲ್ಲಿ ಈ ಪದ್ಧತಿಯನ್ನು ನಿಷೇಧಿಸಲಾಗಿತ್ತು. ಇದರಂತೆ ಜಿಲ್ಲೆಯಲ್ಲಿ ಗೇಣಿಮುಕ್ತ ಹಿಡುವಳಿ ಪದ್ಧತಿಯೂ ಜಾರಿಯಲ್ಲಿದ್ದಿತು. ಧಾರ್ಮಿಕ ಕೇಂದ್ರಗಳಿಗೆ, ಅಗ್ರಹಾರಗಳಿಗೆ ಹಿಡುವಳಿಗಾಗಿ ಸರ್ಕಾರವು ಇಂತಹ ಭೂಮಿಯನ್ನು ನೀಡುತ್ತಿತ್ತು. ಬ್ರಾಹ್ಮಣರ ಸಂಘ ಸಂಸ್ಥೆಗಳು, ಧಾರ್ಮಿಕ ಕೇಂದ್ರಗಳಿಗೆ ದೇವಾದಾಯ ಇನಾಂ, ಧರ್ಮಾದಾಯ ಇನಾಂಗಳನ್ನು ವಿತರಿಸಲಾಗುತ್ತಿತ್ತು. ಹೀಗೆ ವಿತರಿಸಿದ ಭೂಮಿಗೆ ಯಾವುದೇ ಕಂದಾಯ, ಸುಂಕವನ್ನು ವಿಧಿಸುತ್ತಿರಲಿಲ್ಲ. ಇಂತಹ ಭೂಮಿಗಳಿಗೆ 'ಸರ್ವಮಾನ್ಯ ಇನಾಂ' ಭೂಮಿ, ತೆರಿಗೆ ಮುಕ್ತ ಭೂಮಿ ಎಂದು ಕರೆಯಲಾಗುತ್ತಿತ್ತು. ಹೀಗೆ ಪಡೆದ ಭೂಮಿಯಲ್ಲಿ ಹಿಡುವಳಿಯನ್ನು ನಡೆಸಿ ಸಂಪೂರ್ಣ ಆದಾಯವನ್ನು, ಬೆಳೆಯನ್ನು ಅನುಭೋಗಿಸುವ ಹಕ್ಕನ್ನು ನೀಡಲಾಗಿತ್ತು. ಹಾಗೆಯೇ ಪರಿಸ್ಥಿತಿಗನುಗುಣವಾಗಿ ಅಲ್ಪ ಪ್ರಮಾಣದ ತೆರಿಗೆಯನ್ನು ವಿಧಿಸುವ ಭೂಮಿಯನ್ನು 'ಕೊಡಿಗೆ ಭೂಮಿಗಳು' ಎನ್ನುತ್ತಿದ್ದರು ಇಂತಹ ಭೂಮಿಗಳು ತೆರಿಗೆಯಿಂದ ಮುಕ್ತತೆಯನ್ನು ಪಡೆದಿದ್ದವು. ಆದರೆ, ಇಂತಹ ಭೂಮಿಯನ್ನು ಪಾಳು ಬಿಡುವ ಹಾಗಿರಲಿಲ್ಲ.

ಜಿಲ್ಲೆಯಲ್ಲಿದ್ದ ಇನ್ನೊಂದು ಕಂದಾಯದ ವಿಧಾನವೆಂದರೆ ಅದು 'ಖಾಯಾಂ ಗುತ್ತಾ ಹಿಡುವಳಿ ಪದ್ದತಿ' ಈ ಪದ್ಧತಿಯಲ್ಲಿ ನಿಗದಿತ ಸಮಯವನ್ನು ನಿಗಧಿಪಡಿಸದೆ ಸಂಪೂರ್ಣವಾಗಿ ಇಡೀ ಹಳ್ಳಿಗೆ ವಿಧಿಸಲಾಗುತ್ತಿದ್ದ ಕಂದಾಯ ಪದ್ಧತಿಯಾಗಿತ್ತು. ಈ ವ್ಯವಸ್ಥೆಯು ೧೮೧೦-೧೮೩೧ರ ಪೂರ್ಣಯ್ಯ ಹಾಗೂ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ

ಆಳ್ವಿಕೆಯ ಅವಧಿಯಲ್ಲಿ ಅಸ್ತಿತ್ವಕ್ಕೆ ಬಂದಿತು. ಇದರ ಪ್ರಕಾರ ೩ರಿಂದ ೫ವರ್ಷಗಳವರೆಗೆ ಕಂದಾಯದಲ್ಲಿ ಸಡಿಲಿಕೆ ಇದ್ದಿತು. ಬೆಳೆಗಳು ಕಠಾವಿಗೆ ಬಂದ ಸಂದರ್ಭದಲ್ಲಿ, ಕಠಾವಿನ ನಂತರ ಹಳ್ಳಿಯ ಪಟೇಲ, ಶಾನುಭೋಗ ಅಥವಾ ಸರ್ಕಾರ್‌ಗಳ ಸೇವಕರುಗಳಿಗೆ ನಿಗದಿತ ಕಂದಾಯವನ್ನು ಸಲ್ಲಿಸಬೇಕಿತ್ತು. ಹೀಗೆ ಸಂಗ್ರಹವಾದ ಕಂದಾಯವು ನಂತರ ಸರ್ಕಾರಕ್ಕೆ ಸಂದಾಯವಾಗುತ್ತಿತ್ತು. ಈ ವ್ಯವಸ್ಥೆಯಲ್ಲಿ ಗುತ್ತಿಗೆಯನ್ನು ಪಡೆದ ಗುತ್ತಿಗೆದಾರನು ಹೆಚ್ಚು ಲಾಭವನ್ನು ಇಟ್ಟುಕೊಳ್ಳುವಂತಿರಲಿಲ್ಲ. ಉತ್ಪಾದನೆಯ ೧ನೇ ೨ರಷ್ಟು (೧/೨) ಪಾಲನ್ನು ರೈತನು ಹೊಂದಬಹುದಿತ್ತು. ವಂಚನೆಯೆಸಗುವ ರೈತರುಗಳಿಗೆ ಸರ್ಕಾರವು ಆಯಾ ಹಳ್ಳಿಯ ಸರ್ಕಾರ್ ಸರ್ವೆಂಟ್‌ಗಳಿಗೆ ವಸೂಲಿಯ ಜವಾಬ್ದಾರಿ, ವಂಚನೆ ತಡೆ ಮುಂತಾದ ಜವಾಬ್ದಾರಿಯನ್ನು ನೀಡಿತ್ತು. ಖಾಯಂ ಗುತ್ತಾ ಭೂಮಿಗಳನ್ನು ಮಾರಾಟ ಮಾಡುವುದು ಕಡಿಮೆಯಾಗಿತ್ತು. ಖಾಯಾಂ ಗುತ್ತಾ ಕಂದಾಯ ಭೂಮಿಯು ಹೆಚ್ಚಾಗಿ ಹೊಂದಿದ್ದ ಟ್ಯಾಂಕುಗಳು, ಫಲವತ್ತತೆ ಹಾಗೂ ಸಂಪತ್ತಿನ ಲಭ್ಯತೆಗೆ ಅನುಗುಣವಾಗಿ ಹೆಚ್ಚು ಬೆಲೆಯನ್ನು ಅಂತಹ ಭೂಮಿಗೆ ನಿಗದಿಪಡಿಸಲಾಗುತ್ತಿತ್ತು.

**ಬ್ರಿಟಿಷರ ಕಾಲಾವಧಿಯಲ್ಲಿ ಕಂದಾಯ ಪದ್ಧತಿ:** ಬ್ರಿಟಿಷರ ಆಡಳಿತಾವಧಿಯಲ್ಲಿ ಭೂ ಹಿಡುವಳಿ ಪದ್ಧತಿಯಲ್ಲಿ ಬದಲಾವಣೆಗಳಾದವು ಬ್ರಿಟಿಷರು ಪೂರ್ವದಲ್ಲಿದ್ದ ಕಂದಾಯ ಪದ್ಧತಿಗಳಲ್ಲಿ ಬದಲಾವಣೆಗಳನ್ನು ತಂದರು. ರಾಜ್ಯದ ವಿವಿಧ ಭೂ ಹಿಡುವಳಿದಾರರು ಹೊಂದಿದ್ದ ಭೂಮಿಯನ್ನು ಮೊದಲು ನೋಂದಣಿ ಮಾಡುವ ವ್ಯವಸ್ಥೆಯನ್ನು ಜಾರಿಗೆ ತಂದರು. ಈ ಹಿಂದೆ ಉತ್ಪಾದನೆಯಲ್ಲಿ ರಾಜನ ಪಾಲು ಎಂಬುದಾಗಿದ್ದ, ವಾರ್ಷಿಕವಾಗಿ ಸಲ್ಲಿಸಬೇಕಿದ್ದ ಉತ್ಪಾದನೆ (ಕಂದಾಯ)ಯನ್ನು ಕಾಣಿಕೆ ನೀಡುವುದನ್ನು ರದ್ದುಪಡಿಸಿ, ಹಣದ ರೂಪದಲ್ಲಿ ಪಾವತಿ ಮಾಡುವ ನೀತಿಯನ್ನು ಜಾರಿಗೆ ತಂದರು. ಆದರೆ, ಹೀಗೆ ಪಾವತಿ ಮಾಡಬೇಕಿದ್ದ ಹಣವು ಹಿಡುವಳಿದಾರರ ಬೆಳೆಯು ಉತ್ತಮವಾಗಿದ್ದರೂ, ಉತ್ತಮವಾಗಿಲ್ಲದಿದ್ದರೂ, ಬೆಳೆಯನ್ನು ಬೆಳೆದರೂ, ಬೆಳೆಯದಿದ್ದರೂ ಕಡ್ಡಾಯವಾಗಿ ಸಲ್ಲಿಸಬೇಕಾಗಿತ್ತು. ಈ ರೀತಿಯಲ್ಲಿ ಸಲ್ಲಿಸಲಾಗುತ್ತಿದ್ದ ಹಣವನ್ನು "ಗೇಣಿ" ಎಂದು ಕರೆಯಲಾಯಿತು. ಬ್ರಿಟಿಷ್ ಸರ್ಕಾರವು ಈ ಹಿಂದೆ ಧಾರ್ಮಿಕ ಸಂಸ್ಥೆಗಳಿಗೆ ನೀಡುತ್ತಿದ್ದ 'ಇನಾಂ' ಪದ್ಧತಿಯನ್ನು ರದ್ದುಪಡಿಸಿ ಖಾಯಾಂ ಗುತ್ತಾ ಪದ್ಧತಿಯಂತೆ ಧಾರ್ಮಿಕ ಸಂಸ್ಥೆಗಳಿದ್ದರೂ ಆ ಹಳ್ಳಿಗೆ ಕಂದಾಯ ನಿರ್ಧರಿಸಲಾಯಿತು. ಪೂರ್ಣಯ್ಯನವರು ದಿವಾನರಾಗಿದ್ದ ಕಾಲದಲ್ಲಿ ಇನಾಂ ಭೂಮಿಯನ್ನು 'ಅಕ್ಷಯ'ವೆಂದು ಕರೆಯಲಾಗುತ್ತಿತ್ತು. ಬ್ರಿಟಿಷರ ಕಾಲಾವಧಿಯಲ್ಲಿ 'ಎಕರೆಗಳು' ಮತ್ತು 'ಗುಂಟಾ' ಎಂಬುದಾಗಿ ಮಾರ್ಪಾಡಾಯಿತು.

೧೮೭೫ರಲ್ಲಿ 'ಕೊಡಿಗೆ ಇನಾಂ'ನ್ನು ರದ್ದುಪಡಿಸಲಾಯಿತು. ೧೮೮೧ರಲ್ಲಿ ಇನಾಂ ಇಲಾಖೆಯನ್ನು ಮುಚ್ಚಲಾಯಿತು. ಇನಾಂ ಭೂಮಿಗಳಾಗಿ ನೀಡಿದ್ದ ೫೭,೮೮೮ ಎಕರೆಗಳಲ್ಲಿ ೫೭,೭೨೬ ಎಕರೆಗಳು ಕ್ರಮಬದ್ಧವಾಗಿದ್ದರೆ ೧೬೨ ಕ್ರಮಬದ್ಧವಾಗಿರಲಿಲ್ಲ. ಆದುದರಿಂದ, ಇನಾಂ ಕಂದಾಯ ವ್ಯವಸ್ಥೆಯನ್ನು ತೆಗೆದುಹಾಕಲಾಯಿತು. ಬ್ರಿಟಿಷರ ಆಡಳಿತಾವಧಿಯಲ್ಲಿ ರೈತವಾರಿ ಪದ್ಧತಿ ಜಾರಿಗೆ ಬಂದಿತು. ಸರ್ಕಾರ ಹಾಗೂ ಕೃಷಿಕನೊಂದಿಗೆ ಇದರ ಮೂಲಕ ನೇರ ಸಂಪರ್ಕ, ಸಂಬಂಧವನ್ನು ಏರ್ಪಡಿಸಲಾಯಿತು. ಪಟೇಲರು (ಗೌಡರು) ಹೆಚ್ಚು ಶಕ್ತಿಶಾಲಿಯಾಗಿದ್ದು, ಹಳ್ಳಿಯ ರೈತರ ಜಮೀನನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಹೊಂದಿದ್ದರು. ಹೀಗೆ ಅಧಿಕಾರವನ್ನು ಪಡೆದಿದ್ದ ಪಟೇಲರು ರೈತರು ಬೆಳೆಯುತ್ತಿದ್ದ ಏಲಕ್ಕಿ ತೋಟ ಹಾಗೂ ಇತರೇ ಕೃಷಿ ಭೂಮಿಗೆ ಅದರ ನೈಜ ಬೆಲೆಗಿಂತ ಕಡಿಮೆ ಪ್ರಮಾಣದ ಬೆಲೆಯನ್ನು ನಿರ್ಧರಿಸುತ್ತಿದ್ದರು. ಮಾರುಕಟ್ಟೆ ಉತ್ಪನ್ನಗಳು ಹೆಚ್ಚಾಗಿ ಬೆಳೆಯುತ್ತಿದ್ದರೂ ಅಂತಹ ಭೂಮಿಗೆ ನಿಖರ ಬೆಲೆಯನ್ನು ನೀಡುತ್ತಿರಲಿಲ್ಲ. ಬದಲಾಗಿ ಗೇಣಿಗೆ ಪಡೆದು ಅಧಿಕ ಲಾಭವನ್ನು ಗಳಿಸುತ್ತಿದ್ದರು. ಕೆಲವೊಮ್ಮೆ ಗೇಣಿಗೆ ಪಡೆದ ಜಮೀನಿಗೆ ಹಣ ಅಥವಾ ಉತ್ಪನ್ನವನ್ನು ನಿಗದಿ ಮಾಡುತ್ತಿದ್ದರು.

ಪಟೇಲರು ಹಿಂದೆ ಪಡೆದಿದ್ದ ವಂಶಪಾರಂಪರ್ಯವಾಗಿ ಕಂದಾಯ ನಿರ್ವಹಣೆಯ ಜವಾಬ್ದಾರಿಯ ಬದಲಿಗೆ 'ಅಮೀಲ್ದಾರ'ರ ನೇಮಕ ಮಾಡಲಾಯಿತು. ಕಂದಾಯ ನಿರ್ಧಾರವನ್ನು, ಶಾನುಭೋಗನಿಗೆ ವಹಿಸಲಾಯಿತು. ಮೈಸೂರು ಬ್ರಿಟಿಷರ ನೇರ ಆಳ್ವಿಕೆಗೆ ಬರುವ ಪೂರ್ವದಲ್ಲಿ ಸ್ಥಳೀಯ ಸರ್ಕಾರವು ಪಟೇಲ ಎಂಬ ಏಜನ್ಸಿಯ ಮೂಲಕ ಹೆಚ್ಚಿನ ಇನಾಂಗಳನ್ನು ಅನುಭವಿಸುತ್ತಿದ್ದರು, ಇಂತಹ ವ್ಯವಸ್ಥೆಗೆ ಕಡಿವಾಣ ಹಾಕಲಾಯಿತು. ೧೮೮೦-೮೧ರಲ್ಲಿ ಹಲಾತ್‌ನಿಂದ ೨೨,೩೨೨ರೂ ಬಂದರೆ, ಜಮೀನಿನ ಮೇಲಿನ ಕಂದಾಯದಿಂದ ೩೩,೦೦೦ರೂ ಬಂದಿತು. ನಂತರ, ಸಿಂಕೋನಾ ತೋಟಗಾರಿಕೆಗು ಕಾಫಿಯ ನಿಬಂಧನೆಗಳನ್ನು ಅನ್ವಯ ಮಾಡಲಾಯಿತು. ಹಳೆಯ ಪಟ್ಟಾಗಳನ್ನು ಸರ್ಕಾರವು ವಾಪಾಸು ತೆಗೆದುಕೊಂಡು ಹೊಸ ಪಟ್ಟಾಗಳನ್ನು ರಂಗಾಚಾರ್ಲುರವರು ಮೈಸೂರಿನ ದಿವಾನರಾಗಿದ್ದ ಅವಧಿಯಲ್ಲಿ ನೀಡಿತು.

೧೯೦೬ಕ್ಕೂ ಪೂರ್ವದಲ್ಲಿ ಜಿಲ್ಲೆ ಹಾಗೂ ಮೈಸೂರಿನಲ್ಲಿ ಸಾಮಾನ್ಯವಾಗಿ 'ಹಲಾತ್' ಕಂದಾಯ ನಿರ್ಧರಿಸುವಿಕೆ ಸಾಮಾನ್ಯವಾಗಿತ್ತು. ಈ ಕಂದಾಯವು ಅಡಿಕೆ ತೋಟಗಳಿಗೆ ಹೆಚ್ಚಾಗಿ ಅನ್ವಯವಾಗುತ್ತಿತ್ತು. ಗಾರ್ಡನ್ ಟಾಕ್ಸ್‌ನ ಮೂಲಕ ಕೊಪ್ಪದ ಭಾಗದಲ್ಲಿರುವ ಅಡಿಕೆ ತೋಟಗಳಿಂದ ೪೫,೦೦೦ರೂಗಳಷ್ಟು ಸಂಗ್ರಹವಾಗುತ್ತಿತ್ತು. ಹಲಾತ್ ಕಂದಾಯವನ್ನು ವಿಧಿಸಿದ್ದರಿಂದ ಕಂದಾಯದ ಪ್ರಮಾಣ ೪೭,೦೦೦ ರೂಗಳಿಗೆ ಏರಿಕೆಯಾಗಿತ್ತು ಆದುದರಿಂದ ಅಡಿಕೆ, ಕಾಫಿ ಬೆಳೆಗಾರರು ಈ ವಿಧದ ಕಂದಾಯ ಕ್ರಮಕ್ಕೆ ತೀವ್ರ ವಿರೋಧವನ್ನು ವ್ಯಕ್ತಪಡಿಸಿದರು. ಇದಕ್ಕೆ ಸರಕಾರವು ಪ್ರತಿಯಾಗಿ, ರಾಜ್ಯದ ಹಣಕಾಸು ಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು, ಯಾವುದೇ ಪೂರ್ವಗ್ರಹವಿಲ್ಲದೆ, ಅಗತ್ಯವಿದ್ದಲ್ಲಿ ಕಂದಾಯದ ಮಾರ್ಪಾಡುಗಳನ್ನು ತರಲಾಗುವುದಲ್ಲದೆ, ಹಲಾತ್ ಕಂದಾಯವನ್ನು ನಿರ್ಮೂಲನೆಗೊಳಿಸುವ ಮತ್ತು ಸರ್ಕಾರದ ಆರ್ಥಿಕ ಸ್ಥಿತಿಗತಿಗಳನ್ನು ಸಮತೋಲನದಲ್ಲಿ ಕಾಯ್ದುಕೊಳ್ಳುವಂತೆ ಸರ್ವೆ ಕಮೀಷನರುಗಳಿಗೆ ಆಜ್ಞಾಪಿಸಿ, ಆ ಮೂಲಕ ನಿರ್ಧರಿಸಲಾಗುವುದೆಂದಿತು. ಹಾಗೆಯೇ 'ಖಿಸ್ತ್' ಕಂದಾಯವನ್ನು ಕಾಫಿ ಭೂಮಿಯನ್ನು ಪಡೆದು ಅಡಿಕೆ ತೋಟಗಳನ್ನು ಮಾಡುತ್ತಿದ್ದಲ್ಲಿ ಖಿಸ್ತ್ ಕಂದಾಯವನ್ನು ರೆವೆನ್ಯೂ ಕಮಿಷನರ್ ನಿರ್ದೇಶನದಂತೆ ಮುಂದುವರಿಸಲಾಗುವುದೆಂದು ೧೯೦೬ರಲ್ಲಿ ತೀರ್ಮಾನಕ್ಕೆ ಬರಲಾಯಿತು.

ಕಾಫಿ ಬೆಳೆಗಾರರು ತಮ್ಮ ಹಿಡುವಳಿಯಲ್ಲಿರುವ ಜಮೀನಿನಲ್ಲಿರುವ ಬಗನಿ, ಸೇಂದಿ ಮರಗಳ ಸದರಿ ಮರಗಳಿಗೆ ಆ ಹಿಡುವಳಿದಾರರನ್ನು ಅವುಗಳನ್ನು ಬಳಸಿಕೊಳ್ಳುವ ಹಕ್ಕುಗಳನ್ನು ನೀಡಬೇಕು. ಹಾಗೂ ಹಿಡುವಳಿ ಜಮೀನಿನಲ್ಲಿರುವ ಬಗನಿ ಮರಗಳಿಗೆ ಯಾವುದೇ ಕಾರಣಕ್ಕೂ ಹೊಸ ತೆರಿಗೆಯನ್ನು ವಿಧಿಸಬಾರದು, ಇದರಿಂದ ಅನುಕೂಲಕ್ಕಿಂತ ಅನಾನುಕೂಲವೇ ಹೆಚ್ಚಾಗುತ್ತದೆ ಎಂಬ ಅಂಶವನ್ನು ಸರ್ಕಾರದ ಗಮನಕ್ಕೆ ತಂದರು. ಇದಕ್ಕೆ ಸರ್ಕಾರವು ಕಾಫಿ ಸಾಗುವಳಿಯನ್ನು ಮಾಡುತ್ತಿರುವ ಜಮೀನಿನಲ್ಲಿರುವ ಬಗನಿ, ಸೇಂದಿ ಮರಗಳನ್ನು ಕಾಫಿ ಪ್ಲಾಂಟರುಗಳು ತಮ್ಮ ಸ್ವಂತಕ್ಕೆ ಉಪಯೋಗಿಸಬಹುದು. ತೋಟದ ಮಾಲಿಕನಿಗೆ ಅದನ್ನು ಬಳಸುವ ಹಕ್ಕು ನೀಡಲಾಗುವುದು. ಪ್ರತಿ ಪ್ಲಾಂಟರ್‌ನ ಅವಶ್ಯಕತೆಗನುಸಾರವಾಗಿ ಸೇಂದಿ ಮರಗಳಿಗೆ ಸಂಖ್ಯೆಯನ್ನು (ಗುರುತು) ಹಾಕಬೇಕಾಗುವ ಅವಶ್ಯಕತೆ ಇರುವುದಿಲ್ಲ. ಇದನ್ನು ವ್ಯವಹಾರವಾಗಿ ಬಳಸಿಕೊಳ್ಳುವುದನ್ನು ತಡೆಯಲಾಗುವುದು ಎಂಬ ನಿಬಂಧನೆಯನ್ನು ಹೊರಡಿಸಿತು. ಕೆಲವು ತೋಟಗಳಲ್ಲಿ ಅಪಾರವಾಗಿದ್ದ ಬಗನಿ ಮರಗಳನ್ನು ಗುರುತಿಸಿ ಅವುಗಳಿಗೆ ತೆರಿಗೆ ವಿಧಿಸುವ ನಿರ್ಧಾರ ಮಾಡಲಾಯಿತು. ಅದರಂತೆ ತೆರಿಗೆಯ ಅರ್ಧದಷ್ಟು ತೋಟದ ಮಾಲಿಕನಿಗೆ ಹಾಗೂ ಉಳಿದರ್ದ ತೆರಿಗೆಯು ಸರ್ಕಾರಕ್ಕೆ ಸಂದಾಯವಾಗುತ್ತಿತ್ತು. ತೋಟಗಾರಿಕಾ ಬೆಳೆಗಳು ರೈತರಿಗೆ, ಬೆಳೆಗಾರರಿಗೆ ಜೀವನಾಧಾರಿತ ಬೆಳೆಯಾದರೂ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾದ ಸಂದರ್ಭಗಳು ಬರುತ್ತವೆ. ಮೊದಲನೆಯದಾಗಿ ಸ್ವಾಭಾವಿಕವಾಗಿ ಬೆಳೆದ ಬೆಳೆಗೆ ತಗಲುವ ರೋಗಗಳಾದರೆ, ಎರಡನೆಯದಾಗಿ ಪ್ಲಾಂಟರುಗಳು ಎದುರಿಸಿದ ಸವಾಲುಗಳು ಬಹು ಮುಖ್ಯವಾದವುಗಳು.

ಕಾಫಿ ಗಿಡಗಳಿಗೆ ತಗಲುವ ರೋಗಗಳಲ್ಲಿ ಎಲೆತುಕ್ಕು ರೋಗವೂ ಒಂದು. ಎಲೆತುಕ್ಕು ರೋಗವು ಸಮೃದ್ಧವಾಗಿರುವ ತೋಟಗಳ ಇಳುವರಿಯನ್ನು ಇಳಿಮುಖಗೊಳಿಸಿ ತೀವ್ರ ಹಾನಿಯನ್ನುಂಟು ಮಾಡಿತು. ಈ ರೋಗವು ತಗುಲಿದ ಗಿಡಗಳ ಎಲೆಗಳು ಸಂಪೂರ್ಣವಾಗಿ ಉದುರಿಹೋಗಿ ನಂತರ ಕೊಂಬೆಗಳು ಒಣಗತೊಡಗಿತು. ಇದರಿಂದಾಗಿ ಫಸಲನ್ನು ಪಡೆಯಲು ಸಾಧ್ಯವಾಗದ ಪರಿಸ್ಥಿತಿ ಒದಗಿ ಬಂದಿದುದರಿಂದ ಕೆಲವು ಬೆಳೆಗಾರರು ಕಾಫಿಯ ಬದಲು ಚಹಾ ಬೆಳೆಯನ್ನು ಬೆಳೆಯುವ ನಿರ್ಧಾರಕ್ಕೆ ಬರಬೇಕಾಯಿತು. ಇತರೇ ರೋಗಗಳಾದ ಆಂತ್ರಕ್ನೋಸ್ ಎಂಬ ರೋಗವು ಕೊಂಬೆಗಳಿಗೂ ಹಾಗೂ ಹಣ್ಣಿಗೆ ಹಾನಿಯನ್ನುಂಟು ಮಾಡುತ್ತದೆ. ಎಲೆತೊಟ್ಟು ರೋಗ, ಕಂದುಚುಕ್ಕೆ ರೋಗ, ಬೇರಿನ ರೋಗಗಳು ಮತ್ತು ಬೋರರ್ ಮುಂತಾದ ರೋಗಗಳು ಬೆಳೆಗೆ ಹೆಚ್ಚಿನ ಹಾನಿಯನ್ನುಂಟು ಮಾಡುತ್ತಿದ್ದುದರಿಂದ ಬೆಳೆಗಾರರು ಇಳುವರಿ ಬಾರದೆ ನಷ್ಟವನ್ನು ಅನುಭವಿಸಬೇಕಾಯಿತು.

ಮೈಸೂರು ಭಾಗದಲ್ಲಿ ಬೆಳೆಯುತ್ತಿದ್ದ 'ಚಿಕ್' ಮಾದರಿಯ ಬೆಳೆಗಳಿಗೆ ಬೋರರ್, ಎಲೆರೋಗ ಮುಂತಾದ ಕೀಟ ಬಾಧೆಗಳಿಂದಾಗಿ ಅವನತಿಯತ್ತ ಸಾಗಿತು, ಸಂದರ್ಭವನ್ನು ಅನುಭವೀ ಪ್ಲಾಂಟರುಗಳು ಮೈಸೂರಿನಲ್ಲಿ ಕಾಫಿ ಕೃಷಿಯೇ ಪಥನವಾಯಿತು ಎಂದು ಬಣ್ಣಿಸುತ್ತಾರೆ. ಆ ನಂತರ ಪ್ಲಾಂಟರುಗಳ ಕೊಡಗಿನ ತೋಟಗಳನ್ನು ಪರಿಶಿಲಿಸುವ ನಿರ್ಧಾರಕ್ಕೆ ಬಂದು ೧೮೭೭ ರಲ್ಲಿ ಸ್ಟ್ಯಾನ್ಲಿ ಜೆಪ್ಪ್ ಎನ್ನುವ ಮೈಸೂರಿನ ಪ್ಲಾಂಟರನು ಕೊಡಗಿಗೆ ಭೇಟಿ ನೀಡಿ ಅಲ್ಲಿ ಬೆಳೆಯುತ್ತಿದ್ದ ಉತ್ತಮ ಗುಣಮಟ್ಟದ ತಳಿಗಳನ್ನು ಕಂಡು ಬೆರಗಾದನು. ಆನಂತರ 'ಚಿಕ್' ಮಾದರಿಯ ತಳಿಗಳಿಗೆ ಬದಲಾಗಿ ಕೊಡಗಿನ ತಳಿಗಳನ್ನು ತಂದು ಮೈಸೂರಿನಲ್ಲಿ ಬಿತ್ತನೆ ಮಾಡಲಾಯಿತು ಕೊಡಗಿನಲ್ಲಿ ಬೆಳೆಯುತ್ತಿದ್ದಂತೆ ಮೈಸೂರಿನಲ್ಲಿಯೂ ಉತ್ತಮ ಗುಣಮಟ್ಟದಲ್ಲಿ ಕಾಫಿ ಕೃಷಿಯನ್ನು ಮಾಡಲಾಯಿತು. ಹೀಗೆ ಸ್ಥಳೀಯ ಬೆಳೆಗಾರರಿಗೆ ತೋಟಗಾರಿಕೆಯು ಆರಂಭಿಕ

ಹಂತದಲ್ಲಿ ಬ್ರಿಟಿಷರ ಕಠಿಣ ಕಾನೂನುಗಳು, ಅತಿಯಾದ ಕಂದಾಯದ ಹೇರಿಕೆ ಮುಂತಾದವುಗಳಿಂದ ನಷ್ಟ, ತೊಂದರೆ ಹಾಗೂ ಸವಾಲುಗಳನ್ನು ಎದುರಿಸಿದರೂ ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಇದೊಂದು ಲಾಭದಾಯಕ.



## ಅಡಿಟಿಪ್ಪಣಿಗಳು

೧. Baak, Paul Eric *Plantation Development in South West India 1743-1963, Plantation Production and Political Power*, Delhi, 1997, p.10.

೨. Elliot, Robert H. *The Experiences of a Planter in the Jungles of Mysore,* vol I, London, 1871,p. 314.

೩. Ibid, p.316.

೪. ರವಿಚಂದ್ರ ಶೆಟ್ಟಿ, ಕಾಫಿ ನಾಡಿನ ಜೀವನ ಕಥೆಗಳು, ಬೆಂಗಳೂರು, ೨೦೦೩, ಪು. ೩೬.

೫. ಅದೇ, ಪು. ೩೭.

೬ ಅದೇ, ಪು. ೩೮.

೭. ಅದೇ, ಪು. ೪೦.

೮. *ಸಿದ್ದಲಿಂಗ ಸ್ವಾಮಿ, ಅಗ್ರೇರಿಯನ್ ರಿಲೇಷನ್ಸ್ ಇನ್ ಮೈಸೂರ್ ೧೭೯೯–೧೮೮೧, ಬೆಂಗಳೂರು, ೧೯೯೭. ಪು. ೧೫.*

# ಉತ್ತರ ಕನ್ನಡ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಕೆಲವು ಘಟನಾವಳಿಗಳು

ಎಸ್. ಗಣಪತಿಗೌಡ*

ಕರ್ನಾಟಕದ ಪಶ್ಚಿಮ ಭಾಗದ ಕರಾವಳಿ ಜಿಲ್ಲೆಯಲ್ಲಿ ಒಂದಾದ ಉತ್ತರ ಕನ್ನಡವು ಮಲೆನಾಡು, ಅರೆಮಲೆನಾಡು ಮತ್ತು ಅರಬ್ಬಿ ಸಮುದ್ರದ ಪ್ರಾಕೃತಿಕ ಸೌಂದರ್ಯದಿಂದ ಕೂಡಿದೆ. ನಿಸರ್ಗದತ್ತವಾದ ಬಂದರುಗಳು ಒಳನಾಡಿನ ವ್ಯಾಪಾರಕ್ಕೆ ಸಹಕರಿಸಿದರೆ, ಕೃಷಿ ಇಲ್ಲಿಯ ಜನರ ಪ್ರಮುಖ ಕಸುಬಾಗಿತ್ತು. ಬೇಟೆ, ಕರಕುಶಲ, ಮೀನುಗಾರಿಕೆ ಮೊದಲಾದವು ಉಪಕಸುಬುಗಳಾಗಿದ್ದವು, ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳವಳಿಯ ಹೋರಾಟ ಪ್ರಾರಂಭವಾಗಲು ಮತ್ತು ತೀವ್ರ ಸ್ವರೂಪ ಪಡೆದುಕೊಳ್ಳಲು ಮುಖ್ಯವಾಗಿ ಬಹಳ ಹಿಂದಿನಿಂದಲೂ ಬೆಳೆದು ಬಂದಿದ್ದ ಬ್ರಿಟೀಷ್ ವಿರೋಧಿಭಾವನೆ. ಬ್ರಿಟೀಷ್ ವಿರುದ್ಧ ಇಲ್ಲಿ ನಡೆದ ಹೋರಾಟವು ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಜನಪರರು ನಡೆಸಿದ ಹೋರಾಟದ ಒಂದು ವೀರಗಾಥೆಯೆಂದು ವಿಶ್ಲೇಷಿಸಿದರೆ ಹೆಚ್ಚು ಅರ್ಥಪೂರ್ಣವಾದಿತು. ಇದಕ್ಕೆ ಪೂರಕವಾದ ಮಾಹಿತಿಗಳನ್ನು ಈ ಕೆಳಗಿನ ಪ್ರಮುಖವಾದ ದಾಖಲೆಗಳು ನೀಡುತ್ತವೆ. ಅವುಗಳೆಂದರೆ:

೧. ಕಾನಡಾ ವೃತ್ತ

೨. ಕಾನಡಾ ಧುರೀಣ

೩. ಹವ್ಯಕ ಸುಬೋಧ

೪. ಬಾಂಬೇ ಕ್ರಾನಿಕಲ್ಸ , ಕನ್ನಡ ಸುವಾರ್ತೆ, ಮರಾಠಿ ಕೇಸರಿ ಇತ್ಯಾದಿ

ಈ ಜಿಲ್ಲೆಯಲ್ಲಿ ನಡೆಯತ್ತಿದ್ದ ಸ್ವಾತಂತ್ರ್ಯ ಚಳುವಳಿಯ ಕುರಿತು ಅಂದಿನ ಕೆಪಿಸಿಸಿ ಅಧ್ಯಕ್ಷರಾಗಿದ್ದ ಗಂಗಾಧರ ರಾವ್ ದೇಶಪಾಂಡೆಯವರು ಇಲ್ಲಿಯ ಜನರ ಬಗ್ಗೆ ಹೇಳಿದ್ದ ಮಾತು.

"ಇಲ್ಲಿಯ ಜನರು ಸ್ವಭಾವತಃ ಶಾಂತಿಪ್ರಿಯರು. ಹಿಡಿದ ಕೆಲಸವನ್ನು ಬಿಡದೇ ಮಾಡುವವರು. ಗಾಂಧೀಜಿಯವರ ಬಗ್ಗೆ ಅವರಿಗೆ ಅಪಾರವಾದ ನಿಷ್ಠೆ ಇತ್ತು. ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಎಂಬ ಬೇಧವಿಲ್ಲ. ಅತ್ಯಂತ ಭಾವುಕರು ಮತ್ತು ಯಾವುದೇ ತ್ಯಾಗಕ್ಕೂ ಸಿದ್ಧರು".

ಆದರೆ ಜನರ ಕುರಿತಂತೆ ದೇಶಪಾಂಡೆಯವರು ಹೇಳಿದ್ದಕ್ಕಿಂತ ಮಿಗಿಲಾಗಿ ಬ್ರಿಟೀಷರ ವಿರುದ್ಧ ಜನರ ಸಿಟ್ಟು ಈ ಹಿಂದಿನಿಂದಲೂ ಮಡುಗಟ್ಟಿತ್ತು ಎನ್ನುವ ಅಂಶ ದಾಖಲೆಗಳಿಂದ ಲಭ್ಯವಾಗುತ್ತದೆ. ಬ್ರಿಟೀಷರ ವಿರುದ್ಧದ ಸಿಟ್ಟನ್ನು ಜನರು ತೀರಿಸಿಕೊಳ್ಳಲು ಮುಂದಾದಾಗ ಉಂಟಾದ ಸನ್ನಿವೇಶದ ಲಾಭವನ್ನು ಪಡೆದಕೊಂಡ ಕೆಲವು ಅವಕಾಶವಾದಿಗಳು ತಮ್ಮ ಬೇಳೆ ಬೇಯಿಸಿಕೊಳ್ಳಲು ಅನಿರೀಕ್ಷಿತವಾಗಿ ನಡೆದ ಕೆಲವು ಘಟನಾವಳಿಗಳನ್ನೂ ಸ್ವಾತಂತ್ರ್ಯ ಹೋರಾಟದ ಒಂದು ಭಾಗವಾಗಿ ರೂಪಿಸಿದರೇ ಎನ್ನುವ ಸಂಶಯ ಮೂಡುತ್ತದೆ.

ಯಾಕೆಂದರೆ, ಉಪ್ಪಿನ ಸತ್ಯಾಗ್ರಹ, ಜಂಗಲ್ ಸತ್ಯಾಗ್ರಹ, ವಿದೇಶಿ ವಸ್ತ್ರ ಬಹಿಷ್ಕಾರ ಇವುಗಳೆಲ್ಲವೂ ಇಲ್ಲಿ ಅಭೂತಪೂರ್ವ ಯಶಸ್ಸನ್ನು ಗಳಿಸಬೇಕಾದರೆ ಕೇವಲ ಗಾಂಧೀಜಿಯವರ ಮೇಲಿನ ಪ್ರೀತಿ ಮಾತ್ರ ಕಾರಣವಾಗಿರಲಿಲ್ಲ. ಬ್ರಿಟೀಷರು ರೂಪಿಸಿದ ಕಾನೂನು ತಮ್ಮ ಬದುಕನ್ನು ಕಸಿದುಕೊಳ್ಳಲು ಪ್ರಾರಂಭಿಸಿದಾಗ ಸ್ವಾಭಾವಿಕವಾಗಿ ಬ್ರಿಟೀಷ್ ವಿರೋಧಿ ಅಲೆ ತೀವ್ರಗೊಂಡಿತ್ತು. ವಾಸ್ತವವಾಗಿ ಜಿಲ್ಲೆಯ ಒಟ್ಟು ೧೧ ತಾಲ್ಲೂಕುಗಳಲ್ಲಿ ಘಟ್ಟದ ಮೇಲಿನ ಆರು ತಾಲ್ಲೂಕುಗಳು ಮತ್ತು ಘಟ್ಟದ ಕೆಳಗಿನ ಐದು ತಾಲ್ಲೂಕಿನ ಎಲ್ಲಾ ಜನರು ಇದರಲ್ಲಿ ಸಕ್ರೀಯವಾಗಿ ಭಾಗವಹಿಸಿರಲಿಲ್ಲ. ಘಟ್ಟದ ಕೆಳಗಿನ ಅಂಕೋಲಾ ಮತ್ತು ಘಟ್ಟದ

* ಇತಿಹಾಸವ ವಿಭಾಗ, ಮಂಗಳೂರು ವಿವಿ ಕಾಲೇಜು, ಮಂಗಳೂರು.

ಮೇಲಿನ ಶಿರ್ಶಿ ಮತ್ತು ಸಿದ್ಧಾಪುರದ ಜನರು ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದಷ್ಟು ಬೇರೆ ತಾಲ್ಲೂಕಿನ ಜನರು ಇದರಲ್ಲಿ ಅಷ್ಟೊಂದು ತೊಡಗಿಸಿಕೊಳ್ಳಲಿಲ್ಲ.

ಜಿಲ್ಲೆಯಲ್ಲಿ ಕರ ನಿರಾಕರಣೆಗೆ ದೊರಕಿದ ಬೆಂಬಲ ಅಪಾರವಾದದ್ದು. ೧೦೦೦ಕ್ಕೂ ಅಧಿಕ ಕುಟುಂಬಗಳು ಬ್ರಿಟೀಷರ ಕಟ್ಟಪ್ಪಣೆಗಳಿಗೆ ಬೆಲೆಕೊಡದೆ ಅವರ ವಿರುದ್ಧ ಹೋರಾಡಿದರು. ಇದಕ್ಕೆ ಇಲ್ಲಿಯ ಜನರು ಪೂರ್ಣ ಸಹಕಾರ ನೀಡಿದರು. ಬ್ರಿಟೀಷರು ಇದರಿಂದ ಸಿಟ್ಟಿಗೆದ್ದು ಇವರ ಮನೆಯ ಸಾಮಾನುಗಳನ್ನು ಜಪ್ತಿ ಮಾಡಿ ಹರಾಜು ಕೂಗಿದಾಗ ಕೊಂಡುಕೊಳ್ಳಲು ಯಾರೊಬ್ಬರೂ ಮುಂದೆ ಬರಲಿಲ್ಲ. ಬೆಲೆ ಕಡಿಮೆ ಮಾಡಿದರೂ ಯಾವೊಬ್ಬನೂ ಜಪ್ತಿಯಾದ ವಸ್ತುಗಳನ್ನು ಕೊಂಡುಕೊಳ್ಳಲು ಬರಲಿಲ್ಲ. ಇದರಿಂದ ಅವಮಾನಿತರಾದ ಬ್ರಿಟೀಷರು ತಮ್ಮ ಅಧೀನದಲ್ಲಿದ್ದ ಅಧಿಕಾರಿಗಳನ್ನೇ ಪುಸಲಾಯಿಸಿ ಜಪ್ತಿ ಮಾಡಿದ ವಸ್ತುಗಳನ್ನು ಖರೀದಿಸುವಂತೆ ನೋಡಿಕೊಂಡರು. ಆದರೆ ಈ ಜಿಲ್ಲೆಯ ಯಾವೊಬ್ಬ ಅಧಿಕಾರಿಯೂ ಇದರಲ್ಲಿ ಭಾಗವಹಿಸದಿರುವುದು ವಿಶೇಷವಾಗಿತ್ತು. ಹೊರ ಊರಿನ ಅಧಿಕಾರಿಗಳು ಜಪ್ತಿ ಮಾಡಿದ ವಸ್ತುಗಳನ್ನು ಖರೀದಿಸಿದರಾದರೂ ಇದಕ್ಕೆ ಪ್ರತಿಫಲವಾಗಿ ಸ್ಥಳೀಯರ ವಿರೋಧವನ್ನು ಎದುರಿಸಬೇಕಾಯಿತು.

ಜಿಲ್ಲೆಯ ಜನರಿಗೆ ಹಿಂದಿನಿಂದಲೂ ತಮ್ಮದಲ್ಲದ ಆಡಳಿತ ವ್ಯವಸ್ಥೆ ವಿರುದ್ಧ ಸಿಟ್ಟಿತ್ತು, ಯಾಕೆಂದರೆ ಬ್ರಿಟೀಷರ ಆಗಮನದವರೆಗೆ ಜಿಲ್ಲೆಯ ಜನತೆ ತಮ್ಮದೆ ಆದ ರಾಜರ ಆಡಳಿತ ವ್ಯವಸ್ಥೆಯಲ್ಲಿದ್ದರು. ಸೋಂದಾ, ಬಿಳಗಿ, ಕೆಳದಿ ಮೊದಲಾದ ಸಾಮ್ರಾಜ್ಯ ಹೈದರ್ ಅಲಿ ಮತ್ತು ಟಿಪ್ಪುವಿನ ಕೈವಶವಾದ ನಂತರ ಜನರು ತಮ್ಮ ತಾಳ್ಮೆ ಕಳೆದುಕೊಂಡಿದ್ದರು. ಟಿಪ್ಪುವಿನ ಬಗ್ಗೆ ಜನರಲ್ಲಿ ಆಕ್ರೋಶವಿತ್ತು, ಈಗಾಗಲೇ ತಮ್ಮದಲ್ಲದ ಆಡಳಿತದ ವಿರುದ್ಧ ಇವರಲ್ಲಿ ಹುದುಗಿದ್ದ ಸಿಟ್ಟು ಬ್ರಿಟೀಷರ ಆಡಳಿತ ವ್ಯವಸ್ಥೆಯನ್ನು ಒಪ್ಪಿಕೊಳ್ಳಲು ಸಿದ್ಧರಿರಲಿಲ್ಲ. ಹೀಗಿದ್ದರೂ ಬ್ರಿಟೀಷರು ಅಧಿಪತ್ಯ ವಹಿಸಿಕೊಂಡ ಮೇಲೂ ೧೮೦೦–೧೮೬೨ರ ವರೆಗೆ ಮದ್ರಾಸ್ ವ್ಯಾಪ್ತಿಯಲ್ಲಿದ್ದ ಈ ಜಿಲ್ಲೆ ೧೮೬೨ರಲ್ಲಿ ಮುಂಬೈ ಪ್ರಾಂತ್ಯದ ಆಡಳಿತಕ್ಕೆ ಸೇರಲ್ಪಟ್ಟಿತು. ಹೀಗಿರುವಾಗ ಜನರ ಸಮಸ್ಯೆಗಳನ್ನು ಆಲಿಸುವವರು ಹತ್ತಿರದಲ್ಲಿರಲಿಲ್ಲ. ತಮ್ಮ ಅಹವಾಲುಗಳನ್ನು ರಾಜಮಹಾರಾಜರಿಗೆ ಒಪ್ಪಿಸಿದಷ್ಟು ಸುಲಭವಾಗಿ ಬ್ರಿಟೀಷರೊಂದಿಗೆ ವ್ಯವಹರಿಸಲಿಕ್ಕಾಗುತ್ತಿರಲಿಲ್ಲ.

**ಹತ್ತಿ ದರದಲ್ಲಾದ ಏರಿಕೆ:** ಕರ್ನಾಟಕದಲ್ಲಿ ಕಾಣಿಸಿಕೊಂಡ ಕಾಟನ್‌ಭೂಮ್ ಕುಮಟಾ ಬಂದರಿಗೆ ಎಲ್ಲಿಲ್ಲದ ಪ್ರಾಮುಖ್ಯತೆಯನ್ನು ತಂದುಕೊಟ್ಟಿತು. ಕುಮಟಾ–ಧಾರವಾಡ ಹತ್ತಿಯೆಂದೆ ಪ್ರಸಿದ್ಧಿಯಾಗಿದ್ದ ಹತ್ತಿ ಇಂಗ್ಲೆಂಡಿಗೆ ಹೋಗುತ್ತಿತ್ತು. ವ್ಯಾಪಾರ ತುಂಬಾ ಚುರುಕಾಗಿತ್ತು. ಆದರೆ ಇದಾದ ೪–೫ ವರ್ಷಗಳಲ್ಲಿ ಹತ್ತಿಯ ಬೆಲೆ ಪಾತಾಳಕ್ಕೆ ಕುಸಿದು ವ್ಯಾಪಾರಸ್ಥರು ತೀವ್ರ ನಷ್ಟಕ್ಕೊಳಗಾದರು. ಬ್ರಿಟೀಷರು ಅಂತರ್ ಯುದ್ಧದ ನಂತರ ತೆಗೆದುಕೊಂಡ ನಿರ್ಧಾರಗಳು ಹತ್ತಿ ಬೆಲೆಯ ಕುಸಿತಕ್ಕೆ ಕಾರಣವೆಂದು ವ್ಯಾಪಾರಸ್ಥರು ಭಾವಿಸಿ ಬ್ರಿಟೀಷರನ್ನು ವಿರೋಧಿಸತೊಡಗಿದರು

**ಸರ್ವ ಋತು ಬಂದರಾಗಬೇಕಿದ್ದ ಕಾರವಾರ:** ಕಾರವಾರ ಸರ್ವ ಋತು ಬಂದರು ಆಗುತ್ತದೆಂಬ ವದಂತಿ ಇತ್ತು. ಆದರೆ ಈ ಪ್ರಸ್ತಾವನೆ ನೆನೆಗುದಿಗೆ ಬಿದ್ದು ಗೋವಾದ ಮಾರ್ಮಗೋವಾ ಬಂದರನ್ನು ೧೮೭೭ ರಲ್ಲಿ ನಿರ್ಮಿಸಿ ಅದನ್ನು ಮುಂಬೈ ರೈಲು ಮಾರ್ಗಕ್ಕೆ ಜೋಡಿಸಲಾಯಿತು. ಬ್ರಿಟೀಷರ ಈ ನಿರ್ಧಾರ ಈ ಭಾಗದ ಜನರಲ್ಲಿ ಬ್ರಿಟೀಷರ ವಿರುದ್ಧದ ಕೋಪವನ್ನು ಹೆಚ್ಚಿಸಲು ಕಾರಣವಾಯಿತು, ಇನ್ನೊಂದೆಡೆ ಧಾರವಾಡ ರೈಲು ಮಾರ್ಗವನ್ನು ಪುಣೆ–ಮುಂಬೈ ಜೊತೆ ನೇರ ಸಂಪರ್ಕಕ್ಕೆ ಒಳಪಡಿಸಿದಾಗ ಉತ್ತರ ಕನ್ನಡಕ್ಕೆ ಬರುತ್ತಿದ್ದ ಅಪಾರ ಪ್ರಮಾಣದ ವಸ್ತುಗಳು ನಿಂತು ಹೋದವು.

**ಉಪ್ಪು ಉತ್ಪಾದನಾ ಘಟಕಗಳ ಮುಚ್ಚುವಿಕೆ:** ೧೮೭೮ ಕ್ಕಿಂತ ಮೊದಲು ಜಿಲ್ಲೆಯ ಕುಮಟಾ, ಭಟ್ಕಳ, ಶಿರಾಲಿ ಮತ್ತು ಬೈಲೂರು ಮತ್ತಿತರ ಭಾಗಗಳಲ್ಲಿ ಉಪ್ಪನ್ನು ತಯಾರಿಸಲಾಗುತ್ತಿತ್ತು. ಇದನ್ನು ಬ್ರಿಟೀಷರು ಸರಕಾರಿ ಗುತ್ತಿಗೆಗೆ ಕೊಟ್ಟಿದ್ದುದರ ಪರಿಣಾಮವಾಗಿ ಕುಮಟಾದ ಸಾಣಿಕಟ್ಟಾ ಉಪ್ಪು ತಯಾರಿಕಾ ಕೇಂದ್ರವೊಂದನ್ನು ಬಿಟ್ಟು ಉಳಿದ ಎಲ್ಲಾ ಕೇಂದ್ರಗಳಲ್ಲಿಯೂ ಉಪ್ಪಿನ ಉತ್ಪಾದನೆಯನ್ನು ನಿಲ್ಲಿಸಲಾಯಿತು, ಇದು ಬ್ರಿಟೀಷರ ತೀವ್ರ ವಿರೋಧಕ್ಕೆ ಕಾರಣವಾಯಿತು. ಈ ಎಲ್ಲಾ ಉಪ್ಪಿನ ಕೇಂದ್ರಗಳಲ್ಲಿ ಜಿಲ್ಲೆಯ ಹಿಂದುಳಿದವರು ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಠ ಪಂಗಡದವರು ನಿರ್ಗತಿಕರಾಗಬೇಕಾಯಿತು.

**ನೂತನ ಅರಣ್ಯ ಕಾನೂನು:** ೧೮೭೮ರಲ್ಲಿ ಜಾರಿಗೆ ಬಂದ ಅರಣ್ಯ ಕಾನೂನು ಜಿಲ್ಲೆಯ ಜನರಲ್ಲಿ ಬ್ರಿಟೀಷರ ವಿರುದ್ಧ ಆಕ್ರೋಶವನ್ನು ಹೆಚ್ಚಿಸಲು ಕಾರಣವಾಗಿತ್ತು, ಹೊಸ ಕಾನೂನಿನನ್ವಯ ಜಿಲ್ಲೆಯಲ್ಲಿನ ಅರಣ್ಯವನ್ನು ಕಾದಿಟ್ಟ ಅರಣ್ಯ ಮತ್ತು ರಕ್ಷಿತ ಅರಣ್ಯ ಎಂದು ಎರಡು ವಿಭಾಗ ಮಾಡಲಾಗಿತ್ತು. ಕೃಷಿಕರಿಗೆ ಸೊಪ್ಪು, ಸೌದೆ ತರಲು ಕಾದಿಟ್ಟ ಅರಣ್ಯದಲ್ಲಿ ಅನುಮತಿ ಇತ್ತಾದರೂ ಅರಣ್ಯಾಧಿಕಾರಿಗಳ ಉಪಟಳ ಹೆಚ್ಚಾಗಿತ್ತು. ಸೊಪ್ಪು ಮತ್ತು ಸೌದೆ ತರಲು ಕಾಡಿಗೆ ಹೋದವರನ್ನೆಲ್ಲಾ ಅನುಮಾನದಿಂದ ನೋಡಲಾರಂಭಿಸಿದರು. ರೈತ ಮಹಿಳೆಯರು ಒಂದು ಹೊರೆ ಸೊಪ್ಪನ್ನು ತಂದು ಮಾರಾಟ ಮಾಡಿದರೆ

ಅದಕ್ಕೆ ಸಿಗುತ್ತಿದ್ದ ಹಣ ಕೇವಲ ೨ ಆಣೆ. ಹೀಗೆ ಸೊಪ್ಪನ್ನು ತಂದು ಜೀವನ ಸಾಗಿಸುತ್ತಿದ್ದ ಬಡ ಮಹಿಳೆಯರನ್ನು ಅರಣ್ಯ ಅಧಿಕಾರಿಗಳು ಕಾನೂನಿನ ನೆಪವೊಡ್ಡಿ ಅವರ ಮೇಲೆ ಕೇಸನ್ನು ಹಾಕಿ ನ್ಯಾಯಾಲಯದ ಮೆಟ್ಟಿಲನ್ನು ಹತ್ತುವಂತೆ ಮಾಡಿದರು. ಅಂಕೋಲಾದಲ್ಲಿ ಅನೇಕ ಬಡ ಮಹಿಳೆಯರು ಕಾಡಿನಿಂದ ಸೊಪ್ಪು ತಂದು ಮಾರಾಟ ಮಾಡಿ ಜೀವನ ಸಾಗಿಸುತ್ತಿದ್ದರು. ಈ ಸಂಬಂಧ ಅಂಕೋಲಾದ ನ್ಯಾಯಾಲಯದಲ್ಲಿ ಒಂದೇ ದಿನ ೪೦ ಮೊಕದ್ದಮೆಯನ್ನು ದಾಖಲಿಸಲಾಗಿತ್ತು. ತಮಾಷೆಯೆಂದರೆ ಇವುಗಳೆಲ್ಲವೂ ಮಹಿಳೆಯರು ಕಾಡಿನಿಂದ ಸೊಪ್ಪು ತಂದಿದ್ದಕ್ಕೆ ಸಂಬಂಧಿಸಿದ್ದಾಗಿತ್ತು. ಕಾಡಿಗೆ ಬೆಂಕಿ ಬಿದ್ದರೆ ಆ ಗ್ರಾಮದವರನ್ನೆಲ್ಲಾ ಅನುಮಾನದಿಂದ ನೋಡುತ್ತಿದ್ದರು. ಸುಳ್ಳು ಕೇಸನ್ನು ಹಾಕಿ ಕೊರ್ಟಿಗೆ ಓಡಾಡಿಸುವ ಪರಿಪಾಠ ಸರ್ವೆಸಾಮಾನ್ಯವಾಗಿತ್ತು. ಎಷ್ಟರ ಮಟ್ಟಿಗೆ ಸುಳ್ಳು ಕೇಸುಗಳನ್ನು ಹಾಕಲಾಗುತ್ತಿತ್ತೆಂದರೆ ಲಿಂಗಾಯಿತರು ಹೆಣ ಸುಟ್ಟಿದ್ದರಿಂದ ಕಾಡಿಗೆ ಬೆಂಕಿ ಬಿದ್ದಿದೆ ಎಂದು ಬ್ರಿಟೀಷ ಅಧಿಕಾರಿಯೋರ್ವ ಸ್ಥಳೀಯರ ಮೇಲೆ ಕೇಸು ಹಾಕಿದ್ದನು. ಲಿಂಗಾಯಿತರಲ್ಲಿ ಶವ ಸುಡುವ ಪದ್ಧತಿ ಇಲ್ಲಾ ಎನ್ನುವ ಸಾಮಾನ್ಯ ಪರಿಜ್ಞಾನವೂ ಆ ಅಧಿಕಾರಿಗೆ ಇರಲಿಲ್ಲ.

ಇನ್ನೊಂದೆಡೆ ಅರಣ್ಯ ಇಲಾಖೆ ಆಗಾಗ ತನ್ನ ಇಲಾಖೆಯ ಕಾನೂನಿನಲ್ಲಿ ತರುತ್ತಿದ್ದ ಬದಲಾವಣೆಗಳು ಜನರಿಗೆ ಮುಟ್ಟುತ್ತಿರಲಿಲ್ಲ. ಈ ಹಿಂದೆ ಸರಕಾರ ತಮಗೆ ನೀಡಿದ್ದ ಅರಣ್ಯದ ಸೊಪ್ಪು ಮತ್ತು ಸೌದೆಯನ್ನು ಪಡೆಯುವ ಹಕ್ಕನ್ನು ಗಮನದಲ್ಲಿಟ್ಟುಕೊಂಡು ಅರಣ್ಯದ ವಸ್ತುಗಳನ್ನು ಮುಟ್ಟಲು ಹೋದ ಅದೆಷ್ಟೋ ಜನರು ಶಿಕ್ಷೆಯನ್ನು ಅನುಭವಿಸಿದರು. ೧೯೦೨ ರಲ್ಲಿ ಅರಣ್ಯ ಇಲಾಖೆಯು ಅರಣ್ಯದಿಂದ ತರಗೆಲೆಯನ್ನು ಸಂಗ್ರಹಿಸುವುದರ ಮೇಲೆ ನಿರ್ಬಂಧವನ್ನು ಹೇರಿತ್ತು, ಆದರೆ ಇಲಾಖೆಯು ಈ ಸಂಬಂಧ ಹೊರಡಿಸಿದ ಸುತ್ತೋಲೆಯ ಅರಿವು ಜನಸಾಮಾನ್ಯರಿಗೆ ಇದ್ದಿರಲಿಲ್ಲ. ಗೊಬ್ಬರ ಮಾಡಲು ತರಗೆಲೆ ತರಲು ಕಾಡಿಗೆ ತೆರಳಿದ ಜನರನ್ನು ಅರಣ್ಯ ಇಲಾಖೆ ಶಿಕ್ಷಿಸಲು ಮುಂದಾಯಿತು.

೧೯೧೧ರಲ್ಲಿ ಕೆನರಾ ಫಾರೆಸ್ಟ ಪ್ರಿವಿಲೇಜಸ್ ರೂಲ್ಸ ಎಂಬ ಕಾಯಿದೆ ಜಾರಿಗೆ ಬಂತು. ಇದರನ್ವಯ ಹಾಡಿ ಅರಣ್ಯ ಭೂಮಿಯ ಹಕ್ಕು ರೈತರಿಗೆ ದೊರಕಿತು. ಈ ಕಾಯಿದೆ ತಮಗೆ ಹೆಚ್ಚು ಪ್ರಯೋಜನಕಾರಿಯಾದಿತು ಎಂದು ಜನರು ಭಾವಿಸಿದರು. ಆದರೆ ವಾಸ್ತವಿಕತೆ ಬೇರೆಯೇ ಆಗಿತ್ತು, ಹಾಡಿಗೆಂದು ಬಿಟ್ಟುಕೊಟ್ಟ ಹೆಚ್ಚಿನ ಭೂಮಿಯಲ್ಲಿ ಅರಣ್ಯವೇ ಇರಲಿಲ್ಲ. ಗೋಕರ್ಣ, ಅಗ್ರಗೋಣ, ಮಾದನಗೇರಿ, ಕುಮಟಾ, ಬಾಡ, ಹುಬ್ಬಣಗೇರಿ, ಗುಡೇಅಂಗಡಿ ಮೊದಲಾದ ಕಡೆಯಲ್ಲಿ ಹಾಡಿಗೆಂದು ಬಿಟ್ಟುಕೊಟ್ಟ ಭೂಮಿಯು ಬರೀ ಗುಡ್ಡ ಅಥವಾ ಕುರುಚಲು ಗಿಡಗಳಿಂದ ಕೂಡಿತ್ತು. ಇನ್ನು ಕೆಲವು ರೈತರಿಗೆ ಅವರ ಮನೆಯಿಂದ ೮-೧೦ ಮೈಲು ದೂರದಲ್ಲಿ ಹಾಡಿ ಭೂಮಿಯನ್ನು ನೀಡಲಾಯಿತು. ಇದರಿಂದಾಗಿ ರೈತರು ತಮಗೆ ನೀಡಿದ ಹಾಡಿ ಭೂಮಿಯನ್ನು ಬಿಡಲೂ ಆಗದೇ ಅಥವಾ ಅನುಭವಿಸಲೂ ಆಗದ ಸ್ಥಿತಿಗೆ ತಲುಪಿದರು.

ಅರಣ್ಯ ಇಲಾಖೆಯ ಅಧಿಕಾರಿಗಳ ದರ್ಪ ಮತ್ತು ದುರಾಚಾರ ಎಷ್ಟು ಮಿತಿಮೀರಿತ್ತೆಂದರೆ ಮನಸ್ಸಿಗೆ ಬಂದಂತೆ ದಂಡ ವಿಧಿಸುವುದು ಮತ್ತು ಶಿಕ್ಷೆಗೆ ಗುರಿಪಡಿಸುವುದಾಗಿತ್ತು. ಉದಾಃ. ಪ್ರತಿ ಮಳೆಗಾಲದಲ್ಲಿ ನದಿಯಲ್ಲಿ ಉಂಟಗುವ ಪ್ರವಾಹದಿಂದಾಗಿ ಅರಣ್ಯದಲ್ಲಿ ಸಂಗ್ರಹಿಸಿಟ್ಟ ಮರಗಳು ನದಿಯಲ್ಲಿ ತೇಲಿ ಬರುತಿದ್ದವು, ನದಿ ಪಾತ್ರದಲ್ಲಿರುವ ಜನರು ತಮ್ಮ ಜೀವದ ಹಂಗನ್ನು ತೊರೆದು ಕಷ್ಟಪಟ್ಟು ನೀರಿನಲ್ಲಿ ತೇಲಿ ಬಂದ ಆ ಮರವನ್ನು ಹಿಡಿದಿಟ್ಟುಕೊಂಡರೆ ವಿಷಯವನ್ನು ತಿಳಿದ ಅರಣ್ಯಾಧಿಕಾರಿಗಳು ಆ ಗ್ರಾಮಕ್ಕೆ ಬಂದು ಮರದ ದಿಮ್ಮಿಯನ್ನು ವಶಪಡಿಸಿಕೊಳ್ಳುವುದರೊಂದಿಗೆ ದಂಡವನ್ನು ವಿಧಿಸುತ್ತಿದ್ದರು. ಅಘನಾಶಿನಿ ನದಿಯಲ್ಲಿ ಸಂಗ್ರಹಿಸಿದ ಮರದ ದಿಮ್ಮಿಗೆ ನಾಗರಿಕನೋರ್ವ ರೂ. ೯ನ್ನು ದಂಡವಾಗಿ ನೀಡಬೇಕಾಗಿತ್ತು, ಹೀಗೆ ರೈತರ ಹಕ್ಕು ಬಾಧ್ಯತೆಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಮುಂದಾದ ಬ್ರಿಟೀಷರ ಈ ದುರಾಡಳಿತಕ್ಕೆ ಜನರು ರೋಸಿಹೋಗಿದ್ದರು. ಅನಾವಶ್ಯಕವಾಗಿ ಜನ ಸಾಮಾನ್ಯರನ್ನು ಶಿಕ್ಷೆಗೆ ಗುರಿಪಡಿಸುತ್ತಿದ್ದುದರಿಂದ ಸ್ಥಳೀಯರು ಅವರ ವಿರುದ್ದ ತಿರುಗಿ ಬಿದ್ದಿದ್ದರು.

**ಹೆಚ್ಚಿನ ತೆರಿಗೆ ಭಾರ:** ಜಿಲ್ಲೆಯ ರೈತಾಪಿ ವರ್ಗದವರು ಸರಕಾರಕ್ಕೆ ನೀಡುತ್ತಿದ್ದ ತೆರಿಗೆಯು ಉಳಿದೆಲ್ಲಾ ಪ್ರದೇಶಗಳಿಗಿಂತ ಹೆಚ್ಚಾಗಿತ್ತು. ಉದಾ: ನೆರೆಯ ಮಹಾಷ್ಟ್ರದ ರತ್ನಗಿರಿ ಜಿಲ್ಲೆಯಲ್ಲಿ ವಿಧಿಸುತ್ತಿದ್ದ ತೆರಿಗೆಯನ್ನು ಗಮನಿಸಿದರೆ ಜಿಲ್ಲೆಯ ಜನರು ನೀಡುತ್ತಿದ್ದ ತೆರಿಗೆ ಅಧಿಕವಾಗಿತ್ತು. ಇದನ್ನು ಪ್ರಶ್ನಿಸಿದರೆ ನಿಮಗೆ ಸೌದೆ ಮತ್ತು ಸೊಪ್ಪನ್ನು ಪುಕ್ಕಟೆಯಾಗಿ ನೀಡುತ್ತೇವೆಂಬ ಉತ್ತರ ಬ್ರಿಟೀಷರಿಂದ ಸಿದ್ದವಾಗಿರುತ್ತಿತ್ತು, ಆದರೆ ಸೌದೆ ಮತ್ತು ಸೊಪ್ಪನ್ನು ತರಲು ಕಾಡಿಗೆ ಹೋದರೆ ಅಲ್ಲಿ ಅರಣ್ಯ ಅಧಿಕಾರಿಗಳ ಉಪಟಳ. ಹೀಗಾಗಿ ಇವರೆಲ್ಲರೂ ಬ್ರಿಟೀಷರನ್ನು ವಿರೋಧಿಸಲು ಮಾನಸಿಕವಾಗಿ ಸಿದ್ಧರಾಗಿದ್ದರು.

**ಮಲೇರಿಯಾ ರೋಗ ಮತ್ತು ಪ್ರಾಣಿಗಳ ಹಾವಳಿ:** ಮಲೆನಾಡಿನ ಭಾಗದ ರೈತರಿಗೆ ಕಾಡುತ್ತಿದ್ದ ಇನ್ನೊಂದು ಪ್ರಮುಖ ಸಮಸ್ಯೆಯೆಂದರೆ ಮಲೇರಿಯಾ ರೋಗ. ಒಂದು ಕಡೆ ಮಲೇರಿಯಾ ರೋಗ ಉಲ್ಬಣಗೊಳ್ಳುತ್ತಿದ್ದರೆ ಇನ್ನೊಂದೆಡೆ ವನ್ಯ

ಪ್ರಾಣಿಗಳ ಹಾವಳಿ. ಬೆಳೆದು ನಿಂತ ಬೆಳೆಗಳಿಗೆ ಲಗ್ಗೆ ಇಡುವ ಆನೆ, ಹಂದಿ, ಮಂಗಗಳು ಮತ್ತು ಹಸುಗಳ ಮೇಲೆ ಎರಗುವ ಹುಲಿ ಚಿರತೆಗಳು ಜನರನ್ನು ಸಂಕಷ್ಟಕ್ಕೆ ಸಿಲುಕಿಸಿದ್ದವು. ಆದರೆ ಜನರು ತಮ್ಮ ಈ ಕಷ್ಟವನ್ನು ಯಾರೊಂದಿಗೂ ಹೇಳಿಕೊಳ್ಳುವ ಹಾಗಿರಲಿಲ್ಲ. ಒಂದೊಮ್ಮೆ ಇದನ್ನು ಅಧಿಕಾರಿಗಳೊಂದಿಗೆ ಹೇಳಿಕೊಂಡರೂ ಯಾವುದೇ ಪರಿಣಾಮಕಾರಿಯಾದ ಪ್ರತಿಕ್ರಿಯೆ ದೊರಕುತ್ತಿರಲಿಲ್ಲ. ಒಂದು ವೇಳೆ ತಮ್ಮ ಬೆಳೆಗಳನ್ನು ರಕ್ಷಿಸಿಕೊಳ್ಳಲು ಬೇಟೆ ಆಡಿದರೆ ಕೇಸು. ಪ್ರಾಣಿಗಳನ್ನು ಓಡಿಸಲು ಸುತ್ತ ಮುತ್ತ ಬೆಂಕಿ ಹಚ್ಚಿದರೆ ಮೊಕದ್ದಮೆ. ಗಟ್ಟಿಯಾಗಿ ಬೇಲಿಯನ್ನಾದರೂ ಮಾಡಿಕೊಳ್ಳೋಣವೆಂದು ತಿಳಿದು ಮರದ ಗೂಟವನ್ನು ತರಲು ಕಾಡಿಗೆ ಹೋದರೆ ಅರಣ್ಯ ಅಧಿಕಾರಿಗಳಿಂದ ನಿರ್ಬಂಧ. ಇದರಿಂದಾಗಿ ಜನರಿಗೆ ಕೃಷಿ ಮಾಡುವುದೇ ಒಂದು ಸವಾಲಾಗಿ ಪರಿಣಮಿಸಿತ್ತು. ಕೃಷಿಯನ್ನು ತ್ಯಜಿಸಿ ಜೀವನೋಪಾಯಕ್ಕಾಗಿ ಜನರು ಗುಳೆ ಹೋಗುವ ಸಂದರ್ಭ ಬಂದೊದಗಿತ್ತು. ಈ ಎಲ್ಲಾ ಕಾರಣಗಳು ಜನರನ್ನು ಬ್ರಿಟೀಷರ ವಿರುದ್ಧ ತಿರುಗಿ ಬೀಳುವಂತೆ ಮಾಡಿತ್ತು.

ಈ ಮೇಲಿನ ಎಲ್ಲಾ ಪ್ರಮುಖ ಅಂಶಗಳು ಬ್ರಿಟೀಷರ ವಿರುದ್ಧ ಜನಾಕ್ರೋಶಕ್ಕೆ ಕಾರಣವಾಗಿತ್ತು. ಇದೇ ಸಂದರ್ಭದಲ್ಲಿ ದೇಶದಾದ್ಯಂತ ಬ್ರಿಟೀಷ್ ವಿರೋಧಿ ಅಲೆಗಳು ತೀವ್ರಗೊಂಡಂತೆ ಈ ಜಿಲ್ಲೆಯಲ್ಲಿಯೂ ಜನರು ಬ್ರಿಟೀಷರಿಂದ ತಮಗಾದ ಅನ್ಯಾಯದ ವಿರುದ್ಧ ಸೇಡನ್ನು ತಿರಿಸಿಕೊಳ್ಳಲು ಮುಂದಾದರು ಎನ್ನುವುದು ಕಟುಸತ್ಯ. ಮುಂದಿನ ದಿನಗಳಲ್ಲಿ ಈ ಸಂಬಂಧದ ಕೆಲವು ಹೋರಾಟಗಳು ಸ್ವಾತಂತ್ರ್ಯ ಹೋರಾಟ ಎಂಬಂತೆ ಪ್ರತಿಬಿಂಬಿತವಾದವು.



## ಆಕರ ಗ್ರಂಥಗಳು


೧. "ಕಾನಡಾ ಜಿಲ್ಲೆ ವನದುಖಃಗಳೂ ಬೇಸಾಯದ ಅವನತಿಯು" ಕಾನಡಾ ಧುರೀಣ, ಭಾಗ ೧, ಕುಮಟಾ, ೧೯೨೪.

೨. ಸೂರ್ಯನಾಥ್ ಕಾಮತ್., ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಮೈಸೂರು.

೩. ಸೂರ್ಯನಾಥ್ ಕಾಮತ್., ಉತ್ತರ ಕನ್ನಡ ಡಿಸ್ಟ್ರಿಕ್ಟ ಗ್ಯಾಜೇಟಿಯರ್, ಬೆಂಗಳೂರು, ೧೯೮೫.

೪. ಸೂರ್ಯನಾಥ್ ಕಾಮತ್., ಉತ್ತರ ಕನ್ನಡ ಕನ್ನಡ ಜಿಲ್ಲೆಯ ಸ್ವಾತಂತ್ರ್ಯ ಚಳುವಳಿ (ಆರು ಉಪನ್ಯಾಸಗಳು) ಪ್ರಸಾರಂಗ, ಕನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೯೧.

# ಬಿಸನಾಳ ಉಪ್ಪಿನ ಸತ್ಯಾಗ್ರಹ

ವಿನಯಕುಮಾರ್.ಆರ್.ಹಿರೇಮಠ*

**ಉ**ಪ್ಪಿನ ಸತ್ಯಾಗ್ರಹ ಎಂದರೆ ನಮ್ಮ ಸ್ಮೃತಿಗೆ ಬರುವುದು ದಂಡಿ ಮತ್ತು ಅಂಕೋಲಾ ಎಂಬ ಎರಡು ಸ್ಥಳಗಳ ಮಾತ್ರ. ಇದೇ ಅವಧಿಯಲ್ಲಿ ಇಂದಿನ ಬಾಗಲಕೋಟ ಜಿಲ್ಲೆಯ ಬೀಳಗಿ ತಾಲೂಕಿನ ಬಿಸನಾಳ ಎಂಬ ಕುಗ್ರಾಮದಲ್ಲಿ ನಡೆದ ಉಪ್ಪಿನ ಸತ್ಯಾಗ್ರಹ ನಿರ್ಲಕ್ಷಕ್ಕೆ ಒಳಪಟ್ಟಿದೆ. ಅಂದಿನ ಅಖಂಡ ವಿಜಾಪುರ ಜಿಲ್ಲಾ ಕಾಂಗ್ರೆಸ ಸಮಿತಿ ಜಿಲ್ಲೆಯಲಿ ಉಪ್ಪಿನ ಕಾಯ್ದೆ ಭಂಗ ಮಾಡಲು ಬಿಸನಾಳ ಗ್ರಾಮವನ್ನು ಆಯ್ಕೆ ಮಾಡಿಕೊಂಡಿತು.

ಉಪ್ಪಿನ ಸತ್ಯಾಗ್ರಹ-ದುಷ್ಟ ಮತ್ತು ಅನ್ಯಾಯದ ಕಟ್ಟಳೆಗಳನ್ನು ಸವಿನಯವಾಗಿ ಮುರಿದು ಕಷ್ಟಗಳನ್ನು ಸಹಿಸಲು ಸಿದ್ಧರಾಗುವದೇ ಸತ್ಯಾಗ್ರಹವೆನಿಸುವದು. ಉಪ್ಪಿನ ಸತ್ಯಾಗ್ರಹವನ್ನು ಈ ಕೆಳಕಂಡ ರೀತಿಯಲ್ಲಿ ಮಾಡಲು ಅವಕಾಶಗಳಿವೆ.

೧. ಸರಕಾರಕ್ಕೆ ಕರ ಕೊಡದೆ ಉಪ್ಪನ್ನು ತಯಾರಿಸಬಹುದು.

೨. ಅಂತಹ ಉಪ್ಪನ್ನು ಎತ್ತಿ ಒಯ್ದು ಎರಡನೆಯವರಿಗೆ ಕೊಡಬಹುದು ಇಲ್ಲವೆ ಮಾರಬಹುದು.

೩. ತನ್ನಷ್ಟಕ್ಕೆ ತಾನೇ ಸಮುದ್ರದಡದಲ್ಲಿ ಆದ ಉಪ್ಪನ್ನು ಕರ ಕೊಡದೆ ಎತ್ತಿ ತರಬಹುದು.

೪. ಅದನ್ನು ಮಾರಬಹುದು.

೫. ಉಪ್ಪಿನ ಮಣ್ಣನ್ನು ಕರ ಕೊಡದೆ ಒಯ್ಯುವದು.

೬. ಸರಕಾರದ ಮಾಲ್ಕಿಯ ಉಪ್ಪನ್ನು ತೆಗೆದುಕೊಂಡು ಬರಬಹುದು.

೭ ಇವುಗಳಲ್ಲಿ ಯಾವುದಾದರು ಒಂದನ್ನು ಮಾಡಲು ಯತ್ನಿಸುವದು.

ಇವೆಲ್ಲವುಗಳನ್ನು ಮಾಡಿದರೆ ಗುನ್ನೆಗಳೆ ಅಗುವವು. ಆದರೆ ಸತ್ಯಾಗ್ರಹಿಯ ಈ ಕಾರ್ಯವನ್ನು ನಾನು ಮಾಡುವೆನೆಂದು ಮೊದಲು ಅಧಿಕಾರಿಗಳಿಗೆ ತಿಳಿಸಿ ಇದು ಗುನ್ನೆ ಅಲ್ಲ ಇದು ನನ್ನ ನೈತಿಕ ಕರ್ತವ್ಯ ಎಂದು ಸಾರಿ ಆ ಮೇಲೆ ಸತ್ಯಾಗ್ರಹ ಮಾಡಬೇಕು, ಇಲ್ಲದಿದ್ದರೆ ಕಳ್ಳತನದಿಂದ ಹೊಟ್ಟೆ ಪಾಡಿಗಾಗಿ ಉಪ್ಪ ಮಾಡುವವನಿಗೂ ಸತ್ಯಾಗ್ರಹಿಗೂ ಭೇದವೆ ಉಳಿಯುವದಿಲ್ಲ.

ಸಾಮೂಹಿಕ ಶಾಸನ ಭಂಗವನ್ನು ವಿಜಾಪೂರ ಜಿಲ್ಲೆಯ ಯಾವುದಾದರೊಂದು ಸ್ಥಳದಲ್ಲಿ ಕೈಗೊಳ್ಳಬೇಕೆಂದು ಜಿಲ್ಲೆಯ ಯುದ್ಧ ಮಂಡಳದವರು ಬಾಗಲಕೋಟದಲ್ಲಿ ಸಭೆ ಸೇರಿ ನಿರ್ಣಯಿಸಿದರು. ಮಂಡಳದ ಅಧ್ಯಕ್ಷರಾದ ಹಣಮಂತರಾವ್ ಮೊಹರೆಯವರು ಗಲಗಲಿಯ ಸಮೀಪವಿದ್ದ ಬಿಸನಾಳ ಗ್ರಾಮವನ್ನು ಆಯ್ಕೆ ಮಾಡಿಕೊಂಡರು.

ಬಾಗಲಕೋಟ ಸ್ವಾತಂತ್ರ್ಯ ಹೋರಾಟಗಾರರಾದ ಎಸ್.ಆರ್. ಮಳಗಿಯವರು ತಮ್ಮ ಸತ್ಯಾಗ್ರಹದ ನೆನಪನ್ನು ದಾಖಲಿಸಿದಂತೆ "ಬಾಗಲಕೋಟದಿಂದ ೨೦ ಮೈಲು ದೂರದ ಬಿಸನಾಳ ಹಳ್ಳದಲ್ಲಿ ಹಿಂದೆ ಉಪ್ಪು ತಯಾರಿಸುತ್ತಿದ್ದರು. ಇದನ್ನೆ ಸತ್ಯಾಗ್ರಹದ ಸ್ಥಳವೆಂದು ಆರಿಸಲಾಯಿತು. ಕೃಷ್ಣ ಪದಕಿಯವರನ್ನು ಡಾ॥ ಹರ್ಡೀಕರವರು ಈ ಕೆಲಸದ ನಾಯಕರನ್ನಾಗಿ ಆರಿಸಿ ಬಾಗಲಕೋಟದ ಹತ್ತು ತರುಣರನ್ನು ಅವರ ಜೊತೆ ಕಳುಹಿಸಿದರು. ಅಲ್ಲಿ ಗೋಲಿಬಾರ ಕೂಡಾ ಆದಿತೆಂದು ಡಾಕ್ಟರರು ಎಚ್ಚರಿಸಿದ್ದರು. ಯಾವದಕ್ಕೂ ಹಿಂಜರಿಯದ ತರುಣರು ಮೂರು ತಿಂಗಳ ಕಾಲ ಉಪ್ಪಿನ ಸತ್ಯಾಗ್ರಹ ಶಿಬಿರ ನಡೆಸಿದರು."

ವಿಜಾಪೂರ ಜಿಲ್ಲೆಯ ಸತ್ಯಾಗ್ರಹಿಗಳ ಮೊದಲನೆ(ಲಾಲಾಜಿಯವರ) ಪಥಕವು ಉಪ್ಪಿನ ಸತ್ಯಾಗ್ರಹಕ್ಕಾಗಿ ಬಿಸನಾಳಕ್ಕೆ ಹೋಗಲು ನಿರ್ಧರಿಸಿದ್ದು ತಾಲೂಕಾ ಕಾಂಗ್ರೆಸ ಕಮಿಟಿಯು ಅದರ ಜಾಹೀರಾತನ್ನು ಕನ್ನಡಿಗ ಪತ್ರಿಕೆಯಲ್ಲಿ ಹೀಗೆ ಪ್ರಕಟಿಸಿತು.

* ಶಿವ ನಿಲಯ, ಪ್ಲಾಟ್ ನಂ. ಎಂ. ೧೦೧, ಸೆಕ್ಟರ್ ನಂ. ೩೩, ನವನಗರ, ಬಾಗಲಕೋಟೆ, ಮೊ. ೭೮೨೯೧೩೬೮೮೦

ಬಿಸನಾಳಿಗೆ ನಡೆದು ಹೋಗುವ ಮಾರ್ಗ ವಿಜಾಪೂರ ಜಿಲ್ಲೆಯ ಮಂಡಳವು ನಿಶ್ಚಯಿಸಿದ ಪ್ರಕಾರ ಮೊದಲನೆ ಪಥಕವು ತಾರೀಖು: ೦೫-೦೫-೧೯೩೦ರಂದು ಮುಂಜಾನೆ ಬಾಗಲಕೋಟೆಯಿಂದ ಗದ್ದನಕೇರಿ, ಅನಗವಾಡಿ, ಬೂದಿಹಾಳ, ಬಾವಲತ್ತಿ, ಕುಂರಗಿ, ಕಾತರಕಿ, ಕೊಪ್ಪ, ಆಲಗುಂಡಿ, ಅರಕೇರಿ, ಬೀಳಗಿ, ಸೊನ್ನ, ಸಿದ್ದಾಪೂರ, ತೆಗ್ಗಿ, ಬಾಡಗಿ, ಗಲಗಲಿ, ಬಿಸನಾಳ ಊರುಗಳಲ್ಲಿ ಪ್ರಚಾರ ಕಾರ್ಯ ಮಾಡುತ್ತಾ ಬಿಸನಾಳಿಗೆ ಹೋಗುವದು.

ಬಿಸನಾಳಗೆ ಹೊರಟ ಸತ್ಯಾಗ್ರಹಿಗಳ ಮೊದಲನೆ ಪಥಕಕ್ಕೆ ಬಾಗಲಕೋಟದಲ್ಲಿ ಅದ್ದೂರಿಯಾಗಿ ಬೀಳ್ಕೊಡಲಾಯಿತು. 'ಬಿಸನಾಳ ಉಪ್ಪಿನ ಸತ್ಯಾಗ್ರಹಕ್ಕೆ ತೆರಳಬೇಕಾದ ಪಥವು ಮುಂಜಾನೆ ಬಾಗಲಕೋಟಯಿಂದ ಹೊರಟಿತು. ಬೆಳಗಿನ ಆರು ಗಂಟೆಯ ಪ್ರಶಾಂತ ಸಮಯದಲ್ಲಿ ಧ್ವಜ ವಂದನೆಯನ್ನು ಮಾಡಿ ೧೨ ಸ್ವಯಂ ಸೇವಕರ ಪಥಕವು ಸೇವಾದಳದಲ್ಲಿರುವ ಶಿಕ್ಷಣದ ಶಿಬಿರದಿಂದ ಹೊರಟಿತು. ಊರೊಳಗಿನ ಬೀದಿಗಳಲ್ಲಿ ಹಾಯ್ದು ಗದ್ದನಕೇರಿಯ ಮಾರ್ಗವಾಗಿ ಪ್ರಯಾಣ ಬೆಳೆಸಿತು. ಊರ ನಾಗರಿಕರು ತಮ್ಮ ಮನೆ ಅಂಗಡಿಗಳ ಮುಂದೆ ಬೀದಿಗಳಲ್ಲಿ ತಳಿರು ತೋರಣಗಳಿಂದ ಅಲಂಕರಿಸಿದ್ದಲ್ಲದೆ. ಓಣಿಗಳಲ್ಲಿ ಕಸಗುಡಿಸಿ ಥಳಿ ಹೊಡೆದು ರಂಗವಲ್ಲಿಗಳಿಂದ ಅಲಂಕರಿಸಿ ಹಬ್ಬದ ವಾತಾವರಣವನ್ನು ನಿರ್ಮಿಸಿದರು. ಜನರು ಉತ್ಸಾಹಭರಿತವಾಗಿ ಸತ್ಯಾಗ್ರಹಿ ತಂಡವನ್ನು ಹಿಂಬಾಲಿಸುತ್ತಿದ್ದರು. ಮೆರವಣಿಗೆ ಮುಂದೆ ಸಾಗಿದಂತೆ ಹಿಂಬಾಲಿಸುವ ಜನರ ಸಂಖ್ಯೆ ಅಧಿಕವಾದರೂ ಶಿಸ್ತಿನಲ್ಲಾಗಲಿ, ಶಾಂತತೆಯಲ್ಲಾಗಲಿ, ಗಾಂಭೀರ್ಯದಲ್ಲಾಗಲಿ ನ್ಯೂನ್ಯತೆ ಉಂಟಾಗಲಿಲ್ಲ. ಅಲ್ಲದೆ ಎಲ್ಲರ ಮೊರೆಯ ಮೇಲೆ ಮಹಾತ್ಮರು ಕೈಗೊಂಡಿರುವ ಶಾಂತಿ ಯುದ್ಧದ ಗಂಭೀರ ವೃತ್ತಿಯ ಭಾವನೆಯು ಒಡೆದು ಕಾಣುತ್ತಿತ್ತು. ಸುಮಂಗಲೆಯರಾದ ಗೃಹಿಣಿಯರು ತಮ್ಮ ತಮ್ಮ ಮನೆಗಳ ಮುಂದೆ ಈ ಸತ್ಯಾಗ್ರಹಿಗಳಿಗೆ ಅರಿಶಿನ ಕುಂಕುಮ, ಗಂಧ ಮಂಗಲ ದ್ರವ್ಯಗಳಿಂದ ಆರತಿ ಅಕ್ಷತೆಗಳೊಂದಿಗೆ ವೀರರ ಹಣೆಗೆ ಕುಂಕುಮವನ್ನು ಇಟ್ಟು ಹೂ ಹಾರಿಸಿ ಸಮರದಲ್ಲಿ ವಿಜಯಶಾಲಿಗಳಾಗಿ ಬನ್ನಿರೆಂದು ಬೀಳ್ಕೊಟ್ಟರು. ಇದೇ ಸಮಯದಲ್ಲಿ ಜವಳಿ ವ್ಯಾಪಾರಸ್ಥರು ತಮ್ಮ ಸಂಘದ ವತಿಯಿಂದ ೨೫ ರೂಪಾಯಿ ದೇಣಿಗೆ ಕೊಟ್ಟರು. ಅನೇಕರು ಉದಾರ ಹಸ್ತದಿಂದ ದಾನ ಮಾಡಿದರು. ಸತ್ಯಾಗ್ರಹಿ ಪಥಕದ ಮುಖ್ಯಸ್ಥನಿಗೆ ಸೇನಾಪತಿ ಎಂದು ಕರೆಯುತ್ತಿದ್ದರು. ಸತ್ಯಾಗ್ರಹಿಗಳ ಪ್ರಥಮ ಪಥಕದ ವರದಿಯಲ್ಲಿ ಸೇನಾಪತಿಯು ತಾವು ಕ್ರಮಿಸಿದ ದೂರ ಹಾಗೂ ಸ್ಥಳಗಳ ಬಗ್ಗೆ ವರದಿ ಮಾಡಿದ್ದಾರೆ. ಕುಂದರಗಿಯಿಂದ ಬುಧವಾರ ತಾರೀಖು: ೦೭-೦೫-೧೯೩೦ರಂದು ಮುಂಜಾನೆ ೭ ಗಂಟೆಗೆ ಮೆರವಣಿಗೆಯೊಂದಿಗೆ ಹೊರಟೆವು, ಅಲ್ಲಿಂದ ಬಾವಲತ್ತಿಗೆ ಬಂದೆವು. ಇಲ್ಲಿಯ ಜನರು ಕೊಂಚ ಮಟ್ಟಿಗೆ ಉತ್ಸಾಹವನ್ನು ತೋರಿಸಿದ್ದರು. ವ್ಯಾಖ್ಯಾನವಾದ ನಂತರ ಪ್ರಯಾಣ ಬೆಳೆಸಿದೆವು. ಸಂಜೆ ೭ ಗಂಟೆಗೆ ಬೀಳಗಿ ತಲುಪಿದೆವು. ಬೀಳಗಿಯಲ್ಲಿ ಮೆರವಣಿಗೆಯಾಯಿತು. ಬಜಾರ್ ಮಧ್ಯದಲ್ಲಿ ಧ್ವಜಾರೋಹಣ ಮಾಡಿ ಭಾಷಣವಾಯಿತು. ನೇಟಿವ್ಹ್ ಜನರಲ್ ಲೈಬ್ರರಿಯಲ್ಲಿ ರಾತ್ರಿ ಇಳಿದುಕೊಳ್ಳಲು ವ್ಯವಸ್ಥೆ ಮಾಡಿದ್ದರು. ೮ನೇ ತಾರೀಖು ಮುಂಜಾನೆ ಸೊನ್ನಕ್ಕೆ ಹೋಗಿ ಸಂಜೆ ಬಾಡಗೆಗೆ ಬಂದೆವು. ೫ನೇ ತಾರೀಖಿನ ದಿನ ಬಾಗಲಕೋಟದಿಂದ ಬಿಸನಾಳಕ್ಕೆ ಉಪ್ಪಿನ ಕಾಯ್ದೆ ಭಂಗಮಾಡಲು ಹೊರಟ ಲಾಲಾಜಿ ಪಥಕದ ವೀರರು ಅಲ್ಲಲ್ಲಿಗೆ ಹಾದಿ ಹಾದಿಗಳಲ್ಲಿ ಜನರಿಂದ ಸನ್ಮಾನ ಸತ್ಕಾರಗಳನ್ನು ಸ್ವೀಕರಿಸಿ ಬಿಸನಾಳಕ್ಕೆ ತಲುಪಿದರು,

ಬಿಸನಾಳದ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದ ಓರ್ವ ಪ್ರತ್ಯಕ್ಷದರ್ಶಿಯು ಕಾಯ್ದೆ ಭಂಗದ ಬಗ್ಗೆ ಅಂದಿನ ಘಟನೆ ಕುರಿತು ಕನ್ನಡಿಗ ಪತ್ರಿಕೆಯಲ್ಲಿ ವರದಿ ಮಾಡಿದ್ದಾನೆ. ೧೦ನೇ ತಾರೀಖು ಮದ್ಯಾಹ್ನ ೨ ಗಂಟೆಗೆ ಸ್ವಯಂ ಸೇವಕರು ಸಕಲ ವಾದ್ಯ ವೈಭವದೊಡನೆ ಬಿಸನಾಳಿಗೆ ಬಂದರು ಸಾವಿರಾರು ಜನರು ಅವರನ್ನು ಹಿಂಬಾಲಿಸಿದರು. ಈ ಮೊದಲೆ ಬಿಸನಾಳಿಗೆ ಬಾಗಲಕೋಟದ ಪೊಲೀಸ್ ಇನ್ಸ್‌ಪೆಕ್ಟರ್, ಸಬ್ ಇನ್ಸ್‌ಪೆಕ್ಟರ್ ಮತ್ತು ೪-೬ ಸಿಪಾಯಿಯವರು ಬಂದಿದ್ದರು. ಬಿಸನಾಳದ ಜನರು ಸತ್ಯಾಗ್ರಹದ ಯಶಸ್ವಿಗಾಗಿ ನಾಲ್ಕಾರು ದಿವಸಗಳ ಮುಂಚಿತವಾಗಿ ಪೂರ್ವ ಸಿದ್ಧತೆಯನ್ನು ಮಾಡಿದ್ದರು. ಅಲ್ಲದೆ ಪಕ್ಕದ ಊರು ಗಲಗಲಿಯ ಅಬಾಲ ವೃದ್ಧರಾದಿಯಾಗಿ ಸ್ತ್ರೀಯರು ಸಹಿತ ಪಾಲ್ಗೊಂಡಿದ್ದರು. ಸ್ವಯಂ ಸೇವಕರು ಗಲಗಲಿಯಿಂದ ರಣಕ್ಷೇತ್ರಕ್ಕೆ ಹೊರಡುವ ಕಾಲಕ್ಕೆ ರಸ್ತೆಗಳು ತಳಿರು ತೋರಣಗಳಿಂದ ಶೋಭಿಸಿದವು ಓಣಿಗಳಲ್ಲಿ ಹಾಯ್ದು ಹೋಗುವ ಸತ್ಯಾಗ್ರಹಿಗಳಿಗೆ ಅಲ್ಲಿಯ ವೀರ ಪತ್ನಿಯರು ವೀರ ವನಿತೆಯರು, ವೀರ ಭಗಿನಿಯರು, ವೀರ ಮಾತೆಯವರು ಆರತಿ ಮಾಡಿದರು. ಅಲ್ಲಿಯ ಹಿರಿಯರು ಯಶದೊರೆಯಲೆಂದು ಅನುಗ್ರಹಿಸಿದರು. ಗಲಗಲಿಯ ಸತ್ಯಾಗ್ರಹಿಗಳು ೩ ಗಂಟೆಗೆ ಬಿಸನಾಳಿಗೆ ಬಂದಾಗ ಅಲ್ಲಿ ನೆರದಿದ್ದ ಮೂರು ಸಾವಿರ ಜನರು ಕೂಡಿ ಅವರನ್ನು ಸ್ವಾಗತಿಸಿದರು. ಬಿಸನಾಳದಲ್ಲಿಯು ಓಣಿಗಳು ತಳಿರು, ತೋರಣಗಳಿಂದ ಶೋಭಿಸುತ್ತಿದ್ದವು. ಸ್ವಯಂ ಸೇವಕರ ಮೆರವಣಿಗೆಯು ಊರೊಳಗೆ ಹಾಯ್ದು ಆರತಿ ಮುಗಿದ ಬಳಿಕ ಒಂದು ಮೈಲು ದೂರ ಇರುವ ರಣಕ್ಷೇತ್ರಕ್ಕೆ ಹೊರಟರು. ಕಲ್ಲು ಮುಳ್ಳಿನ ಹಾದಿಯಲ್ಲಿ ಮೂರು ಸಾವಿರ ಜನರು ಕಾಯ್ದೆ ಭಂಗಕ್ಕೆ ಸಾಗಿದರು. ರಣಕ್ಷೇತ್ರದಲ್ಲಿ ಮೊದಲು ರಾಷ್ಟ್ರಧ್ವಜ ಹಾರಿಸಿ ರಾಷ್ಟ್ರಗೀತೆಗಳನ್ನು ಹಾಡಿದರು.

ಮೊದಲು ಐದು ಸ್ವಯಂ ಸೇವಕರು ಉಪ್ಪಿನ ಮಣ್ಣನ್ನು ಹಳ್ಳದೊಳಗಿಂದ ಕೆದರಿ ಗಡಿಗೆಗಳಲ್ಲಿ ತುಂಬಿಟ್ಟರು. ನಂತರ ನೆರೆದ ಜನರೆಲ್ಲರು ಉಪ್ಪಿನ ಮಣ್ಣನ್ನು ಟೊಪ್ಪಿಗೆಗಳಲ್ಲಿ, ಕಂಬಳಿಯಲ್ಲಿ, ಮುಷ್ಠಿಯಲ್ಲಿ, ಬೊಗಸೆಯಲ್ಲಿ ಮನಸ್ಸು ತಣಿವುವಂತೆ ತುಂಬಿಕೊಂಡರು. ನಂತರ ಪುನಃ ಬಿಸನಾಳಕ್ಕೆ ಬಂದು ಅಗಸಿಯ ಮುಂದೆ ಒಲೆಗಳನ್ನು ಹೂಡಿ ತಾವು ತಂದ ಮಣ್ಣಿನಿಂದ ಶುದ್ಧವಾದ ಉಪ್ಪನ್ನು ಸಿದ್ಧಪಡಿಸಿ ಹಂಚಿದರು. ನಂತರ ಧ್ವಜಾರೋಹಣ ಭಾಷಣಗಳಾದವು ರಾಷ್ಟ್ರಗೀತೆಯಾದ ಬಳಿಕ ಸಭೆ ವಿಸರ್ಜನೆಗೊಂಡಿತು. ಪವಿತ್ರವಾದ ಮಾತೃಭೂಮಿಯ ಪ್ರಸಾದವೆಂದು ಜನರು ಉಪ್ಪಿನ ರುಚಿ ನೋಡಿದರು. ಕೆಲವರು ಉಪ್ಪನ್ನು ವಿಜಯದ ಚಿನ್ಹೆ ಎಂದು ಭಾವಿಸಿ ಕಿಸೆಯಲ್ಲಿ ತುಂಬಿಕೊಂಡರು. ಜಯ ಜಯಕಾರ ಪ್ರಚಂಡವಾಗಿ ಕೇಳಿ ಬರುತಿತ್ತು. ಶಾಂತತೆಗೆ ಎಲ್ಲಿಯೂ ದಕ್ಕೆ ಬರಲಿಲ್ಲ. ೧೧ ಜನ ಸ್ವಯಂ ಸೇವಕರ ಗುಂಪು ಬಿಸನಾಳದಲ್ಲಿಯೇ ಬೀಡು ಬಿಟ್ಟಿತ್ತು. ಇದರಲ್ಲಿ ಯಾರಾದರೂ ಬಂಧನಕ್ಕೆ ಒಳಗಾದರೆ ಅವರ ಸ್ಥಾನದಲ್ಲಿ ಹೊಸ ಸ್ವಯಂ ಸೇವಕರನ್ನು ಕಳಿಸುವ ವ್ಯವಸ್ಥೆ ಮಾಡಲಾಗಿದೆ.

ಸತ್ಯಾಗ್ರಹದ ಶಿಭಿರಾರ್ಥಿಗಳಾದ ಸಾ. ಗೋವರ್ಧನದಾಸರು ಬಿಸನಾಳದ ಉಪ್ಪಿನ ಸತ್ಯಾಗ್ರಹದ ಬಗ್ಗೆ ಕನ್ನಡಿಗದಲ್ಲಿ ದಿನಾಂಕ ೨೫-೦೫-೧೯೩೦ರಂದು ಉಲ್ಲೇಖಿಸುತ್ತಾ "ಬಿಸನಾಳದ ಹವೆಯು ಆರ್ದ್ರವಾಗಿರುವದರಿಂದ ಮಣ್ಣಿನಲ್ಲಿರುವ ಉಪ್ಪು ಕರಗಿ ಕಪ್ಪು ಬಣ್ಣದಲ್ಲಿ ಬರುತ್ತಿದೆ. ಸಂಜೆ ಹೊತ್ತು ಸಿಂದಗಿಯವರು ಕೀರ್ತನೆ ಮಾಡಿ ಬಿಸನಾಳದ ಜನರು ಚಳವಳಿಯಲ್ಲಿ ಭಾಗವಹಿಸುವಂತೆ ಮಾಡಿದರು. ಊರಿನ ಅಸ್ಪಶ್ಯ ಭಗಿನಿಯರು ಸಿಂಧೂರ ಲಕ್ಷ್ಮಣ ಮತ್ತು ಕಟ್ಟೆಯ ಚನ್ನಪ್ಪ ಇವರ ಜೀವಮಾನದೊಳಗಿನ ಹಲವು ಸಂಗತಿಗಳ ಕುರಿತು ಲಾವಣಿಯನ್ನು ಹಾಡಿ ಮತ್ತಷ್ಟು ಜನರು ಕಾಯ್ದೆ ಭಂಗದಲ್ಲಿ ಪಾಲ್ಗೊಳ್ಳುವಂತೆ ಮಾಡಿದರು. ಬಿಸನಾಳದಿಂದ ೨ ಮೈಲಿ ಅಂತರದಲ್ಲಿದ್ದ ಬೂದಿಹಾಳ ಗ್ರಾಮದಲ್ಲಿ ೧೩ನೇ ತಾರೀಖದಂದು ಜಾತ್ರೆ ಇದ್ದು ಲಾಲಾಜಿ ಪಥಕದ ಸ್ವಯಂ ಸೇವಕರು ಅಂದು ಉಪ್ಪಿನ ನೀರನ್ನು ಹಾಗೂ ಉಪ್ಪಿನ ಮಣ್ಣನ್ನು ತೆಗೆದುಕೊಂಡು ಹೋಗಿ ಸ್ವದೇಶಿ ಉಪ್ಪಿನ ಪ್ರಚಾರ ಮಾಡಿದರು. ನೆರೆದಿದ್ದ ಒಂದು ಸಾವಿರ ಜನರಿಗೆ ಉಪ್ಪನ್ನು ತಯಾರಿಸುವ ವಿಧಾನವನ್ನು ಕಲಿಸಿದರು. ಸಂಜೆ ವೇಳೆಯಲ್ಲಿ ಮಹಾತ್ಮರ ಬಂಧನ ಹಾಗೂ ಉಪ್ಪಿನ ಕಾಯ್ದೆ ಭಂಗದ ವಿಷಯವಾಗಿ ಸ್ವಯಂ ಸೇವಕರು ಭಾಷಣ ಮಾಡಿದರು."

೧೪ನೇ ತಾರೀಖು ಬೀಳಗಿಯ ಪೌಜದಾರ ಜಮಾದಾರ ಹಾಗೂ ಇಬ್ಬರು ಸಿಪಾಯಿಗಳು ಬಿಸನಾಳಕ್ಕೆ ಹೋಗಿ ಸತ್ಯಾಗ್ರಹಿ ಶಿಬಿರದ ಹತ್ತಿರದಲ್ಲಿಯೇ ಇಳಿದುಕೊಂಡಿದ್ದರೂ ಸಹ ಲಾಲಾಜಿ ಪಥಕದವರು ಪ್ರತಿ ದಿವಸದಂತೆ ಆ ದಿನವು ಉಪ್ಪನ್ನು ಸಿದ್ಧಪಡಿಸಿದರು. ಫೌಜದಾರ ಯಾರನ್ನೂ ಬಂಧಿಸಲಿಲ್ಲ ಆದರೆ ಚಳವಳಿ ತೀವ್ರಗೊಂಡಾಗ ಪೊಲೀಸರು ಸತ್ಯಾಗ್ರಹಿಗಳನ್ನು ಬಂಧಿಸತೊಡಗಿದರು. ಇದರಿಂದ ಸ್ಪೂರ್ತಿ ಪಡೆದ ಗಲಗಲಿಯ ಜನರು ಸತ್ಯಾಗ್ರಹವನ್ನು ತೀವ್ರಗೊಳಿಸಲು ನಿರ್ಣಯಿಸಿದರು. ಯಾವ ಸ್ಥಳದಲ್ಲಿ ಯಾವ ಮಣ್ಣಿನ ಸಲುವಾಗಿ ಅವರು ಸೆರೆ ಹಿಡಿಯಲ್ಪಟ್ಟಿದ್ದರೂ ಅಲ್ಲಿಗೆ ಹೋಗಿ ಪುನಃ ಸತ್ಯಾಗ್ರಹ ಮಾಡಬೇಕು ಸತ್ಯಾಗ್ರಹಿಗಳನ್ನು ಹಿಡಿದರೆ ಪುನಃ ಮರು ದಿವಸ ಕೆಲವು ಜನರು ಹೋಗಿ ಅದೇ ಕೃತಿಯನ್ನು ಮಾಡಬೇಕು ಎಂದು ನಿರ್ಧರಿಸಿದರು. ೨೦ನೆ ತಾರೀಖಿನಂದು ಐದು ಮಂದಿ ಒಂದೊಂದು ಚೀಲವನ್ನು ತಕ್ಕೊಂಡು ಬಿಸನಾಳಕ್ಕೆ ಹೋಗಿ ಅದೇ ಸ್ಥಳದಲ್ಲಿ ಮಣ್ಣನ್ನು ತುಂಬಿಕೊಂಡು ಬಂದರು. ಪೌಜಧಾರ ಮತ್ತು ಹವಾಲ್ದಾರರು ಸತ್ಯಾಗ್ರಹಿಗಳನ್ನು ತಡೆದು ಮಣ್ಣಿನ ಹರಕತ್ತು ಇದೆ, ಒಯ್ಯಬೇಡಿರಿ ಎಂದು ಹೇಳಿದಾಗ ಸತ್ಯಾಗ್ರಹಿಗಳು ನಾವು ಒಯ್ಯುವವರು ನೀನು ಮಾಡತಕ್ಕದ್ದು ಮಾಡು ಎಂದು ಹೇಳುತ್ತಾ ಶಾಂತ ರೀತಿಯಿಂದ ಚೀಲವನ್ನು ತೆಗೆದುಕೊಂಡು ಗಲಗಲಿಗೆ ಹೋದಾಗ ಈ ಐದು ಜನರನ್ನು ಗಲಗಲಿಯ ಜನರು ಭಜಂತ್ರಿಯೊಂದಿಗೆ ರಾತ್ರಿ ಗ್ಯಾಸಿನ ಬೆಳಕಿನಲ್ಲಿ ಭವ್ಯವಾಗಿ ಸ್ವಾಗತಿಸಿದರು.

ಗಲಗಲಿಯ ಮಹಾದೇವಪ್ಪ ಕತ್ತಿಯವರು ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದ ಬಿಸನಾಳ ಗ್ರಾಮದ ಜನತೆಯ ಸಹಕಾರ ಕುರಿತು "ಸತ್ಯಾಗ್ರಹಿಗಳಿಗೆ ಗ್ರಾಮದ ಜನರು ಊಟದ ವ್ಯವಸ್ಥೆ ಮಾಡಿದ್ದರು. ನಾಗರಿಕ ಕಾರ್ಯಕರ್ತರು ಅಡುಗೆಗಾಗಿ ಪ್ರತಿಮನೆಯಿಂದ ಇಂತಿಷ್ಟು ಅಕ್ಕಿ, ಜೋಳ, ಬೆಲ್ಲವನ್ನು ಸಂಗ್ರಹಿಸಿ ಕೊಡುತ್ತಿದ್ದರು. ಶಿವಬಸಪ್ಪ ಉಪ್ಪಿನ ಅವರ ಮನೆಯಲ್ಲಿ ಸತ್ಯಾಗ್ರಹಿಗಳಿಗೆ ಊಟದ ವ್ಯವಸ್ಥೆ ಇರುತ್ತಿತ್ತು ಹಾಗೂ ಪ್ರತಿದಿನ ಇವರ ಮನೆಯ ಮುಂದಿನ ಕಟ್ಟೆಯ ಮೇಲೆ ಸತ್ಯಾಗ್ರಹಿಗಳು ಸಭೆ ಸೇರುತ್ತಿದ್ದರು. ಬಿಸನಾಳದ ಭಾಷಾಸಾಬ್ ಅಲ್ಲಾಡಿ, ಹಣಮಂತ ಹಣಮಾರ, ಲಕ್ಷ್ಮಪ್ಪ ಕುಬಕಡ್ಡಿ, ಬಸಪ್ಪ ಕೊಪ್ಪದ, ಸಂಗಪ್ಪ ತುಪ್ಪದ ಗಂಗಯ್ಯ ಹಿರೇಮಠ ಮುಂತಾದವರು ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ಶಿವಬಸಪ್ಪನವರು ಉಪ್ಪಿನ ಸತ್ಯಾಗ್ರಹದಲ್ಲಿ ಮುಂದಾಳುಗಳಾಗಿರುವದರಿಂದ ಇವರ ಮನೆತನಕ್ಕೆ 'ಉಪ್ಪಿನ' ಎಂದು ಹೆಸರು ಬಂದಿತು." ಬಿಸನಾಳದಲ್ಲಿ ಉಪ್ಪಿನ ಸತ್ಯಾಗ್ರಹ ನಡೆದಿರುವದರಿಂದ ಈ ಊರಿಗೆ ಉಪ್ಪಿನ ಬಿಸನಾಳ ಎಂದು ಕರೆಯುತ್ತಿದ್ದರು.

೧೯-೦೬-೧೯೩೦ರಂದು ಕೆರೂರದಲ್ಲಿ ಬೀಳಗಿ ಪಟ್ಟದ ದೇವರ ನೇತೃತ್ವದಲ್ಲಿ ಸಭೆ ಜರುಗಿತು. ಇಂಗಳಗಿ ಮಠದ ಮೃತ್ಯುಂಜಯ ಸ್ವಾಮಿಗಳು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಸಭೆಯು ಮುಕ್ತಾಯಗೊಂಡ ನಂತರ ಸಿಂದಗಿ ಎಂಬುವವರು ಬಿಸನಾಳದಲ್ಲಿ ತಾವೇ ಸ್ವತಃ ತಯಾರಿಸಿದ ಉಪ್ಪನ್ನು ಮಾರಿದರು.

ಪ್ರಾಂತಿಕ ಕಾಂಗ್ರೆಸ ಕಮಿಟಿಯು ಬಿಸನಾಳದಲ್ಲಿ ಬಂಧಿಸಿದ ಸ್ವಯಂ ಸೇವಕರಿಗೆ ಅಭಿನಂದನೆ ಮಾಡಿತು. ಗಲಗಲಿಯ ಸ್ವಯಂ ಸೇವಕರಿಗೆ ಶಾಂತ ರೀತಿಯಿಂದಲೂ ಮತ್ತು ಸತ್ಯಾಗ್ರಹ ಮಂಡಲದವರು ಹಾಕಿಕೊಟ್ಟ ನಿಯಮಗಳಿಗೆ ಅನುಸರಿಸಿಯೂ ಉಪ್ಪು ತಯಾರಾಗಬಹುದಾದ ಎಲ್ಲ ಸ್ಥಳಗಳಲ್ಲಿ ಉಪ್ಪಿನ ಕಾಯ್ದೆ ಭಂಗ ಮಾಡಲು ಧಾರವಾಡದಿಂದ ಪ್ರಾಂತಿಕ ಕಾಂಗ್ರೆಸ ಕಮಿಟಿಯವರು ಅಪ್ಪಣೆ ಕೊಟ್ಟರು. ಬಾಗಲಕೋಟದಲ್ಲಿ ಲಿಂಗಾಪೂರ ಎಂಬ ಸ್ವಯಂ ಸೇವಕನು ಬಿಸನಾಳ ಭೂಮಿಯಲ್ಲಿ ತಯಾರಿಸಿಕೊಂಡ ಉಪ್ಪು ಐದು ರೂಪಾಯಿಗೆ ಲೀಲಾವು ಮಾಡಿದರು. ಕೃಷ್ಣಾಜಿ ಗೋಪಾಲ ನಾಯಕ ಗಣಿ ಎಂಬುವರು ಅದನ್ನು ಖರೀದಿಸಿದರು. ಸಬ್ ಇನ್‌ಸ್ಪೆಕ್ಟರ್ ಇವರನ್ನು ಬಂಧಿಸಿದ. ಶ್ರೀನಿವಾಸರಾಯರು ನೂರು ಇನ್ನೂರು ಚೀಟಿಗಳನ್ನು ಸ್ವಯಂ ಸೇವಕರ ಸಹಾಯದಿಂದ ಸಭೆಯಲ್ಲಿ ಮಾರಿಸಿದರು.

ಹಣಮಂತ ಜೋಶಿಯವರು ತಮ್ಮ ಸ್ಮೃತಿಯಲ್ಲಿ ದಾಖಲಿಸಿದಂತೆ "ದಿವಾಕರರ ನೇತೃತ್ವದಲ್ಲಿ ೨೫-೩೦ ಜನರು ಹೊನಗನಹಳ್ಳಿಯ ಹತ್ತಿರ ದೋಣಿ ನದಿಯಲ್ಲಿ ಉಪ್ಪು ತಯಾರಿಸಿದೆವು. ಸಂಜೆಯ ಸಭೆಯಲ್ಲಿ ಲೀಲಾವು ಮಾಡಲಾಗಿ ೩೫ ರೂಪಾಯಿ ಬಂದವು. ಇದೇ ಪ್ರಕಾರ ಪ್ರತಿ ದಿನ ಒಬ್ಬೊಬ್ಬರ ಡಿಕ್ಟೇಕಟರ್‌ಶಿಪ್ಪಿನಲ್ಲಿ ಉಪ್ಪು ತಯಾರಿಸಲಾಯಿತು. ಹಣಮಂತರಾವ ಮೊಹರೆ, ಶೀನಿವಾಸರಾವ ಕೌಜಲಗಿ, ಕಾಕಾ ಕಾರಖಾನೀಸ ಮೊದಲಾದವರ ನೇತೃತ್ವದಲ್ಲಿ ಸತ್ಯಾಗ್ರಹ ನಡೆಯಿತು."

ಬಾದಾಮಿ ಮತ್ತು ಗುಳೇದಗುಡ್ಡಗಳಲ್ಲಿನ ಸ್ಥಳೀಯರು ಗೋವಾದಿಂದ ಉಪ್ಪನ್ನು ತರಿಸಿ ಕಾನೂನು ಭಂಗ ಮಾಡಿದರು. ಸಿಂದಗಿಯಲ್ಲಿ ಎಸ್.ವೈ. ಪಾಟೀಲ, ವೆಂಕೂಬಾಯಿ ಕೆರೂರು, ತುಳಸಿಬಾಯಿ ಬುರ್ಲಿ ಮತ್ತು ಗಂಗವ್ವ ಅಂಬಲಿ ಇನ್ನು ಕೆಲವು ಮಹಿಳೆಯರು ಸೇರಿದಂತೆ ಉಪ್ಪಿನ ಸತ್ಯಾಗ್ರಹ ನೆರವೇರಿಸಿದ್ದಕ್ಕಾಗಿ ಬಂಧನಕ್ಕೆ ಒಳಗದರು.

ಉಪ್ಪಿನ ಸತ್ಯಾಗ್ರಹ ಬಾಗಲಕೋಟ, ವಿಜಾಪೂರ ಜಿಲ್ಲೆಗಳಲ್ಲಿ ಮಹತ್ವ ಪಡೆಯಿತು ಉಪ್ಪಿನ ಸತ್ಯಾಗ್ರಹದಿಂದ ಮನೆಮನೆಗಳಲ್ಲಿ ಉಪ್ಪು ನೀರಿನ ಬಾವಿಗಳಿಗೆ ಬೆಲೆ ಬಂತು. ಅದರಲ್ಲಿನ ನೀರನ್ನೆ ಕುದಿಸಿ ತಯಾರಿಸಿದ ಚಿಟಿಗಿ ಉಪ್ಪಿಗೆ ದೇವರ ಪ್ರಸಾದದಷ್ಟು ಮಹತ್ವ, ಕಡಲ ತೀರದಿಂದ ತಂದ ಉಪ್ಪಿನ ಚೀಟಿಗಳು ನೂರಾರು ರೂಪಾಯಿಗಳಿಗೆ ಹರಾಜಾದವು. ಸತ್ಯಾಗ್ರಹಿಗೆ ಹಾಕಿದ ಹಾರಕ್ಕೆ ಅತಿ ಹೆಚ್ಚಿನ ಬೆಲೆ ರಾಷ್ಟ್ರೀಯ ಚಳವಳಿಯ ನಿಧಿ ಹೀಗೆ ವೃದ್ಧಿಯಾಯಿತು. ಬಯಲು ಪ್ರದೇಶವಾದ ಬಾಗಲಕೋಟ ಜಿಲ್ಲೆಯಲ್ಲಿ ಉಪ್ಪಿನ ಸತ್ಯಾಗ್ರಹವು ಅತ್ಯಂತ ಯಶಸ್ವಿಯಾಗಿ ನಡೆಯಿತು.



## ಆಕರ ಗ್ರಂಥಗಳು


೧. ಕನ್ನಡಿಗ, ವಾರಪತ್ರಿಕೆ, ಬಾಗಲಕೋಟ, ದಿನಾಂಕ ೧೨-೫-೧೯೩೦, ಪುಟ ಸಂಖ್ಯೆ ೧, ೨.

೨. ಕನ್ನಡಿಗ, ವಾರಪತ್ರಿಕೆ, ಬಾಗಲಕೋಟ, ದಿನಾಂಕ ೨೫-೫-೧೯೩೦, ಪುಟ ಸಂಖ್ಯೆ ೧.

೩. ಕನ್ನಡಿಗ, ವಾರಪತ್ರಿಕೆ, ಬಾಗಲಕೋಟ, ದಿನಾಂಕ ೨೩-೪-೧೯೩೦, ಪುಟ ಸಂಖ್ಯೆ ೮.

೪. ಸಂದರ್ಶನ, ಮಹಾದೇವಪ್ಪ ಕತ್ತಿ ಕುಟುಂಬ ಸದಸ್ಯರು, ಗಗಲಿಲ, ತಾ.ಬೀಳಗಿ ೨೦-೩-೨೦೧೩.

೫. ಕನ್ನಡಿಗ, ವಾರಪತ್ರಿಕೆ, ಬಾಗಲಕೋಟ, ದಿನಾಂಕ ೨೩-೬-೧೯೩೦, ಪುಟ ಸಂಖ್ಯೆ ೩.

೬ ಕನ್ನಡಿಗ, ವಾರಪತ್ರಿಕೆ, ಬಾಗಲಕೋಟ, ದಿನಾಂಕ ೧೬-೪-೧೯೩೦, ಪುಟ ಸಂಖ್ಯೆ ೭.

೭. ಸೂರ್ಯನಾಥ ಕಾಮತ (ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ ೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮, ಪುಟ ಸಂಖ್ಯೆ ೧೨೩೦.

೮. ಸಂದರ್ಶನ, ಮುದಕಪ್ಪ ಕಲಬುರ್ಗಿ, ಗುಳೇದಗುಡ್ಡ, ತಾ. ಬದಾಮಿ ದಿನಾಂಕ ೧೮-೧೨-೨೦೧೩.

೯. ಅದೇ.

೧೦. ಸಂದರ್ಶನ, ಸಂಗಪ್ಪ ನಾಯನೇಗಲಿ, ಗುಳೇದಗುಡ್ಡ, ತಾ. ಬದಾಮಿ, ದಿನಾಂಕ ೧೯-೧೨-೨೦೧೩.

೧೧. ಡಾ. ವಿನಯಕುಮಾರ ಆರ್: ಹಿರೇಮಠ, ಬಾಗಲಕೋಟೆ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳವಳಿ : ಒಂದು ಅಧ್ಯಯನ, ಅಪ್ರಕಟಿತ ಪಿಎಚ್‌ಡಿ ಮಹಾ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೭.

# ದ್ವಿತೀಯ ಮಹಾಯುದ್ಧಾವಧಿಯ ಬೆಲೆ ನಿಯಂತ್ರಣಾ ಸಮ್ಮೇಳನಗಳು–ಮೈಸೂರು ಸಂಸ್ಥಾನ

ಬಿ.ಪಿ. ಕುಮಾರ್*

೨೦ನೇ ಶತಮಾನದ ಮೊದಲಾರ್ಧ, ಜಗತ್ತಿನ ಇತಿಹಾಸದಲ್ಲಿ ಮಹತ್ವದ ಕಾಲಘಟ್ಟ. ಈ ಅವಧಿಯಲ್ಲಿ ಜಗತ್ತು ೨ ಮಹಾಯುದ್ಧಗಳನ್ನು ಎದುರಿಸಿ ವಿನಾಶಕ್ಕೆ ತುತ್ತಾದುದು ಜನತೆಯ ಮಹಾದುರಾದೃಷ್ಟ. ಮೊದಲನೇ ಮಹಾಯುದ್ಧವಾದ ನಂತರ ಜಗತ್ತನ್ನು ಮತ್ತೊಂದು ಭೀಕರ ಮಹಾಯುದ್ಧದಿಂದ ರಕ್ಷಿಸಲು ಮಾಡಿದ ಪ್ರಯತ್ನಗಳು ವಿಫಲವಾದವು. ಈ ಯುದ್ಧವು ಜಗತ್ತು ಇಲ್ಲಿಯವರೆಗೂ ಕಂಡು ಕೇಳಿರಿಯದ ಅಣುಯುಗಕ್ಕೆ ಮುನ್ನುಡಿ ಬರೆಯಿತು. ಸುಮಾರು ೬ ವರ್ಷಗಳ ಕಾಲ ನಡೆದ ಈ ಯುದ್ಧವು ಇಡೀ ಜಗತ್ತನ್ನು ಭಯ ಮತ್ತು ಆತಂಕದ ಮಡುವಿಗೆ ದೂಡಿತ್ತು.

ಇದೇ ಅವದಿಯಲ್ಲಿ ಭಾರತದಲ್ಲಿ ಬ್ರಿಟೀಷರು ರಾಜಕೀಯ ಬಲವನ್ನು ಪಡೆದುಕೊಂಡು ಬಲಶಾಲಿಗಳಾಗಿದ್ದರು. ಅವರ ಭಾಗಿತ್ವದ ಈ ಮಹಾಯುದ್ಧಗಳಲ್ಲಿ ಭಾರತದಲ್ಲಿ ಮೈಸೂರು ಸಂಸ್ಥಾನವೂ ತನ್ನ ಸಹಭಾಗಿತ್ವವನ್ನು ನೀಡಿತ್ತು. ಅಂದಮೇಲೆ ಆ ಯುದ್ಧದಿಂದಾದ ಪರಿಣಾಮಗಳೂ ನಮ್ಮ ಮೇಲಾಗದೇ ಉಳಿಯಲಿಲ್ಲ.

ಎರಡನೇ ಮಹಾಯುದ್ಧಕ್ಕೆ ಜಗತ್ತು ಎಂಟು ಸಾವಿರ ಕೋಟಿ ಹಣವನ್ನು ಖರ್ಚು ಮಾಡಿತು. ಇದರಿಂದ ಮಾನವ ಜಗತ್ತನ್ನು ಆರ್ಥಿಕ ಸಂಕಷ್ಟಗಳು ಕಾಡಿದವು. ಇಷ್ಟೊಂದು ದೊಡ್ಡ ಮೊತ್ತವನ್ನು ಮನುಕುಲದ ಉದ್ಧಾರಕ್ಕೆ ಬಳಸಿದ್ದರೆ, ವಿಶ್ವ ಹಲವು ಆರ್ಥಿಕ ಸಾಧನೆ, ಸುಧಾರಣೆ ಕಾಣಬಹುದಿತ್ತು. ಈ ಯುದ್ಧವು ಕಾರ್ಖಾನೆಗಳನ್ನು ನಾಶಮಾಡಿ, ಕಾರ್ಮಿಕರನ್ನು ಕೊಂದುಹಾಕಿತು. ವ್ಯಾಪಾರ, ವಾಣಿಜ್ಯ ವಲಯಗಳು ನಾಶವಾದವು. ಅನೇಕ ರಾಷ್ಟ್ರಗಳ ಆರ್ಥಿಕ ಮೂಲಗಳು ನೆಲಕಚ್ಚಿ, ಆಹಾರ ಪದಾರ್ಥ ಮತ್ತು ಆರ್ಥಿಕ ಮೂಲಗಳು ಬೆಲೆ ಏರಿಕೆ ಮತ್ತು ಹಣದುಬ್ಬರಗಳು ವಿಶ್ವದ ಅರ್ಥ ವ್ಯವಸ್ಥೆಯನ್ನು ಬುಡಮೇಲು ಮಾಡಿದವು. ಆಹಾರ ಪದಾರ್ಥ ಮತ್ತು ಜೀವನಾವಶ್ಯಕ ಸರಕುಗಳ ಬೆಲೆಗಳು ಗಗನ ಮುಖಿಯಾದವು. ಪರಿಸ್ಥಿತಿ ಈ ಮಟ್ಟವನ್ನು ಮುಟ್ಟುವ ಮೊದಲೇ, ಯುದ್ಧ ನಡೆಯುತ್ತಿರುವಾಗಲೇ ಅನೇಕ ರಾಷ್ಟ್ರಗಳು ತಮ್ಮ ವಾಣಿಜ್ಯ ಇಲಾಖೆಗಳ ಸಹಯೋಗದೊಂದಿಗೆ ಬೆಲೆ ಏರಿಕೆ ಕುರಿತು ಕ್ರಮಗಳನ್ನು ಕೈಗೊಂಡವು.

ಅಂತೆಯೇ ಬ್ರಿಟೀಷ್ ಭಾರತದಲ್ಲೂ, ಹಲವು ಭಾರತದ ಸಂಸ್ಥಾನಗಳನ್ನು ಒಳಗೊಂಡಂತೆ ಯುದ್ಧಾವಧಿಯ ಬೆಲೆ ಏರಿಕೆ ಕುರಿತು ಚರ್ಚಿಸಲು ಸಮ್ಮೇಳನಗಳನ್ನು ಹಮ್ಮಿಕೊಳ್ಳಲಾಯಿತು. ಈ ಕುರಿತು ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ದಾಖಲಾತಿಗಳಿವೆ. ಆ ದಾಖಲಾತಿಗಳಂತೆ ೧೮ ಅಕ್ಟೋಬರ್ ೧೯೩೯ರಂದು ಹಾಗೂ ೨೪, ೨೫ ಜನವರಿ ೧೯೪೦ರಂದು ನವದೆಹಲಿಯಲ್ಲೇ ಎರಡು ಬೆಲೆ ನಿಯಂತ್ರಣಾ ಸಮ್ಮೇಳನಗಳನ್ನು ನಡೆಸಿರುವುದು ತಿಳಿದು ಬರುತ್ತದೆ.

ಈ ಸಮ್ಮೇಳನಗಳಲ್ಲಿ ಯುದ್ಧಾವಧಿಯ ಬೆಲೆ ಏರಿಕೆಗೆ ಕಾರಣಗಳು ಏನು? ತಡೆಯಲು ತೆಗೆದುಕೊಳ್ಳಬೇಕಾದ ಕ್ರಮಗಳೇನು? ಅಧಿಕಾರಿಗಳಿಗೆ ಸ್ಥಳೀಯ ಮಟ್ಟದಲ್ಲಿ ಹೇಗೆ ಯಾವ ಜವಾಬ್ದಾರಿ ನೀಡಬೇಕು? ಮುಂತಾದ ವಿಷಯಗಳನ್ನು ಚರ್ಚಿಸಿ ಕಾರ್ಯರೂಪಕ್ಕಿಸುವ ಪ್ರಯತ್ನಗಳನ್ನು ಮಾಡಲಾಯಿತು. ಈ ಎಲ್ಲಾ ಚಟುವಟಿಕೆಗಳನ್ನು ಭಾರತೀಯ ಸಂಸ್ಥಾನಗಳಲ್ಲಿ ಒಂದಾದ ಮೈಸೂರು ಸಂಸ್ಥಾನ ಭಾಗವಹಿಸಿದ್ದು, ಕಾರ್ಯಪ್ರವೃತ್ತವಾಗಲು ಸಲಹೆ ಪಡೆದದ್ದು, ಭಾಗವಹಿಸದೇ ಉಳಿದಿದ್ದು, ಬೆಲೆ ಏರಿಕೆ ಪ್ರಮಾಣದ ಅಂಕಿ ಅಂಶಗಳು, ಯುದ್ಧಾವಧಿಯ ಬೆಲೆ ಏರಿಕೆ ಸಮರ್ಥನೀಯವೇ? ಸರ್ಕಾರ ರೈತೋತ್ಪನ್ನಗಳನ್ನು ರಫ್ತು ಮಾಡಲು ಉತ್ತೇಜಿಸಬೇಕು, ರೈತರನ್ನು ಹೊರತು ಪಡಿಸಿ, ಬೇರೆ ವರ್ಗವನ್ನು ಗಮನದಲ್ಲಿಟ್ಟುಕೊಂಡರೆ ಬೆಲೆ ಏರಿಕೆ ಸಮರ್ಥನೀಯವೇ? ಆರ್ಥಿಕ ಸಲಹೆಗಾರರು, ಬ್ರಿಟೀಷ್ ಭಾರತದ ಸರ್ಕಾರ, ಸಂಸ್ಥಾನಗಳಿಗೆ ಪತ್ರ ಬರೆದಿದೆ. ಈ ಪತ್ರ ವ್ಯವಹಾರದ ದಾಖಲೆಗಳನ್ನು ಆಧಾರವಾಗಿ ಬಳಸಿಕೊಂಡಿದ್ದೇನೆ.

* ಮುಖ್ಯಸ್ಥರು, ಇತಿಹಾಸ ವಿಭಾಗ, ಎ.ವಿ.ಕೆ. ಮಹಿಳಾ ಕಾಲೇಜು, ಪಿ.ಜೆ. ಬಡಾವಣೆ, ದಾವಣಗೆರೆ, ಮೊ. ೯೪೮೧೩೦೯೩೬೩

೧೦-೧೦-೧೯೩೯ರಂದು ಬ್ರಿಟೀಷ್ ಭಾರತದ ಸರ್ಕಾರ, ವಾಣಿಜ್ಯ ಇಲಾಖೆಯೊಂದಿಗೆ ೧೮-೧೦-೧೯೩೯ರಂದು ಬೆಲೆನಿಯಂತ್ರಣಾ ಸಮ್ಮೇಳನ ನಡೆಸುತ್ತಿದೆ. ಭಾರತದ ಕೆಲರಾಜ್ಯಗಳು ಇದರಲ್ಲಿ ಭಾಗವಹಿಸುತ್ತವೆ. ಸಮ್ಮೇಳನ ೧೮-೧೦-೧೯೩೯ರಂದು ನವದೆಹಲಿಯಲ್ಲಿ ೧೧ ಗಂಟೆಗೆ ಆರಂಭವಾಗುತ್ತದೆ ಹಾಗೂ ಅದು ೨ ದಿನಗಳಲ್ಲಿ ಮುಗಿಯಬಹುದು. ಆದ್ದರಿಂದ ಮೈಸೂರು ಸಂಸ್ಥಾನದಿಂದ ಭಾಗವಹಿಸುವ ಪ್ರತಿನಿಧಿಯ ಹೆಸರನ್ನು ಟೆಲಿಗ್ರಾಂ ಮಾಡಿ ಸೂಚಿಸಲು ತಿಳಿಸುತ್ತದೆ.

ದಿ. ೧೧-೧೦-೧೯೩೯ರಂದು ಮೈಸೂರು ಮಹಾರಾಜರ ಕಾರ್ಯದರ್ಶಿಯವರಿಗೆ ಬ್ರಿಟೀಷ್ ಸರ್ಕಾರ ಪತ್ರ ಬರೆಯುತ್ತದೆ. ಈ ಪತ್ರದಲ್ಲಿ ಮೈಸೂರು ಸರ್ಕಾರ ೧೮-೧೦-೧೯೩೯ರ ಬೆಲೆನಿಯಂತ್ರಣಾ ಸಭೆಗೆ ಪ್ರತಿನಿಧಿಯನ್ನು ಕಳುಹಿಸುವುದನ್ನು ಖಾತರಿ ಪಡಿಸಲು ಸೂಚಿಸುತ್ತದೆ. ಈ ಸಂದರ್ಭದಲ್ಲಿ (೧೩-೧೦-೧೯೩೯) ಮೈಸೂರು ಸಂಸ್ಥಾನ ಉತ್ತರಿಸುತ್ತಾ ಇಲ್ಲಿಂದ ಯಾರೂ ಭಾಗಿಯಾಗುವುದಿಲ್ಲವೆಂದು ಪತ್ರದ ಮೂಲಕ ತಿಳಿಸುತ್ತದೆ. ಈ ಪತ್ರದಲ್ಲಿ ಯಾವ ಕಾರಣಕ್ಕಾಗಿ ಮೈಸೂರು ಸಂಸ್ಥಾನ ಪಾಲ್ಗೊಳ್ಳುತ್ತಿಲ್ಲವೆಂದು ತಿಳಿಸಿರುವುದಿಲ್ಲ.

ಇದಾದ ನಂತರ ದಿ. ೦೩-೦೧-೧೯೪೦ರಂದು ಮೈಸೂರು ಸಂಸ್ಥಾನದ ಮುಖ್ಯ ಕಾರ್ಯದರ್ಶಿಯವರಿಗೆ ದೆಹಲಿಯಿಂದ ಪತ್ರ ಬರುತ್ತದೆ. ಈ ಪತ್ರವು ೨೪, ೨೫-೦೧-೧೯೪೦ರಂದು ದೆಹಲಿಯಲ್ಲಿ ೨ನೇ ಬೆಲೆ ನಿಯಂತ್ರಣಾ ಸಮ್ಮೇಳನ ನಡೆಯುತ್ತಿದ್ದು, ನಿಮ್ಮ ಭಾಗವಹಿಸುವ ಪ್ರತಿನಿಧಿಯಾರೆಂದು ಕೇಳುತ್ತದೆ. ಈ ಪತ್ರಕ್ಕೆ ಉತ್ತರಿಸುತ್ತಾ ಕೈಗಾರಿಕೆಗಳಿಗೆ ಸಂಬಂಧಿಸಿದ ಸರ್ಕಾರಿ ನಿರ್ದೇಶಕರಾದ ಎಂ.ಎ. ಶ್ರೀನಿವಾಸ್, ಕೈಗಾರಿಕಾ ಅಭಿಯಂತರರಾದ ಬಿ.ಜಿ.ಎ. ಮುದಲಿಯಾರ್ ರವರು ಮೈಸೂರಿನ ಪ್ರತಿನಿಧಿಯಾಗಿ ಭಾಗವಹಿಸುತ್ತಾರೆ ಎಂದು ತಿಳಿಸುತ್ತಾರೆ. ಈ ದ್ವಿತೀಯ ಮಹಾಯುದ್ಧಾವಧಿಯ ಎರಡನೇ ಸಮ್ಮೇಳನವು ಇಂಪೀರಿಯಲ್ ಸೆಕ್ರೇಟರಿ ಕಟ್ಟಡದ ನಾರ್ಥ ಬ್ಲಾಕಿನ-'ಎ' ಕೊಠಡಿಯಲ್ಲಿ ೧೧ ಗಂಟೆಗೆ ಆರಂಭವಾಗುತ್ತದೆ ಎಂಬ ಮಾಹಿತಿಯೂ ಇರುತ್ತದೆ.

ದಿ. ೨೪-೦೧-೧೯೪೦, ೨೫-೦೧-೧೯೪೦ರ ಎರಡು ದಿನಗಳ "ಸಮ್ಮೇಳನದ ಕಾರ್ಯಸೂಚಿಯ ಮುಖ್ಯಾಂಶಗಳು" ಹೀಗಿದ್ದವು.

ಪ್ರತಿನಿಧಿಗಳ ಹೇಳಿಕೆಗಳಿಗೆ ಸಂಬಂಧಿಸಿದ ಪ್ರಶ್ನೆಗಳು ಹಾಗೆ ಉಳಿದಿವೆ. (ಪ್ರಥಮ ಸಮ್ಮೇಳನ - ೧೩-೧೦-೧೯೩೯) ಅದರಂತೆ :

* ಈ ಬೆಲೆ ನಿಯಂತ್ರಣಾ ಕಾರ್ಯದಲ್ಲಿ ಯಾವ ಆಡಳಿತ ಯಂತ್ರ ತೃಪ್ತಿಕರವಾಗಿ ಕರ್ತವ್ಯ ನಿರ್ವಹಿಸಿದೆ.
* ಈ ಕೆಳಗಿನ ಕೆಲ ವಿಷಯಗಳಲ್ಲಿ ಆಡಳಿತ ಯಂತ್ರದಲ್ಲಿ ಏಕರೂಪತೆ ಇದೆಯಾ?

೧) ಪ್ರಾಂತೀಯ ಬೆಲೆ ನಿಯಂತ್ರಣಾ ಅಧಿಕಾರಿಗಳ ನೇಮಕಾತಿಯಲ್ಲಿ

೨) ಶೋಧನಾ ಸಮಿತಿ ನೇಮಕಾತಿಯಲ್ಲಿ

೩) ಜಿಲ್ಲಾ ಅಧಿಕಾರಿಗಳಿಗೆ ನೀಡುವ ಅಧಿಕಾರಗಳಲ್ಲಿ

* ಸಾಮಾನ್ಯ ನೀತಿ

ಹಾಗೇ ಉಳಿದಿರುವ ಪ್ರಶ್ನೆಗಳು :

* ಬೆಲೆ ನಿಯಂತ್ರಣಾ ವ್ಯಾಪ್ತಿಯಲ್ಲಿರುವ ಸರಕುಗಳ ಸಂಖ್ಯೆಯನ್ನು ಹೆಚ್ಚಿಸುವ ಸಮಯ ಇದಾಗಿದೆಯೇ?
* ಕೇಂದ್ರ ಮತ್ತು ರಾಜ್ಯಗಳ ನಡುವಿನ ಅಧಿಕಾರ ವಿತರಣೆಯಲ್ಲಿ ಪುನರ್ ಪರಿಶೀಲನೆಯ ಅವಶ್ಯಕತೆ ಇದೆಯಾ?
* ಪ್ರಾಂತೀಯ ಬೆಲೆ ನಿಯಂತ್ರಣಾ ಅಧಿಕಾರವು- ಪ್ರಾಂತ್ಯಗಳಿಂದ ರಫ್ತನ್ನು ನಿಷೇದಿಸಬೇಕೆ?
* ಹೋಲ್‌ಸೇಲ್ ಮಾರುಕಟ್ಟೆಯಲ್ಲಿ ಬೆಲೆ ಪ್ರಮಾಣ ಏರಲು ಊಹಾಪೋಹಗಳು ಕಾರಣವಾ?
* ಕೆಲವು ಅಂಗಡಿಗಳಲ್ಲಿ ಬೆಲೆ ಏರಿಕೆಯಾಗುತ್ತಿದ್ದು, ಜೀವನ ವೆಚ್ಚದ ಮೇಲಿನ ಪರಿಣಾಮಗಳ ಬಗ್ಗೆ ಏನಾದರೂ ಕ್ರಮ ಕೈಗೊಳ್ಳಲಾಗುತ್ತಾ?

ಮುಂತಾದ ವಿಷಯಗಳನ್ನು ಕಾರ್ಯ ಸೂಚಿಯಲ್ಲಿ ಚರ್ಚಿಸುವ ಗುರಿಯನ್ನು ಇಟ್ಟುಕೊಳ್ಳಲಾಗಿತ್ತು. ಈ ಎಲ್ಲಾ ವಿಷಯಗಳ ಹಿನ್ನೆಲೆಯಲ್ಲಿ ಸಮ್ಮೇಳನದಲ್ಲಿ ಚರ್ಚೆಗಳು ನಡೆಯುತ್ತವೆ. ಬೆಲೆ ಏರಿಕೆಗೆ ಕಾರಣ ಮತ್ತು ಸರ್ಕಾರವು ತೆಗೆದುಕೊಂಡ ಕ್ರಮಗಳ ಬಗ್ಗೆ ಪತ್ರಾಗಾರ ಇಲಾಖೆಯ ಪತ್ರಗಳಲ್ಲಿ ಮಾಹಿತಿ ಇದೆ. ಅದರಂತೆ ಏಕೆ ಬೆಲೆ ಏರಿಕೆಯಾಗಿದೆ

ಎಂದು ಚರ್ಚಿಸಲಾಗಿದೆ. ದೇಶದ ಒಳಗೆ ಹಾಗೂ ಹೊರದೇಶಗಳಿಂದ ಬೇಡಿಕೆ ಹೆಚ್ಚಾಗಿರುವುದರಿಂದ ಬೆಲೆ ಏರಿಕೆಯಾಗಿದೆ. ಕೈಗಾರಿಕೆಗಳಿಗೆ ಕಚ್ಚಾ ಸಾಮಗ್ರಿಗಳು ಹಾಗೂ ಯುದ್ಧಾಸ್ತ್ರಗಳ ಬೇಡಿಕೆಯಿಂದ ವಾಣಿಜ್ಯ ಬೆಳೆಗಳಾದ ಹತ್ತಿ, ಸೆಣಬು ಮುಂತಾದವುಗಳ ಬೆಲೆಯೂ ಹೆಚ್ಚಾಗಿದೆ.

ಜೊತೆಯಲ್ಲಿ ಅಮದು ಸರಕುಗಳ ಬೆಲೆಗಳೂ ಹೆಚ್ಚಾಗಿವೆ ಏಕೆಂದರೆ?

ಎ. ರವಾನೆ ಮಾಡುವ ಹಡಗುಗಳ ಬಾಡಿಗೆಯಲ್ಲಿ ಏರಿಕೆ, ಬಿ. ವಿಮೆಯ ವೆಚ್ಚ, ಸಿ. ಅವ್ಯವಸ್ಥಿತ ಪೂರೈಕೆ, ಹೆಚ್ಚು ಹಣದ ಚಲಾವಣೆ, ೪ ತಿಂಗಳುಗಳಲ್ಲಿ ಭಾರತದೇಶವೊಂದರಲ್ಲೇ ೬೬ ಕೋಟಿ ಹೆಚ್ಚುವರಿ ಹಣ ಚಲಾವಣೆಯಾಯಿತು. ಈ ರೀತಿ ಹೆಚ್ಚು ಹಣ ಚಲಾವಣೆಯಾದ ಹಿಂದೆಯೇ ಸಾಮಾನ್ಯವಾಗಿ ಬೆಲೆ ಏರಿಕೆಯಾಗುತ್ತದೆ, ಊಹಾಪೋಹಗಳು ಬೆಲೆ ಏರಿಕೆಗೆ ಕಾರಣ ಎಂದೂ ಚರ್ಚಿಸಲಾಯಿತು.

ಭಾರತ ಸರ್ಕಾರದ ಆರ್ಥಿಕ ಸಲಹೆಗಾರರಾದ ಡಾ. ಗ್ರೆಗೋರಿ ಆಕಾಶವಾಣಿ ಭಾಷಣದಲ್ಲಿ ಊಹಾಪೋಹಗಳು ಬೆಲೆ ಏರಿಕೆಯಲ್ಲಿ ಪಾತ್ರವಹಿಸುತ್ತಿವೆ. ಯುದ್ಧದಿಂದ ಬೆಲೆಗಳು ಹೆಚ್ಚಾಗಬಹುದೆಂದು ವ್ಯಾಪಾರ/ಮಾರಾಟ ಮಾಡುತ್ತಿಲ್ಲ. ವ್ಯಾಪಾರಸ್ಥರು ತಮ್ಮಲ್ಲಿರುವ ದಾಸ್ತಾನನ್ನು ಮಾರುತ್ತಿಲ್ಲ. ಹಾಗೆಯೇ ಬಳಕೆದಾರರೂ ಅಧಿಕವಾಗಿ ಸಂಗ್ರಹಿಸಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಈ ರೀತಿ ೨ ವರ್ಗವೂ ಅಭಾವ ಸೃಷ್ಟಿಸುತ್ತಿರುವುದರಿಂದ ಮಾರುಕಟ್ಟೆಯಲ್ಲಿ ಏರುಪೇರುಗಳಾಗುತ್ತಿವೆ. ಎಲ್ಲಾ ದೇಶಗಳಲ್ಲೂ ಮಧ್ಯಮ ವರ್ಗ ಹಾಗೂ ಕೆಳಮಧ್ಯಮ ವರ್ಗದವರು ಈ ಪ್ರವೃತ್ತಿಯಲ್ಲಿ ನಿರತರಾಗಿದ್ದಾರೆ. ವಸ್ತುಸ್ಥಿತಿ ಹೀಗಿರುವಾಗ ಬೆಲೆ ಏರಿಕೆಯ ಸಂದರ್ಭಗಳು ನೀತಿಯುತವೋ? ಅನೀತಿಯುತವೋ? ಎಂಬ ವಿಷಯ ಗಮನಿಸಬೇಕು. ಡಾ. ಗ್ರೆಗೋರಿಯವರು ಸ್ವಾರ್ಥ ಮನೋಭಾವದಿಂದ ವ್ಯಾಪಾರಸ್ಥರೂ ಹಾಗೂ ಕೊಳ್ಳುವವರೂ ಈ ಕೃತಕ ಸ್ಥಿತಿ ನಿರ್ಮಿಸುತ್ತಿರುವಾಗ, ಇದರ ನೇರ ಪರಿಣಾಮ ಸಾಮಾನ್ಯರ ಮೇಲಾಗುತ್ತದೆ. ಇಲ್ಲಿ ನೈತಿಕತೆಯ ಪ್ರಶ್ನೆ ಬರುತ್ತದೆ. ಎಂದು ಹೇಳುತ್ತಾರೆ.

**ಬೆಲೆ ಏರಿಕೆ ನಿಯಂತ್ರಣಕ್ಕೆ ತೆಗೆದುಕೊಂಡ ಕ್ರಮಗಳು:** ಎಲ್ಲಾ ಪ್ರತಿನಿಧಿಗಳೂ ಬೆಲೆ ಏರಿಕೆ ತಡೆಯಲು ಸೂಕ್ತಕ್ರಮ ಕೈಗೊಳ್ಳಲು ಸಲಹೆ ನೀಡಲಾಯಿತು. ಈ ಹಿಂದಿನ (ಅಕ್ಟೋಬರ್ ೧೯೩೯) ಸಭೆಯಲ್ಲಿ ಚರ್ಚಿಸಿದ ಅಂಶಗಳನ್ನು ಕ್ರಮಬದ್ಧವಾಗಿ ಕಾರ್ಯರೂಪಕ್ಕೆ ತಂದಿಲ್ಲ. ಕೆಲ ಪ್ರಾಂತೀಯ ಸರ್ಕಾರಗಳು ಸಮರ್ಪಕವಾಗಿ ಕ್ರಮ ಕೈಗೊಂಡಿಲ್ಲ. ಕೆಲವರು ತಮ್ಮ ಜಿಲ್ಲಾ ಅಧಿಕಾರಿಗಳಿಗೆ ಅಧಿಕಾರ ವಿತರಿಸಿರುತ್ತಾರೆ. ಆಹಾರ ಸಾಮಾಗ್ರಿಗಳು, ಹತ್ತಿ ಬಟ್ಟೆ ಮುಂತಾದವುಗಳ ಬೆಲೆ ನಿಯಂತ್ರಣಕ್ಕೆ ಕೇಂದ್ರ ಸರ್ಕಾರ, ಪ್ರಾಂತೀಯ ಸರ್ಕಾರಗಳಿಗೆ ಸೂಚಿಸಿದ್ದರೂ, ಕೆಲ ಸಕಾರಗಳು ಅಲ್ಪ ಪ್ರಮಾಣದಲ್ಲಿ ಕ್ರಮಕೈಗೊಂಡಿವೆ.

**ಬೆಲೆ ಏರಿಕೆ ಪ್ರಮಾಣದ ಅಂಕಿ-ಅಂಶಗಳು:** ಭಾರತ ಸರ್ಕಾರದ ಆರ್ಥಿಕ ಸಲಹೆಗಾರರಾದ ಡಾ. ಗ್ರೆಗೋರಿ ೧೨-೦೯-೧೯೪೦ರಂದು, ಆಕಾಶವಾಣಿ ಭಾಷಣದಲ್ಲಿ ಬೆಲೆ ಏರಿಕೆಯ ಅಂಕಿ ಅಂಶಗಳನ್ನು ನೀಡುತ್ತಾರೆ. ೦೨-೦೯-೧೯೪೦ಕ್ಕೆ ೧೦೦ರ ಸೂಚ್ಯಂಕ ಎಂದಿಟ್ಟುಕೊಂಡಾಗ, ವರ್ಷಾಂತ್ಯಕ್ಕೆ ಅದು ೧೩೭ಕ್ಕೆ ಏರಿಕೆಯಾಗಿದೆ. ಉತ್ಪಾದಿತ ಸರಕುಗಳ ಸೂಚ್ಯಂಕ ೧೯೨, ಆಹಾರ ಮತ್ತು ತಂಬಾಕು ೧೨೫, ಇತರೆ ವ್ಯವಸಾಯೋತ್ಪನ್ನಗಳು ೧೮೪, ಕಚ್ಚಾ ಸಾಮಗ್ರಿಗಳು ಸಾಮಾನ್ಯವಾಗಿ ೧೩೦ಕ್ಕೆ ಏರಿಕೆಯಾಗಿವೆ. ಆದರೆ ಒಟ್ಟಾರೆ ಸೂಚ್ಯಂಕವು ೧೩೭ಕ್ಕೆ ಏರಿಕೆಯಾಗಿದೆ ಎಂದು ಮಾಹಿತಿ ನೀಡುತ್ತಾರೆ. ಕೆಲವು ಕಚ್ಚಾ ಸಾಮಾಗ್ರಿಗಳು ಯುದ್ಧ ಪೂರ್ವದಲ್ಲಿ ೧೦೦ ರೂಗಳಿದ್ದರೆ, ಈ ಕಾಲಕ್ಕೆ ಅವುಗಳ ಬೆಲೆಯು ೧೮೦ ರೂಗಳಾಗಿದೆ ಎನ್ನುತ್ತಾರೆ.

**ಯುದ್ಧಾವಧಿಯ ಬೆಲೆ ಏರಿಕೆ ಸಮರ್ಥನೀಯವೆ?:** ಯುದ್ಧಾವಧಿಯ ಬೆಲೆ ಏರಿಕೆಯ ವಿಚಾರಗಳನ್ನು ಇಲ್ಲಿಯವರೆಗೂ ಗಮನಿಸಿದ್ದೇವೆ. ಈ ಬೆಲೆ ಏರಿಕೆ ಸಮರ್ಥನೀಯವೇ? ಯಾರೆಲ್ಲಾ ತೊಂದರೆಗೆ ಒಳಗಾದರು? ಅನುಕೂಲ ಪಡೆದ ವರ್ಗವೇನಾದರೂ ಇದೆಯಾ? ಎಂಬ ಚರ್ಚೆಯೂ ಈ ಸಂದರ್ಭದಲ್ಲಿ ಅರ್ಥಪೂರ್ಣ.

ತೊಂದರೆಗೆ ಒಳಗಾದ ವರ್ಗ ಹೆಚ್ಚಿನ ಸಂಖ್ಯೆಯಲ್ಲಿದ್ದರೂ ಭಾರತದಂತಹ ಕೃಷಿ ಪ್ರಧಾನ ರಾಷ್ಟ್ರಗಳಲ್ಲಿ ರೈತರಿಗೆ ಅನುಕೂಲವಾಗಿರಲಿಲ್ಲ, ಕಾರಣ ದಾಸ್ತಾನ ಇರಲಿಲ್ಲ. ಆದರೆ ಕ್ರಮೇಣ ರೈತರ ಮೇಲೆ ಪರಿಣಾಮ ಬೀರುತ್ತದೆ. ರೈತರು ಉತ್ಪಾದನೆ ಹೆಚ್ಚಿಸಲು ಈ ಏರಿಕೆ ಪ್ರೋತ್ಸಾಹ ನೀಡುತ್ತದೆ. ಈ ಮೂಲಕ ಭೂ ಮಾಲೀಕರಿಗೆ ಅನುಕೂಲವಾಗಿದೆ. ಆದರೆ ಮಿಲಿಯನ್ ಗಟ್ಟಲೆ ಬಡ ಜನರಿಗೆ ತೊಂದರೆಯಾಗಿದೆ, ಎಂದು ಕೆಲ ತಜ್ಞರು ವಾದಿಸುತ್ತಾರೆ. ಇದರಲ್ಲಿ ಸಮರ್ಥಿಸಬಹುದಾದ ಕೆಲ ಅಂಶಗಳೂ ಇವೆ ಎಂದರೆ ಉತ್ಪ್ರೇಕ್ಷೆಯಾಗಲಾರದು.

ಪ್ರೊ. ಎಂ.ಜಿ. ರಂಗರವರು "ರೂರಲ್ ಇಂಡಿಯಾ" (ಡಿಸೆಂಬರ್ ೧೯೩೯) ಎಂಬ ಗ್ರಂಥ ರಚಿಸಿರುತ್ತಾರೆ. ಈ ಗ್ರಂಥದಲ್ಲಿ ರೈತರಿಗೆ ಅನುಕೂಲವಾಗಿರುವ ಬಗ್ಗೆ ವಿವರಿಸುತ್ತಾರೆ. ಅವರು ಬೆಲೆ ಏರಿಕೆ ರೈತ ಕಾರ್ಮಿಕರಿಗೂ, ರೈತರಿಗೂ ಅನುಕೂಲವಾಗಿದೆ ಎನ್ನುತ್ತಾರೆ. ರೈತ ಕಾರ್ಮಿಕರಿಗೆ ೩/೪ ರಷ್ಟು ಕೂಲಿಯನ್ನು ಕಾಳಿನ ರೂಪದಲ್ಲಿ ನೀಡಲಾಗಿದೆ. ಆದ್ದರಿಂದ ಬೆಲೆ ಏರಿಕೆ ಅವರಿಗೆ ನಷ್ಟವಾಗಿಲ್ಲ. ಕಾಳಿನ ರೂಪದಲ್ಲಿ ವೇತನ ಪಡೆದಾಗ "ಹೆಚ್ಚು ಕಾಳು ಸಿಗುತ್ತೆ, ಅದನ್ನು ಮಾರಿದರೆ ಹೆಚ್ಚು ಆದಾಯ ಬರುತ್ತದೆ" ಎನ್ನುತ್ತಾರೆ.

**ಸರ್ಕಾರ ರೈತೋತ್ಪನ್ನಗಳನ್ನು ರಫ್ತು ಮಾಡಲು ಉತ್ತೇಜಿಸಬೇಕು:** ರೈತರ ಉತ್ಪನ್ನಗಳನ್ನು ವಿದೇಶಗಳಿಗೆ ರಫ್ತು ಮಾಡಲು ನೆರವು ನೀಡಬೇಕು. ಪ್ರೊ. ಎಂ.ಜಿ. ರಂಗರವರು ಈ ಸಂದರ್ಭದಲ್ಲಿ ಸಲಹೆ ನೀಡುತ್ತಾ "ಗ್ರೇಟ್ ಬ್ರಿಟನ್ ಭಾರತದಿಂದ ಹತ್ತಿ ಪಡೆಯಬೇಕು. ಲಂಕಾಶೈರ್‌ನಲ್ಲಿ ಆ ಹತ್ತಿಯನ್ನು ಬಳಸಬೇಕು. ಫ್ರಾನ್ಸ್ ಮುಂತಾದ ಮಿತ್ರ ಕೂಟಕ್ಕೆ ಈ ಕಚ್ಚಾ ಸಾಮಾಗ್ರಿಗಳನ್ನು ನೀಡಿ. ಆದರೆ ಶತ್ರು ಕೂಟಕ್ಕೆ ಮಾತ್ರ ಅವುಗಳನ್ನು ರಫ್ತು ಮಾಡಬೇಡಿ" ಎಂದು ಸಲಹೆ ನೀಡುತ್ತಾರೆ. ಇವೆಲ್ಲಾ ಸಮರ್ಥನೀಯ ಎಂದರೂ ತಪ್ಪಾಗಲಾರದು.

**ರೈತರನ್ನು ಹೊರತು ಪಡಿಸಿ, ಬೇರೆ ವರ್ಗವನ್ನು ಗಮನದಲ್ಲಿಟ್ಟುಕೊಂಡರೆ ಬೆಲೆ ಏರಿಕೆ ಸಮರ್ಥನೀಯವೇ?**

ಅರ್ಥಚಿಂತಕರು, ರಾಜಕಾರಣಿಗಳು ನೀತಿ ರಚನೆಯಲ್ಲಿ ಮನ್ನಣೆ ನೀಡಬೇಕು, ಆಸಕ್ತಿ ವಹಿಸಬೇಕು. ಕೃತಕ ಅಭಾವ ಸೃಷ್ಟಿ ಸಮರ್ಥನೀಯವಲ್ಲ, ಭಾರತದಂತಹ ದೇಶಗಳಲ್ಲಿ ಬೇಡಿಕೆ ಮತ್ತು ಪೂರೈಕೆಯನ್ನು ನಿಯಂತ್ರಣದಲ್ಲಿಡುವುದು ಅಷ್ಟು ಸುಲಭವಲ್ಲ, ಆದರೆ ಆಶಾಭಾವನೆ ಇಟ್ಟುಕೊಳ್ಳುವುದು ಒಳ್ಳೆಯದು ಎಂದು ಆರ್ಥಿಕ ಸಲಹೆಗಾರರು ಸಲಹೆ ನೀಡುತ್ತಾರೆ. ಅವರು ಮುಂದುವರಿದು ಆಡಳಿತಾತ್ಮಕ ಕೌಶಲ್ಯಗಳಿರಬೇಕು, ಆರ್ಥಿಕ ಪ್ರಜ್ಞಾವಂತಿಕೆ ಇರಬೇಕು, ಎಂದು ತಿಳಿಸುತ್ತಾರೆ. ಅಲ್ಲದೆ ಬೆಲ ನಿಯಂತ್ರಣ ಸುಲಭ ಎಂದುಕೊಂಡಿದ್ದರೆ ಅದು ತಪ್ಪು. ಇಲ್ಲಿಯವರೆಗಿನ ನಮ್ಮ ಅನುಭವ ಈ ತೀರ್ಮಾನಕ್ಕೆ ಬರುವಂತೆ ಮಾಡಿದೆ. ಇದೊಂದು ತುಂಬಾ ಕಠಿಣ ಕೆಲಸ ಎಂದು ತಿಳಿಸುತ್ತಾ, ಆಶಯಗಳನ್ನು ಇಟ್ಟು ಪ್ರಯತ್ನ ನಿರತರಾಗುವ ಮಾರ್ಗದರ್ಶನ ನೀಡುತ್ತಾರೆ.

ಪ್ರಸ್ತುತ ಪ್ರಬಂಧದಲ್ಲಿ ೨ನೇ ಬೆಲೆ ನಿಯಂತ್ರಣಾ ಸಮ್ಮೇಳನ (೨೪, ೨೫-೧೧-೧೯೪೦)ದಲ್ಲಿ ಮೈಸೂರು ಸಂಸ್ಥಾನದ ಪಾಲ್ಗೊಳ್ಳುವಿಕೆ ಹಾಗೂ ಕಾರ್ಯಸೂಚಿ, ಚರ್ಚಾ ವಿಷಯಗಳು, ಕೈಗೊಂಡ ನಿರ್ಣಯಗಳು ಮುಂತಾದ ಗಮನಾರ್ಹ ವಿಷಯಗಳನ್ನು ಚರ್ಚಿಸಿರುತ್ತೇನೆ.

ಈ ಪ್ರಬಂಧದ ಮೂಲಕ ಹಲವು ಮುಖ್ಯ ಅಂಶಗಳು ಗಮನಕ್ಕೆ ಬರುತ್ತವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಬೆಲೆ ಏರಿಕೆಯ ಹಿಂದಿರುವ ಶಕ್ತಿಗಳೇನು? ಎಂಬುದು ತಿಳಿಯುತ್ತದೆ. ಜೊತೆಯಲ್ಲಿ ಬೆಲೆ ಏರಿಕೆ ಪರೋಕ್ಷವಾಗಿ ರೈತರು ಮತ್ತು ರೈತ ಕಾರ್ಮಿಕರಿಗೆ ಹೇಗೆ ಸಹಕಾರಿಯಾಗಿದೆ ಎಂಬ ಅಂಶ ತಿಳಿಯುತ್ತದೆ. ಕಚ್ಚಾ ಸಾಮಗ್ರಿಗಳನ್ನು ರಫ್ತು ಮಾಡುವಾಗ ಶತ್ರುಪಕ್ಷಗಳನ್ನು ಎಂದೂ ಗಣನೆಗೆ ತೆಗೆದುಕೊಳ್ಳಬಾರದು ಎಂಬುದೂ ಗಮನಾರ್ಹ ವಿಷಯ. ಬೆಲೆ ಏರಿಕೆಗೆ ಭಾರತ ಸರ್ಕಾರದ ಆರ್ಥಿಕ ಸಲಹೆಗಾರರಾದ ಡಾ॥ ಗ್ರೆಗೋರಿ ಅವರ ಸಲಹೆ ಮತ್ತು ಆಲೋಚನೆಗಳು ಪರಿಗಣಿಸಲ್ಪಡುವ ಸಂಗತಿಗಳಾಗಿವೆ. 'ರೂರಲ್ ಇಂಡಿಯಾ' ಕತೃ ಪ್ರೊ॥ ಎಂ.ಜಿ. ರಂಗ ಅವರು ರೈತರಿಗಾಗುವ ಅನುಕೂಲಗಳನ್ನು ಚರ್ಚಿಸಿರುವುದು ಅತಿಮುಖ್ಯ ಗಮನಾರ್ಹ ಮಾಹಿತಿಯಾಗಿದೆ. ಯುದ್ಧಾವಧಿ ಬೆಲೆ ಏರಿಕೆಯು ಸಮರ್ಥನೀಯವೇ? ನೈತಿಕತೆಯೇ? ಎಂತೆಲ್ಲಾ ಚರ್ಚೆಗಳು ಈ ಪ್ರಬಂಧ ರಚನೆಯ ಸಂದರ್ಭದಲ್ಲಿ ಹಲವು ಹೊಳಪುಗಳನ್ನು ನೀಡುತ್ತವೆ.



## ಆಕರ ಗ್ರಂಥಗಳು


೧. ಪತ್ರಾಗಾರ ಇಲಾಖೆಯ ಕಡತ (ಯುದ್ಧ) ಸಂಖ್ಯೆ ೫೭ರ ೪೬, ಕ್ರಮಸಂಖ್ಯೆ ೧ರಿಂದ ೧೩.

೨. ಭಾರತ ಸರ್ಕಾರದ ತಂತಿ ವಾರ್ತೆ ಸಂಖ್ಯೆ ೨೭೧೫, ದಿ-೧೦-೧೦-೧೯೩೯.

೩. ಪ್ರೆಸ್ ಕಂಟ್ರೋಲ್ -೧೮-೧೯-೧೯೩೯, ಇಂಪೀರಿಯಲ್ ಸೆಕ್ರೇಟ್ರಿಯೇಟ್, ನವದೆಹಲಿ, ಗೌರ್ನಮೆಂಟ್ ಆಫ್ ಇಂಡಿಯಾ ಪ್ರಸ್ ೧೯೩೯ (ಪತ್ರಾಗಾರ ಇಲಾಖೆ ಕಡತ).

೪. ಡಾ॥ ಎನ್.ಎನ್. ಚಿಕ್ಕಮಾದು; ಎಸ್. ಅನೀಸ್ ಸಿರಾಜ್, (ಮು.ಸಂ) ಮೈಸೂರು ತಾಲೂಕು ಗೆಜೆಟಿಯರ್-೨೦೧೦.

೫. ಸೂರ್ಯನಾಥ್ ಯು. ಕಾಮತ್(ಸಂ), ಕರ್ನಾಟಕ ರಾಜ್ಯ ಗೆಜೆಟಿಯರ್, ೧೯೮೩.

# ಬಾಗಲಕೋಟೆ ಪರಿಸರದಲ್ಲಿ ವಸಾಹತು ಕಾಲದ ಸ್ಮಾರಕಗಳು

**ಲೋಕಣ್ಣ ಭಜಂತ್ರಿ***

**ಬಾ**ಗಲಕೋಟೆ ಜಿಲ್ಲೆಯು ಒಂದು ಐತಿಹಾಸಿಕ ಸ್ಥಳವಾಗಿ ಪ್ರಾಚೀನ ಕಾಲದಿಂದ ಹಿಡಿದು ಇಂದಿನವರೆಗೂ ಹೆಸರು ಪಡೆದುಕೊಂಡಿದೆ. ಬಾಗಲಕೋಟೆ ಇಡೀ ಜಿಲ್ಲೆಯು ಮೌರ್ಯ, ಶಾತವಾಹನ, ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ದೇವಗಿರಿಯ ಯಾದವ ಮನೆತನ ಮತ್ತು ದ್ವಾರಸಮುದ್ರದ ಹೊಯ್ಸಳ, ವಿಜಯನಗರ, ವಿಜಯಪುರ ಆದಿಲ್‌ಶಾಹಿ ಹಾಗೂ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತ್ತು.

ಕ್ರಿ.ಶ. ೧೬೮೬ರಲ್ಲಿ ಬಿಜಾಪೂರ(ಇಂದಿನ ವಿಜಯಪುರಕ್ಕೆ ಮೊದಲು ಬಿಜಾಪೂರ ಎಂದು ಕರೆಯಲಾಗುತ್ತಿತ್ತು) ರಾಜ್ಯವನ್ನು ಮೊಗಲ್ ಚಕ್ರವರ್ತಿ ಔರಂಗ್‌ಜೇಬನು ವಶಪಡಿಸಿಕೊಂಡನು. ಕ್ರಿ.ಶ. ೧೭೨೪ರ ನಂತರ ಹೈದರಾಬಾದ್ ನಿಜಾಮ ಉಲ್‌ಮುಲ್ಕನ ಅಧಿಪತ್ಯಕ್ಕೆ ವಿಜಯಪುರ ರಾಜಧಾನಿ ಒಳಗಾಯಿತು. ಕ್ರಿ.ಶ. ೧೭೬೦ರಲ್ಲಿ ವಿಜಯಪುರ ಮರಾಠರ ವಶಕ್ಕೆ ಹೋಯಿತು. ಮುಂದೆ ಕ್ರಿ.ಶ. ೧೭೬೪ರಿಂದ ೧೭೭೫ರ ವರೆಗೆ ಸವಣೂರು ನವಾಬರ ಅಧೀನದಲ್ಲಿದ್ದು ನಂತರ ಪೇಶ್ವೆಯವರ ವಶಕ್ಕೆ ಬಂದಿತು. ಕ್ರಿ.ಶ. ೧೭೭೮ರ ವೇಳೆಗೆ ವಿಜಯಪುರ ರಾಜ್ಯ ಮೈಸೂರಿನ ಹೈದರಾಲಿಯ ಕೈ ಸೇರಿ ಅವನ ಸಾಮಂತನಾದ ಸವಣೂರು ನವಾಬನ ಅಧೀನಕ್ಕೆ ಮತ್ತೇ ಒಳಗಾಯಿತು. ಕ್ರಿ.ಶ. ೧೭೯೨ರ ಶ್ರೀರಂಗಪಟ್ಟಣದ ಒಪ್ಪಂದದ ಪ್ರಕಾರ ವಿಜಯಪುರ ಮತ್ತೇ ಮರಾಠರ ಕೈಸೇರಿತು. ಕ್ರಿ.ಶ. ೧೮೧೦ರಲ್ಲಿ ಪೇಶ್ವೆ ಬಾಜಿರಾಯಿ ವಿಜಯಪುರ ಪ್ರದೇಶವನ್ನು ನೀಲಕಂಠರಾವ್ ಸುಬೇದಾರನಿಗೆ ಒಪ್ಪಿಸಿದನು.

ಕ್ರಿ.ಶ. ೧೮೧೮ರಲ್ಲಿ ಬ್ರಿಟಿಷ್ ಸೈನ್ಯಾಧಿಕಾರಿ ಸರ್ ಥಾಮಸ್ ಮನ್ರೋ ಬೃಹತ್ತಾದ ಬ್ರಿಟಿಷ್ ಸೈನ್ಯದೊಂದಿಗೆ ಬಾದಾಮಿ ಪ್ರದೇಶಕ್ಕೆ ಮುತ್ತಿಗೆ ಹಾಕಿ ಬಾದಾಮಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳನ್ನು ವಶಪಡಿಸಿಕೊಂಡನು. ನಂತರ ಬಾಗಲಕೋಟೆ ಪ್ರದೇಶ ಹವೇಲಿ, ಕಲಾದಗಿ ಹಾಗೂ ಇತರ ಪ್ರದೇಶಗಳು ಸಂಪೂರ್ಣವಾಗಿ ಕ್ರಿ.ಶ. ೧೮೧೮ ಮೇ ೧೭ರಂದು ಬ್ರಿಟಿಷ್‌ರ ಕೈವಶವಾದವು. ಕ್ರಿ.ಶ. ೧೮೧೮ರಿಂದ ೧೮೩೭ರ ವರೆಗೆ ಬಾಗಲಕೋಟೆ, ಬಾದಾಮಿ, ಹುನಗುಂದ ತಾಲೂಕುಗಳು ಧಾರವಾಡ ಕಲೆಕ್ಟರೇಟ್ ಅಧಿಕಾರಿಗಳ ಅಧೀನದಲ್ಲಿದ್ದವು. ಮುಧೋಳ ಘೋರ್ಪಡೆ ಸಂಸ್ಥಾನ, ಜಮಖಂಡಿ ಪಟವರ್ಧನ ಸಂಸ್ಥಾನಗಳು ತಮ್ಮ ರಾಜತ್ವವನ್ನು ಮುಂದುವರೆಸಿದವು.

ದಕ್ಷಿಣ ಭಾಗದ ಬ್ರಿಟಿಷ್ ಸಾಮ್ರಾಜ್ಯದ ಕಂದಾಯ ಆಯುಕ್ತನಾದ ಡಬ್ಲು ಹಾರ್ಟನ್ ಸಲಹೆಯಂತೆ ಆಡಳಿತದ ಅನುಕೂಲಕ್ಕಾಗಿ ಇಂಡಿ, ಹಿಪ್ಪರಗಿ, ವಿಜಾಪೂರ, ಮನಗೂಳಿ, ಮುದ್ದೇಬಿಹಾಳ, ಬಾಗಲಕೋಟೆ, ಬಾದಾಮಿ ಹಾಗೂ ಹುನಗುಂದಗಳನ್ನೊಳಗೊಂಡು "ಕಲಾದಗಿ ಕಲೆಕ್ಟರೇಟ್" ಕ್ರಿ.ಶ. ೧೮೬೪ ಡಿಸೆಂಬರ್ ೧ರಂದು ರಚನೆ ಮಾಡಲಾಯಿತು. ಬೀಳಗಿ ಉಪ ತಾಲೂಕಾಗಿ ಹಾಗೂ ಮುಧೋಳ, ಜಮಖಂಡಿ ಪ್ರದೇಶಗಳು ಸಂಸ್ಥಾನಗಳಾಗಿ ಆಡಳಿತ ನಡೆಸಿದವು. ಕ್ರಿ.ಶ. ೧೮೭೬ರಲ್ಲಿ ಕರ್ನಲ್ ಸೆಂಟ್ ಕ್ಲಾರ್ ವಿಲ್ಕಿನ್ಸನು ಆಡಳಿತದ ದೃಷ್ಟಿಯಿಂದ ಕಲಾದಗಿ ಗಿಂತ ಬಿಜಾಪೂರವೇ ಜಿಲ್ಲಾ ಕೇಂದ್ರವಾಗಲು ಯೋಗ್ಯವೆಂದು ಸಲಹೆ ನೀಡಿದನು. ವಿಜಾಪೂರದಲ್ಲಿ ಆದಿಲ್‌ಷಾಹಿ ಕಾಲದ ಕಟ್ಟಡಗಳು ಅನಾಥವಾಗಿ ಬಿದ್ದಿದ್ದವು. ಕ್ರಿ.ಶ. ೧೮೭೭ರ ಬೀಕರ ಬರಗಾಲ ದಿಂದಾಗಿ ಕ್ರಿ.ಶ. ೧೮೭೯ರ ವರೆಗೆ ಬರಪರಿಹಾರ ಕಾರ್ಯ ಮುಂದುವರೆಯಿತು. ತದನಂತರ ಕ್ರಿ.ಶ. ೧೮೭೯ರಿಂದ ೧೮೮೫ರ ವರೆಗೆ ವಿಜಾಪುರದಲ್ಲಿ ಹಾಳುಬಿದ್ದಿದ್ದ ಕಟ್ಟಡಗಳ ದುರಸ್ತಿ ಕಾರ್ಯ ನಡೆಯಿತು. ಅಂತಿಮವಾಗಿ ಕಲಾದಗಿ ಜಿಲ್ಲೆಯನ್ನು ಕ್ರಿ.ಶ.೧೮೮೫ರಲ್ಲಿ ವಿಜಾಪುರಕ್ಕೆ ವರ್ಗಾಯಿಸಲಾಯಿತು. ಆಗ ಬಾಗಲಕೋಟೆ ಒಂದು ತಾಲೂಕಾಗಿ ಗುರುತಿಸಿಕೊಂಡಿತು.

ಈಗಿನ ಬಾಗಲಕೋಟೆ ಜಿಲ್ಲೆಯೂ ಕಲಾದಗಿಯ ಜಿಲ್ಲೆಯಾಗಿ ಸುಮಾರು ೬೭ ವರ್ಷಗಳ ಕಾಲ (ಕ್ರಿ.ಶ. ೧೮೧೮–೧೮೮೫ರ ವರೆಗೆ) ಬ್ರಿಟಿಷರ ಆಡಳಿತದ ಅವಧಿಯಲ್ಲಿ ಸುಮಾರು ೨೧ ವರ್ಷಗಳ ಕಾಲ(ಕ್ರಿ.ಶ. ೧೮೬೪–೧೮೮೫)

---

* ಸಂಶೋಧನ ಸಹಾಯಕ ವಸ್ತುಸಂಗ್ರಹಾಲಯ ಮತ್ತು ಪ್ರವಾಸೋದ್ಯಮ ಸಂಶೋಧನ ಕೇಂದ್ರ, ಕನ್ನಡ ವಿವಿ. ಹಂಪಿ. ಮೊ. ೯೯೧೬೮೬೮೨೩೦

ಸೈನಿಕ ನೆಲೆ(ಕಂಟೋನ್ಮೆಂಟ್)ಯಾಗಿ ಜಿಲ್ಲಾ ಕೇಂದ್ರವಾಗಿ ಅಸ್ತಿತ್ವದಲ್ಲಿತ್ತು. ಈ ಅವಧಿಯಲ್ಲಿ ಬ್ರಿಟಿಷರು ಬಾಗಲಕೋಟೆ ಸುತ್ತಮುತ್ತಲಿನ ಪರಿಸರದಲ್ಲಿ ಹಲವಾರು ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ಬಾಗಲಕೋಟೆ ಜಿಲ್ಲೆಯ ವ್ಯಾಪ್ತಿಯಲ್ಲಿದ್ದ ಮುಧೋಳ, ಜಮಖಂಡಿ, ಔರಾದ್, ಕುರಂದವಾಡ ಮತ್ತು ಸಾಂಗಲಿ ಸಂಸ್ಥಾನಗಳು ಕ್ರಿ.ಶ. ೧೯೪೮ರಲ್ಲಿ ವಿಜಯಪುರ ಜಿಲ್ಲೆಗೆ ಸೇರಿಸಲಾಯಿತು. ಇದು ಕ್ರಿ.ಶ. ೧೯೪೭ರಿಂದ ಮುಂಬಯಿ ಪ್ರಾಂತ್ಯದ ಒಂದು ಜಿಲ್ಲೆಯಾಗಿತ್ತು. ಕ್ರಿ.ಶ. ೧೯೫೬ರ ರಾಜ್ಯಗಳ ಪುನರ್ವಿಂಗಡಣೆಯಾದಾಗ ವಿಜಯಪುರ ಕರ್ನಾಟಕ ರಾಜ್ಯಕ್ಕೆ ಸೇರಿತು. ನಂತರ ವಿಜಯಪುರ ಜಿಲ್ಲೆಯಿಂದ ಪ್ರತ್ಯೇಕಗೊಂಡು ಬಾಗಲಕೋಟೆ ಜಿಲ್ಲೆಯನ್ನು ಕ್ರಿ.ಶ. ೧೯೯೭ ಆಗಸ್ಟ್ ೧೫ರಂದು ರಚಿಸಲಾಯಿತು. ಬಾಗಲಕೋಟೆ, ಬಾದಾಮಿ, ಬೀಳಗಿ, ಹುನಗುಂದ, ಜಮಖಂಡಿ, ಮುಧೋಳ ಒಟ್ಟು ಆರು ತಾಲೂಕು ಸೇರಿಕೊಂಡು ಅಖಂಡ ನೂತನ ಬಾಗಲಕೋಟೆ ಜಿಲ್ಲೆಯಾಗಿ ರಚನೆಗೊಂಡಿತು.

ಬಾಗಲಕೋಟೆ ಜಿಲ್ಲೆಯು ಉತ್ತರಕ್ಕೆ ವಿಜಯಪುರ, ದಕ್ಷಿಣಕ್ಕೆ ಗದಗ, ಪೂರ್ವಕ್ಕೆ ರಾಯಚೂರು ಹಾಗೂ ಕೊಪ್ಪಳ, ಪಶ್ಚಿಮಕ್ಕೆ ಬೆಳಗಾವಿ ಜಿಲ್ಲೆ ಗಡಿ ಭಾಗಕ್ಕೆ ಹೊಂದಿಕೊಂಡಿವೆ. ಬಾಗಲಕೋಟೆ ರಾಮಾಯಣ ಕಾಲದಲ್ಲಿ ರಾವಣನ ಆಸ್ಥಾನದಲ್ಲಿರುವ ವಾದ್ಯಮೇಳದ(ವಾಜಂತ್ರಿ–ಭಜಂತ್ರಿ)ವರ ಊರಾಗಿತ್ತು ಎಂಬ ಐತಿಹ್ಯವಿದೆ. ವಿಜಯಪುರದ ಆದಿಲ್‌ಷಾಹಿ ತನ್ನ ಮಗಳಿಗೆ ಬಳೆ(ಉರ್ದುವಿನಲ್ಲಿ ಬಂಗಡಿ ಎಂದರೆ ಬಳೆ ಎಂದರ್ಥ)ಯ ವೆಚ್ಚಕ್ಕೆ ಈ ಊರನ್ನು ಬಳೆ ತೊಡಿಸುತ್ತಿದ್ದ ಬಳೆಗಾರನಿಗೆ ಉಂಬಳಿ ಕೊಟ್ಟಿದ್ದರಿಂದ ಆಗ ಬಂಗಡಿಕೋಟೆ ಎಂದು ಕರೆಯುತ್ತಿದ್ದರು. 'ಬಂಗಡಿಕೋಟ್'ಎಂಬ ಹೆಸರು ಬಂದು, ಮುಂದೆ ಅಪಭ್ರಂಶಗೊಳ್ಳುತ್ತ ಸಾಗಿದ 'ಬಂಗಡಿ ಕೋಟ್' ಹೆಸರು 'ಬಾಗಲಕೋಟೆ' ಎಂದು ಹೆಸರು ಪಡೆಯಿತು.

ಬಾಗಲಕೋಟೆಯ ಮುಳುಗಡೆಯ ಕಟ್ಟಡಗಳಾದ ಸೇವಾದಳ ಕಟ್ಟಡ, ಸರ್ವೋದಯ ವಾಚನಾಲಯ ನಗರವನ, ತಿಜಾಭಾಯಿ ಆಸ್ಪತ್ರೆ, ವಸಾಹತು ಕಾಲದಲ್ಲಿ ಬ್ರಿಟಿಷರು ೧೮೮೨ರಲ್ಲಿ ನಿರ್ಮಿಸಿದ ಮುಚಖಂಡಿ ಕೆರೆ ಇವುಗಳ ಕುರಿತು ಸಂಕ್ಷಿಪ್ತವಾಗಿ ಮಾಹಿತಿಯು ದಾಖಲಾಗಿದೆ. ಆದರೂ ಸಹ ವಸಾಹತು ಕಾಲದಲ್ಲಿ ಬ್ರಿಟಿಷರು ತಮ್ಮ ಆಡಳಿತದ ಅವಧಿಯಲ್ಲಿ ಬಾಗಲಕೋಟೆ ಸುತ್ತಮುತ್ತಲಿನ ಪರಿಸರದಲ್ಲಿ ವಸಾಹತು ಶೈಲಿಯ ಸ್ಮಾರಕಗಳಾದ ಚರ್ಚ್, ನಿರೀಕ್ಷಣಾ ಮಂದಿರ, ರಸ್ತೆ ಮತ್ತು ರೈಲು ಸೇತುವೆ, ಆಸ್ಪತ್ರೆ, ಶಾಲೆ, ಸೆರೆಮನೆ (ಜೈಲು), ಆಡಳಿತ ಕಚೇರಿ, ಅಧಿಕಾರಿಗಳ ವಸತಿಗೃಹಗಳನ್ನು ನಿರ್ಮಿಸಿದ್ದಾರೆ. ಅವು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ಸಂತ ಪೌಲನ ಚರ್ಚ (ದೇವಾಲಯ)**: ಬಾಗಲಕೋಟೆ ಮಧ್ಯಭಾಗದಲ್ಲಿ ಸಂತಪೌಲನ ಚರ್ಚನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ನೇತೃತ್ವದಲ್ಲಿ ೨೯–೧೧–೧೯೬೬ರಂದು ಈ ಚರ್ಚ ಸ್ಥಾಪಿಸಲಾಗಿದೆ ಎಂಬ ಫಲಕ ಚರ್ಚನ ಮೇಲ್ಭಾಗದಲ್ಲಿದೆ. ಈ ಚರ್ಚನ ಮೂಲ ಕಟ್ಟಡವು ಜೀರ್ಣೋದ್ಧಾರ ಗೊಂಡು, ಮರು ಫಲಕವನ್ನು ಇಲ್ಲಿ ಹಾಕಿಸಲಾಗಿದೆ. ಬ್ರಿಟಿಷರ ಆಡಳಿತದಲ್ಲಿ ಹಳೆಯ ಚರ್ಚನ ಮೂಲ ಕಟ್ಟಡದಲ್ಲಿ ಹೊಸ ಚರ್ಚು ನಿರ್ಮಾಣಗೊಂಡಿದೆ. ತಾಲೂಕು ಕಾರ್ಯಾಲಯ, ತಹಶೀಲ್ದಾರ ಕಾರ್ಯಾಲಯ, ನಿರೀಕ್ಷಣಾ ಮಂದಿರ, ಆಸ್ಪತ್ರೆ, ಟೆನೆಸ್ ಕೋರ್ಟ್, ರೇಡಿಯೋ ಹೌಸ್ ಇತ್ಯಾದಿಗಳೆಲ್ಲವೂ ಬ್ರಿಟಿಷ್ ಅಧಿಕಾರಿಗಳಿಗೆ ಅನುಕೂಲಕ್ಕೋಸ್ಕರವಾಗಿ ಎಲ್ಲಾ ಸ್ಮಾರಕಗಳು ೧ ಕಿ.ಮೀ. ಅಂತರದಲ್ಲಿ ನಿರ್ಮಿಸಿದ್ದಾರೆ. ಸಂತಪೌಲನ ಚರ್ಚ ಗೋಥಿಕ್ ಶೈಲಿಯಿಂದ ಕೂಡಿದ್ದೆ. ಚರ್ಚ ಮುಂಭಾಗ ಮುಖ್ಯದ್ವಾರವಿದ್ದು, ಚರ್ಚ ಗೋಥಿಕ್ ಶೈಲಿಯಿಂದ ಕೂಡಿದೆ. ಚರ್ಚ ಮುಂಭಾಗ ಮುಖ್ಯದ್ವಾರವಿದ್ದು, ಚರ್ಚಸುತ್ತಲೂ ವ್ಯವಸ್ಥಿತವಾದ ಕಾಂಪೌಂಡ ನಿಂದ ಸಂರಕ್ಷಿಸಲಾಗಿದೆ. ಈ ಚರ್ಚನಲ್ಲಿ ಸುಮಾರು ೮೦ರಿಂದ ೧೦೦ ಜನರು ಏಕಕಾಲದಲ್ಲಿ ಪ್ರಾರ್ಥನೆಯನ್ನು ಮಾಡಲು ಸ್ಥಳಾವಕಾಶವಿದೆ. ಮುಖ್ಯವಾಗಿ ಬಲಿಪೀಠ, ಪ್ರಾಂಗಣ, ಚರ್ಚಗೆ ವ್ಯವಸ್ಥಿತ ಗಾಳಿ, ಬೆಳಕು ಪ್ರವೇಶಿಸಲು ಕಿಟಕಿ, ಬಾಗಿಲು, ಮೇಲು ಹೊದಿಕೆಗೆ ಮಂಗಳೂರು ಹೆಂಚು, ಸ್ಥಳೀಯವಾಗಿ ದೊರೆಯುವ ಕೆಂಪು ಶಿಲೆ, ಗಾರೆಗಚ್ಚನ್ನು ಉಪಯೋಗಿಸಿ ವ್ಯವಸ್ಥಿತವಾಗಿ ಸಂತ ಪೌಲನ ಚರ್ಚನ್ನು ಬ್ರಿಟಿಷರು ಕಟ್ಟಿದ್ದಾರೆ. ಮುಖ್ಯದ್ವಾರದ ಮೇಲುಗಡೆ ದೊಡ್ಡವಾದ ಶಿಲುಬೆ. ಚರ್ಚನ ಆಕರ್ಷಣೆಯಾಗಿದೆ. ಚರ್ಚನ ಹಿಂಭಾಗದಲ್ಲಿ ಫಾಧರಗಳ ವಸತಿಗಳಿವೆ. ಇಂದಿಗೂ ಚರ್ಚನಲ್ಲಿ ಪ್ರಾರ್ಥನೆ, ಕ್ರಿಸ್‌ಮಸ್, ನಿಶ್ಚಿತಾರ್ಥ, ಮದುವೆ, ಇತ್ಯಾದಿ, ಕ್ರಿಸ್ತಮತದ ಧಾರ್ಮಿಕ ಕಾರ್ಯಕ್ರಮಗಳು ಜರುತ್ತಿರುವುದು ವಿಶೇಷವಾಗಿದೆ. ಪ್ರೋಟೆಸ್ಟೆಂಟ್ ಪಂಗಡಕ್ಕೆ ಸೇರಿದ ಚರ್ಚ ಇದಾಗಿದೆ. ಚರ್ಚನ ಸುತ್ತಲೂ ಹರಿಣಶಿಕಾರಿ ಸಮುದಾಯದವರು ಹೆಚ್ಚಾಗಿ ವಾಸಿಸುತ್ತಾರೆ. ಹಾಗಾಗಿ ತಳಸಮುದಾಯದವರು ಹೆಚ್ಚಾಗಿ ಕ್ರೈಸ್ತ ಮತದ ಅನುಯಾಯಿಗಳಾಗಿದ್ದಾರೆ. ಇದು ಸಿ.ಎಸ್.ಐ. ಪ್ರಾಂತ್ಯಕ್ಕೆ ಸೇರಿದ ಪ್ರೋಟೆಸ್ಟೆಂಟ್ ಪಂಗಡಕ್ಕೆ ಸೇರಿದ ಚರ್ಚ ಇದಾಗಿದೆ.

**ಸೆಂಟ್ ಮೇರಿಸ್ ಚರ್ಚ (ನವನಗರ)**: ಬಾಗಲಕೋಟೆ ನಗರಕ್ಕೆ ಹೊಂದಿಕೊಂಡಿರುವ ಘಟಪ್ರಭಾ ನದಿಯ ಬಲದಂಡೆಗೆ ಹೊಂದಿಕೊಂಡಿರುವ ಪ್ರದೇಶದಲ್ಲಿ ಸೆಂಟ್ ಮೇರಿಸ್ ಚರ್ಚನ್ನು ಕಟ್ಟಲಾಗಿತ್ತಂತೆ. ಆದರೆ ಕೃಷ್ಣಾ ಮೇಲ್ದಂಡೆ ಯೋಜನೆಯಿಂದ

ಆಲಮಟ್ಟಿಯಲ್ಲಿ ಅಣೆಕಟ್ಟು ನಿರ್ಮಾಣವಾದುದರಿಂದ ಬಾಗಲಕೋಟೆ ಅರ್ಧಕ್ಕೂ ಹೆಚ್ಚು ವ್ಯಾಪ್ತಿಯನ್ನು ಹೊಂದಿದ ಪ್ರದೇಶ ಮುಳುಗಡೆಯಾಯಿತು. ಆ ಸಮಯದಲ್ಲಿ ಈ ಚರ್ಚವು ಸಹ ಮುಳುಗಡೆಯಾಯಿತು. ಈ ಚರ್ಚನ ಅವಶೇಷಗಳು ದೊರೆಯುವುದು ತುಂಬಾ ವಿರಳ. ಮುಳುಗಡೆಯಾದ ಚರ್ಚಗಾಗಿ ನವನಗರದಲ್ಲಿ ನಿವೇಶನ ನೀಡಿದ ನಂತರ ಸೆಂಟ್ ಮೇರಿಸ್ ಚರ್ಚ ನವನಗರದಲ್ಲಿ ನಿರ್ಮಾಣಗೊಂಡಿದೆ. ಈ ಚರ್ಚ ಎತ್ತರದ ಜಗತಿಯ ಮೇಲೆ ಚತುಷ್ಕಾರದಲ್ಲಿ ಕಟ್ಟಿದ್ದಾರೆ. ಕೆಂಪು ಕಲ್ಲು, ಇಟ್ಟಿಗೆ, ಕಟ್ಟಿಗೆ, ಸಿಮೆಂಟ್ ಕಾಂಕ್ರೇಟ್ ಉಪಯೋಗಿಸಿಕೊಂಡು ಅತ್ಯಂತ ವ್ಯವಸ್ಥಿತವಾಗಿ ಚರ್ಚನ್ನು ನಿರ್ಮಿಸಿದ್ದಾರೆ. ಚರ್ಚನ ಮಧ್ಯಭಾಗದಲ್ಲಿ ಅಂದರೆ ಗೋಪುರವು ಮೊನಚಾ(ಆರ್ಚ)ಕಾರದಲ್ಲಿ ಮುಗಿಲು ಮುಟ್ಟುವಂತೆ ಅತ್ಯಂತ ಸುಂದರವಾಗಿ ನಿರ್ಮಿಸಿದ್ದಾರೆ. ಬಲಿಪೀಠ ಸಭಾಂಗಣ, ಪೂಜಾ ವೇದಿಕೆ, ಸುಮಾರು ೧೦೦ ರಿಂದ ೧೫೦ ಜನರು ಪ್ರಾರ್ಥನೆ ಮಾಡಲು ವಿಶಾಲ ಪ್ರಾಂಗಣ, ಹೊಂದಿದ್ದು, ಚರ್ಚ ವಿಶಾಲವಾದ ಉದ್ಯಾನವನದ ಮಧ್ಯದಲ್ಲಿ ನಿರ್ಮಿಸಿರುವುದು ಆಕರ್ಷಣೀಯವಾಗಿದೆ. ಈ ಚರ್ಚ ಕ್ಯಾಥೋಲಿಕ ಪಂಗಡಕ್ಕೆ ಸೇರಿದೆ. ಈ ಚರ್ಚನ ಬಾಗಿಲು, ಕಿಟಕಿ ಚೌಕಾಕಾರವಿದ್ದು, ಆಧುನಿಕ ಶೈಲಿಯ ಹೂವು ಬಳ್ಳಿಯಾಕಾರದ ಚಿತ್ರಗಳನ್ನು ಬಿಡಿಸಿದ್ದಾರೆ. ಒಟ್ಟಿನಲ್ಲಿ ಈ ಚರ್ಚ ಆಧುನಿಕ ವಾಸ್ತುಶೈಲಿಯನ್ನು ಒಳಗೊಂಡು ನಿರ್ಮಾಣವಾಗಿದೆ.

**ತಾಲೂಕು ಪಂಚಾಯತಿ ಕಾರ್ಯಾಲಯ:** ಬ್ರಿಟಿಷರು ತಮ್ಮ ಆಡಳಿತದ ಅವಧಿಯಲ್ಲಿ ವಸಾಹತು ಕಾಲದ ಸ್ಮಾರಕಗಳಾದ ಚರ್ಚ, ನಿರೀಕ್ಷಣಾ ಮಂದಿರ, ಸೇತುವೆ, ಆಸ್ಪತ್ರೆ, ಶಾಲೆ, ಸೆರೆಮನೆ(ಜೈಲು) ಆಡಳಿತ ಕಚೇರಿಗಳನ್ನು ತಮ್ಮ ಅನುಕೂಲಕ್ಕಾಗಿ ಹಾಗೂ ಸಾರ್ವಜನಿಕರೂ ಅನುಕೂಲವಾಗುವ ದೃಷ್ಟಿಯನ್ನು ಇಟ್ಟುಕೊಂಡು ನಿರ್ಮಿಸಿದ್ದಾರೆ. ಬಾಗಲಕೋಟೆಯ ನಗರದ ಮಧ್ಯಭಾಗದಲ್ಲಿ ತಾಲೂಕು ಪಂಚಾಯತಿ ಕಾರ್ಯಾಲಯವಿದೆ. ಕಪ್ಪು ಮತ್ತು ಕೆಂಪು ಕಲ್ಲು, ಗಾರೇಗಚ್ಚು, ಸೀಮೆಸುಣ್ಣವನ್ನು ಉಪಯೋಗಿಸಿ ಸ್ಮಾರಕ ನಿರ್ಮಿಸಿದ್ದಾರೆ. ಮಂಗಳೂರು ಹೆಂಚು ಈ ಕಟ್ಟಡದ ಮೇಲ್ಛಾವಣಿಗೆ ಹಾಕಲಾಗಿದೆ. ಹೆಂಚಿನ ಕೆಳಭಾಗಕ್ಕೆ ದಪ್ಪನಾದ ಕಟ್ಟಿಗೆಯನ್ನು ಹಾಕಲಾಗಿದೆ. ಕಟ್ಟಡದ ಮಧ್ಯಭಾಗದಲ್ಲಿ ಎತ್ತರವಾಗಿದ್ದು, ಕಟ್ಟಿಗೆಯಿಂದ ನಾಲ್ಕು ಕಡೆಗೆ ಇಳಿಜಾರು ಮಾಡಲಾಗಿದೆ. ಈ ಕಟ್ಟಿಗೆಯ ಜಾಡಿನ ಮೇಲೆ ಇಳಿಜಾರಿನನುಕ್ರಮವಾಗಿ ಮಂಗಳೂರು ಹೆಂಚು ಹಾಕಲಾಗಿದೆ. ಮಳೆಯ ನೀರು ಸರಾಗವಾಗಿ ಹೋಗಲು ಮತ್ತು ಬೇಸಿಗೆಯ ಸಮಯದಲ್ಲಿ ಗಾಳಿ, ಬೆಳಕು, ಅಡೆತಡೆಯಿಲ್ಲದೇ ಒಳಗಡೆ ಬರುವಂತೆ ಬ್ರಿಟಿಷರು ಈ ಕಟ್ಟಡ ನಿರ್ಮಿಸಿದ್ದಾರೆ. ಈ ಸ್ಮಾರಕ ಇಂದಿಗೂ ಸಹ ಸುವ್ಯವಸ್ಥೆಯಿಂದ ಕೂಡಿದೆ. ಇಡೀ ಜಿಲ್ಲೆಗೆ ಹೃದಯ ಭಾಗದಂತೆ ಈ ಕಟ್ಟಡ ಕಾರ್ಯಾಚರಣೆಯಲ್ಲಿದ್ದಿತು. ಬಾಗಲಕೋಟೆ ಮುಳುಗಡೆ ನೀರಿನಲ್ಲಿ ಎಷ್ಟೋ ವಸಾಹತು ಕಾಲದ ಸ್ಮಾರಕಗಳು ಆಹುತಿಯಾಗಿವೆ. ಈ ತಾಲೂಕು ಪಂಚಾಯತಿ ಕಾರ್ಯಾಲಯ ಸುರಕ್ಷತೆಯಿರುವುದರಿಂದ ಇಂದಿಗೂ ಈ ಸ್ಮಾರಕ ಕಾರ್ಯ ಮಾಡುತ್ತಿದೆ.

**ತಹಶೀಲ್ದಾರ ಕಾರ್ಯಾಲಯ:** ಬಾಗಲಕೋಟೆಯ ಇಂದಿನ ತಹಶೀಲ್ದಾರ ಕಾರ್ಯಾಲಯವನ್ನು ಬ್ರಿಟಿಷರ ಆಡಳಿತದ ಅವಧಿಯಲ್ಲಿ ಸೆರೆಮನೆಯಾಗಿತ್ತು. ಮುಖ್ಯ ದ್ವಾರದಲ್ಲಿ ಒಂದು ಮಾರ್ಗಸೂಚಿ ಕಲ್ಲನ್ನು ನಿಲ್ಲಿಸಲಾಗಿದೆ. ಅದರಲ್ಲಿ ಬಾಗಲಕೋಟೆ–೧೬, ಬೆಳಗಾವಿ–೭೧, ಹುನಗುಂದ–೪೪ ಎಂದು ಕಲ್ಲಿನಲ್ಲಿ ಕೆತ್ತಲಾಗಿದೆ. ಬಾಗಲಕೋಟೆಯಿಂದ ಇತರ ಊರುಗಳಿಗೆ ಇರುವ ಅಂತರದ ಮಾರ್ಗಸೂಚಿಯಾಗಿ ದಿಕ್ಕನ್ನು ತೋರಿಸುವ ಪ್ರತೀಕ ಈ ಕಲ್ಲನ್ನು ನೆಡಲಾಗಿದೆ. ಇವುಗಳಿಗೆ ಮೈಲುಗಲ್ಲುಗಳೆಂದು ಕರೆಯಲಾಗುತ್ತಿತ್ತು. ಸೆರೆಮನೆಯ ಪ್ರತಿಯೊಂದು ಕೋಣೆಗಳು ಅತ್ಯಂತ ಗಟ್ಟಿಮುಟ್ಟಾಗಿವೆ. ಒಟ್ಟು ೪೦ರಿಂದ ೫೦ ಕೋಣೆಗಳ ಕಾರ್ಯಗೃಹ ಇದಾಗಿತ್ತು. ಆಂಗ್ಲಭಾಷೆಯ U ಆಕಾರದಲ್ಲಿ ಕಟ್ಟಡವನ್ನು ನಿರ್ಮಿಸಿದ್ದಾರೆ. ಮುಂದುಗಡೆ ವಿಶಾಲವಾದ ಪ್ರಾಂಗಣವಿದೆ. ಹತ್ತಿರದಲ್ಲಿಯೇ ಧ್ವಜಸ್ತಂಭವು ಸಹವಿದೆ. ಇಂದು ಈ ಎಲ್ಲಾ ಕೋಣೆಗಳನ್ನು ಅಧಿಕಾರಿಗಳು ಅಗತ್ಯಕ್ಕೆ ತಕ್ಕಂತೆ ಮಾರ್ಪಾಡು ಮಾಡಿದ್ದಾರೆ. ಈ ದೊಡ್ಡ ಕಾರ್ಯಾಲಯಕ್ಕೆ ಪ್ರವೇಶಿಸಲು ಒಂದೇ ಮುಖ್ಯ ದ್ವಾರವಿದೆ. ಒಳಗಡೆ ಹೋದಂತೆಲ್ಲಾ ಎತ್ತರದ ಗೋಡೆಗಳಿಂದ ಪ್ರತ್ಯೇಕ ಕೊಠಡಿಗಳನ್ನು ನಿರ್ಮಿಸಲಾಗಿದೆ. ಕಮಾನುಗಳು ಅತ್ಯಂತ ಸುಂದರವಾಗಿ ನಿರ್ಮಾಣ ವಾಗಿರುವುದು ಇಲ್ಲಿ ತುಂಬಾ ವಿಶೇಷವೆನಿಸುತ್ತದೆ. ಬೆಳಗಾವಿಯಿಂದ ಬ್ರಿಟಿಷರು ಬಾಗಲಕೋಟೆಗೆ ಬಂದು ಹಲವಾರು ಪ್ರದೇಶಗಳಿಗೆ ಸಾಗಲು ಇಲ್ಲಿ ಮುಖ್ಯ ದ್ವಾರದಲ್ಲಿ.ಕಿ.ಮೀ. ಸಂಕೇತ ಸೂಚಿಸುವ ನೆಡುಗಲ್ಲು ನಿಲ್ಲಿಸಲಾಗಿದೆ.

**ನಿರೀಕ್ಷಣಾ ಮಂದಿರ:** ಬಾಗಲಕೋಟೆ ನಗರದ ಮಧ್ಯಭಾಗದಲ್ಲಿ ಘಟಪ್ರಭಾ ನದಿಗೆ ಹತ್ತಿರದಲ್ಲಿ ನಿರೀಕ್ಷಣಾ ಮಂದಿರ (ಬಂಗಲೆ) ಕ್ರಿ.ಶ. ೧೯೧೧ರಲ್ಲಿ ಬ್ರಿಟೀಷರು ನಿರ್ಮಿಸಿದ್ದಾರೆ. ಕೆಂಪು ಮತ್ತು ಕಪ್ಪು ಶಿಲೆ, ಸಿಸಂ. ಕರಿಮತ್ತಿ, ಹೊನ್ನೆ ಮರದ ಕಟ್ಟಿಗೆಯನ್ನು ಉಪಯೋಗಿ ಬಂಗಲೆ ನಿರ್ಮಿಸಿದ್ದಾರೆ. ಬಂಗಲೆಯು ಮುಂಭಾಗದಲ್ಲಿ ೫ ಕಮಾನುಗಳನ್ನು ಹೊಂದಿದ್ದು, ಎರಡು ಅಂತಸ್ತು, ವಿಶಾಲವಾದ ಪ್ರಾಂಗಣ, ವಿಶ್ರಾಂತಿ ಕೊಠಡಿ, ಊಟದ ಮನೆ, ಸಭಾಗೃಹ ಶೌಚಾಲಯ ಇತ್ಯಾದಿ ಕೊಠಡಿಗಳನ್ನು ಒಳಗೊಂಡಿದೆ. ಬಂಗಲೆಯು ಅಪ್ಪಟ ಬ್ರಿಟಿಷ್ ವಸಾಹತು ಶೈಲಿಯ ಸ್ಮಾರಕವಾಗಿದೆ. ನಿರೀಕ್ಷಣಾ ಮಂದಿರದ






**ಮಾರ್ಗಸೂಚಿ ಕಲ್ಲು, ತಾಲೂಕು ಕಚೇರಿ ಆವರಣ, ಬಾಗಲಕೋಟೆ**



**ತಾಲೂಕು ಕಚೇರಿ ಆವರಣ, ಬಾಗಲಕೋಟೆ**



**ಸೆಂಟ್ ಫೌಲ್ ಚರ್ಚ್, ಬಾಗಲಕೋಟೆ**

ಎಲ್ಲಾ ಕಿಟಕಿಯ ವಿನ್ಯಾಸ ಕಮಾನುಗಳಿಂದ ರಚನೆಗೊಂಡು, ಕಟ್ಟಿಗೆ, ಅಲಂಕಾರಿಕ ಗಾಜನ್ನು ಉಪಯೋಗಿಸಿ ಬಾಗಿಲು ಕಿಟಕಿಗಳನ್ನು ಅಳವಡಿಸಲಾಗಿದೆ. ಗೋಡೆಯ ಒಳಗಿನ ಮತ್ತು ಹೊರಗಿನ ಭಾಗ ಬಿರುಕು ಬಿಡದಂತೆ ಕಬ್ಬಿಣದ ಸರಳುಗಳನ್ನು ಉಪಯೋಗಿಸಿ ಬ್ರಿಟಿಷರು ಸ್ಮಾರಕವನ್ನು ನಿರ್ಮಿಸಿದ್ದಾರೆ. ಬ್ರಿಟಿಷ್ ಅಧಿಕಾರಿಗಳು ವಾಸ್ತವ್ಯಕ್ಕಾಗಿ ಬಾಗಲಕೋಟೆಯಲ್ಲಿ ಈ ಬಂಗಲೆಯನ್ನು ನಿರ್ಮಿಸಿದ್ದಾರೆ. ಹೊರಾಂಡ ಅಂದರೆ ಬಂಗಲೆಯ ಹೊರಗಡೆ ಸ್ಥಳದಲ್ಲಿ ಸುತ್ತಲೂ ಗಿಡಮರಗಳು, ಉದ್ಯಾನವನ, ನೀರಿನ ಕಾರಂಜಿಯು ಆಕರ್ಷಿತವಾಗಿದ್ದುದರಿಂದ ನಿರೀಕ್ಷಣಾ ಮಂದಿರ ಸೌಂದರ್ಯ, ಮೆರಗು, ಇಂದಿಗೂ ನವನವೀನವಾಗಿ ಕಂಗೊಳಿಸುತ್ತಿದೆ. ಕಟ್ಟದ ಶೈಲಿ, ರಚನಾ ವಿನ್ಯಾಸ, ತಾಂತ್ರಿಕತೆ ಎಲ್ಲವೂ ವೈಶಿಷ್ಟ್ಯೆಯಿಂದ ಕೂಡಿವೆ.

ಬಾಗಲಕೋಟೆಯಲ್ಲಿ ಬ್ರಿಟಿಷರು ಬಿಡಾರು ಹೂಡಿ ಹೆಚ್ಚು ಕಡಿಮೆ ಮೂರರಿಂದ ನಾಲ್ಕು ಕಿ.ಮೀ. ಅಂತರದಲ್ಲಿ ನಿರೀಕ್ಷಣಾ ಮಂದಿರ, ಚರ್ಚ, ಆಡಳಿತ ಕಚೇರಿ, ನ್ಯಾಯಾಲಯ, ಅಧಿಕಾರಿಗಳಿಗೆ ವಾಸಿಸಲು ವಸತಿ ಗೃಹಗಳು, ಅಂಚೆ ಕಚೇರಿ, ಸೆರೆಮನೆ(ಜೈಲು) ಎಲ್ಲ ವಸಾಹತು ಕಾಲದ ಸ್ಮಾರಕಗಳನ್ನು ತಮಗೆ ಆಡಳಿತದ ಅನುಕೂಲಕ್ಕಾಗಿ ಅತ್ಯಂತ ಶ್ರಮವಹಿಸಿ ನಿರ್ಮಿಸಿದ್ದಾರೆ. ಬ್ರಿಟಿಷರು ಅಧಿಕಾರ, ಆರ್ಥಿಕ ವ್ಯಾಮೋಹದ ಜೊತೆಗೆ ಪರಿಸರ ಪ್ರೇಮಿಗಳು, ನಿಷ್ಠಾವಂತ ಅಧಿಕಾರಿಗಳು, ಕಾಯಕ ಜೀವಿಗಳಾಗಿದ್ದರು ಎಂಬುದು ಇಲ್ಲಿ ಗಮನಾರ್ಹವಾದುದು. ಅಂತಹ ವಸಾಹತು ಕಾಲದ ಸ್ಮಾರಕಗಳು ಇಂದಿಗೂ ಸಹ ಜನರ ಸೇವೆಗಾಗಿ ತಮ್ಮನ್ನು ತೊಡಗಿಸಿಕೊಂಡಿವೆ.

**ರೈಲು ಸೇತುವೆ (ಏಂಟರ ಪೂಲ್):** ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಹತ್ತೊಂಬತ್ತನೇ ಶತಮಾನದ ಉತ್ತರಾರ್ಧ ಭಾಗದಲ್ಲಿ ರೂಪಿಸಲ್ಪಟ್ಟ ಮೂರು ರೈಲು ಮಾರ್ಗಗಳಲ್ಲಿ ಪೂರ್ವ ಡೆಕ್ಕನ್ ಅಥವಾ ಹೂಟಗಿ-ಗದಗ ಮೀಟರ್ ಗೇಜ್ ರೈಲುಮಾರ್ಗವು ಬಾಗಲಕೋಟೆ, ವಿಜಯಪುರ ಜಿಲ್ಲೆಗಳ ಮೇಲೆ ಬೀರಿದ ಪ್ರಭಾವ ಅತ್ಯಂತ ಗಣನೀಯವಾಗಿದೆ. ಈ ರೈಲು ಮಾರ್ಗದ ನಿರ್ಮಾಣ ಕಾರ್ಯವು ಬರಗಾಲ ಕಾಮಗಾರಿಯಾಗಿ ಕ್ರಿ.ಶ. ೧೮೭೯ರ ಏಪ್ರಿಲ್ ತಿಂಗಳಲ್ಲಿ ಆರಂಭ ಗೊಂಡಿತ್ತಾದರೂ ಅನಿವಾರ್ಯ ಕಾರಣಗಳಿಂದಾಗಿ ತಟಸ್ಥವಾಯಿತು. ಮುಂಬಯಿ ಸರ್ಕಾರ ಕ್ರಿ.ಶ. ೧೮೮೧ರ ನವ್ಹೆಂಬರ್ ತಿಂಗಳಲ್ಲಿ ಈ ಕಾಮಗಾರಿಯನ್ನು ಪುನರಾರಂಭಿಸಿ ಕ್ರಿ.ಶ. ೧೮೮೪ರ ಅಕ್ಟೋಬರ್ ೧೧ರಂದು ಅದರ ನಿರ್ವಹಣೆಯನ್ನು ಸದರನ್ ಮರಾಠ ರೈಲ್ವೆ ಕಂಪನಿಗೆ ವಹಿಸಿಕೊಟ್ಟಿತು. ಈ ರೈಲು ಮಾರ್ಗ ಲಚ್ಯಾಣ, ಇಂಡಿ ರೋಡ್, ನಿಂಬಾಳ, ಮಿಂಚಿನಾಳ, ವಿಜಯಪುರ, ಜುಮ್ನಾಳ, ಮುಳವಾಡ, ತೆಲಗಿ, ಆಲಮಟ್ಟಿ, ಬಾಗಲಕೋಟೆ, ಕಟಗೇರಿ, ಬಾದಾಮಿ, ಲಖಮಾಪುರ, ಹೀಗೆ ಒಟ್ಟು ೧೩ ರೈಲು ನಿಲ್ದಾಣಗಳ ಮೂಲಕ ಹಾದು ಹೋಗಿ ಗದಗ ನಗರದ ರೈಲು ನಿಲ್ದಾಣವನ್ನು ತಲುಪುತ್ತದೆ.

ಈ ರೈಲು ಮಾರ್ಗದಲ್ಲಿ ಹಳ್ಳಕೊಳ್ಳ, ಭೀಮಾ, ಡೋಣಿ, ಕೃಷ್ಣಾ, ಮಲಪ್ರಭಾ, ನದಿಗಳನ್ನು ದಾಟಲು ಜಿಲ್ಲೆಯಲ್ಲಿ ಕಿರುದಾದ ಸೇತುವೆಗಳು ಹಾಗೂ ಬೃಹತ್‌ದಾದ ಸೇತುವೆಗಳನ್ನು ನಿರ್ಮಿಸಲಾಗಿದೆ. ಈ ಸಮಯದಲ್ಲಿ ಬಾಗಲಕೋಟೆ-ಮುಗಳೊಳ್ಳಿ, ರೈಲುಮಾರ್ಗದಲ್ಲಿ, ಏಂಟರ ಪೂಲು, ಒಂದರ ಪೂಲು, ಮೂರರ ಪೂಲುಗಳು ಅಂದರೆ ರೈಲು ಸೇತುವೆಗಳು ನಿರ್ಮಾಣ ಗೊಂಡವು. ಈ ಏಂಟರ ಪೂಲು(ರೈಲು ಸೇತುವೆ) ಏಳು ಕಮಾನುಗಳು ಒಂದೇ ಅಳತೆಯಿಂದ ಕೂಡಿದ್ದು, ಒಂದು ಕಮಾನು ಚಿಕ್ಕದಾಗಿದೆ. ಅಂದರೆ ಒಟ್ಟು ಏಂಟು ಕಮಾನುಗಳಿಂದ ಲೆಕ್ಕ ಹಾಕಿ ಸ್ಥಳೀಯರು ಈ ರೈಲು ಸೇತುವೆಯನ್ನು ಏಂಟರ(೮) ಪೂಲು ಎಂದು ಇಂದಿಗೂ ಕರೆಯುತ್ತಾರೆ. ಸೇತುವೆಯ ಮಧ್ಯದ ಕಮಾನಿನ ಭಾಗದಲ್ಲಿ ಒಂದು ತೂಬು ಇದ್ದು, ಇಲ್ಲಿ ಒಂದು ಅಪರೂಪದ ಶಿಲ್ಪವಿದೆ. ಸದ್ಯ ಈ ಸೇತುವೆಯು ಆಲಮಟ್ಟಿ ಹಿನ್ನೀರಿನಲ್ಲಿ ಮುಳು ಗಡೆಯಾಗುವುದರಿಂದ ಇದರ ಪಕ್ಕದಲ್ಲಿ ಆಧುನಿಕ ತಂತ್ರಜ್ಞಾನವನ್ನು ಉಪಯೋಗಿ ಬ್ರಾಡಗೇಜ ರೈಲು ಸೇತುವೆಯನ್ನು ಉತ್ತರದಲ್ಲಿ ನಿರ್ಮಿಸಿದ್ದಾರೆ. ಎಂಟರ ಪೂಲು ಎಷ್ಟೇ ಬಾರಿ ನೀರಲ್ಲಿ ಮುಳುಗಿದರೂ ಸಹ ನೀರು ಇಳಿಮುಖವಾದ ನಂತರ ಬೇಸಿಗೆಯಲ್ಲಿ ನೋಡಲು ಸಿಗುತ್ತದೆ. ಕೆಂಪುಶಿಲೆ, ಗಾರೆಗಚ್ಚು, ಸೀಮೆ ಸುಣ್ಣ, ಕಬ್ಬಿಣದ ಸರಳುಗಳನ್ನು ಬಳಸಿಕೊಂಡು ಈ ಸೇತುವೆಯನ್ನು ಕಟ್ಟಿದ್ದಾರೆ. ಬಾಗಲಕೋಟೆಯಿಂದ ಕಾಲ್ನಡಿಗೆಯಲ್ಲಿ ೨ ಕಿ.ಮೀ. ದೂರ ಕ್ರಮಿಸಿದಾಗ ಈ ಸೇತುವೆಯನ್ನು ನೋಡಬಹುದು. ಬ್ರಿಟಿಷರು ಸಾರಿಗೆ, ರೈಲು ಸಂಪರ್ಕ ಕೆಲಸ ಕಾರ್ಯಗಳನ್ನು ಕೈಗೆತ್ತಿಕೊಂಡಾಗ ಹೆಚ್ಚಾಗಿ ಯುರೋಪಿನ ಇಂಜಿನೀಯರು ಗಳನ್ನು ನೇಮಕ ಮಾಡಿಕೊಂಡರು. ಹಾಗಾಗಿ ಬಾಗಲಕೋಟೆ ಜಿಲ್ಲೆಯಲ್ಲಿ ಎಲ್ಲ ರೈಲು ಸೇತುವೆಗಳು ಯುರೋಪಿನ ಶೈಲಿಯಲ್ಲಿರುವುದು ಕಂಡುಬರುತ್ತದೆ. ವರ್ಷದ ಮಳೆಗಾಲದ ತಿಂಗಳಿನಲ್ಲಿ ಈ ಸೇತುವೆಯು ನೀರಲ್ಲಿ ಮುಳುಗಿರುತ್ತದೆ. ಇನ್ನೂ ಬೇಸಿಗೆ ಸಮಯದಲ್ಲಿ ನೀರಿನ ಪ್ರಮಾಣ ಇಳಿಮುಖವಾದ ನಂತರ ಬಾಗಲಕೋಟದಿಂದ ಹೊದ್ಲೂರು ಗ್ರಾಮಕ್ಕೆ ಹೋಗಲು ಮತ್ತು ಜನರು ಕೃಷಿ ಚಟುವಟಿಕೆಗಾಗಿ ಹೊಲಗಳಿಗೆ ಹೋಗಲು ಈ ಏಂಟರಪೂಲು ಸಹಾಯ ಬೇಕಾಗುತ್ತದೆ. ಇವತ್ತಿನವರೆಗೂ ಎಲ್ಲಿಯೂ ಒಂದು ಸಣ್ಣ ಬಿರುಕು ಸಹ ಕಾಣಿಸಿಕೊಳ್ಳದೇ ಎಂಟರ ಪೂಲು ಗಟ್ಟಿಮುಟ್ಟಾಗಿದೆ.

**ಮುಗಳೊಳ್ಳಿ: ರೈಲು ಸೇತುವೆ:** ತಾಲೂಕು ಕೇಂದ್ರ ಬಾಗಲಕೋಟೆಯಿಂದ ಪೂರ್ವಕ್ಕೆ ೧೮ ಕಿ.ಮೀ. ದೂರದಲ್ಲಿದೆ. ಮುಗಳಿನ+ಹಳ್ಳಿ= ಮುಗಳೊಳ್ಳಿ, ಮುಗಳಂತಿರುವ ಹಳ್ಳಿ, ಸಣ್ಣ, ಹಳ್ಳಿ, ಇಲ್ಲಿ ಹೂಗಳು ಹೆಚ್ಚಾಗಿ ಬೆಳೆಯುವುದರಿಂದ ಮುಗಳೊಳ್ಳಿ ಇಲ್ಲಿ 'ಹ' ಕಾರವು ಲೋಪಗೊಂಡು ಸಸ್ಯವಾಚಕ ವಾಗಿದೆ. ಬಾಗಲಕೋಟೆ, ವಿಜಯಪುರ ರೈಲು ಸಂಪರ್ಕದ ಮಧ್ಯವಿರುವ ಹಾಗೂ ನದಿಗೆ ಹೊಂದಿ ಕೊಂಡಿರುವ ಊರು ಇದಾಗಿದೆ. ರೈಲ್ವೆ ಸಂಚಾರಕ್ಕಾಗಿ ಮುಗಳೊಳ್ಳಿ ಹತ್ತಿರ ಒಂದರ(ಪೂಲ್) ಕಮಾನು, ಎರಡರ(ಪೂಲ್) ಕಮಾನ ಎಂಬ ಹೆಸರಿನ ಸೇತುವೆಗಳನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಜನರೇ ಕಮಾನುಗಳ ಲೆಕ್ಕದಲ್ಲಿ ಈ ಸೇತುವೆಗಳಿಗೆ ಹೆಸರಿಟ್ಟಿದ್ದಾರೆ. ಆದರೆ ಈ ಪೂಲ(ಸೇತುವೆ) ನೀರಲ್ಲಿ ಮುಳುಗುವುದರಿಂದ ಇಂದು ಹತ್ತಿರದಲ್ಲಿ ದೊಡ್ಡದಾದ ಸೇತುವೆಯನ್ನು ನಿರ್ಮಿಸಿ ರೈಲ್ವೆ ಸಂಚಾರ ಸುಗಮವಾಗುವಂತೆ ಮಾಡಲಾಗಿದೆ.

ಗದಗ-ಹೂಟಗಿ ರೈಲು ಸಂಪರ್ಕ ಮೀಟರ್ ಗೇಜದಿಂದ ಬ್ರಾಡ್‌ಗೇಜ ಮೇಲ್ದರ್ಜೆ ಗೇರಿದಾಗ ಸಣ್ಣ ಹಾಗೂ ದೊಡ್ಡದಾದ ವಸಾಹತು ಕಾಲದ ರೈಲ್ವೆ ಸೇತುವೆಗಳ ಪಕ್ಕದಲ್ಲಿ ದೊಡ್ಡದಾದ ಸಿಮೆಂಟ್ ಕಾಂಕ್ರೀಟ್ ಸೇತುವೆಗಳು ನಿರ್ಮಾಣಗೊಂಡವು. ಆದರೆ ಬ್ರಿಟಿಷರು ನಿರ್ಮಿಸಿದ ಸೇತುವೆಗಳು ಇಂದಿಗೂ ಗಟ್ಟಿಮುಟ್ಟಾಗಿರುವುದನ್ನು ಬೇಸಿಗೆ ಕಾಲದಲ್ಲಿ ಗೋಚರಿಸುವುದನ್ನು ಗಮನಿಸಿದರೆ ಬ್ರಿಟಿಷರ ತಾಂತ್ರಿಕತೆ, ವಿನ್ಯಾಸ, ಕೆಲಸದಲ್ಲಿ ಪ್ರಾಮಾಣಿಕತೆ ಇತ್ಯಾದಿ ಮಹತ್ವದ ಅಂಶಗಳು ಗಮನಾರ್ಹವಾದುದ್ದಾಗಿವೆ.

**ಹವೇಲಿ:** ಇವತ್ತಿನ ಹವೇಲಿಯು ಮೊದಲನೆಯ ಹೆಸರು 'ಗೋಪಾಳಪುರ' ಎಂದು ಕರೆಯುತ್ತಿದ್ದರು. ಸರ್ ಥಾಮಸ್ ಮನ್ರೋ ಬಾದಾಮಿ ಪ್ರದೇಶವನ್ನು ವಶಪಡಿಸಿಕೊಂಡು ಬಾಗಲಕೋಟೆ, ಗೋಪಾಳಪುರ, ಕಲಾದಗಿ ಪ್ರದೇಶಗಳನ್ನು ಕ್ರಿ.ಶ. ೧೮೧೮ ಮೇ ೧೭ರಂದು ಸಂಪೂರ್ಣ ಬ್ರಿಟಿಷರ ಕೈವಶವಾದವು. ಬಾಗಲಕೋಟೆಯಿಂದ ೨ ಕಿ.ಮೀ. ದೂರದಲ್ಲಿ ಗೋಪಾಳಪುರ, ಘಟಪ್ರಭಾ ನದಿಯ ದಂಡೆಯಲ್ಲಿ ವ್ಯವಸ್ಥಿತ ಸುಂದರ ಪರಿಸರದಲ್ಲಿದೆ. ಗೋಪಾಳಪುರದಲ್ಲಿ ಬ್ರಿಟಿಷರು ತಂಗಲು ಬಂಗಲೆಗಳನ್ನು ನಿರ್ಮಿಸಿದ್ದಾರೆ. ಹವೇಲಿ ಎಂದರೆ ಬೃಹತ್ ಕಟ್ಟಡ, ಮಹಡಿ ಮನೆಗಳೆಂದು ಅರ್ಥ, ಗೋಪಾಳಪುರದಲ್ಲಿ ಬ್ರಿಟಿಷರ ಬಂಗಲೆಗಳು ನಿರ್ಮಾಣವಾದ ಮೇಲೆ ಹವೇಲಿ ಎಂದು ಬ್ರಿಟಿಷರು ಕರೆಯಲು ಆರಂಭಿಸಿದರು. ಹವೇಲಿ ಎಂದು ಹೆಸರು ಇಂದಿಗೂ ಜನರು ಉಚ್ಚರಿಸುತ್ತಿದ್ದಾರೆ. ಬ್ರಿಟಿಷರು ಬಂಗಲೆಗಳು, ಅಧಿಕಾರಿಗಳ ವಾಸದ ಮನೆಗಳು, ಸೈನಿಕರಿಗಾಗಿ ತಂಗಲು ನಿರ್ಮಿಸಿದ ಮನೆಗಳು ಇಂದಿಗೂ ಸಹ ಸುಸಜ್ಜಿತವಾಗಿವೆ. ಬಾಗಲಕೋಟೆಯಿಂದ ಹವೇಲಿಗೆ ಹೋಗಲು ಮಾರ್ಗಸೂಚಿ ಕಲ್ಲಿನಲ್ಲಿ ಕಲೆಕ್ಟರೇಟ್ ಬಂಗ್ಲೆ ೧/೪ ಮೈಲ್ ಎಂದು ಬರೆದು ಮಾರ್ಗಸೂಚಿ ಕಲ್ಲನ್ನು ಹವೇಲಿ ಹತ್ತಿರ ನಿಲ್ಲಿಸಲಾಗಿದೆ. ವಸಾಹತು ಕಾಲದ ಈ ಸ್ಮಾರಕಗಳು ಬಾಗಲಕೋಟೆಯ ತೋಟಗಾರಿಕಾ ವಿಶ್ವವಿದ್ಯಾಲಯದ ಆಡಳಿತ ಕಚೇರಿಗಳಾಗಿ ಕಾರ್ಯನಿರ್ವಹಿಸುತ್ತಿವೆ. ಹವೇಲಿಯ ಬ್ರಿಟಿಷ್ ಬಂಗಲೆ ಅಥವಾ ಸ್ಮಾರಕಗಳು ಇಂದು ಎಷ್ಟೋ ಜನರಿಗೆ ಉದ್ಯೋಗದ ಜೊತೆಗೆ ವಾಸಸ್ಥಾನವಾಗಿ ಭದ್ರವಾದ ನೆಲೆಯಾಗಿವೆ.

ಬ್ರಿಟಿಷರು ಸಮಾಜಮುಖಿಯಾಗಿ ಹಲವಾರು ಕೆಲಸಕಾರ್ಯಗಳನ್ನು ಕೈಗೊಂಡು ಹೊಸ ಯೋಜನೆಗಳನ್ನು ರೂಪಿಸಿ ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ಈ ಸ್ಮಾರಕಗಳು ಜನರಿಗೆ ಇಂದಿಗೂ ಸಹ ಉಪಯುಕ್ತಕಾರಿಯಾಗಿವೆ. ಬ್ರಿಟಿಷರು ತಮಗೆ ಆರ್ಥಿಕವಾಗಿ ಲಾಭಾಂಶ ಹೆಚ್ಚಾಗಿ ಬರುವಂತಹ ಪ್ರದೇಶಗಳಲ್ಲಿ ಹೊಸ ಮಾರ್ಗಗಳನ್ನು ನಿರ್ಮಿಸಿದ್ದಾರೆ. ಬಾಗಲಕೋಟೆ ಪರಿಸರದಲ್ಲಿ ನಿರ್ಮಾಣಗೊಂಡಂತಹ ವಸಾಹತು ಕಾಲದ ಸ್ಮಾರಕಗಳ ನಿರ್ಮಾಣದ ಹಿನ್ನೆಲೆ, ಗುರಿ ಮತ್ತು ಉದ್ದೇಶ, ಕಚ್ಚಾ ಸಾಮಗ್ರಿಗಳ ಬಳಕೆಯ ಕೌಶಲ್ಯತೆ, ವಾಸ್ತುಶೈಲಿ, ವಿನ್ಯಾಸ, ಮಾದರಿ, ತಾಂತ್ರಿಕತೆ, ಸ್ಥಳದ ಆಯ್ಕೆ, ತಂತ್ರಜ್ಞರು ಮತ್ತು ಸ್ಥಳೀಯ ಶ್ರಮಿಕರ ಪಾತ್ರ ಈ ಎಲ್ಲಾ ಅಂಶಗಳನ್ನು ಸಂಶೋಧನೆಯ ಮೂಲಕವಾಗಿ ಕೂಲಂಕಷವಾಗಿ ತಿಳಿದುಕೊಂಡು ಇಂದಿನ ಕಟ್ಟಡಗಳ ನಿರ್ಮಾಣದಲ್ಲಿ ವಸಾಹತುಕಾಲದ ತಾಂತ್ರಿಕತೆ ಅಳವಡಿಸಿಕೊಳ್ಳುವುದು ಸೂಕ್ತವೆನಿಸುತ್ತದೆ. ವಸಾಹತು ಕಾಲದ ಸ್ಮಾರಕಗಳನ್ನು ಸಂರಕ್ಷಿಸಿದರೆ ಮುಂದಿನ ಜನಾಂಗಕ್ಕೆ ಸ್ಮಾರಕಗಳನ್ನು ನೋಡುವ ಭಾಗ್ಯ ದೊರೆತಂತಾಗಿ ಹೊಸ ಹೊಸ ಸಂಶೋಧನೆ, ಅವಿಷ್ಕಾರ ಕೈಗೊಳ್ಳಲು ಸ್ಮಾರಕಗಳು ಸಹಾಯಕಾರಿಯಾಗುತ್ತವೆ. "ಚರಿತ್ರೆಯನ್ನು ತಿಳಿದುಕೊಂಡವರು ಮಾತ್ರ ಹೊಸ ಚರಿತ್ರೆಯನ್ನು ರೂಪಿಸಬಲ್ಲರು" ಎಂಬ ನಾಣ್ನುಡಿಯಂತೆ ಪ್ರತಿಯೊಬ್ಬರು ಇಂದು ನಡೆದುಕೊಳ್ಳುವುದು ಅನಿವಾರ್ಯ ವಾಗಿ ಚಾಚು ತಪ್ಪದೇ ಪಾಲಿಸಬೇಕಾಗುತ್ತದೆ.

[ಈ ಪ್ರಬಂಧ ಸಿದ್ಧಪಡಿಸಲು ಮಾರ್ಗದರ್ಶನ ಮಾಡಿದ ಡಾ.ವಾಸುದೇವ ಬಡಿಗೇರ ಗುರುಗಳಿಗೆ, ಡಾ.ಶೀಲಾಕಾಂತ ಪತ್ತಾರ ಗುರುಗಳಿಗೆ, ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಗುಳೇದಗುಡ್ಡ ಬಾಸೆಲ್ ಮಿಷನ್ ಪ್ರಾಥಮಿಕ ಶಾಲೆಯ ಮುಖ್ಯ ಗುರುಮಾತೆಯರಾದ ಶ್ರೀಮತಿ ಶಾಂತಾ ಎ. ಕರಡಿಗುಡ್ಡ ಅವರಿಗೆ, ಶ್ರೀ ಇಷ್ಟಲಿಂಗ ಶಿರಸಿ, ಸಹೋದರರಾದ ಭುಜಂಗ, ಶ್ರೀಕಾಂತ, ವಿಠ್ಠಲ, ಕೃಷ್ಣಾ, ಬಸವರಾಜ, ದುರುಗಣ್ಣ ಇವರೆಲ್ಲರನ್ನೂ ಪ್ರೀತಿಯಿಂದ ನೆನೆಯುತ್ತೇನೆ.]



## ಆಕರ ಗ್ರಂಥಗಳು


೧. ಮುನಿಸ್ವಾಮಿ ಆರ್.(ಸಂ). ೧೯೯೯, ಬಿಜಾಪುರ ಜಿಲ್ಲೆ (ಬಾಗಲಕೋಟೆ ಜಿಲ್ಲೆಯೂ ಸೇರಿದಂತೆ), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೨. ದೇವರಕೊಂಡಾರೆಡ್ಡಿ(ಸಂ.), ೨೦೦೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೯, ಬಾಗಲಕೋಟೆ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೩. ವಿಜಯಕುಮಾರ ಕಟಗಿಹಳ್ಳಿಮಠ(ಸಂ), ೨೦೧೪, ಬಾಗಲಕೋಟೆ ಜಿಲ್ಲಾ ಸಂಸ್ಕೃತಿ, ಬಾಗಲಕೋಟ ಜಿಲ್ಲಾ ೪ನೇ ಕನ್ನಡ ಸಾಹಿತ್ಯ ಸಮ್ಮೇಳನ, ಸ್ವಾಗತ ಸಮಿತಿ, ಮುಧೋಳ.

೪. ಗೋಪಾಲ್ ಆರ್.(ಸಂ)., ೨೦೧೧, ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೫. ನಂದಿಮಠ ಎಸ್.ಸಿ., ೨೦೦೯, ಕನ್ನಡ ನಾಡಿನ ಚರಿತ್ರೆ(ಭಾಗ-೨), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬. ಸ್ವಾಮಿ ಐ.ಅಂತಪ್ಪ, ೨೦೦೧, ಉತ್ತರ ಕರ್ನಾಟಕದಲ್ಲಿ ಕ್ರೈಸ್ತ ಧರ್ಮದ ಉಗಮ(೧೮೦೦ ಕ್ಕೂ ಹಿಂದೆ), ಕಥೋಲಿಕ್ ಕ್ರೈಸ್ತರ ಕನ್ನಡ ಸಾಹಿತ್ಯ ಸಂಘ, ಬೆಂಗಳೂರು.

# ೧೧೨

# ಮೈಸೂರು ಒಡೆಯರ ಸೈನ್ಯದಲ್ಲಿ ಜಿಲ್ಲಾ ಕಛೇರಿಯ ಪಾತ್ರ

ಹೆಚ್.ಎ. ನಾಗೇಶ*

ಕರ್ನಾಟಕದ ಇತಿಹಾಸದಲ್ಲಿ ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಮೈಸೂರು ಒಡೆಯರು ತಮ್ಮದೇ ಆದ ರಾಜಕೀಯ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಮುನ್ನಡೆಸಿಕೊಂಡು ಬಂದಿದ್ದಾರೆ. ಪ್ರಮುಖವಾಗಿ ರಾಜಒಡೆಯರಿಂದ ಹಿಡಿದು ಜಯಚಾಮರಾಜೇಂದ್ರ ಒಡೆಯರ್ ಅವರ ಕಾಲದವರೆಗೆ ಮೈಸೂರು ಒಡೆಯರ ಕಾಲದ ಸೈನ್ಯವು ತನ್ನದೇ ಆದ ಸ್ಥಾನಮಾನವನ್ನು ಹೊಂದಿದ್ದು ಹಲವಾರು ಪ್ರಯೋಗಗಳಿಗೆ ಒಳಗಾಯಿತು. ಪ್ರಮುಖವಾಗಿ ಚಿಕ್ಕದೇವರಾಜ ಒಡೆಯರ ಕಾಲಾವಧಿಯಿಂದಲೇ ಸೈನ್ಯದಲ್ಲಿ ವಿವಿಧ ಸುಧಾರಣೆಗಳಿಗೆ ಒಳಪಟ್ಟು ಸೈನ್ಯಾಡಳಿತವನ್ನು ವಿಕೇಂದ್ರೀಕರಿಸಲು ಹಲವಾರು ಪ್ರತ್ಯೇಕವಾದ ಇಲಾಖೆಗಳನ್ನು ಸ್ಥಾಪಿಸಲಾಯಿತು. ಅದರಲ್ಲಿ ಜಿಲ್ಲಾ ಕಛೇರಿಯು ಕೂಡ ಒಂದಾಗಿದ್ದು ಆದರೆ ಅದಕ್ಕೆ ಹೈದರ್ ಅಲಿಯಿಂದ ಒಂದು ನಿರ್ಧಿಷ್ಟವಾದ ರೂಪವನ್ನು ಪಡೆದುಕೊಂಡಿತು. ಮೈಸೂರು ಒಡೆಯರು ತಮ್ಮ ಸೈನ್ಯದ ನಿರ್ವಹಣೆಗಾಗಿ ಸ್ಥಾಪಿಸಿದ ಈ ಪ್ರತ್ಯೇಕ ಸೈನಿಕ ಇಲಾಖೆಯಾದ ಜಿಲ್ಲಾ ಕಛೇರಿಯ ಪಾತ್ರ ಮತ್ತು ಅದರ ಕಾರ್ಯವಿಧಾನಗಳನ್ನು ತಿಳಿಸುವುದೇ ಈ ಲೇಖನದ ಉದ್ಧೇಶವಾಗಿದೆ.

ಜಿಲ್ಲಾ ಕಛೇರಿಯು ಮೈಸೂರಿನ ಸೈನ್ಯದಲ್ಲಿನ ಅಧಿಕಾರವನ್ನು ನಿರ್ವಹಿಸುವ ಮತ್ತೊಂದು ಪ್ರಮುಖ ಇಲಾಖೆಯಾಗಿದ್ದಿತು. ಈ ಜಿಲ್ಲಾ ಕಛೇರಿಯ ಅಧೀನದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದ ಸೈನಿಕರು ಕಿಲ್ಲೆ ಕಛೇರಿಯ ಮಾದರಿಯಲ್ಲಿಯೇ ಕರ್ತವ್ಯವನ್ನು ನಿರ್ವಹಿಸುತ್ತಿದ್ದರು. ಅಂದರೆ ಈ ಇಲಾಖೆಯು ಎಲ್ಲಾ ಕಿಲ್ಲೆಕಛೇರಿಗಳ ಆಡಳಿತವನ್ನು ನೋಡಿಕೊಳ್ಳುವುದರ ಜೊತೆಗೆ ಇಲ್ಲಿ ಸೈನಿಕರ ಕರ್ತವ್ಯಗಳು ಮತ್ತು ಸೇವೆಯನ್ನು ಕುರಿತು ಕಾನೂನುಗಳನ್ನು ರೂಪಿಸಲಾಗುತ್ತಿತ್ತು. ಈ ಕಾನೂನುಗಳು ಸೈನ್ಯಕ್ಕೆ ಸೇರಿದ್ದ ಸೈನಿಕರು ತಪ್ಪದೆ ಪಾಲಿಸಬೇಕಿತ್ತು. ಅವುಗಳೆಂದರೆ ಸೈನಿಕರು ರಜಾಹಾಕದೆ ತಪ್ಪಿಸಿಕೊಂಡರೆ ದಿನಕ್ಕೆ ೪ ಆಣೆಗಳ ವೇತನವನ್ನು ಕಡಿತಗೊಳಿಸಲಾಗುತ್ತಿತ್ತು. ಅಲ್ಲದೆ ಒಂದು ತಿಂಗಳಿನಲ್ಲಿ ಈ ಗೈರುಹಾಜರಾತಿಗಳು ಹೆಚ್ಚಾಗಿದ್ದರೆ ಮುಂದಿನ ೬ ತಿಂಗಳುಗಳ ಕಾಲ ಎಲ್ಲಾ ರಜಾದಿನಗಳು ಮತ್ತೆ ಸೇವಾ ಸೌಲಭ್ಯಗಳನ್ನು ಕಡಿತಗೊಳಿಸುವುದರ ಜೊತೆಗೆ ಹೆಚ್ಚುವರಿಯಾಗಿ ಅವರಿಗೆ ದೊರೆಯುತ್ತಿದ್ದ ಸೌಲಭ್ಯಗಳನ್ನು ನಿಲ್ಲಿಸುವುದು. ಉದಾಸೀನ ಮನೋಭಾವವನ್ನು ಹೊಂದಿದ್ದರೆ ಮತ್ತು ಕುದುರೆಗಳಿಗೆ ಮತ್ತು ಅವುಗಳ ಮರಿಗಳಿಗೆ ಹೊಡೆಯುವುದು ಪ್ರವೇಶದ್ವಾರದಲ್ಲಿ ಪ್ರಜ್ಞೆಯಿಲ್ಲದಂತೆ ನಿಲ್ಲುವುದು ಕೂಡ ದಂಡಾರ್ಹವಾದವುಗಳು. ಕಮಾಂಡಿಂಗ್ ಅಧಿಕಾರಿಯು ದೂರನ್ನು ಸ್ವೀಕರಿಸಿದ ಕೂಡಲೇ ಪರಿಸ್ಥಿತಿಗೆ ಅನುಗುಣವಾಗಿ ಕಾವಲಿಗಾಗಿಯೇ ಅಧಿಕಾರಿಗಳನ್ನು ನೇಮಿಸಿ ವಿಚಾರಣೆಗೆ ಹಾಜರುಪಡಿಸಲಾಗುತ್ತಿತ್ತು. ಸರ್ಕಾರವು ಕಾನೂನುಗಳ ರಕ್ಷಣೆಗಾಗಿಯೇ ನೇಮಕವಾಗುತ್ತಿತ್ತು. ಬಂಧನಕ್ಕೆ ಒಳಗಾದ ವ್ಯಕ್ತಿಯನ್ನು ಕಮಾಂಡಿಂಗ್ ಅಧಿಕಾರಿಯು ಬಿಡುಗಡೆಗೊಳಿಸುವ ಅಧಿಕಾರ ಸರ್ಕಾರಕ್ಕೆ ಇರಲಿಲ್ಲ. ಅಲ್ಲದೆ ಕಮಾಂಡಿಂಗ್ ಅಧಿಕಾರಿಯು ಬಂಧನಕ್ಕೊಳಗಾದ ವ್ಯಕ್ತಿಯನ್ನು ಬಿಡುಗಡೆಗೊಳಿಸುವ ಅಧಿಕಾರವನ್ನು ಬಂಧನಕ್ಕೊಳಗಾದ ವ್ಯಕ್ತಿಯನ್ನು ಬಿಡುಗಡೆಗೊಳಿಸುವ ಅಧಿಕಾರವನ್ನು ಸಹ ಹೊಂದಿರಲಿಲ್ಲ.[೧] ಅಲ್ಲದೆ ಕಮಾಂಡಿಂಗ್ ಅಧಿಕಾರಿಗೆ ಲ್ಯಾನ್ಸ್ (ಭಲ್ಲೆಗಳನ್ನು ಹೊಂದಿದ್ದ ಅಶ್ವಾರೋಹಿಪಡೆ) ಪಡೆಯದ ದಫೇದಾರರಿಗೆ ಇವುಗಳನ್ನು ನೋಡಿಕೊಳ್ಳುವ ಅಧಿಕಾರವನ್ನು ನೀಡಲಾಗುತ್ತಿತ್ತು. ಉನ್ನತ ಹಂತದ ಅಧಿಕಾರಿಗಳಿಗೆ ಕೇವಲ ಚಿಕ್ಕ ಪ್ರಮಾಣದ ಶಿಕ್ಷೆಗಳನ್ನು ನೀಡಲಾಗುತ್ತಿತ್ತು. ಅದರಲ್ಲಿ ಪ್ರಮುಖವಾಗಿ ವಾಗ್ದಂಡನೆ, ವೇತನ ಕಡಿತ ಅಷ್ಟೇ ಅಲ್ಲದೆ ಮುಂಬಡ್ತಿಗಳನ್ನು ತಡೆಹಿಡಿಯುವಂತಹ ಶಿಕ್ಷೆಗಳಿಗೆ ಒಳಗಾಗುತ್ತಿದ್ದರು. ಒಂದು ವೇಳೆ ಶಿಕ್ಷೆಗೆ ಗುರಿಪಡಿಸದಿದ್ದರೆ ಶಿಕ್ಷಾರ್ಹ ಅಪರಾಧಗಳನ್ನು ಎಸಗಿದ್ದರೆ ಆ ಸೈನಿಕರನ್ನು ಕಮಾಂಡಿಂಗ್ ಅಧಿಕಾರಿಯ ಮುಂದೆ ಹಾಜರುಪಡಿಸಲಾಗುತ್ತಿತ್ತು. ಕಮಾಂಡಿಂಗ್ ಅಧಿಕಾರಿಯು ಇಚ್ಚಿಸಿದರೆ ಮಾತ್ರ ಶಿಕ್ಷೆಯನ್ನು ಸರ್ಕಾರದ ಹಸ್ತಕ್ಷೇಪವಿಲ್ಲದೆ ಕಡಿತಗೊಳಿಸಬಹುದಿತ್ತು. ಈ ವಿಚಾರಣೆಯ ವೇಳೆಯಲ್ಲಿ ಮುಖ್ಯಕಮಾಂಡರ್, ವಿಭಾಗೀಯ ಕಮಾಂಡರ್, ಟ್ರೂಪ್ ಕಮಾಂಡರ್, ಟ್ರೂಪ್ ದಫೇದಾರ ಮತ್ತು ಸೆಲೆಕ್ಷನ್ ಕಮಾಂಡರ್, ವಿಭಾಗೀಯ ದಫೇದಾರ್‌ಗಳಲ್ಲಿ ಯಾರಾದರೂ ಒಬ್ಬರು ಹಾಜರಿರಲೇಬೇಕಿತ್ತು. ಇವರ ತಪ್ಪುಗಳಿಗೆ ದಾಖಲು ಪುಸ್ತಕಗಳಿದ್ದು, ಪ್ರತಿಯೊಂದು ಕೃತ್ಯಗಳೂ ಸಹ ದಾಖಲಾಗುತ್ತಿದ್ದವು.

* ಪಿಹೆಚ್‌ಡಿ ಸಂಶೋಧಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬, ಮೊ. ೯೯೮೬೧೬೩೩೨

ಜೊತೆಗೆ ಮೂರು ದಿನಗಳವರೆಗೆ ಅಪರಾಧಿಗಳನ್ನು ಕೆಲಸದಿಂದ ವಜಾಗೊಳಿಸಿ ಅವರ ಹದಿನೈದು ದಿನಗಳವರೆಗಿನ ವೇತನವನ್ನು ದಿನದ ಆಧಾರದ ಮೇಲೆ ಕಡಿತಗೊಳಿಸಲಾಗುತ್ತಿತ್ತು. ದಂಡವು ಮಾಸಿಕವೇತನದ ಅರ್ಧದಷ್ಟಿದ್ದು ಅದಕ್ಕಿಂತ ಹೆಚ್ಚಿನ ವೇತನವನ್ನು ದಂಡವನ್ನಾಗಿ ಕಡಿತಗೊಳಿಸುತ್ತಿರಲಿಲ್ಲ. ಜೊತೆಗೆ ೧೦ ದಿನಗಳ ಕಾಲ ಬಂಧನದಿಂದ ಹೊರ ತಾಲೀಮುಗಳನ್ನು ನಡೆಸಬೇಕಿದ್ದು, ಅರ್ಧಗಂಟೆಗೂ ಮೀರದಂತೆ ಅಲುಗಾಡದೆ ನಿಲ್ಲಬೇಕಿತ್ತು. ಅಲ್ಲದೆ ಹೆಚ್ಚುಕಾಲ ಪರಿವೀಕ್ಷಣೆಗಾಗಿ ಸಮವಸ್ತ್ರಗಳನ್ನು ಕವಾಯತಿಗೆ ತಡಿಗಳನ್ನು ತರಬೇಕಿತ್ತು. ಒಂದುಗಂಟೆಗೂ ಹೆಚ್ಚಿನ ಅವಧಿಯನ್ನು ಮೂರು ದಿನಗಳ ಕಾಲ ಮೀರದಂತೆ ನಡೆಸುವುದಾಗಿತ್ತು.

ರಿಸಲ್ದಾರರು ಮತ್ತು ಜಮಾದಾರರು ಸೈನ್ಯದ ಕವಾಯತಿಗೆ ಸೂಚನೆ ನೀಡುವುದು. ಅದರ ಪ್ರಕಾರವಾಗಿ ಏಳುದಿನಗಳ ಕಾಲ ಬಂಧನದಿಂದ ಹೊರಗೆ ಬಿಡುತ್ತಿರಲಿಲ್ಲ. ಕಮಾಂಡಿಂಗ್ ಅಧಿಕಾರಿಯು ಅಪೇಕ್ಷಣೀಯವೆನಿಸಿದ ಮತ್ತು ಅವಶ್ಯಕವಾದಾಗ ಮತ್ತು ಸಂಬಂಧಿಸಿದ ಅಧಿಕಾರಿಗೆ ಪ್ರತ್ಯೇಕವಾದ ವಿಧಿಸುವ ಮೂಲಕ ಮತ್ತು ಸಣ್ಣ ಪ್ರಮಾಣದ ಶಿಕ್ಷೆಗಳನ್ನು ನೀಡುವ ಮೂಲಕ ಅವರಿಗೆ ಶಿಕ್ಷಾರ್ಹವಾದ ದಂಡನೆಗಳನ್ನು ವಿಧಿಸುತ್ತಿದ್ದರು. ಈ ಎಲ್ಲಾ ರೀತಿಯ ತೀರ್ಮಾನಗಳು ಸಹ ಸೇನಾ ತುಕಡಿಯ ಕಮಾಂಡರ್‌ಗಳು ಅಥವಾ ವಿಭಾಗೀಯ ಕಮಾಂಡರ್‌ಗಳು ಬರವಣಿಗೆಯ ಮೂಲಕವೇ ನೀಡಬೇಕಿತ್ತು. ನಂತರ ಅವುಗಳು ಸಾಮಾನ್ಯ ಕರ್ತವ್ಯಗಳ ದಾಖಲೆ ಪುಸ್ತಕದಲ್ಲಿ ದಾಖಲಿಸಿದ ನಂತರ ಕಮಾಂಡಿಂಗ್ ಅಧಿಕಾರಿಗೆ ಸಲ್ಲಿಸಲ್ಪಡುತ್ತಿದ್ದವು. Power of Commanding ಇವರು ಮುಖ್ಯ ಕಮಿಷನರಿಂದ ನೇಮಕಗೊಳ್ಳುತ್ತಿದ್ದರು. ಹಾಗೂ ನಿಯೋಜಿತವಲ್ಲದ ಅಧಿಕಾರಿಗಳಾಗಿದ್ದು, ವಾಗ್ದಂಡನೆ ಅಧಿಕಾರದಿಂದ ಬಿಡುಗಡೆ ಹಿಂಬಡ್ತಿ ೨೮ ದಿನ ಕಾರಾಗೃಹವಾಸ ಅಥವಾ ಕಠಿಣ ಶಿಕ್ಷೆಯಲ್ಲಿದ್ದ ಆದರೆ ನಿಯೋಜಿತವಲ್ಲದ ಅಧಿಕಾರಿಗೆ ಕಾರಾಗೃಹ ವಾಸವನ್ನು ವಿಧಿಸುವ ಮೊದಲು ಆತನಿಗೆ ಹಿಂಬಡ್ತಿಯನ್ನು ನೀಡಿ ಶಿಕ್ಷೆಗೆ ಒಳಪಡಿಸುವುದಾಗಿತ್ತು. ಸವಾರರು ಚಾಲಕರು ಮತ್ತು ಉಳಿದ ಸಿಪಾಯಿಗಳಿಗೆ ಅದೇ ರೀತಿಯ ಶಿಕ್ಷೆಯ ಜೊತೆಗೆ ಐದು ವರ್ಷಗಳ ಸೇವಾವಧಿಯನ್ನು ಕಳೆದುಕೊಳ್ಳುತ್ತಿದ್ದರು. ಅಧಿಕಾರಿಯು ವಾಗ್ದಂಡನೆಗೆ ಒಳಪಡದೇ ಆದರೆ ಮುಖ್ಯ ಕಮೀಷನರಿಂದ ಶಿಕ್ಷಿಸಲ್ಪಡುತ್ತಿದ್ದನು. ಒಂದು ವೇಳೆ ಈ ಶಿಕ್ಷೆಗಳು ಅಪರಾಧಕ್ಕಾಗಿ ಅಧಿಕಾರಿಗಳು ಅಥವಾ ಸೈನಿಕರಿಗೆ ನೀಡಿದ್ದು ಸಮರ್ಥನೀಯವಲ್ಲದಿದ್ದರೆ ಸರ್ಕಾರಕ್ಕೆ ವರದಿಯನ್ನು ಒಪ್ಪಿಸಲೇಬೇಕಿತ್ತು. ಅಲ್ಲದೆ ಅಧಿಕಾರಿಯನ್ನು ಆರೋಪಿ ಎಂದು ತೀರ್ಮಾನಿಸುವ ಅಧಿಕಾರವು ಕೇವಲ ಮುಖ್ಯ ಕಮಾಂಡೆಂಟ್‌ಗೆ ಮಾತ್ರ ಇರುತ್ತಿತ್ತು. ಅಲ್ಲದೆ ತೃಪ್ತಿಕರವಾದಂತಹ ಕಡಿಮೆ ಪ್ರಮಾಣದ ಶಿಕ್ಷೆಯನ್ನು ಕೂಡ ಪ್ರಕಟಿಸಲಾಗುತ್ತಿತ್ತು. ತಪ್ಪು ಮಾಡಿದ್ದು ಅಥವಾ ಅಧಕ್ಷತೆಯಿಂದ ಅಧಿಕಾರವನ್ನು ದುರುಪಯೋಗ ಪಡಿಸಿಕೊಳ್ಳುವ ಆಸೆಯನ್ನು ಹೊಂದಿದ್ದಾರೆ. ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವ ಸಲುವಾಗಿ ಹಾಜರಿರಬೇಕಿತ್ತು. ಮುಖ್ಯ ಕಮಾಂಡೆಂಟನು ಉದ್ಯೋಗದಿಂದ ಯಾವುದೇ ವ್ಯಕ್ತಿಯನ್ನು ತೆಗೆದು ಹಾಕುವ ವಜಾಮಾಡುವ ಅಧಿಕಾರವು ಅವನ ಹಿಂದಿನ ಸೇವಾವಧಿಯಲ್ಲಿ ಸೇರಿಸಲ್ಪಟ್ಟು ಬ್ರಿಟಿಷರ ಇಂಪೀರಿಯಲ್ ಸರ್ವೀಸ್ ಕಂಪನಿಗೆ ಸೇರಿತ್ತು.[೨]

ವಿಚಾರಣಾ ಅಧಿಕಾರ: ಒಬ್ಬ ಅಧಿಕಾರಿಯ ಅಥವಾ ನಿಯೋಜಿತವಲ್ಲದ ಅಧಿಕಾರಿಯ ವಿರುದ್ಧವಾಗಿ ಒಂದು ಆಪಾದನೆಯು ಬಂದರೆ ಅಥವಾ ಗಂಭೀರ ಸ್ವರೂಪದ್ದಾದ ಅಥವಾ ಗಂಭೀರವಾದ ಕೃತ್ಯದಲ್ಲಿ ಪಾಲ್ಗೊಂಡರೆ ಉದಾಹರಣೆ ಕೊಲೆ, ದರೋಡೆ, ಕಳ್ಳತನಗಳು ಕೂಡಲೇ ಮುಖ್ಯ ಕಮಾಂಡೆಂಟನಿಗೆ ವರದಿ ಮಾಡಬೇಕಿದ್ದಿತು. ಯಾವುದೇ ಮೊಕದ್ದಮೆಯನ್ನು ೪೮ ಗಂಟೆಗಳ ಒಳಗೆ ತೀರ್ಪಿಗೆ ಅವಕಾಶವನ್ನು ಕಲ್ಪಿಸುವಂತೆ ಮಾಡುವ ಹಾಗೂ ಸ್ವತಃ ತಾವೇ ವಿಚಾರಣೆ ಮಾಡುವ ಅಧಿಕಾರವು ಮುಖ್ಯ ಕಮಾಂಡೆಂಟಿಗೆ ಸೇರಿದ್ದಿತು. ಈ ಮೊಕದ್ದಮೆಯಲ್ಲಿ ಶಿಕ್ಷೆಯನ್ನು ಪ್ರಕಟಿಸುವ ಅಥವಾ ಮೊಕದ್ದಮೆಯನ್ನು ವರ್ಗಾವಣೆ ಮಾಡುವ ವಿಸರ್ಜಿಸುವ ಅಧಿಕಾರಿಯಾಗಿ ನೇಮಕವಾಗುತ್ತಿದ್ದ ವಿಶೇಷ ಅಧಿಕಾರವಿದ್ದಿತು. ನಾಲ್ಕು ಗಂಟೆಗಳಿಗಿಂತ ಹೆಚ್ಚಿಲ್ಲದಂತೆ ಅಂದರೆ ಭಾನುವಾರ ಮತ್ತು ವಾರಾಂತ್ಯದ ರಜಾದಿನಗಳನ್ನು ಹೊರತುಪಡಿಸಿ ಮೊಕದ್ದಮೆಯ ಸ್ವೀಕೃತಿಗೆ ಸಂಬಂಧಿಸಿದಂತೆ ಮಧ್ಯ ರಜೆ ಹಾಗೂ ಕಾಲಕಳೆಯದಂತೆ ಚೀಫ್ ಕಮಾಂಡೆಂಟ್ ಎಚ್ಚರವಹಿಸುವುದು,[೩] ಮೊಕದ್ದಮೆಯ ಸಂಪೂರ್ಣ ಜವಾಬ್ದಾರಿಯನ್ನು ಮುಖ್ಯ ಕಮಾಂಡೆಂಟ್ ಅಧಿಕಾರಿಯು ವಹಿಸಿಕೊಳ್ಳುವುದು. ಇದು ಸಂಪೂರ್ಣವಾಗಿ ವಿಚಾರಣೆಗೆ ಒಳಪಡಿಸುವುದು. ಈ ಮೇಲಿನ ಎಲ್ಲಾ ಶಿಕ್ಷೆಗಳು ಮುಖ್ಯ ಕಮಾಂಡೆಂಟ್‌ನಿಂದ ಪ್ರಕಟಗೊಳ್ಳುತ್ತಿದ್ದು ಸಾಮಾನ್ಯ ಕರ್ತವ್ಯ ಲೋಪವು ದಾಖಲೆಗಳ ಪುಸ್ತಕದಲ್ಲಿ ನೋಂದಣಿಯಾಗುತ್ತಿತ್ತು.

ಅರಮನೆಗೆ ಅಗತ್ಯವಾಗಿದ್ದ ಕಡೂರು, ಮೈಸೂರು, ಬೆಂಗಳೂರು, ಚಿತ್ರದುರ್ಗ ಜಿಲ್ಲೆಗಳಿಂದ ಚಿರತೆಯ ಚರ್ಮವನ್ನು ಆಮದು ಮಾಡಿಕೊಳ್ಳಲು ಆದೇಶವನ್ನು ಹೊರಡಿಸಲಾಯಿತು. ಏಕೆಂದರೆ ಬೇಟೆಯಲ್ಲಿ ಕೊಂದ ಚಿರತೆಗಳು ಕ್ರಮವಾಗಿ ಕಡೂರು ಜಿಲ್ಲೆಯಲ್ಲಿ ೩, ಮೈಸೂರು ೪, ಬೆಂಗಳೂರು ೩, ಚಿತ್ರದುರ್ಗ ಜಿಲ್ಲೆಯಲ್ಲಿ ೪ರಂತೆ ಬೇಟೆಯಾಡಿ ಕೊಲ್ಲಲಾಗಿತ್ತು. ಅವುಗಳ ಚರ್ಮವನ್ನು ಅರಮನೆಯಲ್ಲಿ ಟ್ರೋಫಿಗಳನ್ನಾಗಿ ಮಾಡಲು ಅರಮನೆಗೆ ಸಾಗಿಸುವಂತೆ ಆದೇಶವನ್ನು

ಹೊರಡಿಸಲಾಯಿತು. ಇವುಗಳು ಅರಮನೆಯ ಅಂಗರಕ್ಷಕ ಪಡೆಯ ಮುಖಾಂತರವಾಗಿ ಅರಮನೆಗೆ ತಲುಪುವಂತೆ ಮಾಡಲಾಗಿತ್ತು.[೪] ಕ್ರಿ.ಶ. ೧೯೧೪ರ ಜೂನ್ ೨೮ರಂದು ಅರಮನೆಯ ಬಾಡಿಗಾರ್ಡ್ ಇಲಾಖಾ ಕಮಾಂಡರಿಗೆ ಶಿಫಾರಸು ಮಾಡಿಂತೆ ತಿಳಿದು ಬರುವ ವಿಚಾರವೇನೆಂದರೆ ಹತ್ತು ಜನ ಸೈನಿಕರು ಅದರಲ್ಲಿ ಮೂರು ಜನ ಹವಾಲ್ದಾರರು ಒಬ್ಬ ನಾಯಕ ಮತ್ತು ಉಳಿದ ಆರು ಜನ ಸವಾರರು ಬೆಂಗಳೂರಿಗೆ ಸಿಗ್ನಲಿಂಗ್ ಕಲಿಯಲು ಹೋಗಿ ಪೂರ್ಣಗೊಂಡ ನಂತರ ಮೈಸೂರಿಗೆ ವಾಪಸ್ಸಾಗಿದ್ದರು. ಇದರ ವೆಚ್ಚ ರೈಲ್ವೆ ಟಿಕೆಟ್ ಕೂಡ ಸೇರಿ ಎಲ್ಲರಿಗೂ ಜಮಾ ಆದ ಮೊತ್ತ ೨೮ ರೂಪಾಯಿಗಳು.[೫] ಇದು ಸೈನಿಕರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಪ್ರಯಾಣ ಮಾಡುವ ಸಂದರ್ಭದಲ್ಲಿ ಅವರಿಗೆ ನೀಡಲಾಗುತ್ತಿದ್ದ ಹಣವು ಅವರ ವೇತನದೊಂದಿಗೆ ಸೇರಿಸಲಾಗುತ್ತಿತ್ತು.

ಕ್ರಿ.ಶ. ೧೯೧೩ರ ಅರಮನೆಯ ಮಿಲಿಟರಿ ಬಜೆಟನ್ನು ಕ್ರಿ.ಶ. ೧೯೧೩-೧೪ ಮತ್ತು ಕ್ರಿ.ಶ. ೧೯೨೦-೨೧ರಲ್ಲಿನ ಮೊತ್ತಕ್ಕೆ ಏರಿಸಲಾಯಿತು. ಅದರ ಪ್ರಕಾರವಾಗಿ ಕ್ರಿ.ಶ. ೧೯೧೩-೧೪ರಲ್ಲಿ ಮಿಲಿಟರಿಗೆ ಎತ್ತಿಟ್ಟಿದ್ದ ಒಟ್ಟು ಮೊತ್ತ ೮೮,೮೮೦ರೂಗಳಾದರೆ ಸಾರಿಗೆಗಾಗಿ ೧೧,೦೧೮ ರೂ.ಗಳು ಸೈನಿಕರ ಆಯುಧ ಮತ್ತಿತರ ಕಿಟ್‌ಗಳನ್ನು ಪ್ರತಿಯೊಬ್ಬರಿಗೆ ಒಂದರಂತೆ ಒದಗಿಸಲಾಗುತ್ತಿತ್ತು. ಇವುಗಳ ಒಟ್ಟು ಮೊತ್ತ ೧೫,೩೦೮ ರೂ.ಗಳು, ಸಾದಿಲ್ವಾರು ವೆಚ್ಚ ೩,೨೭೧ ರೂ.ಗಳು, ನಿವೃತ್ತಿ ವೇತನ ೫೧೩೨, ಆಸ್ಪತ್ರೆ ಖರ್ಚು ೫೨೨೪ ಒಟ್ಟಾರೆ ೧,೨೮,೮೩೭ ರೂ.ಗಳಾಗಿದ್ದವು. ಆದರೆ ಇದೇ ಖರ್ಚನ್ನು ಕ್ರಿ.ಶ. ೧೯೨೦-೨೧ರ ಬಜೆಟ್‌ನಲ್ಲಿ ಈ ಮೊತ್ತವನ್ನು ೨,೦೪,೮೭೧ ರೂಪಾಯಿಗಳಿಗೆ ಏರಿಸಲಾಯಿತು.[೬] ಏಕೆಂದರೆ ಈ ಸಂದರ್ಭಧಲ್ಲಿ ಪ್ರಥಮ ಮಹಾಯುದ್ಧದ ತರುವಾಯ ಜೀವನ ನಿರ್ವಹಣಾ ವೆಚ್ಚ ಹೆಚ್ಚಾಗಿದ್ದೇ ಈ ಬಜೆಟ್‌ನ ಮೊತ್ತವನ್ನು ಏರಿಸುವ ಪ್ರಮುಖ ಕಾರಣವಾಗಿದ್ದಿತು. ಈ ಬಜೆಟ್‌ನಲ್ಲಿ ಅರಮನೆ ಸೈನ್ಯವು ಕಿಲ್ಲೆಕಛೇರಿ, ಅರಮನೆ ಬ್ಯಾಂಡ್, ಅಂಗರಕ್ಷಕ ಪಡೆಯ ವಿಭಾಗಗಳು ಸೇರಿದ್ದು ಅವುಗಳ ಮೇಲೆ ಖರ್ಚುಮಾಡುತ್ತಿದ್ದ ಹಣವನ್ನು ಕ್ರಿ.ಶ. ೧೯೧೩ ಮತ್ತು ೨೧ರ ಸಂದರ್ಭಕ್ಕೆ ಅನುಸಾರವಾಗಿ ವಿಧಿಸಲಾಗುತ್ತಿತ್ತು.

ಕಿಲ್ಲೆ ಕಛೇರಿಗಾಗಿ ಕ್ರಿ.ಶ. ೧೯೧೩-೧೪ರ ಬಜೆಟ್‌ನಲ್ಲಿ ೪,೯೩೧ ರೂ.ಗಳನ್ನು ಖರ್ಚು ಮಾಡುತ್ತಿದ್ದರೆ. ಕ್ರಿ.ಶ. ೧೯೨೦-೨೧ಕ್ಕೆ ಈ ಮೊತ್ತವನ್ನು ೬೪೧೮ ರೂ.ಗಳಿಗೆ ಏರಿಸಲಾಯಿತು. ಅಂಗರಕ್ಷಕ ಪಡೆಯಲ್ಲಿ ೧೫೧೩ರಿಂದ ೩,೯೬೫ರೂ.ಗಳು, ಅರಮನೆ ಬ್ಯಾಂಡ್‌ನವರಿಗೆ ೧,೬೫೨ ರಿಂದ ೨,೩೨೪ ರೂಪಾಯಿಗಳಿಗೆ[೭] ಏರಿಸಲಾಯಿತು. ಕಿಲ್ಲೆಕಛೇರಿಯ ಕೊನೆಯ ಹಂತದ ಸಿಪಾಯಿಗೆ ಪ್ರತಿತಿಂಗಳು ೬ ರೂ.ಗಳ ಮಾಸಿಕ ವೇತನವನ್ನು ನೀಡುತ್ತಿದ್ದ ಆದೇಶವನ್ನು ೮ ರೂ.ಗಳಿಗೆ ಏರಿಸುವಂತೆ ಆದೇಶಿಸಲಾಯಿತು. ಜೊತೆಗೆ ಮೂರು ರೂ.ಗಳ ಖರ್ಚಿನ ಮೊತ್ತವನ್ನು ಸಹ ಸೇರಿಸಲಾಯಿತು. ಕ್ರಿ.ಶ. ೧೯೧೩ರಲ್ಲಿ ಬಾಡಿಗಾರ್ಡ್ ಸವಾರರಿಗೆ ಮಾಸಿಕ ವೇತನ ೯ರೂ.ಗಳಿದ್ದರೆ ಕ್ರಿ.ಶ. ೧೯೨೦ರಲ್ಲಿ ಅದನ್ನು ಹದಿನೈದು ರೂ.ಗಳಿಗೆ ಏರಿಸಲಾಯಿತು. ಅಲ್ಲದೆ ಹಿಂದಿನಿಂದಲೂ ಸೈನ್ಯದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದ ಸೇವಕರಿಗೆ ವೇತನವನ್ನು ಹೆಚ್ಚು ಮಾಡುವುದರ ಜೊತೆಗೆ ಮುಂಬಡ್ತಿಗಳನ್ನು ಅವರ ಸೇವಾ ದಕ್ಷತೆಯ[೮] ಮೇಲೆ ನೀಡುವಂತೆ ಕ್ರಮಗಳನ್ನು ಕೈಗೊಳ್ಳಲಾಯಿತು. ಕಾಲಾಳು ಪಡೆಯ ಬ್ಯಾಂಡ್‌ನ ಸೈನಿಕರ ವೇತನವನ್ನು ವಾರ್ಷಿಕವಾಗಿ ೬,೦೦೦ ರೂ.ಗಳಿಗೆ ಏರಿಸಲಾಯಿತು. ಅರಮನೆಯ ಲಾಯಗಳು ಪ್ರಮುಖವಾಗಿ ಕುದುರೆಲಾಯಗಳಿಗೆ ಸಂಬಂಧಿಸಿದಂತೆ ಕಿಲ್ಲೆಕಛೇರಿಯಿಂದ ಕುದುರೆಗಳನ್ನು ಸಾಕಲು ಅವಶ್ಯವಾದ ಲಾಯಗಳ ನಿರ್ಮಾಣ ಮತ್ತು ಕುದುರೆಗಳ ಕ್ರಯಕ್ಕಾಗಿ ತಿಂಗಳಿಗೆ ೨,೦೦೦ ರೂ.ಗಳಂತೆ ವಾರ್ಷಿಕವಾಗಿ ೨೪,೦೦೦ರೂ.ಗಳಂತೆ್ ನೀಡುವಂತೆ ಕ್ರಮ ಕೈಗೊಳ್ಳಲಾಯಿತು.

ಜಿಲ್ಲಾಕಛೇರಿ ಇಲಾಖೆಯು ಜಿಲ್ಲೊಲ್ಲಕ ಎಂಬ ಮಿಲಿಟರಿ ಕಾಯ್ದೆಯಡಿಯಲ್ಲಿ ಬರುವಂತೆ ಮಾಡಿ, ಅದನ್ನು ಖರ್ಚುವೆಚ್ಚಗಳ ಮೇಲೆ ನಿಯಂತ್ರಣವಿಡುವಂತೆ ಬಳಕೆ ಮಾಡಿಕೊಳ್ಳಲಾಯಿತು. ಇದು ವಾರ್ಷಿಕವಾಗಿ ೬೫,೦೦೦ರೂ.ಗಳನ್ನು ಖರ್ಚುಮಾಡುವ ಅರ್ಧಖಾಸಗಿ ಮತ್ತು ಅರ್ಧಸರ್ಕಾರಿ ಸಹಭಾಗಿತ್ವದಡಿಯಲ್ಲಿ ಜಾರಿಗೆ ತರಲಾಗಿದ್ದು ಸೈನ್ಯದ ಖರ್ಚುವೆಚ್ಚಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಖಾತೆಯನ್ನೇ ನಿರ್ವಹಿಸುವಂತೆ ನೋಡಿಕೊಳ್ಳುತ್ತಿತ್ತು. ಇದರ ಅಧೀನದಲ್ಲಿ ಜಿಲ್ಲಾ ಕಛೇರಿಗಾಗಿಯೇ ಪ್ರತ್ಯೇಕವಾದ ಹಣವನ್ನು ತೆಗೆದಿಡಲಾಯಿತು. ಅದರ ಒಟ್ಟು ಮೊತ್ತವು ೩ ಮುಕ್ಕಾಲು ಲಕ್ಷ ರೂ.ಗಳು,[೧೦] ಅದರಲ್ಲಿ ಒಂದು ಲಕ್ಷದ ಹದಿನಾಲ್ಕು ಸಾವಿರ ರೂ.ಗಳು ಸರ್ಕಾರಿ ಉದ್ದೇಶಗಳಿಗಾಗಿ ಬಳಕೆ ಮಾಡಲು ಅವಕಾಶವನ್ನು ಕಲ್ಪಿಸಲಾಯಿತು.

ಮೈಸೂರು ಸರ್ಕಾರದಲ್ಲಿ ಸೈನ್ಯದಲ್ಲಿ ಸೇವೆಸಲ್ಲಿಸುತ್ತಿದ್ದ ಅಶ್ವದಳದ ಸೈನಿಕರಿಗೆ ವಾರ್ಷಿಕವಾಗಿ ೩೭೮ ರೂಪಾಯಿಗಳವರೆಗೆ ಮತ್ತು ಬಾರ್‌ಇನ್‌ಫ್ಯಾಂಟ್ರಿಗೆ ಮುನ್ನೂರ ಮುಕ್ಕಾಲು(೧/೩) ರೂ.ಗಳನ್ನು ನೀಡಲಾಗುತ್ತಿತ್ತು. ಅಲ್ಲದೆ ಬಾಡಿಗಾರ್ಡ್ ಇಲಾಖೆಯಲ್ಲಿ ಒಟ್ಟಾರೆ ೧೩೨ ಜನರಿದ್ದು ಅರಸರ ಅಂಗರಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಬಾರ್ ಇನ್‌ಫ್ಯಾಂಟ್ರಿಯ ಜೊತೆಗೆ ಅಂಗರಕ್ಷಕ ಪಡೆಯನ್ನು ಸೇರಿಸಿ ಒಟ್ಟು ವೆಚ್ಚವನ್ನು ನಿಗದಿಪಡಿಸಲಾಗಿತ್ತು. ಅದರಂತೆ ಆ ಒಟ್ಟು ಮೊತ್ತವು

೭೬,೪೯೦ರೂ.ಗಳಷ್ಟಿತ್ತು ಇದು ಸರ್ಕಾರದ ಬಜೆಟ್‌ನ ಒಂದು ಭಾಗವಾಗಿತ್ತು. ಸರ್ಕಾರದ ಬಾರ್ ಇನ್‌ಫ್ಯಾಂಟ್ರಿಯಲ್ಲಿದ್ದ ೫೭೫ಜನ ಸೈನಿಕರಿಗೆ ವಾರ್ಷಿಕವಾಗಿ ೧,೭೨,೬೯೨ ರೂ.ಗಳನ್ನು[೧೧] ವ್ಯಯಿಸಲಾಗುತ್ತಿತ್ತು. ಮುಂದೆ ಕ್ರಿ.ಶ. ೧೯೨೦-೨೧ರ ಸಂದರ್ಭಕ್ಕೆ ಆ ಮೊತ್ತವನ್ನು ಸುಮಾರು ಎರಡುವರೆ ಲಕ್ಷಗಳಿಗೆ ಏರಿಸಲಾಯಿತು. ಇದು ಅರಮನೆ ಸೈನ್ಯವನ್ನು ಸೇರಿಸಿ ಬಜೆಟ್ಟನ್ನು ಮಂಡಿಸಲಾಗುತ್ತಿತ್ತು. ಅದರ ಪ್ರಕಾರ ಮೂರುವರ್ಷಗಳ ವರೆಗೆ ಇದರನ್ವಯ ಖರ್ಚುವೆಚ್ಚಗಳು ಮತ್ತು ಅವುಗಳ ಅಂದಾಜುಗಳು ಈ ಪ್ರಕಾರವಾಗಿವೆ. ಕ್ರಿ.ಶ. ೧೯೨೧-೨೨ರಲ್ಲಿ ಅಂಗರಕ್ಷಕರು ಮತ್ತು ಬ್ಯಾಂಡ್ ವಿಭಾಗಗಳನ್ನು ಒಳಗೊಂಡ ಇಲಾಖೆಗಳ ಖರ್ಚು ೨,೩೧೪೦೦ ರೂಪಾಯಿಗಳಾದರೆ, ಕ್ರಿ.ಶ.೧೯೨೩-೨೪ರ ವೇಳೆಗೆ ೨,೯೬೮೦೦ ರೂಗಳಾದವು. ಜಿಲ್ಲಾ ಕಛೇರಿಯಲ್ಲೂ ಕೂಡ ಕ್ರಿ.ಶ. ೧೯೨೧-೨೨ರಲ್ಲಿ ೬೯,೪೦೦ ರೂಗಳಾದರೆ ಕ್ರಿ.ಶ. ೧೯೨೩-೨೪ರಲ್ಲಿ ೭೪,೫೦೦ ರೂಪಾಯಿಗಳಷ್ಟು ಮೊತ್ತವು ಖರ್ಚಾಗುತ್ತಿತ್ತು. ಜಿಲ್ಲಾ ಕಛೇರಿಯ ಅಧೀನದಲ್ಲಿ ರಾಚವಾರರು, ಭಲ್ಲೆಯವರು ಮತ್ತು ಕರ್ನಾಟಕ ವಾದ್ಯಗಾರರು ಇದ್ದರು. ಇವರಿಗೆ ವಾರ್ಷಿಕವಾಗಿ ೨೪,೫೦೦ ರೂಪಾಯಿಗಳನ್ನು ಖರ್ಚು ಮಾಡಲಾಗುತ್ತಿತ್ತು.

ಜಿಲ್ಲಾ ಕಛೇರಿಯ ವತಿಯಿಂದ ಮೈಸೂರು ಸೈನ್ಯಪಡೆಗಾಗಿಯೇ ಮೈಸೂರಿನಲ್ಲಿ ಕೆಲವೊಂದು ಕಟ್ಟಡಗಳನ್ನು ನಿರ್ಮಿಸಲಾಗಿತ್ತು. ಅವುಗಳೆಂದರೆ ನಗರ ಖಾನೆ, ಹೊಸೂರಮ್ಮನ ಛತ್ರದ ಹತ್ತಿರದ ಆಯುಧಗಾರ, ಅಂಗರಕ್ಷಕಗೃಹಗಳು, ಲಾಯಗಳು, ಮಸೀದಿಗಳು, ಅಧಿಕಾರಿಗಳ ವಸತಿಗೃಹಗಳು ಜಮಾದಾರರ ವಸತಿಗೃಹಗಳು. ಬ್ಯಾಂಡ್ ಮಹಲ್‌ಗಳು, ಬ್ಯಾಂಡ್‌ನವರ ವಸತಿಗೃಹಗಳು ಬ್ಯಾಂಡ್ ಜಮಾದಾರರ ವಸತಿಗೃಗಳು ಸೇರಿದ್ದವು. ಮೊದಲಾದವುಗಳನ್ನು ೫,೧೪೮೩೦ ರೂಗಳಲ್ಲಿ ನಿರ್ಮಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅದರ ಪ್ರಕಾರವೇ ಸೈನಿಕ ಅಧಿಕಾರಿಗಳ ವಸತಿಗೃಹಗಳನ್ನು[೧೨] ಕೂಡ ನಿರ್ಮಿಸಲಾಯಿತು. ಕಲ್ಲೆಕವೇರಿಯ ಅಧೀನದಲ್ಲಿನ ಸೈನಿಕ ಶ್ರೇಣಿಯ ಮಾದರಿಯಲ್ಲಿ ಕಾಲಾಗಳು ಪಡೆಯಲ್ಲಿ ಬ್ಯಾಂಡ್‌ನವನು ೧, ಲೆಕ್ಕಾಚಾರ ಬಂದೂಕುದಾರಿಗಳು ೩, ಉಗ್ರಾಣರಕ್ಷಕರು ೧ ಮೊದಲಾದವರನ್ನು ನೇಮಿಸಲಾಗಿತ್ತು. ಜಿಲ್ಲಾ ಕಛೇರಿಯ ಅಧೀನದಲ್ಲೂ ಸಹ ಕೆಲವೊಂದು ಅಧಿಕಾರಿಗಳನ್ನು ಅದೇ ಮಾದರಿಯಲ್ಲೇ ನೇಮಿಸಲಾಗುತ್ತಿತ್ತು. ಕಮಿಷನರ್ ಹವಾಲ್ದಾರ, ನಾಯಕ ಲ್ಯಾನ್ಸ್‌ನಾಯಕ, ಎರಡನೇ ದರ್ಜೆಯ ಲ್ಯಾನ್ಸ್‌ನಾಯಕ ಮೂರನೇದರ್ಜೆಯ ನಾಯಕ ಸಂಗೀತಗಾರರು, ಸಾರ್ಜೆಂಟ್, ನಾಯಕ್ ಅವರು ಮೊದಲಾದವರು ಇದ್ದರೆ ಅವರ ನಂತರ ಫಿರಂಗಿ ಪಡೆಯಲ್ಲಿ ಮೇಜರ್, ಜಮಾದಾರ್, ಹವಾಲ್ದಾರ, ನಾಯಕರು, ಲ್ಯಾನ್ಸ್‌ನಾಯಕ ಮೊದಲಾದವರಿದ್ದರು. ಇದೇ ಮಾದರಿಯಲ್ಲಿ ಜಿಲ್ಲಾ ಕಛೇರಿಯಲ್ಲೂ ಸಹ ವಿವಿಧ ಶ್ರೇಣಿಕೃತ ವ್ಯವಸ್ಥೆಯಿದ್ದಿತು. ಭಕ್ಷಿ, ಪ್ರಮುಖ ಅಧಿಕಾರಿಯಾದರೆ ಅವನ ಸಹಾಯಕರಾಗಿ ಕಛೇರಿಯಲ್ಲಿ ಲೆಕ್ಕಾಚಾರ ಉಗ್ರಾಣರಕ್ಷಕ ಮೊದಲಾದವರಿದ್ದರು. ತದನಂತರ ಆಯುಧಾಗಾರದ ಇಲಾಖೆಯಿದ್ದು ಮೇಲಿನ ಮಾದರಿಯಲ್ಲೇ ಅಧಿಕಾರಿಗಳನ್ನು ಹೊಂದಿತ್ತು. ರಾಚವಾರ[೧೩] ಎಂಬ ಪ್ರತ್ಯೇಕ ಪಡೆಯಿದ್ದು ಈ ಪಡೆಯು ಮೇಜರ್, ಜಮಾದಾರ, ಹವಾಲ್ದಾರ, ನಾಯಕ ಲ್ಯಾನ್ಸ್‌ನಾಯಕ, ಜವಾನರನ್ನು ಹೊಂದಿದ್ದಿತು.

ಜಿಲ್ಲಾ ಕಛೇರಿಯಿಂದ ಸೈನ್ಯದ ಎಲ್ಲಾ ಇಲಾಖೆಗಳಿಗೂ ಕೂಡ ವೇತನವನ್ನು ನೀಡಲಾಗುತ್ತಿತ್ತು. ಇದು ಹಣಕಾಸಿನ ಮೂಲವಾಗಿಯೂ ಕಾರ್ಯನಿರ್ವಹಣೆ ಮಾಡುತ್ತಿತ್ತು. ೧೯೨೧-೨೨ರಿಂದ ಕ್ರಿ.ಶ. ೧೯೨೫-೨೬ರವರೆಗೆ ಅರಮನೆಯ ಬಾರ್‌ಇಲಾಖೆಗೆ ೧ ಲಕ್ಷದಿಂದ, ಒಂದು ಲಕ್ಷದ ೨೨ ಸಾವಿರ ರೂಪಾಯಿಗಳನ್ನು, ಅಂಗರಕ್ಷಕರಿಗೆ ಅರವತ್ತೆರಡು ಸಾವಿರದಿಂದ ೬೮,೦೦೦ ರೂಗಳು, ಅರಮನೆ ಬ್ಯಾಂಡ್‌ಗೆ ೫೦೦೦೦ದಿಂದ ೫೭,೦೦೦ ಜಿಲ್ಲಾ ಪಡೆಗಳಿಗೆ ೫೮,೦೦೦ದಿಂದ ೭೩,೦೦೦ ರೂಗಳವರೆಗೆ ವಾರ್ಷಿಕವಾಗಿ ವೇತನವನ್ನು.[೧೪] ಒದಗಿಸುವ ಕಾರ್ಯವನ್ನು ಮಾಡುತ್ತಿತ್ತು. ರಾಚವಾರರೂ ಸೇರಿದಂತೆ ಮತ್ತೂ ಅವರ ವೇತನ ಮತ್ತು ಖರ್ಚುವೆಚ್ಚಗಳ ಮೊತ್ತವನ್ನೂ ಸೇರಿದಂತೆ ಕ್ರಿ.ಶ. ೧೯೨೫-೨೬ರ ಸಾಲಿನಲ್ಲಿ ಮೂರು ಲಕ್ಷದ ಐವತ್ತೆಂಟು ಸಾವಿರದ ಎರಡುನೂರ ರೂಪಾಯಿಗಳನ್ನು ವೆಚ್ಚಮಾಡಲಾಯ್ತು.

ಕ್ರಿ.ಶ. ೧೯೨೭-೨೮ರ ವಾರ್ಷಿಗಳಕೆ ಬಜೆಟ್‌ನಲ್ಲಿ ಜಿಲ್ಲಾ ಕಛೇರಿ, ಬಾಡಿಗಾರ್ಡ್ ಅರಮನೆ ಬ್ಯಾಂಡ್‌ನವರ ಕವಾಯತುಗಳು, ನಿವೃತ್ತವೇತನ ಮೊದಲಾದ ಖರ್ಚಿನ ಬಾಬ್ತುಗಳಿಗೆ ನಾಲ್ಕು ೪,೦೮,೪೬೪ ರೂಗಳನ್ನು. ಖರ್ಚುಮಾಡಲಾಗಿತ್ತು. ಪ್ರತಿ ವಿಭಾಗದಲ್ಲೂ ಕಮಾಂಡೆಂಟ್, ತುಕಡಿಬಾರ್ ( ಭಕ್ಷಿ) ಸುಬೇದಾರ (ಮಂಜರ್) ರಿಸೆಲ್ದಾರ, ಸುಬೇದಾರರು, ಹೋಬಳಿದಾರರು ಜಮಾದಾರರು, ಹವಾಲ್ದಾರರು, ಸಾರ್ಜೆಂಟ್, ನಾಯಕರು, ಕಾಲಾಳು ನಾಯಕರು, ಡ್ರಮ್ಮರ್‌ಗಳು ಮತ್ತು ಕೊಳವೆಯವರೆಂಬ ವಾದ್ಯಗಾರರು, ಸಿಪಾಯಿಗಳು ಓಲೆಕಾರರು, ಫಿರಂಗಿ ದಳದ ಮುಖ್ಯಸ್ಥ, ನಾಯಕ, ಕಾಲಾಳು, ನಾಯಕ ಸಿಪಾಯಿಗಳು[೧೫] ಈ ರೀತಿಯಾಗಿ ಸೈನ್ಯವನ್ನು ಶ್ರೇಣೀಕೃತವಾಗಿರುವಂತೆ ನೋಡಿಕೊಳ್ಳಲಾಗಿತ್ತು. ಇದರಿಂದ ಕಮಾಂಡೆಂಟ್‌ನ ಸಂಪೂರ್ಣ ಅಧಿಕಾರವೆಲ್ಲವೂ ಸಹ ತನ್ನ ಕೈ ಕೆಳಗಿನ ಸೈನಿಕರನ್ನು ಹಿಡಿದಿಟ್ಟುಕೊಳ್ಳಲು ಹಾಗೂ ಶಾಂತಿ ಮತ್ತು ಯುದ್ಧ ಸಮಯಗಳಲ್ಲಿ

ಸೈನ್ಯವನ್ನು ಒಗ್ಗೂಡಿಸಿ ಪ್ರತಿದಿನ ಎರಡು ಬಾರಿ ಕವಾಯತು ಮಾಡಿಸಿ ಶಿಸ್ತನ್ನು ಮೂಡಿಸುವುದು ಈ ಮುಖ್ಯಾಧಿಕಾರಿಯ ಪ್ರಮುಖ ಕಾರ್ಯಗಳಾಗಿದ್ದವು.

ಕ್ರಿ.ಶ. ೧೯೩೮ರಲ್ಲಿ ಜಿಲ್ಲಾ ಕಛೇರಿಯ ನಾಲ್ಕನೇ ಘಟಕದ ನೇಮಕಾತಿಗಾಗಿ ಆಯ್ಕೆಯಾದ ೧೦ ಜನ ಅಭ್ಯರ್ಥಿಗಳಲ್ಲಿ ೮ ಜನರು ಪ್ರಥಮದರ್ಜೆಯಲ್ಲಿ ಪಾಸಾದರೆ ಇಬ್ಬರು ಮಾತ್ರ ದ್ವಿತಿಯ ದರ್ಜೆಯಲ್ಲಿ ಪಾಸಾದರು. ಪರೀಕ್ಷೆಗೆ ಹಾಜರಾದ ಅಭ್ಯರ್ಥಿಗಳು ಮೇ೧, ೧೯೩೮ರಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕಾಯಿತು. ಅಲ್ಲದೆ ಒಬ್ಬ ಅಭ್ಯರ್ಥಿಯನ್ನು ಮಾತ್ರ ಸೇರಿಸಿದ್ದರಿಂದ ಅವರ ಸಂಖ್ಯೆ ೧೧ಕ್ಕೆ ಏರಿತು. ಇದರಲ್ಲಿ ಒಬ್ಬ ಹವಾಲ್ದಾರ, ೩ ನಾಯಕರು, ೭ ಜನ ಸವಾರರನ್ನಾಗಿ[೧೬] ನೇಮಿಸಲಾಯಿತು. ಇವರೆಲ್ಲರ ಮಾಸಿಕ ವೇತನ ೩೫ ರೂಪಾಯಿಗಳಾಗಿದ್ದವು. ಕ್ರಿ.ಶ. ೧೮೯೯-೧೯೦೦ರ ಸಾಲಿನಲ್ಲಿ ಬ್ರಿಟೀಷ್ ಸರಕಾರವು ಸೈನ್ಯಕ್ಕಾಗಿಯೇ ೯ ಲಕ್ಷದ ೮೮ ಸಾವಿರದ ೯೯೬ ರೂ.ಗಳನ್ನು ಖರ್ಚು ಮಾಡಿತು.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಅವಲೋಕಿಸಿದಾಗ ಮೈಸೂರು ಒಡೆಯರು ತಮ್ಮ ಸೈನ್ಯಾಡಳಿತದಲ್ಲಿ ಅಳವಡಿಸಿಕೊಂಡಿದ್ದ ಶ್ರೇಣೀಕೃತ ಮಾದರಿಯಿಂದ ಅಧಿಕಾರವನ್ನು ವಿಭಜಿಸಿ ಅವುಗಳಿಗೆ ತಕ್ಕಂತೆ ವೇತನ ಮತ್ತು ಸೇವಾಸೌಲಭ್ಯಗಳನ್ನು ನೀಡುತ್ತಿದ್ದರು. ಅಲ್ಲದೆ ಸೈನ್ಯದಲ್ಲಿ ವಿವಿಧ ರೀತಿಯ ಕಾಯ್ದೆಗಳನ್ನು ಅಳವಡಿಸಿಕೊಂಡು ಶಿಸ್ತು, ಸಂಯಮವನ್ನು ತರಲು ಪ್ರಯತ್ನಿಸಿದ್ದರಿಂದ ಜಿಲ್ಲಾ ಕಛೇರಿಯು ಸುಗಮವಾಗಿ ತನ್ನ ಪಾತ್ರವನ್ನು ನಿರ್ವಹಿಸಲು ಸಾಧ್ಯವಾಯಿತು ಎಂದು ಹೇಳಬಹುದು.



**ಅಡಿಟಿಪ್ಪಣಿಗಳು**

೧. ಜಿಲ್ಲಾ ಕಛೇರಿ ಮಿಲಿಟರಿ ಕಡತ ಸಂಖ್ಯೆ ೩/೧೯೧೨.
೨. ಅದೇ, ಪು. ೩/೧೯೧೩.
೩. ಅದೇ, ಪು. ೩/೧೯೧೩.
೪. ಅದೇ, ಪು. ೩/೧೯೧೩.
೫. ಅದೇ, ಪು. ೩/೧೯೧೩.
೬ ಅದೇ, ಪು. ೩/೧೯೧೩.
೭. ಕಡತ ಸಂಖ್ಯೆ ೨/೧೯೧೪.
೮. ಪೂರ್ವೋಕ್ತ ೩/೧೯೧೩.
೯. ಅದೇ, ಪು. ೩/೧೯೧೩.
೧೦. ಅದೇ, ಪು. ೩/೧೯೧೩.
೧೧. ಅದೇ, ಪು. ೩/೧೯೧೩.
೧೨. ಅದೇ, ಪು. ೩/೧೯೧೩.
೧೩. ರಾಮಕೃಷ್ಣರಾವ್ ಬಿ., ೧೯೧೬., ಶ್ರೀಮನ್ಮಹಾರಾಜರ ವಂಶಾವಳಿ ಬಾಗ-೧, ಪು. ೪೫.
೧೪. ಅದೇ, ಪು. ೮೯.
೧೫. ಅದೇ, ಪು. ೧೧೭.
೧೬. ಅದೇ, ಪು. ೧೧೯.

೧೧೩

# ಮಂಡ್ಯ ಜಿಲ್ಲೆಯಲ್ಲಿ ಮಹಾತ್ಮಗಾಂಧೀಜಿಯ ನಾಯಕತ್ವದ ರಚನಾತ್ಮಕ ಕಾರ್ಯಗಳು

ಎಸ್. ಶಿವರಾಮು*

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಮಹಾತ್ಮಗಾಂಧೀಜಿಯವರ ಆಗಮನ ಒಂದು ಹೊಸ ಸಂಚಲನವನ್ನೇ ಉಂಟುಮಾಡಿತು. ಸ್ವಾತಂತ್ರ್ಯ ಹೋರಾಟದ ಜೊತೆಜೊತೆಯಲ್ಲೇ ಹಲವು ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಗಾಂಧೀಜಿಯವರ ನಾಯಕತ್ವದಲ್ಲಿ ೧೯೧೯ರ ನಂತರ ಸ್ವದೇಶಿ ಚಳುವಳಿ, ಅಸ್ಪೃಶ್ಯತಾ ವಿರೋಧಿ ಆಂದೋಲನ, ಪಾನನಿರೋಧ, ಹರಿಜನಕಲ್ಯಾಣಕ್ಕಾಗಿ ಹರಿಜನನಿಧಿ ಸಂಗ್ರಹಣೆಯಂತಹ ಕಾರ್ಯಗಳು ಸಾಕಾರಗೊಂಡವು. ಮೈಸೂರು ಸಂಸ್ಥಾನದಲ್ಲಿ ಗಾಂಧೀಜಿಯವರ ಆಗಮನದಿಂದ ಹಲವು ರಚನಾತ್ಮಕ ಕಾರ್ಯಗಳು ಪರಿಚಯವಾದವು. ಮಹಾತ್ಮರ ಬಗ್ಗೆ ಅಪಾರವಾದ ಗೌರವ ಹೊಂದಿದ್ದ ಮೈಸೂರು ಸಂಸ್ಥಾನದಲ್ಲಿ ಪ್ರಜೆಗಳು ಇವರ ರಚನಾತ್ಮಕ ಕಾರ್ಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದುದಲ್ಲದೇ ಅವುಗಳ ಯಶಸ್ಸಿಗೂ ಕಾರಣೀಭೂತರಾದರು

ಮಹಾತ್ಮಗಾಂಧೀಜಿಯವರು ತಮ್ಮ ರಚನಾತ್ಮಕ ಕಾರ್ಯಗಳ ಅನುಷ್ಠಾನಕ್ಕಾಗಿ ದೇಶದುದ್ದಗಲಕ್ಕೂ ಸಂಚರಿಸಿದರು, ಖಾದಿ ಪ್ರಚಾರ ಹಾಗೂ ಹರಿಜನನಿಧಿ ಸಂಗ್ರಹಕ್ಕಾಗಿ ಮೈಸೂರು ಸಂಸ್ಥಾನಕ್ಕೂ ಭೇಟಿ ನೀಡಿದರು. ಆ ವೇಳೆಯಲ್ಲಿ ಮೈಸೂರು ಸಂಸ್ಥಾನದಲ್ಲಿ ಅಂದರೆ ಈಗಿನ ಮೈಸೂರು ಜಿಲ್ಲೆಯ ಒಂದು ಪ್ರಮುಖ ಪ್ರದೇಶವಾದ ಮಂಡ್ಯ ಪ್ರಾಂತ್ಯದ ಹಲವು ಕಡೆಯಲ್ಲೂ ಸಂಚರಿಸಿದ್ದರು. ಆಗಿನ್ನೂ ಮಂಡ್ಯ ಜಿಲ್ಲೆ ಸ್ವತಂತ್ರ ಜಿಲ್ಲೆಯಾಗಿರಲಿಲ್ಲವಾದರೂ ಜಿಲ್ಲೆಯ ಜನರು ರಚನಾತ್ಮಕ ಕಾರ್ಯಕ್ರಮಗಳು ಫಲಪ್ರದವಾಗುವಂತೆ ಮಾಡಲು ಬಹಳವಾಗಿ ಶ್ರಮಿಸಿದ್ದರು. ಈ ಹಿನ್ನೆಲೆಯಲ್ಲಿ ಮಹಾತ್ಮಗಾಂಧೀಜಿ ಅವರ ನಾಯಕತ್ವದಲ್ಲಿ ಸ್ವಾತಂತ್ರ್ಯ ಹೋರಾಟ ಹಾಗೂ ರಚನಾತ್ಮಕ ಕಾರ್ಯಗಳ ಅನುಷ್ಠಾನ ಮಂಡ್ಯ ಜಿಲ್ಲೆಯಲ್ಲಿ ಹೇಗೆ ಆಯಿತೆಂದು ತಿಳಿಸುವ ಪ್ರಯತ್ನವನ್ನು ಈ ಸಂಪ್ರಬಂಧದಲ್ಲಿ ಮಾಡಲಾಗಿದೆ.

೧೯೨೭ರಲ್ಲಿ ಮಹಾತ್ಮಗಾಂಧೀಜಿಯವರು ವಿಶ್ರಾಂತಿಗಾಗಿ ನಂದಿಬೆಟ್ಟದಲ್ಲಿ ತಂಗಿದ್ದರು. ಈ ಸಮಯದಲ್ಲಿ ಮೈಸೂರಿಗೆ ಭೇಟಿ ನೀಡುವ ಸಂದರ್ಭದಲ್ಲಿ ಮಂಡ್ಯ ಮಾರ್ಗದಲ್ಲಿ ಶ್ರೀರಂಗಪಟ್ಟಣಕ್ಕೆ ಭೇಟಿ ನೀಡಿದ್ದರು. ೧೯.೭.೧೯೨೭ರಂದು ಶ್ರೀರಂಗನಾಥ ದೇವಾಲಯದ ಮುಂಭಾಗಲ್ಲಿ ಭಾಷಣ ಮಾಡಿದರು. ಅಂದಿನ ಗಾಂಧೀಜಿಯವರ ಭಾಷಣಕ್ಕೆ ಸುತ್ತಮುತ್ತಲ ಹಳ್ಳಿಗಳಿಂದ ಅಬಾಲವೃದ್ಧರಾದಿಯಾಗಿ ಸಾವಿರಾರು ಜನಭಾಗವಹಿಸಿದ್ದರು. ಅಂದಿನ ಗಾಂಧೀಜಿಯವರ ಭಾಷಣ ಜನತೆಯ ಮೇಲೆ ತುಂಬಾ ಪರಿಣಾಮಬೀರಿತು. ಈ ಸಭೆಯಲ್ಲಿ ಗಾಂಧೀಜಿಯವರು ಬ್ರಿಟಿಷರ ದಬ್ಬಾಳಿಕೆಯನ್ನೂ, ಸ್ವಾತಂತ್ರ್ಯದ ಮಹತ್ವವನ್ನೂ ಪರಿಣಾಮಕಾರಿಯಾಗಿ ವಿವರಿಸಿದರು. ಈ ಸಭೆಯಲ್ಲಿ ಭಾಗವಹಿಸಿದ್ದ ಜನ ತಾವು ಪ್ರಚೋದನೆಗೊಂಡರಲ್ಲದೆ ತಮ್ಮ ತಮ್ಮ ಹಳ್ಳಿಗಳಲ್ಲಿ ಗಾಂಧೀಜಿಯವರ ವಿಚಾರಗಳನ್ನು ಇತರರಿಗೂ ತಿಳಿಸಿದರು. ಸ್ವಾತಂತ್ರ್ಯದ ಹಂಬಲ ಈ ಮೂಲಕ ಹಳ್ಳಿಹಳ್ಳಿಗೂ ತಲುಪಿತು. ಜನರು ಭಾವನಾತ್ಮಕವಾಗಿ ಈ ಚಳುವಳಿಯೊಡನೆ ಸ್ಪಂದಿಸತೊಡಗಿದರು.[೧]

೧೯೨೭ರ ಆಗಸ್ಟ್ ೪ರ ಗುರುವಾರ ಮಹಾತ್ಮಗಾಂಧೀಜಿಯವರು ಹಾಸನದ ಹೊಳೆನರಸೀಪುರ ಮಾರ್ಗವಾಗಿ ಪ್ರಯಾಣ ಮಾಡಿದರು. ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕು ಅಕ್ಕಿಹೆಬ್ಬಾಳ ಗ್ರಾಮದ ಜನರು ರೈಲ್ವೆ ಸ್ಟೇಷನ್ ಮಾಸ್ಟರ್‌ರಲ್ಲಿ ಮನವಿ ಮಾಡಿ ರೈಲುಗಾಡಿಯನ್ನು ಸಿಗ್ನಲ್ ನೆಪದಲ್ಲಿ ಒಂದರ್ಧ ಗಂಟೆ ನಿಲ್ಲಿಸುವಲ್ಲಿ ಯಶಸ್ವಿಯಾದರು. ಆ ಸಮಯಕ್ಕೆ ನೂರಾರು ಜನರೈಲು ನಿಲ್ದಾಣದಲ್ಲಿ ಜಮಾಯಿಸಿದ್ದರು. ಗಾಂಧೀಜೀಯನ್ನು ಕಂಡೊಡನೆ 'ಮಹಾತ್ಮಗಾಂಧೀ ಕಿ ಜೈ ಭಾರತ್ ಮಾತಾಕಿ ಜೈ ವಂದೇ ಮಾತರಂ' ಘೋಷಣೆಗಳನ್ನು ಕೂಗಿದರು. ಅಕ್ಕಿಹೆಬ್ಬಾಳು ಛೇರ್ಮನ್ ನರಸಿಂಹಮೂರ್ತಿ, ಎಸ್.ಆರ್. ಶರ್ಮ ಮಹಾತ್ಮರಿಗೆ ನೂಲಿನ ಹಾರ ಹಾಕಿದರು, ಸ್ಕೌಟ್ ಬಾಲಕರು ಮಂಗಳ ಗೀತೆಯನ್ನು ಹಾಡಿದರು.

* ಸಹಾಯಕ ಪ್ರಾಧ್ಯಾಪಕರು, ಸ್ನಾತಕೋತ್ತರ ಇತಿಹಾಸ ವಿಭಾಗ, ಮಹಿಳಾ ಸರ್ಕಾರಿ ಕಾಲೇಜು (ಸ್ವಾಯತ್ತ), ಮಂಡ್ಯ–೫೭೧೪೦೧.

ಗಾಂಧೀಜಿಯವರು ಎಲ್ಲರಿಗೂ ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಳ್ಳಬೇಕೆಂದು ಕರೆ ನೀಡಿದರು. ಅಕ್ಕಿಹೆಬ್ಬಾಳುವಿನಲ್ಲಿ ಖಾದಿ ಸೊಸೈಟಿ ಮತ್ತು ವಿದ್ಯಾರಣ್ಯ ಚರಕಾಶ್ರಮ ಚೆನ್ನಾಗಿ ನಡೆಯುತ್ತಿರುವುದನ್ನು ಕೇಳಿ ಗಾಂಧೀಜಿಯವರು ಖುಷಿಪಟ್ಟರು. ಅವರ ಜೊತೆಯಿದ್ದ ಕಾಂಗ್ರೆಸ್ ಮುಂದಾಳು ಗಂಗಾಧರರಾವ್ ದೇಶಪಾಂಡೆ ಖಾದಿ ನಿಧಿಗಾಗಿ ಜನರಿಂದ ಕಾಣಿಕೆ ಕೇಳಿದರು. ಎಸ್.ಆರ್.ಶರ್ಮ ಜನರ ಮುಂದೆ ಕೈ ಒಡ್ಡಿದಾಗ ಎಲ್ಲರೂ ತಮ್ಮ ಜೇಬಿನಲ್ಲಿದ್ದ ಹಣವನ್ನೆಲ್ಲ ನೀಡಿದರು. ಹೆಂಗಸರು ತಮ್ಮ ಕತ್ತಿನಲ್ಲಿದ್ದ ಚಿನ್ನದ ಕಾಸುಗಳನ್ನು ಕಿವಿ ಓಲೆಗಳನ್ನು ಅರ್ಪಿಸಿದರು.[೨]

೧೯೩೪ರಲ್ಲಿ ಮಹಾತ್ಮಗಾಂಧೀಜಿಯವರು ಹರಿಜನ ನಿಧಿ ಸಂಗ್ರಹಕ್ಕಾಗಿ ದೇಶದಾದ್ಯಂತ ಪ್ರವಾಸ ಕೈಗೊಂಡಿದ್ದರು. ಈ ಸಂದರ್ಭದಲ್ಲಿ ೧೯೩೪ರಲ್ಲಿ ಮೈಸೂರು ಸಂಸ್ಥಾನಕ್ಕೂ ಭೇಟಿ ನೀಡಿದ್ದರು. ಮೈಸೂರು ಸಂಸ್ಥಾನದಲ್ಲಿ ಗೌರಿಬಿದನೂರು, ದೊಡ್ಡಬಳ್ಳಾಪುರ, ತುಮಕೂರು, ನೆಲಮಂಗಲದ ಮಾರ್ಗವಾಗಿ ಬೆಂಗಳೂರಿಗೆ ಬಂದು ಅಲ್ಲಿಂದ ಮೈಸೂರಿಗೆ ಪ್ರಯಾಣ ಬೆಳೆಸಿದ್ದರು. ನಂತರ ತಗಡೂರು, ಬದನವಾಳು, ನಂಜನಗೂಡು, ಮಂಡ್ಯ, ಮದ್ದೂರುಗಳಲ್ಲಿ ನಿಧಿಯನ್ನು ಸ್ವೀಕರಿಸಿ ಕಾನಕಾನಹಳ್ಳಿ, ಚನ್ನಪಟ್ಟಣ, ಕೆಂಗೇರಿ ಮೂಲಕ ಬೆಂಗಳೂರಿಗೆ ತಲುಪಿದರು.[೩] ಮೈಸೂರಿನಿಂದ ಬೆಂಗಳೂರಿಗೆ ಹೋಗುವ ಮಾರ್ಗದಲ್ಲಿ ೧೯೩೪ರ ಫೆಬ್ರವರಿ ೬ರಂದು ಮಂಡ್ಯದ ಜ್ಯೂಬಿಲಿ ಪಾರ್ಕ್‌ಗೆ ಭೇಟಿ ನೀಡಿದರು. ಮಂಡ್ಯದ ಜನರು ಅಪಾರ ಸಂಖ್ಯೆಯಲ್ಲಿ ಸೇರಿದ್ದರು. ಅಂದಿನ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷ ಹಿರಿಯ ವಕೀಲ ಎಂ.ಮಹಾಬಲರಾವ್ ಹಾಗೂ ಪಶುಪತಿರಾವ್ ಮುಂದಾಳತ್ವದಲ್ಲಿ ನೂರಾರು ಜನರು ಮಹಾತ್ಮ ಗಾಂಧೀಜಿಯವರನ್ನು ಸ್ವಾಗತಿಸಿದರು. ಜನರು ತನುಮನಧನದಿಂದ ಹರಿಜನ ನಿಧಿಗೆ ಕಾಣಿಕೆಗಳನ್ನು ಅರ್ಪಿಸಿದರು ಹಾಗೂ ಭಿನ್ನವತ್ತಳೆಯನ್ನು ನೀಡಿದರು. (ಈಗಿನ ಗಾಂಧಿಪಾರ್ಕ್) ಪಾರ್ಕಿನ ಸಮೀಪವಿದ್ದ ಹರಿಜನ ಮನೆಗಳಿಗೆ ಭೇಟಿ ನೀಡಿದರು. ಹರಿಜನರ ದಯನೀಯ ಸ್ಥಿತಿಯನ್ನು ಕಂಡು ನೀವೆಲ್ಲರೂ ಶುದ್ಧವಾಗಿರಬೇಕು. ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರೇ ಎಂದು ಸಮಾಧಾನ ಹೇಳಿದರು. ಕಾಂಗ್ರೆಸ್ ನಾಯಕರಿಗೆ ಈ ಜನರಿಗೆ ಉತ್ತಮ ಬಡಾವಣೆಯನ್ನು ನಿರ್ಮಿಸಿಕೊಡಿ ಎಂದು ಹೇಳಿದರು. ದೇಶದ ಸ್ವಾತಂತ್ರ್ಯ ಚಳುವಳಿಗೆ ಎಲ್ಲರೂ ಕೈ ಜೋಡಿಸಬೇಕೆಂದು ಮತ್ತು ಕಾಣಿಕೆ ನೀಡಬೇಕೆಂದು ಕೇಳಿದಾಗ ಎಲ್ಲರೂ ಸಂತೋಷದಿಂದ ನೂರಾರು ರೂಪಾಯಿ ಕಾಣಿಕೆ ಹಾಗೂ ಸಾಕಷ್ಟು ಒಡವೆಗಳನ್ನು ನೀಡಿದರು.[೪] ನಂತರ ಮದ್ದೂರು, ಶಿವಪುರ ಸೋಮನಹಳ್ಳಿಗೆ ಭೇಟಿ ನೀಡಿದರು. ಅಂದಿನ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾದ ಎಸ್.ಸಿ.ಮಲ್ಲಯ್ಯನವರ ಕೋರಿಕೆಯ ಮೇರೆಗೆ ಸೋಮನಹಳ್ಳಿಯ ವಿದ್ಯಾರ್ಥಿನಿಲಯಕ್ಕೂ ಭೇಟಿ ನೀಡಿದರು. ವಿದ್ಯಾರ್ಥಿನಿಲಯದಲ್ಲಿ ಇಬ್ಬರು ಹರಿಜನ ವಿದ್ಯಾರ್ಥಿಗಳು ಇರುವುದನ್ನು ತಿಳಿದು ಸಂತೋಷಪಟ್ಟರು. ಮಹಾತ್ಮಗಾಂಧೀಜಿಯವರ ಭೇಟಿ ನೀಡಿದ ನಂತರ ಇಲ್ಲಿನ ಜನ ಸಾಮಾನ್ಯರಿಗೆ ರಾಷ್ಟ್ರಮಟ್ಟದಲ್ಲಿ ವಿಚಾರ ಜನಪ್ರಿಯವಾಯಿತ್ತಲ್ಲದೆ ಜಿಲ್ಲೆಯ ಸ್ವಾತಂತ್ರ್ಯ ಚಳುವಳಿಯ ಮೇಲೂ ತೀವ್ರತರವಾದ ಪ್ರಭಾವನ್ನುಂಟು ಮಾಡಿತು.[೫] ಹರಿಜನ ನಿಧಿಗಾಗಿ ಎಸ್.ಸಿ. ಮಲ್ಲಯ್ಯನವರ ಅಳಿಯ ವಿ.ಬಿ.ತಮ್ಮಯ್ಯನವರು ತಮ್ಮ ಕಿವಿಯ ಹತ್ತ ಕಡಕುಗಳನ್ನೇ ಬಿಚ್ಚಿ ನಿಧಿಗೆ ಅರ್ಪಿಸಿದರು.[೬] ಮಹಾತ್ಮಗಾಂಧೀಜಿಯವರಿಂದ ಪ್ರಭಾವಿತರಾದವರಲ್ಲಿ ಮಂಡ್ಯದ ಕಲ್ಲಹಳ್ಳಿ ಸಿದ್ದೇಗೌಡರು ಒಬ್ಬರು. ಮಂಡ್ಯದ ಮಾಧ್ಯಮಿಕ ಪಾಠಶಾಲೆಯ ಎಲ್ಲಾ ಕೋಮಿನ ಬಡ ವಿದ್ಯಾರ್ಥಿಗಳಿಗೆ ಪುಸ್ತಕಗಳನ್ನು ಧರ್ಮಾರ್ಥವಾಗಿ ನೀಡಿದರು. ಈ ಕಾರ್ಯವನ್ನು ಮೂರು ವರ್ಷಗಳು ನಡೆಸಿದರು. ೧೧.೦೭.೧೯೩೭ರಲ್ಲಿ ೧೫ ರೂಪಾಯಿಯ ಹೊಸ ಪುಸ್ತಕಗಳು ೧೫ ರೂಪಾಯಿಯ ಬೆಲೆಬಾಳತಕ್ಕ ಹಳೆಯ ಪುಸ್ತಕಗಳು ಒಟ್ಟು ೩೦ ರೂಪಾಯಿ ಬೆಲೆಬಾಳುವ ಪುಸ್ತಕಗಳನ್ನು ದಾನವಾಗಿ ನೀಡಿದ್ದರು. ೧೯೩೭ರಲ್ಲಿ ೧೫ ಮಂದಿ ಹರಿಜನ ವಿದ್ಯಾರ್ಥಿಗಳಿಗೆ ಪುಸ್ತಕಗಳನ್ನು ನೀಡಿ ಅಸ್ಪೃಶ್ಯ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ನೆರವಾದರು.[೭]

**ಮಂಡ್ಯ ಜಿಲ್ಲೆಯಲ್ಲಿ ಪಾನ ನಿರೋಧ ಚಳುವಳಿ:** ಮಹಾತ್ಮಗಾಂಧೀಜಿಯವರ ಪ್ರಭಾವ ಮಂಡ್ಯ ಜಿಲ್ಲೆಯ ಜನಸಾಮಾನ್ಯರಲ್ಲಿ ಮಾತ್ರವಲ್ಲದೇ ಜಿಲ್ಲೆಯ ಎಲ್ಲಾ ವರ್ಗದ ಜನರಲ್ಲಿ ಒಂದು ಹೊಸ ಸಂಚಲನವನ್ನೇ ಉಂಟು ಮಾಡಿತು. ಸಮಾಜದಲ್ಲಿ ಮನೆ ಮಾಡಿಕೊಂಡಿದ್ದ ಕುಡಿತವನ್ನು ತೊಲಗಿಸಲು ಜಿಲ್ಲೆಯ ಒಂದು ರಚನಾತ್ಮಕ ಕಾರ್ಯಕರ್ತರು ಆಂದೋಲನವನ್ನೇ ಆರಂಭಿಸಿದರು. ೧೯೪೨ರಲ್ಲಿಯೇ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ಅರಕೆರೆ ಗ್ರಾಮದ ಎ.ಕೆಂಚಪ್ಪನವರು ತಮ್ಮ ಮಿತ್ರರಾದ ಎ.ಜೆ.ಲಿಂಗಪ್ಪ, ಯು.ಕೆಂಚಪ್ಪ, ಎಂ. ಪುಟ್ಟೇಗೌಡ, ಎ.ಸಿ.ಮಾದೇಗೌಡ ರವರೊಡಗೂಡಿ ತಾಲ್ಲೂಕಿನ ಬಳ್ಳೇಕೆರೆ, ನೇರಲಕೆರೆ, ತಡಗವಾಡಿ, ಕೊಡಿಯಾಲ, ಕೊಡಗಹಳ್ಳಿ, ಬನ್ನೂರು, ಅಂಗರಹಳ್ಳಿ, ಅರವಟ್ಟಿಗೆಕೊಪ್ಪಲು ಮತ್ತಿತರ ಗ್ರಾಮಗಳಲ್ಲಿದ್ದ ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್ ನಡೆಸಿದರು. ಈ ಸಮಯದಲ್ಲಿ ಅಲ್ಲಿಗೆ ಕುಡಿಯಲು ಬರುತ್ತಿದ್ದ ಜನರಿಗೆ ಇವರುಗಳು ಕುಡಿಯುವುದು ಅತ್ಯಂತ ಪಾಪದ ಕೆಲಸವೆಂದೂ ಅದರಿಂದ ಉಂಟಾಗುವ ದುಷ್ಪರಿಣಾಮಗಳನ್ನು ವಿವರಿಸಿ ಹೇಳುತ್ತಿದ್ದರು. ಇವರುಗಳ ಈ ರೀತಿಯ ಪಾನನಿರೋಧ ಚಳುವಳಿಯ ಫಲವಾಗಿ ಶ್ರೀರಂಗಪಟ್ಟಣ ತಾಲ್ಲೂಕಿನಾದ್ಯಂತ ಅಂದು ಬಹುತೇಕ ಹೆಂಡದಂಗಡಿಗಳು ಮುಚ್ಚಲ್ಪಟ್ಟವಲ್ಲದೆ ಕುಡುಕರ ಸಂಖ್ಯೆಯು ಸಹ ಕಡಿಮೆಯಾಗಿದ್ದಿತು.[೮]

ಈ ಎಲ್ಲ ಚಟುವಟಿಕೆಗಳನ್ನು ನಡೆಸುವಲ್ಲಿ ಒಂದು ಸಿದ್ಧಪಡೆಯೇ ಕಾರ್ಯಪ್ರವೃತ್ತವಾಗಿತ್ತು. ಯು.ಕೆಂಚಪ್ಪ, ಎಂ.ಪುಟ್ಟೇಗೌಡ, ಎ.ಜಿ.ಚುಂಚೇಗೌಡ, ಎ.ಜಿ.ಲಿಂಗಪ್ಪನವರು ಈ ಗುಂಪಿಗೆ ಸೇರಿದವರು, ಧನಿಕರಾಗಿದ್ದ ಎ.ಜಿ.ಚುಂಚೇಗೌಡರು ಮಹತ್ವದ ಚಳುವಳಿಗಳಲ್ಲಿ ಧನಧಾನ್ಯಗಳನ್ನು ಸಹಾಯ ಮಾಡುವುದರ ಮೂಲಕ ತಮ್ಮದೇ ಆದ ಕೊಡುಗೆ ನೀಡಿದರು. ಕೆ.ಪುಟ್ಟಸ್ವಾಮಿಯವರು ಸಹ ಈ ಗೆಳೆಯರ ಗುಂಪಿನ ಕಾರ್ಯಕರ್ತರಾಗಿದ್ದು ಸತತವಾಗಿ ಚಳುವಳಿಯಲ್ಲಿ ಪಾಲ್ಗೊಂಡರು ಪಾಲಹಳ್ಳಿ, ಬೆಳಗೊಳ, ಚಂದಗಾಲು, ನಗುವನಹಳ್ಳಿ, ಗಂಜಾಂ ಮುಂತಾದ ಊರುಗಳವರೂ ತಮ್ಮ ನೆರೆಹೊರೆಯ ಊರಿನ ಗೆಳೆಯರು ಒಂದುಗೂಡಿ ಚಳುವಳಿಗಳನ್ನು ನಡೆಸಿದರು.

ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕು ಲಕ್ಷ್ಮೀಸಾಗರದ ಚಲುವೇಗೌಡರು ೧೯೪೨ರಲ್ಲಿ ತಮ್ಮ ತಾಲ್ಲೂಕಿನಾದ್ಯಂತ ಪಾನ ನಿರೋಧದ ಬಗ್ಗೆ ಒಂದು ಹೋರಾಟವನ್ನೇ ಆರಂಭಿಸಿದರು. ಅದರಂತೆ ಚಲುವೇಗೌಡರು ತಮ್ಮ ಮಿತ್ರರೊಡಗೂಡಿ ೧೯೪೨ ಅಕ್ಟೋಬರ್ ೫ ರಂದು ಪಾಂಡವಪುರದಲ್ಲಿನ ಎಲ್ಲಾ ಹೆಂಡದಂಗಡಿಗಳಿಗೆ ಬೆಂಕಿ ಇಟ್ಟು ಅವುಗಳನ್ನು ನಿರ್ನಾಮ ಮಾಡಿದರು. ಇದರಿಂದ ಸಿಟ್ಟಿಗೆದ್ದ ಸರ್ಕಾರ ಚಲುವೇಗೌಡರನ್ನು ಬಂಧಿಸಿ ಪಾಂಡವಪುರದಲ್ಲಿನ ಕುದುರೆಲಾಯ (ಈಗಿನ ಬಾಲಿಕಾ ಪ್ರೌಢಶಾಲೆ)ದಲ್ಲಿ ಒಂದು ರಾತ್ರಿ ಅವರಿಗೆ ಊಟವನ್ನು ಸಹಕೊಡದೆ ಇಟ್ಟಿದ್ದಿತು. ಅನಂತರ ಸರ್ಕಾರ ಚಲುವೇಗೌಡರನ್ನು ಶ್ರೀರಂಗಪಟ್ಟಣ, ನಾಗಮಂಗಲ ಮತ್ತು ಮಂಡ್ಯದಲ್ಲಿನ ಪೊಲೀಸ್ ಠಾಣೆಗಳಲ್ಲಿ ಕೆಲವು ದಿನಗಳ ಕಾಲ ಪೊಲೀಸ್ ಬಂಧನದಲ್ಲಿರಿಸಿದ್ದಿತು. ಅನಂತರ ಸರ್ಕಾರ ಅವರನ್ನು ಬೆಂಗಳೂರು ಜೈಲಿನಲ್ಲಿ ೨೦ ದಿನಗಳ ಕಾಲ ಮತ್ತು ಮೈಸೂರು ಜೈಲಿನಲ್ಲಿ ಮೂರುವರೆ ತಿಂಗಳ ಸೆರಮನೆ ವಾಸವನ್ನನುಭವಿಸುವಂತೆ ಮಾಡಿತು. ಇಷ್ಟೊಂದು ಶಿಕ್ಷೆಯನ್ನು ಅನುಭವಿಸಿ ಬಂದ ನಂತರವು ಚಲುವೇಗೌಡರು ಪಾಂಡವಪುರದಲ್ಲಿ ಮತ್ತೆ ಪಾನನಿರೋಧದ ಬಗ್ಗೆ ಪಿಕೆಟಿಂಗ್‌ನ್ನು ಆರಂಭಿಸಿದರು. ಮತ್ತೆ ಸರ್ಕಾರ ಇವರನ್ನು ಬಂಧಿಸಿ ಮಂಡ್ಯದ ಜೈಲಿನಲ್ಲಿರಿಸಿತು. ದಿನಾಂಕ ೧೨.೧೦.೧೯೪೭ರಂದು ಚಲುವೇಗೌಡರು ಮಂಡ್ಯ ಜೈಲಿನಿಂದ ಬಿಡುಗಡೆಗೊಂಡರು.[೯]

೧೯೪೨ರ ವೇಳೆಯಲ್ಲಿಯೇ ಮಂಡ್ಯ ಜಿಲ್ಲೆ ನಾಗಮಂಗಲದ ಎಂ.ಆರ್.ಎನ್. ಶಾಸ್ತ್ರಿಯವರು ಮೈಸೂರಿನ ಯಶೋಧರಮ್ಮ ದಾಸಪ್ಪನವರ ಪ್ರೋತ್ಸಾಹದಿಂದ ನಾಗಮಂಗಲ ತಾಲ್ಲೂಕಿನಾದ್ಯಂತ ಪಾನನಿರೋಧದ ಬಗ್ಗೆ ಚಳುವಳಿಯನ್ನು ನಡೆಸಿದ್ದರು. ಎಂ.ಆರ್.ಎನ್. ಶಾಸ್ತ್ರಿಯವರು ನಾಗಮಂಗಲ ತಾಲ್ಲೂಕಿನ ಹೆಂಡದಂಗಡಿ ಪಿಕೆಟಿಂಗ್ ಸತ್ಯಾಗ್ರಹದ ನಿರ್ದೇಶಕ ಮತ್ತು ಮೇಲ್ವಿಚಾರಕರಾಗಿ ಹೋರಾಟ ಮಾಡಿದ್ದರು.[೧೦] ಇದೇ ವೇಳೆಯಲ್ಲಿ ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೂಕು ಕೊಪ್ಪ ಗ್ರಾಮದ ಕೆ.ಆರ್.ಗುಂಡೂರಾವ್‌ರವರು ತಮ್ಮ ಮಿತ್ರರಾದ ಸಂಪಂಗಿ ರಾಮಯ್ಯನವರ ಜೊತೆಗೂಡಿ ಚಿಕ್ಕಬಳ್ಳಾಪುರದ ಹೆಂಡದಂಗಡಿ ಮುಂದೆ ಪಿಕೆಟಿಂಗ್ ನಡೆಸಿ ಅಲ್ಲಿನ ಹೆಂಡದಂಗಡಿಯನ್ನು ಮುಚ್ಚಿಸುವಲ್ಲಿ ಯಶಸ್ವಿಯಾಗಿದ್ದರು".[೧೧]

ಅಸ್ಪೃಶ್ಯರಿಗೆ ಕೆರೆ ನೀರಿನ ಬಳಕೆ ಹಾಗೂ ದೇವಾಲಯ ಪ್ರವೇಶ ಚಳುವಳಿ

ಮೈಸೂರು ಸಂಸ್ಥಾನದಾದ್ಯಂತ ಅಸ್ಪೃಶ್ಯರ ಸ್ಥಿತಿಗತಿ ಅತ್ಯಂತ ಶೋಚನೀಯವಾಗಿತ್ತು. ಅಸ್ಪೃಶ್ಯರು ಸಾರ್ವಜನಿಕ ರಸ್ತೆಗಳಲ್ಲಿ ಎಲ್ಲರಂತೆ ಓಡಾಡುವಂತಿರಲಿಲ್ಲ ಹಾಗೂ ಸಾರ್ವಜನಿಕ ಬಾವಿ, ಕೊಳ, ಕೆರೆ, ಕಟ್ಟೆಗಳಿಂದ ನೀರನ್ನು, ಸ್ವತಃ ಸೆಳೆದುಕೊಂಡು ಉಪಯೋಗಿಸುವಂತಿರಲಿಲ್ಲ. ಈ ಒಂದು ಪರಿಸ್ಥಿತಿಯು ಇಡೀ ಮೈಸೂರು ಸಂಸ್ಥಾನದಾದ್ಯಂತ ಹರಿಜನರಲ್ಲಿ ಅತ್ಯಂತ ಧಾರುಣ ಕಷ್ಟಗಳಿಗೆ ಒಳಪಡಿಸಿದ್ದಿತು. ಹರಿಜನರಿಗೆ ಶೈಕ್ಷಣಿಕ ಅವಕಾಶಗಳನ್ನು ನಿರಾಕರಿಸಲಾಗಿದ್ದಿತು. ಶಾಲೆ ಕಾಲೇಜುಗಳಲ್ಲಿ ನೃತ್ಯ ನಾಟಕ ಶಾಲೆಗಳಲ್ಲಿ ಅಧ್ಯಯನ ಮಾಡಲು ಅವರಿಗೆ ಅವಕಾಶವಿರಲಿಲ್ಲ. ಅಂದು ಹರಿಜನರು ಕೆರೆಗಳಲ್ಲಿ ನೀರನ್ನು ತಮ್ಮ ದಿನನಿತ್ಯದ ಕಾರ್ಯಗಳಿಗೆ ಉಪಯೋಗಿಸಿಕೊಳ್ಳಬಹುದೆಂದು ಸರಕಾರ ತಿಳಿಸಿದ್ದರೂ ಸಹ ಅನೇಕ ಕಡೆಗಳಲ್ಲಿ ಸವರ್ಣೀಯರ ಭಯದಿಂದ ಕೆರೆಗಳಲ್ಲಿನ ನೀರನ್ನು ಉಪಯೋಗಿಸಲು ಹರಿಜನರು ಹಿಂಜರಿಯುತ್ತಿದ್ದರು. ಇಂತಹ ಸಮಯದಲ್ಲಿ ರಾಮಚಂದ್ರರಾಯರು ಮೈಸೂರು ಸಂಸ್ಥಾನದ ಅನೇಕ ಕಡೆ ಪ್ರವಾಸ ಕೈಗೊಂಡು ಹರಿಜನರಲ್ಲಿ ಧೈರ್ಯ ತುಂಬಿ ಅವರುಗಳು ಕಾಲಕ್ರಮೇಣ ಕೆರೆಯ ನೀರನ್ನು ನಿರ್ಭಯವಾಗಿ ತಮ್ಮ ದಿನನಿತ್ಯದ ಚಟುವಟಿಕೆಗಳಲ್ಲಿ ಉಪಯೋಗಿಸುವಂತೆ ಮಾಡುವಲ್ಲಿ ಯಶಸ್ವಿಯಾದರು. ಮಂಡ್ಯ ಸಮೀಪದ ಕೊಮ್ಮೇರಹಳ್ಳಿಯಲ್ಲಿನ ಹರಿಜನರು ಅಲ್ಲಿನ ಕೆರೆ ನೀರನ್ನು ಉಪಯೋಗಿಸಲು ಹಿಂಜರಿಯುತ್ತಿದ್ದರು. ಇದನ್ನು ಮನಗಂಡ ರಾಮಚಂದ್ರರಾಯರು ಮಂಡ್ಯದಲ್ಲಿನ ಲಕ್ಷ್ಮೀಜನಾರ್ಧನ ಸ್ವಾಮಿ ದೇವಾಲಯದ ಬಳಿಯ ಛತ್ರವೊಂದರಲ್ಲಿ ಉಳಿದುಕೊಂಡು ಅಲ್ಲಿಂದ ಎರಡು ಮೈಲಿದೂರವಿದ್ದ ಕೊಮ್ಮೇರಹಳ್ಳಿಗೆ ಪ್ರತಿನಿತ್ಯ ನಡೆದುಕೊಂಡು ಹೋಗಿ ಅಲ್ಲಿನ ಹರಿಜನರು ಕೆರೆಯ ನೀರನ್ನು ಉಪಯೋಗಿಸುವಂತೆ ಧೈರ್ಯ ತುಂಬಿದುದ್ದಲ್ಲದೆ ಅಥರಲ್ಲಿ ಒಂದು ಜಾಗೃತಿಯನ್ನುಂಟು ಮಾಡಿದ್ದರು.[೧೨]

ಮಹಾತ್ಮಗಾಂಧೀಜಿಯವರು ಮೈಸೂರು ಸಂಸ್ಥಾನಕ್ಕೆ ೨ನೇ ಬಾರಿ ಭೇಟಿ ನೀಡಿದಾಗ ಅಸ್ಪೃಶ್ಯತೆ ನಿವಾರಣೆ ಬಗ್ಗೆ ಜನರಲ್ಲಿ ಜಾಗೃತಿಯನ್ನುಂಟು ಮಾಡಿದರು. ೬.೧.೧೯೩೪ರಂದು ಬೆಳಿಗ್ಗೆ ಬೆಂಗಳೂರು ಕಡೆಗೆ ಹೊರಟಾಗ ಉದ್ದಕ್ಕೂ ಮಾರ್ಗ ಮಧ್ಯದಲ್ಲಿ ಮುಖ್ಯವಾದ ಸ್ಥಳಗಳಲ್ಲಿ ನಿಂತು ಸಂಕ್ಷಿಪ್ತ ಉಪನ್ಯಾಸ ಮಾಡಿ ಅಸ್ಪೃಶ್ಯತೆಯ ಭೂತವನ್ನು ತೊಲಗಿಸಲು ಕರೆಯಿತ್ತರು. ಈ ನಡುವೆ ಬ್ರಿಟಿಷರ ಆಳ್ವಿಕೆಯನ್ನು ನಿವಾರಿಸುವ ಅಗತ್ಯವನ್ನು ಹೇಳದಿರಲಿಲ್ಲ, ಅಂದು ಶ್ರೀರಂಗಪಟ್ಟಣದಲ್ಲಿ ಮಾಡಿದ ಗಾಂಧೀಜಿಯವರ ಭಾಷಣವು ಮಂಡ್ಯ ಜಿಲ್ಲೆಯ ಅಸ್ಪೃಶ್ಯರ ಜೀವನ ಸುಧಾರಣೆಯಲ್ಲಿ ಒಂದು ಸ್ಮರಣೀಯವಾದುದಾಗಿದೆ.[೧೩] ದಿನಾಂಕ ೮.೧೧.೧೯೪೭ರಂದು ಶ್ರೀರಂಗಪಟ್ಟಣದ ಪುರಸಭೆಯ ವಿಶೇಷಾಧಿವೇಶನವು ಅಲ್ಲಿನ ಅಮಲ್ದಾರರ ಅಧ್ಯಕ್ಷತೆಯಲ್ಲಿ ಜರುಗಿತು. ಈ ವಿಶೇಷ ಅಧಿವೇಶನದಲ್ಲಿ ಶ್ರೀರಂಗಪಟ್ಟಣದ ಹರಿಜನರು ಮನೆಗಳನ್ನು ಕಟ್ಟಿಕೊಳ್ಳಲು ಉಚಿತ ನಿವೇಶನಗಳನ್ನು ಹಂಚುವ ನಿರ್ಣಯವೊಂದನ್ನು ಡಾ. ಸಿ. ಬಂದೀಗೌಡ ಮತ್ತು ಕೆ. ಬಾಲಯ್ಯನವರುಗಳು ಮಂಡಿಸಿದ್ದರು.[೧೪] ಅಸ್ಪೃಶ್ಯರಿಗೆ ಮೈಸೂರು ಸಂಸ್ಥಾನದಾದ್ಯಂತ ದೇವಾಲಯಗಳಿಗೆ ಪ್ರವೇಶಾವಕಾಶವನ್ನು ದೊರಕಿಸಿಕೊಡುವ ದೃಷ್ಟಿಯಿಂದ ಅಖಿಲ ಮೈಸೂರು ಹರಿಜನ ದೇವಾಲಯ ಪ್ರವೇಶ ಸಮಿತಿಯ ಕಾರ್ಯನಿರ್ವಹಣಾಧಿಕಾರಿ ಸಭೆಯು ಪಿ.ಸುಬ್ಬರಾಮಯ್ಯಶೆಟ್ಟರ ನೇತೃತ್ವದಲ್ಲಿ ೧೦.೦೧.೧೯೪೪ರಂದು ಮೈಸೂರಿನಲ್ಲಿ ನಡೆಯಿತು. ಈ ಸಭೆಯಲ್ಲಿ ಕೈಗೊಂಡ ನಿರ್ಣಯವೆಂದರೆ ಸಮಿತಿ ಸದಸ್ಯರು ಬೆಂಗಳೂರು, ಮೈಸೂರು, ಮಂಡ್ಯ, ಚಿತ್ರದುರ್ಗ ಮತ್ತು ಶಿವಮೊಗ್ಗ ಇನ್ನೂ ಮುಂತಾದ ಜಿಲ್ಲೆಗಳಲ್ಲಿ ಪ್ರವಾಸ ಕೈಗೊಂಡು ಹರಿಜನರಿಗೆ ಮೈಸೂರು ಸಂಸ್ಥಾನದಾದ್ಯಂತ ಇರುವ ದೇವಾಲಯಗಳಿಗೆ ಪ್ರವೇಶಾವಕಾಶವನ್ನು ದೊರಕಿಸಿಕೊಡುವ ವಿಚಾರದಲ್ಲಿ ಸಾರ್ವಜನಿಕಾಭಿಪ್ರಾಯವನ್ನು ಸಂಗ್ರಹಿಸಬೇಕೆಂದು ತೀರ್ಮಾನಿಸಲಾಯಿತು.[೧೫] ದಿನಾಂಕ ೨.೨.೧೯೪೭ ರಂದು ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣದ ಶ್ರೀರಂಗನಾಥಸ್ವಾಮಿ ದೇವಾಲಯಕ್ಕೆ ಅಸ್ಪೃಶ್ಯರಿಗೆ ಪ್ರವೇಶಾವಕಾಶವನ್ನು ದೊರಕಿಸಿಕೊಡಲಾಯಿತು. ಅಂದಿನ ಮೈಸೂರು ಸಂಸ್ಥಾನದ ಮಂತ್ರಿಗಳಾಗಿದ್ದ ಕೋಟಿ ರೆಡ್ಡಿಯವರು ಈ ದೇವಾಲಯ ಪ್ರವೇಶ ಚಳುವಳಿಯ ನಾಯಕತ್ವವನ್ನು ವಹಿಸಿದ್ದರು. ಈ ದೇವಾಲಯ ಪ್ರವೇಶ ಚಳುವಳಿಯಲ್ಲಿ ಸುಮಾರು ೧೦ ಸಾವಿರಕ್ಕಿಂತಲೂ ಹೆಚ್ಚುಜನ ಭಾಗವಹಿಸಿದ್ದುದೊಂದು ಮೈಸೂರು ಸಂಸ್ಥಾನದ ಅಸ್ಪೃಶ್ಯರ ದೇವಾಲಯಗಳ ಪ್ರವೇಶ ಚಳುವಳಿಯಲ್ಲಿ ಅತ್ಯಂತ ಸ್ಮರಣೀಯವಾದ ಘಟನೆಯನ್ನಬಹುದು.[೧೬]

**ರಾಷ್ಟ್ರೀಯ ಶಿಕ್ಷಣ ಪ್ರಚಾರ:** ೧೯೩೪ರಲ್ಲಿ ಗಾಂಧೀಜಿಯವರು ರಚನಾತ್ಮಕ ಕಾರ್ಯಗಳ ಪ್ರಚಾರಕ್ಕಾಗಿ ಮೈಸೂರಿಗೆ ಆಗಮಿಸಿದ್ದರು. ಈ ಸಮಯದಲ್ಲಿ ಅವರು ಮೈಸೂರಿನ ಜನತೆ ಹಿಂದಿ ಕಲಿಕೆಯ ಬಗ್ಗೆ ಆ ಮೂಲಕ ರಾಷ್ಟ್ರೀಯ ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಡಬೇಕೆಂದು ಕರೆ ನೀಡಿದರು. ಗಾಂಧೀಜಿಯವರ ರಾಷ್ಟ್ರೀಯ ಶಿಕ್ಷಣದ ಪ್ರಭಾವಕ್ಕೊಳಗಾದ ಮಂಡ್ಯ ಜಿಲ್ಲೆ, ಮದ್ದೂರು ತಾಲ್ಲೋಕು, ಕೊಪ್ಪ ಗ್ರಾಮದ ಕೆ.ಆರ್.ಗುಂಡೂರಾವ್‌ರವರು ದಿನಾಂಕ ೧೧.೦೮.೧೯೩೭ ರಿಂದ ತಮ್ಮ ಗ್ರಾಮದಲ್ಲಿಯೇ ಹಿಂದಿಸೇವಾ ಮಂಡಲಿಯ ಹೆಸರಿನಲ್ಲಿ ಜನರಿಗೆ ಹಿಂದಿಯನ್ನು ಬೋಧಿಸುತ್ತಿದ್ದರು. ಈ ಮೂಲಕ ಅವರು ತಮ್ಮ ಗ್ರಾಮದ ಜನರುಗಳಿಗೆ ಹಿಂದಿಯ ಮಹತ್ವವನ್ನು ತಿಳಿಸುವ ಕಾರ್ಯಕೈಗೊಂಡಿದ್ದರು.[೧೭]

ಶ್ರೀರಂಗಪಟ್ಟಣ ಕಾಂಗ್ರೆಸ್ ಕಾರ್ಯಕರ್ತರು ಹಿಂದಿ ಭಾಷೆಯನ್ನು ಹೆಚ್ಚು ಹೆಚ್ಚಾಗಿ ತಮ್ಮ ಊರಿನಲ್ಲಿ ಜನಪ್ರಿಯಗೊಳಿಸಬೇಕೆಂಬ ದೃಷ್ಟಿಯಿಂದ ದಿನಾಂಕ: ೫.೨.೧೯೪೬ರಂದು ತಮ್ಮ ಕಾಂಗ್ರೆಸ್ ಕಛೇರಿಯಲ್ಲಿ 'ಮಹಾತ್ಮ ಗಾಂಧಿ ಹಿಂದಿ ಪಾಠಶಾಲೆ'ಯೊಂದನ್ನು ತೆರೆದರು. ಈ ಹಿಂದಿಪಾಠ ಶಾಲೆಯ ಆರಂಭೋತ್ಸವವನ್ನು ಎ.ಜಿ.ಬಂದೀಗೌಡರು ನೆರವೇರಿಸಿದರು, ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಕೆಂಪೇಗೌಡ, ಸಾಹುಕಾರ್ ಚಂದ್ರಶೇಖರಯ್ಯ, ವಿ.ಎನ್.ಶಾಸ್ತ್ರಿ ಮತ್ತು ಶ್ರೀನಿವಾಸಮೂರ್ತಿರವರುಗಳು ಹಿಂದಿ ಮಹತ್ವದ ಬಗ್ಗೆ ಅಲ್ಲಿನ ಜನತೆಗೆ ತಿಳಿಸುತ್ತಾ ಪ್ರತಿಯೊಬ್ಬರು ಹಿಂದಿಯನ್ನು ಕಲಿಯಬೇಕೆಂದರು.[೧೮] ಈ ಹಿಂದಿ ಪಾಠಶಾಲಾ ಅಭಿವೃದ್ಧಿಗಾಗಿ ಎಲ್.ಎಸ್. ಸುಬ್ರಹ್ಮಣ್ಯರವರು ಐದು ರೂಪಾಯಿಗಳನ್ನು ಡಾ. ಸಿ.ಬಂದೀಗೌಡ ಎರಡು ರೂಪಾಯಿಗಳನ್ನು ವೆಂಕಟರಮಣ ಹೆಬ್ಬಾರ್ ಮತ್ತು ವೆಂಕಟಪ್ಪನವರು ತಲಾ ಎರಡು ರೂಪಾಯಿಗಳನ್ನು ಪ್ರತಿತಿಂಗಳು ಕೊಡುವುದಾಗಿ ಭರವಸೆಯಿತ್ತರು.[೧೯]

**ಗ್ರಾಮಾಭಿವೃದ್ಧಿ ಕಾರ್ಯಗಳು:** ಗಾಂಧೀಜಿಯವರು ಸ್ವರಾಜ್ಯದ ಪರಿಕಲ್ಪನೆಯೊಂದನ್ನು ಹೊಂದಿದ್ದರು. ಗ್ರಾಮಗಳ ಉದ್ಧಾರ, ಗ್ರಾಮನೈರ್ಮಲೀಕರಣ, ಗ್ರಾಮಗಳಿಗೆ ಉಪಯುಕ್ತವಾಗುವಂತಹ ವಿಚಾರಗಳ ಪ್ರಚಾರ ಕೈ ಕಸುಬುಗಳ ಪುನರುದ್ಧಾರ ಮುಂತಾದ ಗ್ರಾಮಾಭಿವೃದ್ಧಿ ಕಾರ್ಯಗಳನ್ನು ಅವರು ವ್ಯವಸ್ಥೆ ಮಾಡಿದ್ದರು.

೧೯೨೭ರಲ್ಲಿ ಮೈಸೂರು ಸಂಸ್ಥಾನದ ಬಹುಭಾಗಗಳಲ್ಲಿ ಮಲೇರಿಯಾ ರೋಗವು ಕಾಣಿಸಿಕೊಂಡಿದ್ದಿತು. ಇದನ್ನು ತಡೆಗಟ್ಟಲು ರಾಕ್‌ಫೆಲರ್ ಸಂಸ್ಥೆಯ ಅಂತರ ರಾಷ್ಟ್ರೀಯ ಆರೋಗ್ಯ ಶಾಖೆಯ ಆಶ್ರಯದಲ್ಲಿ ಸಮೀಕ್ಷೆಯೊಂದನ್ನು ನಡೆಸಲಾಗಿದ್ದಿತು. ಈ ಸಂಸ್ಥೆಗೆ ಸೇರಿದ ಡಾ. ಸ್ವೆಟ್‌ರವರ ಸಲಹೆಯಂತೆ ಮಂಡ್ಯ ಜಿಲ್ಲಾ ಕೇಂದ್ರದಲ್ಲಿ ಮಲೇರಿಯಾ

ನಿಯಂತ್ರಣ ಕೇಂದ್ರಗಳನ್ನು ಸ್ಥಾಪಿಸಿದ್ದಿತು. ಇದೇ ವೇಳೆಯಲ್ಲಿ ಮೈಸೂರು ಸಂಸ್ಥಾನದ ಹಲವಾರು ಪ್ರದೇಶಗಳಲ್ಲಿ ಮಕ್ಕಳಿಗೆ ಕೊಕ್ಕೆಹುಳುವಿನ ಮತ್ತು ಮಲೇರಿಯಾ ರೋಗಗಳೆರಡರ ವಿಷಯದಲ್ಲಿ ಸಮೀಕ್ಷೆಯೊಂದನ್ನು ನಡೆಸಿತು. ಅನಂತರ ಸರ್ಕಾರ ಮಂಡ್ಯದಲ್ಲಿ ಗ್ರಾಮೀಣ ಆರೋಗ್ಯಸಂಸ್ಥೆ ಎಂಬ ಶಾಖೆಯೊಂದನ್ನು ಪ್ರಾರಂಭಿಸಿದ್ದಿತು. ಈ ಸಂಸ್ಥೆ ಕೇವಲ ಎರಡು ವರ್ಷಗಳ ಅವಧಿಯಲ್ಲಿ ೧೪.೦೦೦ ಮಕ್ಕಳನ್ನು ವೈದ್ಯಕೀಯ ಪರೀಕ್ಷೆಗೊಳಪಡಿಸಿ ಅವರಿಗೆ ಉಂಟಾಗಿದ್ದ ಕೊಕ್ಕೆಹುಳುವಿನ ರೋಗವನ್ನು ಗುಣಪಡಿಸಿದ್ದಿತು.[೨೦] ಹಾಗೆಯೇ ಅಂದು ಜನರಿಗೆ ಹರಡಿದ್ದ ಇನ್ನಿತರ ರೋಗಗಳಾದ ಕಾಲರಾ, ಪ್ಲೇಗುಗಳ ಬಗ್ಗೆಯೂ ಮಂಡ್ಯ ಗ್ರಾಮೀಣ ಆರೋಗ್ಯ ಸಂಸ್ಥೆಯವರು ಪರೀಕ್ಷೆ ನಡೆಸಿದರು. ಆ ಪ್ರಕಾರ ಕಾಲರಾ ರೋಗವನ್ನು ತಟ್ಟೆಗಟ್ಟಲು ೧೫.೦೦೦ ಜನರಿಗೆ, ಪ್ಲೇಗು ರೋಗವನ್ನು ತಡೆಗಟ್ಟಲು ೧೦.೦೦೦ ಜನರಿಗೆ ಈ ಸಂಸ್ಥೆಯವರು ಚಿಕಿತ್ಸೆಯನ್ನು ನೀಡಿದ್ದರು.

ದಿನಾಂಕ ೨೦.೧೨.೧೯೪೩ರಂದು ಅಂದಿನ ಮೈಸೂರು ಮಹಾರಾಜರಾಗಿದ್ದ ಜಯಚಾಮರಾಜ ಒಡೆಯರ್ ಅವರು ಮಂಡ್ಯಕ್ಕೆ ಭೇಟಿ ನೀಡಿದ್ದರು. ಈ ಸಮಯದಲ್ಲಿ ಅಲ್ಲಿನ ಪೌರಸಭೆಯವರೂ, ಜಿಲ್ಲಾ ಬೋರ್ಡಿನವರು ಸೇರಿ ಮಹಾರಾಜರಿಗೆ ಭಿನ್ನವತ್ತಳೆಯೊಂದನ್ನು ಅರ್ಪಿಸಿದರು. ಅನಂತರ ತಮ್ಮ ಭಾಷಣದಲ್ಲಿ ಈ ರೀತಿ ತಿಳಿಸಿದರು. ಮಂಡ್ಯ ಜಿಲ್ಲೆಯ ಬಹುಭಾಗವೆಲ್ಲಾ ನೀರಾವರಿಗೆ ಒಳಪಟ್ಟು ಸಾಗುವಳಿ ಹೆಚ್ಚಾದುದರಿಂದ ಇಲ್ಲಿನ ಜನರ ಆರೋಗ್ಯ ಸ್ಥಿತಿಗೆ ಸಂಬಂಧಿಸಿದಂತೆ ಅನೇಕ ಕಾಯಿಲೆಗಳು ಉದ್ಭವಿಸುತ್ತಿವೆ, ಅದರಲ್ಲೂ ಈ ಪ್ರದೇಶದಲ್ಲಿ ಸದ್ಯದಲ್ಲಿ ತಲೆದೋರಿರುವ ಮಲೇರಿಯಾ ರೋಗದ ಹಾವಳಿಯನ್ನು ಶಾಶ್ವತವಾಗಿ ತಡೆಗಟ್ಟುವುದಕ್ಕೆ ತಮ್ಮ ಸರ್ಕಾರ ಸಾಧ್ಯವಾದಷ್ಟು ಕ್ರಮಗಳನ್ನು ಕೈಗೊಳ್ಳುವುದಾಗಿ ತಿಳಿಸಿದ್ದರು. ಅಷ್ಟೇಅಲ್ಲದೇ ಮಂಡ್ಯ ನಗರದ ಅಭಿವೃದ್ಧಿಗೋಸ್ಕರ ಮತ್ತು ಅಲ್ಲಿ ಹೆಚ್ಚುತ್ತಿರುವ ಜನಸಂಖ್ಯೆಗನುಗುಣವಾಗಿ ಉತ್ತಮ ರೀತಿಯ ಬಡಾವಣೆಗಳನ್ನು ನಿರ್ಮಿಸುವಂತೆ ಅಲ್ಲಿನ ಪೌರಸಭೆಯವರಿಗೆ ಮಹಾರಾಜರು ಕರೆಯಿತ್ತರು. ಈ ನಿಟ್ಟಿನಲ್ಲಿ ಮಂಡ್ಯ ಜಿಲ್ಲೆಯಾದ್ಯಂತ ನಗರ ಮತ್ತು ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಗೆ ಸರ್ಕಾರವು ಸಾಧ್ಯವಿದ್ದಷ್ಟು ಸೌಲಭ್ಯಗಳನ್ನು ಒದಗಿಸಿಕೊಡುವುದಾಗಿ ಶ್ರೀ ಜಯಚಾಮರಾಜ ಒಡೆಯರು ಈ ಸಭೆಯಲ್ಲಿ ಭರವಸೆಯಿತ್ತರು.[೨೧]

ಹೀಗೆ ಮೈಸೂರು ಸಂಸ್ಥಾನದ ಒಂದು ಜಿಲ್ಲೆಯಾದ ಮಂಡ್ಯ ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಗಳು ಸಾಕಾರಗೊಂಡು ಜಿಲ್ಲೆಯಲ್ಲಿ ಗಾಂಧೀಜಿಯವರ ಈ ಕಾರ್ಯಗಳಿಗೆ ವ್ಯಾಪಕವಾದ ಪ್ರತಿಸ್ಪಂದನೆ ದೊರೆತಿದೆ. ಮಂಡ್ಯ ಜಿಲ್ಲೆಯ ನಾಯಕರು ಗಾಂಧೀಜಿಯವರ ಅನುಯಾಯಿಗಳಾದರಲ್ಲದೇ ಅವರ ನಾಯಕತ್ವದಲ್ಲಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ತಲಾತಲಾಂತರಗಳಿಂದ ಮಂಡ್ಯ ಪ್ರದೇಶದಲ್ಲಿ ನೆಲೆಯೂರಿದ ಅಸ್ಪೃಶ್ಯತೆ, ಪಾನನಿರೋಧ ಮತ್ತು ದೇವಾಲಯಗಳ ಪ್ರವೇಶ ಚಳುವಳಿ ನಡೆದು ಯಶಸ್ವಿಯಾದವು. ಗ್ರಾಮೀಣರಲ್ಲಿ ಸ್ವಾವಲಂಬನೆಯ ಬೀಜವನ್ನು ಬಿತ್ತರಲ್ಲದೇ ಗ್ರಾಮ ಸ್ವರಾಜ್ಯ ಮತ್ತು ಗ್ರಾಮನೈರ್ಮಲೀಕರಣಗಳಂತಹ ಕಾರ್ಯಕ್ರಮಗಳನ್ನು ಕೈಗೊಳ್ಳುವಂತೆ ಮಂಡ್ಯ ಜಿಲ್ಲೆಯ ಜನರನ್ನು ಪ್ರೇರೇಪಿಸಿದರು.

## ಅಡಿಟಿಪ್ಪಣಿಗಳು

೧) ರಾಜೇಗೌಡ.ಹ.ಕ. (ಸಂ.) (೧೯೮೮), ಸಿಂಗಾರ (ಕೆ.ಸಿಂಗಾರಿಗೌಡ ಅಭಿನಂದನಗ್ರಂಥ) ಮಂಡ್ಯ, ಪು. ೩೧೫.
೨) ವೇಮಗಲ್ ಸೋಮಶೇಖರ–ಮಹಾತ್ಮರ ಹೆಜ್ಜೆಗುರುತು, ಪು. ೭೪.
೩) ಸಿದ್ದವನಹಳ್ಳಿ ಕೃಷ್ಣಶರ್ಮ (ಸಂ.) (೧೯೭೦) ಗಾಂಧೀ ಮತ್ತು ಕರ್ನಾಟಕ, ಬೆಂಗಳೂರು, ಪುಟ ೨೦೪, ೨೪೧.
೪) ಅದೇ ಪು. ೨೪೧.
೫) ಹೊನ್ನ ಹೊಂಬಾಳೆ (೨೦೧೩) ಸುವರ್ಣ ಸಂಚಿಕೆ ಸೋಮನಹಳ್ಳಿ ವಿದ್ಯಾಸಂಸ್ಥೆ, ಮದ್ದೂರು – ಪು. ೦೪
೬) ಪೂರ್ಣಿಮ.ಟಿ.ಸಿ. ಪ್ರತಿಭಾವಂತ ಸಂಸದೀಯಪಟುಗಳ ಬದುಕುಬರಹ ಮಾಲಿಕೆ, ಎಸ್.ಸಿ.ಮಲ್ಲಯ್ಯ, ಪು.೦೫.
೭) ಸಾಧ್ವಿ ಪತ್ರಿಕೆ, ೧೨.೦೭.೧೯೩೭, ಸಂ. ೨, ಸಂಚಿಕೆ ೨೬.
೮) ಸೂರ್ಯನಾಥಯು ಕಾಮತ್–ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ. ೨, ಪು. ೩೮೬.
೯) ಅದೇ ಸಂ. ೨, ಪು. ೮೧೭. ೧೦) ಅದೇ ಸಂ. ೨ ಪು. ೩೯೦. ೧೧) ಅದೇ ಸಂ. ೨, ಪು. ೩೯೮.
೧೨) ಜೋಯಿಸ್.ಎಂ.ಎನ್.(ಸಂ.)(೧೯೭೪) ಕರ್ಮಯೋಗಿ ತಗಡೂರು ರಾಮಚಂದ್ರರಾಯರ ಅಭಿನಂದನಗ್ರಂಥ, ಪು. ೧೦೮, ೧೦೯.
೧೩) ರಾಜೇಗೌಡ.ಹ.ಕ. (ಸಂ.), ಪೂರ್ವೋಕ್ತ, ಪು. ೩೦೫. ೧೪) ಸಾಧ್ವಿ ಪತ್ರಿಕೆ, ೮.೧೧.೧೯೪೭.
೧೫) ಸಾಧ್ವಿ ಪತ್ರಿಕೆ ದಿನಾಂಕ ೧೧.೦೧.೧೯೪೪. ೧೬) ಸಾಧ್ವಿ ತ್ರಿಕೆ, ೦೨.೦೨.೧೯೪೭.
೧೭) ಸೂರ್ಯನಾಥ್.ಯು.ಕಾಮತ್ (ಸಂ.೨)–ಪೂರ್ವೋಕ್ತ ಪು. ೩೯. ೧೮) ಸಾಧ್ವಿ ಪತ್ರಿಕೆ, ದಿನಾಂಕ ೦೫.೦೨.೧೯೪೬.
೧೯) ಸಾಧ್ವಿ ಪತ್ರಿಕೆ ದಿನಾಂಕ ೨೬.೦೨.೧೯೪೬. ೨೦) ಶ್ರೀನಿವಾಸ್‌ರಾವ್ ಕೆ.ಆರ್.ಮೈಸೂರು ಕೈಪಿಡಿ, ಪು. ೫೮.
೨೧) ಸಾಧ್ವಿ ಪತ್ರಿಕೆ, ೨೦.೧೨.೧೯೪೩.

# ಸ್ವಾತಂತ್ರ್ಯ ಹೋರಾಟಗಾರ ಭಗವಾನ್‌ಸಿಂಗ್ ಅಂಗಡಿ

ಎಂ.ಎಚ್. ಮೊಕಾಶಿ*

**ಕ**ರ್ನಾಟಕದಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರತಿಯೊಂದು ಜಿಲ್ಲೆ, ನಗರ, ಗ್ರಾಮಗಳು ತಮ್ಮದೇ ಆದ ಕೊಡುಗೆಗಳನ್ನು ನೀಡಿವೆ. ಅದರಲ್ಲಿ ವಿಜಯಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಪುಟ್ಟ ಗ್ರಾಮವೇ ಹಿಟ್ಟಿನಹಳ್ಳಿ. ಈ ಗ್ರಾಮವು ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಿರಂತರವಾಗಿ ಭಾಗಿಯಾಗಿತ್ತು. ಪ್ರಮುಖವಾಗಿ ೧೯೪೨ ರಲ್ಲಿ ನಡೆದ ಭಾರತ ಬಿಟ್ಟು ತೊಲಗಿ ಚಳುವಳಿಯಲ್ಲಿ ಪ್ರಮುಖ ಕೊಡುಗೆಯನ್ನು ನೀಡಿದೆ. ಇದರ ಪಕ್ಕದ ಗ್ರಾಮ ಚಿಕ್ಕರೂಗಿ ಇಲ್ಲಿ ೨೦ಕ್ಕೂ ಅಧಿಕ ಜನರು ಭಾಗಿಯಾಗಿ ಚಳುವಳಿಯನ್ನು ಯಶಸ್ವಿಗೊಳಿಸುವಲ್ಲಿ ಮಹತ್ವದ ಪಾತ್ರ ವಹಿಸಿದ್ದಾರೆ. ಇವರೊಂದಿಗೆ ಸೇರಿ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಮುಖ ಪಾತ್ರ ವಹಿಸಿದವರಲ್ಲಿ ಭಗವಾನಸಿಂಗ್ ಅಂಗಡಿಯವರು ಒಬ್ಬರಾಗಿದ್ದಾರೆ.

ಭಗವಾನಸಿಂಗ್ ಅಂಗಡಿಯವರು ೧೩ ಮಾರ್ಚ ೧೯೧೫ರಲ್ಲಿ ಹಿಟ್ಟಿನಹಳ್ಳಿ ತಾಂಡಾದಲ್ಲಿ ಜನಿಸಿದರು. ತಂದೆ ದಾದೂಸಿಂಗ್ ತಾಯಿ ಝುಮಲಾಬಾಯಿ. ಮೂಲತಃ ಲಮಾಣಿ (ಲಂಬಾಣಿ) ಸಮಾಜದವರು. ಅಜ್ಜನ ಕಾಲದಿಂದಲೂ ಅಂಗಡಿ ವ್ಯಾಪಾರ ಮಾಡಿಕೊಂಡು ಬಂದಿದ್ದ ಮನೆತನವು ಶ್ರೀಮಂತಿಕೆಯನ್ನು ಹೊಂದಿತ್ತು. ಆದರೆ ನಂತರದ ಸಮಯದಲ್ಲಿ ಅಂಗಡಿ ಮುಚ್ಚಿ ಕುಟುಂಬ ಬಡತನದ ಬೇಗೆಯನ್ನು ಅನುಭವಿಸಬೇಕಾಯಿತು. ಭಗವಾನಸಿಂಗ್‌ರದು ಬಾಲ್ಯದಲ್ಲಿ ಶಿಕ್ಷಣ ಪಡೆಯಬೇಕೆಂಬ ಇಚ್ಚೆ ಅದಮ್ಯವಾಗಿತ್ತು. ಆದರೆ ಅದಕ್ಕೆ ತಕ್ಕ ವಾತಾವರಣ ದೊರೆಯದರಿಂದ ಅದು ಅರ್ಧಕ್ಕೆ ನಿಂತಿತು. ಸ್ಥಳಿಯ ತಾಂಡಾದಲ್ಲಿ ಶಾಲೆಯಿರದರಿಂದ ಕೆಲದಿನ ಮನೆಯಲ್ಲಿಯೇ ಪಾಲಕರ ಆಶ್ರಯದಲ್ಲಿ ಅಕ್ಷರಜ್ಞಾನ ಪಡೆದು ನಂತರ ಚಿಕ್ಕರೂಗಿಗೆ ಬಂದು ಗಾಂವಟಿ ಶಾಲೆಗೆ ಸೇರಿ ಐದನೇ ತರಗತಿಯವರೆಗೆ ಶಿಕ್ಷಣ ಪಡೆದರು. ಬಡತನದ ಬೇಗೆಯಿಂದ ಓದಿಗೆ ಕಡಿವಾಣ ಹಾಕಬೇಕಾಯಿತು. ೧೯೩೦ರಲ್ಲಿ ಚಿಕ್ಕರೂಗಿಯಲ್ಲಿ ಸಿಂಪಿಗ ವೃತ್ತಿಯನ್ನು ಪ್ರಾರಂಭಿಸಿದರು. ಹಲವು ವರ್ಷಗಳವರೆಗೆ ಇದನ್ನೇ ವೃತ್ತಿಜೀವನವನ್ನಾಗಿಸಿಕೊಂಡರು. ೧೯೩೬ ರಲ್ಲಿ ಭಗವಾನಸಿಂಗ್‌ರವರು ಗ್ರಾಮದಲ್ಲಿ ಪ್ರಾರಂಭವಾದ ಗ್ರೂಪ್ ಕಾಂಗ್ರೆಸ್ ಕಡೆಗೆ ತಮ್ಮ ಮನಸ್ಸು ಹರಿಸಿದರು. ನಂತರ ಗ್ರೂಪ್‌ನ ಖಾಯಂ ಸದಸ್ಯರಾಗಿ ಹೆಸರು ನೊಂದಾಯಿಸಿದರಲ್ಲದೇ ಅದರೊಂದಿಗೆ ಸಕ್ರೀಯವಾದ ನಂಟನ್ನು ಹೊಂದಿ ಕಾಂಗ್ರಸ್ಸಿನ ಕಟ್ಟಾ ಕಾರ್ಯಕರ್ತರಾದರು.

**ಸಾಮಾಜಿಕ ಸುಧಾರಣೆಗಳು:** ಭಗವಾನಸಿಂಗ್‌ರವರು ತಾವು ಹುಟ್ಟಿ ಬೆಳೆದ ಲಮಾಣಿ(ಲಂಬಾಣಿ)ಸಮಾಜದ ಏಳ್ಗೆಗಾಗಿ ನಿತ್ಯವೂ ಶ್ರಮಿಸುತ್ತಿದ್ದರು. ಗ್ರಾಮದ ಸುತ್ತಲಿನ ಪ್ರತಿಯೊಂದು ತಾಂಡಾಕ್ಕೂ ಭೇಟಿ ನೀಡಿ ಮಕ್ಕಳನ್ನು ಶಾಲೆಗೆ ಕಳಿಸುವಂತೆ ಪ್ರೋತ್ಸಾಹಿಸುತ್ತಿದ್ದರು. ಭಗವಾನಸಿಂಗ್‌ರು ಜನರಿಗೆ ಸೇಂದಿ–ಸಾರಾಯಿ ಕುಡಿಯಬಾರದು, ಕುಡಿದು ಮಹಿಳೆಯರ ಮೇಲೆ ದೌರ್ಜನ್ಯ ಮಾಡಬಾರದು, ಜೂಜು ಮೊದಲಾದ ದರಿದ್ರ ಆಟಗಳಲ್ಲಿ ತೊಡಗಬಾರದು. ಎಂದು ಉಪದೇಶ ಮಾಡುತ್ತ, ಅಸಮಾನತೆ ಬೇಧ–ಭಾವಗಳನ್ನು ನಿವಾರಿಸಲು ಮುಂದಾದರು. ಮುಲ್ಕಿ ಪರೀಕ್ಷೆಯಲ್ಲಿ ಪಾಸಾದವರನ್ನು ಪ್ರೋತ್ಸಾಹಿಸಿ ಅವರಿಂದ ಲಂಬಾಣಿ ತಾಂಡಾಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ತೆರೆಸಿದರು. ಖಾದಿಯನ್ನುಡಲು ಪ್ರೋತ್ಸಾಹಿಸಿದರು. ತಾಂಡಾ ಹಾಗೂ ಗ್ರಾಮಗಳಲ್ಲಿ ಸಂಚರಿಸುತ್ತ ಗಾಂಧೀಜಿಯವರ ತತ್ವಗಳನ್ನು ಜಾರಿಯಲ್ಲಿ ತರಲು ಪ್ರಯತ್ನಿಸಿದರು. ಹೀಗೆ ಮಧ್ಯಪಾನ ಪ್ರತಿಬಂಧಕ ಪ್ರಚಾರ ಕಾರ್ಯವನ್ನು ಅಚ್ಚುಕಟ್ಟಾಗಿ ಮಾಡುತ್ತಿದ್ದುದರ ಫಲವಾಗಿ ಕಾಂಗ್ರೆಸ್ಸಿಗರು ಇವರನ್ನು ವಿಜಾಪೂರ ಜಿಲ್ಲಾ ಪಾನಪ್ರತಿಬಂಧಕ ಕಮಿಟಿಯ ಸದಸ್ಯರನ್ನಾಗಿ ನೇಮಕ ಮಾಡಿದರು.

**ಹೋರಾಟಕ್ಕೆ ಪ್ರೇರಣೆ:** ಅಖಿಲ ಕರ್ನಾಟಕ ಲಮಾಣಿ ಪರಿಷತ್ತು ಧಾರವಾಡ ೧೯೩೮ರಲ್ಲಿ ಎಚ್.ಕೆ.ರಾಥೋಡರವರ ನೇತೃತ್ವದಲ್ಲಿ ಗದಗದಲ್ಲಿ ಸಭೆ ಸೇರಿತ್ತು. ಅಲ್ಲಿಗೆ ಭಗವಾನಸಿಂಗ್‌ರೂ ಹೋಗಿದ್ದರು. ಈ ಸಭೆಯಲ್ಲಿ ಎಲ್.ಆರ್.ನಾಯಕ್, ಫೂಲಸಿಂಗ್. ನಾಯಕ್ ಮೊದಲಾದವರು ಭಾಗವಹಿಸಿದ್ದರು. ಮೆ. ಡಿ.ಎಸ್. ಕಲೆಕ್ಟರ್‌ರವರು ಅಂದಿನ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು. ಇದರಲ್ಲಿ ಎಲ್ಲ ಸದಸ್ಯರು ಸ್ವಾತಂತ್ರ್ಯದ ಕುರಿತು ಪ್ರತಿಜ್ಞೆಗೈದರು. ಇವರೊಂದಿಗೆ ಸೇರಿ ಭಗವಾನಸಿಂಗ್‌ರವರು ಸ್ವಾತಂತ್ರ್ಯ ಹೋರಾಟದ ಹಾದಿ ಹಿಡಿದರು. ಇದಲ್ಲದೇ ಇವರನ್ನು ಸ್ವಾತಂತ್ರ್ಯ ಹೋರಾಟಕ್ಕಿಳಿಯಲು ಹಲವಾರು ಸಂಗತಿಗಳು

* ಉಪನ್ಯಾಸಕರು, ಎಂಎ., ಎಂಡಿ, ಉಪ್ಪಲಿ ಬುರುಜ ಹತ್ತಿರ, ಜಗದಾಳೆ ಓಣಿ, ವಿಜಯಪುರ, ಮೊ. ೯೩೪೨೧೩೩೮೦೩


ಡಾ. ಭಗವಾನ ಸಿಂಗ್


ಭಗವಾನ ಸಿಂಗ್ ಅಂಗಡಿಯವರ ಗದ್ದುಗೆ


ವೈಯಕ್ತಿಕ ಸತ್ಯಾಗ್ರಹ ಸ್ಥಳ

ಕಾರಣವಾಗಿದ್ದವು ಅವುಗಳಲ್ಲಿ ಪ್ರಮುಖವಾದವುಗಳೆಂದರೆ. ಬ್ರಿಟೀಷರ ಆಳ್ವಿಕೆ ಕುರಿತು ಪತ್ರಿಕೆಗಳಲ್ಲಿ ಬರುತ್ತಿದ್ದ ಟೀಕೆಗಳು, ಬ್ರಿಟೀಷರು ವಿಧಿಸುತ್ತಿದ್ದ ಅನ್ಯಾಯದ ತೆರಿಗೆಗಳು, ಬ್ರಿಟೀಷರ ಇಬ್ಬಗೆಯ ನೀತಿಗಳು, ಕರಪತ್ರಗಳು ಅಲ್ಲದೇ ಗಾಧೀಜಿಯವರ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರೊಂದಿಗೆ ನಿಕಟ ಸಂಪರ್ಕ ಹೊಂದಿದ್ದ ಚಿಕ್ಕರೂಗಿ ಗ್ರಾಮದ ಹಲವಾರು ಯುವ ಚಳುವಳಿಗಾರರೊಂದಿಗಿನ ಒಡನಾಟ ಹೀಗೆ ಹಲವಾರು ಕಾರಣಗಳಿಂದ ಭಗವಾನಸಿಂಗ್‌ರವರು ತಮ್ಮನ್ನು ಸ್ವತಂತ್ರ್ಯ ಚಳುವಳಿಯಲ್ಲಿ ಧುಮುಕಿಸಿದರು.

**ವೈಯಕ್ತಿಕ ಕಾನೂನು ಭಂಗ ಚಳುವಳಿ:** ಅಗಸ್ಟ ಕಾಣಿಕೆಯು ಭಾರತೀಯರ ಆಶೋತ್ತರಗಳನ್ನು ಈಡೇರಿಸದಾಯಿತು. ಆಗ ಗಾಂಧೀಜಿಯವರು ಎರಡನೇ ಜಾಗತಿಕ ಯುದ್ಧದಲ್ಲಿ ಬ್ರಿಟಿಷರು ಜರ್ಮನಿಯ ವಿರುದ್ಧ ಯುದ್ಧದಲ್ಲಿ ತೊಡಗಿರುವಾಗ ಸಾಮೂಹಿಕ ಅಸಹಕಾರ ಚಳುವಳಿ ಹೂಡುವುದು ಮಾನವೀಯತೆಯಲ್ಲ ಎಂದು ತಿಳಿದು ೧೯೪೦ ಅಕ್ಟೋಬರ್ ತಿಂಗಳಿನಲ್ಲಿ 'ವೈಯಕ್ತಿಕ ಕಾನೂನು ಭಂಗ' ಚಳುವಳಿಗೆ ಮುಂದಾದರು. ಆಗ ಈ 'ವೈಯಕ್ತಿಕ ಕಾನೂನು ಭಂಗ' ಚಳುವಳಿಯ ಮೊದಲ ಸತ್ಯಾಗ್ರಹಿಯಾಗಿ ವಿನೋದಾ ಭಾವೆಯವರನ್ನು ಗಾಂಧೀಜಿಯವರು ಆಯ್ಕೆ ಮಾಡಿದರು. ಈ ರೀತಿ ಆಯ್ಕೆಯಾದ ವೈಯಕ್ತಿಕ ಸತ್ಯಾಗ್ರಹಿಯು ಯಾವುದಾದರೊಂದು ಸರಕಾರಿ ಕಟ್ಟಳೆಯನ್ನು ಮುರಿಯಬೇಕಾಗಿತ್ತು. ಸತ್ಯಾಗ್ರಹವು ೧೯೪೧ರ ಕೊನೆಯತನಕ ನಡೆಯಿತು.ಅದರಂತೆಯೇ ದೇಶಾದ್ಯಂತ ವೈಯಕ್ತಿಕ ಕಾನೂನುಭಂಗ ಚಳುವಳಿ ಅಥವಾ ವೈಯಕ್ತಿಕ ಸತ್ಯಾಗ್ರಹಗಳನ್ನು ಮಾಡಲು ನಾಡಿನ ಜನರು ಮುಂದಾದರು.

ಪ್ರಾರಂಭದಲ್ಲಿ ಆಲಮೇಲ್, ಪಡಗಾನೂರ, ಸಿಂದಗಿ ಮೊದಲಾದೆಡೆಗೆ ಜರುಗಿದ ವೈಯಕ್ತಿಕ ಸತ್ಯಾಗ್ರಹದಲ್ಲಿ ಅತ್ಯಂತ ಚುರುಕಿನಿಂದ ಕಾರ್ಯನಿರ್ವಹಿಸಿದರು. ವಿಜಾಪುರದ ಚನ್ನಬಸಪ್ಪ ಅಂಬಲಿ, ಶರಣಯ್ಯ ವಸ್ತ್ರದ, ದುಬೆ ಮತ್ತು ಗಾಂಧೀಜಿಯವರ ಕರೆಯ ಮೇರೆಗೆ ೧೯೪೧ ಮಾರ್ಚ ತಿಂಗಳಿನಲ್ಲಿ ತಮ್ಮ ಮೂಲ ಊರಾದ ಹಿಟ್ಟಿನಹಳ್ಳಿ ತಾಂಡಾ(ಸಿಂದಗಿ ತಾಲ್ಲೂಕು)ದಲ್ಲಿ ಭಗವಾನಸಿಂಗ್ ಅಂಗಡಿಯವರು ತಮ್ಮ ನೇತೃತ್ವದಲ್ಲಿ ವೈಯಕ್ತಿಕ ಸತ್ಯಾಗ್ರಹವನ್ನು ಕೈಗೊಳ್ಳಲು ಮುಂದಾದರು. ಇದರಲ್ಲಿ ಭಾಗವಹಿಸಿದ ಪ್ರಮುಖರೆಂದರೆ. ಚಿಕ್ಕರೂಗಿಯಿಂದ ಯಶವಂತರಾಯ ಪಾಟೀಲ, ದುಂಡಪ್ಪ ಗರಡೆ, ಭೀಮರಾಯ ಜಮಾದಾರ, ಗುರುಬಸಪ್ಪ ಹಡಪದ, ಮಲ್ಲಪ್ಪಾ ಬಾಗಲಕೋಟೆ, ದುಂಡಪ್ಪ ಹೂಗಾರ, ಗುರಪ್ಪ ಬಿರಾದಾರ, ಹೀಗೆ ಈ ಊರಿನಿಂದ ಅಧಿಕ ಜನ ಭಾಗಿಯಾಗಿದ್ದರು. ನಾಗಠಾಣದಿಂದ ಗುರುಬಸಪ್ಪ ಅರಕೇರಿ, ಹಣಮಂತಪ್ಪ ವಾಡೆ, ದುಂಡಪ್ಪ ಹುನಸಿಹಾಳ, ಆಲಮೇಲದಿಂದ ನಾರಾಯಣ ದೇಶಪಾಂಡೆ, ಕೊಂಡಗೂಳಿಯಿಂದ ಬಲವಂತಪ್ಪ ಹಾಲಭಾವಿ, ಹೋರ್ತಿಯಿಂದ ದಾನಪ್ಪ ಮೋದಿ, ಇಂಚಗೇರಿಯಿಂದ ಬಸವನಗೌಡ ಪಾಟೀಲ, ಅಥರಗಾ ಗ್ರಾಮದಿಂದ ಶಿವಲಿಂಗಪ್ಪ ಗುಣಕಿ, ಗದಿಗೆಪ್ಪ ಲೋಣಿ, ಸಿದ್ದರಾಮಪ್ಪಾ ವಾಲಿ, ರಾಚಪ್ಪಾ ನಿವರಗಿ, ಹಾಗೂ ಹಲವಾರು ಗಣ್ಯರು ಭಾಗವಹಿಸಿದ್ದರು. ಆಗ ಈ ಸುದ್ದಿ ಮುಟ್ಟುತ್ತಲೇ ದೇವರ ಹಿಪ್ಪರಗಿಯಿಂದ ಆಗಮಿಸಿದ ಪೊಲೀಸರಿಂದ ಹಲವಾರು ಹೋರಾಟಗಾರರು 'ಬೋಲೊ ಭಾರತ ಮಾತಾ ಕೀ ಜೈ' ಮೊದಲಾದ ಘೋಷಣೆಯೊಂದಿಗೆ ಬಂಧಿತರಾದರು. ಭಗವಾನಸಿಂಗರನ್ನು ಬಂಧಿಸಿ ಜಿಲ್ಲಾ ಮ್ಯಾಜಿಸ್ಟ್ರೇಟ್‌ರವರ ಮುಂದೆ ಹಾಜರು ಪಡಿಸಿದಾಗ ಆಗ ನ್ಯಾಯಾಧೀಶರಾಗಿದ್ದ ಶ್ರೀ.ಕುರಹಟ್ಟಿರವರು ಭಗವಾನಸಿಂಗರಿಗೆ ೪ ತಿಂಗಳುಗಳ ಕಾರಾಗೃಹ ಶಿಕ್ಷೆಯನ್ನು ವಿಧಿಸಿದರು. ಇವರನ್ನು ಪ್ರಾರಂಭದಲ್ಲಿ ಬಿಜಾಪುರ ಜೈಲಿಗೆ ತರಲಾಯಿತು. ಅಲ್ಲಿ ಒಂದು ತಿಂಗಳು ಶಿಕ್ಷೆಯನ್ನನುಭವಿಸಿದನಂತರ ಉಳಿದ ಮೂರು ತಿಂಗಳುಗಳ ಶಿಕ್ಷೆಯನ್ನನುಭವಿಸಲು ವಿಸಾಪುರ ಜೈಲಿಗೆ ಕಳಿಸಲಾಯಿತು.

**ಮದುವೆಯನ್ನು ತ್ಯಜಿಸಿ ಮತ್ತೆ ಚಳುವಳಿಗೆ ಮರಳಿಕೆ:** ಜೈಲಿನಿಂದ ಮರಳಿದ ನಂತರ ಭಗವಾನಸಿಂಗ್‌ರವರ ಹೋರಾಟಕ್ಕೆ ವಿದಾಯ ಹೇಳಲು ಬಯಸಿದ ಅವರ ತಂದೆ ತಾಯಂದಿರು ಅವರಿಗೆ ಮದುವೆ ಮಾಡಲು ಮುಂದಾದರು. ಆದರೆ ಈಗಾಗಲೇ ಅವರಿಗೆ ಮೊದಲೊಂದು ಮದುವೆಯಾಗಿತ್ತು. ದುರ್ದೈವಶಾತ್ ಮದುವೆಯಾದ ೬ ತಿಂಗಳಿನಲ್ಲಿಯೇ ಭೀಕರವಾಗಿ ಹರಡಿದ ಮಹಾಮಾರಿ ಪ್ಲೇಗ್ ರೋಗದಿಂದ ಅವರ ಹೆಂಡತಿ ತೀರಿಕೊಂಡಿದ್ದರು. ಹೀಗಾಗಿ ಮನೆಯವರಿಗೆಲ್ಲ ಇವರ

ಮದುವೆ ಮಾಡುವ ಕಾತುರ. ಆದರೆ ಭಗವಾನಸಿಂಗ್‌ರಿಗೆ ಚಳುವಳಿಯಲ್ಲಿ ಭಾಗವಹಿಸುವ ಆತುರ. ಹಿರಿಯರ ಲೆಕ್ಕಾಚಾರವನ್ನೆಲ್ಲ ಬುಡಮೇಲು ಮಾಡಿ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಮುಂದುವರಿಯಲು ನಿರ್ಧರಿಸಿದರು.

**ಕ್ವಿಟ್ ಇಂಡಿಯಾ ಚಳುವಳಿ:** ಭಾರತೀಯ ಶಕ್ತಿಯನ್ನು ಒಂದಾಗಿಸುವ ಅಗತ್ಯವೆಂದು ಭಾವಿಸಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ೧೯೪೨ ಆಗಷ್ಟ ೮ರಂದು ಮುಂಬಯಿಯಲ್ಲಿ ನಡೆದ ಸಭೆಯಲ್ಲಿ ಕ್ವಿಟ್ ಇಂಡಿಯಾ ಚಳುವಳಿಯ ಗೊತ್ತುವಳಿಯನ್ನು ಪಾಸು ಮಾಡಿತು. ಭಾರತದಾದ್ಯಂತ ಚಳುವಳಿಗಳನ್ನು ನಡೆಸಲು ಉದ್ದೇಶಿಸಲಾಯಿತು. ಗಾಂಧೀಜಿಯವರು 'ಮಾಡು ಇಲ್ಲವೇ ಮಡಿ' ಎಂದು ಘೋಷಿಸಿದರು. ಅಲ್ಲದೇ 'ಇದು ನನ್ನ ಜೀವಿತದ ಕೊನೆಯ ಹೋರಾಟ' ಎಂದು ತಿಳಿಸಿದರು. ಆಗಷ್ಟ್ ೯ ರಂದು ಎಲ್ಲ ಕಾಂಗ್ರೆಸ್ಸಿನ ನಾಯಕರನ್ನು ಬಂಧಿಸಲಾಯಿತು. ಇದರಿಂದ ಭಾರತೀಯರಲ್ಲಿ ಕ್ಷೋಭೆಯುಂಟಾಯಿತು. ಇದು ದೇಶದೆಲ್ಲೆಡೆ ಶೀಘ್ರವಾಗಿ ಹರಡಿತು.

ಈ ಸಮಯದಲ್ಲಿ ಹಲವೆಡೆ ಬ್ರಿಟೀಷರ ಬಂಗ್ಲೆಗಳಿಗೆ ಬೆಂಕಿ ಹಚ್ಚಲಾಯಿತು. ಅಲ್ಲದೇ ವಿಜಯಪುರ ಜಿಲ್ಲೆಯ ಇಂಡಿ ತಾಲೂಕಿನ ಮಿಂಚನಾಳ ರೇಲ್ವೆ ಸ್ಟೇಷನನ್ನು ಸುಡಲು ನಿರ್ಧರಿಸಲಾಯಿತು. ಇದಕ್ಕೆ ಅಡಿವೆಪ್ಪ ಅಂಬಲಿಯವರು ಬೆಂಬಲಿಸಿದರು. ಅದರಂತೆಯೇ ೧೯೪೨ ಅಕ್ಟೋಬರ್ ತಿಂಗಳಿನಲ್ಲಿ ಮಾರು ವೇಶದ ಕಾರ್ಯಾಚರಣೆಗೆ ಮುಂದಾಗಿ, ಭಗವಾನಸಿಂಗ್ ಅಂಗಡಿ ಮೊದಲಾವರು ಸೇರಿ ಮಿಂಚನಾಳ ರೈಲು ಸ್ಟೇಷನನ್ನು ಸುಟ್ಟರು. ರಾತ್ರಿ ರೈಲು ಹಳಿಗಳನ್ನು ಕಿತ್ತು ಹಾಕಲಾಯಿತು. ಇದರಲ್ಲಿ ಭಗವಾನಸಿಂಗ್ ಅಂಗಡಿಯವರೊಂದಿಗೆ ದುಂಡಪ್ಪ ಅಂಕಲಗಿ, ಸಾಯಬಣ್ಣ ಅಥಣಿ, ಗುರುಬಸಪ್ಪ ಅರಕೇರಿ, ನಾರಾಯಣ ದೇಶಪಾಂಡೆ, ಕಲ್ಲಯ್ಯ ಡೋಣೂರ, ಚನ್ನಯ್ಯಾ ಮಠಪತಿ, ಯಲ್ಲಪ್ಪ ವಡ್ಡರ, ಚನ್ನಬಸಪ್ಪ, ಶಿವಲಿಂಗಪ್ಪಾ ಗುಣಕಿ ಹಾಗೂ ಸಾಯಬಣ್ಣ ಅಥಣಿ ಮೊದಲಾದವರು ಭಾಗವಹಿಸಿದ್ದರು. ನಂತರ ಪೊಲೀಸರಿಗೆ ಅಡಿವೆಪ್ಪ, ಚೆನ್ನಬಸಪ್ಪ, ಮೊದಲಾದವರು ರಾತ್ರಿ ಸೆರೆಸಿಕ್ಕರು. ಅಲ್ಲದೇ ಭಗವಾನ್‌ಸಿಂಗ್ ಅಂಗಡಿ, ಗುರುಬಸಪ್ಪ ಅರಕೇರಿ, ಮೊದಲಾದವರು ನಿಂಬಾಳ ರೇಲ್ವೆ ಸ್ಟೇಷನ್ನಿಗೆ ಬೆಂಕಿ ಹಚ್ಚಿದರು. ಆಗ ಪೊಲೀಸರು ಭಗವಾನ್‌ಸಿಂಗ್ ಅಂಗಡಿಯವರೊಂದಿಗೆ ಚಿಕ್ಕರೂಗಿಯ ಕೆಲವು ಹೋರಾಟಗಾರರನ್ನು ಕೂಡ ಬಂಧಿಸಿದರು. ಭಗವಾನ್‌ಸಿಂಗ್ ಅಂಗಡಿಯವರಿಗೆ ೫ ವರ್ಷದ ಜೈಲು ಶಿಕ್ಷೆಯಾಯಿತು. ಇದರಿಂದ ಕಂಗೆಟ್ಟ ಭಗವಾನ್‌ಸಿಂಗ್ ಅಂಗಡಿಯವರು ಮೂರು ವರ್ಷದ ನಂತರ ಜೈಲರ್‌ನ ಕಣ್ಣು ತಪ್ಪಿಸಿ ಜೈಲಿನಿಂದ ಪರಾರಿಯಾದರು. ಇದರಿಂದ ರೊಚ್ಚಿಗೆದ್ದ ಪೊಲೀಸರು ಇವರ ಶೋಧಕ್ಕಾಗಿ ಸಾಕಷ್ಟು ಪರಿಶ್ರಮ ಪಡಬೇಕಾಯಿತು.

ಅಂದಿನ ತಮ್ಮ ಹೋರಾಟಕ್ಕೆ ಸ್ಫೂರ್ತಿಯಾದ ಅಂಬಲಿಯವರ ಮಾತಿನಂತೆ ಮತ್ತೆ ಭೂಗತರಾಗಿ ಚಳುವಳಿ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ನಂತರ ೧೯೪೭ ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದೊಡನೆಯೇ ಇವರ ಮೇಲಿದ್ದ ವಾರಂಟ್‌ಗಳನ್ನು ರದ್ದುಪಡಿಸಲಾಯಿತು. ಹರ್ಷಗೊಂಡ ಭಗವಾನ್‌ಸಿಂಗ್ ಅಂಗಡಿಯವರು ಚಿಕ್ಕರೂಗಿ ಗ್ರಾಮಕ್ಕೆ ಬಂದು ಗಾಂಧೀಜಿಯವರ ಭಾವಚಿತ್ರದ ಮೆರವಣಿಗೆ ಮಾಡಿಸಿದರು. ಅಭಿಮಾನದಿಂದ ರಾಷ್ಟ್ರಗೀತೆಯನ್ನು ಹಾಡಿ ಧ್ವಜವಂದನಾ ಕಾರ್ಯಕ್ರಮವನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸಿದರು.

ವೈಯಕ್ತಿಕ ಹಿತಾಸಕ್ತಿಯನ್ನು ತೊರೆದು ದೇಶದ ಸ್ವಾತಂತ್ರ್ಯಕ್ಕೆ ದಣಿವರಿಯದೇ ದುಡಿದು. ಅಪ್ರತಿಮ ಹೋರಾಟಗಾರನೆಂಬ ಖ್ಯಾತಿಗೆ ಹೆಸರುವಾಸಿಯಾಗಿದ್ದ ಭಗವಾನ್‌ಸಿಂಗ್ ಅಂಗಡಿಯವರು ದಿನಾಂಕ ೨೬ ಜನೇವರಿ ೧೯೯೭ರಂದು ಪ್ರಜಾರಾಜ್ಯದಿನದಂದು ನಿಧನರಾದರು. ಬಹುಮುಖ ಸೇವೆಯು ಸ್ಮರಣಾರ್ಹವಾಗಿದ್ದು ಇದು ಮುಂದಿನ ಪೀಳಿಗೆಗೆ ಸ್ಫೂರ್ತಿದಾಯಕವಾಗಿದೆ.

[ಈ ಲೇಖನವನ್ನು ಸಿದ್ಧಪಡಿಸುವಾಗ ಹಲವು ಮಾಹಿತಿಗಳನ್ನು ಒದಗಿಸಿದ ಉಪನ್ಯಾಸಕರಾದ ಸುನೀಲಕುಮಾರ ಹಳ್ಳಿ ಹಾಗೂ ಹಿಟ್ಟಿನಹಳ್ಳಿ ತಾಂಡಾದ ಕಲ್ಯಾಣಕುಮಾರ ರಾಠೋಡರವರಿಗೆ ಕೃತಜ್ಞತೆಗಳು.]

## ಆಕರ ಗ್ರಂಥಗಳು


೧. ಎಮ್.ವಾಯ್.ಸಾವಂತ. 'ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಸ್ವಾತಂತ್ರ್ಯ ಹೋರಾಟ', ಪ್ರಸಾರಾಂಗ ಕ. ವಿ. ವಿ. ಧಾರವಾಡ.

೨. ಡಾ॥ ಸೂರ್ಯನಾಥ.ಕಾಮತ್. 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು', ತೃತೀಯ ಸಂಪುಟ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೩. ಪ್ರೊ. ಬಿ. ಷೇಕ್ ಅಲಿ. (ಸಂ.) 'ಕರ್ನಾಟಕ ಚರಿತ್ರೆ'. ಪ್ರಸಾರಾಂಗ ಕ.ವಿ.ವಿ. ಹಂಪಿ.

೪. ಡಾ॥ ಸಂಗಮನಾಥ ಲೋಕಾಪೂರ. 'ಚಿಕ್ಕರೂಗಿಯ ಚಳುವಳಿಗಾರರು'.

೫. ಡಾ॥ ಡಿ.ಟಿ. ಜೋಶಿ. 'ಆಧುನಿಕ ಭಾರತದ ಇತಿಹಾಸ' ವಿದ್ಯಾನಿಧಿ ಪ್ರಕಾಶನ ಗದಗ.

೬ ಡಾ॥ ಸೂರ್ಯನಾಥ. ಕಾಮತ್. 'ಕರ್ನಾಟಕ ಸಂಕ್ಷಿಪ್ತ ಇತಿಹಾಸ' ಎಂ.ಸಿ.ಸಿ ಪಬ್ಲಿಕೇಷನ್ಸ್ ಬೆಂಗಳೂರು.

# ಮೈಸೂರು ಸಂಸ್ಥಾನದಲ್ಲಿ ಕಂಡುಬರುವ ಮುಸ್ಲಿಮರ ಚಾರಿತ್ರಿಕ ಕಥನಗಳು

ಡಿ.ಪಿ. ಮೆಹಬೂಬ್ ಸಾಬ್*

ದಕ್ಷಿಣ ಭಾರತದಲ್ಲಿ ಕಂಡುಬರುವ ಮುಸಲ್ಮಾನ ಅಸ್ತಿತ್ವವು ಭಾರತದ ವೈವಿಧ್ಯಮಯ ಇತಿಹಾಸದಲ್ಲಿ ಒಂದು ಪ್ರಮುಖ ವಿಷಯವಾಗಿದೆ. ವ್ಯಾಪಾರ, ವಾಣಿಜ್ಯ, ಸೈನಿಕ, ಆಡಳಿತ ಮೊದಲಾದ ಕಾರಣಗಳಿಂದ ಕರ್ನಾಟಕ ಪ್ರಾಂತ್ಯದಾದ್ಯಂತ ವಿಶೇಷವಾಗಿ ಮೈಸೂರು ಸಂಸ್ಥಾನದಲ್ಲಿ ನೆಲೆನಿಂತು ಮುಸ್ಲಿಮರು ಈ ನೆಲದ ಸಂಸ್ಕೃತಿಯನ್ನು ಒಪ್ಪಿಕೊಂಡು ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಆರಂಭದಲ್ಲಿ ಅವರು ವ್ಯಾಪಾರ ಮತ್ತು ವಾಣಿಜ್ಯ ಚಟುವಟಿಕೆಗಳನ್ನು ಹೆಚ್ಚಾಗಿ ಅವಲಂಬಿಸಿಕೊಂಡಿದ್ದು, ಮುಂದೆ ಸೈನಿಕ ಸೇವೆಯ ಮೂಲಕ ರಾಜಕೀಯವಾಗಿ ಪಡೆದುಕೊಂಡ ಅಧಿಕಾರದಿಂದ ಆಡಳಿತದಲ್ಲಿ ತಮ್ಮದೇ ಆಡಳಿತದಲ್ಲಿ ವಿಭಿನ್ನ ಹಾಗೂ ವಿಶೇಷ ಸಂಸ್ಕೃತಿಯನ್ನು ಪ್ರಚಾರ ಪಡಿಸಿದರು. ಈ ಹಿನ್ನೆಲೆಯಲ್ಲಿ ಬಹಮನಿ ಸುಲ್ತಾನರು, ಆದಿಲ್ ಷಾಹಿಗಳು ಮತ್ತು ಹೈದರಾಬಾದ್‌ನ ನಿಜಾಮರು ಮತ್ತು ಹೈದರ್ ಆಲಿ ಹಾಗೂ ಟಿಪ್ಪು ಸುಲ್ತಾನ ಇನ್ನೂ ಮುಂತಾದವರ ಪಾತ್ರ ಹಾಗೂ ಕೊಡುಗೆಗಳನ್ನು ಪರಿಗಣಿಸಬೇಕಾಗುತ್ತದೆ.

ರಾಜಕೀಯ ಅಧಿಕಾರದ ಸ್ಥಾಪನೆಯೊಂದಿಗೆ ನೆಲೆನಿಂತ ಮುಸ್ಲಿಮರು ಸಹಜವಾಗಿ ಇಸ್ಲಾಂ ರಾಷ್ಟ್ರಗಳೊಂದಿಗೆ ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಬಂಧಗಳನ್ನು ಹೊಂದಿದ್ದರು. ಇದರಿಂದ ಭಾರತೀಯ ಸಂಸ್ಕೃತಿಯೊಂದಿಗೆ ಕೆಲವು ವಿದೇಶೀ ಅಂಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ತಮ್ಮದೇ ಆದ ಸಾಂಸ್ಕೃತಿಕ ಅನನ್ಯತೆಯನ್ನು ಹೊಂದಿದ್ದರು. ಆದರೆ ಐರೋಪ್ಯರ ಆಗಮನದಿಂದ ವಿಶೇಷವಾಗಿ ಬ್ರಿಟಿಷ್ ವಸಾಹತುಶಾಹಿಗಳೊಂದಿಗೆ ಹೈದರೆ ಆಲಿ ಮತ್ತು ಟಿಪ್ಪು ಸುಲ್ತಾನ್ ಅನುಸರಿಸಿದ ಸಂಘರ್ಷ ನೀತಿಯು ೧೮ನೇ ಶತಮಾನದ ಆರಂಭದ ವೇಳೆಗೆ ಮುಸ್ಲಿಂ ಸಮುದಾಯವು ಅನೇಕ ಸಮಸ್ಯೆ ಹಾಗೂ ಸವಾಲುಗಳನ್ನು ಎದುರಿಸಬೇಕಾಯಿತು. ಇದರಿಂದ ಮುಸ್ಲಿಮ್ ಸಮುದಾಯದವರಲ್ಲಿ ರಾಜಕೀಯ ಹಾಗೂ ಆರ್ಥಿಕ ಪರಿವರ್ತನೆಗಳು ಕಂಡುಬಂದರೂ ಸಾಮಾಜಿಕವಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದರು. ಹೀಗೆ ರಾಜಕೀಯ ಕಾರಣಗಳಿಂದಾಗಿ ಅನೇಕ ರೀತಿಯ ಏಳುಬೀಳುಗಳನ್ನು ಕಂಡು ಮೈಸೂರು ಸಂಸ್ಥಾನದ ಮುಸ್ಲಿಮ್ ಸಮುದಾಯದವರ ಬಗೆಗೆ ವಿದ್ವಾಂಸರು ದಾಖಲಿಸಿರುವ ಅಂಶಗಳ ಸಾರಸಂಗ್ರಹವನ್ನು ಪ್ರಸ್ತುತ ಲೇಖನದಲ್ಲಿ ವಿವರಿಸಲಾಗಿದೆ. ಮುಖ್ಯವಾಗಿ ಟಿಪ್ಪುವಿನ ಮರಣಾ ನಂತರ ಮುಸ್ಲಿಂ ಸಮುದಾಯದ ಮೇಲೆ ಬೀರಿದ ವಿವಿಧ ಪರಿಣಾಮಗಳು ಹಾಗೂ ಅವರ ಅಸ್ತಿತ್ವದ ಮೇಲೆ ಬೀರಿದ ವಿವಿಧ ಸನ್ನಿವೇಶಗಳ ದಾಖಲಿಸಿದ ಅಥವಾ ದಾಖಲಿಸದ ವಿವಿಧ ಸಂಗತಿಗಳ ಕುರಿತಂತೆ ಒಂದು ಮರು ಅಧ್ಯಯನವಾಗಿದೆ.

ಆಧುನಿಕ ಮೈಸೂರು ಸಂಸ್ಥಾನವನ್ನು ಕುರಿತಂತೆ ಹಲವಾರು ಕೃತಿಗಳು, ಗ್ರಂಥಗಳು, ಸಂಶೋಧನಾ ಲೇಖನಗಳು ಮತ್ತು ಚರ್ಚಿಸಲ್ಪಟ್ಟಿವೆ. ಅನೇಕ ಚರ್ಚೆಗಳು ಈಗಲೂ ಮುಂದುವರಿಯುತ್ತಲೇ ಇವೆ. ಆದರೆ ಮುಸ್ಲಿಂ ಸಮುದಾಯವನ್ನು ಕುರಿತಂತೆ ಅವರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಚರ್ಚೆಗಳ ವಿಷಯಗಳು ಬಹಳ ಕಡಿಮೆ. ಈ ನೆಲೆಯಲ್ಲಿ ಆಧುನಿಕ ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿದ ಚಾರಿತ್ರಿಕ ಕಥನಗಳಲ್ಲಿ ಕಂಡುಬಂದಿರುವ ವಿವಿಧ ಅಂಶಗಳನ್ನು ಈ ಲೇಖನದಲ್ಲಿ ದಾಖಲಿಸಲು ಪ್ರಯತ್ನಿಸಲಾಗಿದೆ.

೧೭೯೯ರ ನಂತರದಲ್ಲಿ ದೇಶೀಯ ಆಡಳಿತದ ಮೈಸೂರು ಹಲವಾರು ಹೊಸತನಕ್ಕೆ ಸಾಕ್ಷಿಯಾಗಿತ್ತು ಎಂದು ಹೇಳುವ ಸಿ. ಹಯವದನ ರಾವ್‌ರವರು ಟಿಪ್ಪು ಆಡಳಿತದಲ್ಲಿ ಕಂಡುಬಂದ ನವೀನತೆಯನ್ನು ಕುರಿತಂತೆ ಹೆಚ್ಚಿನ ಪ್ರಸ್ತಾವನೆಯನ್ನು ನೀಡುವುದಿಲ್ಲ. ಇದಕ್ಕೆ ಇರುವ ನಿರ್ಧಿಷ್ಟವಾದ ಧೋರಣೆಗಳು.

* ಸಂಶೋಧನಾ ವಿದ್ಯಾರ್ಥಿ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮೊ. ೭೪೧೧೬೩೩೦೨೧

ಟಿಪ್ಪುವಿನ ಮರಣದ ನಂತರದಲ್ಲಿ ದಿವಾನ್-ಪೂರ್ಣಯ್ಯರವರ ಆಡಳಿತದಲ್ಲಿ ಮುಸ್ಲಿಂ ಸಮುದಾಯದ ಮೇಲೆ ವಿಧಿಸಿದ ವಿವಿಧ ಕಂದಾಯಗಳು ಹಾಗೂ ಅವರ ಮೇಲೆ ನಡೆಸಿದ ದೌರ್ಜನ್ಯಗಳ ಬಗೆಗೆ ಇತಿಹಾಸಕಾರರು ಅಥವಾ ಸಂಶೋಧಕರು ಹೆಚ್ಚು ವಿವರಿಸದೆ ಒಂದು ರೀತಿಯ ತಟಸ್ಥ ಮೌನವನ್ನು ವಹಿಸಿರುವುದು ಕಂಡುಬರುತ್ತದೆ. ಪೂರ್ಣಯ್ಯ ಹಾಗೂ ರಾಜ ಮುಮ್ಮಡಿ ಕೃಷ್ಣರಾಜ ಒಡೆಯರ ನಡುವಣ ವಿವಿಧ ಭಿನ್ನಾಭಿಪ್ರಾಯಗಳಿಂದ ರಾಜನೇ ನೇರವಾಗಿ ಅಧಿಕಾರ ಕೈಗೆತ್ತಿಕೊಂಡಾಗ ಸಮುದಾಯದ ಮೇಲೆ ನಿರ್ಲಕ್ಷ್ಯ ಮನೋಭಾವವನ್ನು ತಾಳಿದ್ದು ಕಂಡುಬರುತ್ತದೆ. ಆದರೆ ವಸಾಹತುಶಾಹಿ ಕಮೀಷನರ್‌ಗಳ ಆಡಳಿತದ ಮೈಸೂರಿನಲ್ಲಿ ಬದಲಾವಣೆ ಹಾಗೂ ಪರಿವರ್ತನೆಯ ಜೊತೆಗೆ ಸಮುದಾಯಗಳ ದಾಖಲೀಕರಣ ಕಂಡುಬಂದು ಅಧಿಕಾರಿಗಳು ತಮ್ಮ ಅಸ್ತಿತ್ವಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತಿದ್ದರು ಎಂಬುದು ಗಮನಾರ್ಹವಾದ ಸಂಗತಿಯಾಗಿದೆ. ಮುಂದೆ ಬ್ರಿಟಿಷ್ ಆಡಳಿತದಿಂದ ದಿವಾನರ ಆಡಳಿತದಲ್ಲಿ ಅದೇ ಪರಂಪರೆ ಮುಂದುವರಿದಿದ್ದು, ಈ ಸಮುದಾಯವು ಅಧಿಕಾರ ಮತ್ತು ಸಾಮಾಜಿಕವಾಗಿ ಹಲವಾರು ಶೋಷಣೆಗಳನ್ನು ಅನುಭವಿಸಿರುವುದು ಕಂಡುಬರುತ್ತದೆ.

ಮಹಮ್ಮದ್ ಅಬ್ಬಾಸ್ ಘೊಸ್ತಿ ಅವರು "ಇಸ್ಲಾಂ ಸಂಸ್ಕೃತಿ" (೧೯೪೮) ಎಂಬ ಕೃತಿಯಲ್ಲಿ ಇಸ್ಲಾಂ ಮತಕ್ಕೆ ಸಂಬಂಧಿಸಿದಂತೆ ಇಸ್ಲಾಂಮಿನ ಹುಟ್ಟು ಬೆಳವಣಿಗೆ ಮತ್ತು ಇಸ್ಲಾಮಿನ ತತ್ವಗಳು, ಇಸ್ಲಾಂ ಮತದ ಹರಡುವಿಕೆ, ಪಂಗಡಗಳ ಸಾಹಿತ್ಯ ಕಲೆ, ಸೂಫಿಧರ್ಮದ ಚರಿತ್ರೆ ಮತ್ತು ಮುಸ್ಲಿಂ ಸಮಾಜದ ತತ್ವ ವಿಷಯಗಳನ್ನು ಕುರಿತು ಚರ್ಚಿಸಿದ್ದಾರೆ.[೧]

ವಿಕ್ಟರ ಡಿಸೋಜ ರವರ "ನವಾಯತ್ಸ್ ಆಫ್ ಕರ್ನಾಟಕ" (೧೯೫೫) ಎಂಬ ಕೃತಿಯಲ್ಲಿ ನವಾಯತ್ಸ್ ಮುಸ್ಲಿಮರ ಏಳಿಗೆ, ಅವರ ಭಾರತದ ಪ್ರವೇಶ, ಅರಬ್ ವರ್ತಕರು ಮತ್ತು ಕೆನರಾದ ಸ್ಥಳೀಯ ಹೆಂಗಸರಿಗೆ ಹುಟ್ಟಿದ ಹೊಸ ಪೀಳಿಗೆಗೆ ನವಾಯತ್ಸ್ ಎಂದು ಸ್ವಾರಸ್ಯಕರವಾಗಿ ಚರ್ಚಿಸಿದ್ದಾರೆ. ಅವರು ಮುಸ್ಲಿಮ್ ಚರಿತ್ರೆ, ಸಾಮಾಜಿಕ ಸಂಘಟನೆ, ಕುಟುಂಬ, ಜೀವನ ವಿಧಾನದ ಬಗ್ಗೆ ಚರ್ಚಿಸಿದ್ದಾರೆ.[೨]

ಜೇಮ್ಸ್ ಮ್ಯಾನೋರ್ ಎಂಬ ಆಂಗ್ಲ ವಿದ್ವಾಂಸರು "ಪೊಲಿಟಿಕಲ್ ಚೇಂಜಸ್ ಎನ್ ಇಂಡಿಯನ್ ಸ್ಟೇಟ್ಸ್ ಮೈಸೂರು ೧೯೧೧-೧೯೫೮" (೧೯೭೮) ಎಂಬ ಕೃತಿಯು ಬಹುಭಾಗ ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತಕ್ಕೆ ಸಂಬಂಧಿಸಿದಂತೆ ಪ್ರಮುಖವಾಗಿ ದಿವಾನ್ ಸರ್ ಮಿರ್ಜಾ ಇಸ್ಮಾಯಿಲ್ ಬಗ್ಗೆ ಕೆಲವು ಉಪಯುಕ್ತ ಮಾಹಿತಿಗಳನ್ನು ಒದಗಿಸುತ್ತದೆ.[೩]

ಎಂ.ಕೆ.ಲಿಂಗಯ್ಯ ರವರ "ಮೈಸೂರು ಒಂದು ಅಧ್ಯಯನ" ಎಂಬ ಗ್ರಂಥವು (೧೯೮೧) ಸುಮಾರು ೪೦೦ ಪುಟಗಳ ಬೃಹತ್ ಗ್ರಂಥವಾಗಿದೆ. ಈ ಕೃತಿಯಲ್ಲಿ ಆಡಳಿತದಲ್ಲಿ ಸ್ಥಾಪನೆಗೊಂಡಿರುವ ಸೇವೆ ಸಲ್ಲಿಸಿದ ಮುಸ್ಲಿಮ್ ಸಮುದಾಯದವರ ಬಗ್ಗೆ ಹಾಗೂ ಮೈಸೂರಿನ ಮಸೀದಿಗಳ ಸಂಕ್ಷಿಪ್ತ ವಿವರಣೆಗಳು ದೊರಕುತ್ತವೆ.[೪]

ಸೇತುಮಾಧವರಾಯ್ ಪಗಡಿ ಅವರು "ಭಾರತೀಯ ಮುಸಲ್ಮಾನ ಶೋಧ ಹಾಗೂ ಬೋಧ" (೧೯೮೭) ಎಂಬ ಕೃತಿಯಲ್ಲಿ ಮುಸ್ಲಿಮರ ಬಗ್ಗೆ ಯಾವ ರೀತಯ ಪೂರ್ವಗ್ರಹಗಳಿವೆ, ಭಾರತಕ್ಕೆ ಅರಬರ ಆಗಮನ, ಮುಸ್ಲಿಮ್ ರಾಜ್ಯ ಮತ್ತು ಕಾನೂನುಗಳು, ಮುಸ್ಲಿಮರು ಎದುರಿಸುತ್ತಿರುವ ಸಾಮಾನ್ಯ ಸಮಸ್ಯೆಗಳೇನು?, ಪ್ರತ್ಯೇಕ ಪಾಕಿಸ್ತಾನ ನಿರ್ಮಾಣದ ಹಿನ್ನೆಲೆ, ಕೆಲವು ಚಿತ್ರಣಗಳ ನಡೆ, ಮೈಸೂರಿನ ಟಿಪ್ಪುವಿನ ಬಗ್ಗೆ ಈ ಕೃತಿಯಲ್ಲಿ ಸ್ವಾರಸ್ಯಕರ ಚರ್ಚೆ ನಡೆಸಿದ್ದಾರೆ.[೫]

ಸಿ.ಜಿ.ಹುಸೇನ್ ಖಾನ್‌ರವರ "Marrige and Kinship among in South India" (೧೯೯೪) ಎಂಬ ಕೃತಿಯಲ್ಲಿ ಭಾರತದಲ್ಲಿ ಮುಸ್ಲಿಮರ ಹುಟ್ಟು, ಬೆಳವಣಿಗೆ, ಅವರು ಎದುರಿಸುತ್ತಿರುವ ಸಮಸ್ಯೆಗಳೇನು, ಅವರ ಸಾಮಾಜಿಕ ಬದುಕು, ಸಂಪ್ರದಾಯಗಳು, ಆಚಾರ-ವಿಚಾರಗಳು, ರಕ್ತಸಂಬಂಧಗಳ ಬಗ್ಗೆ ವಿವರಿಸುವ ಪ್ರಯತ್ನ ಮಾಡಿದ್ದಾರೆ.[೬]

ಡಾ. ಷಹಸೇನಾ ಬೇಗಂ ರವರು "ಕರ್ನಾಟಕ ಮುಸ್ಲಿಂ ಜಾನಪದ" (೨೦೦೦) ಎಂಬ ಕೃತಿಯಲ್ಲಿ ಮುಸ್ಲಿಂ ಜನಾಂಗ ಬೆಳೆದು ಬಂದ ಬಗೆ, ಅವರಲ್ಲಿ ಕಂಡುಬರುವ ಪಂಗಡಗಳ ವೈವಿಧ್ಯತೆ, ಭಿನ್ನತೆ, ಹುಟ್ಟು ಸಾವು, ಸಂಪ್ರದಾಯ ಆಚರಣೆ, ಪದ್ಧತಿ ಇತ್ಯಾದಿ ವಿಷಯಗಳನ್ನು ಜಾನಪದದ ದೃಷ್ಟಿಕೋನದಿಂದ ವಿವರಿಸುವ ಪ್ರಯತ್ನ ಮಾಡಿದ್ದಾರೆ.[೭]

ಡಾ. ಕೃಷ್ಣಕೊಲ್ಹಾರ್ ಕುಲಕರ್ಣಿರವರು "ಬಿಜಾಪುರದ ಆದಿಲ್ ಶಾಹಿ" (೨೦೦೨) ಎಂಬ ಕೃತಿಯಲ್ಲಿ ಮಹಮ್ಮದೀಯರು ದಕ್ಷಿಣ ಭಾರತದ ಪ್ರವೇಶ, ಅವರು ಸಾಧಿಸಿದ ಪ್ರಭುತ್ವದ ಕುರಿತು ಉಲ್ಲೇಖಿಸಿದ್ದಾರೆ.[೮]

ರವಿಕುಮಾರ್.ಜೆ ಅವರು "ಮಧ್ಯಕಾಲೀನ ಕರ್ನಾಟಕದಲ್ಲಿ ಹಿಂದೂ ಮುಸ್ಲಿಂ ಸಾಮರಸ್ಯ ಒಂದು ಐತಿಹಾಸಿಕ ಹಾಗೂ ಪ್ರಾಕ್ತನಶಾಸ್ತ್ರೀಯ ಅಧ್ಯಯನ" (೨೦೦೭) ಎಂಬ ಅಪ್ರಕಟಿತ ಮಹಾಪ್ರಬಂಧವು ಹಿಂದೂ-ಮುಸ್ಲಿಮರ ನಡುವೆ ಸಾಮರಸ್ಯ ಹುಟ್ಟಿಸುವ ಅಧ್ಯಯನವಾಗಿದೆ. ಹಿಂದೂ-ಮುಸ್ಲಿಮರ ಸಾಮರಸ್ಯಕ್ಕೆ ಪೂರಕವಾಗಿ ಅನುಭಾವಿ ಪಂಥಗಳಾದ ಸೂಫಿ, ನಾಥ, ವೀರಶೈವ, ಶ್ರೀವೈಷ್ಣವರ ಆಶಯಗಳನ್ನು ಎಳೆಎಳೆಯಾಗಿ ವಿವರಿಸಿದ್ದಾರೆ.[೯]

ವಹಾಬ್ ದೊಡ್ಡಮನೆ ಅವರ "ತುಳುನಾಡಿನ ಮುಸ್ಲಿಮರು" (೨೦೦೮) ಎಂಬ ಕೃತಿಯಲ್ಲಿ ತುಳುನಾಡಿನಲ್ಲಿ ಇಸ್ಲಾಮಿನ ಸಂಪರ್ಕ ಮತ್ತು ಅರಬರ ವಾಣಿಜ್ಯ ವಹಿವಾಟುಗಳು, ಸಾಗರ- ಸಂಪರ್ಕಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಅದೇ ಸಂದರ್ಭದಲ್ಲಿ ಸ್ಥಳೀಯ ಮುಸ್ಲಿಮರು ಹೇಳುವಂತೆ ಅರಬರು ವ್ಯಾಪಾರಕ್ಕಾಗಿ ಪಶ್ಚಿಮ ಹಾಗೂ ಪೂರ್ವ ಕರಾವಳಿಗೆ ಬಂದಾಗ ಈ ಪ್ರದೇಶದ ಹೆಂಗಸರನ್ನು ಮದುವೆಯಾಗಿ, ಅವರಿಂದ ಹುಟ್ಟಿ ಬೆಳೆದು ಬಂದ ಜನಾಂಗದವರಾಗಿದ್ದಾರೆ ಎಂದು ಅಭಿಪ್ರಾಯ ಪಡುತ್ತಾರೆ. ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ ಮುಸ್ಲಿಮರ ಆಡಳಿತ, ಆರ್ಥಿಕ ಮತ್ತು ಸಾಮಾಜಿಕ ಪರಿವರ್ತನೆಯನ್ನು ಕುರಿತು ಮಾಹಿತಿ ನೀಡಿರುತ್ತಾರೆ.[೧೦]

ಮುಲ್ಲಾ ಮಾಲೀಕ ರೆಹಾನ್‌ರವರ "Sects and sub sects among the Muslims of Karnataka with special refrence to North Karantaka a study" (೨೦೧೦) ಎಂಬ ಅಪ್ರಕಟಿತ ಮಹಾಪ್ರಬಂಧದಲ್ಲಿ ಇಸ್ಲಾಮಿನ ಚರಿತ್ರೆ, ಭಾರತದಲ್ಲಿ ಅವರ ಪ್ರಸರಣ, ಪಂಗಡಗಳು, ಉಪಪಂಗಡಗಳು, ಅವರ ಸಂಸ್ಕೃತಿ, ಸಂಪ್ರದಾಯದ ಭಿನ್ನತೆ, ಅವರ ಸಮಾಜ ಮುಂತಾದವುಗಳನ್ನು ವಿವರಿಸಲು ಪ್ರಯತ್ನಿಸಿದ್ದಾರೆ.[೧೧]

Bijarboneh ಎ.ಎ. ರವರ "The socio economic study among the shia musilm in mysore city" (೨೦೧೪) ಎಂಬ ಅಪ್ರಕಟಿತ ಮಹಾಪ್ರಬಂಧದಲ್ಲಿ ಮೈಸೂರು ನಗರದ ಶಿಯಾ ಮುಸ್ಲಿಮರನ್ನು ಕೇಂದ್ರೀಕರಿಸಿಕೊಂಡು ಮಾಡಿರುವ ಶಿಯಾ ಮುಸ್ಲಿಂ ಹುಟ್ಟು, ಬೆಳವಣಿಗೆ, ಅವರ ಭಾರತದ ಪ್ರವೇಶ, ಶಿಯಾ ಮುಸ್ಲಿಮರ ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳು, ಅವರ ಧಾರ್ಮಿಕ ವ್ಯತ್ಯಾಸಗಳ ಬಗ್ಗೆ ಇತ್ತೀಚಿನ ಅಂಕಿ ಅಂಶಗಳನ್ನು ಆಧರಿಸಿ ಮಾಡಿದ ಅಧ್ಯಯನವಾಗಿದೆ.[೧೨]

Madani Hossein ರವರ "Anthropology of Internt among of Musilm Community" (೨೦೧೫) ಎಂಬ ಅಪ್ರಕಟಿತ ಮಹಾಪ್ರಬಂಧವು ಮನಶಾಸ್ತ್ರೀಯ ಅಧ್ಯಯನವಾಗಿದ್ದು ಅಂತರ್ಜಾಲ ಬಳಕೆಯಲ್ಲಿ ಮುಸ್ಲಿಂ ಸಮುದಾಯದ ಪಾಲ್ಗೊಳ್ಳುವಿಕೆ ಮತ್ತು ಅವರ ಪಾತ್ರ, ಅವರ ಮನಸ್ಥಿತಿ, ಅವರ ಶಿಕ್ಷಣ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳು, ಅಂತರ್ಜಾಲ ಬಳಸಲು ಅಡ್ಡಿಯಾಗಿರುವ ಅಂಶಗಳೇನು ಎಂಬುದರ ಬಗ್ಗೆ ಇತ್ತೀಚಿನ ಅಂಕಿ ಅಂಶಗಳನ್ನು ಬಳಸಿಕೊಂಡು ಮಾಡಿದ ಅಧ್ಯಯನವಾಗಿದೆ.[೧೩]

ಶವಣಾ ಸಬರೀನ್ ರವರು "ಹೈಯರ್ ಎಜುಕೇಶನ್ ಅಂಡ್ ಸೋಷಿಯಲ್ ಚೇಂಜ್ ಎ ಸ್ಟಡಿ ಆಫ್ ಮುಸ್ಲಿಂ ಇನ್ ಅರ್ಬನ್ ಮೈಸೂರು ೧೯೪೭-೨೦೦೦" (೨೦೧೫) ಎಂಬ ಅಪ್ರಕಟಿತ ಮಹಾಪ್ರಬಂಧದಲ್ಲಿ ಮೈಸೂರು ನಗರದಲ್ಲಿರುವ ಮುಸ್ಲಿಂ ಮಹಿಳೆಯರ ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆಯ ಬಗೆಗೆ ತಿಳಿಸಿದ್ದಾರೆ. ಮುಂದುವರಿದು ಮುಸ್ಲಿಮ್ ಮಹಿಳೆಯರ ಸ್ಥಾನಮಾನ, ಉದ್ಯೋಗದ ಅವಕಾಶ ಪಡೆಯಲು ಅಡ್ಡಿಯಾಗಿರುವ ತೊಡಕುಗಳು, ಉನ್ನತ ಶಿಕ್ಷಣದ ಬಗ್ಗೆ ಮುಸ್ಲಿಮ್ ಮಹಿಳೆಯರ ಪ್ರತಿಕ್ರಿಯೆಗಳು, ಮುಸ್ಲಿಂ ಶಿಕ್ಷಣ ಸಂಸ್ಥೆಗಳ ಪರಿಸ್ಥಿತಿ, ಶಿಕ್ಷಣದ ಮಹತ್ವದ ಬಗ್ಗೆ ಮುಸ್ಲಿಮರ ಅಭಿಪ್ರಾಯ ಏನು? ಮುಂತಾದ ವಿಷಯಗಳನ್ನು ಕುರಿತು ಚರ್ಚಿಸಿದ್ದಾರೆ.[೧೪]

ಭಿಮಾ ಘನಾಥೆ ರವರ "ಕರ್ನಾಟಕದಲ್ಲಿ ಮುಸ್ಲಿಂ ಸ್ವಾಂತಂತ್ರ್ಯ ಹೋರಾಟಗಾರರು - ಒಂದು ಅಧ್ಯಯನ" (೨೦೧೬) ಎಂಬ ಅಪ್ರಕಟಿತ ಮಹಾಪ್ರಬಂಧದಲ್ಲಿ ಮುಸ್ಲಿಮರ ಭಾರತದ ಪ್ರವೇಶ, ಮುಸ್ಲಿಂ ಸ್ವಾತಂತ್ರ್ಯ ಹೋರಾಟಗಾರರ ಚಿತ್ರಣ, ಅವರ ತ್ಯಾಗ, ಬಲಿದಾನಗಳು, ಅವರ ಸಾಮರಸ್ಯ ಜೀವನದ ಹೊಂದಾಣಿಕೆಯ ಬದುಕಿನ ಚಿತ್ರಣ ಮೊದಲಾದವುಗಳನ್ನು ವಿಶ್ಲೇಷಿಸಿದ್ದಾರೆ.[೧೫]

Naimur Rehaman ರವರ "Muslims response to socio political changes in princely Mysore (1881-1947)" (2007) ಎಂಬ ಕೃತಿಯಲ್ಲಿ ಮೈಸೂರು ಸಂಸ್ಥಾನದಲ್ಲಿ ಮುಸ್ಲಿಂ ಸಮುದಾಯದ ರಾಜಕೀಯ, ಸಾಮಾಜಿಕ ಬದಲಾವಣೆ ಮತ್ತು ಅವರ ಪರಿವರ್ತನೆಯ ಪ್ರಕ್ರಿಯೆ ಪ್ರತಿಕ್ರಿಯೆಗಳನ್ನು ವಿಶ್ಲೇಷಣೆ ಮಾಡಿದ್ದಾರೆ. ಮುಸ್ಲಿಮರ ರಾಜಕೀಯ, ಸಾಮಾಜಿಕ ಸ್ಥಿತಿಗತಿಗಳು, ಮತ್ತು ಅವರ ಸಮುದಾಯದ ಬೆಳವಣಿಗೆ, ಸಮುದಾಯ ಪತ್ರಿಕೆಗಳು, ಅವರ ಭಾಗವಹಿಸುವಿಕೆ, ರಾಜಕೀಯ ಚಟುವಟಿಕೆ, ಅವರ ಪಾತ್ರದ ಬಗ್ಗೆ ವಿಶ್ಲೇಷಿಸಿದ್ದಾರೆ.[೧೬]

ಪ. ಮಹದೇವಮ್ಮರವರ "ಮೈಸೂರು ರಾಜ್ಯದ ವ್ಯಾಪಾರ ಮತ್ತು ವಾಣಿಜ್ಯ ಅಭಿವೃದ್ಧಿಗೆ ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನ್ ಕೊಡುಗೆ ೧೭೬೧-೧೭೯೯" ಎಂಬ ಕೃತಿಯಲ್ಲಿ ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನ್ ವಾಣಿಜ್ಯ-ವ್ಯಾಪಾರದ ಕೊಡುಗೆಗೆ ಮಾತ್ರ ಸೀಮಿತವಾಗಿದ್ದು, ಅವರ ಜೀವನ ಮತ್ತು ಆಡಳಿತವನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಅವರ ಅವಧಿಯಲ್ಲಿ ಆರ್ಥಿಕ, ವ್ಯಾಪ್ಹಾರ ವಾಣಿಜ್ಯ ಬೆಳವಣಿಗೆಯ ಸ್ಪಷ್ಟ ಚಿತ್ರಣವನ್ನು ನೀಡಲು ಪ್ರಯತ್ನಿಸಿದ್ದಾರೆ.[೧೭]

"ಪ್ಯಾಲೆಸ್ ಮರಮತ್ ಇಲಾಖೆಯ ಕಡತಗಳು" ೧೮೭೬-೧೯೬೧ ಇದರಲ್ಲಿ ರಾಜ್ಯದ ಕಾಲಘಟ್ಟದಲ್ಲಿ ಮೈಸೂರು

ಹಾಗೂ ಇದರ ಸುತ್ತಮುತ್ತಲಿನ ತಾಲೂಕುಗಳಲ್ಲಿ ಕಟ್ಟಿಸಿದ ಮಹಲ್‌ಗಳು ಹಾಗೂ ಅರಮನೆಗಳ ದೇವಸ್ಥಾನಗಳು, ಮಸೀದಿಗಳು ಮತ್ತು ದರ್ಗಾಗಳು ಹಾಗೂ ಎಲ್ಲಾ ವಿಧದ ಕಟ್ಟಡ ಕೆಲಸದ ಬಗ್ಗೆ ಮಾಹಿತಿ ದೊರೆಯುತ್ತದೆ.[೧೮]

ಡಾ. ಎಸ್. ಚಂದ್ರಶೇಖರ್‌ರವರ ೧೯೮೩ರಲ್ಲಿ ಪ್ರಕಟಗೊಂಡ "ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು ೧೮೮೧ರಿಂದ ೧೯೪೦" ಎಂಬ ಕೃತಿಯಲ್ಲಿ ಮೈಸೂರಿನ ಪ್ರಜಾಪ್ರತಿನಿಧಿ ಸಭೆಯ ಕುರಿತು ಅದರ ಸ್ಥಾಪನೆ, ಹಿಂದಿರುವ ಚಾರಿತ್ರಿಕ ಮತ್ತು ಆರ್ಥಿಕ, ಸಾಮಾಜಿಕ ಸನ್ನಿವೇಶ, ಆಡಳಿತದ ಬಗ್ಗೆ ಮತ್ತು ಪ್ರಜಾಪ್ರತಿನಿಧಿ ಸಭೆ, ಸಂಸ್ಥಾನದಲ್ಲಿ ಹೇಗೆ ಪ್ರಜಾಭಿಪ್ರಾಯ ರೂಪಿಸುವ ಪಾತ್ರವಹಿಸಿತ್ತು ಎಂಬುದಕ್ಕೆ ಉತ್ತರ ಒದಗಿಸುವ ಪ್ರಯತ್ನ ಮಾಡಿದ್ದಾರೆ. ಮಿರ್ಜಾ ಇಸ್ಮಾಯಿಲ್ ರಾಜ್ಯದಲ್ಲಿ ಇದ್ದ ಜಾತಿ–ವರ್ಗ, ಸಂಘರ್ಷವನ್ನು ತಡೆಗಟ್ಟಲು ಏನು ಕ್ರಮಕೈಗೊಂಡರು. ಮಿರ್ಜಾರವರು ಬ್ರಾಹ್ಮಣರನ್ನು ಬೆಂಬಲಿಸಿದ್ದೆ ಹಿಂದುಳಿದ್ದು ವರ್ಗಗಳನ್ನು ಕೆರಳಿಸಲು ಮತ್ತು ಅವರ ಬಗ್ಗೆ ಅಸಮಾಧಾನ ಹೊಂದಿದ್ದರು. ಸರ್ಕಾರವನ್ನು ಹೆಚ್ಚು ವಿರೋಧಿಸುತ್ತಿದ್ದ ಗುಂಪುಗಳ ಕ್ಷುಲ್ಲಕವೆನಿಸುವ (ಗಣಪತಿ ಗಲಭೆ) ಘಟನೆಯನ್ನು ರಾಜಕೀಯಗೊಳಿಸಿ ವೈಭವೀಕರಿಸಿ ಮೈಸೂರಿನ ಚರಿತ್ರೆಯಲ್ಲಿ ಒಂದು ದೊಡ್ಡ ಕೋಮುಗಲಭೆಯಾಗಿ ಬೆಳೆಯಲು ಪ್ರೇರಣೆಕೊಟ್ಟರು ಎಂಬುದನ್ನು ಎಳೆಎಳೆಯಾಗಿ ವಿವರಿಸಿದ್ದಾರೆ. ಗಾಂಧೀಜಿಯವರ ಬಗೆಗಿನ ಮಿರ್ಜಾರವರ ಮೆಚ್ಚುಗೆಗೆ ಬ್ರಿಟಿಷರು ಮಿರ್ಜಾರವರಿಗೆ ಛೀಮಾರಿ ಹಾಕಿದ್ದ ಸೂಕ್ಷ್ಮವಾದ ವಿಷಯಗಳನ್ನು ವಿವರಿಸಲು ಪ್ರಯತ್ನಿಸಿದ್ದಾರೆ.[೧೯]

ಮಸೂದ್ ಸಿರಾಜ್‌ರವರ "ತಾರೀಖ್ ಎ. ಮೈಸೂರು" ಎಂಬ ಕೃತಿಯಲ್ಲಿ ಟಿಪ್ಪು ಸುಲ್ತಾನನ ಮರಣದ ನಂತರ ಆದ ಬೆಳವಣಿಗೆಯಲ್ಲಿ ಅವರು ಎದುರಿಸುತ್ತಿರುವ ಸಮಸ್ಯೆ, ಮೈಸೂರಿನ ಮುಸ್ಲಿಂ ಸಮುದಾಯದ ಕುರಿತು ಸಂಕ್ಷಿಪ್ತವಾಗಿ ವಿವರಿಸಲು ಪ್ರಯತ್ನಿಸಿದ್ದಾರೆ.[೨೦]

ದೇವಚಂದ್ರನ ರಾಜಾವಳಿ ಕಥೆಯಲ್ಲಿ "ಮುಸಲ್ಮಾನ ಮತದ ಉಗಮ" ವನ್ನು ಕುರಿತು ಚರ್ಚಿಸಲಾಗಿದೆ. ಮೈಸೂರು ಒಡೆಯರ ವಂಶಾವಳಿಗೆ ಸಂಬಂಧಿಸಿದ ಈ ಗ್ರಂಥದಲ್ಲಿ ಆಡಳಿತ ವ್ಯವಸ್ಥೆಯು ಪರವಾದ ಮೆಕೆಂಜಿ ಬಯಸುವ ರೂಪದಲ್ಲಿ ಪೂರ್ವಾಗ್ರಹದಿಂದ ತಯಾರಿಸಲ್ಪಟ್ಟ ಗ್ರಂಥವಾಗಿದ್ದು, ಹೈದರ್–ಟಿಪ್ಪು ಆಡಳಿತವನ್ನು ಟೀಕಿಸಿ ಮತ್ತು ಕೃಷ್ಣರಾಜ ಒಡೆಯರ ಅಧಿಕಾರದಲ್ಲಿ ಬ್ರಿಟಿಷರು ಆಡಳಿತವನ್ನು ವಹಿಸಿಕೊಂಡಿದ್ದರ ಬಗ್ಗೆ ವಶಪಡಿಸಿಕೊಂಡಿದ್ದರ ಬಗ್ಗೆ ಬ್ರಿಟಿಷರನ್ನು ಸಮರ್ಥಿಸಿಕೊಂಡು ಬರೆಯುತ್ತಾರೆ.[೨೧]

ಒಟ್ಟಾರೆ ಮೇಲ್ಕಂಡ ಗ್ರಂಥಗಳು ಮುಸ್ಲಿಮ್ ಸಮುದಾಯದ ಬಗ್ಗೆ ಸಮಗ್ರ ಮಾಹಿತಿಗಳನ್ನು ನೀಡದಿದ್ದರೂ ಆಧುನಿಕ ಮೈಸೂರು ಸಂಸ್ಥಾನದಲ್ಲಿ ಪ್ರಮುಖ ಅಲ್ಪಸಂಖ್ಯಾತರಾಗಿದ್ದ ಮುಸ್ಲಿಮ್ ಸಮುದಾಯದ ಬಗ್ಗೆ ಕೆಲವೇ ಕೆಲವು ಮಾಹಿತಿಗಳು ಲಭ್ಯವಾಗುತ್ತವೆ. ಇವುಗಳನ್ನೆಲ್ಲಾ ಕ್ರೋಢೀಕರಿಸಿಕೊಂಡು ಲಭ್ಯವಿರುವ ಚಾರಿತ್ರಿಕ ದಾಖಲೆಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡು ಆಳವಾಗಿ ಅಧ್ಯಯನ ನಡೆಸಬೇಕಾದ ಅನಿವಾರ್ಯತೆ ಕಂಡುಬರುತ್ತದೆ.



**ಅಡಿಟಿಪ್ಪಣಿಗಳು**


೧. ಇಸ್ಲಾಂ ಸಂಸ್ಕೃತಿ, ಮೈಸೂರು ವಿಶ್ವವಿದ್ಯಾನಿಲಯ, ೧೯೪೮, ಪ್ರೊ. ಮಹಮ್ಮದ್ ಅಬ್ಬಾಸ್.

೨. ವಿಕ್ಟರ ಡಿಸೋಜ ರವರ "ನವಾಯತ್ಸ್ ಆಫ್ ಕರ್ನಾಟಕ" (೧೯೫೫).

೩. ಜೇಮ್ಸ್ ಮ್ಯಾನರ್, ಪೊಲಿಟಿಕಲ್ ಛೇಂಜ್ ಇನ್ ದಿ ಇಂಡಿಯನ್ ಸ್ಟೇಟ್ ಮೈಸೂರು (೧೯೧೭–೧೯೫೮), ನವದೆಹಲಿ, ೧೯೭೭.

೪. ಎಂ.ಕೆ.ಲಿಂಗಯ್ಯ ರವರ "ಮೈಸೂರು ಒಂದು ಅಧ್ಯಯನ" ಎಂಬ ಗ್ರಂಥವು (೧೯೮೧).

೫. ಸೇತುಮಾಧವವರಾಯ್ ಪಗಡಿ ಅವರು "ಭಾರತೀಯ ಮುಸಲ್ಮಾನ ಶೋಧ ಹಾಗೂ ಬೋಧ" (೧೯೮೭).

೬ ಸಿ.ಜಿ.ಹುಸೇನ್ ಖಾನ್ ರವರ "Marrige and Kinship among in South India" (೧೯೯೪).

೭. ಷಹಸೇನಾ ಬೇಗಂ ರವರು "ಕರ್ನಾಟಕ ಮುಸ್ಲಿಂ ಜಾನಪದ" (೨೦೦೦).

೮. ಬಿಜಾಪುರ್ ಆದಿಲ್ ಷಾಹಿ, ಡಾ॥ ಕೃಷ್ಣ ಕೊಲ್ಹಾರ ಕುಲಕರ್ಣಿ. ಶಿಕ್ಯಾಬ್ ಪಬ್ಲಿಕೇಶನ್ ೨೦೦೮.

೯. ರವಿಕುಮಾರ್ ಜೆ, ಮಧ್ಯಕಾಲೀನ ಕರ್ನಾಟಕದಲ್ಲಿ ಹಿಂದೂ ಮುಸ್ಲಿಂ ಸಾಮರಸ್ಯ ಒಂದು ಐತಿಹಾಸಿಕ ಹಾಗೂ ವ್ಯಾಪ್ತಿನ ಶಾಸ್ತ್ರೀಯ ಅಧ್ಯಾಯ, ಹಂಪಿ ವಿಶ್ವವಿದ್ಯಾನಿಲಯ, ೨೦೦೭.

೧೦. ವಹಾಬ್ ದೊಡ್ಡಮನೆ, ತುಳುನಾಡಿನ ಮುಸ್ಲಿಮರು, ೨೦೦೮. ಗ್ರೀನ್ ವರ್ಡ್ಸ್ ಪಬ್ಲಿಕೇಶನ್.

೧೧. ಮುಲ್ಲಾ ಮಾಲೀಕ ರೆಹಾನ್, Sects and sub sects among the Muslim of Karnataka with special reference to North Karnataka a study, ಮೈಸೂರು ವಿಶ್ವವಿದ್ಯಾನಿಲಯ, ೨೦೧೦.

೧೨. Bjorn Hettne Political Economy of Indirect Rule of Mysore 1881-1947 Karnataka through the ages – pub govt of Mysore.

೧೩. Madani Hossein ರವರ "Anthropology of Internt among of Musilm Community" (೨೦೧೫).

೧೪. ಶವೇರಾ ಶಬರೀನ್, ಹೈಯರ್ ಎಜುಕೇಶನ್ ಮತ್ತು ಸೋಷಿಯಲ್ ಚೇಂಜ್ ಎ ಸ್ಟಡಿ ಆಫ್ ಮುಸ್ಲಿಂ ಇನ್ ಅರಬಿನ್ ಮೈಸೂರು, ಅಪ್ರಕಟಿತ ಮಹಾಪ್ರಬಂಧ ಮೈಸೂರು ವಿಶ್ವವಿದ್ಯಾನಿಲಯ, ೨೦೧೫.

೧೫. ಭಿಮಾ ಘನಾಥೆರವರ "ಕರ್ನಾಟಕದಲ್ಲಿ ಮುಸ್ಲಿಂ ಸ್ವಾತಂತ್ರ್ಯ ಹೋರಾಟಗಾರರು – ಒಂದು ಅಧ್ಯಯನ" (೨೦೧೬).

೧೬. Naimur Rehaman ರವರ "Muslims response to socio political changes in princely Mysore (1881-1947)" (2007)

೧೭. ಪ. ಮಹದೇವಮ್ಮ ರವರ "ಮೈಸೂರು ರಾಜ್ಯದ ವ್ಯಾಪಾರ ಮತ್ತು ವಾಣಿಜ್ಯ ಅಭಿವೃದ್ಧಿಗೆ ಹೈದರ್ ಆಲಿ ಮತ್ತು ಟಿಪ್ಪು ಸುಲ್ತಾನ್ ಕೊಡುಗೆ ೧೭೬೧–೧೭೯೯".

೧೮. "ಪ್ಯಾಲೆಸ್ ಮರಮತ್ ಇಲಾಖೆಯ ಕಡತಗಳು" ೧೮೭೬–೧೯೬೧.

೧೯. ಎಸ್ ಚಂದ್ರಶೇಖರ್ ರವರ ೧೯೮೩ರಲ್ಲಿ ಪ್ರಕಟಗೊಂಡ "ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು ೧೮೮೧ ರಿಂದ ೧೯೪೦".

೨೦. ದೇವಚಂದ್ರನ ರಾಜಾವಳಿ ಕಥೆ ಪ್ರಸಾರಂಗ ಹಂಪಿ ೨೦೦೧.

೨೧. ಮಸೂದ್ ಸಿರಾಜ್ ರವರ "ತಾರೀಖ್ ಎ. ಮೈಸೂರು" ೨೦೦೨.

# ೧೧೬

# 'ಮ್ಯಾಂಗಲೋರ್ ಮ್ಯಾಗಜೀನ್'ನಲ್ಲಿ ದಕ್ಷಿಣ ಕನ್ನಡ

**ಅಶೋಕ್ ರಾಕೇಶ್ ಡಿ'ಸೋಜ***

ವಸಾಹತುಶಾಹಿ ಬರವಣಿಗೆಗಳಲ್ಲಿ ದಕ್ಷಿಣ ಕನ್ನಡವು 'ಸೌತ್ ಕೆನರಾ' ಎಂದೇ ಪರಿಚಿತವಾಗಿದೆ. ಕ್ರಿ.ಶ. ೧೭೯೯ರಲ್ಲಿ ಬ್ರಿಟಿಷರು ಟಿಪ್ಪುವನ್ನು ನಾಲ್ಕನೇ ಆಂಗ್ಲೋ-ಮೈಸೂರು ಕದನದಲ್ಲಿ ಸೋಲಿಸುವುದರೊಂದಿಗೆ ಈ ಪ್ರದೇಶವು ವಸಾಹತುಶಾಹಿ ಆಳ್ವಿಕೆಗೆ ಒಳಪಟ್ಟಿತು. ಕ್ರಿ.ಶ ೧೮೬೨ರಲ್ಲಿ ಬ್ರಿಟಿಷರು ಈ ಪ್ರದೇಶವನ್ನು ನಾರ್ತ್ ಮತ್ತು ಸೌತ್ ಕೆನರಾವನ್ನಾಗಿ ವಿಭಜಿಸಿ 'ನಾರ್ತ್' ಕೆನರಾವನ್ನು ಮುಂಬಾಯಿ ಪ್ರಾಂತ್ಯಕ್ಕೆ ಸೇರಿಸಿದರು. 'ಸೌತ್ ಕೆನರಾ'ವನ್ನು ಮದ್ರಾಸ್ ಪ್ರಾಂತ್ಯದಲ್ಲಿಯೇ ಮುಂದುವರಿಸಲಾಯಿತು. ಕ್ರಿ.ಶ. ೧೭೯೯ರಲ್ಲಿ ಕೆಪ್ಟನ್ ಥೊಮಸ್ ಮುನ್ರೋ ಎಂಬ ಸೇನಾಧಿಪತಿಯು ಕೆನರಾದ ಮೊದಲನೆಯ ಕಲೆಕ್ಟರನಾಗಿ ನೇಮಿಸಲ್ಪಟ್ಟನು.

ಕ್ರಿ.ಶ. ೧೮೯೦ರಲ್ಲಿ ಸಂತ ಅಲೋಶಿಯಸ್ ಕಾಲೇಜು ಆರಂಭಿಸಿದ ಒಂದು ತ್ರೈಮಾಸಿಕ ಪತ್ರಿಕೆ 'ಮ್ಯಾಂಗಲೋರ್ ಮ್ಯಾಗಜೀನ್'. ಪತ್ರಿಕೆ ತನ್ನ ಮೊದಲ ಪ್ರಕಟನೆಯಲ್ಲಿಯೇ ತನ್ನ ಉದ್ದೇಶವನ್ನು ಸ್ಪಷ್ಟವಾಗಿ ತಿಳಿಸಿದೆ. "ಈ ಮ್ಯಾಗಜೀನ್‌ನನ್ನು ಕಾಲೇಜಿನ ಆಸಕ್ತ ಪದವಿಪೂರ್ವ ಮತ್ತು ಪದವೀಧರ ಹಾಗೂ ಮಂಗಳೂರು ಮತ್ತು ದಕ್ಷಿಣ ಕೆನರಾದವರಿಗಾಗಿ ಆರಂಭಿಸಲಾಗಿದೆ. ಇದು ಕಾಲೇಜಿನ ಒಂದು ಮಾಧ್ಯಮ ಹಾಗೂ ದಾಖಲೆಯಾಗಿದೆ. ಅದೇ ರೀತಿ ಇದು ಈಗಿನ ಮತ್ತು ಹಳೆ ವಿದ್ಯಾರ್ಥಿಗಳ ನಡುವಿನ ಒಂದು ಕೊಂಡಿಯಾಗಿದೆ."[೧] ಇದು ಸಾಮಾನ್ಯ ಜನರ ಪತ್ರಿಕೆಯಾಗಿರದೇ, ಸಮಾಜದ ವಿದ್ಯಾವಂತರ ಹಾಗೂ ಸಿರಿವಂತರ ಪತ್ರಿಕೆಯಾಗಿತ್ತು ಎಂದೇ ಹೇಳಬಹುದು. ಯಾಕೆಂದರೆ ೧೮೯೦ರಲ್ಲೇ ಇದರ ವಾರ್ಷಿಕ ಚಂದಾ ಒಂದು ರೂಪಾಯಿಯಾಗಿತ್ತು. ಇದು ಬಡವರ ಪಾಲಿಗೆ ಕೈಗೆಟಕದ ಸಂಗತಿ.

'ಮ್ಯಾಂಗಲೋರ್ ಮ್ಯಾಗಜೀನ್'ನ ಪ್ರಥಮ ಸಂಪಾದಕರಾಗಿದ್ದ ರೆ|ಫಾ| ಜೋನ್ ಮೋರ್‌ರವರು ಒಬ್ಬ ಐರಿಷ್ ಪಾದ್ರಿಯಾಗಿದ್ದರು. ಸಂತ ಅಲೋಶಿಯಸ್ ಕಾಲೇಜಿನಲ್ಲಿ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದ ಅವರು ನಂತರ ಪ್ರಾಂಶುಪಾಲರು ಹಾಗೂ ೧೯೦೦ರಿಂದ ೧೯೦೪ರವರೆಗೆ ಕಾಲೇಜಿನ ರೆಕ್ಟರ್ ಆಗಿ ಕಾರ್ಯನಿರ್ವಹಿಸಿದರು. ರೆ|ಫಾ| ಮೋರ್ ಈ ಪತ್ರಿಕೆಯ ಸಂಪಾದಕರಾಗಿರುವಷ್ಟು ಕಾಲ ಈ ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳ ಸಾಹಿತ್ಯ ಶೈಲಿ, ಪದ ವಿನ್ಯಾಸವು ಸಾಮ್ಯತೆಯನ್ನು ಹೊಂದುತ್ತಿರುವುದನ್ನು ಕಾಣಬಹುದು. ಇದಕ್ಕೆ ಕಾರಣವೆಂದರೆ ಹೆಚ್ಚಿನ ಲೇಖನಗಳನ್ನು ಫಾ| ಮೋರ್‌ರವರು ಪುನರ್‌ರಚಿಸುತ್ತಿದ್ದಿರಬೇಕು ಹಾಗೂ ಲೇಖನಗಳ ಆಯ್ಕೆ ಸಂಬಂಧಿಸಿದಂತೆ ತಮ್ಮದೇ ನಿಲುವು ಪಾಲಿಸುತ್ತಿದ್ದಿರಬೇಕು. ಕ್ರಿ.ಶ. ೧೮೯೦ರಲ್ಲಿ ಪ್ರಾರಂಭವಾದ ಈ ತ್ರೈಮಾಸಿಕ ಪತ್ರಿಕೆಯು ೧೯೧೪ರಲ್ಲಿ ವಾರ್ಷಿಕ ಸಂಚಿಕೆಯಾಗುತ್ತದೆ ಹಾಗೂ ೧೯೩೩ರಲ್ಲಿ ತನ್ನ ಪ್ರಕಟನೆಯನ್ನು ನಿಲ್ಲಿಸುತ್ತದೆ. ಪತ್ರಿಕೆಯು ಅಂತಿಮ ಹಂತಗಳಲ್ಲಿ ಅಥವಾ ಕೊನೆಯ ಸಂಚಿಕೆಗಳು ತನ್ನ ಗುಣಮಟ್ಟವನ್ನು ಕಳಕೊಂಡಿರುವುದು ಕಂಡು ಬರುತ್ತದೆ ಹಾಗೂ ಕಾಲೇಜಿಗೆ ಸಂಬಂಧಿಸಿದ ವಿಷಯಗಳೇ ಹೆಚ್ಚಾಗಿ ಅವುಗಳಲ್ಲಿರುವುದನ್ನು ಕಾಣಬಹುದು. ಕ್ರಿ.ಶ. ೧೯೩೪ರಿಂದ 'ಕಾಲೇಜು ವಾರ್ಷಿಕ' ಸಂಚಿಕೆ ಪ್ರಾರಂಭವಾಗುತ್ತದೆ.

ಈ ಪತ್ರಿಕೆಗೆ ಕಾಲೇಜಿನ ವಿದ್ಯಾರ್ಥಿಗಳು ಮಾತ್ರವಲ್ಲದೆ, ಹಳೇ ವಿದ್ಯಾರ್ಥಿಗಳು, ಕೆನರಾದ ಪ್ರಸಿದ್ಧ ವ್ಯಕ್ತಿಗಳು ಲೇಖನಗಳನ್ನು ಬರೆಯುತ್ತಿದ್ದುದನ್ನು ಗಮನಿಸಬಹುದು. ಪತ್ರಿಕೆಯಲ್ಲಿ ಕಾಲೇಜಿನ ಬಗ್ಗೆ, ಜೆಸ್ಯೂಟರ ಬಗ್ಗೆ ಕ್ರೈಸ್ತ ಸಮುದಾಯಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ, ಪ್ರಾಚೀನ ಕಾಲದ ನಾವಿಕರ ಬಗ್ಗೆ, ಕೊಂಕಣಿ ಭಾಷೆ, ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳು, ಇಲ್ಲಿನ ವಾಣಿಜ್ಯಾಭಿವೃದ್ಧಿಗೆ ಸಂಬಂಧಿಸಿದಂತೆ ಮಂಗಳೂರಿನ ಬಂದರು ಮತ್ತು ರೈಲ್ವೆ ಬಗ್ಗೆ ಲೇಖನಗಳು, ದಕ್ಷಿಣ ಕನ್ನಡದ ಇತಿಹಾಸ, ಮಂಗಳೂರು ಧರ್ಮ ಪ್ರಾಂತ್ಯದ ಬಗ್ಗೆಗಿನ ದೀರ್ಘವಾದ ಲೇಖನಗಳು, ಟಿಪ್ಪುವಿನ ಬಗ್ಗೆ ಇರುವ ಕಟ್ಟು ಕಥೆಗಳು, ಪ್ರಖ್ಯಾತ ವರ್ತಕರ ಜಾಹೀರಾತುಗಳು, ಇಂಗ್ಲೀಷ್ ಮತ್ತು ಲ್ಯಾಟೀನ್ ಭಾಷೆಗಳಲ್ಲಿರುವ ವಿವಿಧ ಪದ್ಯಗಳು, ಹಾಗೂ ಧಾರ್ಮಿಕ ಆಸಕ್ತಿಯ ಲೇಖನಗಳನ್ನು ಬಹುಮುಖ್ಯವಾಗಿ ಗುರುತಿಸಬಹುದು. ಈ ಪತ್ರಿಕೆಯಲ್ಲಿ ಬ್ರಿಟಿಷ್ ಆಡಳಿತ ವರ್ಗಕ್ಕೆ ಹಾಗೂ ಜೆಸ್ಯೂಟರಿಗೆ ಮುಜುಗರ ತರುವಂತಹ ಯಾವುದೇ ವಿಷಯಗಳು ಕಾಣಲಾರವು. ಟಿಪ್ಪು ಈ ಪತ್ರಿಕೆಯಲ್ಲಿ

* ವಿಭಾಗ ಮುಖ್ಯಸ್ಥರು ಹಾಗೂ ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಆಳ್ವಾಸ್ ಕಾಲೇಜು, ಮೂಡಬಿದಿರೆ, ಮೊ. ೮೭೬೨೩೯೯೫೭೫೬

ಹಲವು ಲೇಖಕರಿಂದ ಖಂಡನೆಗೆ ಒಳಗಾಗಿದ್ದರೆ, ಇನ್ನೊಂದೆಡೆ ವಸಾಹತುಶಾಹಿಯನ್ನು ಮುಕ್ತವಾಗಿ ಹೊಗಳಿರುವುದನ್ನು ಕಾಣಬಹುದು. ಇಲ್ಲಿ ಕಾಣಸಿಗುವ ಜಾಹೀರಾತುಗಳು ವಸಾಹತುಶಾಹಿ ವ್ಯವಸ್ಥೆಯಲ್ಲಿ ಮಂಗಳೂರಿನಲ್ಲಿ ತಳವೂರಿದ ಕಾರ್ಖಾನೆಗಳ (ಹೆಂಚಿನ ಕಾರ್ಖಾನೆ), ವಿದೇಶಿ ವಸ್ತುಗಳ ಮಾರಾಟಕ್ಕೆ ಸಂಬಂಧಿಸಿದವುಗಳಾಗಿವೆ.

ಈ ಪ್ರಬಂಧದಲ್ಲಿ 'ಮ್ಯಾಂಗಲೋರ್ ಮ್ಯಾಗಜೀನ್'ನಲ್ಲಿ ಬಿಂಬಿತ ಕೆನರಾದ ಇತಿಹಾಸವನ್ನು ಪ್ರಸ್ತುತ ಪಡಿಸುವುದೇ ಮುಖ್ಯ ಉದ್ದೇಶವಾದುದರಿಂದ ಈ ಅಧ್ಯಯನವು'ಮ್ಯಾಂಗಲೋರ್ ಮ್ಯಾಗಜೀನ್'ಗಷ್ಟೇ ಸೀಮಿತವಾಗಿದೆ. ಯಾವಾಗಲೂ ವಸಾಹತುಶಾಹಿ ಆಡಳಿತ ವ್ಯವಸ್ಥೆಯ ಪರವಾಗಿರುವ ಆ ಕಾಲದ ಮಿಶನರಿ ಸಂಸ್ಥೆಗಳು ತಮ್ಮ ಬರವಣಿಗೆಗಳಲ್ಲೂ ನಿಷ್ಠೆಯನ್ನು ವ್ಯಕ್ತಪಡಿಸುವುದು ಕಾಣಬಹುದು. ಇಲ್ಲಿ ಸಿಗುವ ಚಿತ್ರಣ ೧೯-೨೦ನೇ ಶತಮಾನದ ದಕ್ಷಿಣ ಕನ್ನಡದ ಮಿಶನರಿಗಳ ಹಾಗೂ ಮಿಶಿನರಿಗಳಿಂದ ಶಿಕ್ಷಿತ ಮೇಲ್ ವರ್ಗದ ಕ್ರೈಸ್ತರ ಸಾಮಾಜಿಕ, ಧಾರ್ಮಿಕ ಹಾಗೂ ಇತರ ನಿಲುವುಗಳನ್ನು ಪ್ರತಿಬಿಂಬಿಸುತ್ತದೆ. ಅದೆಂದೂ ವಸಾಹತುಶಾಹಿಯ ವಿರುದ್ಧ ಸವಾಲೆತ್ತಲಾರದು. ಬದಲು, ಅದರೊಂದಿಗೆ ಕೈ ಜೋಡಿಸುತ್ತದೆ ಹಾಗೂ ವಸಾಹತುಶಾಹಿಯ ಕಾಲದಲ್ಲಾಗುವ ಬದಲಾವಣೆಗಳನ್ನು ಅದೇ ನಿಜವಾದ ಬೆಳವಣಿಗೆ ಎಂದು ಪ್ರತಿಪ್ರಾದಿಸುತ್ತದೆ.

'ಮ್ಯಾಂಗಲೋರ್ ಮ್ಯಾಗಜೀನ್'ನಲ್ಲಿ ಪ್ರಕಾಶಿಸಲ್ಪಟ್ಟ ಪ್ರಮುಖ ಲೇಖನಗಳಲ್ಲಿ ಈ ಪ್ರದೇಶದ ಇತಿಹಾಸದ ಲೇಖನವೂ ಒಂದು. ಧಾರಾವಾಹಿ ರೂಪದಲ್ಲಿ ಈ ಲೇಖನಗಳ ಸರಮಾಲೆಯು ಕ್ರಿ.ಶ. ೧೮೯೮ರಿಂದ ಪ್ರಾರಂಭವಾಗಿ ೧೯೦೧ರ ವರೆಗೆ "ಔಟ್‌ಲೈನ್ಸ್ ಆಫ್ ದಿ ಹಿಸ್ಟರಿ ಆಫ್ ಕೆನರಾ" ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗಿದೆ.ಇದರ ಲೇಖಕರು ಜೆರೋಮ್ ಆ್ಯಂಟೋನಿ ಸಲ್ಡಾನರು. ಅವರು ತಮ್ಮ ಲೇಖನಗಳನ್ನು ೧೯೦೪ರ ಸಂಪುಟ ಮೂರರವರೆಗೆ ಮುಂದುವರಿಸಿ ಕೆನರಾದ ಕೆಲವು ಸಮುದಾಯಗಳ ಚರಿತ್ರೆಯ ಬಗ್ಗೆ ಚರ್ಚಿಸಿದ್ದಾರೆ. ಜೆ.ಎ. ಸಲ್ಡಾನರು ಮಂಗಳೂರಿನ ಕ್ರೈಸ್ತ ಸಮುದಾಯಕ್ಕೆ ಸೇರಿದವರಾಗಿದ್ದು, ಜೆಸ್ಯೂಟ್ ಸಂಸ್ಥೆಗಳಲ್ಲಿ ಶಿಕ್ಷಿತರಾಗಿದ್ದರು. ಅವರು ಎಫ್.ಎ (F.A) ಶಿಕ್ಷಣವನ್ನು ಮಂಗಳೂರಿನ ಸಂತ ಅಲೋಶಿಯಸ್ ಕಾಲೇಜಿನಲ್ಲಿ ಮುಗಿಸಿ ತಮ್ಮ ಬಿ.ಎ ಪದವಿಯನ್ನು ಟ್ರಿಚಿ (Trichy) ಯ ಸಂತ ಜೋಸೆಫ್ ಸಂಸ್ಥೆಯಲ್ಲಿ ಹಾಗೂ ಕಾನೂನು ಪದವಿಯನ್ನು ಬಾಂಬೆ ವಿಶ್ವ ವಿದ್ಯಾನಿಲಯದಿಂದ ಪಡೆದಿದ್ದರು.ಅವರು ಬಾಂಬೆ ಸೇಕ್ರಟೇರಿಯಟ್‌ನ ಕಾನೂನು ವಿಭಾಗದಲ್ಲಿ ಉದ್ಯೋಗಿಯಾಗಿದ್ದರು.

ಈ ಲೇಖನದ ಉದ್ದೇಶವೇ ಪೂರ್ವಾಗ್ರಹ ಪೀಡಿತವಾಗಿದೆ.ಲೇಖಕರ ಪ್ರಕಾರ ೧೮೯೯ರಲ್ಲಿ ಕೆನರಾದ ಕ್ರೈಸ್ತರು ಟಿಪ್ಪುವಿನ ಬಂಧನದಿಂದ ಬಿಡುಗಡೆಯಾದರು. ಇದರೊಂದಿಗೆ ಅವರ ನಾಡಿನಲ್ಲಿ ಟಿಪ್ಪು ಸುಲ್ತಾನನ ದುರಾಡಳಿತ ಅಂತ್ಯವಾಗಿ ಸುವರ್ಣಯುಗ ಪ್ರಾರಂಭವಾಯಿತು. ಕ್ರಿ.ಶ. ೧೮೯೯ರಲ್ಲಿ ಈ ಘಟನೆಗೆ ಒಂದು ಶತಮಾನವಾಗುವ ಹೊಸ್ತಿಲಲ್ಲಿ ಅವರ ಗತಕಾಲದ ಬಗ್ಗೆ ಒಂದು ದೃಷ್ಟಿಯನ್ನು ಹರಿಸುವುದು ಸಾಮಾನ್ಯವಾಗಿದೆ. ಈ ನಿಟ್ಟಿನಲ್ಲಿ ಲೇಖಕರು ಈ ನಾಡಿನ ಚರಿತ್ರೆಯನ್ನು ಬರೆಯಲು ಉತ್ಸುಹಕರಾಗಿರುವುದಾಗಿ ತಿಳಿಸಿದ್ದಾರೆ.[೨] ಕೆನರಾದ ಇತಿಹಾಸ ಅಧ್ಯಯನಕ್ಕೆ ಇರುವ ದಾಖಲೆಗಳ ಬಗ್ಗೆ ಲೇಖಕರು ಚರ್ಚಿಸುತ್ತಾ, ಸಿಕ್ಕಿರುವ ದಾಖಲೆಗಳನ್ನು ಕಲ್ಪಿತ, ಅರ್ಥವಿಲ್ಲದ ದಂತ ಕಥೆಗಳ ಹಾಗೂಕಟ್ಟುಕತೆಗಳ ಮಿಶ್ರಣವಾಗಿದೆ ಎಂದು ತಿರಸ್ಕರಿಸಿದ್ದಾರೆ. ಸಲ್ಡಾನರು ಕೆನರಾದ ಇತಿಹಾಸವನ್ನು ಪರಶುರಾಮನ ದಂತಕಥೆಯೊಂದಿಗೆ ಆರಂಭಿಸಿದ್ದಾರೆ. ಒಂದಾನೊಂದು ಕಾಲದಲ್ಲಿ ಈ ಪ್ರದೇಶವು ಸಮುದ್ರದಡಿಯಲ್ಲಿದ್ದು ನಂತರ ಸಮುದ್ರದಿಂದ ಮೇಲೆ ಬಂದಿರುವುದು ಜ್ವಾಲಾಮುಖಿಯ ಸ್ಫೋಟದಿಂದಾಗಿಯೇ ಹೊರತು ಪರಶುರಾಮನ ಶಕ್ತಿಯಿಂದಲ್ಲ. ಅದೇ ರೀತಿ ಈ ಪ್ರದೇಶದಲ್ಲಿ ಆರ್ಯನರು ಬರುವ ಮೊದಲು ದ್ರಾವಿಡಿಯನ್ ಪಂಗಡಗಳಾದ ಕೆನರೀಸ್, ತುಳು ಮತ್ತು ಮಲೆಯಾಳಂ ಭಾಷೆ ಮಾತನಾಡುವ ಜನರಿದ್ದರು. ನಂತರ ಆರ್ಯನರು ಇವರನ್ನು ವಶಪಡಿಸಿಕೊಂಡಿದ್ದಾರೆ. ಆದರೆ ಈ ವಶಪಡಿಸಿಕೊಳ್ಳುವಿಕೆ ಎಂಬುದು ಅಪೂರ್ಣವಾಗಿದೆ. ದಕ್ಷಿಣ ಭಾರತದ ಸಮುದಾಯಗಳು ಸುಸಂಘಟಿತರಾಗಿದ್ದು, ಶಕ್ತಿಶಾಲಿ ಸಾಮ್ರಾಜ್ಯಗಳು ಹಾಗೂ ಉನ್ನತವಾಗಿ ಅಭಿವೃದ್ಧಿ ಹೊಂದಿರುವ ಭಾಷೆಗಳನ್ನು ಒಳಗೊಂಡಿವೆ. ಆರ್ಯನರ ಮಿಂಚಿನ ದಾಳಿಗೆ ಇವರು ಕಠಿಣ ಪ್ರತಿರೋಧ ತೋರಿದ್ದಾರೆ. ಲೇಖಕರು ಕೆನರಾದಲ್ಲಿ ಆರ್ಯನರು ಬಂದಿರಬಹುದಾದ ಕಾಲದ ಬಗ್ಗೆ ಚರ್ಚಿಸುತ್ತಾ, ಡಾ। ಭಂಡಾರ್‌ಕರರ ಅಧ್ಯಯನವನ್ನು ಆಧಾರಿಸಿ ಆರ್ಯನರು ಕೆನರಾಕ್ಕೆ ಕ್ರಿ.ಪೂ ೭ರಿಂದ ೩ನೇ ಶತಮಾನದ ಮಧ್ಯ ಭಾಗದಲ್ಲಿ ಬಂದಿರಬೇಕೆಂದು ಊಹಿಸಿದ್ದಾರೆ. ಆರ್ಯನರು ಬರುವುದರ ಮೊದಲಿನ ಸಾಮಾಜಿಕ ಮತ್ತು ರಾಜಕೀಯ ಸನ್ನಿವೇಶದ ಬಗ್ಗೆ ಚರ್ಚಿಸುತ್ತಾ ಅದರ ಬಗ್ಗೆ ಏನೂ ತಿಳಿದಿಲ್ಲ, ಇದನ್ನು ಕೇವಲ ಕಲ್ಪನೆಗಳೊಂದಿಗೆ ಚರ್ಚಿಸಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.

ಲೇಖಕರು ಬನವಾಸಿ ಸಾಮ್ರಾಜ್ಯದ ಬಗ್ಗೆ ವಿವರಿಸುತ್ತಾ, ನಿಖರವಾದ ದಾಖಲೆಗಳ ಪ್ರಕಾರ ಕೆನರಾದ ಪ್ರಾಚೀನ ಸಾಮ್ರಾಜ್ಯ ಬನವಾಸಿಯಾಗಿದ್ದು, ಇದು ಪ್ರಸ್ತುತ ಉತ್ತರ ಕೆನರಾದ ಅಂಕೋಲಾ ತಾಲೂಕಿನ ಸಣ್ಣ ಕುಗ್ರಾಮವಾಗಿದೆ ಎಂದಿದ್ದಾರೆ. ಬನವಾಸಿಯ ಕದಂಬರ ಪಥನದೊಂದಿಗೆ ಕೆನರಾದ ಸ್ಥಳೀಯ ಸಾಮ್ರಾಜ್ಯವೊಂದು ಕೊನೆಗೊಂಡಿತು. ನಂತರ ಕೆನರಾದ ನಾಯಕರುಗಳು ಘಟ್ಟದ ಮೇಲಿನಿಂದ ಆಳ್ವಿಕೆ ಮಾಡಿರುವ ರಾಜರ ಸಾಮಾಂತರಾಗಿ ಆಳಿದರು. ಪುರಾತನ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ವೈಭವಪೂರಿತ ನಗರವಾಗಿ ಮೆರೆದ ಬನವಾಸಿಯು ತನ್ನ ಭವ್ಯತೆಯನ್ನು ಕಳಕೊಂಡು, ಮಹತ್ವದ ಹಾಗೂ ವಿಸ್ತಾರವಾಗಿತ್ತೆಂದು ಹೇಳಲು ಏನೂ ಉಳಿದಿಲ್ಲದಂತಹ ಪ್ರದೇಶವಾಗಿಬಿಟ್ಟಿದೆ ಎಂದು ಲೇಖಕರು ತಿಳಿಸಿದ್ದಾರೆ.

ಹೊಯ್ಸಳರನ್ನು ಯುದ್ಧ ಪ್ರಿಯರೆಂದು ಆಪಾದಿಸಿರುವ ಲೇಖಕರು ಅವರು ಯುದ್ಧದಲ್ಲಿ ಸದಾ ಕಾಲ ಕಳೆಯುತ್ತಿದ್ದರೆಂದು ಹೇಳಿದ್ದಾರೆ. ಅಂದರೆ ಜನಸಾಮಾನ್ಯರ ಅಭಿವೃದ್ಧಿ ಹಾಗೂ ಊರಿನ ಅಭಿವೃದ್ಧಿಗೆ ಏನೂ ಮಾಡಲಿಲ್ಲ ಎಂಬ ವಸಾಹತುಶಾಹಿ ವಾದವನ್ನು ಎತ್ತಿಹಿಡಿದಿದ್ದಾರೆ. ಈ ವಂಶವು ಮಲ್ಲಿಕಾಫರ್‌ನ ಧಾಳಿಯೊಂದಿಗೆ ನಿರ್ನಾಮವಾಗಿ ರಾಜಧಾನಿಯಾದ ದ್ವಾರ ಸಮುದ್ರವು ಮುಸ್ಲಿಂರಿಂದ ಧರೆಗೆ ಉರುಳಿಸಲ್ಪಟ್ಟಿತು. ಕ್ರಿ.ಶ. ೧೩೧೦ರಲ್ಲಿ ಹೊಯ್ಸಳರ ಪಥನದ ಕಾಲದಲ್ಲಿ ಕೆನರಾದಲ್ಲಿದ್ದ ಸ್ಥಳೀಯ ರಾಜರುಗಳ ಬಗ್ಗೆ ವಿವರಿಸಿದ್ದಾರೆ. ಕಾರ್ಕಳದ ಬೈರರಸು ಒಡೆಯರು, ಮಂಗಳೂರಿನ ಹತ್ತಿರದ ಬಂಗರಸರು, ಅಲದಂಗಡಿಯ ಚೌಟರು, ಬೈಲಂಗಡಿಯ ಮುಲರು, ಸೋಂಡಾದ ಪಾಳೇಗಾರರು, ಹೊನ್ನಾವರದ ನಾಯಕರು, ಭಟ್ಕಳ್ ಮತ್ತು ಗೇರುಸೊಪ್ಪದ ನಾಯಕರು, ವಿಠಲದ ಹೆಗ್ಗಡೆಯವರು, ಉಡುಪಿಯ ಹತ್ತಿರದ ಚಿಟ್ಪಾಡಿ ಬಲ್ಲಾಳರು, ಕುಂಬಳೆ ಮತ್ತು ನೀಲೇಶ್ವರದ ರಾಜರು ಮತ್ತು ಬಸರೂರಿನ ರಾಣಿ. ಮ್ಯಾಂಗಲೋರ್ ಮ್ಯಾಗಜೀನ್‌ನಲ್ಲಿ ಇಕ್ಕೇರಿ ಅರಸರ ಆಳ್ವಿಕೆಯು ಸಂಭ್ರಮಿಸಿಕೊಂಡಿದೆ. ಯಾಕೆಂದರೆ ಅವರು ವಲಸೆ ಬಂದ ಕ್ರೈಸ್ತರಿಗೆ ಆಶ್ರಯ ನೀಡಿ, ಕ್ರೈಸ್ತರು ಕೆನರಾದಲ್ಲಿ ಬೆಳೆಯಲು ಕಾರಣರಾದರು. ಕ್ರಿ.ಶ. ೧೫೬೫ರಿಂದ ೧೭೬೦ರವರೆಗೆ ಆಳ್ವಿಕೆನಡೆಸಿರುವ ಇವರು ಶಿವಭಕ್ತರಾಗಿದ್ದು, ಅವರ ಆಳ್ವಿಕೆಯ ಕಾಲದಲ್ಲಿನ ಆಸಕ್ತಿಯ ವಿಷಯವೆಂದರೆ ಒಂದು ದಿಕ್ಕಿನಲ್ಲಿ ಜೈನಧರ್ಮ ಪಥನವಾಗುತ್ತಿದ್ದರೆ, ಇನ್ನೊಂದೆಡೆ ಕೆನರಾದಲ್ಲಿ ಕ್ರೈಸ್ತ ಧರ್ಮ ತೀವ್ರ ಹರಡುವಿಕೆ ಮತ್ತು ಬೆಳವಣಿಗೆಯನ್ನು ಕಂಡಿತು.

ಗೋವಾದಿಂದ ವಲಸೆ ಬಂದ ಕ್ರೈಸ್ತರು ಅವರ ಬುದ್ಧಿವಂತಿಕೆ ಮತ್ತು ನೈಪುಣ್ಯತೆಯಿಂದಾಗಿ, ಬಹುಬೇಗ ಜೀವನದ ಎಲ್ಲಾ ದಾರಿಯಲ್ಲೂ ಮುನ್ನಡೆಯನ್ನು ಸಾಧಿಸಿದರು. ಲೇಖಕರು ವಿವರಿಸಿರುವಂತೆ ವೆಂಕಟಪ್ಪನಾಯಕ ಆರಂಭಿಸಿದ ಸಂಪ್ರದಾಯದಂತೆ ಆತ ಕ್ರಿಶ್ಚಿಯನ್ ಅಂಗ ರಕ್ಷಕರ ರೆಜಿಮೆಂಟ್ (Regiment) ನ್ನು ರಚಿಸಿದ್ದು, ಅವರನ್ನು ಹೆಚ್ಚು ಧೈರ್ಯಶಾಲಿ ಹಾಗೂ ನಂಬಿಗಸ್ತ ಜನರೆಂದು ಕರೆದಿದ್ದಾನೆ. ಈ ರೀತಿ ಲೇಖಕರು ಇಕ್ಕೇರಿಯ ನಾಯಕರನ್ನು ಕ್ರೈಸ್ತ ಧರ್ಮದ ಪೋಷಕರನ್ನಾಗಿ ಬಿಂಬಿಸಿದ್ದಾರೆ. ಅದೇ ರೀತಿ ಇಲ್ಲಿ ವಿವರಿಸಲೇಬೇಕಾದ ಅಂಶವಾದ, ಯಾಕೆ ಕ್ರೈಸ್ತರು ಪೋರ್ಚುಗೀಸ್ ಪ್ರದೇಶವಾದ ಗೋವಾದಿಂದ ನಿರಾಶ್ರಿತರಾಗಿ ಕೆನರಾಕ್ಕೆ ವಲಸೆ ಬಂದರು ಎಂಬ ಪ್ರಮುಖ ಪ್ರಶ್ನೆಯ ಬಗ್ಗೆ ಲೇಖಕರಾದ ಜೆ.ಎ. ಸಲ್ಡಾನರು ಮೌನ ವಹಿಸಿದ್ದಾರೆ. ಕ್ರೈಸ್ತರು ಪೋರ್ಚುಗೀಸರ ಮತೀಯ ವಿಚಾರಣೆ ಹಾಗೂ ದಬ್ಬಾಳಿಕೆ, ಸಾಮಾಜಿಕ ನೀತಿ, ಆರ್ಥಿಕ ಬಿಕ್ಕಟ್ಟು, ನಿರಂತರವಾದ ಯುದ್ಧಗಳು, ಜನಸಂಖ್ಯೆ ಸಮಸ್ಯೆ ಹಾಗೂ ಇತರ ಕಾರಣಗಳಿಂದಾಗಿ ಅವರು ಉತ್ತಮ ಪ್ರದೇಶವನ್ನು ಅರಸಿಕೊಂಡು ವಲಸೆ ಹೋದರು.

ಹೈದರ್, ಬಿದನೂರನ್ನು, ನಂತರ ಇತರ ಪ್ರದೇಶಗಳನ್ನು ಆಕ್ರಮಿಸಿ ವೇಗವಾಗಿ ಕೆನರಾದ ಮೇಲೆ ಹತೋಟಿ ಸಾಧಿಸಿದನು. ಹೈದರ್ ಮತ್ತು ಟಿಪ್ಪು, ಬ್ರಿಟಿಷರು ಮತ್ತು ನೆರೆಯ ರಾಜ್ಯಗಳೊಂದಿಗಿನ ಯುದ್ಧಗಳಿಂದಾಗಿ ಅಪಾರವಾದ ಸೈನ್ಯವನ್ನು ಇಟ್ಟುಕೊಂಡಿದ್ದರು. ಅವರ ಯುದ್ಧಗಳಿಗಾಗುವ ಅಪಾರ ವೆಚ್ಚವನ್ನು ಬರಿಸಲು ಅವರು ಜನರ ಮೇಲೆ ಅತೀ ಹೆಚ್ಚು ಮೊತ್ತದ ತೆರಿಗೆಗಳನ್ನು ವಿಧಿಸಿದ್ದರು. ಇದರೊಂದಿಗೆ ವಿಜಯನಗರ ಮತ್ತು ಬಿದನೂರು ಅರಸರ ಕಾಲದಲ್ಲಿ ಕ್ರಿಶ್ಚಿಯನರು, ಜೈನರು ಮತ್ತು ಬ್ರಾಹ್ಮಣರು ಪಡೆದು ಅನುಭವಿಸಿದ ಸಂಪತ್ತನ್ನು ದೋಚಿದರು. “ಇವರ ಅತಿಯಾದ ವಿದೇಶಾಂಗ ನೀತಿಯಿಂದ ಭಾರತದ ಒಂದು ಸಂಪತ್ಭರಿತ ಹಾಗೂ ಸಂತೋಷದ ಜಿಲ್ಲೆಯಾದ ಕೆನರಾವು ಬಹುಬೇಗನೇ ಒಂದು ಹಿಂದುಳಿದ ಹಾಗೂ ಅತೃಪ್ತಿಯ ಜಿಲ್ಲೆಯಾಯಿತು. ಟಿಪ್ಪು ತನ್ನ ತಂದೆಯ ಅತೀ ದುರಾಶೆಗೆ, ಕ್ರೂರತ್ವ, ಸ್ವಮತಾಭಿಮಾನ ಮತ್ತು ಅಸಹಿಷ್ಣುತೆಯನ್ನು ಸೇರಿಸಿಕೊಂಡನು. ವೈರ ಸಾಧಕ, ಧರ್ಮಾಂಧನಾಗಿದ್ದ ಟಿಪ್ಪು ತನ್ನ ಪ್ರತೀಕಾರ ಮತ್ತು ಬ್ರಿಟಿಷ್ ವಿರೋಧಿ ಅಂಶಕ್ಕೆ ಆತ ಕೆನರಾದ ಕ್ರೈಸ್ತರನ್ನು ಆರಿಸಿಕೊಂಡನು.” ಎಂದು ಹೇಳುತ್ತಾ ಟಿಪ್ಪುವನ್ನು ಕಟುವಾಗಿ ಲೇಖಕರು ಖಂಡಿಸಿದ್ದಾರೆ. ಟಿಪ್ಪುವಿನ ಮರಣವು ಈ ಪ್ರದೇಶದ ಅಭಿವೃದ್ಧಿಗೆ ಕಾರಣವಾಯಿತು ಹಾಗೂ ಹೊಸ ಆಧುನಿಕ ಯುಗಕ್ಕೆ ನಾಂದಿಯಾಯಿತು ಎಂಬುದನ್ನು ಲೇಖಕರು ಬಹಳ ಸವಿಸ್ತಾರವಾಗಿ ವಿವರಿಸಿದ್ದಾರೆ. ಶ್ರೀರಂಗ ಪಟ್ಟಣದ ಪತನದ ನಂತರ

ಕರ್ನಲ್ ವೆಲ್ಲೆಸ್ಲಿಯನ್ನು ಮುಖ್ಯಸ್ಥನನ್ನಾಗಿ ನೇಮಿಸಲಾಯಿತು ಹಾಗೂ ಇಲ್ಲಿ ಶಾಂತಿ ಸುವ್ಯವಸ್ಥೆ ಸ್ಥಾಪಿಸುವ ಜವಾಬ್ದಾರಿ ನೀಡಲಾಯಿತು. ಆತ ಅದನ್ನು ಸರಿಯಾಗಿ ನಿರ್ವಹಿಸಿ, ಟಿಪ್ಪುವಿನ ಕ್ರೂರತನಕ್ಕೆ ಬಲಿಯಾದವರಿಗೆ ಸರಿಯಾದ ನ್ಯಾಯ ಒದಗಿಸುವಂತೆ ಮಾಡಿದನು.

ಪದೇ ಪದೇ ಅರಸರುಗಳ ಬದಲಾವಣೆ ಹಾಗೂ ಪ್ರತೀ ಅರಸರುಗಳ ಮನಬಂದಂತಹ ಆಡಳಿತವು ಜನರನ್ನು ಸಂಕಷ್ಟಕ್ಕೀಡುಮಾಡಿತ್ತು. ನಿರ್ಧಿಷ್ಟ ನಿಯಮಗಳಿರದೆ ಸ್ವೇಚ್ಚೆಯಿಂದ ಕೂಡಿದ ಒಬ್ಬೊಬ್ಬರ ಆಳ್ವಿಕೆಯು ಜನರನ್ನು ವರ್ಣಿಸಲು ಅಸಾಧ್ಯವಾದ ತೊಂದರೆಗೆ ಒಳಪಡಿಸಿದೆ ಎಂಬ ವಸಾಹತುಶಾಹಿ ಧೋರಣೆಯನ್ನು ಲೇಖಕರು ಇಲ್ಲಿಯೂ ಪ್ರತಿಪಾದಿಸಿದ್ದಾರೆ. ಇಲ್ಲಿ ಒಬ್ಬ ಸಮರ್ಥ ದೊರೆಯನಂತರ ಮತ್ತೊಬ್ಬ ದುರಾಶೆಯ, ವಿಷಯಲಂಪಟ ಹಾಗೂ ಆಲಸಿ ದೊರೆಯು ಆಳ್ವಿಕೆಗೆ ಬರುತ್ತಾನೆ. "ಭಾರತಕ್ಕೆ ಈಗ ಅಗತ್ಯವಾಗಿರುವುದೇನೆಂದರೆ ಅದರ ಅಸಂಖ್ಯಾತ ಪಂಗಡ, ಸಮುದಾಯ, ಜಾತಿ, ಪಂಥ ಮತ್ತು ಧರ್ಮಗಳಿಗೆ ವಿದೇಶಿ ಆಕ್ರಮಣದಿಂದ ರಕ್ಷಣೆ ನೀಡುವಂತಹ, ಅದು ಎಲ್ಲರಿಗೂ ಸಮಾನವಾದ ನ್ಯಾಯದಾನ ಹಾಗೂ ಜೀವನಕ್ಕೆ, ಸಂಪತ್ತಿಗೆ ಮತ್ತು ಮುಕ್ತವಾಗಿ ಅವರ ಧರ್ಮ ಪಾಲನೆಗೆ ಅವಕಾಶ ಕಲ್ಪಿಸುವ ಕೇಂದ್ರಿತ ಆಡಳಿತ" ಎಂದು ಲೇಖಕರು ಅಭಿಪ್ರಾಯಪಡುತ್ತಾರೆ.[೩] ಸೂರ್ಯ ಮುಳುಗದಿರುವ ನಾಡಗಿರುವ ಇಂಗ್ಲೆಂಡ್ ಸ್ವಾತಂತ್ರ್ಯ ಮತ್ತು ಸಂವಿಧಾನಿಕ ಸರಕಾರವನ್ನು ಶತಮಾನದಿಂದ ಅನುಭವಿಸುತ್ತಿದ್ದು, ಅದು ಹೋದ ಕಡೆ ತನ್ನ ಧ್ವಜದ ಜೊತೆಗೆ ಸ್ವಾತಂತ್ರ್ಯ, ಸಮಾನತೆ ಮತ್ತು ಯಶಸ್ವಿನ ಹುಮ್ಮಸನ್ನು ಭಿತ್ತಿ, ಇಲ್ಲಿ ಭಾರತದ ನೆಮ್ಮದಿಗಾಗಿ ದುಡಿಯುತ್ತದೆ. ಹೀಗೆ ಮೇ೪, ೧೭೯೯ ರಂದು ಕೆನರಾ ಇಂಗೆಂಡ್‌ನ ವಶವಾಗಿ, ಅವರ ಚತುರ ಆಳ್ವಿಕೆಯನ್ನು ಅನುಭವಿಸುತ್ತಾ, ದಶಕಗಳ ಕಾಲ ಶಾಂತಿ, ಸ್ಥಿರ ಅಭಿವೃದ್ಧಿ ಹಾಗೂ ಸಮೃದ್ಧಿಯನ್ನು ಕಂಡಿತು ಎನ್ನುತ್ತಾ "ನಾವು ಈ ದಶಕದ (೧೮೯೯) ಸಂಭ್ರಮವನ್ನು ಹಾಡಿ ಸಂಭ್ರಮಿಸಬೇಕೆಂದು" ಹೇಳಿರುವ ಲೇಖಕರು ವಸಾಹತುಕಾಲವನ್ನು ಅಪಾರವಾಗಿ ಮೆಚ್ಚಿ ಅದನ್ನು ವೈಭವಪೂರಿತ ಯುಗವೆಂಬಂತೆ ಹೊಗಳಿದ್ದಾರೆ.

ಮೇ ೪, ೧೭೯೯ ಶ್ರೀರಂಗಪಟ್ಟಣದ ಪತನದ ನಂತರ ಪ್ರಾರಂಭದ ಕೆಲವು ತಿಂಗಳು ಮೇಜರ್ (ಸರ್) ಥೋಮಸ್ ಮುನ್ರೋ ಕೆನರಾ ಜಿಲ್ಲೆಯಲ್ಲಿ ಶಾಂತಿ ಕಾಪಾಡಲು ಶ್ರಮಿಸಿದನು. ಕೆಲವೊಂದು ಶಾಂತಿ ಕದಡುವಂತಹ ಘಟನೆಗಳು ನಡೆದಿದ್ದು ಅವುಗಳನ್ನು ಪ್ರಾರಂಭದಲ್ಲಿ ಆಳ್ವಿಕೆ ಮಾಡಿರುವ ಸರಕಾರಗಳ ಜೊತೆ ಸಂಪರ್ಕ ಕಲ್ಪಿಸಲಾಗಿದೆ. ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದ ಸಂದರ್ಭದಲ್ಲಿ ಕೆನರಾದ ಸ್ಥಳೀಯ ನಾಯಕರಾದ ವಿಠ್ಠಲದ ಹೆಗ್ಗಡೆ, ಕುಂಬಳೆ ಮತ್ತು ನೀಲೇಶ್ವರದ ಅರಸರು ಮತ್ತು ಬಂಗಾರ್ (Bangar) ರಾಜರು ಅರಾಜಕತೆಯ ಲಾಭಪಡೆದು, ಸಶಸ್ತ್ರದಂಗೆ ಎದ್ದು, ಬಿದನೂರು ಮತ್ತು ಮೈಸೂರು ಸರಕಾರದ ಕಾಲದಲ್ಲಿ ಅವರು ಕಳೆದುಕೊಂಡ ಸ್ಥಾನಮಾನವನ್ನು ಮರುಪಡೆಯಲು ಪ್ರಯತ್ನಿಸಿದರು ಹಾಗೂ ದೇಶವನ್ನು ಸೂರೆಗೈದರು. ಕೊಡಗು ಕೂಡಾ ಇದರ ಲಾಭ ಪಡೆದು ಘಟ್ಟದ ಕೆಳಭಾಗಗಳ ಮೇಲೆ ದಾಳಿಮಾಡಿತು. ಬಂಗೇರ್ (Bangar) ರಾಜನನ್ನು ಬಹುಬೇಗ ಬಂಧಿಸಿ ನೇಣಿಗೆ ಹಾಕಲಾಯಿತು. ಆದರೆ ವಿಠ್ಠಲದ ಹೆಗ್ಗಡೆ, ತಿಮ್ಮನಾಯಕ ಮತ್ತು ಸುಬ್ಬರಾವ್ ಜೊತೆಗೂಡಿ ಜಮಾಲಾಬಾದ್, ಬಂಟ್ವಾಳ ಮತ್ತು ಉಪ್ಪಿನಂಗಡಿಯನ್ನು ಆಕ್ರಮಿಸಿದರು. ಈ ಎಲ್ಲಾ ಪ್ರತಿರೋಧಗಳನ್ನು ಕೆಲವೇ ತಿಂಗಳುಗಳಲ್ಲಿ ಹತ್ತಿಕ್ಕಿ, ಕ್ರಿ.ಶ. ೧೮೦೦ರಲ್ಲಿ ದೇಶದಲ್ಲಿ (ಕೆನರಾ) ಶಾಂತಿ ಮತ್ತು ಸ್ಥಿರ ಬೆಳವಣಿಗೆಯ ಶಕ ಆರಂಭವಾಯಿತು ಎಂದು ಲೇಖಕರು ಬ್ರಿಟಿಷ್ ಆಳ್ವಿಕೆಯ ಬಗ್ಗೆ ಹೊಗಲಿ ಬರೆದಿದ್ದಾರೆ.

ಲೇಖಕರಾದ ಜೆ.ಎ. ಸಲ್ಡಾನರು ಐತಿಹಾಸಿಕ ದಾಖಲೆಗಳ ಕೊರತೆ ಇರುವ ಕಾಲದಲ್ಲೂ ಈ ರೀತಿ ಲೇಖನಗಳನ್ನು ಬರೆದಿರುವುದು ಅವರಿಗೆ ಇತಿಹಾಸದ ಮೇಲಿನ ಆಸಕ್ತಿಯನ್ನು ತಿಳಿಸುತ್ತದೆ. ಆದರೆ ಲೇಖಕರು ಅವರ ಲೇಖನಗಳಲ್ಲಿ ಸ್ಪಷ್ಟವಾದ, ನಿಖರವಾದ ದಿನಾಂಕಗಳನ್ನು ನಮೂದಿಸುವಲ್ಲಿ ವಿಫಲರಾಗಿದ್ದಾರೆ. ಕದಂಬರ ಇತಿಹಾಸಕ್ಕೆ ಸಂಬಂಧಿಸಿದಂತೆ ಅವರು ಸ್ಥಳೀಯ ರಾಜಮನೆತನವೆಂದು ಬಣ್ಣಿಸಿ, ಅವರ ಬಗ್ಗೆ ದೀರ್ಘವಾದ ವಿವರಣೆಯನ್ನು ನೀಡಿದ್ದಾರೆ. ಲೇಖಕರು ಸ್ವಾಭಾವಿಕವಾಗಿಯೇ ಪೋರ್ಚುಗೀಸರ ಬಗ್ಗೆ ಮೃದು ಧೋರಣೆಯನ್ನು ತಳೆದಿದ್ದಾರೆ. ಕ್ರೈಸ್ತರು ಗೋವಾದಿಂದ ವಲಸೆ ಬಂದರು ಎಂದು ವಿವರಿಸಿರುವ ಲೇಖಕರು ಯಾವ ಕಾರಣಕ್ಕಾಗಿ ಹಾಗೂ ಅದರ ಐತಿಹಾಸಿಕ ಹಿನ್ನಲೆ ತಿಳಿಸುವಲ್ಲಿ ಸಂಪೂರ್ಣವಾಗಿ ವಿಫಲರಾಗಿದ್ದಾರೆ. ಲೇಖಕರ ಬರವಣಿಗೆಗಳಲ್ಲಿ ಕೆಳದಿಯ ಅರಸರ ಇತಿಹಾಸವು ಅವರು ಕ್ರೈಸ್ತರಿಗೆ ಆಶ್ರಯ ನೀಡಿದರು ಎನ್ನುವ ಅಂಶದೊಂದಿಗೆ ವಿಜೃಂಭಿಸಿರುವುದನ್ನು ಕಾಣಬಹುದು. ಹೈದರ್ ಅಷ್ಟೊಂದು ಖಂಡನೆಗೆ ಗುರಿಯಾಗಿರದ್ದಿದ್ದರೂ, ಟಿಪ್ಪು ಲೇಖಕರ ಬರವಣಿಗೆಯುದ್ಧಕ್ಕೂ ಟೀಕೆಗೆ ಗುರಿಯಾಗಿದ್ದಾನೆ. ಟಿಪ್ಪುವಿನ ಪಥನವು ಕೆನರಾ

ಕ್ರೈಸ್ತರಿಗೆ ಒಂದು ಹೊಸ ಯುಗವನ್ನು ತಂದಿತು. ಆ ಕೀರ್ತಿ ಬ್ರಿಟಿಷರಿಗೆ ಸಲ್ಲುತ್ತದೆ. ಹೀಗೆ ವಸಾಹತುಶಾಹಿ ಕಾಲದಲ್ಲಿ ಕೆನರಾ ಎಲ್ಲಾ ರೀತಿಯಲ್ಲೂ ಅಭಿವೃದ್ಧಿಯಾಯಿತು ಎಂದಿದ್ದಾರೆ.

ಮ್ಯಾಂಗಲೋರ್ ಮ್ಯಾಗಜೀನ್‌ನಲ್ಲಿರುವ ಲೇಖನಗಳು ಅಧ್ಯಯನಾತ್ಮಕವಾಗಿ ಬರೆದ ಲೇಖನಗಳಿಗಿಂತ ಅವು ಓದುವಿಕೆ, ಅನುಭವ ಮತ್ತು ಅವಲೋಕನಗಳಿಂದ ಕೂಡಿವೆ. ಆಧುನಿಕ ಕಾಲದ ವೈಜ್ಞಾನಿಕ ಸಂಶೋಧನಾ ಮಾದರಿಯಲ್ಲಿ ಈ ಲೇಖನಗಳು ಸಿದ್ಧವಾಗಿರದಿದ್ದರೂ ಅವು ತಮ್ಮ ಉತ್ಕೃಷ್ಟತೆಗೆ ಹೆಸರುವಾಸಿಯಾಗಿವೆ. ಆದರೆ ಮ್ಯಾಂಗಲೋರ್ ಮ್ಯಾಗಜೀನ್ ತನ್ನ ಬರವಣಿಗೆಗಳಲ್ಲಿ ಏಕರೂಪತೆಯನ್ನು ಕೊನೆವರೆಗೆ ಕಾಯ್ದುಕೊಂಡಿದೆ ಎಂದು ಹೇಳುವುದು ಕಷ್ಟ.



## ಅಡಿಟಿಪ್ಪಣಿಗಳು

೧. ಮ್ಯಾಂಗಲೋರ್ ಮ್ಯಾಗಜೀನ್, ಸಂಪುಟ ೧, ನಂ. ೧, ೧೮೯೭, ಪುಟ –೧೭.
This magazine published in the interests of the college, its graduates and under graduates, and incidentally in those of the city of Mangalore and South Canara. It is the organ of thecollege and the record of itsdoing,as well as a bond of union between its present and past students. It will be issued quarterly for the first year. The subscription for the four numbers is One Rupee or Four annas a copy.

೨. ಮ್ಯಾಂಗಲೋರ್ ಮ್ಯಾಗಜೀನ್, ಸಂಪುಟ ೧, ನಂ. ೨, ೧೮೯೮, ಪುಟ ೪೪.
"The year 1899 will see the people of kanara joyfully celebrate the first centenary of the most important and happiest event in the history of their land, namely, the fall of Seringapatam and their deliverance from the tyranny and misrule of Tippu Sultan, and the commencement of the golden age of their country. At a time of such universal jubilation it is natural that they should like to take a view of the past"

೩. ಮ್ಯಾಂಗಲೋರ್ ಮ್ಯಾಗಜೀನ್, ಸಂಪುಟ ೧, ನಂ. ೫, ೧೮೯೯, ಪುಟ ೧೪೨.
"What India requires with its numberless races, communities, castes, sects and religions, is one strong bureaucracy able to defend the country from invasion from abroad, to hold the balance of Justice even for all classes and conditions of men and to assure to all security of life and property and the free exercise of their religion. Can India provide such a government for itself? It is true that great and wise rulers have risen up in it, but its Akbar was followed by an Aurangzeb, India can boast of a Sivaji, a great warrior and a benevolent king, but he was soon succeeded by the sensual, indolent and cruel Sambaji. Of the foreign powers France narrowly missed conquering India, and the prize was carried off by England."

## ಆಕರ ಗ್ರಂಥಗಳು:


೧. ಜೆ, ಸ್ಟರಕ್, ಮೆಡ್ರಾಸ್ ಡಿಸ್ಟ್ರಿಕ್ಟ್ ಮ್ಯಾನ್ಯುವಲ್ಸ್ : ಸೌತ್ ಕೆನರಾ, ಸಂಪುಟ ೧, ಗವರ್ನಮೆಂತ್ ಪ್ರೆಸ್, ಮದ್ರಾಸ್, ೧೮೯೪.
೨. ಮ್ಯಾಂಗಲೋರ್ ಮ್ಯಾಗ್‌ಜೀನ್, ಎಂಟು ಸಂಪುಟಗಳು (೧೮೯೭– ೧೯೩೩), ಕೊಡ್ಯಾಲ್‌ಬೈಲ್ ಪ್ರೆಸ್, ಮಂಗಳೂರು.
೩. ಸಂತ ಅಲೋಶಿಯಸ್ ಕಾಲೇಜು, ಮಂಗಳೂರು: ಸೆಂಟಿನರಿ ಸವೆನಿರ್, ಶಾರದ ಪ್ರೆಸ್, ಮಂಗಳೂರು, ೧೯೮೦.
೪. ಸ್ಟೋಕ್ಸ್, ಜಾನ್, ಸಿಲೆಕ್ಷನ್ ಫ್ರಮ್ ದಿ ರೆಕಾರ್ಡ್ ಆಫ್ ದಿ ಕಲೆಕ್ಟರ್ ಆಫ್ ಸೌತ್ ಕೆನರಾ, ಮಂಗಳೂರು, ೧೮೮೫.
೫. ಭಟ್, ಪಿ ಗುರುರಾಜ್, ಸ್ಟಡಿಸ್ ಇನ್ ತುಳುವ ಇಸ್ಟರಿ ಆ್ಯಂಡ್ ಕಲ್ಚರ್, ಮಣಿಪಾಲ, ೧೯೭೫.
೬. ಭಟ್, ಪಿ ಗುರುರಾಜ್, ತುಳುನಾಡು, ಭವ್ಯವಾಣಿ ಪಬ್ಲಿಕೇಶನ್, ಉಡುಪಿ, ೧೯೬೩.
೭. ಡಿ'ಸೋಜ, ಎ. ಎಲ್. ಪಿ, ಹಿಸ್ಟರಿ ಆಫ್ ದಿ ಕೆಥೋಲಿಕ್ ಕಮ್ಯೂನಿಟಿ ಆಫ್ ಸೌತ್ ಕೆನರಾ, ಸಲಕ್ ಪ್ರಿಂಟರ್ಸ್, ಮಂಗಳೂರು. ೧೯೮೩.
೮. ಐಗಳ್, ಗಣಪತಿ ರಾವ್, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ಶಾರದ ಪ್ರೆಸ್, ಮಂಗಳೂರು, ೧೯೨೩.
೯. ಕಾಮತ್, ದೇವದತ್ತ್, ದಿ ಬರ್ನಿಂಗ್ ಬುಶ್: ದಿ ಹಿಸ್ಟರಿ ಅಫ್ ದಿ ಕರ್ನಾಟಕ ಜೆಸ್ಯೂಟ್ ಪ್ರಾವಿನ್ಸ್, ಸಂಪುಟ ೧, ಡೆಕ್ಕನ್ ಡಾಟಾ ಫೋರ್‌ಮ್ಸ್ ಬೆಂಗಳೂರು, ೨೦೦೬.
೧೦. ಪಿಂಟೊ, ಪಿಯುಸ್ ಫಿಡೆಲಿಸ್, ಕರಾವಳಿ ಕರ್ನಾಟಕದ ಕ್ರೈಸ್ತರ ಇತಿಹಾಸ (ಕ್ರಿ.ಶ. ೧೫೦೦– ೧೭೬೩) ಸಮನ್ವಯ ಪ್ರಕಾಶನ, ಮಂಗಳೂರು, ೧೯೯೯.
೧೧. ಪಿಂಟೊ, ಪಿಯುಸ್ ಫಿಡೆಲಿಸ್, ಆಂಗ್ಲೋ– ಮೈಸೂರು ಸಂಬಂಧದ ಹಿನ್ನಲೆಯಲ್ಲಿ ಕರಾವಳಿ ಕರ್ನಾಟಕದ ಕೊಂಕಣಿ ಕ್ರೈಸ್ತರು ( ಕ್ರಿ.ಶ. ೧೭೬೧–೧೮೭೯) ಸಮನ್ವಯ ಪ್ರಕಾಶನ, ಮಂಗಳೂರು, ೧೯೯೯.

೧೧೭

# ಕಾಶಿ ಮಠದಲ್ಲಿ ಕೆಳದಿ ಇತಿಹಾಸ ಕುರಿತ ಮಲೆಯಾಳಿ ಭಾಷೆಯ ದಾಖಲೆ

ಕೆಳದಿ ಗುಂಡಾಜೋಯಿಸ್*

ಕವಿ ಲಿಂಗಣ್ಣನ ಕೆಳದಿ ನೃಪವಿಜಯದಲ್ಲಿ-

ವ॥ ಇಂತು ಮಂಗಲೂರ ಕೋಂಟೆಯಂ ಕೊಂಡ ನಂತರ
ಮಳವೆಯಂ ಕಟ್ಟೆ ಕೀಳೂರು ಸಾಧಿಸಿ ಬೇಕಲ ಚಿತ್ತಾರಿ
ಗಳೆಂಬ ಕೋಂಟೆಗಳುಮಂ ಮತ್ತಂ ಚಂದ್ರಗಿರಿ ಮುಂತಾದ
ಕೋಂಟೆಗಳುಮಂ ಬಲ್ಪುಗೈಸಿದನಂತುಮಲ್ಲದೆಯುಂ

ಕಂ ॥ ಬಳಿಕುರುನೀಲೇಶ್ವರದು
ಜ್ವಳಿಪಿಳೆಯಂ ಕೊಂಡು ನಾಯಿಮಾರರ ನೆಲದೊಳ್
ತೊಲಗದ ಕಂಬವನನುವಿಂ
ನಿಲಿಸಿ ಮಹಾದ್ಭುತ ಪರಾಕ್ರಮವನುರೆ ಮೆರೆದಂ ॥

ವ॥ ಇಂತು ನೀಲೇಶ್ವರದ ಗಡಿಮುಖದೊಳ್ ತೊಲಗದ
ಕಂಬಮಂ ನಿಲಿಸಿ ನಾಯಿಮಾರರಂ ವಶಗೈದು ಪಣಮಣಿಹಂ
ಗಳಂ ಕೊಂಡನಂತರಂ ಕೊಲ್ಲಂತಮಾಪಳರ್ ಮುಂತಾದ
ಕೇರಳ ಮಂಡಲದ ಮನ್ನೆಯರ್ಕಳನೆರ್ದೆಗೆಡಿಸಿ ಮರಳ್ದನೆಂತುಮಲ್ಲದೆಯುಂ

–ಕೆ.ನೃ.ವಿ. ಆ. VII

ಬಳಿಕಲ್ಲಿಂ ಗೋಕರ್ಣ
ಕ್ಕೆಳದಾಕ್ಷೇತ್ರದ ಮಹಾಬಲೇಶ್ವರನಂ ತಾಂ
ನಲವಿಂದರ್ಚಿಸಿ ಕೇರಳ
ಕಿಳದೊಡನೆಳ್ತಂದು ವೇಣುಪದಮಂ ಸಾರ್ದಂ ॥

ಅದೇ ಆ. X

ಸಪ್ತಮಾಶ್ವಾಸದಲ್ಲಿರುವ ಸಂಗತಿ ಕೆಳದಿ ಶಿವಪ್ಪನಾಯಕನ ಕಾಲವಾದರೆ (ಕ್ರಿ.ಶ. ೧೬೪೬–೧೬೬೦) ದಶಮಾಶ್ವಾಸದ ಕಾಲವು ಇಮ್ಮಡಿ ಸೋಮಶೇಖರನಾಯಕನ ಕಾಲವಾಗುತ್ತದೆ (ಕ್ರಿ.ಶ. ೧೭೧೪–೧೭೩೯). ಗೋಕರ್ಣ ದೇವಾಲಯದ ಮುಖಮಂಟಪ ನಿರ್ಮಾಣ ಕಾಲವು ಕೆಳದಿ ನಿಯೋಗಿ ಹಲಸನಾಡು ನಾಗಪ್ಪನಿಂದ ನಿರ್ಮಿಸಿರುವುದು ಗೋಕರ್ಣ ದೇವಾಲಯದ ಶಾಸನದಿಂದ ತಿಳಿದು ಬಂದಿದೆ. ಕೆಳದಿ–ಕೇರಳ ಕುರಿತು ಸಮಕಾಲೀನ ಇತಿಹಾಸದಲ್ಲಿ–

Shortly after this an army of Keladi crossed the river Nileswaram and were able to command the Nileswaram portion of the Kolathiri territory. In April 1737 they advanced as far as Madakkara, farther south and by August they overran the whole of the country as far south as the Taliparamba, but they could not take the fort of Madayi. The Kolatliris were helpless now and they seen to have approached the English for help. The English factors thereupon negotiated and arranged a treaty of peace between the Kolattiries and the army of Keladi chiefs. On 30th August 1737, the Chief, Stephen Law, Lynch Surapaya, the Keladi State General and the Prince Regent met near Madakkara and signed a treaty. According to the terms of treaty, the territories from the fort of Maddy westward to urbelly, southward and as the river winds to the foot of the hills, eastward with all the territories, northward, bordering on the river. Kolattiry resigned to the King of Keladi to be enjoyed by him in the manner in which he was doing, with what remained to the south,

* ಇತಿಹಾಸ ಸಂಸ್ಕೃತಿ ಸಂಶೋಧಕರು, ಕೆಳದಿ.

the King of Keladi was not to pass with an armed force through the above limits assigned; The Chief and the council of the English company were witnesses as also those by whom the treacly was mediated.

ಈ ರೀತಿ ಉಲ್ಲೇಖಿಸಿದೆ.

(Dairy of Tellicherry factory dated 1st September 1737, see Logan collection of Treaties etc; XXXVI, XXXVII and XXXVIII.

ಮಹಾಜನ್ ವರದಿಯಲ್ಲಿಯೂ ಇದು ಪ್ರಸ್ತಾಪಗೊಂಡಿದೆ. ಇದರ ಆಧಾರದ ಮೇರೆಗೆ ಕಣ್ಣಾನೂರು (ಕೇರಳದ) ಜಿಲ್ಲೆ ಕೆಳದಿ ರಾಜ್ಯಕ್ಕೆ ಸೇರಿದ್ದು, ಕರ್ನಾಟಕದಲ್ಲಿ ಕಾಸರಗೋಡು ಸೇರುವುದನ್ನು ಸಮರ್ಥಿಸಿ ಭಾರತ ಸರಕಾರಕ್ಕೆ ವರದಿ ಮಾಡಿದೆ. ಇದು ಕೆಳದಿ ಇತಿಹಾಸಕ್ಕೆ ಸಂದ ಗೌರವವಾಗಿದೆ. ಇಂಗ್ಲೀಷಿನ ಗಾದೆಯೊಂದು –

Study the past; live in the resent;
work for the future.

ಇದರ ಮೇರೆಗೆ ನೆರೆ ಪ್ರಾಂತವಾದ ತಮಿಳುನಾಡು, ಕೇರಳ, ಗೋವಾ, ಆಂಧ್ರ, ವಲ್ಲದೆ ಪಾಕಿಸ್ತಾನ ಮತ್ತು ಚೈನಾ ದೇಶಗಳು ಕೆಳದಿ ಇತಿಹಾಸದಿಂದ ಪಾಠವನ್ನು ಕಲಿಯಬಹುದಲ್ಲವೇ?

ಕೆಳದಿ ಕಾಲದ ಗೌಡಸಾರಸ್ವತರು

ಕಡಲ ತೀರದ ವಾಣಿಜ್ಯೋದ್ದಿಮೆ ಇತಿಹಾಸದಲ್ಲಿ ಕೆಳದಿ ರಾಜ್ಯದ ಸಂಪತ್ತನ್ನು ವೃದ್ಧಿಗೊಳಿಸಿದವರು ಗೌಡಸಾರಸ್ವತರು ಪ್ರಮುಖರು. ಗೌಡಪಾದಾಚಾರ್ಯ ಪರಂಪರೆ ಎನ್ನಲಾದ ಈ ಸಮಾಜವು ಮಹಾರಾಷ್ಟ್ರ, ಗೋವಾದಿಂದ ಕೇರಳದವರೆಗೆ ವ್ಯಾಪಿಸಿದೆ. ಕ್ರಿ.ಶ. ೧೫೬೦ರಲ್ಲಿ ಪೋರ್ಚಗೀಸ್ ವೈಸ್‌ರಾಯನ ದುರಾಡಳಿತದಿಂದ ಗೌಡಸಾರಸ್ವತರು ಬೇಸತ್ತು ಆಶ್ರಯ ಪಡೆಯಲು ಕೆಳದಿ ರಾಜ್ಯದಲ್ಲಿ ವಲಸೆ ಬಂದು ನೆಲೆಸಿದರು. ಕೆಳದಿ ಅರಸರು ಇವರಿಗೆ ಉನ್ನತ ಸ್ಥಾನ ನೀಡಿದ ಕುರಿತು –

The Keladi rulers were Virashivas, but Brahmins especially the Saraswaths had a prommient place in the administrative machinery of the dynasty. A very interesting development during this period was the emergence of the chitraput Matha of the saraswaths, The details mentioned in various accounts have been well narrated by Frank F. conlon (A caste in the changing workld; The chitrapur Brahmins 1700-1935, University of California press 1977)

## ಅದ್ವೈತದ್ವೈತ ಪರಂಪರೆಯ ಗೌಡಸಾರಸ್ವತ ಮಠಗಳು

ಧಾರ್ಮಿಕ ಪರಂಪರೆಯಲ್ಲಿ ಈ ಕೆಳಗಿನಂತೆ ಗೌಡಸಾರಸ್ವತ ಮಠಗಳಿವೆ.

೧. ಶ್ರೀ ಸಂಸ್ಥಾನ ಕೈವಲ್ಯಮಠ

೨. ಶ್ರೀ ಸಂಸ್ಥಾನ ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠ

೩. ಶ್ರೀ ಸಂಸ್ಥಾನ ಕಾಶಿ ಮಠ

೪. ಶ್ರೀ ಸಂಸ್ಥಾನ ಚಿತ್ರಾಪುರ ಮಠ

ಶ್ರೀ ಸಂಸ್ಥಾನ ಕೈವಲ್ಯ ಮಠ, ಶ್ರೀ ಚಿತ್ರಾಪುರ ಮಠ ಅದ್ವೈತ ಪರಂಪರೆಯಲ್ಲಿ ಬೆಳೆದು ಬಂದಿದ್ದು, ಈಗಲೂ ಶ್ರೀ ಚಿತ್ರಾಪುರ ಮಠವು ಶ್ರೀ ಶೃಂಗೇರಿ ಜಗದ್ಗುರುಗಳ ಉಪದೇಶ ಪರಂಪರೆಯನ್ನೇ ಪರಿಪಾಲಿಸಿಕೊಂಡು ಬರುತ್ತಿದೆ. ರಾಜ್ಯ ಸರಕಾರದ ಪತ್ರಾಗಾರದಲ್ಲಿ ನಾನು ಸಿದ್ಧಪಡಿಸಿಕೊಟ್ಟ ಶ್ರೀ ಸಂಸ್ಥಾನ ಗೋಕರ್ಣ ಪರ್ತಗಾಳಿ ಮಠದ ಕ್ಯಾಟಲಾಗ್ ಪ್ರಕಟವಾಗಿಲ್ಲ.

## ಶ್ರೀ ಕಾಶಿ ಮಠದ ಬಿರುದಾವಳಿಯಲ್ಲಿ–

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಕುಲತಿಲಕ ಯಮ ನಿಯಮಾದ್ಯಷ್ಟಾಂಗಯೋಗ ಸಂಪಂನ ಪದವಾಕ್ಯಪ್ರಮಾಣ ಪಾರಾವಾರ ಪಾರಂಗತ ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ಶ್ರೀಮದ್ವ್ಯಾಸರುಪತಿದೇವ ದಿವ್ಯಶ್ರೀ ಪಾದಪದ್ಮಾರಾಧಕ ಶ್ರೀಮತ್ಸುಮತೀಂದ್ರತೀರ್ಥ ಶ್ರೀಪಾದ ಕರಕಮಲ ಸಂಜಾತ ಶ್ರೀಮದ್ಭುವನೇಂದ್ರ ತೀರ್ಥಶ್ರೀಪಾದ ವರಕುಮಾರ ಕ ಶ್ರೀಮದ್ವರದೇಂದ್ರತೀರ್ಥ ಶ್ರೀಪಾದೈಃ

"ತ್ರಿವೇಂದ್ರ ಶ್ರೀಪದ್ಮನಾಭ"

ಈ ರೀತಿ ಕಂಡುಬರುತ್ತದೆ. ನಂ. ೧೯೯ನೆಯ ಬಿರುದಾವಳಿಯಲ್ಲಿ ಶಾ.ಶ. ೧೬೨೪ (ಕ್ರಿ.ಶ. ೧೯೦೨)ರ ನಿರೂಪದಲ್ಲಿ ತಾಮ್ರಶಾಸನವೊಂದು ಕಾಶಿ ಮಠದಲ್ಲಿರುವುದು ಉಲ್ಲೇಖಗೊಂಡಿದೆ. (ಅನುಬಂಧ ನೋಡಿರಿ)

## ಕಾಶಿ ಮಠದ ದಾಖಲೆಯಲ್ಲಿ ಕೆಳದಿ ಇತಿಹಾಸ

The 6th Guru Shri Devendra Thirtha was the disciple of the 5th Guru Raghavendra Thirtha and a sanad was given to him by Keladi. Somashekhara Nayaka the Raja of Keladisamsthan in the year 1734 A.D. He had also made the Jirnaodhar Pratishta of Shri Venkatapathi Devaru of Cochin in the year 1719 A.D. Along with his shishya Shri Madhavendra Thirtha. This Samadhi is at Bantwal, S.K. Dist.

## ಮಲೆಯಾಳಿ ಭಾಷೆಯಲ್ಲಿರುವ ಕಾಶಿ ಮಠದ ದಾಖಲೆ

ಈ ದಾಖಲೆ ಕನ್ನಡ ಲಿಪಿಯಲ್ಲಿದ್ದು ಮಲೆಯಾಳೀ ಭಾಷೆಯಿಂದ ಕೂಡಿದೆ. ಡಾ. ವೆಂಕಟೇಶ್ ಲಿಪ್ಯಂತರಕ್ಕೆ ನೀಡಿದ ೧೯೫ ದಾಖಲೆಗಳಲ್ಲಿ ಎರಡು ದಾಖಲೆಗಳು ಕನ್ನಡ ಮೋಡೀ ಲಿಪಿಯಿಂದ ಕೂಡಿದೆ. ಒಉಐ-೨ ರ ಪತ್ರದಲ್ಲಿರುವ ಈ ಕೆಳಕಂಡ ಉಲ್ಲೇಖಗಳು ಗಮನಾರ್ಹವಾಗಿವೆ.

### ಮುಂಭಾಗ

ಸಾಲು ೧ – ೧೦೧೮ಮೊಂಡಕುಂಭಮಾಸಂ ೧೩ ತೇದಿ ವಯಕ್ಕತ

ಕೊಟಿಕಾರಕ್ಕತಾನಕಲ್

ಸಾಲು ೨೧– ತಲ್ಲಿನ್ನುಂ ಯಿಕ್ಕೆರಿ ಸಂಸ್ಥಾನ್ತ ಮಹಾ

ಸಾಲು ೨೨ ರಾಜಾವುವೆತಲೋವರಕೊಡುತ್ತಅಸ್ವಲ್ – – – .

### ಹಿಂಭಾಗ

ಸಾಲು ೪ ಯಿಕ್ಕೆರಿ ಸಂಸ್ತಾನತ್ತ ಮಹಾರಾಜಾವು

ಮುತ್ತಲ್ಲಾಯ ಆಳುಗಳ್ ..

೧೧ – – – – ಯಿಕ್ಕೇರಿ ಸಂಸ್ತಾನತ್ತು ಮಹಾ

೧೨ರಾಜಾವೂಕರ್ನಾಟಕಜಿಲ್ಲಾ (ಟಿಪ್ಪೂ) ಸ್ಮಾತಿಧೆಂಡೆ––––

೧೪ – – – – ತಿವಾಣಕೂರ ಮಾಹಾರಾ

೧೫ ಜಾವು ತಲ್ಪಿಚ್ಚಿ ಕೊಡುತ್ತು

### ಪತ್ರ ೨ ಪುಟ ೩ (ಮುಂ)

ಸಾಲು ೨೪ – – – – ಯಿಕ್ಕೇರಿ ಸಂಸ್ಥಾನತ್ತ ಮಹಾರಾಜೀವ

೨೫ – – – – – ಆನಂದ ಸಂವತ್ಸರತ್ತಿಲ್

೨೬ – – – – – – – ರಾಮಚಂದ್ರ ಕಮ್ತಿ – – – – –

ಇಲ್ಲಿ ಉಲ್ಲೇಖನಗೊಂಡ ಯಿಕ್ಕೇರಿ ಕೆಳದಿ ಸಂಸ್ಥಾನದ ರಾಜಧಾನಿಯೇ ಹೊರತು ಸಂಸ್ಥಾನ ನಾಮವಲ್ಲ, ರಾಮಚಂದ್ರ ಕಮ್ತಿ>ರಾಮಚಂದ್ರ ಕಾಮತ್, (ಅನುಬಂಧ ನೋಡಿರಿ)

## ಉಪಸಂಹಾರ

ಕೇರಳದ ಕಣ್ಣಾನೂರು ಜಿಲ್ಲೆಯ ಅನೇಕ ಪ್ರದೇಶಗಳು ಕೆಳದಿ ಅರಸರ ಅಧೀನದಲ್ಲಿದುದ್ದನ್ನು ಅಲ್ಲಗಳೆಯುವಂತಿಲ್ಲ. ಇದಕ್ಕೆ ಕೆಳದಿ ಶಿವಪ್ಪನಾಯಕನ ಬೇಕಲ ಕೋಟೆಯೂ ಪುರಾವೆಯನ್ನೊದಗಿಸಿದೆ. ಕಾಶಿಮಠದ ಶ್ರೀಗಳು ಮಠದಲ್ಲಿರುವ ತಾಳೆಯೋಲೆ ಹಸ್ತಪ್ರತಿಗಳ ಅಧ್ಯಯನನಾದಿ ಕ್ಯಾಟಲಾಗ್ ಸಿದ್ಧಪಡಿಸಿಕೊಡಲು ನನಗೆ ವಿಶೇಷ ಆಹ್ವಾನ ನೀಡಿದ್ದು ಈಗ ಇತಿಹಾಸ. ನನ್ನ ಸರ್ವೇಕ್ಷಣೆಯಲ್ಲಿ: "ಪಂಚತಂತ್ರ" ಕೃತಿಯನ್ನೊಳಗೊಂಡ ಬೃಹತ್ ಕಟ್ಟೊಂದು ಆಸಕ್ತಿಯುಂಟುಮಾಡಿತು.

ಪೂಜ್ಯ ಶ್ರೀಗಳು ಇದನ್ನು ಮನಗಂಡು ತುಂಬಿದ ಸಭೆಯಲ್ಲಿ ತಾಳೆಯೋಲೆ 'ಗ್ರಂಥಾರಾಧಕತಜ್ಞ' ಬಿರುದನ್ನಿತ್ತು ಸನ್ಮಾನಿಸಿದ್ದು ಈಗ ಇತಿಹಾಸವೇ ಎನ್ನಿಸಿದೆ. ಮುಂದಿನ ಅಧ್ಯಯನಾದಿಗಳಿಗೆ ಕ್ಯಾಟಲಾಗ್ ಮತ್ತು ಕನ್ನಡದಲ್ಲಿರುವ 'ಪಂಚತಂತ್ರ' ಕೃತಿಯನ್ನು ಪ್ರಕಟಿಸುವುದು ಅತ್ಯವಶ್ಯಕವಾಗಿದೆ. ಇದಕ್ಕೆ ಕಾಲವೇ ಉತ್ತರಿಸಬೇಕೆ ಏನೋ ಮಲೆಯಾಳಿ ವಿದ್ವಾಂಸರು ಮೂಲ ದಾಖಲೆ ಭಾಷಾಂತರಪಡಿಸುವ ಅಗತ್ಯವಿದೆ.

## ಅಡಿ ಟಿಪ್ಪಣಿ

Souvenior Platinmm Jubilee Celebrations form 16-03-1979 to 5-3-1980 Shri Sudhindra Thirtha Swamy, Kashi Mutt, Shri Maha Ganapathi Mahamaya Temple Shirali pp.2.

## ಆಧಾರ ಗ್ರಂಥಗಳು


1. The Origin and Spread of Gaudasaraswaths; Dr.Suryamath Kamath, Mangalore Trading Association Mangalore 2004.

೨. ಇತಿಹಾಸ ದರ್ಶನ, ಸಂ.೧೭/೨೦೦೨


ಪದ ಸಮೂಹ

ವೇಣುಪುರ > ಬಿದನೂರು, ಕೆಳದಿ ಸಂಸ್ಥಾನದ ರಾಜಧಾನಿ

ನಾಯಿಮಾರರು

ಕೊಲ್ಲಂತ-ಮಾಪಳರ್>ಕೊಲ್ಲಂತ>ಕೋಲತ್ತಿರಿ

ಮಾಪಳರ್> (The great men) a Mopla. A word applied alike to Syrian Christians and Mohammadans; the former are called ಸುರ್ಯಾನಿ ಮಾಪಿಳ್ಳ, the latter ಚೋನಂಗಿ ಮಾಪಿಳ್ಳ – (ಕಿಟ್ಟಲ್ ನಿಘಂಟು)

ಕೇರಳ > ಕೇರಳ ರಾಜ್ಯ

ತೊಲಗದ ಕಂಬ >

ಪಣಮಣಿಹಂ > ಧೈರ್ಯಗೆಡಿಸಿ

ಮಂಗಳೂರು ಕೋಟೆ

ಕಟ್ಟೆ ಕೀಳೂರು

ಬೇಕಲಕೋಟೆ

ಚಿತ್ತಾರಿ

ಚಂದ್ರಗಿರಿ

ನೀಲೇಶ್ವರ

ಕೇರಳ ಮಂಡಲದ ಮನ್ನೆಯರ್ಕಳ್ > ಕೇರಳ ಮಂಡಲ ಸಾಮಂತರು

ಅಲವತ್ತನಾಡು

ಪಡುವ ನಾಡು

ಮಡಕ್ಕರ

ಮಡ್ಡೆಕೋಟೆ

ಅರ್ಬೆಲ್ಲಿ

## ಅನುಬಂಧ

Public Department Diary (pp.248-249)

Tellicherry
26th August, 1737

The king of Kolastree and Prince of Pally having represented the damages resulting thro the entrance of my . . . Army and being desirous of settling the General Tranquallity we have mutullay Agreed on the subsequent conditions namely,

That from the frot of Madday Westward to urbelly Southward, as the Rivese winds to the Foot of the hills-Eastward with all the country Northward of said Rivese, shall hereafter appertain to the king of Bednure, (Keladi), and from the parts aforesaid Southward, the king of colastree shall enjoy what appertains to him, And, his moreover agreed that neither of the aforesaid powers shall enter with an Armed Force for invading or Molesting in any wise the afsigned Territories of either, In testimony whereof I deliver this writing in presence of the English chief and council of Tellicherry, thro "whose Mediation this treaty is settled, dated August 26th: 1737.

Sd,
Surapaya
Governor of Mangalore &
General of the Keladi Army

Recd, on
Thursday, 13th October, 1737

ಶ್ರೀ ಗುರುಭ್ಯೋ ನಮಃ MGL – File – 2 - 8 VISHU

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷ ೧೭೩೮ಯ ಉಪರಿ ಸಲುವ ಧಾತು ಸಂವತ್ಸರ ಪುಶ್ಯ ಬ ೧೫ ಯ ಸಂನ್ ೧೨೨೬ನೆ ಫಸಲಿ ಮಾಹೆ ಜನವರಿ ೧ ತಾರೀಕು ೮ ಮಿ ಶ್ರೀಮನ್ ಪರಮಹಂಸ ಪರಿವಾಜಕಾಚಾರ್ಯ ತ್ವದನೆಕಗುಣ ಸಂಪನ್ನ ಶ್ರೀಮದ ರಾಮಚಂದ್ರದೆವರ ದಿವ್ಯ ಶ್ರೀಪಾದಪದ್ಮಕಗರಾದ ಕಾಶಿಮಠದ ಶ್ರೀಮದ್ವಿಭುದೇಂದ್ರತೀರ್ಥ ಶ್ರೀಪಾದಂಗಳವರಿಗೆ ಪಲುಮಾರ ಗ। ವೆಂಕಟ್ಟೈಶ ಪ್ರಭು ಮಂಮಗ ಚರಡ ಪ್ರಭು ಬರಶಿಕೊಟ್ಟ ಮಟದ ದಾನಪತ್ರದ ಕ್ರಮವೆಂತೆಂದರೆ – ಯಿ ಪಲುಮಾರ ಗ್ರಾಮದಲು ನಂಮ ಸಿಸ್ತಿನವಳಗೆ ನಂಮ ಮನೆ ಬಳಿಯ ನದಿತಿರದಲ್ಲ ನಂನ ಮುತ್ತಜ ಗೊವಿಂದ ಪ್ರಭು ಮಠಾ ಕಟ್ಟಿ ಕಡಗೊಲ ಕೃಷ್ಣದೆವರ ಪ್ರತಿಷ್ಠೆ ಮಾಡಿ ಯಿ ವರೆಗೆ ನಡದು ಬರುತ್ತಿದ್ದಲ್ಲಿ – ಯಿ ಮಠಕ್ಕೆ ನಡದುರನರುವಂತಾ ಅಮೃತಪಡಿ – ನಂದಾದಿಪ್ತಿ–ಪಂಚಪರ್ವ ಮುಂತಾಗಿ ಪುರ್ವಪ್ರಕಾರ ನಡದುಬರುವರೆ ಯಿ ಮಠಕ್ಕೆ ಸ್ವಾಸ್ತಿಯಾದ ಭುಮಿಕುಂಪಣಿ ಸರಕಾರದಲು ಜಪ್ತಿ ಆದರಿಂದ ನಡಸಿಬರುವರೆ ನಾನು ಅಶಕ್ತನಾದ ಕಾರಣ ಯಿ ಮಠ ಯಿದಕೆ ಕುಡಿದ ಹೊರಸುತ್ತು ನದಿತೀರದಲ್ಲು ಯಿದ್ದ ಸ್ತಳ ಸಾಹಾ ಸವಸ್ತಾನಕ್ಕೆ ದತ್ತಾ ಮಾಡಿ ಧಾರಾಪೂರ್ವಕವಾಗಿ ಕೊಟ್ವೆ – ಯಿ ದೆವರಿಗೆ ಬಾರಕುರತಾಲುಕು ಬಳಿ ಸಾವಿರ ಮಾಗಣೆಯಲು – ಪಡುಮಲೆಗ್ರಾಮ ಉ – ಯಿ ದೆವರಿಗೆ ಉತ್ತಾರವಾಗಿ ನಡದು ಬರುತ್ತಿದಲ್ಲಿ – ಕುಂಪಣಿ ಸರಕಾರದಲು– ಸದ್ರಿ ಭುಮಿ ಜಪ್ತಿಯಾಗಿ ಸರಕಾರದಿಂದ ವರುಷ ೧ ರ ಬಾಹಾ ತಸ್ತಿಕು ಗ ೯ ವಂಬತ್ತು ವರಹಾಂನ್ನು ಯಿ ದೇವರ ಪುಜೆಗೆ ಮಠಕ್ಕೆ ತರಶಿಕೊಂಡು– ಯಿ ದೆವರ ಪುಜೆಯು– ಆಚಂದ್ರಾರ್ಕವಾಗಿ ಸವಸ್ತಾನ ಪಾರಂಪರೆ ನಡಸಿಕೊಂಡು ಬರುವಂತೆ ನಾನು ಮನಃಪೂರ್ವಕವಾಗಿ ಕೊಟ್ಟೆನು – ಯಿ ಮಠದ ಸ್ತಳಕ್ಕೆ ಸಿಸ್ತುರಸ್ತು ಬರಬೆಕು ಯಂತ ನನಗೆ ನಂನ ಸಂತಾನದವರಿಗೆ ಸಾಹಾ ಕೆಳ ಸಂಮಂದವಿಲ್ಲಾ – ಯಂತಾ ಬರಕೊಟ್ಟ ದಾನಪತ್ರ–

**ವಿಷಯ**

೧೩. ಮ್ಹಾಂತಾರ್‍ಯಾನಿ ಸಾನಪ್ರಾಯೇಚಾ ಚೆಲ್ಯಾಂಕ ವಿವಾಹ ಕೊರ್ನುಕ ಗೆವ್ಚೆ ಯೋಗ್ಯ ನಹಿ ಮ್ಹಣು ಹೆ ಪರಿಷದಾಚೆ ಖಂಡಿತ ತುಚ್ಛೇಕಾರ ಕರ್ತಾಚಿ.

೧೪. ವಿಪರೀತ ದೆಣೆ ಗೆವ್ಚೆಯಿ ವ ಹೆ ದೆಣ್ಯಾಚೊ ದಡ್ಡು ನಿಷ್‌ಪ್ರಯೋಜನ ಜಾವ್ನು ಪೂರ್ಣ ಆಭರಣಾರಿ ಗಾಲ್ಚೊ ಸಂಪ್ರದಾಯಯಿ ಅನುಚಿತ ಮಣು ಪರಿಷದಾಷಚೆ ಅಭಿಪ್ರಾಯ ಪಾವ್ತಾಚಿ.

೧೫. ಬಾಲವಿಧವಾಂಕ ದಾಕ್ತಾರ್ನಿ, ವೈಜೇಣಿ ದಾಯಿ, ಇತ್ಯಾದಿ ಪ್ರವರ್ತಿಂತು ಶಿಕ್ಷಣ ಮೆಳೇಸಿ ಶಾಲಾ ಅಧ್ಯಾಪನ ದಿವ್ಚಾಕ ಸಾಧ್ಯ ಆಸ್ಸಿಲೆ ಮಟ್ಟಾಕ ಶಾಲೊ ಸ್ಥಾಪನ ಕೊರ್ಕಾ

೧೬. ಪ್ರತಿ ಏಕ ಪ್ರಮುಖ ಗಾವಾಂತು ಅನಾಥ ಚಾವ್ನು ಅಸ್ಸಿಲೆ ಚೆರ್ಡುವಾಂಕ ವಿಧವಾಂಕ, ರೋಗ್ಯಾಂಕ, ಅನಾಥ ಶಾಲೊ ಸ್ಥಾಪಕ ಕೊರ್ಕಾ

೧೭. ದೇವಸ್ಥಾನಾಚಾ ವಿನಿಯೋಗಾಂತ ಖರ್ಚುನು ವೊರಿಯೇತ್ ಜಾಲ್ಲೆ ತಸ್ಸಲೊ ದುಡ್ಡು ಜಾತಿ ಚಾಂಗಲ್ಯಾ ವಿದ್ಯಾಭಿವೃದ್ಧಿಕಯಿ ಆನಿ ಅತಿ ದುರುಬಳ್ಯಾಂಕ ಸಹಾಯು ಕೊರ್ಚೊ ಖಾತ್ತಿರಯಿ ಉಪಯೋಗಿಸುಚೆ ಕಾನೂನ ವ ನೀತಿಕ ಅನುಸಾರ ಜಾವುನು ಅಸ್ಸಮ್ಹಣು ಪರಿಷದಾಚೆ ಅಭಿಪ್ರಾಯ ಪಾವ್ತಾಚಿ.

೧೮. ದ್ರವ್ಯ ಸಂಪಾದನ ಕೊರುಂಕಯಿ ಸ್ವಜಾತೀಚಾ ಜಾಲ್ಲೆ ತಿತ್ಲಾ ಜನಾಂಕ ಉದ್ಯೋಗ ಮೆಳಶಿಯಿ ಜ್ವೊಯಂಟ್ ಸ್ಟೋ ಕ ಕಂಪೆನಿ ಇತ್ಯಾದಿ ವ್ಯವಸ್ಥಾ, ಕೋರ್ನುಕ ಕಾರ್ಖಾನೆ ದವೊರ್ಕಾ

೧೯. ಎವ್ಹಾ ವರ್ಷಾ ಪರಿಷದ ಮೆಳ್ಹೊ ಕಾಲು ಆನಿ ಸ್ಥಳ ನಿರ್ಣಯ ಕೊರ್ಕಾ.
೨೦. ಪರಿಷದಾ ಸಂಬಂಧ ಜಾವುನು ಏಕ ಸ್ಥಿರ ಉಪಸಭಾ ನೇಮಕ ಕೊರ್ಕಾ. ಆನಿ ವೈರಿ ಸಾಂಗಿಲೆ ೧, ೨, ೩, ೪, ೯, ಆನಿ ೧೦ ವೆ ವಿಷಯ ಜ್ಯಾರಿ ಕೊರುಂಕ ಆನಿ ತಸ್ಲೆಚಿ ದುಸ್ರೆ ಉದ್ದೇಶ್ಯಾಂಕ ಅವಶ್ಯ ಆಶ್ಶಿಲೆ ದ್ರವ್ಯ.ತ್ಯಾ ಸಥೇಚಾ ಸ್ವಾಧೀನ ದ ವೊರ್ಕಾ

**ಮುಂಭಾಗ ಪುಟ – ೧**

೧. ೧೦೧೮ ಮೊಂಡಕುಂಭಮಾಸಂ ೧೩ ತೇದಿ ವಯಕ್ಕತಿ ಕೊಟಿಕಾರಕ್ಕತಾನಕಲ್ ಮ
೨. ಂಡ್ರಾಲ್ ಸ್ಯಾಬಲಿವರಗಳ್ ಯವುಡಿಯುರಿತುನ್ನ ಸಂನ್ನಾದಿಂಡೆ ಪೆರ್ವಡಿಂ
೩. ವೈಕತ್ತು ಪಾರ್ತುಂನ್ನ ಗೊಪಾಲಿನ್ ಯನ್ನಾವನ್ ಅಪಮರಿಯಾಡಲಯಾಯುಟು
೪. ನಡ್ಡುಕ್ಕತ್ತೊಂಡ ಯಿಕಾಯ್ಯಿರ ಸ್ವಾಮಿಯಾರಕೇಯಿಚ್ಯಾರಿಯಿಇಲ್ ಸಿಂನು
೫. ಸ್ತುತಿ ಯಿದಿತುಂಬೊಳ್ ಮೆಸ್ಪಿಡಿಯನ್ ತ್ರಪೊಣತ್ತುರೆಯಿ ಆಕಾರ ಚ್ಚೆಯಿ
೬. ಆಯಾಳಲಿಯಾಚ್ಚು ವಾಥ್ವಾಮಾರೆಯಾವರುತ್ತಿಗುರೊದೋಶಂಗಳ
೭. ನಡಸ್ನಾವರುನ್ನಾ ಪ್ರಕಾರಂ ಪರಂ ಇ ತೇಕ್ಕ ಕೊಂಡ ಆಕಾರ್ಯರಿಂ ಕೇತುನ್ನಾಶಿ *
೮. ಗೋಪಾಲನ್ ಯನ್ನಾವನೇ ಯಾಗುಣದೋಷ * * * * ಂಗಳ ತಕ್ಕ ಕೂಡಿಯವ
೯. ಥ್ಯಾಮಾರೆಯಾವ ರುತಿಮಯಾಲಿಪ್ಪುಯೆ ಸ್ವಾಮಿಯಾದಯಿರಿತುಂನಡತ್ತ
೧೦. ಲಿಯಾಚ್ಚಕೊಳ್ಳುಗೆ ಯಾವೇಣಂ ವೆನ್ನ ೭೭ ಮೊಂಡಚಾಗಮಾಸಂ ೩ ತೇದಿ (ಲೇ)
೧೧. ಟ್ವಿ ಮಾನೋರ ಮುಶಿತ್ತ ಸರ್ವಾದಿ ಕಾರ್ಯತ್ಕಾರಕಾಲೆವೇರತ್ಕತಂಬಿಡಂಣ್ಣಗರಾಮನ್
೧೨. ವೇಲಾಯುಧನ್ ಯಾ ಯುದಿಟುಳ್ಳ ಸಾಧಾನತ್ತಿಲೂ ಮೇಲೆ ಪ್ರಕಾರಂ ಸಂಪ್ರತಿಕಣಕ್ಕು
೧೩. ಆರತ್ತನ್ ಕಂಡನ್ ಆಯುತ್ತೆರುಕುನ್ನ ಸಾಧನತ್ತಿ ಆಕಂಡಿರಿಕೆ ಕೊಂಡಲು ಸಾ *
೧೪. ದಿಕ್ಕಲಿರೈ ಅಕೋರ್ಟಿಲ್ ಸಾನ್ನುಂ ವಸ್ತಿರುಕ್ಕನ ಯಿತ್ತವು ಯಡವೈಚ್ಚು ಕಂಡಾಶಿ
೧೫. ಸ್ವಾಮಿ ಯಾರಿಟಿಯಾಜ್ಞೆಯಿಲ್ ಉಲೈಡಾತೆಕೊತಣಿ (ಕೃಷ್ಣನ್ ) ಯನ್ನಾವನಿ
೧೬. ಕೊಡಿಲೈಲುಕಣಮೆನ್ನವಲ್ಲಿಯ ಸರ್ವಾಧಿಕಾರ್ಯರ್ ವಿಚಾರಿಚ್ಚಪರಮೆಶ್ವರಸೆ
೧೭. ಚಣ್ಣಗರಾಮಂಡೆ ವೇತರ್ ಯಯಾತಿಯ ಸೀಲಿಂಡೆಯಂ ಅವಶಾಲೆಚ್ಯಾ
೧೮. ಶಿಮಾರಿ ಯಾಡರೊಲೆ ಲಲ್ಲಾತೆ ಯಿಕಾರ್ಯರ್ ಕೊಟಿಲೆಸಿಸಾಶಿಚ್ಚತೊಡಾಯೆ
೧೯. ನ್ನೊಂಮೊಂಡ್ರಾಲ್ ಸ್ಯಾಥೆಯಯುದಿಯಸಂನ ತಾಡೆಯಾ ವೇರ್ಪಕಾಣಾಚ್ಚಾ
೨೦. ಲ್ * * * * ತನ್ನೆ ಕಾಣಣಮೆನ್ನಾವರವಾನೂ ಆಯಿತು ಅವರು ತಿದಿಕ್ಕಲ್ ಕಾ
೨೧. ಬ್ಮಾನ್ ಯಿಟ್ಟವರುನ್ನ ತಲ್ಲಿನ್ನುಂ ಯಿಕ್ಕೆರಿ ಸಂಸ್ಥಾನ ತ್ತಮಹಾರಾಜಾವುವೆ
೨೨. ತೆಲೊವರ ಕೊಡುತ್ತ ಅಸ್ವಲ್ ಆಧಾರವೂ ಸೂಟೂ ಅನುಸರಿಚ್ಚುಯೆ
೨೩. ಟುಮಾನೂವಮುಶಿತ್ತ ಸರ್ವಾಧಿಕಾರ್ಯಕಾರಿ ಟಿ ಮೇತರ್ ತರಾಪಿ ಚಣ್ಣಗರ
೨೪. ಮನೆಮುದಲ್ ಪೇರುಯಯಾದಿಯಿವೃತ್ತಿಬ್ಬಿನ್ನಾಯವುತುತಳೂ ಕಂಡಾ
೨೫. ಲಿಕುಕ್ಕೆಯಾ ** ನಿಶತ್ಮತಿಕ್ಕಾಂತ್ರಿವೊನ್ನದರಾಯಾಗಯಾಲ್ ಮೇಲ್ ಯುದಿಯ
೨೬. ತಾರಂವೊಳ್ಳ ಅನ್ನತಿಲಯಿಂಡಿರುಂಗಳಂ ವೆದೋರ್ಗಳಂ ಯೆಂಟು ಕೈಚ್ಚತ
೨೭. ದು ಪಿತ್ತಶೀಚ್ಚುಲಿವಿಶಿಟಿಜ್ಯಾತಿಮೆರಿಲೊಡಯಾನಡಪ್ಪುಂಪಾಚಾಶಾಚ್ಚ
೨೮. ನಂಬರ ತೀಚರ್ ಚ್ಯೆದು ತೊಳ್ಳು ಗಯಂವೇಣ ಮನ್ನಯಾಯು ರತ್ತಿ ೨೨ ಮೆ

೨೯. ಡ ಮಕರಮಾಸಂ ೨೫ ತೇದಿಯಯುತ್ತಿಯುತ್ತರವಿಯಾ ಕಂಡರಕ್ಕೆ ಕೊಂಡ
೩೦. ತೀರ್ಪಾಯದು

**ಹಿಂಭಾಗ ಪುಟ – ೨**

೧. ಮೇಲ್ ಯಿವುದಿಯ ಪ್ರಕಾರಂ ವಾದಿಯಾವಲಾದಿ ಬೋಧಿ ಪೆಚ್ಚಿರಿ ಕುನ್ನಾ
೨. ಸಂಗಡಿಕ್ಕ ಪ್ರತಿವಾದಿ ಆಕುನ್ನು ಕಾಶಿಮಠತ್ತಿಲ್ ಸ್ವಾಮಿಯಾರ ಕೊಡುತ್ತ
೩. ಯಚ್ಚಿರಿಕುನ್ನ ಯಯುತ್ತುಂ ಅಕಿನೊಡು ಕೂಡೆ ಕೊಡುತ್ತ ಯಿಚ್ಚೆ (ಬು)ಳ್ಳ
೪. ಯಿಕ್ಕೆರಿ ಸಂಸ್ತಾನತ್ತ ಮಹಾರಾಜಾವು ಮುತಲ್ಲಾಯ ಆಳುಗಳ್ ಯಯು
೫. ತ್ತಿಉಳ್ಳ ಯಯುತ್ತು ಕಳಾ ಆಪ್ಪಿಲ್ ಸಾನ್ನುಂ ವಂಗಿರಿತುನ್ನಾ ಉತ್ತರವೂಯ
೬ ಯಿ ಪೆಚ್ಚು ಕಂಡಾರೆ ಕೊಂಕಣಿಯಿಡೆ ಚ್ಯಾದಿಯಲ್ ಲೊಕೋರುತ್ತರಯ
೭ ೦ಗಿ ಆದುರು ನಡದ್ದುಗಳಾಯಿಯ ನಡಸಾಲ್ ಆಕಾರ್ಯಂಗಳ್
೮. ಕಾಶಿಮಠತ್ತಿಲ್ ಸ್ವಾಮಿಯಾರ್ ತೀಯ ಮರಿಯಾದಕೇಟು ತೀರ್ಶುವನ್ನ
೯. ಶಿನ್ನ್ ವೇಣಾತಾನ್ನೆ ತೆಟ್ಟು ಶೀರ್ಪಾನುಳ್ಳ ತಲ್ಲಾತೆ ಕೊಯಿಮ ಸ್ಥಳಂಗಳಿಲ್
೧೦. ವಚ್ಚು ಯಿಕಾಯಣ ತೆಯಪ್ಪಾನ್ ಆವಿಶ್ಯಯಿಲ್ಲೆನುಂ ಸ್ವಾಮೀಯಾವರು
೧೧. ಟೆಲಡುಕಲ್ ಕನ್ನೆ ಕೊಡಿಲ್ಯೆಕಣಂಮೆನ್ನಂ ಯಿಕ್ಕರ್‍ರಿ ಸಂಸ್ಥಾನತ್ತು ಮಾಹಾ
೧೨. ರಾಜಾವೂ ಕರ್ನಾಟಕ ಜಿಲ್ಲಾ (ಟಿಪ್ಪು) ಸ್ಮಾತಿಧೆಂಡೆ ಅರ್‍ಯೆಂಶಂ ಮಾರೂ
೧೩. (ರಿ) ಹೇಮಾನ ಪಟ್ಟು ಕುಂದಸಿಯಲ್ ಕಲ್ಲಕಟರ್ ಸಾಯಿಧೆಂ ಮಾರುಂ
೧೪. ಕೊಂಡುತ್ತಿರುಕುನ್ನ (ಯೆ) ಪೈತ್ತುಗಳಾಲ್ಲುಂ ತಿರ್ವಾಂಕೂರ ಮಹಾರಾ
೧೫. ಜಾವು ತಲ್ಪಿಚ್ಚಿ ಕೊಡುತ್ತು ಯಿರಿತುಂನ್ನಾಗೀಟಿಯಾಮಂಡ್ರೊಲ್ ಸ್ಯಾ
೧೬. ಪೆಲ್ಚಾರಗಳ್ ಕೊಡುತ್ತಿರುಕುನ್ನ ಸಂನರಿಯಾತಂ ಬಿಚಣ್ಣಗರಾಮನ್
೧೭. ವೇಲಾಯುಧನಂ ಸಂದ್ರಾಶಿಕಣತ್ತೂಲಿಕರ್‍ನ್ ಕಂಡನುಂ ಯಯಡಿ
೧೮. ಟ್ಟುಳ್ಳ ಸಾದ್ಕ ನತ್ತಿ ಆತಂಡಿರಿಕುಂಬಾಳ್ ಲಿಪ್ಪಿಕಾರಂ ಲಲ್ಲಾತೆಯಾ
೧೯. ಆವಲಾಧಿವಚ್ಚಿರುತುನ್ನ ಕಾರ್ಯಕೆ ತುರಿಚ್ಚುಸ್ವಾಮಿಯಾಶಿ
೨೦. ಯಿಂಡೆವಶುತ್ತಿ ವಿಸ್ತರಿಪ್ಪಾನುಂ ಯಿ ಕಾರ್ಯರ್ ಯಿನ್ನಾ ಪ್ರಕಾರಂ
೨೧. ವೆಲ್ಲನ್ನುಂ ತೀರ್ಚು ನಿಶ್ಚೈಪ್ಪಾನುಂ ಯಿಟ್ಟ ಕಾಗದಾಯಿಸತ್ಕಾಂಡು
೨೨. ಮೆಲ್ ಪ್ರಕಾರಂವೊಳ್ಳ ಯಯುತ್ತುಗಳಲ್ ಕಂಡಿರುತುನ್ನತಿನ್ ಮಣಂ
೨೩. ವಾದಿಕ್ಷುಯೇದಂಡಗಿ ಆ ಸಂಕಟಂ ಉಂಡಾಯಿಸ್ರಾಲ್ ತೀಯೂಮಲ್ರೊ
೨೪. ದಾರ್‍ರಿಕಾರಾ ಸ್ವಾಮಿ ಯಾರುಂತಿಲಿಡುತಲ್ ಚನ್ನಬೋಧಿ ಪೊಚ್ಚುತೀರ್ತು
೨೫. ಕೊಳ್ಳುವಾಗುಂ ಯೀಪತಿಚ್ಚಿರುಕುನ್ನ ನಂಬರ ಪೈಸಿಲ್ ಸಾದು ಸೇತುವಾ
೨೬. ನೂ ಸಂಗದಿಯನ್ನೂಂ ಸಿಶ್ಚೈಯಿಚ್ಚು ತಿಳಪಾಕುಗಯಂಚ್ಯೆಡು
೨೭. ೧ನೆ ಜಿಡಜಿನರಶಿಂಗನ್ಯಾಕನ್ (ವಪ್ಪ)
೨೮. ೨ನೆ ಮಸ್ತಿರಂಜಿ (ವಪ್ಪ)
೨೯. ೩ನೆ ಚಾರಚಲ್ ಘಸುಟ್ಟುತಿ (ವಪ್ಪ)
೩೦. ೪ನೆ ಆದಿನಾರಾಯಣಶಾಸ್ತ್ರಿಗಳ್ (ವಪ್ಪ)

೩೧. ೫ ಹೇಡಗುಮಾಸ್ತನ್ (ವಪ್ಪ)

ಕಾಲ ೧೫-೩-೭೯ ಸೇರಿ ಇಂಗ್ಲೀಷಿನಲ್ಲಿ ಸಹಿ ನಂಬರುಗಳ ಉಲ್ಲೇಖನಗಳಿವೆ.

**ಪತ್ರ ೨ ಪುಟ – ೩**

೧. ತ್ತಿ ಆ ನಡುಕ್ಕುಂ ನ್ನಾದಿನಂ ಸಿದಾಸಂವರುತಿ ಕೊಡುಕ್ಕೇಮೆನ್ನಾಂ ೭ ಪಣಂ ಫೈಸಲು ತಕ್ಕ
೨. ಬೋಧಿ ಪೆಚ್ಚಿರುತುನ್ನಾ ಸಂಗಡಿಕ್ಕ ಪ್ರತಿವಾದಿಯಿಟ ಪೆರಕ್ಕ ಕೈಮಾಸಂ ೧೩ ತೇದಿಯ
೩. ವುತಿಯಲಿರಿ ಯಿಟ್ಟುಕಾಂಡು ಕೈಬಾಕಿ ಅತ್ತಿಲ್ ವೊಟ್ಟೆಟ್ಟು ಕೊಡುಕ್ಕಾದೆ ತಕರ್ ಮಾ
೪. ತಂಞಾ ಪಾತುನ್ಂ ಸರ್ರಕಾರಂ ಅರಿಯತ್ವಿಲ್ ಕಂಡಯವುದಿಮಠಂ ಸಿವರಿಗಯು
೫. ಪೆನ್ನೆಟು ತೊಂಕರಿಯುಂಲೆಚ್ಚಾತಿಧರ್ಮಂ ಮುತಲಾಲೊ ಸಂಗಡಿಯಡಕೊಟ್ಟುಪೆ
೬. ರ್ವನಮಾದೆ ನಡಸ್ಯವನ್ನತ್ತಿನ್ ಮಣಂ ಕಾಶಿ ಮೊದಲ್ ರಾಮೇಶ್ವರಂ ವರೇವೊಳ್ಳಕೊಂಕಣಿ
೭. ಗಳು ಡೆಜ್ಯಾತಿಧರ್ಮಂ ಯಟ ಯಿಕ್ಕೆರಿ ಸಂಸ್ಥಾನತ್ತಮಹಾರಾಜಾವೂಕರ್ನಾಟಕಜಿಲ್ಲಾ
೮. ಡಿಪ್ಪು ಸಾಯುಧೆಂಡೆಲಿವ್ಯೆ ಸಂಮಾರುಂ ಕೊಡುತಿರುತು ನ್ರಾಯ ಯುತ್ತಂ ಬಹುಮಾನಕೇ
೯. ತುಂಪನಿಗಳ್ಕಟ್ಟರಸಾಯಿಸ ಮಾಮಂ ಕೊಡುತಿರುಕುನ್ನಯಾಧಾರಂಗಳುಂ ತಿರುವಾ
೧೦. ।ಂಕುರ ಮಾರಾಜಾವಕಟ್ಟೆಚ್ಚಿ ಕೊಡುತ್ತಿಟ್ಟುಳ್ಳಸೀಚೆಂಡೆಯೂ ಕನರ್ಲ್ ಮಾತ್ರೋಲ್
೧೧. ಸ್ರ್ಯಾಫಲಿಕರಗಳ್ ಕೊಡುತ್ತಿರುಕುನ್ನಾ ಸಂನಕಾಡೆಯೂ ವೆರ್ಪುಗಳೂ ತಂಬಿಚಣ
೧೨. ಬಗರಾಮಕ ವೆಲಾಯುಧನಂ ಸಂಪ್ರತಿಕಣಕ್ಕ ಅರವತನ್ ಕಂಡನುಂ ಕೊಂಡುರಂ
೧೩. ಸಾಧನವುಂ ಕೊಡುತ್ತ ತಿರುವನಂತಪುರತ್ತರಾಯ ಪ್ರಭುನೇ ನೇಮಿಚ್ಚುಲ ಯಾಬ್ಧಿ
೧೪. ಯಿಶಿಕೆ ಕೊಂಡಯಾಯತುವೊಕ್ಕೆಯುಂ ಕಂಡು ಬೋಧಿಚ್ಚು ಜ್ಯಾತಿ ಮರಿಯಾದೆ
೧೫. (ಕ್ಕ) ಕಟ್ಟಿನಕ್ಕು ಆಗನಮೊಯುಟ್ಟು ವಾದಿಯಾತುನ್ನ ಗೋಪಾಲವಾಧ್ಯಾರಬೋ
೧೬. * ಗೆಚ್ಚಿರುಕ್ಕುನ್ನ ನಂಬಿರನಿಕೆಂಚೈದು ಕೊಡುಕಣಂಮೆನ್ನಂ ಸ್ವಾಮಿಯಾರವೋ
೧೭. ಟ್ಟೆಟ್ಟು ಹರ್ಜಿ ** ಲೊಟುಂಕೊಡೆ ರಾಯ ಪ್ರಭುವನ್ನ ಬೋಧಿಪೆಚ್ಚಿರಿಕ್ಕುನ್ನರೊ
೧೮. ಲಿಲ್ಲೈರೆ ಮೆಲ್ ಯವುದಿಯ ಯವುತ್ತುಗಳ್ ಕ್ಕುಳ್ಳ ಆಧಾರಂಗಳುಂ ಪೇವಾರಾರ್
೧೯. ಗಳಂ ಕೊಂಡವನ್ನರ್ತಾನಿಕ್ಕೆ ಕೊಂಡ ಆಯತಲಾಕ್ಕೇಯು ನೊತ್ಯಾರೆ ಕುಂಭ
೨೦. ಕೋಣ ಮಠತ್ತಿಲ್ ಸ್ವಾಮಿಯಾವ ಆಚಾರಗಳ್ ಕೊಂಕಣಿ ಮಾಮಡೆಗುರುತ್ಕಳಾಯ
೨೧. ಕಾಶಿ ಮಠತ್ತಿಲ್ ಸ್ವಾಮಿಯೂ ರ ಅೃಚಾರಗಳಕ್ಕೆ ಮಾಬಿನಾಲೆ ಪಲ್ಲಕ್ಕಿ ತೊದಲಾಯಿತು
೨೨. ರುಧಗಳಂ ಕೊಡುತ್ತು ಕೊರ್ತನಿಮಾರುಡೆ ಜ್ಯಾತಿ ವಿಚಾರಗಂಗಳ್ ವಿಚಾರುಕ್ಕನ್ನ ಶಿನಾ
೨೩. ಯಟ್ಟುಲ್ಯೆಚ್ಚಿಯಿರಿಕ್ಕೆ ಕೊಂಡ ವಯಿಗಳಲ್ ಆಕೊರುವಿರೋಧವಂ ಕೊಡಾದೆ
೨೪. ಸಹಾಯಂಗಳ್ ಚೈತುಕೊಡಕ್ಕತಕ್ಕವಣಂ ಯಿಕ್ಕೆರಿಸಂಸ್ಥಾನತ್ತ ಮಹಾರಾಜಾವ
೨೫. ಪಾವರತ್ಚ ತಾವಮುದಲಾಲಿ * ಯಾಳುಗಳಕ್ಕಯಾನಂದ ಸಂವತ್ಸರತ್ತಿಲ್ ಕೊಂಡು
೨೬. ತ್ತಿರುತುನ್ನತಿರುವೆಯಿತ್ತೆಲ್ಲೂ ರಾಮಚಂದ್ರ ಕಮ್ತಿ ಯುರೆ ಮಕಳ ಮುಂಬಿ
೨೭. ವಾಲೆ ಕೊಯ್ಯಿಕಿನ್ನಾ ಕುಲಿಹೀನ ಕೆಯಾಯಯಿರಿನ್ನಾಮಶಿಚ್ಚಿಮೊಯತಾಡೇ
೨೮. ಶೀಶ್ಯಾರಿಲಿವಳೇ ಚೋವನ್ನಾ (ಕಾರಡುಪೊಯಿ) ವರ್ರೇ ಯಾ ಅವರಾಯಿಕೊಡಿಟ್ಟುಳ್ಳವ
೨೯. ವೇಯಾಜ್ಯಾತಿಯಲ್ ಸಿನೊತನೀತೀದಾಡೆ (ಶೆ) ಓ ಅವರೇ ಸಂಕಟಂ ಬೊಧೆವ್ಯೆಚ್ಚ
೩೦. ರೆಲವಿರ ಚೈದದ ನ್ಯಾಯ ವೆಲ್ಲಿನುಂ ಮೆಲಾಲ್ ಆಗಿವೇಉಳ್ಳ ಅಕೃತ್ಯಂಚಯಾ

**ಪತ್ರ ೨ ಪುಟ ೪**

೧. ಕೆಯಿವಿಕ್ಕೆ ತಕ್ಕವಣ್ಣಾ ಮೊತಕಾವಿಲ್ ರರೂತ್ತ ಚಟ್ಟಂಕೆಟ್ಟಿ ಯಿ ಪ್ರಕಾರಂ ಕ್ರಮತ್ತೆ
೨. ತ್ತ ಆಯುಚ್ಚು ನಡನ್ನುಯಾನ ವರಿಸಲ್ ಅತಿನುತಕ್ಕ ಶಿಕ್ಷೆ ಚಯ್ಯುವಮೆನ್ನಂ
೩. ಡಿದ್ದತ್ತಿ ಸೈಥೆಂಡೆ (ಅಟ್ಟಿಸಂ) ಮಾದೆಕೊಡುತ್ತಿರುಮನ್ನಾಯಯತ್ತೆಲ್ಂ ಕೊಂ
೪. ಕಣಿಮಾಮಡೆಯನತ್ತಿಲ್ ಉಟ್ಟುಟ್ಟು ಆಳುಗಳ್ ಅವರುಡೆ ಜ್ಯಾತಿಮರಿಯಾ
೫. ದ ಪ್ರಕಾರಂ ನಡಕ್ಕಾದೆ ಕ್ರಮತ್ತೆತ್ತಿ ನಡನ್ನಾವಗಕ್ಕ ಅವರು ಚಿಚಾರಮಾರಿ
೬. ಯಾದ ಪ್ರಕಾರಂ ನಡಿಪ್ಪಾನುಳ್ಳತು ಸ್ವಾಮಿಯಾರುತನ್ನೈನಚ್ಚತೂಮೆನ್ನ
೭ ವರುವೆಳ್ಳಾ ಆವಗ ಆಳುಗಳ ಸರಕಾರಲ್ ಆವಲಾಧಿಕ್ಕ ಚಂನಾಲ್ ಅವ
೮. ರುಡೆ ಜಾತಿ ಮರಿಯಾದಿ ನಡಪ್ಪುಂ ಪ್ರಕಾರಂ ನಡತ್ತುವಾನ್ ಚಟ್ಟಂ ವೆಟ್ಟುವಾ
೯. ನುಳ್ಳದುಂ ಅಲ್ಲಾದೆ ಸಾಗಳ್ ಅತಿಲ್ ಯಿಳ್ಪಡುವಾರ್ ಯಾವಸ್ಯಾಯಿತ್ತಿಂನುಂ
೧೦. ಯಾಉತ್ತರ ಪಾದೆಪೇರ್ಣ ಆಚಿಥೆಯುಲ್ ಚೇನರ್ ತಾಲೋಕಹಳೀಲ್ ರಿ
೧೧. ಕಾರ್ಟಿಲ್ ಚೇರ್ತುರ್ಂಕೊಂಡು ಅಸ್ವಲ್ ಉತ್ತರವೂ ಅವರಿಕೆ ವಕ್ಕಲ ಕಿರಿಯೇ
೧೨. ತೊಡುತ್ತುಕೊಳ್ಳಗೆ ಯಾ ವೇಣಂಮೆನ್ನ ಕರ್ನಾಟಕ ಜಿಲ್ಲೆಯಲ್ ಕಂತಲ್ಲಿ ಕಟ್ಟಿ
೧೩. ರಮಂಡ್ರಿಲ್ ಸ್ವಾಥೆ ಅವರಗಳ್ ಕೊಡುತ್ತಿರುತುನ್ನ ಸನ್ನತಾಡೆ ಪೇರ್ಪೆಯಾ
೧೪. ಚೇರ್ತಲೆ ಕೊಂಡಕಣೆ * * * * ಯನ್ನವನ್ ಮರಿಯಾದೆ ಕೊಟ್ಟು ನಡತುಂಡಿವನಾಕುನ್ನ
೧೫. ಮೊನ್ನಂ ಪರಾ ಇ ತೇಕಕೊಂಡ ಸಾಧನಂ ಕಂಡಾಲ್ * ಟ್ಟು ತಾಮಟಿಯಾದೆ
೧೬. ಕೊಂಕಣಿ ಶ್ರಾದ್ಧಾನ್ ಯನ್ನವನೀ ಸ್ವಾಮಿಯಾರುಟಿಯೊಳಿವಲ್ ವ ಶಂಕೊಹಿಟ್ಟ
೧೭. ಯಚ್ಚೋ ಕೊಳ್ಳುಗೆ ಆಲಂ ವೇಣಂ ಮೆನ್ನೊಂ ಪರಮೇಶ್ವರನ್ ಚಣ್ಣಗ ರಾಮಂಡೆಪ್ಯೆ ರತತ
೧೮. ಚೆಚ್ಚು ಕೊಡುತ್ತಿಯುಳ್ಳ ಸೀಟಿಂಡೆ ಪೇರ್ಪೆಯಾಂ ಕೋಟಿಯತ್ತು ಕೊಂಕಣಿಸಾಂತ
೧೯. ಪ್ಪಂಡೆ ತಳ್ಳೆಕ್ಕು ಮಾಧವನ್ ಯನ್ನ ಕೊಂಕಣಿ ಅಪರಾಧಂ ವರುತ್ತುಗಕೊಂಡಲವ
೨೦. ನೇಯುಂಲಿವಂಡೆ ಕೈರ್ಯಿಲೊಳ್ಳ ಆಳುಗಳ್ಳೆ ಯುಂಚ್ಯಾತಿಯಿಲ್ ನಿಂನ್ನೊಂವಿಲಕ್ಕ
೨೧. ಯಿದಿಕುಂಬೊಳ್ ಯಿದ್ದೊಳ್ ಕೂಡಿ ನಡತ್ತೇಣವೆನ್ನೊಂವಚ್ಚು ಕೋಟಿಲ್ ಸಾನ್ನೊಂ ಅ
೨೨. ಧಿಕಾರಿಗಳೋಟ ಶೊದ್ಯಾಚ್ಚ ಯುನ್ನಾ ಪ್ರಕಾರವೂ ಅವಶಿಟಿಜ್ಯಾತಿ ಮರಿಯಾ
೨೩. ದ ಯುಟ ಶೆಟ್ಟುಳ್ಳ ಯಾಸಿನೇ ಉಳ್ಳ ಕಾರ್ಯಂಗಳ್ ಕಾಶಿ ಮಠತ್ತಿಲ್ ಸ್ವಾಮಿಯಾರ
೨೪. ತೇಟು ತೀರ್ತಾಲ್ಲಾದೇ ಕೋಯಮ ಸ್ಥಲಂಗಳಿಲ್ ವಚ್ಚು ಯಿತಿನು ತಿಳ್ಳಿಲ್ ಕೇಯ
೨೫. ಕ್ಕೆ ಕೊಂಡಾಯಿಟ್ಟು ಯಿಲ್ಲೆಂನ್ನೊಂ ಅಧಿಕಾರಿ ಪೆಸರಿಮುದಲ್ ವೇರಯಿಲಿಡೆ
೨೬. ವೆನ್ನ ಸಂಕಟಂ ಬೋಧಿ ಪೆಕ್ಕಕೊಂಡ ಯಿನಂದಿತೊಳಲ್ ವಚ್ಚು ತೇಯವಾನೂ
೨೭. ಅವನಾರಾ * ಶೋಧ್ಯಚಯುವಾನೂ ಅವಿಶ್ಚಯಿಲ್ಲಾಯಗಕೊಂಡಯೂ
೨೮. ಕಾರ್ಯಂ ಯಿಡವೆಟ್ಟು ಕೊಂಕಣಿಗಳಿಲ್ ವಲ್ಲಿರವರುಂ ತೋಟಲ್ ವಾಸ್ನಿಟ್ಟು
೨೯. ಉಡಾಜಿಲ್ ಅವರೇ ಮೇಲ್ ಯುತಿಯ ಸ್ವಾಮಿಯಾರು ಟಿಲಿಟುಕಲ್ ಪ
೩೦. ರಂ ಇಬತೀರ್ತಾ ಕೊಳ್ಳತಕ್ಕವಣ್ಣಾ ಅಯಿಚ್ಚು ಕೊಳ್ಳುಗಲಿಯಂ ವೇಣವೆನ್ನಂ
ಅಪೂರ್ಣ



## ೧೧೮

# ಬರಗೂರು ವಿಶ್ವಕರ್ಮ ಮತಸ್ಥರ ತಾಮ್ರಶಾಸನ

ಬಿ. ನಂಜುಂಡಸ್ವಾಮಿ*

**ತು**ಮಕೂತು ಜಿಲ್ಲಾ ಶಿರಾ ತಾಲ್ಲೂಕು, ಬರಗೂರು ಗ್ರಾಮವನ್ನು ಮತ್ತು ಅಲ್ಲಿರುವ ದೇವಾಲಯಗಳನ್ನು ನೋಡಲು ಹೋದಾಗ ಊರ ಮಧ್ಯ ಚೌಕದಲ್ಲಿ ಇರುವ ವಿಶ್ವಕರ್ಮ ಮನೆತನದವರ ಮನೆಯಲ್ಲಿ ಸುಮಾರು ೧೪ ಇಂಚು ಉದ್ದ ಹತ್ತು ಇಂಚು ಅಗಲದ ತಾಮ್ರ ಶಾಸನವನ್ನು ಮನೆಯವರು ತೋರಿಸಿದರು. ಜೆರಾಕ್ಸ್ ಮಾಡಿಸಿದ ಶಾಸನದ ಮೇಲೆ ವಿಭೂತಿ ಹಚ್ಚಿ ಫೋಟೊ ಕಾಪಿ ಮಾಡಿಸಿ ತಂದೆ.

ಈ ಶಾಸನವನ್ನು ತಾಮ್ರಪತ್ರದ ಮೇಲೆ ಬರೆಯಲು ಕಾರಣ ಸರಕಾರದವರು ಬರೆದುಕೊಟ್ಟ ಸನ್ನದ್ದು ಶಿಥಿಲಾವಾದ್ದರಿಂದ ತಾಮ್ರಪತ್ರದಲ್ಲಿ ಎಂದು ಸ್ಪಷ್ಟವಾಗಿ ಹೇಳಿದೆ. ತಾಮ್ರಪತ್ರದ ಮೇಲೆ ಬರೆದವನು "ಶಿದ್ದಾಚ್ಯಾರಿ" ಈ ಶಾಸನದ ಕಾಲ ವಿಕ್ರಮ ಸಂವತ್ಸರದ ಭಾದ್ರಪದ ಶುದ್ಧ ೨. ಇದು ಕ್ರಿ.ಶ. ೧೮೬೧ ಸೆಪ್ಟೆಂಬರ್ ೨೫ಕ್ಕೆ ಸರಿ ಹೊಂದುತ್ತದೆ.

ವಿಕ್ರಮ ಸಂವತ್ಸರದ ಭಾದ್ರಪದ ಶುದ್ಧ ೨ಲ್ಲು ಬರಗೂರು ಅಕ್ಕಸಾಲೆ ಶಿದ್ಧರಾಮಣ್ಣನ ಕುಮಾರ್ರು ರಾಮಂಣ್ಣ ಮತ್ತು ಚಿಕ್ಕಂಣ್ಣಗೆ ಅಕ್ಕಸಾಲೆ ಯಿರ ಗಿಡ್ಡಣ್ಣನ ಕುಮಾರ ಚಿನ್ನಂಣ್ಣನ್ನು ಬರಸಿ ಕೊಟ್ಟ ಪಾರೀತಕ್ಕಿನ ಕಾಗದ ಕ್ರಮವೆಂತ್ತೆಂದರೆ. ಅದಾಗಿ ಸ್ಥಳದ ಕಸಬೆ ಬರಗೂರು ಗೌಡ, ಶಾನುಭೋಗರು, ಹಳ್ಳಿಗೌಡರು ಆಯಗಾರ್ರು ಸೂಕ್ತ ಪಂಚಾಯತರ ಮುಂದೆ ಅಕ್ಕಸಾಲಿಗೆ ಅರ್ಧಪಾಲಿನ ಸನ್ನದ್ದು ತಂದು ಇಪ್ಪತ್ತು ದಿವಸದೊಳಗಾಗಿ ಯಿ ಅಕ್ಕಸಾಲಿಕೆ ಅರ್ಧಪಾಲಿನ ಸನ್ನದ್ದು ತರುತ್ತಾ ಇದ್ದೇನೆ ಎಂದು ಕರಾರು, ಈ ಪಂಚಾಯತರಿಗು ಚಿಕ್ಕಣ್ಣ, ರಾಮಣ್ಣಗೆ ಸಹ ಕರಾರು ಬರಕೊಟ್ಟು ಇದ್ದೇನು. ಈ ಗಡುವು ಮೀರಿ ಹತ್ತು ದಿವಸವಾಯಿತು ಆದ್ದರಿಂದ ಈ ದಿವಸ ಹತ್ತು ಮಂದಿ ಪಂಚಾಯಿತ್ತರು ಗೌಡ, ಶಾನುಭೋಗರು ಹಳ್ಳಿಗೌಡಗಳು, ಆಯಗಾರ್ರು ನನ್ನ ಕರಶಿ ವಾಯಿದೆ ಮೀರಿ ಹತ್ತು ದಿವಸ ಜಾಸ್ತಿ ಆಯಿತು. ನಿನ್ನ ಅರ್ಧಪಾಲಿನ ಸನ್ನದ್ದು ತಂದು ಮಂದಿ ಮುಂದೆ ಇಟ್ಟು ನಿನ್ನ ಅರ್ಧಪಾಲುವುಂಟು ಮಡಿಕೊ ಎಂದು ಕೇಳಿದ್ದರಿಂದಾ, ನಾನು ನಮ್ಮ ಅಣ್ಣ ತಮ್ಮಂದಿರಲ್ಲಿ, ನಂಟರಲ್ಲಿ ವಿಚಾರಿಸಿದಾಗ್ಯೂ ಸಿಕ್ಕಲಿಲ್ಲವೆಂದು ಹತ್ತು ಮಂದಿ ಮುಂದೆ ಹೇಳಿದ್ದರಿಂದ ಈ ಮಾತು ನನ್ನನ್ನೆ ಹೇಗೆ ಆಗಬೇಕೆಂದು ಕೇಳಿದ್ದರಿಂದಾ, ಈ ಚಿನ್ನಣ್ಣ ಹೇಳಿದಂತಹ ಮಾತು ಈ ಸ್ಥಳದ ಚಿಕ್ಕಣ್ಣ ರಾಮಣ್ಣನಗೆ ಸರಿ ಎಂದು ನಾನಾಗಿ ತನ್ನ ಮನಃಪೂರಕವಾಗಿ ಬರಸಿಕೊಟ್ಟ ಕರಾರು ಕಾಗದ ಸಹಿ ಮುಂದೆ ಈ ಅಕ್ಕಸಾಲೆ ಬದುಕಿಗೆ ಬಂದಿದ್ದಾರೆ ಸರಕಾರಕ್ಕೆ ನೂರಿಪ್ಪತ್ತು ವರಹ ಗುಂನ್ನಾಗಾರಿನು ಕೊಟ್ಟು, ಸರಕಾರದವರು ಮಾಡಿದ ಆಜ್ಞೆಯಲ್ಲಿ ಇರುವವನು. ಕುಲಾಚಾರಕ್ಕೆ ಹೊರ್ತು ಮುಂದೆಯೇನು ಕಾಗದ ಪತ್ರ ಲೇಖನಕ್ಕೆ ಸನ್ನದ್ದು ಕ್ರಂದಾಗ್ಸುರದ್ದುಯೆಂದು ಬರೆಸಿಕೊಟ್ಟ ಕರಾರು ಕಾಗದ. ಸಹೀ ಅಕ್ಕಸಾಲೆ ಚೆನ್ನಣ್ಣನ ವಪ್ಪಿತ ಗಂಗಾಧರಗೌಡನ ರುಜು.

ಈ ದಾಖಲೆಯನ್ನು ಬರದಾತ ಬರಗೂರು ಶಾನುಭಾಗ ನಾರಣಪ್ಪನ ಬರಹದ ರುಜುವು. ಸನ್ ೧೮೬೧ನ ಶೆಪ್ಟೆಂಬರು ೨೫-ವಿಕ್ರಮ ಸಂವತ್ಸರದ ದಸ್ತೈವಜು ಶಿಥಿಲವಾಗಿರುವುದರಿಂದ ಇದರಲ್ಲಿ ಬರೆದಿದೆ. ॥ ಶಿದ್ದಾಚಾರ್‍ಯನ ಬರಹಾ॥

ಬ್ರಿಟೀಷ್ ಅರಸರ ಮುದ್ರೆ ಇದೆ

ಬ್ರಿಟೀಷ್ ರಾಜರ ಕಿರೀಟದ ಚಿನ್ಹೆಯನ್ನು ಬಿಡಿಸಿದ್ದಾರೆ

### ಬರಗೂರು ವಿಶ್ವಕರ್ಮ ಮತಸ್ಥರ ಮನೆಯ ತಾಮ್ರಶಾಸನ ಮೂಲಪಾಠ

ಓಂ ॥ ಶ್ರೀರಾಮ ॥ ಓಂ

೧ ವಿಕ್ರಮ ಸಂವತ್ಸರದ ಭಾದ್ರಪದ ಶುದ್ಧ ೨ಲ್ಲು. ಬರಗೂರು ಅಕ್ಕಸಾ
೨ ಲೆ ಶಿದ್ಧರಾಮಂಣನ ಕುಮರ್ರು ರಾಮಂಣ್ಣ ಚಿಕ್ಕಂಣ್ಣಗೆ ಸಹಾ ಅಕ್ಕಸಾಲೆ ಯಿರಗಿ
೩ ಡ್ಡಣ್ಣನ ಕುಮಾರ ಚಿಂನಂಣನು ಬರಸಿ ಕೊಟ್ಟ ಪಾರೀತಕ್ಕಿನ ಕಾಗದ ಕ್ರಮವೆಂತ್ತದರೆ ಅ
೪ ದಾಗಿ ಸ್ತಳದಕ್ಸಬೆ ಬರಗೂರು ಗವುಡ ಶಾನುಭಾಗರು ಅಳ್ಳಿಗವುಡಗಳೂ ಆಯಗಾರ್ರು

* ಪಂಡಿತ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ಬಿ.ಹೆಚ್. ರಸ್ತೆ, ತುಮಕೂರು-೫೭೨೧೦೨, ಮೊ. ೯೮೮೦೯೯೧೯೬

೫ ಸೂಕ್ತ ಪಂಚಾಯತರ ಮುಂದೆ ಯಿ ಅಕ್ಕಸಾಲಿಕೆ ಅರ್ಧಪಾಲಿನ ಸಂನ್ನದು ತಂದು ಯಿಪ್ಪತ್ತು ದಿವಸದೊ
೬ ಳಗಾಗಿ ತಂದು ಯಿ ಅಕ್ಕಸಾಲಿಕೆ ಅರ್ಧಪಾಲಿನ ಸಂನ್ನುದು ತರುತ್ತಾಯಿದ್ದೇನೆ ಯಿಂದು ಕರಾರು ಯಿ ಪಂ
೭ ಚಾಯತರಿಗು ಚಿಕ್ಕಂಣ ರಾಮಂಣ್ಣಗೆ ಸಹ ಕರಾರು ಬರಕೊಟ್ಟು ಯಿದ್ದೇನು ಯಿ ಗಡುವು ಮಿಾರಿ ಅ
೮ ತ್ತೂ ದಿವಸವಾಯಿತ್ತು ಆದ್ದರಿಂದಾ ಯಿ ದಿವಸ ಅತ್ತ ಮಂದಿ ಪಂಚಾಯಿತ್ತರು ಗವಡ ಶಾನು
೯ ಭಾಗರು ಹಳ್ಳಿಗವುಡುಗಳು ಆಯಗಾರ್ರು ನಂನ್ನ ಕರಶಿ ವಾಯಿದೆ ಮಿಾರಿ ಹತ್ತು ದಿವಸ
೧೦ ಜಾಸ್ತಿ ಆಯಿತು ನಿಂನ್ನ ಅರ್ಧಪಾಲಿನ ಸಂನ್ನುದು ತಂದು ಹತ್ತು ಮಂದಿ ಮುಂದೆಯಿಟ್ಟು ನಿಂನ್ನ
೧೧ ಅರ್ಧಪಾಲ್ಲುವುಂಟು ಮಾಡಿಕೊಯಂದು ಕೇಳಿದ್ದರಿಂದಾ ನಾನು ನಂಮ್ಮ ಅಂಣ್ಣತಂ
೧೨ ಮ್ಮಂದ್ಗರಲ್ಲಿ ನಂಟರಲ್ಲಿಯಲ್ಲಿ ವಿಚಾರ್‍ಸಿದಾಗ್ಯು ಶಿಕ್ಕಲಿಲ್ಲವೆಂದು ಹತ್ತು ಮಂದಿ ಮು
೧೩ ಂದೆ ಹೇಳಿದ್ದರಿಂದಾ ಯಿ ಮಾತು ನಂನ್ನನೆ ಹ್ಯೇಗೆ ಆಗಬೇಕುಯೆಂದು ಕೇಳಿದ್ದರಿಂದಾ
೧೪ ಯಿ ಚಿಂನ್ನಂಣ ಹೇಳಿದಂತ ಮಾತೂ ಯಿಸ್ತಳವನಕ ಚಿಕ್ಕಂಣ ರಾಮಂಣ್ಣನದೆ ಸರಿಯೆಂ
೧೫ ದು ನಾವಾಗಿ ನಂನ್ನರಜಾ ವಂದೀಯಿಂದ ಬರ್‍ಸಕೊಟ್ಟ ಕರಾರು ಕಾಗದ ಸಹಿ ಮುಂದ್ರೆಯ ಅಕ್ಕಸಾಲೆ ಬದಕಿಗೆ
೧೬ ಬಂದದ್ದೆ ವುಂಟಾದರೆ ಸರಕಾರಕ್ಕೆ ನೂರುಯಿಪ್ಪತ್ತು ವರಹ ಗುಂನ್ನಾಗಾರಿನು ಕೊಟ್ಟು ಸರಕಾರದವರು ಮಾಡಿದ ಆ
೧೭ ಗ್ಣೆಯಲ್ಲಿ ಯಿರುಲುಳ್ಳವನು ಕುಲಾಚಾರಕ್ಕೆ ಹೊರ್ತು ಮುಂದೆಯೇನು ಕಾಗದ ಪತ್ರ ಲೆಖವಕ್ಕ ಸಂನ್ನದು ಕ್ರಂದಾ
೧೮ ಗ್ಸುರದ್ದುಯೆಂದು ಬರಸಿಕೊಟ್ಟು ಕರಾರು ಕಾಗದ ಸಹೀ ಅಕ್ಕಸಾಲೆ ಚಿಂನಂಣನ ವಪ್ಪಿತ ॥ ಗಂಗಾಧರ ಗೌಡನ ರುಜು।
೧೯ ನರಸೆಗೌಡನ ರುಜು ॥ ಕರೆ ಹನುಮಂಣನ ರುಜು ॥ ತೋಣಚೆಗೌಡನರುಜು ॥ ಮೂರುವಾಗಿಲು ಗೌಡಕರಿಯಣ್ಣ
೨೦ ನ ರುಜು ಮಠದ ನಂಜ್ಯೆಯ್ಯನ ರುಜುವು ॥ ೦ ॥ ॥ ೦ ॥
೨೧ ಬೆಂಣೆ ಬೊಂಮ್ಮೆಗೌಡನ ರುಜುವು ॥ ಸಮೇರಾಯ ಚಂನ್ನಪ್ಪನ ರುಜುವು ॥ ೦ ॥
೨೨ ಗ್ನತೋಣಚೆಗೌಡನ ಬರಹ ॥ ಶೆಟ್ಟಲಿಂಗಂಣನ ರುಜುವು ॥ ೦ ॥
೨೩ ವಪಿತ ೨೪ ಗೋವಿಂದ ಭಟ್ಟರ ಗುಮಾಷ್ಟೆ ಅಬ್ಬಸ್ವನರುಜು ಕಂಮ್ಮಾರ ಕ್ರಿಷ್ಣಪ್ಪನ ರುಜುವು ॥ ಃ ॥
೨೪ ಕಾಟನಹಳ್ಳಿ ಪಾಲೇಗೌಡಗೆ ನರಸೆಗೌಡನಬಡಗಿ ಲಿಂಗನ ರುಜುವು ॥ ೦ ॥

ಬರಹಾ ॥ ೦ ॥
ಕದರೆಹಳ್ಳಿ ಗೌಡನ ರುಜುವಿಗೆ ನರಸೇಗವು
ಡನ ಬರಹಾ ॥
ನಾರಿಗೊಂಡನಹಳ್ಳಿ ತ್ತಿಂಮಂಣರರುಜು
ವಿಗೆ ನರಸೆಗೌಡನ ಬರಹಾ ॥ ೦ ॥
ಕಲಿಗೊಂಡನಹಳ್ಳಿ, ವಂಕಿಗಿರೆಗೌಡನ ರುಜು
ವುರಂಗಾಪುರದ ಗೌಡ ರಂಗಂಣನ ರುಜುವಿಗೆ
ನರಸೆಗೌಡನ ಬರಹಾ ॥ ೦ ॥
ಹಾರೋಗೆರೆ ಲಿಂಗೆಗಲುಡನ ಸಾಕ್ಷಿ ಬರಹಾ ॥





ಅಗಸರ ಕಲ್ಲನ ರುಜುವು ॥ ೦ ॥
ತೆಲಸಿಗರ ಚೋರಗಿರಿ ರುಜುವು ॥ ೦ ॥
ತಳವಾರ ಸಂಜೀವನ ರುಜುವು ॥ ೦ ॥
ಬಾಲಗಲ ಸಂಜೀವನ ರುಜುವು ॥ ೦ ॥
ಯೀಶ್ವರ ಪೂಜಾರಿವಂತನರುಜುವು ॥ ೦ ॥
ಕುಂಬಾರ ಬೈರನರುಜುವು ॥ ೦ ॥
ಮಸೂತ್ತಿ ಬಾಹದರಖಾನನ ರುಜುವು ॥
ಚಲವಾದಿ ಬಸವನ ರುಜುವು ॥
ಮಾದಿಗ ದೊಡ್ಡ ಹನುಮನ ರುಜುವು ॥ ೦ ॥
ಮಾದಿಗ ತೋಟದ ಕದುರನ ರುಜುವು ॥
ಮಾದಿಗ ಚಿಕ್ಕಹನುಮನ ರುಜುವು ॥ ೦ ॥
ಯಿವರ ಸಂಮತದಿಂದ ಲೇಕಣಿಕೆ ಮು
ಟ್ಟಿದ ವಪ್ಪಿತ್ತಾ ॥ ೦ ॥

ಯಿವರ ಸಂಮ್ಮತದಿಂದ ಬರದಾತ ಬರಗೂರು ಶಾನುಭಾಗ ನಾರಣಪ್ಪನ ಬರಹದ ರುಜುವೂ ॥ ೦ ॥ ಸಂ ೧೮೬೧ ಶಪ್ಟಂಬರು ೨೫ = ವಿಕ್ರಮ ಸಂವತ್ಸರದ ದಸ್ತೈವಜು ಸಿಥಿಲವಾಗಿರುವದರಿಂದ ಯಿದರಲ್ಲಿ ಯಿದರಲ್ಲಿ ಬರೆದಿದೆ ॥ ಶಿದ್ದಾಚಾರ್‍ಯನ ಬರಹಾ ॥ = ॥

ಬ್ರಿಟೀಷ್ ಅರಸರ ಮುದ್ರೆ ಇದೆ
ಬ್ರಿಟೀಷ್ ರಾಜರ ಕಿರೀಟದ ಚಿನ್ಹೆಯನ್ನು ಬಿಡಿಸಿದ್ದಾರೆ

ಈ ಶಾಸನ ಓದಲು ಅಧ್ಯಯನಕ್ಕೆ ನೀಡಿದ ಬರಗೂರು ವಿಶ್ವಕರ್ಮ ಮನೆತನದವರಿಗೆ ನನ್ನ ವಂದನೆಗಳು.





# ಕರ್ನಾಟಕ ಇತಿಹಾಸ ಅಕಾದೆಮಿ (ರಿ).

ಬಿ.ಎಂ.ಶ್ರೀ ಪ್ರತಿಷ್ಠಾನ ಆವರಣ, ೩ನೇ ಮುಖ್ಯರಸ್ತೆ, ನರಸಿಂಹ ರಾಜಾ ಕಾಲೋನಿ,
ಬೆಂಗಳೂರು – ೫೬೦ ೦೧೯
karnatakaitihasaacademy25@gmail.com | www.karnatakaitihasaacademy.org

## ೨೦೧೮–೧೯ನೆಯ ಸಾಲಿನ ವಾರ್ಷಿಕ ವರದಿ

**ಸದಸ್ಯ ಬಂಧುಗಳೇ,**

ಕರ್ನಾಟಕ ಇತಿಹಾಸ ಅಕಾದೆಮಿಯ ೩೩ನೆಯ ವಾರ್ಷಿಕ ಸಮ್ಮೇಳನಕ್ಕಾಗಿ ನಾವೆಲ್ಲಾ ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕು ಹೊಂಬುಜದ ಶ್ರೀ ಪದ್ಮಾವತಿ ಸನ್ನಿಧಿಯ ಸಭಾಂಗಣದಲ್ಲಿ ಸಮಾವೇಶಗೊಂಡಿದ್ದೇವೆ. ಕಳೆದ ಮೂವತ್ಮೂರು ವರ್ಷಗಳಲ್ಲಿ ಅಕಾದೆಮಿಯ ಅಭ್ಯುದಯದಲ್ಲಿ ನಿರಂತರವಾಗಿ ಸಹಕರಿಸುತ್ತಾ ಬಂದಿರುವ ಎಲ್ಲರಿಗೂ ಅನಂತ ಧನ್ಯವಾದಗಳು. ಕಳೆದ ೩೨ ಸಮ್ಮೇಳನಗಳಿಗೆ ಆಶ್ರಯ ನೀಡಿ ಅಕಾದೆಮಿಯನ್ನು ಪೋಷಿಸಿರುವ ಎಲ್ಲಾ ಸಂಘ, ಸಂಸ್ಥೆ ಹಾಗೂ ಧರ್ಮಪೀಠಗಳಿಗೆ ಅಕಾದೆಮಿಯು ಕೃತಜ್ಞತೆಯನ್ನು ಸಲ್ಲಿಸುತ್ತದೆ.

**ಐತಿಹಾಸಿಕ ಪರಂಪರೆ ಉಳಿಸಿ–೨೦೧೮**

೨೦೧೮ನೇ ಸಾಲಿನ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮ ಉದ್ಘಾಟನಾ ಸಮಾರಂಭವನ್ನು ದಿನಾಂಕ ೨೬–೦೮–೨೦೧೮ರ ಭಾನುವಾರ ಬೆಳಗ್ಗೆ ಮಹಾನಂದೀಶ್ವರ ದೇವಾಲಯ ಆವರಣ, ದೇವದುರ್ಗ ರಸ್ತೆ, ಗಬ್ಬೂರು, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆಯಲ್ಲಿ, ಗಬ್ಬೂರಿನ ಡಾ. ಮಹೇಶ್ ಇವರ ಮುಂದಾಳತ್ವದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಈ ಕಾರ್ಯಕ್ರಮಕ್ಕೆ ಗಬ್ಬೂರು ಸುತ್ತ ಮುತ್ತಲಿನ ಪದವಿ, ಪದವಿಪೂರ್ವ ಮತ್ತು ಹೈಸ್ಕೂಲ್ ವಿದ್ಯಾರ್ಥಿಗಳು, ಉಪನ್ಯಾಸಕರು ಹಾಗೂ ಗಬ್ಬೂರು ಸುತ್ತಮುತ್ತಲಿನ ಇತಿಹಾಸ ಆಸಕ್ತರೂ ಆಗಮಿಸಿದ್ದರು. ಡಾ. ಮಹೇಶ್, ರಾಯಚೂರು ಪದವಿ ಕಾಲೇಜಿನ ಉಪನ್ಯಾಸಕರು ಇವರು ಕಾರ್ಯಕ್ರಮಕ್ಕೆ ಆಗಮಿಸಿದ ಸರ್ವರಿಗೂ ಸ್ವಾಗತ ಕೋರಿದರು.

ಕಾರ್ಯಕ್ರಮವು ವಿದ್ಯಾಜ್ಯೋತಿ ಎಜುಕೇಷನಲ್ ಟ್ರಸ್ಟ್ ಗಬ್ಬೂರು, ಇಲ್ಲಿಯ ವಿದ್ಯಾರ್ಥಿಗಳ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಪ್ರೊ.ಜಿ.ಕೆ.ದೇವರಾಜಸ್ವಾಮಿ, ಪ್ರಧಾನ ಕಾರ್ಯದರ್ಶಿ, ಕರ್ನಾಟಕ ಇತಿಹಾಸ ಅಕಾದೆಮಿ ಅವರು ಅಕಾದೆಮಿಯ ಧ್ಯೇಯೋದ್ದೇಶ ಹಾಗೂ ಮೂವತ್ತೆರಡು ವರ್ಷಗಳಿಂದ ಕರ್ನಾಟಕ ಇತಿಹಾಸ ಅಕಾದೆಮಿಯು ನಡೆದು ಬಂದ ದಾರಿಯನ್ನು ಸಂಕ್ಷೇಪವಾಗಿ ವಿವರಿಸಿದರು. 'ಪರಂಪರೆ ಉಳಿಸಿ' ಕಾರ್ಯಕ್ರಮದ ಅವಶ್ಯಕತೆ, ಮಹತ್ವ ಹಾಗು ಯುವ ಪೀಳಿಗೆಯ ಮುಂದಿನ ಕರ್ತವ್ಯವನ್ನು ಸಂಕ್ಷಿಪ್ತವಾಗಿ ತಿಳಿಸಿ,ಕಾರ್ಯಕ್ರಮಕ್ಕೆ ಆಗಮಿಸಿದ್ದ ವಿಶೇಷ ಆಹ್ವಾನಿತರಿಗೂ, ಉಪನ್ಯಾಸಕರಿಗೂ, ಇತಿಹಾಸ ಆಸಕ್ತರೆಲ್ಲರಿಗೂ ಅಕಾದೆಮಿಯ ಪರವಾಗಿ ಸ್ವಾಗತ ಕೋರಿದರು. ಡಾ.ಪದ್ಮಜಾ ದೇಸಾಯಿ, ಉಪನ್ಯಾಸಕರು ಇವರು ಕಾರ್ಯಕ್ರಮದ ನಿರೂಪಣೆ ಮಾಡಿದರು.

ರಾಯಚೂರು ಜಿಲ್ಲೆ ಸಿಂಧನೂರಿನ, ನಿವೃತ್ತ ಪ್ರಾಂಶುಪಾಲರಾದ ಪ್ರೊ.ಶಾಶ್ವತಸ್ವಾಮಿ ಮುಕ್ಕುಂದಿ ಮಠ ಇವರು ಜ್ಯೋತಿ ಬೆಳಗಿಸುವುದರ ಮೂಲಕ ಇತಿಹಾಸ ಪರಂಪರೆ ಉಳಿಸಿ – ೨೦೧೮ರ ಕಾರ್ಯಕ್ರಮಕ್ಕೆ ವಿದ್ಯುಕ್ತವಾಗಿ ಚಾಲನೆ ನೀಡಿದರು. ಸಭಿಕರನ್ನು ವಿದ್ಯಾರ್ಥಿಗಳನ್ನು ಉದ್ದೇಶಿಸಿ, ಐತಿಹಾಸಿಕ ಸ್ಮಾರಕಗಳ ಬಗ್ಗೆ ತೋರಬೇಕಾದ ಕಾಳಜಿ, ನಡೆಸಬೇಕಾದ ಅಧ್ಯಯನ, ಕೈಗೊಳ್ಳಬೇಕಾದ ಸಂರಕ್ಷಣೆ ಬಗ್ಗೆ ವಿವರಿಸಿದರು.ಜೊತೆಗೆ ಅಕಾದೆಮಿಯು ನಡೆಸುವ ಚಟುವಟಿಕೆಗಳನ್ನೂ ತಿಳಿಸಿದರು.

ಎಲ್.ವಿ.ಡಿ ಕಾಲೇಜು, ರಾಯಚೂರು ಇಲ್ಲಿನ ಇತಿಹಾಸ ವಿಭಾಗದ ಪ್ರೊ.ಚನ್ನಬಸವಯ್ಯ ಹಿರೇಮಠ ಇವರು ಐತಿಹಾಸಿಕ ಪರಂಪರೆ ಉಳಿಸಿ–೨೦೧೮ರ ಭಿತ್ತಿಪತ್ರ ಬಿಡುಗಡೆ ಮಾಡಿದರು.ಐತಿಹಾಸಿಕ ಪರಂಪರೆ ಕುರಿತಾಗಿ ತಿಳಿಸಿ, ಪ್ರತಿಯೊಬ್ಬರೂ ತಮ್ಮ ನಾಡಿನ ಸಂಸ್ಕೃತಿ, ಪರಂಪರೆಗಳ ಕುರಿತಾದಅರಿವನ್ನು ಹೊಂದುವುದರ ಅವಶ್ಯಕತೆ, ಐತಿಹಾಸಿಕ ಸ್ಮಾರಕಗಳ ರಕ್ಷಣೆಯ ಮಹತ್ವವನ್ನು ಕುರಿತಾಗಿ ತಿಳಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ನರಸಪ್ಪ ಭಂಡಾರಿ, ಅಧ್ಯಕ್ಷರು, ಪದವಿಪೂರ್ವ ಇತಿಹಾಸ ಉಪನ್ಯಾಸಕರ ಸಂಘ, ರಾಯಚೂರು ಜಿಲ್ಲೆ ಹಾಗೂ ಶ್ರೀ ಚನ್ನಪ್ಪ ಬೋದಿನಾಳ್, ಕಾರ್ಯದರ್ಶಿ, ವಿದ್ಯಾಜ್ಯೋತಿ ಎಜುಕೇಷನಲ್ ಡೆವಲಪ್‌ಮೆಂಟ್ ಟ್ರಸ್ಟ್, ಗಬ್ಬೂರು, ಇವರುಗಳು ಪರಂಪರೆ ಹಾಗೂ ಸಂಸ್ಕೃತಿ ಬಗ್ಗೆ ತಿಳಿಸಿದರಲ್ಲದೆ, ಸ್ಮಾರಕಗಳ ಮಹತ್ವ, ಅಧ್ಯಯನ ಮತ್ತು ಸಂರಕ್ಷಣೆಗಳ ಕುರಿತು ವಿದ್ಯಾರ್ಥಿಗಳು ಹಾಗು ಯುವಕರಿಗೆ ಮಾಹಿತಿ ನೀಡಿದರು.

ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಅಂಗವಾಗಿ, ವಿಶೇಷ ಸ್ಮಾರಕಗಳನ್ನು ರಕ್ಷಣೆ ಮಾಡಿದವರನ್ನು, ಅಧ್ಯಯನ ಹಾಗೂ ಸ್ಮಾರಕಗಳ ಬಗ್ಗೆ ಹೆಚ್ಚಿನ ಕೆಲಸ ಮಾಡಿದವರನ್ನು ಗೌರವಿಸಲಾಗುತ್ತದೆ. ಈ ವರ್ಷ ಶ್ರೀಯುತ ಅ.ದ.ಕಟ್ಟಿಮನಿ, ಹವ್ಯಾಸಿ ಸಂಶೋಧಕರು ಮತ್ತು ಪ್ರಾಚ್ಯವಸ್ತು ಸಂಗ್ರಹಕಾರರು ಗದಗ, ಇವರನ್ನು ಗೌರವಿಸಿ ಸನ್ಮಾನಿಸಲಾಯಿತು.ಅ.ದ.ಕಟ್ಟಿಮನಿ ಅವರು ಹವ್ಯಾಸಿ ಆಸಕ್ತರಾಗಿದ್ದು ಗದಗ ವಸ್ತುಸಂಗ್ರಹಾಲಯ, ಲಕ್ಕುಂಡಿಗಳಲ್ಲಿ ಸಾಕಷ್ಟು ಕೆಲಸ ಮಾಡಿ, ಪುರಾತತ್ವ ಇಲಾಖೆಯಿಂದ ಗುರುತಿಸಲ್ಪಟ್ಟಿದ್ದಾರೆ.ಶಾಸನ, ಶಿಲ್ಪ, ದೇವಾಲಯ ಮುಂತಾದ ವಸ್ತುಗಳ ಸಂರಕ್ಷಣೆ, ಜೋಡಣೆ, ಜೀರ್ಣೋದ್ಧಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.ಅವುಗಳ ಬಗ್ಗೆ ವಿಶೇಷ ಜ್ಞಾನವನ್ನೂ ಹೊಂದಿದ್ದಾರೆ.ಇವರನ್ನು ಗೌರವಿಸಿ ಸನ್ಮಾನಿಸಲಾಯಿತು.ಅ.ದ.ಕಟ್ಟಿಮನಿ ಅವರು ಮಾತನಾಡಿ, ತಮ್ಮ ಆಸಕ್ತಿಯಿಂದ ಈ ಕಾರ್ಯದಲ್ಲಿ ತೊಡಗಿಸಿಕೊಂಡ ಬಗ್ಗೆ, ಸ್ಮಾರಕಗಳ ಸಂರಕ್ಷಣೆ ಬಗ್ಗೆ ವಿವರಿಸಿದರು.ಅಲ್ಲದೆ, ಅಕಾದೆಮಿಗೆ ಕೃತಜ್ಞತೆ ಸಲ್ಲಿಸಿದರು.ಅತಿಥಿಗಳನ್ನು ಡಾ.ದೇವರಕೊಂಡಾರೆಡ್ಡಿ ಅವರು ಅಕಾದೆಮಿಯ ಪರವಾಗಿ ಸನ್ಮಾನಿಸಿದರು.

ಐತಿಹಾಸಿಕ ಪರಂಪರೆ ಉಳಿಸಿ ಉದ್ಘಾಟನಾ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಡಾ.ದೇವರಕೊಂಡಾರೆಡ್ಡಿ, ಅಧ್ಯಕ್ಷರು ಇತಿಹಾಸ ಅಕಾದೆಮಿ, ಬೆಂಗಳೂರು ಇವರು ವಹಿಸಿದ್ದರು.

ಉದ್ಘಾಟನಾ ಕಾರ್‍ಯಕ್ರಮದಲ್ಲಿ ಭೋಜನಾನಂತರ ಶಾಲಾ ವಿದ್ಯಾರ್ಥಿಗಳನ್ನು ಸ್ಥಳೀಯ ಗಬ್ಬೂರು ದೇವಾಲಯಕ್ಕೆ ಕರೆದುಕೊಂಡು ಹೋಗಲಾಯಿತು.ಡಾ. ದೇವರಕೊಂಡಾರೆಡ್ಡಿ ಅವರು, ದೇವಾಲಯದ ಇತಿಹಾಸ, ವಾಸ್ತು, ಶಿಲ್ಪಗಳ ಕುರಿತಾದ ಮಾಹಿತಿಯನ್ನು ಮಕ್ಕಳಿಗೆ ತಿಳಿಸಿಕೊಟ್ಟರು.

ಕಳೆದ ಸಾಲಿನಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ವತಿಯಿಂದ ಹರಿಹರದಲ್ಲಿ ಉದ್ಘಾಟನೆಗೊಂಡ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದಲ್ಲಿಅನಾವರಣಗೊಳಿಸಲಾದ ವಿಶೇಷ ಭಿತ್ತಿ ಪತ್ರವನ್ನು ಬಳಸಿಕೊಂಡು ರಾಜ್ಯಾದ್ಯಂತ ವಿವಿಧ ಸ್ಥಳಗಳಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳು ನಡೆದಿವೆ. ಆ ಕಾರ್ಯಕ್ರಮಗಳ ವಿವರವನ್ನಿಲ್ಲಿ ನೀಡಲಾಗಿದೆ.

**ದಿನಾಂಕ ೦೩-೧೧-೨೦೧೮, ಬಾಗೇಪಲ್ಲಿ**

ಬಾಗೇಪಲ್ಲಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಬೆಳಿಗ್ಗೆ ೧೧.೦೦ ಗಂಟೆಗೆ ವಿದ್ಯಾರ್ಥಿನಿಯರ ಪ್ರಾರ್ಥನೆಯೊಂದಿಗೆ ಪ್ರಾರಂಭಗೊಂಡ ಕಾರ್‍ಯಕ್ರಮಕ್ಕೆ ಗಣ್ಯರು ದೀಪ ಬೆಳಗುವುದರೊಂದಿಗೆ ಚಾಲನೆ ನೀಡಿದರು. ಇತಿಹಾಸ ವಿಭಾಗದ ಮುಖ್ಯಸ್ಥರಾದ ಪ್ರೊ. ಎಲ್.ಶ್ರೀನಿವಾಸ ಅವರು ವಿಶೇಷ ಆಹ್ವಾನಿತರನ್ನು, ಸಭಿಕರನ್ನು ಸ್ವಾಗತಿಸಿದರು. ಸರ್ಕಾರಿ ಕಾಲೇಜಿನ ವಿದ್ಯಾರ್ಥಿಗಳೊಂದಿಗೆ ಇತರೆ ಕಾಲೇಜಿನ ವಿದ್ಯಾರ್ಥಿಗಳೂ ಭಾಗವಹಿಸಿದ್ದ ಈ ಕಾರ್‍ಯಕ್ರಮದಲ್ಲಿಉಪಾಧ್ಯಾಯರಾದ ಡಾ.ಸಿ.ಎಸ್.ವೆಂಕಟರಾಮರೆಡ್ಡಿ, ಡಾ.ಪ್ರಭಾಕರ್ ಮುಂತಾದವರು ಉಪಸ್ಥಿತರಿದ್ದರು.





ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿದ್ದ, ಕಾಲೇಜು ಶಿಕ್ಷಣ ಇಲಾಖೆ ಜಂಟಿ ನಿರ್ದೇಶಕರಾಗಿದ್ದ ಪ್ರೊ. ಕೆ.ಆರ್.ನರಸಿಂಹನ್ ಅವರು ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು. ಶಾಸನಗಳು, ಸ್ಮಾರಕಗಳು, ನಾಣ್ಯಗಳ ಸಂರಕ್ಷಣೆ ಅಧ್ಯಯನಗಳ ಬಗ್ಗೆ ವಿವರಿಸಿದರು.ಶಾಸನ ತಜ್ಞ ಬಿ.ಎಲ್.ರೈಸ್ ಅವರ ಬಗ್ಗೆ ವಿವರಿಸಿದ್ದಲ್ಲದೆ, ವಿದ್ಯಾರ್ಥಿಗಳೊಂದಿಗೆ ಪ್ರಶ್ನೋತ್ತರಗಳ ಸಂವಾದ ನಡೆಸಿದರು.

ಅತಿಥಿಗಳಾಗಿ ಆಗಮಿಸಿದ್ದ ಡಾ. ಟಿ.ವಿ.ನಾಗರಾಜ್ ವಿಶ್ರಾಂತ ಇತಿಹಾಸ ಪ್ರಾಧ್ಯಾಪಕರು, ಇವರು ಶಾಸನಾಧಾರ ಹಾಗು ಇತಿಹಾಸದ ಹಿನ್ನೆಲೆಯಲ್ಲಿ ರಾಜಮಹಾರಾಜರು ಹಾಗೂ ಪಾಳೆಗಾರರ ಕಾಲದ ನೀರಾವರಿ ವ್ಯವಸ್ಥೆ ಬಗ್ಗೆ ವಿವರಿಸಿದರು. ಕೆರೆ

ಕುಂಟೆಗಳ ಮಹತ್ವಸಿಂಧೂ ನಾಗರೀಕತೆಯಿಂದ ಈ ವರೆಗೆ ನೀರಿನ ವ್ಯವಸ್ಥೆ ಮತ್ತು ಕಾಲುವೆ ಇತ್ಯಾದಿಗಳ ಬಗ್ಗೆ, ಸ್ಮಾರಕ, ಕೆರೆಕಟ್ಟೆಗಳ ಬಗ್ಗೆ ವಿವರಿಸಿದರು. ಸ್ಥಳನಾಮಗಳ ಬಗ್ಗೆ, ನಾಣ್ಯ ಇತ್ಯಾದಿಗಳ ಬಗ್ಗೆ ಅಧ್ಯಯನ, ಆಸಕ್ತಿ ಬೆಳೆಸಿಕೊಳ್ಳಲು ವಿದ್ಯಾರ್ಥಿಗಳಿಗೆ ತಿಳಿಸಿದರು.

**ದಿನಾಂಕ ೨೬.೦೨.೨೦೧೯, ಸಂತೆಬೆನ್ನೂರು**

ಸಂತೆ ಬೆನ್ನೂರು ಸರ್ಕಾರಿ ಪದವಿ ಕಾಲೇಜಿನಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಹಮ್ಮಿಕೊಂಡಿತ್ತು. ಅತಿಥಿಗಳಾಗಿ ಸಂತೆ ಬೆನ್ನೂರು ಸುಮತೀಂದ್ರ ನಾಡಿಗ್ ಅವರು ಆಗಮಿಸಿದ್ದು, ಪರಂಪರೆ, ಸ್ಮಾರಕಗಳ ಮಹತ್ವ ಅವುಗಳ ಅಧ್ಯಯನ ಕುರಿತು ತಿಳಿಸಿದ್ದರು.ಜೊತೆಗೆ ಸಂತೆಬೆನ್ನೂರು ನಾಯಕರ ಬಗ್ಗೆ ವಿದ್ಯಾರ್ಥಿಗಳಿಗೆ ವಿವರಿಸಿದರು.

**ದಿನಾಂಕ ೧೬.೦೩.೨೦೧೯, ಕೊಪ್ಪಳ**

ಸರ್ಕಾರಿ ಪ್ರಥಮದರ್ಜೆ ಮಹಿಳಾ ಕಾಲೇಜು, ಇಲ್ಲಿ ಇತಿಹಾಸ ಪರಂಪರೆ ಉಳಿಸಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಕುಮಾರಿ ಎಸ್.ಪಿ.ಮಂಜುಳಾ ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮವು ಪ್ರಾರಂಭವಾಯಿತು.ಕಾರ್ಯಕ್ರಮವನ್ನು ಡಾ.ಎಚ್.ಎಮ್ ಚಂದ್ರಶೇಖರಶಾಸ್ತ್ರಿ ಉದ್ಘಾಟಿಸಿದರು.ಇತಿಹಾಸ ಪರಂಪರೆ ಉಳಿಸಿ ಕಾರ್ಯಕ್ರಮದ ಮಹತ್ವ, ಸ್ಮಾರಕಗಳು, ನಾಣ್ಯ, ಕೆರೆಕಟ್ಟೆಗಳ ರಕ್ಷಣೆ ಹಾಗೂ ಇತಿಹಾಸದ ಅಧ್ಯಯನ ಮತ್ತು ಮಹತ್ವ ಕುರಿತು ವಿವರಿಸಿದರು. ವಿದ್ಯಾರ್ಥಿಗಳು ಆಸಕ್ತಿಯಿಂದ ಇಂತಹ ಕಾರ್ಯಗಳಲ್ಲಿ ತೊಡಗಿಸಿಕೊಂಡು, ಕಾರ್ಯಯೋಜಿಸಿ, ಸಂಸ್ಕೃತಿ ಪರಂಪರೆ ಉಳಿಸಲು ತೊಡಗಿಸಿಕೊಳ್ಳಬೇಕೆಂದು ತಿಳಿಸಿದರು.





ಡಾ.ಗಣಪತಿ ಕೆ ಲಮಾಣಿ ಪ್ರಾಂಶುಪಾಲರು, ಸರ್ಕಾರಿ ಪ್ರಥಮದರ್ಜೆ ಮಹಿಳಾ ಕಾಲೇಜು, ಕೊಪ್ಪಳ ಇವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

ಶ್ರೀಮತಿ ನಾಗರತ್ನ ಬ ತಮ್ಮಿನಾಳ ಇತಿಹಾಸ ಪ್ರಾಧ್ಯಾಪಕರು, ಇವರು ಎಲ್ಲಾ ಕಾರ್ಯಕ್ರಮದ ಸಂಯೋಜಕರಾಗಿದ್ದರು. ಕಾರ್ಯಕ್ರಮದಲ್ಲಿ ವಸ್ತುಪ್ರದರ್ಶನವನ್ನೂ ಏರ್ಪಡಿಸಿದ್ದರು. ವಿದ್ಯಾರ್ಥಿನಿಯರು ಮೇಲ್ವಿಚಾರಕರಾಗಿ ಕಾರ್ಯನಿರ್ವಹಿಸಿದರು. ಇದರೊಂದಿಗೆ 'ಕಿತ್ತೂರಿನ ಐತಿಹಾಸಿಕತೆ' ಎಂಬ ಐತಿಹಾಸಿಕ ನಾಟಕವನ್ನೂ ಒಳಗೊಂಡಂತೆ, ನೃತ್ಯ, ಏಕಪಾತ್ರಾಭಿನಯ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮವನ್ನೂ ಹಮ್ಮಿಕೊಳ್ಳಲಾಗಿತ್ತು.

**ದಿನಾಂಕ ೧೩.೭.೨೦೧೯, ಸಂತೆಬೆನ್ನೂರು**

ವಿಜಯ ಯುವಕ ಸಂಘ, ಸಂತೆಬೆನ್ನೂರು ಇವರ ವತಿಯಿಂದ ಕೆಂಗೇರಿ ಚಕ್ರಪಾಣಿಯವರ ದೇವಾಲಯಗಳ ಛಾಯಾ ಚಿತ್ರಪ್ರದರ್ಶನವನ್ನು ಏರ್ಪಡಿಸಲಾಗಿತ್ತು. ಚಿತ್ರಪ್ರದರ್ಶನದಲ್ಲಿ ಪ್ರಮುಖ ದೇವಾಲಯಗಳು, ಮೂಲ ಶಿಲ್ಪಗಳ ಛಾಯಾಚಿತ್ರಗಳೊಂದಿಗೆ, ವೀಕ್ಷಕರಿಗೆ ಕೆಂಗೇರಿ ಚಕ್ರಪಾಣಿ ಅವರು ಐತಿಹಾಸಿಕ ಮಾಹಿತಿ ನೀಡಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಸತ್ಯನಾರಾಯಣ ಅವರು ದೇವಾಲಯಗಳ ಮಹತ್ವ ಹಾಗೂ ಛಾಯಾಚಿತ್ರಗಳ ಮೂಲಕ ಐತಿಹಾಸಿಕ ವಿವರಣೆಯನ್ನು ನೀಡುವ ಮೂಲಕ ಜನಗಳಲ್ಲಿ ಜಾಗೃತಿ ಮೂಡಿಸುವ ಕಾರ್ಯವನ್ನು ಹೊಗಳಿದ್ದಲ್ಲದೆ, ವಿದ್ಯಾರ್ಥಿಗಳು ಇವುಗಳ ಬಗ್ಗೆ ಆಸಕ್ತಿವಹಿಸಬೇಕೆಂದು ಕರೆ ನೀಡಿದರು.

**ದಿನಾಂಕ ೧೬.೦೭.೨೦೧೯, ಸಂತೆಬೆನ್ನೂರು**

ವಿಜಯ ಪ್ರೌಡಶಾಲೆ ಸಂತೆಬೆನ್ನೂರು ಇಲ್ಲಿ ಕೆ.ಸಿ.ನಾಗರಾಜ್ ಅವರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮ ಹಮ್ಮಿಕೊಂಡಿದ್ದು, ಅತಿಥಿಗಳಾದ, ಸುಮತೀಂದ್ರ ನಾಡಿಗ್ ಸಂತೆಬೆನ್ನೂರು ಇವರು ಐತಿಹಾಸಿಕ ಪರಂಪರೆಯ ಮಹತ್ವ ಇತಿಹಾಸ ರಚನೆ, ವಂಶವೃಕ್ಷಗಳ ರಚನೆ ಅವುಗಳ ಮಹತ್ವ ಹಾಗೂ ಇತಿಹಸ ಅಧ್ಯಯನದ ಮಹತ್ವವನ್ನು ಕುರಿತು ವಿವರಿಸಿದರು.

**ದಿನಾಂಕ : ೦೫-೦೯-೨೦೧೯ ಬಾಗೇಪಲ್ಲಿ**





ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿಯಲ್ಲಿ ದಿನಾಂಕ : ೫-೯-೨೦೧೯ ಗುರುವಾರ ಬೆಳಿಗ್ಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಸಭಾಂಗಣದಲ್ಲಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ವಿದ್ಯಾರ್ಥಿಗಳ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗಿ ಇತಿಹಾಸ ವಿಭಾಗದ ಮುಖ್ಯಸ್ಥ ಪ್ರೊ. ಎಲ್. ಶ್ರೀನಿವಾಸ ಸ್ವಾಗತಿಸಿದರು. ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ. ಕೆ.ಎಂ. ನಯಾಜ್ ಅಹಮದ್ ಪರಂಪರೆ ಉಳಿಸಿ ಹಾಗೂ ಚಿಕ್ಕ ಬಳ್ಳಾಪುರ ಜಿಲ್ಲೆ ಇತಿಹಾಸ ಅಕಾದೆಮಿಯ ಉದ್ಘಾಟನೆ ಬಗ್ಗೆ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಉಪನ್ಯಾಸರಾದ ಡಾ. ಪ್ರಭಾಕರ್ ನ್ಯಾಷನಲ್ ಕಾಲೇಜು ಉಪನ್ಯಾಸಕರಾದ ಪ್ರೊ. ಕೆ.ಟಿ. ವೀರಾಂಜನೇಯ ಗ್ರಂಥಪಾಲಕ ಜಯರಾಮರೆಡ್ಡಿ ವಕೀಲರಾದ ಶ್ರೀ ಎ.ಜಿ. ಸುಧಾಕರ್ ಹಾಗೂ ಅನಂತಪುರ ಪುರಾತತ್ವ ಇಲಾಖೆಯ ನಾಗರಾಜ್ ಉಪಸ್ಥಿತರಿದ್ದರು. ಸುತ್ತಮುತ್ತಲಿನ ಕಾಲೇಜು ವಿದ್ಯಾರ್ಥಿಗಳು ಹಾಜರಿದ್ದರು. ಡಾ. ಸಿ.ಎಸ್. ವೆಂಕಟರಾಮರೆಡ್ಡಿ ನಿರೂಪಣೆ ಮಾಡಿದರು.

ಡಾ. ಎಸ್.ವಿ. ವೆಂಕಟೇಶಯ್ಯನವರು ವೀರಗಲ್ಲಿಗೆ ಹೂ ಮಾಲೆಹಾಕುವ ಮೂಲಕ ಕಾರ್ಯಕ್ರಮ ಉದ್ಘಾಟನೆಯಾಯಿತು. ಅತಿಥಿಗಳಾದ, ಪುರಾತತ್ವ ಇಲಾಖೆ ದಕ್ಷಿಣ ಭಾರತದ ಪ್ರಾಂತಿಯ ನಿರ್ದೇಶಕ (ನಿ) ನಂತರ ಮಾತನಾಡಿ ಪರಂಪರೆ ಉಳಿಸಿ ಕಾರ್ಯಕ್ರಮದ ಬಗ್ಗೆ ತಿಳಿಸುತ್ತಾ, ಕೋಟೆ, ಕೆರೆ, ಕಟ್ಟಡ, ಶಾಸನ, ಸ್ಮಾರಕ ಹಸ್ತಪ್ರತಿ ಮುಂತಾದ ಪ್ರಾಚೀನ ವಸ್ತುಗಳ ಸಂರಕ್ಷಣೆ ಸಂಗ್ರಹಣೆ, ಅಧ್ಯಯನ ಮಾಡಬೇಕಾದ ವಿಷಯವನ್ನು ಸಭೆಯಲ್ಲಿ ತಿಳಿಸಿದರು.

ನ್ಯಾಷನಲ್ ಕಾಲೇಜು ನಿವೃತ್ತ ಪ್ರಾಧ್ಯಾಪಕರಾದ ಶ್ರೀ ಆರ್.ಎಸ್. ವೆಂಕಟೇಶಯ್ಯ ಅವರು ಪರಂಪರೆ ಕಾರ್ಯಕ್ರಮದ ಬಗ್ಗೆ ತಿಳಿಸಿದರು. ಹಾಗೂ ಶ್ರೀ ಬಿ.ಆರ್. ಕೃಷ್ಣ ಅವರು ಅಕಾದೆಮಿಯ ಸ್ಥಳೀಯ ಘಟಕದ ಉದ್ಘಾಟನೆ ಬಗ್ಗೆ ವಹಿಸಿದ ಶ್ರಮವನ್ನು ತಿಳಿಸಿದರು. ಕಾರ್ಯಕ್ರಮದ ಅಧ್ಯಕ್ಷರಾದ ಪ್ರಾಂಶುಪಾಲ ಪ್ರೊ.॥ ವೈ ನಾರಾಯಣ ಅವರು ಪರಂಪರೆ ಮುಂದಿನ ಪೀಳಿಗೆಗೆ ಕೊಡುಗೆ ನೀಡಬೇಕಾದ ಕರ್ತವ್ಯ ನಮ್ಮೆಲ್ಲರ ಹೊಣೆ ಎಂದು ತಿಳಿಸಿದರು. ಕಾರ್ಯಕ್ರಮವು ಶ್ರೀ ಬಿ.ಆರ್. ಕೃಷ್ಣ ಅವರ ಶ್ರಮದ ಫಲವಾಗಿ ಯಶಸ್ವಿಯಾಯಿತು.

**ದಿನಾಂಕ : ೮-೦೯-೨೦೧೯ ಕಾಸರಗೋಡು**



ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ, ಕಾಸರಗೋಡು ವತಿಯಿಂದ, ಕರ್ನಾಟಕಇತಿಹಾಸಅಕಾಡೆಮಿ ಸಹಯೋಗದಲ್ಲಿ 'ಕಾಸರಗೋಡುಜಿಲ್ಲಾ ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮವನ್ನು ದೊಡ್ಡ ಮಟ್ಟದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಸಂದರ್ಭದಲ್ಲಿ ಅಕಾದೆಮಿಯಿಂದ ಬಿಡುಗಡೆ ಗೊಳಿಸಿದ ಭಿತ್ತಿಪತ್ರವನ್ನು ಕಾರ್ಯಕರ್ತರು ವಿವಿಧ ಪಾರಂಪರಿಕ ತಾಣಗಳಲ್ಲಿ ಪ್ರದರ್ಶಿಸುವುದರ ಮೂಲಕ ಸಾಮಾನ್ಯರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ಕೈಗೊಂಡರು.

**ದಿನಾಂಕ : ೧೧-೦೯-೨೦೧೯ಇಂದ ೨೪-೦೯-೨೦೧೯ ವರೆಗೆ, ರೂರಲ್ ಪದವಿ ಕಾಲೇಜು, ಕನಕಪುರ, ಸರ್ಕಾರೀ ಪ್ರಥಮದರ್ಜೆಕಾಲೇಜು, ಚನ್ನಪಟ್ಟಣ**

ಕನ್ನಡ ಸಾಹಿತ್ಯ ಪರಿಷತ್ತು, ರಾಮನಗರಜಿಲ್ಲೆ, ಸಹೃದಯ ಪ್ರತಿಷ್ಠಾನ, ಮಾಗಡಿ ಇವರು ಕರ್ನಾಟಕ ಇತಿಹಾಸ ಅಕಾಡೆಮಿಯ ಸಹಯೋಗದಲ್ಲಿ ಜಿಲ್ಲೆಯ ವಿವಿದೆಡೆ ಪರಂಪರೆ ಉಳಿಸಿ ಕಾರ್ಯಕ್ರಮ ಹಮ್ಮಿಕೊಂಡಿದ್ದರು. ದಿನಾಂಕ ೧೧ ರಂದು ಕನಕಪುರದ ರೂರಲ್ ಕಾಲೇಜಿನಲ್ಲಿ ನಡೆಸಲಾದ ಈ ಕಾರ್ಯಕ್ರಮವನ್ನು ಡಾ. ಎಸ್ ಕೆ ಅರುಣಿ, ಪ್ರಾಂತೀಯ ನಿರ್ದೇಶಕರು, ICHR, ಬೆಂಗಳೂರು ಇವರು ಉದ್ಘಾಟಿಸಿದರು. ಶ್ರೀ ರಮೇಶ್, ಗೌರವ ಕಾರ್ಯದರ್ಶಿಗಳು, ಗ್ರಾಮ ವಿದ್ಯಾ ಪ್ರಚಾರಕ ಸಂಘ, ಕನಕಪುರಅವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.ಶ್ರೀ ಕೆ. ಬಿ. ನಾಗರಾಜು, ಗೌರವ ಅಧ್ಯಕ್ಷರು, ಗ್ರಾಮ ವಿದ್ಯಾ ಪ್ರಚಾರಕ ಸಂಘ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಕನಕಪುರ ರೂರಲ್ ಕಾಲೇಜಿನ ಪ್ರಾಂಶುಪಾಲರಾದ ಎಂ ಗೋವಿಂದಪ್ಪಅವರ ಉಪಸ್ಥಿತಿಯಲ್ಲಿ ಉದ್ಘಾಟನಾ ಕಾರ್ಯಕ್ರಮ ಯಶಸ್ವಿಯಾಗಿ ನೆರವೇರಿತು.

ಐತಿಹಾಸಿಕ ಪರಂಪರೆ ಉಳಿಸಿ ಎಲ್ಲಾ ಕಾರ್ಯಕ್ರಮಗಳ ರೂವಾರಿಗಳಾಗಿ ಡಾ. ಮುನಿರಾಜಪ್ಪ ಅಧ್ಯಕ್ಷರು ಸಹೃದಯ ಪ್ರತಿಷ್ಠಾನ ಮಾಗಡಿ, ಶ್ರೀ ಸಿ.ಲಿಂ. ನಾಗರಾಜು ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ ರಾಮನಗರ ಜಿಲ್ಲೆ. ಇವರ ಸಹಯೋಗದೊಂದಿಗೆ ಶ್ರೀ ಎಲ್ಲೇಗೌಡ ಬೇಸಗದಹಳ್ಳಿ ಸದಸ್ಯರು, ಕರ್ನಾಟಕ ಇತಿಹಾಸ ಅಕಾದೆಮಿ ಇವರುಗಳು ಕಾರ್ಯಕ್ರಮವನ್ನು ಯೋಜಿಸಿದ್ದಾರೆ.

## ಉಪನ್ಯಾಸ ಕಾರ್ಯಕ್ರಮ

| ದಿನಾಂಕ | ಸ್ಥಳ | ಅಧ್ಯಕ್ಷತೆ | ಅತಿಥಿ ಉಪನ್ಯಾಸಕರು |
|---|---|---|---|
| ೧೨-೦೯-೨೦೧೯ | ಸ.ಪ.ಪೂ ಕಾಲೇಜ್ ಕನಕಪುರ | ಶ್ರೀ ನಾಗರಾಜು ಪ್ರಾಂಶುಪಾಲರು | ಪ್ರೊ. ಎಸ್.ಪಿ.ರಮೇಶ್ ಮುಖ್ಯಸ್ಥರು ಇತಿಹಾಸವಿಭಾಗ ರೂರಲ್ ಕಾಲೇಜು |
| ೧೩-೦೯-೨೦೧೯ | ಶ್ರೀ ನಿರ್ವಾಣಸ್ವಾಮಿ ಪ್ರೌಢಶಾಲೆ ದೇಗುಲಮಠ ಕನಕಪುರ | ಶ್ರೀ ರುದ್ರೇಶಯ್ಯ ಮುಖ್ಯೋಪಾಧ್ಯಾಯರು | ಲೆಫ್ಟಿನೆಂಟ್ ವಿಜಯೇಂದ್ರ ರೂರಲ್ ಕಾಲೇಜು |
| ೧೩-೦೯-೨೦೧೯ | ಮಹಿಳಾ ಸರ್ಕಾರಿ ಕಾಲೇಜು, ಮದ್ದೂರು | ಡಾ॥ ಹೆಚ್. ಕೃಷ್ಣೇಗೌಡ ಮುಖ್ಯಸ್ಥರು, ಇತಿಹಾಸ ವಿಭಾಗ, ಸ.ಮ.ಕಾ ಮದ್ದೂರು | ಡಾ॥ ಮುನಿರಾಜಪ್ಪ ಇತಿಹಾಸ ಪ್ರಾಧ್ಯಾಪಕರು |
| ೧೪-೦೯-೨೦೧೯ | ಮಹಿಳಾ ಸರ್ಕಾರಿ ಕಾಲೇಜು ಮತ್ತು ಸ್ನಾತಕೋತ್ತರ ಅಧ್ಯಯನ, ಮದ್ದೂರು | ಪ್ರೊ. ನಟರಾಜು ಸಿ. ಪ್ರಾಂಶುಪಾಲರು | ಡಾ॥ ಚಿಕ್ಕಚನ್ನಯ್ಯ ಸ.ಪ್ರ.ದ. ಕಾಲೇಜು. ಚನ್ನಪಟ್ಟಣ |
| ೧೪-೦೯-೨೦೧೯ | ಸ.ಪ.ಪೂ.ಕಾಲೇಜು ಕನಕಪುರ | ಪ್ರೊ.ವೃಷಬೇಂದ್ರಮೂರ್ತಿ ಪ್ರಾಂಶುಪಾಲರು | ಡಾ॥ ಹೆಚ್.ಜಿ. ಪಾರ್ಥಸಾರಥಿ ರೂರಲ್ ಕಾಲೇಜು |
| ೨೦-೦೯-೨೦೧೯ | ಸ.ಪ್ರ.ದ. ಕಾಲೇಜು ಅಗಲಕೋಟೆ | ಶ್ರೀ ರಮೇಶ್ ಹೆಚ್.ಸಿ. ಪ್ರಭಾರಿ ಪ್ರಾಂಶುಪಾಲರು | ಪ್ರೊ.ತಿಮ್ಮಹನುಮಯ್ಯ ಸ.ಪ್ರ.ದ.ಕಾ. ಮಾಗಡಿ |
| ೨೧-೦೯-೨೦೧೯ | ಶ್ರೀ ಹೆಚ್.ಜಿ. ಚನ್ನಪ್ಪ ಪ.ಪೂ.ಕಾ. ಚಕ್ರಭಾವಿ-ಹುಲೀಕಟ್ಟೆ | ಶ್ರೀ ಗೋವಿಂದರಾಜು ಎಂ.ಸಿ. ಪ್ರಾಂಶುಪಾಲರು | ಡಾ॥ ಮುನಿರಾಜಪ್ಪ ಇತಿಹಾಸ ಪ್ರಾಧ್ಯಾಪಕರು |
| ೨೧-೦೯-೨೦೧೯ | ಸ.ಪ್ರ.ದ. ಕಾಲೇಜು ಮಾಗಡಿ | ಶ್ರೀ ಹೆಚ್.ಆರ್.ಮೂರ್ತಿ ಪ್ರಾಂಶುಪಾಲರು | ಶ್ರೀ ಚಂದ್ರ ಮಾಗಡಿ ಸಾಹಿತಿಗಳು |

| | | | |
|---|---|---|---|
| ೨೧.೦೯-೨೦೧೯ | ಸ.ಪ್ರ.ದ. ಕಾಲೇಜು ಇಗ್ಗಲೂರು | ಶ್ರೀ ರವಿಚಂದ್ರ ಪ್ರಾಂಶುಪಾಲರು | ಶ್ರೀ ಕನಕಪ್ಪ ಹೆಚ್.ಡಿ. ಮುಖ್ಯೋ ಪಾಧ್ಯಾಯರು |
| ೨೩-೦೯-೨೦೧೯ | ಚನ್ನಪಟ್ಟಣ ಸರ್ಕಾರಿ ಪ್ರ.ದ.ಕಾಲೇಜು ವಿದ್ಯಾರ್ಥಿಗಳಿಂದ ಮುಂಕುಂದ ಐತಿಹಾಸಿಕ ಸ್ಥಳದ ಕ್ಷೇತ್ರಾಧ್ಯಯನ ಮತ್ತು ಪರಂಪರೆ ಉಳಿಸಿ ಜಾಗೃತಿ ಜಾತ | ಶ್ರೀ ರುದ್ರೇಶ್ ಪ್ರಜಾವಾಣಿ ವರದಿಗಾರರು | ಇತಿಹಾಸ ವಿಭಾಗದ ಡಾ॥ ಚಿಕ್ಕಚನ್ನಯ್ಯ ಸ.ಪ್ರ.ದ ಕಾಲೇಜು, ಚನ್ನಪಟ್ಟಣ |

ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಸಮರೋಪ ಸಮಾರಂಭವು ದಿನಾಂಕ : ೨೪-೦೯-೨೦೧೯ ಮಂಗಳವಾರ ಸರಕಾರಿ ಪ್ರ.ದ. ಕಾಲೇಜು ಚನ್ನಪಟ್ಟದಲ್ಲಿ ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕಾಲೇಜಿನ ಪ್ರಾಂಶುಪಾಲರಾದ ಡಾ. ವಿ. ವೆಂಕಟೇಶ್ ಅವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ .ಸಿ. ಲಿಂ. ನಾಗರಾಜು ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ತು. ರಾಮನಗರ ಜಿಲ್ಲೆ. ಮತ್ತು ಡಾ.ಹೆಚ್. ಕೃಷ್ಣೇಗೌಡ ಮುಖ್ಯಸ್ಥರು ಇತಿಹಾಸ ವಿಭಾಗ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಇವರು ನಾಣ್ಯ ಹಸ್ತಪ್ರತಿ ಇವುಗಳ ಅಧ್ಯಯನ ಹಾಗೂ ರಕ್ಷಣೆಗಳು ನಮ್ಮ ನಿಮ್ಮೆಲ್ಲರ ಜವಾಬ್ದಾರಿ ಎಂಬುದನ್ನು ಅತಿಥಿಗಳು ವಿದ್ಯಾರ್ಥಿಗಳನ್ನು ಕುರಿತು ತಿಳಿಸಿದರು. ಒಟ್ಟೂ ಎಲ್ಲಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಪ್ರಾಂಶುಪಾಲರು ಅತಿಥಿಗಳಿಗೆ, ಉನ್ಯಾಸಕರುಗಳಿಗೆಲ್ಲಾ ಹಾಗೂ ಭಾಗವಹಿಸಿದವರಿಗೆ ವಂದನೆ ಸಲ್ಲಿಸಲಾಯಿತು.

**ದಿನಾಂಕ : ೧೩-೦೯-೨೦೧೯ ನಾಗಮಂಗಲ**



ಕರ್ನಾಟಕ ಇತಿಹಾಸ ಅಕಾಡೆಮಿಯ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಅಂಗವಾಗಿ ಶ್ರೀ ಮೊಹಮದ್‌ಕಲೀಮುಲ್ಲ ಇವರು, ನಾಗಮಂಗಲ ತಾಲ್ಲೂಕಿನ ಬೋಗಾದಿ ಗ್ರಾಮದ ಪ್ರೌಢಶಾಲೆಯ ಮಕ್ಕಳಿಗೆ ಸ್ಥಳೀಯ ಇತಿಹಾಸವನ್ನು ಕುರಿತು ತಿಳಿಸಿ, ಸ್ಮಾರಕಗಳು ಹೇಗೆ ಹಾಳಾಗುತ್ತಿವೆ ಅವುಗಳನ್ನು ಸಂರಕ್ಷಣೆ ಮಾಡುವುದರಲ್ಲಿ ಸಮಾಜದ ಹೊಣೆ ಏನು ಎನ್ನುವುದನ್ನು ಮನವರಿಕೆ ಮಾಡಿಸಿದರು. ಅದೇ ಗ್ರಾಮದಲ್ಲಿರುವ ಒಂದು ಪಾಳು ಜೈನಬಸದಿ, ಎರಡು ಶಾಸನಗಳು ಹಾಗು ವೀರಗಲ್ಲುಗಳ ಬಗ್ಗೆ ಸ್ಥಳಕ್ಕೆ ಕರೆದುಕೊಂಡು ಹೋಗಿ, ಶಾಸನಗಳ ಮತ್ತು ವೀರಗಲ್ಲುಗಳ ಸ್ವರೂಪ ಹಾಗೂ ರಚನೆಯ ವಿವರಗಳನ್ನು ನೀಡಿದರು.

**ದಿನಾಂಕ : ೧೬-೦೯-೨೦೧೯ ನಾಗಮಂಗಲ**

ನಾಗಮಂಗಲದ ಹೆಣ್ಣುಮಕ್ಕಳ ಪದವಿಪೂರ್ವಕಾಲೇಜಿನ ದಿನಾಂಕ ೨೦೧೯ ಸೆಪ್ಟೆಂಬರ್ ೧೬ ರಂದು ಪರಂಪರೆಉಳಿಸಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಮಕ್ಕಳಿಗೆ ಸ್ಥಳೀಯ ಇತಿಹಾಸ ಮತ್ತು ಸ್ಮಾರಕಗಳ ಸಂರಕ್ಷಣೆ ಬಗ್ಗೆ, ದೊಡ್ಡ ಜಟಕಗ್ರಾಮದದೇವಾಲಯದ ಇತಿಹಾಸ ಹಾಗೂ ಅಲ್ಲಿನ ಶಾಸನಗಳಿಗೆ ಒದಗಿರುವ ದುಸ್ಥಿತಿಯ ಬಗ್ಗೆ ಶ್ರೀಮೊಹಮದ್ ಕಲೀಮುಲ್ಲ ಇವರು ಮಾಹಿತಿ ನೀಡಿ, ಸಂರಕ್ಷಣೆಯ ಮಹತ್ವವನ್ನು ತಿಳಿಸಿಕೊಟ್ಟರು.

**ದಿನಾಂಕ: ೧೬-೦೯-೨೦೧೯, ಮಂಚೇನಹಳ್ಳಿ ಗೌರಿಬಿದನೂರು**





ಮಂಚೇನಹಳ್ಳಿಯ ಸರ್ಕಾರಿ ಪದವಿಪೂರ್ವ ಕಾಲೇಜಿ ನಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ಪ್ರಮುಖ ಕಾರ್ಯಕ್ರಮವಾದ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮವನ್ನು ಶ್ರೀ ಕೆ ಧನಪಾಲ್ ಹವ್ಯಾಸಿ ಇತಿಹಾಸ ಶಂಶೋಧಕ ಅವರ ನೇತೃತ್ವದಲ್ಲಿ ಹಮ್ಮಿಕೊಳ್ಳಲಾಗಿತ್ತು. ಕಾಲೇಜು ವಿದ್ಯಾರ್ಥಿಗಳಿಗೆ ಶಾಸನಗಳ ಮಹತ್ವ ಮತ್ತು ಉಪನ್ಯಾಸಗಳನ್ನು ಪ್ರಾತ್ಯಕ್ಷಿಕೆಯ ಮೂಲಕ ತಿಳಿಸಿಕೊಟ್ಟರು. ಕಾಲೇಜಿನ ಪ್ರಾಂಶುಪಾಲರು, ಉಪನ್ಯಾಸಕರು, ಶ್ರೀ ಸಾ.ನ. ಲಕ್ಷ್ಮಣಗೌಡರು, ಶ್ರೀ ರತ್ನವರ್ಮ ಅವರುಗಳು ಉಪಸ್ಥಿತರಿದ್ದರು. ಶ್ರೀಮತಿ ಎಸ್.ವೈ.ನಿರ್ಮಲಾ ಹವ್ಯಾಸಿ ಇತಿಹಾಸ ಸಂಶೋಧಕಿ ಅವರು ಸ್ಮಾರಕಗಳ ರಕ್ಷಣೆಯ ಮಹತ್ವ ಕುರಿತು ಉಪನ್ಯಾಸ ನೀಡಿದರು. ಕೆಲವು ವಿದ್ಯಾರ್ಥಿಗಳು ತಮ್ಮ ಊರಿನಲ್ಲಿ ಕಂಡ ಶಾಸನಗಳ ಬಗ್ಗೆ ತಮ್ಮ ಅನಿಸಿಕೆಗಳನ್ನು ಹಂಚಿಕೊಳ್ಳುವ ಮೂಲಕ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಕೆ.ಆರ್ ನರಸಿಂಹನ್ ಅವರ ಮಾರ್ಗದರ್ಶನದಲ್ಲಿ ಕಾರ್ಯಕ್ರಮ ಯಶಸ್ವಿಯಾಗಿ ನಡೆಯಿತು.

**ದಿನಾಂಕ : ೧೮-೦೯-೨೦೧೯ ಮಂಗಳೂರು**

ಮಂಗಳೂರು ವಿಶ್ವವಿದ್ಯಾನಿಲಯಕಾಲೇಜು, ಇವರು ಕರ್ನಾಟಕ ಇತಿಹಾಸ ಅಕಾಡೆಮಿ ಸಹಯೋಗದೊಂದಿಗೆ, ಸ್ನಾತಕ ಮತ್ತು ಸ್ನಾತಕೋತ್ತರಇತಿಹಾಸ ಮತ್ತು ಪುರಾತತ್ವ ವಿಭಾಗದ ವತಿಯಿಂದಇತಿಹಾಸ ಪರಂಪರೆ ಉಳಿಸಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಕಾಲೇಜಿನ ರವೀಂದ್ರ ಕಲಾಭವನದಲ್ಲಿ ಏರ್ಪಡಿಸಲಾಗಿದ್ದ ಈ ಕಾರ್ಯಕ್ರಮದಲ್ಲಿ ಪ್ರೊ. ಪಿ ಸುಬ್ರಹ್ಮಣ್ಯಯಡಪಡಿತ್ತಾಯ, ಮಾನ್ಯ ಕುಲಪತಿಗಳು, ಮಂಗಳೂರು ವಿಶ್ವವಿದ್ಯಾನಿಲಯ, ಇವರು ಅಧ್ಯಕ್ಷತೆ ವಹಿಸಿದ್ದರು. ಡಾ. ಪುಂಡಿಕಾಯ್ ಗಣಪತಿ ಭಟ್, ಇತಿಹಾಸ ಸಂಶೋಧಕರು ಇವರು ಮುಖ್ಯ ಅತಿಥಿಗಳಾಗಿ ಆಹ್ವಾನಿತರಾಗಿದ್ದರು.ಡಾ.ಉದಯಕುಮಾರ್ ಎಂ ಎ, ಪ್ರಾಂಶುಪಾಲರು, ವಿವಿ ಕಾಲೇಜುಇವರ ಉಪಸ್ಥಿತಿಯಲ್ಲಿ ಕಾರ್ಯಕ್ರಮ ನಡೆಯಿತು.

ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯಿಂದಾಗಿ ನಮ್ಮಇತಿಹಾಸ ಪರಂಪರೆ ನಶಿಸುವ ಭೀತಿಯಲ್ಲಿದೆ. ಸಂಸ್ಕೃತಿ ಮರೆಯಾಗಿ ವಿಕೃತಿ ಮೆರೆಯುತ್ತಿದೆ, ಇದನ್ನು ತಡೆಯಲು ವಿದ್ಯಾರ್ಥಿಗಳು ನಮ್ಮಇತಿಹಾಸದ ಬಗ್ಗೆ ಆಸಕ್ತಿ ವಹಿಸಿ ಸಮಾಜದಲ್ಲಿ ಜಾಗೃತಿ ಮೂಡಿಸುವಕಾರ್ಯಕ್ಕೆ ಮುಂದಾಗಬೇಕು ಎಂದು ಇತಿಹಾಸ ಸಂಶೋಧಕ ಗಣಪಯ್ಯಭಟ್ಟ ಅವರು ಹೇಳಿದರು.



ವಿದ್ಯಾರ್ಥಿಗಳಿಗೆ ದೇಶ ವಿದೇಶದಇತಿಹಾಸದ ಬಗ್ಗೆ ಪಾಠ ಮಾಡುತ್ತೇವೆ, ಆದರೆ ಸ್ಥಳೀಯ ಇತಿಹಾಸವನ್ನು ವಿದ್ಯಾರ್ಥಿಗಳಿಗೆ ಕಲಿಸುವ ವ್ಯವಸ್ಥೆ ಇಲ್ಲ. ದೇವಸ್ಥಾನ ಅರಮನೆ ಶಾಸನ ಎಲ್ಲವೂ ನಮ್ಮ ಪರಂಪರೆಯ ಪ್ರತೀಕವಾಗಿದೆ. ನಮ್ಮ ದೇವಾಲಯಗಳಲ್ಲಿ ಅಮೂಲ್ಯ ಶಾಸನಗಳಿವೆ ಆದರೆ ಈಗ ಜೀರ್ಣೋದ್ಧಾರದ ಹೆಸರಿನಲ್ಲಿ ಅವುಗಳ ಮೂಲ ಸ್ವರೂಪ ಬದಲಾಯಿಸುತ್ತಿದ್ದಾರೆ. ಇದು ಸರಿಯಲ್ಲ ನಮ್ಮದೇ ವಾಸ್ತು ಶೈಲಿಯಲ್ಲಿ ದೇವಾಲಯಗಳ ನಿರ್ಮಾಣವಾಗಬೇಕುಎಂದರು.ಮಂಗಳೂರು ವಿಶ್ವವಿದ್ಯಾನಿಲಯದ ಕುಲಪತಿ ಪ್ರೊ. ಪಿ.ಎಸ್‌ಯಡಪಡಿತ್ತಾಯಅವರು ಇತಿಹಾಸ ವಿಭಾಗಗಳು ಕೇವಲ ಇತಿಹಾಸ ಪಾಠವನ್ನು ಮಾಡುವುದಕ್ಕೆ ಸೀಮಿತವಾಗದೆ, ಕ್ಷೇತ್ರ ಕಾರ್ಯಗಳನ್ನು ಕೈಗೊಂಡು ವಿದ್ಯಾರ್ಥಿಗಳಿಗೆ ಇತಿಹಾಸದಅಧ್ಯಯನದ ಆಳವನ್ನು ತಿಳಿಸಿಕೊಡಬೇಕು ಎಂದರು. ಅಂತರಕಾಲೇಜುರಸಪ್ರಶ್ನೆ ಮತ್ತು ಪರಂಪರೆಯ ಉಳಿವಿನ ಅವಶ್ಯಕತೆ ಮತ್ತು ಅನಿವಾರ್ಯತೆಕುರಿತಂತೆ ನಡೆಸಿದ್ದ ಪ್ರಬಂಧ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಹುಮಾನವನ್ನು ವಿತರಿಸಲಾಯಿತು.ಇತಿಹಾಸ ಪರಂಪರೆ ಉಳಿಸಿ ಕಾರ್ಯಕ್ರಮದ ಅಂಗವಾಗಿ ಏರ್ಪಡಿಸಿದ ಚಿತ್ರಕಲಾ ಪ್ರದರ್ಶನವನ್ನುವಿವಿ ಕುಲಪತಿ ಉದ್ಘಾಟಿಸಿದರು. ಸ್ನಾತಕೋತ್ತರ ವಿಭಾಗದ ಸಂಚಾಲಕ ಡಾ.ಗಣಪತಿಗೌಡ ಉಪಸ್ಥಿತರಿದ್ದರು.

**ದಿನಾಂಕ : ೧೯-೯-೨೦೧೯ ಹರಪನಹಳ್ಳಿತಾಲೂಕು**

ಹರಪನಹಳ್ಳಿ ತಾಲೂಕಿನ ಚಿಗಟೇರಿಗ್ರಾಮದ ಶ್ರೀ ನಾರದಮುನಿ ಪ್ರೌಢ ಶಾಲೆಯಲ್ಲಿ, ಶ್ರೀ ವಿಜಯಕುಮಾರ್ ಶಿವಕೃಪ ಅವರ ನೇತೃತ್ವದಲ್ಲಿ, 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮ ನಡೆಯಿತು. ಇದೇ ಶಾಲೆಯ ನಿವೃತ್ತ ಮುಖ್ಯ ಗುರುಗಳಾದ ಶ್ರೀ ಭೀಮಪ್ಪ ಸರ್, ಚಿಗಟೇರಿ ಸರಕಾರಿ ಪ.ಪೂ ಕಾಲೇಜಿನ ಇತಿಹಾಸ ಉಪನ್ಯಾಸಕರಾದ ಶ್ರೀ ಪ್ರಸನ್ನ, ಶ್ರೀ ನಾಗರಾಜ, ಸರ್ಕಾರಿ ಬಾಲಕಿಯರ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿರುವ ಶ್ರೀ ರಾಜಶೇಖರಪ್ಪ ಬಾಗಳಿ, ಇವರುಗಳು ಐತಿಹಾಸಿಕ ವಸ್ತು ವಿಷಯಗಳು ಹಾಗೂ ಪರಂಪರೆಯ ಮಹತ್ವ ಹಾಗೂ ರಕ್ಷಣೆಯ ಅಗತ್ಯ ಕುರಿತು ಉಪನ್ಯಾಸ ನೀಡಿದರು. ಶಾಲೆಯ ಮತ್ತು ಕಾಲೇಜಿನ ವಿದ್ಯಾರ್ಥಿಗಳು ಶಿಕ್ಷಕರು, ಉಪನ್ಯಾಸಕರು ಉಪಸ್ಥಿತರಿದ್ದರು.



**ದಿನಾಂಕ : ೨೦-೦೯-೨೦೧೯ ಹರಿಹರತಾಲ್ಲೂಕು**



ದಿನಾಂಕ ೨೦-೦೯-೨೦೧೯ರಂದು ಹರಿಹರ ತಾಲ್ಲೂಕಿನ ಬೆಳ್ಳೂಡಿ ಗ್ರಾಮದ ಸರ್ಕಾರಿ ಶಾಲೆಯಲ್ಲಿ ಐತಿಹಾಸಿಕ ಸ್ಮಾರಕಗಳ ಮಹತ್ವ ತಿಳಿಸುವ ಸಲುವಾಗಿ ಪರಂಪರೆ ಉಳಿಸಿ ಕಾರ್ಯಕ್ರಮ ನಡೆಸಲಾಯಿತು. ಇದರ ಅಂಗವಾಗಿ ಶಾಲಾ ಶಿಕ್ಷಕಿಯರು ಹಾಗೂ ಮುಖ್ಯೋಪಾಧ್ಯಾಯರು ವಿದ್ಯಾರ್ಥಿಗಳನ್ನು ಸ್ಥಳೀಯ ಸ್ಮಾರಕಗಳ ವೀಕ್ಷಣೆಗೆ ಕರೆದೊಯ್ದು, ಅವುಗಳ ಐತಿಹಾಸಿಕ ಮಾಹಿತಿ ಹಾಗೂ ಮಹತ್ವವನ್ನು ತಿಳಿಸಿಕೊಟ್ಟರು.

### ಆಗಸ್ಟ್ ೨೦೧೯ ಶಿರ್ವ, ಉಡುಪಿ ಜಿಲ್ಲೆ

ಮುಲ್ಕಿ ಸುಂದರ್ ರಾಮ್ ಶೆಟ್ಟಿ ಕಾಲೇಜು ಮತ್ತು ಕರ್ನಾಟಕ ಇತಿಹಾಸ ಅಕಾಡೆಮಿ, ಉಡುಪಿ ಜಿಲ್ಲಾ ಘಟಕ ಜಂಟಿಯಾಗಿ ಪ್ರಾಗೈತಿಹಾಸಿಕ ಕಾಲದ ಮಾನವನ ನಿವೇಶನ ಅವಲಕ್ಕಿಪಾರೆಯಲ್ಲಿ "ಪರಂಪರೆ ಉಳಿಸಿ-ಪರಂಪರೆ ಅರಿವು ಮೂಡಿಸಿ" ಕಾರ್ಯಕ್ರಮದ ಅಂಗವಾಗಿ ವಿವಿಧ ವಿಶ್ವವಿದ್ಯಾನಿಲಯದ ಸಂಶೋಧನಾ ವಿದ್ಯಾರ್ಥಿಗಳಿಗೆ ಕರ್ನಾಟಕ ಕರಾವಳಿಯ ಆದಿಮ ಚಿತ್ರಕಲೆಯ ಬಹುದೊಡ್ಡ ನೈಸರ್ಗಿಕ ಕಲಾಗ್ಯಾಲರಿಯ ಬಗ್ಗೆ ಪ್ರೊ. ಟಿ. ಮುರುಗೇಶಿಯವರು, ಮಾಹಿತಿಯನ್ನು ನೀಡಿ ಸಂಶೋಧನಾ ವಿದ್ಯಾರ್ಥಿಗಳು ಮತ್ತು ಶಿರ್ವದ ಕಾಲೇಜು ವಿದ್ಯಾರ್ಥಿಗಳ ಜೊತೆಗೆ ಸಂವಾದವನ್ನು ನಡೆಸಿಕೊಟ್ಟರು.

ಅವಲಕ್ಕಿ ಪಾರೆಯ ಚಿತ್ರಗಳು ಆಹಾರ ಸಂಗ್ರಹಣೆ ಮತ್ತು ಬೇಟೆಗಾರಿಕೆಯ ಜೀವನವನ್ನು ನಡೆಸುತ್ತಿದ್ದ, ಸೂಕ್ಷ್ಮಶಿಲಾಯುಗ ಕಾಲದ ಮಾನವನಿಂದ ಕಲ್ಲಿನಿಂದ ಕುಟ್ಟಿ ಮತ್ತು ಉಜ್ಜಿ ಚಿತ್ರಿಸಿದ ಚಿತ್ರಗಳು, ಈ ಚಿತ್ರಗಳ ಶೋಧನೆಯಿಂದ ತುಳುನಾಡಿನ ಇತಿಹಾಸ ಮತ್ತು ಸಂಸ್ಕೃತಿಯ ಪ್ರಾಚೀನತೆಯನ್ನು ಕ್ರಿಸ್ತ ಪೂರ್ವ ೬೦೦೦ ವರ್ಷಗಳಷ್ಟು ಹಿಂದಕ್ಕೆ ತೆಗೆದುಕೊಂಡು ಹೋಗಿವೆ ಪ್ರೊ. ಟಿ. ಮುರುಗೇಶಿಯವರು ಆ ಚಿತ್ರಗಳ ಮಹತ್ವವನ್ನು ವಿವರಿಸಿದರು. ಕೊಲ್ಲೂರು ವನ್ಯಜೀವಿ ಅಭಯಾರಣ್ಯದ ಅರಣ್ಯ ಸಿಬ್ಬಂದಿಗಳಾದ ಶ್ರೀಗಂಗಾಧರ್, ಆನಂದ್, ಸಿದ್ದೇಶ್ವರ್ ಮುಂತಾದವರು ಅಗತ್ಯ ರಕ್ಷಣೆ ಮತ್ತು ಸೂಕ್ತ ವ್ಯವಸ್ಥೆಯನ್ನು ಕಲ್ಪಿಸಿ ಸಹಕರಿಸಿದರು.





### ಸೆಪ್ಟಂಬರ್ ೨೦೧೯ ಹೂವಿನ ಹಡಗಲಿ

ಶ್ರೀಮತಿ ರುದ್ರಾಂಬಾ ಎಂ.ಪಿ.ಪ್ರಕಾಶ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೂವಿನ ಹಡಗಲಿ ಇಲ್ಲಿ ೨೦೧೮ನೆಯ ಸಾಲಿನಲ್ಲಿ ಪರಂಪರೆ ಉಳಿಸಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಕಾರ್ಯಕ್ರಮದ ಸಂಚಾಲಕರಾದ ಡಾ.ಕೆ.ಸತೀಶ್ ಅವರ ಮುಂದಾಳತ್ವದಲ್ಲಿ ನಡೆದ ಕಾರ್ಯಕ್ರಮದಲ್ಲಿ ಕಾಲೇಜಿನ ಪ್ರಾಂಶುಪಾಲರಾದ ಶ್ರೀ.ಜಿ.ಮಲ್ಲಿಕಾರ್ಜುನ ಅವರು ಉಪಸ್ಥಿತರಿದ್ದು, ನಾಡಿನ ಪರಂಪರಾ ತಾಣಗಳ ಬಗ್ಗೆ ಹಾಗೂ ಅವುಗಳ ಸಂರಕ್ಷಣೆಯ ಅಗತ್ಯತೆಯ ಕುರಿತಂತೆ ವಿದ್ಯಾರ್ಥಿಗಳಿಗೆ ತಿಳುವಳಿಕೆ ನೀಡಿದರು.





### ದಿನಾಂಕ.೨೬-೦೮-೨೦೧೯ ರಿಂದ ೩೧-೦೮-೨೦೧೯, ಉಜಿರೆ

ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪದವಿ ಕಾಲೇಜು, ಉಜಿರೆಯಇತಿಹಾಸ ವಿಭಾಗವು ದಿನಾಂಕ ೨೬.೮.೨೦೧೯ ರಿಂದ ೩೧.೮.೨೦೧೯ರ ವರೆಗೆಐತಿಹಾಸಿಕ ಪರಂಪರೆ ಉಳಿಸಿ ಸಾಪ್ತಾಹಿಕ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು. ಇತಿಹಾಸ ಪ್ರಾಧ್ಯಾಪಕರಾದ ಡಾ. ಸನ್ಮತಿಕುಮಾರ್ ಮತ್ತುಡಾ.ಪುಂಡರೀಕರವರು ಸಂಚಾಲಕರಾಗಿ, ಮುಂದಾಳತ್ವ ವಹಿಸಿ ನಡೆಸಿದ ಈ ಕಾರ್ಯಕ್ರಮವನ್ನು ರಾಣಿ ಅಬ್ಬಕ್ಕ ತುಳು ಅಧ್ಯಯನ ಕೇಂದ್ರದ ಅಧ್ಯಕ್ಷರಾದ ಪ್ರೊ. ತುಕಾರಾಮ ಪೂಜಾರಿಯವರು ದೀಪ

ಪ್ರಜ್ವಲಿಸಿಸುವ ಮೂಲಕ ಉದ್ಘಾಟಿಸಿ ಕಾರ್ಯಕ್ರಮಕ್ಕೆ ಚಾಲನೆ ನೀಡಿ, ಇತಿಹಾಸ ಸ್ಮಾರಕಗಳ ರಕ್ಷಣೆಯ ಮಹತ್ವವನ್ನು ತಿಳಿಸಿದರು. ಕಾಲೇಜಿನ ಪ್ರಾಂಶುಪಾಲರಾದ ಪ್ರೊ.ಸತೀಶ್‌ಚಂದ್ರ.ಎಸ್ ರವರು ಅಧ್ಯಕ್ಷತೆ ವಹಿಸಿದ್ದರು. ಪ್ರೊ.ಪ್ರಮೋದ್‌ಕುಮಾರ್‌ಉಪ ಪ್ರಾಂಶುಪಾಲರು, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪದವಿಪೂರ್ವಕಾಲೇಜು ಇವರು ಉಪಸ್ಥಿತರಿದ್ದರು. ಈಕಾರ್ಯಕ್ರಮದ ಪ್ರಯುಕ್ತ ಕಾಲೇಜಿನ ವಿದ್ಯಾರ್ಥಿಗಳಿಗೆ ಇತಿಹಾಸದ ಕುರಿತು ರಸ ಪ್ರಶ್ನೆ, ಭಾಷಣ, ಚಿತ್ರಕಲಾ ಸ್ಪರ್ಧೆಯನ್ನು ಮೂರು ದಿನಗಳಲ್ಲಿ ಏರ್ಪಡಿಸಲಾಗಿತ್ತು. ೨೭.೮.೨೦೧೯ರಂದು ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದ ಮುಖ್ಯಸ್ಥರು ಹಾಗೂ ಪ್ರಾಧ್ಯಾಪಕರಾದ ಪ್ರೊ.ಚಿನ್ನಸ್ವಾಮಿ ಸೋಸಲೆಯವರು ಸಂಪನ್ಮೂಲ ವ್ಯಕ್ತಿಯಾಗಿ ಆಗಮಿಸಿ, ಇತಿಹಾಸಪುನ್:ರಚನೆ ಕುರಿತು ಉಪನ್ಯಾಸ ನೀಡಿದರು. ೨೮.೮.೨೦೧೯ರಂದು ಕಲ್ಮಂಜಗ್ರಾಮದ ಪಜಿರಡ್ಕ ದೇವಾಲಯಕ್ಕೆ ೪೦ ವಿದ್ಯಾರ್ಥಿಗಳ ತಂಡ ಹಾಗೂ ಪ್ರಾಧ್ಯಾಪಕರಾದ ಡಾ. ಸನ್ಮತಿಕುಮಾರ್ ಮತ್ತು ಡಾ. ಪುಂಡರೀಕರವರು ಭೇಟಿ ನೀಡಿಅಲ್ಲಿನ ಜನರಿಗೆ ಸಂರಕ್ಷಣೆ ಕುರಿತಾದ ಅರಿವು ಮೂಡಿಸಿ, ಅಲ್ಲಿನ ಐತಿಹಾಸಿಕ ಸಂಗತಿಗಳನ್ನು ಸಂಗ್ರಹಿಸಿದರು. ಕಾರ್ಯಕ್ರಮದ ಕೊನೆಯ ಹಂತವಾಗಿ ಸಮಾರೋಪ ಸಮಾರಂಭವನ್ನು ೩೧.೮.೨೦೧೯ ರಂದು ಸರಕಾರಿ ಪ್ರೌಢಶಾಲೆ ಕಕ್ಕಿಂಜೆಯಲ್ಲಿ, ಶಾಲೆಯ ಮುಖ್ಯೋಪಾಧ್ಯಯರಾದ ಪ್ರಕಾಶ್‌ತೆಲಗಿ ಅವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ವಿದ್ಯಾರ್ಥಿಗಳಿಗೆ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಹುಮಾನವನ್ನು ಈ ಕಾರ್ಯಕ್ರಮದಲ್ಲಿ ವಿತರಿಸಲಾಯಿತು.



ಪ್ರೊ.ತುಕಾರಾಮ ಪೂಜಾರಿಯ ಉದ್ಘಾಟನ ಭಾಷಣ



ಐತಿಹಾಸಿಕ ಚಿತ್ರಕಲಾ ಸ್ಪರ್ಧೆ



ಬಹುಮಾನ ವಿತರಣೆ

**ದಿನಾಂಕ : ೦೩.೮.೨೦೧೯, ಬೆಳಗಾವಿ**

ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಶಿಕ್ಷಣ ಮಹಾವಿದ್ಯಾಲಯ, ನೆಹರು ನಗರ ಬೆಳಗಾವಿ ಇವರು ಕರ್ನಾಟಕ ಇತಿಹಾಸ ಆಕಾಡೆಮಿ (ರಿ) ಬೆಂಗಳೂರು ಇತಿಹಾಸ ಸಂಘದಡಿಯಲ್ಲಿ ಸ್ವಾತಂತ್ರೋತ್ಸವದ ದಿನಾಚರಣೆ ಹಾಗೂ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಡಾ. ಎ. ಎಲ್. ಪಾಟೀಲ್ ಪ್ರಾಚಾರ್ಯರು ಕೆ.ಎಸ್.ಆರ್.ಶಿ.ಮ. ಬೆಳಗಾವಿ ಅವರು ಅಧ್ಯಕ್ಷತೆವಹಿಸಿದ್ದರು ಹಾಗೂ ಶ್ರೀ.ಯ.ರು. ಪಾಟೀಲ್, ಬೆಳಗಾವಿ ಜಿಲ್ಲಾಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿಅಧ್ಯಕ್ಷರು ಅವರು ಮುಖ್ಯ ಅಥಿತಿಗಳಾಗಿ ಆಗಮಿಸಿ ಇತಿಹಾಸದ ಹಲವು ವಿಚಾರಗಳನ್ನು ತಿಳಿಸಿಕೊಟ್ಟು ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿಕೊಟ್ಟರು. ಬೆಳಗಾವಿ ಜಿಲ್ಲೆಯು ಸ್ವತಂತ್ರ್ಯ ಹೋರಾಟಕ್ಕೆ ಹಾಗೂ ಕಲೆ ವಾಸ್ತುಶಿಲ್ಪಕ್ಕೆ ನೀಡಿರುವ ಕೊಡುಗೆ ವಿಚಾರವಾಗಿ ಭಾಷಣ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ದೇವಾಲಯ, ಕೋಟೆ, ಸ್ಮಾರಕಗಳು, ಕೆರೆ, ಕರ್ನಾಟಕವನ್ನಾಳಿದ ಸಾಮ್ರಾಜ್ಯಗಳ ಕುರಿತಾಗಿ ಪ್ರಶಿಕ್ಷಣಾರ್ಥಿಗಳು ಪ್ರೋಜಕ್ಟರ್‌ಗಳ. ಬರವಣಿಗೆಗಳ ಮೂಲಕ ತಮ್ಮ ವಿಷಯ ಮಂಡನೆ ಮಾಡಿದರು.







**ದಿನಾಂಕ : ೨೪.೭.೨೦೧೯ ಬೆಳಗಾವಿ**

ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಶಿಕ್ಷಣ ಮಹಾವಿದ್ಯಾಲಯ, ನೆಹರು ನಗರ ಬೆಳಗಾವಿ ಇವರು ಕರ್ನಾಟಕ ಇತಿಹಾಸ ಆಕಾಡೆಮಿ (ರಿ) ಬೆಂಗಳೂರು ಇತಿಹಾಸ ಸಂಘದಡಿಯಲ್ಲಿ ಸಂಘಟಿಸಿದ ವಿಭಾಗವು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಅಂಗವಾಗಿ ಒಂದು ದಿನದ "ಬೆಳಗಾವಿ ಜಿಲ್ಲೆಯ ಇತಿಹಾಸ ಪ್ರಸಿದ್ಧ ಪ್ರದೇಶಗಳು, ಸ್ಮಾರಕಗಳು ಹಾಗೂ ಅವುಗಳ ರಕ್ಷಣೆ ಕುರಿತು ಜಾಗೃತಿ ಹಾಗೂ ಅಧ್ಯಯನ ಪ್ರವಾಸ" ಹಮ್ಮಿಕೊಂಡಿತ್ತು.

ಕಸಮಳಗಿ ಗ್ರಾಮದ ೧೧ನೇ ಶತಮಾನದ ಪಾರ್ಶ್ವನಾಥ ತೀರ್ಥಂಕರ ಬಸದಿ, ಸವದತ್ತಿಯ ಪ್ರಸಿದ್ಧ ರೇಣುಕಾ ಎಲ್ಲಮ್ಮದೇವಿ ದೇವಸ್ಥಾನ, ೧೮ನೇ ಶತಮಾನದ ಸಿರಸಂಗಿ ದೇಸಾಯಿಯಿಂದ ನಿರ್ಮಿಸಲಾದ ೮ ಭದ್ರಕೋಟೆಗಳಲ್ಲಿ ಒಂದೆನಿಸಿದಸವದತ್ತಿ ಕೋಟೆ. ಹಾಗೂ ನಾಲ್ಕು ಕೊತ್ತಲಗಳಿಂದ ಆವೃತವಾದ ಈ ಕೋಟೆಯ ಒಳಭಾಗದಲ್ಲಿನ ಸುಂದರ ಕದಶಿಶ್ಮೇಶ್ವರ ದೇವಸ್ಥಾನ, ಗೋವಾ ಕದಂಬರ ಆಳ್ವಿಕೆಯ ಕಾಲದಲ್ಲಿ ನಿರ್ಮಿಸಲಾದ ದೇವಗಾಂವೆಯ ಕಮಲನಾರಾಯಣ ದೇವಾಲಯ, ಪ್ರಾಚೀನಕಾಲದ ಪ್ರಸಿದ್ಧ ವ್ಯಾಪಾರಿ ಪಟ್ಟಣವೆನಿಸಿದ್ದ ಖಾನಾಪೂರ ತಾಲೂಕಿನ ಕಸಬಾ ನಂದಗಡ ಗ್ರಾಮದಲ್ಲಿ ದೇಸಾಯಿ, ಪೇಶವೆ ಆಳ್ವಿಕೆಯ ಕಾಲದಲ್ಲಿ ನಿರ್ಮಿಸಲಾದ ಪ್ರತಾಪಗಡ ಕೋಟೆ, ಮುಂದೆ ಇದೇ ಗ್ರಾಮದಲ್ಲಿ ಬ್ರಿಟಿಷರಿಂದ ೧೮೩೧ರಲ್ಲಿ ಗಲ್ಲಿಗೇರಿಸಲ್ಪಟ್ಟ ದೇಶಭಕ್ತ ವೀರ ಸಂಗೊಳ್ಳಿ ರಾಯಣ್ಣನ ಸ್ಮಾರಕ ಸಮಾಧಿ ಮೊದಲಾದ ಸ್ಥಳಗಳಲ್ಲಿಶೈಕ್ಷಣಿಕ ಪ್ರವಾಸವನ್ನು ಕೈಗೊಳ್ಳಲಾಯಿತು.









ರಾಯಚೂರು ಜಿಲ್ಲೆಯ ಗಬ್ಬೂರಿನಲ್ಲಿ ನಡೆದ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದಲ್ಲಿ ಶ್ರೀ ಅದಕಟ್ಟಿಮುನಿ ಅವರಿಗೆ ಅಭಿನಂದಿಸುತ್ತಿರುವುದು



ರಾಯಚೂರು ಜಿಲ್ಲೆಯ ಗಬ್ಬೂರಿನಲ್ಲಿ ನಡೆದ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದಲ್ಲಿ ಡಾ. ಪದ್ಮಜ ದೇಸಾಯಿ ಅವರಿಂದ ಭಾಷಣ

## ೨೦೧೮-೧೯ನೆಯ ಸಾಲಿನಲ್ಲಿ ನಡೆದ ಮುವತ್ತೆರಡನೆಯ ಸಮ್ಮೇಳನದ ವಾರ್ಷಿಕ ವರದಿ

ಕರ್ನಾಟಕ ಇತಿಹಾಸ ಅಕಾದೆಮಿಯು ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ, ಶಿವಯೋಗಮಂದಿರ, ಬಾದಾಮಿ ತಾಲ್ಲೂಕು, ಬಾಗಲಕೋಟೆಜಿಲ್ಲೆ ಹಾಗೂ ಕರ್ನಾಟಕ ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಮೈಸೂರು, ಇವರ ಸಹಯೋಗದೊಂದಿಗೆ ೨೦೧೮ ಅಕ್ಟೋಬರ್, ೨೬ರಿಂದ ೨೮ರ ವರೆಗೆ ಮೂರು ದಿನಗಳ ಕಾಲ ಹಮ್ಮಿಕೊಂಡಿದ್ದ ೩೨ನೆಯ ವಾರ್ಷಿಕ ಸಮ್ಮೇಳನಕ್ಕೆ ಬಾದಾಮಿ ತಾಲ್ಲೂಕಿನ ಶ್ರೀಮದ್ವೀರಶೈವ ಶಿವಯೋಗಮಂದಿರವು ಆಶ್ರಯ ಸ್ಥಾನವಾಗಿತ್ತು.

ದಿನಾಂಕ ೨೬.೧೦.೨೦೧೮ ನೆಯ ಶುಕ್ರವಾರ ಬೆಳಿಗ್ಗೆ ೧೦ಗಂಟೆಗೆ ಶ್ರೀಮದ್ವೀರಶೈವ ಶಿವಯೋಗಮಂದಿರದ ಅತಿಥಿಗೃಹದ ಮುಂಭಾಗದ ವಿಶಾಲ ಆವರಣದ ಪೆಂಡಾಲ್‌ನಲ್ಲಿ ಉದ್ಘಾಟನಾ ಸಮಾರಂಭವನ್ನು ಆಯೋಜಿಸಿತ್ತು.ಶ್ರೀಮದ್ವೀರಶೈವ ಶಿವಯೋಗ ಮಂದಿರದ ಪ್ರೌಢಶಾಲಾ ವಿದ್ಯಾರ್ಥಿಗಳು ನಡೆಸಿಕೊಟ್ಟ ದೇವರ ಪ್ರಾರ್ಥನೆ ಮತ್ತು ನಾಡಗೀತೆಯೊಂದಿಗೆ ಕಾರ್ಯಕ್ರಮವು ಪ್ರಾರಂಭವಾಯಿತು.ಶಿವಯೋಗ ಮಂದಿರ ಸಂಸ್ಥೆಗಳ ಅಧ್ಯಕ್ಷರಾದ ಪರಮ ಪೂಜ್ಯ ಡಾ॥ ಸಂಗನ ಬಸವ ಮಹಾಸ್ವಾಮಿಗಳ ದಿವ್ಯ ಸಾನ್ನಿಧ್ಯದಲ್ಲಿ, ಶ್ರೀ ಪಟ್ಟಣದ್ ಧರ್ಮದರ್ಶಿಗಳು, ಶ್ರೀಮದ್ವಿರಶೈವ ಮಂದಿರ ಇವರು ಜ್ಯೋತಿ ಬೆಳಗುವುದರ ಮೂಲಕ ಉದ್ಘಾಟನಾ ಸಮಾರಂಭವು ಪ್ರಾರಂಭಗೊಂಡಿತು. ಕರ್ನಾಟಕ ಇತಿಹಾಸ ಅಕಾದೆಮಿಯ ಅಧ್ಯಕ್ಷರಾದ ಡಾ. ದೇವರಕೊಂಡಾರೆಡ್ಡಿ ಅವರು, ಅಕಾದೆಮಿಯು ಬೆಳೆದು ಬಂದದಾರಿ, ಅಕಾದೆಮಿಯ ಚಟುವಟಿಕೆಗಳ ಕುರಿತಾದ ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಸನ್ಮಾನ್ಯ ಶ್ರೀ ಪಟ್ಟಣದ್ ಅವರು ತಮ್ಮ ಅಮೃತ ಹಸ್ತದಿಂದ ೨೦೧೮ನೆಯ ಸಾಲಿನ 'ಇತಿಹಾಸ ದರ್ಶನ ಸಂಪುಟ ೩೩' ನೆಯ ವಾರ್ಷಿಕ ಸಂಪುಟವನ್ನು ಬಿಡುಗಡೆ ಮಾಡಿದರು.

ಸಮ್ಮೇಳನದ ಮುಖ್ಯ ಅತಿಥಿಯಾಗಿ ಡಾ. ಎಸ್.ಕೆ.ಅರುಣಿ ಡೆಪ್ಯುಟಿ ಡೈರೆಕ್ಟರ್, ದಕ್ಷಿಣವಲಯ ಕಚೇರಿ, ಭಾರತೀಯ ಇತಿಹಾಸ ಅನುಸಂಧಾನ ಪರಿಷತ್, ಬೆಂಗಳೂರು ಇವರು ಉಪಸ್ಥಿತರಿದ್ದು, ಪರಿಷತ್ತಿನ ಕಾರ್ಯಚಟುವಟಿಕೆಗಳ ಬಗ್ಗೆ ಮಾಹಿತಿ ನೀಡಿದರು.

ಕರ್ನಾಟಕ ಇತಿಹಾಸ, ಸಂಸ್ಕೃತಿ, ಶಾಸನ, ಪುರಾತತ್ವ, ನಾಣ್ಯ ಮೊದಲಾದ ವಿಚಾರಗಳನ್ನು ಕುರಿತು ಸುದೀರ್ಘ ಅಧ್ಯಯನ ನಡೆಸಿ ಮಹತ್ವದ ಸಂಶೋಧನಾ ಕಾರ್ಯಗಳನ್ನು ಕೈಗೊಂಡು, ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದ ಹೊಸ ವಿಚಾರಗಳನ್ನು ಬೆಳಕಿಗೆ ತಂದ ವಿದ್ವಾಂಸರನ್ನು ಪುರಸ್ಕರಿಸುವ ಕಾರ್ಯಕ್ರಮವನ್ನು ಅಕಾದೆಮಿಯ ಅಧ್ಯಕ್ಷರು ಹಾಗೂ ವೇದಿಕೆಯ ಮೇಲೆ ಉಪಸ್ಥಿತರಿದ್ದ ಗಣ್ಯರು ನೆರವೇರಿಸಿದರು. ಪುರಸ್ಕೃತಗೊಂಡ ವಿದ್ವಾಂಸರ ವಿವರ:

ಬೈಸಾನಿ ರುಕ್ಮಣಮ್ಮ ರತ್ನಶೆಟ್ಟಿ ಅವರ ನೆನಪಿನಲ್ಲಿ ನೀಡುತ್ತಿರುವ "ಇತಿಹಾಸ ಸಂಸ್ಕೃತಿ ಶ್ರೀ" ಪ್ರಶಸ್ತಿಯನ್ನು ಡಾ. ಕೆಳದಿ ಗುಂಡಾಜೋಯಿಸ್, ಇತಿಹಾಸ ತಜ್ಞರು, ಹಸ್ತಪ್ರತಿ ತಜ್ಞರು ಮತ್ತು ಹಿರಿಯ ವಿದ್ವಾಂಸರು, ಇವರಿಗೆ ಬೈಸಾನಿ ರುಕ್ಮಣಮ್ಮ ರತ್ನಂ ಶೆಟ್ಟಿ ಟ್ರಸ್ಟ್‌ನ ಅಧ್ಯಕ್ಷರಾದ ಶ್ರೀ ಅಶೋಕ್ ಕುಮಾರ್ ಅವರು ನೀಡಿದ ಒಂದು ಲಕ್ಷ ರೂಪಾಯಿಗಳನ್ನು, ಪ್ರಶಸ್ತಿ ಪತ್ರವನ್ನು ನೀಡಿ ಸನ್ಮಾನಿಸಿದರು.

ಡಾ. ಬಾ.ರಾ.ಗೋಪಾಲ್ ಅವರ ನೆನಪಿನ ಹೆಸರಿನಲ್ಲಿ ನೀಡುವ ಶಾಸನ ತಜ್ಞರ ಪ್ರಶಸ್ತಿಯ ರೂ.೧೦,೦೦೦/- ಹತ್ತುಸಾವಿರ ನಗದನ್ನು ಮತ್ತು ಸನ್ಮಾನಗಳನ್ನು ಶ್ರೀ ಆನಂದ್ ಕುಂಬಾರ, ಹಿರಿಯ ವಿದ್ವಾಂಸರು ಹಾಗೂ ಶಾಸನ ತಜ್ಞರು, ಸೊಲ್ಲಾಪುರ ಅವರಿಗೆ ಗಣ್ಯರೆಲ್ಲರೂ ಸೇರಿ ಪ್ರಶಸ್ತಿ ನೀಡಿ ಗೌರವಿಸಿದರು.

ಶ್ರೀಮತಿ. ವಿ ಗೌರಮ್ಮ ಶ್ರೀ ಗಂಗಾಧರಯ್ಯ ಇವರ ಹೆಸರಿನಲ್ಲಿ ಅವರ ಮಕ್ಕಳಾದ ಡಾ. ಎಂ.ಜಿ.ನಾಗರಾಜ್, ಶ್ರೀಮತಿ ಪದ್ಮಾ ವಿರೂಪಾಕ್ಷಯ್ಯ ಮತ್ತು ಡಾ. ಎಂ.ಜಿ.ಚಂದ್ರಕಾಂತ್ ಇವರುಗಳು ಸ್ಥಾಪಿಸಿರುವ ದತ್ತಿಯಿಂದ "ಸಂಶೋಧನ ಶ್ರೀ" ಪ್ರಶಸ್ತಿಯನ್ನು ಹಾಗೂ ರೂ.೨೫,೦೦೦/- ಇಪ್ಪತ್ತೈದು ಸಾವಿರ ನಗದನ್ನು ಡಾ. ಕೆ.ಬಿ.ಶಿವತಾರಕ್, ಪುರಾತತ್ವಜ್ಞರು ಹಾಗು ನಿವೃತ್ತ ಪ್ರಾಧ್ಯಾಪಕರು, ಬೆಂಗಳೂರು ಇವರಿಗೆ ಸಮ್ಮೇಳನಾಧ್ಯಕ್ಷರು ಮತ್ತು ಗಣ್ಯರೊಡಗೂಡಿ ಪ್ರದಾನ ಮಾಡಿದರು.

ಅರಸೀಕೆರೆ ಮೇಲಣ ಮಠದ ಶ್ರೀ ಎಸ್. ಸಿದ್ಧಣ್ಣಯ್ಯ ಮತ್ತು ಶ್ರೀಮತಿ. ಗಂಗಮ್ಮ ಸ್ಮಾರಕಟ್ರಸ್ಟ್ ನೀಡುವ "ನೊಳಂಬ ಶ್ರೀ" ಪ್ರಶಸ್ತಿ ಫಲಕ ಹಾಗು ನಗದು ರೂ.೧೦,೦೦೦/- ಹತ್ತುಸಾವಿರ ಗಳನ್ನು ಡಾ.ಬಿ.ನಂಜುಂಡಸ್ವಾಮಿ, ಆಯುರ್ವೇದ ವೈದ್ಯರು ಹಾಗೂ ಹೆಸರಾಂತ ಇತಿಹಾಸ ಸಂಶೋಧಕರು, ತುಮಕೂರು ಇವರಿಗೆ ನಿಡಿ ಗಣ್ಯರೆಲ್ಲರು ಸೇರಿ ಗೌರವಿಸಿದರು.

ಕರ್ನಾಟಕದ ನಾಯಕ ಅರಸರ ಇತಿಹಾಸ ಸಂಶೋಧನೆಯಲ್ಲಿ ಸಾಧನೆಗೈದ ವಿದ್ವಾಂಸರಿಗೆ ಪ್ರೊ. ಲಕ್ಷ್ಮಣ ತೆಲಗಾವಿ ಹೆಸರಿನಲ್ಲಿ ಸ್ಥಾಪಿಸಿರುವ ದತ್ತಿಯಿಂದ "ನಾಯಕ ಶ್ರೀ" ಪ್ರಶಸ್ತಿ ಫಲಕ ಹಾಗೂ ರೂ.೧೦,೦೦೦/- ಹತ್ತುಸಾವಿರಗಳನ್ನು ಡಾ. ಡಿ.ಎನ್.ಯೋಗೀಶ್ವರಪ್ಪ ಇತಿಹಾಸ ತಜ್ಞರು ಹಾಗು ಪ್ರಾಧ್ಯಾಪಕರು, ತುಮಕೂರು ಇವರಿಗೆ ನೀಡಿ ಗೌರವಿಸಲಾಯಿತು.

'ಸಂಶೋಧಕ ಶ್ರೀನಿವಾಸ ಹಾವನೂರ' ಅವರ ಶಿಷ್ಯರಾದ ಡಾ.ಸಿ.ಆರ್.ಶ್ಯಾಮಲಾ ಅವರು ತಮ್ಮ ಗುರುಗಳ ನೆನಪಿನಲ್ಲಿ ಅಕಾದೆಮಿಯ ಮೂಲಕ "ಡಾ.ಶ್ರೀನಿವಾಸ ಹಾವನೂರ" ಪ್ರಶಸ್ತಿಯನ್ನು ೨೦೧೭-೧೮ನೆಯ ಸಾಲಿನಿಂದ ಸ್ಥಾಪಿಸಿದ್ದಾರೆ. ಸಾಹಿತ್ಯ ಮತ್ತು ಇತಿಹಾಸ ಅನುಸಂಧಾನದ ನೆಲೆಯಲ್ಲಿ ಸಂಶೋಧನೆ ನಡೆಸಿದ ಡಾ. ಬೆಂ.ಶಾ.ಶ್ಯಾಮಲಾ ರತ್ನಕುಮಾರಿ ಅವರಿಗೆ, ರೂ.೧೦,೦೦೦/- ಹತ್ತುಸಾವಿರ ನಗದು ಮತ್ತು ಪ್ರಶಸ್ತಿ ಫಲಕವನ್ನು ನೀಡಿ ಗೌರವಿಸಲಾಯಿತು.

ಮಹಿಳಾ ಸಂಶೋಧಕರಿಗಾಗಿ ಮೀಸಲಿಟ್ಟಿರುವ "ಶ್ರೀಮತಿ. ಸುಮಂಗಲಾ ಪಾಟೀಲ ಮಹಿಳಾ ಪ್ರಶಸ್ತಿ"ಯು ಕೊಪ್ಪಳದ ಬಿ.ಸಿ.ಪಾಟೀಲರ ಮಕ್ಕಳು ತಮ್ಮ ಪೂಜ್ಯ ಮಾತೃಶ್ರೀ ಅವರ ಹೆಸರಿನಲ್ಲಿ ಕಳೆದವರ್ಷದಿಂದ ನೀಡುತ್ತಿರುವ ಪುರಸ್ಕಾರವಾಗಿದೆ. ಇತಿಹಾಸ ಹಾಗೂ ಸಂಶೋಧನಾ ಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆ ನೀಡುತ್ತಿರುವ ಡಾ. ಸ್ಮಿತಾ ಪಿ.ಸುರೇಬಾನಕರ ಅವರಿಗೆ ರೂ.೧೦,೦೦೦/- ಹತ್ತು ಸಾವಿರ ನಗದು ಮತ್ತು ಪ್ರಶಸ್ತಿ ಫಲಕನೀಡಿ ಸನ್ಮಾನಿಸಲಾಯಿತು.

ವಿಭಿನ್ನ ಕ್ಷೇತ್ರದಲಿ ವೃತ್ತಿ ನಿರತರಾಗಿದ್ದು, ಇತಿಹಾಸ ಸಂಶೋಧನೆಗೆ ಕೊಡುಗೆ ನೀಡಿರುವ ಗಣ್ಯರನ್ನು ಪುರಸ್ಕರಿಸುವ ಸಲುವಾಗಿ ಕರ್ನಾಟಕ ಇತಿಹಾಸ ಅಕಾದೆಮಿಯ ಸಂಸ್ಥಾಪಕರಾದ ಡಾ. ಸೂರ್ಯನಾಥ ಯು.ಕಾಮತ್ ಅವರ ನೆನಪಿನಲ್ಲಿ ಅವರ ಮಗಳಾದ ಶ್ರೀಮತಿ.ಅರ್ಚನಾ ಕಾಮತ್ ಅವರು ಸ್ಥಾಪಿಸಿರುವ ಪ್ರಶಸ್ತಿ "ಸೂರ್ಯಕೀರ್ತಿ". ೨೦೧೮ನೆಯ ವರ್ಷದಿಂದ ಸ್ಥಾಪಿಸಲಾದ ಈ ಪ್ರಶಸ್ತಿಯನ್ನು ಇತಿಹಾಸ ಸಂಶೋಧನೆ, ಭೂ ವಿಜ್ಞಾನ ಹಾಗೂ ವಿವಿಧ ಕ್ಷೇತ್ರಗಳಿಗೆ ಅಮೂಲ್ಯ ಕೊಡುಗೆ ನೀಡಿರುವ ಡಾ. ಎಚ್.ಚಂದ್ರಶೇಖರ ಅವರಿಗೆ ರೂ.೧೦,೦೦೦/- ಹತ್ತುಸಾವಿರ ನಗದು ಮತ್ತು ಪ್ರಶಸ್ತಿ ಫಲಕವನ್ನು ನೀಡಿ ಗೌರವಿಸಲಾಯಿತು.

ಡಾ. ಪದ್ದಯ್ಯ ಎಮಿರೇಟಸ್ ಪ್ರೊಫೆಸರ್, ಡೆಕನ್ ಕಾಲೇಜು, ಪುಣೆ, ಇವರಿಂದ ೨೦೧೬ರಲ್ಲಿ, ಅತ್ಯುತ್ತಮ ಪ್ರಾಗೈತಿಹಾಸಿಕ ಲೇಖನಕ್ಕೆಂದು ಸ್ಥಾಪಿತವಾದ "ಡಾ.ಎಂ.ಎಚ್.ಕೃಷ್ಣ ನೆನಪಿನ ಮೆರಿಟ್ ಅವಾರ್ಡ್" ಅನ್ನು ಶ್ರೀ.ಕೆ.ರೇವಣಸಿದ್ಧಯ್ಯ, ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರು ಸ್ವೀಕರಿಸಿದರು.ಈ ಪ್ರಶಸ್ತಿಯು ೨,೦೦೦/- ಎರಡು ಸಾವಿರ ನಗದು ಮತ್ತು ಪ್ರಶಸ್ತಿಪತ್ರವನ್ನು ಒಳಗೊಂಡಿತ್ತು.

ಇತಿಹಾಸ ಅಕಾದೆಮಿಯ ೩೨ನೆಯ ವಾರ್ಷಿಕ ಸಮ್ಮೇಳನದ ಸರ್ವಾಧ್ಯಕ್ಷ ಪದವಿಯ ಗೌರವಕ್ಕೆ ಪಾತ್ರರಾದ ಡಾ. ಬಿ.ರಾಜಶೇಖರಪ್ಪ ಅವರು ಸಾಹಿತ್ಯ, ಇತಿಹಾಸ, ಭಾಷಾ ವಿಜ್ಞಾನ, ಗ್ರಂಥ ಸಂಪಾದನೆ, ಶಾಸನಲಿಪಿ, ಮೋಡಿಲಿಪಿ, ಜಾನಪದ ಮೊದಲಾದ ಕ್ಷೇತ್ರದಲ್ಲಿ ಪರಿಣಿತರಾಗಿದ್ದಾರೆ.ಶಾಸನ ತಜ್ಞರು, ಸಂಶೋಧಕರೆಂದೇ ಗುರುತಿಸಿಕೊಂಡಿರುವ ಡಾ.ಬಿ.ರಾಜಶೇಖರಪ್ಪಅವರ ಸಾಧನೆ ಹಾಗೂ ವ್ಯಕ್ತಿ ಪರಿಚಯವನ್ನು, ಡಾ.ದೇವರಕೊಂಡಾ ರೆಡ್ಡಿಯವರು ಸಭೆಗೆ ಮಾಡಿಕೊಟ್ಟರು. ಹಾಗು ಉಪಸ್ಥಿತರಿದ್ದ ಗಣ್ಯರೊಂದಿಗೆ ಸೇರಿ ಸರ್ವಾಧ್ಯಕ್ಷ ಸನ್ಮಾನವನ್ನು ನೀಡಿ ಗೌರವಿಸಿದರು.

ಸನ್ಮಾನವನ್ನು ಸ್ವೀಕರಿಸಿದ ಡಾ.ಬಿ.ರಾಜಶೇಖರಪ್ಪಅವರು, ವಾರ್ಷಿಕ ಸಮ್ಮೇಳನದಲ್ಲಿ ಅಕಾದೆಮಿಯ ಅತ್ಯುನ್ನತ ಗೌರವವಾದ ಸರ್ವಾಧ್ಯಕ್ಷ ಸ್ಥಾನದಲ್ಲಿ ನಿಂತು ಅಧ್ಯಕ್ಷೀಯ ಭಾಷಣ ಮಾಡಲು ಅವಕಾಶ ನೀಡಿದ ಅಕಾದೆಮಿಗೂ, ಹಾಗೂ ಬೌದ್ಧಿಕ ಬೆಳವಣಿಗೆಗೆ ಸಹಕಾರಿಯಾದ, ಮಾರ್ಗದರ್ಶನ ನೀಡಿದ ವಿದ್ವಾಂಸರಿಗೆಲ್ಲರಿಗೂ ನಮ್ರತೆಯಿಂದ ವಂದಿಸಿ ಕೃತಜ್ಞತೆ ಸಲ್ಲಿಸಿದರು. ಈಗಾಗಲೇ ಪ್ರಕಟವಾಗಿರುವ ಮತ್ತು ಚದುರಿಹೋಗಿರುವ ಶಾಸನಗಳನ್ನು ನಿರ್ದಿಷ್ಟ ಸಂಪುಟಗಳಾಗಿ ತರುವ ಕಾರ್ಯ, ಶಾಸನಗಳ ಪದಕೋಶದ ಸಂಪುಟವನ್ನು ಹೊರತರುವ ಕಾರ್ಯ, ಶಾಲಾ-ಕಾಲೇಜುಗಳ ಪಠ್ಯದಲ್ಲಿ ಕರ್ನಾಟಕ ಇತಿಹಾಸವನ್ನು ಕುರಿತಾದ ಪಠ್ಯಕ್ರಮವನ್ನು ಅಳವಡಿಸುವ ಅಗತ್ಯ ಇರುವುದನ್ನು ಮತ್ತು ಲಿಪಿಗಳ ಬಗ್ಗೆ ಹಮ್ಮಿಕೊಳ್ಳುವ ಕಾರ್ಯಾಗಾರದ ಬಗ್ಗೆ ತಮ್ಮ ಅನಿಸಿಕೆಗಳನ್ನು ಹಂಚಿಕೊಂಡದ್ದು ವಿಶೇಷವಾಗಿತ್ತು.

ಚಿಕ್ಕಮಗಳೂರಿನ ಕೃಷಿಕರು, ಕಾಫಿ ಬೆಳೆ ತೋಟಗಾರರು, ಮತ್ತು ಹಿರಿಯ ಸಂಶೋಧಕರಾಗಿ ಗುರುತಿಸಿಕೊಂಡಿರುವ ಶ್ರೀ ಸಿದ್ಧಗಿರಿ ಓ.ಎಲ್ ಚಂದ್ರೇಗೌಡ ಅವರು ಆರಂಭದಿಂದಲೂ ಅಕಾದೆಮಿಯಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿರುವವರಾಗಿದ್ದಾರೆ. ಇತಿಹಾಸ, ಸಾಮಾಜಿಕ ಮತ್ತು ಶಿಲ್ಪಗಳು, ವಿಶೇಷವಾಗಿ ಭೈರವ ಶಿಲ್ಪಗಳ ಬಗ್ಗೆ ಸಂಶೋಧನೆಗಳನ್ನು ಕೈಗೊಳ್ಳುತ್ತಿರುವ ಇವರನ್ನು ೩೨ನೆಯ ವಾರ್ಷಿಕ ಸಮ್ಮೇಳನದಲ್ಲಿ ವಿಶೇಷ ಆಹ್ವಾನಿತರನ್ನಾಗಿ ಸ್ವಾಗತಿಸಿ ಗೌರವಿಸಲಾಯಿತು.

ಪರಮಪೂಜ್ಯ ಡಾ.ಸಂಗನ ಬಸವ ಮಹಾಸ್ವಾಮಿಗಳು ಶುಭಾಶೀರ್ವಚನ ನಿಡಿ, ಸಮ್ಮೇಳನವು ಯಶಸ್ವಿಯಾಗಲೆಂದು ಹಾರೈಸಿದರು.ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಅಕಾದೆಮಿಯ ಅಧ್ಯಕ್ಷರಾದ ಡಾ.ದೇವರಕೊಂಡಾ ರೆಡ್ಡಿ ಅವರ ವಹಿಸಿದ್ದರು.

ಉದ್ಘಾಟನಾ ಕಾರ್ಯಕ್ರಮವನ್ನು ಅಕಾದೆಮಿಯ ಕಾರ್ಯದರ್ಶಿಗಳಾದ ಶ್ರೀ.ಕೆ.ಎಲ್.ರಾಜಶೇಖರ್ ಅವರು ನಿರ್ವಹಿಸಿದರು.ಇತಿಹಾಸ ಅಕಾದೆಮಿಯ ಕಾರ್ಯದರ್ಶಿಗಳಾದ ಡಾ. ಸಂಧ್ಯಾ.ವಿಅವರ ವಂದನಾರ್ಪಣೆಯೊಂದಿಗೆ ಉದ್ಘಾಟನಾ ಕಾರ್ಯಕ್ರಮ ಮುಕ್ತಾಯಗೊಂಡಿತು.

## ಪಿ.ಎಚ್‌ಡಿ ಮತ್ತು ಡಿ.ಲಿಟ್ ಪದವಿ ಪಡೆದ ಸನ್ಮಾನಿತರು

| ಕ್ರ. ಸಂ. | ಪಿಎಚ್.ಡಿ./ಡಿ.ಲಿಟ್ ಪದವಿ ಪಡೆದವರ ಹೆಸರು | ಮಾರ್ಗದರ್ಶಕರ ಹೆಸರು | ವಿಷಯ | ವಿಶ್ವವಿದ್ಯಾಲಯವರ್ಷ |
|---|---|---|---|---|
| ೧ | ಡಾ. ಪ್ರಸನ್ನ | ತುಮಕೂರು ವಿ.ವಿ ಡಾ. ಡಿ.ಎನ್.ಯೋಗೀಶ್ವರಪ್ಪ | ಪಾಗುಂಡೆಪಾಲಿಗಾರ್ಸ್ – ಅ ಕಾಂಪ್ರಿಹೆನ್ಸಿವ್ ಸ್ಟಡಿ | ೧೯.೬.೧೮ |
| ೨ | ಡಾ. ಸಂಜಯ ಹಂಜೆ | ಕರ್ನಾಟಕ ವಿಶ್ವವಿದ್ಯಾಲಯ ಡಾ. ಲೋಕೇಶ | ಅಣ್ಣಿಗೇರಿ ಪ್ರದೇಶದ ಸಾಂಸ್ಕೃತಿಕ ಅಧ್ಯಯನ | ೧.೧೨.೧೭ |
| ೩ | ಡಾ. ರವಿರಾಜ್ ಬಿ.ವಿ | ಮಂಗಳೂರು ವಿ.ವಿ ಡಾ. ಲೋಕೇಶ್ ಕೆ.ಎಂ | ಚಿಕ್ಕಮಗಳೂರು ಜಿಲ್ಲೆಯಲ್ಲಿ ತೋಟಗಾರಿಕೆ ಮತ್ತು ಸಮಾಜೋ–ಆರ್ಥಿಕ ಬದಲಾವಣೆಗಳು ೧೮೭೯–೧೯೪೭ ಒಂದು ಅಧ್ಯಯನ | ೨೦೧೮ ಫೆಬ್ರವರಿ |
| ೪ | ಡಾ. ಭರತೇಶಗೌಡ | ದ್ರಾವಿಡಿಯನ್ ಯೂನಿವರ್ಸಿಟಿ, ಕುಪ್ಪಂ ಡಾ. ಶಿವಕುಮಾರ ಎಸ್. ಕಲ್ಲೂರ್ | ಕ್ವಿಟ್ ಇಂಡಿಯ ಮೂಮೆಂಟ್ ಇನ್ ಬಾಂಬೆ ಕರ್ನಾಟಕ – ಅ ಸ್ಟಡಿ | ೩೦.೧.೧೮ |
| ೫ | ಡಾ. ಸಣ್ಣಪಾಲಯ್ಯ ಬಿ.ಸಿ | ಕನ್ನಡ ವಿ.ವಿ, ಹಂಪಿ ಡಾ. ಸಿ. ಮಹದೇವ | ವಸಾಹತು ಕಾಲೀನ ಕಲೆ ಮತ್ತು ವಾಸ್ತುಶಿಲ್ಪ: ಬಳ್ಳಾರಿ ಜಿಲ್ಲೆ | ೧೦.೩.೧೮ |
| ೬. | ಡಾ. ಮುರಳಿ ಕೆ.ವಿ | ಮೈಸೂರು ವಿವಿ ಡಾ. ಟಿ.ಕೆ.ಕೆಂಪೆಗೌಡ | ಕ.ವೆಂ. ರಾಜಗೋಪಾಲ ಅವರ ಸಮಗ್ರ ಸಾಹಿತ್ಯ | ೨೨.೧೨.೧೭ |
| ೭. | ಡಾ. ಮಂಗಲಾ ಗೌಡ ಮಾಣೇಶ್ವರ | ಕರ್ನಾಟಕ ವಿವಿ, ಧಾರವಾಡ ಡಾ. ಎಸ್.ಕೆ. ಮೇಲಕಾರ | ಧಾರವಾಡ ಜಿಲ್ಲೆಯಲ್ಲಿ ಶೈವ ಪರಂಪರೆ | ೭.೭.೨೦೧೮ |
| ೮. | ಡಾ. ಹೆಚ್ ರಮೇಶ | ಕನ್ನಡ ವಿವಿ, ಹಂಪಿ ಡಾ. ವಾಸುದೇವ ಬಡಿಗೇರ | ಹರಿಹರ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ | ೬.೩.೨೦೧೮ |
| ೯. | ಡಾ. ಇಂಜನಿ ಶಶಿಕಲಾ ರಾಘವೇಂದ್ರ | ಕನ್ನಡ ವಿವಿ, ಹಂಪಿ ಡಾ. ಸಿ.ಎಸ್. ವಾಸುದೇವನ್ | ಹಂಪಿ ಪರಿಸರದ ವಸತಿ ನೆಲೆಗಳು | ೬.೩.೨೦೧೮ |
| ೧೦. | ಡಾ. ಪದ್ಮ ಬಿ.ಎಸ್ | ಕನ್ನಡ ವಿವಿ, ಹಂಪಿ ಡಾ. ಸಿ. ಮಹದೇವ | ಹಾಸನ ಜಿಲ್ಲೆಯ ಕೆರೆಗಳು | ೮.೧.೨೦೧೮ |
| ೧೧. | ಡಾ. ಹಿರೇಮಠ ವಿನಯಕುಮಾರ ರಾಚಯ್ಯ | ಕನ್ನಡ ವಿ.ವಿ, ಹಂಪಿ ಡಾ. ಜಿ.ಬಿ.ಕುಲಕರ್ಣಿ | ಬಾಗಲಕೋಟೆ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ: ಒಂದು ಅಧ್ಯಯನ | ೧೭.೪.೧೮ |
| ೧೨. | ಡಾ. ತಿಪ್ಪಣ್ಣ | ಕನ್ನಡ ವಿ.ವಿ, ಹಂಪಿ ಡಾ. ಕೆ. ಮೋಹನ್ ಕೃಷ್ಣ ರೈ | ನಿಜಾಮ್ ಆಳ್ವಿಕೆಯಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಗಳು: ಚಾರಿತ್ರಿಕ ವಿಶ್ಲೇಷಣೆ | ೬.೩.೨೦೧೮ |
| ೧೩. | ಡಾ. ಶಾರದಾ ಮಲ್ಲಿಕಾರ್ಜುನ ಪಾಟೀಲ್ | ಕನ್ನಡ ವಿ.ವಿ, ಹಂಪಿ ಡಾ. ವಾಸುದೇವ ಬಡಿಗೇರ | ಕೊಪ್ಪಳ ಜಿಲ್ಲೆಯ ಕೆರೆ–ಬಾವಿಗಳು: ಚಾರಿತ್ರಿಕ ಅಧ್ಯಯನ | ೩೦.೩.೨೦೧೮ |
| ೧೪. | ಡಾ.ಕೆ.ಎಸ್. ವಿಶ್ವನಾಥ್ | ಕನ್ನಡ ವಿ.ವಿ. ಹಂಪಿ ಡಾ. ಮೋಹನ ಕೃಷ್ಣ ರೈ | ಟಿಪ್ಪು ಸುಲ್ತಾನ್ ಹಾಗೂ ಫ್ರೆಂಚರು:ಮಿಲಿಟರಿ ಮತ್ತು ರಾಜಕಾರಣ ನೆಲೆಯ ಅಧ್ಯಯನ | ೧೦.೩.೨೦೧೮ |
| ೧೫. | ಡಾ. ಭೋಜ್ಯನಾಯ್ಕ ಎಲ್.ಎಚ್ | ಕನ್ನಡ ವಿ.ವಿ. ಹಂಪಿ ಡಾ. ವಿರೂಪಾಕ್ಷಿ ಪೂಜಾರಹಳ್ಳಿ | ದಾವಣಗೆರೆ ಜಿಲ್ಲೆಯ ಪಾಳೆಯಗಾರರು; ಚಾರಿತ್ರಿಕ ಅಧ್ಯಯನ | ೬.೩.೨೦೧೮ |
| ೧೬. | ಡಾ. ಕೋರಿಶೆಟ್ಟರ ಶಿವಯೋಗಿ ರೇವಣಸಿದ್ದಪ್ಪ | ಕರ್ನಾಟಕ ವಿ ವಿ , ಧಾರವಾಡ ಡಾ.ಜಗದೀಶ ಕಿವುಡನವರ | ಬಾಸವೂರು ೧೪೦ ಸಾಂಸ್ಕೃತಿಕ ಅಧ್ಯಯನ | ೧೫.೨.೨೦೧೮ |
| ೧೭. | ಡಾ. ಬೆನ್ನೂರ ಮಂಜಪ್ಪ ನಾಗೇಂದ್ರಪ್ಪ | ಕರ್ನಾಟಕ ವಿ.ವಿ.ಧಾರವಾಡ ಡಾ. ಎಸ್.ಕೆ.ಮೇಲಕಾರ | ಬಿಜಾಪುರ ಆದಿಲ್‌ಶಾಹಿಗಳ ಧಾರ್ಮಿಕೇತರ ಕಟ್ಟಡಗಳು | ೨೪.೪.೨೦೧೮ |
| ೧೮. | ಡಾ. ಮಧುರಾಜ್ | ಮಂಗಳೂರು ವಿವಿ ಪ್ರೊ. ಹನುಮ ನಾಯಕ್ | ರೆವಿನ್ಯು ಸಿಸ್ಟಮ್ ಅಂಡರ್ ದ ಹೊಯ್ಸಳಾಸ್: ಅ ಟೊಪೊಗ್ರಾಫಿಕಲ್ ಅಂಡ್ ಕ್ರೊನೊಲಜಿಕಲ್ ಅನಾಲಿಸಿಸ್ | ೧೭.೯.೨೦೧೮ |
| ೧೯. | ಡಾ. ಅವಿನಾಶ್ | ಮಂಗಳೂರು ವಿವಿ ಪ್ರೊ. ಕೆ.ಎಂ.ಲೋಕೇಶ್ | ವಸಾಹತುಶಾಹಿ ಕೊಡಗಿನಲ್ಲಿ ಕಮಿಷನರ್‌ಗಳ ಆಡಳತ & ಸಾಮಾಜಿಕ ಆರ್ಥಿಕ ಪರಿವರ್ತನೆಗಳು | ೨೦೧೮ ಫೆಬ್ರವರಿ |

| | | | | |
|---|---|---|---|---|
| ೨೦. | ಡಾ. ಮಹಾಂತೇಶ್ ಕುತನಿ | ಕನ್ನಡ ವಿ.ವಿ., ಹಂಪಿ<br>ಡಾ. ಎಸ್.ಶಿವರಾಮು | ಸ್ವಾತಂತ್ರ್ಯ ಮತ್ತು ಏಕೀಕರಣ ಚಳುವಳಿಯಲ್ಲಿ ಮಂಡ್ಯ ಜಿಲ್ಲೆಯ ಪಾತ್ರ | ೧೦.೩.೨೦೧೮ |
| ೨೧. | ಡಾ. ತಿಪ್ಪೇರುದ್ರ | ಕನ್ನಡ ವಿ.ವಿ., ಹಂಪಿ<br>ಡಾ. ಸಾಂಬಮೂರ್ತಿ | ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು: ಒಂದು ಅಧ್ಯಯನ | ೨೪.೯.೨೦೧೮ |

೨೦೧೮ನೇ ಅಕ್ಟೋಬರ್ ೨೬ ರಿಂದ ೨೮ರ ವರೆಗೆ ಮೂರುದಿನಗಳಲ್ಲಿ ನಡೆದ ೩೨ನೆಯ ವಾರ್ಷಿಕ ಸಮ್ಮೇಳನದಲ್ಲಿ,ಸಂಶೋಧನಾ ಪತ್ರಿಕೆಗಳನ್ನು ಮಂಡಿಸಲು ನಾಡಿನ ಹಲವೆಡೆಗಳಿಂದ ಆಗಮಿಸಿದ್ದ ಹಿರಿಯ ಕಿರಿಯ ಸಂಶೋಧಕರಿಗೆ ವೇದಿಕೆಯನ್ನು ಕಲ್ಪಿಸಿ, ನಡೆಸಿದ ಗೋಷ್ಠಿಗಳಲ್ಲಿ ಅಧ್ಯಕ್ಷತೆ ವಹಿಸಿದ್ದವರು ಹಾಗೂ ನಿರ್ವಹಣೆ ಮಾಡಿದವರು ಗೋಷ್ಠಿಗಳನ್ನು ಯಶಸ್ವಿಯಾಗಿ ನಡೆಸಿಕೊಟ್ಟರು.

**ಗೋಷ್ಠಿಗಳ ಅಧ್ಯಕ್ಷತೆ:** ಡಾ. ಕೆ.ರವೀಂದ್ರನಾಥ್, ಶ್ರೀ.ಎಂ.ಎನ್.ಪ್ರಭಾಕರ್, ಡಾ. ಉಷಾರಾಣಿ, ಡಾ.ವಸಂತಲಕ್ಷ್ಮಿ, ಪ್ರೊ. ಮುರುಗೇಶಿ.ಬಿ, ಡಾ. ನಳಿನಿ ವೆಂಕಟೇಶ್, ಡಾ.ಶಕುಂತಲಾ.ಎನ್, ಶ್ರೀ. ಎಂ.ಬಿ.ಪಾಟೀಲ್, ಶ್ರೀ. ಡಿ.ಜಿ.ಕುಲಕರ್ಣಿ, ಡಾ.ಕಲವೀರ ಮನ್ವಾಚಾರ್, ಡಾ.ಸೋಮಶೇಖರ್ ಎಸ್, ಡಾ.ಶರಣಬಸಪ್ಪ ಕೋಲ್ಕಾರ್, ಡಾ.ಮುತ್ತುರಾಜ್, ಶ್ರೀ. ಹಂ.ಗು.ರಾಜೇಶ್, ಡಾ. ಎಸ್.ಕೆ.ಮೇಲಕಾರ್, ಡಾ. ಎಫ್.ಟಿ.ಹಳ್ಳಿಕೇರಿ, ಡಾ. ಅಮರೇಶ ಯತಗಲ್, ಡಾ. ಶೇಜೇಶ್ವರ್, ಶ್ರೀ.ಕೊ.ವೆಂ.ರಾಮಕೃಷ್ಣೇಗೌಡ, ಡಾ. ಗಣಪತಿ ಗೌಡ, ಇವರುಗಳು ಗೋಷ್ಠಿ ಅಧ್ಯಕ್ಷತೆವಹಿಸಿದ್ದರು.

**ಗೋಷ್ಠಿಗಳ ನಿರ್ವಹಣೆ:** ಮಲ್ಲಿಕಾರ್ಜುನ.ಜಿ.ಕೆ, ಸುನಿಲ ಕುಸ್ತಿ, ನವೀನ್ ಕುಮಾರ್.ವಿ, ರಮೇಶ್.ಸಿ, ಡಾ. ಕುಮಾರ್ ಬಿ.ಪಿ, ಶ್ರೀಮತಿ ಸ್ಮಿತಾ ರೆಡ್ಡಿ, ಡಾ. ಜಗದೀಶ್, ಮಂಜುನಾಥ್.ಕೆ, ಡಾ.ಮುರಳಿ ಕೂಡ್ಲೂರು, ಮೇಕನಗದ್ದೆ ಲಕ್ಷ್ಮಣಗೌಡ, ಲೋಕಣ್ಣ ಭಜಂತ್ರಿ, ಭಾರತಿ ನಾಗೇಂದ್ರ, ಲತಾ.ವೈ, ಡಾ.ಪದ್ಮಜಾ ದೇಸಾಯಿ, ಡಾ.ಮಂಜುಳಾ ಆಚಾರಿ, ಡಾ. ಮಹಂತೇಶ್ ಕುತನಿ, ಡಾ. ನಳಿನಿ ವೆಂಕಟೇಶ್, ಶ್ವೇತ ಹೆಚ್.ಬಿ, ಇವರುಗಳು ಗೋಷ್ಠಿಯನ್ನು ನಿರ್ವಣೆ ಮಾಡಿದರು.

**ಸಮಾರೋಪ ಸಮಾರಂಭ**

ದಿನಾಂಕ ೨೮.೧೦.೨೦೧೮ ಭಾನುವಾರ ಸಂಜೆ ನಾಲ್ಕುಗಂಟೆಯ ಸಮಯಕ್ಕೆ ಸಮಾರೋಪ ಸಮಾರಂಭವನ್ನು ಶ್ರೀಮದ್ವೀರಶೈವ ಶಿವಯೋಗಮಂದಿರದ ಅತಿಥಿಗೃಹದ ಮುಂಭಾಗದ ಆವರಣದಲ್ಲಿ ಏರ್ಪಡಿಸಲಾಗಿತ್ತು.ಹಾನಗಲ್ಲ ಕುಮಾರಸ್ವಾಮಿಗಳ ಪ್ರೇರಣೆಯಿಂದಲೇ ಇತಿಹಾಸ ಅಕಾದೆಮಿಯ ಈ ಐತಿಹಾಸಿಕ ಸಮ್ಮೇಳನವು ಈ ತಪೋಭೂಮಿಯಲ್ಲಿ ನಡೆಯುತ್ತಿದೆ ಎಂದೇ ಭಾವಿಸಿ ಕಾರ್ಯಕ್ರಮಕ್ಕೆ ಶುಭಾಶೀರ್ವಾದ ನೀಡಿದಪರಮಪೂಜ್ಯ ಡಾ.ಸಂಗನಬಸವ ಮಹಾಸ್ವಾಮಿಗಳು, ಅಧ್ಯಕ್ಷರು, ಶ್ರೀಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ, ಶಿವಯೋಗಮಂದಿರ ಇವರ ದಿವ್ಯ ಸಾನ್ನಿಧ್ಯದಲ್ಲಿ ಸಮ್ಮೇಳನ ಸಮಾರೋಪ ಸಮಾರಂಭ ನೆರವೇರಿತು.ಶ್ರೀಮದ್ವೀರಶೈವ ಶಿವಯೋಗಮಂದಿರದ ವಿದ್ಯಾರ್ಥಿ ನಡೆಸಿಕೊಟ್ಟ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮವು ಆರಂಭಗೊಂಡಿತು. ಶ್ರೀ. ಕೆ.ಎಲ್.ರಾಜಶೇಖರ್, ಕಾರ್ಯದರ್ಶಿ, ಕರ್ನಾಟಕ ಇತಿಹಾಸ ಅಕಾದೆಮಿ ಇವರು ಪ್ರಾಸ್ತಾವಿಕ ನುಡಿಗಳೊಂದಿಗೆ ಅತಿಥಿಗಳಿಗೆ ಹಾಗೂ ವಿದ್ವಾಂಸರಿಗೆ ಸ್ವಾಗತ ಕೋರಿದರು.

ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಶ್ರೀಮತಿ ಹನುಮಾಕ್ಷಿ ಗೋಗಿ, ವಿದ್ವಾಂಸರು, ಧಾರವಾಡ ಇವರೊಂದಿಗೆ ವೇದಿಕೆ ಹಂಚಿಕೊಂಡಿದ್ದ ಸಮ್ಮೇಳನದ ಸರ್ವಾಧ್ಯಕ್ಷರಾಗಿದ್ದ ಡಾ. ಬಿ.ರಾಜಶೇಖರಪ್ಪ ಅವರು ಪಿಎಚ್.ಡಿ ಪದವೀಧರರಿಗೆ ಪ್ರಶಸ್ತಿ ಪ್ರದಾನ ಮಾಡಿ, ಆನಂತರ ಸಮ್ಮೇಳನದ ಯಶಸ್ಸನ್ನು ಕುರಿತು ಸಭೆಯನ್ನುದ್ದೇಶಿಸಿ ಮಾತನಾಡಿದರು.

ಸಮ್ಮೇಳನದಲ್ಲಿ ಭಾಗವಹಿಸಿದ ಪ್ರತಿನಿಧಿಗಳ ಪರವಾಗಿ ಶ್ರೀಮತಿ ಭಾರತಿ ನಾಗೇಂದ್ರ ಹಾಗೂ ಬಸವರಾಜಪ್ಪ, ಬಳ್ಳಾರಿ ಅವರು ಮೂರುದಿನಗಳ ಸಮ್ಮೇಳನ ಕುರಿತು ತಮ್ಮ ಅನುಭವ, ಅನಿಸಿಕೆಯನ್ನು ಹಂಚಿಕೊಂಡರು.ಅಧ್ಯಕ್ಷತೆಯನ್ನು ವಹಿಸಿದ್ದ ಡಾ. ದೇವರಕೊಂಡಾರೆಡ್ಡಿ, ಅಧ್ಯಕ್ಷರು, ಕರ್ನಾಟಕ ಇತಿಹಾಸ ಅಕಾದೆಮಿ ಇವರು ಅಧ್ಯಕ್ಷೀಯ ನುಡಿಗಳನ್ನಾಡಿ, ಶಿವಯೋಗಮಂದಿರದ ಆವರಣದಲ್ಲಿ ಕಾರ್ಯಕ್ರಮ ನಡೆಸಲು ಸಂಪೂರ್ಣ ಸಹಕಾರ ನೀಡಿ, ಆಶೀರ್ವಾದಪೂರ್ವಕವಾಗಿ ಅಕಾದೆಮಿಯ ಮುಂದಿನ ಕಾರ್ಯಕ್ರಮಗಳಿಗೆ ಶುಭಹಾರೈಸಿದ ಪರಮಪೂಜ್ಯ ಡಾ.ಸಂಗನಬಸವ ಮಹಾಸ್ವಾಮಿಗಳಿಗೆ ಕೃತಜ್ಞತಾ ಪೂರ್ವಕವಾಗಿ ನಮನಗಳನ್ನು ಸಲ್ಲಿಸಿ, ಕಾರ್ಯಕ್ರಮವು ನಡೆದು ಬಂದ ರೀತಿ, ಅದಕ್ಕೆ ಶ್ರಮಿಸಿದ ಎಲ್ಲರಿಗೂ ಅಭಿವಂದನೆ ಸಲ್ಲಿಸಿದರು.

ಸಮಾರೋಪ ಭಾಷಣ ನಡೆಸಿಕೊಡಬೇಕಿದ್ದ ಡಾ. ಶೀಲಾಕಾಂತ ಪತ್ತಾರ, ಇತಿಹಾಸಕಾರರು, ಬಾದಾಮಿ ಇವರ ಅನುಪಸ್ಥಿತಿಯಲ್ಲಿ ಶ್ರೀ. ಇಷ್ಟಲಿಂಗ ಸಿರಸಿ ಅವರು ಸಮಾರೋಪದ ನುಡಿಗಳೊಂದಿಗೆ ಎಲ್ಲರಿಗೂ ವಂದನೆ ಸಮರ್ಪಿಸಿದರು. ಕಾರ್ಯಕ್ರಮದ ನಿರೂಪಣೆಯನ್ನು ಶ್ರೀಮತಿ.ಸ್ಮಿತಾರೆಡ್ಡಿ ಅವರು ನಡೆಸಿದರು.

# ೨೦೧೮-೧೯ನೇ ಸಾಲಿನ ೩೨ನೇ ಸರ್ವಸದಸ್ಯರ ಸಭೆಯ ನಡಾವಳಿಗಳು ಮತ್ತು ವರದಿ

**ಶ್ರೀಮದ್ವೀರಶೈವ ಶಿವಯೋಗ ಮಂದಿರ, ಬಾದಾಮಿ, ಬಾಗಲಕೋಟೆ ಜಿಲ್ಲೆ**

ದಿನಾಂಕ ೨೭-೧೦-೨೦೧೮ ಶನಿವಾರದಂದು ಸಂಜೆ ೬.೦೦ ಘಂಟೆಗೆ ಅಕಾದೆಮಿಯ ೩೨ನೇ ವಾರ್ಷಿಕ ಸರ್ವ ಸದಸ್ಯರಸಭೆಯು ಶ್ರೀಮದ್ವೀರಶೈವ ಶಿವಯೋಗ ಮಂದಿರ, ಶಿವಯೋಗ ಮಂದಿರ, ಬಾದಾಮಿಯಲ್ಲಿನ ಯಾತ್ರಿನಿವಾಸದ ಪ್ರಧಾನ ವೇದಿಕೆಯಲ್ಲಿ, ಅಕಾದೆಮಿಯ ಅಧ್ಯಕ್ಷರಾದ ಡಾ.ದೇವರಕೊಂಡಾರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಇದೇ ವೇದಿಕೆಯಲ್ಲಿ ಅಕಾದೆಮಿಯ ೩೨ನೇ ವಾರ್ಷಿಕ ಸಮ್ಮೇಳನವೂ ಸಹ ೨೬ರಿಂದ ೨೮ರ ಅಕ್ಟೋಬರ್ ೨೦೧೮ ರವರೆಗೆ, ಶ್ರೀಮದ್ವೀರಶೈವ ಶಿವಯೋಗ ಮಂದಿರದ ಸಹಯೋಗದೊಂದಿಗೆ ಆಯೋಜಿಸಲಾಗಿತ್ತು.ಅಕಾದೆಮಿಯ ಎಲ್ಲಾ ಸದಸ್ಯರಿಗೂ, ದಿನಾಂಕ ೧೬-೦೯-೨೦೧೮ರ ಸುತ್ತೋಲೆಯಲ್ಲಿ ಸರ್ವ ಸದಸ್ಯರ ಸಭೆಯ ತಿಳಿವಳಿಕೆ ಪತ್ರವನ್ನು ಮತ್ತು ಕಾರ್ಯಸೂಚಿಯನ್ನು (agenda) ಅಂಚೆ ಮೂಲಕ ಕಳುಹಿಸಲಾಗಿತ್ತು.ಕಾರ್ಯಸೂಚಿಯಂತೆ ನಡೆದ ಸಭೆಯ ನಡಾವಳಿಗಳನ್ನು ಮತ್ತು ವರದಿಯನ್ನು ಇಲ್ಲಿ ದಾಖಲಿಸಿದೆ.

ಸಭೆಯು ಕುಮಾರಿ ರಂಜಿತಾ ಅವರ ದೇವತಾ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು.ಅಕಾದೆಮಿಯ ಕಾರ್ಯದರ್ಶಿಗಳಾದ ಶ್ರೀ ಕೆ.ಎಲ್. ರಾಜಶೇಖರ್ ಅವರು ನೆರೆದಿದ್ದ ಎಲ್ಲ ಸದಸ್ಯರನ್ನು ಸಭೆಗೆ ಆಹ್ವಾನಿಸಿ, ಎಲ್ಲರೂ ಸಕ್ರಿಯವಾಗಿ ಭಾಗವಹಿಸಿ, ಸಭೆಯನ್ನು ಯಶಸ್ವಿಗೊಳಿಸಬೇಕೆಂದು ವಿನಂತಿಸಿದರು.ನಂತರ ಅಕಾದೆಮಿಯ ಅಧ್ಯಕ್ಷರಾದ ಡಾ॥ ದೇವರಕೊಂಡಾರೆಡ್ಡಿಯವರನ್ನು ವೇದಿಕೆಗೆ ಆಹ್ವಾನಿಸಿ, ಸರ್ವ ಸದಸ್ಯರ ಸಭೆಯ ಅಧ್ಯಕ್ಷತೆಯನ್ನು ವಹಿಸಿಕೊಂಡು, ಸಭೆಯ ಕಲಾಪಗಳನ್ನು ನಡೆಸಿಕೊಡಬೇಕೆಂದು ವಿನಂತಿಸಿದರು. ಹಾಜರಿದ್ದ ಎಲ್ಲಾ ಕಾರ್ಯಕಾರಿ ಸಮಿತಿಯ ಸದಸ್ಯರನ್ನು ವೇದಿಕೆಗೆ ಆಹ್ವಾನಿಸಿದರು. ಎಲ್ಲಾ ಸದಸ್ಯರಿಗೂ ೨೦೧೭-೧೮ನೇ ಸಾಲಿನ ವಾರ್ಷಿಕ ವರದಿ, ಪರಿಶೋಧಿತ ಲೆಕ್ಕಪತ್ರಗಳು ಮತು ್ತಅದರ ವರದಿ, ಅಂದಾಜು ಆಯ-ವ್ಯಯ ಪತ್ರಗಳನ್ನು ನೀಡಲಾಗಿತ್ತು.ಸಭೆಯಲ್ಲಿ ೧೪೫ ಸದಸ್ಯರು ಹಾಜರಿದ್ದರು.

**ಸಭೆಯ ನಡಾವಳಿಗಳು:**

**೧) ಅಗಲಿದ ಸದಸ್ಯರಿಗೆ ಮತ್ತು ನಾಡಿನ ಗಣ್ಯರಿಗೆ ಸಂತಾಪ ಸೂಚಕ ಮತ್ತು ಶ್ರದ್ಧಾಂಜಲಿ ಸಮರ್ಪಣೆ:**

ಕಳೆದ ಸರ್ವ ಸದಸ್ಯರ ಸಭೆಯ ನಂತರ, ಈವರೆಗೆ ನಮ್ಮನ್ನು ಅಗಲಿರುವ ಅಕಾದೆಮಿಯ ಸದಸ್ಯರು ಹಾಗೂ ರಾಷ್ಟ್ರದ/ ನಾಡಿನ ಗಣ್ಯವ್ಯಕ್ತಿಗಳ ನಿಧನಕ್ಕಾಗಿ ಸಭೆಯು ಒಂದು ನಿಮಿಷ ಮೌನಾಚರಣೆಯ ಮೂಲಕ ಶ್ರದ್ಧಾಂಜಲಿ ಅರ್ಪಿಸಿ, ಮೃತರುಗಳ ಆತ್ಮಕ್ಕೆ ಸದ್ಗತಿ ಕೋರಲಾಯಿತು. ಮೃತರಾದ ಸದಸ್ಯರುಗಳ ಮತ್ತು ಇತರ ಗಣ್ಯವ್ಯಕ್ತಿಗಳ ಕೆಳಕಂಡ ಪಟ್ಟಿಯನ್ನು ಶ್ರೀ ಕೆ.ಎಲ್. ರಾಜಶೇಖರ್ ಅವರು ಸಭೆಯಲ್ಲಿ ತಿಳಿಸಿದರು.

**ಅಕಾದೆಮಿಯ ಸದಸ್ಯರುಗಳು:-**

೧. ಶ್ರೀ ಸತೀಶ್‌ಕುಮಾರ್, ಮೈಸೂರು, ೨. ಡಾ. ಶ್ರೀನಿವಾಸ ರಿತ್ತಿ, ಧಾರವಾಡ, ೩. ಶ್ರೀ ಕೆ.ಎಂ. ಶಿವಲಿಂಗಯ್ಯ, ಬಳ್ಳಾರಿ, ೪. ಶ್ರೀ ಚಂದ್ರಪ್ಪ, ದಾವಣಗೆರೆ, ೫. ಶ್ರೀ ರವೀಂದ್ರನಾಥ, ಬೆಂಗಳೂರು

**ನಾಡಿನ ಗಣ್ಯರು:-**

೧. ಗದುಗಿನ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ೨. ಶ್ರೀ ಕೆ.ಎಸ್. ದೇಶಪಾಂಡೆ, ಧಾರವಾಡ, ೩. ಡಾ. ಕೆ.ರಾಘವೇಂದ್ರರಾವ್, ಧಾರವಾಡ (ರಾಜ್ಯಶಾಸ್ತ್ರದ ಪ್ರಾಚಾರ್ಯರು), ೪. ಶ್ರೀಮತಿ ಸ್ವರೂಪರಾಣಿ ಮಹಿಷಿ (ಲೇಖಕಿ, ಧಾರವಾಡ), ೫. ಪ್ರೊ. ಗಿರಡ್ಡಿ ಗೋವಿಂದರಾಜ್ (ಧಾರವಾಡ), ೬. ಡಾ. ಸುಮತೀಂದ್ರ ನಾಡಿಗ್ (ಸಾಹಿತಿಗಳು), ೭. ಶ್ರೀ ಎಂ.ಎನ್. ವ್ಯಾಸರಾವ್ (ಸಾಹಿತಿಗಳು), ೮. ಡಾ. ಎಚ್.ಎಂ. ಮರುಳಸಿದ್ಧಪ್ಪ, ೯. ಶ್ರೀಮತಿ ಸುಮಂಗಲಾ ಪಾಟೀಲ್, ಕೊಪ್ಪಳ (ಅಕಾದೆಮಿಯಲ್ಲಿ ದತ್ತಿನಿಧಿ ಸ್ಥಾಪಿಸಿದವರು).

**೨.೧. ೨೦೧೭-೧೮ನೇ ಸಾಲಿನ ವಾರ್ಷಿಕ ವರದಿ ವಾಚನ ಮತ್ತು ಅಂಗೀಕಾರ:-**

ಶ್ರೀ ಕೆ.ಎಲ್. ರಾಜಶೇಖರ್ ಕಾರ್ಯದರ್ಶಿಗಳು, ಸರ್ವ ಸದಸ್ಯರ ಸಭೆಯ ತಿಳುವಳಿಕೆ ಪತ್ರವನ್ನು ಮತ್ತು ಅಂದಿನ ಕಾರ್ಯಸೂಚಿಯನ್ನು ಸಭೆಗೆ ಓದಿ ತಿಳಿಸಿ, ಕಾರ್ಯಸೂಚಿಯಂತೆ ಕಲಾಪಗಳನ್ನು ನಡೆಸುವುದಾಗಿ ಹೇಳಿ ಚರ್ಚೆಯಲ್ಲಿ ಎಲ್ಲರೂ ಭಾಗವಹಿಸುವಂತೆ ಕೋರಿದರು.

೨.೨. ಅಕಾದೆಮಿಯ ೨೦೧೭-೧೮ರ ಚಟುವಟಿಕೆಗಳ ವಾರ್ಷಿಕ ವರದಿಯ ಬಗ್ಗೆ ಎಲ್ಲರ ಗಮನ ಸೆಳೆದು ಸಲಹೆ, ಸೂಚನೆಗಳನ್ನು ಆಹ್ವಾನಿಸಿದರು. ಕಳೆದ ಮೂರು ವರ್ಷಗಳಿಂದ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ರೂಪುರೇಷೆಗಳನ್ನು ಡಾ॥ ದೇವರಕೊಂಡಾರೆಡ್ಡಿಯವರು ತಿಳಿಸಿ, ಅದರ ಉಪಯುಕ್ತತೆ ಮತ್ತು ಯುವಜನತೆಗೆ ಬೇಕಾದ ಸಂದೇಶವನ್ನು ನೀಡುತ್ತಿದ್ದು,

ಕೆಲವು ಕಾರ್ಯಕ್ರಮಗಳಲ್ಲಿ ತಾವೂ ಸಹ ಭಾಗಿಯಾಗಿದ್ದನ್ನು ಸಭೆಯಲ್ಲಿ ಹಂಚಿಕೊಂಡರು. ರಾಯಚೂರಿನ ಗಬ್ಬೂರಿನಲ್ಲಿ ಈ ವರ್ಷ ಆಯೋಜಿಸಿದ್ದ ಪರಂಪರೆ ಉಳಿಸಿ ಕಾರ್ಯಕ್ರಮವು ಯಶಸ್ವಿಯಾಗಿದ್ದನ್ನು ತಿಳಿಸಿ, ಕೆಲವು ಕಾಲೇಜುಗಳು ಮತ್ತು ಕೆಲವು ಸದಸ್ಯರುಗಳು ಸಹ ಯಶಸ್ವಿಯಾಗಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮವನ್ನು ಆಯೋಜಿಸುತ್ತಿರುವುದಾಗಿಯೂ ಮತ್ತು ಅವರುಗಳಿಂದ ಬಂದ ವರದಿಗಳನ್ನೂ ಇತಿಹಾಸ ದರ್ಶನ ಸಂಪುಟ ೩೩ರಲ್ಲಿ ಪ್ರಕಟಿಸಿರುವುದಾಗಿ ತಿಳಿಸಿದರು. ನಮ್ಮ ಮೂರು ಸದಸ್ಯರುಗಳು ಡಿಸೆಂಬರ್ ೨೦೧೭/ ಜನವರಿ ೨೦೧೮ರಲ್ಲಿ ಕೆಲವು ಕಾಲೇಜುಗಳ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮವನ್ನು ಬಹಳ ಯಶಸ್ವಿಯಾಗಿ ನಡೆಸಿದ್ದನ್ನು ತಿಳಿಸಿ, ಅಂತಹ ಕಾಲೇಜಿಗೆ ಅಲ್ಪಧನ ಸಹಾಯ ನೀಡಿದ್ದನ್ನು ತಿಳಿಸಿದರು. ಉಳಿದಂತೆ, ವಾರ್ಷಿಕ ವರದಿಯನ್ನು ಸಭೆಯಲ್ಲಿ ವಾಚಿಸಲಾಯಿತು.ಏನೂ ತಿದ್ದುಪಡಿ ಇಲ್ಲದೆ ವಾರ್ಷಿಕ ವರದಿಯನ್ನು ಸ್ವೀಕರಿಸಬಹುದೆಂದು ಸಭೆ ಸೂಚಿಸಿತು.ಅದನ್ನು ಪ್ರೊ.ಕೆ.ಸಿ. ಮಲ್ಲಿಗವಾಡ ಅವರು ಸೂಚಿಸಿದರು. ಡಾ. ಕೆ.ವಸಂತಲಕ್ಷ್ಮೀ ಅವರು ಅನುಮೋದಿಸಿದರು.

**೩.೧ ೨೦೧೭-೧೮ ನೇ ಸಾಲಿನ ಪರಿಶೋಧಿತ ಲೆಕ್ಕಪತ್ರಗಳ ಮಂಡನೆ ಮತ್ತು ಸ್ವೀಕಾರ**

ಸಹಾಯಕ ಕೋಶಾಧಿಕಾರಿಗಳಾದ ಶ್ರೀ ಗುರುಪ್ರಸಾದ್ ಅವರು, ಅಕಾದೆಮಿಯ (Auditors) ಲೆಕ್ಕ ಪರಿಶೋಧಕರಾದ ಶ್ರೀ ಗಣೇಶ್ ಶೆಟ್ಟಿ, ಜಿ.ಬಿ.ಎ. ಅಂಡ್ ಅಸೋಸಿಯೇಟ್ಸ್ ಬೆಂಗಳೂರು ಇವರು, ಅಕಾದೆಮಿಯ ಲೆಕ್ಕ ಪತ್ರಗಳನ್ನು ಪರಿಶೋಧಿಸಿ ತಮ್ಮ ವರದಿಯೊಂದಿಗೆ ಪರಿಶೋಧಿತ ಲೆಕ್ಕಪತ್ರಗಳನ್ನು ೩-೭-೨೦೧೮ರಂದು ಸಂಪೂರ್ಣವಾಗಿ ನೀಡಿದ್ದಾರೆಂದು ತಿಳಿಸಿದರು.

ಅಕಾದೆಮಿಯು ವಿವಿಧ ಆದಾಯಗಳ ಮೂಲಗಳು, ಸರ್ಕಾರದಿಂದ ಸ್ವೀಕೃತವಾದ ಅನುದಾನ, ಐ.ಸಿ.ಎಚ್.ಆರ್.ನವದೆಹಲಿಯಿಂದ ಬರಬೇಕಾದ ಸಹಾಯಧನ, ಇವುಗಳ ಚಿತ್ರಣ ನೀಡಿ ಸದ್ಯದ ಪರಿಸ್ಥಿತಿಯಲ್ಲಿ ಅಕಾದೆಮಿಯು ತನ್ನ ಆದಾಯದ ಕಡೆಗೆ ಗಮನ ನೀಡಬೇಕಾದ ಅವಶ್ಯಕತೆಯನ್ನು ವಿವರಿಸಿದರು.ಕನಿಷ್ಠ ಅಕಾದೆಮಿಯು ಸ್ವತಂತ್ರವಾಗಿ ಒಂದು ಸಮ್ಮೇಳನವನ್ನು ನಡೆಸುವಷ್ಟು ಆರ್ಥಿಕವಾಗಿ ಸದೃಢವಾಗಬೇಕಾದುದನ್ನು, ಆದಾಯ ಮತ್ತು ಖರ್ಚು ವೆಚ್ಚ ಸಹಿತವಾಗಿ ವಿವರಿಸಿದರು.ಸದಸ್ಯರೆಲ್ಲರೂ ಅಕಾದೆಮಿಗೆ ದೇಣಿಗೆ ತರುವ ನಿಟ್ಟಿನಲ್ಲಿ ತೊಡಗಿಸಿಕೊಳ್ಳುವುದು ಸೂಕ್ತವೆಂದು ತಿಳಿಸಿದರು.ಅಕಾದೆಮಿಯು ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಸೌಲಭ್ಯವಕ್ಕಾಗಿ ಲೆಕ್ಕಪರಿಶೋಧಕರ ಮೂಲಕ ಪ್ರಯತ್ನಿಸುತ್ತಿದೆ ಎಂದು ತಿಳಿಸಿದರು.ನಂತರ ಮುಂಗಡಪತ್ರದಲ್ಲಿನ ವಿವರಗಳನ್ನು ಮತ್ತು ಸದಸ್ಯರು ಬಯಸಿದ ಅಂಶಗಳ ಮೇಲೆ ಸಮಜಾಯಿಶಿ ನೀಡಿದರು.

ಈ ಚರ್ಚೆಗಳ ನಂತರ ಲೆಕ್ಕಪತ್ರಗಳ ಮಂಡನೆ ಸ್ವೀಕಾರಕ್ಕೆ ಸೂಚಿಸಿದವರು ಡಾ.ಡಿ.ಬಿ. ಕುಲಕರ್ಣಿಯವರು ಮತ್ತು ಡಾ.ಕೆ.ರವೀಂದ್ರನಾಥ್ ಅವರು ಅನುಮೋದನೆ ನೀಡಿದರು. ನಂತರ ೨೦೧೮-೧೯ರ ಮುಂಗಡಪತ್ರವನ್ನು ಸ್ವೀಕರಿಸಬಹುದೆಂದು ಡಾ. ಪಿ.ವಿ. ಕೃಷ್ಣಮೂರ್ತಿಯವರು ಸೂಚಿಸಿದರು.ಇದನ್ನು ಡಾ.ಟಿ.ವಿ. ನಾಗರಾಜ್ ಅನುಮೋದಿಸಿದವರು.

**೪.೧. ೨೦೧೮-೧೯ನೇ ಸಾಲಿಗೆ ಲೆಕ್ಕಪತ್ರ ಪರಿಶೋಧಕರ ನೇಮಕ, ಅವರ ಸಂಭಾವನೆ ನಿರ್ಧಾರ:-**

ಕಳೆದ ಮೂರು ವರ್ಷಗಳಿಂದಲೂ ಈಗಿರುವ ಲೆಕ್ಕಪರಿಶೋಧಕರಾದ ಶ್ರೀ ಗಣೇಶ್ ಶೆಟ್ಟಿ, ಜಿಬಿಎ ಅಸೋಸಿಯೇಟ್ಸ್ ಅವರು ನೀಡುತ್ತಿರುವ ಸಹಕಾರವನ್ನು ನೆನೆಯುತ್ತಾ ಅವರ ಸೇವೆಯನ್ನು ಮುಂದುವರೆಸಬಹುದೆಂದು ಶ್ರೀ ಎಂ.ಬಿ. ಪಾಟೀಲ್ ಕೋಶಾಧಿಕಾರಿಗಳ ಸಲಹೆಯನ್ನು ಸಭೆಯು ಮಾನ್ಯ ಮಾಡಿ, ಈ ಅಂಶದ ಬಗ್ಗೆ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಸ್ವತಂತ್ರವಾಗಿ ಸೂಕ್ತ ನಿರ್ಧಾರವನ್ನು ತೆಗೆದುಕೊಳ್ಳಬಹುದೆಂದು ಸಭೆಯು ಒಮ್ಮತದಿಂದ ತೀರ್ಮಾನಿಸಿತು.ಈ ಅಂಶದ ಬಗ್ಗೆ ಡಾ.ನಳಿನಿ ವೆಂಕಟೇಶ್ ಅವರು ಸೂಚಿಸಿದರು ಮತ್ತು ಡಾ.ಫಕೀರಪ್ಪ ವಜ್ರಬಂಡಿಯವರು ಅನುಮೋದಿಸಿದರು.

**೫.೧ ಠರಾವು ಮಂಡನೆ:-**

ಈ ಸಭೆಯಲ್ಲಿ ಕೆಲವು ಸದಸ್ಯರುಗಳು ಸೂಕ್ಷ್ಮವಾದ ವಿಷಯಗಳನ್ನು ಕುರಿತು ನಾಲ್ಕು ಠರಾವುಗಳನ್ನು ಮಂಡಿಸಿದರು.ಅವುಗಳು ಹೀಗಿವೆ.

೧. ಬಾದಾಮಿ ಬಳಿಯಿರುವ ಮಹಾಕೂಟದ ಸ್ವಚ್ಛತೆ, ನೈರ್ಮಲ್ಯತೆ ಮತ್ತು ಪ್ರವಾಸಿಗರಿಂದ ಪುಷ್ಕರಣಿಗೆ ಆಗುತ್ತಿರುವ ಧಕ್ಕೆ ಬಗ್ಗೆ, ಕೆಲವು ಸದಸ್ಯರು ಮಂಡಿಸಿದ ಸಮೂಹ ಠರಾವು.

೨. ಸಾಗರ ತಾಲೂಕಿನ ಐತಿಹಾಸಿಕ ಮತ್ತು ಚಾರಿತ್ರಿಕ ನೆಲೆಯಾದ ಕೆಳದಿಯಲ್ಲಿ, ಭೂಹಿಡುವಳಿದಾರರಿಂದ ಮುಂದಾಗಬಹುದಾದ ಭೂಕಬಳಿಕೆ ಮತ್ತು ತತ್ಸಂಬಂಧವಾದ ಚಾರಿತ್ರಿಕ/ಪ್ರಾಗ್ಚಾರಿತ್ರಿಕ ನೆಲೆಗಳು ನಾಶವಾಗುವ ಭೀತಿಗೆ ಸಂಬಂಧ ಪಟ್ಟ ಠರಾವು, ಡಾ. ಕೆಳದಿ ಗುಂಡಾಜೋಯಿಸರಿಂದ ಮಂಡಿತವಾಗಿದೆ.

೩. ಪ್ರಸ್ತುತ ಕರ್ನಾಟಕ ರಾಜ್ಯದ ಗೆಜೆಟಿಯರ್ ಇಲಾಖೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶನದ ಅಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಇಲಾಖೆಯ ಸಿಬ್ಬಂದಿ ವರ್ಗವು ಇತಿಹಾಸಕಾರರಿಗೂ ಮತ್ತು ಸಂಶೋಧಕರಿಗೂ ಅನುಕೂಲವಾದ ವಾತಾವರಣ ಕಲ್ಪಿಸುತ್ತಿದೆ. ಮೇಲಾಗಿ, ಸ್ವತಂತ್ರವಾದ ಕಚೇರಿಯಿಂದ ಕಾರ್ಯ ನಿರ್ವಹಿಸುತ್ತಿದೆ. ಈ ಇಲಾಖೆಯನ್ನು ರಾಜ್ಯ ಪತ್ರಾಗಾರ ಇಲಾಖೆಯೊಂದಿಗೆ ವಿಲೀನಗೊಳಿಸುವ ಬಗ್ಗೆ ಪ್ರಕ್ರಿಯೆ ಆರಂಭಗೊಂಡಿದೆಯೆಂದು ನಂಬಲರ್ಹ ಮೂಲಗಳಿಂದ

ತಿಳಿದು ಬಂದಿದೆ. ಈ ಇಲಾಖೆಯ ವಿಲೀನಗೊಂಡಲ್ಲಿ, ಇತಿಹಾಸ ಸಂಶೋಧಕರಿಗೆ ಮತ್ತು ಇಲಾಖೆಯ ಮಾಹಿತಿ, ಸಂಗ್ರಹಗಾರರಿಗೆ ಒದಗಬಹುದಾದ ಸಂಕಷ್ಟಗಳ ಬಗ್ಗೆ ಠರಾವು ಮಂಡಿತವಾಗಿದೆ.

೪. ರಾಜ್ಯ ಪುರಾತತ್ವ ಇಲಾಖೆಯು ೧೫೦ ವರ್ಷಗಳಷ್ಟು ಹಳೆಯ ಇಲಾಖೆಯಾಗಿದ್ದು ಅದು ಹಿಂದಿನಿಂದಲೂ ಮೈಸೂರಿನಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಅದನ್ನು ಉತ್ತರ ಕರ್ನಾಟಕದ ಭಾಗಕ್ಕೆ ಸ್ಥಳಾಂತರಿಸಬೇಕೆಂಬ ಸರ್ಕಾರದ ನಿರ್ಧಾರವನ್ನು ತಡೆಯಬೇಕೆಂದೂ, ಜಿಲ್ಲಾ ಕೇಂದ್ರಗಳಲ್ಲಿ ಬೇರೆ ಕಚೇರಿ ತೆಗೆದು ಅವುಗಳನ್ನು ಬಲಪಡಿಸಲು ಒತ್ತಾಯಿಸಿ ಮಂಡಿಸಿದ ಠರಾವನ್ನು, ಸರ್ಕಾರಕ್ಕೆ ಸೂಕ್ತ ಪತ್ರದೊಂದಿಗೆ ರವಾನಿಸಲು ಸಭೆ ಅನುಮೋದಿಸಿತು.

ಮೇಲೆ ಹೇಳಿದ ನಾಲ್ಕು ಠರಾವುಗಳನ್ನು ಸಭೆಯಲ್ಲಿ ಶ್ರೀ ಗುರುಪ್ರಸಾದ್ ಅವರು ವಿವರಿಸಿ, ಸಭೆಯ ಅನಿಸಿಕೆಗಳನ್ನು ಪಡೆದ ನಂತರ ಈ ಠರಾವುಗಳ ಬಗ್ಗೆ ಅಕಾದೆಮಿಯು ಸಂಬಂಧಪಟ್ಟ ಇಲಾಖೆಗಳ ಗಮನ ಸೆಳೆಯುವುದು ಸೂಕ್ತವೆಂದು ಒಮ್ಮತದ ನಿರ್ಣಯ ವ್ಯಕ್ತವಾಯಿತು.

**೬. ಅಧ್ಯಕ್ಷರ ಅನುಮತಿ ಮೇರೆಗೆ ಚರ್ಚೆಗೆ ಬಂದ ಇತರ ವಿಷಯಗಳು**

**೬.೧. ಅಕಾದೆಮಿಯ ಸದಸ್ಯತ್ವಕ್ಕೆ ಕಡಿವಾಣ ಹಾಕುವ ಅಗತ್ಯತೆ ಬಗ್ಗೆ:–**

ಅಕಾದೆಮಿಯ ಈಗಿನ ಸದಸ್ಯತ್ವದ ಸಂಖ್ಯೆ (೨೬–೧೦–೨೦೧೮ರಂದಿನ ಮಾಹಿತಿ ಪ್ರಕಾರ) ೨೧೦೦ನ್ನು ದಾಟಿದೆ.೩ ವರ್ಷಗಳ ಕಾಲ ಸದಸ್ಯತ್ವವನ್ನು ಸ್ವೀಕರಿಸಬಾರದೆಂಬ ಸಲಹೆ ಡಾ.ಡಿ.ಬಿ. ಕುಲಕರ್ಣಿ, ಡಾ.ಶಕುಂತಲಾ ಸಿಂಧೂರ ಮತ್ತು ಇನ್ನಿತರರಿಂದ ಕೇಳಿಬಂದಿತು.ಅಕಾದೆಮಿಯಲ್ಲಿ ಸಿಬ್ಬಂದಿಯಿಲ್ಲದೆ ಕಾರ್ಯಕಾರಿ ಸಮಿತಿಯ ಸದಸ್ಯರುಗಳು ಮತ್ತು ಕೆಲವು ಸ್ವಯಂ ಸೇವಕರಿಂದ ಸೇವೆ ಪಡೆಯುತ್ತಿದ್ದು, ಅಂಚೆವೆಚ್ಚವೂ ಏರಿಕೆಯಾಗುತ್ತಿರುವ ಬಗ್ಗೆ ಕಳವಳ ವ್ಯಕ್ತಪಡಿಸಿ, ಸದಸ್ಯತ್ವಕ್ಕೆ ಕಡಿವಾಣ ಹಾಕುವುದೇ ಸೂಕ್ತವೆಂದು ವಿಷಯವನ್ನು ಪ್ರಸ್ತಾಪಿಸಿದರು. ಈ ವಿಷಯ ಎಲ್ಲರ ಗಮನ ಸೆಳೆದು, ಸಾಕಷ್ಟು ಚರ್ಚೆಗೆ ಅವಕಾಶವಾಗಿ, ಕಾರ್ಯರೂಪಕ್ಕೆ ತಂದಲ್ಲಿ ಪಿಎಚ್.ಡಿ ವಿದ್ಯಾರ್ಥಿಗಳಿಗೆ, ಇತಿಹಾಸಕಾರರಿಗೆ, ಜನಸಾಮಾನ್ಯರಿಗೆ ಆಗುವ ಸಂಕಷ್ಟಗಳನ್ನು ಪರಿಶೀಲಿಸಿ ಸದಸ್ಯತ್ವಕ್ಕೆ ಕಡಿವಾಣದ ವಿಷಯವು ಸೂಕ್ತವಾದ ಮಾರ್ಗವಲ್ಲವೆಂದು ಕೈಬಿಡಲಾಯಿತು.

**೬.೨. ಆಜೀವ ಸದಸ್ಯತ್ವದ ಅವಧಿಯನ್ನು ೫, ೧೦ ಅಥವಾ ೧೫ ವರ್ಷಗಳಿಗೆ ಸೀಮಿತಗೊಳಿಸಬೇಕೆಂಬ ಸಲಹೆ**

ವ್ಯವಸ್ಥಿತವಾದ ಕಚೇರಿ ನಿರ್ವಹಣೆ ಇಲ್ಲದಿರುವುದರಿಂದಲೂ ಮತ್ತು ಈ ಸಲಹೆ ಜಾರಿಗೆ ತರಲು ಕಷ್ಟಸಾಧ್ಯವಾಗುವುದನ್ನು ಮನಗಂಡು, ಈಗಿರುವ ವ್ಯವಸ್ಥೆಯನ್ನೇ ಮುಂದುವರೆಸಲು ನಿರ್ಧರಿಸಲಾಯಿತು. ಆಜೀವ ಸದಸ್ಯತ್ವ ಶುಲ್ಕವನ್ನು ರೂ.೩೦೦೦/– (ಮೂರು ಸಾವಿರ) ನಿಗಧಿಪಡಿಸುವುದೆಂದು ಸಂಘ ಸಂಸ್ಥೆಗಳಿಗೆ ರೂ ೪೦೦೦/– (ನಾಲ್ಕು ಸಾವಿರ) ಸಭೆಯಲ್ಲಿ ಸರ್ವಾನುಮತದಿಂದ ತೀರ್ಮಾನಿಸಲಾಯಿತು.

**೭. ಅಕಾದೆಮಿಯಲ್ಲಿ ಪುದುವಟ್ಟು/ದತ್ತಿನಿಧಿ ಸ್ಥಾಪಿಸುವ ವಿಚಾರ**

೭.೧. ಈ ವಿಚಾರ ನಮ್ಮ ಸದಸ್ಯರಾದ ಶ್ರೀ ಗೋವಿಂದರಾಜು ಅವರ ಬೇಡಿಕೆಗೆ ಕುರಿತಾಗಿ ಚರ್ಚೆಗೆ ಬಂದಿದೆ.

ದತ್ತಿ / ದತ್ತಿನಿಧಿ / ಪುದುವಟ್ಟು ಪದದ ಅರ್ಥವೇ ಹೇಳುವಂತೆ ಪುದುವಟ್ಟುದಾನಿ / ದತ್ತಿದಾನಿಯು ಮೂಲ ಹಣವನ್ನು ಅಕಾದೆಮಿಯಲ್ಲಿಟ್ಟು, ಅದರ ನಿರ್ವಹಣೆಯನ್ನು ದತ್ತಿದಾನಿಗಳ ಆಶಯದಂತೆ ನಡೆಸುವುದೆಂದು ಆದ್ದರಿಂದ ಅಕಾದೆಮಿಯಲ್ಲಿ ದತ್ತಿ ಸ್ಥಾಪಿಸುವುದಾದರೆ, ಕನಿಷ್ಠ ೧,೫೦,೦೦೦/– ರೂಪಾಯಿಗಳಿದ್ದರೆ ಮಾತ್ರ ಸಾಧ್ಯವೆಂದು ಮತ್ತು ಪ್ರಶಸ್ತಿಯ ಮೊತ್ತವು ಗೌರವ/ಸನ್ಮಾನವೂ ಗೌರವಯುತವಾಗಿರುವುದೆಂದು ಅಕಾದೆಮಿಯು ನಿರ್ಧಾರ ತೆಗೆದುಕೊಂಡಿರುವುದೆಂದು ಅಧ್ಯಕ್ಷರು ಕೆಲವು ಸಾದೃಶಗಳನ್ನು ಸಾಧಕ ಬಾಧಕಗಳನ್ನು ನೀಡಿದರು. ಯಾವುದೇ ಕಾರಣಕ್ಕೂ ಅಕಾದೆಮಿಯಲ್ಲಿ ದತ್ತಿನಿಧಿ ಸ್ಥಾಪಿಸದೆ, ಕೇವಲ ಪ್ರಶಸ್ತಿ ನೀಡುವ ಸಂಪ್ರದಾಯ ಊರ್ಜಿತವಾಗುವುದಿಲ್ಲವೆಂದು ತಿಳಿಸಿ, ಈ ವಿಷಯದ ಬಗ್ಗೆ ಚರ್ಚೆಗೆ ಅವಕಾಶವಿಲ್ಲವೆಂದು ತಿಳಿಸಿದರು.

**೮. ೨೦೧೯ರ ಸಮ್ಮೇಳನದ ಸ್ಥಳ ಮತ್ತು ಆಯೋಜಕರು**

ಹಿರಿಯ ಸಂಶೋಧಕರು ಮತ್ತು ಹಸ್ತಪ್ರತಿತಜ್ಞರು ಡಾ.ಕೆಳದಿ ಗುಂಡಾಜೋಯಿಸರಿಂದ ಸ್ವೀಕೃತವಾದ ಪತ್ರವನ್ನು ಡಾ.ದೇವರಕೊಂಡಾರೆಡ್ಡಿಯವರು ಸಭೆಯ ಗಮನಕ್ಕೆ ತಂದರು. ೩೩ನೇ ಸಮ್ಮೇಳನವನ್ನು ಕೆಳದಿಯಲ್ಲಾಗಲೀ / ಸಾಗರದಲ್ಲಾಗಲೀ ವ್ಯವಸ್ಥೆ ಮಾಡುವ ಭರವಸೆಯನ್ನು ನೀಡಿರುವ ಕೆಳದಿ ಗುಂಡಾಜೋಯಿಸರ ಬದ್ಧತೆ ಮತ್ತು ಉತ್ಸಾಹವನ್ನು ಡಾ.ದೇವರಕೊಂಡಾರೆಡ್ಡಿಯವರು ಮೆಚ್ಚಿದರು. ಸಮ್ಮೇಳನವನ್ನು ಆಯೋಜಿಸುವ ಬಗ್ಗೆ ಸೂಕ್ತ ಸಲಹೆಗಳನ್ನು ಡಾ.ದೇವರಕೊಂಡಾರೆಡ್ಡಿಯವರು ನೀಡಿ ಅದೇ ಜಿಲ್ಲೆಯ ಹೊಂಬುಜದಲ್ಲೂ ಆಯೋಜಿಸುವ ಬಗ್ಗೆ ಮಾಹಿತಿ ಬಂದಿದ್ದು ಪರಿಶೀಲಿಸುವುದಾಗಿ ತಿಳಿಸಿದರು.

